# ವಾಚಕ ಮಹಾಶಯರಲ್ಲಿ ಬಿನ್ನಹ.



ಮಹಿಮೆಗೊಂಡ ಈ ಗ್ರಂಥವು ಸುಮಾರು ನಾಲ್ವತ್ತು ವರ್ಷಗಳ ಹಿಂದೆ ಉದ್ದಾಮ ಪಂಡಿತರಾದ ವೇ॥ ಪಟ್ಟಾಭಿರಾಮಾಶಾಸ್ತ್ರಿಗಳ ಕನ್ನಡ ಟೀಕಾ, ತಾತ್ಪರ್ಯಗಳಿಂದ ಕನ್ನಡಿಗರ ಅವಗಾಹನೆಗೆ ಅಣಿಯಾಗಿ, ವಾ॥ ಕೃಷ್ಣಯ್ಯನವರೇ ಮೊದಲಾದವರಿಂದ ಪ್ರಚುರಗೊಳಿಸಲ್ಪಟ್ಟಿತ್ತು. ಆಗಿನ ಪ್ರತಿಗಳು ಒಂದೂ ಉಳಿಯದಂತೆ ಮುಗಿದು ಹೋಗಿ ಬಹಳ ವರ್ಷಗಳಾದುದರಿಂದಲೂ, ಅನೇಕ ಮಂದಿ ಕನ್ನಡಿಗರು ಆ ಗ್ರಂಥವನ್ನು ಕೇಳತೊಡಗಿದುದರಿಂದಲೂ, ಮಹಾ ಪ್ರಯಾಸಕರವಾದ ಈ ಗ್ರಂಥದ ಪುನರ್ಮುದ್ರಣವನ್ನು ಮ॥ ರಾ॥ **ವಾಜಪೇಯಂ ಗೋವಿಂದಯ್ಯನವರು** ಕೈಕೊಂಡರು. ಇವರು ಈ ಗ್ರಂಥದ ಪರಿಶೋಧನಕಾರ್ಯವನ್ನು "ನಾನೇ" ಮಾಡಬೇಕೆಂದು ಹೇಳಲು, ಅಷ್ಟು ಸಮರ್ಥನಲ್ಲದಿದ್ದರೂ ಕನ್ನಡಿಗರ ಸೇವೆಯುಂದರಿತು ಈ ಸಾಹಸಕಾರ್ಯಕ್ಕೆ ಕೈಹಚ್ಚಲು ಮನದೆರೆಗೆನು. ಕಾರ್ಯವನ್ನು ಕೈಕೊಂಡು ಹಿಂದೆ ಮುದ್ರಿತವಾದ ಗ್ರಂಥವನ್ನು ಸಮಗ್ರವಾಗಿ ನೋಡಲು ಕೆಲವು ಮುಖ್ಯವಾದ ಬದಲಾವಣೆಗಳನ್ನು ಮಾಡಬೇಕೆಂದು ನನಗೆ ತೋರಿತು.

ಈ ನನ್ನ ಕೋರಿಕೆಯು ನಾಲ್ವರಿಗೆ ಸಮ್ಮತವಾಗುವುದೋ ಇಲ್ಲವೋ ಎಂಬ ಸಂಶಯದಿಂದ ಆಸ್ಥಾನ ಮಹಾ ವಿದ್ವಾನ್ ಕಾನಕಾನಹಳ್ಳಿ ಬ್ರಂ॥ ಶ್ರೀ॥ **ನರಸಿಂಹಶಾಸ್ತ್ರಿಯರಲ್ಲೂ**, ನನ್ನ ಚಿಕ್ಕತಂದೆಗಳಾದ ಆಸ್ಥಾನ ಮಹಾ ವಿದ್ವಾನ್ ಮೋಟಗಾನಹಳ್ಳಿ ಬ್ರಂ॥ ಶ್ರೀ॥ **ರಾಮಶೇಷಶಾಸ್ತ್ರಿ**ಯರಲ್ಲಿಯೂ, ಈ ವಿಷಯವನ್ನು ಕುರಿತು ಚರ್ಚಿಸಿದೆನು. ಅವರೂ ಇದಕ್ಕೆ ಅನುಮೋದಿಸಿದರು. ಇವಾದಮೇಲೆ ಮುಖ್ಯವಾಗಿ ಈ ಗ್ರಂಥದ ಪ್ರಕಾಶಕರು ನಾನು ತಿಳಿಸಿದ ಮುದ್ರಣರೀತಿಗೂ, ಬದಲಾವಣೆಗಳಿಗೂ, ಒಪ್ಪಿಕೆಯನ್ನು ಕೊಡುವರೋ, ಇಲ್ಲವೋ, ಎಂದು ಸಂಶಯಗೊಂಡಿದ್ದೆನು. ಅವರೂ ನನ್ನ ಕೋರಿಕೆಯನ್ನು ನೆರವೇರಿಸುವದಾಗಿ ಮಾತು ಕೊಟ್ಟರು. ಈ ಹೊಸ ಮುದ್ರಣದಲ್ಲಿ ಬದಲಾಯಿಸಿರುವ ಮುಖ್ಯವಾದ ವಿಷಯಗಳನ್ನು ವಾಚಕರ ತಿಳಿವಳಿಕೆಗಾಗಿ ಇಲ್ಲಿ ಕೊಟ್ಟಿರುತ್ತೇನೆ.

## ಬ ದ ಲಾ ವ ಣೆ ಗ ಳು.

(೧) ಈ ಗ್ರಂಥವು ಪ್ರತಿಯೊಬ್ಬ ಕನ್ನಡಿಗನಿಗೂ ಪಠನ,ಪಾರಾಯಣಾದಿಗಳಿಗೆ ಅನುಕೂಲಿಸಲೆಂದು ರಾಯಲ್ ಅಷ್ಟಪುಟದಲ್ಲಿ ಮುದ್ರಣಮಾಡಿ, ಮೂಲ ಶ್ಲೋಕಗಳನ್ನು ದಪ್ಪ ಅಕ್ಷರದಲ್ಲಿಯೂ, ಪ್ರತಿಪದ ಟೀಕೆಯನ್ನು ಸ್ವಲ್ಪ ಸಣ್ಣ ಅಕ್ಷರದಲ್ಲಿಯೂ, ತಾತ್ಪರ್ಯವನ್ನು ದಪ್ಪವಾಗಿಯೂ, ವಿರಳವಾಗಿಯೂ ಇರುವ ಅಕ್ಷರದಲ್ಲಿಯೂ, ಟಿಪ್ಪಣಿಗಳನ್ನು ಸಣ್ಣ ಅಕ್ಷರಗಳಲ್ಲಿಯೂ ಕೊಡಲಾಗಿದೆ.

೨) ಹಿಂದಿನ ಗ್ರಂಥಕರ್ತರು ವ್ಯಾಖ್ಯಾನ ಚತುಷ್ಟಯಕ್ಕೆ (**ಗೋವಿಂದರಾಜೀಯ, ತನಿಶ್ಲೋಕೀ, ಮಹೇಶ್ವರ ತೀರ್ಥೀಯ, ಮತ್ತು ತಿಲಕ,** ಎಂಬ ವ್ಯಾಖ್ಯಾನಗಳಿಗೆ) ಅನುಸಾರವಾಗಿ ಅರ್ಥ. ತಾತ್ಪರ್ಯಗಳನ್ನು ಬರೆದಿದ್ದರು. [illegible] ಯಾವ ವ್ಯಾಖ್ಯಾನಕ್ಕೆ ಸಂಬಂಧಪಟ್ಟದೆಂಬುದು, ಓದುವವರಿಗೆ ತಿಳಿಯದೆ [illegible] ಆಯಾ ವ್ಯಾಖ್ಯಾನಕಾರರ ಹೆಗ್ಗುರುತು (ಗೋ- [illegible] ಎಂಬ [illegible]) [illegible] ಗೊಳಿಸಿರುವೆನು.

ತದುಪಗತ ಸಮಾಸ ಸನ್ಧಿಯೋಗಂ ಸಮಮಧುರೋಪನ
ತಾರ್ಥ ವಾಕ್ಯಬದ್ಧಮ್ ।
ರಘುವರ ಚರಿತಂ ಮುನಿಪ್ರಣೀತಂ ದಶಶಿರಸಶ್ಚ ವಧಂ
ನಿಶಾಮಯಧ್ವಮ್ ॥೬॥

ವಾಲ್ಮೀಕಿ ಗಿರಿಸಂಭೂತಾ ರಾಮಸಾಗರ ಗಾಮಿನೀ ।
ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ॥೪॥
ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಣ್ಡಗ್ರಾಹ ಮಹಾಮೀನಂ ವನ್ದೇ ರಾಮಾಯಣಾರ್ಣ
ವಮ್ ॥೫॥

ವೇದವೇದ್ಯೇಪರೇ ಪುಂಸೀ ಜಾತೇ ದಶರಥಾತ್ಮಜೇ।
ವೇದಃಪ್ರಾಚೇತಸಾದಾಸೀತ್ಸಾಕ್ಷಾದ್ರಾಮಾಯಣಾತ್ಮನಾ॥

## ಶ್ರೀ ರಾಮಧ್ಯಾನ ಕ್ರಮಃ.

ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾ
ಮಣ್ಟಪೇ ಮಧ್ಯೇಪುಷ್ಪಕಮಾಸನೇ ಮಣಿಮಯೇ
ವೀರಾಸನೇ ಸುಸ್ಥಿತಮ್ ।
ಅಗ್ರೇವಾಚಯತಿಪ್ರಭಂಜನಸುತೇ ತತ್ತ್ವಂ ಮುನಿಭ್ಯಃ
ಪರಂ ವ್ಯಾಖ್ಯಾನ್ತಂ ಭರತಾದಿಭಿಃ ಪರಿವೃತಂ ರಾಮಂ
ಭಜೇ ಶ್ಯಾಮಲಮ್ ॥೧॥

ವಾಮೇಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ಸು
ಮಿತ್ರಾಸುತಶ್ಶತ್ರುಘ್ನೋ ಭರತಶ್ಚಪಾರ್ಶ್ವದಳಯೋ
ರ್ವಾಯ್ವಾದಿ ಕೋಣೇಷುಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ತಾರಾಸುತೋ
ಜಾಂಬವಾನ್ಮಧ್ಯೇನೀಲಸರೋಜಕೋಮಲರುಚಿಂರಾಮಂ
ಭಜೇ ಶ್ಯಾಮಲಮ್ ॥೨॥
ಮಾತಾರಾಮೋ ಮತ್ಪಿತಾರಾಮಚನ್ದ್ರೋ ಭ್ರಾತಾರಾಮೋ
ಮತ್ಸಖಾ ರಾಘವೇಶಃ ।
ಸರ್ವಸ್ವಂಮೇ ರಾಮಚನ್ದ್ರೋ ದಯಾಳು ರ್ನಾನ್ಯಂ
ದೈವಂ ನೈವಜಾನೇ ನಜಾನೇ ॥೩॥
ಸಾಕೇತೇ ಶರದಿನ್ದುಕುನ್ದಧವಳೇ ಸೌಧೇ ಮಹಾ
ಮಣ್ಟಪೇ ಪರ್ಯಸ್ತಾಗುರುಧೂಪದೀಪ ಲಲಿತೇ ಕರ್ಪೂರ
ದೀಪೋಜ್ವಲೇ ॥

ಸುಗ್ರೀವಾಙ್ಗದ ಜಾಂಬವತ್ಪರಿವೃತಂ ಸೌಮಿತ್ರಿಣಾ
ಸೇವಿತಂ ಲೀಲಾಮಾನುಷ ವಿಗ್ರಹಂ ರಘುವರಂ ರಾಮಂ
ಭಜೇಶ್ಯಾಮಲಮ್ ॥೪॥
ನಮೋಽಸ್ತು ರಾಮಾಯ ಸಲಕ್ಷ್ಮಣಾಯ ದೇವ್ಯೈಚ
ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇನ್ದ್ರಯಮಾನಿಲೇಭ್ಯೋ
ನಮೋಸ್ತುಚನ್ದ್ರಾರ್ಕ ಮರುದ್ಗಣೇಭ್ಯಃ॥೫॥

## ಪಾರಾಯಣ ಸಮಾಪನ ಸಮಯೇ ಅನುಸನ್ಧೇಯ ಶ್ಲೋಕಕ್ರಮಃ

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ ನ್ಯಾಯ್ಯೇನ
ಮಾರ್ಗೇಣ ಮಹಿಂ ಮಹೀಶಾಃ ।
ಗೋಃ ಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ಲೋಕಾ
ಸ್ಸಮಸ್ತಾ ಸ್ಸುಖಿನೋ ಭವಂತು ॥೧॥
ಕಾಲೇವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಸ್ಸನ್ತು
ನಿರ್ಭಯಾಃ ॥೨॥

ಅಪುತ್ರಾಃ ಪುತ್ರಿಣಸ್ಸನ್ತು ಪುತ್ರಿಣ ಸ್ಸನ್ತು ಪೌತ್ರಿಣಃ।
ಅಧನಾಸ್ಸಧನಾಸ್ಸನ್ತು ಜೀವನ್ತು ಶರದಾಂಶತಂ ॥೩॥
ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್ ॥
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕ ನಾಶನಮ್ ॥
ಶೃಣ್ವನ್ ರಾಮಾಯಣಂ ಭಕ್ತ್ಯಾ ಯಃ ಪಾದಂ ಪದ
ಮೇವವಾ ।
ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಹ್ಮಣಾ ಪೂಜ್ಯತೇ
ಸದಾ ॥೫॥

ರಾಮಾಯ ರಾಮಭದ್ರಾಯ ರಾಮಚನ್ದ್ರಾಯ
ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇನಮಃ॥
ಮಂಗಳಂ ಕೋಸಲೇನ್ದ್ರಾಯ ಮಹನೀಯ
ಗುಣಾಬ್ಧಯೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಂ॥೭॥
ಯನ್ಮಗಳಂ ಸಹಸ್ರಾಕ್ಷೇ ಸರ್ವದೇವ ನಮಸ್ಕೃತೇ।
ವೃತ್ರನಾಶೇ ಸಮಭವ ತ್ತತ್ತೇ ಭವತುಮಂಗಳಂ ॥೮॥
ಯನ್ಮಂಗಳಂಸುಪರ್ಣಸ್ಯ ವಿನತಾಽಕಲ್ಪಯತ್ಪುರಾ ।
ಅಮೃತಂ ಪ್ರಾರ್ಥಯಾನಸ್ಯ ತತ್ತೇಭವತು ಮಂಗಳಂ॥೯॥
ಅಮೃತೋತ್ಪಾದನೇ ದೈತ್ಯಾನ್ ಘ್ನತೋವಜ್ರ
ಧರಸ್ಯಯತ್ ।
ಅದಿತಿರ್ಮಂಗಳಂಪ್ರಾದಾತ್ತತ್ತೇ ಭವತು ಮಂಗಳಂ॥೧೦॥
ತ್ರೀನ್ವಿಕ್ರಮಾನ್ಪ್ರಕ್ರಮತೋವಿಷ್ಣೋರಮಿತತೇಜಸಃ।
ಯದಾಸೀನ್ಮಂಗಳಮ್ ರಾಮ ತತ್ತೇಭವತುಮಂಗಳಂ॥
ಋತವಸ್ಸಾಗರಾದ್ವೀಪಾ ವೇದಾಲೋಕಾ ದಿಶಶ್ಚತೇ ।
ಮಙ್ಗಳಾನಿ ಮಹಾಬಾಹೋ ದಿಶನ್ತುತವಸರ್ವದಾ ॥೧೨॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾಽತ್ಮನಾವಾ ಪ್ರಕೃತೇ ಸ್ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ಶ್ರೀ ರಾಘವಾಯೇತಿ ಸಮರ್ಪಯಾಮಿ ॥೧೩॥
ಯದಕ್ಷರಪದಭ್ರಷ್ಟಂ ಮಾತ್ರಾಹೀನಂಚಯದ್ಭವೇತ್

ತತ್ಸರ್ವಂ ಕ್ಷಮ್ಯತಾಂ ದೇವ ಶ್ರೀ ರಾಘವ
ನಮೋಽಸ್ತು ತೇ ||೧೪||

ಆತ್ಮಾ ತ್ವಂ ಕ್ಷಿತಿಜಾಮತಿಃ ಪರಿಜನಾಃ ಪ್ರಾಣಾಶ್ಶರೀರಂ
ಗೃಹಂ ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ
ಸಮಾಧಿಸ್ಥಿತಿಃ |

ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ
ಸರ್ವಾಗಿರೋ ಯದ್ಯತ್ಕರ್ಮಕರೋಮಿ ತತ್ತದಖಿಲಂ
ರಾಮಾಸ್ತು ತೇ ಪೂಜನಮ್ ||

ಅನೇನ ಶ್ರೀಮದ್ರಾಮಾಯಣ ಪಾರಾಯಣೇ ಭಗವಾನ್
ಸರ್ವದೇವಾತ್ಮಕಃ ಸೀತಾಲಕ್ಷ್ಮಣ ಭರತ ಶತ್ರುಘ್ನ ಹನು
ಮತ್ಸಮೇತ ಶ್ರೀರಾಮಚಂದ್ರ ಸ್ಸುಪ್ರೀತಸ್ಸು
ಪ್ರಸನ್ನೋ ವರದೋ ಭವತು
ಶ್ರೀರಾಮಚಂದ್ರಾರ್ಪಣಮಸ್ತು.

---

|| ಶ್ರೀ ರಾ ಮಾ ಯ ನ ಮಃ ||

## ಶ್ರೀ ರಾಮಾಯಣ ಪಾರಾಯಣಾರಂಭೇ ಶ್ರೀ ವೈಷ್ಣವೈಃ ಪಠನೀಯ ಶ್ಲೋಕಾಃ:— ಪ್ರಥಮತಃ ಶ್ರೀಶೈಲೇಶೇತ್ಯಾದಿ ಸ್ವಸ್ವಸಂಪ್ರದಾಯ ನಿರ್ವಾಹಕಾಚಾರ್ಯಾನುಸನ್ಧಾನಮ್.

---

ಲಕ್ಷ್ಮೀನಾಥಸಮಾರಮ್ಭಾಂ ನಾಥ ಯಾಮುನ
ಮಧ್ಯಮಾಮ್ |
ಅಸ್ಮದಾಚಾರ್ಯಪರ್ಯನ್ತಾಂ ವನ್ದೇ ಗುರು ಪರಂಪರಾಮ್ ||
ಯೋಽನಿತ್ಯ ಮಚ್ಯುತ ಪದಾಮ್ಬುಜಯುಗ್ಮ ರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ ||೧||
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿನ್ಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ||೨||
ಮಾತಾಪಿತಾ ಯುವತಯಸ್ತನಯಾ ವಿಭೂತಿ ಸ್ಸರ್ವಂ
ಯದೇವ ನಿಯಮೇನ ಮದನ್ವಯಾನಾಮ್ |
ಆದ್ಯಸ್ಯನಃ ಕುಲಪತೇ ರ್ವಕುಳಾಭಿರಾಮಾಂ ಶ್ರೀಮತ್ತ
ದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ||೩||
ಭೂತಂಸರಶ್ಚ ಮಹದಾಹ್ವಯ ಭಟ್ಟನಾಥ ಶ್ರೀಭಕ್ತಿ
ಸಾರಕುಲಶೇಖರ ಯೋಗಿವಾಹಾನ್ ||
ಭಕ್ತಾಂಘ್ರಿರೇಣುಪರಕಾಲಯತೀಂದ್ರಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್ ||೪||

### ಅಥ ಶ್ರೀ ಶೈಲಪೂರ್ಣ ವಿಷಯಂ.

ಪಿತಾಮಹಸ್ಯಾಪಿ ಪಿತಾಮಹಾಯ ಪ್ರಾಚೇತಸಾದೇಶ
ಫಲಪ್ರದಾಯ ಶ್ರೀಭಾಷ್ಯಕಾರೋತ್ತಮ ದೇಶಿಕಾಯ
ಶ್ರೀಶೈಲಪೂರ್ಣಾಯ ನಮೋ ನಮಸ್ತಾತ್ ||

### ವಿಷ್ವಕ್ಸೇನ ಧ್ಯಾನಂ.

ಶುಕ್ಲಾಮ್ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾನ್ತಯೇ ||೧||
ಯಸ್ಯ ದ್ವಿರದವಕ್ತ್ರಾದ್ಯಾಃ ಪಾರಿಷದ್ಯಾಃ ಪರಶ್ಶತಮ್ ||
ವಿಘ್ನಂ ನಿಘ್ನನ್ತಿ ಸತತಂ ವಿಷ್ವಕ್ಸೇನಂ ತಮಾಶ್ರಯೇ ||

### ಶ್ರೀ ಹಯಗ್ರೀವ ಧ್ಯಾನಂ.

ಜ್ಞಾನಾನನ್ದಮಯಂ ದೇವಂ ನಿರ್ಮಲಸ್ಫಟಿಕಾಕೃತಿಮ್ |
ಆಧಾರಂ ಸರ್ವವಿದ್ಯಾನಾಂ ಹಯಗ್ರೀವ ಮುಪಾಸ್ಮಹೇ ||
ಅಭಂಗುರಕಲಾದಾನ ಸ್ಥೂಲ ಲಕ್ಷ್ಯತ್ವ ಮಾಯುಷೇ |
ತುಂಗಾಯ ಮಹಸೇ ತಸ್ಮೈ ತುರಂಗಾಯ ಮುಖೇ ನಮಃ ||

### ವಾಲ್ಮೀಕಿ ಧ್ಯಾನಂ.

ಕೂಜನ್ತಂ ರಾಮರಾಮೇತಿ ಮಧುರಂ ಮಧುರಾಕ್ಷರಮ್ |
ಆರುಹ್ಯ ಕವಿತಾಶಾಖಾಂ ವನ್ದೇ ವಾಲ್ಮೀಕಿ ಕೋಕಿಲಂ ||೧||
ವಾಲ್ಮೀಕೇ ರ್ಮುನಿಸಿಂಹಸ್ಯ ಕವಿತಾ ವನಚಾರಿಣಃ |
ಶೃಣ್ವನ್ ರಾಮಕಥಾನಾದಂ ಕೋ ನ ಯಾತಿ
ಪರಾಂ ಗತಿಮ್ ||೨||
ಯಃ ಪಿಬನ್ ಸತತಂ ರಾಮಚರಿತಾಮೃತ ಸಾಗರಮ್ |
ಅತೃಪ್ತಸ್ತಂ ಮುನಿಂ ವನ್ದೇ ಪ್ರಾಚೇತಸಮಕಲ್ಮಷಮ್ ||

### ಆಞ್ಜನೇಯ ಪ್ರಾರ್ಥನಾ.

ಗೋಷ್ಪದೀಕೃತವಾರಾಶಿಂ ಮಶಕೀಕೃತರಾಕ್ಷಸಮ್ |
ರಾಮಾಯಣ ಮಹಾಮಾಲಾ ರತ್ನಂ ವನ್ದೇಽ
ನಿಲಾತ್ಮಜಮ್ ||೧||
ಅಂಜನಾನಂದನಂ ವೀರಂ ಜಾನಕೀ ಶೋಕನಾಶನಮ್ |
ಕಪೀಶ ಮಕ್ಷಹನ್ತಾರಂ ವನ್ದೇ ಲಂಕಾಭಯಂಕರಮ್ ||
ಆಮಿಷೀಕೃತಮಾರ್ತಾಣ್ಡಂ ಗೋಷ್ಪದೀಕೃತ ಸಾಗರಮ್ |
ತೃಣೀಕೃತದಶಗ್ರೀವ ಮಾಞ್ಜನೇಯಂ ನಮಾಮ್ಯಹಮ್ ||
ಮನೋಜವಂ ಮಾರುತ ತುಲ್ಯವೇಗಂ ಜಿತೇನ್ದ್ರಿಯಂ
ಬುದ್ಧಿಮತಾಂ ವರಿಷ್ಠಮ್ |
ವಾತಾತ್ಮಜಂ ವಾನರಯೂಥಮುಖ್ಯಂ ಶ್ರೀರಾಮ
ದೂತಂ ಶಿರಸಾ ನಮಾಮಿ ||೪||
ಉಲ್ಲಂಘ್ಯ ಸಿನ್ಧೋಃ ಸ್ಸಲಿಲಂ ಸಲೀಲಂ ಯಶ್ಶೋಕ
ವಹ್ನಿಂ ಜನಕಾತ್ಮಜಾಯಾಃ |
ಆದಾಯ ತೇನೇವ ದದಾಹ ಲಂಕಾಂ ನಮಾಮಿ ತಂ
ಪ್ರಾಂಜಲಿ ರಾಞ್ಜನೇಯಮ್ ||೫||

ಅಸ್ಸನೇಯು ಮತಿವಾಟಲಾನನಂ ಕಾಂಚನಾದ್ರಿ
ಕಮನೀಯ ವಿಗ್ರಹವಮ್ ||
ಪಾರಿಜಾತ ತರುಮೂಲವಾಸಿನಂ ಭಾವಯಾಮಿ
ಪವಮಾನ ನನ್ದನಮ್ ||೬||
ಯತ್ರ ಯತ್ರ ರಘುನಾಥ ಕೀರ್ತನಂ ತತ್ರತತ್ರ
ಕೃತಮಸ್ತಕಾಂಜಲಿಮ್ |
ಬಾಷ್ಪವಾರಿ ಪರಿಪೂರ್ಣಲೋಚನಂ ಮಾರುತಿಂ
ನಮತ ರಾಕ್ಷಸಾನ್ತಕಮ್ ||೭||

## ಶ್ರೀರಾಮಾಯಣ ಪ್ರಾರ್ಥನಾ.

ವೇದವೇದ್ಯೇ ಪರೇಪುಂಸಿ ಜಾತೇ ದಶರಥಾತ್ಮಜೇ |
ವೇದಃಪ್ರಾಚೇತಸಾದಾಸೀತ್ಸಾಕ್ಷಾದ್ರಾಮಾಯಣಾತ್ಮನಾ||
ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್ ||
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕ ನಾಶನಮ್ ||
ಶೃಣ್ವನ್ ರಾಮಾಯಣಂ ಭಕ್ತ್ಯಾಯಃ ಪಾದಂ
ಪದಮೇವವಾ ||
ಸಯಾತಿ ಬ್ರಹ್ಮಣಃ ಸ್ಥಾನಂ ಬ್ರಹ್ಮಣಾ ಪೂಜ್ಯತೇಸದಾ||
ವಾಲ್ಮೀಕಿ ಗಿರಿಸಂಭೂತಾ ರಾಮಸಾಗರ ಗಾಮಿನೀ |
ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ||೪||
ಶ್ಲೋಕಸಾರಸಮಾಕೀರ್ಣಂಸರ್ಗಕಲ್ಲೋಲಸಂಕುಲಮ್|
ಕಾಣ್ಡಗ್ರಾಹ ಮಹಾಮೀನಂ ವನ್ದೇರಾಮಾಯಣಾ
ರ್ಣವಮ್ ||೫||
ಯಃಕರ್ಣಾಂಜಲಿ ಸಂಪುಟೈ ರಹರಹಸ್ಸಮ್ಯಕ್ಪಿಬತ್ಯಾದರಾ
ದ್ವಾಲ್ಮೀಕೇರ್ವದನಾರವಿನ್ದ ಗಳಿತಂ ರಾಮಾಯಣಾಖ್ಯಂ
ಮಧು |
ಜನ್ಮವ್ಯಾಧಿ ಜರಾವಿಪತ್ತಿ ಮರಣೈ ರತ್ಯನ್ತ ಸೋಪದ್ರವಂ
ಸಂಸಾರಂ ಸವಿಹಾಯ ಗಚ್ಛತಿ ಪುಮಾ ನ್ವಿಷ್ಣೋಃಪದಂ
ಶಾಶ್ವತಮ್ ||೬||
ತದುಪಗತಸಮಾಸ ಸನ್ಧಿಯೋಗಂ ಸಮಮಧುರೋಪನ
ತಾರ್ಥ ವಾಕ್ಯಬದ್ಧಮ್ |
ರಘುವರಚರಿತಂ ಮುನಿಪ್ರಣೀತಂ ದಶಶಿರಸಶ್ಚ ವಧಂ
ನಿಶಾಮಯಧ್ವಮ್ ||

## ಶ್ರೀರಾಮ ಪ್ರಾರ್ಥನಾ,

ಶ್ರೀರಾಘವಂ ದಶರಥಾತ್ಮಜ ಮಪ್ರಮೇಯಂ
ಸೀತಾಪತಿಂ ರಘುಕುಲಾನ್ವಯ ರತ್ನದೀಪಮ್ ||
ಆಜಾನುಬಾಹು ಮರವಿನ್ದ ದಳಾಯತಾಕ್ಷಂ
ರಾಮಂ ನಿಶಾಚರ ವಿನಾಶಕರಂ ನಮಾಮಿ ||೧||
ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾ
ಮಣ್ಡಪೇ ಮಧ್ಯೇ ಪುಷ್ಪಕಮಾಸನೇ ಮಣಿಮಯೇ
ವೀ ರಾಸನೇ ಸುಸ್ಥಿತಮ್ ||
ಅಗ್ರೇವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ
ಪರಂವ್ಯಾಖ್ಯಾನ್ತಂ ಭರತಾದಿಭಿಃಪರಿವೃತಂ ರಾಮಂಭಜೇ
ಶ್ಯಾಮಲಮ್ ||೨||

ಶ್ರೀ ರಘುನಂದನ ಪರಬ್ರಹ್ಮಣೇ ನಮಃ
ಇತ್ಯುಕ್ತ್ವಾ ಪಾರಾಯಣಮಾರಭೇತ.

## ಪಾರಾಯಣ ಸಮಾಪನೇ ಅನುಸನ್ಧೇಯ ಶ್ಲೋಕ ಕ್ರಮಃ.

ಏವಮೇತತ್ಪುರಾವೃತ್ತ ಮಾಖ್ಯಾನಂ ಭದ್ರಮಸ್ತುವಃ|
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್||
ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ|
ಯೇಷಾಮಿನ್ದೀವರಶ್ಯಾಮೋಹೃದಯೇ ಸುಪ್ರತಿಷ್ಠಿತಃ||೨||
ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಸ್ಸಂತು
ನಿರ್ಭಯಾಃ ||೩||
ಕಾವೇರೀ ವರ್ಧತಾಂಕಾಲೇ ಕಾಲೇ ವರ್ಷತುವಾಸವಃ |
ಶ್ರೀ ರಂಗನಾಥೋ ಜಯತು ಶ್ರೀರಂಗ ಶ್ರೀಶ್ಚ
ವರ್ಧತಾಮ್ ||೪||
ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ ನ್ಯಾಯ್ಯೇನ
ಮಾರ್ಗೇಣ ಮಹೀಂ ಮಹೀಶಾಃ|
ಗೋ ಬ್ರಾಹ್ಮಣೇಭ್ಯಶ್ಶುಭಮಸ್ತು ನಿತ್ಯಂಲೋಕಾ
ಸ್ಸಮಸ್ತಾ ಸ್ಸುಖಿನೋ ಭವನ್ತು ||೫||
ಮಂಗಳಂ ಕೋಸಲೇನ್ದ್ರಾಯ ಮಹನೀಯ
ಗುಣಾಬ್ಧಯೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ
ಮಂಗಳಮ್ ||೬||
ವೇದವೇದಾನ್ತವೇದ್ಯಾಯ ಮೇಘಶ್ಯಾಮಲ
ಮೂರ್ತಯೇ ||
ಪುಂಸಾಂ ಮೋಹನರೂಪಾಯ ಪುಣ್ಯಶ್ಲೋಕಾಯ
ಮಂಗಳಮ್ ||೭||
ವಿಶ್ವಾಮಿತ್ರಾನ್ತರಂಗಾಯ ಮಿಥಿಲಾ ನಗರೀಪತೇಃ |
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ
ಮಂಗಳಮ್ ||೮||
ಪಿತೃಭಕ್ತಾಯಸತತಂ ಭ್ರಾತೃಭಿಸ್ಸಹಸೀತಯಾ |
ನನ್ದಿತಾಽಖಿಲಲೋಕಾಯ ರಾಮಭದ್ರಾಯ
ಮಂಗಳಮ್ ||೯||
ಸಾಕೇತವಾಸಾಯ ಚಿತ್ರಕೂಟ ವಿಹಾರಿಣೇ |

# ಶ್ರೀ ಮ ದ್ರಾ ಮಾ ಯ ಣ ಪಾ ರಾ ಯ ಣ ಕ್ರ ಮಃ.

ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ
ಮಂಗಳಮ್ ॥೧೦॥

ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ ।
ಸಂಸೇವ್ಯಾಯ ಸದಾ ಭಕ್ತ್ಯಾ ಸ್ವಾಮಿನೇ ಮಮ
ಮಂಗಳಮ್ ॥೧೧॥

ದಂಡಕಾರಣ್ಯ ವಾಸಾಯ ಖಂಡಿತಾಮರಶತ್ರವೇ ।
ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು
ಮಂಗಳಮ್ ॥೧೨॥

ಸಾದರಂ ಶಬರೀದತ್ತ ಫಲಮೂಲಾಭಿಲಾಷಿಣೇ ।
ಸೌಲಭ್ಯ ಪರಿಪೂರ್ಣಾಯ ಸತ್ತ್ವೋದ್ರಿಕ್ತಾಯ
ಮಂಗಳಮ್ ॥೧೩॥

ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ ।
ವಾಲಿಪ್ರಮಥನಾಯಾಸ್ತು ಮಹಾಧೀರಾಯ
ಮಂಗಳಮ್ ॥೧೪॥

ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ ।
ಜಿತರಾಕ್ಷಸರಾಜಾಯ ರಣಧೀರಾಯ ಮಂಗಳಮ್ ॥೧೫॥

ಆಸಾದ್ಯ ನಗರೀಂ ದಿವ್ಯಾಮಭಿಷಿಕ್ತಾಯ ಸೀತಯಾ ।
ರಾಜಾಧಿರಾಜ ರಾಜಾಯ ರಾಮಭದ್ರಾಯ
ಮಂಗಳಮ್ ॥೧೬॥

ಮಂಗಳಾಶಾಸನ ಪರೈರ್ಮದಾಚಾರ್ಯಪುರೋಗಮೈಃ ।
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು
ಮಂಗಳಮ್ ॥೧೭॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಸ್ಸ್ವಭಾವಾತ್ ॥
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥೧೮॥

ಶ್ರೀರಾಮಚಂದ್ರಾರ್ಪಣಮಸ್ತು.



ಶ್ರೀರಸ್ತು

# ಆಞ್ಜನೇಯಕೃತ ಸೀತಾರಾಮಸ್ತೋತ್ರಮ್.

ಆಯೋಧ್ಯಾಪುರನೇತಾರಂ ಮಿಥಿಲಾಪುರಿ ನಾಯಿಕಾಂ ॥
ರಾಘವಾಣಾಮಲಂಕಾರಂ ವಿದೇಹಾನಾ ಮಲಂಕ್ರಿಯಾಂ ॥ ೧ ॥

ರಘೂಣಾಂಕುಲದೀಪಂಚ ನಿಮೀನಾಂ ಕುಲದೀಪಿಕಾಂ ॥
ಸೂರ್ಯವಂಶ ಸಮುದ್ಭೂತಂ ಸೋಮವಂಶ ಸಮುದ್ಭವಾಂ ॥ ೨ ॥

ಪುತ್ರಂ ದಶರಥೇಂದ್ರಸ್ಯ ಪುತ್ರೀಂ ಜನಕಭೂಪತೇಃ ॥
ವಸಿಷ್ಠಾನುಮತಾಚಾರಂ ಶತಾನಂದಮತಾನುಗಾಂ ॥ ೩ ॥

ಕೌಸಲ್ಯಾಗರ್ಭಸಂಭೂತಂ ವೇದೀಗರ್ಭಸಮುದ್ಭವಾಂ ॥
ಪುಂಡರೀಕವಿಶಾಲಾಕ್ಷಂ ಸ್ಫುರದಿಂದೀವರೇಕ್ಷಣಾಂ ॥ ೪ ॥

ಚಂದ್ರಕಾಂತಾನನಾಂಭೋಜಂ ಚಂದ್ರಬಿಂಬೋಪಮಾನನಾಂ ॥
ಮತ್ತಮಾತಂಗಗಮನಂ ಮತ್ತಹಂಸವಧೂಗತಾಂ ॥ ೫ ॥

ಚಂದನಾರ್ದ್ರಭುಜಾಮಧ್ಯಂ ಕುಂಕುಮಾಕ್ತಭುಜಾಂತರಾಂ ॥
ಚಾಪಾಲಂಕೃತಹಸ್ತಾಬ್ಜಂ ಪದ್ಮಾಲಂಕೃತಪಾಣಿಕಾಂ ॥ ೬ ॥

ಸರ್ವಲೋಕವಿಧಾತಾರಂ ಸರ್ವಲೋಕವಿಧಾಯಿಸೀಂ ॥
ಲೋಕಾಭಿರಾಮಂ ಶ್ರೀರಾಮಂ ಅಭಿರಾಮಾಂಚ ಮೈಥಿಲೀಂ ॥ ೭ ॥

ದಿವ್ಯಸಿಂಹಾಸನಾಸೀನಂ ದಿವ್ಯಸ್ರಗ್ವಸ್ತ್ರಭೂಷಣಾಂ ॥
ಅನುಕ್ಷಣಂ ಕಟಾಕ್ಷಾಭ್ಯಾಂ ಅನ್ಯೋನ್ಯೇಕ್ಷಣ ಕಾಂಕ್ಷಿಣೌ ॥ ೮ ॥

ಅನ್ಯೋನ್ಯಸದೃಶಾವೇತೌ ತ್ರೈಲೋಕ್ಯಗೃಹದಂಪತೀ ॥
ಇಮೌ ಯುವಾಂ ಪ್ರಣಮ್ಯಾಹಂ ಭಜಾಮ್ಯದ್ಯ ಕೃತಾರ್ಥತಾಂ ॥ ೯ ॥

ಅನಯಾಸ್ತೌತಿಯಸ್ತುತ್ಯಾ ರಾಮಂ ಸೀತಾಂಚ ಭಕ್ತಿತಃ ॥
ತಸ್ಯ ತೌ ತನುತಾಂ ಪ್ರೀತೌ ಸಂಪದಸ್ಸಕಲಾ ಅಪಿ ॥ ೧೦ ॥

ಇತಿ ಶ್ರೀರಾಮಚಂದ್ರಸ್ಯ ಜಾನಕ್ಯಾಶ್ಚವಿಶೇಷತಃ ॥
ಭಕ್ತ್ಯಾಕೃತಂ ಹನುಮತಾ ಸ್ತೋತ್ರಂ ಮುಕ್ತಿಫಲಪ್ರದಂ ॥ ॥ ೧೧ ॥

ಪಠನ್ನರೋವಿನ್ದತಿ ನಿತ್ಯಮುನ್ನತಿಂ ।
ಯಶಶ್ಚಭಾಂಜೇಹ ಪರತ್ರಚಾವ್ಯಯಂ ॥
ಧ್ರುವಂ ಹಿ ಸನ್ಮಂಗಳರೂಪವಿಷ್ಣುಃ ।
ಯೋನಿತ್ಯಮಾಶ್ರಾವಯತೇ ಹಿ ಲೋಕಾನ್ ॥

ಶ್ರೀರಾಮಚಂದ್ರಾರ್ಪಣಮಸ್ತು.

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

# ಶ್ರೀಮದ್ವಾಲ್ಮೀಕಿರಾಮಾಯಣ

## ಪ್ರಾರಂಭಃ

## ಪಟ್ಟಾಭಿರಾಮಶಾಸ್ತ್ರಿ ಕೃತ ಕರ್ಣಾಟಕ ವ್ಯಾಖ್ಯಾ



ಶ್ಲೋ॥ ಶ್ರೀಸಾಕೇತಪುರೇ ಲಸನ್ಮಣಿಗೃಹೇ ಚಿತ್ರೈ ರ್ಧ್ವಜೈ ಸ್ಸಾಧೈ ರ್ಯುತೇ ।
ಸಚ್ಛತ್ರಸ್ಯಂದನರಾಜವೃತ್ತಸರಸಿಜ ಪ್ರದ್ಯೋತನೋದ್ಯದ್ದ್ಯುತಿಂ ॥
ಶ್ರೀಕಲ್ಯಾಣಗುಣಾರ್ಣವಂ ಕುಶಿಕಭೂಯಜ್ಞಸ್ಯ ಸಂರಕ್ಷಕಂ ।
ಸೀತೋದ್ವಾಹಕೃತಾದರಂಹರಿಶರಣಂ ಶ್ರೀರಾಮಚಂದ್ರಂಭಜೇ ।

**ಶ್ರೀರಾಮಚಂದ್ರಕರುಣಾರ್ದ್ರಕಟಾಕ್ಷಲೇಶಾತ್ಪಟ್ಟಾಭಿರಾಮ ಕವಿರೇಷ ಶುಭಾಖ್ಯ ಪುರ್ಯಾಂ ।**
**ರಾಮಾಯಣಸ್ಯ ವಿತನೋತಿ ಜನೋಪಕೃತ್ಯೈ । ಕರ್ಣಾಟಕಾಭಿಹಿತ ಭಾಷಿತಯಾಹಿಟೀಕಾಂ॥**

## ಅವತರಣಿಕೆ

### ಗೋವಿಂದರಾಜೀಯ ವ್ಯಾಖ್ಯಾನ ತಾತ್ಪರ್ಯವು.



ಸಕಲ ಕಲ್ಯಾಣ ಗುಣಾತ್ಮಕನೂ, ಸರ್ವೇಶ್ವರನೂ, ಶ್ರೀದೇವಿ ಭೂದೇವಿಯರಿಂದೊಡಗೂಡಿದವನೂ ಆದ ಶ್ರೀಮನ್ನಾರಾಯಣಮೂರ್ತಿಯು,ವೈಕುಂಠವೆಂಬ ದಿವ್ಯಲೋಕದಲ್ಲಿ ಮಹಾಮಣಿ ಮಂಟಪ ಮಧ್ಯಗತವಾದ ರತ್ನ ಸಿಂಹಾಸನದಲ್ಲಿ ಸುಖಾಸೀನನಾಗಿ ವಿರಾಜಿಸುತ್ತಿರುವನು. ಅಲ್ಲಿಯಾದರೊ, (೧) ನಿತ್ಯಮುಕ್ತರು ಆ ಭಗವಂತನ ಪಾದಸೇವೆಯನ್ನು ಮಾಡುತ್ತಿರುವರು. ಹೀಗಿದ್ದರೂ, ಶ್ರೀಮನ್ನಾರಾಯಣನು ಇವರಂತೆಯೇ, ಸ್ವಪಾದಾಶ್ರಯಣಕ್ಕೆ ಅರ್ಹರಾದ ಇತರ ಜೀವರು ಪ್ರಳಯ ಕಾಲದಲ್ಲಿ ಪ್ರಕೃತಿವಿಲೀನರಾಗಿ, ಜೇನುಮೇಣದಲ್ಲಿ ಮಗ್ನವಾದ ಚಿನ್ನದ ಕಣಗಳಂತೆ (೨) ಅಜ್ಞಾನದಿಂದಾವೃತರಾಗಿ ನರಳುತ್ತಿರುವುದನ್ನು ನೋಡಿ, ದಯೆಗೊಂಡವನಾಗಿ, ಅವರೂ ಸಹ ತನ್ನ ಪಾದಕಮಲಾರಾಧನೆಗೆ ಯೋಗ್ಯರಾಗಲು, ಮಹದಾದಿ ಸೃಷ್ಟಿಕ್ರಮದಿಂದ ಅವರಿಗೆ ಕರಣ (೩) ಕಳೇಬರಗಳನ್ನು ದಯೆಗಯ್ದನು. ಆದರೂ ನೋಣಿಯನ್ನು ಹೊಂದಿಯೂ, ನದಿಯನ್ನು ದಾಂಟದವರಂತೆ, ಆ ಜೀವರು ಅನ್ಯವಿಷಯಗಳಲ್ಲಿ

---

ಟಿಪ್ಪಣಿ —(೧) ವೈಕುಂಠೇತುಪರೇ ಲೋಕೇ ಶ್ರಿಯಾ ಸಾರ್ಧಂ ಜಗತ್ಪತಿಃ । ಆಸ್ತೇವಿಷ್ಣು ರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ ॥ ಎಂದರೆ ವಿಷ್ಣುವು ವೈಕುಂಠವೆಂಬ ದಿವ್ಯಲೋಕದಲ್ಲಿ ಲಕ್ಷ್ಮಿಯೊಂದಿಗೂ, ಭಕ್ತರಿಂದಲೂ (ನಿತ್ಯರು), ಭಾಗವತರೊಂದಿಗೂ (ಮುಕ್ತರು) ಒಡಗೂಡಿದವನಾಗಿರುವನು ಎಂದು ಹೇಳಿರುವುದರಿಂದ (೨) ಏವಂ ಸಂಸೃತಿ ಚಕ್ರಸ್ಥೇ ಭ್ರಾಮ್ಯಮಾಣೇಸ್ವಕರ್ಮಭಿಃ । ಜೀವೇ ದುಃಖಾಕುಲೇ ವಿಷ್ಣೋಃ ಕೃಪಾಕಾಪ್ಯುಪಜಾಯತೇ ॥ ಈ ರೀತಿ ಭವಚಕ್ರದಲ್ಲಿ ಸ್ವಕರ್ಮ ಫಲಪಾಕದಿಂದಲೆಯುತ್ತಿರುವ ಜೀವನಲ್ಲಿ ವಿಷ್ಣುವಿನ ಕೃಪೆಯು ಯಾವಾಗಾದರೊಮ್ಮೆ ಉಂಟಾಗುವುದು ಎಂದು ಹೇಳಲ್ಪಟ್ಟಿರುವುದು. (೩) ವಿಚಿತ್ರಾದೇಹ ಸಂಪತ್ತಿಃ ಈಶ್ವರಾಯ ನಿವೇದಿತುಂ । ಪೂರ್ಣ

ಲೋಲುಪರಾಗಲು ಅವರಿಗೆ ಸದಸದ್ವಿವೇಕಜ್ಞಾನವನ್ನುಂಟುಮಾಡಲೋಸುಗ, ಸ್ವಶಾಸನರೂಪವಾದ ವೇದಶಾಸ್ತ್ರವನ್ನು ಕಲ್ಪಿಸಿದನು. ಅದರಲ್ಲಿಯೂ ಅಪ್ರತಿಪತ್ತಿ, ವಿಪ್ರತಿಪತ್ತಿ, ಅನ್ಯಥಾಪ್ರತಿಪತ್ತಿಗಳಿಂದ ಜೀವರು ಶ್ರದ್ಧೆಯಿಲ್ಲದವರಾಗಲು, ಸ್ವಶಾಸನಾತಿಕ್ರಮಿಗಳಾದ ಅವರನ್ನು ಶಿಕ್ಷಿಸಲು ತಾನಾಗಿಯೇ ರಾಮಾದ್ಯವತಾರಗಳನ್ನು ಮಾಡಿದನು. ಭಗವಂತನು ದಶರಥರಾಜ ನಂದನರಾದ, ರಾಮ, ಲಕ್ಷ್ಮಣ, ಭರತ, ಶತ್ರುಘ್ನರೂಪದಿಂದ ಭೂಲೋಕವಲ್ಲಿ ಅವತರಿಸಿದನು. ಇಂತು ಅವತರಿಸಿ ರಾಮ ರೂಪದಿಂದ ರಾವಣ ಮರ್ದನ, ಪಿತೃವಾಕ್ಯಪರಿಪಾಲನೇತ್ಯಾದಿ ಸಾಮಾನ್ಯ ಧರ್ಮಗಳನ್ನೂ, ಲಕ್ಷ್ಮಣ ರೂಪದಿಂದ,ಇಂದ್ರಜಿದ್ವಧೆ,ಭಗವಚ್ಛೇಷತ್ವರೂಪ ವಿಶೇಷ ಧರ್ಮಗಳನ್ನೂ,ಭರತರೂಪದಿಂದ,ಗಂಧರ್ವ ನಿರ್ವಾಸನ ಭಾಗವತ ಪಾರತಂತ್ರ್ಯ ರೂಪಧರ್ಮಗಳನ್ನೂ, ಶತ್ರುಘ್ನರೂಪದಿಂದ ಲವಣಾಸುರಭಂಜನ, ಭಾಗವತ ಶೇಷತ್ವರೂಪಧರ್ಮಗಳನ್ನೂ ಆಚರಿಸಿ ಜನಪದಕ್ಕೆ ಅವುಗಳನ್ನು ಬೋಧಿಸಿದನು.

ಇಂತು ಅತಿಪವಿತ್ರವಾದ ಶ್ರೀ ರಾಮಚರಿತವೂ, ತತ್ಕಥಾನಾಯಕನಿಂದ ಆಚರಿಸಲ್ಪಟ್ಟ ಅಮೂಲ್ಯ ಧರ್ಮಗಳೂ ಗ್ರಂಥಸ್ಥವಾಗಿಲ್ಲದಿದ್ದರೆ ತಾತ್ಕಾಲಿಕವಾಗಿ ಪರಿಣಮಿಸುವುದೆಂದರಿತು, ಬ್ರಹ್ಮನು ಈ ರಾಮಚರಿತೆಯನ್ನು ಶತಕೋಟಿ ಶ್ಲೋಕಗಳಿಂದ ವಿಸ್ತರಿಸಿ ನಾರದಾದಿಗಳಿಗೆ ಬೋಧಿಸಿದನು. ತರುವಾಯ ಭೂಲೋಕವಾಸಿಗಳಿಗೂ ತಿಳಿಯಲೋಸುಗ, ಸದಾ ರಾಮಮಂತ್ರಾನುಸಂಧಾನಿಯಾದ ವಾಲ್ಮೀಕಿ ಮುಖದಿಂದ ಈ ರಾಮ ಚರಿತೆಯನ್ನು ಪ್ರಚುರಗೊಳಿಸಲು, ಸ್ವಮಾನಸಪುತ್ರನಾದ ನಾರದನನ್ನು ಕಳುಹಿದನು. ವಾಲ್ಮೀಕಿಯೂ ಸಹ ಸಕಲ ವೇದಾಂತೋದಿತ ಪರತತ್ವವನ್ನು ನಿರ್ಧರಿಸಲಿಚ್ಛಿಸಿ ಅದೃಷ್ಟವಶಾತ್ ಬಂದ ನಾರದ ಮುನಿಯನ್ನು ಯಥೋಚಿತ ಸತ್ಕಾರದಿಂದ ಸಂತಸಗೊಳಿಸಿ, ಪ್ರಶ್ನಿಸಿ ಪರತತ್ವವನ್ನು ತಿಳಿದು, ಸಾಕ್ಷಾತ್ಕಾರವನ್ನೂ, ಪ್ರಬಂಧ ನಿರ್ಮಾಣ ಶಕ್ತಿಯನ್ನೂ ಪಡೆದು, ವೇದ ಶಾಸ್ತ್ರೋದಿತವಾದ ಪರತತ್ವವನ್ನು ನಿರ್ಧರಿಸುವ ಈ ರಾಮಾಯಣ ಗ್ರಂಥವನ್ನು ಸುಹೃತ್ಸಮ್ಮಿತವಾದ ಕಾವ್ಯರೂಪದಲ್ಲುಪಕ್ರಮಿಸಿದನು. ಅಲ್ಲಿಯೂ (೪)ಕಾವ್ಯಾಲಾಪಗಳನ್ನು ಮಾಡದೆ ಸತ್ಕಾವ್ಯ ಲಕ್ಷಣಗಳನ್ನು ತಿಳಿಸಲೋಸುಗ ಸ್ವಗ್ರಂಥ ಪ್ರೇಕ್ಷಕರಿಗೆ ಅದರ ಅಂಗಗಳನ್ನು ನಾಲ್ಕು ಸರ್ಗಗಳಲ್ಲಿ ಬಿತ್ತರಿಸುವನು. ಅಲ್ಲಿ ಮೊದಲನೆಯ ಸರ್ಗೆಯಲ್ಲಿ (೫) ಗುರುವನ್ನು ಸಂದಿಸಿ, ಪ್ರಶ್ನಿಸಿ, ತಿಳಿಯಬೇಕೆಂಬ, ಕೇಳಿಸಿಕೊಳ್ಳದೆಯೇ ಹೇಳಬಾರದೆಂಬ ನಿಯಮಗಳಿಂದ ಏದು ಶ್ಲೋಕಗಳಿಂದ ತನ್ನ ಆಶಯವನ್ನು ಹೊರಸೂಸುವನು. ಪ್ರಕೃತದಲ್ಲಿ ಭಗವಂತನಾದ ವಾಲ್ಮೀಕಿಯು ತಾನು ರಚಿಸಲು ಉದ್ಯಮಿಸಿರುವ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನೈದಲು "ತಪಸ್ಸ್ವಾಧ್ಯಾಯ ನಿರತಂ" ಎಂಬ ಗುರುದೇವತಾ ನಮಸ್ಕಾರ ರೂಪವಾದ ಮಂಗಳವನ್ನಾಚರಿಸುವನು.

## ಶ್ರೀಮನ್ಮಹೇಶ ತೀರ್ಥೀಯ ವ್ಯಾಖ್ಯಾನ ತಾತ್ಪರ್ಯವು,

(೬) ಶತಕೋಟಿ ಗ್ರಂಥ ವಿಸ್ತೃತವಾದ ಶ್ರೀರಾಮಚರಿತ್ರೆಯನ್ನು, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬಮರ್ತ್ಯರ ತಾಪತ್ರಯ ವಿಮೋಚನೆಗಾಗಿ ಸಂಕ್ಷೇಪದಿಂದ ರಚಿಸಲು ಲೋಕಪಿತಾಮಹನಾದ ಬ್ರಹ್ಮನು ವಾಲ್ಮೀಕಿರೂಪದಿಂದ ಭೂಲೋಕದಲ್ಲಿ ಅವತರಿಸಿದನು. ಅಂತು ಬ್ರಹ್ಮಾಂಶ ಸಂಭೂತನಾದ

---

ಮೇವ ಕೃತಂ ಬ್ರಹ್ಮಣ ಹಸ್ತಪಾದಾದಿ ಸಂಯುತಂ || ಈಶ್ವರ ಸೇವೆಯನ್ನು ಮಾಡಲು ಕರಣ ಕಳೇಬರಗಳು ಮಹದಾದಿ ಸೃಷ್ಟಿಕ್ರಮದಿಂದ ಜೀವರಿಗೆ ಈಶ್ವರನಿಂದಲೇ ಕೊಡಲ್ಪಟ್ಟವು ಎಂಬ ವಚನ ಉಂಟು. (೪) "ಕಾವ್ಯಾಲಾಪಾಂಶ್ಚವರ್ಜಯೇತ್" ಎಂದು ನಿಯಮ. (೫) "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನಸೇವಯೇತ್" ಎಂಬ ಆಧಾರದಿಂದಲೂ, "ನಾಪೃಷ್ಟಃ ಕಸ್ಯ ಚಿದ್ಬ್ರೂಯಾತ್" ಎಂಬ ವೇದಾಂತ ರಹಸ್ಯದಿಂದಲೂ ಹೀಗೆ ಹೇಳಲ್ಪಟ್ಟಿರುವುದು. (೬) ವಾಲ್ಮೀಕಿರಭವದ್ಬ್ರಹ್ಮಾ ವಾಣೀ ವಾಕ್ಯಸ್ಯ ರೂಪಿಣೀ । ಚಕಾರ ರಾಮಚರಿತಂ ಪಾವನಂ ಚರಿತವ್ರತಃ ||

ವಾಲ್ಮೀಕಿಯು ಗುರುಮುಖೇನ ಕೇಳಬೇಕೆಂಬ ನ್ಯಾಯದಿಂದ ಭಗವತ್ಕಥೋಪದೇಶಕ್ಕಾಗಿ ಸ್ವಗುರುವಾದ ನಾರದನನ್ನು ನಿರೀಕ್ಷಿಸಿಕೊಂಡಿದ್ದನು ಆಗ ಬ್ರಹ್ಮನ ಆಜ್ಞಾನುಸಾರ ನಾರದ ಮುನಿಯು ವಾಲ್ಮೀಕಿಯ ಬಳಿಗೆ ಬಂದನು. ಬಳಿಕ ವಾಲ್ಮೀಕಿಯು ಆ ನಾರದ ಮುನಿಯನ್ನು ಪೂಜಿಸಿ ಭಗವತ್ಕಥೆಯನ್ನುಪದೇಶಿಸಲು ಪ್ರಶ್ನಿಸಿದನು. ಆಗಲಾನಾರದನು ಭಗವತ್ಕಥಾರೂಪವಾದ ಶ್ರೀರಾಮ ಚರಿತ್ರೆಯನ್ನು ವಾಕ್ಯರೂಪದಿಂದ ಸಂಕ್ಷೇಪವಾಗಿ ಹೇಳಿದನು. ತರುವಾಯ ಮಹಾತ್ಮನಾದ ವಾಲ್ಮೀಕಿ ಮುನಿಪುಂಗವನು ಅದೇ ರಾಮಚರಿತ್ರೆಯನ್ನೇ ಶ್ಲೋಕರೂಪವಾಗಿ ರಚಿಸಲಿಚ್ಛಿಸಿ, ವ್ಯಾಧವಿದ್ಧವಾದ ಕ್ರೌಂಚಪಕ್ಷಿಯ ದರ್ಶನದಿಂದ "ಮಾನಿಷಾದ" ಎಂಬ ಶ್ಲೋಕವು ತನ್ನ ಮುಖದಿಂದ ಹೊರಬಿದ್ದುದನ್ನು ನೋಡಿ "ಈ ಶ್ಲೋಕದಿಂದಲೇ ಪುಣ್ಯತಮವಾದ ರಾಮಾಯಣವನ್ನು ಪಕ್ರಮಿಸಬೇಕಲ್ಲ!" ಎಂದು ಚಿಂತಿಸತೊಡಗಲು, ಸಾಕ್ಷಾದ್ಬ್ರಹ್ಮನೇ ಬಂದು ಅನುಗ್ರಹಿಸಿ ಹೊರಟು ಹೋದನು. ಆಗ ವಾಲ್ಮೀಕಿಯು (೨) ಗಾಯತ್ರೀ ಮಂತ್ರದ ೨೪ ಅಕ್ಷರಗಳಿಗೂ ೨೪ ಸಹಸ್ರ ಶ್ಲೋಕಗಳನ್ನು ನಿರ್ಮಿಸಿ, ಆ ಮಂತ್ರದ ಪ್ರತಿ ಅಕ್ಷರವನ್ನು ಪ್ರತಿಸಾವಿರ ಶ್ಲೋಕದ ಆದಿಯಲ್ಲಿನೆಲೆಗೊಳಿಸಿದನು. ಅದೆಂತನೆ - ಬಾಲಕಾಣ್ಡ, ಅಯೋಧ್ಯಾಕಾಣ್ಡಗಳಲ್ಲಿ ಮೂರು,ನಾಲ್ಕು ಸಾವಿರ ಶ್ಲೋಕಗಳು, ಅರಣ್ಯ, ಕಿಷ್ಕಿಂಧಾಕಾಣ್ಡಗಳಲ್ಲಿ,ಎರಡೆರಡು ಸಾವಿರ ಶ್ಲೋಕಗಳು, ಸುಂದರಕಾಂಡದಲ್ಲಿ ಮೂರು ಸಾವಿರ ಶ್ಲೋಕಗಳು, ಯುದ್ಧಕಾಣ್ಡದಲ್ಲಿ ಆರು ಸಾವಿರ ಶ್ಲೋಕಗಳೂ, ಉತ್ತರಕಾಂಡದಲ್ಲಿ ನಾಲ್ಕು ಸಾವಿರ ಶ್ಲೋಕಗಳೂ ಅಂತೂ ೨೪ ಸಾವಿರ ಶ್ಲೋಕಗಳು ಹೇಳಲ್ಪಟ್ಟಿವೆ. ಇವುಗಳಲ್ಲಿ ಬಾಲಕಾಣ್ಡದಲ್ಲಿನ ಪ್ರಥಮ ಸರ್ಗದ ಪ್ರಥಮ ಶ್ಲೋಕವು "ತ" ಎಂಬ ಗಾಯತ್ರಿಯ ಪ್ರಥಮಾಕ್ಷರದಿಂದುಪಕ್ರಮಿಸಲ್ಪಟ್ಟು, ಗ್ರಂಥ ನಿರ್ವಿಘ್ನತೆಗೋಸುಗ ಗುರುದೇವತಾ ನಮಸ್ಕಾರ ರೂಪವಾಗಿ ವಾಲ್ಮೀಕಿಯಿಂದ ಹೇಳಲ್ಪಟ್ಟಿರುವುದು

(ತನಿಶ್ಲೋಕೀ ಮತ್ತು ತಿಲಕ ವ್ಯಾಖ್ಯಾನಗಳ ಅವತರಣಿಕೆಗಳಲ್ಲಿ ಇದಕ್ಕಿಂತಲೂ ಅತಿಶಯವಾದ ವಿಷಯಗಳು ಕಾಣುವುದಿಲ್ಲ.)

---

ವಾಲ್ಮೀಕಿಯು ಬ್ರಹ್ಮನಾಗಿಯೂ, ಆತನ ವದನಾರವಿಂದ ಗಳಿತ ವಾಕ್ಕೇ ಸರಸ್ವತಿಯಾಗಿಯೂ ಆಗಲು, ಆಚರಿತನ್ಮತ್ತನ್ತ್ರಿ ರಾಮಾಯಣವನ್ನು ಮಾಡಿದನು" ಎಂದು ಸ್ಕಾಂದ ಮಹಾ ಪುರಾಣದಲ್ಲಿ ಹೇಳಿರುವುದು. (೨) ಚತುರ್ವಿಂಶತಿ ಸಂಖ್ಯಾಕಾ ಗಾಯತ್ರೀ ವರ್ಣ ಸಂಯುತಾಃ । ಯೇ ಶ್ಲೋಕಾಸ್ಸಂತಿತಾನತ್ರ ವಿಲಿಖಾಮಿ ಯಥಾಕ್ರಮಂ ॥ ಶ್ಲೋಕೇಚ ಪ್ರತಿ ಸಾಹಸ್ರಂ ಪ್ರಥಮಂ ಪ್ರಥಮೇಕ್ರಮಾತ್ । ಗಾಯತ್ರ್ಯಕ್ಷರ ಮೇಕೈಕಂ ಸ್ಥಾಪಯಾಮಾಸವೈ ಮುನಿಃ । ಗಾಯತ್ರ್ಯಾಃ ಸ್ತ್ರೀಣಿ ಚತ್ವಾರಿ ದ್ವೇದ್ವೇ ತ್ರೀಣ್ಯಥ ಷಟ್ಕ್ರಮಾತ್ । ಚತ್ವಾರಿ ಸಪ್ತಕಾಣ್ಡೇಷು ಸ್ಥಾಪಿತಾಣ್ಯಕ್ಷರಾಣಿತು " ಎಂಬ ಕ್ರಮವು ಇಲ್ಲಿ ಅನುಸರಿಸಲ್ಪಟ್ಟಿದೆ



# ಬಾಲಕಾಂಡೇ ಪ್ರಥಮಸರ್ಗ ಪ್ರಾರಂಭಃ

ಕೂಜನ್ತಂ ರಾಮ ರಾಮೇತಿ ಮಧುರಂ ಮಧುರಾಕ್ಷರಮ್ ||
ಆರುಹ್ಯಕವಿತಾಶಾಖಾಂ ವನ್ದೇ ವಾಲ್ಮೀಕಿ ಕೋಕಿಲಮ್ ||

**ಮೂಲ||** **ತಪಸ್ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂವರಂ ||**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ ||೧||**

## *ಗೋವಿಂದರಾಜೀಯ ವ್ಯಾಖ್ಯಾ.

ತಪಃ-ಚಾಂದ್ರಾಯಣಾದಿಗಳಲ್ಲಿಯೂ, ಸ್ವಾಧ್ಯಾಯ-ವೇದದಲ್ಲಿಯೂ,(ಅಥವ, ತಪಃ-ಜ್ಞಾನ ಅಥವ ಯೋಗ, ಸ್ವಾಧ್ಯಾಯ-ವೇದದಲ್ಲಿ, ಅಥವ, ತಪಃ-ವೇದ,ಸ್ವಾಧ್ಯಾಯ-ಒಪದಲ್ಲಿಯೂ, ಅಥವ, ತಪಃ-ಬ್ರಹ್ಮಪ್ರಧಾನವಾದ, ಸ್ವಾಧ್ಯಾಯ-ವೇದಾಂತದಲ್ಲಿ, ಅಥವ, ತಪಃ-ವ್ಯಾಕರಣಸಹಿತವಾದ, ಸ್ವಾಧ್ಯಾಯ-ವೇದಾಧ್ಯಯನದಲ್ಲಿ, ಅಥವ, ತಪಃ-ತನ್ನ ಶಾಖಾರೂಪವಾದ, ಸ್ವಾಧ್ಯಾಯ-ವೇದಾಧ್ಯಯನದಲ್ಲಿ, ಅಥವ, ತಪಃ-ಬ್ರಹ್ಮಸ್ವರೂಪವಾದ (೧) ಸಾಮವೇದದ, ಸ್ವಾಧ್ಯಾಯ- ಅಧ್ಯಯನದಲ್ಲಿ ನಿರತಂ-ಆಸಕ್ತನಾದ,ವಾಗ್ವಿದಾಂವರಂ, ವಾಕ್-ವೇದವನ್ನು,ವಿದಾಂ-ತಿಳಿದವರಲ್ಲಿ, ವರಂ-ಶ್ರೇಷ್ಠನಾದ (ಅಥವ, ವೇದ ಮತ್ತು ವೇದಾರ್ಥವನ್ನು ತಿಳಿದವರಲ್ಲಿ ಶ್ರೇಷ್ಠನಾದ, ಅಥವ, ವಾಕ್-ವ್ಯಾಕರಣವೇ ಮೊದಲಾದ ಷಡಂಗಸಹಿತವಾದ ವೇದವನ್ನು, ವಿದಾಂ ತಿಳಿದವರಲ್ಲಿ, ವರಂ-ಉತ್ತಮನಾದ, ಅಥವ, ಶಾಸ್ತ್ರಜ್ಞರಲ್ಲಿ ಉತ್ತಮನಾದ,ಅಥವ, ಸರಸ್ವತಿಯ ಮಕ್ಕಳಾದ ಮರೀಚಿಯೇ ಮೊದಲಾದ ಮಕ್ಕಳಲ್ಲಿ ಶ್ರೇಷ್ಠನಾದ,) ಮುನಿಪುಂಗವಂ, ಮುನಿ-ಮನನಶೀಲರಲ್ಲಿ, ಪುಂಗವಂ-ಶ್ರೇಷ್ಠನಾದ ನಾರದಂ-ನರ ಸಂಬಂಧವಾದ ಅಜ್ಞಾನವನ್ನು ನಾಶಗೊಳಿಸುವ ಋಷಿಶ್ರೇಷ್ಠನಾದ ನಾರದನನ್ನು(ಅಥವ, ಜ್ಞಾನವನ್ನೀಯುವ, ಅಥವ, (೨) ಪರಮಾತ್ಮನನ್ನು ಹೊಂದಲುಪದೇಶಿಸುವ ನಾರದನನ್ನು) ತಪಸ್ವೀ-ಉತ್ತಮವಾದ ತಪಸ್ಸುಳ್ಳ(ಅಥವ ಮೋಕ್ಷಾಭಿಲಾಷೆಯುಳ್ಳ ಶಮ, ದಮಾದಿ ಸಂಪತ್ತುಳ್ಳ ಅಥವ, ಬ್ರಹ್ಮಜ್ಞಾನಸಾಧನ ರೂಪ ತಪಸ್ಸುಳ್ಳ,ಇಲ್ಲವೆ ವ್ಯಾಕರಣ ಶಾಸ್ತ್ರದಿಂದುಂಟಾದ ಸಾಂಗವಾದ ಉಪನಿಷತ್ಸಹಿತ ವೇದಾಧ್ಯಯನಸಂಪನ್ನತೆಯುಳ್ಳ, ಅಥವ, ಭಗವಂತನೊಬ್ಬನಲ್ಲಿಯೇ ಶರಣಾಗತನ್ಯಾಸರೂಪ ತಪಸ್ಸುಳ್ಳ, (೩) ವಾಲ್ಮೀಕಿಃ-ವಾಲ್ಮೀಕಿಯು, ಪರಿಪಪ್ರಚ್ಛ-ವಿಶೇಷವಾಗಿ ಕೇಳಿದನು , ಅಥವ,ನಾರದಂ-ನಾರದನನ್ನೂ, ತಪಃ-ಬ್ರಹ್ಮನನ್ನೂ, ಪರಿಪಪ್ರಚ್ಛ-ವಿಶೇಷವಾಗಿ ಕೇಳಿದನು.

ಇಲ್ಲಿ "ತಪಸ್ವೀ" ಎಂಬ ಪದವು ವಾಲ್ಮೀಕಿಗೆ ವಿಶೇಷಣ ಮಾಡಿರುವುದರಿಂದ, ಸಾಂಗವಾದ ಉಪನಿಷತ್ಸಹಿತ ವೇದ ಮತು ವೇದಾರ್ಥಗಳನ್ನು ತಿಳಿದು ಕೇವಲ ಕರ್ಮಜ್ಞಾನಿಯಾದುದರಿಂದಲೇ ಮೋಕ್ಷಾಪೇಕ್ಷಿ ಎಂದ ಹಾಗಾಯಿತು. "ಸ್ವಾಧ್ಯಾಯ ನಿರತಂ" ಎಂಬ ನಾರದನ ವಿಶೇಷಣ ಪದ ದಿಂದ ಶ್ರೋತ್ರಿಯ ಪದಾರ್ಥವು ಹೇಳಲ್ಪಟ್ಟಿತು. "ವಾಗ್ವಿದಾಂವರಂ" ಎಂಬ ವಿಶೇಷಣದಿಂದ ವಿದ್ವಾಂಸನೆಂದೂ, "ಮುನಿಪುಂಗವಂ" ಎಂಬುದರಿಂದ ಬ್ರಹ್ಮನಿಷ್ಠನೆಂದೂ, "ನಾರದಂ"

---

ಟಿಪ್ಪಣಿ. * ಇಲ್ಲಿ "ತಪಃ ಯಸ್ಯಾಸೌತಪಸ್ವೀ" ಎಂದು ಸಮಾಸವು. (೧) "ವೇದಾನಾಂ ಸಾಮವೇದೋಸ್ಮಿ" ಎಂಬ ಭಗವದ್ಗೀತಾವಚನದಿಂದ (೨) "ನರತೀತಿ ನರಃ ಪ್ರೋಕ್ತಃ ಪರಮಾತ್ಮಾ ಸನಾತನಃ" ಎಂದು ಭಾಂತಪಲ್ಲ "ನರ"ಎಂಬ ಪದಕ್ಕೆ ಪರಮಾತ್ಮ ಎಂಬ ಅರ್ಥವು ಹೇಳಲ್ಪಟ್ಟಿರುವುದರಿಂದ ಹೀಗೆ ಹೇಳಲಾಯಿತು (೩) "ವಲ್ಮೀಕ ಪ್ರಭವೋಯಸ್ಮಾತ್ ತಸ್ಮಾದ್ವಾಲ್ಮೀಕಿರಿತ್ಯಸೌ" ಎಂದು ಬ್ರಹ್ಮಕೈವರ್ತ ಪುರಾಣದಲ್ಲಿ ವಚನವುಂಟು. ವಲ್ಮೀಕ (ಹುತ್ತ) ದಿಂದ

ಎಂಬ ಪದದಿಂದ ಗುರು (೪) ಶಬ್ದಾರ್ಥವೂ ಹೇಳಲ್ಪಟ್ಟಿತು "ಪರಿಪಪ್ರಚ್ಛ, ಎಂಬ ಕ್ರಿಯಾಪದದಿಂದ ತಿಳಿಯಬೇಕಾದುದನ್ನು ಕೇಳಿದಂತಾಯಿತು ಅಲ್ಲದ ಬ್ರಹ್ಮವಾಚಕವಾದ ತಪಶ್ಶಬ್ದವು ಗ್ರಂಥಾದಿಯಲ್ಲಿ ಉಪಯೋಗಿಸಿರುವುದರಿಂದ, ದೇವತಾ ನಮಸ್ಕಾರರೂಪ ಮಂಗಳವು ಆಚರಿಸಲ್ಪಟ್ಟಿತು. ನಾರದನನ್ನು " ಪಪರಿಪ್ರಚ್ಛ, ಪರಿ-ಪೂಜಿಸಿ, ಪಪ್ರಚ್ಛ-ಕೇಳಿದನು' ಎಂಬುದರಿಂದ ಗುರುನಮಸ್ಕಾರವೂ ಮಾಡಿದಂತಾಯಿತು. ಶ್ರೀಮದ್ರಾಮಾಯಣವು ಗಾಯತ್ರ್ಯಕ್ಷರ ಸಂಖ್ಯಾನುಕ್ರಮದಿಂದ ೨೪ ಸಹಸ್ರ ಗ್ರಂಥರೂಪವಾಗಿ ಹೇಳಲ್ಪಟ್ಟಿರುವುದರಿಂದ ಪ್ರಥಮ ಸಹಸ್ರಾದಿಯಲ್ಲಿ ಗಾಯತ್ರಿಯ ಪ್ರಥಮಾಕ್ಷರವಾದ " ತ " ಎಂಬ ಅಕ್ಷರವು ಹೇಳಲ್ಪಟ್ಟಿರುವುದು ಅಲ್ಲದೆ"ತ" ಕಾರವು ಕವಿಗೂ, ವಾಚಕನಿಗೂ ಯಶಸ್ಸನ್ನುಂಟುಮಾಡುವುದು. ಇನ್ನು ಮುಂದೆ ಶ್ರೀಮದ್ವಾಲ್ಮೀಕಿಯು 'ಕೋನ್ವಸ್ಮಿನ್' ಇತ್ಯಾದಿ ಮೂರು ಶ್ಲೋಕಗಳಿಂದ ತಾನು ಕೇಳಲಿಚ್ಛಿಸಿರುವ ಪ್ರಶ್ನೆಯ ಕ್ರಮವನ್ನು ನಿರೂಪಿಸುವನು.

## ಮಹೇಶ್ವರ ತೀರ್ಥೀಯ ವ್ಯಾಖ್ಯಾ.

ತಪಸ್ಸ್ವಾಧ್ಯಾಯ ನಿರತಂ, ತಪಃ-ಚಿತ್ತಶುದ್ಧಿಗೆ (ಪ್ರಸಾದಕ್ಕೆ) ಕಾರಣ (ಹೇತು) ವಾದ ವ್ರತ, ನಿಯಮ, ಉಪವಾಸಾದಿಕರ್ಮದಲ್ಲಿಯೂ, ಸ್ವಾಧ್ಯಾಯ-ಅಧ್ಯಯನದಲ್ಲಿಯೂ, ನಿರತಂ ಐಕಾಗ್ರ್ಯ ಚಿತ್ತವುಳ್ಳ, ವಾಗ್ವಿದಾಂವರಂ-ವೇದಾರ್ಥವನ್ನು ತಿಳಿದವರಲ್ಲಿ ಅಗ್ರಗಣ್ಯನಾದ, ಮುನಿಪುಂಗವಂ-ಮನನಶೀಲರಲ್ಲಿ ಶ್ರೇಷ್ಠನಾದ, ನಾರದಂ ಪರಮಾತ್ಮ ಸಂಬಂಧವಾದ, ಜ್ಞಾನೋಪದೇಶಕನಾದ ನಾರದನನ್ನು, ತಪಸ್ವೀ-ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸುಳ್ಳ, ವಾಲ್ಮೀಕಿಃ-ವಾಲ್ಮೀಕಿಯು, ಪರಿಪಪ್ರಚ್ಛ-ಪೂಜಿಸಿ ಕೇಳಿದನು

## ರಾಮಪಂಡಿತ ಕೃತ ತಿಲಕ ವ್ಯಾಖ್ಯಾ.

ತಪಃ-ತಪಸ್ಸಿನಲ್ಲಿಯೂ (ಅಥವ ಬ್ರಹ್ಮಜ್ಞಾನದಲ್ಲಿಯೂ) ಸ್ವಾಧ್ಯಾಯ-ಸಾರ್ಥವಾದ ತನ್ನ ಶಾಖಾ ಸಂಬಂಧ ವೇದಾಧ್ಯಯನದಲ್ಲಿಯೂ, ನಿರತಂ-ಆಸಕ್ತನಾದ, ವಾಗ್ವಿದಾಂವರಂ-ಸ್ವರೂಪದಿಂದಲೂ, ಅರ್ಥದಿಂದಲೂ, ಶಬ್ದ ಬ್ರಹ್ಮತತ್ವವನ್ನು ತಿಳಿದ ಪಾಣಿನ್ಯಾದಿಗಳಲ್ಲಿ ಶ್ರೇಷ್ಠನಾದ, ಮುನಿಪುಂಗವಂ-ಮನನಶೀಲರಲ್ಲಿ ಶ್ರೇಷ್ಠನಾದ,ನಾರದಂ-ನಾರದಮುನಿಯನ್ನು ತಪಸ್ವೀ-ಕೃಚ್ಛ್ರ ಚಾಂದ್ರಾಯಣಾದಿರೂಪ ಐಕಾಗ್ರ್ಯ ತಪಸ್ಸುಳ್ಳ, ವಾಲ್ಮೀಕಿಃ-ವಲ್ಮೀಕನೆಂಬ ಋಷಿಯ ಕುಮಾರನಾದ ವಾಲ್ಮೀಕಿಯು, ಪರಿಪಪ್ರಚ್ಛ-ಪೂಜಿಸಿ ಕೇಳಿದನು. ಇಲ್ಲಿ ಪ್ರಶ್ನಕಾರನಾದ ವಾಲ್ಮೀಕಿಗೆ ಕೊಟ್ಟಿರುವ ವಿಶೇಷಣಗಳಿಂದ ಅವನಿಗೆ ದಿವ್ಯಾರ್ಥ ವಿಷಯದಲ್ಲಿ ಶ್ರವಣಾಧಿಕಾರವು ಹೇಳಲ್ಪಟ್ಟಿತು. ದಿವ್ಯಾರ್ಥವನ್ನು ಉಪದೇಶಿಸುವ ನಾರದನ ವಿಶೇಷಣಗಳಿಂದ ಸರ್ವಜ್ಞತ್ವವೂ, ಶಿಷ್ಯನಿಗೆ ಉಪದೇಶಿಸುವ ಸಾಮರ್ಥ್ಯವೂ ಹೇಳಿದಂತಾಯಿತು.

---

ತಾತ್ಪರ್ಯ:—ವೇದ ವೇದಾಂಗ ಪಾರಂಗತನಾದ ವಾಲ್ಮೀಕಿ ಮುನಿಯು, ಕೃಚ್ಛ್ರ, ಚಾಂದ್ರಾಯಣಾದಿ ನಿತ್ಯ, ನೈಮಿತ್ತಿಕ ವ್ರತಾನುಷ್ಠಾನ ರೂಪ ತಪದಲ್ಲಿಯೂ,ವೇದಾಧ್ಯಯನದಲ್ಲಿಯೂ ಆಸಕ್ತನಾದ, ಬ್ರಹ್ಮವೇತೃಗಳಲ್ಲಿ ಶ್ರೇಷ್ಠನೂ, ಮನನಶೀಲರಲ್ಲಿ ಅಗ್ರಗಣ್ಯನೂ ಆದ ನಾರದ ಮುನಿಯನ್ನು ಪ್ರಶ್ನಿಸುವನದೆಂತನೆ.

---

ಹುಟ್ಟಿ (ಪ್ರಭವ) ದವನಾದಕಾರಣ ಇವನಿಗೆ ವಾಲ್ಮೀಕಿ ಎಂದು ಹೆಸರು (೪)"ಗು" ಶಬ್ದಸ್ತ್ವಂಧಕಾರಸ್ಸ್ಯಾತ್ "ರು"ಶಬ್ದಸ್ತನ್ನಿರೋಧಕಃ। ಅಂಧಕಾರ ನಿರೋಧಿತ್ವಾತ್ "ಗುರು"ರಿತ್ಯಭಿಧೀಯತೆ ॥ ಎಂದು ಹೇಳಿರುವುದರಿಂದ ನಾರದ ಎಂದರೆ ಗುರು ಎಂದು ಅರ್ಥ ಮಾಡಲಾಯಿತು.

ಮೂ|| ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚವೀರ್ಯವಾನ್ || ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ || ೨ || ಚಾರಿತ್ರೇಣಚಕೋಯುಕ್ತ ಸ್ಸರ್ವ

ಟೀ|| (ಗೋ) (೧) ಈ ಭೂಲೋಕದಲ್ಲಿ ಸಾಂಪ್ರತಂ- (೨) ಈಗಿನಕಾಲದಲ್ಲಿ, ಗುಣವಾನ್-ಸಕಲ ಕಲ್ಯಾಣ ಗುಣವುಳ್ಳವನು, ಕೋನು-ಯಾರು ? (ಮಹೇ) ದೃಷ್ಟವ್ಯತಿರಿಕ್ತವಾದ ಗುಣವುಳ್ಳವನಾರು ? (ತಿಲಕ) ಪ್ರಾಶಸ್ತ್ಯವಾದ ಬಹು ಗುಣಗಳುಳ್ಳವನಾರು ? (ಗೋ) ವೀರ್ಯವಾಂಶ್ಚ-ವಿಕಾರಹೇತುವಾದ ಶೌರ್ಯಗಳಲ್ಲಿಯೂ ಸಹ ವಿಕಾರವನ್ನು ಹೊಂದದಿರುವನು,ಕಃ-ಯಾರು? (ಮ) ತಾನು ಹೊಡೆಯಲ್ಪಡದೆಯೇ ಶತೃಗಳನ್ನು ಜಯಿಸುವ ಸಾಮರ್ಥ್ಯವುಳ್ಳವನು ಯಾರು ? (ತಿ) ದಿವ್ಯಾಸ್ತ್ರಬಲದಿಂದುಂಟಾದ ಶತೃಗಳನ್ನು ಹಿಮ್ಮೆಟ್ಟಿಸುವ ಶಕ್ತಿಯುಳ್ಳವನಾರು ? (ಗೊ) ಧರ್ಮಜ್ಞಶ್ಚ-ಸಾಮಾನ್ಯ, ವಿಶೇಷ ಧರ್ಮಗಳನ್ನು ತಿಳಿದವನು, ಕಃ-ಯಾರು ? (ತಿ) ಶ್ರೌತಸ್ಮಾರ್ತಾದಿ ಸಕಲ ಧರ್ಮಗಳನ್ನು ತಿಳಿದವನಾರು? (ಗೋ)ಕೃತಜ್ಞಶ್ಚಕಃ-ಪ್ರಸಂಗವಶದಿಂದ ಸ್ವಲ್ಪವಾದ ಉಪಕಾರವನ್ನು ಮಾಡಿದರೂ, ಅದನ್ನು ಬಹಳವಾಗಿ ತಿಳಿಯುವವನಾರು ? (ತಿ) ಅಪಕಾರವನ್ನು ಬಹಳಮಾಡಿ, ಸ್ವಲ್ಪ ಉಪಕಾರವನ್ನೆಸಗಿದ್ದರೆ ಅದನ್ನೇ ಅದ್ಭುತವನ್ನಾಗಿ ತಿಳಿಯುವನಾರು ? (ಗೊ) ಸತ್ಯವಾಕ್ಯಃ-ಕಷ್ಟದೆಶೆಯಲ್ಲಿಯೂ ಸತ್ಯವನ್ನು ನುಡಿವವನು, ಕಃ-ಯಾರು, ದೃಢವ್ರತಃ-ನಿಶ್ಚಲವಾದ ಸಂಕಲ್ಪವುಳ್ಳವನಾರು ? (ಮ) ಫಲಪ್ರಾಪ್ತಿಯಾಗುವವರೆವಿಗೂ ವ್ರತವನ್ನು ಬಿಡದಿರುವವನಾರು ? (ತಿ) ಧರ್ಮಕ್ಕೋಸುಗ ಆಚರಿಸಿದ ವ್ರತವನ್ನು ಆಪತ್ತಿನಲ್ಲಿಯೂ ತ್ಯಜಿಸದಿರುವವನಾರು ? || ೨ || (ಗೋ) ಚಾರಿತ್ರೇಣಚ-ಆಚಾರದಿಂದ, (ಮ) ಕುಲಕ್ರಮಾಗತ ಆಚಾರದಿಂದ (ತಿ) ಶುದ್ಧವಾದ ಚರಿತ್ರೆಯಿಂದ, ಕೋಯುಕ್ತಃ-ಕೂಡಿರುವವನಾರು ? (ಗೊ) ಸರ್ವಭೂತೇಷು-ಎಲ್ಲ ಪ್ರಾಣಗಳಲ್ಲಿಯೂ, ಅಥವ ಎಲ್ಲ ಅಪರಾಧಿಗಳಲ್ಲಿಯೂ (ತಿ) ಎಲ್ಲ ಪ್ರಾಣಿಗಳಿಗೂ, ಶತೃಗಳಾದವರಿಗೂ ಐಹಿಕಾಮುಷ್ಮಿಕ ಫಲವಿಷಯದಲ್ಲಿ, ಕೋಹಿತಃ-ಹಿತನಾದವನಾರು ? (ಗೋ) ವಿದ್ವಾನ್ಕಃ-ಸಕಲ ಶಾಸ್ತ್ರಗಳನ್ನೂ ತಿಳಿದವನು ಯಾರು ? (ಮ) ತಿಳಿಯಬೇಕಾದುದನ್ನು ತಿಳಿದವನು ಯಾರು ? (ತಿ) ಆತ್ಮಾನಾತ್ಮ ಸಕಲ ಪದಾರ್ಥ ತತ್ವಜ್ಞನಾರು ? ಸಮರ್ಥಶ್ಚ-ಸರ್ವಕಾರ್ಯಧುರಂಧರನಾರು ? (ತಿ) ಲೌಕಿಕ ವ್ಯವಹಾರದಲ್ಲಿಯೂ, ಪ್ರಜಾರಂಜನಾದಿ ಚಾತುರ್ಯದಲ್ಲಿಯೂ ಸಮರ್ಥನಾರು ? ಏಕಪ್ರಿಯದರ್ಶನಃ-(ಗೊ) ಯಾವಾಗಲೂ ನೋಡುತ್ತಿದ್ದರೂ, ನೂತ

ತಾ|| ಅಯ್ಯಾ ! ನಾರದಮುನಿಯೇ !! ಈ ಭೂಲೋಕದಲ್ಲಿ, ಈಗಿನ ಕಾಲದಲ್ಲಿ ಸಕಲ ಕಲ್ಯಾಣಗುಣ ಸಂಪನ್ನನೂ, ತಾನು,ವಿದ್ಧನಾಗದೆ ಶತೃಗಳನ್ನು ನಾಶಗೊಳಿಸುವವನೂ, ಸಾಮಾನ್ಯ ಧರ್ಮ, ವಿಶೇಷ ಧರ್ಮಗಳನ್ನು ತಿಳಿದವನಾವನಿರುವನು ? ಅನೇಕ ಅಪಕಾರಗಳನ್ನು ಮಾಡಿದ್ದರೂ ಸ್ವಲ್ಪವಾದ ಉಪಕಾರವನ್ನೇ ಎಣಿಸುವವನಾರು ? ಸರ್ವಾವಸ್ಥೆಗಳಲ್ಲಿಯೂ, ಸತ್ಯವನ್ನೇ ನುಡಿಯುವವನೂ, ಸತ್ಯಸಂಕಲ್ಪನಾದವನೂ ಯಾರು? (೨) ತನ್ನ ಕುಲಕ್ರಮಾಗತವಾದ ಆಚಾರವನ್ನು ಎಡಬಿಡದೆ ಆಚರಿಸುತ್ತಿರುವವನಾರು ? ಸಕಲ ಪ್ರಾಣಿಗಳಲ್ಲಿ

ಟಿ|| (೧) ಲೋಕಾಂತರದಲ್ಲಿಯಾದರೆ, ಈ ಶ್ಲೋಕದಲ್ಲಿ ಹೇಳಿರುವ ಗುಣಗಳೆಲ್ಲವೂ ವಿಷ್ಣುವಿಗೊಬ್ಬನಿಗಲ್ಲದೆ ಮತ್ತಾರಿಗೂ ಅನ್ವಯಿಸಲಾರದೆಂಬ ವಿಷಯವು ತಿಳಿದೇ ಇರುವುದರಿಂದ ಈ ಭೂಲೋಕದಲ್ಲಿ, ಅಂತಹರಾರಿರುವರು ಎಂದರ್ಥ. (೨) ಇದಕ್ಕಿಂತ ಪೂರ್ವದಲ್ಲಿ ನೃಸಿಂಹಾದಿಗಳು ಈ ಗುಣಗಳನ್ನು ಹೊಂದಿದ್ದರು. ಆದರೆ ಈಗಿನ ಕಾಲದಲ್ಲಿ ಅಂತಹರಾರಿರುವರು, ಎಂದು ಅಭಿಪ್ರಾಯವು

ಭೂತೇಷು ಕೋ ಹಿತಃ। ವಿದ್ವಾನ್ ಕಃ ಕಸ್ಸಮರ್ಥಶ್ಚ ಕಶ್ಚೈಕ ಪ್ರಿಯದರ್ಶನಃ ||೩|| ಆತ್ಮವಾನ್ ಕೋ ಜಿತಕ್ರೋಧೋ ದ್ಯುತಿಮಾನ್ ಕೋಽನಸೂಯಕಃ || ಕಸ್ಯಬಿಭ್ಯತಿ ದೇವಾಶ್ಚ ಜಾತರೋಷಸ್ಯಸಂಯುಗೇ ||೪|| ಏತದಿಚ್ಛಾಮ್ಯಹಂಶ್ರೋತುಂ ಪರಂ ಕೌತೂಹಲಂಹಿಮೇ || ಮಹರ್ಷೇತ್ವಂ ಸಮರ್ಥೋಽಸಿ ಜ್ಞಾತುಮೇವಂ ವಿಧಂನರಮ್ ||೫||

ನವಾಗಿಯೇ ಕಾಣಿಸುವರೂಪುಳ್ಳವನು, (ಮ) ಅಸದೃಶವಾದ ಅವಯವರೂಪ ಸಂಪತ್ತಿಯುಳ್ಳವನು, (ತಿ) ಮನ್ಮಥನ ಸೌಂದರ್ಯಕ್ಕಿಂತಲೂ ಪ್ರಿಯವಾದ ದರ್ಶನವುಳ್ಳವನು, ಕಃ-ಯಾರು? || ೩ ||

(ಗೋ) ಆತ್ಮವಾನ್-ಅಪ್ರಕಂಪ್ಯವಾದ ಧೈರ್ಯ ಉಳ್ಳವನು, ಕಃ-ಯಾರು? (ತಿ) ವಶೀಕೃತವಾದ ಅಂತಃಕರಣವುಳ್ಳವನಾರು? (ಗೋ) ಜಿತಕ್ರೋಧಃ-ವಿಧೇಯವಾದ ಕೋಪವುಳ್ಳವನು (ಮ) ಅರಿಷಡ್ವರ್ಗಗಳನ್ನು ಗೆದ್ದಿರುವವನು, ಕಃ-ಯಾರು? (ಗೋ) ದ್ಯುತಿಮಾನ್-ಕಾಂತಿಯುಕ್ತನಾದವನು, (ತಿ) ಎಲ್ಲರಿಗೂ ನೋಡಬೇಕೆಂಬ ಆಶೆಯನ್ನು ಹೂಡುವ ದಿವ್ಯತೇಜಸ್ಸಿನಿಂದೊಡಗೂಡಿದವನು, ಕಃ ಯಾರು? ಅನಸೂಯಕಃ-ಗುಣಗಳಲ್ಲಿ ದೋಷವನ್ನೆಣಿಸದಿರುವವನಾರು ? (ತಿ) ಇತರರ ಐಶ್ವರ್ಯೋನ್ನತಿಯನ್ನು ನೋಡಿ ಸಂತಸಗೊಳ್ಳುವವನು (ಹೊಟ್ಟೆಕಿಚ್ಚಿಲ್ಲದವನು) ಕಃ-ಯಾರು ? ಜಾತರೋಷಸ್ಯ - ಹುಟ್ಟಿದ ಕೋಪವುಳ್ಳ, ಕಸ್ಯ-ಯಾರಿಗೆ, ದೇವಾಶ್ಚ-ದೇವತೆಗಳೂಸಹ ಬಿಭ್ಯತಿ ಹೆದರುತ್ತಾರೋ ||೪||

(ಗೋ) ಹಿ-ಯಾವಕಾರಣದಿಂದ, ಮೇ ನನಗೆ, ಪರಂ ಶ್ರೇಷ್ಠವಾದ, ಕೌತೂಹಲಂ ಅಪೇಕ್ಷೆಯು (ಅಸ್ತಿ-ಇರುವುದೋ, ತತ್-ಆಕಾರಣದಿಂದ) ಏತತ್-ಈ ಹಿಂದೆ ಹೇಳಿದ ಗುಣ ಭರಿತವಾದ ವಸ್ತುವನ್ನು ಅಹಂ-ನಾನು, ಶ್ರೋತುಂ-ಕೇಳಲು, ಇಚ್ಛಾಮಿ ಬಯಸುವೆನು. ಹೇಮಹರ್ಷೇ - ಎಲೈ ನಾರದ ಮುನಿಯೇ ! ತ್ವಂ-ನೀನು, ಏವಂವಿಧಂನರಂ- ಈ ರೀತಿಯಾದ ಗುಣಗಳುಳ್ಳ ದಿವ್ಯ ಪುರುಷನನ್ನು, ಜ್ಞಾತುಂ-ತಿಳಿಯಲು, ಸಮರ್ಥೋಽಸಿ ಶಕ್ತನಿರುವೆ. (ತ) ಏತತ್-ಈ ಹಿಂದೆ ಹೇಳಿದ ದೇಶಕಾಲ ವಿಶಿಷ್ಟ ಗುಣ ಭರಿತವಾದ ವಸ್ತುವನ್ನು,ಶ್ರೋತುಂ-ಕೇಳಲು, ಮೇ-ನನಗೆ, ಪರಂಹಿ-ಕುತೂಹಲವಷ್ಟೆ? ಹೇಮಹರ್ಷೇ- ಎಲೈ ಜ್ಞಾನಪಾರಂಗತನಾದ ನಾರದನೇ ! ತ್ವಂ-ಬ್ರಹ್ಮನಿಂದರಿತ ಸಕಲ ವಿಶೇಷ ಗಳುಳ್ಳ ನೀನು, ಏವಂನರಂ ಇಂತಹ ವಿಶಿಷ್ಟ ಗುಣ ಭರಿತನಾದ ಪುರುಷನನ್ನು, ಜ್ಞಾತುಂ-ತಿಳಿ ಯಲು, ಸಮರ್ಥೋಽಸಿ-ಶಕ್ತನಿರುವೆ (ತಿ) ಹಿ-ಯಾವಕಾರಣದಿಂದ, ಹೇ ಮಹರ್ಷೇ-ಪ್ರತ್ಯಕ್ಷ ಮಾಡಿ ಕೊಂಡ ಅಶೇಷಾರ್ಥವುಳ್ಳ ನಾರದನೇ ! ತ್ವಂ-ನೀನು, ಏವಂ-ನರಂ-ಮೇಲೆ ಹೇಳಿದ ಗುಣಗಳುಳ್ಳ ಪರಮಪುರುಷನನ್ನು, ಜ್ಞಾತುಂ-ತಿಳಿಯಲು,ಸಮರ್ಥೋಽಸಿ-ಶಕ್ತನಿರುವೆಯೋ, (ತತ್-ಆಕಾರಣದಿಂದ) ಏತತ್-ಈ ದಿವ್ಯಪುರುಷನ ಗುಣಗಳು (ಕಸ್ಯಾಸ್ತೀತಿ ಯಾರಿಗಿರುವುದೆಂದು,ತ್ವತ್ತಃ-ನಿನ್ನಿಂದ) ಶ್ರೋತುಂ-ಕೇಳಲು, ಅಹಮಿಚ್ಛಾಮಿ-ನಾನು ಅಪೇಕ್ಷಿಸುವೆನು. ಮೇ-ನನಗೆ, ಪರಂ-ಅತಿಶಯವಾದ, ಕೌತೂಹಲಂ-ಕುತೂಹಲವು, ಅಸ್ತಿ-ಇರುವುದು || ೫ ||

ದಯೆಯುಳ್ಳವನೂ, ತಿಳಿಯಬೇಕಾದುದನ್ನು ತಿಳಿದವನೂ, ಸರ್ವಕಾರ್ಯಧುರಂಧರನೂ ಯಾರು ? ಎಷ್ಟು ನೋಡಿದರೂ, ಇನ್ನೂ ನೋಡಬೇಕೆನಿಸುವ ರೂಪುಳ್ಳವನೂ || ೩ || ಧೈರ್ಯವಂತನೂ ಯಾರು ? ದಂಡಾರ್ಹರಲ್ಲಿ ಮಾತ್ರ ಕೋಪವುಳ್ಳವನೂ, ಪರರ ಶ್ರೇಯಸ್ಸನ್ನು ನೋಡಿ ವ್ಯಸನ ಪಡದವನೂ ಯಾರು ? ಕುಪಿತನಾದ ಯಾವ ಪುರುಷನ ಯುದ್ಧದಲ್ಲಿ ದೇವತೆಗಳೂ ಹೆದರುವರೋ; || ೪ || "ಎಲೈ ನಾರದಮುನಿಯೇ! ನೀನು ಎಲ್ಲವನ್ನೂ ತಿಳಿದಿರುವೆಯಾದುದರಿಂದ, ಈ ಹಿಂದೆ ಹೇಳಿದ ಗುಣಭರಿತನಾದ ಪುರುಷನನ್ನು ತಿಳಿಯಲು ಸಮರ್ಥನಿರುವೆ. ಆದುದರಿಂದ ಆ ಪುರುಷನನ್ನು ಹೇಳಿದರೆ, ನಿನ್ನ ದೆಶೆಯಿಂದ ಕೇಳಲು ಇಚ್ಛಿಸುವೆನು" ಎಂದನು. (೫)

ಶ್ರುತ್ವಾಚೈತತ್ತ್ರಿಲೋಕಜ್ಞೋ ವಾಲ್ಮೀಕೇರ್ನಾರದೋವಚಃ॥ ಶ್ರೂಯತಾಮಿತಿಚಾಮಂ
ತ್ರ್ಯ ಪ್ರಹೃಷ್ಟೋ ವಾಕ್ಯಮಬ್ರವೀತ್ ॥೬॥ ಬಹವೋ ದುರ್ಲಭಾಶ್ಚೈವ ಯೇ ತ್ವಯಾ
ಕೀರ್ತಿತಾಗುಣಾಃ॥ ಮುನೇ ವಕ್ಷ್ಯಾಮ್ಯಹಂ ಬುಧ್ವಾತೈರ್ಯುಕ್ತಶ್ಶ್ರೂಯತಾಂನರಃ ॥೭॥
ಇಕ್ಷ್ವಾಕುವಂಶಪ್ರಭವೋ ರಾಮೋನಾಮಜನೈಶ್ಶ್ರುತಃ॥ನಿಯತಾತ್ಮಾ ಮಹಾವೀರ್ಯೋ

(ಗೊ) ತ್ರಿಲೋಕಜ್ಞಃ-ಮೂರು ಲೋಕಗಳನ್ನರಿತ, ನಾರದಃ-ನಾರದ ಮುನಿಯು, ವಾಲ್ಮೀಕೇಃ-ವಾಲ್ಮೀಕಿಮುನಿಯ, ಏತದ್ವಚಃ - ಈ ನುಡಿಗಳನ್ನು, ಶ್ರುತ್ವಾ-ಕೇಳಿ, ಪ್ರಹೃಷ್ಟಃ-ಸಂತಸಗೊಂಡು, ವಾಕ್ಯಂ-ಉತ್ತರ ವಾಕ್ಯವನ್ನು, ಅಬ್ರವೀತ್-ಹೇಳಿದನು. ॥೬॥ (ತ) ಬಹವಃ-ಅನೇಕವಾದ, ಯೇಗುಣಾಃ - ಯಾವ ಗುಣಗಳು, ತ್ವಯಾ - ನಿನ್ನಿಂದ, ಕೀರ್ತಿತಾಃ-ಹೊಗಳಲ್ಪಟ್ಟವೋ, ತೆ-ಅವು (ಏಕತ್ರ ಸಾಮಾನ್ಯ ಪುರುಷನಲ್ಲಿ) ದುರ್ಲಭಾ ಏವ-ಅಸಾಧ್ಯವಾದವುಗಳೇ ಸರಿ; ಹೇಮುನೆ ! ಎಲೈ ವಾಲ್ಮೀಕಿಯೇ ! (ಯಃ-ಯಾವನು) ತೈಃ-ಆ ಗುಣಗಳಿಂದ, ಯುಕ್ತಃ-ಕೂಡಿದವನೋ, (ತಂ-ಅವನನ್ನು) ಬುದ್ಧ್ವಾ-ತಿಳಿದು, ವಕ್ಷ್ಯಾಮಿ ಹೇಳುತ್ತೇನೆ. ಶ್ರೂಯತಾಂ-ಕೇಳಲ್ಪಡಲಿ. (ಗೋ) ಬಹವಃ- * ಅಪರಿಚ್ಛಿನ್ನವಾದ, ಯೇಗುಣಾಃ ಯಾವ ಗುಣಗಳು, ತ್ವಯಾ ಕೀರ್ತಿತಾಃ-ನಿನ್ನಿಂದ ಹೊಗಳಲ್ಪಟ್ಟವೋ, ತೇ-ಅವು, ದುರ್ಲಭಾಃ-ಈಶ್ವರನಲ್ಲದವನಲ್ಲಿ ಅಸಾಧ್ಯವೇ ಸರಿ, ತೈಃ ಆ ಗುಣಗಳಿಂದ, ಯಃ ಯಾವ ಪುರುಷನು, ಯುಕ್ತಃ-ಕೂಡಿರುವನೋ (ಅಂದರೆ ಸುಗುಣನಾದವನು ಯಾವನೋ ಅಂತಹ) ನರಃ-ಪುರುಷನು (ಪುರುಷೋತ್ತಮನು) ಶ್ರೂಯತಾಂ-ಕೇಳಲ್ಪಡಲಿ, ಅಹಂ-ನಾನು,ಬುದ್ಧ್ವಾ-ನಮ್ಮ ತಂದೆಯಾದ ಬ್ರಹ್ಮನಿಂದ ಹೇಳಲ್ಪಟ್ಟ ಶತಕೋಟಿ ಗ್ರಂಥ ವಿಸ್ತೃತವಾದ ರಾಮಾಯಣದಿಂದ ತಿಳಿದು, ಅಥವ, ರಾಮಗುಣಾನುಸಂಧಾನ ವೈಚಿತ್ರ್ಯದಿಂದ ಈಗ ನನಗೇನೂ ತೋರುವುದಿಲ್ಲವಾದ ಕಾರಣ, ಸ್ವಲ್ಪ ಯೋಚಿಸಿ, ವಕ್ಷ್ಯಾಮಿ - ಹೇಳುತ್ತೇನೆ, ಶ್ರೂಯತಾಂ-ಕೇಳಲ್ಪಡಲಿ. (೭)

(ಗೊ)ಇಕ್ಷ್ವಾಕು† ವಂಶಪ್ರಭವಃ-ಇಕ್ಷ್ವಾಕು ಮಹಾರಾಜನ ವಂಶಪರಂಪರೆಯಲ್ಲಿ, ಪ್ರಭವಃ-ಉತ್ಪತ್ತಿಸ್ಥಾನವುಳ್ಳ, ಅಥವ, ಇಕ್ಷ್ವಾಕು ವಂಶದಲ್ಲಿ ಆವಿರ್ಭಾವವುಳ್ಳ, ರಾಮೋನಾಮ-ರಾಮನೆಂದು ಪ್ರಸಿದ್ಧಿಯಾಂತ, ಜನೈಶ್ಶ್ರುತಃ ಜನರಿಂದ ತಿಳಿಯಲ್ಪಟ್ಟ, ನಿಯತಾತ್ಮಾ-ನಿಯತ ಸ್ವಭಾವವುಳ್ಳವನಾಗಿಯೂ,

ಆಗಲಾ ಮೂರು ಲೋಕಗಳನ್ನು ತಿಳಿದ, ಜ್ಞಾನಿಯಾದ ನಾರದನು ವಾಲ್ಮೀಕಿಯ ನುಡಿಗಳನ್ನು ಕೇಳಿ, ಸಂತುಷ್ಟನಾಗಿ ಕೇಳಿಂದಭಿಮುಖವಾಗಿ ಮಾಡಿಕೊಂಡು ಹೇಳತೊಡಗಿದನು. ॥೬॥ "ಅಯ್ಯಾ ವಾಲ್ಮೀಕಿಮುನಿಯೆ! ನೀನು ಬಣ್ಣಿಸಿದ ಗುಣಗಳು ಸಾಮಾನ್ಯ ಜನರೆಲ್ಲರಲ್ಲಿಯೂ ಇರತಕ್ಕುದಲ್ಲ, ಅಂತಹ ಕಲ್ಯಾಣ ಗುಣಗಳುಳ್ಳ ಪುರುಷನನ್ನು ಹೇಳಬೇಕಾದರೆ ಬ್ರಹ್ಮಮಾನಸಪುತ್ರನಾದ ನಾನೂ ಯೋಚಿಸಿಯೇ ಹೇಳಬೇಕಾಗುವುದು। ಆದುದರಿಂದಹೇಳುವೆನು ಕೇಳು; ॥೭॥

ತಾ॥ ಇಕ್ಷ್ವಾಕು ವಂಶದಲ್ಲಿ ಹುಟ್ಟಿ ಶ್ರೀರಾಮನೆಂದು ಪ್ರಸಿದ್ಧನಾಗಿ ಪಂಡಿತ

ಟಿ॥ * (ಗೋ) ಇಲ್ಲಿ "ಯತೋವಾಚೋನಿವರ್ತಂತೆ । ಅಪ್ರಾಪ್ಯಮನಸಾಸಹ" "ಆನಂದಂ ಬ್ರಹ್ಮಣೋ ವಿದ್ವಾನ್" "ನಬಿಭೇತಿಕುತಶ್ಚನ" ಇತ್ಯಾದಿ ಶೃತಿಗಳಿಂದ ಅಪರಿಚ್ಛಿನ್ನ (ಎಡಬಿಡದೆ ಇರುವುದು) ಎಂಬ ಶಬ್ದವು ಅನಂತ ಕಲ್ಯಾಣ ಗುಣಗಳ ತಿಳಿವಳಿಕೆಗಾಗಿ ಕೊಟ್ಟಿರುವುದು ಅಲ್ಲದೆ ಆನಂದ ಮತ್ತು ಇತರ ಗುಣಗಳೂ ಅಪರಿಚ್ಛಿನ್ನವೆಂದು ಅರ್ಥವು. † ಅಂದರೆ " ರಾಮನ ಅನಂತ ಕಲ್ಯಾಣ ಗುಣ ಶ್ರವಣವು ಶಿಥಿಲವಾಗಿರುವುದರಿಂದ, ಈಗ ನಾನು ನಿಜವಾದ ನಾರದನಲ್ಲ ಆ ನಾರದನಾದರೋ, ನದೀ ಪ್ರವಾಹದಲ್ಲಿ ಮುಳುಗಿ ಹೋಗುವವನಂತೆ ರಾಮನ ಗುಣಗಳಲ್ಲಿ ಮುಳುಗಿ ಆಧಾರದಂಡವನ್ನು ಬಯಸುವನು" ಎಂದು ಭಾವವು.

**ದ್ಯುತಿಮಾನ್ ಧೃತಿಮಾನ್ವಶೀ ||೮|| ಬುದ್ಧಿಮಾನ್ನೀತಿಮಾನ್ವಾಗ್ಮೀ ಶ್ರೀಮಾನ್ ಶತ್ರುನಿಬ**

ಮಹಾವೀರ್ಯಃ-ಊಹಿಸಲಸದಳವಾದ ವಿವಿಧ ವಿಚಿತ್ರ ಶಕ್ತಿಯುತನಾಗಿಯೂ, ದ್ಯುತಿಮಾನ್-ಕಾಂತಿಯುಳ್ಳವನಾಗಿಯೂ, ಧೃತಿಮಾನ್-ನಿರತಿಶಯವಾದ ಆನಂದವುಳ್ಳವನಾಗಿಯೂ, ವಶೀ-ಎಲ್ಲಕ್ಕೂ ಸ್ವಾಮಿಯಾಗಿಯೂ,(೩)ಇಕ್ಷ್ವಾಕುವಂಶ-ಪ್ರಭವಃ-ಇಕ್ಷ್ವಾಕು ವಂಶದಲ್ಲಿ ಆವಿರ್ಭಾವವುಳ್ಳ, ರಾಮೋ ನಾಮ-ರಾಮ*ನೆಂದು ಪ್ರಸಿದ್ಧನಾದವನು, ಜನೈಶ್ಶ್ರುತಃ-ಜನರಿಂದ ತಿಳಿಯಲ್ಪಟ್ಟ[ಅಸ್ತಿ-ಇರುವನು; ಅವನಲ್ಲಿಯೇ ನಿನ್ನಿಂದ ಕೇಳಲ್ಪಟ್ಟ ಗುಣಗಳೂ, ಇತರ ಗುಣಗಳೂ ಇರುವುವು. ಸಃ-ಅವನೇ] ನಿಯತಾತ್ಮಾ-ನಿಗ್ರಹಿಸಲ್ಪಟ್ಟ ಅಂತಃಕರಣವುಳ್ಳವನಾಗಿಯೂ, (ಮಹಾವೀರ್ಯಃ........ದ್ಯುತಿಮಾನ್ ಮೊದಲಿನಂತೆ ಅರ್ಥ) ಧೃತಿಮಾನ್ - ಆಪತ್ಸಂಪತ್ತುಗಳೆರಡರಲ್ಲಿ, ವಿಕಾರವನ್ನು ಹೊಂದದ ಚಿತ್ತಸ್ಥೈರ್ಯವುಳ್ಳವನಾಗಿಯೂ, ವಶೀ - ಗೆಲ್ಲಲ್ಪಟ್ಟ ಇಂದ್ರಿಯಗಳುಳ್ಳವನಾಗಿಯೂ, ||೮|| ಬುದ್ಧಿಮಾನ್(೧)-ಸರ್ವಜ್ಞನಾಗಿಯೂ, ನೀತಿಮಾನ್ - ಪ್ರಶಸ್ತವಾದ ಮರ್ಯಾದೆಯುಳ್ಳವನಾಗಿಯೂ, ವಾಗ್ಮೀ-ಒಳ್ಳೆಯ ಮಾತುಳ್ಳವನಾಗಿಯೂ, ಶ್ರೀಮಾನ್(೨)-ಉತ್ತಮವಾದ,ಕಾಂತಿಸಂಪತ್ತುಗಳೆಂಬೆರಡು ವಿಧಗಳಾದ ಐಶ್ವರ್ಯಗಳುಳ್ಳ, ಶತ್ರುನಿಬರ್ಹಣಃ-ವಿರೋಧಿಗಳನ್ನು ನಾಶಮಾಡುವವನಾಗಿಯೂ, ವಿಪುಲಾಂಸಃ-ಉನ್ನತವಾದ+ಭುಜಗಳುಳ್ಳವನಾಗಿಯೂ, ಮಹಾಬಾಹುಃ-ಆಜಾನುಬಾಹುವಾಗಿಯೂ; ಕಂಬುಗ್ರೀವಃ-ಶಂಖದಂತೆ ಮೂರು ರೇಖೆಗಳುಳ್ಳ×ಕಂಠವುಳ್ಳವನಾಗಿಯೂ,ಮಹಾಹನುಃ- (೩) **ಬಲೆತಿ**

---

ರಿಂದಲೂ, ನಾಮದಿಂದಲೂ, ತಿಳಿಯಲ್ಪಟ್ಟವನೊಬ್ಬನಿರುವನು. ಆತನಲ್ಲಿಯೇ ನೀನು ಕೇಳಿದ ಗುಣಗಳಲ್ಲದೆ, ಇನ್ನೂ ಇತರ ಗುಣಗಳಿರುವವು. ಆತನು ನಿಯತ ಸ್ವಭಾವವುಳ್ಳವನೂ, ಊಹಿಸಲಸದಳವಾದ ವಿವಿಧ ಶಕ್ತಿಗಳುಳ್ಳವನೂ, ಕಾಂತಿಯುತನೂ, ಜ್ಞಾನಸ್ವರೂಪನೂ, ನಿರಂತರವೂ ಆನಂದವುಳ್ಳವನಾಗಿಯೂ, ಸರ್ವೇಶ್ವರನಾಗಿಯೂ, ||೮|| ಶ್ರೇಷ್ಠವಾದ ಬುದ್ಧಿಯುಳ್ಳವನಾಗಿಯೂ,ಕಾಮಂದಕಾದಿ ರಾಜನೀತಿಯನ್ನರಿತವನಾಗಿಯೂ, ಉತ್ತಮವಾದ ಮಾತುಳ್ಳವನಾಗಿಯೂ, ಎಲ್ಲಕ್ಕೂ ಅತಿಶಯವಾದ ಸಂಪತ್ತುಳ್ಳವನಾಗಿಯೂ, ಹಗೆಗಳನ್ನು ಸದೆಬಡಿಯುವನಾಗಿಯೂ, ವಿಸ್ತಾರವಾದ ಭುಜಶಿರಸ್ಸುಳ್ಳವನಾಗಿಯೂ, ಶಂಖ

---

ಟಿ॥†(ಗೊ) ಇಕ್ಷ್ವಾಕುವು ವೈವಸ್ವತ ಮನುವಿನ ಜ್ಯೇಷ್ಠಪುತ್ರನು "ಈ ಇಕ್ಷ್ವಾಕುವು ಬಹಳಕಾಲ ಶ್ರೀಮನ್ನಾರಾಯಣನನ್ನು ಆರಾಧಿಸಿ, ಆ ಮೂರ್ತಿ ವಿಶೇಷವಾದ ರಂಗನಾಥನನ್ನು ಹೊಂದಿದನು." ಎಂಬ ಪುರಾಣದ **ಕಥೆಯಿರು**ವುದರಿಂದ ಹೀಗೆ ಅರ್ಥವಾಗುವುದು (*) "ರಮಯತಿ ಸರ್ವಾನ್ಗುಣೈರಿತಿ ರಾಮಃ-ಎಲ್ಲರನ್ನೂ ತನ್ನ ಗುಣಗಳಿಂದ ಸಂತೋಷಗೊಳಿಸುವನು ಯಾವನೋ ಅವನು ರಾಮನು" ಎಂದೂ, "ರಮಂತೇ ಅಸ್ಮಿನ್ ಸರ್ವೇ ನಾಜಗುಣೈರಿತಿರಾಮಃ"ಇದಕ್ಕೆ ಆಧಾರ "ರಮಂತೆಯೋಗಿನೋನಂತೆ ನಿತ್ಯಾನಂದೇ ಚಿದಾತ್ಮನಿ। **ಇತಿರಾಮಪದೇ**ನಾಸೌ ಪರಂಬ್ರಹ್ಮಾಭಿಧೀಯತೆ ॥" ಎಂದು ಅಗಸ್ತ್ಯ ಸಂಹಿತೆಯಲ್ಲಿ ಹೇಳಿರುವುದು. ನಿತ್ಯಾನಂದ **ಸ್ವರೂಪ**ನೂ, ಚಿದಾತ್ಮನೂ ಆದ ಯಾವ ಆನಂದ ಮೂರ್ತಿಯಲ್ಲಿ ಯೋಗಿಗಳು ನಲಿಯುವರೋ **ಅವನು** ರಾಮನು ಈ ರಾಮ ಪದದಿಂದಿಲ್ಲಿ ಪರಬ್ರಹ್ಮವು ಹೇಳಲ್ಪಡುತ್ತದೆ ಎಂದು ಭಾವವು. (೧+೨) **ತಿಲಕ ವ್ಯಾಖ್ಯಾ**ನದಲ್ಲಿ ಬುದ್ಧಿಮಾನ್ ಎಂಬ ಪದಕ್ಕೆ ಪ್ರಶಸ್ತವಾದ ಬುದ್ಧಿಯುಳ್ಳವನೆಂದೂ, **ಶ್ರೀಮಾನ್ ಪದಕ್ಕೆ ಎಲ್ಲ**ಕ್ಕಿಂತಲೂ, ಅತಿಶಯವಾದ ಸಂಪತ್ತುಳ್ಳವನೆಂತಲೂ, ಹೇಳಿರುವದು. (+) ಉನ್ನತವಾದ **ಭುಜವಿರು**ವಿಕೆಯು ಮಹಾ ಪುರುಷನ ಲಕ್ಷಣವೆಂದು ಸಾಮುದ್ರಿಕಾ ಶಾಸ್ತ್ರದಲ್ಲಿರುವುದು. (×) ಶಂಖದಂತೆ **ಮೂರು ರೇಖೆ**ಗಳುಳ್ಳ ಕಂಠವುಳ್ಳ ಪುರುಷನು ರಾಜನಾಗುವನು ಎಂದು ಸಾಮುದ್ರಿಕಾ ಶಾಸ್ತ್ರವು. "**ಕಂಬುಗ್ರೀವಶ್ಚ ನೃಪತಿಃ** ಲಂಬಕರ್ಣೋತಿಭೂಷಣಃ" ಎಂದಿರುವುದು.(೩) "**ಮಾಂಸಳೌತುಹನೂಯಸ್ಯಭವತ್ತಸ್ತ್ರೀಷದುನ್ನತೌ ಸನರೋ**

ರ್ಘಣಃ॥ ವಿಪುಲಾಂಸೋ ಮಹಾಬಾಹುಃ ಕಂಬುಗ್ರೀವೋಮಹಾಹನುಃ॥೯॥ಮಹೋರ ಸ್ಕೋ ಮಹೇಷ್ವಾಸೋ ಗೂಢಜತ್ರುರರಿಂದಮಃ॥ಆಜಾನುಬಾಹುಸ್ಸುಶಿರಾಸ್ಸುಲಲಾಟ ಸ್ಸುವಿಕ್ರಮಃ ॥ ೧೦ ॥ ಸಮಸ್ಸಮವಿಭಕ್ತಾಂಗಸ್ಸ್ನಿಗ್ಧವರ್ಣಃಪ್ರತಾಪವಾನ್ ॥ ಪೀನ

ರುವ ಕೆನ್ನೆಗಳುಳ್ಳವನಾಗಿಯೂ, ||೯|| ಮಹೋರಸ್ಕಃ- (೧) ವಿಶಾಲವಾದ ಎದೆಯುಳ್ಳವನಾಗಿಯೂ, ಮಹೇಷ್ವಾಸಃ ದೊಡ್ಡ ಧನುಸ್ಸುಳ್ಳವನಾಗಿಯೂ, ಗೂಢ ಜತ್ರುಃ-(೨) ಮಾಂಸಲತ್ವದಿಂದ ಪ್ರಕಾಶಿಸುವ ಭುಜಶ್ಶಿರಸ್ಸುಗಳ, ಸಂಬಂಧ-ಸ್ಥಾನವುಳ್ಳ, ಅರಿಂದಮಃ - ಶತ್ರು ಸಂಹಾರಕನಾಗಿಯೂ, ಆಜಾನು ಬಾಹುಃ-(೩) ಜಾನುಗಳ ಪರಿಯಂತರವೂ, ದೀರ್ಘವಾದ ಭುಜಗಳುಳ್ಳವನಾಗಿಯೂ, ಸುಶಿರಾಃ- ಚೆನ್ನಾಗಿಯೂ, ಗುಂಡಾಗಿಯೂ ಇರುವ ಶಿರಸ್ಸುಳ್ಳವನಾಗಿಯೂ, ಸುಲಲಾಟಃ- ಅರ್ಧಚಂದ್ರಾ ಕಾರವಾಗಿಯೂ, ಉನ್ನತವಾಗಿಯೂ, ಇರುವ ಹಣೆಯುಳ್ಳವನಾಗಿಯೂ, ಸುವಿ ಕ್ರಮಃ - ಗಜಸಿಂಹಾದಿಗಳ ಗಮನದಂತೆ ಪಾದವಿಕ್ಷೇಪವುಳ್ಳವನಾಗಿಯೂ ॥ ೧೦ ॥ (ಗೊ) ಸಮಃ ಬಹಳ ದೀರ್ಘವಾಗಿಯೂ, ಬಹಳ ಹ್ರಸ್ವವಾಗಿಯೂ ಇಲ್ಲದಿರುವ ೯೬ ಅಂಗುಲ ಪ್ರಮಾಣವುಳ್ಳ (೪) ದೇಹದವನಾಗಿಯೂ, ಸಮವಿಭಕ್ತಾಂಗಃ ಹೆಚ್ಚು ಕಡಿಮೆ ಇಲ್ಲದೆ ವಿಭಾಗಿ ಸಲ್ಪಟ್ಟ ಕರಚರಣಗಳೇ ಮೊದಲಾದ ಅವಯವಗಳುಳ್ಳವನಾಗಿಯೂ, ಸ್ನಿಗ್ಧವರ್ಣಃ-ಸ್ನೇಹ ಯುಕ್ತ ವಾದ ವರ್ಣವುಳ್ಳವನಾಗಿಯೂ, ಪ್ರತಾಪವಾನ್-ತೇಜಸ್ವಿಯಾಗಿಯೂ, (೫) ಕೇಳಿದ ಮಾತ್ರದಿಂದ ಹಗೆಯ -ಹೃದಯವು ಸೀಳಿ ಹೋಗುವಂತೆ ಮಾಡುವ ಪೌರುಷವುಳ್ಳವನಾಗಿಯೂ; ಪೀನವಕ್ಷಾಃ- ಬಲಿಷ್ಠವಾದ ವಕ್ಷಸ್ಥಳವುಳ್ಳವನಾಗಿಯೂ, ವಿಶಾಲಾಕ್ಷಃ- ವಿಸ್ತಾರವಾದ ಕಂಗಳುಳ್ಳವನಾಗಿಯೂ,

ದಂತೆ ಮನೋಹರವಾದ ಕಂಠವುಳ್ಳವನಾಗಿಯೂ,ಮಹಾ ಲಕ್ಷಣದಿಂದ ಕೂಡಿದ ಕೆನ್ನೆಗಳುಳ್ಳ ವನಾಗಿಯೂ,||೯|| ವಿಸ್ತಾರವಾಗಿಯೂ,ದೃಢವಾಗಿಯೂ,ಇರುವ ವಕ್ಷಸ್ಥಳವುಳ್ಳವನಾಗಿಯೂ, ಮಹತ್ತರವಾದ ಧನುಸ್ಸುಳ್ಳವನಾಗಿಯೂ, ಗೂಢವಾದ ಹೆಗಲುಳ್ಳವನಾಗಿಯೂ, ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನೂ ಗೆದ್ದವನಾಗಿಯೂ, ಮೊಣಕಾಲಿನವರೆವಿಗೂ ದೀರ್ಘವಾದ ಬಾಹುಗಳುಳ್ಳವನಾಗಿಯೂ, ಸಮವಾಗಿಯೂ,ಗುಂಡಾಗಿಯೂ ಇರುವ ಮಂಡೆಯುಳ್ಳವನಾ ಗಿಯೂ, ಅನೇಕ ರೇಖೆಗಳುಳ್ಳ ಹಣೆಯುಳ್ಳವನಾಗಿಯೂ, ಗಜ ಸಿಂಹಗಳಂತೆ ನಡಿಗೆಯುಳ್ಳ ವನೂ ||೧೦|| ಬಹಳ ದೀರ್ಘವಾಗಿಯೂ, ಬಹಳ ಹ್ರಸ್ವವಾಗಿಯೂ ಇಲ್ಲದಿರುವ ಅವಯುವ ಗಳುಳ್ಳ ದೇಹದವನಾಗಿಯೂ, ಹೆಚ್ಚು ಕಡಿಮೆ ಇಲ್ಲದೆ ಸರಿಯಾಗಿ ವಿಭಾಗಿಸಲ್ಪಟ್ಟ ಅವಯುವ ಗಳ ಸೊಬಗುಳ್ಳವನಾಗಿಯೂ, ನೀಲಮೇಘಶ್ಯಾಮನಾಗಿಯೂ, ಕೇಳಿದೊಡನೆಯೇ ಹಗೆಯ ಎದೆಯೊಡೆಯುವಂತೆ ಮಾಡುವ ಪೌರುಷವುಳ್ಳವನಾಗಿಯೂ, ವಿಶಾಲವಾದ ವಕ್ಷಸ್ಥಳವುಳ್ಳವ ನಾಗಿಯೂ,ಕಿವಿವರೆವಿಗೂ ಪಸರಿಸಿದ ಮನೋಹರವಾದ ಕಂಗಳುಳ್ಳವನಾಗಿಯೂ, ಮಂಗಳ

ಪ್ಪ್ರುಷ್ಟಮಶ್ನಾತಿ ಯಾವದಾಯುಸ್ಸುಖಾನ್ವಿತಃ॥" ಎಂದಿರುವುದರಿಂದ ಇಂಥಾ ಪುರುಷನು ಸುಖಪುರುಷನೆಂದು ಹೇಳಲ್ಪಟ್ಟಿತು (೧) ಇದು ರಾಜಲಕ್ಷಣವು "ಸ್ಥಿರಂ ವಿಶಾಲಂ ಕಠಿಣ ಮುನ್ನತಂ ಮಾಂಸಳಂ ಸಮಂ। ವಕ್ಷೋಯ ಸ್ಯಮಹೀಪಾಲ ಸ್ತತ್ಸಮೋನರಃ" ಎಂದು ಲಕ್ಷಣವಿರುವುದು (೨) ರಾಜಲಕ್ಷಣದಲ್ಲಿ ಇದೂ ಒಂದಾಗಿರುವುದು. "ವಿಷಮೈರ್ಜತ್ರುಭಿರ್ನಿಸ್ಸ್ವಾತಿಸೂಕ್ಷ್ಮೈಶ್ಚ ಮಾನವಾಃ। ಉನ್ನತೈರ್ಭೋಗಿನೋನಿಮ್ನೈರ್ನಿಸ್ಸ್ವಾಃಪೀನೈರ್ನರಾಧಿಪಾಃ" ಎಂದಿರುವುದು (೩) ಇದು ಚಕ್ರವರ್ತಿಯ ಲಕ್ಷಣವು. "ಸಮವೃತ್ತ ಶಿರಾಶ್ಚೈವ ಛತ್ರಾಕಾರ ಶಿರಾಸ್ತಥಾ। ಏಕ ಛತ್ರಾಂ ಮಹೀಂಭುಙ್ತೇ ದೀರ್ಘಮಾಯುಶ್ಚ ಜೀವತಿ" ಎಂದು ಹೇಳಿರುವದು. (೪) ಇದು ರಾಜ ಲಕ್ಷಣವು

ವಕ್ಷಾ ವಿಶಾಲಾಕ್ಷೋ ಲಕ್ಷ್ಮೀವಾನ್ ಶುಭಲಕ್ಷಣಃ ॥ ೧೧ ॥ ಧರ್ಮಜ್ಞಸ್ಸತ್ಯಸಂಧಶ್ಚ ಪ್ರಜಾ
ನಾಂಚ ಹಿತೇರತಃ ॥ ಯಶಸ್ವೀ ಜ್ಞಾನಸಂಪನ್ನಶ್ಶುಚಿರ್ವಶ್ಯಸ್ಸಮಾಧಿಮಾನ್ ॥ ೧೨ ॥
ಪ್ರಜಾಪತಿಸಮಶ್ಶ್ರೀಮಾನ್ ಧಾತಾ ರಿಪುನಿಷೂದನಃ ॥ ರಕ್ಷಿತಾ ಜೀವಲೋಕಸ್ಯ ಧರ್ಮಸ್ಯ

ಲಕ್ಷ್ಮೀವಾನ್-ಅವಯವಗಳ ಸೊಬಗಿನಿಂದ ಕೂಡಿದವನಾಗಿಯೂ, (ತಿ) ಸೀತಾರೂಪಳಾದ ಲಕ್ಷ್ಮಿ ಯಿಂದ ಕೂಡಿದವನಾಗಿಯೂ; ಶುಭಲಕ್ಷಣಃ-ಹೇಳದಿರುವ ಸಕಲ ಲಕ್ಷಣ ಸಂಪನ್ನನಾಗಿಯೂ (ಮ) ಮಂಗಳಕರವಾದ ಸಾಮುದ್ರಿಕಾ ಶಾಸ್ತ್ರದಲ್ಲಿ ಹೇಳಿರುವ ಲಕ್ಷಣಗಳುಳ್ಳವನಾಗಿಯೂ, ॥೧೧॥ (ಗೊ) ಧರ್ಮಜ್ಞಃ-(೨) ಶರಣಾಗತರನ್ನು ಕಾಯುವ ಧರ್ಮವನ್ನು ತಿಳಿದವನೂ, ಸತ್ಯಸಂಧಶ್ಚ-ಸತ್ಯವಾದ ಪ್ರತಿಜ್ಞೆಯುಳ್ಳವನಾಗಿಯೂ, ಪ್ರಜಾನಾಂ-ಜನರ, ಹಿತೇಚ-ಹಿತವನ್ನುಂಟುಮಾಡುವುದರಲ್ಲಿ, ರತಃ-ಆಸಕ್ತಿವುಳ್ಳವನಾಗಿಯೂ, ಯಶಸ್ವೀ-ಆಶ್ರಿತ ಜನರನ್ನು ರಕ್ಷಿಸುವುದರಿಂದುಂಟಾದ ಕೀರ್ತಿಯುಳ್ಳವನಾಗಿಯೂ, (ತಿ) ರಾವಣನೇ ಮೊದಲಾದ ರಾಕ್ಷಸರ ವಧೆಯಿಂದುಂಟಾದ ಕೀರ್ತಿಯುಳ್ಳವನಾಗಿಯೂ ಜ್ಞಾನಸಂಪನ್ನಃ-ಸ್ವರೂಪದಿಂದಲೂ, ಸ್ವಭಾವದಿಂದಲೂ, ಎಲ್ಲ ವಿಷಯಗಳ ಜ್ಞಾನವುಳ್ಳವನಾಗಿಯೂ, (ತಿ) ಬ್ರಹ್ಮಜ್ಞಾನ(೩) ಪರಿಪೂರ್ಣನಾಗಿಯೂ, ಶುಚಿಃ ಪರಿಶುದ್ಧನಾಗಿಯೂ, (ತಿ) ದಿನದಿನದಲ್ಲಿಯೂ ಮಾಡುವ ಸ್ನಾನ, ಸಂಧ್ಯಾವಂದನ, ಜಪ, ತಪಾದಿಗಳಿಂದ ರಾಗ, ದ್ವೇಷಗಳನ್ನು ದೂರಮಾಡಿ ಅಂತಃ ಬಹಿಃ-ಶುದ್ಧನಾಗಿರುವ, ವಶ್ಯಃ-ಆಶ್ರಿತರಿಗೆ ವಶನಾಗಿಯೂ, (ತಿ) ಗುರುಹಿರಿಯರಿಗೆ ವಿಧೇಯನಾಗಿಯೂ ಸಮಾಧಿಮಾನ್-ಮರೆಹೊಕ್ಕವರನ್ನು ರಕ್ಷಿಸುವ ಚಿಂತೆಯುಳ್ಳವನಾಗಿಯೂ, (ತಿ) ನಿಜವಾದ ತತ್ವವನ್ನು ತಿಳಿಯಲು ಸಮಾಧಿಯುಳ್ಳವನಾಗಿಯೂ, ॥೧೨॥ ಪ್ರಜಾಪತಿಸಮಃ-ಬ್ರಹ್ಮನಿಗೆ(೪) ಸಮನಾಗಿಯೂ, ಶ್ರೀಮಾನ್ ವೀರ್ಯಲಕ್ಷ್ಮಿಯಿಂದೆಡಬಿಡದೆ ಒಡಗೂಡಿದವನಾಗಿಯೂ, (ಮ) ಅಖಂಡೈಶ್ವರ್ಯ ಸಂಪನ್ನನಾಗಿಯೂ, ಧಾತಾ-ಪ್ರಪಂಚವನ್ನು ಪೋಷಿಸುವವನಾಗಿಯೂ ರಿಪುನಿಷೂದನಃ-ಶತೃಗಳನ್ನು ನಾಶ ಮಾಡುವವನಾಗಿಯೂ, (ತಿ) ಶರಣಾಗತರ ಶತೃಗಳನ್ನು ನಾಶಗೊಳಿಸುವವನಾಗಿಯೂ, ಅಥವ ಕಾಮ ಕ್ರೋಧಾದಿ ಹಗೆಗಳ ನಾಶಕನಾಗಿಯೂ. ಜೀವಲೋಕಸ್ಯ-ಪ್ರಾಣಿ ಸಮುದಾಯದ, ರಕ್ಷಿತಾ-

ಕರವಾದ ಸಾಮುದ್ರಿಕಾಶಾಸ್ತ್ರದ ಲಕ್ಷಣಗಳುಳ್ಳವನಾಗಿಯೂ, ॥೧೧॥ ಎಲ್ಲ ಧರ್ಮಗಳ ಮರ್ಮ ವನ್ನು ತಿಳಿದವನೂ, ನಂಬಿದವರನ್ನು ಕಾಪಾಡುವದರಲ್ಲಿ ನಿಜವಾದ ಸಂಕಲ್ಪವುಳ್ಳವನೂ, ಜನರಿಗೆ ಹಿತವನ್ನುಂಟುಮಾಡುವವನೂ, ರಾವಣನೇ ಮೊದಲಾದ ರಾಕ್ಷಸರನ್ನು ನಾಶ ಮಾಡಿದದರಿಂದುಂಟಾದ ಕೀರ್ತಿಯುಳ್ಳವನೂ, ಬ್ರಹ್ಮಜ್ಞಾನ ಪರಿಪೂರ್ಣನೂ, ವ್ರಾತಸ್ನಾನ, ಪ್ರಾಣಾಯಾಮಾದಿಗಳಿಂದ ಬಾಹ್ಯಂತರ ಪರಿಶುದ್ಧನಾಗಿಯೂ, ಗುರುಹಿರಿಯರಿಗೆ ವಿಧೇಯನೂ, ಮೊರೆಹೊಕ್ಕವರನ್ನು ರಕ್ಷಿಸುವನೂ, ॥೧೨॥ ಸಾಕ್ಷಾತ್ ಬ್ರಹ್ಮನಿಗೆ ಸಮನಾಗಿರುವವನೂ, ಅಖಂಡೈಶ್ವರ್ಯ ಸಂಪನ್ನನೂ, ಪ್ರಪಂಚವೆಲ್ಲವನ್ನೂ ಪೋಷಿಸುವ ಸಾಮರ್ಥ್ಯವುಳ್ಳವನೂ,

"ಷಣ್ಣವತ್ಯಂಗುಲೋತ್ಸೇಧಃ ಸಾರ್ವಭೌಮೋ ಭವೇನ್ನೃಪಃ" ಎಂದು ಸಾಮುದ್ರಿಕಾ ಶಾಸ್ತ್ರ ವಚನವು. (೨)"ಸಕೃದೇವಪ್ರಪನ್ನಾಯ ತವಾಸ್ಮೀತಿಚಯಾಚತೇ।ಅಭಯಂಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ" ಎಂಬ ವಚನದಿಂದ ಶರಣಾಗತರಕ್ಷಣ ಧರ್ಮವು ಹೇಳಲ್ಪಟ್ಟಿತು (೩) ಬ್ರಹ್ಮಜ್ಞಾನ ಪರಿಪೂರ್ಣನಾದುದರಿಂ ದಲೇ ರಾಮಮೂರ್ತಿಯು ಜಟಾಯುವನ್ನು ಕುರಿತು "ಮಯಾತ್ವಂ ಸಮನುಜ್ಞಾತಃ ಗಚ್ಛಲೋಕಾನನು ತ್ತಮಾನ್"ಎಂದುಹೇಳಿದುದು (೪) ಶ್ರೀರಾಮಚಂದ್ರನು ಸಾಕ್ಷಾತ್ ಬ್ರಹ್ಮನಾದರೂ ಶೋಕ, ಮೋಹಾದಿ ಮಾಯೆಯಿಂದೊಡಗೂಡಿದ ಮನುಷ್ಯ ಧರ್ಮಗಳನ್ನು ತೋರಿಸುವನಾದುದರಿಂದ ಉಪಾಧಿ ಭೇದವನು ತೆಗೆ ದುಕೊಂಡು ಬ್ರಹ್ಮನಿಗೆ ಸಮನೆಂದು ಹೇಳಿರುವುದು.

ಪರಿರಕ್ಷಿತಾ||೧೩||ರಕ್ಷಿತಾಸ್ವಸ್ಯಧರ್ಮಸ್ಯಸ್ವಜನಸ್ಯಚರಕ್ಷಿತಾ||ವೇದವೇದಾಙ್ಗತತ್ವಜ್ಞೋ ಧನುರ್ವೇದೇಚನಿಷ್ಠಿತಃ ||೧೪|| ಸರ್ವಶಾಸ್ತ್ರಾರ್ಥತತ್ತ್ವಜ್ಞಃ ಸ್ಮೃತಿಮಾನ್ ಪ್ರತಿಭಾನ

ಪಾಲಕನಾಗಿಯೂ,ಧರ್ಮಸ್ಯ-(೩)ಆಯಾ ವರ್ಣಾಶ್ರಮಗಳ ಮರ್ಯಾದೆಯನ್ನು,ಪರಿರಕ್ಷಿತಾ-ಪರಿಪಾಲಕನಾಗಿಯೂ||೧೩||(ಗೋ)ಸ್ವಸ್ಯಧರ್ಮಸ್ಯ,ಸ್ವಸ್ಯ-ಸ್ವಕೀಯವಾದ,ಧರ್ಮಸ್ಯ-ಶರಣಾಗತ ರಕ್ಷಣರೂಪವಾದ ಧರ್ಮಕ್ಕೆ. ರಕ್ಷಿತಾ-ವಿಶೇಷವಾದ ರಕ್ಷಕನಾಗಿಯೂ, ಅಥವ ಶೈವ ಧನುರ್ಭಂಗ,ಪರಶುರಾಮಜಯಾದಿ ರೂಪ ಧರ್ಮಕ್ಕೆ, ಅಥವ ಸೀತಾಪರಿಣಯವೇ ಮೊದಲಾದ ತನ್ನ ಆಶ್ರಮಕ್ಕೆ ಯೋಗ್ಯವಾದ ಧರ್ಮಗಳಿಗೆ, ಅಥವ, ತನ್ನ ಧನುಸ್ಸಿಗೆ, ವಿಶೇಷ ರಕ್ಷಕನಾಗಿಯೂ. (ಮ) ಯಜನ, ಯಾಜನ, ಅಧ್ಯಯನ ಮತ್ತು ದಾನ ಮುಂತಾದ ಧರ್ಮಗಳಿಗೆ ರಕ್ಷಕನಾಗಿಯೂ, (ಗೋ) ಸ್ವಜನಸ್ಯಚ(೧)-ತನ್ನನ್ನು ನಂಬಿದ ಬಂಧುಗಳಿಗೂ ಅಥವ ಜೀವಲೋಕಕ್ಕೆ.ರಕ್ಷಿತಾ-ವಿಶೇಷ ಪೋಷಕನಾಗಿಯೂ,ವೇದವೇದಾಂಗತತ್ವಜ್ಞಃ-ವೇದ-ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಗಳ, ವೇದಾಂಗ-ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ವೇದದ ಆರು ಅಂಗಗಳ, ತತ್ವಜ್ಞಃ- ತತ್ವಾರ್ಥಗಳನ್ನು ಬಲ್ಲವನಾಗಿಯೂ, ಧನುರ್ವೇದೇಚ-ಹಸ್ತ, ಮುಷ್ಟಿ, ಸ್ಥಿತಿ, ಆಕರ್ಷಣ, ವಿಮೋಕ್ಷಣ, ಮತ್ತು ದಿವ್ಯಾಸ್ತ್ರಗಳ ಪ್ರಯೋಗ, ಇವುಗಳನ್ನು ವಿವರಿಸುವ ಧನುರ್ವೇದದಲ್ಲಿಯೂ, ಅದಕ್ಕೆ ಉಪವೇದಗಳಾದ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಮತ್ತು ಅರ್ಥಶಾಸ್ತ್ರ ಇವುಗಳಲ್ಲಿಯೂ, ನಿಷ್ಠಿತಃ ನಿಪುಣನೂ. |೧೪| ಸರ್ವಶಾಸ್ತ್ರಾರ್ಥ ತತ್ತ್ವಜ್ಞಃ-(೨)ಸಕಲ ಶಾಸ್ತ್ರಗಳ ಗೂಢಾರ್ಥವನ್ನರಿತವನಾಗಿಯೂ, ಸ್ಮೃತಿಮಾನ್-ತಿಳಿದ ವಿಷಯಗಳನ್ನು ಸ್ವಲ್ಪವೂ ಮರೆಯದವನೂ, ಪ್ರತಿಭಾನವಾನ್ ಮಹಾಸ್ಫೂರ್ತಿವಂತನೂ, ಸರ್ವಲೋಕಪ್ರಿಯಃ ಎಲ್ಲಜನರಿಗೆ ಪ್ರೀತಿಪಾತ್ರನಾಗಿಯೂ, [೩] ಸಾಧುಃ-ಮೃದುವಾದ ಸ್ವಭಾವ ಗುಣವುಳ್ಳವನಾದ, [ಮ] ಅಪಕಾರಿಗಳಿಗೂ ಉಪಕಾರವನ್ನು

ಆಶ್ರಿತ ಜನರ ಹಗೆಗಳನ್ನು ಸದೆಬಡಿಯುವವನೂ, ಪ್ರಾಣಿಸಮೂಹದ ಪೋಷಕನೂ, ವರ್ಣಾಶ್ರಮ ಧರ್ಮಗಳ ಮರ್ಯಾದೆಯನ್ನು ಕಾಪಾಡುವವನೂ, ||೧೩|| ತನ್ನಲ್ಲಿ ಶರಣಾಗತರಾದವರನ್ನು ಪೋಷಿಸುವ ಧರ್ಮವನ್ನೂ ಆಶ್ರಿತರಾದ ಬಂಧುಜನರನ್ನು,ಮತ್ತು ಲೋಕವನ್ನೂ,ವಿಶೇಷವಾಗಿ ಪರಿಪಾಲಿಸುತ್ತಲೂ, ನಾಲ್ಕು ವೇದಗಳಲ್ಲಿಯೂ ಆ ವೇದದ ಆರು ಅಂಗಗಳಲ್ಲಿಯೂ ಸಹ, ತತ್ವವನ್ನು ಸಂಪೂರ್ಣವಾಗಿ ಅರಿತವನಾಗಿಯೂ, ಕ್ಷತ್ರಿಯನಾದ ತನ್ನ ಕುಲಕ್ಕೆ ಬಹು ಮುಖ್ಯವಾದ ಧನುರ್ವೇದದಲ್ಲಿ ನಿಷ್ಣಾತನಾಗಿಯೂ, || ೧೪ || ಸಕಲ ಶಾಸ್ತ್ರಗಳ ಗೂಢಾರ್ಥವನ್ನರಿತವನೂ, ತಿಳಿದ ವಿಷಯಗಳನ್ನು ಮರೆಯದಿರುವವನೂ, ಮಹಾಸ್ಫುರಣಶಕ್ತಿಯುಳ್ಳವನೂ, ಸತ್ಪುರುಷರ ಸಹವಾಸಕ್ಕೆ ಯೋಗ್ಯನೂ,

ಟಿಪ್ಪಣಿ. (೧) ಇಲ್ಲಿ "ಜ್ಞಾನೀತ್ವಾತ್ಮೈವಮೇಮತಂ" ಎಂಬ ಭಗವದುಕ್ತಿಯಂತೆ, ಸ್ವ-ತಾನಾಗಿರುವ, ಜನಸ್ಯ-ಜನರಿಗೆ ಎಂದರೆ ಆತ್ಮಜ್ಞಾನಿಗಳಿಗೆ, ರಕ್ಷಿತಾ-ರಕ್ಷಕನು ಎಂದರ್ಥವಾಗುವದು "ಪರಿತ್ರಾಣಾಯ ಸಾಧೂನಾಂ ವಿನಾಶಾಯಚದುಷ್ಕೃತಾಂ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ" ಎಂಬ ಗೀತಾವಾಕ್ಯದಂತೆ ತನ್ನ ಅವತಾರಕ್ಕೆತಕ್ಕಂತೆ ದುಷ್ಟಶಿಕ್ಷಣ, ಶಿಷ್ಟಪರಿಪಾಲನ ಧರ್ಮಗಳು ಹೇಳಲ್ಪಟ್ಟಿತು. (೨) ಸಾಂಖ್ಯ, ಯೋಗ, ತರ್ಕ, ವೈಶೇಷಿಕ, ಪೂರ್ವೋತ್ತರ ಮೀಮಾಂಸಾ, ವ್ಯಾಕರಣಾನಿ, ಎಂಬ ಶಾಸ್ತ್ರಗಳು.

ವಾನ್|| ಸರ್ವಲೋಕಪ್ರಿಯಸ್ಸಾಧುರದೀನಾತ್ಮಾವಿಚಕ್ಷಣಃ ||೧೫|| ಸರ್ವದಾಽಭಿಗತಸ್ಸದ್ಭಿಸ್ಸಮುದ್ರ ಇವಸಿನ್ಧುಭಿಃ || ಆರ್ಯಸ್ಸರ್ವಸಮಶ್ಚೈವಸದೈಕಪ್ರಿಯದರ್ಶನಃ||೧೬|| ಸಚ ಸರ್ವಗುಣೋಪೇತಃಕೌಸಲ್ಯಾನಂದವರ್ಧನಃ||ಸಮುದ್ರ ಇವಗಾಂಭೀರ್ಯೆಧೈರ್ಯೇಣಹಿಮವಾನಿವ ||೧೭|| ವಿಷ್ಣುನಾಸದೃಶೋವೀರ್ಯೇಸೋಮವತ್ಪ್ರಿಯದರ್ಶನಃ|| ಕಾಲಾಗ್ನಿಸದೃ

ಮಾಡುವ ಗುಣವುಳ್ಳವನೂ, ಅದೀನಾತ್ಮ-ಉದಾರ ಪ್ರಕೃತಿಯುಳ್ಳವನೂ, ಅಥವ ಗಂಭೀರ ಪ್ರಕೃತಿಯುಳ್ಳವನಾಗಿಯೂ, ವಿಚಕ್ಷಣಃ [ಮ] ಆಯಾಕಾಲದಲ್ಲಿ ಮಾಡಬೇಕಾದ ಕಾರ್ಯಗಳಲ್ಲಿ ಕುಶಲನೂ, [ತಿ] ವೈದಿಕ, ಲೌಕಿಕ ಕಾರ್ಯಗಳಲ್ಲಿ ಕುಶಲತೆವುಳ್ಳವನೂ ||೧೫|| ಸಿಂಧುಭಿಃ-ನದಿಗಳಿಂದ, ಸಮುದ್ರ ಇವ-ಸಮುದ್ರನಂತೆ, ಸದ್ಭಿಃ-ಸತ್ಪುರುಷರಿಂದ, [ತ] ವಸಿಷ್ಠಾದಿಗಳಿಂದ, [ತಿ] ಪುರೋಹಿತ,ಬ್ರಾಹ್ಮಣ, ಮಂತ್ರಿಯೇ,ಮೊದಲಾದವರಿಂದ, ಅಭಿಗತಃ- ಪರಿವೃತನಾಗಿಯೂ, ಅಥವ ಸೇವಿಸಲ್ಪಟ್ಟವನಾಗಿಯೂ, ಆರ್ಯಃ-(ಗೋ) ಅನುಸರಿಸಲು ಯೋಗ್ಯನಾಗಿಯೂ, (ಮ) ಪೂಜ್ಯನಾಗಿಯೂ, ಸರ್ವಸಮಶ್ಚೈವ-ಎಲ್ಲರಲ್ಲಿಯೂ ಒಂದೇ ರೀತಿಯಾಗಿರುವವನೂ, ಎಲ್ಲ ಸಮಯದಲ್ಲಿಯೂ ಒಂದೇ ರೀತಿಯಾಗಿರುವವನೂ, ಸದಾ-ಯಾವಾಗಲೂ, ಏಕಪ್ರಿಯದರ್ಶನಃ-ಒಂದೇ ರೀತಿಯಾದ ಇಷ್ಟವಾದ ನೋಟವುಳ್ಳವನಾಗಿಯೂ ಇರುವ, ||೧೬|| ಸರ್ವಗುಣೋಪೇತಃ-ಸಮಸ್ತ ಗುಣಗಳಿಂದ ಕೂಡಿದವನೂ, ಕೌಸಲ್ಯಾನಂದವರ್ಧನಃ, ಕೌಸಲ್ಯಾ-ಕೌಸಲ್ಯಾದೇವಿಗೆ, ಆನಂದ-ಸಂತೋಷವನ್ನು, ವರ್ಧನಃ-ವೃದ್ಧಿಗೊಳಿಸುತ್ತಿರುವ,ಸಚ-ಆತನೇ, ಗಾಂಭಿರ್ಯೇ ಅಗಾಧತ್ವದಲ್ಲಿ, ಸಮುದ್ರ ಇವ-ಸಮುದ್ರನಂತೆಯೂ,ಧೈರ್ಯೇಣ-ಧೀರತ್ವದಲ್ಲಿ, ಹಿಮವಾನಿವ - ಹಿಮವತ್ಪರ್ವತದಂತೆಯೂ, (ವರ್ತತೇ-ಇರುವನು). ||೧೭|| ವೀರ್ಯೇ-ಪರಾಕ್ರಮದಲ್ಲಿ, ವಿಷ್ಣುನಾ-ವಿಷ್ಣುವಿನೊಡನೆ, ಸಮಃ-ಸಮಾನನಾದವನು, ಸೋಮವತ್ - ಚಂದ್ರನಂತೆ, ಪ್ರಿಯದರ್ಶನಃ - ಪ್ರಿಯಕರವಾದ ನೋಟವುಳ್ಳವನು, ಕ್ರೋಧೇ - ಕೋಪದಲ್ಲಿ, ಕಾಲಾಗ್ನಿಸದೃಶಃ - ಪ್ರಳಯಕಾಲದ ಬೆಂಕಿಗೆ ಸಮನಾದವನು, ಕ್ಷಮಯಾ - ಸೈರಣೆಯಿಂದ, ಪೃಥಿವೀಸಮಃ-ಭೂಮಿಗೆ ಸದೃಶನಾದವನು, ತ್ಯಾಗೇ-ದಾನ ವಿಷಯದಲ್ಲಿ, ಧನದೇನಸಮಃ-ಕುಬೇರನಿಗೆ ಸಮಾನನಾಗಿಯೂ, ಸತ್ಯೇ-ಸತ್ಯವಚನದಲ್ಲಿ, ಅಪರಃ ಅಸಮಾನವಾದ, ಧರ್ಮ ಇವಸ್ಥಿತಃ - ಧರ್ಮದೇವತೆ

ಎಲ್ಲರಿಗೂ ಪ್ರೀತಿಪಾತ್ರನೂ, ವೈದಿಕ, ಲೌಕಿಕ ಕಾರ್ಯ ಕರಣ ಕುಶಲತೆಯುಳ್ಳವನೂ, ಗಂಭೀರಾಕೃತಿಯುಳ್ಳವನೂ, ||೧೫|| ಆದವನಲ್ಲದೆ ನದಿಗಳಿಂದ ಸಮುದ್ರನು(೧) ಸದಾ ಕಾಲದಲ್ಲಿಯೂ ಸೇವಿಸಲ್ಪಡುವಂತೆ ವಸಿಷ್ಠಾದಿ ಮಹಾಮುನಿಗಳಿಂದ ಸೇವಿಸಲ್ಪಡುತ್ತಿರವವನೂ, ಶತೃ, ಮಿತ್ರ, ಉದಾಸೀನರೇ ಮೊದಲಾದ ಎಲ್ಲರಲ್ಲಿಯೂ, ಏಕರೀತಿಯಾಗಿರುವವನೂ, ಎಷ್ಟು ನೋಡಿದರೂ ಇನ್ನು ನೋಡಬೇಕೆಂಬ ಆಶೆಯನ್ನುಂಟುಮಾಡುವವನೂ, ||೧೬|| ಕೌಸಲ್ಯಾದೇವಿಯ ಮಗನಾಗಿ ಹುಟ್ಟಿ, ಆಕೆಯ ಸಂತೋಷವನ್ನು ವೃದ್ಧಿಗೊಳಿಸುತ್ತಿರುವವನೂ, ಹಿಂದೆ ಹೇಳಿದ ಮತ್ತು ಹೇಳಲ್ಪಡದಿರುವ ಸಕಲ ಗುಣಸಂಪನ್ನನೂ ಆಗಿರುವ, ಪರಮಾತ್ಮಸ್ವರೂಪನಾದ ಆ ರಾಮನೇ ಗಾಂಭೀರ್ಯದಲ್ಲಿ ಸಮುದ್ರನಂತೆಯೂ, ಧೈರ್ಯದಲ್ಲಿ ಹಿಮವಂತನ ಹಾಗೂ, ||೧೭|| ವೀರ್ಯದಲ್ಲಿ ಸಾಕ್ಷಾದ್ವಿಷ್ಣುವಿಗೆ ಸಮಾನನಾಗಿಯೂ, ಚಂದ್ರನಂತೆ ಎಲ್ಲರಿಗೂ ಸಂತೋಷವನ್ನುಂಟುಮಾಡುವವನಾಗಿಯೂ, ಪ್ರಳಯಾಗ್ನಿಯಂತೆ ತೀಕ್ಷ್ಣವಾದ ಕೋಪವುಳ್ಳವನೂ, ಕ್ಷಮೆಯಲ್ಲಿ ಭೂಸದೃಶನಾಗಿಯೂ,

(೧) ನದಿಯು ಮಹಾನದಿ ಎಂಬ ಹೆಸರನ್ನು ಪಡೆಯಲು ಸಮುದ್ರನನ್ನು ಸೇವಿಸುವದು. ಅಂತೆಯೇ ಸತ್ಪುರುಷರು ಸಜ್ಜನರೆನಿಸಲು ರಾಮನನ್ನು ಸೇವಿಸುತಿದ್ದರೆಂದು ಭಾವವು.

ಶಃಕ್ರೋಧೇಕ್ಷಮಯಾಪೃಥಿವೀಸಮಃ|| ಧನದೇನಸಮಸ್ತ್ಯಾಗೇಸತ್ಯೇಧರ್ಮಇವಾಪರಃ|| ||೧೮|| ತಮೇವಂ ಗುಣಸಂಪನ್ನಂ ರಾಮಂ ಸತ್ಯಪರಾಕ್ರಮಂ|| ಜ್ಯೇಷ್ಠಂ ಶ್ರೇಷ್ಠಗುಣೈರ್ಯುಕ್ತಂ ಪ್ರಿಯಂ ದಶರಥಸ್ಸುತಂ || ಪ್ರಕೃತೀನಾಂಹಿತೈರ್ಯುಕ್ತಂ ಪ್ರಕೃತಿಪ್ರಿಯಕಾಮ್ಯಯಾ || ಯೌವರಾಜ್ಯೇನಸಂಯೋಕ್ತುಮೈಚ್ಛತ್ಪ್ರೀತ್ಯಾಮಹೀಪತಿಃ || ೨೦|| || ತಸ್ಯಾಭಿಷೇಕಸಂಭಾರಾನ್ ದೃಷ್ಟ್ವಾಭಾರ್ಯಾಥಕೈಕಯೀ|| ಪೂರ್ವಂದತ್ತವರಾದೇವೀವರಮೇನಮಯಾಚತ || ವಿವಾಸನಂಚ ರಾಮಸ್ಯ ಭರತಸ್ಯಾಭಿಷೇಚನಂ ||೨೨|| ಸ ಸತ್ಯ ವಚನಾ

ಯಂತೆಯೇ ಇರುವವನು ||೧೮|| ಏವಂ ಗುಣಸಂಪನ್ನಂ - ಈರೀತಿಯಾದ ಗುಣಗಳಿಂದ ಕೂಡಿದ, ಶ್ರೇಷ್ಠಗುಣೈಃ-ರಾಜ್ಯಾಭಿಷೇಕಕ್ಕನುಗುಣವಾದ ಗುಣಗಳಿಂದ, ಯುಕ್ತಂ-ಕೂಡಿದ, ಸತ್ಯಪರಾಕ್ರಮಂ-ಅಮೋಘವಾದ ಪರಾಕ್ರಮವುಳ್ಳ, ಪ್ರಕೃತೀನಾಂ ಪ್ರಾಣಿಗಳ, ಹಿತೈಃ-ಇಹ, ಪರಲೋಕಗಳ ಕೀರ್ತಿಕರವಾದ ಕಾರ್ಯಗಳಿಂದ, ಯುಕ್ತಂ - ಕೂಡಿದ, ಪ್ರಿಯಂ - ಪ್ರೀತಿಪಾತ್ರನಾದ, ಜ್ಯೇಷ್ಠಂ ಸುತಂ-ಹಿರಿಯಮಗನಾದ, ತಂ ರಾಮಂ-ಆ ಶ್ರೀರಾಮನನ್ನು, ಪ್ರಕೃತಿ ಪ್ರಿಯಕಾಮ್ಯಯಾ-ಜನರಿಗೆ ಹಿತವನ್ನುಂಟುಮಾಡುವ ಉದ್ದಿಶ್ಯದಿಂದ, (ತಿ) ಪ್ರಕೃತಿ ಸಂಬಂಧದಿಂದ ತನಗೆ ಪ್ರಿಯವನ್ನುಂಟುಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ, ಯಾವರಾಜ್ಯೇನ-ಸರ್ವಾಧಿಕಾರಿ ಪದವಿಯೊಡನೆ, ಸಂಯೋಕ್ತುಂ-ಕೂಡಿಸಲು, ಮಹೀಪತಿಃ ರಾಜನಾದ, ದಶರಥಃ-ದಶರಥನು, ಪ್ರೀತ್ಯಾ - ಪ್ರೀತಿಯಿಂದ, ಐಚ್ಛತ್-ಇಷ್ಟವುಳ್ಳವನಾದನು ||೧೯-೨೦|| ಅಥ-ಅನಂತರದಲ್ಲಿ, ತಸ್ಯ-ಆ ಶ್ರೀರಾಮನ, ಅಭಿಷೇಕ ಸಂಭಾರಾನ್-ಯೌವರಾಜ್ಯಾಭಿಷೇಕ ಸಾಮಗ್ರಿಗಳನ್ನು, ದೃಷ್ಟ್ವಾ-ಮಂಥರಾವಚನದಿಂದ ತಿಳಿದು,ಪೂರ್ವಂ-ಇಂದ್ರನ ಸಹಾಯಾರ್ಥವಾಗಿ ದಶರಥನು ಯುದ್ಧಕ್ಕೆ ಹೋಗಿದ್ದ ಸಮಯದಲ್ಲಿ, ದತ್ತವರಾ-ಕೊಡಲ್ಪಟ್ಟವರಗಳುಳ್ಳ, ಭಾರ್ಯಾ-ಹೆಂಡತಿಯಾದ, ಕೈಕಯೀದೇವೀ ಕೈಕೇಯೀದೇವಿಯು, ರಾಮಸ್ಯ-ಶ್ರೀರಾಮನಿಗೆ, ವಿವಾಸನಂ-ಅರಣ್ಯ ವಾಸವವೂ, ಭರತಸ್ಯ-ತನ್ನ ಮಗನಾದ ಮತ್ತು ಶ್ರೀರಾಮನ ತಮ್ಮನಾದ ಭರತನಿಗೆ, ಅಭಿಷೇಚನಂಚ - ಪಟ್ಟಾಭಿಷೇಕವೂ ಎಂಬ, ವರಂ-ವರದ್ವಯವನ್ನು,ಏನಂ - ಈ ದಶರಥನನ್ನು, ಅಯಾಚತ - ಪ್ರಾರ್ಥಿಸಿದಳು || ೨೧—೨೨ || ರಾಜಾ - ಎಲ್ಲರನ್ನೂ ಸಂತಸಗೊಳಿಸುವ, ಸದಶರಥಃ-ಆ ದಶರಥನು, ಸತ್ಯವಚನಾತ್-ನಿಜವಾದ ಮಾತುಳ್ಳವನಾದುದರಿಂದ, ಧರ್ಮಪಾಶೇನ-ಧರ್ಮಮಯವಾದ ಪಾಶದಿಂದ, ಸಂಯತಃ-

ದಾನದಲ್ಲಿ ಕುಬೇರನಂತೆಯೂ, ಸತ್ಯವಚನದಲ್ಲಿ ಅಸಮಾನವಾದ ಧರ್ಮದೇವತೆಯಾಗಿರುವಂತಹ ||೧೮|| ಅಭಿಷೇಕಾರ್ಹವಾದ ಗುಣಗಳಿಂದ ಕೂಡಿದವನಾಗಿಯೂ ಇಹ, ಪರಲೋಕಗಳಲ್ಲಿ ಕೀರ್ತಿದಾಯಕಗಳಾದ ಕಾರ್ಯಗಳಿಂದ ಕೂಡಿದವನೂ, ತನ್ನ ಜ್ಯೇಷ್ಠಕುಮಾರನೂ ಆದ ಶ್ರೀರಾಮನಿಗೆ, ಇವನ ತಂದೆಯಾದ ದಶರಥನು ಜನಗಳಿಗೆ ಹಿತವನ್ನುಂಟುಮಾಡಲೋಸುಗ, ಯುವರಾಜ ಪಟ್ಟವನ್ನು ಕಟ್ಟಬೇಕೆಂದಿಚ್ಛೈಸಿದನು. || ೧೯—೨೦ || ಬಳಿಕ ದಶರಥರಾಜನು ಮಗನ ಪಟ್ಟಾಭಿಷೇಕಕ್ಕೆ ಬೇಕಾದ ಮಂಗಳದ್ರವ್ಯಗಳನ್ನು ಸಿದ್ಧಗೊಳಿಸಲು, ಮಂಥರಾವಚನದಿಂದ ಇದನ್ನರಿತ, ಅವನ ಕಿರಿಯ ಹೆಂಡತಿಯಾದ ಕೈಕೇಯೀ ದೇವಿಯು, ಹಿಂದೆ ದೇವಾಸುರ ಯುದ್ಧದಲ್ಲಿ ಇಂದ್ರನ ಸಹಾಯಾರ್ಥವಾಗಿ ಹೋಗಿದ್ದ ಕಾಲದಲ್ಲಿ ತನ್ನ ಪತಿಯಿಂದ ಎರಡು ವರಗಳನ್ನು ಪಡೆದಿದ್ದುದರಿಂದ ರಾಮನಿಗೆ ವನವಾಸವನ್ನೂ ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವನ್ನೂ ಅಪೇಕ್ಷಿಸಿದಳು.||೨೧-೨೨|| ಆ ದಶರಥ ಮಹಾರಾಯನು ಸತ್ಯವಚನನಾದ ಕಾರಣ ಧರ್ಮಪಾಶದಿಂದ

ದ್ರ್ಯಜಾ ಧರ್ಮಪಾಶೇನ ಸಂಯತಃ॥ ವಿವಾಸಯಾಮಾಸ ಸುತಂ ರಾಮಂ ದಶರಥಃಪ್ರಿಯಂ ॥೨೩॥ ಸಜಗಾಮ ವನಂ ವೀರಃ ಪ್ರತಿಜ್ಞಾಮನುಪಾಲಯನ್ ॥ ಪಿತುರ್ವಚನನಿರ್ದೇಶಾತ್ ಕೈಕೇಯ್ಯಾಃ ಪ್ರಿಯಕಾರಣಾತ್ ॥೨೪॥ ತಂ ವ್ರಜಂತಂಪ್ರಿಯೋಭ್ರಾತಾಲಕ್ಷ್ಮಣೋನುಜಗಾಮಹ। ಸ್ನೇಹಾದ್ವಿನಯಸಂಪನ್ನ ಸ್ಸುಮಿತ್ರಾನಂದವರ್ಧನಃ॥ ಭ್ರಾತರಂ ದಯಿತೋ ಭ್ರಾತುಸ್ಸೌಭ್ರಾತ್ರಮನುದರ್ಶಯನ್ ॥೨೫॥ ರಾಮಸ್ಯ ದಯಿತಾಭಾರ್ಯಾ ನಿತ್ಯಂ ಪ್ರಾಣಸಮಾಹಿತಾ॥ ಜನಕಸ್ಯ ಕುಲೇಜಾತಾದೇವಮಾಯೇವನಿರ್ಮಿತಾ ॥

---

ಕಟ್ಟಲ್ಪಟ್ಟವನಾಗಿ, ಪ್ರಿಯಃ ಪ್ರೀತಿಪಾತ್ರನಾದ, ರಾಮಂ ಶ್ರೀರಾಮಚಂದ್ರನೆಂಬ, ಸುತಂ- ಮಗನನ್ನು ಕೂಡ, ವಿವಾಸಯಾಮಾಸ-ಕಳುಹಿಸಿದನು, ||೨೩|| ವೀರಃ ಶೂರನಾದ, ಸಃ-ಆ ಶ್ರೀರಾಮನು, ಕೈಕೇಯ್ಯಾಃ-ಕೈಕೇಯಿ ದೇವಿಯ, ಪ್ರಿಯಕಾರಣಾತ್ ಪ್ರೀತಿಗೋಸುಗ, ಪಿತುಃ-ತಂದೆಯ, ವಚನನಿರ್ದೇಶಾತ್-ಆಜ್ಞಾನುಸಾರವಾಗಿ, ಪ್ರತಿಜ್ಞಾಂ ಪ್ರತಿಜ್ಞೆಯನ್ನು ಅನುಪಾಲಯನ್ ಪರಿಪಾಲಿಸುತ್ತ, ವನಂ-ಕಾಡನ್ನು ಕುರಿತು, ಜಗಾಮ-ತೆರಳಿದನು (ಮ) ಸರಾಮಃ-ಆ ರಾಮನು, ವೀರಃ-ಜಿತೇಂದ್ರಿಯನಾಗಿ, ಪ್ರತಿಜ್ಞಾಂ-ಕೈಕೇಯಿ ದೇವಿಯ ಸಮ್ಮುಖದಲ್ಲಿ ತನ್ನ ತಂದೆಯ ಆಜ್ಞೆಯನ್ನು ನಡಿಸಿಕೊಡುವೆನೆಂದು ಮಾಡಿದ ಪ್ರತಿಜ್ಞೆಯನ್ನು, ಅನುಪಾಲಯನ್-ಕಾಪಾಡುತ್ತಾ, ಅಥವ ಅನೇಕರೊಡನೆ ಸೋಲದೆ ಯುದ್ಧಮಾಡುವ ಶಕ್ತಿಯುಳ್ಳವನಾಗಿ, ಕೈಕೇಯಿ ಸಮೀಪದಲ್ಲಿ ಪಿತೃವಾಕ್ಯ ಪರಿಪಾಲನೆ ಮಾಡುವೆನೆಂದು ಮಾಡಿದ ತನ್ನ ಪ್ರತಿಜ್ಞೆಯನ್ನು ಕಾಪಾಡಲೋಸುಗ, ವನಂ-ಅರಣ್ಯವನ್ನು ಕುರಿತು, ಜಗಾಮ ಹೊರಟನು ||೨೪|| ಪ್ರಿಯಃ-ರಾಮನಲ್ಲಿ ನಿಜವಾದ ವಿಶ್ವಾಸವುಳ್ಳ, ಸುಮಿತ್ರಾನಂದವರ್ಧನಃ-ಸುಮಿತ್ರಾ ದೇವಿಗೆ ಸಂತೋಷವನ್ನು ಹೆಚ್ಚಿಸುತ್ತಿರುವ, ಭ್ರಾತುಃದಯಿತಃ-ಅಣ್ಣನಾದ ರಾಮಚಂದ್ರನಿಗೆ ಇಷ್ಟನಾದ, ವಿನಯಸಂಪನ್ನಃ-ನಮ್ರತೆಯಿಂದ ಕೂಡಿದ, ಲಕ್ಷ್ಮಣಃ-ಲಕ್ಷ್ಮಣನೆಂಬ, ಭ್ರಾತಾ-ತಮ್ಮನು, ಸೌಭ್ರಾತ್ರಂ ಸಹೋದರ ವಾತ್ಸಲ್ಯವನ್ನು, ಅನುದರ್ಶಯನ್-ತೋರುತ್ತಾ, ವ್ರಜನ್ತಂ-ಅರಣ್ಯಕ್ಕೆ ತೆರಳುತ್ತಿರುವ, ತಂಭ್ರಾತರಂ-ಆ ಅಣ್ಣನನ್ನು, ಸ್ನೇಹಾತ್ - ಸ್ನೇಹದಿಂದ, ಅನುಜಗಾಮ ಅನುಸರಿಸಿ ಹೋದನು. ||೨೫|| ರಾಮಸ್ಯ-ಶ್ರೀರಾಮನ, ದಯಿತಾ-ಇಷ್ಟಳಾದ, ಭಾರ್ಯಾ-ನಿರತಿಶಯ ಪ್ರೇಮಾಸ್ಪದಳಾದ, ನಿತ್ಯಂ ಸದಾ ಕಾಲದಲ್ಲಿಯೂ, ಪ್ರಾಣಸಮಾ-ಪ್ರಾಣಕ್ಕೆ ಸಮಳಾದ, ಹಿತಾ-ಹಿತಕರಳಾಗ, ಜನಕಸ್ಯ-ಜನಕ ರಾಯನ, ಕುಲೇ-ಮನೆಯಲ್ಲಿ (ಮ) ಯಜ್ಞಗೃಹದಲ್ಲಿ, ಜಾತಾ-ಹುಟ್ಟಿದ, ದೇವಮಾಯೇವ-ಅಮೃತೋತ್ಪತ್ತಿಯಾದ ನಂತರ ಅಸುರರನ್ನು ಮೋಹಗೊಳಿಸಲು ನಿರ್ಮಿತಳಾದ ವಿಷ್ಣುಮಾಯೆಯಂತೆ, (ಮ) ಸುಂದೋಪಸುಂದರನ್ನು ಮೋಹಗೊಳಿಸಲು ದೇವತೆಗಳಿಂದ ನಿರ್ಮಿಸಲ್ಪಟ್ಟ ತಿಲೋತ್ತಮೆಯಂತೆ. ನಿರ್ಮಿತಾ-ನಿರ್ಮಿಸಲ್ಪಟ್ಟ, ಸರ್ವಲಕ್ಷಣ

---

ಕಟ್ಟಲ್ಪಟ್ಟು, ಆ ಪ್ರಿಯಪುತ್ರನಾದ ರಾಮನನ್ನೂ ಸಹ ತೊರೆದನು. ||೨೩|| ಬಳಿಕ ವೀರನಾದ ಶ್ರೀರಾಮನು ತನ್ನ ಚಿಕ್ಕ ತಾಯಿಯಾದ ಕೈಕೇಯಿ ದೇವಿಗೆ ಪ್ರೀತಿಯನ್ನೆಸಗಲು ತಂದೆಯ ಆಜ್ಞೆಯಂತೆ ತನ್ನ ಪ್ರತಿಜ್ಞೆಯನ್ನು ಪಾಲಿಸಲೋಸುಗ ಅರಣ್ಯಕ್ಕೆ ತೆರಳಿದನು. || ೨೪ || ಆಗ ಶ್ರೀರಾಮನಲ್ಲಿ ನಿಜವಾದ ಪ್ರೇಮವುಳ್ಳವನೂ, ಇಷ್ಟನೂ, ನಮ್ರನೂ, ಆದ ಲಕ್ಷ್ಮಣನೆಂಬ ತಮ್ಮನು ಭ್ರಾತೃವಾತ್ಸಲ್ಯವನ್ನು ತೋರುತ್ತಾ, ಮಹಾ ಭಕ್ತಿಯಿಂದ ಅವನನ್ನು ಹಿಂಬಾಲಿಸಿದನು. ||೨೫|| ಆ ಸಮಯದಲ್ಲಿ ಶ್ರೀರಾಮಚಂದ್ರನಿಗೆ ನಿರತಿಶಯ ಪ್ರೇಮಾಸ್ಪದಳೂ, ಸದಾಕಾಲದಲ್ಲಿಯೂ ಹಿತವನ್ನುಂಟುಮಾಡುವವಳೂ, ಪ್ರಾಣಸಖಿಯೂ, ಜನಕರಾಯನ ಯಜ್ಞಗೃಹದಲ್ಲಿ ಹುಟ್ಟಿದವಳೂ, ವಿಷ್ಣುಮಾಯಾ ಸ್ವರೂಪಿಣಿಯೂ, ಶುಭಲಕ್ಷಣ

ಸರ್ವಲಕ್ಷಣಸಂಪನ್ನಾ ನಾರೀಣಾಮುತ್ತಮಾವಧೂಃ|| ಸೀತಾಪ್ಯನುಗತಾ ರಾಮಂ ಶಶಿನಂ ರೋಹಿಣೀ ಯಥಾ ||೨೭|| ಪೌರೈರನುಗತೋ ದೂರಂಪಿತ್ರಾದಶರಥೇನಚ || ೨೮ || ಶೃಂಗಿಬೇರಪುರೇ ಸೂತಂ ಗಂಗಾಕೂಲೇವ್ಯಸರ್ಜಯತ್||ಗುಹಮಾಸಾದ್ಯಧರ್ಮಾತ್ಮಾ

ಸಂಪನ್ನಾ-ಸಾಮುದ್ರಿಕಾ ಶಾಸ್ತ್ರಗಳಲ್ಲಿ ಹೇಳಿರುವ ಎಲ್ಲಾ ಗುಣಗಳಿಂದೊಡಗೂಡಿರುವ, ನಾರೀಣಾಂ-ಸ್ತ್ರೀಯರಲ್ಲಿ, ಉತ್ತಮಾ-ಶ್ರೇಷ್ಠಳಾದ, ವಧೂಃ ಸ್ತ್ರೀಯಾದ, ಸೀತಾಪಿ ಸೀತಾದೇವಿಯೂ ಸಹ, ರಾಮಂ-ರಾಮನನ್ನು, ಶಶಿನಂ-ಚಂದ್ರನನ್ನು,ರೋಹಿಣೀಯಥಾ ರೋಹಿಣೀ ದೇವಿಯು ಹೇಗೋ ಹಾಗೆ, ಅನುಗತ - ಅನುಸರಿಸಿದಳು (೧) ||೨೬-೨೭|| ಪೌರೈಃ - ಪಟ್ಟಣಿಗರಿಂದಲೂ, ಪಿತ್ರಾ-ತಂದೆಯಾದ, ದಶರಥೇನಚ-ದಶರಥನಿಂದಲೂ, ಅದೂರಂ-ಸ್ವಲ್ಪ ದೂರ, ಅನುಗತಃ-ಹಿಂಬಾಲಿಸಲ್ಪಟ್ಟನು, (ಮ) ದೂರಂ - ದೂರವು, ಅನುಗತಃ-ಅನುಸರಿಸಲ್ಪಟ್ಟನು. || ೨೮ || (ಮ) ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಶ್ರೀರಾಮನು, ಗಂಗಾಕೂಲೇ-ಗಂಗಾನದೀ ತೀರದಲ್ಲಿನ ಶೃಂಗಿಬೇರಪುರೆ-ಶೃಂಗಿಬೇರಪುರದಲ್ಲಿ, ಪ್ರಿಯಂ-ಪ್ರೀತಿಪಾತ್ರನಾದ, ನಿಷಾಧಾಧಿಪತಿಂ ವ್ಯಾಧರಿಗೆ ಒಡೆಯನಾದ, ಗುಹಂ-ಗುಹನನ್ನು, ಆಸಾದ್ಯ ಹೊಂದಿ, ಗುಹೇನ ಗುಹನಿಂದಲೂ,ಲಕ್ಷ್ಮಣೇನ-ಲಕ್ಷ್ಮಣನಿಂದಲೂ, ಸೀತಯಾಚ - ಸೀತಾದೇವಿಯೊಡನೆಯೂ ಕೂಡಿದವನಾಗಿ, ಸೂತಂ - ಸಾರಥಿಯಾದ, ಸುಮಂತ್ರನನ್ನು, ಗಂಗಾಕೂಲೇ-ಗಂಗಾನದಿಯ ತೀರದಲ್ಲಿ, ವ್ಯಸರ್ಜಯತ್ ತೊರೆದವನಾದನು. (ಗೋ) ಧರ್ಮಾತ್ಮಾ-ಧರ್ಮ, ಆಶ್ರಿತ ವಾತ್ಸಲ್ಯ ನಾಶೀಲ್ಯಗಳುಳ್ಳ, ಆತ್ಮಾ-ಸ್ವಭಾವಿಯಾದ, ರಾಮಃ-ಶ್ರೀರಾಮನು, ಶೃಂಗಿಬೇರಪುರೆ, ಶೃಂಗಿ-ಕೃಷ್ಣಸಾರಾದಿಗಳ, (೨) ಬೇರ-ಕೃತ್ರಿಮ ಶರೀರಗಳುಳ್ಳ, ಪುರೆ ಪಟ್ಟಣವುಳ್ಳ, ಗಂಗಾಕೂಲೇ-ಗಂಗಾನದಿಯ ತೀರದಲ್ಲಿ, ನಿಷಾಧಾಧಿಪತಿಂ ಬೇಡರಿಗೆ ಒಡೆಯನಾದ, ಪ್ರಿಯಂ-ಸಂತಸಗೊಳಿಸುವ ಅಥವ ತನ್ನಲ್ಲಿ ಪ್ರೀತಿಯುಳ್ಳ, (೩)ಗುಹಂ-ಪರರಸ್ವತ್ತನ್ನು ವಂಚಿಸಿ ಬಚ್ಚಿಡುವನಾದರೂ ಅವನನ್ನು, ಆಸಾದ್ಯ ಹೊಂದಿ, ಸೂತಂ-ಸುಮಂತ್ರನನ್ನು, ವ್ಯಸರ್ಜ

ಸಂಪನ್ನಳೂ, ಉತ್ತಮಾಂಗನೆಯೂ, ದಶರಥರಾಜನಸೊಸೆಯೂ, ಆದ ಸೀತಾದೇವಿಯೂ ಸಹ ರೋಹಿಣಿಯು ಚಂದ್ರನನ್ನನುಸರಿಸುವಂತೆ, ಶ್ರೀರಾಮನನ್ನನುಸರಿಸಿ ಹೊರಟಳು ||೨೬-೨೭|| ಇಂತು ಆ ಸೀತಾರಾಮಲಕ್ಷ್ಮಣರು ವನಗಮನಕ್ಕಾಗಿ ಹೊರಡಲು, ಆ ಪಟ್ಟಣಿಗರೂ, ದಶರಥರಾಯನೂ, ಶೋಕದಿಂದ ಅವರನ್ನು ಅನುಸರಿಸಿ ಬಂದರು. || ೨೮ || ಬಳಿಕಲಾ ಧರ್ಮಾತ್ಮನಾದ ರಾಮಚಂದ್ರನು, ಶೃಂಗಿಬೇರಪುರವನ್ನು ಸೇರಿ, ಅಲ್ಲಿ ತನ್ನ ಪ್ರೀತಿಪಾತ್ರನಾದ, ಗುಹನೆಂಬ ಬೇಡರೊಡೆಯನನ್ನು ಹೊಂದಿ, ಅವನೊಡನೆಯೂ, ಸೀತಾಲಕ್ಷ್ಮಣ

ಟಿ|| ೧ ರಾಮಸ್ಯ-ಅಭಿರಾಮನಾದ ಶ್ರೀರಾಮನಿಗೂ, ದಯಿತಾ-ಮನೋಹರಳಾದ ನಿತ್ಯಂಭಾರ್ಯಾ-ಸದಾಕಾಲದಲ್ಲಿಯೂ ವಕ್ಷಸ್ಥಳದಲ್ಲಿ ಧರಿಸಲ್ಪಟ್ಟವಳಾದ ಕಾರಣ, ಪ್ರಾಣಸಮಾ-ಪ್ರಾಣಕ್ಕೆ ಸಮಾನಳಾದ, ಹಿತ-ಚೇತನ ಹಿತ ಪರಳಾದ ಅಥವ ರಾಮಹಿತಪರಳಾದ, ಜನಕಸ್ಯಕುಲೇಜಾತಾ-ಆಚಾರ ಪ್ರಧಾನಳಾದ, ದೇವಮಾಯೇವ-ವಿಷ್ಣುಮಾಯೆಯಾಗಿರುವ ಅಥವದೇಹಧಾರಿಯಾದ,ದೇವಮಾಯೇವಸ್ಥಿತಾ-ವಿಷ್ಣುಶಕ್ತಿಯಂತಿರುವ ಅಥವ ನಿರ್ಮಿತಾ-ಅವತಾರಮಾಡಿದ,ದೇವಮಾಯೇವ-ಸಾಕ್ಷಾತ್ ಲಕ್ಷ್ಮೀದೇವಿಯೇ ತಾನಾಗಿರುವ,ಸರ್ವ ಸಂಪನ್ನಾ-ಉತ್ತಮ ಲಕ್ಷಣ ಸಂಪನ್ನಳಾದ ನಾರೀಣಾಂ ಉತ್ತಮಾ-ಸ್ತ್ರೀಶ್ರೇಷ್ಠಳಾದ, ಅಂದರೆ ಪುರುಷೋತ್ತಮಾವತಾರ ಭೂತನಾದ ಶ್ರೀರಾಮನಿಗೆ ಅನುರೂಪ ಸ್ತ್ರೀಯಾದ, ವಧೂ-ದಶರಥನ ಸೊಸೆಯಾದ, ಅಥವ ವಿವಾಹವಾಗಿ ಬಹಳ ದಿನಗಳಾಗದಿರುವ, ಸೀತಾಪಿ-ಅಯೋನಿಜಳಾದ ಸೀತೆಯೂ ಕೂಡ, ರಾಮಂ-ಶ್ರೀರಾಮನನ್ನು, ಅನುಗತ-ಅನುಸರಿಸಿ ಹೋದಳು. ಇದು ಗೋವಿಂದರಾಜೀಯ ವ್ಯಾಖ್ಯಾನದಲ್ಲಿ ಹೇಳಿರುವ ವಿಶೇಷಾರ್ಥವು (೨)ಸಜಾತೀಯವಾದ ಮೃಗಗಳನ್ನು ಹಿಡಿಯಲು ಮಾಡಿರುವ ಆಮೃಗಗಳ ಪ್ರತಿಬಿಂಬಗಳು, (೩) ಗುಹತಿ ಗೋಪಯತಿ, ವಂಚಯತಿಪರಸ್ವಮಿತಿಗುಹಃ

ನಿಷಾದಾಧಿಪತಿಂ ಪ್ರಿಯಂ॥ ಗುಹೇನ ಸಹಿತೋ ರಾಮೋ ಲಕ್ಷ್ಮಣೇನ ಚ ಸೀತಯಾ ||೨೯||
ತೇ ವನೇನ ವನಂ ಗತ್ವಾ ನದೀಸ್ತೀರ್ತ್ವಾ ಬಹೂದಕಾಃ ॥ ಚಿತ್ರಕೂಟಮನುಪ್ರಾಪ್ಯ ಭರದ್ವಾ
ಜಸ್ಯ ಶಾಸನಾತ್ ||೩೦|| ರಮ್ಯಮಾವಸಥಂ ಕೃತ್ವಾ ರಮಮಾಣಾ ವನೇ ತ್ರಯಃ। ದೇವ
ಗಂಧರ್ವಸಙ್ಕಾಶಾಸ್ತತ್ರ ತೇ ನ್ಯವಸನ್ ಸುಖಂ ||೩೧||॥ ಚಿತ್ರಕೂಟಂ ಗತೇ ರಾಮೇ ಪುತ್ರ

ಯತ್(೧)-ಬಿಟ್ಟುಬಿಟ್ಟನು. (ತ) ಸರಾಮಃ-ಆ ಶ್ರೀರಾಮನು, ಲಕ್ಷ್ಮಣೇನ ಸೀತಾಯಾಚ-ಲಕ್ಷ್ಮಣ ಸೀತಾದೇವಿಯರೊಡನೆ, ಗುಹೇನ-ಗುಹನಿಂದ, ಹಿತಃ ದಾಟಿಸಲ್ಪಟ್ಟನು ||೨೯|| (ಗೋ) ತೇತ್ರಯಃ-ಆ ಸೀತಾರಾಮಲಕ್ಷ್ಮಣರು, ವನೇನ-ವನದಿಂದ, ವನಂ-ಮತ್ತೊಂದು ವನವನ್ನು, ಗತ್ವಾ-ಹೊಂದಿ, (ಅಥವ, ಅವನೇನ ಪರಸ್ಪರ ಸಂರಕ್ಷಣೆಯಿಂದ, ವನಂ-ಕಾಡನ್ನು, ಗತ್ವಾ-ಹೊಂದಿ, ಅಥವ ರಾವಣಾದಿಗಳನ್ನು ಕೊಂದು ಲೋಕವನ್ನು ಕಾಪಾಡಲೋಸುಗ, ಅಥವ ತೇ ವನೇನ-ವಿಲಾಸದಿಂದ, ಅಂದರೆ, ಅನಾಯಾಸವಾಗಿ, ಅಥವ ಬೇಟೆಯ ನೆವದಿಂದ, ಅಥವ, ಕಾಲುನಡಿಗೆಯಿಂದ, ಅಥವ, ಅವನೇನ-ಕಾಡಿಲ್ಲದ ಪ್ರದೇಶದಿಂದ, ಇಲ್ಲವೇ, ವನೇನ-ಜಲದಿಂದೊಡಗೂಡಿದ, ವನಂ-ಕಾಡನ್ನು, ಗತ್ವಾ-ಹೊಂದಿ) ಬಹೂದಕಾಃ-ಅಧಿಕವಾದ ನೀರುಳ್ಳ, ನದೀಃ-ಗಂಗೆಯೇ ಮೊದಲಾದ ನದಿಗಳನ್ನು, ಅಥವ ಯಮುನಾದಿ ನದಿಗಳನ್ನು, ತೀರ್ತ್ವಾ ದಾಟಿ, ಭರದ್ವಾಜಸ್ಯ ಭರದ್ವಾಜ ಮುನಿಯ, ಶಾಸನಾತ್-ಆಜ್ಞೆಯಿಂದ, ಚಿತ್ರಕೂಟಂ-ಮನೋಹರವಾದ ಶಿಖರಗಳುಳ್ಳ ಚಿತ್ರಕೂಟ ಪರ್ವತವನ್ನು, ಅನುಪ್ರಾಪ್ಯ- ಹೊಂದಿ, ರಮ್ಯಂ-ಮನೋಹರವಾದ, ಆವಸಥಂ-ಪರ್ಣಶಾಲೆಯನ್ನು, ಕೃತ್ವಾ ಮಾಡಿ, ತತ್ರವನೇ-ಆ ಪರ್ವತದ ತಪ್ಪಲು ಪ್ರದೇಶದಲ್ಲಿ, ದೇವಗಂಧರ್ವಸಂಕಾಶಾಃ ದೇವ ಗಂಧರ್ವರಿಗೆ ಸಮನಾಗಿ, ಅಥವ, ದೇವ-ಲಕ್ಷ್ಮೀನಾರಾಯಣರ, ಗಂಧರ್ವ-ಗಾನಕ್ಕೆ, ಸಂಕಾಶಾಃ ಉತ್ತರ ಪದಭೂತರಾಗಿ, ತೇ-ಆ ಮೂರು ಮಂದಿ, ತಪವಸಂತಃ-ಅಯೋಧ್ಯೆಯಲ್ಲಿರುವಂತೆಯೇ, ಅಥವ ವನವಾಸಿಗಳಾಗಿಯೇ, ಸುಖಂ-ಸುಖವಾಗಿ, (೨) ನ್ಯವಸನ್ ಇದ್ದರು. ||೩೦-೩೧| (ಗೊ) ರಾಮೇ-ಶ್ರೀರಾಮನು, ಚಿತ್ರಕೂಟಂ-ಚಿತ್ರಕೂಟ ಪರ್ವತವನ್ನು, ತಥಾ-ಹಿಂದೆ ಹೇಳಿದಂತೆ, ಗತೇಸತಿ-ಹೊಗಲು, ದಶರಥಃ - ದಶರಥ ಮಹಾರಾಜನು, ಪುತ್ರಶೋಕಾತುರಃ-ಮಗನಾದ ಶ್ರೀರಾಮನ ಅಗಲಿಕೆಯಿಂದುಂಟಾದ ದುಃಖದಿಂದ, ಆತುರಃ-ಪೀಡಿತ

ರೊಂದಿಗೂ, ನೇರಿ, ತನ್ನನ್ನನುಸರಿಸಿ ಬಂದಿದ್ದ ನಾರಥಿಯಾದ ಸುಮಂತ್ರನನ್ನು ತೊರೆದನು.||೨೯|| ಅನಂತರ ಆ ಸೀತಾರಾಮ ಲಕ್ಷ್ಮಣರು ಕಾಲ್ನಡಿಗೆಯಿಂದಲೇ, ಯಮುನೆಯೇ ಮೊದಲಾದ ನದಿಗಳನ್ನು ದಾಂಟಿ, ಭರದ್ವಾಜ ಮುನಿಯನ್ನು ಕಂಡು, ಆತನ ಆಜ್ಞೆಯಂತೆ ಚಿತ್ರಕೂಟ ಪರ್ವತಕ್ಕೆ ಹೋಗಿ, ಆ ಪರ್ವತದ ತಪ್ಪಲಿನಲ್ಲಿ ಮನೋಹರವಾದೊಂದು ಪರ್ಣಶಾಲೆಯನ್ನು ಮಾಡಿಕೊಂಡು, ಆ ಉಪವನಗಳಲ್ಲಿ ವಿಹರಿಸುತ್ತಿರುವ ಗಂಧರ್ವರಿಗೆ ಸಮಾನರಾಗಿ ಸುಖದಿಂದಿದ್ದರು ||೩೦—೩೧|| ಅಂತು ಶ್ರೀರಾಮನು ಚಿತ್ರಕೂಟವನ್ನು ಸೇರಲು, ಇತ್ತ ದಶರಥನು, ಮಗನ ಅಗಲಿಕೆಯಿಂದ ಬಹಳವಾಗಿ ಖತಿಗೊಂಡು, ಆ

ಟಿ॥ (೧) ಇಲ್ಲಿ ವ್ಯಸರ್ಜಯತ್ ಎಂದು ಹೇಳಿದುದರಿಂದ ಜಾತಿ, ವೃತ್ತಿ, ಗುಣಾದಿಗಳಿಂದ ಆಗುಹನು ಹೀನನಾದರೂ ತನಗೆ ಪ್ರೀತಿ ಪಾತ್ರನಾದುದರಿಂದ ಶ್ರೀರಾಮಚಂದ್ರನು, ಅವನನ್ನು ಹೊಂದಿ, ಪಾರಂಪರ್ಯದಿಂದಲೂ ತನ್ನನ್ನು ಅನುಸರಿಸಿ ಬಂದಿದ್ದ ಸುಮಂತ್ರನನ್ನು ಬಿಟ್ಟನೆಂದಹಾಗಾಯಿತು. ಇದರಿಂದ, ಆಕಳು ಹುಟ್ಟಿದ ಕರುವಿನ ವಾತ್ಸಲ್ಯದಿಂದ ಮೊದಲಿದ್ದ ಕರುವನ್ನು ತೊರೆಯುವ ಹಾಗೆ ಗುಹನಲ್ಲಿನ ವಾತ್ಸಲ್ಯದಿಂದ ಸುಮಂತ್ರನನ್ನು ಬಿಟ್ಟನೆಂಬ ಭಾವವು ತೋರುವುದು. ಅಲ್ಲದೆ ಶ್ರೀರಾಮನು ಗುಹ ಸಹಿತನಾಗಿ ಲಕ್ಷ್ಮಣ ಸೀತೆಯರಿಂದಕೂಡಿದ್ದನೆಂದು ಹೇಳಿರುವುದರಿಂದ ಅವರೀರ್ವರಲ್ಲಿಯೂ ಸಮನಾದ ಪ್ರೀತಿಯಿತ್ತೆಂದು ತೋರುವುದು. (೨) ಇಲ್ಲಿ ಸೀತಾರಾಮರು, ಜಲಕ್ರೀಡೆ, ಪುಷ್ಪಾವಚಯ ಮುಂತಾದವುಗಳನ್ನು ಮಾಡುತ್ತಾ, ಸುಖವಾಗಿದ್ದರೆಂದೂ, ಲಕ್ಷ್ಮಣನು ಮಾಡುವ ಸೇವೆಯಿಂದ ಪ್ರೀತಿಯುಳ್ಳವರಾಗಿದ್ದರೆಂದೂ ಭಾವವು.

ಶೋಕಾತುರಸ್ತಥಾ || ರಾಜಾ ದಶರಥ ಸ್ಸ್ವರ್ಗಂ ಜಗಾಮ ವಿಲಪನ್ ಸುತಂ || ೩೨|| || ಮೃತೇತುತಸ್ಮಿನ್ ಭರತೋ ವಸಿಷ್ಠ ಪ್ರಮುಖೈರ್ದ್ವಿಜೈಃ||ನಿಯುಜ್ಯಮಾನೋರಾಜ್ಯಾಯ ನೈಚ್ಛದ್ರಾಜ್ಯಂ ಮಹಾಬಲಃ || ೩೩|| || ಸಜಗಾಮವನಂವೀರೋ ರಾಮಪಾದ ಪ್ರಸಾದಕಃ || ೩೪ || ಗತ್ವಾತುಸುಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ। ಅಯಾಚದ್ಭ್ರಾತರಂ ರಾಮಮಾರ್ಯಭಾವ ಪುರಸ್ಕೃತಃ ||೩೫|| ತ್ವಮೇವರಾಜಾ ಧರ್ಮಜ್ಞ ಇತಿರಾಮಂ

ನಾಗಿ, ಸುತಂ-ಮಗನನ್ನು ಕುರಿತು, ವಿಲಪನ್-ಅಳುತ್ತ, ಸ್ವರ್ಗಂ ಸ್ವರ್ಗವನ್ನು ಕುರಿತು, ಜಗಾಮ-ತೆರಳಿದನು. (ತಿ) ತಥಾ ಪುತ್ರಶೋಕಾತುರಃ-ಹೇಳಲಶಕ್ಯವಾದ ಪುತ್ರಶೋಕ ಸಂತಪ್ತನಾಗಿ,ಸ್ವರ್ಗಂ ಜಗಾಮ-ಮರಣವನ್ನೈದಿದನು. ||೩೨|| ತಸ್ಮಿನ್-ಆದಶರಥನು, ಮೃತೇಸತಿ - ಸ್ವರ್ಗವನ್ನೈದಲು, ಮಹಾಬಲಃ-ರಾಜ್ಯವನ್ನಾಳಲು ಸಮರ್ಥನಾದ, ಭರತಃ-ಭರತನು, ವಸಿಷ್ಠ ಪ್ರಮುಖೈಃ-ವಸಿಷ್ಠನೇ ಮೊದಲಾದ, ದ್ವಿಜೈಃ-ಬ್ರಾಹ್ಮಣರಿಂದ, ರಾಜ್ಯಾಯ - ಪ್ರಭುತ್ವಕ್ಕೋಸುಗ, ನಿಯುಜ್ಯಮಾನಸ್ಸನ್-ಪ್ರೇರೇಪಿಸಲ್ಪಟ್ಟವನಾದರೂ, ರಾಜ್ಯಂ - ಪ್ರಭುತ್ವವನ್ನು, ನೈಚ್ಛತ್ - ಅಪೇಕ್ಷಿಸಲಿಲ್ಲವು. || ೩೩ || ವೀರಃ- ರಾಗಾದಿಗಳನ್ನು ಗೆದ್ದ, (ಗೊ) ಚತುರಂಗಬಲ ಸಹಿತನಾದ, ಸಃ - ಆ ಭರತನು, ರಾಮಪಾದಪ್ರಸಾದಕಃ - ಪೂಜ್ಯನಾದ ರಾಮನನ್ನು ಪ್ರಸನ್ನನಾಗಿ ಮಾಡಿಕೊಳ್ಳಲು ಇಚ್ಛಿಸಿ, ವನಂ-ವನವನ್ನು ಕುರಿತು, ಜಗಾಮ-ಹೊರಟನು. |೩೪|| ಅಲ್ಲದ, ಆರ್ಯಭಾವ ಪುರಸ್ಕೃತಃ - ವಿನಯಪುರಸ್ಕೃತನಾಗಿ, ಸುಮಹಾತ್ಮಾನಂ-ಶುದ್ಧವಾದ ಅಂತಃಕರಣವುಳ್ಳ, ಸತ್ಯಪರಾಕ್ರಮಂ-ಸತ್ಯವಾದ ಪರಾಕ್ರಮವುಳ್ಳ, ರಾಮಂ-ಶ್ರೀರಾಮನನ್ನು, ಗತ್ವಾ-ಹೊಂದಿ, ಭ್ರಾತರಂ ರಾಮಂ-ಅಣ್ಣನಾದ ಆ ರಾಮನನ್ನು, (ಸ್ವಾಭೀಷ್ಟಂ - ತನ್ನ ಇಷ್ಟಾರ್ಥವನ್ನು) ಅಯಾಚತ್ - ಬೇಡಿಕೊಂಡನು. || ೩೫ || ಹೇಧರ್ಮಜ್ಞ-ಸರ್ವಗುಣಶ್ರೇಷ್ಠನಾದ ಅಣ್ಣನಿರಲು ತಮ್ಮನಿಗೆ ರಾಜ್ಯಾಧಿಕಾರವಿಲ್ಲವೆಂಬ ಧರ್ಮವನ್ನರಿತ ಶ್ರೀರಾಮನೇ, ತ್ವಮೇವ-ನೀನೇ, ರಾಜಾ-ಧೊರೆಯು, ಇತಿ- ಇಂತೆಂದು, ರಾಮಂ - ರಾಮನನ್ನು ಕುರಿತು, ವಚಃ ಮಾತನ್ನು, ಅಬ್ರವೀತ್-ನುಡಿದನು. || ೩೬ || ರಾಮೋಪಿ-ಆಶ್ರಿತಜನರನ್ನು ಸಂತೋಷಗೊಳಿಸುವವನಾದರೂ, ಸುಮುಖೋಪಿ, - ಯಾಚಕ ಮುಖದರ್ಶನದಿಂದ ಪ್ರಸನ್ನವಾದ ಮುಖವುಳ್ಳವನಾದರೂ, ಪರಮೋದಾರೋಪಿ- (೧) ಯಾಚಕರಿಗೆ ಬಹಳ ಉದಾರಿಯಾದರೂ,

ಮಗನನ್ನುದ್ದೇಶಿಸಿ, "ರಾಮ ಎಲ್ಲಿ ಹೋದೆ" ಎಂದು ಬಗೆಬಗಯಾಗಿ ಪ್ರಲಪಿಸುತ್ತ ಲೋಕಾಂತರವನ್ನೈದಿದನು. || ೩೨ || ಆ ಧಶರಥ ಮಹಾರಾಜನು, ಇಂತು ಮೃತಿಯನ್ನೈದಲು, ಭರತನು ರಾಜ್ಯಭಾರವನ್ನು ಮಾಡಲು ಶಕ್ತನಾಗಿದ್ದರೂ, ವಸಿಷ್ಠನೇ ಮೊದಲಾದ ಬ್ರಾಹ್ಮಣವರೇಣ್ಯರು ರಾಜ್ಯಾಭಿಷಿಕ್ತನಾಗೆಂದು ಹೇಳಿದರೂ, ಭ್ರಾತೃವಾತ್ಸಲ್ಯದಿಂದ ಅದನ್ನಂಗೀಕರಿಸದೆ, ಅಣ್ಣನನ್ನು ಪ್ರಸನ್ನನಾಗಿ ಮಾಡಿಕೊಳ್ಳಲು, ರಾಗಾದಿವಿಷಯಗಳನ್ನು ತೊರೆದು ತೆರಳಿದನು. || ೩೩-೩೪ || ಶತೃಭೂತವಾದ ರಾಗಾದಿಗಳನ್ನು ಜಯಿಸಲು, ಸಮರ್ಥನಾದ ಆ ಭರತನು, ಮಹಾನುಭಾವನಾಗಿಯೂ, ಮನೋಹರನಾಗಿಯೂ, ಸತ್ಯವಾದ ಪರಾಕ್ರಮ ವುಳ್ಳವನಾಗಿಯೂ ಇರುವ, ತನ್ನ ಅಣ್ಣನಾದ ಶ್ರೀರಾಮನ ಬಳಿ ಸಾರಿ, ಅವನನ್ನು ಕುರಿತು "ಎಲೈ ಧರ್ಮಜ್ಞನೆ! ನೀನೇ ನಮ್ಮೆಲ್ಲರಿಗೂ ಪ್ರಭುವಾಗಿರು. ಅಯೋಧ್ಯೆ

ಟಿ|| (೧) ನಹ್ಯರ್ಥಿನಃಕಾರ್ಯವಶಾದುಪೇತಾಃ ಕಾಕುತ್ಸ್ಥವಂಶ ವಿಮುಖಾಃ ಪ್ರಯಾಂತಿ || ಎಂದು ವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿರುವುದು,

ವಚೋಬ್ರವೀತ್ ||೩೫|| || ರಾಮೋಪಿ ಪರಮೋದಾರ ಸ್ಸುಮುಖಸ್ಸುಮಹಾಯಶಾಃ| ನಚೈಚ್ಛತ್ಪಿತುರಾದೇಶಾ ದ್ರಾಜ್ಯಂ ರಾಮೋ ಮಹಾಬಲಃ || ೩೬ || ಪಾದುಕೇಚಾಸ್ಯ ರಾಜ್ಯಾಯ ನ್ಯಾಸಂ ದತ್ವಾ ಪುನಃಪುನಃ | ನಿವರ್ತಯಾಮಾಸ ತತೋ ಭರತಂ ಭರತಾಗ್ರಜಃ || ೩೭ || || ಸಕಾಮಮನವಾಪ್ಯೈವ ರಾಮಪಾದಾ ವುಪಸ್ಪೃಶನ್| ನಂದಿಗ್ರಾಮೇ ಕರೋದ್ರಾಜ್ಯಂ ರಾಮಾಗಮನ ಕಾಂಕ್ಷಯಾ ||೩೮|| || ಗತೇತುಭರತೇ ಶ್ರೀಮಾನ್ ಸತ್ಯಸಂಧೋ ಜಿತೇಂದ್ರಿಯಃ | ರಾಮಸ್ತುಪುನರಾಲಕ್ಷ್ಯ ನಾಗರಸ್ಯ ಜನಸ್ಯಚ | ತತ್ರಾ

---

ಸುಮಹಾಯಶಾಪಿ-ಈ ತೆರದ ಕೀರ್ತಿಯುಳ್ಳವನಾದರೂ,ಮಹಾಬಲೋಪಿ-(ಗೊ) ಆಶ್ರಿತರ ಮನೋರಥವನ್ನು ಪೂರ್ತಿಮಾಡುವದರಲ್ಲಿ ನಿಪುಣನಾದರೂ (ಮ) ಒಂದೇ ಬಾಣದಿಂದ ರಾಕ್ಷಸರನ್ನು ಸದೆಬಡಿವ ಶಕ್ತಿವುಳ್ಳವರಾದರೂ, ರಾಮಃ- ಶ್ರೀರಾಮನು, ಪಿತುಃ- ತಂದೆಯ, ಆದೇಶಾತ್-ಆಜ್ಞೆಯಿಂದ ರಾಜ್ಯಂ-ರಾಜ್ಯವನ್ನು, ನೈಚ್ಛತ್-ಇಚ್ಛಿಸಲಿಲ್ಲವು. || ೩೬ || ಭರತಾಗ್ರಜಃ-ಭರತನಿಗೆ ಅಣ್ಣನಾದ ಶ್ರೀರಾಮನು, ಅಸ್ಯ-ಈಭರತನಿಗೆ, ರಾಜ್ಯಾಯ-ರಾಜ್ಯವನಾಳಲು, ಪಾದುಕೇಚ - ಪಾದುಕೆಗಳನ್ನು ಸಹ,ನ್ಯಾಸಂ-ತನ್ನ ಬದಲಾಗಿ, ದತ್ವಾ-ಕೊಟ್ಟು, ತತಃ-ಬಳಿಕ,ಪುನಃ ಪುನಃ-ಅಡಿಗಡಿಗೂ, ತಂ-ಆ ಭರತನನ್ನು, ನಿವರ್ತಯಾಮಾಸ-ಹಿಂತಿರುಗಿಸಿದನು. || ೩೭ || ಸಃ-ಆ ಭರತನು, ಕಾಮಂ-ರಾಮನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಿ ಪಟ್ಟಾಭಿಷೇಕವನ್ನು ಮಾಡಬೇಕೆಂಬ ಕುತೂಹಲವನ್ನು, ಅನವಾಪ್ಯೈವ-ಹೊಂದದೆಯೆ, ನಂದಿಗ್ರಾಮೇ - ನಂದಿಗ್ರಾಮದಲ್ಲಿ ರಾಮಪಾದೌ - ಶ್ರೀರಾಮನ ಪಾದುಕೆಗಳನ್ನು, ಉಪಸ್ಪೃಶನ್-ನಮಸ್ಕರಿಸುತ್ತ, ರಾಮಾಗಮನ ಕಾಂಕ್ಷಯಾ-ಶ್ರೀರಾಮನ ಒರುವಿಕೆಯನ್ನು ನಿರೀಕ್ಷಿಸುತ್ತ, ರಾಜ್ಯಮಕರೋತ್-ರಾಜಾಧಿಪತ್ಯವನ್ನು ಮಾಡುತ್ತಿದ್ದನು || ೩೮ || ಭರತೇತು-ಭರತನು, ಗತೇ ಸತಿ - ಹೊರಟು ಹೋಗಲು, ಶ್ರೀಮಾನ್ - ಕಾಂತಿಯುಕ್ತನಾದ, ಸತ್ಯಸಂಧಃ-ಸತ್ಯಪ್ರತಿಜ್ಞೆಯುಳ್ಳ, ರಾಮಸ್ತು - ಶ್ರೀರಾಮನು, ಜಿತೇಂದ್ರಿಯಃ-ರಾಜ್ಯಭೋಗದಲ್ಲಿ ಆಶೆಯಿಲ್ಲದೆ, ನಾಗರಸ್ಯ-ನಗರದಲ್ಲಿರುವ, ಜನಸ್ಯಚ-ಜನಗಳ, ಮತ್ತು ಭರತನ, ತತ್ರ-ಆ ಚಿತ್ರಕೂಟ ಪರ್ವತದಲ್ಲಿ, ಪುನರಾಗಮನಂ-ತಿರುಗಿಬರೋಣವನ್ನು, ಅಲಕ್ಷ್ಯ-ಕಂಡು, ಏಕಾಗ್ರಃ ತಂದೆಯ ಆಜ್ಞೆ

---

ಯನ್ನು ಕುರಿತು ಪ್ರಯಾಣ ಮಾಡುವವನಾಗು" ಎಂದು ಹೇಳಿದನು, ಆ ರಾಮನು ತನ್ನ ಗುಣಗಳಿಂದ ಆಶ್ರಿತಜನರನ್ನು ಸಂತಸಗೊಳಿಸುವವನಾದರೂ, ಮಹಾ ಉದಾರಿಯಾದರೂ, ಯಾಚಕ ಜನರನ್ನು ನೋಡುವುದರಿಂದ ಪ್ರಸನ್ನವಾದ ಮುಖವುಳ್ಳವನಾದರೂ, ಪ್ರಸಿದ್ಧವಾದ ಕೀರ್ತಿಯುಳ್ಳವನಾದರೂ, ತನ್ನ ತಂದೆಯ ಆಜ್ಞೆಯನ್ನು ಕಾಪಾಡಲು, ರಾಜ್ಯಾಭಿಷೇಕಕ್ಕೆ ಮನಗೊಡದೆ, ತನ್ನ ತಮ್ಮನಾದ ಭರತನಿಗೆ ತನ್ನ ಪಾದುಕೆಗಳನ್ನು ಕೊಟ್ಟು, ಬಹಳವಾಗಿ ಹೇಳಿ ಹಿಂದಕ್ಕೆ ಕಳುಹಿಸಿದನು ||೩೭|| ಬಳಿಕಲಾ ಭರತನು ತನ್ನ ಮನೋಭೀಷ್ಟವನ್ನು ಹೊಂದದೆ, ಆ ರಾಮ ಪಾದುಕೆಗಳನ್ನು ತೆಗೆದು ಕೊಂಡು, ಹಿಂತಿರುಗಿ ನಂದಿ ಗ್ರಾಮದಲ್ಲಿ ನಿಂತು ರಾಮಾಗಮನವನ್ನು ನಿರೀಕ್ಷಿಸುತ್ತ ಆ ಪಾದುಕೆಗಳನ್ನು ಪೂಜಿಸುತ್ತ, ರಾಜ್ಯಭಾರವನ್ನು ಮಾಡುತ್ತಿದ್ದನು. ||೩೮|| ಇತ್ತಲು ಆ ಭರತನು ಹೊರಟುಹೋದ ಬಳಿಕ ತಂದೆಯ ಮಾತನ್ನು ಕಾಪಾಡುವಿಕೆಯೆಂಬ ಪ್ರತಿಜ್ಞೆಗೆ ಭಂಗವುಂಟಾದೀತೆಂಬ ಭೀತಿಯಿಂದುಂಟಾದ ಒಂದಾನೊಂದು ಕಾಂತಿ ವಿಶೇಷವುಳ್ಳ,

ವಿರೂಪಿತಾ ಶೂರ್ಪಣಖಾ ರಾಕ್ಷಸೀ ಕಾಮರೂಪಿಣೀ||೪೭|| ತತ ಶ್ಶೂರ್ಪಣಖಾವಾಕ್ಯಾ ದುದ್ಯುಕ್ತಾ೯ ಸರ್ವರಾಕ್ಷಸಾ೯ ! ಖರಂ ತ್ರಿಶಿರಸಂ ಚೈವ ದೂಷಣಂಚೈವ ರಾಕ್ಷಸಂ||ನಿಜ ಘಾನರಣೇ ರಾಮ ಸ್ತೇಷಾಂ ಚೈವ ಪದಾನುಗಾ೯ |೪೭||| ವನೇತಸ್ಮಿ ನ್ನಿವಸಿತಾ ಜನ ಸ್ಥಾನ ನಿವಾಸಿನಾಂ| ರಕ್ಷಸಾಂ ನಿಹತಾನ್ಯಾಸ೯ಸಹಸ್ರಾಣಿ ಚತುರ್ದಶ ||೪೮||| ತತೋ ಜ್ಞಾತಿವಧಂ ಶ್ರುತ್ವಾ ರಾವಣಃ ಕ್ರೋಧ ಮೂರ್ಛಿತಃ ! ಸಹಾಯಂ ವರಯಾಮಾಸ ಮಾರೀಚಂ ನಾಮರಾಕ್ಷಸಂ || ೪೯ || || ವಾರ್ಯಮಾಣಸ್ಸುಬಹುಶೋ ಮಾರೀಚೇನ

---

ನಖಿಯೆಂದು ಪ್ರಸಿದ್ಧಳಾದ, ರಾಕ್ಷಸೀ - ರಾಕ್ಷಸಳು, ವಿರೂಪಿತಾ - ವಿಕಾರರೂಪಳಾಗಿ ಮಾಡಲ್ಪಟ್ಟಳು. || ೪೭ || ತತಃ - ಬಳಿಕ. ಶೂರ್ಪಣಖಾವಾಕ್ಯಾತ್ - ಶೂರ್ಪಣಖಿಯ ಮಾತಿನಿಂದ, ಉದ್ಯುಕ್ತಾ೯ - ಯುದ್ಧಕ್ಕೆ ಸಿದ್ಧರಾದ, ಸರ್ವರಾಕ್ಷಸಾ೯ - ಹದಿನಾಲ್ಕುಸಾವಿರ ಸಂಖ್ಯೆಯುಳ್ಳ ಸಮಸ್ತ ರಾಕ್ಷಸರನ್ನೂ, ಖರಂ - ಖರನನ್ನು, ತ್ರಿಶಿರಸಂ - ತ್ರಿಶಿರಸ್ಕನನ್ನೂ, ರಾಕ್ಷಸಂ - ರಾಕ್ಷಸನಾದ, ದೂಷಣಂಚ - ದೂಷಣನನ್ನೂ, ತೇಷಾಂ - ಅವರ, ಪದಾನುಗಾಂಶ್ಚ - ಅನುಚರರನ್ನೂ ಸಹ, ರಣೇ-ಯುದ್ಧದಲ್ಲಿ, ರಾಮಃ ಶ್ರೀರಾಮನು, ನಿಜಘಾನ ಹೊಡೆದನು. ||೪೭|| ತಸ್ಮಿನ್ನೇವವನೇ-ಅದೇವನದಲ್ಲಿ, ನಿವಸತಾ - ಇರುತ್ತಿರುವ ಶ್ರೀರಾಮನಿಂದ, ಜನಸ್ಥಾನನಿವಾಸಿನಾಂ - ಜನಸ್ಥಾನದಲ್ಲಿರುವ, ರಕ್ಷಸಾಂ - ರಾಕ್ಷಸರ, ಚತುರ್ದಶಸಹಸ್ರಾಣಿ - ಹದಿನಾಲ್ಕುಸಹಸ್ರಗಳು, ನಿಹತಾನಿಆಸ೯ - ಹೊಡೆಯಲ್ಪಟ್ಟವು, (ಹೀಗೆ ಹೇಳಿದ್ದರಿಂದ ಅತಿಘೋರವಾದ ಆ ರಕ್ಕಸರ ಗುಂಪನ್ನು ಅಸಹಾಯನಾಗಿಯೇ ಹೊಡೆದನೆಂದು ಭಾವವು) ||೪೮||| ತತಃ - ಬಳಿಕ, ರಾವಣಃ - ರಾವಣನು (೧) ಜ್ಞಾತಿವಧಂ, ಜ್ಞಾತಿ - ಖರಾದಿಗಳ, ವಧಂ ನಾಶವನ್ನು, ಜ್ಞಾತ್ವಾ - ಅಕಂಪನ ಶೂರ್ಪಣಖಿಯರ ಮುಖದಿಂದ ತಿಳಿದು, ಕ್ರೋಧಮೂರ್ಛಿತಃ - ಕೋಪದಿಂದ ಮೂಢನಾಗಿ, ಅಥವಾ - ರೋಷವ್ಯಾಪ್ತನಾಗಿ, ಮಾರೀಚಂನಾಮ - ಮಾರೀಚನೆಂದು ಪ್ರಸಿದ್ಧನಾದ, ರಾಕ್ಷಸಂ - ರಾಕ್ಷಸನನ್ನು, ಸಹಾಯಂ-ಸೀತೆಯನ್ನು ಅಪಹರಿಸುವುದರಲ್ಲಿ ಸಹಾಯವನ್ನಾಗಿ,ವರಯಾಮಾಸ-ಅಪೇಕ್ಷಿಸಿದನು||೪೯||

---

ಕಿವಿ, ಮೂಗುಗಳನ್ನು ಕತ್ತರಿಸುವಿಕೆಯಿಂದ ವಿರೂಪಳಾಗಿ ಮಾಡಲ್ಪಟ್ಟಳು || ೪೭ || ಬಳಿಕಲಾ ರಾಮಚಂದ್ರನು, ಮತ್ತೊಬ್ಬರ ಸಹಾಯವಿಲ್ಲದೇನೇ ಆ ಶೂರ್ಪಣಖಿಯ ವಾಕ್ಯದಿಂದ ಯುದ್ಧಾರ್ಥವಾಗಿ ಬಂದ ಹದಿನಾಲ್ಕು ಸಾವಿರ ರಕ್ಕಸರನ್ನೂ, ಅವರಲ್ಲಿ ಉತ್ತಮರಾದ ಖರ, ತ್ರಿಶಿರಸ, ದೂಷಣರೆಂಬ ರಾಕ್ಷಸರನ್ನೂ, ಅವರ ಹಿಂಬಲವಾಗಿದ್ದವರನ್ನೂ ಸಹ ರಣರಂಗದಲ್ಲಿ ಹೊಡೆದು ಕೆಡುಹಲು, ಜನಸ್ಥಾನ ನಿವಾಸಿಗಳಾದ ಆ ರಾಕ್ಷಸರ ಚತುರ್ದಶ ಸಹಸ್ರ ಸಂಖ್ಯಾಕವಾದ ಸೈನ್ಯಗಳು ನಿಶ್ಶೇಷವಾಗಿ ನಾಶವಾದವು. ||೪೮|| ಆ ಬಳಿಕ ರಾವಣನು ಖರನೇ ಮೊದಲಾದ ತನ್ನ ಜ್ಞಾತಿಗಳ ವಧೆಯನ್ನು ಅಕಂಪನ ಶೂರ್ಪಣಖಿಯರಿಂದ ಕೇಳಿ, ಕೋಪದಿಂದ ಕಿಡಿಕಿಡಿಯಾಗಿ, ಮಾರೀಚನೆಂಬ ರಾಕ್ಷಸನನ್ನು ಸೀತಾಪಹರಣದಲ್ಲಿ ತನಗೆ ಸಹಾಯಕನಾಗಿರಬೇಕೆಂದು ಕೋರಿದನು. || ೪೯|| ಆಗಲಾ ಮಾರೀಚನು ಆ ರಾವಣನನ್ನು ಕುರಿತು, ‘‘ಎಲೈ ರಾವಣನೇ ! ಖರಾದಿಗಳ ಸಂಹಾರಮಾಡಿ

---

ಟಿ|| (೧) ಅಂದರೆ - ರಾತಿ - ರಾವಯತೀತಿ - ರಾವಣಃ - ಲೋಕತ್ರಯವನ್ನು ದೀನಧ್ವನಿಯುಳ್ಳದ್ದನ್ನಾಗಿ ಮಾಡುತ್ತಿರುವವನು ಎಂದರ್ಥ.

ಸರಾವಣಃ । ನವಿರೋಧೋ ಬಲವತಾ ಕ್ಷಮೋ ರಾವಣತೇನತೇ ॥ ೫೦ ॥ ಅನಾದೃತ್ಯತು ತದ್ವಾಕ್ಯಂ ರಾವಣಃ ಕಾಲಚೋದಿತಃ। ಜಗಾಮಸಹಮಾರೀಚ ಸ್ತಸ್ಯಾಶ್ರಮಪದಂ ತದಾ ॥ ೫೧ ॥ ತೇನಮಾಯಾವಿನಾ ದೂರ ಮಪವಾಹ್ಯ ನೃಪಾತ್ಮಜೌ । ಜಹಾರ ಭಾರ್ಯಾಂ ರಾಮಸ್ಯ ಗೃಧ್ರಂ ಹತ್ವಾ ಜಟಾಯುಷಂ ॥೫೨॥ ಗೃಧ್ರಂಚ ನಿಹತಂ ದೃಷ್ಟ್ವಾ ಹೃತಾಂಶೃತ್ವಾಚ ಮೈಥಿಲೀಂ ॥ ರಾಘವಶ್ಶೋಕ ಸಂತಪ್ತೋ ವಿಲಲಾಪಾಕುಲೇಂದ್ರಿಯಃ ॥ ೫೩ ॥ ॥ ತತಸ್ತೇನೈವ ಶೋಕೇನ ಗೃಧ್ರಂ ಧಗ್ಧ್ವಾಜಟಾಯುಷಂ। ಮಾರ್ಗಮಾಣೋವನೇ ಸೀತಾಂ ರಾಕ್ಷಸಂ ಸಂದದರ್ಶಹ। ೫೪। ಕಬನ್ಧಂನಾಮರೂಪೇಣ ವಿಕೃತಂ

ಹೇ ರಾವಣ-ಎಲವೊ ಲೋಕಕಂಟಕನಾದ ರಾವಣನೇ, ಬಲವತಾ-(ಮ) ಅಪ್ರಮೇಯ ಬಲವುಳ್ಳ, ಗೋ-ಖರಾದಿ ವಧೆಯಿಂದ ತಿಳಿದಂತಹ ಬಲವುಳ್ಳ, ತೇನ-ಆ ರಾಮನೊಡನೆ, ತೇ-ನಿನಗೆ, ವಿರೋಧಃ-ಹಗೆತನವು, ನಕ್ಷಮಃ-ತೆರವಲ್ಲ, (ಇತಿ-ಇಂತೆಂದು) ಮಾರೀಚೇನ-ಮಾರೀಚನಿಂದ, ಸರಾವಣಃ-ಆ ರಾವಣನು, ಮುಹುರ್ಮುಹುಃ-ಬಾರಿಬಾರಿಗೂ, ವಾರ್ಯಮಾಣಃ-ತಡೆದವನು, ಅಭೂತ್ ಆದನು ॥೫೦॥ (ಕಿಂತು ಮತ್ತೇನೆಂದರೆ,) ರಾವಣಃ-ರಾವಣನು, ಕಾಲಚೋದಿತಃ-ಮೃತ್ಯುಪ್ರೇರಿತನಾಗಿ, ತದ್ವಾಕ್ಯಂ-ಆ ಮಾರೀಚನ ವಾಕ್ಯವನ್ನು, ಅನಾದೃತ್ಯ-ನಿರಾಕರಿಸಿ, ಸಹಮಾರೀಚಃ-ಮಾರೀಚನೊಡನೆ, ತದಾ-ಅದೇ ಕಾಲದಲ್ಲಿಯೇ, ತಸ್ಯ-ಆ ಪ್ರಸಿದ್ಧನಾದ ಶ್ರೀರಾಮನ, ಆಶ್ರಮಪದಂ ಆಶ್ರಮ ಸ್ಥಾನವನ್ನು, ಜಗಾಮ-ಹೊಂದಿದನು. ॥೫೧॥ (ಗೊ) ಮಾಯಾವಿನಾ-ಪ್ರಶಸ್ತವಾದ ಮೃಗ ಮಾಯೆಯುಳ್ಳ, (ಅಂದರೆ ಲೋಭನೀಯ್ಯವಾದ ವಿಚಿತ್ರ ಕನಕ ಮೃಗ ವೇಷ ಧಾರಿಯಾದ) ತೇನ-ಆ ಮಾರೀಚನಿಂದ, ನೃಪಾತ್ಮಜೌ-ದಶರಥ ಪುತ್ರರಾದ ರಾಮಲಕ್ಷ್ಮಣರನ್ನು, ದೂರಂ-ದೂರವಾಗಿ, ಅಪವಾಹ್ಯ-ಹೊರಡಿಸಿ, ಜಟಾಯುಷಂ ಜಟಾಯುವೆಂಬ; ಗೃಧ್ರಂ-ಗೃಧ್ರರಾಜನನ್ನು, (೧) ಹತ್ವಾ-ಹಿಂಸಿಸಿ, ರಾಮಸ್ಯ-ಶ್ರೀರಾಮನ, ಭಾರ್ಯಾಂ ಹೆಂಡತಿಯಾದ ಸೀತಾದೇವಿಯನ್ನು, ಜಹಾರ-ಅಪಹರಿಸಿದನು. ॥ ೫೨ ॥ ನಿಹತಂ ಕಂಠಗತ ಪ್ರಾಣನಾದ, ಗೃಧ್ರಂಚ-ಜಟಾಯುವನನ್ನು, ದೃಷ್ಟ್ವಾ-ಕಂಡು, ಮೈಥಿಲೀಂಚ-ಸೀತಾದೇವಿಯನ್ನು, ಹೃತಾಂ ರಾವಣನಿಂದ ಅಪಹರಿಸಲ್ಪಟ್ಟವಳನ್ನಾಗಿ, ಶೃತ್ವಾ - ಜಟಾಯುವಿನಿಂದ ಕೇಳಿ, ರಾಘವಃ - ಶ್ರೀರಾಮನು, ಶೋಕಸಂತಪ್ತಃ - ದುಃಖದಿಂದ ಪೀಡಿತನಾದುದರಿಂದ, ಆಕುಲೇಂದ್ರಿಯಃ - ವ್ಯಾಕುಲವಾದ ಸರ್ವೇಂದ್ರಿಯವುಳ್ಳವನಾಗಿ, ವಿಲಲಾಪ - ಅತ್ತನು ॥ ೫೩ ॥

ಅಸದೃಶ ಪರಾಕ್ರಮಿಯಾದ ಆ ರಾಮನೊಡನೆ ನಿನಗೆ ವಿರೋಧವು ಯುಕ್ತವಾದ್ದಲ್ಲ” ಎಂದು ಬಾರಿಬಾರಿಗೂ ತಡೆದರೂ ಆ ರಾವಣನು, ಮೃತ್ಯುವಿನಿಂದ ಪ್ರೇರಿತನಾಗಿ, ಆತನ ಮಾತನ್ನು ನಿರಾಕರಿಸಿ, ಆ ಕಾಲದಲ್ಲಿ ಮಾರೀಚನೊಡಗೂಡಿ ಶ್ರೀರಾಮನ ಆಶ್ರಮವನ್ನು ಹೊಕ್ಕನು. ॥ ೫೧ ॥ ಬಳಿಕಲಾ ರಾವಣನು, ಮಾಯಾರೂಪಧಾರಿಯಾದ, ಆ ಮಾರೀಚನಿಂದ ದಶರಥ ರಾಜನಂದನರಾದ ಆ ರಾಮಲಕ್ಷ್ಮಣರನ್ನು ದೂರವಾಗಿ ಹೊರಡಿಸಿ, ಸೀತಾದೇವಿಗೆ ಸಹಾಯನಾಗಿ ಬಂದ ಆ ಜಟಾಯುವನ್ನು ಹಿಂಸಿಸಿ, ಶ್ರೀರಾಮನ ಸತಿಯಾದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು ॥ ೫೨ ॥ ಅನಂತರದಲ್ಲಿ ಶ್ರೀರಾಮನು ಹಿಂತಿರುಗಿ ಬಂದು, ಸೀತಾದೇವಿಯನ್ನು ಹುಡುಕುತ್ತಾ, ಕಂಠಗತಪ್ರಾಣಗಳುಳ್ಳ ಜಟಾಯು

೧॥ ಇಲ್ಲಿ “ ಆಸ್ಯಂ ವ್ಯಾದಾಯಸ್ವಪಿತಿ ” ಎಂಬುದರಿಂದ “ತ್ವಾ” ಪ್ರತ್ಯವು ಕ್ವಚಿದುತ್ತರಕಾಲೀನವಾಚ್ಯವೂ, ಕ್ವಚಿತ್ಪೂರ್ವಕಾಲೀನವಾಚ್ಯವೂ ಆಗುವುದು ಇಲ್ಲಿ “ಗೃಧ್ರಂಹತ್ವಾ ಜಟಾಯುಷಂ” ಎಂದಿರುವುದು. ಹೀಗಿರುವುದರಿಂದ ಪಾಠಕರು ಜಟಾಯುವನ್ನು ಹಿಂಸಿಸಿದ ಬಳಿಕ ಸೀತೆಯನ್ನಪಹರಿಸಿದನೆಂದು ತಿಳಿಯಬಾರದು. ಇಲ್ಲಿ “ತ್ವಾ” ಪ್ರತ್ಯಯವು ಪೂರ್ವಕಾಲೀನವಾಚ್ಯವು. ಆದುದರಿಂದ ಸೀತೆಯನ್ನಪಹರಿಸಿ ಜಟಾಯುವನ್ನು ಹೊಡೆದನೆಂದು ಅರ್ಥ ಮಾಡಬೇಕು,

ಘೋರದರ್ಶನಂ ॥ ತಂನಿಹತ್ಯ ಮಹಾಬಾಹು ರ್ದದಾಹ ಸ್ವರ್ಗತಶ್ಚಸಃ ॥ ೫೫ ॥ ಸಚಾಸ್ಯ ಕಥಯಾ ಮಾಸ ಶಬರೀಂ ಧರ್ಮಚಾರಿಣೀಂ । ಶ್ರಮಣೀಂ ಧರ್ಮನಿಪುಣಾ ಮಭಿಗಚ್ಛೇತಿ ರಾಘವಂ॥೫೬॥ ಸೋಽಭ್ಯಗಚ್ಛನ್ಮಹಾತೇಜಾ ಶ್ಶಬರೀಂ ಶತ್ರುಸೂದನಃ ॥೫೭॥ ಶಬರ್ಯಾಪೂಜಿತ ಸ್ಸಮ್ಯ ಗ್ರಾಮೋದಶರಥಾತ್ಮಜಃ ॥೫೮॥ ಪಂಪಾತೀರೇ ಹನುಮತಾ

ತತಃ ಬಳಿಕ,ತೈನ್ಯೈವಶೋಕೇನ-ಅವೇ ದುಃಖದಿಂದಲೆ,ಗೃಧ್ರಂ-ತಿರ್ಯಗ್ಜಂತು ವಿಶೇಷವಾದ,ಜಟಾಯುಷಂ-ಜಟಾಯುವನ್ನು, ದಗ್ಧ್ವಾ-ದಹಿಸಿ, ವನೆ-ವನದಲ್ಲಿ, ಸೀತಾಂ - ಸೀತಾ ದೇವಿಯನ್ನು, ಮಾರ್ಗಮಾಣಃ-ಹುಡುಕುತ್ತಾ, ರೂಪೇಣ-ಶರೀರದಿಂದ, ವಿಕೃತಂ ವಿಕಾರ ಯುಕ್ತನಾದ, ಘೋರದರ್ಶನಂ-ಭಯಂಕರವಾದ ನೋಟವುಳ್ಳ, ಕಬಂಧಂನಾಮ ಕಬಂಧನೆಂಬ, ರಾಕ್ಷಸಂ ರಾಕ್ಷಸನನ್ನು, ದದರ್ಶಹ-ಕಂಡನಲ್ಲವೆ ॥ ೫೪ ॥ ಮಹಾಬಾಹುಃ - ಆ ಕಬಂಧನ ಭುಜಗಳನ್ನು ಛೇದಿಸುವ ಭುಜಬಲವುಳ್ಳ ಶ್ರೀರಾಮನು, ತಂ ಆ ಕಬಂಧನನ್ನು, ನಿಹತ್ಯ-ಹೊಡೆದು, ದದಾಹಚ-ದಹಿಸಿಯೂ ದಹಿಸಿದನು, ಸಃ-ಆ ಕಬಂಧನು, ಸ್ವಃ-ಸ್ವರ್ಗವನ್ನು ಕುರಿತು, ಗತಃ ತೆರಳಿದನು. ॥೫೫॥ ಸಚ-ಆ ಕಬಂಧನೂ ಕೂಡ, ಅಸ್ಯ-ಈ ಶ್ರೀರಾಮನ, ಉಪಕಾರಸ್ಮರಣೆಯಿಂದ (೧)ಕ್ಷಣಮಾತ್ರ ಆಕಾಶದಲ್ಲಿ ನಿಂತು ಧರ್ಮಚಾರಿಣೀಂ-ಗುರು ಶುಶ್ರೂಷೆ, ಭಗವದ್ಗುಣ ಕಥಾಶ್ರವಣವೇ ಮುಂತಾದ ಧರ್ಮಾಚರಣಶೀಲಳಾದ, ಧರ್ಮನಿಪುಣಾಂ-ಸಾಮಾನ್ಯರೂಪವಾದ ವಿಶೇಷವಾದ ಧರ್ಮಗಳಲ್ಲಿ ಸಮರ್ಥಳಾದ, ಶ್ರಮಣೀಂ-ಚತುರ್ಥಾಶ್ರಮವಾದ ಧರ್ಮವನ್ನಾಚರಿಸುತ್ತಿರುವ, (ಅಂದರೆ ಜಿತೇಂದ್ರಿಯತ್ವ ರೂಪಕವಾಗಿ ಮೋಕ್ಷೋಪಯುಕ್ತವಾಗಿರುವ ಆಚಾರನಿಷ್ಠಳಾದ,) ಶಬರೀಂ-ಶಬರಿಯನ್ನು ಕುರಿತು, ಅಭಿಗಚ್ಛ-ಹೋಗು, ಇತಿ - ಇಂತೆಂದು, (೨) ರಾಘವಂ - ಶ್ರೀರಾಮನನ್ನು ಕುರಿತು, ಕಥಯಾಮಾಸ ಹೇಳಿದನು ॥ ೫೬ ॥ ಮಹಾತೇಜಾಃ-ಮಹಾತೇಜಸ್ವಿಯಾದ, ಶತ್ರು ಸೂದನಃ-ಹಗೆಗಳನ್ನು ನಾಶಗೊಳಿಸುವ, ಸಃ ಆಶ್ರೀರಾಮನು, ಶಬರೀಂ-ಶಬರಿಯನ್ನು ಕುರಿತು, ಅಭ್ಯಗಚ್ಛತ್-ಹೋದನು ॥ ೫೭ ॥ ದಶರಥಾತ್ಮಜಃ - ದಶರಥಪುತ್ರನಾದ, ರಾಮಃ - ಶ್ರೀರಾಮನು, ಶಬರ್ಯಾ-ಶಬರಿಯಿಂದ, ಸಮ್ಯಕ್-ಚನ್ನಾಗಿ, ಪೂಜಿತಃ-ಪೂಜಿಸಲ್ಪಟ್ಟನು ॥೫೮॥ ಪಂಪಾತೀರೆ-ಪಂಪಾನದಿಯ ಸಮೀಪದಲ್ಲಿ,ವಾನರೇಣ-

ವನ್ನು ನೋಡಲು,ಆತನಿಂದ ರಾವಣನು ಸೀತಾದೇವಿಯನ್ನು ಅಪಹರಿಸಿದನೆಂಬುದನ್ನು ಕೇಳಿ, ಬಹಳವಾಗಿ ಸಂತಪಿಸುತ್ತಾ ವ್ಯಾಕುಲೇಂದ್ರಿಯನಾಗಿ, ಪರಿಪರಿಯಾಗಿ ವಿಲಪಿಸುತ್ತಿದ್ದನು ಆ ಬಳಿಕ ಜಟಾಯು ಮರಣದಿಂದ ಬಹಳ ಶೋಕಾಕ್ರಾಂತನಾಗಿ, ಅವನ ದಹನ ಕ್ರಿಯೆಯನ್ನು ಮಾಡಿ, ವನದಲ್ಲಿ ಸೀತಾದೇವಿಯನ್ನು ಹುಡುಕುತ್ತಾ, ವಿಕಾರ ರೂಪನಾಗಿಯೂ, ಭಯಂಕರವಾದ ದರ್ಶನವುಳ್ಳವನಾಗಿಯೂ ಇರುವ ಕಬಂಧನೆಂಬ ರಾಕ್ಷಸನನ್ನು ಕಂಡನು. ॥೫೫॥ ಆ ಸಮಯದಲ್ಲಿ, ಮಹಾಭುಜ ಪರಾಕ್ರಮವುಳ್ಳ ರಘುನಂದನನು ಆ ಕಬಂಧನನ್ನು ಹೊಡೆದು, ಅವನಿಂದಲೇ ಪ್ರಾರ್ಥಿತನಾಗಿ ದಹಿಸಲು, ಅವನು ಸ್ವರ್ಗವನ್ನು ಕುರಿತು ತೆರಳುವಕಾಲದಲ್ಲಿಂತೆಂದನು, “ ಎಲೈ ಶ್ರೀರಾಮನೆ ಗುರುಸೇವಾದಿ ಧರ್ಮಗಳನ್ನಾಚರಿಸುತ್ತಿರುವವಳೂ, ಚತುರ್ಥಾಶ್ರಮವಾದ ಭಿಕ್ಷುರೂಪಧರ್ಮವನ್ನಾಶ್ರಯಿಸಿದವಳೂ, ಸಾಮಾನ್ಯ,

ಟಿ॥ (೧) ಉಪಕಾರ ಸ್ಮೃತ್ಯಾಕ್ಷಣ ಮಾಕಾಶೇ ಸ್ಥಿತ್ವಾ ॥ ಎಂದು ಗೋವಿಂದರಾಜೀಯವು (೨) “ರಾಘವ” ಎಂಬ ಪಾರದಲ್ಲಿ, ಹೇ ರಾಘವ ಎಲೈ ! ಶ್ರೀರಾಮನೆ ” ಶಬರೀಂ-ಶಬರಿಯನ್ನು ಕುರಿತು, ಅಭಿಗಚ್ಛ-ಹೋಗು, ಎಂದು ಅರ್ಥ ಮಾಡಬೇಕು.

ಸಂಗತೋ ವಾನರೇಣಹ। ಹನುಮದ್ವಚನಾಚ್ಚೈವ ಸುಗ್ರೀವೇಣ ಸಮಾಗತಃ॥ ೫೮ ॥ ಸುಗ್ರೀವಾಯಚತತ್ಸರ್ವಂ ಶಂಸದ್ರಾಮೋ ಮಹಾಬಲಃ। ಆದಿತ ಸ್ತದ್ಯಥಾವೃತ್ತಂ ಸೀತಾಯಾಶ್ಚವಿಶೇಷತಃ ॥ ೫೯॥ ಸುಗ್ರೀವಶ್ಚಾಪಿ ತತ್ಸರ್ವಂ ಶ್ರುತ್ವಾ ರಾಮಸ್ಯ ವಾನರಃ । ಚಕಾರಸಖ್ಯಂ ರಾಮೇಣ ಪ್ರೀತಶ್ಚೈವಾಗ್ನಿಸಾಕ್ಷಿಕಂ ॥ ೬೦॥ ॥ ತತೋವಾನರರಾಜೇನವೈರಾನುಕಥನಂಪ್ರತಿ । ರಾಮಾಯಾ ವೇದಿತಂಸರ್ವಂ ಪ್ರಣಯಾದ್ದುಃಖಿತೇನಚ ॥ ೬೧ ॥ ಪ್ರತಿಜ್ಞಾತಂಚರಾಮೇಣ ತದಾವಾಲಿವಧಂಪ್ರತಿ। ವಾಲಿನಶ್ಚ ಬಲಂತತ್ರ ಕಥಯಾಮಾಸ

---

ಕಪಿಯಾದ, ಹನುಮತಾ-ಅಂಜನೇಯನೊಡನೆ, ಸಂಗತಃ-ಸೇರಿದನು, ಹಾ ಆಶ್ಚರ್ಯವು. ॥ ೫೮ ॥ ಹನುಮದ್ವಚನಾತ್- ಅಂಜನೇಯನ ಮಾತಿನಿಂದ, ಸುಗ್ರೀವೇಣಚ - ಸುಗ್ರೀವನೊಡನೆಯೂ, ಸಮಾಗತಃ-ಸೇರಿದನು. ॥ ೫೮॥ ॥ (೧) ಮಹಾಬಲಃ - ಬಹಳ ಬಲಿಷ್ಠನಾದ, ರಾಮಃ - ಶ್ರೀರಾಮನು, ಆದಿತಃ - ಹುಟ್ಟಿದ್ದು ಮೊದಲುಗೊಂಡು, ತತ್ - ಪ್ರಸಿದ್ಧವಾದ, ಸರ್ವಂ - ಸಮಸ್ತವಾದ, ವೃತ್ತಂ-ತನ್ನ ವೃತ್ತಾಂತವನ್ನು, ಸುಗ್ರೀವಾಯ - ಸುಗ್ರೀವನಿಗೆ, ಶಂಸತ್ - ಹೇಳಿದನು, ಸೀತಾಯಾಃ - ಸೀತಾದೇವಿಯ, ತದ್ವೃತ್ತಂಚ - ಆ ರಾವಣನಿಂದ ಅಪಹರಿಸಲ್ಪಟ್ಟ ವೃತ್ತಾಂತವನ್ನು; ಯಥಾವೃತ್ತಂ - ಹೇಗೆನಡೆಯಿತೋ ಹಾಗೆ, ವಿಶೇಷತಃ - ವಿಶೇಷವಾಗಿ, ಶಂಸತ್ - ಹೇಳಿದನು. ॥ ೫೯॥ ॥ ವಾನರಃ - ಕಪಿಯಾದ, ಸುಗ್ರೀವಶ್ಚಾಪಿ - ಸುಗ್ರೀವನೂ ಕೂಡ, ರಾಮಸ್ಯ-ಶ್ರೀರಾಮನ ಸಂಬಂಧವಾದ, ತತ್ಸರ್ವಂ - ಆ ಪೂರ್ವೋಕ್ತವಾದ ವೃತ್ತಾಂತವನ್ನೆಲ್ಲ, ಶ್ರುತ್ವಾ-ಕೇಳಿ, ಪ್ರೀತಃ - ತನ್ನಂತೆಯೇ, ಸುಖದುಃಖಗಳುಳ್ಳ ಮಹಾಬಲವಂತನ ಸಂಬಂಧವು ಲಭಿಸಿತೆಂಬ ಸಂತೋಷವುಳ್ಳವನಾಗಿ, ಅಗ್ನಿಸಾಕ್ಷಿಕಮೇವ - ಅಗ್ನಿಸಾಕ್ಷಿಕವಾಗಿಯೇ, ರಾಮೇಣ - ರಾಮನೊಡನೆ, ಸಖ್ಯಂ- ಸ್ನೇಹವನ್ನು, ಚಕಾರ-ಮಾಡಿದನು. ॥ ೬೦॥ ॥ ತತಃ - ಸಖ್ಯವಾದಬಳಿಕ, ದುಃಖಿತೇನ - ದುಃಖವುಳ್ಳವನಾದ, ವಾನರರಾಜೇನ - ಸುಗ್ರೀವನಿಂದ, ವೈರಾನುಕಥನಂ -ವೈರ- ವಾಲಿವಿರೋಧಕ್ಕೆ, ಅನುಕಥನಂ- ಅನುಕೂಲವಾಗಿ ಹೇಳುವಿಕೆಯನ್ನು ಕುರಿತು, ಸರ್ವಂ - ಸಮಸ್ತವು, ಪ್ರಣಯಾತ್- ಸ್ನೇಹದಿಂದ, ರಾಮಾಯ - ಶ್ರೀರಾಮನಿಗೆ, ಆವೇದಿತಂ - ತಿಳಿಸಲ್ಪಟ್ಟಿತು. ॥ ೬೧ ॥ ತದಾ - ಆಗ, ತತ್ರ - ಆಋಷ್ಯಮೂಕ

---

ವಿಶೇಷ ಧರ್ಮಗಳನ್ನರಿತವಳೂ, ಜಿತೇಂದ್ರಿಯಳೂ, ಮೋಕ್ಷೋಪಯುಕ್ತವಾದ ಆಚಾರನಿಷ್ಠಳೂ,ಆಗಿರುವ ನಿನ್ನ ಭಕ್ತಳಾದ ಶಬರಿಯೆಂಬಾಕೆಯನ್ನು ಕುರಿತು ತೆರಳು" ಎಂದು ನುಡಿದನು. ಆಗ ಮಹಾ ತೇಜಸ್ವಿಯಾದ ಶ್ರೀರಾಮನು,ಶಬರಿಯ ಬಳಿಗೆ ಹೋಗಿ,ಆಕೆಯಿಂದ ಪೂಜಿತನಾಗಿ,ಪಂಪಾತೀರದಲ್ಲಿ ಹನುಮಂತನೊಡನೆಸೇರಿದನು.॥೫೮॥ಬಳಿಕ ಹನುಮದ್ವಚನದಿಂದ ಸುಗ್ರೀವನೊಡನೆ ಸೇರಿ, ಆತನಿಗೆ ತನ್ನ ವೃತ್ತಾಂತವನ್ನು ತಿಳಿಸಿದುದಲ್ಲದೆ, ರಾವಣನಿಂದಪಹೃತಳಾದ ಸೀತಾದೇವಿಯ ವೃತ್ತಾಂತವನ್ನು ವಿಶೇಷವಾಗಿ ತಿಳಿಸಿದನು ವಾನರನಾದ ಸುಗ್ರೀವನು ಅದನ್ನು ಕೇಳಿ, "ಇಂತಹ ಶೂರನ ಸಹವಾಸವು ಇಂದಿಗೆ ದೊರಕಿತಲ್ಲ!" ಎಂದು ಸಂತಸಗೊಂಡು, ರಾಮನೊಡನೆ ಅಗ್ನಿಸಾಕ್ಷಿಕವಾಗಿ ಸ್ನೇಹಮಾಡಿಕೊಂಡನು. ॥೬೦॥ಬಳಿಕ ರಾಮನು ಆ ವಾಲಿಯನ್ನು ಕುರಿತು, "ಎಲೈ ಸುಗ್ರೀವನೆ ! ವಾಲಿಯೊಡನೆ ನಿನಗೆ ವೈರಬರುವದಕ್ಕೆ

---

ಟಿ॥ ಈ ಶ್ಲೋಕದಲ್ಲಿ ಮಹಾಬಲಃ- ಎಂಬದಾಗಿ ವಿಶೇಷಣವಿರುವುದರಿಂದ ಅಸಹಾಯನಾಗಿ ತನ್ನ ಸಾಮರ್ಥ್ಯದಿಂದಲೇ ಸರ್ವಕಾರ್ಯನಿರ್ವಾಹಕತ್ವ ಶಕ್ತಿಯುಳ್ಳವನಾದರೂ,ಲೋಕರೀತಿಯನ್ನನುಸರಿಸಿ ಈ ಸಮಸ್ತವನ್ನು ಸುಗ್ರೀವನಿಗೆ ತಿಳಿಸಿದನೆಂಬ ಭಾವವು.

ವಾನರಃ ॥ ೬೨॥ ॥ ಸುಗ್ರೀವಶ್ಶಂಕಿತಶ್ಚಾಸೀನ್ನಿತ್ಯಂ ವೀರ್ಯೇಣರಾಘವೇ ॥ ೬೩ ॥ ರಾಘವಪ್ರತ್ಯಯಾರ್ಥಂತು ದುಂದುಭೇಃಕಾಯಮುತ್ತಮಂ। ದರ್ಶಯಾಮಾಸ ಸುಗ್ರೀವೋ ಮಹಾಪರ್ವತಸನ್ನಿಭಂ ॥ ೬೪ ॥ ಉತ್ಸ್ಮಯಿತ್ವಾ ಮಹಾಬಾಹುಃ ಪ್ರೇಕ್ಷ್ಯಚಾಸ್ಥಿಮಹಾಬಲಃ। ಪಾದಾಂಗುಷ್ಠೇನ ಚಿಕ್ಷೇಪ ಸಂಪೂರ್ಣಂ ದಶಯೋಜನಂ ॥ ೬೫ ॥

---

ಪರ್ವತದಲ್ಲಿ, ವಾಲಿವಧಂಪ್ರತಿ - ವಾಲಿಸಂಹಾರವನ್ನು ಕುರಿತು, ರಾಮೇಣ - ರಾಮನಿಂದ, ಪ್ರತಿಜ್ಞಾತಂ - ಪ್ರತಿಜ್ಞೆ ಮಾಡಲ್ಪಟ್ಟಿತು, ವಾನರಶ್ಚ - ಸುಗ್ರೀವನೂ ಕೂಡ, ವಾಲಿನಃ - ವಾಲಿಯ, ಬಲಂ - ಬಲವನ್ನು, ಕಥಯಾಮಾಸ - ಹೇಳಿದನು ॥೬೨॥ (ಅಪಿಚ- ಇಷ್ಟೆಯಲ್ಲದೆ,) ಸುಗ್ರೀವಃ- ಸುಗ್ರೀವನು, ರಾಘವೇ - ರಾಮನ ವಿಷಯದಲ್ಲಿ, ವೀರ್ಯೇಣ - ವೀರ್ಯರೂಪವಾದ ಹೇತುವಿನಿಂದ, ನಿತ್ಯಂ- ಬಾರಿಬಾರಿಗೂ, (ಅಥವಾ ಶ್ರೀರಾಮನು ಸಾಲವೃಕ್ಷವನ್ನು ಭೇದಿಸುವವರಿವಿಗೂ,) ಶಂಕಿತಃಆಸೀತ್- ಸಂಶಯಗೊಂಡವನಾದನು ॥೬೩॥ (ಕಿಂತು - ಮತ್ತೇನೆಂದರೆ,) ರಾಘವಪ್ರತ್ಯಯಾರ್ಥಂ ಶ್ರೀರಾಮನಲ್ಲಿ ನಂಬಿಕೆಯುಂಟಾಗಲೋಸುಗ, ಸುಗ್ರೀವಃ - ಸುಗ್ರೀವನು, ಮಹಾಪರ್ವತಸನ್ನಿಭಂ - ದೊಡ್ಡಬೆಟ್ಟಕ್ಕೆ ಸಮನಾದ, ದುಂದುಭೇಃ = ದುಂದುಭಿಯೆಂಬ ರಾಕ್ಷಸನ, ಉತ್ತಮಂ - ಶಿಥಿಲವಾಗದೆ ಇರುವ, ಕಾಯಂ - ಶರೀರವನ್ನು, ದರ್ಶಯಾಮಾಸ ತೋರಿದನು. ॥೬೪॥ ಮಹಾಬಾಹುಃ- ಅತಿಶಯವಾದ ಭುಜಪರಾಕ್ರಮವುಳ್ಳ, ಮಹಾಬಲಃ - ಅಪರಿಮಿತವಾದ ಬಲವುಳ್ಳಶ್ರೀರಾಮನು, ಉತ್ಸ್ಮಯಿತ್ವಾ - ಮುಗುಳ್ನಗೆಗೊಂಡು, ಅಸ್ಥಿಚ- ಎಲುಬುಗಳರೂಪವಾಗಿರುವ ಶರೀರವನ್ನು, ಪ್ರೇಕ್ಷ್ಯ- ನೋಡಿ, ಸಂಪೂರ್ಣಂ - ಕಡಿಮೆಯಿಲ್ಲದಿರುವ, ದಶಯೋಜನಂ- ಹತ್ತುಗಾವುದಪರಿಯಂತ, ಪಾದಾಂಗುಷ್ಠೇನ - ಕಾಲಿನ ಹೆಬ್ಬೆಟ್ಟಿನಿಂದ ಚಿಕ್ಷೇಪ - ಚಿಮ್ಮಿದನು. ॥೬೫॥ ತದಾ - ಆಗ, ಪುನಃ -

---

ಕಾರಣವೇನು" ಎಂದು ಕೇಳಿದನು ಆಗಲಾ ಸುಗ್ರೀವನು ಬಹಳವಾಗಿ ದುಃಖಗೊಂಡು ತನಗೂ ತನ್ನ ಅಣ್ಣನಾದ ವಾಲಿಗೂ, ಇದ್ದ ಹಗತನಕ್ಕೆ ಕಾರಣವನ್ನು ಹೇಳಿದನು. ಆಗ ಶ್ರೀರಾಮನು ವಾಲಿಯ ಸಂಹಾರಕ್ಕಾಗಿ ಪ್ರತಿಜ್ಞೆ ಮಾಡಿದನು. ಬಳಿಕ ಋಷ್ಯಮೂಕ ಪರ್ವತದಲ್ಲಿದ್ದ ಸುಗ್ರೀವನು ವಾಲಿಯ ಬಲವನ್ನೆಲ್ಲ ಹೇಳಿದುದಲ್ಲದೆ, ಅವನ ಪರಾಕ್ರಮವನ್ನರಿತವನಾದ ಕಾರಣ, ಆ ವಾಲಿಯನ್ನು ಕೊಲ್ಲುವ ಶಕ್ತಿಯು ಶ್ರೀರಾಮನಿಗಿರುವುದೋ, ಇಲ್ಲವೋ, ಎಂದು ಬಾರಿಬಾರಿಗೂ ಸಂದೇಹಪಡುತ್ತಾ, ರಾಮನ ಬಲವನ್ನರಿಯಲೋಸುಗ ವಾಲಿಯಿಂದ ಹತನಾದ "ದುಂದುಭಿ"ಎಂಬ ರಾಕ್ಷಸನ ಬೆಟ್ಟದಂತಹ ಶರೀರವನ್ನು ತೋರಿಸಿ, "ರಾಮಾ! ಈ ದೇಹವು ನಮ್ಮಣ್ಣನಾದ ವಾಲಿಯಿಂದ ಪಾದಮಾತ್ರದಿಂದಲೇ ಇನ್ನೂರು ಧನುಸ್ಸುಗಳ ದೂರದ ವರೆವಿಗೂ ಎಸೆಯಲ್ಪಟ್ಟಿತು" ಎಂದು ಹೇಳಿದನು. ॥ ೬೪ ॥ (೧) ಲೋಕಕಂಟಕರಾದ ರಕ್ಕಸರೆಲ್ಲರನ್ನು ಉಗುರಿನ ತುದಿಯಿಂದಲೇ ಕೊಲ್ಲುವ ಭುಜಪರಾಕ್ರಮವುಳ್ಳ ಶ್ರೀರಾಮನು,ಅಸ್ಥಿರೂಪವಾಗಿದ್ದ ಆ ದುಂದುಭಿಯ ಶರೀರವನ್ನು ಕಂಡು ಮುಗುಳ್ನಗೆಯಿಂದ ಆ ದೇಹವನ್ನು ಕಾಲಿನ ಹೆಬ್ಬೆಟ್ಟಿನಿಂದ ಚಿಮ್ಮಿದನು. ಆಗಲಾ ದೇಹವು ಹತ್ತು ಗಾವುವದಷ್ಟು ದೂರಹೋಗಿ ಬಿದ್ದಿತು. ॥ ೬೫ ॥ ಸುಗ್ರೀವನಿದನ್ನು ನೋಡಿ

---

ಟಿ॥ (೧) ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವ ರಾಕ್ಷಸಾನ್ । ಅಂಗುಳ್ಯಗ್ರೇಣ ತಾನ್ಹನ್ಯಾಮಿಚ್ಛನ್ ಹರಿಗಣೇಶ್ವರ ॥ ಎಂದು ಯುದ್ಧಕಾಂಡದಲ್ಲಿ ಶ್ರೀರಾಮನ ವಚನವಿರುವುದು." ಆದುದರಿಂದಲೆ ಇಲ್ಲಿ ಹೀಗೆ ಹೇಳಲಾಯಿತು,

ಬಿಭೇದಚ ಪುನಸ್ಸಾಲಾನ್ ಸಪ್ತೈಕೇನಮಹೇಷುಣಾ। ಗಿರಿಂ ರಸಾತಲಂಚೈವ ಜನಯನ್ ಪ್ರತ್ಯಯಂತದಾ ||೬೬|| ತತಃಪ್ರೀತಮನಾಸ್ತೇನ ವಿಶ್ವಸ್ತಸ್ಸಮಹಾಕಪಿಃ। ಕಿಷ್ಕಿಂಧಾಂ ರಾಮಸಹಿತೋ ಜಗಾಮಚ ಗುಹಾಂತದಾ ||೬೭|| ತತೋಽಗರ್ಜದ್ಧರಿವರಸ್ಸುಗ್ರೀವೋ ಹೇಮಪಿಂಗಳಃ। ತೇನನಾದೇನಮಹತಾನಿರ್ಜಗಾಮಹರೀಶ್ವರಃ||೬೮|| ಅನುಮಾನ್ಯತದಾ ತಾರಾಂ ಸುಗ್ರೀವೇಣ ಸಮಾಗತಃ|| ನಿಜಘಾನಚ ತತ್ರೈನಂ ಶರೇಣೈಕೇನ ರಾಘವಃ ||೬೯|| ತತಸ್ಸುಗ್ರೀವವಚನಾದ್ಧತ್ವಾವಾಲಿನಮಾಹವೇ || ಸುಗ್ರೀವ ಮೇವತದ್ರಾಜ್ಯೇ

---

ತಿರುಗಿ, ಪ್ರತ್ಯಯಂ - ನಂಬಿಕೆಯನ್ನು, ಜನಯನ್- ಹುಟ್ಟಿಸುವವನಾಗಿ, ಸಪ್ತಸಾಲಾನ್ - ಏಳುಮದ್ದೀಮರಗಳನ್ನು, ಗಿರಿಂ - ಅವುಗಳ ಸಮೀಪದಲ್ಲಿರುವ ಪರ್ವತವನ್ನು, ರಸಾತಲಂಚ - ಪಾತಾಳಲೋಕವನ್ನೂ, ಏಕೇನ ಒಂದಾದ, ಮಹೇಷುಣಾ - ತೀಕ್ಷ್ಣವಾದ ಬಾಣದಿಂದ, ಬಿಭೇದ - ಭೇದಿಸಿದನು. ||೬೬|| ತತಃ - ಬಳಿಕ, ತೇನ - ಆಕೃತ್ಯದಿಂದ, ವಿಶ್ವಸ್ತಃ - ನಂಬಿಕೆಗೊಂಡ, ಪ್ರೀತಮನಾಃ- ಸಂತಸಗೊಂಡ ಮನಸ್ಸುಳ್ಳ, ಸಮಹಾಕಪಿಃ - ಆ ಮಹಾತ್ಮನಾದ ಸುಗ್ರೀವನು, ತದಾ - ಆ ಕಾಲದಲ್ಲಿ, ಕಿಷ್ಕಿಂಧಾನ್ - ಕಿಷ್ಕಿಂಧವೆಂಬ, ಗುಹಾಂ - ಪರ್ವತ ಮಧ್ಯದಲ್ಲಿರುವ ಪಟ್ಟಣವನ್ನು ಕುರಿತು, ರಾಮಸಹಿತಃ - ಶ್ರೀರಾಮನೊಡನೆ, ಜಗಾಮ ಹೊರಟನು. ||೬೭|| ತತಃ - ಕಿಷ್ಕಿಂಧೆಗೆ ಬಂದಮೇಲೆ, ಹರಿವರಃ - ಕಪಿಶ್ರೇಷ್ಠನಾದ,ಹೇಮಪಿಂಗಳಃ - ಚಿನ್ನದಂತೆ ಪಿಂಗಳವರ್ಣವುಳ್ಳ, ಸುಗ್ರೀವಃ - ಸುಗ್ರೀವನು, ಅಗರ್ಜತ - ಅಬ್ಬರಿಸಿದನು ||೬೮|| ತದಾ - ಆಗ, ತಾರಾಂ - ತಾರೆಯನ್ನು, ಅನುಮಾನ್ಯ - ಸಮ್ಮತಪಡಿಸಿ, ಸುಗ್ರೀವೇಣ - ಸುಗ್ರೀವನೊಡನೆ, ಸಮಾಗತಃ - ಸೇರಿದನು. (ತತ್ರ - ಆ ಸುಗ್ರೀವ ವಾಲಿ ಇವರು ಸೇರಿದ ಸ್ಥಳದಲ್ಲಿ, ಏನಂ- ಈ ವಾಲಿಯನ್ನು, ಏಕೇನ ಶರೇಣ - ಒಂದೇ ಬಾಣದಿಂದ, ನಿಜಘಾನ - ಹೊಡೆದನು. ||೬೯|| ತತಃ - ಬಳಿಕ, ಸುಗ್ರೀವವಚನಾತ್ - ಸುಗ್ರೀವನ ಪ್ರಾರ್ಥನೆಯಿಂದ, ಆಹವೇ - ಯುದ್ಧದಲ್ಲಿ, ವಾಲಿನಂಹತ್ವಾ - ವಾಲಿಯನ್ನು

---

"ವಾಲಿಯು ಬಹುಕಾಲ ಯುದ್ಧಮಾಡಿ ಬಹಳವಾಗಿ ಬಳಲಿ, ಅಪ್ರೀತಿಯಿಂದ ಭಾರವಾಗಿದ್ದ ಈ ದೇಹವನ್ನು ಬಿಸುಟನು. ಈಗಿದು ಒಣಗಿರುವುದರಿಂದ ಹಗುರವಾಗಿರುವುದು. ಇದನ್ನಿಷ್ಟು ದೂರ ಚಿಮ್ಮುವುದು ಹೆಚ್ಚಿನ ಕೆಲಸವಲ್ಲ." ಎಂದು ಸಂಶಯಪಡುತ್ತಿದನು. ಆಗಲಾ ರಾಮನು ಮರಳಿ ಸುಗ್ರೀವನಿಗೆ ನಂಬಿಕೆಯನ್ನುಂಟುಮಾಡಲೋಸುಗ ಸಾಲವೃಕ್ಷಕ್ಕೆ ಗುರಿಯಿಟ್ಟು ಒಂದು ಬಾಣವನ್ನೆಸೆಯಲು, ಅದು ಸಪ್ತಸಂಖ್ಯಾತವಾದ ಆ ಸಾಲವೃಕ್ಷಗಳನ್ನೂ ಅದರ ಬಳಿ ಇರುವ ಪರ್ವತವನ್ನೂ, ರಸಾತಲವನ್ನೂ ಸಹ ಭೇದಿಸಿತು ||೬೬||

ಆಗಲಾ ವಾನರನಾದ ಸುಗ್ರೀವನು ಶ್ರೀರಾಮನು ಮಾಡಿದ ಸಾಹಸ ಕಾರ್ಯಗಳಿಂದ ಅವನಲ್ಲಿನಂಬಿಗೆಗೊಂಡು ಸ್ವಸ್ಥಚಿತ್ತನಾಗಿ ಆಕ್ಷಣದಲ್ಲಿಯೇ ಶ್ರೀರಾಮನೊಡನೆ ಸಂತೋಷವಾಗಿ ಕಿಷ್ಕಿಂಧಾಪಟ್ಟಣವನ್ನು ಸೇರಿ ಸಿಂಹನಾದವನ್ನು ಮಾಡಿದನು ||೬೭|| ಆ ಸಮಯದಲ್ಲಿ ಕಪಿರಾಜನಾದ ವಾಲಿಯು ಸುಗ್ರೀವನ ಗರ್ಜನೆಯನ್ನು ಕೇಳಿ, ಯುದ್ಧಕ್ಕಾಗಿ ಹೊರಡಲು, ಆತನ ಹೆಂಡತಿಯಾದ ತಾರಾದೇವಿಯು ಹೊರಡಲಾಗದೆಂದು ತಡೆದಳು ಆಕೆಯನ್ನು ಸಮಾಧಾನಪಡಿಸಿ, ಮುಂಬರಿದು ಸುಗ್ರೀವನೊಡನೆ ಸೇರಿ, ಯುದ್ಧಮಾಡುತ್ತಿದ್ದ ಆ ವಾಲಿಯನ್ನು ರಾಮನು ಒಂದೇಒಂದು ಬಾಣದಿಂದ ಹೊಡೆದನು. ||೬೯|| ಬಳಿಕಲಾ ರಾಮ

ರಾಘವಃ ಪ್ರತ್ಯಪಾದಯತ್ ||೭೦|| ಸಚಸರ್ವಾನ್ ಸಮಾನೀಯ ವಾನರಾನ್ ವಾನರರ್ಷಭಃ | ದಿಶಃಪ್ರಸ್ಥಾಪಯಾಮಾಸದಿದೃಕ್ಷುರ್ಜನಕಾತ್ಮಜಾಂ ||೭೧|| ತತೋಗೃಧ್ರಸ್ಯವಚನಾತ್ಸಂಪಾತೇರ್ಹನುಮಾನ್ಬಲೀ| ಶತಯೋಜನವಿಸ್ತೀರ್ಣಂಪುಪ್ಲುವೇಲವಣಾರ್ಣವಂ|| ತತ್ರ ಲಂಕಾಂ ಸಮಾಸಾದ್ಯ ಪುರೀಂ ರಾವಣಪಾಲಿತಾಂ| ದದರ್ಶ ಸೀತಾಂ ಧ್ಯಾಯಂತೀಮಶೋಕವನಿಕಾಂಗತಾಂ ||೭೩|| ನಿವೇದಯಿತ್ವಾಽಭಿಜ್ಞಾನಂ ಪ್ರವೃತ್ತಿಂಚ ನಿವೇದ್ಯಚ|| ಸಮಾಶ್ವಾಸ್ಯಚ ವೈದೇಹೀಂ ಮರ್ದಯಾಮಾಸ ತೋರಣಂ||೭೪|| ಪಂಚಸೇನಾಗ್ರಗಾನ್

ಕೊಂದು, ತದ್ರಾಜ್ಯೇ - ಆ ವಾಲಿಯ ರಾಜ್ಯದಲ್ಲಿ, ರಾಘವ - ಶ್ರೀರಾಮನು, ಸುಗ್ರೀವಮೇವ - ಸುಗ್ರೀವನನ್ನೇ, ಪ್ರತ್ಯಪಾದಯತ - ಸ್ಥಾಪಿಸಿದನು. || ೭೦ || ಸವಾನರರ್ಷಭಃ - ಆ ಕಪಿಶ್ರೇಷ್ಠನಾದ ಸುಗ್ರೀವನು, ಜನಕಾತ್ಮಜಾಂ - ಜನಕಮಹಾರಾಜನ ಮಗಳಾದ ಸೀತೆಯನ್ನು, ದಿದೃಕ್ಷುಃ- ನೋಡಲಿಚ್ಛಿಸಿ, ಸರ್ವಾನ್ - ಸಮಸ್ತರಾದ, ವಾನರಾನ್ - ಕಪಿಗಳನ್ನು, ಸಮಾಹೂಯ - ಕರೆದು, ದಿಶಃ - ದಿಕ್ಕುಗಳನ್ನು ಕುರಿತು, ಪ್ರಸ್ಥಾಪಯಾಮಾಸ - ಕಳುಹಿದನು. ||೭೧|| ತತಃ - ಕಪಿಗಳು ಹೊರಟನಂತರ, ಗೃಧ್ರಸ್ಯ - ಗೃಧ್ರನಾದ, ಸಂಪಾತೇಃ - ಸಂಪಾತಿಯ, ವಚನಾತ್ - ಮಾತಿನಿಂದ, ಬಲೀ-ಬಲಿಷ್ಠನಾದ, ಹನುಮಾನ್-ಆಂಜನೇಯನು, ಶತಯೋಜನ ವಿಸ್ತೀರ್ಣಂ - ನೂರುಯೋಜನ ಅಗಲವುಳ್ಳ, ಲವಣಾರ್ಣವಂ-ಲವಣಸಮುದ್ರವನ್ನು, ಪುಪ್ಲುವೇ ಹಾರಿದನು || ೭೨ || ರಾವಣಪಾಲಿತಾಂ-ರಾವಣನಿಂದ ಕಾಪಾಡಲ್ಪಡುವ, ಲಂಕಾಪುರೀಂ-ಲಂಕಾಪಟ್ಟಣವನ್ನು, ಸಮಾಸಾದ್ಯ-ಹೊಂದಿ, ತತ್ರ-ಆ ಪಟ್ಟಣದಲ್ಲಿ, ಅಶೋಕವನಿಕಾಂ ಗತಾಂ-ರಾವಣನ ಉದ್ಯಾನವನವಾದ ಅಶೋಕವನ್ನು ಹೊಕ್ಕು, ಧ್ಯಾಯಂತೀಂ-ಶ್ರೀರಾಮನನ್ನೇ ಧ್ಯಾನಿಸುತ್ತಿರುವ, ಸೀತಾಂ-ಸೀತಾದೇವಿಯನ್ನು, ದದರ್ಶ-ಕಂಡನು. || ೭೩ || ಅಭಿಜ್ಞಾನಂ-ಅಂಗುಳಿಯರೂಪವಾದ ಹೆಗ್ಗುರತನ್ನು, ನಿವೇದಯಿತ್ವಾ - ಸಮರ್ಪಿಸಿ, ಪ್ರವೃತ್ತಿಂಚ-ರಾಮವೃತ್ತಾಂತವನ್ನು ಕೂಡ, ನಿವೇದ್ಯಚ-ಅರಿಕೆ ಮಾಡಿದ್ದೂ ಅಲ್ಲದ, ವೈದೇಹೀಂಚ-ಸೀತಾದೇವಿಯನ್ನು ಕೂಡಾ, ಸಮಾಶ್ವಾಸ್ಯ - ಸಮಾಧಾನಗೊಳಿಸಿ, ತೋರಣಂ - ಅಶೋಕವನದ ಹೊರಬಾಗಿಲನ್ನು, ಮರ್ದಯಾಮಾಸ - ಮರ್ದಿಸಿದನು. || ೭೪ || ಪಂಚ-ಸೇನಾಗ್ರಗಾನ್ (ಗೊ) ಸೇನೆಯ ಮುಂಭಾಗದಲ್ಲಿ ಹೋಗತಕ್ಕ ಐದುಮಂದಿಯನ್ನು (ಅಥವ=

ಚಂದ್ರನು, ಸುಗ್ರೀವನ ಪ್ರಾರ್ಥನೆಯಂತೆ ಆ ವಾಲಿಯನ್ನು ಸಂಹರಿಸಿ, ಅವನ ರಾಜ್ಯದಲ್ಲಿ ಸುಗ್ರೀವನಿಗೇ ಪಟ್ಟಾಭಿಷೇಕವನ್ನು ಮಾಡಿದನು. || ೭೦ || ಆ ಬಳಿಕ ಕಪಿರಾಜನಾದ ಸುಗ್ರೀವನು ಜಾನಕಿಯನ್ನು ನೋಡಲಿಚ್ಛಿಸಿ, ಕಪಿಗಳೆಲ್ಲರನ್ನೂ ಕರೆದು, ಎಲ್ಲ ದಿಕ್ಕುಗಳಿಗೂ ಕಳುಹಿದನು. ||೭೧|| ಆಗ ಬಹು ಬಲವಂತನಾದ ಹನುಮಂತನು ಸಂಪಾತಿಯೆಂಬ ಗೃಧ್ರರಾಜನ ಮಾತಿನಂತೆ ನೂರು ಯೋಜನ ವಿಸ್ತಾರವುಳ್ಳ ಲವಣಸಮುದ್ರವನ್ನು ದಾಂಟಿ ದಶಕಂಠನು ಪಾಲಿಸುತ್ತಿದ್ದ ಲಂಕಾಪಟ್ಟಣವನ್ನು ಸೇರಿದನು. ಅನಂತರ ಅಶೋಕವನದಲ್ಲಿರುವವಳೂ, ಯಾವಾಗಲೂ ರಾಮನನ್ನೇ ಧ್ಯಾನಿಸುತ್ತಿರುವವಳೂ ಆದ ಸೀತಾದೇವಿಯನ್ನು ನೋಡಿ, ಅಂಗುಳೀಯಕವಾದ ರಾಮನ ಗುರುತನ್ನೂ, ರಾಮನಿಗೂ ಸುಗ್ರೀವನಿಗೂ ಆದ ಸ್ನೇಹವೇ ಮೊದಲಾದ ವೃತ್ತಾಂತವನ್ನೂ ತಿಳಿಸಿ ಆಕೆಯನ್ನು ಸಮಾಧಾನಗೊಳಿಸಿ ಆ ಅಶೋಕವನವನ್ನೂ ಮತ್ತು ಅದರ ಹೊರಬಾಗಿಲನ್ನೂ ಧ್ವಂಸಮಾಡಿಸಿದನು. ||೭೪||

ಹತ್ವಾ ಸಪ್ತಮಂತ್ರಿ ಸುತಾನಪಿ । ಶೂರಮಕ್ಷಂಚ ನಿಷ್ಪಿಷ್ಯ ಗ್ರಹಣಂ ಸಮುಪಾಗಮತ್ ॥ ೭೫॥ ಅಸ್ತ್ರೇಣೋನ್ಮುಕ್ತಮಾತ್ಮಾನಂ ಜ್ಞಾತ್ವಾ ಪೈತಾಮಹಾದ್ವರಾತ್। ಮರ್ಷಯನ್ರಾಕ್ಷಸಾನ್ವೀರೋ ಯಂತ್ರಿಣಸ್ತಾನ್ಯದೃಚ್ಛಯಾ । ತತೋದಗ್ಧ್ವಾಪುರೀಂ ಲಂಕಾಮೃತೇಸೀತಾಂಚ ಮೈಥಿಲೀಂ ॥ ರಾಮಾಯಪ್ರಿಯಮಾಖ್ಯಾತುಂ ಪುನರಾಯಾನ್ಮಹಾಕಪಿಃ ॥೭೭॥ ಸೋಭಿಗಮ್ಯ ಮಹಾತ್ಮಾನಂ ಕೃತ್ವಾರಾಮಂ ಪ್ರದಕ್ಷಿಣಂ। ನ್ಯವೇದಯದಮೇಯಾತ್ಮಾ ದೃಷ್ಟ್ವಾ ಸೀತೇತಿತತ್ವತಃ ॥೭೮॥ ತತಸ್ಸುಗ್ರೀವಸಹಿತೋ ಗತ್ವಾ

ಪಂಚ-ಪಿಂಗಳವರ್ಣವುಳ್ಳ ಜಂಬುಮಾಲಿಮೇ ಮುಂತಾದವರನ್ನು) ಸಪ್ತಮಂತ್ರಿಸುತಾನಪಿ-ಏಳು ಮಂದಿ ಮಂತ್ರಿಪುತ್ರರನ್ನು, ಶೂರಂ ವೀರನಾದ, ಅಕ್ಷಂಚ- ಅಕ್ಷಕುಮಾರನನ್ನು, ನಿಷ್ಪಿಷ್ಯ-ಚೂರ್ಣಮಾಡಿ, ಗ್ರಹಣಂ-ಇಂದ್ರಜಿತ್ತುವು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಬಂಧನವನ್ನು, ಸಮುಪಾಗಮತ್ ಹೊಂದಿದನು. ॥ ೭೫ ॥ ವೀರಃ - ಪರಾಕ್ರಮಿಯಾದ, ಮಹಾಕಪಿಃ - ಕಪಿಶ್ರೇಷ್ಠನಾದ ಆಂಜನೇಯನು, ಪೈತಾಮಹಾತ್-ಬ್ರಹ್ಮಸಂಬಂಧವಾದ, ವರಾತ್-ವರದಿಂದ, ಆತ್ಮಾನಂ-ತನ್ನನ್ನು ಅಸ್ತ್ರೇಣ-ಬ್ರಹ್ಮಾಸ್ತ್ರದಿಂದ, ಉನ್ಮುಕ್ತಂ-ಬಿಡಲ್ಪಟ್ಟವನಾಗಿ, ಜ್ಞಾತ್ವಾ-ತಿಳಿದು, ಯಂತ್ರಿಣಃ-ಕಟ್ಟಿ ಹಾಕಿದ, ತಾನ್‌ರಾಕ್ಷಸಾನ್-ಆ ರಕ್ಕಸರನ್ನು, ಮರ್ಷಯನ್-ಕ್ಷಮಿಸಿ, ತತಃ-ಬಳಿಕ, ಮೈಥಿಲೀಂ ಜನಕ ಕುವರಿಯಾದ, ಸೀತಾಂಋತೆ-ಸೀತಾದೇವಿಯನ್ನು ಬಿಟ್ಟು, ಲಂಕಾಪುರೀಂಚ-ಲಂಕಾ ಪಟ್ಟಣವನ್ನು, ಯದೃಚ್ಛಯಾ-ಇಷ್ಟಬಂದ ಹಾಗೆ, ದಗ್ಧ್ವಾ-ಸುಟ್ಟು, ರಾಮಾಯ-ರಾಮನಿಗೆ, ಪ್ರಿಯಂ-ಸೀತಾದರ್ಶನ ರೂಪವಾದ, ಹಿತವಾಕ್ಯನ್ನು, ಆಖ್ಯಾತುಂ-ಹೇಳಲು, ಪುನರಾಯಾತ್-ಹಿಂದಿರುಗಿ ಬಂದನು.॥ ೭೭ ॥ ಅಮೇಯಾತ್ಮಾ-(ಗೊ) ಅತಿಶಯವಾದ ಬುದ್ಧಿಯುಳ್ಳ, (ಮ) ಕುಂದಿಲ್ಲದ ಧೈರ್ಯವುಳ್ಳ, ಸಃ-ಆ ಆಂಜನೇಯನು, ಮಹಾತ್ಮಾನಂ-ಪರಮಾತ್ಮನಾದ, (ಗೊ) ಸೀತೆಯಿಂದ ವಿರಹಿತನಾಗಿದ್ದರೂ ಅಚಲವಾದ ಧೈರ್ಯವುಳ್ಳ, ರಾಮಂ-ಶ್ರೀರಾಮನನ್ನು, ಪ್ರದಕ್ಷಿಣಂ ಕೃತ್ವಾ-ಪ್ರದಕ್ಷಿಣ ನಮಸ್ಕಾರ ಮಾಡಿ, ಸೀತಾ-ಸೀತಾದೇವಿಯು, ದೃಷ್ಟ್ವಾ-ನೋಡಲ್ಪಟ್ಟಳು. ಇತಿ-ಇಂತೆಂದು, ತತ್ವತಃ-ಯಥಾರ್ಥವನ್ನು. ನ್ಯವೇದಯತ್-ಬಿನ್ನವಿಸಿದನು. ॥೭೮॥ ತತಃ-ಹನುಮಂತನ ಮಾತನ್ನು ಕೇಳಿದ ಬಳಿಕ, ಸುಗ್ರೀವಸಹಿತಸ್ಸನ್-ಸುಗ್ರೀವನಿಂದೊಡಗೂಡಿ, ಮಹೋದಧೇಃ-ಅಪಾರವಾದ ಸಮುದ್ರದ, ತೀರಂ-ದಡವನ್ನು

ಆ ಬಳಿಕ ಸೇನಾನಾಯಕರೈವರನ್ನೂ ಏಳು ಮಂದಿ ಮಂತ್ರಿಸುತರನ್ನೂ, ರಾವಣನ ಮಗನೂ, ಶೂರನೂ ಆದ ಅಕ್ಷಕುಮಾರನನ್ನೂ ಸಂಹರಿಸಿದನು. ಆಗ ಇಂದ್ರಜಿತ್ತುವು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಕಟ್ಟುಬಿದ್ದ ಹನುಮಂತನು ಬ್ರಹ್ಮನ ವರದಿಂದ ಮರಳಿ ಬಿಡಲ್ಪಟ್ಟು, ತನ್ನನ್ನು ಬಂಧಿಸುತ್ತಿರುವ ರಕ್ಕಸರನ್ನೆಲ್ಲಾ ಕೊಲ್ಲುವ ಶಕ್ತಿಯು ತನ್ನಲ್ಲಿದ್ದರೂ ರಾವಣಾಸುರನನ್ನು ನೋಡಲೋಸುಗ ಅದನ್ನು ಸಹಿಸಿಕೊಂಡು ಅದಾದಮೇಲೆ ಸೀತಾದೇವಿಯನ್ನುಳಿದು ಲಂಕಾ ಪಟ್ಟಣವನ್ನೆಲ್ಲಾ ಸುಟ್ಟು ಬೂದಿಮಾಡಿ, ಆ ವೃತ್ತಾಂತವೆಲ್ಲವನ್ನು ರಾಮನಿಗರುಹಲು ಕಿಷ್ಕಿಂಧೆಗೆ ಹಿಂದಿರುಗಿ ಬಂದನು. ॥೭೭॥ ಇಂತು ಬಂದು ರಾಮನನ್ನು ಕಂಡು ಆತನಿಗೆ ಪ್ರದಕ್ಷಿಣ ಪೂರ್ವಕ ನಮಸ್ಕಾರವನ್ನು ಮಾಡಿ, "ಸೀತಾದೇವಿಯು ನನ್ನಿಂದ ನೋಡಲ್ಪಟ್ಟಳು." ಎಂದು ಹೇಳಿದನು, ॥೭೮॥ ಬಳಿಕ ಆ ರಾಮಚಂದ್ರನು ಸುಗ್ರೀವನೊಡಗೂಡಿ ಸಮುದ್ರತೀರವನ್ನು ಹೊಂದಿ ಪ್ರಾರ್ಥಿಸಲು ಆ ನದೀ

ತೀರಂ ಮಹೋದಧೇಃ । ಸಮುದ್ರಂ ಕ್ಷೋಭಯಾಮಾಸ ಶರೈರಾದಿತ್ಯಸನ್ನಿಭೈಃ ॥೭೯॥ ದರ್ಶಯಾಮಾಸ ಚಾತ್ಮಾನಂ ಸಮುದ್ರ ಸ್ಸರಿತಾಂಪತಿಃ । ಸಮುದ್ರವಚನಾಚ್ಚೈವ ನಲಂ ಸೇತುಮಕಾರಯತ್ ॥ ೮೦ ॥ ತೇನ ಗತ್ವಾ ಪುರೀಂ ಲಂಕಾಂ ಹತ್ವಾ ರಾವಣ ಮಾಹವೇ । ರಾಮಸ್ಸೀತಾಮನುಪ್ರಾಪ್ಯ ಪರಾಂವ್ರೀಡಾ ಮುಪಾಗಮತ್ ॥ ೮೧ ॥ ತಾಮುವಾಚ ತತೋ ರಾಮಃ ಪರುಷಂ ಜನಸಂಸದಿ । ಅಮೃಷ್ಯಮಾಣಾ ಸಾ ಸೀತಾ ವಿವೇಶಜ್ವಲನಂಸತೀ ॥ ೮೨ ॥ ತತೋಗ್ನಿವಚನಾತ್ಸೀತಾಂ ಜ್ಞಾತ್ವಾವಿಗತಕಲ್ಮಷಾಂ ।

---

ಗತ್ವಾ ಸೇರಿ, ಆದಿತ್ಯಸನ್ನಿಭೈಃ-ಸೂರ್ಯನಿಗೆಸಮನಾದ, ಶರೈಃ-ಬಾಣಗಳಿಂದ, ಸಮುದ್ರಂ-ಸಮುದ್ರವನ್ನು ಕ್ಷೋಭಯಾಮಾಸ - ಅಲ್ಲ ಕಲ್ಲೋಲ ಮಾಡಿದನು ॥ ೭೯ ॥ ಸರಿತಾಂಪತಿಃ - ನದಿಗಳಿಗೊಡೆಯ ನಾದ, ಸಮುದ್ರಶ್ಚ-ಸಮುದ್ರನೂ ಕೂಡ, ಆತ್ಮಾನಂ-ತನ್ನನ್ನು, ದರ್ಶಯಾಮಾಸ-ತೋರಿಸಿದನು. ಸಮುದ್ರವಚನಾದೇವ- ಆ ಸಮುದ್ರನ ಮಾತಿನಿಂದಲೇ, ನಲಂ-ನಲನಿಂದ, ಸೇತುಂ-ಸೇತುವೆಯನ್ನು, ಅಕಾರಯತ್-ಮಾಡಿಸಿದನು. ॥೮೦॥ ರಾಮಃ-ಶ್ರೀರಾಮನು, ಲಂಕಾಪುರೀಂ-ಲಂಕಾಪಟ್ಟಣವನ್ನು, ಗತ್ವಾ-ಹೊಂದಿ, ಆಹವೇ-ಯುದ್ಧದಲ್ಲಿ, ರಾವಣಂ-ದಶಗ್ರೀವನನ್ನು, ಹತ್ವಾ- ಸಂಹರಿಸಿ, ಸೀತಾಂ-ಸೀತಾದೇವಿಯನ್ನು, ಪ್ರಾಪ್ಯ-ಹೊಂದಿ, ಅನು-ಅನಂತರದಲ್ಲಿ, ಪರಾಂ-ಅತಿಶಯವಾದ, ವ್ರೀಡಾಂ-ಲಜ್ಜೆಯನ್ನು, ಉಪಾಗಮತ್ - ಹೊಂದಿದನು (ಅಂದರೆ ಶತೃವಿನ ಮನೆಯಲ್ಲಿದ್ದ ಈ ಸೀತೆಯನ್ನು, ಹೇಗೆ ಅಂಗೀಕರಿಸಲಿ ಎಂದು ಲಜ್ಜಾಂಕ್ರಾಂತನಾದನೆಂದು ಭಾವವು.)॥೮೧॥ ತತಃ - ಅನಂತರದಲ್ಲಿ, (ಗೋ) ಲಜ್ಜೆಗೊಂಡಮೇಲೆ, ಜನಸಂಸದಿ-ಕಪಿಗಳ ಮತ್ತು ರಾಕ್ಷಸರ ಸಭೆಯಲ್ಲಿ ತಾಂ-ಪತಿವ್ರತೆಯಾದ ಆ ಸೀತಾದೇವಿಯನ್ನು ಕುರಿತು, ರಾಮಃ-ಶ್ರೀರಾಮನು, ಪರುಷಂ-ಕಠಿಣವಾದ ಮಾತನ್ನು, ಉವಾಚ-ನುಡಿದನು. ಸತಿ-ಪತಿವ್ರತೆಯಾದ, ಸಾಸೀತಾ-ಆ ಜಾನಕಿಯು. ಅಮೃಷ್ಯಮಾಣಾ-ರಾಮನ ನುಡಿಗಳನ್ನು ಸೈರಿಸಲಾರದೆ, ಜ್ವಲನಂ-ಅಗ್ನಿಯನ್ನು, ವಿವೇಶ-ಪ್ರವೇಶಿಸಿದಳು. ॥೮೨॥ ತತಃ-ಸೀತಾಗ್ನಿ ಪ್ರವೇಶಾನಂತರ, ಅಗ್ನಿವಚನಾತ್-ಯಜ್ಞೇಶ್ವರನ ಮಾತಿನಿಂದ, ಸೀತಾಂ-ಸೀತೆಯನ್ನು, ವಿಗತಕಲ್ಮಷಾಂ-ನಿರ್ದೋಷಳನ್ನಾಗಿ, ಜ್ಞಾತ್ವಾ-ತಿಳಿದು, ರಾಮಃ-ರಾಮನು, ಸಂಪ್ರಹೃಷ್ಟಃ-ಸಂತಸ

---

ನಾಥನು ಉದಾಸೀನ ಮಾಡಲು, ಸೂರ್ಯಸದೃಶವಾದ ಬಾಣಗಳಿಂದ ಆ ಸಮುದ್ರನನ್ನು ಶೋಷಿಸತೊಡಗಿದನು. ॥ ೭೯ ॥ ಆಗಲಾ ಸಮುದ್ರರಾಜನು ತಾನೇ ಪ್ರತ್ಯಕ್ಷವಾಗಿ ಬಂದು ನಳನಿಂದ ಸೇತುವೆಯನ್ನು ಕಟ್ಟಿಸೆಂದು ಹೇಳಲು ರಾಮನು ಅಂತೆಯೇ ಶತ ಯೋಜನ ದೂರವುಳ್ಳ ಸೇತುವೆಯನ್ನು ಮಾಡಿಸಿ, ತನ್ಮೂಲಕ ಲಂಕಾಪಟ್ಟಣವನ್ನು ಸೇರಿ, ಯುದ್ಧದಲ್ಲಿ ರಾವಣನನ್ನು ಕೊಂದು, ಸೀತಾದೇವಿಯನ್ನು ಹೊಂದಿ, ಶತ್ರು ಪುರದಲ್ಲಿದ್ದ ಆಕೆಯನ್ನು ಹೇಗೆ ಸ್ವೀಕರಿಸಲೆಂದು ಶಂಕಿಸಿ, ಲಜ್ಜಾನ್ವಿತನಾದನು. ॥೮೧॥ ಬಳಿಕಲಾರಾಮನು ವಾನರ, ರಾಕ್ಷಸರ ಸಭೆಯಲ್ಲಿ ಪತಿವ್ರತಾ ಶಿರೋಮಣಿಯಾದ ಆ ಜಾನಕಿಯನ್ನು ಬಗೆ ಬಗೆಯಾಗಿ ದೂಷಿಸಿದನು ಸೀತಾದೇವಿಯು ಕಾಠಿಣ್ಯಪೂರಿತವಾದ ರಾಮನ ನುಡಿಗಳನ್ನು ಕೇಳಲಾರದೆ ಅಗ್ನಿಪ್ರವೇಶ ಮಾಡಿದಳು ॥೮೨॥ ಆ ಬಳಿಕ ಅಗ್ನಿದೇವನ ಮಾತಿನಂತೆ ನಿಷ್ಕಲ್ಮಷಳಾದ ಆ ಸೀತಾದೇವಿಯನ್ನು ಅರಿತವನಾದುದರಿಂದ, ಸಂತಸಗೊಂಡ ಅಂತರಂಗವುಳ್ಳವನಾಗಿ ಆಕೆಯನ್ನು ಪರಿಗ್ರಹಿಸಿದ ರಘುರಾಮನು ಬ್ರಹ್ಮಾದಿ ದೇವತೆ

ಬಭೌರಾಮಸ್ಸಂಪ್ರಹೃಷ್ಟಃ ಪೂಜಿತಸ್ಸರ್ವ ದೈವತೈಃ ||೮೩|| ಕರ್ಮಣಾ ತೇನ ಮಹತಾ ತ್ರೈಲೋಕ್ಯಂ ಸಚರಾಚರಂ| ಸದೇವರ್ಷಿಗಣಂತುಷ್ಟಂ ರಾಘವಸ್ಯ ಮಹಾತ್ಮನಃ||೮೪|| ಅಭಿಷಿಚ್ಯಚಲಂಕಾಯಾಂ ರಾಕ್ಷಸೇಂದ್ರಂವಿಭೀಷಣಂ| ಕೃತಕೃತ್ಯಸ್ತದಾರಾಮೋವಿಜ್ವರಃ ಪ್ರಮುಮೋದಹ ||೮೫|| ದೇವತಾಭ್ಯೋ ವರಂಪ್ರಾಪ್ಯಸಮುತ್ಥಾಪ್ಯಚ ವಾನರಾನ್ | ಅಯೋಧ್ಯಾಂ ಪ್ರಸ್ಥಿತೋರಾಮಃ ಪುಷ್ಪಕೇಣ ಸುಹೃದ್ವೃತಃ ||೮೬|| ಭರದ್ವಾಜಾಶ್ರಮಂ ಗತ್ವಾ ರಾಮಸ್ಸತ್ಯಪರಾಕ್ರಮಃ | ಭರತಸ್ಯಾಂತಿಕಂರಾಮೋ ಹನೂಮಂತಂ ವ್ಯಸರ್ಜಯತ್ || ೮೭ || ಪುನರಾಖ್ಯಾಯಿಕಾಂ ಜಲ್ಪನ್ ಸುಗ್ರೀವಸಹಿತಶ್ಚಸಃ | ಪುಷ್ಪಕಂ ತತ್ಸ

---

ಗೊಂಡು, ಬಭೌ-ರಾರಾಜಿಸಿದನು, ಸರ್ವದೈವತೈಃ-ಸಕಲ ದೇವತೆಗಳಿಂದ, ಪೂಜಿತಃ-ಪೂಜಿಸಲ್ಪಟ್ಟನು. ||೮೩|| ಮಹಾತ್ಮನಃ - ಮಹಾನುಭಾವನಾದ, ರಾಘವಸ್ಯ - ಶ್ರೀರಾಮನ, ತೇನ - ಆ ರಾವಣನನ್ನು ಕೊಂದ, ಮಹತಾ-ದೊಡ್ಡದಾದ, ಕರ್ಮಣಾ-ಕೃತ್ಯದಿಂದ ಸಚರಾಚರಂ-ಸ್ಥಾವರ ಜಂಗಮ ಸಹಿತವಾದ, ಸದೇವರ್ಷಿಗಣಂ-ದೇವಋಷಿಗಳ ಗುಂಪಿನಿಂದ ಕೂಡಿದ, ತ್ರೈಲೋಕ್ಯಂ ಲೋಕತ್ರಯವು, ತುಷ್ಟಂ-ಸಂತಸಗೊಂಡಿತು. || ೮೪ || ಲಂಕಾಯಾಂ-ಲಂಕಾಪಟ್ಟಣದಲ್ಲಿ, ರಾಕ್ಷಸೇಂದ್ರಂ - ರಾಕ್ಷಸ ರಾಜನಾದ, ವಿಭೀಷಣಂ-ವಿಭೀಷಣನನ್ನು, ಅಭಿಷಿಚ್ಯ-ಪಟ್ಟಾಭಿಷೇಕವಮಾಡಿ, ತದಾ-ಆಗ, ರಾಮಃ-ರಾಮನು, ಕೃತಕೃತ್ಯಃ - ಕೃತಕೃತ್ಯನಾದುದರಿಂದ ನಿಶ್ಚಿಂತನಾಗಿ, ಪ್ರಮುಮೋದ - ಆನಂದಿಸಿದನು. ಹಾ-ಆಶ್ಚರ್ಯವು ! ||೮೫ ರಾಮಃ-ಶ್ರೀರಾಮನು, ದೇವತಾಭ್ಯಃ-ದೇವತೆಗಳಿಂದ, ವರಂ-ವರವನ್ನು, ಪ್ರಾಪ್ಯ-ಹೊಂದಿ, ವಾನರಾನ್ - ಮೃತರಾದ ಕಪಿಗಳನ್ನು ಕೂಡ, ಸಮುತ್ಥಾಪ್ಯ - ಬದುಕಿಸಿ, ಸುಹೃದ್ವೃತಃ-ಸುಗ್ರೀವನೇ ಮೊದಲಾದವರಿಂದ ಕೂಡಿದವನಾಗಿ, ಪುಷ್ಪಕೇನ-ಪುಷ್ಪಕ ವಿಮಾನದಿಂದ, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು ಕುರಿತು, ಪ್ರಸ್ಥಿತಃ-ಹೊರಟನು || ೮೬ || ಸತ್ಯಪರಾಕ್ರಮಃ- ಸತ್ಯವಾದ ಭುಜಬಲವುಳ್ಳ, ರಾಮಃ-ಶ್ರೀರಾಮನು, ಭರದ್ವಾಜಾಶ್ರಮಂ-ಭರದ್ವಾಜಮುನಿಯ ಆಶ್ರಮವನ್ನು, ಗತ್ವಾ-ಹೊಂದಿ, ಭರತಸ್ಯ-ಭರತನ, ಅಂತಿಕಂ-ಸಮೀಪವನ್ನು ಕುರಿತು, ಹನೂಮಂತಂ-ಆಂಜನೇಯನನ್ನು, ವ್ಯಸರ್ಜಯತ್-ಕಳುಹಿದನು. ||೮೭|| (ಪುನಃ ಎರಡನೆಯದಿನ) ಸಃ-ಆ ಶ್ರೀರಾಮನು, ಸುಗ್ರೀವಸಹಿತಃ-ಸುಗ್ರೀವ ವಿಭೀಷಣರಿಂದ ಕೂಡಿದವನಾಗಿ, ತತ್ಪುಷ್ಪಕಂ-ಆ ಪುಷ್ಪಕ ವಿಮಾನವನ್ನು, ಸಮಾರುಹ್ಯ-ಹತ್ತಿ, (ಗೋ!) (ಸೀತಾಯಾಃ - ಸೀತಾದೇವಿಗೆ) ಪುನರಾಖ್ಯಾಯಿಕಾಂ - ಹಿಂದೆ ನಡೆದ

---

ಗಳಿಂದ ಪೂಜಿತನಾಗಿ ರಾರಾಜಿಸುತ್ತಿದ್ದನು. || ೮೩ || ಆ ಮಹಾತ್ಮನಾದ ಶ್ರೀರಾಮನು ಮಾಡಿದ ರಾವಣನ ವಧೆಯಿಂದ, ದೇವಋಷಿಗಳಿಂದೊಡಗೂಡಿದ ಲೋಕತ್ರಯವು ಸಂತಸಗೊಂಡಿತು. || ೮೪ || ಬಳಿಕ ಲಂಕಾಪಟ್ಟಣದಲ್ಲಿ ವಿಭೀಷಣನನ್ನು ರಾಕ್ಷಸಾಧಿಪತಿಯನ್ನಾಗಿ ಮಾಡಿ, ಕೃತಕೃತ್ಯನಾದಕಾರಣ ನಿಶ್ಚಿಂತನಾದ ರಾಮನು ಬಹಳವಾಗಿ ಆನಂದಿಸಿ, ದೇವತೆಗಳಿಂದ ವರವನ್ನು ಪಡೆದು ಮೃತರಾಗಿದ್ದ ವಾನರರನ್ನು ಬದುಕಿಸಿ, ಸುಗ್ರೀವನೇ ಮೊದಲಾದ ಮಿತ್ರರಿಂದೊಡಗೂಡಿ, ಪುಷ್ಪಕವಿಮಾನದಲ್ಲಿ ಕುಳಿತು, ಅಯೋಧ್ಯಾಪಟ್ಟಣಕ್ಕೆ ತೆರಳಿದನು. || ೮೬ || ಸತ್ಯಪರಾಕ್ರಮಿಯಾದ ಆ ರಾಮಚಂದ್ರನು ಭರದ್ವಾಜಾಶ್ರಮವನ್ನು ಸೇರಿ, ಬುದ್ಧಿವಂತನಾದ ಹನುಮಂತನನ್ನು ಭರತನ ಬಳಿಗೆ ಕಳುಹಿ, ಆ ಆಶ್ರಮದಲ್ಲಿಯೇ ಇದ್ದುಕೊಂಡು ಸುಗ್ರೀವನಿಂದೊಡಗೂಡಿ, ಪುಷ್ಪಕ ವಿಮಾನವನ್ನೇರಿ, ಸೀತಾದೇವಿಗೆ ತನ್ನ

ಮಾರುಹ್ಯ ನಂದಿಗ್ರಾಮಂ ಯಯೌ ತದಾ ॥೮೮॥ ನಂದಿಗ್ರಾಮೇ ಜಟಾಂ ಹಿತ್ವಾ ಭ್ರಾತೃಭಿಸ್ಸಹಿತೋಽನಘಃ । ರಾಮಸ್ಸೀತಾಮನುಪ್ರಾಪ್ಯ ರಾಜ್ಯಂ ಪುನರವಾಪ್ತವಾನ್ ॥೮೯॥ ಪ್ರಹೃಷ್ಟೋ ಮುದಿತೋ ಲೋಕಸ್ತುಷ್ಟಃ ಪುಷ್ಟಸ್ಸುಧಾರ್ಮಿಕಃ । ನಿರಾಮಯೋಹ್ಯರೋಗಶ್ಚ ದುರ್ಭಿಕ್ಷ ಭಯವರ್ಜಿತಃ ॥೯೦॥ ನಪುತ್ರಮರಣಂ ಕಿಂಚಿದ್ರಕ್ಷ್ಯಂತಿ ಪುರುಷಾಃ ಕ್ವಚಿತ್ । ನಾರ್ಯಶ್ಚಾವಿಧವಾ ನಿತ್ಯಂ ಭವಿಷ್ಯಂತಿ ಪತಿವ್ರತಾಃ ॥ ೯೧ ॥ ನಚಾಗ್ನಿಜಂ ಭಯಂ ಕಿಂಚಿ ನ್ನಾಪ್ಸುಮಜ್ಜಂತಿ ಜಂತವಃ । ನವಾತಜಂ ಭಯಂ ಕಿಂಚಿ ನ್ನಾಪಿಜ್ವರಕೃತಂ ತಥಾ। ನಚಾಪಿಕ್ಷುದ್ಭಯಂ ತತ್ರ ನತಸ್ಕರ ಭಯಂ ತಥಾ ॥೯೨॥ ನಗರಾಣಿಚರಾಷ್ಟ್ರಾಣಿ

---

ಕಥಾವಿಶೇಷವನ್ನು, ಜಲ್ಪನ್-ಹೇಳುತ್ತ, ನಂದಿಗ್ರಾಮಂ-ನಂದೀಗ್ರಾಮಕ್ಕೆ, ಯಯೌ-ಬಂದನು. ॥೮೮॥ ಅನಘಃ-ದೋಷರಹಿತನಾದ, ರಾಮಃ - ಶ್ರೀರಾಮನು, ನಂದಿಗ್ರಾಮೇ- ನಂದಿಗ್ರಾಮದಲ್ಲಿ, ಜಟಾಂ-ಜಟೆಯನ್ನು, ಭ್ರಾತೃಭಿಃ-ತಮ್ಮಂದಿರಾದ ಭರತ, ಶತೃಘ್ನ, ಲಕ್ಷ್ಮಣರಿಂದ, ಸಹಿತಃ-ಕೂಡಿದವನಾಗಿ, ಹಿತ್ವಾ-ಬಿಟ್ಟು, ಸೀತಾಂ-ಸೀತಾದೇವಿಯನ್ನು, ಅನುಪ್ರಾಪ್ಯ- ಬಳಿಸಾರಿ (ಮ) ಸೀತೆಯ ಸಾದೃಶ್ಯವನ್ನು ಹೊಂದಿ, ರಾಜ್ಯಂ-ರಾಜ್ಯವನ್ನು, ಅವಾಪ್ತವಾನ್-ಹೊಂದಿದವನಾದನು ॥ ೮೯ ॥ ಲೋಕಃ ಜನರು, ಪ್ರಹೃಷ್ಟಃ-ರೋಮಾಂಚ ವುಳ್ಳವರಾಗಿಯೂ, ಮುದಿತಃ - ಸಂತೋಷಗೊಂಡವರಾಗಿಯೂ, ದುಷ್ಟಃ-ಇಷ್ಟಾರ್ಥಲಾಭ ಉಳ್ಳವರಾಗಿಯು, ಪುಷ್ಟಃ-ವೃದ್ಧಿಹೊಂದಿದ ಅವಯವಗಳುಳ್ಳವರಾಗಿಯೂ, ಸುಧಾರ್ಮಿಕಃ-ಧರ್ಮಾಚರಣ ಶೀಲರಾಗಿಯೂ, ನಿರಾಮಯಃ-ಮನೋರೋಗರಹಿತರು, ಅರೋಗಶ್ಚ-ವ್ಯಾಧಿ ಇಲ್ಲದವರು, ದುರ್ಭಿಕ್ಷಭಯವರ್ಜಿತಃ- ಕ್ಷಾಮಬಾಧೆಯಿಂದ ಬಿಡಲ್ಪಟ್ಟವರೂ, ಆದರು ॥೯೦॥ ಪುರುಷಾಃ-ಜನರು, ಕಿಂಚಿದಪಿ-ಸ್ವಲ್ಪವಾದರೂ, ಪುತ್ರಮರಣಂ-ಮಗನ ಸಾವನ್ನು, ನದ್ರಕ್ಷ್ಯಂತಿ-ನೋಡುತ್ತಿರಲಿಲ್ಲ, ನಾರ್ಯಶ್ಚ-ಸ್ತ್ರೀಯರೂ ಸಹ, ನಿತ್ಯಂ-ಯಾವಾಗಲೂ, ಅವಿಧವಾಃ-ವಿಧವೆಯರಲ್ಲದವರೂ (ಗೊ) ವ್ಯಭಿಚಾರಿಣಿಯರಲ್ಲದವರೂ, ಪತಿವ್ರತಾಃ-ಪತಿವ್ರತೆಯರಾಗಿಯೂ, ಭವಿಷ್ಯಂತಿ-ಆಗಿರುತ್ತಿದ್ದರು ॥ ೯೧ ॥ ತತ್ರ-ಆ ರಾಮ ರಾಜ್ಯದಲ್ಲಿ, ಅಗ್ನಿಜಂಭಯಂ-ಬೆಂಕಿಯಭಯವು, ನಚ-ಇಲ್ಲವೇ ಇಲ್ಲ. ಜಂತವಃ-ಪ್ರಾಣಿಗಳು, ಅಪ್ಸು-ನೀರಿನಲ್ಲಿ, ನಮಜ್ಜಂತಿ - ಮುಳುಗುತ್ತಿರಲಿಲ್ಲ, ವಾತಜಂಭಯಂ-ಗಾಳಿಯಭಯವು, ಕಿಂಚಿನ್ನ-ಸ್ವಲ್ಪವಾದರೂ ಇರಲಿಲ್ಲ, ತಥಾ- ಹಾಗೆಯೇ,ಜ್ವರಕೃತಂಭಯಂ-ರೋಗಭಯವು, ನ-ಇರಲಿಲ್ಲ,ಕ್ಷುದ್ಭಯಮಪಿ-ಹಸಿವಿನ ಭಯವೂ ಇರಲಿಲ್ಲ,ತಸ್ಕರಭಯಂ ನ-ಕಳ್ಳಕಾಕರ ಭಯವೂ ಇರಲಿಲ್ಲ. ॥ ೯೨ ॥ (ಕಿಂಚ-ಇದೂ ಅಲ್ಲದೆ) ನಗರಾಣಿ-ಪಟ್ಟಣ

---

ಪೂರ್ವ ವೃತ್ತಾಂತವನ್ನೂ ಹೇಳುತಾ, ನಂದೀಗ್ರಾಮಕ್ಕೆ ಬಂದು, ಅಲ್ಲಿ ತಮ್ಮಂದಿರೊಡನೆ ಜಟಾಭಾರವನ್ನು ಕಳೆದು, ಸೀತಾ ಸಹಿತನಾಗಿ ಮರಳಿ ತನ್ನ ರಾಜ್ಯಧಾನಿಯಾದ ಅಯೋಧ್ಯೆಯನ್ನು ಸೇರಿದನು, ॥೮೯॥ ಆಗ ಜನರೆಲ್ಲರೂ ರೋಮಾಂಚ ವುಳ್ಳವರಾಗಿಯೂ ಸಂತೋಷಚಿತ್ತರೂ, ಪುಷ್ಟರೂ, ಧರ್ಮವಂತರೂ, ಮನೋರೋಗರಹಿತರೂ, ವ್ಯಾಧಿಹೀನರೂ, ಕ್ಷಾಮ ಭಯವಿಲ್ಲದವರೂ ಆದರು ॥೯೦॥ ರಾಮರಾಜ್ಯವಾದ ಆ ಅಯೋಧ್ಯಾಪುರನಿವಾಸಿಗಳಲ್ಲಿ ಒಬ್ಬರಾದರೂ, ಪುತ್ರಮರಣವೆಂಬುದನ್ನು, ಸ್ವಲ್ಪ ಮಾತ್ರವೂ ನೋಡುತ್ತಿರಲಿಲ್ಲ; ಸ್ತ್ರೀಯರು ವ್ಯಭಿಚಾರಿಣಿಯರಲ್ಲದೆಯೂ ಪತಿವ್ರತೆಯರಾಗಿಯೂ ಇದ್ದರು. ॥೯೧॥ ಆ ಪಟ್ಟಣದಲ್ಲೆಲ್ಲಿಯೇ ಆಗಲಿ ಅಗ್ನಿಭಯ, ಗಾಳಿಭಯ, ರೋಗಬಾಧೆ, ಕ್ಷುದ್ಭೀತಿ, ಚೋರಬಾಧೆ, ಇನೇ ಮೊದಲಾದವುಗಳು ತಲೆದೋರಿರಲಿಲ್ಲ ॥೯೨॥ ಪಟ್ಟಣಗಳೂ, ದೇಶಗಳೂ,

ಧನಧಾನ್ಯ ಯುತಾನಿಚ। ನಿತ್ಯಂಪ್ರಮುದಿತಾಸ್ಸರ್ವೇ ಯಥಾಕೃತ ಯುಗೇ ತಥಾ ||೯೩||
ಅಶ್ವಮೇಧ ಶತೈರಿಷ್ಟ್ವಾತಥಾ ಬಹುಸುವರ್ಣಕೈಃ||೯೪|| ಗವಾಂಕೋಟ್ಯಯುತಂದತ್ವಾ
ಬ್ರಹ್ಮಲೋಕಂ ಪ್ರಯಾಸ್ಯತಿ || ಅಸಂಖ್ಯೇಯಂ ಧನಂ ದತ್ವಾ ಬ್ರಾಹ್ಮಣೇಭ್ಯೋ
ಮಹಾಯಶಾಃ ||೯೫|| ರಾಜವಂಶಾನ್ ಶತಗುಣಾನ್ ಸ್ಥಾಪಯಿಷ್ಯತಿ ರಾಘವಃ।
ಚಾತುರ್ವರ್ಣ್ಯಂಚ ಲೋಕೇಸ್ಮಿನ್ ಸ್ವೇಸ್ವೇ ಧರ್ಮೇನಿಯೋಕ್ಷ್ಯತಿ||೯೬||ದಶವರ್ಷ ಸಹ

---

ಗಳು, ರಾಷ್ಟ್ರಾನಿಚ-ದೇಶಗಳೂ ಸಹ, ಧನಧಾನ್ಯಯುತಾನ್ - ಧನಗಳಿಂದಲೂ ಧಾನ್ಯಗಳಿಂದಲೂ ಕೂಡಿದ್ದವು, ಕೃತಯುಗೇ-ಕೃತಯುಗದಲ್ಲಿ,ಯಥಾ-ಹೇಗೋ, ತಥಾ-ಹಾಗೆ,ಸರ್ವೇ-ಎಲ್ಲರೂ,ನಿತ್ಯಂ-ಯಾವಾಗಲೂ, ಪ್ರಮುದಿತಾಃ-ಸಂತಸಗೊಂಡವರಾಗಿ (ಆಸನ್-ಇದ್ದರು) || ೯೩ || ಮಹಾಯಶಾಃ-ಬಹಳ ಕೀರ್ತಿವಂತನಾದ ಶ್ರೀರಾಮನು, ಅಶ್ವಮೇಧಶತೈಃ-ನೂರುಅಶ್ವಮೇಧಯಾಗಗಳಿಂದಲು, ತಥಾ-ಹಾಗೆಯೆ, ಬಹುಸುವರ್ಣಕೈಃ - ಸಮೃದ್ಧವಾದ ದಕ್ಷಿಣೆಗಳುಳ್ಳ ಯಜ್ಞಗಳಿಂದಲು, ಇಷ್ಟ್ವಾ-ಯಾಗ ಮಾಡಿ, ಗವಾಂಕೋಟ್ಯಯುತಂ-ಹತ್ತು ಸಾವಿರ ಕೋಟಿ ಗೋವುಗಳನ್ನು, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೆ. ದತ್ವಾ-ದಾನವಾಗಿ ಕೊಟ್ಟುದಲ್ಲದೆ, ಅಸಂಖ್ಯೇಯಂ-ಎಣಿಸಲಾರದಷ್ಟು,ಧನಂ-ದ್ರವ್ಯವನ್ನು, ದತ್ವಾ-ದಾನಮಾಡಿ,ಬ್ರಹ್ಮಲೋಕಂ-ಪರಮಾತ್ಮ ಸ್ವರೂಪವಾದ ತನ್ನ ಲೋಕವನ್ನು ಕುರಿತು,ಪ್ರಯಾಸ್ಯತಿ-ಹೊರಟುಹೋಗುವನು || ೯೫ || ರಾಘವಃ-ಶ್ರೀರಾಮನು, ರಾಜವಂಶಾನ್-ಕ್ಷತ್ರಿಯವಂಶಗಳನ್ನು, ಶತಗುಣಾನ್-ನೂರರಷ್ಟು ಹೆಚ್ಚಾಗಿ, ಅಥವ. ಅನೇಕ ಗುಣಗಳುಳ್ಳವುಗಳನ್ನಾಗಿ, ಸ್ಥಾಪಯಿಷ್ಯತಿ-ಪ್ರತ್ಯೇಕ ಪ್ರತ್ಯೇಕವಾದ ರಾಜ್ಯದಾನಗಳಿಂದ ನಿಲ್ಲಿಸಿದನು. ಅಸ್ಮಿನ್‌ಲೋಕೇ-ಈ ಲೋಕದಲ್ಲಿ, ಚಾತುರ್ವರ್ಣ್ಯಂಚ-ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರನ್ನು, ಸ್ವೇಸ್ವೇಧರ್ಮೇ-ಅವರವರ ಧರ್ಮದಲ್ಲಿ, ನಿಯೋಕ್ಷ್ಯತಿ - ಇರಗೊಳಿಸುವನು. ||೯೬|| ದಶವರ್ಷ ಸಹಸ್ರಾಣಿ - ಹತ್ತು ಸಾವಿರ ವರುಷಗಳು, ದಶವರ್ಷಶತಾನಿಚ-ಒಂದು ಸಾವಿರ ಸಂವತ್ಸರಗಳೂ ಸಹ, ರಾಮಃ - ಶ್ರೀರಾ

---

ಧನ, ಧಾನ್ಯ ಸಮೃದ್ಧಿಯಿಂದ ತುಂಬಿ, ತುಳುಕಾಡುತ್ತಿದ್ದುವಲ್ಲದೆ ಜನರೆಲ್ಲರೂ ಆನಂದ ತುಂದಿಲಿತರಾಗಿ, ಕೃತಯುಗದಲ್ಲಿ ಹೇಗಿದ್ದರೋ ಹಾಗೆಯೇ ಸುಖದಿಂದಿದ್ದರು. || ೯೩ || ಮಹಾತ್ಮನೂ, ಕೀರ್ತಿವಂತನೂ, ಆದ ರಾಮಚಂದ್ರನು ಅನೇಕವಾದ ಅಶ್ವಮೇಧ ಯಾಗಗಳಿಂದಲೂ, ಬಹಳವಾದ ಸುವರ್ಣಗಳದಕ್ಷಿಣೆಯಿಂದೊಡಗೂಡಿದ ಯಾಗಗಳನ್ನೂ,ಮಾಡಿ, ಹತ್ತುಸಾವಿರ ಕೋಟಿ ಗೋವುಗಳನ್ನೂ, ಅಪರಿಮಿತವಾದ ದ್ರವ್ಯವನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು, ||೯೫|| ಆ ಬಳಿಕ ಶ್ರೀರಾಮಚಂದ್ರನು ಅನೇಕವಾದ ರಾಜವಂಶಗಳನ್ನು ಬಹು ಗುಣಗಳುಳ್ಳವುಗಳನ್ನಾಗಿ ಮಾಡಿ, ರಾಜ್ಯದಾನಗಳಿಂದ ಅವುಗಳನ್ನು ಸ್ಥಾಪಿಸುವನಲ್ಲದೆ ಈ ಭೂಲೋಕದಲ್ಲಿ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರು ಅವರವರ ಧರ್ಮಗಳಲ್ಲಿರುವಂತೆ ನಿಯೋಗಿಸಿ, ಹನ್ನೊಂದು ಸಾವಿರ ವರುಷಗಳ ರಾಜ್ಯಭಾರವನ್ನು ಮಾಡಿ, ಪರಮಾತ್ಮ ಸ್ವರೂಪವಾದ ತನ್ನ ಲೋಕವನ್ನು ಕುರಿತು, ತೆರಳುವನು. ||೯೬|| ಪರಿಶುದ್ಧಿಗೆ ಸಾಧನವಾಗಿಯೂ, ಪಾಪ ಪರಿಹಾರಕವಾಗಿಯೂ, ಪುಣ್ಯ

ಸ್ರಾಣಿ ದಶವರ್ಷ ಶತಾನಿಚ । ರಾಮೋರಾಜ್ಯ ಮುಪಾಸಿತ್ವಾ ಬ್ರಹ್ಮಲೋಕಂ ಗಮಿಷ್ಯತಿ ||೯೭|| ಇದಂ ಪವಿತ್ರಂ ಪಾಪಘ್ನಂ ಪುಣ್ಯಂ ವೇದೈಶ್ಚ ಸಮ್ಮಿತಂ । ಯಃ ಪಠೇದ್ರಾಮಚರಿತಂ ಸರ್ವಪಾಪೈಃ ಪ್ರಮುಚ್ಯತೆ || ೯೮ || ಏತದಾಖ್ಯಾನಮಾಯುಷ್ಯಂ ಪಠರ್ರಾಮಾಯಣಂ ನರಃ । ಸಪುತ್ರಪೌತ್ರಸ್ಸಗಣಃ ಪ್ರೇತ್ಯಸ್ವರ್ಗೇ ಮಹೀಯತೆ || ೯೯ ||

ಮನು, ರಾಜ್ಯಂ-ರಾಜ್ಯವನ್ನು, ಉಪಾಸಿತ್ವಾ - ಉಪಾಸನೆಮಾಡಿ, ಬ್ರಹ್ಮಲೋಕಂ - ವೈಕುಂಠವನ್ನು ಕುರಿತು, ಗಮಿಷ್ಯತಿ-ಹೋಗುವನು. ||೯೭|| ಪವಿತ್ರಂ-ಅಂತಃಕರಣಶೋಧಕವಾಗಿಯೂ, ಪಾಪಘ್ನಂ-ಪಾಪಹಾರಕವಾಗಿಯು,ಪುಣ್ಯಂ ಪುಣ್ಯಕರವಾಗಿಯು, ವೇದೈಶ್ಚ-ವೇದಗಳೊಡನೆ,ಸಮ್ಮಿತಂ- ಸಮಾನವಾದ, ಇದಂರಾಮಚರಿತಂ ಈ ರಾಮಚರಿತೆಯನ್ನು,ಯಃ-ಯಾವ ಪುರುಷನು,ಪಠೇತ್-ಓದುವನೋ, ಸಃ-ಅವನು, ಸರ್ವಪಾಪೈಃ-ಎಲ್ಲಪಾಪಗಳಿಂದಲೂ, ಪ್ರಮುಚ್ಯತೆ-ಬಿಡಲ್ಪಡುವನು || ೯೮ || ಏತದಾಖ್ಯಾನಂ-ಈ ಕಥಾರೂಪವಾದ, ಆಯುಷ್ಯಂ-ಆಯುಷ್ಕರವಾದ, ರಾಮಾಯಣಂ (೧) ರಾಮಾಯಣವೆಂಬ ಗ್ರಂಥವನ್ನು, ಪಠನ್-ಓದುತ್ತಿರುವ, ನರಃ ಮನುಷ್ಯನು, ಸಪುತ್ರ ಪೌತ್ರಃ ಮಕ್ಕಳು, ಮೊಮ್ಮಕ್ಕಳಿಂದಲೂ, ಸಗಣಃ-ಸೇವಕರೂ ಮತ್ತು ಬಂಧು ಜನಗಳಿಂದಲೂ ಕೂಡಿದವನಾಗಿ, ಪ್ರೇತ್ಯ ಅಂತ್ಯದಲ್ಲಿ ಶರೀರ ತ್ಯಾಗವನ್ನು ಹೊಂದಿ, ಸ್ವರ್ಗೇ ಪರಮಪದದಲ್ಲಿ, ಮಹೀಯತೆ - ಪೂಜಿಸಲ್ಪಡುವನು. ಐಹಿಕದಲ್ಲಿ ಪುತ್ರ,ಪೌತ್ರ,ದಾಸ,ದಾಸೀ,ಬಂಧುಗಳಿಂದ ಸುಖಸಾಂಮ್ರಾಜ್ಯದಲ್ಲಿಲೋಲುಪ್ತನಾಗಿದ್ದು, ದೇಹತ್ಯಾಗಾನಂತರದಲ್ಲಿ ಸಕಲ ಪಾಪಗಳಿಂದಲೂ ಬಿಡಲ್ಪಟ್ಟು ಸ್ವರ್ಗಸುಖವನ್ನನುಭವಿಸುವನು ||೯೯|| (ಇದಂ ಬಾಲರಾಮಾಯಣಂ - ಈ ಬಾಲರಾಮಾಯಣವನ್ನು) ಪಠನ್ - ಓದುವವನು, ದ್ವಿಜಸ್ಸ್ಯಾತ್-ಬ್ರಾಹ್ಮಣನಾದರೆ, ವಾಗೃಷಭತ್ವಂ-ಮಾತಿನ ಶ್ರೈಷ್ಠ್ಯವನ್ನೂ, ವೇದವೇದಾಂಗ ಪಾರಂಗತೆಯನ್ನೂ,ಈಯಾತ್ - ಹೊಂದುವನು, (ಮ) ಶಬ್ದಬ್ರಹ್ಮ ತತ್ವದಲ್ಲಿ ಪಾರಂಗತನಾಗುವನು. ಕ್ಷತ್ರಿಯಸ್ಸ್ಯಾತ್ - ಕ್ಷತ್ರಿಯನಾದರೆ, ಭೂಮಿಪತಿತ್ವಂ - ಚಕ್ರವರ್ತಿತ್ವವನ್ನು, ಈಯಾತ್ - ಹೊಂದುವನು. ( ಮ ) ಸಾಮ್ರಾಜ್ಯವನ್ನು ಹೊಂದುವನು. ವಣಿಗ್ಜನಸ್ಸ್ಯಾತ್ - ವೈಶ್ಯನಾದರೆ ಪಣ್ಯಫಲತ್ವಂ - ಮಾರಾಟಕ್ಕೆ ತಕ್ಕ ಲಾಭವನ್ನು, ಈ ಯಾತ್-ಹೊಂದುವನು, (ಮ ಮಾರಾಟ

ಕರವಾಗಿಯೂ, ಸಕಲ ವೇದಾರ್ಥ ರಹಸ್ಯ ಪ್ರತಿಪಾದಕವಾಗಿಯೂ, ಇರುವುದರಿಂದ ವೇದಸಮಾನವಾದ ಈ ರಾಮಚರಿತ್ರೆಯನ್ನು ಯಾವ ಪುರುಷನು ಓದುವನೋ, ಅವನು ಸಕಲ ಪಾಪಗಳಿಂದಲೂ ವಿಮುಕ್ತನಾಗುವನು. ಆಯುಷ್ಕರವಾಗಿಯೂ, ಶ್ರೀರಾಮ ಚರಿತ್ರರೂಪವಾಗಿಯೂ ಇರುವ ಈ ಗ್ರಂಥವನ್ನು, ಪುರುಷನು ಓದಿದ ಮಾತ್ರದಿಂದಲೇ ಪುತ್ರ, ಪೌತ್ರ, ದಾಸ, ದಾಸೀ, ಬಂಧುಗಳೊಡಗೂಡಿ ಇಹಲೋಕದಲ್ಲಿ ಸಕಲ ಭೋಗಗಳನ್ನು ಅನುಭವಿಸಿ, ದೇಹತ್ಯಾಗಾನಂತರದಲ್ಲಿ ಸ್ವರ್ಗಲೋಕ ವಾಸಿಗಳಿಂದಲೂ,ಪೂಜಿಸಲ್ಪಡುವನು.ಬ್ರಾಹ್ಮಣನು

ಟಿ ||೧|| ರಾಮಸ್ಯ+ಅಯನಂ=ರಾಮಾಯಣಂ=ರಾಮನ ಮಾರ್ಗವಾದ ಅಂದರೆ ರಾಮಚರಿತ್ರ ರೂಪವಾದ ಅಥವ,ರಾಮಃ+ಐಯ್ಯತೆ+ಪ್ರಾಪ್ಯತೆ+ ಅನೆ ನೇತಿ ರಾಮಾಯಣಂ, "ರಾಮನು ಇದರಿಂದ ಹೊಂದಲ್ಪಡುತ್ತಾನಾದಕಾರಣ ಈ ರಾಮಾಯಣವನ್ನು" ಎಂದು ಗೋವಿಂದರಾಜೀಯವು.

ಪಠ-ದ್ವಿಜೋ ವಾಗೃಷಭತ್ವ ಮೀಯಾತ್ । ಸ್ಯಾತ್ ಕ್ಷತ್ರಿಯೋ ಭೂಮಿಪತಿತ್ವ ಮೀಯಾತ್ । ವಣಿಗ್ಜನಃ ಪಣ್ಯಫಲತ್ವಮೀಯಾ ಜ್ಜನಶ್ಚ ಶೂದ್ರೋಽಪಿ ಮಹತ್ವಮೀಯಾತ್ ॥ ೧೦೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಆದಿಕಾವ್ಯೇ ಶ್ರೀಮದ್ಬಾಲಕಾಂಡೇ
ಶ್ರೀರಾಮಾಯಣ ಕಥಾಸಂಕ್ಷೇಪೋನಾಮ ಪ್ರಥಮಸ್ಸರ್ಗಃ



ದಲ್ಲಿ ಸಮೃದ್ಧಿಯಾದ ಲಾಭವನ್ನು ಹೊಂದುವನು. (ತಿ) ಸಾಮಾನ್ಯವಾದ ಲಾಭಕ್ಕಿಂತ ಮೂರು, ನಾಲ್ಕರಷ್ಟು ಲಾಭವನ್ನು ಹೊಂದುವನು. ಶೂದ್ರಃ-ಈ ಮೂರು ವರ್ಣಗಳಿಗೂ ದಾಸನಾದ, ಇದನ್ನು ಪಠಿಸಲು ಅಧಿಕಾರವಿಲ್ಲದ, ಜನಶ್ಚ-ಶೂದ್ರಜನವೂ ಕೂಡ, ಶೃಣ್ವಂ-ಸ್ಯಾತ್-ಕೇಳಿದವನಾದರೆ, ಮಹತ್ವಂ-ತನ್ನ ಜಾತಿಯಲ್ಲಿ ಶ್ರೇಷ್ಠತ್ವವನ್ನು, ಈಯಾತ್-ಹೊಂದುವನು. ॥ ೧೦೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಆದಿಕಾವ್ಯೇ ಶ್ರೀಮದ್ಬಾಲಕಾಂಡೇ
ಪ್ರಥಮಸ್ಸರ್ಗಃ.



ರಾಮಾಯಣವನ್ನು ಪಠಿಸಿದರೆ ವೇದಾಂಗ ಪಾರಗನಾಗುವನು ; ಕ್ಷತ್ರಿಯನು ಪಠಿಸಿದರೆ ರಾಜಾಧಿರಾಜನಾಗುವನು ; ಪಠಿಸುವವನು ವೈಶ್ಯನಾದರೆ ವ್ಯಾಪಾರಾಭಿವೃದ್ಧಿಯನ್ನೈದುವನು ; ಶೂದ್ರನು ಪಠನದಲ್ಲಿ ಅನಧಿಕಾರಿಯಾದುದರಿಂದಾ ಅವನೀಕಥೆಯನ್ನು ಕೇಳಿದರೆ ತನ್ನ ಜಾತಿಯಲ್ಲಿ ಶ್ರೇಷ್ಠತೆಯನ್ನು ಹೊಂದುವನು. ॥೧೦೦॥

ಇಂತು ಶ್ರೀ ನಾರದಮುನಿಯು ವಾಲ್ಮೀಕಿಗೆ ಉಪದೇಶ ಮಾಡಿದ ಸಂಕ್ಷೇಪ
ರಾಮಾಯಣವೆಂಬ ಪ್ರಥಮಸರ್ಗೆಯ ಕರ್ಣಾಟಕಾನುವಾದವು,
ಸಂಪೂರ್ಣವಾದುದು.



# ಬಾಲಕಾಂಡೆ ದ್ವಿತೀಯಸ್ಸರ್ಗಃ.

ನಾರದಸ್ಯತು ತದ್ವಾಕ್ಯಂ ಶ್ರುತ್ವಾ ವಾಕ್ಯವಿಶಾರದಃ| ಪೂಜಯಾಮಾಸ ಧರ್ಮಾತ್ಮಾಸಹ ಶಿಷ್ಯೋ ಮಹಾಮುನಿಃ || ೧ || ಯಥಾವತ್ಪೂಜಿತಸ್ತೇನ ದೇವರ್ಷಿ ರ್ನಾರದಸ್ತದಾ | ಆಪೃಷ್ಟ್ವೈವಾಭ್ಯನುಜ್ಞಾತ ಸ್ಸಜಗಾಮ ವಿಹಾಯಸಂ || ೨ || ಸಮುಹೂರ್ತಂಗತೇ ತಸ್ಮಿ೯ ದೇವಲೋಕಂ ಮುನಿಸ್ತದಾ| ಜಗಾಮ ತಮಸಾ ತೀರಂ ಜಾಹ್ನವ್ಯಾಸ್ತ್ವವಿದೂರತಃ ||೩|| ಸತುತೀರಂ ಸಮಾಸಾದ್ಯ ತಮಸಾಯಾ ಮಹಾಮುನಿಃ| ಶಿಷ್ಯಮಾಹಸ್ಥಿತಂ

---

ವಾಕ್ಯವಿಶಾರದಃ, ವಾಕ್ಯ - ಮಾತಿನಲ್ಲಿ, ವಿಶಾರದಃ - ಪಂಡಿತನಾದ, ಧರ್ಮಾತ್ಮಾ - ಧರ್ಮ ಬುದ್ಧಿಯುಳ್ಳ, ಮಹಾಮುನಿಃ - ಋಷಿಶ್ರೇಷ್ಠನಾದ, (ಗೊ) ವೇದಾಂತಾರ್ಥನಿರ್ಣಯ ಸಂಪತ್ತಿಯಿಂದ ಸರ್ವೋತ್ಕೃಷ್ಟನಾದ ವಾಲ್ಮೀಕಿಋಷಿಯು, ನಾರದಸ್ಯ - ನಾರದನ, ತದ್ವಾಕ್ಯಂತು - ಉತ್ತರರೂಪ ವಾದ ಆ ವಾಕ್ಯವನ್ನು, ಶ್ರುತ್ವಾ - ಕೇಳಿ, ಸಹಶಿಷ್ಯಃ- ತನ್ನ ಶಿಷ್ಯರೊಡನೆ (ಆ ಮಾತನ್ನು), ಪೂಜಯಾ ಮಾಸ - ಗೌರವಿಸಿದನು. ||೧|| ದೇವರ್ಷಿಃ - ದೇವಮುನಿಯಾದ, ಸನಾರದಃ - ಆ ನಾರದನು, ತೇನ - ಆ ವಾಲ್ಮೀಕಿಋಷಿಯಿಂದ, ಯಥಾವತ್ - ಯಥಾಯೋಗ್ಯವಾಗಿ, ಪೂಜಿತಃ - ಪ್ರದಕ್ಷಿಣ ನಮಸ್ಕಾರಾದಿಗಳಿಂದ ಅರ್ಚಿಸಲ್ಪಟ್ಟವನಾಗಿ, ತದಾ - ಅನಂತರ, ಆಪೃಷ್ಟ್ವೈವ (೧) (ನಾರದನು) ಹೋಗಿಬರುವೆನೆಂದು ಹೇಳಲು, ಅಭ್ಯನುಜ್ಞಾತಃ - (ವಾಲ್ಮೀಕಿಯು) ತಮ್ಮ ಇಷ್ಟಾನುಸಾರ ಹೋಗಿ ಬರಬಹುದೆನ್ನಲು, ವಿಹಾಯಸಂ - ಅಂತರಿಕ್ಷಮಾರ್ಗವಾಗಿ, ಜಗಾಮ - ಹೊರಟನು. || ೨ || ತಸ್ಮಿ೯ - ಆ ನಾರದಮುನಿಯು, ಮುಹೂರ್ತಂ - ಕೊಂಚಕಾಲದಲ್ಲಿಯ, ದೇವಲೋಕಂ - ಸತ್ಯಲೋಕವನ್ನು ಕುರಿತು, ಗತೇಸತಿ - ಹೊರಡಲು, ಸಮುನಿಃ - ಆ ವಾಲ್ಮೀಕಿಋಷಿಯು, ತದಾ - ಆ ಸಮಯದಲ್ಲಿ, (ತಿ) ಅಥವ, ಸಮುನಿಃ - ಆ ವಾಲ್ಮೀಕಿಯು, ಮುಹೂರ್ತಂ-ಮುಹೂರ್ತಕಾಲವು, ಸ್ವಾಶ್ರಮೇ- ತನ್ನ ಆಶ್ರಮದಲ್ಲಿ, ಸ್ಥಿತ್ವಾ - ನಿಂತು, ಜಾಹ್ನವ್ಯಾಸ್ತು - ಗಂಗಾನದಿಗೆ, ಅವಿದೂರತಃ - ಸಮೀಪ ದಲ್ಲಿರುವ, ತಮಸಾತೀರಂ - ತಮಸಾನದಿಯನ್ನು ಕುರಿತು, ಜಗಾಮ - ಹೊರಟನು. || ೩ || ಸಮಹಾಮುನಿಃ - ಆ ವಾಲ್ಮೀಕಿಋಷಿಯು, ತಮಸಾಯಾಃ - ತಮಸಾನದಿಯ, ತೀರಂತು - ತೀರ

---

ಇಂತು ಬ್ರಹ್ಮರ್ಷಿಯಾದ ನಾರದನು, ಆ ವಾಲ್ಮೀಕಿಯ ಪ್ರಶ್ನೆಗನುಗುಣವಾಗಿ, ಸಂಕ್ಷೇಪ ವಾದ ರಾಮಾಯಣವನ್ನು ಹೇಳಲು, ವಾಲ್ಮೀಕಿಯು ಅದನ್ನು ಗೌರವಿಸಿದನು. ||೧|| ಆಗ ನಾರದಮುನಿಯು, ಪ್ರದಕ್ಷಿಣ ನಮಸ್ಕಾರಾದಿಗಳಿಂದ ಪೂಜಿಸಲ್ಪಟ್ಟು, ವಾಲ್ಮೀಕಿ ಋಷಿಗೆ ಹೇಳಿ, ಗಗನಮಾರ್ಗದಲ್ಲಿ ಹೊರಟುಹೋದನು. || ೨ || ಆ ಬಳಿಕ ವಾಲ್ಮೀಕಿಮುನಿಯು ತನ್ನ ಆಶ್ರಮದಲ್ಲಿ ಸ್ವಲ್ಪಕಾಲ ನಿಂತು, ಮಾಧ್ಯಾಹ್ನಿಕ ಕೃತ್ಯಕ್ಕೋಸುಗ, ಗಂಗಾನದಿಯ ಸಮೀಪದಲ್ಲಿರುವ ತಮಸಾನದಿಯ ತೀರಕ್ಕೆ ಹೋಗಿ, ನಿರ್ಮಲವಾಗಿರುವ ಆ ತೀರ್ಥವನ್ನು

---

ಟಿ|| (೧) ಹೀಗೆ ಹೇಳಿದ್ದುದರಿಂದ ಗುರು ಶಿಷ್ಯ ಭಾವವೂ ಅವರಿಗಿದ್ದ ಸ್ನೇಹವೂ ತೋರಿದಂತಾಯಿತು.

ಪಾರ್ಶ್ವೇ ದೃಷ್ಟ್ವಾತೀರ್ಥ ಮಕರ್ದಮಂ ||೪|| ಅಕರ್ದಮಮಿದಂ ತೀರ್ಥಂ ಭರದ್ವಾಜ ನಿಶಾಮಯ । ರಮಣೀಯಂ ಪ್ರಸನ್ನಾಂಬು ಸನ್ಮನುಷ್ಯ ಮನೋಯಥಾ||೫||ನ್ಯಸ್ಯತಾಂ ಕಲಶಸ್ತಾತ ದೀಯತಾಂ ವಲ್ಕಲಂಮಮ । ಇದಮೇವಾವಗಾಹಿಷ್ಯೇ ತಮಸಾತೀರ್ಥ ಮುತ್ತಮಂ||೬|| ಏವಮುಕ್ತೋಭರದ್ವಾಜೋ ವಾಲ್ಮೀಕೇನಮಹಾತ್ಮನಾ|ಪ್ರಾಯಚ್ಛತ ಮುನೇಸ್ತಸ್ಯ ವಲ್ಕಲಂ ನಿಯತೋಗುರೋಃ ||೭|| ಸಶಿಷ್ಯಹಸ್ತಾದಾದಾಯ ವಲ್ಕಲಂ ನಿಯತೇಂದ್ರಿಯಃ| ವಿಚಚಾರಹ ಪಶ್ಯಂಸ್ತತ್ಸರ್ವತೋ ವಿಪುಲಂವನಂ ||೮|| ತಸ್ಯಾಭ್ಯಾ

ವನ್ನು, ಸಮಾಸಾದ್ಯ - ಹೊಂದಿ, ಅಕರ್ದಮಂ - ಕೆಸರಿಲ್ಲದ, ತೀರ್ಥಂ-ನದ್ಯೋದಕವನ್ನು, ದೃಷ್ಟ್ವಾ-ನೋಡಿ, ಪಾರ್ಶ್ವೇಸ್ಥಿತಂ - ಪಕ್ಕದಲ್ಲಿರುವ, ಶಿಷ್ಯಂ - ಭರದ್ವಾಜನೆಂಬ ಶಿಷ್ಯನನ್ನು ಕುರಿತು, ಆಹ - ನುಡಿದನು ||೪|| ಹೇಭರದ್ವಾಜ - ಎಲೈ ಭರದ್ವಾಜನೆ, ಅಕರ್ದಮಂ - ಕೆಸರಿಲ್ಲದಿರುವ, ಪ್ರಸನ್ನಾಂಬು - ನಿರ್ಮಲೋದಕವುಳ್ಳ, ಸನ್ಮನುಷ್ಯಮನೋಯಥಾ - ಸತ್ಪುರುಷನ ಮನದಂತೆ, ರಮಣೀಯಂ-ಮನೋಹರವಾದ, ಇದಂತೀರ್ಥಂ - ಈ ತ಼ುಸಾನದಿಯ ನೀರನ್ನು, ನಿಶಾಮಯ - ನೋಡು, ||೫|| ಹೇತಾತ- ಎಲೈ ತಂದೆಯೆ ! ಕಲಶಃ - ನೀರಿನ ಪಾತ್ರೆಯು, ನ್ಯಸ್ಯತಾಂ - ಇಡಲ್ಪಡಲಿ, ಮಮ - ನನಗೆ, ವಲ್ಕಂ - ನಾರುಮಡಿಯು, ದೀಯ಼ತಾ಼ - ಕೊಡಲ್ಪಡಲಿ, ಉತ್ತಮಂ - ಶ್ರೇಷ್ಠವಾದ, ಇದಂತಮಸಾತೀರ್ಥ ಮೇವ - ಋಷಿಗಳಿಂದ ಹೊಂದಲ್ಪಡುವ ತಮಸಾನದಿಯ ಉದಕವನ್ನೇ, ಅವಗಾಹಿಷ್ಯೇ - ಪ್ರವೇಶಿಸುವೆನು. ||೬|| ಏವಂ - ಈ ರೀತಿ, ಮಹಾತ್ಮನಾ - ಮಹಾನುಭಾವನಾದ, ವಾಲ್ಮೀಕೇನ - ವಾಲ್ಮೀಕಿಮಹರ್ಷಿಯಿಂದ, ಉಕ್ತಃ - ಹೇಳಲ್ಪಟ್ಟ, ಭರದ್ವಾಜಃ - ಭರದ್ವಾಜ ಋಷಿಯು, ನಿಯತಃ - ನಿಷ್ಠೆಯಿಂದ, ಗುರೋಃ - ಗುರುವಾದ, ತಸ್ಯಮುನೇಃ - ಆ ವಾಲ್ಮೀಕಿಮಹರ್ಷಿಗೆ, ವಲ್ಕಲಂ-ನಾರುಮಡಿಯನ್ನು, ಪ್ರಾಯಚ್ಛತ - ಕೊಟ್ಟನು ||೭|| ನಿಯತೇಂದ್ರಿಯಃ - ಇಂದ್ರಿಯಗ್ರಾಮಗಳನ್ನು ಗೆದ್ದ, ಸಃ - ಆ ವಾಲ್ಮೀಕಿಯು, ಶಿಷ್ಯಹಸ್ತಾತ್ - ಭರದ್ವಾಜನಕೈಯಿಂದ, ವಲ್ಕಲಂ - ನಾರುಮಡಿಯನ್ನು, ಆದಾಯ - ತೆಗೆದುಕೊಂಡು, ವಿಪುಲಂ - ವಿಶಾಲವಾದ, ತದ್ವನಂ - ಆ ತಮಸಾನದೀತೀರದಲ್ಲಿದ್ದ ವನದ, ಸರ್ವತಃ - ಎಲ್ಲೆಡೆಗಳಲ್ಲಿಯೂ, ಪಶ್ಯನ್ - ನೋಡುತ್ತಾ, ಸಂಚಚಾರಹ ಸಂಚರಿಸಿದನು. ||೮|| ಭಗವಾನ್-ಮಾಹಾತ್ಮ್ಯಯನ್ನೊಳಗೊಂಡ ವಾಲ್ಮೀಕಿಯು, ತಸ್ಯಾಭ್ಯಾಶೇ-ಆ ನದಿಯ ಸಮೀಪದಲ್ಲಿ, ಚರಂತಂ-ಹೋಗುತ್ತಿರುವ, ಅನಪಾಯಿನಂ-ಎಡಬಿಡದಿರುವ,ಚಾರು

ಕಂಡು, ತನ್ನ ಸಮೀಪದಲ್ಲಿದ್ದ ಭರದ್ವಾಜನೆಂಬ ಶಿಷ್ಯನನ್ನು ಕುರಿತು, ಇಂತೆಂದನು. ||೪|| "ಎಲೈ ಭರದ್ವಾಜನೆ ! ನೋಡು, ಈ ತಮಸಾ ನದಿಯು ಸತ್ಪುರುಷನ ಮನದಂತೆ ಕಳಂಕ ರಹಿತವೂ, ರಮಣೀಯವೂ, ನಿರ್ಮಲೋದಕ ಭರಿತವೂ ಆಗಿರುವುದು. ||೫|| ಆದುದರಿಂದ ಉದಕಪಾತ್ರೆಯನ್ನು ನೆಲದಲ್ಲಿಟ್ಟು ನಾರುಮಡಿಯನ್ನು ಕೊಡು. ಇದು ಶ್ರೇಷ್ಠತಮವಾದ ತೀರ್ಥವಾದುದರಿಂದ ನಾನಿಲ್ಲಿಯೇ ಸ್ನಾನ ಮಾಡುವೆನು." ಇಂತೆಂದ ಗುರುವಿನ ನುಡಿಯನ್ನು ಕೇಳಿ, ಭರದ್ವಾಜನು ಆತನಿಗೆ ವಲ್ಕಲಗಳನ್ನು ಕೊಟ್ಟನು ||೭|| ಜಿತೇಂದ್ರಿಯನಾದ ಆ ವಾಲ್ಮೀಕಿಯು ಶಿಷ್ಯನಿಂದ ಮಡಿಗಳನ್ನು ತೆಗೆದುಕೊಂಡು ಆಹ್ನಿಕ ಮಾಡಲು ಯೋಗ್ಯವಾದ ಸ್ಥಳವನ್ನು ಹುಡುಕುತ್ತ, ಆ ತಮಸಾನದಿಯ ತೀರದಲ್ಲಿದ್ದ ವನಪ್ರದೇಶಗಳಲ್ಲಿ ಸಂಚರಿಸತೊಡಗಿದನು. ||೮|| ಹೀಗೆ ಸಂಚಾ಼ಸುತಲಿದ್ದ ಮಹಾನುಭಾವನೂ, ಜಿತೇಂದ್ರಿ

ಶೇತು ಮಿಥುನಚರಂತಂಮನಪಾಯಿನಂ। ದದರ್ಶ ಭಗವಾನ್ತತ್ರ ಕ್ರೌಂಚಯೋಶ್ಚಾರು ನಿಸ್ವನಂ ॥ ೯ ॥ ತಸ್ಮಾತ್ತು ಮಿಥುನಾದೇಕಂ ಪುಮಾಂಸಂ ಪಾಪನಿಶ್ಚಯಃ । ಜಘಾನ ವೈರನಿಲಯೋನಿಷಾದಸ್ತಸ್ಯಪಶ್ಯತಃ ॥ ೧೦॥ತಂ ಶೋಣಿತಪರೀತಾಂಗಂ ವೇಷ್ಟಮಾನಂ ಮಹೀತಲೇ। ಭಾರ್ಯಾತು ನಿಹತಂ ದೃಷ್ಟ್ವಾ ರುರಾವ ಕರುಣಾಂಗಿರಂ ॥೧೧॥ ವಿಯುಕ್ತಾ ಪತಿನಾ ತೇನ ದ್ವಿಜೇನ ಸಹಚಾರಿಣಾ । ತಾಮ್ರಶೀರ್ಷೇಣ ಮತ್ತೇನ ಪತ್ರಿಣಾಸಹಿತೇನವೈ ॥ ೧೨ ॥ ತದಾತು ತಂದ್ವಿಜಂ ದೃಷ್ಟ್ವಾ ನಿಷಾದೇನ ನಿಪಾತಿತಂ । ಋಷೇರ್ಧರ್ಮಾತ್ಮನಸ್ತಸ್ಯ ಕಾರುಣ್ಯಂ ಸಮಪದ್ಯತ ॥ ೧೩ ॥

---

ನಿಸ್ವನಂ-ಇಂಪಾದ ಧ್ವನಿಯುಳ್ಳ, ಕ್ರೌಂಚಯೋಃ ಮಿಥುನಂ- ಕ್ರೌಂಚಪಕ್ಷಿಗಳ ಜೋಡಿಯನ್ನು, ತತ್ರ-ಆತಮಸಾನದಿಯ ವನದಲ್ಲಿ, ದದರ್ಶ-ನೋಡಿದನು. ॥ ೯ ॥ ವೈರನಿಲಯಃ-ದ್ವೇಷಕ್ಕೆ ನೆಲೆಮನೆಯಾದ, ಪಾಪನಿಶ್ಚಯಃ-ದುಷ್ಟಬುದ್ಧಿಯುಳ್ಳ, ನಿಷಾದಃ ಬೇಡರವನು, ತಸ್ಮಾನ್ಮಿಥುನಾತ್ - ಆ ಕ್ರೌಂಚಪಕ್ಷಿಗಳ ಯುಗ್ಮದಲ್ಲಿ, ಏಕಂ-ಒಂದಾದ, ಪುಮಾಂಸಂ-ಗಂಡು ಪಕ್ಷಿಯನ್ನು, ತಸ್ಯ-ಆ ವಾಲ್ಮೀಕಿ ಋಷಿಯು, ಪಶ್ಯತಃ-ನೋಡುತ್ತಿರುವಾಗಲೆ, (ಗೋ) ನೋಡುತ್ತಿರುವ ಆ ವಾಲ್ಮೀಕಿಯನ್ನು ಅನಾದರಣೆ ಮಾಡಿ, ಜಘಾನ-ಹೊಡದನು ॥ ೧೦ ॥ ಭಾರ್ಯಾತು-ಹೆಂಡತಿಯಾದ ಹೆಣ್ಣುಪಕ್ಷಿಯು, ಶೋಣಿತಪರೀತಾಂಗಂ-ರಕ್ತಮಯವಾದ ದೇಹವುಳ್ಳ, ಮಹೀತಲೇ-ಭೂಮಿಯಲ್ಲಿ, ವೇಷ್ಟಮಾಣಂ- ಹೊರಳಾಡುತ್ತಲಿರುವ, ನಿಹತಂ-ಹೊಡೆಯಲ್ಪಟ್ಟ, ತಂದೃಷ್ಟ್ವಾ-ಆ ಗಂಡು ಪಕ್ಷಿಯನ್ನು ಕಂಡು, ಸಹಚಾರಿಣಾ-ಜೊತೆಯಲ್ಲಿ ಸಂಚರಿಸುತ್ತಿರುವ, ತಾಮ್ರಶೀರ್ಷೇಣ-ಕೆಂಪಾದ ಶಿರಸ್ಸುಳ್ಳ, ಮತ್ತೇನ ರತ್ಯಾತಿಶಯದಿಂದ, ಸಹಿತೇನ ಅಗಲದಿರುವ ಪತ್ರಿಣಾ-ರೆಕ್ಕೆಗಳುಳ್ಳ,ಪತಿನಾ-ಗಂಡನಾದ, ತೇನದ್ವಿಜೇನ-ಆ ಪುರುಷ ಪಕ್ಷಿಯಿಂದ, ವಿಯುಕ್ತಾಸತೀ-ವಿಯೋಗವನ್ನು ಹೊಂದಿ, ಕರುಣಾಂ-ದೀನವಾದ, ಗಿರಂ-ಕೂಗನ್ನು, ರುರಾವ-ಅರಚಿತು. ॥॥ ೧೧—೧೨ ॥ ತದಾತು-ಆಗ, ನಿಷಾದೇನ-ಬೇಡನಿಂದ, ನಿಪಾತಿತಂ- ಕೊಲ್ಲಲ್ಪಟ್ಟ, ತಂದ್ವಿಜಂ-ಆ ಗಂಡು ಪಕ್ಷಿಯನ್ನು, ದೃಷ್ಟ್ವಾ-ನೋಡಿ, ಧರ್ಮಾತ್ಮನಃ - ಧರ್ಮಿಷ್ಠನಾದ, ತಸ್ಯ ಋಷೇಃ-ವಾಲ್ಮೀಕಿಋಷಿಗೆ, ಕಾರುಣ್ಯಂ-ದಯಾರಸವು, ಸಮಪದ್ಯತ-ಉಂಟಾಯಿತು. ॥ ೧೩ ॥ತತಃ-

---

ಯನೂ ಆದ ವಾಲ್ಮೀಕಿ ಮುನಿಯು, ಆ ನದಿಯ ಉಪವನದಲ್ಲಿ ಮನೋಹರವಾಗಿಯೂ, ಆಧಿ ವ್ಯಾಧಿಗಳಿಂದ ರಹಿತವಾಗಿಯೂ, ಇಂಪಾದ ಧ್ವನಿಯುಳ್ಳದಾಗಿಯೂ, ಯಾವಾಗಲೂ ಎಡೆಬಿಡದೆಜೊತೆಗೂಡಿ ಸಂಚರಿಸುತ್ತಿರುವ ಕ್ರೌಂಚಪಕ್ಷಿಗಳ ಜೊತೆಯೊಂದನ್ನು ಕಂಡನು. ॥೯॥ ಆಗ ದುಷ್ಟಬುದ್ಧಿಯುಳ್ಳವನೂ, ಏನೂ ಅರಿಯದ ಸಾಧುಪ್ರಾಣಿಗಳಲ್ಲಿಯೂ ವೈರಭಾವವುಳ್ಳ ಒಬ್ಬ ಬೇಡರವನು, ಮಹಾತ್ಮನಾದ ವಾಲ್ಮೀಕಿಯು ನೋಡುತ್ತಿದ್ದರೂ ಆತನನ್ನೆಣಿಕೆಗೆತಾರದೆ ಆ ಪಕ್ಷಿಯುಗ್ಮದಲ್ಲೊಂದಾದ ಗಂಡುಪಕ್ಷಿಯನ್ನು ಹೊಡೆದನು. ॥೧೦॥ ಹೆಣ್ಣುಪಕ್ಷಿಯು ಸದಾಕಾಲದಲ್ಲಿಯೂ ತನ್ನನ್ನಗಲದೆ ಸಂಚರಿಸುತ್ತಿದ್ದದೂ, ಕೆಂಪಾದ ಮುಖವುಳ್ಳದ್ದೂ, ಕಂಗೊಳಿಸುವ ಗರಿಗಳನ್ನುಳ್ಳದ್ದೂ ಮದಿಸಿದುದೂ ಆದ, ತನ್ನ ಪತಿಯು ಈಗ ಆ ಬೇಡನಿಂದ ಹೊಡೆಯಲ್ಪಟ್ಟು, ರಕ್ತದಿಂದ ತೊಯ್ದು ನೆಲದಲ್ಲಿ ಹೊರಳಾಡುತ್ತಿದ್ದುದನ್ನು ಕಂಡು, ಪತಿವಿಯೋಗವನ್ನು ಸಹಿಸಲಾರದೆ ದೀನಧ್ವನಿಯಿಂದ ಕೂಗಿಕೊಳ್ಳುತ್ತಲಿದ್ದಿತು. ಮಹಾ ಕರುಣಶಾಲಿಯೂ ಧರ್ಮಾತ್ಮನೂ ಆದ ವಾಲ್ಮೀಕಿಮುನಿಯು ಆ ಕ್ರೌಂಚಪಕ್ಷಿಯನ್ನು



क्रौंचवध.

Lakshmi Art, Bombay, 8.

ತತಃ ಕರುಣವೇದಿತ್ವಾ ದಧರ್ಮೋಽಯಮಿತಿದ್ವಿಜಃ ॥ ನಿಶಾಮ್ಯ ರುದತೀಂ ಕ್ರೌಂಚೀಮಿದಂ ವಚನಮಬ್ರವೀತ್ ॥ ೧೪ ॥ ಮಾ ನಿಷಾದ ಪ್ರತಿಷ್ಠಾಂ ತ್ವಮಗಮ

ಅನಂತರ, ದ್ವಿಜಃ-ಆ ವಾಲ್ಮೀಕಿಯು, ರುದತೀಂ ಅಳುತ್ತಿರುವ, ಕ್ರೌಂಚೀಂ - ಕ್ರೌಂಚ ಪಕ್ಷಿಯನ್ನು, ನಿಶಾಮ್ಯ ಕಂಡು, ಕರುಣವೇದಿತ್ವಾತ್- ದಯಾವಂತನಾದುದರಿಂದ, ಅಯಂ ಅಧರ್ಮ ಇತಿ - ಇದು ಧರ್ಮವಾದುದಲ್ಲವೆಂದು ತಿಳಿದು, ಇದಂ ವಚನಂ ಈ ಮಾತನ್ನು, ಅಬ್ರವೀತ ನುಡಿದನು. ॥ ೧೪ ॥ (ಗೋ)(೧) ಹೇಅಮು-ಎಲೈ ಭಾಗ್ಯಹೀನನಾದ, ನಿಷಾದ-ಬೇಡರವನೇ ! ಯತ - ಯಾವಕಾರಣದಿಂದ, ಕ್ರೌಂಚಮಿಥುನಾತ್ ಕ್ರೌಂಚ ಪಕ್ಷಿಗಳ ಯುಗ್ಮವನ್ನು (ಅನಾದ್ಯ-ಹೊಂದಿ) ಕಾಮಮೋಹಿತಂ-ಮನ್ಮಥ ಪೀಡಿತನಾದ, ಏಕಂ ಒಂದಾದ ಪುರುಷ ಪಕ್ಷಿಯನ್ನು, ಅವಧೀ -ಕೊಂದೆಯೋ, ತತ್-ಆಕಾರಣದಿಂದ ತ್ವಂ ನೀನು, ಶಾಶ್ವತೀಸ್ಸಮಾಃ ಅನೇಕ ಸಂವತ್ಸರಗಳು ಪ್ರತಿಷ್ಠಾಂ- ಇರುವಿಕೆಯನ್ನು, ಮಾಗಮಃ-ಹೊಂದಬೇಡ, (ಎಂದು ಬಾಹ್ಯಾರ್ಥವು) ಗೂಢಾರ್ಥವು, ಹೇ ಮಾನಿಷಾದ - ಎಲೈ ಶ್ರೀನಿವಾಸನೇ ! ಯತ ಯಾವ ಕಾರಣದಿಂದ, ಕ್ರೌಂಚ ಮಿಥುನಾತ್-ರಾಕ್ಷಸ ಯುಗ್ಮವಾದ, ರಾವಣಮಂಡೋದರಿಯರಲ್ಲಿ, ಕಾಮಮೋಹಿತಂ-ಮನ್ಮಥನಿಂದ ಮೂಢನಾಗಿ, ಸೀತಾಪಹಾರವನ್ನೆಸಗಿದ ರಾವಣನನ್ನು, ಅವಧೀಃ-ಕೊಂದೆಯೋ, ತತ್ ಆ ಕಾರಣದಿಂದ, ತ್ವಂ-ನೀನು, ಶಾಶ್ವತೀಸ್ಸಮಾಃ-ಯಾವಾಗಲೂ, ಪ್ರತಿಷ್ಠಾಂ ಮಾಹಾತ್ಮ್ಯವನ್ನು, ಆಗಮಃ-ಹೊಂದು (ಮ) ಹೇ ನಿಷಾದ - ಎಲೈ

ನೋಡಿ "ರತಿಕಾಲದಲ್ಲಿ ಈ ಬೇಡರವನು ಆ ಗಂಡು ಪಕ್ಷಿಯನ್ನು ಕೊಂದು ಅಧರ್ಮವನ್ನಾಚರಿಸಿದನಲ್ಲಾ !"ಎಂದು ಚಿಂತಿಸಿ ಬಹಳವಾಗಿ ಅಳುತ್ತಿರುವ ಆ ಹೆಣ್ಣುಪಕ್ಷಿಯನ್ನು ಕಂಡು, ಬೇಡರವನನ್ನು ಕುರಿತು ಹೀಗೆಂದನು. ॥೧೪॥ "ಎಲೈ ಬೇಡನೇ ! ನೀನು ಈ ಕ್ರೌಂಚ ಪಕ್ಷಿಗಳ ಮಿಥುನದಲ್ಲಿ, ಕಾಮಮೋಹಿತನಾದ ಗಂಡು ಪಕ್ಷಿಯನ್ನು ಕೊಂದೆಯಾದುದರಿಂದ ಬಹಳದಿನ ಭೂಮಿಯಲ್ಲಿರಬೇಡ. (ಗೋ) ಎಲೈ ಶ್ರೀನಿವಾಸನೇ ! ನೀನು ರಾಕ್ಷಸ ಮಿಥುನದಲ್ಲೊಬ್ಬನಾದ ಸೀತಾಪೇಕ್ಷೆಯಲ್ಲಿ ಕಾಮಪೀಡಿತನಾಗಿ ಆಕೆಯನ್ನಪಹರಿಸಿದ ರಾವಣ

ಟಿ॥ (ಗೋ)(೧)ಕೆಲವು ಗ್ರಂಥಕರ್ತರು ನಾಂದೀ ಶ್ಲೋಕದಲ್ಲಿಯೇ ಕಾವ್ಯಾರ್ಥವನ್ನು ಪ್ರತಿಪಾದಿಸುವಂತೆ, "ಮಾನಿಷಾದ" ಎಂಬ ಈ ಶ್ಲೋಕದಲ್ಲಿ ವಾಲ್ಮೀಕಿ ಮಹರ್ಷಿಯು ರಾಮಾಯಣ ಮಹಾಕಾವ್ಯ ಕಥಾಸೂಚನೆಯನ್ನೆಸಗುವನೆಂತೆನೆ — "ಮಾನಿಷಾದ-ಸೀತಾಪತಿಯೆ !" ಎಂಬ ಪದದಿಂದ ಬಾಲಕಾಂಡದ ಮುಖ್ಯ ಕಥಾವಸ್ತುವಾದ ಸೀತಾಕಲ್ಯಾಣವು ಪ್ರತಿಪಾದಿತವಾಯಿತು."ಪ್ರತಿಷ್ಠಾಂತ್ವಮಗಮಃ" ಎಂಬ ಶಬ್ದ ಪ್ರಯೋಗದಿಂದ, ಪಿತೃವಾಕ್ಯ ಪರಿಪಾಲನೆಯನ್ನು ಮಾಡಿದ ಕಥಾಭಿಪ್ರಾಯವುಳ್ಳ ಅಯೋಧ್ಯಾಕಾಂಡದ ಸಾರವು ಸೂಚಿಸಲ್ಪಟ್ಟಿತು "ಶಾಶ್ವತೀಃ" "ಸಮಾಃ" ಎಂಬ ಪದಗಳಿಂದ ಶ್ರೀರಾಮಚಂದ್ರನು ಋಷಿಗಳಿಗೋಸುಗ ತಾನು ಮಾಡಿದ ಪ್ರತಿಜ್ಞೆಯಿಂದ ಬಹಳ ಕಾಲ ವನವಾಸ ಮಾಡಿದ ಕಥಾವಸ್ತು ಯುಕ್ತವಾದ ಅರಣ್ಯಕಾಂಡವು ಹೇಳಲ್ಪಟ್ಟಿತು "ಕ್ರೌಂಚಮಿಥುನಾದೇಕಮವಧೀಃ" ಎಂಬ ಪದಪ್ರಯೋಗವಿರುವುದರಿಂದ ಕುಟಿಲ ಮಾರ್ಗಾನುವರ್ತಿಗಳಾದ ತಾರಾವಾಲಿಗಳ ಮಿಥುನದಲ್ಲಿ, ಕಾಮಪೀಡಿತನಾಗಿ ಸುಗ್ರೀವನ ಮನೋವಲ್ಲಭೆಯಾದ ತಾರಾದೇವಿಯನ್ನು ಪರಿಗ್ರಹಿಸಿದ, ವಾಲಿಯ ವಧೆಯನ್ನು ಶ್ರೀರಾಮಚಂದ್ರನು ಮಾಡಿದನು, ಎಂಬ ಕಿಷ್ಕಿಂಧಾಕಾಂಡದ ಕಥಾವಸ್ತುವು ಸೂಚಿತವಾಯಿತು "ಕ್ರೌಂಚೌ ಅಲ್ಪೀಭೂತೌ ಕೃಶೌ" ಎಂಬುದರಿಂದ ಅನ್ಯೋನ್ಯ ವಿರಹ ತಾಪದಿಂದ ಸೀತಾರಾಮರಲ್ಲಿ ರಾಮಾಪಯುವ ರೂಪಳಾದ ಸೀತಾಪಹರಣದಿಂದುಂಟಾದ ರಾಮನ ದುಃಖಾತಿಶಯವನ್ನೆಸಗುವ ಸುಂದರಕಾಂಡದ ಕಥಾಸಾರವು ಸಂಗ್ರಹಿಸಲ್ಪಟ್ಟುದಾಯಿತು. "ಕ್ರೌಂಚೌ ಕುಟಿಲೌ ರಾಕ್ಷಸೌ ತಯೋರ್ಮಿಥುನಾತ್ ಏಕಮವಧೀಃ" ಈ ವ್ಯುತ್ಪತ್ತಿಯಿಂದ ರಾವಣನ ವಧೆಯನ್ನೊಳಗೊಂಡ ಯುದ್ಧಕಾಂಡದ ಸಾರವು ಹೇಳಲ್ಪಟ್ಟಿತು "ಏಕಂಕಾಮಮೋಹಿತಂ"

ಶಾಶ್ವತೀಸ್ಸಮಾಃ । ಯತ್ಕ್ರೌಂಚಮಿಥುನಾದೇಕಮವಧೀಃ

ವಿಷ್ಣುವೇ!ಯತ್-ಯಾವಕಾರಣದಿಂದ, ಕ್ರೌಂಚಮಿಥುನಾತ್-ಮಂಡೋದರೀ ರಾವಣರ ಯುಗ್ಮದಲ್ಲಿ, ಏಕಂಕಾಮಮೋಹಿತಂ ಮನ್ಮಥ ಪೀಡಿತನಾದ ರಾವಣನೊಬ್ಬನನ್ನು, ಅವಧೀಃ - ಸಂಹರಿಸಿದೆಯೋ, ತತ್-ಆದುದರಿಂದ, ತ್ವಂ-ನೀನು, ಶಾಶ್ವತೀಸ್ಸಮಾ ಅನೇಕ ಸಂವತ್ಸರಗಳು, ಪ್ರತಿಷ್ಠಾಂ-ಅಖಂಡಿತವಾದ ಐಶ್ವರ್ಯ ಮತ್ತು ಆನಂದಗಳನ್ನು, ಅಗಮಃ-ಹೊಂದುವವನಾಗು, (ತಿ) ಹೇ ನಿಷಾದ- ಎಲೈ ರಾವಣನೇ ! ಯತ್-ಯಾವ ಕಾರಣದಿಂದ, ಕ್ರೌಂಚಮಿಥುನಾತ್- ರಾಜ್ಯಹೀನರೂ, ವನವಾಸಾದಿ ದುಃಖಗಳಿಂದ ಕೂಡಿದವರೂ ಆದ, ಸೀತಾರಾಮ ರೂಪವಾದ ಯುಗ್ಮದಲ್ಲಿ, ಏಕಂ- ಒಬ್ಬಳಾದ, ಕಾಮಮೋಹಿತಂ-ಶ್ರೀರಾಮನಲ್ಲಿಯೇ ಆಸಕ್ತಳಾದ ಸೀತಾದೇವಿಯನ್ನು, ಅವಧೀಃ-ಕೊಲ್ಲುವುದಕ್ಕಿಂತ ಹೆಚ್ಚಾಗಿ ಬಾಧೆ ಪಡಿಸಿದೆಯೋ, ತತ್ ಆ ಕಾರಣದಿಂದ, ತ್ವಂ ನೀನು, ಪ್ರತಿಷ್ಠಾಂ- "ಲಂಕಾಪಟ್ಟಣದಲ್ಲಿ ಪುತ್ರ, ಪೌತ್ರ, ದಾಸ, ದಾಸೀಯರಿಂದ ಕೂಡಿ ಸುಖವಾಗಿರು" ಎಂದು ಬ್ರಹ್ಮನಿಂದ ಪಡೆದ ವರದಂತೆ,ಶಾಶ್ವತೀ ಸ್ಸಮಾಃ- ಬಹುವರ್ಷಗಳ ಇರುವಿಕೆಯನ್ನು, ಆಗಮಃ - ಹೊಂದಬೇಡ (ಗೋ) (ಮತ್ತೊಂದರ್ಥವು) ಮಾನಿಷಾದ-ಎಲೈ ! ಸೀತಾರೂಪಳಾದ ಲಕ್ಷ್ಮಿಗೊಡೆಯನಾದ ರಾಮನನ್ನು ಕೊಂದೆಯಾದುದರಿಂದ ಅನೇಕ ವರ್ಷಗಳ ಕಾಲ ಸುಖವಾಗಿರು (ಅಥವ) ಎಲೈ ಸೀತಾರೂಪಳಾದ ಲಕ್ಷ್ಮಿಯಪತಿಯೇ? ಕುಟಿಲ ಮಾರ್ಗಾನುವರ್ತಿಗಳಾದ ತಾರಾವಾಲಿಗಳ ಯುಗ್ಮದಲ್ಲಿ, ಕಾಮಮೋಹಿತನಾಗಿ ಸುಗ್ರೀವನ ಪ್ರಿಯತಮೆಯಾದ ವಾಲಿಯೊಬ್ಬನನ್ನು ಕೊಂದೆಯಾದುದರಿಂದ ಅನೇಕ ಸಂವತ್ಸರಗಳ ಇರುವಿಕೆಯನ್ನು ಹೊಂದುವವನಾಗು. (ತಿ) ಎಲೈ ರಾವಣನೇ ! ರಾಜ್ಯದಿಂದ ವಿರಹಿತರೂ, ವನವಾಸಾದಿ ದುಃಖಗಳಿಂದ ಬಳಲಿದವರೂ,

---

ಎಂಬ ಪದಸ್ವಾರಸ್ಯದಿಂದ ಋಷ್ಯಾಶ್ರಮವನ್ನು ನೋಡಬೇಕೆಂಬ ಇಚ್ಛೆಯಿಂದ ಮೋಹಿತಳೂ ಅರ್ಧಾಂಗಿಯೂ ಆದ ಜಾನಕಿಯನ್ನು "ಅವಧೀಃ" ವಧೆಗಿಂತಲೂ ಹೆಚ್ಚಾದ ದುಃಖಕ್ಕೀಡುಮಾಡಿಥೆ, ಎಂಬ ಅರ್ಥದ ತೋರಿಕೆಯಿಂದ ಉತ್ತರಕಾಂಡದ ಕಥಾವಸ್ತುವು ತೋರಿಸಿದಂತಾಯಿತು. ಇಲ್ಲಿ ವಾಚಕರಿಗೆ ಕೆಲ ಸಂಶಯಗಳು ತಲೆದೋರಬಹುದು. ಮೃಗಪಕ್ಷಿಗಳನ್ನು ಸಂಹರಿಸುವುದು ಬೇಡರವನ ಧರ್ಮ, ಸ್ವಧರ್ಮವನ್ನಾಶ್ರಯಿಸಿ ಕ್ರೌಂಚಪಕ್ಷಿಯನ್ನು ಸಂಹರಿಸಿದ ಆ ಬೇಡನಿಗೆ ವಾಲ್ಮೀಕಿಯು ಶಾಪವನ್ನು ಕೊಟ್ಟಿದ್ದು ಧರ್ಮವೆ? "ಪ್ರಮತ್ತಾನ ಪ್ರಮತ್ತಾನ್ವಾ ನರಾಮಾಂಸಾರ್ಥಿನೋಭೃಶಂ। ವಿಧ್ಯಂತಿ ವಿಮುಖಾಂಶ್ಚಾಪಿ ನಚದೋಷೋತ್ರ ವಿದ್ಯತೆ॥" ಮದಿಸಿದವುಗಳಾಗಲಿ, ಮದಿಸದೇ ಇಲ್ಲದವುಗಳಾಗಲಿ, ಆಗಿರುವ ಮೃಗಗಳನ್ನು ಮಾಂಸಾರ್ಥಿಗಳಾದ ಮನುಷ್ಯರು,ಅವು ವಿಮುಖಗಳಾಗಿದ್ದರೂ ಕೊಲ್ಲುವರು. ಇದರಿಂದ ದೋಷವಿಲ್ಲವು ಎಂದು ರಾಮನೇ ವಾಲಿವಧಾ ಪ್ರಸ್ತಾವದಲ್ಲಿ ಹೇಳಿರುವನು. ಇದು ನ್ಯಾಯವಾಗಿರುವಾಗ ವಾಲ್ಮೀಕಿಯ ಶಾಪಕ್ಕೆ ಕಾರಣವೇನು? ಎಂದರೆ ರತಿಕ್ರೀಡಾಸಕ್ತವಾದ ಮೃಗವನ್ನು ಹೊಡೆಯಬಾರದು, ಎಂಬ ಧರ್ಮವನ್ನು ವ್ಯಾಧನರಿತಿರಬೇಕು ಆ ಧರ್ಮವನ್ನು ಬಿಟ್ಟು ಕ್ರೌಂಚ ಪಕ್ಷಿಯನ್ನು ಕೊಂದು, ಅಧರ್ಮವನ್ನಾಚರಿಸಿದುದರಿಂದ ವಾಲ್ಮೀಕಿಯ ಶಾಪವು ಯುಕ್ತವಾದುದೆಂದು ಅಭಿಪ್ರಾಯವು ಪಂಚಮ ವೇದವಾದ ಭಾರತದಲ್ಲಿಯೂ, ಇದಕ್ಕಾಧಾರವು ದೊರೆವುದು. ಪಾಂಡುರಾಯನು ಮೃಗರೂಪವಂದಿದ ಕ್ರೀಡಾಸಕ್ತನಾಗಿದ್ದ "ಕಿಂದಮ" ಮುನಿಯುಗ್ಮದಲ್ಲಿ ಮುನಿಯನ್ನು ಕೊಲ್ಲಲು ಆತನು ಪಾಂಡುರಾಯನನ್ನು ಕುರಿತು ಹೀಗೆ ಹೇಳಿರುವನು "ಅಸ್ವರ್ಗ್ಯಂ ಅಯಶಸ್ಯಂಚ ಅನುತಿಷ್ಠಸಿಭಾರತ । ಕೋಹಿವಿದ್ವಾನ್ಮೃಗಂಹನ್ಯಾ ಚ್ಚರಂತಂ ಮೈಥುನಂ ವನೇ॥" ಎಂದು——— (ತಿ) ವ್ಯಾಖ್ಯಾನಾಂತರದಲ್ಲಿ ಪ್ರಬಂಧಾರಂಭಮಾಡುವಾಗಲೇ ಶಾಪೋಕ್ತಿಯು ಹೇಳತಕ್ಕುದಲ್ಲಾ ! ಎಂದು ಶಂಕಿಸಿ, "ಮಾನಿಷಾದ" ಎಂಬ ಶ್ಲೋಕಕ್ಕೆ ಉಪದೇಶಪರವಾದ ಅರ್ಥಬರೆದಿರುವರು ಅದೆಂತೆನೆ ಹೇ ನಿಷಾದ-ಎಲೈ ಬೇಡನ, ತ್ವಂ-ನೀನು, ಶಾಶ್ವತೀಸ್ಸಮಾಃ, ಆಸಿ-ಬಹಳ ವೃದ್ಧನಾಗಿರುವೆ. ಅತಃ-ಆದುದರಿಂದ, ಕ್ರೌಞ್ಚಮಿಥುನಾದೇಕಂ ಕಾಮಮೋಹಿತಂ ಅವಧೀಃ-ರತಿಕ್ರೀಡಾಸಕ್ತವಾದ ಕ್ರೌಂಚ ಪಕ್ಷಿಗಳ ಯುಗ್ಮದಲ್ಲೊಂದನ್ನು ಕೊಂದೆಯಾದುದರಿಂದ ಇದು ಅಧರ್ಮವು ತನ್ಮಾಸ್ತು-ಇಂತಹ ಕೆಲಸವನ್ನು ಮುಂದಾದಾಗಲೂ ಮಾಡಬೇಡ" ಎಂಬ ಭಾವವು,

ಕಾಮಮೋಹಿತಂ ||೧೫|| ತಸ್ಯೈವಂ ಬ್ರುವತಶ್ಚಿಂತಾ ಬಭೂವ ಹೃದಿವೀಕ್ಷತಃ |
ಶೋಕಾರ್ತೇನಾಸ್ಯ ಶಕುನೇಃ ಕಿಮಿದಂ ವ್ಯಾಹೃತಂ ಮಯಾ ||೧೬|| ಚಿಂತಯನ್ಸಮಹಾ
ಪ್ರಾಜ್ಞಶ್ಚಕಾರ ಮತಿಮಾನ್ಮತಿಂ| ಶಿಷ್ಯಂಚೈವಾ ಬ್ರವೀದ್ವಾಕ್ಯಮಿದಂ ಸಮುನಿಪುಂಗವಃ||
೧೭||ಪಾದಬದ್ಧೋಕ್ಷರಸಮ ಸ್ತಂತ್ರೀಲಯ ಸಮನ್ವಿತಃ| ಶೋಕಾರ್ತಸ್ಯ ಪ್ರವೃತ್ತೋಮೇ

ಜಂದ್ರನೇ! ಯತ್-ಯಾವಕಾರಣದಿಂದ, ಕ್ರೌಂಚಮಿಥುನಾತ್- ಕುಟಿಲಗತಿಯುಳ್ಳ ತಿರ್ಯಗ್ಜಂತು ರೂಪವಾದ ತಾರಾವಾಲಿಗಳ ಯುಗ್ಮದಲ್ಲಿ, ಕಾಮಮೋಹಿತಂ-ಮನ್ಮಥನಿಂದ ಪೀಡಿತನಾಗಿ,ಸುಗ್ರೀವನಿಗೆ ಪ್ರಿಯಳಾದ ತಾರೆಯಲ್ಲಿ ಆಸಕ್ತನಾದ,ಏಕಂ-ವಾಲಿಯೊಬ್ಬನನ್ನು, ಅವಧೀಃ-ಸಂಹರಿಸಿದೆಯೋ, ತತ್-ಆ ಕಾರಣದಿಂದ, ತ್ವಂ-ನೀನು, ಶಾಶ್ವತೀಸ್ಸಮಾಃ-ಅನೇಕ ಸಂವತ್ಸರಗಳ, ಪ್ರತಿಷ್ಠಾಂ- ಇರುವಿಕೆಯನ್ನು, ಅಗಮಃ-ಹೊಂದುವನಾಗು ||೧೫|| ಏವಂ ಈರೀತಿ, ಬ್ರುವತಃ - ಹೇಳುತ್ತಿರುವ, ವೀಕ್ಷತಃ-ನೋಡುತ್ತಿರುವ, ತಸ್ಯ-ಆ ವಾಲ್ಮೀಕಿಗೆ, ಹೃದಿ-ಮನಸ್ಸಿನಲ್ಲಿ, ಅಸ್ಯಶಕುನೇಃ-ಈ ಪಕ್ಷಿಗೋಸ್ಕರ, ಶೋಕಾರ್ತೇನ - ವ್ಯಸನದಿಂದ ಪೀಡಿತನಾದ, ಮಯಾ - ನನ್ನಿಂದ, ಇದಂ - ಕಠೋರವಾದ, ಕಿಂ ಎಂತಹ ನುಡಿಯು, ವ್ಯಾಹೃತಂ-ಹೇಳಲ್ಪಟ್ಟಿತು, ಇತಿ ಇಂತೆಂದು, ಚಿಂತಾ-ಆಲೋಚನೆಯು, ಬಭೂವ ಆಯಿತು, (ತಿ) ಮಯಾ ಮುನಿಯಾದ ನನ್ನಿಂದ, ಅಸ್ಯಶಕುನೇಃ-ಈ ಪಕ್ಷಿ ನಿಮಿತ್ತವಾಗಿ, ಇದಂ-ಈ ತಪೋನಾಶಕರವಾದ, ಕಿಂ - ಎಂತಹಮಾತು, ವ್ಯಾಹೃತಂ-ಹೇಳಲ್ಪಟ್ಟಿತು, ಇತಿ-ಇಂತೆಂದು, ತಸ್ಯ ಆ ಋಷಿಯ, ಹೃದಿ-ಹೃದಯದಲ್ಲಿ, ಚಿಂತಾಬಭೂವ-ಆಲೋಚನೆಹುಟ್ಟಿತು. ||೧೬|| (ಗೋ) ಇತಿ-ಈ ಪ್ರಕಾರವಾಗಿ, ಚಿಂತಯನ್-ಆಲೋಚಿಸುತ್ತಿರುವ, ಮಹಾಪ್ರಾಜ್ಞಃ-ಮಹಾ ಪಂಡಿತನಾದ, ಸಃ-ಪ್ರಸಿದ್ಧನಾದ, ಮತಿಮಾನ್- ಮಹಾಬುದ್ಧಿಶಾಲಿಯಾದ, ಅಥವ ಶಾಸ್ತ್ರಜ್ಞಾನಿಯಾದ, ಮುನಿಪುಂಗವಃ ಋಷಿಶ್ರೇಷ್ಠನಾದ, ಸ -ಆ ವಾಲ್ಮೀಕಿಯು, ಮತಿಂ ನಿಶ್ಚಯವನ್ನು, ಚಕಾರ-ಮಾಡಿದನು, ಶಿಷ್ಯಂಚ-ಶಿಷ್ಯನನ್ನು ಕುರಿತು, ಇದಂವಾಕ್ಯಮೇವ-ಈ ಮಾತನ್ನೇ, ಅಬ್ರವೀತ್ - ನುಡಿದನು. ||೧೭|| ತಂತ್ರೀಲಯಸಮನ್ವಿತಃ, ತಂತ್ರೀ- ವೀಣಾತಂತುಧ್ವನಿಯಿಂದಲೂ, ಲಯ-ಮೃದಂಗ ತಾಳಾದಿ ವಿರಾಮಕಾಲದಿಂದಲೂ, ಸಮನ್ವಿತಃ-ಕೂಡಿರುವ, ಪಾದಬದ್ಧಃ-ನಾಲ್ಕುಪಾದಗಳಿಂದ ಕೂಡಿ, ಅಕ್ಷರಸಮಃ-ಸಮಾಕ್ಷರಗಳುಳ್ಳ, ಶೋಕಾರ್ತಸ್ಯ - ಚಿಂತೆಯಿಂದ ಪೀಡಿತನಾದ, ಮೇ - ನನ್ನ ಮುಖದಿಂದ, ಪ್ರವೃತ್ತಃ-ಹೊರಟಿದ್ದು, ಶ್ಲೋಕಃ-ಶ್ಲೋಕವು, ಭವತು-ಆಗಲಿ, ಅನ್ಯಥಾ-ಮತ್ತೊಂದು ಬಗೆಯಾಗಿ,

ಆದ ಸೀತಾರಾಮರೂಪ ಯುಗ್ಮದಲ್ಲಿ, ಶ್ರೀರಾಮಚಂದ್ರನಲ್ಲಿಯೇ ಆಸಕ್ತಳಾದ ಸೀತಾದೇವಿಯನ್ನು ಅಪಹರಿಸಿ, ವಧೆಗಿಂತಲೂ ಹೆಚ್ಚಾಗಿ ಬಾಧಿಸಿದೆಯಾದುದರಿಂದ ಬಹಳ ವರ್ಷಕಾಲವಿರುವಿಕೆಯನ್ನು ಹೊಂದಬೇಡ'' ||೧೫|| ಬೇಡನಿಂದ ಹತವಾದ ಆ ಕ್ರೌಂಚಪಕ್ಷಿಯನ್ನು ಕಂಡು ಈ ರೀತಿಯಾಗಿ ನುಡಿದ ಆ ವಾಲ್ಮೀಕಿಯು ಹೀಗೆ ಚಿಂತಿಸತೊಡಗಿದನು. "ಅಯ್ಯೋ! ಈ ಹೆಣ್ಣು ಪಕ್ಷಿಯ ವಿಷಯವಾಗಿ ದುಃಖಿಸುತ್ತಿರುವ ನನ್ನಿಂದ ಎಂತಹ ಕಠಿಣವಾದ ನುಡಿಯು ಹೊರಟಿತು'' ||೧೬|| ಎಂದು ಚಿಂತಿಸಿ ಮಹಾಪ್ರಾಜ್ಞನಾಗಿಯೂ, ಶಾಸ್ತ್ರಜ್ಞಾನವುಳ್ಳವನಾಗಿಯೂ, ಮುನಿಪುಂಗವನಾಗಿಯೂ, ಇರುವ ಆ ವಾಲ್ಮೀಕಿಋಷಿಯು, ಹೀಗೆ ನಿಶ್ಚೈಸಿಕೊಂಡು ಶಿಷ್ಯನಾದ ಭರದ್ವಾಜನನ್ನು ಕುರಿತಿಂತೆಂದನು ||೧೭|| "ಎಲೈ ವತ್ಸನೇ! ಕ್ರೌಂಚಸ್ತ್ರೀ ಪಕ್ಷಿವಿಷಯವಾಗಿ, ಶೋಕಪೀಡಿತನಾದ ನನ್ನ ಮುಖದಿಂದ ಹೊರಟ

ಶ್ಲೋಕೋಭವತುನಾನ್ಯಥಾ ||೧೮|| ಶಿಷ್ಯಸ್ತುತಸ್ಯಬ್ರುವತೋ ಮುನೇರ್ವಾಕ್ಯಮನುತ್ತಮಂ | ಪ್ರತಿಜಗ್ರಾಹಸಂಹೃಷ್ಟ ಸ್ತಸ್ಯತುಷ್ಟೋಭವದ್ಗುರುಃ || ೧೯ || ಸೋಭಿಷೇಕಂ ತತಃ ಕೃತ್ವಾ ತೀರ್ಥೇ ತಸ್ಮಿನ್ ಯಥಾವಿಧಿ | ತಮೇವ ಚಿಂತಯನ್ನರ್ಥ ಮುಪಾವರ್ತತ ವೈಮುನಿಃ||೨೦|| ಭರದ್ವಾಜ ಸ್ತತಶ್ಶಿಷ್ಯೋ ವಿನೀತಶ್ಶ್ರುತವಾನ್ಮುನೇಃ|| ಕಲಶಂಪೂರ್ಣಮಾದಾಯ ಪೃಷ್ಠತೋನುಜಗಾಮಹ ||೨೧|| ಸಪ್ರವಿಶ್ಯಾಶ್ರಮಪದಂ ಶಿಷ್ಯೇಣ ಸಹ ಧರ್ಮವಿತ್ | ಉಪವಿಷ್ಟಃ ಕಥಾಶ್ಚಾನ್ಯಾಶ್ಚಕಾರಧ್ಯಾನಮಾಸ್ಥಿತಃ ||೨೨|| ಆಜಗಾಮ

ನಭವತು-ಆಗಬೇಡ, ಇತಿ-ಇಂತೆಂದು, ಚಿಂತಾಂಬಭೂವ-ಆಲೋಚನೆಯು ಹುಟ್ಟಿತು. || ೧೮ || ಶಿಷ್ಯಸ್ತು-ಶಿಷ್ಯನಾದ ಭರದ್ವಾಜನಾದರೆ, ಬ್ರುವತಃ ಹೇಳುತ್ತಿರುವ, ತಸ್ಯಮುನೇಃ- ಆ ವಾಲ್ಮೀಕಿಋಷಿಯ, ಅನುತ್ತಮಂ-ಸರ್ವೋತ್ತಮವಾದ, ವಾಕ್ಯಂ-ವಚನವನ್ನು, ಸಂಹೃಷ್ಟಃ-ಸಂತೋಷಯುಕ್ತನಾಗಿ, ಪ್ರತಿಜಗ್ರಾಹ-ಗ್ರಹಿಸಿದನು, ತಸ್ಯ-ಆ ಶಿಷ್ಯನಿಗೆ, ಗುರುಃ - ಗುರುವಾದ ವಾಲ್ಮೀಕಿಋಷಿಯು, ತುಷ್ಟಃ-ಸಂತೋಷಗೊಂಡವನು, ಅಭವತ್ - ಆದನು. ||೧೯|| ತತಃ - ಬಳಿಕ, ಸಮುನಿಃ - ಆ ವಾಲ್ಮೀಕಿಋಷಿಯು, ತಸ್ಮಿನ್‌ತೀರ್ಥೇ - ಆ ಪವಿತ್ರವಾದ ತಮಸಾನದಿಯಲ್ಲಿ, ಯಥಾವಿಧಿ ಶಾಸ್ತ್ರೋಕ್ತವಾಗಿ, ಅಭಿಷೇಕಂ - ಸ್ನಾನವನ್ನು, ಕೃತ್ವಾ - ಮಾಡಿ, ತಮರ್ಥಮೇವ- ಆ "ಮಾನಿಷಾದ" ಎಂಬ ಶ್ಲೋಕಕ್ಕೆ ಮಂಗಳರೂಪವಾದ ಅರ್ಥವನ್ನೇ, ಚಿಂತಯನ್ - ಆಲೋಚಿಸುತ್ತಾ, ಉಪಾವರ್ತತವೈ-ಹಿಂತಿರಿಗಿಬಂದನಷ್ಟೆ. ||೨೦|| ತತಃ - ಬಳಿಕ, ಶ್ರುತವಾನ್ ಶಾಸ್ತ್ರಜ್ಞನಾದ, ವಿನೀತಂ - ನಮ್ರನಾದ, ಭರದ್ವಾಜಃ - ಭರದ್ವಾಜನೆಂಬ, ಶಿಷ್ಯಃ- ಶಿಷ್ಯನು, ಪೂರ್ಣಂ - ಜಲಪೂರಿತವಾದ, ಕಲಶಂ - ಕಲಶವನ್ನು, ಆದಾಯ - ತೆಗೆದುಕೊಂಡು, ಮುನೇಃ - ವಾಲ್ಮೀಕಿಋಷಿಯ, ಪೃಷ್ಠತಃ ಹಿಂಭಾಗದಲ್ಲಿ, ಅನುಜಗಾಮಹ - ಅನುಸರಿಸಿದನಷ್ಟೆ. ||೨೧|| ಧರ್ಮವಿತ್ - ಧರ್ಮಜ್ಞನಾದ, ಸಃ- ಆ ವಾಲ್ಮೀಕಿಋಷಿಯು, ಶಿಷ್ಯೇಣಸಹ - ಶಿಷ್ಯನೊಡಗೂಡಿ, ಆಶ್ರಮಪದಂ - ಆಶ್ರಮಸ್ಥಾನವನ್ನು, ಪ್ರವಿಶ್ಯ - ಪ್ರವೇಶಿಸಿ, ಧ್ಯಾನಂ - ಶ್ಲೋಕ ವಿಷಯಿಕವಾದ ಚಿಂತೆಯನ್ನು, ಆಸ್ಥಿತಃ - ಹೊಂದಿ, ಉಪವಿಷ್ಟಃ, ಕುಳಿತುಕೊಂಡು, ಅನ್ಯಾಃಕಥಾಃ – (ಗೋ) ಪುರಾಣಪಾರಾಯಣಾದಿಗಳನ್ನು, ಚಕಾರ ಮಾಡಿದನು.

---

ಪದ್ಯವು, ನಾಲ್ಕು ಪಾದಗಳಿಂದ ಕೂಡಿದುದಾಗಿಯೂ, ಛಂದೋಬದ್ಧವಾಗಿಯೂ ವಾದ್ಯಗಳೊಡನೆ ವೀಣೆಯಿಂದ ಬಾರಿಸುವುದಕ್ಕೆ ಯೋಗ್ಯವಾಗಿಯೂ, ಇರುವಕಾರಣ ಶ್ಲೋಕವೇ ಆದರೂ ಬೇರೆವಿಧವಾಗಿ ಆಗದೇಇರಲಿ"ಎಂದನು. ಇದನ್ನುಕೇಳಿದ ಭರದ್ವಾಜನು ಸರ್ವರಾಮಾಯಣಾರ್ಥ ಸಂಗ್ರಹರೂಪವಾದ, ಆ ವಾಕ್ಯವನ್ನು ಕೇಳಿ ಸಂತಸಗೊಂಡು, ಪ್ರತಿಗ್ರಹಿಸಲು, ವಾಲ್ಮೀಕಿಯೂ ನಹ ಆನಂದಿಸಿದನು. ||೧೯|| ಆ ಬಳಿಕ ವಾಲ್ಮೀಕಿಋಷಿಯು ಆ ತಮಸಾನದಿಯ ತೀರದಲ್ಲಿಯೇ ಶಾಸ್ತ್ರವಿಧಿಯಿಂದ ಸ್ನಾನಮಾಡಿ ಶ್ಲೋಕೋತ್ಪತ್ತಿರೂಪವಾದ ಅರ್ಥವನ್ನೇಯೋಚಿಸುತ್ತ ತನ್ನ ಆಶ್ರಮವನ್ನು ಕುರಿತು ಹೊರಟನು. ||೨೦|| ಆಗ ವಿನಯಸಂಪನ್ನನಾದವನೂ, ಗುರುಶೋಕವನ್ನರಿತವನೂ ಆದ ಭರದ್ವಾಜನೆಂಬ ಶಿಷ್ಯನು, ಜಲಪೂರಿತವಾದ ಕಲಶವನ್ನು ತೆಗೆದುಕೊಂಡು, ಆತನನ್ನು ಹಿಂಬಾಲಿಸಿ ಹೊರಟನು ||೨೧|| ಬಳಿಕಲಾ ಧರ್ಮಾತ್ಮನಾದ ವಾಲ್ಮೀಕಿಯು, ಶಿಷ್ಯನಾದ ಭರದ್ವಾಜನೊಡನೆ, ತನ್ನ ಆಶ್ರಮವನ್ನು ಸೇರಿ, ಆ ಅರ್ಥವನ್ನೇ, ಮನಸ್ಸಿನಲ್ಲಿ ಚಿಂತಿಸುತ್ತಾ ಇತರ ಕಥೆಗಳನ್ನು ಹೇಳುತ್ತಿದ್ದನು || ೨೨ ||

ತತೋ ಬ್ರಹ್ಮಾ ಲೋಕಕರ್ತಾ ಸ್ವಯಂಪ್ರಭುಃ। ಚತುರ್ಮುಖೋ ಮಹಾತೇಜಾ ದ್ರಷ್ಟುಂ ತಂ ಮುನಿಪುಂಗವಂ ॥ ೨೩ ॥ ವಾಲ್ಮೀಕಿರಥತಂದೃಷ್ಟ್ವಾ ಸಹಸೋತ್ಥಾಯ ವಾಗ್ಯತಃ। ಪ್ರಾಂಜಲಿಃ ಪ್ರಣತೋಭೂತ್ವಾ ತಸ್ಥೌ ಪರಮವಿಸ್ಮಿತಃ॥೨೪॥ ಪೂಜಯಾಮಾಸ ತಂದೇವಂ ಪಾದ್ಯಾರ್ಘ್ಯಾಸನ ವಂದನೈಃ। ಪ್ರಣಮ್ಯ ವಿಧಿವಚ್ಚೈನಂಪೃಷ್ಟ್ವಾಽನಾಮಯಮವ್ಯಯಂ ॥೨೫॥ ಅಥೋಪವಿಶ್ಯಭಗವಾನಾಸನೇ ಪರಮಾರ್ಚಿತೇ। ವಾಲ್ಮೀಕಯೇಮಹರ್ಷಯೇಸಂದಿದೇಶಾಸನಂತತಃ ।೨೬। ಬ್ರಹ್ಮಣಾಸಮನುಜ್ಞಾತ ಸ್ಸೋಽಪ್ಯುಪಾವಿಶದಾಸನೇ॥ ಉಪವಿಷ್ಟೇ ತದಾತಸ್ಮಿನ್ ಸಾಕ್ಷಾಲ್ಲೋಕ ಪಿತಾಮಹೇ।ತದ್ಗತೇನೈವ

॥೨೨॥ ತತಃ - ಬಳಿಕ, ಲೋಕಕರ್ತಾ- ಪ್ರಪಂಚದ ಸೃಷ್ಟಿಕರ್ತನಾದ, ಪ್ರಭುಃ - ತತ್ವಾವಧಾರಣ ಸಮರ್ಥನಾದ, ಮಹಾತೇಜಾಃ - ಮಹಾತೇಜಸ್ವಿಯಾದ, ಚತುರ್ಮುಖೋಬ್ರಹ್ಮಾ - ನಾಲ್ಕು ಮುಖಗಳುಳ್ಳ ಬ್ರಹ್ಮನು, ತಂಮುನಿಪುಂಗವಂ - ಆ ವಾಲ್ಮೀಕಿಋಷಿಯನ್ನು, ದ್ರಷ್ಟುಂ - ನೋಡಲು, ಸ್ವಯಂ - ತಾನಾಗಿಯೇ, ಆಜಗಾಮ - ಬಂದನು. ॥೨೩॥ ಅಥ - ಆ ಮೇಲೆ, ವಾಗ್ಯತಃ - ಮಿತಭಾಷಿಯಾದ, ವಾಲ್ಮೀಕಿಃ - ವಾಲ್ಮೀಕಿಯು, ತಂ - ಆ ಬ್ರಹ್ಮದೇವನನ್ನು, ದೃಷ್ಟ್ವಾ - ಕಂಡು, ಸಹಸಾ ಬೇಗನೆ, ಉತ್ಥಾಯ - ಎದ್ದು, ಪ್ರಣತಃಭೂತ್ವಾ - ವಂದಿಸಿ, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಪರಮವಿಸ್ಮಿತಃ ಬಹಳ ಆಶ್ಚರ್ಯಪಟ್ಟು, ತಸ್ಥೌ - ನಿಂತನು ॥ ೨೪ ॥ ತಮೇನಂ ದೇವಂ - ಆ ಬ್ರಹ್ಮದೇವನನ್ನು, ವಿಧಿವತ - ಶಾಸ್ತ್ರೋಕ್ತವಾಗಿ, ಪ್ರಣಮ್ಯ - ವಂದಿಸಿ, ಅವ್ಯಯಂ - ನಾಶರಹಿತವಾದ, ಅನಾಮಯಂ - ಕ್ಷೇಮಸಮಾಚಾರವನ್ನು ಕುರಿತು, ಪೃಷ್ಟ್ವಾ-ಕೇಳಿ, ಪಾದ್ಯಾ.... ನೈಃ - ಪಾದ್ಯೋದಕ, ಹಸ್ತೋದಕ, ಆಸನ, ನಮಸ್ಕಾರಗಳಿಂದ, ಪೂಜಯಾಮಾಸ - ಪೂಜಿಸಿದನು. ॥೨೫॥ ಅಥ - ಬಳಿಕ, ಭಗವಾನ್ - ಪೂಜ್ಯನಾದ ಬ್ರಹ್ಮನು, ಪರಮಾರ್ಚಿತೇ ಅತಿಶಯವಾಗಿ ಪೂಜಿಸಲ್ಪಟ್ಟ, ಆಸನೇ - ಪೀಠದಲ್ಲಿ, ಉಪವಿಶ್ಯ - ಕುಳಿತುಕೊಂಡು, ಮಹರ್ಷಯೇವಾಲ್ಮೀಕಯೇ - ವಾಲ್ಮೀಕಿಋಷಿಗೆ, ಆಸನಂ ಉಪವೇಶನವನ್ನು, ಆಜ್ಞಾಪಯಾಮಾಸ ಆಜ್ಞಾಪಿಸಿದನು, ಬ್ರಹ್ಮಣಾ- ಬ್ರಹ್ಮನಿಂದ, ಸಮನುಜ್ಞಾತಃ - ಆಜ್ಞಾಪಿಸಲ್ಪಟ್ಟ, ಸೋಽಪಿ - ಆ ವಾಲ್ಮೀಕಿಯೂ ಸಹ, ಆಸನೇ - ಪೀಠದಲ್ಲಿ, ಉಪಾವಿಶತ್ - ಕುಳಿತುಕೊಂಡನು. ॥೨೬॥ ತದಾ - ಆಗ, ಲೋಕಪಿತಾಮಹೇ- ಜನಗಳಿಗೆಲ್ಲ ಪಿತಾಮಹನಾದ, ತಸ್ಮಿನ್ - ಆ ಬ್ರಹ್ಮನು, ಸಾಕ್ಷಾತ್ - ಪ್ರತ್ಯಕ್ಷವಾಗಿ, ಉಪವಿಷ್ಟೇಸತಿ - ಕುಳಿತುಕೊಳ್ಳಲು ವಾಲ್ಮೀಕಿಃ - ವಾಲ್ಮೀಕಿಯು, ತದ್ಗತೇನ - ಆ ಕ್ರೌಂಚಪಕ್ಷಿಯನ್ನು ಹೊಂದಿದ,

ಆಗ ಪ್ರಪಂಚದ ಸೃಷ್ಟಿಕರ್ತನಾದ, ಮಹಾಪ್ರಭಾವವುಳ್ಳ ಚತುರ್ಮುಖ ಬ್ರಹ್ಮನು ಆ ವಾಲ್ಮೀಕಿಯನ್ನು ನೋಡಲು ಆತನ ಬಳಿಗೆ ತಾನಾಗಿಯೇ ಬಂದನು. ॥೨೩॥ ಆ ಸಮಯದಲ್ಲಿಯೂ ವಾಲ್ಮೀಕಿಮುನಿಯು, ಲೋಕಪಿತಾಮಹನನ್ನು ಕಂಡು, ಆಶ್ಚರ್ಯಭರಿತನಾಗಿ, ಬೇಗನೆದ್ದು, ಮಿತಭಾಷಿಯೂ, ಚಿತ್ತಸ್ಥೈರ್ಯವುಳ್ಳವನೂ, ಅಂಜಲಿಬದ್ಧನೂ ಆಗಿ, ಅರ್ಘ್ಯಪಾದ್ಯಾದಿಗಳಿಂದ, ಶಾಸ್ತ್ರೋಕ್ತವಾಗಿ ಆತನನ್ನು ಪೂಜಿಸಿ, ಪ್ರದಕ್ಷಿಣೆಗೈದು, ಕ್ಷೇಮಸಮಾಚಾರವನ್ನು ಕೇಳಿ ನಿಂತಿದ್ದನು. ॥೨೫॥ ಪೂಜ್ಯನಾದ ಆ ಬ್ರಹ್ಮನು ಪರಮಾರ್ಚಿತವಾದ ಆಪೀಠದಲ್ಲಿ ಕುಳಿತು, ವಾಲ್ಮೀಕಿಗೂ, ಕುಳಿತುಕೊಳ್ಳಲು ಆಜ್ಞಾಪಿಸಿದನು. ಈ ವಾಲ್ಮೀಕಿಯು ಅಂತೆಯೇ ಮಾಡಿ ॥ ೨೬ ॥ಬ್ರಹ್ಮನಸಮ್ಮುಖದಲ್ಲಿಯೂ ಸಹ, ಆ ಕ್ರೌಂಚ

ಮನಸಾ ವಾಲ್ಮೀಕಿ ರ್ಧ್ಯಾನಮಾಸ್ಥಿತಃ ||೨೬|| ಪಾಪಾತ್ಮನಾ ಕೃತಂ ಕಷ್ಟಂ ವೈರ ಗ್ರಹಣ ಬುದ್ಧಿನಾ ||೨೭|| ಯಸ್ತಾದೃಶಂ ಚಾರುರವಂ ಕ್ರೌಂಚಂ ಹನ್ಯಾದಕಾರಣಾತ್ | ಶೋಚನ್ನೇವಮುಹುಃಕ್ರೌಂಚೀ ಮುಪಶ್ಲೋಕಮಿಮಂ ಪುನಃ | ಜಗಾವಂತರ್ಗತ ಮನಾ ಭೂತ್ವಾಶೋಕಪರಾಯಣಃ ||೨೯|| ತಮುವಾಚತತೋಬ್ರಹ್ಮಾ ಪ್ರಹಸನ್ಮುನಿಪುಂಗವಂ | ಶ್ಲೋಕಏವ ತ್ವಯಾಬದ್ಧೋ ನಾತ್ರಕಾರ್ಯಾ ವಿಚಾರಣಾ || ೩೦ || ಮಚ್ಛಂದಾದೇವತೇಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ|| ರಾಮಸ್ಯಚರಿತಂ ಸರ್ವಂಕುರುತ್ವ ಮೃಷಿಸತ್ತಮ ||೩೧|| ಧರ್ಮಾತ್ಮನೋ ಗುಣವತೋ ಲೋಕೇ ರಾಮಸ್ಯಧೀಮತಃ |

ಮನಸೈವ - ಮನಸ್ಸಿನಿಂದಲೇ, ಧ್ಯಾನಂ - ಚಿಂತೆಯನ್ನು, ಆಸ್ಥಿತಃ - ಹೊಂದಿದನು ||೨೬|| ಯಃ - ಯಾರುತಾನೆ, ಚಾರುರವಂ - ಮನೋಹರಧ್ವನಿಯುಳ್ಳ, ತಾದೃಶಂಕ್ರೌಂಚಂ- ಅಂತಹ ಕ್ರೌಂಚಪಕ್ಷಿಯನ್ನು, ಅಕಾರಣಾತ್ - ಕಾರಣವಿಲ್ಲದೆಯೇ, ಹನ್ಯಾತ್ - ಕೊಲ್ಲುವನು, ವೈರಗ್ರಹಣಬುದ್ಧಿನಾ- ದ್ವೇಷದಿಂದ ಹಕ್ಕಿಗಳನ್ನು ಹಿಡಿಯುವ ಬುದ್ಧಿಯುಳ್ಳ, ಪಾಪಾತ್ಮನಾ - ಪಾಪಿಷ್ಠನಾದ ಬೇಡನಿಂದ, ಕಷ್ಟಂ - ಶೋಚನೀಯವಾದ ಕೆಲಸವು, ಕೃತಂ - ಮಾಡಲ್ಪಟ್ಟಿತು ||೨೭|| ಅಂತರ್ಗತಮನಾಃ - ತಗ್ಗಿದಮನಸ್ಸುಳ್ಳ ವಾಲ್ಮೀಕಿಋಷಿಯು, ಕ್ರೌಂಚಮೇವ- ಕ್ರೌಂಚಪಕ್ಷಿಯನ್ನೇ ಕುರಿತು, ಶೋಚನ್- ದುಃಖಿಸುತ್ತಾ, ಮುಹುಃ - ಬಾರಿಬಾರಿಗೂ, ಶೋಕಪರಾಯಣಃ-ಕ್ರೌಂಚಪಕ್ಷಿಯ ವಧೆಯಿಂದುಂಟಾದ ದುಃಖದಲ್ಲಾಸಕ್ತನಾಗಿ, ಪುನಃ - ತಿರುಗಿ, ಇಮಂಶ್ಲೋಕಂ - ಈ " ಮಾನಿಷಾದ " ಎಂಬ ಶ್ಲೋಕವನ್ನು, ಉಪಜಗೌ - ಹಾಡಿದನು. ||೨೯|| ತತಃ - ಬಳಿಕ, ಬ್ರಹ್ಮಾ ಚತುರ್ಮುಖಬ್ರಹ್ಮನು, ಪ್ರಹಸನ್ - ನಗುತ್ತ, ತಂಮುನಿಪುಂಗವಂ - ಆ ವಾಲ್ಮೀಕಿಋಷಿಯನ್ನು ಕುರಿತು, ತ್ವಯಾ - ನಿನ್ನಿಂದ, ಶ್ಲೋಕಏವಬದ್ಧಃ - ಶ್ಲೋಕವೇ ಕಟ್ಟಲ್ಪಟ್ಟಿತು, ಅತ್ರ - ಈ ವಿಷಯದಲ್ಲಿ, ವಿಚಾರಣಾ - ಚರ್ಚೆಯು, ನಕಾರ್ಯಾ - ಮಾಡತಕ್ಕದ್ದಲ್ಲ, ಇತಿ - ಹೀಗೆಂದು, ಉವಾಚ - ಹೇಳಿದನು ||೩೦|| ಹೇಬ್ರಹ್ಮನ್- ಎಲೈ ಬ್ರಾಹ್ಮಣನೆ ! ಹೇಋಷಿಸತ್ತಮ - ಎಲೈ ಋಷಿಶ್ರೇಷ್ಠನೆ ! ಮಚ್ಛಂದಾದೇವ - ನನ್ನ ಇಚ್ಛಾನುಸಾರವಾಗಿಯೇ, ಇಯಂಸರಸ್ವತೀ - ಈ 'ಮಾನಿಷಾದ' ಎಂಬ ವಾಕ್ಕು, ತೇ - ನಿನ್ನಿಂದ, ಪ್ರವೃತ್ತಾ- ಹೊರಟಿತು, ತ್ವಂ-ನೀನು, ರಾಮಸ್ಯ - ರಾಮನ, ಸರ್ವಂಚರಿತಂ - ಸಂಪೂರ್ಣಚರಿತ್ರೆಯನ್ನು, ಕುರು- ಮಾಡು. ||೩೧|| ನಾರದಂ - ನಾರದಮುನಿಯಿಂದ, ತೇ ನಿನಗೆ, ಯಥಾಶ್ರುತಂ - ಹೇಗೆ ಕೇಳಿಸಲ್ಪ

ಪಕ್ಷಿಯ ವಿಷಯವಾಗಿ ಹೊರಟ ವಾಕ್ಯವನ್ನು ಕುರಿತು ಯೋಚಿಸುತ್ತಿದ್ದನೆಂತೆನೆ;-||೨೬|| "ವೈರದಿಂದ ಕ್ರೌಂಚಪಕ್ಷಿಯನ್ನು ಹಿಡಿಯಬೇಕೆಂಬ ಬುದ್ಧಿಯುಳ್ಳ ಪಾಪಿಷ್ಠನಾದ ಆ ಬೇಡನು, ಇಂಪಾದ ಸ್ವರವುಳ್ಳ ಅಂತಹ ಪಕ್ಷಿಯನ್ನು ಏನೂ ಕಾರಣವಿಲ್ಲದೆ ಕೊಂದನಲ್ಲ ! ತಪಸ್ಸಿಗೆ ಭಂಗವನ್ನುಂಟುಮಾಡುವುದೂ, ಶಾಪರೂಪವುಳ್ಳದ್ದೂ ಆದ ಈ ಶ್ಲೋಕವು ನನ್ನ ಮುಖದಿಂದ ಹೊರಬಿದ್ದಿತಲ್ಲ !! ಏನುಮಾಡಲಿ!" ಎಂದಡಿಗಡಿಗೂ, ಚಿಂತಿಸುತ್ತಿದ್ದ || ೨೯ || ಆ ವಾಲ್ಮೀಕಿಯನ್ನು ಕುರಿತು, ಲೋಕಪಿತಾಮಹನಾದ ಬ್ರಹ್ಮನು ಹೀಗೆಂದನು. "ಎಲೈ ಋಷಿಪುಂಗವನೇ ನಿನ್ನಿಂದ ಛಂದೋಬದ್ಧವಾದ ಶ್ಲೋಕವೇ ಮಾಡಲ್ಪಟ್ಟಿದೆ. ಈ ವಿಷಯದಲ್ಲಿ ಸ್ವಲ್ಪಮಾತ್ರವೂ ಸಂಶಯಪಡಬೇಡ ||೩೦|| ನನ್ನ ಇಚ್ಛಾನುಸಾರವಾಗಿಯೇ ನಿನ್ನ ಮುಖದಿಂದ ಈ 'ಮಾನಿಷಾದ' ಎಂಬ ಶ್ಲೋಕವು ಹೊರಬಿದ್ದಿರುವುದು. ಎಲೈ! ಬ್ರಾಹ್ಮಣ

ವೃತ್ತಂ ಕಥಯ ಧೀರಸ್ಯ ಯಥಾ ತೇ ನಾರದಾಚ್ಛ್ರುತಂ ||೩೨|| || ರಹಸ್ಯಂ ಚ ಪ್ರಕಾಶಂ ಚ ಯದ್ವೃತ್ತಂ ತಸ್ಯ ಧೀಮತಃ| ರಾಮಸ್ಯ ಸಹಸೌಮಿತ್ರೇ ರಾಕ್ಷಸಾನಾಂ ಚ ಸರ್ವಶಃ| ವೈದೇಹ್ಯಾಶ್ಚೈವ ಯದ್ವೃತ್ತಂ ಪ್ರಕಾಶಂ ಯದಿ ವಾ ರಹಃ | ತಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ ||೩೪|| || ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ! ಕುರು ರಾಮಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಂ ||೩೫|| || ಯಾವತ್ ಸ್ಥಾ

ಟೈತೊ, ತಥಾ - ಹಾಗೆ, ಲೋಕೇ- ಪ್ರಪಂಚದಲ್ಲಿ, ಧರ್ಮಾತ್ಮನಃ - ಧರ್ಮಿಷ್ಠನಾದ, ಗುಣವತಃ - ಸೌಶೀಲ್ಯಾದಿಗುಣಗಳುಳ್ಳ, ಧೀರಸ್ಯ ಧೈರ್ಯವಂತನಾದ, ಧೀಮತಃ - ಬುದ್ಧಿಶಾಲಿಯಾದ, ರಾಮಸ್ಯ- ಶ್ರೀರಾಮನ, ವೃತ್ತಂ - ಚರಿತೆಯನ್ನು, ಕಥಯ- ಹೇಳು. ||೩೨|| ಸಹಸೌಮಿತ್ರೇಃ- ಲಕ್ಷ್ಮಣನಿಂದೊಡಗೂಡಿದ, ಧೀಮತಃ ಪ್ರಜ್ಞಾಶಾಲಿಯಾದ, ತಸ್ಯ ರಾಮಸ್ಯ-ಆ ರಾಮಚಂದ್ರನ, ಯದ್ವೃತ್ತಂ-ಯಾವಚರಿತೆಯು, ರಹಸ್ಯಂ ಚ ಪ್ರಕಾಶಂ ಚ ಗುಪ್ತವಾಗಿಯೂ ಪ್ರಕಟವಾಗಿಯೂ ಇದೆಯೂ, ರಾಕ್ಷಸಾನಾಂ ಚ - ರಾಕ್ಷಸರ, ವೈದೇಹ್ಯಾಶ್ಚ - ಸೀತಾದೇವಿಗೂ ಸಹ, ಯದ್ವೃತ್ತಂ - ಯಾವನಡತೆಯು, ಪ್ರಕಾಶಂ - ಪ್ರಕಾಶವಾಗಿಯೂ, ರಹೋವಾಯದಿ - ಗುಪ್ತವಾದದ್ದಾದರೂ, ಸರ್ವಂ - ಸಮಸ್ತವಾದ, ತಚ್ಚ - ಆ ಚರಿತೆಯು, ಅವಿದಿತಮಪಿ - ತಿಳಿಯಲ್ಪಡದಿದ್ದರೂ, ಸರ್ವಶಃ - ಎಲ್ಲವಿಧದಿಂದಲೂ, ತೇ ವಿದಿತಂಭವಿಷ್ಯತಿ - ನಿನಗೆ ತಿಳಿದದ್ದಾಗಿಯೇ ಆಗುವುದು. ||೩೪|| ಅತ್ರಕಾವ್ಯೇ - ಈ ಕಾವ್ಯದಲ್ಲಿ, ತೇ ಕಾಚಿತ್ವಾಕ್ - ನಿನ್ನಿಂದ ಹೊರಟ ಯಾವ ಮಾತೇ ಆಗಲಿ, ಅನೃತಾನಭವಿಷ್ಯತಿ - ಸುಳ್ಳಾಗುವುದಿಲ್ಲ, ಶ್ಲೋಕಬದ್ಧಾಂ - ಶ್ಲೋಕಗಳಿಂದ ಕೂಡಿದ, ಮನೋರಮಾಂ - ಮನೋಹರವಾದ, ಪುಣ್ಯಾಂ - ಪುಣ್ಯತರವಾದ, ರಾಮಕಥಾಂ - ರಾಮಚರಿತೆಯನ್ನು, ಕುರು - ಮಾಡು. ||೩೫|| ಗಿರಯಃ - ಪರ್ವತಗಳು, ಸರಿತಶ್ಚ - ನದಿಗಳೂ, ಯಾವತ - ಎದುವರಿವಿಗೆ, ಮಹೀತಲೆ - ಭೂಮಂಡಲದಲ್ಲಿ, ಸ್ಥಾಸ್ಯಂತಿ - ಇರುತ್ತದೆಯೋ, ತಾವತ' - ಅವರಿವಿಗೂ, ರಾಮಾಯಣ ಕಥಾ - ನಿನ್ನಿಂದಮಾಡಲ್ಪಡುವ ಈ ರಾಮಚರಿತೆಯು, ಲೋಕೇಷು - ಸ್ವರ್ಗ,ಮರ್ತ್ಯ, ಪಾತಾಳಾದಿ ಸರ್ವ ಲೋಕಗಳಲ್ಲಿಯೂ, ಪ್ರಚರಿಷ್ಯತಿ - ಪ್ರಶಸ್ತವಾಗಿರುತ್ತದೆ || ೩೬ ||

ಶ್ರೇಷ್ಠನೂ, ಋಷಿಪುಂಗವನೂ ಆದವಾಲ್ಮೀಕಿಯೇ ! ಕೇಳು, ಧರ್ಮಾತ್ಮನೂ, ಮಹಾಗುಣವಂತನೂ, ಪ್ರಜ್ಞಾಶಾಲಿಯೂ ಆದ ಶ್ರೀರಾಮನ ಚರಿತ್ರೆಯನ್ನು ನಾರದನಿಂದ ಕೇಳಿರುವೆಯಷ್ಟೆ. ಅಂತೆಯೇ ಆ ಮಹಾ ಮಹಿಮನ ಚರಿತ್ರೆಯನ್ನು ರಚಿಸುವವನಾಗು || ೩೨ || ಲಕ್ಷ್ಮಣ ಸಮೇತನಾದ ಶ್ರೀರಾಮನು ರಹಸ್ಯವಾಗಿಯೂ ಬಹಿರಂಗವಾಗಿಯೂ ಅವಾವುದನ್ನೆಸಗಿದನೊ, ಸೀತಾದೇವಿಯೂ, ರಾಕ್ಷಸರೂ, ಭರತನೂ, ಗುಪ್ತವಾಗಿಯೂ, ಪ್ರಕಾಶವಾಗಿಯೂ, ಯಾವುದನ್ನಾಚರಿಸಿದರೋ,ಅವೆಲ್ಲವನ್ನೂ ನಾರದನಿಂದ ನೀನು ಕೇಳದಿದ್ದರೂ ನಿನ್ನಿಗೆ ತಿಳಿದಂತೆಯೇ ಆಗುವುದು. ಇಷ್ಟೆಯಲ್ಲದೆ ಈ ರಾಮಾಯಣ ಮಹಾಕಾವ್ಯದಲ್ಲಿ ನಿನ್ನಿಂದ ಹೇಳಲ್ಪಡುವ ಯಾವ ಮಾತೂ ಸುಳ್ಳಾಗುವುದಿಲ್ಲ ಅದುಕಾರಣ ಪುಣ್ಯತರವಾದ ಈ ರಾಮಚರಿತೆಯನ್ನು ಮನೋರಮ್ಯವಾಗಿರುವ ಶ್ಲೋಕಗಳಿಂದಲೇ ಮಾಡುವವನಾಗು. ||೩೫|| ಇಂತು ನಿನ್ನಿಂದ ರಚಿಸಲ್ಪಡುವ ರಾಮಾಯಣವು ಎದುವರಿವಿಗೊ ಈ ಭೂತಳದಲ್ಲಿ ಪರ್ವತಗಳೂ, ನದಿಗಳೂ ಇರುವವೋ ಅದು ಪರ್ಯಂತ ಪ್ರಚಾರದಲ್ಲಿರುವುದು.'' ||೩೬||

**ಸ್ಯಂತಿಗಿರಯಃ ಸರಿತಶ್ಚ ಮಹೀತಲೇ। ತಾವದ್ರಾಮಾಯಣಕಥಾ ಲೋಕೇಷು ಪ್ರಚ ರಿಷ್ಯತಿ ॥೩೬॥ ॥ ಯಾವದ್ರಾಮಾಯಣಕಥಾ ತ್ವತ್ಕೃತಾ ಪ್ರಚರಿಷ್ಯತಿ । ತಾವ ದೂರ್ಧ್ವಮಧಶ್ಚತ್ವಂ ಮಲ್ಲೋಕೇಷು ನಿವತ್ಸ್ಯಸಿ ॥೩೭॥ ॥ ಇತ್ಯುಕ್ತ್ವಾ ಭಗವಾನ್ ಬ್ರಹ್ಮಾ ತತ್ರೈವಾಂತರಧೀಯತ । ತತಸ್ಸಶಿಷ್ಯೋ ಭಗವಾನ್ ಮುನಿರ್ವಿಸ್ಮಯಮಾ ಯಯೌ ॥೩೮॥ ॥ ತಸ್ಯ ಶಿಷ್ಯಾಸ್ತತಸ್ಸರ್ವೇ ಜಗುಶ್ಶ್ಲೋಕಮಿಮಂ ಪುನಃ । ಮು ಹುರ್ಮುಹುಃ ಪ್ರೀಯಮಾಣಾಃ ಪ್ರಾಹುಶ್ಚ ಭೃಶವಿಸ್ಮಿತಾಃ ॥೩೯॥ ॥ ಸಮಾಕ್ಷರೈಶ್ಚ**

ತ್ವತ್ಕೃತಾ-ನಿನ್ನಿಂದ ರಚಿಸಲ್ಪಟ್ಟ, ರಾಮಾಯಣಕಥಾ-ರಾಮಚರಿತೆಯು, ಯಾವತ್-ಎಂದಿನವರೆವಿಗೆ, ಪ್ರಚರಿಷ್ಯತಿ-ಪ್ರಶಸ್ತವಾಗಿರುತ್ತದೆಯೋ, ತಾವತ್-ಅದುವರೆಗ, ತ್ವಂ-ನೀನು, ಅಧಶ್ಚ- (ಗೊ) ಬದುಕಿರುವವರೆವಿಗೂ, ನನ್ನಿಂದ ಸೃಷ್ಟವಾದ ಭೂಲೋಕದಲ್ಲಿಯೂ, ಊರ್ಧ್ವಂ ಭೂಲೋಕದಲ್ಲ ದೇಹತ್ಯಾಗಾನಂತರ, ಮಲ್ಲೋಕೇಷು-ನನ್ನಿಂದ ಸೃಷ್ಟವಾದ ಮೇಲಿನ ಲೋಕಗಳಲ್ಲಿಯೂ, ನಿವ ತ್ಸ್ಯಸಿ-ವಾಸಿಸುವೆ, (ಮ) ನನ್ನಿಂದ ಸೃಷ್ಟವಾದ ಅಧೋಲೋಕಗಳಲ್ಲಿಯೂ, ಊರ್ಧ್ವಲೋಕಗಳಲ್ಲ ಯೂ ಅಪ್ರತಿಹತವಾದ ಸಂಚಾರವನ್ನು ಪಡೆಯುವೆ (ತಿ) ನೀನು ದಯಾಪೂರ್ವಕನಾಗಿದ್ದರೂ, ಬೇಡರವನಲ್ಲಿ ತೋರಿದ ಕೋಪದಿಂದ ಭೂಲೋಕದಲ್ಲಿರಲು ಯೋಗ್ಯನಾಗಿದ್ದರೂ, ಮೇಲೆ ಈಗಿರುವ ನನ್ನ ಲೋಕಗಳಲ್ಲಿ ವಾಸವನ್ನು ಹೊಂದುವೆ. ॥೩೭॥ ಇತಿ-ಹೀಗೆಂದು, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಬ್ರಹ್ಮಾ-ನಾಲ್ಮೊಗನು, ಉಕ್ತ್ವಾ ಹೇಳಿ, ತತ್ರೈವ ಆ ವಾಲ್ಮೀಕಿಯ ಪ್ರತ್ಯಕ್ಷದಲ್ಲಿಯೇ, ಅಂತರಧೀಯತ - ಅಂತರ್ಧಾನವನ್ನೈದಿದನು. ತತಃ-ಬಳಿಕ, ಭಗವಾನ್-ಪೂಜ್ಯನಾದ, ಮುನಿಃ-ಮನನ ಶೀಲನಾದ ವಾಲ್ಮೀಕಿಯು, ಸಶಿಷ್ಯಃ - ಭರದ್ವಾಜನೆಂಬ ಶಿಷ್ಯನೊಡ ಗೂಡಿ, ವಿಸ್ಮಯಂ ಆಯಯೌ-ಆಶ್ಚರ್ಯವನ್ನು ಹೊಂದಿದನು. ॥೩೮॥ ತತಃ-ಬಳಿಕ, ಸರ್ವೇ ತಸ್ಯ ಶಿಷ್ಯಾಃ-ಆ ವಾಲ್ಮೀಕರ ಶಿಷ್ಯರೆಲ್ಲರೂ, ಪುನಃ-ಇನ್ನೊಮ್ಮೆ, ಇಮಂಶ್ಲೋಕಂ - ಈ ಶ್ಲೋಕವನ್ನು-ಜಗುಃ-ಹಾಡಿದರು, ಮುಹುರ್ಮುಹುಃ-ಬಾರಿಬಾರಿಗೂ, ಪ್ರೀಯಮಾಣಾಃ - ಸಂತಸಗೊಂಡವರಾಗಿ, ಭೃಶವಿಸ್ಮಿತಾಶ್ಚ-ಬಹಳ ಆಶ್ಚರ್ಯಯುಕ್ತರಾದವರಾಗಿ, ಪ್ರಾಹುಃ-ಹೇಳಿದುದೆಂತೆನೆ. ॥೩೯॥ ಯಃ-ಯಾವ, ಶ್ಲೋಕಃ-ಶ್ಲೋಕವು, ಸಮಾಕ್ಷರೈಃ-ಸಮಸಂಖ್ಯಾತವಾದ ವರ್ಣಗಳುಳ್ಳ, ಚತುರ್ಭಿಃಪಾದೈಃ-ನಾಲ್ಕು ಪಾದಗಳಿಂದ, ಮಹರ್ಷಿಣಾ - ವಾಲ್ಮೀಕಿಯಿಂದ, ಗೀತಃ-ಹಾಡಲ್ಪಟ್ಟಿತೋ, ಸಶ್ಲೋಕಃ-ಆ ಶ್ಲೋಕವು, ಭೂಯಃ-ಮತ್ತೂ, ಅನುವ್ಯಾಹರಣಾತ್-ಅನುಸರಿಸಿ ಹೇಳುವಿಕೆಯಿಂದ, ಶ್ಲೋಕತ್ವಂ-ಶ್ಲೋಕಭಾವವನ್ನು, ಅಥವ, ಶ್ಲಾಘನೀಯತೆಯನ್ನು, ಆಗತಃ-ಹೊಂದಿತು. ॥೪೦॥ ಭಾವಿತಾ-

ಎಲೈ ಋಷಿಪುಂಗವನೆ ! "ಎದುವರೆವಿಗೂ ಈ ರಾಮಾಯಣವು ಲೋಕದಲ್ಲಿ ವ್ಯಾಪಿಸಿರು ವುದೋ ಅದುವರೆಗೂ ನೀನೀಭೂಲೋಕದಲ್ಲಿಯೇ ಇದ್ದು ಆ ಬಳಿಕ ಊರ್ಧ್ವಭಾಗದ ಲ್ಲಿರುವ ನನ್ನ ಲೋಕಗಳನ್ನು ಹೊಂದುವೆ" ಎಂದು ಹೇಳಿ, ಅಲ್ಲಿಯೇ ಅಂತರ್ಧಾನವಾದನು. ಅನಂತರ ವಾಲ್ಮೀಕಿಮುನಿಯು,ಶಿಷ್ಯನಾದ ಭರದ್ವಾಜನೊಡನೆ ಬಹಳವಾಗಿ ಸಂತಸಗೊಂಡನು. ॥೩೮॥ ಆತನ ಶಿಷ್ಯರೆಲ್ಲರೂ ಆನಂದದಿಂದ ಈ ಶ್ಲೋಕವನ್ನು ಬಾರಿಬಾರಿಗೂ ಹಾಡತೊಡಗಿ "ಸಮವಾದ ಅಕ್ಷರಗಳುಳ್ಳ ನಾಲ್ಕು ಪಾದಗಳಿಂದ ಯಾವ ಶ್ಲೋಕವು ವಾಲ್ಮೀಕಿ ಮುನಿ ಯಿಂದ ಹೇಳಲ್ಪಟ್ಟಿತೋ,ಅದು ನಮ್ಮಿಂದ ಬಾರಿಬಾರಿಗೂ ಹಾಡಲ್ಪಟ್ಟು,ಶ್ಲೋಕತ್ವವನ್ನೈದಿ ತಲ್ಲ!"ಎಂದು ಆಶ್ಚರ್ಯಪಡುತ್ತಿದ್ದರು. ॥೪೦॥ಬಳಿಕ ಚಿಂತಿತ ಪರಮಾತ್ಮವುಳ್ಳ ಆ ವಾಲ್ಮೀಕಿ

ತುರ್ಭಿರ್ಯಃ ಪಾದೈರ್ಗೀತೋ ಮಹರ್ಷಿಣಾ ॥ ಸೋಽನುವ್ಯಾಹರಣಾದ್ಭೂಯಶ್ಶೋಕಶ್ಶ್ಲೋಕತ್ವಮಾಗತಃ ॥೪೦॥ ತಸ್ಯ ಬುದ್ಧಿರಿಯಂ ಜಾತಾ ವಾಲ್ಮೀಕೇರ್ಭಾವಿತಾತ್ಮನಃ । ಕೃತ್ಸ್ನಂ ರಾಮಾಯಣಂ ಕಾವ್ಯಮೀದೃಶೈಃ ಕರವಾಣ್ಯಹಂ ॥೪೧॥ ಉದಾರವೃತ್ತಾರ್ಥಪದೈರ್ಮನೋರಮೈಸ್ತತಸ್ಸ ರಾಮಸ್ಯ ಚಕಾರ ಕೀರ್ತಿಮಾನ್ । ಸಮಾಕ್ಷರೈಶ್ಶ್ಲೋಕಶತೈರ್ಯಶಸ್ವಿನೋ ಯಶಸ್ಕರಂ ಕಾವ್ಯಮುದಾರಧೀರ್ಮುನಿಃ ॥೪೨॥ ॥ ತಮುಪಗತ ಸಮಾಸ ಸಂಧಿಯೋಗಂ ಸಮ ಮಧುರೋಪನತಾರ್ಥ

---

ತ್ಮನಃ ಚಿಂತಿಸಲ್ಪಟ್ಟ ಪರಮಾತ್ಮನುಳ್ಳ, ತಸ್ಯ ವಾಲ್ಮೀಕೇಃ-ಆ ವಾಲ್ಮೀಕಿಋಷಿಗೆ, ಕೃತ್ಸ್ನಂ-ಸಂಪೂರ್ಣವಾದ, ರಾಮಾಯಣಂ-ರಾಮಾಯಣವೆಂಬ ಮಹಾಕಾವ್ಯವನ್ನು, ಈದೃಶೈಃ-ಇಂತಹ ಶ್ಲೋಕಗಳಿಂದಲೇ, ಅಹಂ-ನಾನು, ಕರವಾಣಿ-ಮಾಡುತ್ತೇನ, ಇತಿ-ಹೀಗೆಂದು, ಇಯಂ ಬುದ್ಧಿಃ-ಈ ತೆರದ ಬುದ್ಧಿಯು, ಜಾತಾ-ಹುಟ್ಟಿತು. ॥೪೧॥ ಉದಾರಧೀಃ-ಗಂಭೀರ ಬುದ್ಧಿಯುಳ್ಳ, ಕೀರ್ತಿಮಾನ್-ಯಶಸ್ವಿಯಾದ, ಮುನಿಃ-ವಾಲ್ಮೀಕಿಋಷಿಯು, ಮನೋರಮೈಃ-ಮನೋಹರವಾದ, ಉದಾರ ವೃತ್ತಾರ್ಥಪದೈಃ- (ತಿ) ಮಹಾಧೈರ್ಯಶಾಲಿಯಾದ, ಅಥವ-ಮಹಾತ್ಮನಾದ ಶ್ರೀರಾಮನ, ವೃತ್ತ-ನಡತೆಯು, ಅರ್ಥ-ವಿಷಯವಾಗಿವುಳ್ಳ, ಪದೈಃ ಪದಗಳಿಂದಲೂ (ಗೆ) ಮನೋರಮೈಃ-ಮನೋಹರಗಳಾದ, ಉದಾರ-ಮಹತ್ತರವಾದ, ವೃತ್ತಾ-ಶಾರ್ದೂಲವಿಕ್ರೀಡಿತಾದಿ ವೃತ್ತಗಳಿಂದಲೂ, ಅರ್ಥ-ವಾಚ್ಯಾರ್ಥ ಲಕ್ಷ್ಯಾರ್ಥ ವ್ಯಂಗ್ಯಾರ್ಥಗಳೆಂಬ ಮೂರುವಿಧಗಳಾದ ಅರ್ಥಗಳಿಂದಲೂ, ಪದೈಃ-ವಾಚಕ ಲಕ್ಷಕ, ವ್ಯಂಜಕ ಎಂಬ ಮೂರುವಿಧವಾದ ಪದಗಳಿಂದಲೂ, ಸಮಾಕ್ಷರೈಃ-ಸಮಸಂಖ್ಯಾತವಾದ ಅಕ್ಷರಗಳಿಂದಲೂ ಶ್ಲೋಕಶತೈಃ-ನೂರಾರು ಶ್ಲೋಕಗಳಿಂದ, ಯಶಸ್ವಿನಃ ಕೀರ್ತಿವಂತನಾದ, ಅಸ್ಯ ರಾಮಸ್ಯ - ಈ ರಾಮಚಂದ್ರನಿಗೆ, ಯಶಸ್ಕರಂ ಕೀರ್ತಿಯನ್ನುಂಟುಮಾಡುವ, ಕಾವ್ಯಂ ಕಾವ್ಯವನ್ನು, ತದಾ-ಆ ಬ್ರಹ್ಮವರಾನಂತರದಲ್ಲಿ, ಚಕಾರ-ಮಾಡಿದನು. ॥೪೨॥ ಉಪಗತ ಸಮಾಸ ಸಂಧಿಯೋಗಂ-(ಗೊ) ಉಪಗತ ಹೊಂದಲ್ಪಟ್ಟ, ಸಮಾಸ-ತತ್ಪುರುಷಾದಿ ಸಮಾಸಗಳಿಂದ, ಸಂಧಿ-ಸಂಹಿತೆಗಳಿಂದ, ಯೋಗಂ- ಘಟನೆಯುಳ್ಳ, ಅಥವ, ಶಾಸ್ತ್ರಾನುಸಾರ ಪ್ರಾಪ್ತವಾದ ಸಮಾಸಗಳನ್ನೂ, ಪದಸಂಧಿಗಳನ್ನೂ, ಅರ್ಥಸಂಗತಿಯನ್ನೂ ಒಳಗೊಂಡ, ಸಮಮಧುರೋಪನತಾರ್ಥ ವಾಕ್ಯಬದ್ಧಂ- (ಗೊ) ಸಮ - ಸಮಾಸಗಳಾದ, ಮಧುರ - ರಸಭರಿತವಾದ, ಉಪನತ-ಪ್ರಾಪ್ತವಾದ, ಅರ್ಥ-ಅರ್ಥವುಳ್ಳ, ವಾಕ್ಯ-ಸಮನ್ವಯವಾದ ವಾಕ್ಯಗಳಿಂದ, ಬದ್ಧಂ-ಕಟ್ಟಲ್ಪಟ್ಟ, (ಮ) ಸರ್ವಾಂತರ್ಯಾಮಿಯಾದಕಾರಣ ಸರ್ವಸಮನಾದ, ಆನಂದ ರಸವನ್ನು

---

ಋಷಿಗೆ ಸಂಪೂರ್ಣವಾದ ರಾಮಾಯಣವನ್ನೆಲ್ಲ ಇಂತಹ ವೃತ್ತಗಳಿಂದಲೇ ಮಾಡಬೇಕೆಂದು ಇಚ್ಛೆಯುಂಟಾಯಿತು. ॥೪೧॥ ಈ ಮಹದ್ಗ್ರಂಥವನ್ನು, ಕೀರ್ತಿಯನ್ನು ಪಡೆಯಬೇಕೆಂಬ ಅಭಿಲಾಷಿಯಾದ ಮಹಾ ನಿಪುಣ ಬುದ್ಧಿಯುಳ್ಳ ವಾಲ್ಮೀಕಿಯು ಗಂಭೀರವಾದ ಅರ್ಥವುಳ್ಳ ವೃತ್ತಗಳಿಂದಲೂ, ಮನೋಹರವಾಗಿಯೂ, ವೃತಿಪಾದದಲ್ಲಿಯೂ, ಸಮವಾದ ಅಕ್ಷರಗಳುಳ್ಳದಾಗಿಯೂ ಇರುವ ಪದಗಳನ್ನು ಒಳಗೊಂಡಿರುವ, ಅನೇಕ ಶ್ಲೋಕಗಳಿಂದ ಜಗದ್ವಿಖ್ಯಾತ ಕೀರ್ತಿವಂತನಾದ ಶ್ರೀರಾಮಚಂದ್ರನಿಗೂ ಯಶಸನ್ನುಂಟುಮಾಡುವ ಈ ಮಹಾಕಾವ್ಯವಾದ ರಾಮಾಯಣವನ್ನೆಸಗಿದನು. ॥೪೨॥ ತತ್ಪುರುಷಾದಿ ಸಮಾಸಾದಿಗಳಿಂದಲೂ, ಸಂಧಿಬಂಧಗಳಿಂದಲೂ ಯುಕ್ತವಾಗಿರುವಂತೆಯೂ, ಹೆಚ್ಚು ಕಡಿಮೆ ಇಲ್ಲದಂತೆಯೂ, ಮನೋಹರವೂ,

ವಾಕ್ಯಬದ್ಧಂ । ರಘುವರ ಚರಿತಂ ಮುನಿಪ್ರಣೀತಂ ದಶಶಿರಸಶ್ಚವಧಂ ನಿಶಾಮ
ಯಧ್ವಂ ॥ ॥ ೪೩ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೆ ದ್ವಿತೀಯಸ್ಸರ್ಗಃ ॥



ಹುಟ್ಟಿಸುವ, ರಸಸ್ವರೂಪನಾದ, ಎಲ್ಲೆಲ್ಲಿಯೂ ವ್ಯಾಪಕನಾದ ಶ್ರೀರಾಮರೂಪ ಅಭಿಧೇಯ ಪದಾರ್ಥವುಳ್ಳ, ರಘುವರಚರಿತಂ-ಶ್ರೀರಾಮನ ಚರಿತ್ರೆಯುಳ್ಳ, ಮುನಿಪ್ರಣೀತಂ-(ಗಿ) ವಾಲ್ಮೀಕಿ ಎಂಬನನ್ನಿಂದ ರಚಿಸಲ್ಪಟ್ಟ, ಅಥವ ನಾರದಮುನಿಯಿಂದ ಉಪದೇಶಿಸಲ್ಪಟ್ಟ, ದಶಶಿರಸಃ-ಹತ್ತು ತಲೆಗಳುಳ್ಳ ರಾವಣನ, ವಧಂ-ವಧೆಯನ್ನು ಪ್ರತಿಪಾದಿಸುವ, ತತ್ ಆ ಕಾವ್ಯವನ್ನು, ನಿಶಾಮಯಧ್ವಂ ನೋಡಿರಿ. (ತಿಲಕ ವ್ಯಾಖ್ಯಾನದ ಮತ್ತೊಂದರ್ಥ) ಉಪಗತ ಸಮಾಸ ಸಂಧಿಯೋಗಂ, ಉಪಗತ ಹೊಂದಲ್ಪಟ್ಟ, ಸಮಾಸ-ತತ್ಪುರುಷಾದಿ ಸಮಾಸಗಳನು, ಸಂಧಿ-ಸಂಹಿತಾರೂಪ ಗ್ರಂಥವನ್ನು, ಯೋಗಂ-ಪ್ರಕೃತಿ ಪ್ರತ್ಯಯ ಸಂಬಂಧಗಳನ್ನೊಳಗೊಂಡ, ಸಮಮಧುರೋಪನತಾರ್ಥ ವಾಕ್ಯಬದ್ಧಂ, ಸಮ-ದೋಷವರ್ಜಿತವಾದ, ಮಧುರ-ಕರುಣಾದಿ ನವರಸ ಭರಿತವಾಗಿರುವುದರಿಂದ ಮಾಧುರ್ಯ ಗುಣಯುಕ್ತವಾದ, ಉಪನತ-ಪ್ರಾಪ್ತವಾದ, ಅರ್ಥ- ಬಗಳ ಅರ್ಥವುಳ್ಳ, ವಾಕ್ಯ-ವಾಕ್ಯಗಳಿಂದ, ಬದ್ಧಂ ಕಟ್ಟಲ್ಪಟ್ಟ, ರಘುವರಚರಿತಂ ಸರ್ವಾಂತರ್ಯಾಮಿಯಾದ ಶ್ರೀರಾಮನ ವೃತ್ತಾಂತವನ್ನರುಹುವ, ಮುನಿಪ್ರಣೀತಂ-ಬ್ರಹ್ಮಾನುಗ್ರಹದಿಂದ ಪ್ರಾಪ್ತವಾದ ಸತ್ಯವಾಕ್ಕುಳ್ಳ ವಾಲ್ಮೀಕಿಮುನಿಯಿಂದ, ಪ್ರಣೀತಂ-ಕಲ್ಪಿತವಾದ, ದಶಶಿರಸಃ-ಹತ್ತುತಲೆಗಳುಳ್ಳ ರಾವಣನ, ವಧಂ-ಸಂಹಾರರೂಪವಾದ, ತತ್ ಆ ಕಾವ್ಯವನ್ನು, ನಿಶಾಮಯಧ್ವಂ- ಕೇಳಿರಿ.

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿತೀಯಸ್ಸರ್ಗಃ.



ಸುಲಭವೂ, ಅರ್ಥಬೋಧಕವೂ ಆಗಿರುವ ವಾಕ್ಯಗಳಿಂದೊಡಗೂಡಿದುದಾಗಿಯೂ, ರಘುಕುಲಲಲಾಮನಾದ ಶ್ರೀರಾಮ ಚರಿತ್ರೆಯನ್ನೊಳಗೊಂಡಿರುವುದಾಗಿಯೂ, ವಾಲ್ಮೀಕಿಮುನಿಯಾದನನ್ನಿಂದ ರಚಿಸಲ್ಪಟ್ಟುದಾಗಿಯೂ, ಇರುವ ರಾವಣನ ವಧೆಯನ್ನು ಪ್ರತಿಪಾದಿಸುವ ಈ ರಾಮಾಯಣ ಮಹಾ ಕಾವ್ಯವನ್ನು ನೋಡಿರಿ

ಇಂತಿದು ಬ್ರಹ್ಮಾನುಗ್ರಹ ಪ್ರಾಪ್ತಿಯೆಂಬ ಎರಡನೆಯ ಸರ್ಗವು
ಸಮಾಪ್ತವಾದುದು.



# ಬಾಲಕಾಂಡೇ ತೃತೀಯಸ್ಸರ್ಗಃ.

ಶ್ರುತ್ವಾ ವಸ್ತುಸಮಗ್ರಂ ತದ್ಧರ್ಮಾತ್ಮಾ ಧರ್ಮಸಂಹಿತಂ॥ವ್ಯಕ್ತಮನ್ವೇಷತೇ ಭೂಯೋ ಯದ್ವೃತ್ತಂ ತಸ್ಯ ಧೀಮತಃ ॥೧॥ ಉಪಸ್ಪೃಶ್ಯೋದಕಂ ಸಮ್ಯಙ್ಮುನಿಸ್ಥಿತ್ವಾ ಕೃತಾಂಜಲಿಃ। ಪ್ರಾಚೀನಾಗ್ರೇಷು ದರ್ಭೇಷು ಧರ್ಮೇಣಾನ್ವೇಷತೇಗತಿಂ॥೨॥ ರಾಮಲಕ್ಷ್ಮಣಸೀತಾಭೀ ರಾಜ್ಞಾ ದಶರಥೇನಚ । ಸಭಾರ್ಯೇಣ ಸರಾಷ್ಟ್ರೇಣ ಯತ್ಪ್ರಾಪ್ತಂ ತತ್ರ ತತ್ತ್ವತಃ ॥ ೩ ॥ ಹಸಿತಂ ಭಾಷಿತಂ ಚೈವ ಗತಿರ್ಯಾಯಚ್ಚ ಚೇಷ್ಟಿತಂ । ತತ್ಸರ್ವಂ

ಧರ್ಮಾತ್ಮಾ - ಧರ್ಮಾತ್ಮನಾದ ಆ ವಾಲ್ಮೀಕಿಯು, ಸಮಗ್ರಂ - ಸಂಪೂರ್ಣವಾದ, ವಸ್ತು ರಾಮಚರಿತ್ರರೂಪವಾದ, ಧರ್ಮಸಂಹಿತಂ - ಧರ್ಮದಿಂದಯುಕ್ತವಾದ, ತತ್ - ಆ ನಾರದನಿಂದ ಉಪದೇಶಿಸಲ್ಪಟ್ಟ ರಾಮಾಯಣವನ್ನು ಶ್ರುತ್ವಾ- ಕೇಳಿ, ಧೀಮತಃ - ಬುದ್ಧಿಶಾಲಿಯಾದ, ತಸ್ಯ - ಆ ಶ್ರೀರಾಮನ, ವೃತ್ತಂ - ನಡತೆಯು, ಯತ್ - ಯಾವುದುಂಟೋ, ತತ್ ಆ ಚರಿತ್ರೆಯನ್ನು, ಭೂಯಃ - ಇನ್ನೂ, ವ್ಯಕ್ತಂ - ಸ್ಫುಟವಾಗಿ, ಅನ್ವೇಷತ - ಹುಡುಕಿದನು. ॥೧॥ ಮುನಿಃ - ವಾಲ್ಮೀಕಿಯು, ಉದಕಂ - ಜಲವನ್ನು, ಉಪಸ್ಪೃಶ್ಯ ಸ್ಪರ್ಶಮಾಡಿ ಅಂದರೆ ಸ್ನಾನಮಾಡಿ, ಪ್ರಾಚೀನಾಗ್ರೇಷು - ಪ್ರಾಙ್ಮುಖಗಳಾದ ಕೊನೆಗಳುಳ್ಳ, ದರ್ಭೇಷು - ದರ್ಭೆಗಳಲ್ಲಿ, ಸಮ್ಯಕ್ - ಚನ್ನಾಗಿ, ಸ್ಥಿತ್ವಾ - ಕುಳಿತು, ಕೃತಾಂಜಲಿಃ - ಅಂಜಲಿಬದ್ಧನಾಗಿ, ಧರ್ಮೇಣ - ಬ್ರಹ್ಮನ ಪ್ರಸಾದವೆಂಬ ಧರ್ಮದಿಂದ, ಗತಿಂ - ಶ್ರೀರಾಮನ ನಡತೆಯನ್ನು, ಅನ್ವೇಷತೇ - ಹುಡುಕಿದನು ॥ ೨ ॥ ರಾಮ ಲಕ್ಷ್ಮಣ ಸೀತಾಭಿಃ - ರಾಮ ಲಕ್ಷ್ಮಣ ಸೀತೆಯರಿಂದಲೂ, ಸಭಾರ್ಯೇಣ - ಕೌಸಲ್ಯಾ ಸುಮಿತ್ರಾ ಕೈಕೇಯಿ ಎಂಬ ಹೆಂಡತಿಯರಿಂದೊಡಗೂಡಿದವನೂ, ಸರಾಷ್ಟ್ರೇಣ - ರಾಜ್ಯಸಮೇತನೂ ಆದ, ದಶರಥೇನರಾಜ್ಞಾಚ - ದಶರಥರಾಯನಿಂದಲೂ, ತತ್ರ - ಆ ರಾಜ್ಯದಲ್ಲಿ, ತತ್ತ್ವತಃ - ನಿಜವಾಗಿಯೂ, ಯತ್ - ಯಾವದು, ಪ್ರಾಪ್ತಂ ಉಂಟಾಯಿತೊ, ಯತ್ - ಯಾವದು, ಹಸಿತಂ- ಹಾಸ್ಯವಚನವೊ, ಯತ್ ಭಾಷಿತಂ - ಯಾವ ಮಾತೊ, ಯಾಗತಿಃ ಯಾವ ಗಮನವೊ, ಯತ್ಚೇಷ್ಟಿತಂಚ - ಯಾವ ಕರ ಚರಣಾದಿಗಳ ವ್ಯಾಪಾರವೊ, ತತ್ಸರ್ವಂ - ಅದೆಲ್ಲವನ್ನೂ, ಧರ್ಮವೀರ್ಯೇಣ - ಬ್ರಹ್ಮನ ಪ್ರಸಾದ

ಬಳಿಕ ಧರ್ಮಾತ್ಮನಾದ ವಾಲ್ಮೀಕಿಯು, ನಾರದನು ಕಥಾರೂಪವಾಗಿ ಹೇಳಿದ ರಾಮಕಥಾ ವೃತ್ತಾಂತವನ್ನು ಕೇಳಿ, ಅದಕ್ಕಿಂತಲೂ ಅತಿಶಯವಾದ ರಾಮನ ಚರಿತ್ರೆ ಯಾವುದಿರುವುದೋ,ಅದು ಹೇಗೆ ನಡದಿದ್ದಿತೋ, ಅದೆಲ್ಲವನ್ನೂ ಹುಡುಕಲಿಚ್ಛಿಸಿ, ಆಚಮನ ಮಾಡಿ, ಪೂರ್ವಾಗ್ರನಾದ ದರ್ಭಾಸನದಲ್ಲಿ ಕುಳಿತು, ಬ್ರಹ್ಮನಪ್ರಸಾದವೆಂಬ ಧರ್ಮದಿಂದ ರಾಮಚರಿತ್ರೆಯ ವಿಷಯವನ್ನು ಆಲೋಚಿಸುತ್ತಿದ್ದನು ॥೨॥ ಇಂತಿರಲಾತನು ಶ್ರೀರಾಮ, ಲಕ್ಷ್ಮಣ, ಸೀತೆಯರಿಂದಲೂ, ಕೌಸಲ್ಯಾ, ಸುಮಿತ್ರಾ, ಕೈಕೇಯಿ, ಎಂಬ ಹೆಂಡತಿಯರಿಂದಲೂ, ಒಡಗೂಡಿರುವ ರಾಜ್ಯಸಮೇತನಾದ ದಶರಥನಿಂದಲೂ, ಪರಿಹಾಸವಾಗಿಯೂ, ಸಂಭಾಷಣ ರೂಪವಾಗಿಯೂ, ಗಮನದಿಂದಲೂ, ಯುದ್ಧವೇ ಮೊದಲಾದವುಗಳಿಂದಲೂ

ಧರ್ಮವೀರ್ಯೇಣ ಯಥಾವತ್ಸಂಪ್ರಪಶ್ಯತಿ ॥ ೪॥ ಸ್ತ್ರೀತೃತೀಯೇನಚ ತದಾ ಯ
ತ್ಪ್ರಾಪ್ತಂ ಚರತಾ ವನೇ । ಸತ್ಯಸಂಧೇನ ರಾಮೇಣ ತತ್ಸರ್ವಂ ಚಾನ್ವವೇಕ್ಷಿತಂ।
ತತಃ ಪಶ್ಯತಿ ಧರ್ಮಾತ್ಮಾ ತತ್ಸರ್ವಂ ಯೋಗಮಾಸ್ಥಿತಃ। ಪುರಾಯತ್ತತ್ರನಿರ್ವೃತ್ತಂ
ಪಾಣಾವಾಮಲಕಂ ಯಥಾ ॥೬॥ ತತ್ಸರ್ವಂ ತತ್ವತೋ ದೃಷ್ಟ್ವಾ ಧರ್ಮೇಣ ಸ ಮಹಾ
ದ್ಯುತಿಃ । ಅಭಿರಾಮಸ್ಯ ರಾಮಸ್ಯ ಚರಿತಂ ಕರ್ತುಮುದ್ಯತಃ ॥ ೭ ॥ ಕಾಮಾರ್ಥಗುಣ
ಸಂಯುಕ್ತಂ ಧರ್ಮಾರ್ಥಗುಣವಿಸ್ತರಂ। ಸಮುದ್ರಮಿವರತ್ನಾಢ್ಯಂ ಸರ್ವಶ್ರುತಿ
ಮನೋಹರಂ ॥ ೮ ॥ ಸ ಯಥಾ ಕಥಿತಂ ಪೂರ್ವಂ ನಾರದೇನ ಮಹರ್ಷಿಣಾ ॥

ದಿಂದ ದೊರಕಿದ ಶಕ್ತಿಯಿಂದ, ಯಥಾವತ್ - ಹೇಗೆ ನಡೆದಿತ್ತೊ ಹಾಗೆಯೇ, ಸಂಪ್ರಪಶ್ಯತಿ - ಕಂಡನು. ॥೩-೪॥ ತದಾ - ಆಗ, ಸ್ತ್ರೀತೃತೀಯೇನ - ಸೀತಾದೇವಿಯೇ ಮೂರನೆಯವಳನ್ನಾಗುಳ್ಳ, ವನೇ - ಕಾಡಿನಲ್ಲಿ, ಸಂಚರತಾ - ಸಂಚರಿಸುತ್ತಿರುವ, ಸತ್ಯಸಂಧೇನ - ಸತ್ಯಪ್ರತಿಜ್ಞೆಯುಳ್ಳ, ರಾಮೇಣ - ರಾಮನಿಂದ, ಯತ್ - ಯಾವುದು, ಪ್ರಾಪ್ತಂ - ಹೊಂದಲ್ಪಟ್ಟಿತೊ, ತತ್ಸರ್ವಂ - ಅದೆಲ್ಲವು, ಅನ್ವವೇಕ್ಷಿತಂ - ಕಾಣಲ್ಪಟ್ಟಿತು ॥೫॥ ತತಃ - ಅನಂತರದಲ್ಲಿ, ಧರ್ಮಾತ್ಮಾ - ಧರ್ಮಿಷ್ಠನಾದ ವಾಲ್ಮೀಕಿಯು, ಯೋಗಂ - ಬ್ರಹ್ಮನವರಸಿಂದ ದೊರಕಿದ ಯೋಗವನ್ನು, ಆಸ್ಥಿತಸ್ಸನ್ ಹೊಂದಿದವನಾಗಿ, ತತ್ರ - ಆ ರಾಮನಲ್ಲಿ, ಪುರಾ - ಪೂರ್ವದಲ್ಲಿ, ಯತ್ - ಯಾವನಡತೆಯು, ನಿರ್ವೃತ್ತಂ - ಮಾಡಲ್ಪಟ್ಟಿತೋ, ತತ್ಸರ್ವಂ - ಅದೆಲ್ಲವನ್ನೂ, ಪಾಣೌ - ಕೈಯಲ್ಲಿ, ಆಮಲಕಂಯಥಾ - ನೆಲ್ಲಿಯಕಾಯಿಯಂತೆ, ಪಶ್ಯತಿ - ನೋಡಿದನು. ॥೬॥ ಮಹಾದ್ಯುತಿಃ- ಮಹಾತೇಜಸ್ವಿಯಾದ, ವಾಲ್ಮೀಕಿಃ- ಆ ವಾಲ್ಮೀಕಿಯು, ಧರ್ಮೇಣ - ಬ್ರಹ್ಮವರರೂಪಧರ್ಮದಿಂದ, ತತ್ಸರ್ವಂ ಆ ಸಮಸ್ತವನ್ನು, ತತ್ವತಃ - ನಿಜವಾದರೀತಿಯಲ್ಲಿ, ದೃಷ್ಟ್ವಾ - ಕಂಡು, ಅಭಿರಾಮಸ್ಯ - ಮನೋಹರನಾದ, ರಾಮಸ್ಯ- ರಾಮನ, ಚರಿತಂ - ಚರಿತೆಯನ್ನು, ಕರ್ತುಂ- ಮಾಡಲು, ಉದ್ಯುಕ್ತಃ - ಉಜ್ಜುಗಗೊಂಡನು. ॥೭॥ ನಾರದೇನಮಹರ್ಷಿಣಾ - ನಾರದಋಷಿಯಿಂದ, ಪೂರ್ವಂ - ಪೂರ್ವದಲ್ಲಿ, ಯಥಾಕಥಿತಂ - ಹೇಗೆ ಉಪದೇಶಿಸಲ್ಪಟ್ಟಿತ್ತೋ, ತಥಾ - ಹಾಗೆ, ಭಗವಾನ್ - ಪೂಜ್ಯನಾದ, ಋಷಿಃ - ಆ ವಾಲ್ಮೀಕಿಯು ಕಾಮಾರ್ಥಗುಣಸಂಯುಕ್ತಂ - ಕಾಮಕ್ಕೂ ಅರ್ಥಕ್ಕೂ ಉಪಯೋಗವಾದ ಗುಣದಿಂದ ಕೂಡಿರುವ, ಧರ್ಮಾರ್ಥಗುಣವಿಸ್ತರಂ - ಧರ್ಮಮೋಕ್ಷಗಳಿಗೆ ಸಾಧಕವಾದ, ಗುಣಾತಿಶಯವುಳ್ಳ, ರತ್ನಾಢ್ಯಂ- ನವರತ್ನಗಳಿಂದ ಕೂಡಿರುವ, ಸಮುದ್ರಮಿವಸ್ಥಿತಂ- ಸಮುದ್ರದಂತಿರುವ, (ಮ) ರತ್ನಗಳಿಗೆ ಸಮಾನವಾದ ಶ್ರೇಷ್ಠವಸ್ತುಗಳಿಂದ ಕೂಡಿರುವ ಸಮುದ್ರದಂತೆ, ಸರ್ವಶ್ರುತಿಮನೋಹರಂ, ಸರ್ವ - ಎಲ್ಲ, ಶೃತಿ -ಷಡ್ಜ, ಮಧ್ಯಮ, ಗಾಂಧಾರಾದಿ ಸ್ವರಸಂಬಂಧವಾದ ಇಪ್ಪತ್ತೆರಡು ಶೃತಿಗಳಿಂದ, (ಗೊ) ಸರ್ವ-

ಅವಾವುದು ಆಚರಿಸಲ್ಪಟ್ಟಿದ್ದಿತೋ, ಅವೆಲ್ಲವನ್ನೂ ಆ ಬ್ರಹ್ಮವರಾದಿಂದಲೇ ತಿಳಿದನು. ॥೪॥ ಆ ಬಳಿಕ ಧರ್ಮಾತ್ಮನಾದ ವಾಲ್ಮೀಕಿ ಮಹರ್ಷಿಯು ಬ್ರಹ್ಮವರಾದವಾದ ಯೋಗವನ್ನು ಹೊಂದಿ ಪೂರ್ವದಲ್ಲಿ ನಡೆದ ರಾಮನ ವೃತ್ತಾಂತವನ್ನೆಲ್ಲ, ಕರತಲಾಮಲಕವಾಗಿ ಕಂಡು, ಧರ್ಮ, ಅರ್ಥ, ಕಾಮ, ಮೋಕ್ಷ, ರೂಪ ಚತುರ್ವಿಧ ಪುರುಷಾರ್ಥ ಸಾಧನ ರೂಪವಾದ ಅನೇಕ ಗುಣಗಳಿಂದ ಕೂಡಿದುದೂ, ನಾನಾವಿಧವಾದ ರತ್ನಗಳಿಂದ ಕೂಡಿರುವ ಸಮುದ್ರದಂತೆ ಗಂಭೀರವಾಗಿಯೂ, ಎಲ್ಲ ಜನರ ಮನಸ್ಸಿಗೂ, ಕಿವಿಗಳಿಗೂ, ಇಂಪಾಗಿರುವ ಶ್ರೀರಾಮಚಂದ್ರನ ಚರಿತೆಯನ್ನು ಹಿಂದೆ ನಾರದನಿಂದ ಹೇಗೆ ಉಪದೇಶಿಸಲ್ಪಟ್ಟಿದ್ದಿತೋ

ರಘುವಂಶಸ್ಯ ಚರಿತಂಚಕಾರ ಭಗವಾನ್ನೃಷಿಃ॥೯॥ ಜನ್ಮ ರಾಮಸ್ಯ ಸುಮಹದ್ವೀರ್ಯಂ ಸರ್ವಾನುಕೂಲತಾಂ । ಲೋಕಸ್ಯ ಪ್ರಿಯತಾಂ ಕ್ಷಾಂತಿಂ ಸೌಮ್ಯತಾಂ ಸತ್ಯಶೀಲತಾಂ ॥೧೦॥ ನಾನಾಚಿತ್ರ ಕಥಾಶ್ಚಾನ್ಯಾ ವಿಶ್ವಾಮಿತ್ರ ಸಮಾಗಮೇ । ಜಾನಕ್ಯಾಶ್ಚ ವಿವಾಹಂಚ ಧನುಷಶ್ಚ ವಿಭೇದನಂ ॥ ೧೧ ॥ ರಾಮ ರಾಮ ವಿವಾದಂಚ ಗುಣಾನ್ ದಾಶರಥೇ ಸ್ತಥಾ । ತದಾಭಿಷೇಕಂ ರಾಮಸ್ಯ ಕೈಕೇಯ್ಯಾ ದುಷ್ಟಭಾವತಾಂ ॥ ೧೨ ॥ ವಿಘಾತಂ ಚಾಭಿಷೇಕಸ್ಯ ರಾಘವಸ್ಯ ವಿವಾಸನಂ । ರಾಜ್ಞಃಶೋಕ ವಿಲಾಪಂಚ ಪರಲೋಕಸ್ಯ ಚಾಶ್ರಯಂ ॥೧೩॥ ಪ್ರಕೃತೀನಾಂ ವಿಷಾದಂಚ ಪ್ರಕೃತೀನಾಂ ವಿಸರ್ಜನಂ। ನಿಷಾದಾ

ಎಲ್ಲ, ಶೃತಿ ಶ್ರೋತೃಗಳ, ಮನಃ - ಮನಸ್ಸನ್ನು, ಹರಂ ಅಪಹರಿಸುತ್ತಿರುವ, ರಘುವಂಶಸ್ಯ- ರಘುವಂಶದಲ್ಲಿ ಹುಟ್ಟಿದ ಶ್ರೀರಾಮನ, ಚರಿತಂ- ಚರಿತ್ರೆಯನ್ನು, ಚಕಾರ-ಮಾಡಿದನು. ॥೮-೯॥ ಭಗವಾನ್ - ಪೂಜ್ಯನಾದ ವಾಲ್ಮೀಕಿ ಋಷಿಯು, ರಾಮಸ್ಯ ಶ್ರೀರಾಮನ, ಜನ್ಮ - ಉತ್ಪತ್ತಿಯನ್ನು, ಸುಮಹತ್ - ಮಹತ್ತಾದ, ವೀರ್ಯಂ ಪರಾಕ್ರಮವನ್ನು, ಸರ್ವಾನುಕೂಲತಾಂ - ಸಮಸ್ತರಿಗೂ ಅನುಕೂಲ್ಯವನ್ನು, ಲೋಕಸ್ಯ - ಜನರಿಗೆ, ಪ್ರಿಯತಾಂ - ಇಷ್ಟತೆಯನ್ನು, ಶಾಂತಿಂ - ಕ್ಷಮೆಯನ್ನು, ಸೌಮ್ಯತಾಂ - ಅತಿಶಯವಾದ ಪ್ರೇಮಿಕ ದೃಷ್ಟಿಯನ್ನು, ಸತ್ಯಶೀಲತಾಂ - ಸತ್ಯಸ್ವಭಾವವನ್ನು ॥೧೦॥ ವಿಶ್ವಾಮಿತ್ರಸಮಾಗಮೇ- ವಿಶ್ವಾಮಿತ್ರನೊಡನೆ ಸೇರಿದಾಗಲೂ, ಅನ್ಯಾಃ- ಬೇರೆಯಾದ, ನಾನಾಚಿತ್ರಕಥಾಶ್ಚ - ಅನೇಕಬಗೆಯಾದ ಆಶ್ಚರ್ಯಕರಗಳಾದ ಕಥೆಗಳನ್ನು, ಜಾನಕ್ಯಾಃ - ಸೀತಾದೇವಿಯ, ವಿವಾಹಂಚ - ಕಲ್ಯಾಣವನ್ನು, ಧನುಷಃ - ಶೈವಧನುಸ್ಸಿನ, ವಿಭೇದನಂಚ - ಭಂಗವನ್ನು ॥೧೧॥ ತಥಾ ಹಾಗೆಯೇ, ರಾಮರಾಮವಿವಾದಂಚ - ಶ್ರೀರಾಮ ಪರಶುರಾಮರ ವಿವಾದವನ್ನೂ, ದಾಶರಥೇಃ - ಶ್ರೀರಾಮನ, ಗುಣಾನ್ - ಗುಣಗಳನ್ನು, ತಥಾ - ಹಾಗೆಯೇ, ರಾಮಸ್ಯ - ಶ್ರೀರಾಮನಿಗೆ, ಅಭಿಷೇಕಂಚ - ಪಟ್ಟಾಭಿಷೇಕ ಪ್ರಯತ್ನವನ್ನು, ಕೈಕೇಯ್ಯಾಃ- ಕೈಕೇಯಿ ದೇವಿಯ, ದುಷ್ಟಭಾವತಾಂ - ಕೆಟ್ಟ ಅಭಿಪ್ರಾಯವನ್ನು. ॥೧೨॥ ಅಭಿಷೇಕಸ್ಯ - ಪಟ್ಟಾಭಿಷೇಕದ, ವಿಘಾತಂಚ-ವಿಘ್ನವನ್ನು, ರಾಘವಸ್ಯ - ಶ್ರೀರಾಮನ, ವಿವಾಸನಂಚ - ಅರಣ್ಯಗಮನವನ್ನು, ರಾಜ್ಞಃ-ದಶರಥರಾಯನ, ಶೋಕವಿಲಾಪಂಚ- ಪರಿತಾಪವನ್ನು, ಪರಲೋಕಸ್ಯ - ಸ್ವರ್ಗದ, ಆಶ್ರಯಂಚ-ಸೇರುವಿಕೆಯನ್ನು, ॥೧೩॥ ಪ್ರಕೃತೀನಾಂ- ಪ್ರಜೆಗಳ, ವಿಷಾದಂಚ - ವ್ಯಸನವನ್ನು, ಪ್ರಕೃತೀನಾಂ-ಪ್ರಜೆಗಳ, ವಿಸರ್ಜನಂ-ಅಗಲಿಕೆಯನ್ನು, ನಿಷಾದಾಧಿಪಸಂವಾದಂ- ಬೇಡರ ಅಧಿಪತಿ

---

ಹಾಗೆಯೇ ಮಾಡಲುದ್ಯುಕ್ತನಾದನು. ॥೯॥ ಅದೆಂತೆನೆ.- ಶ್ರೀರಾಮಜನನವನ್ನೂ, ಅವನ ಪರಾಕ್ರಮವನ್ನೂ, ಎಲ್ಲರಮನಸ್ಸಿಗೂ ತಕ್ಕಂತೆ ನಡೆದುಕೊಳ್ಳುವಿಕೆಯನ್ನೂ, ಇತರರು ಕಠಿಣವಾಗಿ ನುಡಿದರೂ ಶಾಂತಿಯಾಗಿರುವಿಕೆಯನ್ನೂ, ಅತಿಶಯವಾದ ಪ್ರಸನ್ನತೆಯನ್ನೂ ಸತ್ಯಸಂಧತೆಯನ್ನೂ, ॥೧೦॥ ವಿಶ್ವಾಮಿತ್ರನಿಂದೊಡಗೂಡಿದ ಕಾಲದಲ್ಲಿ ಆತನು ಹೇಳಿದ ನಾನಾವಿಧವಾದ ಕಥೆಗಳನ್ನೂ, ಸೀತಾಕಲ್ಯಾಣ ಪ್ರಯತ್ನವನ್ನೂ, ಶೈವಧನುರ್ಭಂಗವನ್ನೂ, ರಾಮಪರಶುರಾಮರ ಸಂವಾದವನ್ನೂ, ಶ್ರೀರಾಮನ ಶೌರ್ಯಾದಿಗುಣಗಳನ್ನೂ, ಆತನಿಗೆ ಪಟ್ಟಾಭಿಷೇಕ ಪ್ರಯತ್ನವನ್ನೂ, ಕೈಕೇಯಿಯ ದುಷ್ಟ ಸ್ವಭಾವವನ್ನೂ, ರಾಜ್ಯಾಭಿಷೇಕವಿಘ್ನವನ್ನೂ, ರಾಮಚಂದ್ರನ ಅರಣ್ಯಗಮನವನ್ನೂ, ದಶರಥರಾಯನ ಪರಿತಾಪವನ್ನೂ, ಆತನ ಪರಲೋಕ

ಧಿಪಸಂವಾದಂ ಸೂತೋಪಾವರ್ತನಂ ತಥಾ ||೧೪|| ಗಂಗಾಯಾಶ್ಚಾಪಿ ಸಂತಾರಂ ಭರದ್ವಾಜಸ್ಯ ದರ್ಶನಂ। ಭರದ್ವಾಜಾಭ್ಯನುಜ್ಞಾನಾಚ್ಚಿತ್ರಕೂಟಸ್ಯ ದರ್ಶನಂ||೧೫। ವಾಸ್ತುಕರ್ಮ ನಿವೇಶಂಚ ಭರತಾಗಮನಂ ತಥಾ। ಪ್ರಸಾದನಂಚ ರಾಮಸ್ಯ ಪಿತುಶ್ಚ ಸಲಿಲಕ್ರಿಯಾಂ ||೧೬|| ಪಾದುಕಾಗ್ರ್ಯಾಭಿಷೇಕಂಚ ನಂದಿಗ್ರಾಮನಿವಾಸನಂ || ದಂಡಕಾರಣ್ಯಗಮನಂ ವಿರಾಧಸ್ಯ ವಧಂತಥಾ ||೧೭|| ದರ್ಶನಂ ಶರಭಂಗಸ್ಯ ಸುತೀಕ್ಷ್ಣೇನ ಸಮಾಗಮಂ। ಅನಸೂಯಾ ಸಹಾಸ್ಯಾಂಚ ಅಂಗರಾಗಸ್ಯ ಚಾರ್ಪಣಂ||೧೮||

ಯಾದ ಗುಹನೊಡನೆ ಸಂಭಾಷಣವನ್ನು, ತಥಾ - ಹಾಗೆಯೇ, ಸೂತೋಪಾವರ್ತನಂ ಸಾರಥಿಯಾದ ಸುಮಂತ್ರನನ್ನು ಹಿಂದಕ್ಕೆ ಕಳುಹಿಸಿದುದನ್ನು ||೧೪|| ಗಂಗಾಯಾಃ - ಗಂಗಾನದಿಯ ಸಂತಾರಂಚಾಪಿ-ದಾಟುವಿಕೆಯನ್ನು, ಭರದ್ವಾಜಸ್ಯದರ್ಶನಂ-ಭರದ್ವಾಜಋಷಿಯ ದರ್ಶನವನ್ನು ಭರದ್ವಾಜಾಭ್ಯನುಜ್ಞಾನಾತ್ ಭರದ್ವಾಜಋಷಿಯ ಅಪ್ಪಣೆಯಿಂದ, ಚಿತ್ರಕೂಟಸ್ಯದರ್ಶನಂ ಚಿತ್ರಕೂಟಪರ್ವತದ ನೋಟವನ್ನು, |೧೫| ತಥಾ-ಹಾಗೆಯೇ, ಸೂತೋಪಾವರ್ತನಂ-ಸಾರಥಿಯಾದ ಸುಮಂತ್ರನು ಹಿಂತಿರಿಗಿ ಬರೋಣವನ್ನು, ಗಂಗಾಯಾಃ-ಗಂಗಾನದಿಯ, ಸಂತಾರಂಚಾಪಿ-ದಾಟುವಿಕೆಯನ್ನು, ಭರದ್ವಾಜಸ್ಯ ಭರದ್ವಾಜಋಷಿಯ, ದರ್ಶನಂ-ನೋಡುವಿಕೆಯನ್ನು, ಭರದ್ವಾಜಾಭ್ಯನುಜ್ಞಾನಾತ್-ಭರದ್ವಾಜಋಷಿಯ, ಅಭ್ಯನುಜ್ಞಾನಾತ್-ಸಮ್ಮತಿಯಿಂದ, ಚಿತ್ರಕೂಟಸ್ಯದರ್ಶನಂ, ಚಿತ್ರಕೂಟಸ್ಯ- ಚಿತ್ರಕೂಟಪರ್ವತದ, ದರ್ಶನಂಚ-ನೋಡುವಿಕೆಯನ್ನು ವಾಸ್ತುಕರ್ಮ-ಗೃಹನಿರ್ಮಾಣವನ್ನು, ನಿವೇಶಂಚ-ಶಾಸ್ತ್ರೋಕ್ತವಾದ ಪ್ರವೇಶವನ್ನು, ತಥಾ-ಹಾಗೆಯೇ, ಭರತಾಗಮನಂಚ-ಭರತನ ಬರುವಿಕೆಯನ್ನು, ರಾಮಸ್ಯ-ಶ್ರೀರಾಮನ, ಪ್ರಸಾದನಂ - ಸಮಾಧಾನ ಹೇಳಿಕೆಯನ್ನು, ಪಿತುಶ್ಚ-ತಂದೆಗೆ, ಸಲಿಲಕ್ರಿಯಾಂ-ಉತ್ತರ ಕ್ರಿಯಾದಿಗಳನ್ನು,||೧೬|| ಪಾದುಕಾಗ್ರ್ಯಾಭಿಷೇಕಂಚ ಶ್ರೇಷ್ಠವಾದ ಪಾದುಕೆಗಳಿಗೆ, ಪಟ್ಟಾಭಿಷೇಕವನ್ನು, ನಂದಿಗ್ರಾಮನಿವಾಸನಂ-ಭರತನು ನಂದಿಗ್ರಾಮದಲ್ಲಿ ಇರುವಿಕೆಯನ್ನು, ದಂಡಕಾರಣ್ಯಗಮನಂ-ದಂಡಕಾರಣ್ಯಕ್ಕೆ ಪ್ರಯಾಣವನ್ನು, ತಥಾ-ಹಾಗೆಯೇ, ವಿರಾಧಸ್ಯ-ವಿರಾಧನ, ವಧಂ-ಸಂಹಾರವನ್ನು, |೧೭| ಶರಭಂಗಸ್ಯ-ಶರಭಂಗಋಷಿಯ, ದರ್ಶನಂ-ಅವಲೋಕನವನ್ನು, ಸುತೀಕ್ಷ್ಣೇನ-ಸುತೀಕ್ಷ್ಣಋಷಿಯೊಡನೆ, ಸಮಾಗಮಂ - ಸಹವಾಸವನ್ನು, ಅನಸೂಯಾ ಸಹಾಸ್ಯಾಮಪಿ - ಅನಸೂಯಾದೇವಿಯೊಡನೆ ಸೀತಾದೇವಿಯ ಇರುವಿಕೆಯನ್ನು, ಅಂಗರಾಗಸ್ಯ – ಅರಿಶಿನ, ಕುಂಕುಮ ಮೊದಲಾದ ಅಂಗಲೇಪನದ, ಅರ್ಪಣಂಚ-ಕೊಡುವಿಕೆಯನ್ನು, ||೧೮|| ಅಗಸ್ತ್ಯದರ್ಶನಂಚೈವ-

---

ವಾಪ್ತಿಯನ್ನೂ, ಪಟ್ಟಣಿಗರ ಪ್ರಲಾಪವನ್ನೂ, ರಾಮನು ಪ್ರಜೆಗಳನ್ನು ವಂಚಿಸಿ ಮುಂದೆ ಹೊರಟುದನ್ನೂ, ಬೇಡರ ಒಡೆಯನಾದ ಗುಹನೊಡನೆ ಮಾಡಿದ ಸಂಭಾಷಣೆಯನ್ನೂ, ಸುಮಂತ್ರನು ಹಿಂದಿರುಗಿದುದನ್ನೂ, ಗಂಗಾವತರಣವನ್ನೂ, ಭರದ್ವಾಜ ಸಂದರ್ಶನವನ್ನೂ, ಆತನನುಜ್ಞೆಯಿಂದ ಚಿತ್ರಕೂಟ ಪರ್ವತದ ನೋಟವನ್ನೂ ||೧೫|| ಆ ಬಳಿಕ ಚಿತ್ರಕೂಟ ಪರ್ವತದಲ್ಲಿ ಪರ್ಣಶಾಲೆಯ ರಚನೆಯನ್ನೂ, ಭರತನ ಬರುವಿಕೆಯನ್ನೂ, ಆತನು ಶ್ರೀರಾಮನನ್ನು ಪ್ರಾರ್ಥಿಸಿದುದನ್ನೂ, ಬಳಿಕ ತಂದೆಯಾದ ದಶರಥರಾಯನಿಗೆ ಉತ್ತರ ಕ್ರಿಯಾದಿಗಳೆಸಗಿದುದನ್ನೂ, ರಾಮಪಾದುಕಾ ಪಟ್ಟಾಭಿಷೇಕವನ್ನೂ, ಭರತನ ನಂದೀಗ್ರಾಮ ಗಮನವನ್ನೂ, ಶ್ರೀರಾಮನು ದಂಡಕಾರಣ್ಯಕ್ಕೆ ಹೋಗುವುದನ್ನೂ, ಅಪರಾ

ಅಗಸ್ತ್ಯ ದರ್ಶನಂ ಚೈವ ಜಟಾಯೋರಭಿಸಂಗಮಂ । ಪಂಚವಟ್ಯಾಶ್ಚಗಮನಂ
ಶೂರ್ಪಣಖ್ಯಾಶ್ಚ ದರ್ಶನಂ ॥ ೧೯ ॥ ಶೂರ್ಪಣಖ್ಯಾಶ್ಚ ಸಂವಾದಂ ವಿರೂಪಕರಣಂ
ತಥಾ। ವಧಂ ಖರ ತ್ರಿಶಿರಸೋರುತ್ಥಾನಂ ರಾವಣಸ್ಯಚ ॥ ೨೦ ॥ ಮಾರೀಚಸ್ಯ ವಧಂ
ಚೈವ ವೈದೇಹ್ಯಾ ಹರಣಂ ತಥಾ । ರಾಘವಸ್ಯ ವಿಲಾಪಂಚ ಗೃಧ್ರರಾಜ ನಿಬ
ರ್ಹಣಂ ॥೨೧॥ ಕಬಂಧ ದರ್ಶನಂಚಾಪಿ ಪಂಪಾಯಾಶ್ಚಾಪಿ ದರ್ಶನಂ। ಶಬರ್ಯಾ ದರ್ಶ
ನಂಚೈವ ಹನೂಮದ್ದರ್ಶನಂತಥಾ ॥೨೨॥ ಋಶ್ಯಮೂಕಸ್ಯ ಗಮನಂ ಸುಗ್ರೀವೇಣ
ಸಮಾಗಮಂ । ಪ್ರತ್ಯಯೋತ್ಪಾದನಂ ಸಖ್ಯಂ ವಾಲಿ ಸುಗ್ರೀವ ವಿಗ್ರಹಂ ॥ ೨೩ ॥

ಅಗಸ್ತ್ಯರುಷಿಯ ದರ್ಶನವನ್ನು, ಜಟಾಯೋಃ ಜಟಾಯುವಿನ, ಅಭಿಸಂಗಮಂ - ಸೇರುವಿಕೆಯನ್ನು,
ಪಂಚವಟ್ಯಾಶ್ಚ-ಪಂಚವಟೀಕ್ಷೇತ್ರಕ್ಕೆ, ಗಮನಂ- ಪ್ರಯಾಣವನ್ನು, ಶೂರ್ಪಣಖ್ಯಾಃ-ಶೂರ್ಪನಖಿಯ,
ದರ್ಶನಂಚ-ನೋಡುವಿಕೆಯನ್ನು.॥೧೯॥ ಶೂರ್ಪಣಖ್ಯಾಃ-ಶೂರ್ಪಣಖಿಯ, ಸಂವಾದಂ-ಸಂವಾದವನ್ನು,
ತಥಾ ಹಾಗೆ ವಿರೂಪಕರಣಂ ಕಿವಿ ಮೂಗುಗಳನ್ನು ಕೊಯ್ಯುವುದರಿಂದ ವಿಕಾರಳನ್ನಾಗಿ ಮಾಡಿದುದ
ನ್ನು ಖರತ್ರಿಶಿರಸೋಃ ಖರತ್ರಿಶಿರಸ್ಸೆಂಬ ರಾಕ್ಷಸರ, ವಧಂಚ-ವಧೆಯನ್ನು, ರಾವಣಸ್ಯ-ರಾವಣನ, ಉತ್ಥಾ
ನಂಚ-ಉದ್ಯೋಗವನ್ನು॥೨೦॥ ಮಾರೀಚಸ್ಯ-ಮಾರೀಚನ ವಧಂಚೈವ ಸಂಹಾರವನ್ನು, ತಥಾ-ಹಾಗೆಯೇ
ವೈದೇಹ್ಯಾಃ-ಸೀತಾದೇವಿಯ, ಹರಣಂ ಅಪಹಾರವನ್ನು, ರಾಘವಸ್ಯ-ಶ್ರೀರಾಮನ, ವಿಲಾಪಂಚ-ಪ್ರಲಾ
ಪವನ್ನು, ಗೃಧ್ರರಾಜನಿಬರ್ಹಣಂ ಗೃಧ್ರರಾಜ ಜಟಾಯುವಿನ, ನಿಬರ್ಹಣಂ-ಸಂಹಾರವನ್ನು ॥೨೧॥
ಕಬಂಧದರ್ಶನಂಚಾಪಿ-ಕಬಂಧನೆಂಬ ರಾಕ್ಷಸನ ನೋಡುವಿಕೆಯನ್ನು, ಪಂಪಾಯಾಶ್ಚ-ಪಂಪಾನದಿಯ,
ದರ್ಶನಮಪಿ ನೋಡುವದನ್ನು, ಶಬರ್ಯಾಃ ಶಬರಿಯ, ದರ್ಶನಂಚೈವ ನಿರೀಕ್ಷಣವನ್ನು, ತಥಾ-ಹಾಗೆಯು
ಹನುಮದ್ದರ್ಶನಂ-ಹನುಮಂತನ ಭೇಟಿಯನ್ನು॥೨೨॥ಋಶ್ಯಮೂಕಸ್ಯ ಋಷ್ಯಮೂಕಪರ್ವತಕ್ಕೆ, ಗಮ
ನಂ-ಪ್ರಯಾಣವನ್ನು, ಸುಗ್ರೀವೇಣ-ಸುಗ್ರೀವನಿಂದ, ಸಮಾಗಮಂ ಪರಿಚಯವನ್ನು, ಪ್ರತ್ಯಯೋ
ತ್ಪಾದನಂ ಸುಗ್ರೀವನಿಗೆ ನಂಬಿಕೆ ಹುಟ್ಟಿಸೋಣವನ್ನು, ಸಖ್ಯಂ - ಮೈತ್ರಿಯನ್ನು, ವಾಲಿಸುಗ್ರೀವ
ವಿಗ್ರಹಂ-ವಾಲಿಸುಗ್ರೀವರ ಕಲಹವನ್ನು,॥೨೩॥ವಾಲಿಪ್ರಮಥನಂಚೈವ-ವಾಲಿಸಂಹಾರವನ್ನು, ಸುಗ್ರೀವ
ಪ್ರತಿಪಾದನಂ-ಸುಗ್ರೀವನಿಗೆ ರಾಜ್ಯಪ್ರದಾನವನ್ನು, ತಾರಾವಿಲಾಪಂ ತಾರಾದೇವಿಯ ಪ್ರಲಾಪವನ್ನು

ಧಿಯಾದ ವಿರಾಧನ ವಧೆಯನ್ನೂ, ಶರಭಂಗ ಮಹರ್ಷಿಯ ದರುಶನವನ್ನೂ, ಸುತೀಕ್ಷ್ಣ
ಮುನಿಯೊಡನೆ ಸಮಾಗಮವನ್ನೂ, ಸೀತಾದೇವಿಯು ಅನುಸೂಯೆಯೊಡನೆ ಸೇರಿದಾಗ
ಆಕೆಯು ಸೀತಾದೇವಿಗೆ ಅಂಗರಾಗಗಳನ್ನು (ಮಂಗಳ ದ್ರವ್ಯಗಳನ್ನು) ಕೊಡುವುದನ್ನೂ, ಆ
ಬಳಿಕ ಅಗಸ್ತ್ಯಮುನಿಯ ದರುಶನವನ್ನೂ ಜಟಾಯು ಸಮಾಗಮವನ್ನೂ, ಪಂಚವಟೀ
ಕ್ಷೇತ್ರಕ್ಕಾಗಿ ತೆರಳುವಿಕೆಯನ್ನೂ, ಶೂರ್ಪನಖಿ ಎಂಬ ರಾಕ್ಷಸಿಯ ನೋಟವನ್ನೂ, ಆಕೆಯ
ಸಂಭಾಷಣೆಯನ್ನೂ, ಬಳಿಕಲಾಕೆಯ ಕಿವಿ ಮೂಗುಗಳ ಕತ್ತರಿಸುವಿಕೆಯಿಂದ ವುಂಟಾದ
ಆಕೆಯ ವಿರೂಪವನ್ನೂ, ಖರ ಮೊದಲಾದ ರಾಕ್ಷಸರ ಸಂಹಾರವನ್ನೂ, ಸೀತಾಪಹರಣ
ಕ್ಕಾಗಿ ರಾವಣನುಮಾಡಿದ ಪ್ರಯತ್ನವನ್ನೂ, ಮಾರೀಚನ ವಧೆಯನ್ನೂ, ಸೀತಾಪಹರಣವನ್ನೂ,
ಶ್ರೀರಾಮವಿಲಾಪವನ್ನೂ, ಜಟಾಯುವಿನ ಪಕ್ಷಚ್ಛೇದನವನ್ನೂ, ಕಬಂಧಾವಲೋಕನವನ್ನೂ,
ಪಂಪಾನದಿಯ ದರುಶನವನ್ನೂ, ಶಬರಿಯ ಆಶ್ರಮ ಪ್ರವೇಶವನ್ನೂ, ಆಂಜನೇಯನಿಗೆ ದೊರಕಿದ

ವಾಲಿ ಪ್ರಮಥನಂ ಚೈವ ಸುಗ್ರೀವ ಪ್ರತಿಪಾದನಂ । ತಾರಾವಿಲಾಪಂ ಸಮಯಂ ವರ್ಷರಾತ್ರ ನಿವಾಸನಂ ॥ ೨೪ ॥ ಕೋಪಂ ರಾಘವ ಸಿಂಹಸ್ಯ ಬಲಾನಾಮುಪಸಂಗ್ರಹಂ । ದಿಶಃ ಪ್ರಸ್ಥಾಪನಂ ಚೈವ ಪೃಥಿವ್ಯಾಶ್ಚ ನಿವೇದನಂ ॥೨೫॥ ಅಂಗುಳೀಯಕದಾನಂಚ ಋಕ್ಷಸ್ಯ ಬಿಲದರ್ಶನಂ । ಪ್ರಾಯೋಪವೇಶನಂ ಚಾಪಿ ಸಂಪಾತೇಶ್ಚಾಪಿದರ್ಶನಂ ॥೨೬॥ ಪರ್ವತಾರೋಹಣಂಚಾಪಿ ಸಾಗರಸ್ಯಚ ಲಂಘನಂ। ಸಮುದ್ರವಚನಾಚ್ಚೈವ ಮೈನಾಕಸ್ಯಚ ದರ್ಶನಂ ॥ ೨೭ ॥ ಸಿಂಹಿಕಾಯಾಶ್ಚ ನಿಧನಂ ಲಂಕಾ

ಸಮಯಂ-ಸುಗ್ರೀವನ ಶಪಥವನ್ನು, ವರ್ಷರಾತ್ರನಿವಾಸನಂ-ವರ್ಷಾಕಾಲದ ರಾತ್ರಿಗಳನ್ನು ಕಳೆವವರಿವಿಗೂ ಒಂದು ಕಡೆ ಇರುವಿಕೆಯನ್ನು,॥೨೪॥ರಾಘವಸಿಂಹಸ್ಯ ರಘುಶ್ರೇಷ್ಠನಾದ ಶ್ರೀರಾಮನಿಗೆ, ಕೋಪಂ-ಕೋಪವನ್ನು, ಬಲಾನಾಂ - ಕಪಿಸೈನ್ಯಗಳ, ಉಪಸಂಗ್ರಹಂ - ಕರೆಸುವಿಕೆಯನ್ನು, ದಿಶಃ-ದಿಕ್ಕುಗಳನ್ನು ಕುರಿತು, ಪ್ರಸ್ಥಾಪನಂ-ಕಪಿಗಳನ್ನು ಕಳುಹುವುದನ್ನು, ಪೃಥಿವ್ಯಾಶ್ಚ-ಭೂಮಿಯಲ್ಲಿರುವ ಬೆಟ್ಟಗಳು ಮೊದಲಾದವುಗಳ,ನಿವೇದನಂ-ತಿಳುವಳಿಕೆಯನ್ನು,॥೨೫॥ಅಂಗುಳೀಯಕದಾನಂಚ-ಶ್ರೀರಾಮನ ಅಂಗುಳೀಯಕ ಮುದ್ರಾಪ್ರದಾನವನ್ನು, ಋಕ್ಷಸ್ಯ-ಋಕ್ಷವೆಂಬ, ಬಿಲದರ್ಶನಂ-ಬಿಲವನ್ನು ನೋಡೋಣವನ್ನು,ಪ್ರಾಯೋಪವೇಶನಂಚಾಪಿ-ವಾನರಗಳ ಪ್ರಾಯೋಪವೇಶನವನ್ನು,ಸಂಪಾತೇಃ-ಸಂಪಾತಿಯ,ದರ್ಶನಮಪಿ-ನೋಡೋಣವನ್ನು,॥೨೬॥ಪರ್ವತಾರೋಹಣಂಚಾಪಿ-ಮಹೇಂದ್ರಪರ್ವತವನ್ನು ಏರೋಣವನ್ನು, ಸಾಗರಸ್ಯ-ಸಮುದ್ರದ, ಲಂಘನಂಚ-ದಾಟುವಿಕೆಯನ್ನು, ಸಮುದ್ರವಚನಾಚ್ಚೈವ-ಸಮುದ್ರನ ಮಾತಿನಿಂದಲೆ, ಮೈನಾಕಸ್ಯ-ಮೈನಾಕಪರ್ವತದ, ದರ್ಶನಂಚ ನೋಡೋಣವನ್ನು,॥೨೭॥ ಸಿಂಹಿಕಾಯಾಶ್ಚನಿಧನಂ-ಸಿಂಹಿಕೆಯೆಂಬ ರಾಕ್ಷಸಿಯ ಸಂಹಾರವನ್ನು,ಲಂಕಾಮಲಯದರ್ಶನಂ- ಲಂಕಾಪಟ್ಟಣದ ಸಮೀಪದಲ್ಲಿರುವ ಮಲಯಪರ್ವತದ ನಿರೀಕ್ಷಣವನ್ನೂ,ರಾತ್ರೌ-ರಾತ್ರಿಯಲ್ಲಿ,ಲಂಕಾಪ್ರವೇಶಂಚ-ಲಂಕಾಪಟ್ಟಣದ ಪ್ರವೇಶವನ್ನು, ಅಥ-ಬಳಿಕ, ಏಕಸ್ಯ-ಒಬ್ಬನ,ವಿಚಿಂತನಂ-ಆಲೋಚನೆಯನ್ನು, ॥೨೮॥ರಾವಣಸ್ಯ-ರಾವಣನ,ದರ್ಶನಮಪಿ-ನೋಡೋಣವನ್ನು,ಪುಷ್ಪಕಸ್ಯಚದರ್ಶನಂ ಪುಷ್ಪಕದರ್ಶನ

ಶ್ರೀರಾಮ ಸಂದರುಶನವನ್ನೂ, ಬಳಿಕ ಋಷ್ಯಮೂಕ ಪರ್ವತದ ನೋಟವನ್ನೂ, ಸುಗ್ರೀವ ಸಮಾಗಮನವನ್ನೂ, ಆತನಿಗೆ ನಂಬಿಕೆಯನ್ನುಂಟುಮಾಡುವಿಕೆಯನ್ನೂ, ಅಗ್ನಿಸಾಕ್ಷಿಕವಾದ ಸ್ನೇಹವನ್ನೂ ವಾಲಿಸುಗ್ರೀವರ ಕಾಳಗವನ್ನೂ, ವಾಲಿ ವಧೆಯನ್ನೂ, ಸುಗ್ರೀವನಿಗೆ ರಾಜ್ಯಾಭಿಷೇಚನವನ್ನೂ, ತಾರಾದೇವಿಯ ಪ್ರಲಾಪವನ್ನೂ, ಸುಗ್ರೀವನ ಪ್ರತಿಜ್ಞೆಯನ್ನೂ, ವರ್ಷಾಕಾಲದ ನಾಲ್ಕು ತಿಂಗಳೂ ಆ ಋಷ್ಯಮೂಕ ಪರ್ವತದಲ್ಲಿ ವಾಸಮಾಡುವಿಕೆಯನ್ನೂ, ಶ್ರೀರಾಮನ ಕೋಪವನ್ನೂ, ಕಪಿ ಸೈನ್ಯಗಳ ಒಟ್ಟು ಸೇರುವಿಕೆಯನ್ನೂ, ನಾಲ್ಕು ದಿಕ್ಕುಗಳಿಗೂ ಕಪಿಮಲ್ಲರನ್ನು ಕಳುಹಿಸುವ ಪ್ರಯತ್ನವನ್ನೂ, ಪ್ರಪಂಚದ ಗಿರಿ ನದಿಗಳ ವರ್ಣನೆಯನ್ನೂ, ರಾಮನು ತನ್ನ ಮುದ್ರಿಕೆಯನ್ನು ಆಂಜನೇಯನಿಗೆ ಕೊಡುವಿಕೆಯನ್ನೂ, ಸ್ವಯಂಪ್ರಭೆಯ ವನಪ್ರವೇಶವನ್ನೂ, ಕಪಿಗಳ ಪ್ರಾಯೋಪವೇಶವನ್ನೂ, ಸಂಪಾತಿಯ ದರುಶನವನ್ನೂ, ಸಮುದ್ರವನ್ನು, ದಾಟಲು ಮಹೇಂದ್ರ ಪರ್ವತಾರೋಹಣವನ್ನೂ, ಸಮುದ್ರೋಲ್ಲಂಘನವನ್ನೂ, ಸಮುದ್ರನ ಮಾತಿನಿಂದ ಮೈನಾಕ ಪರ್ವತದ ದರುಶನವನ್ನೂ, ಸಿಂಹಿಕಾ ಸಂಹಾರವನ್ನೂ, ಲಂಕಾ ಪಟ್ಟಣದ ಸಮೀಪದಲ್ಲಿರುವ ಮಲಯ ಪರ್ವತದ ದರುಶನ

ಮಲಯ ದರ್ಶನಂ। ರಾತ್ರೌ ಲಂಕಾ ಪ್ರವೇಶಂಚ ಏಕಸ್ಯಾಥ ವಿಚಿಂತನಂ ॥೨೮॥ ದರ್ಶನಂ ರಾವಣಸ್ಯಾಪಿ ಪುಷ್ಪಕಸ್ಯಚ ದರ್ಶನಂ। ಆಪಾನಭೂಮಿಗಮನ ಮವರೋಧಸ್ಯ ದರ್ಶನಂ ॥ ೨೯ ॥ ಅಶೋಕವನಿಕಾಯಾನಂ ಸೀತಾಯಾಶ್ಚಾಪಿ ದರ್ಶನಂ। ಅಭಿಜ್ಞಾನ ಪ್ರದಾನಂಚ ರಾವಣಸ್ಯಚ ದರ್ಶನಂ ॥ ೩೦ ॥ ರಾಕ್ಷಸೀ ತರ್ಜನಂ ಚೈವ ತ್ರಿಜಟಾ ಸ್ವಪ್ನದರ್ಶನಂ ॥ ಮಣಿಪ್ರದಾನಂ ಸೀತಾಯಾ ವೃಕ್ಷಭಂಗಂ ತಥೈವಚ ॥ ೩೧ ॥ ರಾಕ್ಷಸೀವಿದ್ರವಂ ಚೈವ ಕಿಂಕರಾಣಾಂ ನಿಬರ್ಹಣಂ। ಗ್ರಹಣಂ ವಾಯುಸೂನೋಶ್ಚ ಲಂಕಾದಾಹಾಭಿಗರ್ಜನಂ ॥೩೨॥ ಪ್ರತಿಪ್ಲವನ ಮೇವಾಥ ಮಧೂನಾಂ ಹರಣಂತಥಾ। ರಾಘವಾಶ್ವಾಸನಂಚಾಪಿ ಮಣಿ ನಿರ್ಯಾತನಂತಥಾ॥೩೩॥ ಸಂಗಮಂಚ ಸಮುದ್ರೇಣ ನಳ

---

ವನ್ನು, ಆಪಾನಭೂಮಿಗಮನಂ-ಪಾನಶಾಲಾಪ್ರವೇಶವನ್ನು, ಅವರೊಧಸ್ಯದರ್ಶನಂ-ಅಂತಃಪುರವನ್ನು ನೋಡೋಣವನ್ನು, ॥೨೯॥ ಅಶೋಕವನಿಕಾಯಾನಂ ಅಶೋಕವನಪ್ರವೇಶವನ್ನು, ಸೀತಾಯಾಶ್ಚದರ್ಶನಂ-ಸೀತಾದೇವಿಯ ದರ್ಶನವನ್ನು, ಅಭಿಜ್ಞಾನಪ್ರದಾನಂಚ ರಾಮನ ಗುರ್ತನ್ನು ಕೊಡೋಣವನ್ನು, ರಾವಣಸ್ಯದರ್ಶನಂಚ-ರಾವಣಾಸುರನನ್ನು ನೋಡುವಿಕೆಯನ್ನು ॥೩೦॥ ರಾಕ್ಷಸೀತರ್ಜನಂಚ-ರಕ್ಕಸಿಯರ ಹೆದರಿಕೆಯನ್ನು, ತ್ರಿಜಟಾಸ್ವಪ್ನದರ್ಶನಂ ತ್ರಿಜಟಾ ಎಂಬ ರಕ್ಕಸಿಯು ಸ್ವಪ್ನ ನೋಡಿದುದನ್ನು, ಸೀತಾಯಾಃ-ಸೀತಾದೇವಿಯ, ಮಣಿಪ್ರದಾನಂ-ಚೂಡಾರತ್ನವನ್ನು ಕೊಡೋಣವನ್ನು, ತಥೈವ-ಹಾಗೆಯೇ, ವೃಕ್ಷಭಂಗಂ-ವೃಕ್ಷಭಂಜನವನ್ನು ॥೩೧॥ ರಾಕ್ಷಸೀವಿದ್ರವಂಚೈವ-ರಾಕ್ಷಸಿಯ ರುಓಡಿಹೋಗುವಿಕೆಯನ್ನು, ಕಿಂಕರಾಣಾಂ-ಸೇವಕರ, ನಿಬರ್ಹಣಂಚ-ಹೊಡಿಯೋಣವನ್ನು, ವಾಯುಸೂನೋಃ- ಹನುಮಂತನ, ಗ್ರಹಣಂಚ-ಹಿಡಿದುಕೊಂಡು ಹೋಗೋಣವನ್ನು ಲಂಕಾದಾಹಾಭಿಗರ್ಜನಂ, ಲಂಕಾ-ಲಂಕಾಪಟ್ಟಣದ, ದಾಹಾಭಿಗರ್ಜನಂ ದಹನದಿಂದ ಅಲ್ಲಿ ಇರುವ ರಾಕ್ಷಸರದೀನ ಧ್ವನಿಯನ್ನು, (ಅಥವಾ-ಲಂಕಾ ದಹನದಿಂದ ಹನುಮಂತನ ಘರ್ಜನಯನ್ನು)॥೩೨॥ ಅಥ-ಬಳಿಕ, ಪ್ರತಿಪ್ಲವನಂ-ಹಿಂತಿರಿಗಿ ಸಮುದ್ರವನ್ನು ದಾಟುವಿಕೆಯನ್ನು, ತಥಾ-ಹಾಗೆಯೇ, ಮಧೂನಾಂ ಜೇನುಗಳ, ಹರಣಂ - ಭಕ್ಷಣವನ್ನು, ರಾಘವಾಶ್ವಾಸನಂಚಾಪಿ-ಶ್ರೀರಾಮನನ್ನು ಸಮಾಧಾನಗೊಳಿಸುವಿಕೆಯನ್ನು, ತಥಾ-ಹಾಗೆಯೇ, ಮಣಿ ನಿರ್ಯಾತನಂ-ಚೂಡಾರತ್ನದ ಸಮರ್ಪಣವನ್ನು, ॥೩೩॥ ಸಮುದ್ರೇಣ-ಸಮುದ್ರದದಿಂದ, ಸಂಗಮಂಚ ಪರಿಚಯವನ್ನು, ನಲಸೇತೋಃ - ನಲನೆಂಬವಾನರನಿಂದಸೇತುವಿನ, ಬಂಧನಂ-ನಿರ್ಮಾಣವನ್ನು, ಸಮುದ್ರ

---

ವನ್ನೂ, ಪುಷ್ಪಕ ವಿಮಾನದ ನೋಟವನ್ನೂ, ಪಾನಶಾಲೆಯ ಗಮನವನ್ನೂ, ಅಂತಃಪುರ ಸ್ತ್ರೀಯರ ದರುಶನವನ್ನೂ, ಅಶೋಕವನಕ್ಕೆ ಗಮನವನ್ನೂ, ಸೀತಾ ದರುಶನವನ್ನೂ, ಆಕೆಗೆ ರಾಮನ ಅಂಗುಳೀಯಕ ಪ್ರದಾನವನ್ನೂ, ರಾವಣನ ಸಂದರುಶನವನ್ನೂ, ರಾಕ್ಷಸಿಯರು ಸೀತಾದೇವಿಯನ್ನು ಬೆದರಿಸುವಿಕೆಯನ್ನೂ, ತ್ರಿಜಟಾ ಸ್ವಪ್ನವನ್ನೂ, ಸೀತೆಯ ಚೂಡಾಮಣಿ ಪ್ರದಾನವನ್ನೂ, ವನಭಂಗ, ರಾಕ್ಷಸ ಸ್ತ್ರೀಯರ ಪಲಾಯನ, ರಾವಣನ ಸೇವಕರ ಸಂಹಾರ, ಆಂಜನೇಯಗ್ರಹಣ, ಲಂಕಾದಹನ, ಇವುಗಳನ್ನೂ, ಆಂಜನೇಯನು ಸಮುದ್ರವನ್ನು ದಾಟಿ ಹಿಂತಿರುಗಿ ಬರುವಿಕೆ, ಮಧುವನಭಂಗ, ಶ್ರೀರಾಮನನ್ನು ಸಮಾಧಾನಗೊಳಿಸುವಿಕೆ, ಚೂಡಾಮಣಿ ಸಮರ್ಪಣೆ, ಇವುಗಳನ್ನೂ, ಬಳಿಕ ರಾಮನು ಸೈನ್ಯ ಸಮೇತನಾಗಿ ಸಮುದ್ರವನ್ನು ಸೇರುವಿಕೆ, ನಳನ ಸೇತುನಿರ್ಮಾಣ, ಸಮುದ್ರತರಣ, ರಾತ್ರಿಯಲ್ಲಿ ಲಂಕಾಪಟ್ಟಣಕ್ಕೆ ಮುತ್ತಿಗೆ, ವಿಭೀಷಣ ಸಮಾಗಮ, ಶತೃಸಂಹಾರಕ್ಕೆ ತಕ್ಕ ಉಪಾಯಚಿಂತನೆ, ಕುಂಭಕರ್ಣನ

ಸೇತೋಶ್ಚ ಬಂಧನಂ ! ಪ್ರತಾರಂಚ ನಮುದ್ರಸ್ಯ ರಾತ್ರೌ ಲಂಕಾವರೋಧನಂ ||೩೪||
ವಿಭೀಷಣೇನ ಸಂಸರ್ಗಂ ವಧೋಪಾಯ ನಿವೇದನಂ | ಕುಂಭಕರ್ಣಸ್ಯ ನಿಧನಂ ಮೇಘ
ನಾದ ನಿಬರ್ಹಣಂ || ೩೫ || ರಾವಣಸ್ಯ ವಿನಾಶಂಚ ಸೀತಾಪ್ರಾಪ್ತಿಮರೇಃಪುರೇ ||
ವಿಭೀಷಣಾಭಿಷೇಕಂಚ ಪುಷ್ಪಕಸ್ಯಚ ದರ್ಶನಂ ||೩೬|| ಅಯೋಧ್ಯಾಯಾಶ್ಚ ಗಮನಂ
ಭರತೇನ ಸಮಾಗಮಂ | ರಾಮಾಭಿಷೇಕಾಭ್ಯುದಯಂ ಸರ್ವಸೈನ್ಯ ವಿಸರ್ಜನಂ ||
ಸ್ವರಾಷ್ಟ್ರರಂಜನಂ ಚೈವ ವೈದೇಹ್ಯಾಶ್ಚ ವಿಸರ್ಜನಂ || ೩೭ || ಅನಾಗತಂಚ
ಯತ್ಕಿಂಚಿ ದ್ರಾಮಸ್ಯ ವಸುಧಾತಲೇ || ತಚ್ಚಕಾರೋತ್ತರೇಕಾವ್ಯೇ ವಾಲ್ಮೀಕಿ
ರ್ಭಗವಾನೃಷಿಃ ||೩೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತೃತೀಯಸ್ಸರ್ಗಃ.

ಸ್ಯ-ಕಡಲಿನ, ಪ್ರತಾರಂಚ-ದಾಟುವಿಕೆಯನ್ನು, ರಾತ್ರೌ-ರಾತ್ರಿಯಲ್ಲಿ, ಲಂಕಾವರೋಧನಂ-ಲಂಕಾಪಟ್ಟಣಕ್ಕೆ ಮುತ್ತಿಗೆ ಹಾಕೋಣವನ್ನು, ||೩೪|| ವಿಭೀಷಣೇನ-ವಿಭೀಷಣನೊಡನೆ, ಸಂಸರ್ಗಂ ಸ್ನೇಹವನ್ನು, ವಧೋಪಾಯ-ರಾವಣಸಂಹಾರೋಪಾಯದ, ನಿವೇದನಂ-ತಿಳಿಸುವಿಕೆಯನ್ನು, ಕುಂಭಕರ್ಣಸ್ಯ-ಕುಂಭಕರ್ಣನ, ನಿಧನಂ-ಸಂಹಾರವನ್ನು, ಮೇಘನಾದ ನಿಬರ್ಹಣಂ ಇಂದ್ರಜಿತ್ಸಂಹಾರವನ್ನು ||೩೫|| ರಾವಣಸ್ಯ-ರಾವಣಾಸುರನ, ವಿನಾಶಂಚ ಸಂಹಾರವನ್ನು, ಅರೇಃ-ಶತ್ರುವಿನ, ಪುರೇ-ಪಟ್ಟಣದಲ್ಲಿ, ಸೀತಾಪ್ರಾಪ್ತಿಂ-ಸೀತಾಪ್ರಾಪ್ತಿಯನ್ನು, ವಿಭೀಷಣಾಭಿಷೇಕಂ-ವಿಭೀಷಣಾಭಿಷೇಕವನ್ನು, ಪುಷ್ಪಕಸ್ಯ-ಪುಷ್ಪಕವಿಮಾನದ, ದರ್ಶನಂ-ನೋಡೋಣವನ್ನು, ||೩೬|| ಅಯೋಧ್ಯಾಯಾಃ-ಅಯೋಧ್ಯಾಪಟ್ಟಣಕ್ಕೆ, ಗಮನಂಚ- ಪ್ರಯಾಣವನ್ನು, ಭರತೇನ-ಭರತನೊಡನೆ, ಸಮಾಗಮಂಚ ಕೂಡೋಣವನ್ನು, ರಾಮಾಭಿಷೇಕಾಭ್ಯುದಯಂ-ರಾಮನಿಗೆ ಪಟ್ಟಾಭಿಷೇಕೋತ್ಸವವನ್ನು, ಸರ್ವಸೈನ್ಯ ವಿಸರ್ಜನಂ-ಸಮಸ್ತ ವಾನರ ಸೈನ್ಯವನ್ನು ಕಳುಹಿಸೋಣವನ್ನು, ಸ್ವರಾಷ್ಟ್ರರಂಜನಂ ಸ್ವರಾಜ್ಯದ ಜನರಂಜನವನ್ನು ವೈದೇಹ್ಯಾಃ-ಸೀತಾದೇವಿಯ, ವಿಸರ್ಜನಂಚ ಕಳುಹಿಸೋಣವನ್ನು, ಚಕಾರ-ಮಾಡಿದನು, ||೩೭|| ವಸುಧಾತಲೆ ಭೂಲೋಕದಲ್ಲಿ, ರಾಮಸ್ಯ-ಶ್ರೀರಾಮನಿಗೆ, ಅನಾಗತಂ - ಭವಿಷ್ಯತ್ತಾಗಿರುವುದು, ಯತ್ಕಿಂಚತ್-ಯಾವುದುಂಟೊ, ತತ್-ಅದನ್ನು, ಉತ್ತರೇಕಾವ್ಯೆ-ಉತ್ತರಕಾಂಡದಲ್ಲಿ, ಭಗವಾನ್-ಪೂಜ್ಯನಾದ, ವಾಲ್ಮೀಕಿಋಷಿಃ-ವಾಲ್ಮೀಕಿಮಹರ್ಷಿಯು, ಚಕಾರ ಮಾಡಿದನು ||೩೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ
ತೃತೀಯಸ್ಸರ್ಗಃ.

ಸಂಹಾರ, ಇಂದ್ರಜಿದ್ವಧೆ, ರಾವಣನ ನಾಶ, ಲಂಕಾಪುರದಲ್ಲಿ ಸೀತಾಪ್ರಾಪ್ತಿ, ವಿಭೀಷಣನ ರಾಜ್ಯಾಭಿಷೇಕ ಇವುಗಳನ್ನೂ, ಬಳಿಕ ಪುಷ್ಪಕ ವಿಮಾನಾರೋಹಣ, ಅಯೋಧ್ಯಾಗಮನ ಭರತಸಮಾಗಮ, ಶ್ರೀರಾಮರಾಜ್ಯ ಪಟ್ಟಾಭಿಷೇಕ ಮಹೋತ್ಸವ, ಇವುಗಳನ್ನೂ, ಸಮಸ್ತ ವಾನರರನ್ನು ತಮ್ಮತಮ್ಮ ಸ್ಥಳಗಳಿಗೆ ಕಳುಹುವಿಕೆ, ತನ್ನ ರಾಜ್ಯದಲ್ಲಿ ಜನರ ರಂಜನೆ, ಬಳಿಕ ಸೀತಾದೇವಿಯನ್ನು ಅಗಲುವಿಕೆ, ಅನಂತರ ಶ್ರೀರಾಮಚಂದ್ರನು ಭೂಮಂಡಲದಲ್ಲಿ ರಾಜ್ಯ ಪರಿಪಾಲನೆ ಮಾಡುತ್ತಾ, ಮುಂದೆ ಯಾವ ಯಾವ ಕಾರ್ಯಗಳನ್ನೆಸಗಿದನೋ ಅವುಗಳನ್ನೂ ಸಹ ಆ ವಾಲ್ಮೀಕಿ ಮಹರ್ಷಿಯು ಉತ್ತರ ಕಾಂಡದಲ್ಲಿ ರಚಿಸಿದವನಾದನು ||೧೫- —೩೮||

ಇಂತಿದು ರಾಮಾಯಣ ರಚನಾರೀತಿ ವಿವರಣವೆಂಬ ಮೂರನೆಯ ಸರ್ಗವು
ಸಮಾಪ್ತವಾದುದು.

# ಬಾಲಕಾಂಡೇ ಚತುರ್ಥಸ್ಸರ್ಗಃ.

ಪ್ರಾಪ್ತರಾಜ್ಯಸ್ಯ ರಾಮಸ್ಯ ವಾಲ್ಮೀಕಿರ್ಭಗವಾನೃಷಿಃ । ಚಕಾರ ಚರಿತಂ ಕೃತ್ಸ್ನಂ ವಿಚಿತ್ರ ಪದಮಾತ್ಮವಾನ್ ॥೧॥ ಚತುರ್ವಿಂಶ ತ್ಸಹಸ್ರಾಣಿ ಶ್ಲೋಕಾನಾಮುಕ್ತವಾನೃಷಿಃ। ತಥಾಸರ್ಗ ಶತಾನ್ಪಂಚ ಷಟ್ಕಾಂಡಾನಿ ತಥೋತ್ತರಂ ॥೨॥ ಕೃತ್ವಾಽಪಿ ತನ್ಮಹಾಪ್ರಾಜ್ಞಸ್ಸಭವಿಷ್ಯಂಸಹೋತ್ತರಂ । ಚಿಂತಯಾಮಾಸ

ಆತ್ಮವಾನ್ - ಬ್ರಹ್ಮಜ್ಞಾನಿಯಾದ, ಭಗವಾನ್ - ಪೂಜ್ಯನಾದ, ಋಷಿರ್ವಾಲ್ಮೀಕಿಃ – ವಾಲ್ಮೀಕಿಋಷಿಯು, ಪ್ರಾಪ್ತರಾಜ್ಯಸ್ಯ - ಹೊಂದಲ್ಪಟ್ಟ ರಾಜ್ಯವುಳ್ಳ, ರಾಮಸ್ಯ – ಶ್ರೀರಾಮನ, ಕೃತ್ಸ್ನಂ - ಸಂಪೂರ್ಣವಾದ, ಚರಿತಂ - ಚರಿತ್ರಪ್ರತಿಪಾದಕ ಕಾವ್ಯವನ್ನು, ವಿಚಿತ್ರಪದಂ ಯಥಾತಥಾ - ಆಶ್ಚರ್ಯಕರವಾಗಿಯೂ ಚಿತ್ರಾಲಂಕಾರ ಸಹಿತವಾಗಿಯೂ ಇರುವ ಪದಗಳುಳ್ಳಂತೆ, ಚಕಾರ - ಮಾಡಿದನು ॥೧॥ ಋಷಿಃ – ಕಾವ್ಯರಚನಾಶಕ್ತಿಯುಳ್ಳ ವಾಲ್ಮೀಕಿಯು, ಶ್ಲೋಕಾನಾಂ – ಪದ್ಯಗಳ, ಚತುರ್ವಿಂಶತ್ಸಹಸ್ರಾಣಿ – ಇಪ್ಪತ್ತು ನಾಲ್ಕು ಸಹಸ್ರಗಳನ್ನು, ತಥಾ - ಹಾಗೆಯೇ, ಪಂಚಸರ್ಗಶತಾನ್- ಐದುನೂರು ಸರ್ಗಗಳನ್ನೂ(೧) ಉತ್ತರಂ - ಉತ್ತರಕಾಂಡವನ್ನೂ, ಉಕ್ತವಾನ್ - ಹೇಳತೊಡಗಿದನು. ॥೨॥ ಮಹಾಪ್ರಾಜ್ಞಃ - ನಿರತಿಶಯಜ್ಞಾನಸಂಪನ್ನನಾದ, ಸಃ- ಆ ವಾಲ್ಮೀಕಿಯು, ಸಭವಿಷ್ಯಂ - ಪಟ್ಟಾಭಿಷೇಕವಾದ ಬಳಿಕ ನಡೆದ ಮುಂದಿನ ಕಥೆಯನ್ನೊಳಗೊಂಡ, ಸಹೋತ್ತರಂ - ಅಶ್ವಮೇಧ ಯಾಗಾನಂತರದಲ್ಲಿ ನಡೆ

---

ಬಳಿಕ ಕಾವ್ಯವನ್ನು ಮಾಡುವುದರಲ್ಲಿ ಚತುರನೂ, ಪೂಜ್ಯನೂ ಆದ, ವಾಲ್ಮೀಕಿ ಮುನಿಯು, ರಾಜ್ಯವನ್ನು ಪಡೆದ ಶ್ರೀರಾಮಚಂದ್ರನ ಸಂಪೂರ್ಣ ಚರಿತ್ರೆಯನ್ನು ಬಿತ್ತರಿಸುವ ಕಾವ್ಯವನ್ನು ಮಾಡಲುದ್ಯುಕ್ತನಾಗಿ, ಇಪ್ಪತ್ತುನಾಲ್ಕುಸಾವಿರ ಸಂಖ್ಯೆಯುಳ್ಳ ಶ್ಲೋಕಗಳನ್ನು ರಚಿಸಿ, ಅವುಗಳನ್ನು ಐದುನೂರು ಸರ್ಗಗಳಾಗಿಯೂ, ಆರು ಕಾಂಡಗಳಾಗಿಯೂ, ಅದಾದ ಬಳಿಕ ಸರ್ವೋತ್ತಮವಾದ ಉತ್ತರಕಾಂಡವಾಗಿಯೂ, ವಿಭಜಿಸಿದನು. ಇಂತು ಶ್ರೀರಾಮಪಟ್ಟಾಭಿಷೇಕವಾದ ಬಳಿಕ ಮುಂದೆ ನಡೆವ ಕಥಾಯುಕ್ತವಾದುದೂ, ಅಶ್ವಮೇಧಾನಂತರದಲ್ಲಿ ನಡೆದ ವಿಷಯಸಹಿತವಾದುದೂ, ಆದ ಈ ರಾಮಾಯಣ ಕಾವ್ಯವನ್ನು

---

ಟಿಪ್ಪಣಿ (೧) ಐದುನೂರು ಸರ್ಗಗಳೆಂಬುದು ಷಟ್ಕಾಂಡಗಳಿಗೇನೇ ಹೊರತು, ಉತ್ತರಕಾಂಡ ಸಹಿತವಾಗಿಯಲ್ಲ. ಆಧುನಿಕ ಪಾಠದಲ್ಲಿ ಶ್ಲೋಕಗಳಿಗೂ ಸರ್ಗಗಳಿಗೂ ವ್ಯತ್ಯಾಸ ತೋರುವುದು. ಹೀಗಿದ್ದರೂ ಮಹಾ ಯುಗಗಳಿಗಿಂತಲೂ ಪೂರ್ವದಲ್ಲಿ ಈ ಗ್ರಂಥವು ರಚಿತವಾಗಿರುವುದರಿಂದ ಕೆಲವೆಡೆಗಳಲ್ಲಿ ಪಾಠಭೇದದಿಂದ ಶ್ಲೋಕ ಸಂಖ್ಯೆಯು ವ್ಯತ್ಯಾಸವಾಗಿರುವುದು. ಅಲ್ಲದೆ ವಾಲ್ಮೀಕಿಮಹರ್ಷಿಯು ಐದುನೂರು ಸರ್ಗಗಳನ್ನೇ ಮಾಡುವುದಾಗಿ ಸಂಕಲ್ಪಿಸಿದ್ದಂತೆ ಈ ಶ್ಲೋಕದಿಂದ ತಿಳಿವುದು. ಆದುದರಿಂದ ಗ್ರಂಥಸಮಾಪ್ತಿ ಕಾಲದಲ್ಲಿ ಸರ್ಗಗಳ ಕೆಲ ಶ್ಲೋಕಗಳು ಹೆಚ್ಚಿದ್ದರೂ ಪ್ರಮಾದವೇನೂ ಇಲ್ಲವೆಂದು ವ್ಯಾಖ್ಯಾನಕಾರರ ಅಭಿಪ್ರಾಯ ಒಟ್ಟಿನಮೇಲೆ ಸರ್ಗಸಂಖ್ಯೆಯು ಷಟ್ಕಾಂಡಪರವಾದುದೆಂದೂ, ಗ್ರಂಥಸಂಖ್ಯೆಯು ಸಪ್ತಕಾಂಡಪರವಾದುದೆಂದೂ ತಿಳಿಯತಕ್ಕುದು.

ಕೋನ್ವೇತತ್ಪ್ರಯುಂಜೀಯಾದಿತಿ ಪ್ರಭುಃ||ತಸ್ಯಚಿಂತಯಮಾನಸ್ಯಮಹರ್ಷೇ ರ್ಭಾವಿತಾತ್ಮನಃ| ಅಗೃಹ್ಣೀತಾಂ ತತಃಪಾದೌ ಮುನಿವೇಷೌ ಕುಶೀಲವೌ ||೪|| ಕುಶೀಲವೌತು ಧರ್ಮಜ್ಞೌ ರಾಜಪುತ್ರೌ ಯಶಸ್ವಿನೌ | ಭ್ರಾತರೌ ಸ್ವರ ಸಂಪನ್ನೌದದರ್ಶಾಶ್ರಮವಾಸಿನೌ ||೫||ಸತುಮೇಧಾವಿನೌ ದೃಷ್ಟ್ವಾವೇದೇಷು ಪರಿನಿಷ್ಠಿತೌ | ವೇದೋಪಬೃಹ್ಮಣಾರ್ಥಾಯ ತಾವಗ್ರಾಹಯತಪ್ರಭುಃ ||೬|| ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್ | ಪೌಲಸ್ತ್ಯ

ಯುವ ಕಥಾಸಂದರ್ಭಸಹಿತವಾಗಿರುವ, ತತ್ - ಆ ರಾಮಾಯಣವನ್ನು, ಕೃತ್ವಾಪಿ-ಮಾಡಿಯೂ, ಪ್ರಭುಃ - ಸಮರ್ಥನಾದ, ಕಃ ಯಾವನು, ಏತತ್- ಈ ಕಾವ್ಯವನ್ನು, ಪ್ರಯುಂಜೀಯಾತ್ ಬಾಯಿ ಪಾಠಮಾಡಲು ಅರ್ಹನು, ಇತಿ-ಹೀಗೆಂದು, ಚಿಂತಯಾ ಮಾಸ - ಆಲೋಚಿಸತೊಡಗಿದನು || ೩ || ತತಃ - ಬಳಿಕ, ಮುನಿವೇಷೌ - ಋಷಿವೇಷವುಳ್ಳ, ಕುಶೀಲವೌ - ಗಾಯಕರಾದ ಕುಶಲವರು, ಚಿಂತಯಮಾನಸ್ಯ -ಆಲೋಚಿಸುತ್ತಿರುವ, ಭಾವಿತಾತ್ಮನಃ - ಧ್ಯಾನಿಸಲ್ಪಟ್ಟ ಪರಮಾತ್ಮನುಳ್ಳ, ಅಥವ ಶ್ರೀರಾಮಚರಿತ್ರವರ್ಣನೆಯಿಂದ ಶುದ್ಧವಾದ ಅಂತಃಕರಣವುಳ್ಳ, ತಸ್ಯಮಹರ್ಷೇಃ - ಆ ವಾಲ್ಮೀಕಿಮಹರ್ಷಿಯ, ಪಾದೌ - ಪಾದಗಳನ್ನು, ಅಗೃಹ್ಣೀತಾಂ - ಹಿಡಿದುಕೊಂಡರು ||೪|| ವಾಲ್ಮೀಕಿಃ- ವಾಲ್ಮೀಕಿಮುನಿಯು, ಧರ್ಮಜ್ಞೌ - ಧರ್ಮವನ್ನರಿತವರಾದ, ಯಶಸ್ವಿನೌ - ಕೀರ್ತಿಭಾಗಿಗಳಾದ. ಸ್ವರಸಂಪನ್ನೌ - ಶುದ್ಧವಾದ ಸ್ವರವುಳ್ಳ ಭ್ರಾತರೌ- ಅಣ್ಣತಮ್ಮಂದಿರಾದ, ರಾಜಪುತ್ರೌ ರಾಜ ಕುವರರಾದುದರಿಂದಲೇ ಧೈರ್ಯಶಾಲಿಗಳಾದ, ಕುಶೀಲವೌ - ಗಾಯಕರಿಬ್ಬರನ್ನೂ, ಆಶ್ರಮವಾಸಿನೌ- ತನ್ನ ಆಶ್ರಮದಲ್ಲಿಯೇ ಇರುವವರನ್ನಾಗಿ, ದದರ್ಶ - ಕಂಡನು ||೫|| ಚರಿತವ್ರತಃ - ಆಚರಿಸ ಲ್ಪಟ್ಟ ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳುಳ್ಳ,ಪ್ರಭುಃ-ಸಮರ್ಥನಾದ, ಸಃ - ಆ ವಾಲ್ಮೀಕಿಯು, ರಾಮಾಯಣಂ - ಶ್ರೀ ರಾಮವಿಷಯವಾಗಿವುಳ್ಳ, ಕೃತ್ಸ್ನಂ - ಸಮಸ್ತವಾದ, ಮಹತ್ ದೊಡ್ಡ ದಾದ, ಸೀತಾಯಾಃ ಸೀತಾದೇವಿಯ, ಚರಿತಂ- ಚರಿತ್ರಪ್ರತಿಪಾದಕವಾದ, ಪೌಲಸ್ತ್ಯವಧಮಿತ್ಯೇವ - ಪುಲಸ್ತ್ಯವಂಶಜನಾದ ರಾವಣಾಸುರನ ಸಂಹಾರವೇ ಪ್ರಯೋಜನವಾಗಿವುಳ್ಳ, ಅಥವ ರಾವಣ ವಧೆಯ ವಿಷಯಕವಾದ, ಯತ್ಕಾವ್ಯಂ- ಯಾವ ಕಾವ್ಯವನ್ನು, ಚಕಾರ- ಮಾಡಿದನೋ, ತತ್ಕಾವ್ಯಂ- ಆ ಕಾವ್ಯವನ್ನು, ವೇದೇಷು - ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳಲ್ಲಿ, ಮೇಧಾ ವಿನೌ - ಗ್ರಹಣಧಾರಣ ಬುದ್ಧಿಯುಳ್ಳ, ಪರಿನಿಷ್ಠಿತೌ ಸಕಲ ವೇದಾಂಗಗಳಲ್ಲಿಯೂ ಅನುಷ್ಠಾನವುಳ್ಳ ಕುಶಲವರನ್ನು, ದೃಷ್ಟ್ವಾ - ಕಂಡು, ವೇದೋಪಬೃಹ್ಮಣಾರ್ಥಾಯ - ಶೃತಿ ತಾತ್ಪರ್ಯವನ್ನು ಪ್ರತಿ

ಸಂಪೂರ್ಣವಾಗಿ ರಚಿಸಿದರೂ, ಆ ಪ್ರಾಜ್ಞನಾದ ವಾಲ್ಮೀಕಿಯು "ಇದನ್ನು ಪಠಿಸಲು ಶಕ್ತಿಯುಳ್ಳವನಾವನಿರುವನು" ಎಂದು ಯೋಚಿಸುತ್ತಿದ್ದನು ಆಗ ಮುನಿವೇಷಧಾರಿಗಳೂ, ಗಾಯಕರೂ ಆದ, ಕುಶಲವರೆಂಬ ತರುಣರಿಬ್ಬರು ಆ ವಾಲ್ಮೀಕಿಮುನಿಯ ಪಾದಕ್ಕೆರಗಿದರು. ಆಗಲಾ ವಾಲ್ಮೀಕಿಯು ಧರ್ಮವನ್ನರಿತವರೂ, ಕೀರ್ತಿಸಂಪನ್ನರೂ, ಮಧುರಸ್ವರಯುಕ್ತರೂ, ಧೈರ್ಯಶಾಲಿಗಳೂ ಆಗಿರುವ ಆ ಅಣ್ಣತಮ್ಮಂದಿರು ತನ್ನ ಆಶ್ರಮವಾಸಿಗಳೆಂದೇ ತಿಳಿದನು.||೫|| ಬಳಿಕ ಕೃಚ್ಛ್ರ, ಚಾಂದ್ರಾಯಣಾದಿ ವ್ರತಾನುಷ್ಠಾನ ತತ್ಪರನೂ ಮಹಾಜ್ಞಾನಿಯೂ ಆದ ವಾಲ್ಮೀಕಿಯು, ನಾಲ್ಕು ವೇದಗಳ ಅರ್ಥವನ್ನೂ ವಿಶದಗೊಳಿಸಲೋಸುಗ, ರಾಮವಿಷಯಿಕ

ವಧಮಿತ್ಯೇವ ಚಕಾರ ಚರಿತವ್ರತಃ ॥೭॥ ಪಾಠ್ಯೇಗೇಯೇಚ ಮಧುರಂ ಪ್ರಮಾಣೈಸ್ತ್ರಿಭಿರನ್ವಿತಂ । ಜಾತಿಭಿ ಸ್ಸಪ್ತಭಿರ್ಬದ್ಧಂ ತಂತ್ರೀಲಯ ಸಮನ್ವಿತಂ ॥೮॥ ರಸೈ ಶ್ಶೃಂಗಾರ ಕಾರುಣ್ಯ ಹಾಸ್ಯವೀರ ಭಯಾನಕೈಃ। ರೌದ್ರಾದಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಂ ॥೯॥ ತೌತು ಗಾಂಧರ್ವತತ್ವಜ್ಞೌ ಮೂರ್ಛನಾ ಸ್ಥಾನ ಕೋವಿದೌ । ಭ್ರಾತರೌ ಸ್ವರಸಂಪನ್ನೌ ಗಂಧರ್ವಾವಿವ ರೂಪಿಣೌ॥ರೂಪಲಕ್ಷಣ ಸಂಪನ್ನೌಮಧುರಸ್ವರಭಾಷಿಣೌ।ಬಿಂಬಾದಿವೋದ್ಧೃತೌ ಬಿಂಬೌರಾಮದೇಹಾತ್ತಥಾಪರೌ॥೧೧॥ ತೌರಾಜಪುತ್ರೌ ಕಾರ್ತ್ಸ್ನ್ಯೇ ನಧರ್ಮ್ಯ

ಪಾದಿಸುವ ತನ್ನ ಗ್ರಂಥದ ಪ್ರಚಾರದ ಪ್ರಯೋಜನಕ್ಕಾಗಿ, ಅಗ್ರಾಹಯತ - ತಿಳಿವಂತೆ ಹುರಿದುಂಬಿಸಿದನು. ।೬-೭॥ ಗಾಂಧರ್ವತತ್ವಜ್ಞೌ-ಗಾನಶಾಸ್ತ್ರದ ತತ್ವವನ್ನರಿತ, ಮೂರ್ಛನಾಸ್ಥಾನಕೋವಿದೌ-ಷಡ್ಜಾದಿ ಸ್ವರಗಳಲ್ಲಿಯೂ, ಮಂದ್ರ,ಮಧ್ಯ,ತಾರಗಳೆಂಬ ಸ್ಥಾನಗಳಲ್ಲಿಯೂ ಪಂಡಿತರಾದ, ಭ್ರಾತರೌ-ಸಹೋದರರಾದುದರಿಂದಲೇ, ಸ್ವರಸಂಪನ್ನೌ - ಒಂದೇ ವಿಧವಾದ ಸ್ವರಯುಕ್ತರಾದ, ರೂಪಿಣೌ - ಮನುಷ್ಯದೇಹಧಾರಿಗಳಾದ, ಗಾಂಧರ್ವಾವಿವಸ್ಥಿತೌ - ಗಂಧರ್ವರಂತಿರುವ, ರೂಪಲಕ್ಷಣಸಂಪನ್ನೌ-ನಾಟಕ ಲಕ್ಷಣಗಳನ್ನು ತಿಳಿದಿರುವ, ಅಥವ-ರೂಪ, ಆಕಾರ, ಲಕ್ಷಣ-ಸಾಮುದ್ರಿಕಾ ಶಾಸ್ತ್ರದಲ್ಲಿ ಹೇಳಿರುವ ಮೂವತ್ತೆರಡು ಲಕ್ಷಣಗಳಿಂದ, ಸಂಪನ್ನೌ - ಕೂಡಿರುವ, ಮಧುರಸ್ವರಭಾಷಿಣೌ - ಕೇಳಲಿಂಪಾದ ಕಂಠಸ್ವರಗಳಿಂದ ಮಾತನಾಡುತ್ತಿರುವ, ತಥಾ- ಹಾಗೆಯೇ, ಬಿಂಬಾತ್-ಬಿಂಬಭೂತವಾದ, ರಾಮದೇಹಾತ್ - ಶ್ರೀರಾಮನ ಶರೀರದಿಂದ, ಉದ್ಧೃತೌ - ಹುಟ್ಟಿದವರಾದುದರಿಂದಲೇ, ಅಪರೌ ಬಿಂಬಾವಿವಸ್ಥಿತೌ - ಬೇರೆಯಾದ ಪ್ರತಿಬಿಂಬದಂತಿರುವ, ತೌ - ಆ ಕುಶಲವರು, ಪಾಠ್ಯೇ - ಪಾಠದಲ್ಲಿಯೂ, ಗೇಯೇಚ - ಗಾನದಲ್ಲಿಯೂ, ಮಧುರಂ - ಶ್ರಾವ್ಯವಾಗಿರುವ, ತ್ರಿಭಿಃ - ಮೂರುಬಗೆಯಾದ, ಪ್ರಮಾಣೈಃ - ದೃತ,ಮಧ್ಯ, ವಿಲಂಬಿತವೆಂಬ ಧ್ವನಿಗಳಿಂದ,ಅನ್ವಿತಂ ಕೂಡಿರುವಂತೆ, ಸಪ್ತಭಿಃ ಜಾತಿಭಿಃ - ಏಳಾದ ಷಡ್ಜಾದಿ ಸ್ವರಗಳಿಂದ, ಬದ್ಧಂಯಥಾತಥಾ - ಕೂಡಿರುವಂತೆ, ತಂತ್ರೀಲಯ ಸಮನ್ವಿತಂ- ತಂತಿಗಳಿಂದ ಕೂಡಿದ ವೀಣೆಯ ಸ್ವರವಿಶ್ರಾಂತಿ ಸ್ಥಾನಗಳಿಂದ ಕೂಡಿದಂತೆ, ಶೃಂಗಾರ - .... .. ಕೈಃ- ಶೃಂಗಾರ, ಕಾರುಣ್ಯ, ಹಾಸ್ಯ, ವೀರ, ಭಯಾನಕಗಳೇ ಮೊದಲಾದ ನವರಸಗಳಿಂದಲೂ,

ವಾಗಿಯೂ,ಸೀತಾಚರಿತ್ರ ರೂಪವಾಗಿಯೂ,ರಾವಣನ ವಧೆಯೇ ಮುಖ್ಯವಾದ ಪ್ರಯೋಜನವಾಗಿ ವುಳ್ಳ ಶ್ರೇಷ್ಠವಾದ ಈ ಕಾವ್ಯವನ್ನು ಆ ಕುಶಲವರಿಗೆ ಬಾಯಿಪಾಠಮಾಡಿಸಿದನು. ॥೬-೭॥ಆಗ ಗಾನಶಾಸ್ತ್ರದ ತಿರುಳನ್ನರಿತವರೂ, ಷಡ್ಜಾದಿಸ್ವರಗಳಲ್ಲಿಯೂ, ಮಂದ್ರ, ಮಧ್ಯ, ತಾರಗಳೆಂಬಸ್ಥಾನಗಳನ್ನು ತಿಳಿದವರೂ, ಸಹೋದರರಾದುದರಿಂದಲೇ ಒಂದೇವಿಧವಾದ ಸ್ವರವುಳ್ಳವರೂ, ಮಾನುಷ ದೇಹಧಾರಿಗಳೂ, ಗಂಧರ್ವರೂಪಿಗಳೂ, ಬಹುಸುಂದರ ಪುರುಷರೂ, ಶ್ರೀರಾಮನಂತೆಯೇ ರೂಪವುಳ್ಳ ಆ ಕುಶಲವರು, ಪಾಠದಲ್ಲಿಯೂ, ಗಾನದಲ್ಲಿಯೂ ಶ್ರಾವ್ಯವಾಗಿರುವ ವಿಲಂಬಿತ, ದೃತ, ಮಧ್ಯಗಳೆಂಬ ಮೂರು ವಿಧವಾದ ಗತಿವಿಶೇಷಗಳಿಂದ ಕೂಡಿರುವ ಷಡ್ಜಾದಿ ಸ್ವರಯುಕ್ತವಾದ, ತಂತುಯುಕ್ತವಾದ ವೀಣಾದಿ ವಾದ್ಯಗಳ ವಿರಾಮಸ್ಥಾನಗಳಿಂದ ಕೂಡಿದುದೂ, ಶೃಂಗಾರ, ಹಾಸ್ಯ, ವೀರ, ಭಯಾನಕಾದಿ ನವರಸಗಳಿಂದ ಕೂಡಿರುವ

ಮಾಖ್ಯಾನಮುತ್ತಮಂ। ವಾಚೋವಿಧೇಯಂ ತತ್ಸರ್ವಂ ಕೃತ್ವಾಕಾವ್ಯಮನಿಂದಿತೌ। ಋಷೀಣಾಂಚದ್ವಿಜಾತೀನಾಂಸಾಧೂನಾಂಚ ಸಮಾಗಮೇ। ಯಥೋಪದೇಶಂ ತತ್ವಜ್ಞೌ ಜಗುತುಸ್ತೌ ಸಮಾಹಿತೌ ॥ ಮಹಾತ್ಮಾನೌ ಮಹಾಭಾಗೌ ಸರ್ವಲಕ್ಷಣಲಕ್ಷಿತೌ ॥೧೩॥ ತೌ ಕದಾಚಿತ್ಸಮೇತಾನಾ ಮೃಷೀಣಾಂ ಭಾವಿತಾತ್ಮನಾಂ ॥ ಆಸೀನಾನಾಂ ಸಮೀಪಸ್ಥಾ ವಿದಂಕಾವ್ಯಮಗಾಯತಾಂ ॥ ೧೪ ॥

ಸಂಯುಕ್ತಂ - ಕೂಡಿರುವ, ಏತತ್ಕಾವ್ಯಂ - ಈ ರಾಮಾಯಣವನ್ನು, ಅಗಾಯತಾಂ - ಹಾಡಿದರು. ॥೮-೧೧॥ ಅನಿಂದಿತೌ - ಗುರೂಪದೇಶಕ್ಕೆ ವಿರೋಧವಾದ ಪಾಠದಿಂದ ಆದ ದೂಷಣೆಗೊಳಗಾಗದಿರುವ, ತತ್ವಜ್ಞೌ - ಶುದ್ಧವಾದ ಪಾಠವನ್ನು ತಿಳಿದಿರುವ, ಸಮಾಹಿತೌ - (ಗೋ) ಯಾವ ಅಂಶದಲ್ಲಿಯೂ ಮರೆವಿಲ್ಲದವರೂ, (ತಿ) ನಿಶ್ಚಲಚಿತ್ತರಾದ, ರಾಜಪುತ್ರೌ - ರಾಜಪುತ್ರರಾದ, ತೌಮಹಾತ್ಮಾನೌ - ಆ ಮಹಾಮನಸ್ವಿಗಳಾದ, ಮಹಾಭಾಗೌ - ಪುಣ್ಯಶಾಲಿಗಳಾದ, ಸರ್ವಲಕ್ಷಣಲಕ್ಷಿತೌ - ಸಕಲ ಲಕ್ಷಣಗಳಿಂದಲೂ ಶೋಭಾಯಮಾನರಾದ, ತೌ - ಆ ಕುಶಲವರು, ಕಾರ್ತ್ಸ್ನ್ಯೇನ - ಅನೇಕ ವಿಧಗಳಿಂದಲೂ, ಧರ್ಮ್ಯಂ - ಧರ್ಮವೇ ಮುಖ್ಯವಾಗಿವುಳ್ಳ, ಉತ್ತಮಂ - ಮಿಗಿಲೆಸಿಸಿದ, ಆಖ್ಯಾನಂ - ಶ್ರೀರಾಮಚಂದ್ರನ ನಡತೆಯನ್ನು ಬಿತ್ತರಿಸುವ, ಸರ್ವಂತತ್ಕಾವ್ಯಂ-ಆ ಕಾವ್ಯವೆಲ್ಲವನ್ನೂ, ವಾಚೋವಿಧೇಯಂ - ಬಾಯಿಪಾಠವನ್ನಾಗಿ, ಕೃತ್ವಾ - ಮಾಡಿ (ಗೋ) ದ್ವಿಜಾತೀನಾಂ - (೧) ಬ್ರಾಹ್ಮಣರ, ಋಷೀಣಾಂಚ - ಋಷಿಗಳ, ಸಾಂಧೂನಾಂಚ - ಸಾಧುಗಳ, (ತಿ) ಬ್ರಹ್ಮರ್ಷಿವ್ಯತಿರಿಕ್ತರಾದ ಸಜ್ಜನರ, ಸಮಾಗಮೆ - ಸಭೆಯಲ್ಲಿ, ಯಥೋಪದೇಶಂ - ಗುರೂಪದೇಶಕ್ಕನುಸಾರವಾಗಿ, ಜಗುತುಃ- ಹಾಡಿದರು. ॥೧೨-೧೩॥ ಕದಾಚಿತ್ - ಒಂದಾನೊಂದು ಕಾಲದಲ್ಲಿ, ತೌ - ಆ ಕುಶಲವರು, ಸಮೇತಾನಾಂ - ಗುಂಪುಗೂಡಿ, ಆಸೀನಾನಾಂ - ಸಾವಧಾನವಾಗಿ ಕುಳಿತಿರುವ, ಭಾವಿತಾತ್ಮನಾಂ - ಧ್ಯಾನಿಸಿದ ಪರಮಾತ್ಮನುಳ್ಳ, ಋಷೀಣಾಂ - ಋಷಿಗಳ, ಸಮೀಪಸ್ಥೌ - ಬಳಿಸಾರಿ, ಇದಂಕಾವ್ಯಂ- ಈ ರಾಮಾಯಣ ಮಹಾ ಕಾವ್ಯವನ್ನು, ಅಗಾಯತಾಂ - ಗಾನಮಾಡಿದರು. ॥೧೪॥

ಈ ರಾಮಾಯಣ ಮಹಾ ಕಾವ್ಯವನ್ನು ಹಾಡುತ್ತಿದ್ದರು. ॥೮-೯-೧೦-೧೧॥ ಗುರೂಪದೇಶದಂತೆ ಹಾಡುವಿಕೆಯಿಂದ ದೂಷಣೆಗೊಳಪಡದವರೂ, ಪಾಠದ ಮರ್ಮವನ್ನರಿತವರೂ, ನಿಶ್ಚಲಚಿತ್ತರೂ, ರಾಜಕುಮಾರರೂ, ಮಹಾಮನಸ್ವಿಗಳೂ, ಸರ್ವಲಕ್ಷಣ ಸಂಪನ್ನರೂ, ಆಗಿರುವ ಆ ಕುಶಲವರು ಧರ್ಮಪ್ರಧಾನವಾಗಿಯೂ, ಶ್ರೀರಾಮಚಂದ್ರನ ಕಥೆಯನ್ನು ಬಿತ್ತರಿಸುವುದೂ, ಸರ್ವೋತ್ಕೃಷ್ಟವಾದುದೂ ಆದ, ಆ ರಾಮಾಯಣ ಮಹಾಕಾವ್ಯವನ್ನು ಗುರುವಾದ ವಾಲ್ಮೀಕಿಮುನಿಯ ಉಪದೇಶದಂತೆ ಕಂಠಪಾಠಮಾಡಿ, ಋಷಿಗಳ ಮತ್ತು ಸತ್ಪುರುಷರ ಸಭೆಗಳಲ್ಲಿ ಹಾಡುತ್ತಿದ್ದರು. ॥೧೩॥ ಒಂದಾನೊಂದು ಕಾಲದಲ್ಲಿ ಆ ಕುಶಲವರು ಶ್ರೀರಾಮನು ಮಾಡುವ ಅಶ್ವಮೇಧ ಯಾಗದ ಸಮಯದಲ್ಲಿ ಗುಂಪು ಸೇರಿ, ಸಾವಧಾನಚಿತ್ತರಾಗಿ ಕುಳಿತಿರುವ ಶುದ್ಧಾಂತಃಕರಣವುಳ್ಳ ಮಹರ್ಷಿಗಳ ಮುಂಗಡೆ ಈ ರಾಮಾಯಣ ಮಹಾಕಾವ್ಯವನ್ನು ಹಾಡಿದರು. ॥೧೪॥ ಆಗಲಾ ಮುನಿಗಳು ಈ ಕಾವ್ಯವನ್ನು ಕೇಳಿ, ಆನಂದ

ಟಿ॥ (೧) ಋಷೀಣಾಂ ದ್ವಿಜಾತೀನಾಂ ಎಂಬೆಡೆಯಲ್ಲಿ ಗೋಬಲೀವರ್ದನ್ಯಾಯದಿಂದ, "ಸಾಧೂನಾಂ ದ್ವಿಜೇತರಾಣಾಮಪಿ" ಎಂದು ತಿಲಕ ವ್ಯಾಖ್ಯಾನವು. ಎಂದರೆ ಬ್ರಾಹ್ಮಣರಲ್ಲದ ಇತರ ಸಾಧುಗಳ ಮುಂಗಡೆಯೂ ಹಾಡಿದರೆಂದು ಅಭಿಪ್ರಾಯವು.

ತಚ್ಛ್ರುತ್ವಾ ಮುನಯಸ್ಸರ್ವೇ ಬಾಷ್ಪಪರ್ಯಾಕುಲೇಕ್ಷಣಾಃ| ಸಾಧುಸಾಧ್ವಿತಿ ತಾ
ವೂಚುಃಪರಂವಿಸ್ಮಯಮಾಗತಾಃ ||೧೫|| ತೇಪ್ರೀತ ಮನಸ ಸ್ಸರ್ವೇ
ಮುನಯೋ ಧರ್ಮವತ್ಸಲಾಃ || ಪ್ರಶಶಂಸುಃ ಪ್ರಶಸ್ತವ್ಯಾ ಗಾಯಮಾನೌ
ಕುಶೀಲವೌ ||೧೬|| ಅಹೋಗೀತಸ್ಯ ಮಾಧುರ್ಯಂ ಶ್ಲೋಕಾನಾಂತು ವಿಶೇಷತಃ|
ಚಿರನಿರ್ವೃತ್ತಮಪ್ಯೇತತ್ ಪ್ರತ್ಯಕ್ಷಮಿವದರ್ಶಿತಂ ||೧೭|| ಪ್ರವಿಶ್ಯತಾವುಭೌ

ಸರ್ವೇಮುನಯಃ - ಋಷಿಗಳೆಲ್ಲರೂ, ತಚ್ಛ್ರುತ್ವಾ - ಆ ಕಾವ್ಯವನ್ನು ಕೇಳಿ, ಬಾಷ್ಪಪರ್ಯಾಕುಲೇಕ್ಷಣಾಃ - ಆನಂದಬಾಷ್ಪಗಳಿಂದ ಕೂಡಿದ ಕಂಗಳುಳ್ಳವರಾಗಿ, ಪರಂವಿಸ್ಮಯಂ - ಬಹಳ ಆಶ್ಚರ್ಯವನ್ನು, ಆಗತಾಃ - ಹೊಂದಿ, ತೌ - ಆ ಕುಶಲವರನ್ನು ಕುರಿತು, ಸಾಧುಸಾಧ್ವಿತಿ - ಶ್ಲಾಘ್ಯವಾಗಿರುವುದೆಂದು, ಊಚುಃ - ಹೇಳಿದರು. ||೧೫|| ಧರ್ಮವತ್ಸಲಾಃ - ಮಾತ್ಸರ್ಯರಹಿತರಾದ, ಸರ್ವೇ - ಎಲ್ಲಾ, ತೇಮುನಯಃ - ಆ ಋಷಿಗಳು, ಪ್ರೀತಮನಸಃ ಸಂತಸಗೊಂಡ ಮನವುಳ್ಳವರಾಗಿ, ಗಾಯಮಾನೌ - ಹಾಡುತ್ತಿರುವ, ಪ್ರಶಸ್ತವ್ಯೌ - ಸ್ತೋತ್ರಾರ್ಹರಾದ, ಕುಶೀಲವೌ-ಗಾಯಕರಾದ ಕುಶಲವರನ್ನು ಕುರಿತು, ಅಹೋ - ಆಶ್ಚರ್ಯವು, ಶ್ಲೋಕಾನಾಂ - ಶ್ಲೋಕಗಳ, ಗೀತಸ್ಯ - ಗಾನದ, ಮಾಧುರ್ಯಂ - ಮಧುರತೆಯು, ವಿಶೇಷತಃ-ಬಹಳವಾಗಿರುವುದು, ಚಿರನಿರ್ವೃತ್ತಮಪಿ ಬಹಳ ಹಿಂದಿನ ಕಾಲದಲ್ಲಿ ನಡೆದುದಾದರೂ, ಏತತ್ - ಈ ಕಾವ್ಯದಲ್ಲಿ ಬಣ್ಣಿಸಿರುವ ಕಥೆಯು, ಪ್ರತ್ಯಕ್ಷಂದರ್ಶಿತಮಿವ-ಎದುರಾಗಿಯೇ ತೋರಿಸಿದಂತಿರುವುದೆಂದು, ಪ್ರಶಶಂಸುಃ-ಶ್ಲಾಘಿಸಿದರು. ||೧೬-೧೭|| ಸಹಿತೌ- ತಾಳ, ಲಯ ಇವುಗಳಿಂದ ಕೂಡಿದ, ತಾವುಭೌ - ಆ ಕುಶಲವರಿಬ್ಬರೂ, ತದಾ - ಆ ಋಷಿಗಳು ಕೇಳುವ ಕಾಲದಲ್ಲಿ, ಭಾವಂ - ರತಿಹಾಸಾದಿ ಶೃಂಗಾರಭಾವಗಳನ್ನು, ಸುಷ್ಟುಪ್ರವಿಶ್ಯ - ಚನ್ನಾಗಿ ತಿಳಿದು, ಸ್ವರಸಂಪದಾ - ಷಡ್ಜಾದಿ ಸ್ವರಗಳ ಸಂಪತ್ತಿನಿಂದ, ಸಂಪನ್ನಂ- ಕೂಡಿರುವಂತೆಯೂ, ಮಧುರಂ-ಮನೋಹರವಾಗಿರುವಂತೆಯೂ, ರಕ್ತಂ - ರಾಗಯುಕ್ತವಾಗಿರುವಂತೆಯೂ, ಸಮ್ಯಕ್ - ಚನ್ನಾಗಿ, ಅಗಾಯತಾಂ - ಹಾಡಿದರು. ||೧೮|| ಏವಂ-ಈರೀತಿ, ತಪಶ್ಶ್ಲಾಘ್ಯೈಃ-ತಪಸ್ಸಿನಿಂದ ಶ್ಲಾಘನೀ

ಬಾಷ್ಪಯುಕ್ತವಾದ ಕಂಗಳುಳ್ಳವರಾಗಿ ಮಹದಾಶ್ಚರ್ಯವನ್ನು ಹೊಂದಿ, ಆ ಕುಶಲವರನ್ನು ಬಹಳವಾಗಿ ಶ್ಲಾಘಿಸಿದರು. ||೧೫|| ಇಷ್ಟೆಯಲ್ಲದೆ ಮಾತ್ಸರ್ಯರಹಿತರಾದ ಆ ಋಷಿಗಳೆಲ್ಲರೂ ಸಂತಸಗೊಂಡ ಮನವುಳ್ಳವರಾಗಿ, ಗಾನಮಾಡುತ್ತಿರುವವರೂ, ಶ್ಲಾಘನೆಗೆ ಅರ್ಹರೂ ಆಗಿರುವ ಆ ಗಾಯಕರನ್ನು ಕುರಿತು ಹೀಗೆಂದರು. "ಅಹಹ ! ಇವರ ಗಾನವು ಮನೋಹರವಾದುದೂ, ಆಶ್ಚರ್ಯವಾದುದೂ, ಆಗಿರುವುದು. ಶ್ಲೋಕದ ಮಾಧುರ್ಯವಂತೂ ಆ ಗಾನಕ್ಕಿಂತಲೂ, ಅತಿಶಯವಾಗಿರುವುದು. ಈ ಕಾವ್ಯದಲ್ಲಿ ಹೇಳುವ ಕಥೆಯು ನಡೆದು ಬಹು ದಿನಗಳಾದರೂ ಈಗ ಇವರ ಗಾನಚಾತುರ್ಯದಿಂದ ಪ್ರತ್ಯಕ್ಷವಾಗಿ ತೋರುತ್ತಿರುವುದೋ ಎಂಬಂತಿರುವುದು!" ಎಂದು ಶ್ಲಾಘಿಸುತ್ತಿದ್ದರು. ಆ ಸಮಯದಲ್ಲಿ ಆ ಕುಶಲವರೀರ್ವರೂ ತಾಳ, ಲಯ ಇವುಗಳಿಂದ ಯುಕ್ತವಾಗಿರುವ ರತಿಹಾಸಾದಿ ಶೃಂಗಾರ ಭಾವಗಳನ್ನು ಚನ್ನಾಗಿ ತಿಳಿದು, ಷಡ್ಜಾದಿ ಸ್ವರಗಳಿಂದೊಡಗೂಡಿರುವಂತೆಯೂ, ಮನೋಹರವಾಗಿರುವಂತೆಯೂ, ರಾಗಯುಕ್ತವಾಗಿರುವಂತೆಯೂ, ಕೇಳಿದವರಿಗೆ ರಸದ ಸ್ವಾರಸ್ಯವು ಚೆನ್ನಾಗಿ ತಿಳಿವಂತೆಯೂ ಹಾಡುತ್ತಿದರು. ||೧೮|| ತಪೋಗರಿಷ್ಠರೂ ಮಹಾತ್ಮರೂ ಆದ ಆ ಋಷಿವರೇ

ಸುಷ್ಠು ಭಾವಂಸಮ್ಯಗಗಾಯತಾಂ ‖ ಸಹಿತೌ ಮಧುರಂರಕ್ತಂ ಸಂಪನ್ನಂಸ್ವರ ಸಂಪದಾ‖೧೮‖‖ ಏವಂ ಪ್ರಶಸ್ಯಮಾನೌತೌ ತಪಶ್ಶ್ಲಾಘ್ಯೈರ್ಮಹಾತ್ಮಭಿಃ । ಸಂರಕ್ತ ತರಮತ್ಯರ್ಥಂ ಮಧುರಂತಾವಗಾಯತಾಂ ‖೧೯‖‖ ಪ್ರೀತಃಕಶ್ಚಿನ್ಮುನಿ ಸ್ತಾಭ್ಯಾಂಸಂಸ್ಥಿತಃ ಕಲಶಂದದೌ ‖ ಪ್ರಸನ್ನೋವಲ್ಕಲಂ ಕಶ್ಚಿದ್ದದೌತಾಭ್ಯಾಂ ಮಹಾಯಶಾಃ ‖ (ಅನ್ಯಃ ಕೃಷ್ಣಾಜಿನಂ ಪ್ರಾದಾದ್ಯಜ್ಞಸೂತ್ರಂ ತಥಾಪರಃ ‖

ಯರಾದ, ಮಹಾತ್ಮಭಿಃ-ಮಹಾನುಭಾವರಾದ ಋಷಿಗಳಿಂದ, ಪ್ರಶಸ್ಯಮಾನೌ - ಪ್ರಶಂಸೆಮಾಡಲ್ಪಟ್ಟ, ತೌ - ಆ ಕುಶಲವರು, ಅತ್ಯರ್ಥಂ - ಹೆಚ್ಚಾಗಿ, ಸಂರಕ್ತತರಂ - ಅತಿ ರಾಗಯುಕ್ತವಾಗಿ, ಮಧುರಂ - ಶ್ರಾವ್ಯವಾಗಿ, ಅಗಾಯತಾಂ - ಹಾಡಿದರು. ‖ ೧೯ ‖ ಸಭಾಯಾಂ - ಆ ಮಹರ್ಷಿಗಳ ಸಭೆಯಲ್ಲಿ, ಸಂಸ್ಥಿತಃ-ಕುಳಿತಿದ್ದ,ಕಶ್ಚಿನ್ಮುನಿಃ-ಓರ್ವಋಷಿಯು, ಪ್ರೀತಃ ಸಂತಸಗೊಂಡು,ತಾಭ್ಯಾಂ-ಅವರಿಗೆ, ಕಲಶಂ-ಉದಕಪಾತ್ರೆಯನ್ನು, ದದೌ - ಕೊಟ್ಟನು. ಮಹಾಯಶಾಃ - ಬಹಳ ಕೀರ್ತಿವಂತನಾದ, ಕಶ್ಚಿತ್-ಇನ್ನೊಬ್ಬ ಋಷಿಯು, ಪ್ರಸನ್ನಃ-ಆನಂದದಿಂದ ಮುಖ ಅರಳಿದವನಾಗಿ, ತಾಭ್ಯಾಂ-ಅವರಿಗೆ, ವಲ್ಕಲಂ - ನಾರು ಮಡಿಯನ್ನು, ದದೌ - ಕೊಟ್ಟನು. (೧) (ಅನ್ಯಃ - ಮತ್ತೊಬ್ಬನು, ಕೃಷ್ಣಾಜಿನಂ-ಕೃಷ್ಣಾಜಿನವನ್ನು, ಪ್ರಾದಾತ್-ಕೊಟ್ಟನು, ತಥಾ-ಹಾಗೆಯೇ, ಅಪರಃ-ಮತ್ತೊಬ್ಬನು, ಯಜ್ಞಸೂತ್ರಂ - ಯಜ್ಞೋಪವೀತವನ್ನು, ಪ್ರಾದಾತ್ - ಕೊಟ್ಟನು. ಕಶ್ಚಿತ್ - ಒಬ್ಬಾನೊಬ್ಬನು, ಕಮಂಡಲುಂ - ಕಮಂಡಲುವನ್ನು, ಪ್ರಾದಾತ್- ಕೊಟ್ಟನು. ಮಹಾಮುನಿಃ- ಮನನಶೀಲನಾದ,ಅನ್ಯಃ-ಬೇರೊಬ್ಬನು, ಮೌಂಜೀಂ-ಮೌಂಜಿಯನ್ನು, ದದೌ ಕೊಟ್ಟನು ತಥಾ-ಹಾಗೆಯೇ, ಅನ್ಯಃ - ಮತ್ತೊಬ್ಬನು, ಬೃಸೀಂ-ದರ್ಭಾಸನವನ್ನೂ, ಅಪರೋಮುನಿಃ ಮತ್ತೊಬ್ಬ ಋಷಿಯು, ಕೌಪೀನಂ-ಕೌಪೀನವನ್ನು, ತದಾ-ಆ ಸಮಯದಲ್ಲಿ, ಪ್ರಾದಾತ್ - ಕೊಟ್ಟನು, ಅಪರೋಮುನಿಃ- ಇನ್ನೊಬ್ಬ ಋಷಿಯು, ಹೃಷ್ಟಃ-ಸಂತುಷ್ಟನಾಗಿ, ತಾಭ್ಯಾಂ-ಆಕುಶಲವರಿಗೆ, ಕುಠಾರಂ-ಕತ್ತಿಯನ್ನು, ಅಪರಃ-ಇನ್ನೊಬ್ಬನು,

---

ಣ್ಯರು ಈ ರೀತಿ ಶ್ಲಾಘಿಸುತ್ತಿರಲು, ಆ ಗಾಯಕರಾದ ಕುಶಲವರು ಮತ್ತಷ್ಟು ಮನೋಹರವಾಗಿಯೂ, ರಾಗಯುಕ್ತವಾಗಿಯೂ, ಕೇಳಲಿಂಪಾಗಿರುವಂತೆಯೂ, ಗಾನಮಾಡುತ್ತಲೇ ಇದ್ದರು. ಆಗಲಾ ಸಭೆಯಲ್ಲಿ ಓರ್ವ ಋಷಿಸತ್ತಮನು ಆ ಕುಶಲವರ ಕಾವ್ಯದ ಗಾನಕ್ಕೆ ಮನಸೋತು, ತನ್ನ ಬಳಿಯಿದ್ದ ಕಲಶವನ್ನು ಕೊಟ್ಟುಬಿಟ್ಟನು ; ಮಹಾ ಯಶಸ್ವಿಯಾದ ಮತ್ತೊಬ್ಬ ಋಷಿಯು, ನಾರುಮಡಿಯನ್ನು ದಯಪಾಲಿಸಿದನು ; ಇನ್ನೊಬ್ಬನು ಕೃಷ್ಣಾಜಿನವನ್ನೂ, ಬೇರೊಬ್ಬನು ಯಜ್ಞೋಪವೀತವನ್ನೂ, ಮಗದೊಬ್ಬನು ಕಮಂಡಲುವನ್ನೂ ; ಮತ್ತೊಬ್ಬನು ಮೌಂಜಿಯನ್ನೂ ಕೊಟ್ಟನು. ಅದೇ ಸಮಯದಲ್ಲಿ ಇನ್ನೊಬ್ಬ ಮುನಿಯು ಋಷಿಗಳು ಕೂಡುವ ದರ್ಭಾಸನವನ್ನೂ, ಮತ್ತೊಬ್ಬಋಷಿಯು ಕೌಪೀನವನ್ನೂ, ಇನ್ನೊಬ್ಬ ಋಷಿಯು ಖಡ್ಗವನ್ನೂ ಕೊಡಲು, ಬೇರೊಬ್ಬ ಋಷಿಯು ಕಾವಿಯ ಬಟ್ಟೆಯನ್ನು ಕೊಟ್ಟನು ; ಮತ್ತೊಬ್ಬ ಮುನಿಯು ನಾರುಮಡಿಯನ್ನು ಕೊಟ್ಟನು. ಇನ್ನೊಬ್ಬ ಋಷಿಯು

---

ಟಿಪ್ಪಣಿ. (೧) ಈ ಕಂಸದಲ್ಲಿರುವ ಶ್ಲೋಕಗಳು ಅಧಿಕಪಾಠದವುಗಳು.

ಕಶ್ಚಿತ್ಕಮಂಡಲುಂ ಪ್ರಾದಾ ನ್ಮೌಂಜೀಮನ್ಯೋ ಮಹಾಮುನಿಃ || ಬೃಸೀಮನ್ಯ ಸ್ತಥಾಪ್ರಾದಾ ತ್ಕೌಪೀನಮಪರೋಮುನಿಃ । ತಾಭ್ಯಾಂ ದದೌ ತದಾಹೃಷ್ಟಃ ಕುಠಾರಮಪರೋಮುನಿಃ । ಜಟಾಬಂಧನ ಮನ್ಯಸ್ತು ಕಾಷ್ಠರಜ್ಜುಂ ಮುದಾನ್ವಿತಃ || ಯಜ್ಞಭಾಂಡಮೃಷಿಃಕಶ್ಚಿ ತ್ಕಾಷ್ಠಭಾರಂ ತಥಾಪರಃ । ಔದುಂಬರೀ ಬೃಸೀಮನ್ಯ ಸ್ಸ್ವಸ್ತಿಕೇಚಿತ್ತಥಾವದರ್ || ಆಯುಷ್ಯಮ ಪರೇಪ್ರಾಹುರ್ಮುದಾತತ್ರ ಮಹರ್ಷಯಃ । ದದುರೇವಂ ವರಾನ್ಸರ್ವೇ ಮುನಯಸ್ಸತ್ಯ ವಾದಿನಃ) ||೨೦|| ಆಶ್ಚರ್ಯಮಿದಮಾಖ್ಯಾನಂ ಮುನಿನಾ ಸಂಪ್ರಕೀರ್ತಿತಂ || ಪರಂಕವೀನಾ

ಕಾಷಾಯಂವಸ್ತ್ರಂ - ಕಾವೀಬಟ್ಟೆಯನ್ನೂ, ಅನ್ಯೋಮುನಿಃ-ಮತ್ತೊಬ್ಬ ಋಷಿಯು, ಚೀರಂ - ನಾರು ಮಡಿಯನ್ನು, ದದೌ - ಕೊಟ್ಟನು, ಅನ್ಯಸ್ತು - ಮತ್ತೊಬ್ಬನಾದರೆ, ಮುದಾನ್ವಿತಃ – ಸಂತೋಷ ಯುಕ್ತನಾಗಿ, ಜಟಾಬಂಧನಂ - ಜಟೆಯನ್ನು ಕಟ್ಟುವ, ರಜ್ಜುಂ – ಹಗ್ಗವನ್ನು, ದದೌ- ಕೊಟ್ಟನು, ಕಶ್ಚಿದೃಷಿಃ - ಒಬ್ಬಾನೊಬ್ಬ ಋಷಿಯು, ಯಜ್ಞಭಾಂಡಂ - ಯಜ್ಞಕುಂಡವನ್ನು, ತಥಾ – ಹಾಗೆಯೇ, ಅಪರಃ - ಮತ್ತೊಬ್ಬನು, ಕಾಷ್ಠಭಾರಂ - ಕಟ್ಟಿಗೆಯ ಹೊರೆಯನ್ನೂ, ಅನ್ಯಃ - ಮತ್ತೊಬ್ಬನು, ಔದುಂಬರೀಂ – ಅತ್ತಿಯ ಮರದಿಂದ ಮಾಡಿದ, ಬ್ರುಸೀಂ ಆಸನವನ್ನು, ಕೇಚಿತ್-ಕೆಲವರು, ತದಾ- ಆ ಸಮಯದಲ್ಲಿ, ಸ್ವಸ್ತೀತಿ- ಮಂಗಳವಾಗಲೆಂದು, ಅವದರ್ - ನುಡಿದರು. ತತ್ರ - ಆ ಸಭೆಯಲ್ಲಿ, ಮಹರ್ಷಯಃ - ಮಹರ್ಷಿಗಳಾದ, ಅಪರೇ - ಮತ್ತೆಕೆಲವರು, ಮುದಾ - ಆನಂದದಿಂದ, ಆಯುಷ್ಯಂ ಪ್ರಾಹುಃ - ಆಶೀರ್ವದಿಸಿದರು, ಸತ್ಯವಾದಿನಃ-ಸತ್ಯವಚನರಾದ, ಸರ್ವೇಮುನಯಃ-ಎಲ್ಲಋಷಿಗಳೂ, ವರಾರ್ - ವರಗಳನ್ನು, ಏವಂ - ಈ ರೀತಿ, ದದೌ - ಕೊಟ್ಟರು.) ||೨೦|| ಸರ್ವಗೀತೇಷುಕೋವಿದೌ-ಗಾನವಿದ್ಯೆಯಲ್ಲಿ ಸಮರ್ಥರಾದ ಎಲೈ ಕುಶಲವರೆ! ಮುನಿನಾ - ವಾಲ್ಮೀಕಿ ಮುನಿಯಿಂದ, ಸಂಪ್ರಕೀರ್ತಿತಂ - ಹೇಳಲ್ಪಟ್ಟ, ಆಶ್ಚರ್ಯಂ - ಆಶ್ಚರ್ಯಕರವಾದ, ಇದಮಾಖ್ಯಾನಂ - ಈ ರಾಮಾಯಣ ರೂಪವಾದ ಇತಿಹಾಸವು, ಕವೀನಾಂ - ಮುಂದೆ ಕವನಮಾಡಬುದ್ಯುಕ್ತರಾದ ಕವಿಗಳಿಗೆ, ಪರಂ ಆಧಾರಂ - ಶ್ರೇಷ್ಠವಾದ ಆಧಾರವಾಗಿ, ಯಥಾಕ್ರಮಂ - ಕ್ರಮಾನುಸಾರವಾಗಿ, ಸಮಾಪ್ತಂಚ - ಸಂಪೂರ್ಣ ಮಾಡಲ್ಪಟ್ಟಿತು. ಯುವಾಭ್ಯಾಂ - ನಿಮ್ಮಿಂದ, ಆಯುಷ್ಯಂ- ಆಯುಸ್ಸನ್ನು ಹೆಚ್ಚಿಸುವ,

ಸಂತುಷ್ಟಾಂತರಂಗನಾಗಿ ಜಟಾಬಂಧನ ಯೋಗ್ಯವಾದ ಹಗ್ಗವನ್ನು ಕೊಟ್ಟನು. ಬಬ್ಬಾನೊಬ್ಬನು ಯಜ್ಞ ಭಾಂಡವನ್ನು ಕೊಡಲು ಮತ್ತೊಬ್ಬನು ಕಟ್ಟಿಗೆಯ ಹೊರೆಯನ್ನಿತ್ತನು, ಇನ್ನೊಬ್ಬನು ಅತ್ತೀಮರದಿಂದ ಮಾಡಿದ ಆಸನವನ್ನು ದಯೆಗೈಯ್ದನು. ಆ ಸಮಯದಲ್ಲಿ ಕೆಲವರು ಮಂಗಳವಾಗಲೆಂದು ನುಡಿದರು. ಇನ್ನು ಕೆಲವರು ಆಶೀರ್ವದಿಸಿದರು. ಆ ಬಳಿಕ ಸತ್ಯವಚನರಾದ ಮುನಿಗಳೆಲ್ಲರೂ ಈ ರೀತಿ ವಸ್ತುಗಳನ್ನೂ, ವರಗಳನ್ನೂ, ಕೊಟ್ಟುದಲ್ಲದೆ ಅವರನ್ನು ಕುರಿತು, ‘‘ಎಲೈ ಗಾನವಿಶಾರದರಾದ ಕುಶಲವರೇ! ವಾಲ್ಮೀಕಿ ಮುನಿಯಿಂದ ಸಲಕ್ಷಣವಾಗಿ ಹೇಳಲ್ಪಟ್ಟ ಈ ಆಶ್ಚರ್ಯಕರವಾದ ರಾಮಚರಿತೆಯು ಮುಂದೆ ಕವನಮಾಡುವ ಕವಿಗಳಿಗೆಲ್ಲ ಆಧಾರಭೂತವಾಗಿಯೂ, ಕ್ರಮಕ್ಕೆ ತಕ್ಕಂತೆಯೂ, ಹೇಳಲ್ಪಟ್ಟು ಸಂಪೂರ್ಣಗೊಂಡಿರುವುದು. ಆಯುರ್ವೃದ್ಧಿಕರವಾಗಿಯೂ, ಅಭ್ಯುದಯಕ್ಕೆ ಕಾರಣವಾಗಿಯೂ

ಮಾರ್ಧಾರಂ ಸಮಾಪ್ತ್ಂಚ ಯಥಾಕ್ರಮಂ| ಅಭಿಗೀತಮಿದಂಗೀತಂಸರ್ವಗೀತೇಷು ಕೋವಿದೌ || ಆಯುಷ್ಯಂ ಪುಷ್ಟಿಜನಕಂ ಸರ್ವಶ್ರುತಿ ಮನೋಹರಂ । ಪ್ರಶಸ್ಯ ಮಾನೌಸರ್ವತ್ರ ಕದಾಚಿತ್ತತ್ರಗಾಯಕೌ|| ರಥ್ಯಾಸು ರಾಜಮಾರ್ಗೇಷು ದದರ್ಶ ಭರತಾಗ್ರಜಃ ||೨೩|||| ಸ್ವವೇಶ್ಮ ಚಾನೀಯ ತದಾ ಭ್ರಾತರೌ ಸಕುಶೀಲವೌ । ಪೂಜಯಾಮಾಸ ಪೂಜಾರ್ಹೌ ರಾಮಶ್ಶತ್ರುನಿಬರ್ಹಣಃ ||೨೪|||| ಆಸೀನಃ ಕಾಂಚನೇದಿವ್ಯೇ ಸಚ ಸಿಂಹಾಸನೇ ಪ್ರಭುಃ || ಉಪೋಪವಿಷ್ಟ ಸ್ಸಚಿವೈ

ಪುಷ್ಟಿಜನಕಂ - ಅಭಿವೃದ್ಧಿಗೆ ಕಾರಣವಾದ, ಸರ್ವಶ್ರುತಿಮನೋಹರಂ (ಗೋ) ಸರ್ವ - ಎಲ್ಲ, ಶ್ರುತಿ - ಸ್ವರಾರಂಭಕ ಶಬ್ದಗಳಿಂದ, ಮನೋಹರಂ - ರಮ್ಯವಾದ (ತಿ) ಪಂಡಿತರೂ, ಪಾಮರರೂ, ಸಾಧಾರಣರೇ ಮೊದಲಾದ ಸಮಸ್ತ ಜನರ ಶ್ರೋತ್ರಗಳನ್ನೂ, ಮನಸ್ಸನ್ನೂ ಅಪಹರಿಸುತ್ತಲಿರುವ, ಇದಂಗೀತಂ - ಈ ಗಾನಯೋಗ್ಯವಾದ ಕಥೆಯು, ಅಭಿಗೀತಂ ಚನ್ನಾಗಿ ಗಾನಮಾಡಲ್ಪಟ್ಟಿತು, ಇತಿ - ಹೀಗೆಂದು, ತತ್ರ-ಆ ಅಯೋಧ್ಯಾಪಟ್ಟಣದ, ರಥ್ಯಾಸು- ಬೀದಿಗಳಲ್ಲಿ ಯೂ, ರಾಜಮಾರ್ಗೇಷು ರಾಜವೀಧಿಗಳಲ್ಲಿಯೂ, ಸರ್ವತ್ರ - ಎಲ್ಲ ಕಡೆಗಳಲ್ಲಿಯೂ, ಪ್ರಶಸ್ಯಮಾನೌ - ಶ್ಲಾಘಿಸಲ್ಪಡುತ್ತಿದ್ದ, ಗಾಯಕೌ- ಗಾಯಕರಾದ ಆ ಲವಕುಶರನ್ನು, ತತ್ರ - ಆ ಯಜ್ಞವಾಟದಲ್ಲಿ, ಕದಾಚಿತ್ - ಒಮ್ಮೆ, ಭರತಾಗ್ರಜಃ - ಶ್ರೀರಾಮಚಂದ್ರನು, ದದರ್ಶ - ಕಂಡನು.||೨೩|| ತದಾ- ಆ ಕಾಲದಲ್ಲಿ, ಶತ್ರುನಿಬರ್ಹಣಃ-ಹಗೆಗಳನ್ನು ನಾಶಗೊಳಿಸುವ, ಸರಾಮಃ-ಆ ರಾಮನು, ಪೂಜಾರ್ಹೌ- ಪೂಜಿಸಲುಯೋಗ್ಯರಾದ, ಕುಶೀಲವೌ - ಗಾಯಕರಾದ ಕುಶಲವರೆಂಬ, ಭ್ರಾತರೌ- ಅಣ್ಣತಮ್ಮಂದಿರನ್ನು, ಸ್ವವೇಶ್ಮಚ - ತನ್ನ ಮನೆಗೆ, ಆನೀಯ - ಕರೆಯಿಸಿ, ಪೂಜಯಾಮಾಸ - ಮರ್ಯಾದಿಸಿದನು. ||೨೪|| ಕಾಂಚನೇ - ಸುವರ್ಣ ವಿಕಾರವಾದ, ದಿವ್ಯೇ - ದೇವತಾ ಸಂಬಂಧವಾದ, ಸಿಂಹಾಸನೇ ಸಿಂಹಾಸನದಲ್ಲಿ, ಆಸೀನಃ ಕುಳಿತಿರುವ, ಪ್ರಭುಃ - ಸಮರ್ಥನಾದ, ಪರಂತಪಃ - ಶತ್ರುಸಂಹಾರಕನಾದ, ತಥಾ ಹಾಗೂ, ನಿಯತಃ- ನಿಷ್ಠಾಪರನಾದ, ಸರಾಮಃ - ಆ ಶ್ರೀರಾಮನು, ಭ್ರಾತೃಭಿಃ - ತಮ್ಮಂದಿರೊಡನೆಯೂ, ಸಚಿವೈಶ್ಚ ಮಂತ್ರಿಗಳೊಡನೆಯೂ, ಉಪೋಪವಿಷ್ಟಃ - ಸಮೀಪದಲ್ಲಿ ಕುಳಿತು,ರೂಪಸಂಪನ್ನೌ - ಸೌಂದರ್ಯಯುಕ್ತ

ಪಂಡಿತ ಪಾಮರ ಸಾಧಾರಣರಾದಿಯಾಗಿ ಎಲ್ಲರಿಗೂ ಶ್ರೋತ್ರಾನಂದಕರವಾಗಿಯೂ, ಇರುವ ಗಾನಯೋಗ್ಯವಾದ ಈಕಥೆಯು, ನಿಮ್ಮಿಂದ ಬಹಳ ಚನ್ನಾಗಿ ಗಾನಮಾಡಲ್ಪಟ್ಟಿತು" ಎಂದು ಆ ಅಯೋಧ್ಯಾಪುರದ ರಾಜವೀಧಿಗಳಲ್ಲಿ ಶ್ಲಾಘಿಸುತ್ತಿರಲು, ಯಜ್ಞವಾಟದಲ್ಲಿದ್ದ ಶ್ರೀರಾಮ ಚಂದ್ರನು, ಒಮ್ಮೆ ಗಾಯಕರಾದ ಆ ಕುಶಲವರನ್ನು ಕಂಡನು ಆಗ ಶತ್ರುನಾಶಕನಾದ ಶ್ರೀ ರಾಮಚಂದ್ರನು ಅಣ್ಣತಮ್ಮಂದಿರಾದ ಸಂಗೀತಗಾರರನ್ನು ಕರೆಯಿಸಿಕೊಂಡು ಮರ್ಯಾದಿಸಿ, ತಾನು ಭರತ, ಶತ್ರುಘ್ನ, ಲಕ್ಷ್ಮಣರೊಡನೆಯೂ,ಮಂತ್ರಿಗಳೊಡನೆಯೂ,ದಿವ್ಯವಾದ ಸುವರ್ಣ ಮಯ ಸಿಂಹಾಸನದಲ್ಲಿ ಕುಳಿತು, ಗಾಯಕರಾದ ಆ ಕುಶಲವರನ್ನು ಕಂಡು, ಲಕ್ಷ್ಮಣಾದಿಗಳನ್ನು ಕುರಿತು, "ಎಲೈ ತಮ್ಮಂದಿರಿರಾ ! ದೇವತೇಜಸ್ಸಿನಿಂದ ಕಂಗೊಳಿಸುತ್ತಿರುವ ದೇಹ ಕಾಂತಿಯುಳ್ಳ ಈ ಗಾಯಕರು ಹೇಳುವ, ಆಶ್ಚರ್ಯಕರವಾಗಿಯೂ, ಸ್ವಾರಸ್ಯವಾದ ಅರ್ಥ ದಿಂದೊಡಗೂಡಿದುದಾಗಿಯೂ, ವಿಚಿತ್ರವಾದ ಪದಸಂಘಟನೆಯುಳ್ಳದ್ದಾಗಿಯೂ ಇರುವ,

ಭ್ರಾತೃಭಿಶ್ಚ ಪರಂತಪಃ|| ದೃಷ್ಟ್ವಾತುರೂಪಸಂಪನ್ನೌ ತಾವುಭೌ ನಿಯತಸ್ತದಾ||
ಉವಾಚ ಲಕ್ಷ್ಮಣಂ ರಾಮ ಶ್ಶತ್ರುಘ್ನಂ ಭರತಂತದಾ ||೨೬|| ಶ್ರೂಯತಾ
ಮಿದಮಾಖ್ಯಾನ ಮನಯೋಃ ದೇವವರ್ಚಸೋಃ || ವಿಚಿತ್ರಾರ್ಥಪದಂ ಸಮ್ಯ
ಗ್ಗಾಯಕೌ ತಾ ವಚೋದಯತ್ ||೨೭|| ತೌಚಾಪಿ ಮಧುರಂ ರಕ್ತಂಸ್ವಂಚಿತಾ
ಯತನಿಸ್ವನಂ || ತಂತ್ರೀಲಯ ವದತ್ಯರ್ಥಂ ವಿಶ್ರುತಾರ್ಥಮಗಾಯತಾಂ ||೨೮||
ಹ್ಲಾದಯತ್ಸರ್ವ ಗಾತ್ರಾಣಿ ಮನಾಂಸಿಹೃದಯಾನಿಚ || ಶ್ರೋತ್ರಾಶ್ರಯ
ಸುಖಂಗೇಯಂ ತದ್ಬಭೌ ಜನಸಂಸದಿ ||೨೯||ಇಮೌ ಮುನೀ ಪಾರ್ಥಿವ ಲಕ್ಷಣಾ

ರಾದ, ತಾ ಉಭೌತು - ಆ ಕುಶಲವರಿಬ್ಬರನ್ನು, ದೃಷ್ಟ್ವಾ - ನೋಡಿ,ತದಾ - ಆ ಕಾಲದಲ್ಲಿ,ಲಕ್ಷ್ಮಣಂ- ಲಕ್ಷ್ಮಣನನ್ನೂ, ಭರತಂಚ - ಭರತನನ್ನೂ ಕುರಿತು, ಉವಾಚ - ಹೇಳಿದನು||೨೬|| ದೇವವರ್ಚಸೋಃ- ದೇವತೆಗಳ ತೇಜಸ್ಸನ್ನೊಳಗೊಂಡ, ಅನಯೋಃ - ಈ ಅಣ್ಣ ತಮ್ಮಂದಿರ ಸಂಬಂಧವಾದ, ವಿಚಿತ್ರಾರ್ಥ ಪದಂ - ಆಶ್ಚರ್ಯಕರವಾದ ಪದಗಳನ್ನೂ ಅರ್ಥವನ್ನೂ ಒಳಗೊಂಡಿರುವ, ಇದಮಾಖ್ಯಾನಂ - ಈ ಇತಿಹಾಸವು, ಸಮ್ಯಕ್ಶ್ರೂಯತಾಮಿತಿ - ಚನ್ನಾಗಿ ಕೇಳಲ್ಪಡಲೆಂದು, ಉಕ್ತ್ವಾ - ಹೇಳಿ, ತೌಗಾ ಯಕೌ - ಆ ಸಂಗೀತಗಾರರನ್ನು, ಅಚೋದಯತ್- ಆಖ್ಯಾನವನ್ನು ಹೇಳಲು ಪ್ರೇರೇಪಿಸಿದನು ||೨೭|| ತೌಚಾಪಿ - ಆ ಕುಶಲವರು ಸಹ, ಮಧುರಂ - ಮನೋಹರವಾಗಿಯೂ, ರಕ್ತಂ - ರಾಗಯುಕ್ತವಾಗಿ ಯೂ, ಸ್ವಂಚಿತಾಯತನಿಸ್ವನಂ, ಸ್ವಂಚಿತ - ಚನ್ನಾಗಿ ಪೂಜಿಸಲ್ಪಟ್ಟ, ಆಯತ - ದೀರ್ಘವಾದ, ನಿಸ್ವನಂ - ರಾಗಾಲಾಪಗಳುಳ್ಳಂತೆಯೂ, ತಂತ್ರೀಲಯವತ್- ಏಳು ತಂತಿಗಳಿಂದಕೂಡಿದ ವೀಣಾ ಧ್ವನಿಯ ಸ್ವರಗಳ ವಿರಾಮಗಳುಳ್ಳಂತೆಯೂ, ಅತ್ಯರ್ಥಂ - ಬಹುವಾಗಿ, ವಿಶ್ರುತಾರ್ಥಂ - ಪ್ರಸಿದ್ಧವಾದ ಅರ್ಥವುಳ್ಳಂತೆಯೂ, ಅಗಾಯತಾಂ - ಗಾನಮಾಡಿದರು. ||೨೮|| ಸರ್ವಗಾತ್ರಾಣಿ- ಎಲ್ಲ ಅವಯವ ಗಳನ್ನು, ಹೃದಯಾನಿಚ - ಮನಸ್ಸಿಗೆ ನಲೆಮನೆಯಾದ ಹೃದಯಗಳನ್ನು, ಹ್ಲಾದಯತ್ - ಸಂತಸ ಗೊಳಿಸುತ್ತಿರುವ, ಶ್ರೋತ್ರಾಶ್ರಯಸುಖಂ - ಶ್ರವಣೇಂದ್ರಿಯಕ್ಕೆ ಸುಖವಾಗಿರುವ, ತದ್ಗೇಯಂ - ಆ ಗಾನವು, ಜನಸಂಸದಿ - ಸಭೆಯಲ್ಲಿ, ಬಭೌ - ರಾರಾಜಿಸುತ್ತಿದ್ದಿತು. ||೨೯|| ಇಮೌ - ಇವರು, ಮುನೀ - ಮನನಶೀಲರಾದರೂ, ಪಾರ್ಥಿವಲಕ್ಷಣಾನ್ವಿತೌ - ರಾಜಚಿನ್ಹಗಳನ್ನೊಳಗೊಂಡವರು,

ಈ ಇತಿಹಾಸವನ್ನು ಕೇಳಿರಿ." ಎಂದು ನುಡಿದು, ಆ ಗಾಯಕರನ್ನು ಗಾನಮಾಡಿರೆಂದು ಹೇಳಿದನು. ಆಗಲಾ ಗಾನವಿಶಾರದರಾದ ಕುಶಲವರು ಸಹ ಮನೋರಮ್ಯವಾಗಿರುವಂತೆಯೂ, ರಾಗಯುಕ್ತವಾಗಿರುವಂತೆಯೂ, ವೀಣಾಧ್ವನಿಯ ವಿರಾಮಸ್ಥಾನಗಳುಳ್ಳಂತೆಯೂ, ಸುಪ್ರಸಿದ್ಧವಾದ ಅರ್ಥವುಳ್ಳಂತೆಯೂ, ಹಾಡಿದರು. ||೨೮|| ಅಂಗಾಂಗಗಳನ್ನೂ, ಮನ ಸ್ಸನ್ನೂ, ಮನಸ್ಸಿಗೆ ಸ್ಥಾನಭೂತವಾದ ಹೃದಯವನ್ನೂ, ಸಹ ಸಂತೋಷಗೊಳಿಸುತ್ತಿರುವ ಆ ಕುಶಲವರ ಗಾನವು ಕಿವಿಗಿಂಪಾಗಿ ಆ ಸಭೆಯಲ್ಲಿ ರಾರಾಜಿಸುತ್ತಿದ್ದಿತು. ಆಗ ಶ್ರೀರಾಮ ಚಂದ್ರನು ತಮ್ಮಂದಿರನ್ನು ಕುರಿತು "ಇವರೀರ್ವರು ಮುನಿಗಳಾಗಿದ್ದರೂ ರಾಜಲಕ್ಷಣ ಲಕ್ಷಿ ತರಾಗಿರುವರು ; ಗಾಯಕರಾಗಿದ್ದರೂ ಮಹಾ ತಪಸ್ವಿಗಳಾಗಿರುವರು, ಇಂತಿರುವ ಈ ಬಾಲಕರು ಪ್ರಿಯತಮೆಯಾದ ಸೀತಾದೇವಿಯನ್ನಗಲಿರುವ ನನಗೂ ಕೂಡ, ಶ್ರೇಯಸ್ಕರವಾ

ನ್ವಿತೌ ಕುಶೀಲವೌ ಚೈವ ಮಹಾತಪಸ್ವಿನೌ । ಮಮಾಪಿ ತದ್ಭೂತಿಕರಂ ಪ್ರವ
ಕ್ಷ್ಯತೇ ಮಹಾನುಭಾವಂ ಚರಿತಂ ನಿಬೋಧತ ||೩೦|| ತತಸ್ತು ತೌ ರಾಮವಚಃ
ಪ್ರಚೋದಿತಾವಗಾಯತಾಂ ಮಾರ್ಗವಿಧಾನಸಂಪದಾ । ಸಚಾಪಿರಾಮಃ ಪರಿ
ಷದ್ಗತಶ್ಶನೈ ರ್ಬುಭೂಷಯಾಸಕ್ತಮನಾ ಬಭೂವಹ ||೩೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ಥಸ್ಸರ್ಗಃ.



ಕುಶೀಲವೌಚೈವ- ಗಾಯಕರಾದರೂ, ಮಹಾತಪಸ್ವಿನೌ - ಮಹಾತಪಸ್ವಿಗಳೂ (ಆಭ್ಯಾಂ - ಇವರಿಂದ,) ಮಮಾಪಿ - ನನಗೂಸಹ, ಭೂತಿಕರಂ - ಸಂಪತ್ಕರವಾದ, ಮಹಾನುಭಾವಂ - ಬಹಳವಾದ ಮಹಾತ್ಮ್ಯೆಯುಳ್ಳ, ಚರಿತಂ - ಚರಿತ್ರೆಯು, ಪ್ರವಕ್ಷ್ಯತೆ - ಹೇಳಲಾಗುವುದು; ತತ್ - ಅದನ್ನು, ನಿಬೋಧತ - ಕೇಳಿರಿ ||೩೦|| ತತಃ - ಬಳಿಕ, ರಾಮವಚಃಪ್ರಚೋದಿತೌ - ಶ್ರೀ ರಾಮಚಂದ್ರನ ಮಾತಿನಿಂದ ಪ್ರೇರಿತರಾದ, ತೌತು - ಆ ಕುಶಲವರು, ಮಾರ್ಗವಿಧಾನಸಂಪದಾ - ಮಾರ್ಗವೆಂಬ ರಾಗೋತ್ಪತ್ತಿವಿಧಾಯಕವಾದ ಸಲಕರಣೆಗಳಿಂದ, ಅಗಾಯತಾಂ-ಗಾನಮಾಡಿದರು, ಸರಾಮಶ್ಚಾಪಿ- ಆ ರಾಮನು ಕೂಡ, ಶನೈಃ - ಮೆಲ್ಲಮೆಲ್ಲಗೆ, ಪರಿಷದ್ಗತಃ - ಸಭೆಯನ್ನು ಹೊಂದಿದವನಾಗಿ, ಬಭೂಷಯಾ- (ತಿ) ಶ್ರವಣಾನಂದವನ್ನನುಭವಿಸಲು ಇಚ್ಛಿಸಿ, ಆಸಕ್ತಮನಾಃ - ಗಾನದಲ್ಲಿ ನ್ಯಸ್ತಚಿತ್ತನಾಗಿ, ಬಭೂವಃ - ಆದನಲ್ಲವೆ. ||೩೧||

—ಇತ್ಯಾರ್ಷೇ ಶ್ರೀಮದ್ರಾಮಯಣೇ ಬಾಲಕಾಂಡೇ ಚತುರ್ಥಸ್ಸರ್ಗಃ—



ಗಿಯೂ, ಬಹಳ ಮಹಿಮೆಯುಳ್ಳದ್ದಾಗಿಯೂ, ಇರುವ ಚರಿತ್ರೆಯನ್ನು ಹಾಡುವರು. ಅದನ್ನು ನೀವೂ ಕೇಳಿ ತಿಳಿದುಕೊಳ್ಳಿರಿ." ಎಂದು ಹೇಳಿದನು ಬಳಿಕ ರಘುಕುಲ ಲಲಾಮನಾದ ಶ್ರೀರಾಮನು ಕೇಳುವವರನ್ನೂ ಪ್ರೋತ್ಸಾಹಿಸಲು ಆತನ ನುಡಿಗಳಿಂದಲೇ ಪ್ರೇರಿತರಾದ ಆ ಕುಶಲವರು, ದೇಶೀ, ಮಾರ್ಗಗಳೆಂಬ, ರಾಗೋತ್ಪತ್ತಿ ವಿಧಾನದಿಂದ ಹಾಡುತ್ತಿದ್ದರು. ಆ ಸಮಯದಲ್ಲಿ ಶ್ರೀರಾಮನೂ, ಸಿಂಹಾಸನದಿಂದಿಳಿದು, ಸಭಿಕರೊಡಗೂಡಿ ಶ್ರೋತ್ರಾನಂದವನ್ನನುಭವಿಸಲು ಸಂಗೀತದಲ್ಲಿ ನೆಲೆಗೊಂಡ ಮನವುಳ್ಳವನಾದನು. ||೩೧||

ಇಂತಿದು ಕುಶಲವರ ರಾಮಾಯಣ ಪಾರಾಯಣ ರೀತಿಯನ್ನೆಸಗುವ
ನಾಲ್ಕನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಪಂಚಮಸ್ಸರ್ಗಃ.

---

ಸರ್ವಾಪೂರ್ವಮಿಯಂ ಯೇಷಾಮಾಸೀತ್ಕೃತ್ಸ್ನಾ ವಸುಂಧರಾ || ಪ್ರಜಾಪತಿ ಮುಪಾದಾಯ ನೃಪಾಣಾಂ ಜಯಶಾಲಿನಾಂ ||೧|| ಯೇಷಾಂ ಸ ಸಗರೋನಾಮ ಸಾಗರೋ ಯೇನ ಖಾನಿತಃ || ಷಷ್ಟಿಃ ಪುತ್ರ ಸಹಸ್ರಾಣಿ ಯಂ ಯಾಂತಂ ಪರ್ಯ ವಾರಯನ್ || ೨ || ಇಕ್ಷ್ವಾಕೂಣಾಮಿದಂ ತೇಷಾಂ ರಾಜ್ಞಾಂ ವಂಶೇ ಮಹಾ ತ್ಮನಾಂ || ಮಹದುತ್ಪನ್ನ ಮಾಖ್ಯಾನಂ ರಾಮಾಯಣಮಿತಿ ಶ್ರುತಂ || ೩ ||

---

ಸರ್ವಾಪೂರ್ವಂ,(ಗೊ) ಸರ್ವ- ಎಲ್ಲ ಅರಸರಿಗೂ, ಅಪೂರ್ವಂ - ಮೊದಲು, ಇಯಂ-ಈ ಕಣ್ಣಿಗೆ ಕಾಣುವ, ಕೃತ್ಸ್ನಂ-ಸಮಗ್ರವಾದ,ವಸುಂಧರಾ - ಭೂಮಿಯು, ಪ್ರಜಾಪತಿಂ - ವೈವಸ್ವತ ಮನುವನ್ನು, ಉಪಾದಾಯ- ಮೊದಲುಗೊಂಡು, ಜಯಶಾಲಿನಾಂ - ಜಯಶಾಲಿಗಳಾದ, ಏಷಾಂನೃ ಪಾಣಾಂ-ಯಾವ ರಾಜರಿಗೆ,ಆಸೀತ್-ಆಯಿತೋ,(ಮ)ಯಾವ ರಾಜರಿಗೆ ಸ್ವಾಧೀನವಾಗಿದ್ದು, ಸರ್ವಾ ಪೂರ್ವಂ-ಇತರರಾಜರಿಗೆ ದುರ್ಲಭವಾದುದಾಯಿತೋ, (ತಿ) ಯಾವ ಅರಸರಿಗೆ,ಸರ್ವಾಪೂರ್ವಂಯಥಾ ಭವತಿ ತಥಾ-ಇಕ್ಷ್ವಾಕುವಂಶಸ್ಥರಾದ ಯಲ್ಲ ಅರಸರಿಗೂ, ಅಪೂರ್ವಂ ಯಥಾ ತಥಾ - ಹೊಸದಾಗಿ ಆಯಿತೋ, || ೧ || ಏಷಾಂ-ಯಾವ ಅರಸರ ಮಧ್ಯದಲ್ಲಿ, ಸ ಸಗರೋನಾಮ - ಆ ಸಗರನೆಂದು ಪ್ರಸಿದ್ಧನಾದ ರಾಜನು, ಜಾತಃ-ಹುಟ್ಟಿದನೋ, ಏನ-ಯಾವನಿಂದ, ಸಾಗರಃ-ಸಮುದ್ರವು, ಖಾನಿತಃ-ಅಗಿಸಲ್ಪಟ್ಟಿತೋ, ಯಾಂತಂ-ಹೋಗುತ್ತಿರುವ, ಯಂ-ಯಾವ ಸಗರನನ್ನು, ಷಷ್ಟಿಃ ಪುತ್ರ ಸಹಸ್ರಾಣಿ-ಅರವತ್ತು ಸಾವಿರ ಮಕ್ಕಳು, ಪರ್ಯವಾರಯನ್ - ಸುತ್ತಿಕೊಂಡಿದ್ದರೊ, || ೨ || ತೇಷಾಂ - ಅಂತಹ, ಮಹಾತ್ಮನಾಂ-ಮಹಾತ್ಮರಾದ, ಇಕ್ಷ್ವಾಕೂಣಾಂ- (ತಿ) ಇಕ್ಷ್ವಾಕು ವಂಶಸ್ಥರ, ರಾಜ್ಞಾಂ-ಅರಸರ, ವಂಶೇ - ವಂಶವಿಷಯವಾಗಿ, ಉತ್ಪನ್ನಂ - ಹುಟ್ಟಿದ್ದು, ಮಹತ್ - ದೊಡ್ಡದಾದ, ರಾಮಾಯಣಂ - ರಾಮಾಯಣವು, ಆಖ್ಯಾನಮಿತಿ - ಇತಿಹಾಸವೆಂದು, ಶ್ರುತಂ- ಹೇಳಲ್ಪಟ್ಟಿರುವುದು, (ಗೋ) ರಾಮಾಯಣಮಿತಿ ಆಖ್ಯಾನಂ - ರಾಮಾಯಣವೆಂಬ ಇತಿಹಾಸವು, ಇಕ್ಷ್ವಾಕೂಣಾಂ ರಾಜ್ಞಾಂ - ಇಕ್ಷ್ವಾಕು ವಂಶಸ್ಥರಾದ ಅರಸರ, ವಂಶೇ-ಕುಲದಲ್ಲಿ ಹುಟ್ಟದ ರಾಮನ ವಿಷಯವಾಗಿ, ಉತ್ಪನ್ನಮಿತಿ - ಹುಟ್ಟಿದ್ದು ಎಂದು, ಶ್ರುತಂ - ಕೇಳಲ್ಪಟ್ಟಿರುವುದು. ||೩|| ಸರ್ವಂ-ಸಮಸ್ತವಾದ, ನಿಖಿಲಂ ಶೇಷವಿಲ್ಲದ, ತದಿದಂ - ಆ ಉಪಾಖ್ಯಾನವನ್ನು, ಆದಿತಃ - ಮೊದಲಿನಿಂ

---

ಎಲ್ಲ ರಾಜರಿಗಿಂತಲೂ ಹಿಂದೆ ಈ ಭೂಮಂಡಲವೆಲ್ಲ ವೈವಸ್ವತಮನುವೇ ಮೊದಲಾಗಿ ಮಹಾ ಜಯಶಾಲಿಗಳಾದ ಯಾವ ರಾಜರ ಅಧೀನದಲ್ಲಿದ್ದಿತೋ, ಮತ್ತಾವ ಅರಸುಗಳಲ್ಲಿ ಸಗರನೆಂಬ ಪ್ರಸಿದ್ಧ ರಾಜನುತ್ಪನ್ನನಾದನೊ, ಸಮುದ್ರವು ಯಾವ ರಾಜನಿಂದ ಖನನ ಮಾಡಿಸಲ್ಪಟ್ಟಿತೋ, ದಂಡಯಾತ್ರೆಗೆಂದು ಹೊರಟ ಯುವರಾಜನನ್ನು ಅರವತ್ತು ಸಾವಿರ ಮಕ್ಕಳು ಸುತ್ತುವರಿದು ಹೋಗುತ್ತಿದ್ದರೋ ಅಂತಹ ಮಹಾತ್ಮರಾದ ಇಕ್ಷ್ವಾಕು ಮಹಾ ರಾಜರ ಚರಿತ್ರವು ಈ ರಾಮಾಯಣದಲ್ಲಿ ಹೇಳಲ್ಪಡುವುದು. || ೩ || ಬ್ರಹ್ಮಪ್ರಸಾದದಿಂದ

ತದಿದಂ ವರ್ತಯಿಷ್ಯಾಮಿ ಸರ್ವಂ ನಿಖಿಲಮಾದಿತಃ || ಧರ್ಮಕಾಮಾರ್ಥಸಹಿತಂ ಶ್ರೋತವ್ಯಮನಸೂಯಯಾ || ೪ || ಕೋಸಲೋ ನಾಮ ಮುದಿತಃ ಸ್ಫೀತೋ ಜನಪದೋ ಮಹಾನ್ | ನಿವಿಷ್ಟಸ್ಸರಯೂತೀರೇ ಪ್ರಭೂತ ಧನಧಾನ್ಯವಾನ್ ||೫|| ಅಯೋಧ್ಯಾ ನಾಮ ನಗರೀ ತತ್ರಾಸೀಲ್ಲೋಕವಿಶ್ರುತಾ || ಮನುನಾ ಮಾನವೇಂದ್ರೇಣ ಯಾಪುರೀ ನಿರ್ಮಿತಾಸ್ವಯಂ||ಆಯತಾ ದಶಚ ದ್ವೇಚ ಯೋಜನಾನಿ ಮಹಾಪುರೀ | ಶ್ರೀಮತೀ ತ್ರೀಣಿ ವಿಸ್ತೀರ್ಣಾ ಸುವಿಭಕ್ತಮಹಾಪಥಾ|| ರಾಜಮಾರ್ಗೇಣ ಮಹತಾ ಸುವಿಭಕ್ತೇನ ಶೋಭಿತಾ | ಮುಕ್ತಪುಷ್ಪಾವಕೀರ್ಣೇನ

ದಲೂ, ವರ್ತಯಿಷ್ಯಾಮಿ - ಪ್ರವರ್ತನ ಮಾಡಿಸುವೆನು, ಧರ್ಮಕಾಮಾರ್ಥಸಹಿತಂ - ಧರ್ಮಾರ್ಥ ಕಾಮಗಳೆಂಬ, ಪುರುಷಾರ್ಥ ತ್ರಯದಿಂದ ಕೂಡಿದ ಈ ಕಾವ್ಯವು, ಅನುಸೂಯಯಾ-ಶ್ರದ್ಧೆಯಿಂದ, ಶ್ರೋತವ್ಯಂ-ಕೇಳತಕ್ಕುದು || ೪ || ಪ್ರಭೂತ ಧನ ಧಾನ್ಯವಾನ್- ಪ್ರಸಿದ್ಧವಾದ ಧನ, ಧಾನ್ಯ, ಸಂಪತ್ತುಗಳುಳ್ಳ, ಸ್ಫೀತಃ-ಕಾಪಾಡಲ್ಪಟ್ಟ, ಮುದಿತಃ-ಆನಂದಯುಕ್ತನಾದ ಜನರುಳ್ಳ, ಮಹಾ - ವಿಸ್ತಾರವಾದ, ಸರಯೂತೀರೆ-ಸರಯೂನದಿಯ ತೀರದಲ್ಲಿ, ನಿವಿಷ್ಟಃ ಇರುವ, ಕೋಸಲೋನಾಮ- ಕೋಸಲವೆಂಬ, ಜನಪದಃ-ದೇಶವು, ಅಸ್ತಿ-ಇರುವುದು. || ೫ || ತತ್ರ – ಆ ಕೋಸಲದೇಶದಲ್ಲಿ, ಯಾಪುರೀ-ಯಾವ ಪಟ್ಟಣವು, ಮಾನವೇಂದ್ರೇಣ-ರಾಜನಾದ, ಮನುನಾ-ಮನುಚಕ್ರವರ್ತಿಯಿಂದ, ಸ್ವಯಂ ನಿರ್ಮಿತಾ- ಸ್ವಂತವಾಗಿ ನಿರ್ಮಿಸಲ್ಪಟ್ಟು, ದಶಚ ದ್ವೇಚಯೋಜನಾನಿ - ಹನ್ನೆರಡು ಯೋಜನಗಳ, ಆಯತ-ದೀರ್ಘವಾಗಿಯೂ, ಚ-ಮತ್ತು, ಯಾಮಹಾಪುರೀ-ಮಹತ್ತಾದ ಪಟ್ಟಣವು, ತ್ರೀಣಿ-ಮೂರು ಗಾವುದಗಳ ವಿಸ್ತಾರವಾದುದೋ, ಸಾ - ಅಂತಹ, ಸುವಿಭಕ್ತಮಹಾಪಥಾ- ಚನ್ನಾಗಿ ವಿಭಾಗಿಸಲ್ಪಟ್ಟ ದೊಡ್ಡಬೀದಿಯುಳ್ಳ, ಸುವಿಭಕ್ತೇನ-ಚನ್ನಾಗಿ ಶೋಧಿಸಿದ, ಮಹತಾ-ವಿಸ್ತೀರ್ಣವಾದ, ನಿತ್ಯಃ ಯಾವಾಗಲೂ, ಮುಕ್ತ ಪುಷ್ಪಾವಕೀರ್ಣೇನ,ಮುಕ್ತ- ಚಲ್ಲಿದ, ಪುಷ್ಪ-ಹೂಗಳಿಂದ, ಅವಕೀರ್ಣೇನ - ಹರಡಿರುವ, ಜಲಸಿಕ್ತೇನ-ನೀರಿನಿಂದ ತೋಯಿಸಲ್ಪಟ್ಟ, ರಾಜಮಾರ್ಗೇಣ-ರಾಜವೀಧಿಯಿಂದ, ಶೋಭಿತಾ- ಹೊಳೆಯುತ್ತಿರುವ, ಅಯೋಧ್ಯಾನಾಮ-ಅಯೋಧ್ಯೆಯೆಂದು ಪ್ರಸಿದ್ಧವಾಗಿ,ಲೋಕವಿಶ್ರುತಾ-ಪ್ರಪಂಚ

ದೊರಕಿದ ಈ ರಾಮಾಯಣ ಮಹಾಕಾವ್ಯವನ್ನು ಹೇಳುವೆನು. ಧರ್ಮ,ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳನ್ನು ದೊರಕಿಸುವ ಈ ರಾಮಾಯಣವೆಂಬ ಇತಿಹಾಸವು ಶ್ರೀರಾಮಜನನ ಮೊದಲುಗೊಂಡು ಚ್ಯುತಿಯಿಲ್ಲದೆ ನಾಂಗವಾಗಿ ಶ್ರದ್ಧೆಯಿಂದ ಕೇಳಿರಿ. ||೪|| ಧನ, ಧಾನ್ಯಗಳ ಸಮೃದ್ಧಿಯನ್ನೊಳಗೊಂಡು ಯಾವಾಗಲೂ ಸಂತುಷ್ಟರಾಗಿಯೇ ಇರುವ ಜನಗಳಿಂದ ಕೂಡಿದ ಕೋಸಲ ದೇಶದಲ್ಲಿ ಸರಯೂನದೀ ತೀರದ ಬಳಿ ಲೋಕವಿಖ್ಯಾತವಾಗಿಯೂ, ಮಾನವೇಂದ್ರನಾದ ಮನುಚಕ್ರವರ್ತಿಯಿಂದ ಹನ್ನೆರಡು ಯೋಜನ ವಿಸ್ತಾರವುಳ್ಳಂತೆ ನಿರ್ಮಿಸಲ್ಪಟ್ಟುದುದಾಗಿಯೂ, ಮಹಾ ಸಂಪತ್ತುಗಳಿಂದ ವಿರಾಜಮಾನವಾಗಿಯೂ, ಬಹು ಚನ್ನಾಗಿ ವಿಭಾಗಿಸಲ್ಪಟ್ಟು ವಿಸ್ತಾರವಾದ ಬೀದಿಗಳುಳ್ಳದ್ದಾಗಿಯೂ, ಚನ್ನಾಗಿ ಶೋಧಿಸಲ್ಪಟ್ಟು, ಎರಚಿದ ಹೂಗಳಿಂದಲೂ, ಜಲಸೇಚನದಿಂದಲೂ, ಕಣ್ಗೊಪ್ಪಿ ರಂಜಿಸುತ್ತಿರ್ದ ರಾಜವೀಥಿಗಳಿಂದಲೂ, ರಾರಾಜಿಸುತ್ತಿರ್ದ ಪ್ರಖ್ಯಾತವಾದ ಅಯೋಧ್ಯೆಯೆಂಬ ಪಟ್ಟಣ

ಜಲಸಿಕ್ತೇನ ನಿತ್ಯಶಃ ॥ ೮ ॥ ತಾಂತು ರಾಜಾ ದಶರಥೋ ಮಹಾರಾಷ್ಟ್ರ ವಿವರ್ಧನಃ॥ ಪುರೀಮಾವಾಸಯಾಮಾಸ ದಿವಂದೇವಪತಿರ್ಯಥಾ ॥೯॥ ಕವಾಟತೋರಣವತೀಂ ಸುವಿಭಕ್ತಾಂತರಾಪಣಾಂ । ಸರ್ವಯಂತ್ರಾಯುಧವತೀ ಮುಪೇತಾಂ ಸರ್ವಶಿಲ್ಪಿಭಿಃ ॥೧೦॥ ಸೂತಮಾಗಧ ಸಂಬಾಧಾಂ ಶ್ರೀಮತೀ ಮತುಲಪ್ರಭಾಂ॥ ಉಚ್ಚಾಟ್ಟಾಲ ಧ್ವಜವತೀಂ ಶತಘ್ನೀ ಶತಸಂಕುಲಾಂ ॥೧೧॥ ವಧೂನಾಟಕ ಸಂಘೈಶ್ಚ ಸಂಯುಕ್ತಾಂ ಸರ್ವತಃ ಪುರೀಂ ॥ ಉದ್ಯಾನಾಮ್ರವಣೋಪೇತಾಂ

---

ದಲ್ಲಿ ಹೆಸರುಗೊಂಡ, ಶ್ರೀಮತ್ ಸಂಪದ್ಯುಕ್ತವಾದ, ನಗರೀ-ಪಟ್ಟಣವು, ಆಸೀತ್-ಆಯಿತು.॥೬-೭-೮॥ ಮಹಾರಾಷ್ಟ್ರವಿವರ್ಧನಃ - ವಿಶಾಲವಾದ ರಾಜ್ಯವನ್ನು ವೃದ್ಧಿಗೊಳಿಸುತ್ತಿರುವ, ದಶರಥೋ ರಾಜಾ-ದಶರಥನೆಂಬ ಅರಸು, ತಾಂ ಪುರೀಂತು-ಆ ಪಟ್ಟಣವನ್ನು, ದಿವಂ-ದೇವಲೋಕವನ್ನು, ದೇವಪತಿರ್ಯಥಾ-ದೆ ವೇಂದ್ರನು ಹೇಗೋಹಾಗೆ, ಆವಾಸಯಾಮಾಸ-ಮೊದಲಿಗಿಂತಲೂ ಹೆಚ್ಚು ಜನರು ವಾಸಮಾಡುವಂತೆ ಮಾಡಿದನು. ॥ ೯ ॥ ಕವಾಟ ತೋರಣವತೀಂ-ಬಾಗಿಲುಗಳೂ ಮತ್ತೂ ತೋರಣಗಳನ್ನು ಒಳಗೊಂಡ, ಸುವಿಭಕ್ತಾಂತರಾಪಣಾಂ, ಸುವಿಭಕ್ತ- ಚನ್ನಾಗಿ ಭಾಗಿಸಲ್ಪಟ್ಟ, ಅಂತರ-ಮಧ್ಯದಲ್ಲಿರುವ, ಆಪಣಾಂ-ಅಂಗಡಿಗಳುಳ್ಳ, ಸರ್ವ ಯಂತ್ರಾಯುಧವತೀಂ, ಸರ್ವ - ಎಲ್ಲವಿಧಗಳಾದ, ಯಂತ್ರ-ಶಿಲಾಯಂತ್ರಗಳು, ಆಯುಧವತೀಂ-ಆಯುಧಗಳುಳ್ಳ, ಸರ್ವಶಿಲ್ಪಿಭಿಃ - ಬಡಗಿಗಳೆಲ್ಲರಿಂದಲೂ, ಉಪೇತಾಂ-ಕೂಡಿಕೊಂಡಿರುವ, ಸೂತ ಮಾಗಧ ಸಂಬಾಧಾಂ,ಸೂತ- ಸ್ತೋತ್ರಪಾಠಕರಿಂದಲೂ, ಮಾಗಧ-ವಂಶಪಾರಂಪರ್ಯವನ್ನು ಹೊಗಳುವ ಭಟ್ಟರಿಂದಲೂ, ಸಂಬಾಧಾಂ-ತುಂಬಿರುವ, ಶ್ರೀಮತೀಂ-ಸಂಪದ್ಯುಕ್ತವಾದ, ಅತುಲಪ್ರಭಾಂ-ಅಸಮಾನವಾದ ಪ್ರಕಾಶಮುಳ್ಳ, ಉಚ್ಚಾಟ್ಟಾಲಧ್ವಜವತೀಂ ಉನ್ನತವಾದ ಬುರುಜುಗಳೂ ಧ್ವಜಗಳೂ ವುಳ್ಳ, ಶತಘ್ನೀಶತ ಸಂಕುಲಾಂ= ನೂರಾರು ಫಿರಂಗಿಗಳಿಂದ ವ್ಯಾಪ್ತವಾದ, ॥ ೧೧ ॥ ವಧೂನಾಟಕ ಸಂಘೈಶ್ಚ-ನರ್ತಕಿಯರಗುಂಪುಗಳಿಂದ, ಸಂಯುಕ್ತಾಂ - ಕೂಡಿರುವ, ಸರ್ವತಃಪುರೀಂ - ಊರಿನ ಸುತ್ತಲೂ, ಉದ್ಯಾನಾಮ್ರವಣೋಪೇತಾಂ, ಉದ್ಯಾನ - ತೋಟಗಳಿಂದಲೂ, ಆಮ್ರವಣ-ಮಾವಿನ ತೋಪುಗಳಿಂದಲೂ, ಉಪೇತಾಂ-

---

ಒಂದುಂಟು. ॥೮॥ ಈ ಅಯೋಧ್ಯಾನಗರದಲ್ಲಿ ಹಿಂದಿನ ರಾಜರಿಗಿಂತಲೂ, ಅತಿಶಯವಾಗಿ ಜನರನ್ನು ಸಂತಸಗೊಳಿಸಿ, ರಾಜ್ಯವಿಸ್ತಾರವನ್ನು ಬಳೆಯಿಸಿದ ದಶರಥನೆಂಬ ಪ್ರಸಿದ್ಧ ರಾಜನು ಅಮರಾವತಿಯನ್ನು ದೇವೇಂದ್ರನಂತೆ ರಾಜ್ಯಭಾರ ಮಾಡುತ್ತಿದ್ದನು. ॥ ೯ ॥ ಕವಾಟ ತೋರಣಗಳನ್ನೊಳಗೊಂಡುದಾಗಿಯೂ, ಚನ್ನಾಗಿ ವಿಭಾಗಿಸಲ್ಪಟ್ಟ ಅಂಗಡಿ ಸಾಲುಗಳುಳ್ಳದ್ದಾಗಿಯೂ, ನಾನಾವಿಧವಾದ ಯಂತ್ರಗಳಿಂದಲೂ, ಆಯುಧಗಳಿಂದಲೂ, ಕೂಡಿದುದಾಗಿಯೂ, ಬಡಗೀ ಕೆಲಸದವರೆಲ್ಲರಿಂದೊಡಗೂಡಿದುದಾಗಿಯೂ, ಸ್ತೋತ್ರ ಪಾಠಕರಿಂದಲೂ, ವಂಶಪರಂಪರೆಯನ್ನು ಸ್ತುತಿಸುವ ಭಟ್ಟರಾಜರೆಂಬುವರಿಂದಲೂ, ಯುಕ್ತವಾಗಿರುವದಾಗಿಯೂ, ಮಹದೈಶ್ವರ್ಯ ಸಮೃದ್ಧವಾಗಿರುವುದರಿಂದ ಅಸದೃಶವಾದ,ಪ್ರಕಾಶವುಳ್ಳದ್ದಾಗಿಯೂ ಅತ್ಯುನ್ನತಗಳಾದ ಬುರುಜುಗಳಿಂದಲೂ, ಧ್ವಜಗಳಿಂದಲೂ, ಕೂಡಿದುದಾಗಿಯೂ, ಅನೇಕ ಫಿರಂಗಿಗಳಿಂದ ವ್ಯಾಪ್ತವಾದುದಾಗಿಯೂ, ಎಲ್ಲ ಪ್ರದೇಶಗಳಲ್ಲಿಯೂ, ಗುಂಪುಗುಂಪಾಗಿ ಸೇರಿ

ಮಹತೀಂ ಸಾಲಮೇಖಲಾಂ ||೧೨|| ದುರ್ಗಗಂಭೀರ ಪರಿಘಾಂ ದುರ್ಗಾಮನ್ಯೈ
ರ್ದುರಾಸದಾಂ| ವಾಜಿವಾರಣಸಂಪೂರ್ಣಾಂ ಗೋಭಿರುಷ್ಟ್ರೈಃ ಖರೈಸ್ತಥಾ ||೧೩
ಸಾಮಂತರಾಜ ಸಂಘೈಶ್ಚ ಬಲಿಕರ್ಮಭಿರಾವೃತಾಂ || ನಾನಾದೇಶ ನಿವಾಸೈಶ್ಚ
ವಣಿಗ್ಭಿರುಪಶೋಭಿತಾಂ || ೧೪ || ಪ್ರಾಸಾದೈಃ ರತ್ನವಿಕೃತೈಃ ಪರ್ವತೈರುಪ
ಶೋಭಿತಾಂ | ಕೂಟಾಗಾರೈಶ್ಚ ಸಂಪೂರ್ಣಾಮಿಂದ್ರಸ್ಯೇವಾಮರಾವತೀಂ||೧೫||
ಚಿತ್ರಾಮಷ್ಟಾಪದಾಕಾರಾಂ ವರ ನಾರೀಗಣೈರ್ಯುತಾಂ | ಸರ್ವರತ್ನ ಸಮಾ

---

ಕೂಡಿರುವ, ಮಹತೀಂ ದೊಡ್ಡದಾದ, ಸಾಲಮೇಖಲಾಂ-ಒಡ್ಯಾಣದಂತಿರುವ ಕೋಟೆಯ ಗೋಡೆ ಯುಳ್ಳ, || ೧೨ || ದುರ್ಗಗಂಭೀರಪರಿಘಾಂ, ದುರ್ಗ-ಹೊಗಲಸದಳವಾದ, ಗಂಭೀರ ದಟ್ಟವಾದ, ಪರಿಘಾಂ-ಅಗಳವುಳ್ಳ, ಅನ್ಯೈಃ-ಮತ್ತೊಬ್ಬರಿಂದ, ದುರ್ಗಾಂ-ಪ್ರವೇಶಿಸಲಸದಳವಾದ,ದುರಾಸದಾಂ-ಹೊಂದಲು ಕಷ್ಟತರವಾದ, ವಾಜಿವಾರಣ ಸಂಪೂರ್ಣಾಂ- ಆನೆಗಳಿಂದಲೂ ಕುದುರೆಗಳಿಂದಲೂ ತುಂಬಿರುವ, ಗೋಭಿಃ ವೃಷಭಗಳಿಂದಲೂ, ಉಷ್ಟ್ರೈಃ-ಒಂಟೆಗಳಿಂದಲೂ, ತಥಾ-ಹಾಗೆಯೇ,ಖರೈಃ-ಕತ್ತೆಗಳಿಂದಲೂ, ಬಲಿಕರ್ಮಭಿಃ - ಕಾಣಿಕೆಗಳನ್ನೊಪ್ಪಿಸುವ ವ್ಯಾಪಾರಮುಳ್ಳ, ಸಾಮಂತ ರಾಜ ಸಂಘೈಶ್ಚ-ಸಮೀಪವರ್ತಿಗಳಾದ ರಾಜಸಂಘಗಳಿಂದ, ಆವೃತಂ-ಸುತ್ತುವರೆಯಲ್ಪಟ್ಟ, ನಾನಾದೇಶ ನಿವಾಸೈಶ್ಚ-ನಾನಾದೇಶ ವಾಸಿಗಳಾದ, ವಣಿಗ್ಭಿಃ-ವರ್ತಕರಿಂದ,ಉಪಶೋಭಿತಾಂ-ಹೊಳೆಯುತ್ತಿರುವ, ರತ್ನವಿಕೃತೈಃ-ರನ್ನಮಯವಾದ, ಪ್ರಾಸಾದೈಃ - ಅರಮನೆಗಳಿಂದಲೂ, ಪರ್ವತೈಃ-ರನ್ನಪರ್ವತಗಳಿಂದ ಲೂ, ಉಪಶೋಭಿತಾಂ-ಹೊಳೆಯುತ್ತಿರುವ, ಕೂಟಾಗಾರೈಃ-ಲೋವೆಗಳ ಕೆಳಗಣ ಮನೆಗಳಿಂದಲೂ, ಸಂಪೂರ್ಣಾಂ-ತುಂಬಿರುವ, ಇಂದ್ರಸ್ಯ-ದೇವೇಂದ್ರನ, ಅಮರಾವತೀಮಿವ - ಅಮರಾವತೀ ಪಟ್ಟಣ ದಂತೆ, || ೧೫ || ಚಿತ್ರಾಂ-ಆಶ್ಚರ್ಯಕರವಾದ, ಅಷ್ಟಾಪದಾಕಾರಾಂ, ಅಷ್ಟಪದ-ಭಂಗಾರದ, ಆಕಾರಾಂ-ಆಕಾರವುಳ್ಳ, ವರನಾರೀಗಣೈಃ,ವರ-ಶ್ರೇಷ್ಠರಾದ, ನಾರೀಗಣೈಃ-ಸ್ತ್ರೀಯರ ಗುಂಪುಗಳಿಂದ, ಯುತಾಂ-ಕೂಡಿರುವ, ಸರ್ವರತ್ನ ಸಮಾಕೀರ್ಣಾಂ, ಸರ್ವ-ನಾನಾಜಾತಿಯ, ರತ್ನ - ರತ್ನಗಳಿಂದ, (ಅಂದರೆ, ಪಚ್ಚೆ, ಕೆಂಪು, ಹವಳ, ಗೋಮೇಧಿಕ, ಮರಕತ, ವಜ್ರ, ವೈಡೂರ್ಯ, ಪುಷ್ಯರಾಗ,ಇಂದ್ರನೀಲ, ಮಹಾನೀಲ,ಇವೇ ಮೊದಲಾಗಿ ಉಳ್ಳ ರತ್ನಗಳಿಂದ,) ಸಮಾಕೀರ್ಣಾಂ-ವ್ಯಾಪ್ತವಾದ,ವಿಮಾ

---

ರುವ ಸ್ತ್ರೀಯರಿಂದಲು, ನಾಟಕದವರಿಂದಲೂ, ಸಮೃದ್ಧವಾಗಿರುವದಾಗಿಯೂ, ಉದ್ಯಾನ ವನಗಳಿಂದಲೂ, ಮಾವಿನ ತೋಪುಗಳಿಂದಲೂ, ಯುಕ್ತವಾಗಿರುವುದಾಗಿಯೂ, ಮಹತ್ತರ ವಾದ ಓಡ್ಯಾಣದಂತಿರುವ ಕೋಟೆಯುಳ್ಳದ್ದಾಗಿಯೂ, ಪ್ರವೇಶಿಸಲಸಾಧ್ಯವಾಗಿಯೂ, ಗಂಭೀರವಾಗಿಯೂ, ಇರುವ ಅಗಳವಿರುವುದರಿಂದ ಇತರರಿಗೆ ಹೊಗಲಸಾಧ್ಯವಾಗಿರುವು ದಾಗಿಯೂ, ಕುದುರೆ, ಆನೆ, ಗೋವುಗಳು, ಒಂಟೆಗಳು, ಮತ್ತು ಕತ್ತೆಗಳಿಂದಲೂ, ಕಪ್ಪವ ನ್ನೊಪ್ಪಿಸುವ ಸಾಮಂತರಾಜರ ತಂಡಗಳಿಂದಲೂ, ಬಲಿಕರ್ಮಗಳಿಂದಲೂ, ದೇಶದೇಶಗ ಳಿಂದ ವ್ಯಾಪಾರಕ್ಕಾಗಿ ಬರುವ ವರ್ತಕರಿಂದಲೂ, ರತ್ನಮಯವಾಗಿಯೂ, ಉನ್ನತಗಳಾ ಗಿಯೂ, ಇರುವ ಭವನಗಳಿಂದಲೂ, ರನ್ನಪರ್ವತಗಳಿಂದಲೂ, ಲೋವೆಗಳಿಗೆ ಆಧಾರವಾದ ಪ್ರಕೃಮಗಳಿಂದಲೂ ಕೂಡಿ, ದೇವೇಂದ್ರನ ಅಮರಾವತಿಯಂತೆ ಅಯೋಧ್ಯಾನಗರಿಯು

ಕೀರ್ಣಾಂ ವಿಮಾನಗೃಹಶೋಭಿತಾಂ ||೧೬|| ಗೃಹಗಾಢಾಮವಿಚ್ಛಿದ್ರಾಂ ಸಮಭೂಮೌ ನಿವೇಶಿತಾಂ || ಶಾಲಿತಂಡುಲ ಸಂಪೂರ್ಣಾ ಮಿಕ್ಷುಕಾಂಡರಸೋದಕಾಂ ||೧೭|| ದುಂದುಭೀಭಿರ್ಮೃದಂಗೈಶ್ಚ ವೀಣಾಭಿಃಪಣವೈಸ್ತಥಾ | ನಾದಿತಾಂ ಭೃಶಮತ್ಯರ್ಥಂ ಪೃಥಿವ್ಯಾಂ ತಾಮನುತ್ತಮಾಂ || ೧೮ || ವಿಮಾನಮಿವಸಿದ್ಧಾನಾಂ ತಪಸಾಧಿಗತಂ ದಿವಿ | ಸುನಿವೇಶಿತ ವೇಶ್ಮಾಂತಾಂ ನರೋತ್ತಮಸಮಾವೃತಾಂ ||೧೯|| ಯೇಚಬಾಣೈರ್ನವಿಧ್ಯಂತಿ ವಿವಿಕ್ತಮಪರಾಪರಂ | ಶಬ್ದ

---

ನಗೃಹಶೋಭಿತಾಂ,ವಿಮಾನ ದೇವಗೃಹಗಳಂತಿರುವ, ಗೃಹ-ಮನೆಗಳಿಂದ, ಶೋಭಿತಾಂ-ಹೊಳೆಯುತ್ತಿರುವ ||೧೩||೧೪||೧೫||೧೬|| ಗೃಹಗಾಢಾಂ ಮನೆಗಳಿಂದ ತುಂಬಿರುವ, ಅವಿಚ್ಛಿದ್ರಾಂ-ನಿರ್ದೋಷವಾಗಿರುವ, ಸಮಭೂಮೌ-ನಿಮ್ನೋನ್ನತಗಳಿಲ್ಲದಿರುವ ಪ್ರದೇಶದಲ್ಲಿ, ನಿವೇಶಿತಾಂ-ನಿರ್ಮಿಸಲ್ಪಟ್ಟ,ಶಾಲಿತಂಡುಲ ಸಂಪೂರ್ಣಾಂ,ಶಾಲಿ ಬಿಳಿಯನೆಲ್ಲಿನಿಂದಲೂ, ತಂಡುಲ-ಅಕ್ಕಿಯಿಂದಲೂ, ಸಂಪೂರ್ಣಾಂ=ತುಂಬಿರುವ, ಇಕ್ಷುಕಾಂಡರಸೋದಕಾಂ-ಕಬ್ಬಿನ ಹಾಲಿನಂತಿರುವ ನೀರುಳ್ಳ || ೧೭ || ದುಂದುಭೀಭಿಃ-ದೊಡ್ಡಭೇರೀವಾದ್ಯಗಳಿಂದಲೂ, ಮೃದಂಗೈಶ್ಚ-ಮದ್ದಳೆಗಳಿಂದಲೂ, ವೀಣಾಭಿಃ-ವೀಣಾವಾದ್ಯಗಳಿಂದಲೂ, ತಥಾ-ಹಾಗೆಯೇ, ಪಣವೈಶ್ಚ-ತಮ್ಮಟೆಗಳಿಂದಲೂ, ಭೃಶಂ-ಬಹಳವಾಗಿ, ನಾದಿತಾಂ- ಧ್ವನಿಗೊಳಿಸುತ್ತಿರುವ, ಪೃಥಿವ್ಯಾಂ - ಭೂಮಂಡಲದಲ್ಲಿ, ಅತ್ಯರ್ಥಂ - ಅತ್ಯಂತವಾಗಿ, ಅನುತ್ತಮಾಂ-ಶ್ರೇಷ್ಠವಾದ || ೧೮ || ತಪಸಾ-ತಪಸ್ಸಿನಿಂದ, ದಿವಿ-ಸ್ವರ್ಗಲೋಕದಲ್ಲಿ, ಅಧಿಗತಂ-ಹೊಂದಲ್ಪಟ್ಟ, ಸಿದ್ಧಾನಾಂ-ಸಿದ್ಧಪುರುಷರ, ವಿಮಾನಮಿವಸ್ಥಿತಾಂ-ವಿಮಾನದಂತಿರುವ, ಸುನಿವೇಶಿತವೇಶ್ಮಾಂತಾಂ,ಸುನಿವೇಶಿತ-ಚನ್ನಾಗಿ ಶೋಧಿಸಲ್ಪಟ್ಟ, ವೇಶ್ಮಾಂತಾಂ-ಮನೆಗಳ ಕೊನೆಗಳುಳ್ಳ, ನರೋತ್ತಮಸಮಾವೃತಾಂ,ನರೋತ್ತಮ-ರಾಜರಿಂದ, ಸಮಾವೃತಾಂ-ಸುತ್ತುವರಿಯಲ್ಪಟ್ಟ || ೧೯ || ಯೇಚ-ಯಾವ ಪಟ್ಟಣಸ್ಥರ, ಲಘುಹಸ್ತಾಃ-ಶೀಘ್ರಹಸ್ತಗಳುಳ್ಳ, ವಿಶಾರದಾಃ-ಸಮರ್ಥರಾದ ಭಟರು,ಅಪರಾಪರಂ-ತಾಯಿತಂದೆಗಳು, ಪುತ್ರಪೌತ್ರಾದಿಗಳು ಯಿಲ್ಲದಿರುವ ಮನುಷ್ಯನನ್ನು, ವಿವಿಕ್ತಂ - ಸಹಾಯವಿಲ್ಲದವನನ್ನು, ವಿತತಂ-ಪಲಾಯಿತನಾದವನನ್ನು, ಬಾಣೈಃ-ಬಾಣಗಳಿಂದ, ನವಿಧ್ಯಂತಿ- ಹೊಡೆ

---

ಹೊಳೆಯುತ್ತಿದ್ದಿತು. ಆಶ್ಚರ್ಯಕರವಾದ ಭಂಗಾರದ ಆಕಾರದಂತಿರುವುದಾಗಿಯೂ, ಉತ್ತಮಾಂಗನೆಯರಿಂದ ಪರಿವೃತವಾಗಿಯೂ, ಸರ್ವರತ್ನ ವಿಶೇಷಗಳಿಂದ ಕಂಗೊಳಿಸುತ್ತಿರುವುದಾಗಿಯೂ, ಒಂದಕ್ಕೊಂದು ಸೇರಿದ ಮನೆಗಳುಳ್ಳದ್ದಾಗಿಯೂ, ಸಮನಾದ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟದ್ದಾಗಿಯೂ, ಬಿಳಿದಾದನೆಲ್ಲುಗಳಿಂದಲೂ, ತಂಡುಲಗಳಿಂದಲೂ, ತುಂಬಿರುವದಾಗಿಯೂ, ಕಬ್ಬಿನ ಹಾಲಿನಂತೆ, ರುಚಿಕರವಾದ ಉದಕವುಳ್ಳದ್ದಾಗಿಯೂ, ಭೇರೀ, ಮೃದಂಗ, ವೀಣೆ, ತಮ್ಮಟೆ ಮುಂತಾದ ವಾದ್ಯಗಳಿಂದ ಶಬ್ದಾಯಮಾನವಾಗಿರುವದಾಗಿಯೂ, ಭೂಮಿಯಲ್ಲಿ ಸರ್ವೋತ್ತಮವಾಗಿರುವದಾಗಿಯೂ, ತಪಸ್ಸಿನಿಂದ ಹೊಂದಲ್ಪಟ್ಟ ಗಗನಮಾರ್ಗದಲ್ಲಿರುವ ಸಿದ್ಧಪುರುಷರ ವಿಮಾನದಂತಿರುವದಾಗಿಯೂ, ಚನ್ನಾಗಿ ಶೋಧಿಸಲ್ಪಟ್ಟ ಮನೆಗಳ ಕೊನೆಭಾಗಗಳುಳ್ಳದ್ದಾಗಿಯೂ, ನರಶ್ರೇಷ್ಠರಿಂದ ಪರಿವೃತವಾಗಿಯೂ, ಯಾವ ನಗರವಾಸಿಗಳಾದ ಜನರು ಮತ್ತು ಶೀಘ್ರಹಸ್ತಗಳುಳ್ಳ ಸಮರ್ಥರಾದ ಭಟರೂ ಕೂಡ, ತಾಯಿತಂದೆಗಳೂ

ವೇಧ್ಯಂಚ ವಿತತಂ ಲಘುಹಸ್ತಾ ವಿಶಾರದಾಃ || ಸಿಹ್ಮ ವ್ಯಾಘ್ರ ವರಾಹಾಣಾಂ ಮತ್ತಾನಾಂ ನರ್ದತಾಂ ವನೇ || ಹಂತಾರೋ ನಿಶಿತೈಶ್ಶಸ್ತ್ರೈ ರ್ಬಲಾದ್ಬಾಹು ಬಲಾದಪಿ || ತಾದೃಶಾನಾಂ ಸಹಸ್ರೈಸ್ತಾ ಮಭಿಪೂರ್ಣಾಂ ಮಹಾರಥೈಃ | ಪುರೀಮಾವಾಸಯಾಮಾಸ ರಾಜಾ ದಶರಥಸ್ತಥಾ || ೨೨ || ತಾಮಗ್ನಿಮದ್ಭಿ ರ್ಗುಣವದ್ಭಿರಾವೃತಾಂ ದ್ವಿಜೋತ್ತಮೈ ರ್ವೇದ ಷಡಂಗ ಪಾರಗೈಃ | ಸಹಸ್ರ ದೈಸ್ಸತ್ಯರತೈ ರ್ಮಹಾತ್ಮಭಿಃ ಮಹರ್ಷಿಕಲ್ಪೈ ಋರ್ಷಿಭಿಶ್ಚ ಕೇವಲೈಃ ||೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಮಸ್ಸರ್ಗಃ.

---

ಯುವದಿಲ್ಲವೋ, ವನೆ-ವನದಲ್ಲಿ,ನರ್ದತಾಂ-ಧ್ವನಿಮಾಡುತ್ತಿರುವ, ಮತ್ತಾನಾಂ-ಮದಿಸಿರುವ, ಸಿಹ್ಮ ವ್ಯಾಘ್ರವರಾಹಾಣಾಂ-ಸಿಂಹ, ಹುಲಿ, ಹಂದಿ ಇವುಗಳೊಳಗೆ,ಶಬ್ದವೇಧ್ಯಂ,ಶಬ್ದ ಶಬ್ದಮಾತ್ರದಿಂದ ತಿಳಿದು, ವೇಧ್ಯಂ-ಸಂಹಾರಮಾಡತಕ್ಕ ಮೃಗಾದಿಗಳನ್ನು, ನಿಶಿತೈಃ-ತೀಕ್ಷ್ಣಗಳಾದ, ಶಸ್ತ್ರೈಃ-ಆಯುಧಗಳಿಂದ, ಬಲಾತ್=ತ್ರಾಣದಿಂದಲೂ, ಬಾಹುಬಲಾದಪಿ-ಭುಜಪರಾಕ್ರಮದಿಂದಲೂ ಕೂಡ, ಹಂತಾರಃ-ಹೊಡೆಯುವರೋ, ತಾದೃಶಾನಾಂ=ಅಂತಹ ಶೂರರಲ್ಲಿ, ಸಹಸ್ರೈಃ - ಸಹಸ್ರಸಂಖ್ಯಾಕ ರಾದ, ಮಹಾರಥೈಃ-ಮಹಾರಥಿಕರಿಂದ, ಅಭಿಪೂರ್ಣಾಂ-ತುಂಬಿರುವ, ತಾಂಪುರೀಂ-ಅಂತಹ ಅಯೋಧ್ಯಾಪಟ್ಟಣವನ್ನು. ತದಾ-ಆಗ, ದಶರಥೋರಾಜಾ= ದಶರಥನೆಂಬರಾಯನು, ಆವಾಸಯಾ ಮಾಸ-ವಾಸಯೋಗ್ಯವನ್ನಾಗಿ ಮಾಡಿದನು ||೨೦||೨೧||೨೨|| ಅಗ್ನಿಮದ್ಭಿಃ- ಆಹಿತಾಗ್ನಿಗಳಾದ, ಗುಣವದ್ಭಿಃ-ಸೌಶೀಲ್ಯ, ಅನಸೂಯಾದಿ ಗುಣವಂತರಾದ, ವೇದಷಡಂಗಪಾರಗೈಃ,ವೇದ-ಚತುರ್ವೇದಗಳ,ಷಡಂಗ-ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಷಡಂಗಗಳ, ಪಾರಗೈಃ-ಪಾರಂಗತರಾದ, ದ್ವಿಜೋತ್ತಮೈಃ-ಬ್ರಾಹ್ಮಣಶ್ರೇಷ್ಠರಿಂದಲೂ,ಸಹಸ್ರದೈಃ-ಅನೇಕ ದ್ರವ್ಯವನ್ನು ಕೊಡತಕ್ಕ, ಸತ್ಯರತೈಃ - ಸತ್ಯಸಂಕಲ್ಪರಾದ, ಮಹಾತ್ಮಭಿಃ ಮಹಾತ್ಮರಿಂದಲೂ, ಮಹರ್ಷಿಕಲ್ಪೈಃ - ಮಹರ್ಷಿಗಳಿಗೆ ಸಮಾನರಾದ, ಕೇವಲೈಃ-ಮುಖ್ಯರಾದ, ಋಷಿಭಿಶ್ಚ-ಋಷಿಗಳಿಂದಲೂ, ಆವೃತಾಂ-ವ್ಯಾಪ್ತವಾದ, ತಾಂ-ಆ ಅಯೋಧ್ಯಾಪಟ್ಟಣವನ್ನು, ರಾಜಾ-ದಶರಥಮಹಾರಾಯನು, ಆವಾಸಯಾಮಾಸ-ವಾಸಯೋಗ್ಯವನ್ನಾಗಿ ಮಾಡಿದನು. ||೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಪಂಚಮಸ್ಸರ್ಗಃ.

---

ಪುತ್ರಪೌತ್ರಾದಿಗಳೂ, ಇಲ್ಲದಿರುವ ನರರನ್ನೂ, ಸಹಾಯಕರಿಲ್ಲದವರನ್ನೂ, ಓಡಿಹೋದ ಶತ್ರುವನ್ನೂ, ಬಾಣತಂಡಗಳಿಂದ ಹೊಡೆಯುವದಿಲ್ಲವೋ, ಸಿಂಹ, ವ್ಯಾಘ್ರ, ವರಾಹ, ಮುಂತಾದವುಗಳಿಗೆಂಜದೆ ತೀಕ್ಷ್ಣವಾದ ಶಸ್ತ್ರಗಳಿಂದ ಬಲಾತ್ಕರಿಸಿ ಹೊಡಿಯುತ್ತಿರುವರೋ, ಅಂತಹ ಶಸ್ತ್ರಾಸ್ತ್ರ ಪಾರಂಗತರಾದ ಅನೇಕ ಭಟರಿಂದಲೂ, ಮಹಾ ರಥಿಕರಿಂದ ಸಂಪೂರ್ಣವಾಗಿರುವದಾಗಿಯೂ, ಆಹಿತಾಗ್ನಿಗಳಾದ ಸೌಶೀಲ್ಯಾದಿ ಗುಣಗಳುಳ್ಳವರೂ,ವೇದ, ವೇದಾಂಗ ಪಾರಂಗತರೂ, ಆದ ಬ್ರಾಹ್ಮಣರಿಂದಲೂ, ಬಹು ದಾತರೂ,ಸತ್ಯಸಂಕಲ್ಪರೂ, ಮಹಾತ್ಮರೂ, ಮಹರ್ಷಿಸಮಾನರೂ ಆಗಿರುವ ಮುಖ್ಯ ಋಷಿಗಳಿಂದಲೂ, ಸಮೃದ್ಧವಾದ ಆ ಅಯೋಧ್ಯಾ ನಗರವನ್ನು ದಶರಥನೆಂಬ ರಾಜನು ವಾಸಯೋಗ್ಯವನ್ನಾಗಿ ಮಾಡಿಕೊಂಡಿದ್ದನು.||೧೦-೨೩ ||

ಇಂತಿದು ಅಯೋಧ್ಯಾ ಪಟ್ಟಣ ವರ್ಣನವೆಂಬ ಐದನೆಯ ಸರ್ಗವು

ಸ ಮಾ ಪ್ತ ಮಾ ದು ದು.

# ಬಾಲಕಾಂಡೇ ಷಷ್ಠಸ್ಸರ್ಗಃ.

ತಸ್ಯಾಂ ಪುರ್ಯಾಮಯೋಧ್ಯಾಯಾಂ ವೇದವಿತ್ಸರ್ವ ಸಂಗ್ರಹಃ || ದೀರ್ಘ ದರ್ಶೀ ಮಹಾತೇಜಾಃ ಪೌರಜಾನಪದಪ್ರಿಯಃ||೧|| ಇಕ್ಷ್ವಾಕೂಣಾ ಮತಿರಥೋ ಯಜ್ವಾ ಧರ್ಮಪರೋವಶೀ || ಮಹರ್ಷಿಕಲ್ಪೋ ರಾಜರ್ಷಿ ಸ್ತ್ರಿಷುಲೋಕೇ ಷುವಿಶ್ರುತಃ||೨||ಬಲವಾನ್ನಿಹತಾ ಮಿತ್ರೋ ಮಿತ್ರವಾನ್ವಿ ಜಿತೇಂದ್ರಿಯಃ || ಧನೈಶ್ಚ ಸಂಗ್ರಹೈ ಶ್ಚಾನ್ಯೈ ಶ್ಶಕ್ರವೈಶ್ರವಣೋಪಮಃ||೩|| ಯಥಾ ಮನು ರ್ಮಹಾತೇಜಾ ಲೋಕಸ್ಯ ಪರಿರಕ್ಷಿತಾ || ತಥಾ ದಶರಥೋರಾಜಾ ವರ್ಸ ಜಗದ

ತಸ್ಯಾಂ ಅಯೋಧ್ಯಾಯಾಂಪುರ್ಯಾಂ- ಆ ಅಯೋಧ್ಯಾಪಟ್ಟಣದಲ್ಲಿ, ವೇದವಿತ್ - ವೇದಾರ್ಥವನ್ನು ತಿಳಿದಿರುವ, ಸರ್ವಸಂಗ್ರಹಃ - ಧನಮಾನಾದಿಗಳಿಂದ ಜನರೆಲ್ಲರನ್ನು ಗುಂಪುಗೂಡಿಸುವ ಶಕ್ತಿಯುಳ್ಳ, ದೀರ್ಘದರ್ಶೀ-ದೂರಾಲೋಚನೆಯುಳ್ಳ, ಮಹಾತೇಜಾಃ-ಬಹಳ ಪ್ರತಾಪವಂತನಾದ, ಪೌರಜಾನಪದಪ್ರಿಯಃ,ಪೌರ-ಪಟ್ಟಣನಿವಾಸಿಗಳೂ, ಜಾನಪದ-ದೇಶನಿವಾಸಿಗಳೂ, ಪ್ರಿಯಃ- ಇಷ್ಟರಾಗಿ ವುಳ್ಳ, ಇಕ್ಷ್ವಾಕೂಣಾಂ-ಇಕ್ಷ್ವಾಕು ವಂಶಸ್ಥರಲ್ಲಿ, ಅತಿರಥಃ-ಒಬ್ಬನೇ ಮಹಾರಥಿಕರೊಡನೆ ಯುದ್ಧಮಾಡಲು ಸಮರ್ಥನಾದ, ಯಜ್ವಾ-ಶಾಸ್ತ್ರೋಕ್ತವಾಗಿ ಕ್ರತುಗಳನ್ನು ಮಾಡಿರುವ, ಧರ್ಮಪರಃ,ಧರ್ಮ-ತಟಾಕಾವನ ಪ್ರತಿಷ್ಠಾದಿಗಳೇ ಮೊದಲಾಗಿ ಉಳ್ಳ ಧರ್ಮಕಾರ್ಯಗಳಲ್ಲಿ, ಪರಃ-ಆಸಕ್ತನಾದ, ವಶೀ-ಸ್ವಾಧೀನವಾದ ಸರ್ವಜನರುಳ್ಳ, ಮಹರ್ಷಿಕಲ್ಪಃ - ಬ್ರಹ್ಮರ್ಷಿಗಳಿಗೆ ಸಮಾನನಾದ, ರಾಜರ್ಷಿಃ-ರಾಜರ್ಷಿಯಾದ, ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯು, ವಿಶ್ರುತಃ - ಪ್ರಸಿದ್ಧನಾದ, ಬಲವಾನ್-ಚತುರಂಗಸೇನಾಸಮೇತನಾದ,ನಿಹತಾಮಿತ್ರಃ, ನಿಹತ-ಹೊಡೆಯಲ್ಪಟ್ಟ, ಅಮಿತ್ರಃ-ಶತೃಗಳುಳ್ಳ, ಮಿತ್ರವಾನ್-ಪ್ರಶಸ್ತರಾದ ಸ್ನೇಹಿತರು, ವಿಜಿತೇಂದ್ರಿಯಃ- ಜಿತೇಂದ್ರಿಯನಾದ,ಧನೈಃ-ಧನಗಳಿಂದಲೂ, ಸಂಗ್ರಹೈಶ್ಚ-ಪ್ರಭುತ್ವದಿಂದ ಜನಸ್ವಾಧೀನಗೊಳಿಸುವ ಕಾರ್ಯಗಳಿಂದಲೂ, ಅನ್ಯೈಶ್ಚ-ಇತರ ನಿಧಿಗಳಿಂದಲೂ, ಶಕ್ರವೈಶ್ರವಣೋಪಮಃ ಇಂದ್ರನಿಗೂ, ಕುಬೇರನಿಗೂ ಸಮಾನನಾದ, ಮಹಾತೇಜಾಃ-ಮಹಾತೇಜಸ್ವಿಯಾದ, ಮನುಃ - ಮನುಚಕ್ರವರ್ತಿಯು, ಯಥಾ-ಹೇಗೆ, ಲೋಕಸ್ಯ-ಲೋಕಕ್ಕೆ, ಪರಿರಕ್ಷಿತಾ - ಸಂರಕ್ಷಣ ಕರ್ತನಾದನೋ, ತಥಾ-ಹಾಗೆ, ದಶರಥೋರಾಜಾ - ದಶರಥ

---

ಪ್ರಸಿದ್ಧವಾದ ಅಯೋಧ್ಯಾ ನಗರದಲ್ಲಿ ವಾಸ ಮಾಡುವವನೂ, ವೇದವನ್ನರಿತವನೂ, ಧನಮಾನಾದಿಗಳಿಂದ ಎಲ್ಲಾ ಜನರನ್ನು ಸೇರಿಸುವ ಶಕ್ತಿಯುಳ್ಳವನೂ, ದೂರಾಲೋಚನೆಯುಳ್ಳವನೂ ಬಹಳ ತೇಜಸ್ವಿಯೂ, ನಗರವಾಸಿಗಳಿಗೂ, ದೇಶನಿವಾಸಿಗಳಿಗೂ, ಪ್ರಿಯವನ್ನುಂಟುಮಾಡುವವನೂ, ಇಕ್ಷ್ವಾಕು ಕುಲಸ್ಥರಲ್ಲಿ ಮಹಾರಥಿಕನೆಂದು ಪ್ರಸಿದ್ಧಿಯನ್ನು ಪಡೆದಿರುವನೂ, ವಿಧ್ಯುಕ್ತವಾಗಿ ಯಜ್ಞಗಳನ್ನು ಮಾಡುತ್ತಿರುವವನಾಗಿಯೂ, ಮಹಾಧರ್ಮಿಷ್ಠನಾಗಿಯೂ, ಅಧೀನರಾದ ಜನರುಳ್ಳವನಾಗಿಯೂ, ಬ್ರಹ್ಮರ್ಷಿಗಳಿಗೆ ಸದೃಶನಾಗಿಯೂ, ರಾಜರ್ಷಿಯಾಗಿಯೂ, ಮೂರು ಲೋಕಗಳಲ್ಲಿಯೂ, ಬಹಳ ಪ್ರಸಿದ್ಧನಾಗಿರುವವನಾಗಿಯೂ, ಚತುರಂಗಬಲ ಸಮೇತನಾಗಿಯೂ, ನಾಶಮಾಡಿದ ಶತ್ರುಗಳುಳ್ಳವನೂ, ಪ್ರೀತಿಪಾತ್ರರಾದ ಸ್ನೇಹಿತರುಳ್ಳವನೂ, ಜಿತೇಂದ್ರಿಯನೂ, ದ್ರವ್ಯಗಳಿಂದಲೂ, ನಿಧಿಗಳಿಂದಲೂ, ಸಾಕ್ಷಾತ್ ಕುಬೇರನಿಗೆ ಸದೃಶನಾಗಿರುವವನೂ, ಇಂದ್ರಸಮಾನನೂ ಆಗಿರುವ ದಶರಥನೆಂಬ ರಾಜನು ಸರ್ವ

ಪಾಲಯತ್ ||೪|| ತೇನ ಸತ್ಯಾಭಿಸಂಧೇನ ತ್ರಿವರ್ಗಮನುತಿಷ್ಠತಾ|| ಪಾಲಿತಾ ಸಾ ಪುರೀ ಶ್ರೇಷ್ಠಾ ಇಂದ್ರೇಣೇವಾಮರಾವತೀ || ೫ || ತಸ್ಮಿನ್ಪುರವರೇ ಹೃಷ್ಟಾ ಧರ್ಮಾತ್ಮಾನೋ ಬಹುಶ್ರುತಾಃ || ನರಾಸ್ತುಷ್ಟಾ ಧನೈಸ್ಸ್ವೈಸ್ಸ್ವೈರಲುಬ್ಧಾ ಸ್ಸತ್ಯವಾದಿನಃ ||೬|| ನಾಲ್ಪಸನ್ನಿಚಯಃ ಕಶ್ಚಿದಾಸೀತ್ತಸ್ಮಿನ್ಪುರೋತ್ತಮೇ ||

ಮಹಾರಾಜನು, ವರ್ತ-ವಾಸಮಾಡುತ್ತ, ಜಗತ್-ಭೂಲೋಕವನ್ನು, ಅಪಾಲಯತ್ - ಪರಿಪಾಲಿಸಿದನು ||೧||೨||೩||೪|| ಸತ್ಯಾಭಿಸಂಧೇನ - ಸತದಲ್ಲೇ ಅಭಿಪ್ರಾಯವುಳ್ಳ, ತ್ರಿವರ್ಗಂ-ಧರ್ಮಾರ್ಥಕಾಮರೂಪ ಪುರುಷಾರ್ಥತ್ರಯವನ್ನು, ಅನುತಿಷ್ಠತಾ-ಅನುಸರಿಸುತ್ತಿರುವ, ತೇನ-ಆ ದಶರಥರಾಯನಿಂದ, ಇಂದ್ರೇಣ - ದೇವೇಂದ್ರನಿಂದ, ಅಮರಾವತೀವ ಅಮರಾವತೀಪಟ್ಟಣದಂತೆ, ಶ್ರೇಷ್ಠಾ-ಪ್ರಶಸ್ತವಾದ, ಸಾ ಪುರೀ- ಆ ಅಯೋಧ್ಯಾಪಟ್ಟಣವು, ಪಾಲಿತಾ-ಪರಿಪಾಲನೆ ಮಾಡಲ್ಪಟ್ಟಿತು. ||೫|| ತಸ್ಮಿನ್ಪುರವರೇ-ಆಶ್ರೇಷ್ಠವಾದ ಅಯೋಧ್ಯಾಪಟ್ಟಣದಲ್ಲಿ, ಹೃಷ್ಟಾಃ ಸಂತೋಷಯುಕ್ತರಾದ, ಧರ್ಮಾತ್ಮಾನಃ ಧರ್ಮಿಷ್ಠರಾದ, ಬಹುಶ್ರುತಾಃ-ಬಹಳವಾದ ಶಾಸ್ತ್ರಶ್ರವಣವುಳ್ಳ, ಸ್ವೈಸ್ಸ್ವೈಃ-ತಮ್ಮ ತಮ್ಮ ಸ್ವಕೀಯಗಳಾದ, ಧನೈಃ - ದ್ರವ್ಯಗಳಿಂದ, ತುಷ್ಟಾಃ - ಸಂತುಷ್ಟರಾದ, ಅಲುಬ್ಧಾಃ-ಹಣದಾಶೆಯಿಲ್ಲದ, ಸತ್ಯವಾದಿನಃ-ಸತ್ಯವನ್ನೇ ನುಡಿವ, ನರಾಃ-ಶ್ರೇಷ್ಠರಾದ ಜನರು, ಆಸನ್-ವಾಸಮಾಡುತ್ತಿದ್ದರು. ||೬|| ತಸ್ಮಿನ್ಪುರೋತ್ತಮೇ - ಶ್ರೇಷ್ಠವಾದ ಆ ಪಟ್ಟಣದಲ್ಲಿ, ಯಃ- ಯಾವನು, ಕುಟುಂಬೀ-(೧) ಸಂಸಾರಿಯಾದವನೋ, ಸಃ - ಅಂತಹ, ಕಶ್ಚಿತ್ - ಒಬ್ಬನೂ, ಅಲ್ಪಸಂನಿಚಯಃ-ಸ್ವಲ್ಪವಾದ ದ್ರವ್ಯಕೋಶವಿರುವನು, ನಾಸೀತ್-ಆಗಲಿಲ್ಲ, ಅಸಿದ್ಧಾರ್ಥಃ-ಧನಾದಿಗಳಿಂದ ಪುರುಷಾರ್ಥಗಳನ್ನು ಸಂಪಾದನೆಮಾಡದಿರುವವನು, ನಾಸೀತ್-ಆಗಲಿಲ್ಲ, ಅಗವಾಶ್ವಧನಧಾನ್ಯವಾನ್- ಗೋ

ಲೋಕಸಂರಕ್ಷಣ ಕರ್ತನೂ, ಮತ್ತೂ ಬಹಳ ತೇಜಸ್ವಿಯೂ ಆದ ಮನುಚಕ್ರವರ್ತಿಯಂತೆ ಲೋಕವನ್ನೆಲ್ಲ ಪರಿಪಾಲಿಸುತ್ತಿದ್ದನು. ||೧|| ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥತ್ರಯವನ್ನನುಸರಿಸುತ್ತಿರುವ ಸತ್ಯಸಂಧನಾದ ಆ ದಶರಥರಾಜನಿಂದ ರಕ್ಷಿಸಲ್ಪಡುತ್ತಿರುವ ಆ ಅಯೋಧ್ಯಾಪುರಿಯು, ಇಂದ್ರಪಾಲಿತವಾದ ಅಮರಾವತೀ ಪುರದಂತೆ ಸರ್ವಶ್ರೇಷ್ಠವಾಗಿದ್ದಿತು. ||೫|| ಶ್ರೇಷ್ಠವಾದ ಆ ಪಟ್ಟಣದಲ್ಲಿರುವ ಜನರೆಲ್ಲರು ಬಹಳ ಸಂತುಷ್ಟರೂ, ಧರ್ಮಿಷ್ಟರೂ, ಬಹಳವಾದ ಶಾಸ್ತ್ರಶ್ರವಣಮಾಡಿದವರೂ, ತಮಗಿರುವ ಐಶ್ವರ್ಯದಿಂದಲೇ ಸಂತುಷ್ಟವಾದಮನವುಳ್ಳವರೂ ಆಗಿದ್ದರು. ||೬|| ಇಷ್ಟೆಯಲ್ಲದೆ ಆ ಪಟ್ಟದಲ್ಲಿ ಕುಟುಂಬಿಯಾದವನು ಸ್ವಲ್ಪವಾದ ದ್ರವ್ಯಕೋಶವುಳ್ಳವನಾಗಿಯೂ, ಧನಾದಿಗಳಿಂದ ಧರ್ಮ, ಅರ್ಥ, ಕಾಮ,

ಟಿ|| (೧) ಶ್ಲೋ || ಮಾತಾಪಿತಾಸ್ನುಷೇ ಪುತ್ರೌ ಪುತ್ರೀ ಪತ್ನ್ಯತಿಥಿಸ್ಸ್ವಯಂ | ದಶಸಂಖ್ಯಃ ಕುಟುಂಬೀತಿ ವಿಷ್ಣುನೋಕ್ತಂ ದ್ವಿಜೋತ್ತಮ|| ಅಂದರೆ, ತಂದೆ, ತಾಯಿ, ಇಬ್ಬರು ಸೊಸೆಯರು, ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು, ಹೆಂಡತಿ, ಅತಿಥಿ, ತಾನು ಎಂಬ ಹತ್ತು ಮಂದಿಯನ್ನೊಳಗೊಂಡವನು ಕುಟುಂಬಿಯೆನಿಸುವನು.

ಕುಟುಂಬೀ ಯೋಹ್ಯಸಿದ್ಧಾರ್ಥೋ ಗವಾಶ್ವ ಧನಧಾನ್ಯವಾನ್ ||೭|| ಕಾಮೀವಾ ನ ಕದರ್ಯೋವಾ ನೃಶಂಸಃ ಪುರುಷಃ ಕ್ವಚಿತ್ || ದ್ರಷ್ಟುಂ ಶಕ್ಯ ಮಯೋಧ್ಯಾಯಾಂ ನಾವಿದ್ವಾನ್ನಚನಾಸ್ತಿಕಃ ||೮ || ಸರ್ವೇನರಾಶ್ಚ ನಾರ್ಯಶ್ಚ ಧರ್ಮಶೀಲಾಸ್ಸು ಸಂಯುತಾಃ|| ಉದಿತಾಶ್ಶೀಲವೃತ್ತಾಭ್ಯಾಂ ಮಹರ್ಷಯ ಇವಾ ಮಲಾಃ ||೯|| ನಾಕುಂಡಲೀ ನಾಮುಕುಟೀ ನಾಸ್ರಗ್ವೀನಾಲ್ಪ ಭೋಗವಾನ್ || ನಾಮೃಷ್ಟೋನಾನುಲಿಪ್ತಾಂಗೋ ನಾಸುಗಂಧಶ್ಚ ವಿದ್ಯತೇ ||೧೦|| ನಾಮೃಷ್ಟ ಭೋಜೀ ನಾದಾತಾ ನಾಪ್ಯನಂಗದನಿಷ್ಕಧೃತ್|| ನಾಹಸ್ತಾಭರಣೋವಾಪಿ ದೃಶ್ಯತೇ

ವುಗಳು, ಕುದುರೆಗಳು, ಧನ ಮತ್ತು ಧಾನ್ಯಗಳಿಲ್ಲದವನು, ನಾಸೀತ್-ಇರಲಿಲ್ಲ, ||೭|| ಅಯೋಧ್ಯಾಯಾಂ-ಅಯೋಧ್ಯಾಪಟ್ಟದಲ್ಲಿ, ಕಾಮೀವಾ-ಕಾಮುಕನೇ ಆಗಲೀ, ಕದರ್ಯೋವಾ (೧) - ಜಿಪುಣನೇ ಆಗಲಿ, (ಗೋ) ನೃಶಂಸಃ - ಘಾತುಕನಾದ, ಪುರುಷಃ - ಮನುಷ್ಯನೇ ಆಗಲಿ, ಕ್ವಚಿತ್-ಯಾವೆಡೆಯಲ್ಲಿಯೂ, ದ್ರಷ್ಟುಂ-ನೋಡುವದಕ್ಕೆ, ನಶಕ್ಯಂ-ಸಾಧ್ಯವಲ್ಲ, ಅವಿದ್ವಾನ್-ವಿದ್ಯಾರಹಿತನು, ನ-ಇಲ್ಲ, ನಾಸ್ತಿಕಃ-ಪರಲೋಕವಿಲ್ಲವೆಂದು ಹೇಳುವವನು, ನ-ಇಲ್ಲ. || ೮ || ಸರ್ವೇ-ಎಲ್ಲ, ನರಾಶ್ಚ-ಪುರುಷರೂ, ನಾರ್ಯಶ್ಚ-ಹೆಂಗಸರೂ, ಧರ್ಮಶೀಲಾಃ - ಧರ್ಮಸ್ವಭಾವವುಳ್ಳವರೂ, ಸುಸಂಯುತಾಃ-ಬಹಳ ಜಿತೇಂದ್ರಿಯರೂ, ಶೀಲವೃತ್ತಾಭ್ಯಾಂ-ಸ್ವಭಾವ ಮತ್ತು ನಡತೆಗಳಿಂದ, ಉದಿತಾಃ-ಉತ್ಪನ್ನರಾದವರೂ, (ಗೋ) ಸತ್ಸ್ವಭಾವ ಸದಾಚಾರಗಳೊಡನೆ, ಉದಿತಾಃ- ಉತ್ಪನ್ನರಾದವರೂ, ಮಹರ್ಷಯ ಇವ ಮಹಾಮುನಿಗಳಂತೆ, ಅಮಲಾಃ-ನಿರ್ಮಲ ಮನಸ್ಸುಳ್ಳವರು ||೯|| ಅಕುಂಡಲೀ-ಕರ್ಣಾಭರಣಗಳಿಲ್ಲದಿರುವನು, ನ-ಇಲ್ಲ, ಅಮುಕುಟೀ-ಕಿರೀಟವಿಲ್ಲದವನು,ನ-ಇಲ್ಲ, ಅಸ್ರಗ್ವೀ-ಕಂಠೀಸರಗಳಿಲ್ಲದವನು, ನ-ಇಲ್ಲ, ಅಲ್ಪಭೋಗವಾನ್- ಸ್ವಲ್ಪ ಸುಖವುಳ್ಳವನು, ನ-ಇಲ್ಲ, ಅಮೃಷ್ಟಃ-ಅಭ್ಯಂಗನ ಸ್ನಾನಾದಿರಹಿತನು, ನ-ಇಲ್ಲ, ನಾನು ಲಿಪ್ತಾಂಗಃ-ಗಂಧಾದಿಗಳಿಂದ ಲೇಪನ ಮಾಡಲ್ಪಡದೇಯಿರುವ ಶರೀರವುಳ್ಳವನು, ನ-ಇಲ್ಲ, ಅಸುಗಂಧಶ್ಚ - ಸುವಾಸನೆಯಿಲ್ಲದವನು, ನವಿದ್ಯತೆ - ಇಲ್ಲ, ||೧೦|| ಅಮೃಷ್ಟಭೋಜೀ-ಮೃಷ್ಟಾನ್ನವನ್ನು ಭುಜಿಸದೇ ಇರತಕ್ಕವನು, ನ-ಇಲ್ಲ, ಅದಾತಾ-ದಾತನಲ್ಲದೇ ಇರತಕ್ಕವನು, ನ-ಇಲ್ಲ, ಅನಂಗದ ನಿಷ್ಕಧೃತ್ - ಬಾಹುಜಿಗೆಯನ್ನೂ, ಉರೋಭೂಷಣ

ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥವನ್ನು ಸಂಪಾದಿಸದವನಾಗಿಯೂ, ಇರಲಿಲ್ಲ. ||೭|| ಕಾಮುಕನಾಗಲಿ, ತಂದೆ ತಾಯಿ ಮುಂತಾದ ಸ್ವಜನಕ್ಕೆ ಅನ್ನವಿಡದೆ ಬಾಧಿಸುವವನಾಗಲಿ, ಘಾತುಕನಾಗಲಿ, ವಿದ್ಯಾರಹಿತನಾಗಲಿ, ಪರಲೋಕವಿಲ್ಲೆಂದು ಸಾಧಿಸುವ ನಾಸ್ತಿಕನಾಗಲಿ, ಎಲ್ಲಿ ನೋಡಿದರೂ ಕಾಣುತ್ತಲೇ ಇರಲಿಲ್ಲವು. || ೮ || ಮನುಷ್ಯರೂ, ಸ್ತ್ರೀಯರೂ, ಧರ್ಮಶೀಲರಾಗಿಯೂ, ಜಿತೇಂದ್ರಿಯರಾಗಿಯೂ, ಸ್ವಭಾವದಿಂದಲೂ, ನಡತೆಯಿಂದಲೂ, ಯುಕ್ತರಾಗಿರುವ ಮಹರ್ಷಿಗಳಂತೆ ನಿರ್ಮಲವಾದ ಮನಸ್ಸುಳ್ಳವರಾಗಿದ್ದರು. ||೯|| ಕುಂಡಲಗಳಿಲ್ಲದವನೂ, ಕಿರೀಟರಹಿತನಾದವನೂ, ಪುಷ್ಪಮಾಲಿಕೆಗಳಿಲ್ಲದವನೂ, ಅಲ್ಪಭೋಗವುಳ್ಳವನೂ,

ಟಿ|| (೧) ಆತ್ಮಾನಂ ಧರ್ಮಕೃತ್ಯಂಚ ಪುತ್ರದಾರಾಂಶ್ಚ ಪೀಡಯೇತ್| ಲೋಭಾದ್ಯಃ ಪಿತರೌ ಭ್ರಾತೄನ್ ಸಕದರ್ಯ ಇತಿ ಸ್ಮೃತಃ|| ಅಂದರೆ, ಕಾರ್ಪಣ್ಯದಿಂದ ತಂದೆತಾಯಿಗಳು ಮುಂತಾದ ಸ್ವಜ ಕ್ಕೆ ಅನ್ನ ವಿಡದೇ ಬಾಧಿಸುವವನು.

ನಾಪ್ಯನಾತ್ಮವಾನ್ ॥ ೧೧ ॥ ನಾನಾಹಿತಾಗ್ನಿರ್ನಾಯಜ್ವಾ ನಕ್ಷುದ್ರೋ ವಾ ನ ತಸ್ಕರಃ॥ ಕಶ್ಚಿದಾಸೀದಯೋಧ್ಯಾಯಾಂ ನಚ ನಿರ್ವೃತ್ತಸಂಕರಃ॥೧೨॥ಸ್ವಕರ್ಮ ನಿರತಾ ನಿತ್ಯಂ ಬ್ರಾಹ್ಮಣಾ ವಿಜಿತೇಂದ್ರಿಯಾಃ ॥ ದಾನಾಧ್ಯಯನ ಶೀಲಾಶ್ಚ ಸಂಯತಾಶ್ಚ ಪ್ರತಿಗ್ರಹೇ ॥ ೧೩ ॥ ನನಾಸ್ತಿಕೋ ನಾನೃತಕೋ ನಕಶ್ಚಿದ ಬಹುಶ್ರುತಃ। ನಾಸೂಯಕೋ ನಚಾಶಕ್ತೋ ನಾವಿದ್ವಾನ್ ವಿದ್ಯತೇತದಾ॥೧೪॥

ವನ್ನೂ ಸಹಾ ಧರಿಸದೇ ಇರತಕ್ಕವನು, ನ-ಇಲ್ಲ, ಅಹಸ್ತಾಭರಣಃ - ಬಳೆ, ಸರಪಣಿಗಳಿಲ್ಲದವನು, ನ-ಇಲ್ಲ, ಅನಾತ್ಮವಾನ್-ಇಂದ್ರಿಯನಿಗ್ರಹವಿಲ್ಲದಿರುವನು, ಸದೃಶ್ಯತೆ ಕಾಣಲಿಲ್ಲ, ॥೧೧॥ ಅಯೋಧ್ಯಾಯಾಂ-ಅಯೋಧ್ಯಾಪಟ್ಟಣದಲ್ಲಿ, ಕಶ್ಚಿತ-ಒಬ್ಬನೂ ಕೂಡ, ಅನಾಹಿತಾಗ್ನಿಃ-ನಿರಂತರವೂ ಅಗ್ನಿಹೋತ್ರವಿಲ್ಲದೆ ಇರುವನು, ನ-ಇಲ್ಲ, ಅಯಜ್ವಾ - ಯಜ್ಞಮಾಡದಿರುವವನು, ನ-ಇಲ್ಲ, ಕ್ಷುದ್ರಃ-ಕ್ಷುದ್ರನು, ನ-ಇಲ್ಲ, ತಸ್ಕರೋವಾ-ಕಳ್ಳನಾದರೂ, ನ-ಇರಲಿಲ್ಲ ನಿರ್ವೃತ್ತಸಂಕರಃ, ನಿರ್ವೃತ್ತ ಅನುಷ್ಠಾನಮಾಡಲ್ಪಟ್ಟ, ಸಂಕರಃ-(ಗೋ) ಪರಕ್ಷೇತ್ರದಲ್ಲಿ ಬೀಜಾವಾಪವೇ ಮುಂತಾದ ಕೆಟ್ಟ ಕೆಲಸವುಳ್ಳವನು, (ಮ) ವರ್ಣಸಾಂಕರ್ಯವುಳ್ಳವನು, ನ-ಇರಲಿಲ್ಲ. ॥ ೧೨ ॥ ನಿತ್ಯಂ-ಸದಾಕಾಲದಲ್ಲಿಯೂ, ಸ್ವಕರ್ಮನಿರತಾಃ-ತಮ್ಮತಮ್ಮ ಕರ್ಮಗಳಲ್ಲಿ ಆಸಕ್ತರಾದ, ಬ್ರಾಹ್ಮಣಾಃ-ಬ್ರಾಹ್ಮಣರು, ವಿಜಿತೇಂದ್ರಿಯಾಃ-ಜಯಿಸಲ್ಪಟ್ಟ ಇಂದ್ರಿಯಗಳುಳ್ಳವರು, ದಾನಾಧ್ಯಯನ ಶೀಲಾಶ್ಚ-ದಾನದಲ್ಲಿಯೂ ಜಪರೂಪಾಧ್ಯಯನವೇ ಸ್ವಭಾವವಾಗಿವುಳ್ಳವರೂ, ಪರಿಗ್ರಹೆ-ಸ್ವಭಾರ್ಯೆಯಲ್ಲಿ, ಸಂಯುತಾಶ್ಚ-ನಿಯತರಾದವರು ॥ ೧೩ ॥ ತದಾ-ಆ ಸಮಯದಲ್ಲಿ, ನಾಸ್ತಿಕಃ-ನಾಸ್ತಿಕನಾದವನು, ನ-ಇರಲಿಲ್ಲ, ಅನೃತಕಃ-ಸುಳ್ಳುಹೇಳತಕ್ಕವನು, ನ-ಇರಲಿಲ್ಲ, ಕಶ್ಚಿತ್-ಒಬ್ಬನಾದರೂ, ಅಬಹುಶ್ರುತಃ- ಬಹುಪ್ರಕಾರವಾದ ಶಾಸ್ತ್ರಶ್ರವಣವಿಲ್ಲದಿರುವನು, ನ-ಇರಲಿಲ್ಲ, ಅಸೂಯಕಃ-ಪರಶ್ರೇಯಸ್ಸಹನೆ ಇಲ್ಲದಿರುವನು,ನ-ಇರಲಿಲ್ಲ, ಅಶಕ್ತಃ-ಐಹಿಕಾಮುಷ್ಮಿಕ ಸಾಧನವಿಷಯದಲ್ಲಿ ಶಕ್ತಿಯಿಲ್ಲದೆ ಇರುವನು, ನ ಇರಲಿಲ್ಲ, ಅವಿದ್ವಾನ್-ವಿದ್ವಾಂಸನಲ್ಲದೇ ಇರುವನು, ನ-ಇಲ್ಲ. ॥ ೧೪ ॥ ತತ್ರ-ಆ ಅಯೋಧ್ಯಾಪಟ್ಟಣದಲ್ಲಿ,

---

ಅಭ್ಯಂಗನಾದಿ ರಹಿತನೂ, ಗಂಧಹಚ್ಚಿಕೊಳ್ಳದಿರುವವನೂ, ಸುವಾಸನೆ ಇಲ್ಲದವನೂ, ಮೃಷ್ಟಾನ್ನವನ್ನು ಭುಜಿಸದಿರುವವನೂ, ದಾತನಾಗದಿರುವವನೂ, ಅಂಗದ ಉರೋಭೂಷಣಗಳಿಲ್ಲದಿರುವವನೂ, ಹಸ್ತಾಭರಣ ರಹಿತನೂ, ಇಂದ್ರಿಯನಿಗ್ರಹನಿಲ್ಲದಿರುವವನೂ, ಆ ಪಟ್ಟಣದಲ್ಲಿ ಹುಡುಕಿದರೂ ಕಾಣಬರುವುದಿಲ್ಲ. ॥೧೧॥ ನಿರಂತರವೂ ಅಗ್ನಿಹೋತ್ರವನ್ನು ಮಾಡದವನೂ, ಕ್ಷುದ್ರನೂ, ಕಳ್ಳನೂ, ಜಾತಿಸಾಂಕರ್ಯ ಮಾಡತಕ್ಕವನೂ, ಆಪುರದಲ್ಲೇ ಇರಲಿಲ್ಲ.॥೧೨॥ ಆ ನಗರವಾಸಿಗಳಾದ ಜನಗಳೆಲ್ಲರೂ, ನಿರಂತರವು ಸ್ವಕರ್ಮದಲ್ಲಿರುವರು. ಬ್ರಾಹ್ಮಣರು ಜಿತೇಂದ್ರಿಯರಾಗಿಯೂ, ದಾನಾಧ್ಯಯನ ಶೀಲರಾಗಿಯೂ, ಸ್ವಭಾರ್ಯೆಯರಲ್ಲಿ ನಿರತರಾಗಿಯೂ ಇರುತ್ತಿದ್ದರು. ॥ ೧೩ ॥ ದಶರಥರಾಯನ ಪ್ರಭುತ್ವವನ್ನೊಳಗೊಂಡ ಆ ದೇಶದಲ್ಲಿ ನಾಸ್ತಿಕನಾಗಲಿ, ಸುಳ್ಳುಗಾರನಾಗಲಿ, ಬಹು ಪ್ರಕಾರವಾದ ಶಾಸ್ತ್ರಶ್ರವಣ ಮಾಡದವನಾಗಲಿ, ಐಹಿಕಾಮುಷ್ಮಿಕ ಸಾಧಕಗಳಾದ ಕರ್ಮಗಳಲ್ಲಿ ಶಕ್ತಿಯಿಲ್ಲದಿರುವವನಾಗಲಿ, ವಿದ್ವಾಂಸನಲ್ಲದೇ ಇರುವವನಾಗಲಿ, ಇರಲೆ ಇಲ್ಲ. ॥ ೧೪ ॥ ಷಡಂಗಗಳನ್ನು ಅರಿಯದೆ

ನಾಷಡಂಗವಿದತ್ರಾಸೀ ನ್ನಾವ್ರತೋ ನಾಸಹಸ್ರದಃ|| ನದೀನಃ ಕ್ಷಿಪ್ತಚಿತ್ತೋವಾ ವ್ಯಥಿತೋ ವಾಪಿಕಶ್ಚನ ||೧೫ || ಕಶ್ಚಿನ್ನರೋವಾ ನಾರೀವಾ ನಾಶ್ರೀಮಾನ್ನಾಪ್ಯರೂಪವಾನ್ || ದ್ರಷ್ಟುಂ ಶಕ್ಯಮಯೋಧ್ಯಾಯಾಂ ನಾಪಿರಾಜನ್ಯಭಕ್ತಿಮಾನ್ || ೧೬ || ವರ್ಣೇಷ್ವಗ್ರ್ಯ ಚತುರ್ಥೇಷು ದೇವತಾ ತಿಥಿಪೂಜಕಾಃ || ಕೃತಜ್ಞಾಶ್ಚ ವದಾನ್ಯಾಶ್ಚ ಶೂರಾ ವಿಕ್ರಮ ಸಂಯುತಾಃ ||೧೭ || ದೀರ್ಘಾಯುಷೋನರಾಸ್ಸರ್ವೇ ಧರ್ಮಂ ಸತ್ಯಂಚ ಸಂಶ್ರಿತಾಃ || ಸಹಿತಾ ಪುತ್ರಪೌತ್ರೈಶ್ಚ ನಿತ್ಯಂ ಸ್ತ್ರೀಭಿಃ ಪುರೋತ್ತಮೇ ||೧೮ || ಕ್ಷತ್ರಂ ಬ್ರಹ್ಮಮುಖಂ

ಅಷಡಂಗವಿತ್-ಶಿಕ್ಷಾದಿ ಷಡಂಗಗಳನ್ನು ತಿಳಿಯದೆ ಇರತಕ್ಕವನು, ನಾಸೀತ್-ಇರಲಿಲ್ಲ, ಅವ್ರತಃ-ಕೃಚ್ಛ್ರಚಾಂದ್ರಾಯಣಾದಿ ವ್ರತವಿಲ್ಲದಿರುವವನು, ನ - ಇಲ್ಲ, ಅಸಹಸ್ರದಃ - ಬಹುದಾತನಲ್ಲದೆ ಇರತಕ್ಕವನು, ನ-ಇರಲಿಲ್ಲ, ದೀನಃ-ದೈನ್ಯವುಳ್ಳವನು, ನ-ಇರಲಿಲ್ಲ, ಕ್ಷಿಪ್ತಚಿತ್ತಃ-ವ್ಯಾಕುಲವಾದ ಮನಸ್ಸುಳ್ಳವನು, ನ - ಇರಲಿಲ್ಲ, ವ್ಯಥಿತಃ ರೋಗಾದಿಬಾಧೆಯಿಂದ ಪೀಡಿತನಾದವನು, ಕಶ್ಚನ-ಯಾರೂ ಇಲ್ಲ. || ೧೫ || ಅಯೋಧ್ಯಾಯಾಂ-ಅಯೋಧ್ಯಾಪಟ್ಟಣದಲ್ಲಿ,ಕಶ್ಚಿತ್-ಒಬ್ಬ,ನರೋವಾ-ಪುರುಷನಾಗಲಿ, ನಾರೀವಾ-ಸ್ತ್ರೀಯಾಗಲಿ, ಅಶ್ರೀಮಾನ್ ಕಾಂತಿರಹಿತನಾದವನು, ನ - ಇರಲಿಲ್ಲ, ಅರೂಪವಾನಪಿ-ಸೌಂದರ್ಯರಹಿತನಾದವನು, ನ-ಇರಲಿಲ್ಲ, ರಾಜನಿ-ಪ್ರಭುವಿನಲ್ಲಿ, ಅಭಕ್ತಿಮಾನಪಿ-ಭಕ್ತಿಯಿಲ್ಲದಿರುವವನೂ ಕೂಡ, ದ್ರಷ್ಟುಂ-ನೋಡಲು, ಶಕ್ಯಂನ- ಸಾಧ್ಯವಿಲ್ಲವು, || ೧೬ || ಅಗ್ರ್ಯಚತುರ್ಥೇಷು-ಬ್ರಾಹ್ಮಣರೇ ಮೊದಲಾದ ನಾಲ್ಕುವಿಧವಾದ, ವರ್ಣೇಷು-ವರ್ಣಗಳಲ್ಲಿರುವ ಮನುಷ್ಯರು, ದೇವತಾತಿಥಿಪೂಜಕಾಃ, ದೇವತಾ ದೇವತೆಗಳನ್ನೂ, ಅತಿಥಿ-ಅತಿಥಿಗಳನ್ನೂ, ಪೂಜಕಾಃ-ಪೂಜಿಸುತ್ತಿರುವರು, ಕೃತಜ್ಞಾಶ್ಚ-ಪರೋಪಕಾರಗಳನ್ನರಿತಿರುವವರು, ವದಾನ್ಯಾಶ್ಚ-ದಾನಶೌಂಡರಾದವರು, ಶೂರಾಃ-ಶೌರ್ಯವುಳ್ಳವರು, ವಿಕ್ರಮಸಂಯುತಾಃ-ಪರಾಕ್ರಮಯುಕ್ತರಾದವರು || ೧೭ || ಪುರೋತ್ತಮೇ-ಉತ್ತಮವಾದ ಆ ಅಯೋಧ್ಯಾಪುರದಲ್ಲಿ, ಸರ್ವೇನರಾಃ-ಮನುಷ್ಯರೆಲ್ಲರು, ನಿತ್ಯಂ-ನಿರಂತರವೂ, ಧರ್ಮಂ-ಧರ್ಮವನ್ನು, ಸತ್ಯಂಚ-ಸತ್ಯವನ್ನೂ ಕೂಡ, ಸಂಶ್ರಿತಾಃ-ಆಶ್ರಯಿಸಿ, ದೀರ್ಘಾಯುಷಃ-ದೀರ್ಘಾಯುಷ್ಮಂತರಾಗಿಯೂ, ಪುತ್ರಪೌತ್ರೈಶ್ಚ-ಮಕ್ಕಳು ಮೊಮ್ಮಕ್ಕಳಿಂದಲೂ, ಸ್ತ್ರೀಭಿಶ್ಚ-ಹೆಂಡತಿಯರಿಂದಲೂ, ಸಹಿತಾಃ ಕೂಡಿದವರಾಗಿರುವರು. || ೧೮ || ಕ್ಷತ್ರಂ - ಕ್ಷತ್ರಿಯ

---

ಇರುವವನಾಗಲಿ, ಚಾಂದ್ರಾಯಣಾದಿ ವ್ರತನಿಷ್ಠಾಪರನಾಗದೇ ಇರುವವನಾಗಲೀ, ದೀನನಾಗಲಿ, ಕಳವಳಗೊಂಡ ಮನವುಳ್ಳವನಾಗಲಿ, ವ್ಯಾಧಿಪೀಡಿತನಾಗಲಿ, ಇರಲೇಇಲ್ಲವು||೧೫ ಆ ಪುರದಲ್ಲಿರುವ ನರರಾಗಲಿ, ನಾರಿಯರಾಗಲಿ, ಕಾಂತಿಯುಕ್ತರಾಗಿಯೂ, ರೂಪವಂತರಾಗಿಯೂ, ರಾಜನಲ್ಲಿ ಭಕ್ತಿಯುಳ್ಳವರಾಗಿಯೂ, ಇರುತಿದ್ದರೇ ಹೊರತು ಕುರೂಪಿಗಳಾಗಿಯೂ, ರಾಜವಿಶ್ವಾಸವಿಲ್ಲದಿರುವರಾಗಿಯೂ, ಇರುವವರು ಹುಡುಕಿದರೂ ಸಿಗುವದಿಲ್ಲ. || ೧೬ || ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರು, ದೇವಾತಿಥಿ ಪೂಜಕರೂ, ಕೃತಜ್ಞರೂ, ಉದಾರಿಗಳೂ, ಶೂರರೂ, ಬಾಹುಬಲದಿಂದ ಕೂಡಿದವರೂ, ದೀರ್ಘಾಯುಷ್ಮಂತರೂ, ಪುತ್ರ, ಪೌತ್ರ, ಸ್ತ್ರೀಸಹಿತರೂ, ಆಗಿದ್ದರು. ||೧೭-೧೮||

ಚಾಸೀ ದ್ವೈಶ್ಯಾಃ ಕ್ಷತ್ರ ಮನುವ್ರತಾಃ|| ಶೂದ್ರಾಸ್ಸ್ವಧರ್ಮ ನಿರತಾಃ ತ್ರೀನ್
ವರ್ಣಾನುಪಚಾರಿಣಃ || ೧೯ || ಸಾತೇನೇಕ್ಷ್ವಾಕು ನಾಥೇನ ಪುರೀ ಸುಪರಿ
ರಕ್ಷಿತಾ || ಯಥಾ ಪುರಸ್ತಾನ್ಮನುನಾ ಮಾನವೇಂದ್ರೇಣ ಧೀಮತಾ || ೨೦ ||
ಯೋಧಾನಾಮಗ್ನಿ ಕಲ್ಪಾನಾಂ ಪೇಶಲಾನಾಂ ಸುವರ್ಚಸಾಂ || ಸಂಪೂರ್ಣಾ
ಕೃತವಿದ್ಯಾನಾಂ ಗುಹಾಕೇಸರಿಣಾಮಿವ || ೨೧ || ಕಾಂಭೋಜ ವಿಷಯೇಜಾತೈ
ರ್ಬಾಹ್ಲೀಕೈಶ್ಚ ಹಯೋತ್ತಮೈಃ || ವನಾಯುಜೈ ರ್ನದೀಜೈಶ್ಚ ಪೂರ್ಣಾ

---

ಜಾತಿಯು, ಬ್ರಹ್ಮಮುಖಂ- ಬ್ರಾಹ್ಮಣಪ್ರಧಾನವಾದದ್ದು, ಆಸೀತ್-ಆಯಿತು, ವೈಶ್ಯಾಃ - ವೈಶ್ಯರು, ಕ್ಷತ್ರಂ-ಕ್ಷತ್ರಿಯನನ್ನು, ಅನುವ್ರತಾಃ-ಅನುಸರಿಸಿರುವವರು, ಶೂದ್ರಾಃ-ಶೂದ್ರರು,ಸ್ವಧರ್ಮನಿರತಾಃ-ತಮ್ಮ ಧರ್ಮಗಳಲ್ಲಿ ಆಸಕ್ತರಾಗಿ, ತ್ರೀನ್‌ವರ್ಣಾನ್-ಬ್ರಹ್ಮ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣಸ್ಥರನ್ನು, ಉಪಚಾರಿಣಃ-ಉಪಚಾರ ಮಾಡುತ್ತಿರುವರು, ಆಸನ್ ಆದರು. || ೧೯ || ಸಾಪುರೀ ಆ ಅಯೋಧ್ಯಾಪಟ್ಟಣವು, ಮಾನವೇಂದ್ರೇಣ ಮನುಷ್ಯರಿಗೆಲ್ಲಾ ಅಧಿಪತಿಯಾದ, ಧೀಮತಾ - ಬುದ್ಧಿವಂತನಾದ, ಮನುನಾ-ಮನುಚಕ್ರವರ್ತಿಯಿಂದ, ಪುರಸ್ತಾತ - ಮೊದಲು,ಯಥಾ-ಹೇಗೋ, ತಥಾ-ಹಾಗೆ, ತೇನೇಕ್ಷ್ವಾಕುನಾಥೇನ-ಆ ದಶರಥ ರಾಜನಿಂದ, ಸುಪರಿರಕ್ಷಿತಾ-ಚನ್ನಾಗಿ ಕಾಪಾಡಲ್ಪಟ್ಟಿತು.|| ೨೦|| (ಸಾಪುರೀ-ಆ ಪಟ್ಟಣವು,) ಅಗ್ನಿಕಲ್ಪಾನಾಂ-ಶೌರ್ಯಾತಿಶಯದಿಂದ ಅಗ್ನಿತುಲ್ಯರಾದ, ಪೇಶಲಾನಾಂ - ಕುಟಿಲವಿಲ್ಲದಿರುವ, (ಅಥವಾ-ಕುಶಲರಾದ,) ಸುವರ್ಚಸಾಂ - ಮಹಾ ತೇಜಸ್ವಿಗಳಾದ, ಕೃತವಿದ್ಯಾನಾಂ, ಕೃತ-ಶಿಕ್ಷಿತವಾದ, ವಿದ್ಯಾನಾಂ-ಶಸ್ತ್ರಾದಿ ವಿದ್ಯೆಗಳುಳ್ಳ, ಯೋಧಾನಾಂ - ಭಟರಿಂದ, ಕೇಸರೀಣಾಂ-ಸಿಂಹಗಳಿಂದ, ಗುಹೇವ-ಗುಹೆಯಂತೆ, ಸಂಪೂರ್ಣಾ-ತುಂಬಿದ್ದು, (ಅಭೂತ್-ಆಯಿತು,) || ೨೧ || ಕಾಂಭೋಜವಿಷಯೆ-ಕಾಂಭೋಜದೇಶದಲ್ಲಿ, ಜಾತೈಃ-ಹುಟ್ಟಿರುವ, ಬಾಹ್ಲೀಕೈಃ-ಬಾಹ್ಲೀಕದೇಶದಲ್ಲಿ ಹುಟ್ಟಿರುವ, ವನಾಯುಜೈಃ-ವನಾಯುಜ ದೇಶೀಯಗಳಾದ, ನದೀಜೈಶ್ಚ-ಸಿಂಧುದೇಶೋದ್ಭವಗಳೂ ಆದ, ಹರಿಹಯೋತ್ತಮೈಃ, ಹರಿಹಯ - ಉಚ್ಚೈಶ್ರವಸ್ಸೆಂಬ ಇಂದ್ರನ ಕುದುರೆಯೋಪಾದಿಯಲ್ಲಿ, ಉತ್ತಮೈಃ-ಉತ್ತಮವಾದ, ಹಯೋತ್ತಮೈಶ್ಚ-ಅಶ್ವಶ್ರೇಷ್ಠಗಳಿಂದಲೂ,

---

ಕ್ಷತ್ರಿಯರು ಬ್ರಾಹ್ಮಣರನ್ನನುಸರಿಸುತಿದ್ದರು; ವೈಶ್ಯರು ಕ್ಷತ್ರಿಯರನ್ನು ಹಿಂಬಾಲಿಸತಿದ್ದರು; ಶೂದ್ರರು ಬ್ರಹ್ಮ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರನ್ನು ಉಪಚರಿಸುತಿದ್ದರು; ಹೀಗೆ ನಾಲ್ಕು ವರ್ಣದವರೂ ಆಯಾ ವರ್ಣಧರ್ಮಗಳನ್ನು ಎಡೆಬಿಡದೆ ಮಾಡುತ್ತ ನಿರಂತರವೂ ಧರ್ಮನಿರತರಾಗಿದ್ದರು. || ೧೯ || ಹೆಚ್ಚೇನು ! ಆ ಅಯೋಧ್ಯಾ ಪಟ್ಟಣವು ಬಹು ತಿಳಿವಳಿಕೆಯುಳ್ಳ ಮಾನವೇಂದ್ರನೂ, ಹಿಂದಿನ ರಾಜನೂ, ಆದ ಮನುಚಕ್ರವರ್ತಿಯಿಂದ ಹೇಗೆ ಪಾಲಿತವಾಗಿದ್ದಿತೋ, ಹಾಗೆಯೇ ಇಕ್ಷ್ವಾಕು ನಾಥನಾದ ದಶರಥರಾಯನಿಂದಲೂ ಪಾಲಿತವಾಗಿದ್ದಿತು. || ೨೦ || ಇಷ್ಟೆಯಲ್ಲದೆ ಆ ನಗರಿಯು ಅಗ್ನಿಸಮಾನರೂ, ಕುಶಲರೂ, ತೇಜಸ್ವಿಗಳೂ, ಆದ ಭಟರಿಂದೊಡಗೂಡಿ ಸಿಂಹವ್ಯಾಪ್ತವಾದ ಗುಹೆಯಂತೆ ಹೊಗಲಸದಳವೂ ಆಗಿದ್ದಿತು. || ೨೧ || ಕಾಂಭೋಜ, ಬಾಹ್ಲೀಕ, ವನಾಯುಜ, ಸಿಂಧು, ಮೊದಲಾದ ಧೇಶಗಳಲ್ಲಿ ಹುಟ್ಟಿದ ಶ್ರೇಷ್ಠವಾದ ಕುದುರೆಗಳು, ಇಂದ್ರನ ಉಚ್ಚೈಶ್ರವಸ್ಸಿ

ಹರಿಹಯೋತ್ತಮೈಃ ॥೨೨॥ ವಿಂಧ್ಯಪರ್ವತಜೈರ್ಮತ್ತೈಃ ಪೂರ್ಣಾಹೈಮವತೈರಪಿ॥ ಮದಾನ್ವಿತೈರತಿಬಲೈರ್ಮಾತಂಗೈಃ ಪರ್ವತೋಪಮೈಃ॥ಐರಾವತಕುಲೀನೈಶ್ಚ ಮಹಾಪದ್ಮಕುಲೈಸ್ತಥಾ ॥ ಅಂಜನಾದಪಿ ನಿಷ್ಪನ್ನೈರ್ವಾಮನಾದಪಿಚದ್ವಿಪೈಃ ॥ ೨೩ ॥ ಭದ್ರೈರ್ಮಂದ್ರೈರ್ಮೃಗೈಶ್ಚೈವ ಭದ್ರಮಂದ್ರ

॥೨೨॥ ವಿಂಧ್ಯಪರ್ವತಜೈಃ-ವಿಂಧ್ಯಪರ್ವತದಲ್ಲಿ ಹುಟ್ಟಿರುವ, ಮತ್ತೈಃ-ಮದವೇರಿದ,ಮಾತಂಗೈಃ-ಆನೆಗಳಿಂದಲೂ, ಮದಾನ್ವಿತೈಃ ಮದದಿಂದ ಕೂಡಿ ಕೊಂಡಿರುವ, ಅತಿಬಲೈಃ-ಮಹಾಬಲಿಷ್ಠಗಳಾದ, ಪರ್ವತೋಪಮೈಃ - ಪರ್ವತಸದೃಶಗಳಾದ, ಹೈಮವತೈರಪಿ ಹಿಮವತ್ಪರ್ವತದಲ್ಲಿ ಹುಟ್ಟಿದ ಆನೆಗಳಿಂದಲೂ, ಐರಾವತಕುಲೀನೈಶ್ಚ-ಐರಾವತ ವಂಶೋತ್ಪನ್ನಗಳಾದ ಆನೆಗಳಿಂದಲೂ,ತಥಾ-ಹಾಗೆಯೇ, ಮಹಾಪದ್ಮಕುಲೈಃ - ಪುಂಡರೀಕವೆಂಬ ದಿಗ್ಗಜದ ಕುಲವುಳ್ಳ ಗಜಗಳಿಂದಲೂ, ಅಂಜನಾದಪಿ ಅಂಜನವೆಂಬ ವರುಣನ ದಿಗ್ಗಜದ ದೆಶೆಯಿಂದಲೂ, ವಾಮನಾದಪಿ - ವಾಮನವೆಂಬ ಯಮನ ದಿಗ್ಗಜದ ದೆಶೆಯಿಂದಲೂ, ನಿಷ್ಪನ್ನೈಃ - ಹುಟ್ಟಿರುವ, ದ್ವಿಪೈಶ್ಚ - ಆನೆಗಳಿಂದಲೂ, (ಸಾ-ಆ ಅಯೋಧ್ಯಾಪಟ್ಟಣವು,) ಪೂರ್ಣಾ-ತುಂಬಿದುದು, ಆಸೀತ್-ಆಯಿತು. ॥ ೨೩ ॥ ಸಾಪುರೀ - ಆ ಅಯೋಧ್ಯಾಪಟ್ಟಣವು, (೧) ಭದ್ರೈಃ-ಭದ್ರಜಾತೀಯಗಳಿಂದಲೂ, ಮಂದ್ರೈಃ-ಮಂದ್ರಜಾತೀಯವಾದ ಗಜಗಳಿಂದಲೂ, ಮೃಗೈಶ್ಚ - ಮೃಗಜಾತೀಯವಾದ ಗಜಗಳಿಂದಲೂ, ಭದ್ರಮಂದ್ರಮೃಗೈಃ-

ನಂತೆ ಬೆಳಗುತ್ತಾ ಆ ಪಟ್ಟಣದಲ್ಲಿ ಸಂಪೂರ್ಣವಾಗಿದ್ದವು. ಮತ್ತಾ ಅಯೋಧ್ಯೆಯು ವಿಂಧ್ಯಪರ್ವತ, ಹಿಮವತ್ಪರ್ವತಗಳಲ್ಲಿ ಹುಟ್ಟಿದ ಮದ್ದಾನೆಗಳಿಂದಲೂ, ದಿಗ್ಗಜಗಳಿಂದಲೂ, "ವಾಮನ"ನೆಂಬ ಯಮನ ದಿಗ್ಗಜದಿಂದಲೂ, "ಐರಾವತ. ಪುಂಡರೀಕ"ಗಳೆಂಬ ದಿಗ್ಗಜಗಳಿಂದಲೂ ಹುಟ್ಟಿದ ಆನೆಗಳಿಂದ ತುಂಬಿದುದಲ್ಲದೆ, ಭದ್ರ, ಮಂದ್ರ, ಮೃಗಗಳೆಂಬ ಆನೆಗಳಿಂದಲೂ, ಇವುಗಳ ಪ್ರಮಾಣವುಳ್ಳ ಮದ್ದಾನಗಳಿಂದಲೂ, ಮೃಗ ಮಂದ್ರಗಳೆಂಬ ಸಂಕರ

ಟಿ॥ (೧) ಅಂದರೆ, ಭದ್ರ, ಮಂದ್ರ, ಮೃಗಗಳೆಂಬುದಾಗಿ ಮೂರು ವಿಧವಾದ ಗಜಭೇದಗಳು, ಅದರ ಲಕ್ಷಣವೇನೆಂದರೆ,– ಶ್ಲೋ ॥ ಪಂಚೋನ್ನತಂ ಸಪ್ತಮೃಗಸ್ಯದೈರ್ಘ್ಯ ಮಷ್ಟೌಚಹಸ್ತಾಃ ಪರಿಣಾಹಮಾನಂ । ಏಕದ್ವಿವೃದ್ಧಾವಥಮಂದ್ರಭದ್ರೌಸಂಕೀರ್ಣನಾಗೋ ನಿಯತಪ್ರಮಾಣಃ ॥ ಎಂಬಂತೆ ಐದು ಹಸ್ತ ಪ್ರಮಾಣವಾದ ಔನ್ನತ್ಯವೂ, ಏಳು ಹಸ್ತ ಪರಿಮಿತವಾದ ದೈರ್ಘ್ಯವೂ, ಎಂಟು ಹಸ್ತ ಪ್ರಮಾಣವಾದ ವಿಸ್ತಾರವೂ ಉಳ್ಳ ಗಜಕ್ಕೆ ಮೃಗವೆಂದು ಹೆಸರು. ಈ ಮೃಗವೆಂಬ ಗಜಕ್ಕಿಂತಲೂ, ಏಕಹಸ್ತಪ್ರಮಾಣವು ಅಧಿಕವಾಗಿದ್ದಲ್ಲಿ ಮಂದ್ರಗಜವೆನ್ನಿಸಿಕೊಳ್ಳುವದು. ಮಂದ್ರಜಾತೀಯವಾದ ಗಜಕ್ಕಿಂತಲೂ, ದ್ವಿಹಸ್ತಪ್ರಮಾಣ ಹೆಚ್ಚಾಗಿ ಇದ್ದಲ್ಲಿ ಭದ್ರವಾಗುವುದು ಭದ್ರವೆಂಬ ಗಜಕ್ಕಿಂತಲೂ, ಮೂರು ಹಸ್ತಪ್ರಮಾಣ ಹೆಚ್ಚಾಗಿ ಇದ್ದಲ್ಲಿ ಭದ್ರಮಂದ್ರ ಮೃಗವನ್ನಿಸಿಕೊಳ್ಳುವುದು ಭದ್ರಮಂದ್ರವೆಂದರೆ, ಭದ್ರಜಾತೀಯವಾದ ಪುರುಷಗಜದಿಂದ ಮಂದ್ರಜಾತೀಯವಾದ ಸ್ತ್ರೀಗಜದಲ್ಲಿ ಹುಟ್ಟಿದ ಸಂಕರಜಾತೀಯವಾದ ಗಜವು. ಹೀಗೆಯೇ ಭದ್ರಮೃಗವೂ, ಮೃಗಭದ್ರವೂ, ಸಂಕರಜಾತೀಯ ಗಜಗಳೆಂಬುದಾಗಿ ತಿಳಿಯತಕ್ಕದು. ಇಂತಹ ಗಜಗಳಿಂದಲೂ, ಮತ್ತೂ ಇತರ ಗಜಗಳಿಂದಲೂ, ಕೂಡ ತುಂಬಿದ್ದಾಗಿತ್ತು,

ಮೃಗೈಸ್ತಥಾ|| ಭದ್ರಮಂದ್ರೈ ರ್ಭದ್ರಮೃಗೈ ರ್ಮೃಗಮಂದ್ರೈಶ್ಚಸಾಪುರೀ||
ನಿತ್ಯಮತ್ತೈಸ್ಸದಾಪೂರ್ಣಾ ನಾಗೈರಚಲಸನ್ನಿಭೈಃ ||೨೫|| ಸಾಯೋಜನೇಚ
ದ್ವೇಭೂಯ ಸ್ಸತ್ಯನಾಮಾ ಪ್ರಕಾಶತೇ || ಯಸ್ಯಾಂ ದಶರಥೋ ರಾಜಾ ವಸನ್
ಜಗದಪಾಲಯತ್ ||೨೬|| ತಾಂ ಪುರೀಂ ಸ ಮಹಾತೇಜಾ ರಾಜಾ ದಶರಥೋ
ಮಹಾನ್ || ಶಶಾಸಶಮಿತಾಮಿತ್ರೋ ನಕ್ಷತ್ರಾಣೀವ ಚಂದ್ರಮಾಃ ||೨೭||

ಭದ್ರ,ಮಂದ್ರ,ಮೃಗಗಳೆಂಬ ಗಜವಿಶೇಷಗಳಿಂದಲೂ, ಭದ್ರಮಂದ್ರೈಃ-ಭದ್ರಮಂದ್ರಗಳೆಂಬ ಸಂಕರ ಜಾತಿಗಳಿಂದಲೂ, ಭದ್ರಮೃಗೈಃ – ಭದ್ರಮೃಗಗಳೆಂಬ ಗಜವಿಶೇಷಗಳಿಂದಲೂ, ಮೃಗಮಂದ್ರೈಃ ಮೃಗ, ಮಂದ್ರಗಳೆಂಬ ಸಂಕರಜಾತಿಯಲ್ಲಿ ಹುಟ್ಟಿದ ಗಜವಿಶೇಷಗಳಿಂದಲೂ,ನಿತ್ಯಮತ್ತೈಃ- ನಿರಂತರವೂ ಮದವೇರಿದ, ಅಚಲಸನ್ನಿಭೈಃ-ಬೆಟ್ಟ ಸಮಾನಗಳಾದ, ನಾಗೈಃ - ಆನೆಗಳಿಂದಲೂ, ಸದಾ-ಸರ್ವಕಾಲದಲ್ಲಿಯೂ, ಪೂರ್ಣಾ- ತುಂಬದಂಥಾದ್ದಾಗಿತ್ತು, ||೨೫|| ಸಾ ಆ ಅಯೋಧ್ಯಾಪಟ್ಟಣವು, ದ್ವೇಯೋಜನೆ-ಎರಡು ಗಾವುದವುಳ್ಳ ಬಾಹ್ಯಪ್ರದೇಶದಲ್ಲ, ಭೂಯಃ-ಮತ್ತು, ಸತ್ಯನಾಮಾ-ಯುದ್ಧಮಾಡುವದಕ್ಕೆ ಅಸಾಧ್ಯವಾದ್ದಂದು ಅನ್ವರ್ಥನಾಮವುಳ್ಳದ್ದಾಗಿ, ಪ್ರಕಾಶತೆ-ಹೊಳೆಯುತ್ತಿರುತ್ತೋ, ಯಸ್ಯಾಂ - ಯಾವ ಪಟ್ಟಣದಲ್ಲಿ, ದಶರಥಃ – ದಶರಥನೆಂಬ, ರಾಜಾ-ಅರಸು, ವಸನ್ ಇರುತ್ತ, ಜಗತ-ಭೂಲೋಕವನ್ನು, ಅಪಾಲಯತ್ ಪರಿಪಾಲನೆ ಮಾಡಿದನೋ ||೨೬|| ಮಹಾನ್ ಮಹಾತ್ಮನಾದ, ಶಮಿತಾಮಿತ್ರಃ, ಶಮಿತ-ಶಾಂತಿಹೊಂದಿಸಲ್ಪಟ್ಟ, ಅಮಿತ್ರಃ-ಶತ್ರುಗಳುಳ್ಳ, ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ಸದಶರಥೋರಾಜಾ - ಆ ದಶರಥ ಮಹಾರಾಯನು, ತಾಂ ಪುರೀಂ-ಆ ಪಟ್ಟಣವನ್ನು, ನಕ್ಷತ್ರಾಣಿ-ನಕ್ಷತ್ರಗಳನ್ನು, ಚಂದ್ರಮಾ ಇವ-ಚಂದ್ರನಂತೆ, ಶಶಾಸ-ಪರಿಪಾಲನೆ ಮಾಡಿದನು. ||೨೭|| ಶಕ್ರಸಮಃ - ಇಂದ್ರನಿಗೆ ಸಮಾನನಾದ, ಮಹೀಪತಿಃ – ದಶರಥ ಮಹಾರಾಯನು, ದೃಢತೋರಣಾರ್ಗಳಾಂ,ದೃಢ-ದೃಢವಾದ, ತೋರಣಾರ್ಗಳಾಂ-ಹೊರಬಾಗಲುಂಡಿಗೆಗಳುಳ್ಳ, ವಿಚಿತ್ರೈಃ ಆಶ್ಚರ್ಯಕರಗಳಾದ, ಗೃಹೈಃ-ಮನೆಗಳಿಂದ, ಉಪಶೋಭಿತಾಂ – ಪ್ರಕಾಶಮಾನವಾದ, ಶಿವಾಂ-ಶುಭಕರವಾದ, ನೃಸಹಸ್ರಸಂಕುಲಾಂ,ನೃಸಹಸ್ರ ಅನೇಕ ಸಹಸ್ರಸಂಖ್ಯೆಯುಳ್ಳ

ಜಾತಿಯ ಆನೆಗಳಿಂದಲೂ, ಭದ್ರಮೃಗಗಳಿಂದಲೂ, ಪರ್ವತವನ್ನನುಸರಿಸುವ ಗಜಶ್ರೇಷ್ಠಗಳಿಂದಲೂ, ನಿಬಿಡೀಕೃತವಾಗಿದ್ದಿತು. ||೨೨ ೨೫|| ಇಂತಿರುವ ಈ ನಗರದಲ್ಲಿ ದಶರಥರಾಯನು ರಾಜ್ಯಭಾರ ಮಾಡುತ್ತಿರಲು, ಶತ್ರುರಾಜರು ಯುದ್ಧಮಾಡಲಸದಳವಾಗಿದ್ದಿತು. ಹೀಗಿದ್ದುದರಿಂದಲೇ ಆ ಪಟ್ಟಣವು "ಅಯೋಧ್ಯೆ" ಎಂದು ಹೆಸರುಗೊಂಡಿದ್ದಿತು. ಲೋಕಕ್ಕೆ ಆನಂದವನ್ನೆಸಗುವ ಚಂದ್ರನು ಎಲ್ಲ ನಕ್ಷತ್ರಗಳನ್ನೂ ಸ್ವಾಧೀನಪಡಿಸಿಕೊಂಡಿರುವಂತೆ ದಶರಥನು ಶತ್ರುರಾಜರನ್ನು ಸ್ವಾಧೀನ ಪಡಿಸಿಕೊಂಡು, ದೃಢವಾದ ತೋರಣಗಳಿಂದಲೂ, ಲಾಳವಿಂಡಿಗೆಗಳೂ, ಚಿತ್ರವಿಚಿತ್ರವಾದ ಮನೆಗಳೂ, ಇವುಗಳಿಂದತಿಶಯವಾಗಿ ಒಪ್ಪುತ್ತಿರು

ತಾಂ ಸತ್ಯನಾಮಾಂ ದೃಢತೋರಣಾರ್ಗಳಾಂ ಗೃಹೈರ್ವಿಚಿತ್ರೈರುಪಶೋಭಿತಾಂ ಶಿವಾಂ । ಪುರೀಮಯೋಧ್ಯಾಂ ನೃಸಹಸ್ರಸಂಕುಲಾಂ ಶಶಾಸವೈ ಶಕ್ರಸಮೋ ಮಹೀಪತಿಃ ||೨೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಠಸ್ಸರ್ಗಃ.



ಮನುಷ್ಯರಿಂದ, ಸಂಕುಲಾಂ-ವ್ಯಾಪ್ತವಾದ, ಸತ್ಯನಾಮಾಂ ಅನ್ವರ್ಥನಾಮಧೇಯವುಳ್ಳ, ತಾಮಯೋಧ್ಯಾಂಪುರೀಂ-ಆ ಅಯೋಧ್ಯಾಪಟ್ಟಣವನ್ನು, ಶಶಾಸ-ಪರಿಪಾಲಿಸಿದನು. ||೨೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಠಸ್ಸರ್ಗಃ.



ದೂ, ಮಂಗಳೋಪಯುಕ್ತರಾದ ಸಹಸ್ರಾರು ಜನಭರಿತವಾದುದೂ, ಹೆಸರಿಗೆ ತಕ್ಕಂತಿರುವುದೂ ಆದ ಆ ಅಯೋಧ್ಯೆಯನ್ನು ದೇವೇಂದ್ರನಿಗೆ ಸಮನಾದ ದಶರಥ ರಾಜನು ಪಾಲಿಸುತ್ತಿದ್ದನು. ||೨೬-೨೮||

ಇಂತಿದು ದಶರಥ ರಾಜ್ಯವರ್ಣನವೆಂಬ ಆರನೆಯ ಸರ್ಗವು

ಸಮಾಪ್ತವಾದುದು.

—(***)—

# ಬಾಲಕಾಂಡೇ ಸಪ್ತಮಸ್ಸರ್ಗಃ.

ತಸ್ಯಾಮಾತ್ಯಾ ಗುಣೈರಾಸನ್ನಿಕ್ಷ್ವಾಕೋಸ್ತು ಮಹಾತ್ಮನಃ । ಮಂತ್ರಜ್ಞಾ
ಶ್ಚೇಂಗಿತಜ್ಞಾಶ್ಚ ನಿತ್ಯಂ ಪ್ರಿಯಹಿತೇ ರತಾಃ ||೧|| ಅಷ್ಟೌಬಭೂವುರ್ವೀರಸ್ಯ
ತಸ್ಯಾಮಾತ್ಯಾ ಯಶಸ್ವಿನಃ । ಶುಚಯಶ್ಚಾನುರಕ್ತಾಶ್ಚ ರಾಜಕೃತ್ಯೇಷು
ನಿತ್ಯಶಃ || ೨ || ಧೃಷ್ಟಿರ್ಜಯಂತೊ ವಿಜಯ ಸ್ಸಿದ್ಧಾರ್ಥೋ ಹ್ಯರ್ಥಸಾಧಕಃ ।
ಅಶೋಕೋಮಂತ್ರಪಾಲಶ್ಚ ಸುಮಂತ್ರಶ್ಚಾಷ್ಟಮೋಽಭವತ್ ||೩|| ಋತ್ವಿಜೌ
ದ್ವಾವಭಿಮತೌ ತಸ್ಯಾಸ್ತಾಮೃಷಿಸತ್ತಮೌ । ವಸಿಷ್ಠೋ ವಾಮದೇವಶ್ಚ
ಮಂತ್ರಿಣಶ್ಚ ತಥಾಪರೇ || ೪ || ವಿದ್ಯಾವಿನೀತಾ ಹ್ರೀಮಂತಃ ಕುಶಲಾ ನಿಯ

ಮಹಾತ್ಮನಃ-ಮಹಾಮನಸ್ವಿಯಾದ, ಇಕ್ಷ್ವಾಕೋಃ- ಇಕ್ಷ್ವಾಕುವಂಶೋತ್ಪನ್ನನಾದ, ತಸ್ಯ-ಆ ದಶರಥಮಹಾರಾಯನಿಗೆ, ನಿತ್ಯಂ - ನಿರಂತರದಲ್ಲಿಯೂ, ಪ್ರಿಯಹಿತೇ, ಪ್ರಿಯ-ಮನಃ ಪೂರ್ವಕ ಪ್ರೇಮದಲ್ಲಿಯೂ, ಹಿತೇ-ಇಷ್ಟವಾದ ವಚನದಲ್ಲಿಯೂ, ರತಾಃ-ಆಸಕ್ತರಾದ, ಗುಣೈಃ-ಗುಣಗಳಿಂದ, ಮಂತ್ರಜ್ಞಾಶ್ಚ - ರಾಜಕಾರ್ಯವಿಚಾರರೂಪವಾದ ಮಂತ್ರವನ್ನು ತಿಳಿದಿರುವ, ಇಂಗಿತಜ್ಞಾಶ್ಚ-ಮುಖ ವಿಕಾರಾದಿ ಚಿಹ್ನಗಳಿಂದ ಪರಾಭಿಪ್ರಾಯವನ್ನು ತಿಳಿದವರಾದ, ಅಮಾತ್ಯಾಃ-ಮಂತ್ರಿಗಳು, ಆಸನ್-ಇದ್ದರು ||೧|| ವೀರಸ್ಯ-ಶೂರನಾದ, ಯಶಸ್ವಿನಃ-ಕೀರ್ತಿವಂತನಾದ, ತಸ್ಯ-ಆ ದಶರಥರಾಜನಿಗೆ, ರಾಜಕೃತ್ಯೇಷು - ರಾಜಕಾರ್ಯಗಳಲ್ಲಿ, ನಿತ್ಯಶಃ-ನಿರಂತರವೂ, ಅನುರಕ್ತಾಶ್ಚ- ಅನುರಕ್ತರಾದ, ಶುಚಯಶ್ಚ - ಸ್ವಾಮಿದ್ರೋಹಾದಿ ದೋಷರಹಿತರಾದ, ಅಷ್ಟೌ ಅಮಾತ್ಯಾಃ - ಎಂಟುಜನ ಮಂತ್ರಿಗಳು, ಬಭೂವುಃ-ಆದರು || ೨ || ಧೃಷ್ಟಿಃ- ಧೃಷ್ಟಿಯೆಂಬುವನು, ಜಯಂತಃ ಜಯಂತನು ವಿಜಯಃ - ವಿಜಯನು, ಸಿದ್ಧಾರ್ಥಃ - ಸಿದ್ಧಾರ್ಥನು, ಅರ್ಥಸಾಧಕಃ - ಅರ್ಥಸಾಧಕನು, ಅಶೋಕಃ - ಅಶೋಕನು, ಮಂತ್ರಪಾಲಶ್ಚ-ಮಂತ್ರಪಾಲನು, ಸುಮಂತ್ರಶ್ಚ- ಸುಮಂತ್ರನೆಂಬವನೂ ಸಹ, ಅಷ್ಟಮಃ - ಎಂಟನೆಯವನು, ಅಭವತ್-ಆದನು, || ೩ || ತಸ್ಯ-ಆ ದಶರಥಮಹಾರಾಯನಿಗೆ, ಋಷಿಸತ್ತಮೌ - ಋಷಿಶ್ರೇಷ್ಠರಾದ, ವಸಿಷ್ಠಃ- ವಸಿಷ್ಠನು, ವಾಮದೇವಶ್ಚ - ವಾಮದೇವನೆಂಬ ಋಷಿಯು, ಅಭಿಮತೌ-ಇಷ್ಟರಾದ, ದ್ವೌ-ಇಬ್ಬರೂ, ಋತ್ವಿಜೌ-ಪುರೋಹಿತರು ಆಸ್ತಾಂ-ಇದ್ದರು, ತಥಾ-ಹಾಗೆಯೇ, ಅಪರೇ-ಜಾಬಾಲಿ ಪ್ರಭೃತಿಗಳಾದ ಮತ್ತು ಕೆಲವರು,||೪|| ವಿದ್ಯಾವಿನೀತಾ , ವಿದ್ಯಾ-ನೀತಿಶಾಸ್ತ್ರವೇ ಮೊದಲಾದ ವಿದ್ಯೆಗಳಲ್ಲಿ, ವಿನೀತಾಃ-ಶಿಕ್ಷಿತರಾದ, ಹ್ರೀಮಂತಃ-ಅವಿಹಿತ ಕಾರ್ಯಗಳಲ್ಲಿ ಲಜ್ಜಾಯುಕ್ತರಾದ,

---

ಮಹಾತ್ಮನೂ, ಇಕ್ಷ್ವಾಕು ವಂಶೋತ್ಪನ್ನನೂ, ಆದ ಆ ದಶರಥನು ರಾಜ್ಯವನ್ನಾಳುತ್ತಿರಲು, ಆತನಿಗೆ ಹಿತಚಿಂತಕರೂ, ಆತನ ಇಂಗಿತವನ್ನರಿತವರೂ, ಹಿತರೂ, ಮತ್ತು ಇಷ್ಟರೂ, ಮಂತ್ರಜ್ಞರೂ, ಪರಿಶುದ್ಧರೂ, ರಾಜಕಾರ್ಯಪ್ರಸಕ್ತರೂ ಆದ ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧಕ, ಅಶೋಕ, ಮಂತ್ರಪಾಲ, ಸುಮಂತ್ರರೆಂಬ ಎಂಟು ಮಂದಿ ಮಂತ್ರಿಗಳಿದ್ದರು. ಇದಲ್ಲದೆ ಋಷಿಶ್ರೇಷ್ಠರಾದ ವಸಿಷ್ಠ, ವಾಮದೇವರೇ ಈತನ ಋತ್ವಿಜರಾಗಿದ್ದರು. ಇವರಲ್ಲದೆ ಜಾಬಾಲಿಯೇ ಮುಂತಾದವರೂ, ಋತ್ವಿಜರಲ್ಲಿ ಸೇರಿದ್ದರು.

ತೇಂದ್ರಿಯಾಃ॥ಶ್ರೀಮಂತಶ್ಚ ಮಹಾತ್ಮಾನ ಶ್ಶಾಸ್ತ್ರಜ್ಞಾ ದೃಢವಿಕ್ರಮಾಃ॥೫॥ ಕೀರ್ತಿಮಂತಃ ಪ್ರಣಿಹಿತಾ ಯಥಾ ವಚನಕಾರಿಣಃ ॥ ತೇಜಃ ಕ್ಷಮಾಯಶಃ ಪ್ರಾಪ್ತಾಃ ಸ್ಮಿತಪೂರ್ವಾಭಿಭಾಷಿಣಃ ॥ ೬ ॥ ಕ್ರೋಧಾ ತ್ಕಾಮಾರ್ಥ ಹೇತೋರ್ವಾ ನಬ್ರೂಯುರನೃತಂ ವಚಃ ॥ ತೇಷಾಮವಿದಿತಂ ಕಿಂಚಿ ತ್ಸ್ವೇಷುನಾಸ್ತಿ ಪರೇಷುವಾ ॥ ೭ ॥ ಕ್ರಿಯಮಾಣಂ ಕೃತಂ ವಾಪಿ ಚಾರೇಣಾಪಿ ಚಿಕೀರ್ಷಿತಂ॥ ಕುಶಲಾವ್ಯವಹಾರೇಷು ಸೌಹೃದೇಷು ಪರೀಕ್ಷಿತಾಃ ॥ ೮॥ ಪ್ರಾಪ್ತಕಾಲಂತು ತೇದಂಡಂ ಧಾರಯೇ ಯುಸ್ಸುತೇಷ್ವಪಿ॥ ಕೋಶಸಂಗ್ರಹಣೇಯುಕ್ತಾ ಬಲ

---

ಕುಶಲಾಃ-ಕ್ಷೇಮಕರರಾದ, ಅಥವಾ, ಕುಶಲಾಃ ಚತುರರಾದ,ನಿಯತೇಂದ್ರಿಯಾಃ-ಜಿತೇಂದ್ರಿಯರಾದ, ಶ್ರೀಮಂತಃ - ಲಕ್ಷ್ಮೀಸಮೃದ್ಧರಾದ, ಮಹಾತ್ಮಾನಃ - ಮಹಾಬುದ್ಧಿಶಾಲಿಗಳಾದ, ಶಾಸ್ತ್ರಜ್ಞಾಃ-ವೇದಾಂಗಾದಿ ಶಾಸ್ತ್ರಜ್ಞರಾದ, ದೃಢವಿಕ್ರಮಾಃ, ದೃಢ-ಅಪ್ರತಿಹತವಾದ, ವಿಕ್ರಮಾಃ - ಪರಾಕ್ರಮವುಳ್ಳ, ॥೫॥ಕೀರ್ತಿಮಂತಃ-ಯಶೋವಂತರಾದ, ಪ್ರಣಿಹಿತಾಃ-ರಾಜ್ಯಕಾರ್ಯಗಳಲ್ಲಿ ಪ್ರಮಾದರಹಿತರಾದ, ಯಥಾವಚನಕಾರಿಣಃ-ಅರಸಿನಮಾತಿನಂತೆ ಕಾರ್ಯಗಳನ್ನು ನಡಿಸುವವರಾದ, ತೇಜಃ ಕ್ಷಮಾಯಶಃ ಪ್ರಾಪ್ತಾಃ, ತೇಜಃ- ಬ್ರಹ್ಮತೇಜಸ್ಸಿನಿಂದಲೂ, ಕ್ಷಮಾ - ಕ್ಷಾಂತಿಯಿಂದಲೂ ಹುಟ್ಟಿದ, ಯಶಃ-ಕೀರ್ತಿಯನ್ನು, ಪ್ರಾಪ್ತಾಃ ಪಡೆದಿರುವ,ಸ್ಮಿತಪೂರ್ವಾಭಿಭಾಷಿಣಃ,ಸ್ಮಿತಪೂರ್ವ- ಮುಗುಳುನಗೆಯುಳ್ಳಂತೆಯೇ,ಅಭಿಭಾಷಿಣಃ-ಮಾತನ್ನು ನುಡಿಯುತ್ತಿರುವ, ಮಂತ್ರಿಣಃ-ಮಂತ್ರಿಗಳು,(ಆಸರ್ - ಇದ್ದರು.)॥೬॥ ಕ್ರೋಧಾತ್ - ಕೋಪದಿಂದಾಗಲಿ, ಕಾಮಾರ್ಥಹೇತೋರ್ವಾ - ಕಾಮದಿಂದಲಾಗಲಿ ಹಣದಿಂದಾಗಲಿ, ಅನೃತಂವಚಃ ಸುಳ್ಳುಮಾತುಗಳನ್ನು,ನಬ್ರೂಯುಃ-ನುಡಿಯುವವರಲ್ಲ,ಸ್ವೇಷು-ಸ್ವಕೀಯರಲ್ಲಾಗಲಿ, ಪರೇಷುವಾ-ಇತರರಲ್ಲಿ ಆಗಲಿ, ಕಿಂಚಿತ್-ಯಾವಕಾರ್ಯವಾದರು,ತೇಷಾಂ-ಅವರಿಗೆ,ಅವಿದಿತಂ-ತಿಳಿಯಲ್ಪಡದಿರುವದು ನಾಸ್ತಿ-ಇಲ್ಲ,ಕ್ರಿಯಮಾಣಂ ಮಾಡುವದಾಗಲಿ, ಕೃತಂವಾಪಿ-ಮಾಡಿದ್ದಾಗಲಿ, ಚಾರೇಣಾಪಿ- ಸೇವಕನಿಂದಲೂ,ಚಿಕೀರ್ಷಿತಂ-ಮಾಡಲಿಚ್ಛೆಯಿದ್ದುದಾಗಲಿ, ವ್ಯವಹಾರೇಷು-ದಶಾದಾ

---

ಅನ್ವೀಕ್ಷಕೀ ಮೊದಲಾದ ವಿದ್ಯೆಗಳಲ್ಲಿ ಶಿಕ್ಷಿತರಾಗಿಯೂ, ಬುದ್ಧಿವಂತರೂ, ನೀತಿಶಾಸ್ತ್ರ ನಿಪುಣರೂ, ಜಿತೇಂದ್ರಿಯರೂ, ಐಶ್ವರ್ಯವಂತರೂ, ಬುದ್ಧಿಶಾಲಿಗಳೂ, ವೇದವೇದಾಂಗಾದಿ ಶಾಸ್ತ್ರಜ್ಞರೂ, ಮಹಾವೀರರೂ, ಕೀರ್ತಿಯುತರೂ, ಪ್ರಭು ವಾಕ್ಯವನ್ನು ಎಳ್ಳಷ್ಟೂ ಮಿೂರದವರೂ, ಬ್ರಹ್ಮತೇಜಸ್ಸನ್ನೂ,ಶಾಂತಿಯನ್ನೂ, ಯಶಸ್ಸನ್ನೂ ಪಡೆದವರೂ, ನಸುನಗೆಯಿಂದಲೇ ಮಾತನಾಡುವವರೂ ಆದ ಆ ಅಷ್ಟಮಂತ್ರಿಗಳು ಬಹಳವಾಗಿ ಬೆಳಗುತಿದ್ದರು. ॥೧ ೬॥ ಇವರು ರೋಷದಿಂದಾಗಲೀ, ಕಾಮದಿಂದಾಗಲೀ, ಅನೃತವನ್ನು ನುಡಿವವರಲ್ಲ. ಸ್ವೀಯರಲ್ಲಾಗಲೀ, ಪರಕೀಯರಲ್ಲಾಗಲಿ, ಹಿಂದೆ ನಡೆಸಿದುದಾಗಲೀ, ಮುಂದೆ ನಡಿಯತಕ್ಕದಾಗಲೀ, ಚಾರರಿಂದ ಮಾಡಿಸಬೇಕಾದುದಾಗಲೀ, ಅವರಿಗೆ ತಿಳಿಯದೆ ಇರಲಿಲ್ಲವು. ಆ ಸಚಿವಶ್ರೇಷ್ಠರು ರಾಜ್ಯಕರಣ ಕುಶಲತೆಯಲ್ಲಿ ನಿಪುಣರು ; ಮಿತ್ರಭಾವಗಳಲ್ಲಿ ಚನ್ನಾಗಿ ಪರೀಕ್ಷಿಸಲ್ಪಟ್ಟವರು; ಆದುದರಿಂದಲೇ ತಮ್ಮ ಮಕ್ಕಳಾದರೂ, ಅಪರಾಧ ಮಾಡಿದಲ್ಲಿ ಕಾಲಾನುಸಾರವಾಗಿ ಶಿಕ್ಷಿಸುತ್ತಿದ್ದರು. ॥ ೭-೮ ॥ ಭಂಡಾರವನ್ನಭಿವೃದ್ಧಿ ಮಾಡುವುದರ

ಸ್ಯೈಚ ಪರಿಗ್ರಹೇ || ೯ || ಅಹಿತಂಚಾಪಿ ಪುರುಷಂ ನವಿಹಿಂಸ್ಯುರದೂಷಕಂ || ವೀರಾಶ್ಚ ನಿಯತೋತ್ಸಾಹಾ ರಾಜಶಾಸ್ತ್ರಮನುಷ್ಠಿತಾಃ || ೧೦ || ಶುಚೀನಾಂ ರಕ್ಷಿತಾರಶ್ಚ ನಿತ್ಯಂ ವಿಷಯವಾಸಿನಾಂ||ಬ್ರಹ್ಮಕ್ಷತ್ರ ಮಹಿಂಸಂತಸ್ತೇ ಕೋಶಂ ಸಮಪೂರಯರ್ನ್||೧೧||ಸುತೀಕ್ಷ್ಣದಂಡಾ ಸ್ಸಂಪ್ರೇಕ್ಷ್ಯ ಪುರುಷಸ್ಯ ಬಲಾಬಲಂ || ಶುಚೀನಾಮೇಕಬುದ್ಧೀನಾಂ ಸರ್ವೇಷಾಂ ಸಂ ಪ್ರಜಾನತಾಂ ||೧೨|| ನಾಸೀತ್ಪು ರೇವಾರಾಷ್ಟ್ರೇವಾ ಮೃಷಾವಾದೀ ನರಃಕ್ವಚಿತ್|| ಕಶ್ಚಿನ್ನದುಷ್ಟ ಸ್ತತ್ರಾಸೀ ತ್ಪರದಾರ ರತೋನರಃ ||೧೩|| ಪ್ರಶಾಂತಂ ಸರ್ವಮೇವಾಸೀ ದ್ರಾಷ್ಟ್ರಂಪುರವ ರಂಚತತ್ || ಸುವಾಸಸ ಸ್ಸುವೇಷಾಶ್ಚ ತೇಚಸರ್ವಸುಶೀಲಿನಃ ||೧೪|| ಹಿತಾ

ನಾದಿವ್ಯವಹಾರಗಳಲ್ಲಿ,ಕುಶಲಾಃ-ಸಮರ್ಥರಾದ,ಸೌಹೃದೇಷು-ಮಿತ್ರಭಾವಗಳಲ್ಲಿ, ಪರೀಕ್ಷಿತಾಃ-ವಿಮ ರ್ಶಿಸಲ್ಪಟ್ಟ,||೮||ತೇ-ಆ ಮಂತ್ರಿಗಳು, ಪ್ರಾಪ್ತಕಾಲಂತು,ಪ್ರಾಪ್ತ ಉಪಸ್ಥಿತವಾದ, ಕಾಲಂತು ಕಾಲ ವುಳ್ಳ,ದಂಡಂ-ಶಿಕ್ಷೆಯನ್ನು, ಸುತೇಷ್ವಪಿ=ಮಕ್ಕಳಲ್ಲಿಯೂ, ಧಾರಯೇಯುಃ- ಮಾಡುವರು, ಕೋಶ ಸಂಗ್ರಹಣೆ, ಕೋಶ-ಧನಕೋಶದ, ಸಂಗ್ರಹಣೇ-ಅಭಿವೃದ್ಧಿಗೊಳಿಸುವದರಲ್ಲ, ಬಲಸ್ಯ-ಸೈನ್ಯದ,ಪರಿಗ್ರ ಹೇಚ-ಕಟ್ಟುವದರಲ್ಲಿಯೂ, ಯುಕ್ತಾಃ-ಯುಕ್ತಿಶಾಲಗಳಾದ ಆ ಮಂತ್ರಿಗಳು,||೯||ಅಹಿತಂ- ಇಷ್ಟನಲ್ಲ ದಿರುವ, ಅದೂಷಕಂ- ಅನಪರಾಧಿಯಾದ, ಪುರುಷಂಚಾಪಿ - ಪುರುಷನನ್ನು ಕೂಡ, ನವಿಹಿಂಸ್ಯುಃ- ಹಿಂಸೆಮಾಡುವವರಲ್ಲ, ವೀರಾಶ್ಚ - ಶೂರರಾದ, ನಿಯತೋತ್ಸಾಹಾಃ - ನಿಯಮದಿಂದಿರುವ ಉತ್ಸಾಹ ಶಕ್ತಿಯುಳ್ಳ, ರಾಜಶಾಸ್ತ್ರಂ-ನೀತಿಶಾಸ್ತ್ರವನ್ನು,ಅನುಷ್ಠಿತಾಃ- ಅನುಷ್ಠಾನಮಾಡುತ್ತಿರುವ, || ೧೦ || ವಿಷಯವಾಸಿನಾಂ- ದೇಶದಲ್ಲಿಯೇ ಇರುವ, ಶುಚೀನಾಂ - ತ್ರಿಕರಣಶುದ್ಧಿಯುಳ್ಳ ಬ್ರಾಹ್ಮಣಾದಿಗ ಳಿಗೆ, ನಿತ್ಯಂ-ನಿರಂತರವೂ, ರಕ್ಷಿತಾರಶ್ಚ- ಪಾಲನ ಕರ್ತರಾಗಿಯೂ ಇರುವ, ತೇ - ಆ ಮಂತ್ರಿಗಳು, ಬ್ರಹ್ಮಕ್ಷತ್ರಂ-ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ, ಅಹಿಂಸಂತಃ - ಹಿಂಸೆಮಾಡದೆ, ಕೋಶಂ-ಖಜಾನೆ ಯನ್ನು, ಅಪೂರಯರ್ನ್- ತುಂಬಿಸಿದರು ||೧೧|| ಪುರುಷಸ್ಯ-ಪುರುಷನ, ಬಲಾಬಲಂ-ಬಲದೌರ್ಬಲ್ಯಗಳ ನ್ನು,ಸಂಪ್ರೇಕ್ಷ್ಯ-ಕಂಡು, ಸುತೀಕ್ಷ್ಣದಂಡಾಃ-ಕ್ರೂರವಾದಶಿಕ್ಷೆಯುಳ್ಳವರಾಗಿ, ಶುಚೀನಾಂ-ನಿರ್ಮಲ ಚಿತ್ತರಾದ, ಸಂಪ್ರಜಾನತಾಂ- ತಿಳಿವಳಿಕೆಯುಳ್ಳ, ಸರ್ವೇಷಾಂ- ಎಲ್ಲ ಮಂತ್ರಿಗಳು, ಏಕ ಬುದ್ಧೀ ನಾಂಸತಾಂ-ಏಕಮತ್ಯವನ್ನು ಹೊಂದುತ್ತಿರಲು,||೧೨|| ಪುರೇವಾ-ಪಟ್ಟಣದಲ್ಲಾಗಲಿ, ರಾಷ್ಟ್ರೇವಾ- ಆ ರಾಜ್ಯದಲ್ಲಾಗಲಿ, ಮೃಷಾವಾದೀ- ಸಟೆಯನ್ನಾಡುವ, ನರಃ-ಮನುಷ್ಯನು, ಕ್ವಚಿತ್- ಎಲ್ಲಿಯೂ, ನಾಸೀತ್-ಇರಲಿಲ್ಲ, ತತ್ರ-ಆ ಪಟ್ಟಣದಲ್ಲಿ, ದುಷ್ಟಃ - ದೋಷಯುಕ್ತನಾದ, ಕಶ್ಚಿನ್ನರಃ - ಯಾವ ಮನುಷ್ಯನೂ, ಪರದಾರರತಃ-ಪರಸ್ತ್ರೀಯರಲ್ಲಿ ಆಸಕ್ತನಾದವನು, ನಾಸೀತ್ - ಇರಲಿಲ್ಲ, ||೧೩||

---

ಲ್ಲಿಯೂ, ಸೈನ್ಯವನ್ನು ಸೇರಿಸುವದರಲ್ಲಿ ನಿಪುಣರಾದ ಈ ಮಂತ್ರಿಗಳು ಅಪರಾಧಮಾಡದ ತಮ್ಮ ಹಗೆಯನ್ನೂ ಬಾಧಿಸುತ್ತಿರಲಿಲ್ಲ. ||೯|| ವೀರರೂ, ಶತ್ರುಗಳನ್ನು ಜಯಿಸುವುದ ರಲ್ಲಿ ಉತ್ಸಾಹವುಳ್ಳವರೂ, ನೀತಿಶಾಸ್ತ್ರವನ್ನನುಸರಿಸುತ್ತಿರುವವರೂ, ಸ್ವದೇಶಿಯರಾದ ಪರಿಶುದ್ಧ ಬ್ರಾಹ್ಮಣಾದಿಗಳನ್ನು ನಿರಂತರ ಪರಿಪಾಲಿಸುತ್ತಿರುವವರೂ ಆಗಿದ್ದರು. ದುಷ್ಟನೂ, ಪರದಾರ ರತನೂ, ಆ ಅಯೋಧ್ಯಾ ರಾಜ್ಯದಲ್ಲಿರಲೇ ಇಲ್ಲವು. ಆ ದೇಶದಲ್ಲಿಯೂ, ಆ ಅಯೋಧ್ಯಾಪುರದಲ್ಲಿಯೂ,ಇರುವ ಜನರು ಶಾಂತಚಿತ್ತರಾಗಿಯೇ ಇರುತಿರ್ದರು. ||೧೦-೧೪||

ರ್ಥಂಚ ನರೇಂದ್ರಸ್ಯ ಜಾಗ್ರತೋ ನಯಚಕ್ಷುಷಾ॥ ಗುಣಾಗುಣ ಗೃಹೀತಾಶ್ಚ ಪ್ರಖ್ಯಾತಾಶ್ಚ ಪರಾಕ್ರಮೇ ॥೧೫॥ ವಿದೇಶೇಷ್ವಪಿ ವಿಜ್ಞಾತಾ ಸ್ಸರ್ವತೋ ಬುದ್ಧಿನಿಶ್ಚಯಾತ್ ॥ ಸಂಧಿವಿಗ್ರಹ ತತ್ವಜ್ಞಾಃ ಪ್ರಕೃತ್ಯಾ ಸಂಪದಾ ನ್ವಿತಾಃ ॥೧೬॥ ಮಂತ್ರಸಂವರಣೇ ಶಕ್ತಾಶ್ಶ್ಲಕ್ಷ್ಣಾಸ್ಸೂಕ್ಷ್ಮಾಸು ಬುದ್ಧಿಷು॥ ನೀತಿಶಾಸ್ತ್ರ ವಿಶೇಷಜ್ಞಾ ಸ್ಸತತಂ ಪ್ರಿಯವಾದಿನಃ ॥೧೭॥ ಈದೃಶೈಸ್ತೈ ರಮಾತ್ಯೈಸ್ತು ರಾಜಾ ದಶರಥೋನಘಃ ॥ ಉಪಪನ್ನೋಗುಣೋಪೇತೈ ರಸ್ವ

---

ಸರ್ವೇರಾಷ್ಟ್ರಂ - ರಾಜ್ಯವೆಲ್ಲವೂ, ತತ್ಪುರವರಂ - ಆ ಶ್ರೇಷ್ಠವಾದ ಪಟ್ಟಣವೂ, ಪ್ರಶಾಂತಮೇವ - ಶಾಂತಗುಣಪ್ರಧಾನವಾದುದೇ, ಅಸೀತ್- ಆಯಿತು, ಸುವಾಸಸಃ - ಶುಭ್ರವಾಗಿರುವ ವಸ್ತ್ರಗಳುಳ್ಳ, ಸುವೇಷಾಶ್ಚ-ಸೌಮ್ಯವಾದ ಅಲಂಕಾರವುಳ್ಳ, ಸುಶೀಲಿನಃ - ಒಳ್ಳೆಯ ಸ್ವಭಾವವುಳ್ಳ, ತೇಸರ್ವೇಚ-ಆ ಮಂತ್ರಿಗಳೆಲ್ಲರೂ, ॥೧೪॥ ನರೇಂದ್ರಸ್ಯ-ದಶರಥ ಮಹಾರಾಯನಿಗೆ, ಹಿತಾರ್ಥಂ - ಶ್ರೇಯಸ್ಸಿಗೋಸುಗ, ನಯಚಕ್ಷುಷಾ-ನೀತಿದೃಷ್ಟಿಯಿಂದ, ಜಾಗ್ರತಃ-ಜಾಗರೂಕರು, (೧) ಗುಣಾ ಗುಣಗೃಹೀತಾಶ್ಚ-ಗ್ರಹಿಸಲ್ಪಟ್ಟ ಗುಣದೋಷಗಳುಳ್ಳವರು, ಪರಾಕ್ರಮೇ-ಪರಾಕ್ರಮದಲ್ಲಿ, ಪ್ರಖ್ಯಾತಾಶ್ಚ-ಪ್ರಸಿದ್ಧರು, ॥೧೫॥ ಸರ್ವತಃ ಸರ್ವಾಂಗಗಳಲ್ಲಿಯೂ, ಬುದ್ಧಿನಿಶ್ಚಯಾತ್ - ಸ್ಥಿರವಾದಪ್ರಜ್ಞೆಯಿಂದ, ವಿದೇಶೇಷ್ವಪಿ-ಪರರಾಷ್ಟ್ರದಲ್ಲಿಯೂ, ವಿಜ್ಞಾತಾಃ ಖ್ಯಾತಿಯನ್ನು ಪಡೆದವರು, ಸಂಧಿವಿಗ್ರಹತತ್ವಜ್ಞಾಃ,ಸಂಧಿವಿಗ್ರಹ - ಸಾಮೋಪಾಯ ದಂಡೋಪಾಯಗಳ, ತತ್ವಜ್ಞಾಃ-ಯಥಾರ್ಥವನ್ನು ತಿಳಿದಿರುವರು, ಪ್ರಕೃತ್ಯಾ-ಸ್ವಭಾವದಿಂದ, ಸಂಪದಾ - ಐಶ್ವರ್ಯದಿಂದಲೂ, ಅನ್ವಿತಾಃ-ಕೂಡಿರುವವರು, ॥೧೬॥ ಮಂತ್ರಸಂವರಣೇ,ಮಂತ್ರ-ಆಲೋಚಿಸಿದ ಅರ್ಥದ, ಸಂವರಣೇ-ಆಚ್ಛಾದನ ಮಾಡುವದರಲ್ಲಿ, ಶಕ್ತಾಃ-ಸಮರ್ಥರು, ಸೂಕ್ಷ್ಮಾಸು-ಸೂಕ್ಷ್ಮಾರ್ಥವಿಷಯವಾದ, ಬುದ್ಧಿಷು-ಬುದ್ಧಿಗಳಲ್ಲಿ, ಶ್ಲಕ್ಷ್ಣಾಃ-ಮಾರ್ದವವುಳ್ಳವರು, ನೀತಿಶಾಸ್ತ್ರ ವಿಶೇಷಜ್ಞಾಃ, ನೀತಿಶಾಸ್ತ್ರ- ರಾಜನೀತಿ ಶಾಸ್ತ್ರದಲ್ಲಿ, ವಿಶೇಷಜ್ಞಾಃ - ಶಾಸನಾದಿ ವಿಶೇಷಗಳನ್ನು ತಿಳದಂಥವರು, ಸತತಂ- ನಿರಂತರವು, ಪ್ರಿಯವಾದಿನಃ - ಅರಸಿಗೆ ಇಷ್ಟವನ್ನೇ ನಡಿಯುತ್ತಿರುವರು, ॥ ೧೭ ॥ ಈದೃಶೈಃ-ಇಂತಹ, ಗುಣೋ

---

ಅಲ್ಲಿರುವರೆಲ್ಲರು ಒಳ್ಳೆಯ ವಸ್ತ್ರಗಳುಳ್ಳವರಾಗಿಯೂ, ಸೌಮ್ಯವಾದ ಅಲಂಕಾರವುಳ್ಳವರಾಗಿಯೂ, ಒಳ್ಳೇ ನಡವಳಿಕೆಯುಳ್ಳವರಾಗಿಯೂ, ದಶರಥರಾಜನ ಹಿತಕ್ಕೋಸುಗ ನೀತಿಯಲ್ಲಿಯೇ ದೃಷ್ಟಿಯುಳ್ಳವರಾಗಿಯೂ, ಗುಣಾಗುಣಗಳನ್ನು ಗ್ರಹಿಸತಕ್ಕವರಾಗಿಯೂ, ಪರಾಕ್ರಮದಲ್ಲಿ ಪ್ರಖ್ಯಾತಿಯುಳ್ಳವರಾಗಿಯೂ, ಬುದ್ಧಿನಿಶ್ಚಯದಿಂದ ಪರರಾಷ್ಟ್ರಗಳಲ್ಲಿಯೂ, ಎಲ್ಲವನ್ನೂ ತಿಳಿದವರೆಂದು ಪ್ರಸಿದ್ಧರಾಗಿರುವರಾಗಿ ಸಾಮ ದಂಡೋಪಾಯಗಳನ್ನರಿತ ಸ್ವಭಾವದಿಂದಲೂ, ಐಶ್ವರ್ಯದಿಂದಲೂ, ಕೂಡಿದವರಾಗಿದ್ದರು. ಆಲೋಚನೆಯನ್ನು ಬಹಿರಂಗಪಡಿಸದೆ ಇರುವದರಲ್ಲಿ ಅಲ್ಲಿನ ಜನರು ಕೇವಲ ಸಮರ್ಥರು. ಸೂಕ್ಷ್ಮವಾದ ವಿಷಯಗಳಲ್ಲಿ ಮಾರ್ದವಯುಕ್ತರೂ, ನೀತಿಶಾಸ್ತ್ರ ವಿಷಯಗಳನ್ನರಿತವರೂ, ಸದಾಕಾಲದಲ್ಲಿಯೂ,

---

ಟೀ॥ (೧)"ಗುರೌ ಗುಣ ಗೃಹೀತಾಶ್ಚ" ಎಂದು ಪಾಠಾಂತರ. ಇದಕ್ಕೆ ಅರ್ಥ, ಗುರೌ-ಸ್ವಾಮಿಯಾದ ದಶರಥನಿಂದ, ಅಥವ ಸ್ವಾಚಾರ್ಯನಿಂದ, ಗುಣಗೃಹೀತಾಃ-ಗುಣವಂತರೆಂದು ಎಣಿಸಲ್ಪಟ್ಟವರು.

ಶಾಸದ್ವಸುಂಧರಾಂ ||೧೮|| ಅವೇಕ್ಷಮಾಣಶ್ಚಾರೇಣ ಪ್ರಜಾಧರ್ಮೇಣರಂಜಯನ್|| ಪ್ರಜಾನಾಂ ಪಾಲನಂಕುರ್ವನ್ನಧರ್ಮಂ ಪರಿವರ್ಜಯನ್||೧೯||ವಿಶ್ರುತಸ್ತ್ರಿಷು ಲೋಕೇಷು ವದಾನ್ಯಸ್ಸತ್ಯಸಂಗರಃ || ಸತತ್ರ ಪುರುಷವ್ಯಾಘ್ರ ಶ್ಯಶಾಸ ಪೃಥಿವೀಮಿಮಾಂ ||೨೦|| ನಾಧ್ಯಗಚ್ಛದ್ವಿಶಿಷ್ಟಂವಾ ತುಲ್ಯಂ ವಾ ಶತ್ರು ಮಾತ್ಮನಃ । ಮಿತ್ರವಾನ್ನತ ಸಾಮಂತಃ ಪ್ರತಾಪ ಹತಕಂಟಕಃ ||೨೧||. ಸ ಶಶಾಸ ಜಗದ್ರಾಜಾ ದಿವಂ ದೇವಪತಿರ್ಯಥಾ || ತೈರ್ಮಂತ್ರಿಭಿರ್ಮಂತ್ರ

ಪೇತೈಃ-ಸೌಶೀಲ್ಯಾದಿ ಗುಣಗಳಿಂದ ಕೂಡಿದ, ತೈಃ ಅಮಾತ್ಯೈಃ - ಆ ಮಂತ್ರಿಗಳಿಂದ, ಉಪಪನ್ನಃ-ಕೂಡಿರುವ, ಅನಘಃ-ದೋಷವಿಲ್ಲದ, ದಶರಥೋರಾಜಾ - ದಶರಥಮಹಾರಾಯನು, ವಸುಂಧರಾಂ-ಭೂಮಿಯನ್ನು,ಅನ್ವಶಾಸತ್-ಪರಿಪಾಲನೆ ಮಾಡಿದನು||೧೮|| ಚಾರೇಣ-ಚಾರನಿಂದ, ಅವೇಕ್ಷಮಾಣಃ-ಸಕಲವನ್ನು ತಿಳಿಯುತ್ತ, ಧರ್ಮೇಣ-ಧರ್ಮದಿಂದ, ಪ್ರಜಾಃ-ಜನರನ್ನು, ರಂಜಯನ್-ಸಂತೋಷಗೊಳಿಸುತ್ತ, ಪ್ರಜಾನಾಂ-ಪ್ರಜೆಗಳ, ಪಾಲನಂ-ಸಂರಕ್ಷಣೆಯನ್ನು, ಕುರ್ವನ್ - ಮಾಡುತ್ತಿರುವ, ಅಧರ್ಮಂ ಅಧರ್ಮವನ್ನು, ಪರಿವರ್ಜಯನ್-ಬಿಟ್ಟು ||೧೯|| ತ್ರಿಷುಲೋಕೇಷು-ಮೂರುಲೋಕಗಳಲ್ಲಿಯೂ. ವಿಶ್ರುತಃ-ಪ್ರಸಿದ್ಧನಾದ,ವದಾನ್ಯಃ-ದಾತನಾದ,ಸತ್ಯಸಂಗರಃ ಸತ್ಯಪ್ರತಿಜ್ಞೆಯುಳ್ಳ, ಪುರುಷವ್ಯಾಘ್ರಃ ಪುರುಷ ಶ್ರೇಷ್ಠನಾದ, ಸಃ-ಆ ದಶರಥರಾಯನು, ತತ್ರ-ಆ ಅಯೋಧ್ಯೆಯಲ್ಲಿ,ಇಮಾಂಪೃಥಿವೀಂ-ಈ ಭೂಮಂಡಲವನ್ನು, ಶಶಾಸ-ಆಳುತ್ತಿದ್ದನು, ||೨೦|| ಆತ್ಮನಃ-ತನಗೆ, ವಿಶಿಷ್ಟಂವಾ - ಹೆಚ್ಚಾದವನನ್ನಾಗಲಿ, ತುಲ್ಯಂವಾ-ಸಮಾನನನ್ನೇ ಆಗಲಿ ಆದ,ಶತ್ರುಂ-ಶತ್ರುವನ್ನು,ನಾಧ್ಯಗಚ್ಛತ್-ನೋಡಲಿಲ್ಲ, ಮಿತ್ರವಾನ್-ಸನ್ಮಿತ್ರರುಳ್ಳ, ನತಸಾಮಂತಃ - ವಿಧೇಯರಾದ ಅಧೀನಜನರುಳ್ಳ, ಪ್ರತಾಪಹತಕಂಟಕಃ, ಪ್ರತಾಪ-ವೀರ್ಯದಿಂದ, ಹತ-ಶಿಕ್ಷಿತರಾದ, ಕಂಟಕಃ-ಕ್ಷುದ್ರಜನವುಳ್ಳ, ||೨೧|| ಸರಾಜಾ-ಆ ದಶರಥರಾಯನು, ಜಗತ್-ಭೂಲೋಕವನ್ನು, ದಿವಂ-ಸ್ವರ್ಗಲೋಕವನ್ನು,ದೇವಪತಿರ್ಯಥಾ-ದೇವೇಂದ್ರ

---

ಇಷ್ಟವನ್ನೇ ನುಡಿಯುತ್ತಿರುವವರೂ, ಆಗಿದ್ದರು. ||೧೫-೧೮|| ಆ ಪಟ್ಟಣವನ್ನಾಳುವ ಪುರುಷ ಶ್ರೇಷ್ಠನಾದ ದಶರಥರಾಜನು ಗುಣಸಂಪನ್ನರಾದ ಮಂತ್ರಿಗಳೊಡಗೂಡಿ, ಚಾರರ ಮುಖದಿಂದ ಸಕಲ ವಿಷಯಗಳನ್ನರಿತು, ಧರ್ಮವನ್ನು ಬಿಡದೆ, ಜನರನ್ನು ಸಂತೋಷಗೊಳಿಸುತ್ತ, ಮೂರು ಲೋಕಗಳಲ್ಲಿಯೂ, ಪ್ರಖ್ಯಾತಿಯುಳ್ಳವನಾಗಿ ಸತ್ಯಪ್ರತಿಜ್ಞೆಯಿಂದ ಭೂಮಂಡಲವನ್ನೆಲ್ಲ ಆಳುತ್ತಿದ್ದನು. ||೧೯-೨೦|| ಅಷ್ಟೆಯಲ್ಲದೆ ಆ ರಾಯನು ತನಗಿಂತಲೂ ಪರಾಕ್ರಮಶಾಲಿಯಾದ ಶತ್ರುವನ್ನು ನೋಡದ ಸ್ನೇಹಿತರುಳ್ಳವನಾಗಿಯೂ, ವಿಧೇಯರಾಗಿರುವ ಸಾಮಂತರಾಜರುಳ್ಳವನಾಗಿಯೂ, ಪರಾಕ್ರಮದಿಂದ ಸಂಹರಿಸಲ್ಪಟ್ಟ ಕ್ಷುದ್ರಜನರುಳ್ಳವನಾಗಿಯೂ ಇರುತ್ತ, ಇಂದ್ರನು ಸ್ವರ್ಗವನ್ನು ಸಂರಕ್ಷಿಸುವಂತೆ ಇಡೀ ಜಗತ್ತನ್ನೇ ಪಾಲಿ

ಹಿತೇ ನಿಯುಕ್ತೈರ್ವೃತೋಽನುರಕ್ತೈಃ ಕುಶಲೈಸ್ಸಮರ್ಥೈಃ॥ಸಪಾರ್ಥಿವೋ
ದೀಪ್ತಿಮವಾಪಯುಕ್ತಸ್ತೇಜೋಮಯೈರ್ಗೋಭಿರಿವೋದಿತೋಽರ್ಕಃ ॥೨೨॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಮಸ್ಸರ್ಗಃ.



ನಂತೆ ಶಶಾಸ-ಸಂರಕ್ಷಿಸಿದನು, ಮಂತ್ರಹಿತೇ - ಮಂತ್ರಾಲೋಚನ ಮತ್ತು ರಾಜನ ಹಿತ ಇವುಗಳಲ್ಲಿ, ನಿಯುಕ್ತೈಃ ಯುಕ್ತಿಶಾಲಿಗಳಾದ, ಅನುರಕ್ತೈಃ - ಸ್ವಾಮಿಯಲ್ಲಿ ವಿಶ್ವಾಸವುಳ್ಳ, ಕುಶಲೈಃ-ಚತುರರು, ಸಮರ್ಥೈಃ-ಕಾರ್ಯಸಮರ್ಥರೂ ಆದ, ತೈರ್ಮಂತ್ರಿಭಿಃ-ಆ ಮಂತ್ರಿಗಳಿಂದ,ವೃತಃ-ಸುತ್ತಿವರೆಯಲ್ಪಟ್ಟ, ಸಪಾರ್ಥಿವಃ-ಆ ರಾಜನು, ತೇಜೋಮಯೈಃ-ತೇಜೋಮಯಗಳಾದ,ಗೋಭಿಃ-ಕಿರಣಗಳಿಂದ, ಯುಕ್ತಃ-ಕೂಡಿ, ಉದಿತಃ-ಆಗತಾನೆ ಹುಟ್ಟಿರುವ, ಅರ್ಕ ಇವ-ಸೂರ್ಯನಂತೆ,ದೀಪ್ತಿಂ-ಪ್ರಕಾಶವನ್ನು, ಅವಾಪ-ಹೊಂದಿದನು ॥೨೨॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಮಸ್ಸರ್ಗಃ.

—(***)—

ಸುತ್ತಿದ್ದನು. ೨೧-೨೨॥ ಮಂತ್ರಾಲೋಚನೆಯಲ್ಲಿಯೂ, ಹಿತದಲ್ಲಿಯೂ, ಯುಕ್ತಿಶಾಲಿಗಳಾಗಿಯೂ, ಆಸಕ್ತರಾಗಿಯೂ, ಚಮತ್ಕಾರವಂತರಾಗಿಯೂ, ಕಾರ್ಯ ಸಮರ್ಥರಾಗಿಯೂ, ಇರುವ ಆ ಮಂತ್ರಿವರ್ಯರಿಂದ ಸುತ್ತುವರೆಯಲ್ಪಟ್ಟ ಆ ದಶರಥನು ತೇಜೋವಿಕಾರಗಳಾದ ಕಿರಣಗಳಿಂದ ಉದಯಿಸಿದ ಸೂರ್ಯನಂತೆ ಬೆಳಗಿದನು ॥೨೩॥

ಇಂತಿದು ದಶರಥನ ರಾಜ್ಯಭಾರಕ್ರಮ ವರ್ಣನವೆಂಬ ಏಳನೆಯ ಸರ್ಗವು
ಸಮಾಪ್ತವಾದುದು.



# ಬಾಲಕಾಂಡೇ ಅಷ್ಟಮಸ್ಸರ್ಗ ಪ್ರಾರಂಭಃ.

ತಸ್ಯತ್ವೇವಂ ಪ್ರಭಾವಸ್ಯ ಧರ್ಮಜ್ಞಸ್ಯ ಮಹಾತ್ಮನಃ|| ಸುತಾರ್ಥಂ ತಪ್ಯಮಾನಸ್ಯ ನಾಸೀದ್ವಂಶಕರಸ್ಸುತಃ ||೧|| ಚಿಂತಯಾನಸ್ಯ ತಸ್ಯೈವಂ ಬುದ್ಧಿರಾಸೀನ್ಮಹಾತ್ಮನಃ || ಸುತಾರ್ಥಂ ಹಯಮೇಧೇನ ಕಿಮರ್ಥಂ ನಯಜಾಮ್ಯಹಂ||೨||ಸನಿಶ್ಚಿತಾಂ ಮತಿಂ ಕೃತ್ವಾ ಯಷ್ಟವ್ಯಮಿತಿ ಬುದ್ಧಿಮಾನ್||ಮಂತ್ರಿಭಿಸ್ಸಹ ಧರ್ಮಾತ್ಮಾ ಸರ್ವೈರೇವಕೃತಾತ್ಮಭಿಃ||೩|| ತತೋಽಬ್ರವೀದಿದಂ ರಾಜಾ ಸುಮಂತ್ರಂ ಮಂತ್ರಿಸತ್ತಮಂ||ಶೀಘ್ರಮಾನಯ ಮೇ ಸರ್ವಾನ್ ಗುರೂಂ ಸ್ತಾನ್ ಸ ಪುರೋಹಿತಾನ್ ||೪|| ತತಸ್ಸುಮಂತ್ರಸ್ತ್ವರಿತಂ ಗತ್ವಾ ತ್ವರಿತವಿಕ್ರಮಃ ||

ಏವಂಪ್ರಭಾವಸ್ಯ - ಈ ರೀತಿ ಮಹಿಮೆಯುಳ್ಳ, ಧರ್ಮಜ್ಞಸ್ಯ- ಧರ್ಮಜ್ಞನಾದ, ಮಹಾತ್ಮನಃ – ಮಹಾ ಮನಸ್ವಿಯಾದ, ಸುತಾರ್ಥಂ - ಮಕ್ಕಳಿಗೋಸುಗ, ತಪ್ಯಮಾನಸ್ಯ - ಚಿಂತಿಸುತ್ತಿರುವ, ತಸ್ಯತು – ಆ ದಶರಥರಾಯನಿಗಾದರೆ, ವಂಶಕರಃ – ವಂಶಾಭಿವೃದ್ಧಿಕರನಾದ, ಸುತಃ - ಮಗನು, ನಾಸೀತ್ ಆಗಲಿಲ್ಲವು. ||೧|| ಚಿಂತಯಾನಸ್ಯ - ಆಲೋಚಿಸುತ್ತಿರುವ, ಮಹಾತ್ಮನಃ ಮಹಾತ್ಮನಾದ, ತಸ್ಯ - ಆ ದಶರಥರಾಯನಿಗೆ, ಅಹಂ ನಾನು, ಸುತಾರ್ಥಂ - ಮಕ್ಕಳಿಗೋಸುಗ, ಹಯಮೇಧೇನ - ಅಶ್ವಮೇಧದಿಂದ, ಕಿ ಮ ರ್ಥ ಂ -ಏ ತ ಕ್ಕೆ, ನಯಜಾಮಿ - ಯಜ್ಞಮಾಡಲಿಲ್ಲ, ಇತ್ಯೇವಂ – ಹೀಗೆಂಬ, ಬುದ್ಧಿಃ - ಬುದ್ಧಿಯು, ಆಸೀತ್ - ಉಂಟಾಯಿತು. ||೨|| ಬುದ್ಧಿಮಾನ್ - ಬುದ್ಧಿವಂತನೂ, ಧರ್ಮಾತ್ಮಾ - ಧರ್ಮಿಷ್ಠನೂ ಆದ, ಸರಾಜಾ - ಆ ದಶರಥನು, ಸರ್ವೈಃ - ಎಲ್ಲ, ಕೃತಾತ್ಮಭಿಃ - ಕೃತಜ್ಞರಾದ, ಮಂತ್ರಿಭಿಸ್ಸಹ - ಮಂತ್ರಿಗಳೊಡನೆ, ಯಷ್ಟವ್ಯಮಿತಿ - ಯಜ್ಞಮಾಡತಕ್ಕುದೆಂದು, ನಿಶ್ಚಿತಾಂ - ನಿಶ್ಚಯಿಸಿದ, ಮತಿಂ- ಅಭಿಪ್ರಾಯವನ್ನು, ಕೃತ್ವಾ - **ಮಾಡಿ**, ತತಃ - **ಬಳಿಕ**, ಮೇಗುರೂನ್- ನನ್ನ ಗುರುಗಳಾದ, ಸಪುರೋಹಿತಾನ್ - ಪುರೋಹಿತರಿಂದೊಡಗೂಡಿದ, ತಾನ್- ಆ ಪ್ರಸಿದ್ಧರಾದ, ಸರ್ವಾನ್ - ಸಮಸ್ತ ಋತ್ವಿಕ್ಕುಗಳನ್ನೂ, ಶೀಘ್ರಂ - ಜಾಗ್ರತೆಯಾಗಿ, ಆನಯೇತಿ-ಕರದುಕೊಂಡುಬಾರೆಂದು, ಇದಂ - ಈ ವಚನವನ್ನು, ಮಂತ್ರಿಸತ್ತಮಂ - ಮಂತ್ರಿಶ್ರೇಷ್ಠನಾದ, ಸುಮಂತ್ರಂ – ಸುಮಂತ್ರನನ್ನು ಕುರಿತು, ಅಬ್ರವೀತ್ - ನುಡಿದನು. ||೩-೪|| ತತಃ - ಬಳಿಕ, ತ್ವರಿತವಿಕ್ರಮಃ - ಶೀಘ್ರಗಾಮಿಯಾದ, ಸಸುಮಂತ್ರಃ - ಆ ಸುಮಂತ್ರನು, ತ್ವರಿತಂ - ಬೇಗನೆ

---

ಇಂತಹ ಪ್ರಭಾವಶಾಲಿಯೂ, ಧರ್ಮಜ್ಞನೂ, ಮಹಾಮನಸ್ವಿಯೂ, ಮಕ್ಕಳಿಗಾಗಿ ಚಿಂತಿಸುತ್ತಿರುವವನೂ ಆದ ದಶರಥರಾಯನು, "ವಂಶವನ್ನು ಬೆಳೆಯಿಸುವ ಮಗನಿಲ್ಲವಲ್ಲ!" ಎಂದು ಚಿಂತಿಸುತ್ತಿದ್ದನು. ಹೀಗೆ ಯಾವಾಗಲು ಚಿಂತಿಸುತ್ತಿರುವ ಆ ಮಹಾತ್ಮನಿಗೆ "ಮಕ್ಕಳಿಗಾಗಿ ಅಶ್ವಮೇಧ ಯಾಗವನ್ನು ಮಾಡಲಿಲ್ಲವೇಕೆ ? " ಎಂಬ ಬುದ್ಧಿಯುಂಟಾಯಿತು. ಬಳಿಕಲಾತನು ಅಶ್ವಮೇಧ ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ,ಕೃತಜ್ಞರಾದ ಮಂತ್ರಿಗಳೊಡಗೂಡಿ, ಅವರಲ್ಲಿ ಮುಖ್ಯನಾದ ಸುಮಂತ್ರನನ್ನು ಕುರಿತು, "ಎಲೈ ಸುಮಂತ್ರನೇ ! ಪುರೋಹಿತರೇ ಮೊದಲಾದ ನನ್ನ ಗುರುಗಳನ್ನೆಲ್ಲಾ ಬೇಗನೆ ಕರೆಕಳುಹಿಸು" ಎಂದನು. || ೪ || ಬಳಿಕ ಶೀಘ್ರಗಾಮಿಯಾದ ಆ ಸುಮಂತ್ರನು ಜಾಗ್ರತೆಯಾಗಿ ಹೋಗಿ,

ಸಮಾನಯತ್ಸ್ವತಾನ್ ಸರ್ವಾನ್ ಸಮಸ್ತಾನ್ ವೇದಪಾರಗಾನ್ ||೫|| ಸುಯಜ್ಞಂ ವಾಮದೇವಂಚ ಜಾಬಾಲಿಮಥಕಾಶ್ಯಪಂ|| ಪುರೋಹಿತಂ ವಸಿಷ್ಠಂಚ ಏಚಾನ್ಯೇ ದ್ವಿಜಸತ್ತಮಾಃ || ೬ || ತಾನ್ ಪೂಜಯಿತ್ವಾ ಧರ್ಮಾತ್ಮಾ ರಾಜಾ ದಶರಥ ಸ್ತದಾ|| ಇದಂ ಧರ್ಮಾರ್ಥ ಸಹಿತಂ ಶ್ಲಕ್ಷ್ಣಂ ವಚನಮಬ್ರವೀತ್ ||೭|| ಮಮ ಲಾಲಪ್ಯಮಾನಸ್ಯ ಪುತ್ರಾರ್ಥಂ ನಾಸ್ತಿವೈಸುಖಂ || ತದರ್ಥಂ ಹಯಮೇಧೇನ ಯಕ್ಷ್ಯಾಮೀತಿ ಮತಿರ್ಮಮ || ೮ || ತದಹಂ ಯಷ್ಟುಮಿಚ್ಛಾಮಿ ಶಾಸ್ತ್ರ ದೃಷ್ಟೇನ ಕರ್ಮಣಾ || ಕಥಂ ಪ್ರಾಪ್ಸ್ಯಾಮ್ಯಹಂ ಕಾಮಂ ಬುದ್ಧಿರತ್ರ ವಿಚಾ

---

ಗತ್ವಾ - ಹೋಗಿ, ವೇದಪಾರಗಾನ್ - ವೇದವೇದಾಂಗ ಪಾರಗರಾದ, ಸಮಸ್ತಾನ್- ಸಮಸ್ತರಾದ, ಸುಯಜ್ಞಂ- ಸುಯಜ್ಞನನ್ನೂ, ವಾಮದೇವಂ ವಾಮದೇವನನ್ನೂ, ಜಾಬಾಲಿಂಚ-ಜಾಬಾಲಿಯನ್ನೂ ಅಥ - ಬಳಿಕ, ಕಾಶ್ಯಪಂ - ಕಾಶ್ಯಪನನ್ನೂ, ಪುರೋಹಿತಂ- ಪುರೋಹಿತನಾದ, ವಸಿಷ್ಠಂಚ - ವಸಿಷ್ಠ ನನ್ನೂ, ಅನ್ಯೇಚ - ಇತರರಾದ, ದ್ವಿಜಸತ್ತಮಾಃ – ಬ್ರಾಹ್ಮಣಶ್ರೇಷ್ಠರು, ಯೇ-ಯಾರುಂಟೋ, ತಾನ್‌ಸರ್ವಾನ್ - ಅವರನ್ನೆಲ್ಲ, ಸಮಾನಯತ್ - ಕರೆತಂದನು. ||೫-೬|| ತದಾ- ಆಗ, ಧರ್ಮಾತ್ಮಾ- ಧರ್ಮಿಷ್ಠನಾದ, ದಶರಥೋರಾಜಾ - ದಶರಥರಾಜನು, ತಾನ್ - ಅವರನ್ನು, ಪೂಜಯಿತ್ವಾ - ಪೂಜಿಸಿ, ಧರ್ಮಾರ್ಥಸಹಿತಂ - ಧರ್ಮರೂಪವಾದ ಪ್ರಯೋಜನದಿಂದ ಕೂಡಿರುವ, ಶ್ಲಕ್ಷ್ಣಂ-ಮನೋಹರವಾದ, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೭ || ಪುತ್ರಾರ್ಥಂ – ಮಕ್ಕಳಿಗಾಗಿ, ಲಾಲಪ್ಯಮಾನಸ್ಯ - ವಿಲಪಿಸುತ್ತಿರುವ, ಮಮ - ನನಗೆ, ಸುಖಂ - ಪುತ್ರಸುಖವು, ನಾಸ್ತಿವೈ - ಇಲ್ಲವಷ್ಟೆ, ತದರ್ಥಂ - ಆ ಪುತ್ರಾರ್ಥವಾಗಿ, ಹಯಮೇಧೇನ-ಅಶ್ವಮೇಧಕ್ರತುವಿನಿಂದ, ಯಕ್ಷ್ಯಾಮೀತಿ - ಯಜ್ಞಮಾಡಬೇಕೆಂದು, ಮಮ - ನನಗೆ, ಬುದ್ಧಿಃ - ಬುದ್ಧಿಯು, ಜಾತಾ - ಉಂಟಾಗಿರುವದು. || ೮ || ತತ್ - ಆದುದರಿಂದ, ಶಾಸ್ತ್ರದೃಷ್ಟೇನ-ಶಾಸ್ತ್ರಸಿದ್ಧವಾದ, ಕರ್ಮಣಾ- ಯಜಕರ್ಮದಿಂದ, ಯಷ್ಟುಂ - ಯಜ್ಞಮಾಡಲೋಸುಗ, ಅಹಂ- ನಾನು, ಇಚ್ಛಾಮಿ - ಇಚ್ಛೆಯುಳ್ಳವನಾಗಿರುವೆನು, ಅಹಂ - ನಾನು, ಕಾಮಂ - ನನ್ನ ಕೋರಿಕೆಯನ್ನು, ಕಥಂಪ್ರಾಪ್ಸ್ಯಾಮಿ - ಹೇಗೆ ಹೊಂದುವೆನೋ, ಅತ್ರ - ಎಂಬ ವಿಷಯದಲ್ಲಿ, ಬುದ್ಧಿಃ - ಬುದ್ಧಿಯು, ವಿಚಾರ್ಯತಾಂ - ವಿಮರ್ಶೆ

---

ವೇದ ವೇದಾಂಗ ಪಾರಂಗತರಾದ, ಸುಯಜ್ಞ, ವಾಮದೇವ, ಜಾಬಾಲಿ, ವಸಿಷ್ಠರೇ ಮೊದಲಾದವರನ್ನೂ ಇತರ ಬ್ರಾಹ್ಮಣರನ್ನೂ ಕರೆತಂದನು. || ೬ || ಆ ಧರ್ಮಾತ್ಮನಾದ ದಶರಥರಾಜನು ಧರ್ಮಿಷ್ಠರಾದ ಆ ವಸಿಷ್ಠಾದಿಗಳನ್ನು ಶಾಸ್ತ್ರೋಕ್ತವಾಗಿ ಪೂಜಿಸಿ, ಧರ್ಮಾರ್ಥಯುಕ್ತವಾದ ಈ ಮಾತನ್ನು ಹೇಳಿದನೆಂತೆನೆ. || ೭ || "ಮಕ್ಕಳಿಗಾಗಿ ಚಿಂತಿಸುತ್ತಿರುವ ನನಗೆ ಪುತ್ರಸುಖವಿಲ್ಲವಲ್ಲ ! ಅದುಕಾರಣ ಅಶ್ವಮೇಧಯಾಗ ಮಾಡಬೇಕೆಂಬ ಬುದ್ಧಿಯುಂಟಾಗಿರುವುದು. ಅದಕ್ಕಾಗಿ ಶಾಸ್ತ್ರೋಕ್ತವಾದ ಕರ್ಮದಿಂದ ಯಜ್ಞಮಾಡಬೇಕೆಂದು ಇಚ್ಛಿಸುವೆನು. ನಾನು ಅಪೇಕ್ಷಿಸುತ್ತಿರುವ ಯಜ್ಞಫಲವನ್ನು ಹೇಗೆ ಹೊಂದುವೆನೋ, ಹಾಗೆ

# ಬಾಲಕಾಂಡೇ ಅಷ್ಟಮಸ್ಸರ್ಗ ಪ್ರಾರಂಭಃ.

ತಸ್ಯತ್ವೇವಂ ಪ್ರಭಾವಸ್ಯ ಧರ್ಮಜ್ಞಸ್ಯ ಮಹಾತ್ಮನಃ। ಸುತಾರ್ಥಂ ತಪ್ಯಮಾನಸ್ಯ ನಾಸೀದ್ವಂಶಕರಸ್ಸುತಃ ॥೧॥ ಚಿಂತಯಾನಸ್ಯ ತಸ್ಯೈವಂ ಬುದ್ಧಿರಾಸೀನ್ಮಹಾತ್ಮನಃ । ಸುತಾರ್ಥಂ ಹಯಮೇಧೇನ ಕಿಮರ್ಥಂ ನಯಜಾಮ್ಯಹಂ॥೨॥ಸನಿಶ್ಚಿತಾಂ ಮತಿಂ ಕೃತ್ವಾ ಯಷ್ಟವ್ಯಮಿತಿ ಬುದ್ಧಿಮಾನ್।ಮಂತ್ರಿಭಿಸ್ಸಹ ಧರ್ಮಾತ್ಮಾ ಸರ್ವೈರೇವಕೃತಾತ್ಮಭಿಃ॥೩॥ ತತೋಽಬ್ರವೀದಿದಂ ರಾಜಾ ಸುಮಂತ್ರಂ ಮಂತ್ರಿಸತ್ತಮಂ।ಶೀಘ್ರಮಾನಯ ಮೇ ಸರ್ವಾನ್ ಗುರೂಂ ಸ್ತಾನ್ ಸ ಪುರೋಹಿತಾನ್ ॥೪॥ ತತಸ್ಸುಮಂತ್ರಸ್ತ್ವರಿತಂ ಗತ್ವಾ ತ್ವರಿತವಿಕ್ರಮಃ ॥

ಏವಂಪ್ರಭಾವಸ್ಯ - ಈ ರೀತಿ ಮಹಿಮೆಯುಳ್ಳ, ಧರ್ಮಜ್ಞಸ್ಯ- ಧರ್ಮಜ್ಞನಾದ, ಮಹಾತ್ಮನಃ – ಮಹಾ ಮನಸ್ವಿಯಾದ, ಸುತಾರ್ಥಂ - ಮಕ್ಕಳಿಗೋಸುಗ, ತಪ್ಯಮಾನಸ್ಯ - ಚಿಂತಿಸುತ್ತಿರುವ, ತಸ್ಯತು – ಆ ದಶರಥರಾಯನಿಗಾದರೆ, ವಂಶಕರಃ – ವಂಶಾಭಿವೃದ್ಧಿಕರನಾದ, ಸುತಃ - ಮಗನು, ನಾಸೀತ್ ಆಗಲಿಲ್ಲವು. ॥೧॥ ಚಿಂತಯಾನಸ್ಯ - ಆಲೋಚಿಸುತ್ತಿರುವ, ಮಹಾತ್ಮನಃ ಮಹಾತ್ಮನಾದ, ತಸ್ಯ - ಆ ದಶರಥರಾಯನಿಗೆ, ಅಹಂ ನಾನು, ಸುತಾರ್ಥಂ - ಮಕ್ಕಳಿಗೋಸುಗ, ಹಯಮೇಧೇನ - ಅಶ್ವಮೇಧದಿಂದ, ಕಿ ಮ ರ್ಥ ಂ -ಏ ತ ಕ್ಕೆ, ನಯಜಾಮಿ - ಯಜ್ಞಮಾಡಲಿಲ್ಲ, ಇತ್ಯೇವಂ – ಹೀಗೆಂಬ, ಬುದ್ಧಿಃ - ಬುದ್ಧಿಯು, ಆಸೀತ್ - ಉಂಟಾಯಿತು. ॥೨॥ ಬುದ್ಧಿಮಾನ್ – ಬುದ್ಧಿವಂತನೂ, ಧರ್ಮಾತ್ಮಾ - ಧರ್ಮಿಷ್ಠನೂ ಆದ, ಸರಾಜಾ – ಆ ದಶರಥನು, ಸರ್ವೈಃ - ಎಲ್ಲ, ಕೃತಾತ್ಮಭಿಃ - ಕೃತಜ್ಞರಾದ, ಮಂತ್ರಿಭಿಸ್ಸಹ - ಮಂತ್ರಿಗಳೊಡನೆ, ಯಷ್ಟವ್ಯಮಿತಿ - ಯಜ್ಞಮಾಡತಕ್ಕುದೆಂದು, ನಿಶ್ಚಿತಾಂ - ನಿಶ್ಚಯಿಸಿದ, ಮತಿಂ- ಅಭಿಪ್ರಾಯವನ್ನು, ಕೃತ್ವಾ - ಮಾಡಿ, ತತಃ - ಬಳಿಕ, ಮೇಗುರೂನ್- ನನ್ನ ಗುರುಗಳಾದ, ಸಪುರೋಹಿತಾನ್ - ಪುರೋಹಿತರಿಂದೊಡಗೂಡಿದ,ತಾನ್- ಆ ಪ್ರಸಿದ್ಧರಾದ, ಸರ್ವಾನ್ - ಸಮಸ್ತ ಋತ್ವಿಕ್ಕುಗಳನ್ನೂ, ಶೀಘ್ರಂ - ಜಾಗ್ರತೆಯಾಗಿ, ಆನಯೇತಿ- ಕರದುಕೊಂಡುಬಾರೆಂದು, ಇದಂ - ಈ ವಚನವನ್ನು, ಮಂತ್ರಿಸತ್ತಮಂ - ಮಂತ್ರಿಶ್ರೇಷ್ಠನಾದ, ಸುಮಂತ್ರಂ – ಸುಮಂತ್ರನನ್ನು ಕುರಿತು, ಅಬ್ರವೀತ್ - ನುಡಿದನು. ॥೩-೪॥ ತತಃ - ಬಳಿಕ, ತ್ವರಿತವಿಕ್ರಮಃ - ಶೀಘ್ರಗಾಮಿಯಾದ, ಸಸುಮಂತ್ರಃ - ಆ ಸುಮಂತ್ರನು, ತ್ವರಿತಂ - ಬೇಗನೆ

---

ಇಂತಹ ಪ್ರಭಾವಶಾಲಿಯೂ, ಧರ್ಮಜ್ಞನೂ, ಮಹಾಮನಸ್ವಿಯೂ, ಮಕ್ಕಳಿಗಾಗಿ ಚಿಂತಿಸುತ್ತಿರುವವನೂ ಆದ ದಶರಥರಾಯನು, "ವಂಶವನ್ನು ಬಳೆಯಿಸುವ ಮಗನಿಲ್ಲವಲ್ಲ!" ಎಂದು ಚಿಂತಿಸುತ್ತಿದ್ದನು. ಹೀಗೆ ಯಾವಾಗಲು ಚಿಂತಿಸುತ್ತಿರುವ ಆ ಮಹಾತ್ಮನಿಗೆ "ಮಕ್ಕಳಿಗಾಗಿ ಅಶ್ವಮೇಧ ಯಾಗವನ್ನು ಮಾಡಲಿಲ್ಲವೇಕೆ ?" ಎಂಬ ಬುದ್ಧಿಯುಂಟಾಯಿತು. ಬಳಿಕಲಾತನು ಅಶ್ವಮೇಧ ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ,ಕೃತಜ್ಞರಾದ ಮಂತ್ರಿಗಳೊಡಗೂಡಿ, ಅವರಲ್ಲಿ ಮುಖ್ಯನಾದ ಸುಮಂತ್ರನನ್ನು ಕುರಿತು, "ಎಲೈ ಸುಮಂತ್ರನೇ ! ಪುರೋಹಿತರೇ ಮೊದಲಾದ ನನ್ನ ಗುರುಗಳನ್ನೆಲ್ಲಾ ಬೇಗನೆ ಕರೆಕಳುಹಿಸು" ಎಂದನು. ॥೪॥ ಬಳಿಕ ಶೀಘ್ರಗಾಮಿಯಾದ ಆ ಸುಮಂತ್ರನು ಜಾಗ್ರತೆಯಾಗಿ ಹೋಗಿ,

ದ್ರಾಜಾ ಹರ್ಷಪರ್ಯಾಕುಲೇಕ್ಷಣಃ ||೧೩|| ಸಂಭಾರಸ್ಸಂಭ್ರಿಯಂತಾಂ ಮೇ ಗುರೂಣಾಂ ವಚನಾದಿಹ|| ಸಮರ್ಥಾಧಿಷ್ಠಿತಶ್ಚಾಶ್ವಸ್ಸೋಪಾಧ್ಯಾಯೋ ವಿಮುಚ್ಯತಾಂ ||೧೪|| ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಂ || ಶಾಂತಯಶ್ಚಾಭಿವರ್ಧಂತಾಂ ಯಥಾಕಲ್ಪಂ ಯಥಾವಿಧಿ||೧೫|| ಶಕ್ಯಂ ಪ್ರಾಪ್ತುಮಯಂ ಯಜ್ಞಸ್ಸರ್ವೇಣಾಪಿ ಮಹೀಕ್ಷಿತಾ || ನಾಪರಾಧೋ ಭವೇತ್ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ ||೧೬|| ಛಿದ್ರಂ ಹಿ ಮೃಗಯಂತೇತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ|| ನಿಹತಸ್ಯ ಚ ಯಜ್ಞಸ್ಯ ಸದ್ಯಃಕರ್ತಾ ವಿನಶ್ಯತಿ ||೧೭|| ತದ್ಯಥಾ ವಿಧಿಪೂರ್ವಂ ಮೇ ಕ್ರತುರೇಷ ಸಮಾಪ್ಯತೇ || ತಥಾ ವಿಧಾನಂ

ನಿವಾರಣ ಸಮರ್ಥರಾದ ಪುರುಷರಿಂದ, ಅಧಿಷ್ಠಿತಃ - ರಕ್ಷಿಸಲ್ಪಟ್ಟ, ಸೋಪಾಧ್ಯಾಯಃ - ಉಪಾಧ್ಯಾಯನಿಂದೊಡಗೂಡಿದ, ಅಶ್ವಃ - ಕುದುರೆಯು, ವಿಮುಚ್ಯತಾಂ - ಬಿಡಲ್ಪಡಲಿ || ೧೪ || ಸರಯ್ವಾಃ-ಸರಯೂನದಿಯ, ಉತ್ತರೇಚ-ಉತ್ತರ ದಡದಲ್ಲಿ, ಯಜ್ಞಭೂಮಿಃ-ಯಜ್ಞಶಾಲೆಯು, ವಿಧೀಯತಾಂ-ಮಾಡಲ್ಪಡಲಿ, ಯಥಾಕಲ್ಪಂ-ಕ್ರಮಾನುಸಾರವಾಗಿ, ಯಥಾವಿಧಿ-ಶಾಸ್ತ್ರೋಕ್ತವಾಗಿ, ಶಾಂತಯಶ್ಚ-ವಿಘ್ನವನ್ನು ದೂರಮಾಡುವ ಕರ್ಮಗಳು, ಅಭಿವರ್ಧಂತಾಂ - ವೃದ್ಧಿಹೊಂದಿಸಲ್ಪಡಲಿ || ೧೫ || ಅಸ್ಮಿನ್ ಕ್ರತುಸತ್ತಮೇ-ಈ ಶ್ರೇಷ್ಠವಾದ ಅಶ್ವಮೇಧಕ್ರತುವಿನಲ್ಲಿ,ಕಷ್ಟಃ-ಕ್ಲೇಶಕರವಾದ,ಅಪರಾಧ-ಅಪಚಾರವು, ನಭವೇದ್ಯದಿ-ಇಲ್ಲದೇ ಹೋದರೆ, ಅಯಂಯಜ್ಞಃ-ಈ ಅಶ್ವಮೇಧವು, ಸರ್ವೇಣಾಪಿ-ಎಲ್ಲ, ಮಹೀಕ್ಷಿತಾ ಅರಸುಗಳಿಂದ, ಪ್ರಾಪ್ತುಂ-ಹೊಂದಲು, ಶಕ್ಯಂ-ಸಾಧ್ಯವಾಯಿತೋ || ೧೬ || ಹಿ-ಯಾವಕಾರಣ, ವಿದ್ವಾಂಸಃ-ಅಶ್ವಮೇಧ ಯಜ್ಞಸ್ವರೂಪವನ್ನು ತಿಳಿದಿರುವ, ಬ್ರಹ್ಮರಾಕ್ಷಸಾಃ-ಮಂತ್ರ ತಂತ್ರಲೋಪಾದಿ ದೋಷಗಳಿಂದ ರಾಕ್ಷಸತ್ವವನ್ನು ಪಡೆದಿರುವ ಬ್ರಾಹ್ಮಣರು, ಅತ್ರ - ಈ ಅಶ್ವಮೇಧಯಾಗದಲ್ಲಿ, ಛಿದ್ರಂ-ಅಪಚಾರವನ್ನು, ಮೃಗಯಂತೆ-ಹುಡುಕುತ್ತಾ, ನಿಹತಸ್ಯ - ಯಥಾವಿಧಾನವಾಗಿ ನಡಿಯದೆ ಇರುವ, ಯಜ್ಞಸ್ಯ-ಯಾಗದ, ಕರ್ತಾ-ಕರ್ತನು,ಸದ್ಯಃ ತತ್‍ಕ್ಷಣದಲ್ಲಿಯೇ, ವಿನಶ್ಯತಿ-ನಾಶವಾಗುವನು || ೧೭ || ತತ್-ಆಕಾರಣದಿಂದ, ಮೇ-ನನ್ನ, ಏಷಕ್ರತುಃ-ಈ ಯಜ್ಞವು, ವಿಧಿಪೂರ್ವಂ-ಶಾಸ್ತ್ರೋಕ್ತವಾಗಿ, ಯಥಾ-ಹೇಗೆ, ಸಮಾಪ್ಯತೇ-ಪೂರ್ತಿ ಮಾಡಲ್ಪಡುವುದೋ, ತಥಾ-

---

ಅಶ್ವಮೇಧಾರ್ಥವಾದ ಕುದುರೆಯು ಉಪಾಧ್ಯಾಯ ಸಹಿತವಾಗಿ ಬಿಡಲ್ಪಡಲಿ. || ೧೩-೧೪ || ಸರಯೂ ನದಿಯ ಉತ್ತರತೀರದಲ್ಲಿ ಯಜ್ಞಭೂಮಿಯನ್ನು ಮಾಡಿರಿ ; ಯಥಾವಿಧಿಯಾಗಿ ಶಾಂತಿಗಳು ವೃದ್ಧಿಹೊಂದಲಿ ; || ೧೫ || ಈ ಶ್ರೇಷ್ಠವಾದ ಅಶ್ವಮೇಧಯಾಗದಲ್ಲಿ ಕ್ಲೇಶಕರವಾದ ಅಪಚಾರವಿಲ್ಲದಿದ್ದರೆ ಸಮಸ್ತರಾಜರೂ ಈ ಯಜ್ಞವನ್ನು ಮಾಡಿಸಬಹುದು; ಇಲ್ಲವಾದರೆ ಬಲುಕಷ್ಟ ; ಏಕೆಂದರೆ, ಈ ಅಶ್ವಮೇಧಯಾಗ ಸ್ವರೂಪವನ್ನರಿತಿರುವ ಬ್ರಹ್ಮರಾಕ್ಷಸರು ಈ ಯಾಗದಲ್ಲಿ ಅಪಚಾರವನ್ನು ಹುಡುಕುತ್ತಿರುತ್ತಾರೆ. ಯಜ್ಞವು ಯಥಾವಿಧಿಯಾಗಿ ನಡೆಯದೆ ಕೆಟ್ಟುಹೋದರೆ ತಕ್ಷಣದಲ್ಲಿಯೇ ಕರ್ತನು ನಾಶವನ್ನೈದುವನು. || ೧೭ || ಆದ ಕಾರಣ ಶಾಸ್ತ್ರೋಕ್ತಪ್ರಕಾರವಾಗಿ ರಂಧ್ರಾನ್ವೇಷಿಗಳಾದ ಬ್ರಹ್ಮರಾಕ್ಷಸರಿಗೆ ಹೇಗೆ ಅವಕಾಶವಿಲ್ಲದಿರುವದೋ, ಹಾಗೆ ಕಾರ್ಯದಕ್ಷರಾದ ನೀವು ಯಾಗವನ್ನು ಮಾಡಿಸಬೇಕೆಂದಿಚ್ಛಿಸು

ಕ್ರಿಯತಾಂ ಸಮರ್ಥಾಃ ಕರಣೇಷ್ವಿಹ||೧೮||ತಥೇತಿಚಾ ಬ್ರುವನ್ ಸರ್ವೇಮಂತ್ರಿಣಃ ಪ್ರತ್ಯಪೂಜಯನ್ || ಪಾರ್ಥಿವೇಂದ್ರಸ್ಯ ತದ್ವಾಕ್ಯಂ ಯಥಾಜ್ಞಪ್ತಂ ನಿಶಮ್ಯತೇ || ೧೯ || ತಥಾ ದ್ವಿಜಾಸ್ತೇ ಧರ್ಮಜ್ಞಾ ವರ್ಧಯಂತೋ ನೃಪೋತ್ತಮಂ || ಅನುಜ್ಞಾತಾ ಸ್ತತಸ್ಸರ್ವೇ ಪುನರ್ಜಗ್ಮುರ್ಯಥಾಗತಂ ||೨೦|| ವಿಸರ್ಜಯಿತ್ವಾ ತಾನ್ವಿಪ್ರಾನ್ ಸಚಿವಾ ನಿದಮಬ್ರವೀತ್ || ಋತ್ವಿಗ್ಭಿರುಪದಿಷ್ಟೋಽಯಂ ಯಥಾವತ್ಕ್ರತುರಾಪ್ಯತಾಂ ||೨೧|| ಇತ್ಯುಕ್ತ್ವಾ ನೃಪಶಾರ್ದೂಲ ಸ್ಸಚಿವಾನ್

ಆರೀತಿ, ವಿಧಾನಂ-ಶಾಸ್ತ್ರೋಕ್ತ ಕರ್ಮಾನುಷ್ಠಾನವು, (ಭವದ್ಭಿಃ-ನಿಮ್ಮಿಂದ) ಕ್ರಿಯತಾಂ- ಮಾಡಲ್ಪಡಲಿ, ಕರಣೇಷು-ಕರ್ಮಗಳನ್ನು ನಡೆಯಿಸುವದರಲ್ಲಿ,(ಯೂಯಂ-ನೀವು,)ಇಹ-ಈಗ,ಸಮರ್ಥಾಃ-ಸಮರ್ಥರು || ೧೮ || ಸರ್ವೇ-ಎಲ್ಲ, ತೇಮಂತ್ರಿಣಃ-ಆಮಂತ್ರಿಗಳು, ಪಾರ್ಥಿವೇಂದ್ರಸ್ಯ-ರಾಜಶ್ರೇಷ್ಠನಾದ ದಶರಥರಾಜನ, ತದ್ವಾಕ್ಯಂ-ಆ ವಚನವನ್ನು, ನಿಶಮ್ಯ ಕೇಳಿ, ಯಥಾ-ಹೇಗೆ, ಆಜ್ಞಪ್ತಂ ಅಪ್ಪಣೆಯಾಯಿತೋ, ತಥಾ-ಹಾಗೆ, (ಕುರ್ಮ ಇತಿ-ಮಾಡುವೆವೆಂದು,) ಅಬ್ರುವನ್-ನುಡಿದರು, ಪ್ರತ್ಯಪೂಜಯಂಶ್ಚ-ಶ್ಲಾಘನೆಯನ್ನೂ ಮಾಡಿದರು || ೧೯ || ತಥಾ-ಹಾಗೆಯೆ, ಧರ್ಮಜ್ಞಾಃ ಧರ್ಮವನ್ನರಿತವರಾದ,ಸರ್ವೇ-ಸಮಸ್ತ,ತೇದ್ವಿಜಾಃ-ಆ ಬ್ರಾಹ್ಮಣರು,ನೃಪೋತ್ತಮಂ-ರಾಜಶ್ರೇಷ್ಠನನ್ನುಕುರಿತು, ವರ್ಧಯಂತಃ-ಆಶೀರ್ವಾದಗಳಿಂದ ವೃದ್ಧಿಗೊಳಿಸಿದವರಾಗಿ, ತತಃ-ಬಳಿಕ, ಅನುಜ್ಞಾತಾಃ-ಅನುಜ್ಞಾತರಾಗಿ, ಯಥಾಗತಂ ಬಂದಂತೆ, ಪುನಃ-ಮತ್ತು, ಜಗ್ಮುಃ-ಹೊರಟರು || ೨೦ || ತಾನ್ ವಿಪ್ರಾನ್-ಆ ಬ್ರಾಹ್ಮಣರನ್ನು, ವಿಸರ್ಜಯಿತ್ವಾ-ಕಳುಹಿಸಿ, ಋತ್ವಿಗ್ಭಿಃ-ಋತ್ವಿಕ್ಕುಗಳಿಂದ, ಅಯಂ- ಈ ಯಜ್ಞವು, ಯಥೋಪದಿಷ್ಟಃ- ಹೇಗೆ ಉಪದೇಶ ಮಾಡಲ್ಪಟ್ಟಿತೋ, ತಥಾ- ಹಾಗೆ, ಯಥಾವತ್ - ಶಾಸ್ತ್ರೋಕ್ತವಾಗಿ, ಕ್ರತುಃ ಯಜ್ಞವು, ಆಪ್ಯತಾಂ ಪೂರ್ತಿಗೊಳಿಸಲ್ಪಡಲ್ಲಿ ಇತಿ-ಎಂದು, ಸಚಿವಾನ್-ಮಂತ್ರಿಗಳನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು || ೨೧ || ಮಹಾದ್ಯುತಿಃ-ಮಹಾತೇಜಸ್ವಿಯಾದ, ನೃಪಶಾರ್ದೂಲಃ- ರಾಜೋತ್ತಮನಾದ ದಶರಥನು, ಇತಿ-ಹೀಗೆ, ಉಕ್ತ್ವಾ-ಹೇಳಿ, ಸಮುಪಸ್ಥಿತಾನ್-ಬಳಿಯಲ್ಲಿರುವ, ಸಚಿವಾನ್-ಮಂತ್ರಿಗಳನ್ನು,

ತ್ತೇನೆ" ಎಂದನು. || ೧೮ || ಈ ಮಾತನ್ನುಕೇಳಿದ ದಶರಥನಮಂತ್ರಿಗಳು ಬಹಳವಾಗಿ ಶ್ಲಾಘಿಸಿ, "ತಮ್ಮ ಆಜ್ಞೆಯಂತೆಯೇ ಮಾಡುವೆವು" ಎಂದು ಹೇಳಿದರು ಆ ಸಭಾಗತರಾದ ಬ್ರಾಹ್ಮಣರೆಲ್ಲರು, "ಅಭಿವೃದ್ಧಿಯನ್ನೈದಿರಿ" ಎಂದು ಆ ರಾಜನಿಗಾಶೀರ್ವಾದಮಾಡಿ ಆತನ ಅನುಜ್ಞೆಯನ್ನುಪಡೆದು ಹಿಂದಿರುಗಿದರು. || ೨೦ || ಆಗಲಾ ದಶರಥರಾಯನು, ಆದ್ವಿಜೋತ್ತಮರನ್ನು ಕಳುಹಿಸಿಕೊಟ್ಟು ಮಂತ್ರಿಗಳನ್ನು ಕುರಿತು, "ಅಯ್ಯಾ ಮಂತ್ರಿವರೇಣ್ಯರೆ! ಋತ್ವಿಕ್ಕುಗಳು ಹೇಳಿರುವ ಯಜ್ಞಸಾಮಗ್ರಿಗಳನ್ನೆಲ್ಲ, ಸಿದ್ಧಗೊಳಿಸಿರಿ" ಎಂದನು,

ಸಮುಪಸ್ಥಿತಾನ್॥ ವಿಸರ್ಜಯಿತ್ವಾ ಸ್ವಂವೇಶ್ಮ ಪ್ರವಿವೇಶ ಮಹಾದ್ಯುತಿಃ॥೨೨॥ ತತಸ್ಸಗತ್ವಾತಾಃ ಪತ್ನೀರ್ನರೇಂದ್ರೋ ಹೃದಯ ಪ್ರಿಯಾಃ॥ ಉವಾಚ ದೀಕ್ಷಾಂ ವಿಶತ ಯಕ್ಷ್ಯೇಹಂ ಸುತಕಾರಣಾತ್॥೨೩॥ ತಾಸಾಂ ತೇನಾತಿಕಾಂತೇನ ವಚನೇನ ಸುವರ್ಚಸಾಂ ॥ ಮುಖಪದ್ಮಾನ್ಯಶೋಭಂತ ಪದ್ಮಾನೀವ ಹಿಮಾತ್ಯಯೇ ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಮಸ್ಸರ್ಗಃ.

—(* * *)—

ವಿಸರ್ಜಯಿತ್ವಾ-ಬಿಟ್ಟು, ಸ್ವಂ-ತನ್ನ, ವೇಶ್ಮ-ಮನೆಯನ್ನು, ಪ್ರವಿವೇಶ-ಹೊಕ್ಕನು ॥ ೨೨ ॥ ತತಃ-ಬಳಿಕ, ನರೇಂದ್ರಃ-ರಾಜನಾದ, ಸಃ-ಆ ದಶರಥನು, ಹೃದಯಪ್ರಿಯಾಃ-ಮನೋಹರಾಂಗಿಯರಾದ, ತಾಃಪತ್ನೀಃ-ಆ ಹೆಂಡತಿಯರನ್ನು ಕುರಿತು, ಗತ್ವಾ-ಹೋಗಿ, ಅಹಂ-ನಾನು, ಸುತಕಾರಣಾತ್-ಪುತ್ರ ನಿಮಿತ್ತವಾಗಿ, ಯಕ್ಷ್ಯೇ-ಯಜ್ಞಮಾಡುತ್ತೇನೆ, (ಯೂಯಂ-ನೀವು,) ದೀಕ್ಷಾಂ- ಯಜ್ಞದೀಕ್ಷೆಯನ್ನು, ವಿಶತ-ಹೊಗಿರಿ, ಇತಿ ಎಂದು, ಉವಾಚ-ನುಡಿದನು, ॥ ೨೩ ॥ ಅತಿಕಾಂತೇನ-ಅತಿಮನೋಹರವಾದ, ತೇನವಚೇನ-ಆ ಮಾತಿನಿಂದ, ಸುವರ್ಚಸಾಂ-ಮಹಾತೇಜಸ್ಸುಳ್ಳ, ತಾಸಾಂ-ಆ ಸ್ತ್ರೀಯರ, ಮುಖಪದ್ಮಾನಿ-ಪದ್ಮಗಳಂತಿರುವ ಮುಖಗಳು, ಹಿಮಾತ್ಯಯೇ-ಹೇಮಂತಋತುವಾದ ಬಳಿಕ, ಪದ್ಮಾನೀವ-ಕಮಲಗಳಂತೆ, ಅಶೋಭಂತ-ಹೊಳೆಯುತ್ತಿದ್ದವು. ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಮಸ್ಸರ್ಗಃ.



ಅವರನ್ನಲ್ಲಿಯೇ ಬಿಟ್ಟು ಮಹಾತೇಜಸ್ವಿಯಾಗಿ ತನ್ನ ಮಂದಿರಕ್ಕೆ ಹೊರಟು ಹೋದನು. ॥೨೨॥ ಆ ಬಳಿಕ ನರನಾಥನಾದ ದಶರಥರಾಜನು ಮನೋಹರಾಂಗಿಯರಾದ ಹೆಂಡತಿಯರ ಬಳಿಗೆ ಹೋಗಿ "ಪುತ್ರೋತ್ಪತ್ತಿಗೋಸುಗ ನಾನು ಯಜ್ಞವನ್ನು ಮಾಡುವೆನು, ಆದುದರಿಂದ ನೀವೆಲ್ಲರು ದೀಕ್ಷೆಯನ್ನು ಕೈಕೊಳ್ಳಿರಿ," ಎಂದು ಹೇಳಲು, ಪ್ರಿಯವಾದ ಆ ಮಾತಿನಿಂದ ಆ ಷಟ್ಪದರಸಿಯರ ಮುಖಪದ್ಮಗಳು ಹಿಮಕಾಲವತಿಕ್ರಮಿಸಲು, ಪದ್ಮಗಳು ಕಂಗೊಳಿಸುವಂತೆ ಕಂಗೊಳಿಸುತಿದ್ದವು. ॥ ೨೪ ॥

ಇಂತಿದು ದಶರಥನ ಅಶ್ವಮೇಧಯಾಗ ಪ್ರಯತ್ನ ವರ್ಣನವೆಂಬ ಎಂಟನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ನವಮಸ್ಸರ್ಗ ಪ್ರಾರಂಭಃ.



ಏತಚ್ಛ್ರುತ್ವಾ ರಹಸೂತೋ ರಾಜಾನಮಿದಮಬ್ರವೀತ್ ‖ ಋತ್ವಿಗ್ಭಿರುಪದಿಷ್ಟೋಽಯಂ ಪುರಾ ವೃತ್ತೋ ಮಯಾಶ್ರುತಃ ‖೧‖ ಸನತ್ಕುಮಾರೋ ಭಗವಾನ್ ಪೂರ್ವಂ ಕಥಿತವಾನ್ ಕಥಾಂ ‖ ಋಷೀಣಾಂ ಸನ್ನಿಧೌ ರಾಜನ್ ತವ ಪುತ್ರಾಗಮಂಪ್ರತಿ ‖ ೨ ‖ ಕಾಶ್ಯಪಸ್ಯತು ಪುತ್ರೋಽಸ್ತಿ ವಿಭಂಡಕ ಇತಿಶ್ರುತಃ‖ ಋಷ್ಯಶೃಂಗ ಇತಿ ಖ್ಯಾತ ಸ್ತಸ್ಯಪುತ್ರೋ ಭವಿಷ್ಯತಿ ‖ ೩ ‖ ಸ ವನೇ ನಿತ್ಯ ಸಂವೃದ್ಧೋ ಮುನಿರ್ವನಚರಸ್ಸದಾ ‖ ನಾನ್ಯಂ ಜಾನಾತಿ ವಿಪ್ರೇಂದ್ರೋ ನಿತ್ಯಂ

---

ಏತತ್-ದಶರಥನು ಈ ನುಡಿಗಳನ್ನು, ಶ್ರುತ್ವಾ-ಕೇಳಿ, ಋತ್ವಿಗ್ಭಿಃ-ವಸಿಷ್ಠಾದಿ ಋತ್ವಿಕ್ಕುಗಳಿಂದ, ಉಪದಿಷ್ಟಃ-ಉಪದೇಶ ಮಾಡಲ್ಪಟ್ಟ, ಅಯಂ - ಈ ಅಶ್ವಮೇಧಯಾಗದ ವಿಷಯವಾದ, ಪುರಾವೃತ್ತಃ-ಕಥೆಯು, ಮಯಾ-ನನ್ನಿಂದ, ಶೃತಃ-ಕೇಳಲ್ಪಟ್ಟಿತು, ಇತಿ ಎಂದು, ಇದಂವಚನಂ-ಈ ಮಾತನ್ನು, ರಾಜಾನಂ - ದಶರಥನನ್ನು ಕುರಿತು, ಸೂತಃ-ಸಾರಥಿಯಾದ ಸುಮಂತ್ರನು, ರಹಃ-ಏಕಾಂತವಾಗಿ, ಅಬ್ರವೀತ್-ನುಡಿದನು ‖ ೧ ‖ ಹೇರಾಜನ್-ಎಲೈ ರಾಜನೇ, ಪೂರ್ವಂ-ಪೂರ್ವಕಾಲದಲ್ಲಿ, ಋಷೀಣಾಂ-ಋಷಿಗಳ, ಸನ್ನಿಧೌ-ಸಮೀಪದಲ್ಲ, ತವ-ನಿನಗೆ, ಪುತ್ರಾಗಮಂ ಪ್ರತಿ- ಪುತ್ರಪ್ರಾಪ್ತಿಯನ್ನು ಕುರಿತು, ಭಗವಾನ್-ಪೂಜ್ಯನಾದ, ಸನತ್ಕುಮಾರಃ - ಸನತ್ಕುಮಾರನು, ಕಥಾಂ-ಇತಿಹಾಸವನ್ನು, ಕಥಿತವಾನ್-ಹೇಳಿದನು ‖ ೨ ‖ ಕಾಶ್ಯಪಸ್ಯ - ಕಾಶ್ಯಪಋಷಿಗೆ, ವಿಭಂಡಕ ಇತಿ-ವಿಭಂಡಕನೆಂದು, ಶ್ರುತಃ-ಪ್ರಸಿದ್ಧನಾದ, ಪುತ್ರಃ ಕುಮಾರನು, ಅಸ್ತಿ-ಇರುವನು, ತಸ್ಯ ಆ ವಿಭಾಂಡಕಮುನಿಗೆ, ಋಶ್ಯಶೃಂಗ ಇತಿ-ಋಶ್ಯಶೃಂಗನೆಂದು, ಖ್ಯಾತಃ-ಪ್ರಸಿದ್ಧನಾದ, ಪುತ್ರಃ-ಮಗನು,ಭವಿಷ್ಯತಿ-ಆಗುವನು ‖ ೩ ‖. ಮುನಿಃ-ಋಷಿಯಾದ, ಸವಿಪ್ರೇಂದ್ರಃ-ಆ ಬ್ರಾಹ್ಮಣ ಶ್ರೇಷ್ಠನಾದ ಋಶ್ಯಶೃಂಗನು, ವನೇ - ವನದಲ್ಲಿ, ನಿತ್ಯ ಸಂವೃದ್ಧಃ - ಪ್ರತಿ ನಿತ್ಯ ದಲ್ಲಿ ಯೂ, ಪ್ರವೃದ್ಧಮಾನನಾಗಿ, ಸದಾ-ನಿರಂತರವು, ವನಚರಃ - ವನದಲ್ಲಿ ಸಂಚಾರ ಮಾಡುತ್ತಿರುವವನಾದ ಕಾರಣ, ನಿತ್ಯಂ-ಯಾವಗಲೂ, ಪಿತ್ರನು ವರ್ತನಾತ್-ತಂದೆಯನ್ನನುಸರಿಸುವುದರಿಂದ,ಅನ್ಯಂ-ಮತ್ತೊಬ್ಬನನ್ನು,

---

ಇಂತು ದಶರಥರಾಯನು ಮಕ್ಕಳನ್ನು ಪಡೆಯಲೋಸುಗ ಅಶ್ವಮೇಧ ಯಾಗವನ್ನು ಮಾಡುವೆನೆಂದು ಹೇಳಿದುದನ್ನು ಕೇಳಿದ ಸುಮಂತ್ರನು ಆತನನ್ನು ಕುರಿತು, “ ಎಲೈ ನರನಾಥನೇ ! ನಾನು ಹಿಂದೆ, ಋಷಿಸನ್ನಿಧಾನದಲ್ಲಿ ಮಹಿಮೆಯುಳ್ಳ ಸನತ್ಕುಮಾರ ಮುನಿಯಿಂದ, ನಿನ್ನ ಪುತ್ರಪ್ರಾಪ್ತಿ ವಿಷಯವಾಗಿ ಯಾವ ಇತಿಹಾಸವನ್ನು ಕೇಳಿದ್ದೆನೋ, ಅದನ್ನೀಗ ಹೇಳುವೆನು ಲಾಲಿಸು, ‖೨‖ “ವಿಭಂಡಕಮುನಿ”ಎಂದು ಪ್ರಸಿದ್ಧನಾದ ಕಾಶ್ಯಪ ಋಷಿಯು ಕುಮಾರನಿರುವನು. ಆತನಿಗೆ ಋಷ್ಯಶೃಂಗನೆಂದು ಪ್ರಖ್ಯಾತನಾದ ಮಗನಾಗುವನು. ‖೩‖ ಸದಾಕಾಲದಲ್ಲಿಯೂ ವನದಲ್ಲಿ ವೃದ್ಧಿಹೊಂದುತ್ತಿರುವನೂ, ವನಚಾರಿಯೂ, ಬ್ರಾಹ್ಮಣೋತ್ತಮನೂ,

ಪಿತ್ರಸುವರ್ತನಾತ್ ||೪|| ದ್ವೈವಿಧ್ಯಂ ಬ್ರಹ್ಮಚರ್ಯಸ್ಯ ಭವಿಷ್ಯತಿ ಮಹಾತ್ಮನಃ || ಲೋಕೇಷು ಪ್ರಥಿತಂ ರಾಜನ್ ವಿಪ್ರೈಶ್ಚ ಕಥಿತಂ ಸದಾ ||೫|| ತಸ್ಯೈವಂ ವರ್ತ್ತಮಾನಸ್ಯ ಕಾಲಸ್ಸಮಭಿವರ್ತತ || ಅಗ್ನಿಂ ಶುಶ್ರೂಷಮಾಣಸ್ಯ ಪಿತರಂಚ ಯಶಸ್ವಿನಂ ||೬|| ಏತಸ್ಮಿನ್ನೇವಕಾಲೇತು ರೋಮಪಾದಃ ಪ್ರತಾಪವಾನ್ || ಅಂಗೇಷು ಪ್ರಥಿತೋರಾಜಾ ಭವಿಷ್ಯತಿ ಮಹಾಬಲಃ ||೭||ತಸ್ಯ ವ್ಯತಿಕ್ರಮಾದ್ರಾಜ್ಞೋ ಭವಿಷ್ಯತಿ ಸುದಾರುಣಾ || ಅನಾವೃಷ್ಟಿಸ್ಸುಘೋರಾವೈ ಸರ್ವಭೂತ ಭಯಾವಹಾ ||೮|| ಅನಾವೃಷ್ಟ್ಯಾಂತು ವೃತ್ತಾಯಾಂ ರಾಜಾ ದುಃಖಸಮನ್ವಿತಃ ||

---

ನಜಾನಾತಿ-ತಿಳಿಯನು || ೪ || ಹೇರಾಜನ್-ಎಲೈ ಅರಸೆ, ಸದಾ-ನಿರಂತರವು, ಮಹಾತ್ಮನಃ- ಮಹಾತ್ಮನಾದ ಋಶ್ಯಶೃಂಗನಿಗೆ, (೧)ಬ್ರಹ್ಮಚರ್ಯಸ್ಯ-ಬ್ರಹ್ಮಚರ್ಯಾಶ್ರಮದಲ್ಲಿ, ಲೋಕೇಷು- ಲೋಕಗಳಲ್ಲಿ, ಪ್ರಥಿತಂ-ಪ್ರಸಿದ್ಧವಾದುದೆಂದು, ವಿಪ್ರೈಃ - ಬ್ರಾಹ್ಮಣರಿಂದ ಕಥಿತಂಚೇತಿ - ಹೇಳಲ್ಪಟ್ಟಿದ್ದೆಂದು, ದ್ವೈವಿಧ್ಯಂ-ಎರಡು ವಿಧವು, ಭವಿಷ್ಯತಿ ಆಗುವದು || ೫ || ಏವಂವರ್ತಮಾನಸ್ಯ-ಈರೀತಿ ಇರುವ, ಅಗ್ನಿಂ-ಅಗ್ನಿಯನ್ನು, ಯಶಸ್ವಿನಂ-ಕೀರ್ತಿವಂತನಾದ, ಪಿತರಂಚ-ತಂದೆಯನ್ನೂ, ಶುಶ್ರೂಷಮಾಣಸ್ಯ-ಸೇವಿಸುತ್ತಿರುವ, ತಸ್ಯ ಆ ಋಶ್ಯಶೃಂಗನಿಗೆ, ಕಾಲಃ-ಸಮಯವು, ಸಮಭಿವರ್ತತ - ಕಳೆದು ಹೋಗುತ್ತಲಿರುವದು || ೬ || ಏತಸ್ಮಿನ್ನೇವಕಾಲೇತು-ಇಷ್ಟರಲ್ಲಿಯೆ, ಪ್ರತಾಪವಾನ್ - ಪರಾಕ್ರಮಶಾಲಿಯಾದ, ಮಹಾಬಲಃ-ಅತಿಬಲಿಷ್ಠನಾದ, ರೋಮಪಾದಃ-ರೋಮಪಾದನೆಂಬ, ರಾಜಾ-ಅರಸು, ಅಂಗೇಷು-ಅಂಗದೇಶದಲ್ಲಿ, ಪ್ರಥಿತಃ- ಪ್ರಸಿದ್ಧನಾದವನು, ಭವಿಷ್ಯತಿ - ಆಗುವನು, ತಸ್ಯರಾಜ್ಞಃ-ಆ ಅರಸನ, ವ್ಯತಿಕ್ರಮಾತ್- ಧರ್ಮಾತಿಕ್ರಮಣದಿಂದ, ಸುದಾರುಣಾ-ಮಹಾಕ್ರೂರವಾದ, ಸರ್ವಭೂತಭಯಾವಹಾ-ಸಮಸ್ತಭೂತಗಳಿಗೂ ಭಯಂಕರವಾದ. ಸುಘೋರಾ=ಆತನ ರಾಷ್ಟ್ರಕ್ಕೆ ಮಾತ್ರ ಭೀತಿಕರವಾದ, ಅನಾವೃಷ್ಟಿಃ-ವರ್ಷಾಭಾವವೆಂಬ ದೋಷವು, ಭವಿಷ್ಯತಿ-ಆಗುವದು || ೮ || ಅನಾ

---

ಆದ ಋಶ್ಯಶೃಂಗನು ಯಾವಾಗಲೂ ತಂದೆಯನ್ನೇ ಅನುಸರಿಸುತ್ತಿರುವುದರಿಂದ ಮತ್ಯಾರನ್ನು ತಿಳಿದವನಲ್ಲ. || ೪ || ಮೌಂಜಿ,ಕೃಷ್ಣಾಜಿನ, ದಂಡಧಾರಣವೇ ಮೊದಲಾದ ಲಕ್ಷಣಗಳಿಂದ, ಲೋಕಪ್ರಸಿದ್ಧವಾದ ವಿವಾಹಾತ್ಪೂರ್ವದಲ್ಲಿನ ಬ್ರಹ್ಮಚರ್ಯವೂ, ವಿವಾಹಾತ್ಪರದಲ್ಲಿನ ಬ್ರಹ್ಮಚರ್ಯವೂ, ಎಂಬ ಎರಡು ವಿಧವಾದ ಬ್ರಹ್ಮಚರ್ಯೆಗಳು ಆ ಮಹಾತ್ಮನಿಗುಂಟಾಗುವವು. ತಂದೆಯನ್ನೂ ಅಗ್ನಿಯನ್ನೂ ಸೇವಿಸುತ್ತ ಪ್ರಥಮ ಬ್ರಹ್ಮಚರ್ಯದಲ್ಲಿರುವ ಆ ಮಹಾತ್ಮನಿಗೆ ಬಹಳ ಕಾಲವು ಕಳದು ಹೋಗುವದು. ||೭|| ಇಷ್ಟರಲ್ಲಿಯೆ ಅಂಗದೇಶದಲ್ಲಿ ರೋಮಪಾದನೆಂದು ಪ್ರಸಿದ್ಧನೂ,ಪರಾಕ್ರಮಿಯೂ ಆದ ರಾಜನು ಹುಟ್ಟುವನು||ಆ ನರಪತಿಯು ಧರ್ಮಲೋಪದಿಂದ ಆತನ ದೇಶದಲ್ಲಿ ಬಹಳ ಭಯಂಕರವಾದ ಅನಾವೃಷ್ಟಿ ದೋಷವು ಪ್ರಾಪ್ತವಾಗುವದು ||೮||

---

ಟಿಪ್ಪಣಿ || ೧. ಷೋಡಶರ್ತುರ್ನಿಶಾಸ್ತ್ರೀಣಾಂ ತಸ್ಮಿನ್ಯುಗ್ಮಾಸು ಸಂವಿಶೇತ್ | ಬ್ರಹ್ಮಚಾರ್ಯೇವಪರ್ವಾಣ್ಯಾದ್ಯಾಶ್ಚತಸ್ರಶ್ಚವರ್ಜಯೇತ್ || ಎಂದು ಯಾಜ್ಞವಲ್ಕ್ಯ ಸ್ಮೃತಿವಚನ. ಯಾವ ಪುರುಷನು ಋತುಕಾಲ ಮೊದಲು ನಾಲ್ಕುತಿಂಗಳನ್ನೂ ಮತ್ತು ಪರ್ವಕಾಲಗಳನ್ನೂ ಸಹಾ ತೊರೆದು ೧೬ ದಿನಗಳ ವರಿವಿಗೂ ಸ್ತ್ರೀಸಂಗ ಮಾಡುವನೋ ಅವನೂ ಬ್ರಹ್ಮಚಾರಿಯೆನಿಸುವನು. ಇದೇ ವಿವಾಹವಾದ ಬಳಿಕ ಬ್ರಹ್ಮಚರ್ಯದ ವಿಧಾನವು, ಎಂದು ಗೋವಿಂದರಾಜೀಯ.

ಬ್ರಾಹ್ಮಣಾಂಚ್ಛ್ರುತವೃದ್ಧಾಂಶ್ಚ ಸಮಾನೀಯ ಪ್ರವಕ್ಷ್ಯತಿ ॥ ೯ ॥
ಭವಂತಶ್ಶ್ರುತಧರ್ಮಾಣೋ ಲೋಕಚಾರಿತ್ರವೇದಿನಃ ॥ ಸಮಾದಿಶಂತು ನಿಯಮಂ
ಪ್ರಾಯಶ್ಚಿತ್ತಂ ಯಥಾಭವೇತ್॥೧೦॥ವಕ್ಷ್ಯಂತಿತೇಮಹೀಪಾಲಂ ಬ್ರಾಹ್ಮಣಾ
ವೇದಪಾರಗಾಃ ॥ ವಿಭಂಡಕಸುತಂ ರಾಜನ್ ಸರ್ವೋಪಾಯೈ ರಿಹಾನಯ ॥೧೧॥
ಆನಾಯ್ಯಚ ಮಹೀಪಾಲ ಋಶ್ಯಶೃಂಗಂ ಸುಸತ್ಕೃತಂ ॥ ಪ್ರಯಚ್ಛಕನ್ಯಾಂ
ಶಾಂತಾಂ ವೈವಿಧಿನಾ ಸುಸಮಾಹಿತಃ॥೧೨॥ ತೇಷಾಂತು ವಚನಂ ಶ್ರುತ್ವಾ ರಾಜಾ

ವೃಷ್ಟ್ಯಾಂತು-ಅನಾವೃಷ್ಟಿಯ ದೋಷವಾದರೆ, ವ್ಯತ್ರಾಯಾಂ-ದೇಶವನ್ನೆಲ್ಲಾ ವ್ಯಾಪಿಸಲು,ರಾಜಾ-ರೋಮಪಾದನು, ದುಃಖಸಮನ್ವಿತಃ-ದುಃಖಾಕ್ರಾಂತನಾಗಿ, ಶ್ರುತವೃದ್ಧಾಂಶ್ಚ-ಶಾಸ್ತ್ರದಲ್ಲಿ ವೃದ್ಧರಾದ, ಬ್ರಾಹ್ಮಣಾನ್-ಬ್ರಾಹ್ಮಣರನ್ನು, ಸಮಾನೀಯ-ಕರೆಯಿಸಿ, ಪ್ರವಕ್ಷ್ಯತಿ-ಹೇಳುವನು ॥ ೯ ॥ ಭವಂತಃ-ನೀವೆಲ್ಲರು, ಶ್ರುತಧರ್ಮಾಣಃ-ಕೇಳಲ್ಪಟ್ಟ ಧರ್ಮಗಳುಳ್ಳವರು, ಲೋಕಚಾರಿತ್ರವೇದಿನಃ-ಪ್ರಪಂಚದ ನಡತೆಯನ್ನರಿತವರು, ಪ್ರಾಯಶ್ಚಿತ್ತಂ- ಅನಾವೃಷ್ಟಿದೋಷಪರಿಹಾರೋಪಾಯ ರೂಪವಾದ ಪ್ರಾಯಶ್ಚಿತ್ತವು, ಯಥಾಭವೇತ್-ಹೇಗಾಗುವದೋ, ತಥಾ - ಹಾಗೆ, ನಿಯಮಂ ಆಚರಿಸಬೇಕಾದ ಧರ್ಮವನ್ನು, ಸಮಾದಿಶಂತು ಆಜ್ಞಾಪಿಸಿರಿ, ಹೇರಾಜನ್-ಎಲೈ ರಾಜನೇ, ವಿಭಂಡಕಸುತಂ-ವಿಭಂಡಕ ಋಷಿಯ ಕುಮಾರನಾದ ಋಷ್ಯಶೃಂಗನನ್ನು, ಸರ್ವೋಪಾಯೈಃ - ಎಲ್ಲ ಉಪಾಯಗಳಿಂದಲೂ, ಇಹ-ಈ ದೇಶಕ್ಕೆ, ಆನಯ-ಕರೆಯಿಸು, ಇತಿ-ಎಂದು, ವೇದಪಾರಗಾಃ-ವೇದಪಾರಂಗತರಾದ, ತೇಬ್ರಾಹ್ಮಣಾಃ - ಆ ಬ್ರಾಹ್ಮಣರು, ಮಹೀಪಾಲಂ - ಆರೋಮಪಾದನನ್ನು ಕುರಿತು, ವಕ್ಷ್ಯಂತಿ-ಹೇಳುವರು, ॥ ೧೧ ॥ ಹೇಮಹೀಪಾಲ-ಎಲೈ ರೋಮಪಾದನೇ, ಸುಸತ್ಕೃತಂ-ಚನ್ನಾಗಿ ಪೂಜಿಸಲ್ಪಟ್ಟ, ಋಶ್ಯಶೃಂಗಂ- ಋಶ್ಯಶೃಂಗಮುನಿಯನ್ನು, ಆನಾಯ್ಯ- ಕರೆಯಿಸಿ, ಸುಸಮಾಹಿತಃ-ಸಮಾಧಾನಚಿತ್ತನಾಗಿ, ವಿಧಿನಾ-ಶಾಸ್ತ್ರೋಕ್ತವಾಗಿ, ಶಾಂತಾಂಕನ್ಯಾಂ - ಶಾಂತೆಯೆಂಬ ಕನ್ಯಕೆಯನ್ನು, ಪ್ರಯಚ್ಛ-ಮದುವೆಮಾಡಿಕೊಡು, ॥ ೧೨ ॥ ತೇಷಾಂ-ಆ ಬ್ರಾಹ್ಮಣರ, ವಚನಂತು-ವಾಕ್ಯವನ್ನು, ಶ್ರುತ್ವಾ-ಕೇಳಿ, ವೀರ್ಯವಾನ್-ತೇಜಸ್ವಿಯಾದ, ಸಃ ಆ ಋಷಿಯು, ಕೇನೋಪಾಯೇನ-ಯಾವ

ಆಗಲಾ ರಾಜನು ಖತಿಗೊಂಡು ಶಾಸ್ತ್ರಜ್ಞರಾದ ಬ್ರಾಹ್ಮಣರನ್ನು ಕರೆಕಳುಹಿ ಹೀಗೆ ಹೇಳುವನು. ॥ ೯ ॥ "ಎಲೈ ಬ್ರಾಹ್ಮಣೋತ್ತಮರೇ ! ತಾವೆಲ್ಲರು ಧರ್ಮಜ್ಞರು; ಲೋಕಮರ್ಯಾದೆಯನ್ನು ತಿಳಿದವರೂ ಆಗಿರುವಿರಿ;ಆದುದರಿಂದ ಅನಾವೃಷ್ಟಿಗೆ ಮುಖ್ಯಕಾರಣವಾದ ನನ್ನ ಪಾತಕಕ್ಕೆ ಪ್ರಾಯಶ್ಚಿತ್ತವು ಹೇಗಿರುವದೋ, ಅದನ್ನು ತಾವೆಲ್ಲರೂ ಅಪ್ಪಣೆಕೊಡಿಸಬೇಕು"ಎಂದುಹೇಳುವನು. ಆಗ ವೇದಪಾರಗರಾದ ಆ ಬ್ರಾಹ್ಮಣರು ಆ ರಾಯನನ್ನು ಕುರಿತು ಹೀಗೆನ್ನುವರು. "ಎಲೈ ಮಹೀಪಾಲನೇ ! ವಿಭಂಡಕ ಋಷಿಯುಮಗನಾದ ಋಶ್ಯಶೃಂಗನನ್ನು ಎಲ್ಲಉಪಾಯಗಳಿಂದಲೂ, ನಿನ್ನದೇಶಕ್ಕೆಕರೆಯಿಸಿಕೊಂಡು,ಶಾಸ್ತ್ರೋಕ್ತವಾಗಿ ಪೂಜಿಸಿ, ನಿನ್ನಕುವರಿಯಾದ ಶಾಂತಾದೇವಿಯನ್ನು ಶಾಂತ ಚಿತ್ತನಾಗಿ ಆತನಿಗೆಕೊಟ್ಟು ವಿಧ್ಯುಕ್ತವಾಗಿ ಮದುವೆ ಮಾಡಿ ಕೊಡು" ॥ ೧೨ ॥ ಬಳಿಕಲಾ ರೋಮಪಾದನೆಂಬ ರಾಜನು ಆ ಬ್ರಾಹ್ಮಣೋತ್ತಮರ ನುಡಿಗಳನ್ನು ಕೇಳಿ "ಯಾವ ಉಪಾಯದಿಂದ ಋಶ್ಯಶೃಂಗನನ್ನು ಕರೆಯಿಸ

ಚಿಂತಾಂ ಪ್ರಪತ್ಸ್ಯತೇ || ಕೇನೋಪಾಯೇನ ವೈ ಶಕ್ಯ ಇಹಾನೇತುಂ ಸ ವೀರ್ಯ
ವಾರ್ || ೧೩ || ತತೋ ರಾಜಾ ವಿನಿಶ್ಚಿತ್ಯ ಸಹ ಮಂತ್ರಿಭಿರಾತ್ಮ ವಾನ್|| ಪುರೋ
ಹಿತಮಮಾತ್ಯಾಂಶ್ಚತತಃ ಪ್ರೇಷ್ಯತಿ ಸತ್ಕೃತಾನ್ || ೧೪ || ತೇ ತು ರಾಜ್ಞೋ
ವಚಶ್ಶ್ರುತ್ವಾ ವ್ಯಥಿತಾ ವಿನತಾನನಾಃ| ನ ಗಚ್ಛೇಮ ಋಷೇರ್ಭೀತಾ ಅನುನೇ
ಷ್ಯಂತಿ ತಂ ನೃಪಂ || ೧೫ || ವಕ್ಷ್ಯಂತಿ ಚಿಂತಯಿತ್ವಾ ತೇ ತಸ್ಯೋಪಾಯಾಂಶ್ಚ
ತತ್ಕ್ರಮಾನ್|| ಆನೇಷ್ಯಾಮೋ ವಯಂ ವಿಪ್ರಂ ನಚ ದೋಷೋ ಭವಿಷ್ಯತಿ||೧೬||
ಏವಮಂಗಾಧಿಪೇನೈವ ಗಣಿಕಾಭಿ ರೃಷೇಸ್ಸುತಃ|| ಆನೀತೋಽವರ್ಷ ಯದ್ದೇವ

ಉಪಾಯದಿಂದ, ಇಹ-ಇಲ್ಲಿ, ಆನೇತುಂ-ಕರೆದುಕೊಂಡು ಬರಲು, ಶಕ್ಯ ಇತಿ-ಸಾಧ್ಯನಾಗುವನೆಂದು, ರಾಜಾ-ಆ ರೋಮಪಾದ ರಾಯನು, ಚಿಂತಾಂ-ಯೋಚನೆಯನ್ನು, ಪ್ರಪತ್ಸ್ಯತೇ-ಹೊಂದುವನು, ||೧೩|| ತತಃ ಬಳಿಕ, ಆತ್ಮವಾನ್ ಜ್ಞಾನಿಯಾದ, ರಾಜಾ-ರೋಮಪಾದನು, ಮಂತ್ರಿಭಿಸ್ಸಹ- ಮಂತ್ರಿಗಳೊಡನೆ, ವಿನಿಶ್ಚಿತ್ಯ-ನಿಶ್ಚಯಿಸಿ, ತತಃ-ಬಳಿಕ, ಪುರೋಹಿತಂ-ಪುರೋಹಿತನನ್ನು, ಸತ್ಕೃತಾನ್ - ಪೂಜಿತರಾದ, ಅಮಾತ್ಯಾಂಶ್ಚ-ಮಂತ್ರಿಗಳನ್ನೂ, ತತಃ-ಆ ದೇಶದಿಂದ, ಪ್ರೇಷ್ಯತಿ-ಕಳುಹಿಸುವನು || ೧೪ || ತೇತು-ಆ ಮಂತ್ರಿಗಳಾದರೆ, ರಾಜ್ಞಃ-ರಾಜನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ವ್ಯಥಿತಾಃ-ದುಃಖಿತರಾಗಿ, ಋಷೇಃ ಋಷಿಗೋಸುಗ, ಭೀತಾಃ - ಭಯಗೊಂಡವರಾದಕಾರಣ, ವಿನತಾನನಾಃ-ತಗ್ಗಿದ ಮುಖವುಳ್ಳವರಾಗಿ, ನಗಚ್ಛೇಮ ಇತಿ-ಹೋಗಲಾರೆವೆಂದು, ತಂನೃಪಂ-ಆ ರಾಜನನ್ನು, ಅನುನೇಷ್ಯಂತಿ-ಉಪಾಯವನ್ನು ಹೇಳುವೆವೆಂದು ಅನುಸರಿಸುವರು ||೧೫| ತೇ-ಆ ಮಂತ್ರಿಗಳು, ಉಪಾಯಾಂಶ್ಚ-ಉಪಾಯಗಳನ್ನೂ, ತತ್ಕ್ರಮಾನ್ - ಅದರ ಕ್ರಮಗಳನ್ನೂ, ಚಿಂತಯಿತ್ವಾ-ಯೋಚಿಸಿ, ವಯಂ-ನಾವು, ವಿಪ್ರಂ-ಬ್ರಾಹ್ಮಣನಾದ ಋಷ್ಯಶೃಂಗನನ್ನು, ಆನೇಷ್ಯಾಮಃ-ಕರೆಯಿಸುವೆವು, ಅತ್ರ-ಈ ವಿಷಯದಲ್ಲಿ, ದೋಷಶ್ಚ-ದೋಷವೂ, ನಭವಿಷ್ಯತಿ ಆಗುವದಿಲ್ಲ, ಇತಿ-ಎಂದು, ತಸ್ಯ-ಆ ರಾಜನಿಗೆ, ವಕ್ಷ್ಯಂತಿ-ಹೇಳುವರು, ||೧೬|| ಏವಂ-ಹೀಗೆ, ಅಂಗಾಧಿಪೇನೈವ-ಅಂಗದೇಶದ ರಾಜನಾದ ರೋಮಪಾದನಿಂದಲೇ, ಗಣಿಕಾಭಿಃ-ವೇಶ್ಯಾಸ್ತ್ರೀಯರಿಂದ, ಋಷೇಃ-ವಿಭಂಡಕನ, ಸುತಃ ಕುಮಾರನಾದ ಋಷ್ಯಶೃಂಗನು, ಆನೀತಃ-ಕರೆಯಿಸಲ್ಪಟ್ಟನು, ದೇವಃ ಪರ್ಜನ್ಯನು, ಅವರ್ಷಯತ್ - ಮಳೆಸುರಿಸುವನು. ಶಾಂತಾಚ - ಶಾಂತಾ

ಬಹುದೆಂದು ಯೋಚಿಸಿ" ಮಂತ್ರಿಗಳೊಡನೆ ನಿಶ್ಚಯಿಸಿಕೊಂಡು ಪೂಜ್ಯರಾದ ಪುರೋಹಿತರನ್ನೂ ಮಂತ್ರಿಗಳನ್ನೂ ತನ್ನರಾಜ್ಯದಿಂದ ಕಳುಹುವನು.||೧೪|| ಅವರು ರಾಜನಮಾತನ್ನು ಕೇಳಿ ದುಃಖಿತರಾಗಿ, ಬತ್ತಿದ ಮುಖವುಳ್ಳವರಾಗಿ ತಲೆಬೊಗ್ಗಿಸಿಕೊಂಡು, "ಈ ವಿಷಯದಲ್ಲಿ ನಾವು ಹೋಗಲು ಶಕ್ತರಲ್ಲ. ಆದರೆ ಅದಕ್ಕೆ ತಕ್ಕ ಉಪಾಯವನ್ನು ಹೇಳವೆವು" ಎಂದು ರಾಜನನ್ನೇ ಅನುಸರಿಸಿ ಸಮಾಧಾನಗೊಳಿಸುತ್ತಾ ಆ ಋಷ್ಯಶೃಂಗನನ್ನು ಕರೆತರಲು ಅನುಕೂಲವಾದ ಉಪಾಯಗಳನ್ನು ಯೋಚಿಸಿಕೊಂಡು, "ನಾವು ಆ ವಿಪ್ರನನ್ನು ಕರೆಯಿಸುವೆವು ; ಆಗ ಅನಾವೃಷ್ಟಿರೂಪವಾದ ಈ ದೋಷವಿರುವದಿಲ್ಲ" ಎಂದು ಮಂತ್ರಿಗಳು ಹೇಳಿದರು. || ೧೬ || ಹೀಗೆ ಅಂಗದೇಶಾಧಿಪತಿಯಾದ ರೋಮಪಾದನಿಂದ ಕಳುಹಿಸಲ್ಪಟ್ಟ ವೇಶ್ಯಾಸ್ತ್ರೀಯರು ವಿಭಂಡಕಋಷಿಯ ಪುತ್ರನಾದ ಆ ಋಷ್ಯಶೃಂಗನನ್ನು ಕರೆತರುವರು, ಆ ಬಳಿಕ ರಾಜ

ಶಾಂತಾ ಚಾಸ್ಯ ಪ್ರದೀಯತೇ ॥ ೧೭ ॥ ಋಶ್ಯಶೃಂಗಸ್ತು ಜಾಮಾತಾ ಪುತ್ರಾಂಸ್ತವ ವಿಧಾಸ್ಯತಿ॥ ಸನತ್ಕುಮಾರಕಥಿತ ಮೇತಾವದ್ವ್ಯಾಹೃತಂಮಯಾ॥ ॥೧೮॥ ಅಥ ಹೃಷ್ಟೋ ದಶರಥ ಸ್ಸುಮಂತ್ರಂ ಪ್ರತ್ಯಭಾಷತ॥ ಯಥರ್ಶ್ಯಶೃಂಗ ಸ್ತ್ವಾನೀತೋ ವಿಸ್ತರೇಣ ತ್ವಯೋಚ್ಯತಾಂ ॥ ೧೯ ॥

॥ ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ನವಮಸ್ಸರ್ಗಃ ॥

ದೇವಿಯೂ, ಪ್ರದೀಯ್ಯತೇ - ಕೊಡಲ್ಪಡುವಳು ॥ ೧೭ ॥ ಜಾಮಾತಾ - ಅಳಿಯನಾದ, ಋಶ್ಯ ಶೃಂಗಸ್ತು-ಋಶ್ಯಶೃಂಗನಾದರೆ, ತವ-ನಿನಿಗೆ, ಪುತ್ರಾನ್-ಮಕ್ಕಳನ್ನು, ವಿಧಾಸ್ಯತಿ - ದೊರಕಿಸುವನು, ಸನತ್ಕುಮಾರಕಥಿತಂ-ಸನತ್ಕುಮಾರಮುನಿಯಿಂದ ಹೇಳಲ್ಪಟ್ಟ,ಏತಾವತ್-ಇಷ್ಟುಮಾತ್ರವು,ಮಯಾ-ನನ್ನಿಂದ, ವ್ಯಾಹೃತಂ-ಹೇಳಲ್ಪಟ್ಟಿತು ॥೧೮॥ ಅಥ-ಒಳಿಕ, ಹೃಷ್ಟಃ ಹರ್ಷಯುಕ್ತನಾದ, ದಶರಥಃ-ದಶರಥರಾಯನು, ಯಥಾ-ಹೇಗೆ, ಋಶ್ಯಶೃಂಗಸ್ತು-ಋಶ್ಯಶೃಂಗಋಷಿಯು, ಆನೀತಃ-ಕರದುಕೊಂಡು ಬರಲ್ಪಟ್ಟನೋ, ತಥಾ-ಹಾಗೆ, ವಿಸ್ತರೇಣ-ವಿಸ್ತಾರವಾಗಿ, ತ್ವಯಾ-ನಿನಿಂದ, ಉಚ್ಯತಾಂ - ಹೇಳಲ್ಪಡಲಿ, ಇತಿ-ಎಂದು, ಸುಮಂತ್ರಂ ಪ್ರತಿ-ಸುಮಂತ್ರನನ್ನು ಕುರಿತು, ಅಭಾಷತ-ಹೇಳಿದನು ॥೧೯॥

ಇತ್ಯಾರ್ಷೆ ಶ್ರೀಮದ್ರಾಮಾಯಣೇ ಬಾಲಕಾಂಡೇ ನವಮಸ್ಸರ್ಗಃ.



ಕುವರಿಯಾದ ಶಾಂತಾದೇವಿಯೂ ಸಹಾ ಆ ಋುಶ್ಯಶೃಂಗನಿಗೆ ಕೊಡಲ್ಪಡುವಳು. ॥ ೧೭ ॥ ಅಳಿಯನಾದ ಋುಶ್ಯಶೃಂಗನು ನಿನಗೆ ಪುತ್ರರುಂಟುಮಾಡುವನೆಂದು ಪೂರ್ವದಲ್ಲಿ ಸನತ್ಕುಮಾರಮುನಿಯು ಹೇಳಿದನಾದುದರಿಂದ ಇಷ್ಟುಮಾತ್ರ ಹೇಳಿರುವೆನೆಂದು ಸುಮಂತ್ರನು ನುಡಿದನು. ॥ ೧೮ ॥ ದಶರಥರಾಜನು ಈ ಕಥೆಯನ್ನು ಕೇಳಿ ಸಂತುಷ್ಟಾಂತರಂಗವುಳ್ಳವನಾಗಿ ಸುಮಂತ್ರನನ್ನುಕುರಿತು, "ಎಲೈ ಸುಮಂತ್ರನೇ! ಆ ಋುಶ್ಯಶೃಂಗನು ಅಂಗದೇಶಕ್ಕೆ ಕರೆಸಲ್ಪಟ್ಟುದು ಹೇಗೆ? ಅದನ್ನು ವಿಸ್ತಾರವಾಗಿ ಹೇಳು" ಎಂದನು. ॥೧೯॥

ಇಂತಿದು ಋುಶ್ಯಶೃಂಗಮುನಿಯ ಕಥೆಯನ್ನೆನಗುವ
ಒಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದಶಮಸ್ಸರ್ಗ ಪ್ರಾರಂಭಃ.



**ಸುಮಂತ್ರಶ್ಚೋದಿತೋ ರಾಜ್ಞಾ ಪ್ರೋವಾಚೇಂದಂ ವಚಸ್ತದಾ|| ಯಥರ್ಶ್ಯ ಶೃಂಗಸ್ತ್ವಾನೀತ ಶ್ಶೃಣು ಮೇ ಮಂತ್ರಿಭಿಸ್ಸಹ || (ತನ್ಮೇನಿಗದತಸ್ಸರ್ವಂವಿಸ್ತರೇಣಶೃಣುಷ್ವಿಹ) ||೧|| ರೋಮಪಾದಮುವಾಚೇದಂ ಸಹಾಮಾತ್ಯಃ ಪುರೋಹಿತಃ|| ಉಪಾಯೋ ನಿರಪಾಯೋಽಯ ಮಸ್ಮಾಭಿ ರಭಿಚಿಂತಿತಃ ||೨|| ಋಶ್ಯಶೃಂಗೋ ವನಚರ ಸ್ತಪಸ್ಸ್ವಾಧ್ಯಾಯನೇ ರತಃ|| ಅನಭಿಜ್ಞಸ್ಸನಾರೀಣಾಂ ವಿಷಯಾಣಾಂ ಸುಖಸ್ಯಚ ||೩|| ಇಂದ್ರಿಯಾರ್ಥೈರಭಿಮತೈ ರ್ನರಚಿತ್ತಪ್ರಮಾ**

ತದಾ-ಆಸಮಯದಲ್ಲಿ, ಸುಮಂತ್ರಃ-ಸುಮಂತ್ರನು,ರಾಜ್ಞಾ-ದಶರಥರಾಜನಿಂದ, ಚೋದಿತಃ-ಪ್ರೇರಿತನಾಗಿ, ಯಥಾ-ಹೇಗೆ, ಋಶ್ಯಶೃಂಗಸ್ತು-ಋಶ್ಯಶೃಂಗಋಷಿಯು,ಆನೀತಃ-ಕರೆತರಲ್ಪಟ್ಟನೋ, ತಥಾ-ಹಾಗೆ, ಮಂತ್ರಿಭಿಸ್ಸಹ - ಮಂತ್ರಿಗಳೊಡನೆ, ಮೇ -ನನ್ನ ದೆಶೆಯಿಂದ, ಶೃಣು-ಕೇಳು,ಇತಿ-ಇಂತೆಂದು, ಇದಂವಚಃ-ಈ ಮಾತನ್ನು, ಪ್ರೋವಾಚ-ಹೇಳಿದನು ||೧|| ನಿರಪಾಯಃ-ದೋಷರಹಿತವಾದ, ಅಯಂ ಉಪಾಯಃ-ಈ ಉಪಾಯವು, ಅಸ್ಮಾಭಿಃ-ನಮ್ಮಿಂದ, ಅನುಚಿಂತಿತ ಇತಿ-ಆಲೋಚಿಸಲ್ಪಟ್ಟಿರುವುದೆಂದು, ಸಹಾಮಾತ್ಯಃ ಮಂತ್ರಿಗಳಿಂದೊಡಗೂಡಿರುವ, ಪುರೋಹಿತಃ- ಪುರೋಹಿತನು, ರೋಮಪಾದಂ-ರೋಮಪಾದನನ್ನು ಕುರಿತು,ಇದಂವಚಃ-ಈ ಮಾತನ್ನು,ಉವಾಚ-ಹೇಳಿದನು ||೨|| ಋಶ್ಯಶೃಂಗಃ-ಋುಶ್ಯಶೃಂಗನು,ವನಚರಃ-ವನದಲ್ಲಿ ಸಂಚಾರಮಾಡುವನು,ತಪಸ್ಸ್ವಾಧ್ಯಾಯನೆ,ತಪಃ-ಚಾಂದ್ರಾಯಣಾದಿ ವ್ರತಗಳಲ್ಲಿಯೂ, ಸ್ವಾಧ್ಯಾಯನೆ-ವೇದಾಭ್ಯಾಸ ಮಾಡುವದರಲ್ಲಿಯೂ, ರತಃ-ಆಸಕ್ತನು, ಸಃ-ಆ ಋುಶ್ಯಶೃಂಗನು,ನಾರೀಣಾಂ-ಸ್ತ್ರೀಯರನ್ನು,ವಿಷಯಾಣಾಂ-ಶಬ್ದ, ಸ್ಪರ್ಶ, ರೂಪ, ರಸ, ಗಂಧ ರೂಪವಿಷಯಗಳ ಸಂಬಂಧವಾದ, ಸುಖಸ್ಯಚ-ಸುಖವನ್ನೂ, ಅನಭಿಜ್ಞಃ - ತಿಳಿದವನಲ್ಲ ||೩|| ನರಚಿತ್ತಪ್ರಮಾಥಿಭಿಃ-ಮಾನವರ ಮನಸ್ಸನ್ನಪಹರಿಸುವ, ಅಭಿಮತೈಃ - ಪ್ರಿಯವಾದ, ಇಂದ್ರಿಯಾರ್ಥೈಃ-ಸ್ರಕ್ಚಂದನವನಿತಾದಿರೂಪ ಇಂದ್ರಿಯ ವಿಷಯಗಳಿಂದ, ತಂ - ಆ ಋುಶ್ಯಶೃಂಗನನ್ನು, ಪುರಂ-ಪಟ್ಟಣವನ್ನು ಕುರಿತು, ಕ್ಷಿಪ್ರಂ-ಜಾಗ್ರತೆಯಾಗಿ, ಆನಾಯಯಿಷ್ಯಾಮಃ - ಕರೆಯಿಸು

---

ದಶರಥರಾಜನು ಹೀಗೆನ್ನಲು ಮಂತ್ರಿಯಾದ ಸುಮಂತ್ರನು ಆತನನ್ನು ಕುರಿತು, "ಋುಶ್ಯಶೃಂಗನನ್ನು ಕರೆತಂದ ರೀತಿಯನ್ನುಹೇಳುವೆನು. ಮಂತ್ರಿಗಳಿಂದೊಡಗೂಡಿದವನಾಗಿಕೇಳು"||೧| ಬಳಿಕ ಮಂತ್ರಿಸಹಿತನಾದ ಆ ಪುರೋಹಿತನು ರೋಮಪಾದರಾಯನನ್ನು ಕುರಿತಿಂತೆಂದನು. "ಎಲೈ ನರಪಾಲನೇ! ನಾವು ಯೋಚಿಸಿರುವ ಉಪಾಯವು ಅಪಾಯವಿಲ್ಲದಿರುವದು.||೨|| ವನಚಾರಿಯಾದ ಆ ಋುಶ್ಯಶೃಂಗನು ತಪಸ್ಸಿನಲ್ಲಿಯೂ, ಸ್ವಾಧ್ಯಾಯದಲ್ಲಿಯೂ, ಆಸಕ್ತಿಯುಳ್ಳವನಾಗಿ, ಸ್ತ್ರೀಸ್ವರೂಪವನ್ನೂ ವಿಷಯಸುಖಗಳನ್ನೂ ಸಹ, ಅರಿಯದೆ ಇರುವವನಾಗಿರುವನು ||೩||ಮನುಷ್ಯರ ಚಿತ್ತವನ್ನಪಹರಿಸುತ್ತಿರುವ ಇಂಪಾದ ಸ್ರಕ್ಚಂದನ ವನಿತಾದಿ ವಿಷಯಗ

ಥಿಭಿಃ || ಪುರಮಾನಾಯಯಿಷ್ಯಾಮಃ ಕ್ಷಿಪ್ರಂ ಚಾಧ್ಯವಸೀಯತಾಂ || ೪ ||
ಗಣಿಕಾಸ್ತತ್ರ ಗಚ್ಛಂತು ರೂಪವತ್ಯಸ್ಸ್ವಲಂಕೃತಾಃ || ಪ್ರಲೋಭ್ಯ ವಿವಿಧೋ
ಪಾಯೈ ರಾನೇಷ್ಯಂತೀಹ ಸತ್ಕೃತಾಃ ||೫|| ಶ್ರುತ್ವಾ ತಥೇತಿ ರಾಜಾ ಚ ಪ್ರತ್ಯು
ವಾಚ ಪುರೋಹಿತಂ || ಪುರೋಹಿತೋ ಮಂತ್ರಿಣಶ್ಚ ತಥಾ ಚಕ್ರುಶ್ಚ ತೇ ತದಾ||
|| ೬ || ವಾರಮುಖ್ಯಾಶ್ಚ ತಚ್ಛ್ರುತ್ವಾ ವನಂ ಪ್ರವಿವಿಶುರ್ಮಹತ್ || ೭|| ||
ಆಶ್ರಮಸ್ಯಾವಿದೂರೇಽಸ್ಮಿನ್ ಯತ್ನಂ ಕುರ್ವಂತಿ ದರ್ಶನೇ|| ಋಷಿಪುತ್ರಸ್ಯ ಧೀರಸ್ಯ
ನಿತ್ಯಮಾಶ್ರಮವಾಸಿನಃ || ೭|| || ಪಿತುಸ್ಸನಿತ್ಯಸಂತುಷ್ಟೋ ನಾತಿಚಕ್ರಾಮ
ಚಾಶ್ರಮಾತ್ ||೮|| ನ ತೇನ ಜನ್ಮಪ್ರಭೃತಿ ದೃಷ್ಟಪೂರ್ವಂ ತಪಸ್ವಿನಾ || ಸ್ತ್ರೀ

ತ್ರ್ತೀವೆ, ಅಧ್ಯವಸೀಯತಾಂ-ನಿಶ್ಚೈಸಲ್ಪಡಲಿ ||೪|| ರೂಪವತ್ಯಃ-ಸೌಂದರ್ಯಶಾಲಿಗಳಾದ, ಗಣಿಕಾಃ-ವೇಶ್ಯಾಸ್ತ್ರೀಯರು, ಅಲಂಕೃತಾಃ - ಭೂಷಣಾದಿಗಳಿಂದ ಸಿಂಗರಿಸಿಕೊಂಡು, ತತ್ರ-ಆ ಋಶ್ಯಶೃಂಗನ ವನಕ್ಕೆ, ಗಚ್ಛಂತು-ಹೋಗಲಿ, ವಿವಿಧೋಪಾಯ್ಯಃ ಅನೇಕ ಉಪಾಯಗಳಿಂದ, ಪ್ರಲೋಭ್ಯ-ವಂಚಿಸಿ, ಸತ್ಕೃತಾಃ-ಪೂಜಿತರಾಗಿ, ತಂ- ಆ ಋುಶ್ಯಶೃಂಗನನ್ನು, ಇಹ-ಇಲ್ಲಿಗೆ, ಆನೇಷ್ಯಂತಿ - ಕರೆದುಕೊಂಡು ಬರುವರು, ರಾಜಾ-ರೋಮಪಾದರಾಯನು, ಶ್ರುತ್ವಾ-ಇದನ್ನು ಕೇಳಿ, ಪುರೋಹಿತಂ-ಪುರೋಹಿತನನ್ನು ಕುರಿತು, ತಥೇತಿ-ಹಾಗೆಯೇ ಸರಿಯೆಂದು, ಪ್ರತ್ಯುವಾಚ - ಹೇಳಿದನು, ತದಾ-ಆಗ, ಪುರೋಹಿತಃ-ಪುರೋಹಿತನೂ, ತೇಮಂತ್ರಿಣಶ್ಚ-ಆ ಮಂತ್ರಿಗಳು, ತಥಾಚಕ್ರುಃ - ಹಾಗೆಯೇ ಮಾಡಿದರು || ೬ || ವಾರಮುಖ್ಯಾಶ್ಚ - ಮುಖ್ಯರಾದ ವೇಶ್ಯಾಸ್ತ್ರೀಯರು, ತತ್-ಆ ರಾಯನ ಆಜ್ಞೆಯನ್ನು, ಶ್ರುತ್ವಾ-ಕೇಳಿ, ಮಹತ್-ದೊಡ್ಡದಾದ, ವನಂ-ವನವನ್ನು, ಪ್ರವಿವಿಶುಃ-ಹೊಕ್ಕರು, ಆಶ್ರಮಸ್ಯ-ವಿಭಂಡಕ ಋಷ್ಯಾಶ್ರಮದ, ಅವಿದೂರೇ - ಸಮೀಪದಲ್ಲಿ,ಅಸ್ಮಿನ್-ಈ ವನದಲ್ಲಿ, ನಿತ್ಯಂ-ಯಾವಾಗಲೂ, ಆಶ್ರಮವಾಸಿನಃ-ಆಶ್ರಮದಲ್ಲೇ ಇರುವ, ಧೀರಸ್ಯ-ಬುದ್ಧಿವಂತನಾದ, ಋಷಿಪುತ್ರಸ್ಯ-ವಿಭಂಡಕ ಋಷಿಯ ಮಗನಾದ ಋುಶ್ಯಶೃಂಗನ, ದರ್ಶನೇ-ನೋಡುವಿಕೆಯಲ್ಲಿ, ಯತ್ನಂ- ಪ್ರಯತ್ನವನ್ನು, ಕುರ್ವಂತಿ ಮಾಡಿದರು || ೭ || ಸಃ-ಆ ಋುಶ್ಯಶೃಂಗನು, ಪಿತುಃ-ತಂದೆಯಿಂದ, ನಿತ್ಯಸಂತುಷ್ಟಃ, ನಿತ್ಯ-ನಿರಂತರವು, ಸಂತುಷ್ಟಃ-ತೃಪ್ತನಾಗಿ, ಆಶ್ರಮಾತ್- ಆಶ್ರಮದಿಂದ, ನಾತಿಚಕ್ರಾ

ಳಿಂದ, ಆ ಋುಶ್ಯಶೃಂಗನನ್ನು,ಜಾಗ್ರತೆಯಾಗಿ ಪಟ್ಟಣಕ್ಕೆ ಕರೆಯಿಸುವೆವು.ಇದರಂತೆ ನಿಶ್ಚೈಸು. ||೪|| ಬಹಳ ರೂಪವತಿಯರಾದ ವೇಶ್ಯಾಸ್ತ್ರೀಯರು ಅಲಂಕರಿತರಾಗಿ ಆ ಋುಶ್ಯಶೃಂಗನ ಆಶ್ರಮಕ್ಕೆ ಹೋಗಿ ಅನೇಕ ಉಪಾಯಗಳಿಂದ ವಂಚಿಸಿ, ಆತನನ್ನು ಇಲ್ಲಿಗೆ ಕರೆದುಕೊಂಡು ಬರಲಿ" ಎಂದು ನುಡಿದ ಪುರೋಹಿತನ ನುಡಿಗಳನ್ನುಕೇಳಿ, ರೋಮಪಾದರಾಯನು ಅವನನ್ನು ಕುರಿತು "ಪುರೋಹಿತರೇ! ನೀವು ಹೇಳಿದುದು ಸರಿಯಾಗಿರುವದು", ಎಂದು ನುಡಿಯಲು, ಪುರೋಹಿತರೂ, ಮಂತ್ರಿಗಳೂಕೂಡ, ಹಾಗೆಯೇ ಮಾಡಿದರು. ||೫-೬|| ಆ ಗಲಾ ವೇಶ್ಯೆಯರೂಸಹ ಮಹತ್ತರವಾದ ಆವನವನ್ನುಹೊಕ್ಕು ಆಶ್ರಮದ ಸಮೀಪದಲ್ಲಿ ನಿಂತುಅಲ್ಲಿರುವ ಋುಶ್ಯಶೃಂಗನನ್ನು ನೋಡಲು ಯತ್ನಿಸುತ್ತಿದ್ದರು. ||೭|| ತಂದೆಯ ಸೇವೆಯಿಂದಲೇ ತೃಪ್ತನಾದ ಆ ಋುಶ್ಯಶೃಂಗನು ಆಶ್ರಮದಿಂದ ಹೊರಕ್ಕೆಬರಲಿಲ್ಲವು. ||೮|| ಇಷ್ಟೆ

ವಾ ಪುಮಾನ್ವಾ ಯಚ್ಚಾನ್ಯತ್ಸರ್ವಂ ನಗರ ರಾಷ್ಟ್ರಜಂ || ೯ || ತತಃ ಕದಾ ಚಿತ್ತಂ ದೇಶ ಮಾಜಗಾಮ ಯದೃಚ್ಛಯಾ || ವಿಭಂಡಕ ಸುತಸ್ತತ್ರ ತಾಶ್ಚಾ ಪಶ್ಯದ್ವರಾಂಗನಾಃ ||೧೦|| ತಾಶ್ಚಿತ್ರವೇಷಾಃ ಪ್ರಮದಾ ಗಾಯಂತ್ಯೋ ಮಧು ರಸ್ವರಾಃ || ಋಷಿಪುತ್ರಮುಪಾಗಮ್ಯ ಸರ್ವಾ ವಚನಮಬ್ರುವನ್ || ೧೧ || ಕಸ್ತ್ವಂ ಕಿಂ ವರ್ತಸೇ ಬ್ರಹ್ಮನ್ ಜ್ಞಾತುಮಿಚ್ಛಾಮಹೇ ವಯಂ || ಏಕಶ್ಚ ವಿಜನೇ ಘೋರೇ ವನೇ ಚರಸಿ ಶಂಸನಃ ||೧೨|| ಅದೃಷ್ಟರೂಪಾಸ್ತಾಸ್ತೇನ ಕಾಮ್ಯ ರೂಪಾ ವನೇ ಸ್ತ್ರೀಯಃ || ಹಾರ್ದಾತ್ತಸ್ಯ ಮತಿರ್ಜಾತಾ ಹ್ಯಾಖ್ಯಾತುಂ ಪಿತರಂ

ಮ=ಆಚೆಗೆ ಹೋಗಲೇ ಇಲ್ಲ, || ೮ || ತಪಸ್ವಿನಾ = ತಪಸ್ವಿಯಾದ, ತೇನ = ಆಋಶ್ಯಶೃಂಗನಿಂದ, ಜನ್ಮಪ್ರಭೃತಿ-ಹುಟ್ಟಿದ್ದು ಮೊದಲುಗೊಂಡು, ಸ್ತ್ರೀವಾ-ಹಂಗಸೇ ಆಗಲಿ, ಪುಮಾನ್ವಾ-ಪುರುಷ ನೇ ಆಗಲಿ, ಅನ್ಯತ್-ಮತ್ತೊಂದು, ಯತ್ - ಯಾವದೋ, ನಗರರಾಷ್ಟ್ರಜಂ - ಊರಲ್ಲೇ ಆಗಲಿ, ಅಥವಾ ಊರಿಗೆ ಸೇರಿದ ರಾಜ್ಯದಲ್ಲಿಯೇ ಆಗಲಿ ಹುಟ್ಟಿದ, ತತ್ಸರ್ವಂ- ಆ ಜಂಗಮ ವಿಶೇಷವಾವ ದೊಂದುನ್ನು, ನದೃಷ್ಟಪೂರ್ವಂ-ಪೂರ್ವದಲ್ಲಿ ನೋಡಲಿಲ್ಲ, || ೯ || ತತಃ ಬಳಿಕ, ವಿಭಂಡಕ ಸುತಃ - ವಿಭಂಡಕ ಋಷಿಯಪುತ್ರನಾದ ಋಶ್ಯಶೃಂಗನು, ಯದೃಚ್ಛಯಾ - ಅಕಸ್ಮಾತ್ತಾಗಿ, ತಂದೇಶಂ-ವೇಶ್ಯಯರಿದ್ದ ಆ ಪ್ರದೇಶವನ್ನು ಕುರಿತು, ಕದಾಚಿತ್ - ಒಂದಾನೊಂದು ಕಾಲದಲ್ಲಿ, ಆ ಜಗಾಮ - ಬಂದನು, ತತ್ರ - ಆ ವನಪ್ರದೇಶದಲ್ಲಿ, ತಾಃ ವರಾಂಗನಾಃ- ಆ ವೇಶ್ಯಾಸ್ತ್ರೀಯರೂ, (ತಂ - ಆ ಋಶ್ಯಶೃಂಗನನ್ನು,) ಅಪಶ್ಯತ್ - ನೋಡಿದರು, || ೧೦ || ಚಿತ್ರವೇಷಾಃ - ಅತಿ ವಿಚಿತ್ರವಾದ ವೇಷಗಳುಳ್ಳ, ಸರ್ವಾಃ-ಎಲ್ಲ, ತಾಃಪ್ರಮದಾಃ- ಆ ವೇಶ್ಯೆಯರು, ಮಧುರಸ್ವರಾಃ, ಮಧುರ - ಕೇಳಲಿಂಪಾದ, ಸ್ವರಾಃ - ಕಂಠಸ್ವರ ವುಳ್ಳವರಾಗಿ, ಗಾಯಂತ್ಯಃ-ಗಾನ ಮಾಡುತ್ತ, ಋಷಿಪುತ್ರಂ - ಋಶ್ಯಶೃಂಗನನ್ನು ಕುರಿತು, ಉಪಾಗಮ್ಯ - ಬಳಿಸಾರಿ, ವಚನಂ - ಮಾತನ್ನು, ಪ್ರಬ್ರುವನ್ - ನುಡಿದರು, ||೧೧|| ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ತ್ವಂ- ನೀನು, ಕಃ - ಯಾರು ? ಕಿಂವರ್ತಸೆ - ಏತಕ್ಕೋಸುಗ ಇಲ್ಲಿರುವೆ, ವಿಜನೇ - ಜನರಹಿತವಾದ, ಘೋರೇ - ಭಯಂಕರವಾದ, ವನೇ - ಕಾಡಿನಲ್ಲಿ, ಏಕಸ್ಸನ್- ಒಬ್ಬಂಟಿಗನಾಗಿ, ವಿಚರಸಿ- ಸಂಚಾರ ಮಾಡುವೆ ಯೇಕೆ? ವಯಂ - ನಾವು, ಜ್ಞಾತುಂ - ತಿಳಿಯಲು, ಇಚ್ಛಾಮಹೇ - ಅಪೇಕ್ಷಿಸುತ್ತೇವೆ, ನಃ-ನಮಗೆ ಶಂಸ - ಹೇಳು, || ೧೨ || ಕಾಮ್ಯರೂಪಾಃ - ಅಪೇಕ್ಷಿಸತಕ್ಕ ರೂಪವುಳ್ಳ, ತಾಸ್ತ್ರಿಯಃ - ಆ ಹೆಂಗ

ಯಲ್ಲದೆ ಆವಿಭಂಡಕಕುಮಾರನು ಪಟ್ಟಣದಲ್ಲಿ ಸ್ತ್ರೀ ಪುರುಷರನ್ನು ಕಂಡೇ ಇರಲಿಲ್ಲವು ಹೀಗಿರ ವಲ್ಲಿ ಋಶ್ಯಶೃಂಗನು ಒಂದಾನೊಂದು ಕಾಲದಲ್ಲಿ ಆಶ್ರಮದಿಂದ ಅಕಸ್ಮಾತ್ತಾಗಿ ಆ ವೇಶ್ಯ ಯರಿದ್ದಲ್ಲಿಗೆ ಬಂದನು, || ೧೦ || ವಿಚಿತ್ರವಾದ ವೇಷಗಳುಳ್ಳ ಆ ಪ್ರಮದೆಯರು, ಮಧುರ ವಾದ ಸ್ವರದಿಂದ ಗಾನಮಾಡುತ್ತ, ಋಷಿಪುತ್ರನಾದ ಋಶ್ಯಶೃಂಗನನ್ನು ಕುರಿತು ||೧೧|| "ಎಲೈ ಬ್ರಾಹ್ಮಣನೇ ! ನೀನಾರು ? ಇಲ್ಲಿ ಏತಕ್ಕಾಗಿರುವೆ, ಅತಿ ಭಯಂಕರವಾಗಿಯೂ, ಜನರಹಿತವಾಗಿಯೂ, ಇರುವ ಈ ವನದಲ್ಲಿ ನೀನೊಬ್ಬನೇ ಯಾಕೆ ಸಂಚರಿಸುವಿ ? ಇದ ನ್ನೆಲ್ಲ ತಿಳಿಯಲು ನಾವು ಇಚ್ಛಿಸುವೆವು. ಹೇಳು" ಎಂದು ನುಡಿದರು. ಆಗ ಸುಂದರಿಯ

ಸ್ವಕಂ||೧೩||ಪಿತಾ ವಿಭಂಡಕೋಸ್ಮಾಕಂ ತಸ್ಯಾಹಂ ಸುತ ಔರಸಃ|| ಋಶ್ಯಶೃಂಗ ಇತಿಖ್ಯಾತಂ ನಾಮ ಕರ್ಮ ಚ ಮೇ ಭುವಿ ||೧೪|| ಇಹಾಶ್ರಮಪದೋಸ್ಮಾಕಂ ಸಮೀಪೇ ಶುಭದರ್ಶನಾಃ|| ಕರಿಷ್ಯೇವೋತ್ರ ಪೂಜಾಂ ವ್ವ ಸರ್ವೇಷಾಂ ವಿಧಿ ಪೂರ್ವಕಂ ||೧೫|| ಋಷಿಪುತ್ರವಚಶ್ಶ್ರುತ್ವಾ ಸರ್ವಾಸಾಂ ಮತಿರಾಸವೈ || ತದಾಶ್ರಮಪದಂ ದ್ರಷ್ಟುಂ ಜಗ್ಮುಸ್ಸರ್ವಾಶ್ಚ ತೇನ ತಾಃ ||೧೬|| ಆಗತಾನಾಂ ತತಃ ಪೂಜಾಮೃಷಿಪುತ್ರಶ್ಚ ಕಾರಹ || ಇದಮರ್ಘ್ಯಮಿದಂ ಪಾದ್ಯ ಮಿದಂ ಮೂಲಂ

ಸರು, ವನೇ = ವನದಲ್ಲಿ, ತೇನ - ಆ ಋಷ್ಯಶೃಂಗನಿಂದ, ಅದೃಷ್ಟರೂಪಾಃ - ಎಂದಿಗೂ ನೋಡಲ್ಪಡದಿರುವ ರೂಪವುಳ್ಳವರು, ಹಾರ್ದಾತ್-ಸ್ನೇಹಭಾವದಿಂದ, ತಸ್ಯ-ಆ ಋುಶ್ಯಶೃಂಗನಿಗೆ, ಸ್ವಕಂ-ತನ್ನ, ಪಿತರಂ-ತಂದೆಯ ವಿಷಯವನ್ನು, ಆಖ್ಯಾತಂ - ಹೇಳಲು, ಮತಿಂ - ಬುದ್ಧಿಯು, ಜಾತಾಹಿ - ಹುಟ್ಟಿತಷ್ಟೆ, ||೧೩|| ಅಸ್ಮಾಕಂ - ನಮಗೆ, ವಿಭಂಡಕಃ - ವಿಭಂಡಕ ಋಷಿಯು, ಪಿತಾ - ತಂದೆಯು, ತಸ್ಯ - ಆತನಿಗೆ, ಅಹಂ - ನಾನು, ಔರಸಸ್ಸುತಃ - ಔರಸಪುತ್ರನು, ಮೇ - ನನ್ನ, ನಾಮ - ಹೆಸರು, ಋಶ್ಯಶೃಂಗಇತಿ - ಋಶ್ಯಶೃಂಗನೆಂದು, ಕರ್ಮಚ - ತಪೋವ್ಯಾಪಾರವು, ಭುವಿ - ಭೂಮಿಯಲ್ಲಿ, ಖ್ಯಾತಂ- ಪ್ರಸಿದ್ಧವು, ||೧೪|| ಹೇ ಶುಭದರ್ಶನಾಃ - ಎಲೈ ಶುಭಕರವಾದ ದರ್ಶನವುಳ್ಳವರೆ, ಇಹ- ಈ ವನದ, ಸಮೀಪೇ - ಸಮೀಪದಲ್ಲಿಯ, ಅಸ್ಮಾಕಂ - ನಮ್ಮ, ಆಶ್ರಮಪದಃ - ಆಶ್ರಮಸ್ಥಾನವು, ಅತ್ರ - ಅಲ್ಲಿ, ವಃ ಸರ್ವೇಷಾಂ ನಿಮ್ಮೆಲ್ಲರಿಗೂ, ವಿಧಿಪೂರ್ವಕಂ ಶಾಸ್ತ್ರೋಕ್ತವಾಗಿ, ಪೂಜಾಂವೈ- ಪೂಜೆಯನ್ನು, ಕರಿಷ್ಯೆ - ಮಾಡುವೆನು, ||೧೫|| ಋಷಿಪುತ್ರವಚಃ, ಋಷಿಪುತ್ರ ಋಶ್ಯಶೃಂಗನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವಾಸಾಂ - ವೇಶ್ಯೆಯರೆಲ್ಲರಿಗೂ, ತದಾಶ್ರಮಪದಂ, ತತ್- ಆ ಋಶ್ಯಶೃಂಗನ, ಆಶ್ರಮಪದಂ - ಆಶ್ರಮವನ್ನು, ದ್ರಷ್ಟುಂ- ನೋಡಲು, ಮತಿಃ-ಬುದ್ಧಿಯು ಆಸ - ಹುಟ್ಟಿತು, ತಾಸ್ಸರ್ವಾಃ - ಅವರೆಲ್ಲರೂ, ತೇನ - ಆ ಋುಶ್ಯಶೃಂಗನೊಡನೆ, ಜಗ್ಮುಃ-ಹೊರಟರು ||೧೬|| ತತಃ - ಬಳಿಕ ಋಷಿಪುತ್ರಃ - ಋಶ್ಯಶೃಂಗಋಷಿಯು, ಆಗತಾನಾಂ - ಬಂದ, ವೇಶ್ಯೆಯರಿಗೆ, ಇದಂ - ಇದು, ಅರ್ಘ್ಯಂ - ಅರ್ಘ್ಯವು, ಇದಂ ಇದು ಪಾದ್ಯಂ - ಪಾದೋದಕವು, ಇದಂ - ಇದು, ನಃ - ಋಷಿಗಳಾದ ನಮ್ಮ ಆಹಾರರೂಪವಾದ, ಮೂಲಂ - ಕಂದಮೂಲವು,

ರಾದ ಆ ಸ್ತ್ರೀಯರನ್ನು, ಎಂದು ನೋಡದೇ ಇರುವುದರಿಂದ ಆ ಋಶ್ಯಶೃಂಗನು ತನ್ನ ತಂದೆಯ ವಿಷಯವನ್ನು ಅವರಿಗೆ ತಿಳಿಸಬೇಕೆಂದು ಇಚ್ಛಿಸಿ, ಅವರನ್ನು ಕುರಿತು, ||೧೩|| "ನಮ್ಮ ತಂದೆಯು ವಿಭಂಡಕಋಷಿಯು; ಆತನ ಔರಸಪುತ್ರನೇ ನಾನು ; ನನ್ನ ಹೆಸರು ಋಶ್ಯಶೃಂಗನೆಂದು, ಭೂಮಿಯಲ್ಲಿ ಪ್ರಸಿದ್ಧಿಯಾಗಿರುವದು ||೧೪|| ಎಲೈ ಮಂಗಳಕರವಾದ ನೋಟವುಳ್ಳವರೇ ! ನಮ್ಮಾಶ್ರಮವು ಇಲ್ಲಿಯೇ ಸಮೀಪದಲ್ಲಿರುವದು. ನಿಮ್ಮೆಲ್ಲರಿಗೂ ಯಥಾವಿಧಿಯಾಗಿ ಪೂಜೆಯನ್ನರ್ಪಿಸುವೆನು" ಎಂದು ನುಡಿದನು. ಋಶ್ಯಶೃಂಗಮುನಿಯ ಮಾತನ್ನು ಕೇಳಿದ ಆ ವೇಶ್ಯೆಯರು, ಆತನ ಆಶ್ರಮವನ್ನು ನೋಡಲಪೇಕ್ಷಿಸಿದರು. ||೧೬|| ಆ ಬಳಿಕ ಋಷಿಪುತ್ರನಾದ ಋಶ್ಯಶೃಂಗನು ಆಶ್ರಮಕ್ಕೆ ಬಂದ ಆ ವೇಶ್ಯೆಯರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಪೂಜಿಸಲು, ಅವರೆಲ್ಲರೂ ಆದನ್ನು ಸ್ವೀಕರಿಸಿ, ವಿಭಂಡಕ

ಫಲಂ ಚ ಸಃ ||೧೭|| ಪ್ರತಿಗೃಹ್ಯ ಚ ತಾಂ ಪೂಜಾಂ ಸರ್ವಾ ಏವ ಸಮುತ್ಸು ಕಾಃ|| ಋಷೇರ್ಭೀತಾಶ್ಚ ಶೀಘ್ರಂ ತಾಃ ಗಮನಾಯ ಮತಿಂ ದಧುಃ ||೧೮|| ಅಸ್ಮಾಕಮಪಿ ಮುಖ್ಯಾನಿ ಫಲಾನೀಮಾನಿ ವೈ ದ್ವಿಜ || ಗೃಹಾಣ ಪ್ರತಿಭದ್ರಂ ತೇ ಭಕ್ಷಯಸ್ವ ಚ ಮಾಚಿರಂ ||೧೯|| ತತಸ್ತಾಸ್ತಂ ಸಮಾಲಿಂಗ್ಯ ಸರ್ವಾ ಹರ್ಷ ಸಮನ್ವಿತಾಃ||ಮೋದಕಾನ್ಪ್ರದದುಸ್ತಸ್ಮೈ ಭಕ್ಷ್ಯಾಂಶ್ಚ ವಿವಿಧಾನ್ಬಹೂನ್||೨೦|| ತಾನಿಚಾಸ್ವಾದ್ಯ ತೇಜಸ್ವೀ ಫಲಾನೀತಿ ಸ್ಮ ಮನ್ಯತೇ || ಅನಾಸ್ವಾದಿತಪೂರ್ವಾಣಿ ವನೇ ನಿತ್ಯ ನಿವಾಸಿನಾಂ ||೨೧|| ಆಪೃಚ್ಛ್ಯ ಚ ತದಾ ವಿಪ್ರಂ ವ್ರತಚರ್ಯಾಂ ನಿವೇ

---

ಫಲಂಚ - ಫಲವೂ ಎಂದು, ಪೂಜಾಂ - ಪೂಜೆಯನ್ನು, ಚಕಾರಹ - ಮಾಡಿದನಷ್ಟೆ ||೧೭|| ಸರ್ವಾಃ - ವೇಶ್ಯೆಯರಲ್ಲರು, ಸಮುತ್ಸುಕಾಃ- ಉತ್ಸಾಹಭರಿತರಾಗಿ,ತಾಂಪೂಜಾಂ- ಆ ಪೂಜೆಯನ್ನು, ಪ್ರತಿಗೃಹ್ಯ - ಸ್ವೀಕರಿಸಿ, ಋಷೇಃ - ವಿಭಾಂಡಕ ಋಷಿಗೆ, ಭೀತಾಃ - ಭಯಗೊಂಡು, ಶೀಘ್ರಂ - ಬೇಗನೆ, ತಾಃ - ಅವರೆಲ್ಲರು, ಗಮನಾಯ - ಹಿಂತಿರುಗಲು, ಮತಿಂ ದಧುಃ - ಮನವೆರದರು. ||೧೮|| ಹೇ ದ್ವಿಜ - ಓ ಬ್ರಾಹ್ಮಣನೇ ! ಅಸ್ಮಾಕಂ ನಮಗೆ, ಮುಖ್ಯಾನಿ - ಮುಖ್ಯಗಳಾದ, ಇಮಾನಿಫಲಾನ್ಯಪಿ - ಈ ಫಲಗಳನ್ನೂ, ಪ್ರತಿಗೃಹಾಣ - ಪರಿಗ್ರಹಿಸು, ತೇ - ನಿನಗೆ ಭದ್ರಂ - ಶುಭವು, ಅಸ್ತು - ಆಗಲಿ, ಮಾಚಿರಂ - ತಾವಕಾಶ ಮಾಡಬೇಡ, ಭಕ್ಷಯಸ್ವ - ತಿನ್ನು, ||೧೯|| ತತಃ-ಬಳಿಕ, ತಾಸ್ಸರ್ವಾಃ- ಆ ವೇಶ್ಯಾ, ಸ್ತ್ರೀಯರೆಲ್ಲರೂ, ಹರ್ಷಸಮನ್ವಿತಾ - ಸಂತೋಷಗೊಂಡವರಾಗಿ, ತಂ - ಆ ಋಷ್ಯಶೃಂಗನನ್ನು, ಸಮಾಲಿಂಗ್ಯ - ಆಲಿಂಗನೆ ಮಾಡಿಕೊಂಡು, ತಸ್ಮೈ - ಅವನಿಗೆ, ವಿವಿಧಾನ್ - ನಾನಾವಿಧಗಳಾದ, ಬಹೂನ್ - ಅನೇಕ. ಭಕ್ಷ್ಯಾನ್- ತಿನ್ನಲು ಯೋಗ್ಯವಾದ, ಮೋದುಕಾನ್-ಕಡುಬುಗಳನ್ನು,ಪ್ರದದುಃ-ಕೊಟ್ಟರು.||೨೦||ತೇಜಸ್ವೀ-ತೇಜಸ್ವಿಯಾದ ಆ ಋಷ್ಯಶೃಂಗನು, ವನೇ-ವನದಲ್ಲಿ, ನಿತ್ಯನಿವಾಸಿನಾಂ-ನಿರಂತರವು ವಾಸಮಾಡಿಕೊಂಡಿರುವವರು, ಅನಸ್ವಾದಿತಪೂರ್ವಾಣಿ - ಎಂದಿಗೂ ಪೂರ್ವದಲ್ಲಿ ಭಕ್ಷಣೆ ಮಾಡದಿರುವ, ತಾನಿ - ಆ ಕಡುಬುಗಳನ್ನು,ಆಸಾದ್ಯ - ತಿಂದು, ಫಲಾನೀತಿ-ಫಲಗಳೆಂದು, ಮನ್ಯತೇಸ್ಮ - ತಿಳಿದನು. ||೨೧|| ತದಾ - ಆಗ, ತಾಸ್ತ್ರಿಯಃ ಆ ಸ್ತ್ರೀಯರು, ವಿಪ್ರಂ-ಬ್ರಾಹ್ಮಣನನ್ನು, ಅಪೃಚ್ಛ್ಯ ಅಪ್ಪಣೆಕೇಳಿ, ವ್ರತಚರ್ಯಾಂ - ನಿಯಮಾನುಷ್ಠಾನವನ್ನು,ನಿವೇದ್ಯಚ - ತಿಳುಹಿ, ಅಪದೇಶಾತ್ - ನೆಪದಿಂದ, ತಸ್ಯ - ಆ ಋಷ್ಯಶೃಂಗನ, ಪಿತುಃ - ತಂದೆಯಾದ, ವಿಭಾಂಡಕ

---

ಋಷಿಯ ಶಾಪಕ್ಕೆ ಭಯಗೊಂಡು ಬೇಗನೆ ಹೊರಡಲುದ್ಯುಕ್ತರಾಗಿ "ಎಲೈ ಬ್ರಾಹ್ಮಣನೇ! ನಮಗೆಲ್ಲ ಮುಖ್ಯವಾಗಿರುವ ಈ ಫಲಗಳನ್ನು ಪರಿಗ್ರಹಿಸಿ, ಕ್ಷಿಪ್ರವಾಗಿ ಭಕ್ಷಿಸು; ನಿನಗೆ ಶುಭವಾಗಲಿ" ಎಂದು ನುಡಿದರು ಆ ಬಳಿಕ ಆ ಸ್ತ್ರೀಯರೆಲ್ಲರೂ ಆ ಋಷ್ಯಶೃಂಗಮುನಿಯನ್ನಪ್ಪಿಕೊಂಡು ಹರ್ಷಯುಕ್ತರಾಗಿ ಕಡುಬುಗಳನ್ನೂ ವಿಧವಿಧವಾದ ಭಕ್ಷ್ಯಗಳನ್ನೂ ಕೊಟ್ಟರು. ||೨೦|| ಮಹಾತೇಜಸ್ವಿಯಾದಾ ಋಶ್ಯಶೃಂಗನು ವನವಾಸಿಗಳಾದವರೆಂದಿಗೂ, ಭುಜಿಸದಿರುವ ಆ ಭಕ್ಷ್ಯಗಳನ್ನು ತಿಂದು ಫಲಗಳೆಂದೇ ತಿಳಿದುಕೊಂಡನು. ||೨೧|| ಆ ಸ್ತ್ರೀಯರೆಲ್ಲರೂ ಆತನ ತಂದೆಗೆ ಅಂಜಿದವರಾಗಿ ಬೇಗನೆ ಅವನ ಅನುಜ್ಞೆಯನ್ನು ಪಡೆದು ತಮ್ಮ ವ್ರತಾನುಷ್ಠಾನವೆಂಬ ನೆವದಿಂದ ಹೊರಟುಹೋದರು. ಬಳಿಕಲಾ ಋಶ್ಯಶೃಂಗನು

ವ್ಯಚ || ಗಚ್ಛಂತಿ ಸ್ಮಾವದೇಶಾತ್ತಾ ಭೀತಾಸ್ತಸ್ಯ ಪಿತುಃ ಸ್ತ್ರಿಯಃ || ೨೨ ||
ಗತಾಸು ತಾಸು ಸರ್ವಾಸು ಕಾಶ್ಯಪಸ್ಯಾತ್ಮಜೋ ದ್ವಿಜಃ||ಅಸ್ವಸ್ಥಹೃದಯಶ್ಚಾಸೀ
ದ್ದುಃಖಂಸ್ಮ ಪರಿವರ್ತತೆ || ೨೩ || ತತೋಽಪರೇ ದ್ಯುಸ್ತಂ ದೇಶಮಾಜಗಾಮ
ಸ ವೀರ್ಯವಾನ್ || ಮನೋಜ್ಞಾ ಯತ್ರ ತಾ ದೃಷ್ಟ್ವಾ ವಾರಮುಖ್ಯಾಸ್ಸ್ವಲಂ
ಕೃತಾಃ || ೨೪ || ದೃಷ್ಟ್ವೈವ ತಾಸ್ತದಾ ವಿಪ್ರಮಾಯಾಂತಂ ಹೃಷ್ಟಮಾನಸಾಃ||
ಉಪಸೃತ್ಯ ತತಸ್ಸರ್ವಾ ಸ್ತಾಸ್ತಮೂಚುರಿದಂ ವಚಃ || ೨೫ || ಏಹ್ಯಾಶ್ರಮ
ಪದಂ ಸೌಮ್ಯ ಹ್ಯಸ್ಮಾಕಮಿತಿ ಚಾ ಬ್ರುವನ್ || ತತ್ರಾಪ್ಯೇಷವಿಧಿಶ್ಶ್ರೀಮಾನ್
ವಿಶೇಷೇಣ ಭವಿಷ್ಯತಿ || ೨೬ || ಶ್ರುತ್ವಾ ತು ವಚನಂ ತಾಸಾಂ ಸರ್ವಾಸಾಂ

ಋಷಿಯಿಂದ, ಭೀತಾಃ- ಭಯಗೊಂಡು, ಗಚ್ಛಂತಿಸ್ಮ - ಹೊರಟುಬಂದರಷ್ಟೆ || ೨೨ || ಸರ್ವಾಸು ತಾಸು- ಆ ಸ್ತ್ರೀಯರೆಲ್ಲರೂ, ಗತಾಸುಸತೀಷು - ಹೊರಡಲು, ಕಾಶ್ಯಪಸ್ಯ - ಕಶ್ಯಪೋತ್ಪನ್ನನಾದ, ವಿಭಂಡಕ ಋಷಿಯ, ಆತ್ಮಜಃ - ಕುಮಾರನಾದ, ದ್ವಿಜಃ- ಋಷ್ಯಶೃಂಗನು, ಅಸ್ವಸ್ಥಹೃದಯಃ- ಕಲುಷಿತ ಹೃದಯವುಳ್ಳವನು, ಆಸೀಚ್ಚ- ಆದನು, ದುಃಖಂಯಥಾಭವತಿತಥಾ-ತಂದೆಗೆ ದುಃಖವಾ ಗುವಂತೆ, ಪರಿವರ್ತತೇಸ್ಮ-ಸಂಚಾರ ಮಾಡುತ್ತಾ ಬಂದನಷ್ಟೆ||೨೩|| ತತಃ=ಬಳಿಕ,ಅಪರೇದ್ಯು -ಎರಡನೆ ದಿವಸವು, ಮನೋಜ್ಞಾಃ - ರಮ್ಯರಾದ, ತಾಃವಾರಮುಖ್ಯಾಃ ಆ ವೇಶ್ಯಾ ಸ್ತ್ರೀಯರು, ಅಲಂ ಕೃತಾಃ - ಅಲಂಕರಿಸಲ್ಪಟ್ಟವರಾಗಿ, ಯತ್ರ - ಯಾವ ದೇಶದಲ್ಲಿ, ದೃಷ್ಟಾಃ - ನೋಡಲ್ಪಟ್ಟರೋ, ವೀರ್ಯವಾನ್ – ತೇಜಸ್ವಿಯಾದ, ಸಃ = ಆ ಋಷ್ಯಶೃಂಗನು, ತಂದೇಶಂ – ಆ ಪ್ರದೇಶವನ್ನು ಕುರಿತು, ಆಜಗಾಮ - ಬಂದನು. ||೨೪|| ತದಾ - ಆಗ, ತಾಃ - ಪ್ರಸಿದ್ಧರಾದ, ಸರ್ವಾಸ್ತಾಃ ಆ ಸ್ತ್ರೀಯ ರೆಲ್ಲರು, ಆಯಾಂತು - ಬರುತ್ತಿರುವ, ವಿಪ್ರಂ - ಋಷ್ಯಶೃಂಗನನ್ನು , ದೃಷ್ಟ್ವೈವ ನೋಡುತ್ತಲೆ, ಹೃಷ್ಟಮಾನಸಾಃ - ಸಂತೊಷಯುಕ್ತವಾದ ಮನಸ್ಸುಳ್ಳವರಾಗಿ, ಉಪಸೃತ್ಯ - ಬಳಿಸಾರಿ, ತತಃ ಬಳಿಕ, ತಂ - ಆ ಋಷ್ಯಶೃಂಗನನ್ನು ಕುರಿತು, ಇದಂವಚಃ -- ಈ ಮಾತನ್ನು, ಊಚುಃ - ಹೇಳಿದರು ||೨೫|| ಹೇಸೌಮ್ಯ - ಎಲೈ ಶಾಂತಗುಣವಂತನೆ, ಅಸ್ಮಾಕಂ- ನಮ್ಮ, ಆಶ್ರಮಪದಂ- ಆಶ್ರಮಪ್ರದೇಶಕ್ಕೆ, ಏಹಿ - ಬಾ, ತತ್ರಾಪಿ - ಅಲ್ಲಿಯೂ, ಶ್ರೀಮಾನ್ - ಸಂಪದ್ಯುಕ್ತವಾದ, ಏಷ ವಿಧಿಃ - ಈ ಫಲ ಸಮರ್ಪಣಾದಿರೂಪ, ಪೂಜಾ ವಿಧಾನವು, ವಿಶೇಷೇಣ - ಬಹಳವಾಗಿ, ಭವಿಷ್ಯತೀತಿ- ಆಗುವದೆಂದು, ಅಬ್ರುವಂಶ್ಚ - ಹೇಳಿದರು. ||೨೬|| ಸರ್ವಾಸಾಂ - ಎಲ್ಲ, ತಾಸಾಂ ಆ ವೇಶ್ಯಾ

ಸಮಾಧಾನ ಚಿತ್ತನಾಗದೆ, ತಂದೆಯಾದ ವಿಭಂಡಕಋಷಿಗೆ ದುಃಖವುಂಟಾಗುವ ಹಾಗೆ ಸಂಚರಿಸುತ್ತಿದ್ದನು || ೨೩ || ವೀರ್ಯವಂತನಾದ ಆ ಋಷ್ಯಶೃಂಗನು ಅಲಂಕೃತ ರಾಗಿಯೂ, ಮನೋಹರಾಂಗಿಯರೂ ಆಗಿರುವ ಆ ವೇಶ್ಯಾಸ್ತ್ರೀಯರನ್ನೆಲ್ಲಿ ಕಂಡಿದ್ದನೋ ಅಲ್ಲಿಗೆ ಮಾರನೆಯ ದಿನವೂ ಬಂದನು. ||೨೪|| ಆಗಲಾ ಸ್ತ್ರೀಯರು ಬರುತ್ತಿರುವ ಆ ಬ್ರಾಹ್ಮ ಣನನ್ನು ಕಾಣುತ್ತಲೇ ಸಂತುಷ್ಟಾಂತರಂಗವುಳ್ಳವರಾಗಿ ಬಳಿಸಾರಿ, ಎಲೈ ಸೌಮ್ಯನೇ, ನಮ್ಮ ಆಶ್ರಮಕ್ಕೆ ಬಾ ; ಅಲ್ಲಿ ಈಫಲಸಮರ್ಪಣಾದಿ ಸತ್ಕಾರವು ಇಲ್ಲಿಗಿಂತಲೂ ವಿಶೇಷವಾಗಿ ನಡೆ ವುದು"ಎಂದು ನುಡಿದರು.||೨೬|| ಮನೋಹರವಾದ ಆ ಸ್ತ್ರೀಯರ ಮಾತನ್ನು ಕೇಳಿ, ಋಷ್ಯ



ऋष्यशृंग-वेश्या.

ಹೃದಯಂಗಮಂ||ಗಮನಾಯ ಮತಿಂ ಚಕ್ರೇ ತಂಚನಿನ್ಯುಸ್ತದಾಸ್ತ್ರಿಯಃ||೨೭||
ತತ್ರಚಾನೀಯ ಮಾನೇತು ವಿಪ್ರೇ ತಸ್ಮಿನ್ಮಹಾತ್ಮನಿ|| ವವರ್ಷ ಸಹಸಾದೇವೋ
ಜಗತ್ಪ್ರಹ್ಲಾದಯಂಸ್ತದಾ || ೨೮ || ವರ್ಷೇಣೈವಾಗತಂ ವಿಪ್ರಂ ವಿಷಯಂ
ಸ್ವಂ ನರಾಧಿಪಃ || ಪ್ರತ್ಯುದ್ಗಮ್ಯ ಮುನಿಂ ಪ್ರಹ್ವ ಶ್ಶಿರಸಾ ಚ ಮಹೀಂ
ಗತಃ || ೨೯ || ಅರ್ಘ್ಯಂಚ ಪ್ರದದೌ ತಸ್ಮೈ ನ್ಯಾಯತಸ್ಸು ಸಮಾಹಿತಃ ||
ವವ್ರೇ ಪ್ರಸಾದಂ ವಿಪ್ರೇಂದ್ರಾ ನ್ಮಾ ವಿಪ್ರಂ ಮನ್ಯುರಾವಿಶೇತ್ || ೩೦ ||

ಸ್ತ್ರೀಯರ, ಹೃದಯಂಗಮಂ - ಮನಸ್ಸಿಗಿಂಪಾಗಿರುವ, ವಚನಂತು - ಮಾತನ್ನು, ಶ್ರುತ್ವಾ - ಕೇಳಿ, ಗಮನಾಯ – ಹೊರಡಲೋಸುಗ, ಮತಿಂ - ಬುದ್ಧಿಯನ್ನು, ಚಕ್ರೇ - ಮಾಡಿದನು, ತದಾ – ಆಗ, ಸ್ತ್ರಿಯಃ = ವೇಶ್ಯಾ ಸ್ತ್ರೀಯರು, ತಂಚ - ಆ ಋಶ್ಯಶೃಂಗನನ್ನು ಕೂಡ, ನಿನ್ಯುಃ – ಕರೆತಂದರು ||೨೭|| ಮಹಾತ್ಮನಿ - ಮಹಾತ್ಮನಾದ, ತಸ್ಮಿನ್ವಿಪ್ರೇತು - ಆ ಬ್ರಾಹ್ಮಣನಾದ ಋಶ್ಯಶೃಂಗನು, ಆನೀಯಮಾನೇಸತಿ - ಕರೆತರಲ್ಪಡಲು, ತತ್ರ - ಆ ದೇಶದಲ್ಲಿ, ಸಹಸಾ- ಜಾಗ್ರತೆಯಾಗಿ, ದೇವಃ ಪರ್ಜನ್ಯನು, ಜಗತ್ - ಲೋಕವನ್ನು, ಪ್ರಹ್ಲಾದಯನ್ - ಸಂತೋಷಗೊಳಿಸುತ್ತ, ವವರ್ಷ- ವರ್ಷಿಸಿದನು || ೨೮ || ನರಾಧಿಪಃ - ರೋಮಪಾದರಾಯನು, ಸ್ವಂವಿಷಯಂ - ತನ್ನ ದೇಶವನ್ನು ಕುರಿತು, ವರ್ಷೇಣೈವ - ವರ್ಷದೊಡನೆ, ಆಗತಂ - ಬಂದ, ವಿಪ್ರಂಮುನಿಂ - ಬ್ರಹ್ಮರ್ಷಿಯಾದ ಋಶ್ಯಶೃಂಗನನ್ನು, ಪ್ರದ್ಯುದ್ಗಮ್ಯ - ಇದಿರುಗೊಂಡು, ಪ್ರಹ್ವಃ- ನಮ್ರನಾಗಿ, ಶಿರಸಾಚ ಮಹೀಂಗತಃ - ಸಾಷ್ಟಾಂಗ ಪ್ರಣಾಮ ಮಾಡಿದನು, || ೨೯ || ಸುಸಮಾಹಿತಃ - ಸಮಾಧಾನ ಚಿತ್ತವುಳ್ಳ ಆ ರೋಮಪಾದರಾಯನು, ತಸ್ಮೈ – ಆ ಋಶ್ಯಶೃಂಗನಿಗೆ, ಅರ್ಘ್ಯಂಚ =ಪೂಜೆಯನ್ನು, ಪ್ರದದೌ - ಕೊಟ್ಟನು, ವಿಪ್ರಂ - ಬ್ರಾಹ್ಮಣನಾದ ವಿಭಂಡಕ ಋಷಿಯನ್ನು, (ಗೊ) ಅಥವ ಬ್ರಾಹ್ಮಣನಾದ ನಿನ್ನನ್ನು, ಮನ್ಯುಃ - ಕೋಪವು, ಮಾವಿಶೇತ್ - ಪ್ರವೇಶಿಸದಿರಲಿ, ಇತಿ-ಎಂದು, ವಿಪ್ರೇಂದ್ರಾತ್-ಬ್ರಾಹ್ಮಣ ಶ್ರೇಷ್ಠನಾದ ಋಶ್ಯಶೃಂಗನಿಂದ,ಪ್ರಸಾದಂ-ಅನುಗ್ರಹವನ್ನು,ನ್ಯಾಯತಃ-ನೀತಿಯಿಂದ, ವವ್ರೇಚ -ಪ್ರಾರ್ಥಿಸಿಯೂ ಪ್ರಾರ್ಥಿಸಿದನು. ||೩೦|| ಸರಾಜಾ - ಆ ರೋಮಪಾದರಾಜನು, ಅಂತಃಪುರಂ -ಅಂತಃಪುರವನ್ನು, ಪ್ರವಿಶ್ಯ - ಪ್ರವೇಶಿಸಿ, ಅಸ್ಮೈ - ಈ ಋಶ್ಯಶೃಂಗನಿಗೆ, ಕನ್ಯಾಂ-ಕನ್ನಿಕೆಯಾದ, ಶಾಂತಾಂ - ಶಾಂತಾದೇವಿಯನ್ನು, ಶಾಂತೇನ - ಶಮದಮಾದಿ ಗುಣಯುಕ್ತವಾದ, ಮನ

---

ಶೃಂಗನು ಹೊರಡಲುದ್ಯುಕ್ತನಾಗಲು, ಆ ವೇಶ್ಯೆಯರು ಅವನನ್ನು ಅಂಗದೇಶಕ್ಕೆ ಕರೆತಂದರು. || ೨೭ || ಮಹಾತ್ಮನಾದ ಋಶ್ಯಶೃಂಗನು ಅಂಗದೇಶಕ್ಕೆ ಕರೆತರಲ್ಪಡಲು ಪರ್ಜನ್ಯದೇವನು ಪ್ರಪಂಚಕ್ಕೆ ಸಂತಸವನ್ನೆನಗುತ್ತ ವರ್ಷಿಸಿದನು. || ೨೮ || ವರ್ಷದಿಂದೊಡಗೂಡಿ ತನ್ನ ದೇಶಕ್ಕೆ ಬಂದಿರುವ ಆ ಋಶ್ಯಶೃಂಗಮುನಿಯನ್ನು ನರರಾಜನಾದ ರೋಮಪಾದನು ಇದಿರ್ಗೊಂಡು, ವಿಧೇಯನಾಗಿ ಸಾಷ್ಟಾಂಗ ಪ್ರಣಾಮಮಾಡಿ, ಶಾಸ್ತ್ರೋಕ್ತವಾಗಿ ಅರ್ಘ್ಯವನ್ನಿತ್ತು, ಆ ಬ್ರಾಹ್ಮಣನ ಅನುಗ್ರಹಕ್ಕೆ ಪಾತ್ರನಾದುದರಿಂದ ವೇಶ್ಯೆಯರ ಮೂಲಕ ಕರೆಸಲ್ಪಟ್ಟವನಾದರೂ, ಆತನಿಗೆ ಕೋಪವುಂಟಾಗಲಿಲ್ಲ. ||೩೦|| ಬಳಿಕಲಾರೋಮಪಾದನು ಅಂತಃಪುರವನ್ನು ಸೇರಿ, ಶಾಂತಮನಸ್ಸಿನಿಂದ ಶಾಂತಾದೇವಿಯನ್ನು ಶಾಸ್ತ್ರೋಕ್ತವಾಗಿ

ಅಂತಃಪುರಂ ಪ್ರವಿಶ್ಯಾಸ್ಮೈ ಕನ್ಯಾಂದತ್ವಾ ಯಥಾವಿಧಿ|| ಶಾಂತಾಂ ಶಾಂತೇನ ಮನಸಾ ರಾಜಾ ಹರ್ಷಮವಾಪಸಃ ||೩೧|| ಏವಂಸ ನ್ಯವಸತ್ತತ್ರ ಸ್ಸರ್ವ ಕಾಮೈ ಸ್ಸುಪೂಜಿತಃ || (ಋಶ್ಯಶೃಂಗೋ ಮಹಾತೇಜಾ ಶಾಂತಯಾ ಸಹ ಭಾರ್ಯಯಾ) ||೩೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದಶಮಸ್ಸರ್ಗಃ.

---

ಸಾ-ಮನಸ್ಸಿನಿಂದ, ಯಥಾವಿಧಿ - ಶಾಸ್ತ್ರೋಕ್ತವಾಗಿ, ದತ್ವಾ - ಕೊಟ್ಟು, ಹರ್ಷಂ – ಸಂತೋಷವನ್ನು, ಅವಾಪ - ಹೊಂದಿದನು || ೩೧ || ಏವಂ-ಈರೀತಿ, ಮಹಾತೇಜಾಃ-ಬಹಳ ತೇಜಸ್ವಿಯಾದ, ಸ ಋಶ್ಯಶೃಂಗಃ-ಆ ಋಶ್ಯಶೃಂಗಮುನಿಯು, ತತ್ರ-ಆ ರೋಮಪಾದನ ಅಂತಃಪುರದಲ್ಲಿ, ಸರ್ವಕಾಮೈಃ-ಸಕಲ ಕಾಮ್ಯಾರ್ಥಗಳಿಂದ, ಸುಪೂಜಿತಃ-ಚೆನ್ನಾಗಿ ಪೂಜಿಸಲ್ಪಟ್ಟು, ಭಾರ್ಯಯಾ - ಹೆಂಡತಿಯಾದ, ಶಾಂತಯಾ ಸಹ- ಶಾಂತಾದೇವಿಯೊಡಗೂಡಿ, ನ್ಯವಸತ್-ಇದ್ದನು. ||೩೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದಶಮಸ್ಸರ್ಗಃ.

---

ಆತನಿಗೆ ಕೊಟ್ಟು ಆನಂದಿಸಿದನು. || ೩೧ || ಆಗಲಾ ಋಶ್ಯಶೃಂಗಮುನಿಯು ಈ ರೀತಿ ಸರ್ವ ಕಾಮಗಳಿಂದಲೂ ಪೂಜಿಸಲ್ಪಟ್ಟು, ಹೆಂಡತಿಯಾದ ಶಾಂತೆಯೊಂದಿಗೆ ಆ ರೋಮಪಾದನ ಅಂತಃ ಪುರದಲ್ಲಿದ್ದನು. ||೩೨||

ಇಂತಿದು ಋಶ್ಯಶೃಂಗಮುನಿ ವೃತ್ತಾಂತ ಕಥನವೆಂಬ ಹತ್ತನೆಯ ಸರ್ಗವು
ಸ ಮಾ ಪ್ತ ವಾ ದು ದು.

—(೦)—



# ಬಾಲಕಾಂಡೇ ಏಕಾದಶಸ್ಸರ್ಗ ಪ್ರಾರಂಭಃ.



ಭೂಯಏವ ಹಿ ರಾಜೇಂದ್ರ ಶೃಣುಮೇ ವಚನಂಹಿತಂ||ಯಥಾಸ ದೇವಪ್ರವರಃ ಕಥಾಯಾಮೇವಮಬ್ರವೀತ್ ||೧|| ಇಕ್ಷ್ವಾಕೂಣಾಂ ಕುಲೇ ಜಾತೋ ಭವಿಷ್ಯತಿ ಸುಧಾರ್ಮಿಕಃ || ನಾಮ್ನಾ ದಶರಥೋ ನಾಮ ಶ್ರೀಮಾನ್ ಸತ್ಯಪ್ರತಿಶ್ರವಃ ||೨|| ಅಂಗರಾಜೇನ ಸಖ್ಯಂಚ ತಸ್ಯ ರಾಜ್ಞೋ ಭವಿಷ್ಯತಿ || ಕನ್ಯಾ ಚಾಸ್ಯ ಮಹಾಭಾಗಾ ಶಾಂತಾನಾಮ ಭವಿಷ್ಯತಿ || ೩ || ಪುತ್ರಸ್ತು ಸೋಂಗ ರಾಜಸ್ಯ ರೋಮಪಾದ ಇತಿ ಶ್ರುತಃ||ತಂ ಸ ರಾಜಾ ದಶರಥೋಗಮಿಷ್ಯತಿ ಮಹಾ

---

ಹೇರಾಜೇಂದ್ರ - ಎಲೈ ದಶರಥನೆ, ಹಿತಂ - ಪಥ್ಯವಾದ, ಮೇವಚನಂ - ನನ್ನ ಮಾತನ್ನು, ಭೂಯಏವ - ಮತ್ತು, ಶೃಣು-ಕೇಳು, ಸದೇ-ವಪ್ರವರಃ-ದೇವರ್ಷಿಗಳಲ್ಲಿ ಶ್ರೇಷ್ಠನಾದ ಸನತ್ಕುಮಾರನು, ಕಥಾಯಾಂ - ಕಥಾಪ್ರಸಂಗದಲ್ಲಿ, ಏವಂ - ಇರೀತಿ, ಯಥಾಬ್ರವೀತ್ - ಹೇಗೆ ನುಡಿದನೋ, |೧|| ತಥಾ - ಹಾಗೆ, ಶೃಣು - ಕೇಳು, ಇಕ್ಷ್ವಾಕೂಣಾಂ - ಇಕ್ಷ್ವಾಕು ರಾಜರ, ಕುಲೇ-ವಂಶದಲ್ಲಿ, ಜಾತಃ- ಹುಟ್ಟಿದ, ಸತ್ಯಪ್ರತಿಶ್ರವಃ-ನಿಜವಾಗಿ ಪ್ರತಿಜ್ಞೆಯುಳ್ಳ,ನಾಮ್ನಾ-ಹೆಸರಿನಿಂದ, ದಶರಥೋನಾಮ-ದಶರಥನೆಂದು ಪ್ರಸಿದ್ಧನಾದ, ಶ್ರೀಮಾನ್-ಸಂಪದ್ಯುಕ್ತನಾದ ಅರಸು, ಸುಧಾರ್ಮಿಕಃ-ಒಳ್ಳೆಯಧರ್ಮಿಷ್ಠನು, ಭವಿಷ್ಯತಿ-ಆಗುವನು || ೨ || ತಸ್ಯರಾಜ್ಞಃ-ಆ ರಾಯನಿಗೆ, ಅಂಗರಾಜೇನ-ಅಂಗದೇಶದ ಅರಸಿನೊಡನೆ, ಸಖ್ಯಂಚ-ಸ್ನೇಹವು, ಭವಿಷ್ಯತಿ- ಆಗುವದು, ಅಸ್ಯ- ಈ ರೋಮಪಾದನಿಗೆ, ಮಹಾಭಾಗಾ- ಪುಣ್ಯವತಿಯಾದ, ಶಾಂತಾನಾಮ - ಶಾಂತೆಯೆಂದು ಪ್ರಸಿದ್ಧಳಾದ, ಕನ್ಯಾಚ-ಮಗಳೂ,ಭವಿಷ್ಯತಿ-ಆಗುವಳು ||೩|| ಅಂಗರಾಜಸ್ಯ-(ತಿ) ಅಂಗನೆಂಬ ರಾಜನಿಗೆ,ಪುತ್ರಸ್ತು-ಮಗನು,ರೋಮಪಾದ ಇತಿ-ರೋಮಪಾದನೆಂದು, ಶ್ರುತಃ-ಪ್ರಸಿದ್ಧನಾಗುವನು,ಮಹಾಯಶಾಃ-ಮಹಾಕೀರ್ತಿವಂತನಾದ, ಸದಶರಥೋರಾಜಾ – ಆ ದಶರಥರಾಜನು, ತಂ-ಆ ರೋಮಪಾದನನ್ನು ಕುರಿತು,

---

ಎಲೈ ರಾಜೇಂದ್ರ ! ಪಥ್ಯವಾದ ಈ ಮಾತನ್ನು ಮತ್ತೂ ಕೇಳು; ದೇವರ್ಷಿ ಶ್ರೇಷ್ಠನಾದ ಆ ಸನತ್ಕುಮಾರನು ಕಥಾಪ್ರಸಂಗದಲ್ಲಿ ಹೀಗೆಯೇ ಮತ್ತೇನು ಹೇಳಿದ್ದನೋ, ಆದನ್ನು ಹೇಳುವೆನು. || ೧ ಇಕ್ಷ್ವಾಕು ವಂಶದಲ್ಲಿ ಹುಟ್ಟಿ, ಸತ್ಯಪ್ರತಿಜ್ಞೆಯುಳ್ಳವನೂ, ಸಂಪದ್ಯುಕ್ತನೂ ಆದ, ದಶರಥನೆಂಬ ರಾಜನು ಬಹಳ ಧರ್ಮಿಷ್ಠನಾಗುವನು. || ೨ || ಆತನಿಗೆ ಅಂಗದೇಶದ ರಾಜನೊಡನೆ ಸ್ನೇಹವುಂಟಾಗುವುದು. ಈ ಅಂಗರಾಜನಾದ ರೋಮಪಾದನಿಗೆ ಮಹಾ ಪುಣ್ಯವತಿಯಾದ "ಶಾಂತಾ" ಎಂಬ ಕನ್ಯೆಯೋರ್ವಳುಂಟಾಗುವಳು. ಅಂಗನೆಂಬ ರಾಜನಿಗೆ ರೋಮಪಾದನೆಂಬ ಮಗನು ಪ್ರಸಿದ್ಧನಾಗುವನು. ಮಹಾ ಯಶಸ್ವಿಯಾದ ದಶರಥರಾಜನು ಆತನ ಬಳಿಗೆ, ಹೋಗಿ, 'ಎಲೈ ಧರ್ಮಾತ್ಮನೇ ! ನಾನು ಮಕ್ಕಳಿಲ್ಲ

ಯಶಾಃ || ೪ || ಅನಪತ್ಯೋಽಸ್ಮಿ ಧರ್ಮಾತ್ಮನ್ ಶಾಂತಾಭರ್ತಾ ಮಮಕ್ರತುಂ || ಆಹರೇತ ತ್ವಯಾಜ್ಞಪ್ತ ಸ್ಸಂತಾನಾರ್ಥಂ ಕುಲಸ್ಯಚ || ೫ || ಶ್ರುತ್ವಾ ರಾಜ್ಞೋಽಥ ತದ್ವಾಕ್ಯಂ ಮನಸಾ ಸ ವಿಚಿಂತ್ಯಚ||ಪ್ರದಾಸ್ಯತೇ ಪುತ್ರವಂತಂ ಶಾಂತಾಭರ್ತಾರಮಾತ್ಮವಾನ್ ||೬|| ಪ್ರತಿಗೃಹ್ಯಚ ತಂ ವಿಪ್ರಂ ಸ ರಾಜಾ ವಿಗತಜ್ವರಃ || ಆಹರಿಷ್ಯತಿ ತಂ ಯಜ್ಞಂ ಪ್ರಹೃಷ್ಟೇನಾಂತರಾತ್ಮನಾ || ೭ || ತಂ ಚ ರಾಜಾ ದಶರಥೋ ಯಶಸ್ಕಾಮಃ ಕೃತಾಂಜಲಿಃ||ಋಶ್ಯಶೃಂಗಂ ದ್ವಿಜಶ್ರೇಷ್ಠಂ ವರ್ತಯಿಷ್ಯತಿ ಧರ್ಮವಿತ್ ||೮|| ಯಜ್ಞಾರ್ಥಂ ಪ್ರಸವಾರ್ಥಂ ಚ

ಗಮಿಷ್ಯತಿ-ಹೋಗುವನು || ೪ || ಹೇಧರ್ಮಾತ್ಮನ್-ಎಲೈ ಧರ್ಮಿಷ್ಠನ, ಅನಪತ್ಯಃ - ಮಕ್ಕಳಿಲ್ಲದವನು, ಅಸ್ಮಿ-ಆಗಿರುವೆನು, ಶಾಂತಾಭರ್ತಾ- ಶಾಂತಾದೇವಿಗ ಗಂಡನಾದ ಋಶ್ಯಶೃಂಗನು, ತ್ವಯಾ-ನಿನ್ನಿಂದ, ಆಜ್ಞಪ್ತಃ - ಆಜ್ಞಾಪಿಸಲ್ಪಟ್ಟವನಾಗಿ, ಮಮ ನನ್ನ, ಕುಲಸ್ಯ ವಂಶಕ್ಕೆ, ಸಂತಾನಾರ್ಥಂ-ಸಂತಾನಕ್ಕೋಸ್ಕರ, ಕ್ರತುಂ-ಯಜ್ಞವನ್ನು, ಆಹರೇತ-ಅನುಷ್ಠಾನಮಾಡುವನು, || ೫ || ಅಥ ಬಳಿಕ, ರಾಜ್ಞಃ- ದಶರಥರಾಯನ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ - ಕೇಳಿ, ಆತ್ಮವಾನ್ - ಸತ್ಸ್ವಭಾವವುಳ್ಳ, ಸಃ-ಆ ರೋಮಪಾದನು, ಮನಸಾ- ಮನಸ್ಸಿನಿಂದ, ವಿಚಿಂತ್ಯಚ - ಆಲೋಚಿಸಿನೋಡಿ, ಪುತ್ರವಂತಂ-ಪುತ್ರಪ್ರದಾನಸಮರ್ಥನಾದ, ಶಾಂತಾಭರ್ತಾರಂ-ಋಶ್ಯಶೃಂಗನನ್ನು, ಪ್ರದಾಸ್ಯತೇ-ಕೊಡುವನು || ೬ || ಸರಾಜಾ-ಆ ದಶರಥರಾಯನು, ತಂವಿಪ್ರಂಚ-ಆ ಬ್ರಾಹ್ಮಣನನ್ನು, ಪ್ರತಿಗೃಹ್ಯ-ಕರದುಕೊಂಡು ಹೋಗಿ, ವಿಗತಜ್ವರಃ ಕಳೆದುಹೋದ ಪುತ್ರವಿಷಯಕ ಸಂತಾಪವುಳ್ಳವನಾಗಿ, ಪ್ರಹೃಷ್ಟೇನ-ಸಂತೋಷಯುಕ್ತವಾದ, ಅಂತರಾತ್ಮನಾ- ಮನಸ್ಸಿನಿಂದ, (ಕೂಡಿದವನಾಗಿ,) ತಂ ಯಜ್ಞಂ-ಆ ಯಜ್ಞವನ್ನು, ಆಹರಿಷ್ಯತಿ-ಮಾಡುವನು || ೭ || ಯಶಸ್ಕಾಮಃ ಕೀರ್ತಿಯನ್ನು ಇಚ್ಛಿಸುವ, ಧರ್ಮವಿತ್-ಧರ್ಮವನ್ನರಿತ, ದಶರಥೋರಾಜಾ-ದಶರಥನು,ಕೃತಾಂಜಲಿಃ-ಅಂಜಲಿಬದ್ಧನಾಗಿ,ದ್ವಿಜಶ್ರೇಷ್ಠಂ-ಬ್ರಾಹ್ಮಣಶ್ರೇಷ್ಠನಾದ, ಋಶ್ಯಶೃಂಗಂ-ಋಶ್ಯಶೃಂಗನನ್ನು, ಯಜ್ಞಾರ್ಥಂ - ಯಜ್ಞಕ್ಕೋಸುಗವೂ, ಪ್ರಸವಾರ್ಥಂಚ - ಸಂತಾನಾರ್ಥವಾಗಿಯೂ, ಸ್ವರ್ಗಾರ್ಥಂಚ - ಸ್ವರ್ಗಪ್ರಾಪ್ತಿಗೂ, ವರಯಿಷ್ಯತಿ-ಋತ್ವಿಜನನ್ನಾಗಿ ವರಿಸುವನು, ನರೇಶ್ವರಃ - ರಾಜನಾದ, ಸವಿಶಾಂಪತಿಃ - ಆ ದಶರಥನು, ದ್ವಿಜ

---

ದವನಾಗಿರುವೆನು. ಆದುದರಿಂದ ಸಂತಾನಾಭಿವೃದ್ಧಿಗೋಸುಗ, ಶಾಂತಾಪತಿಯಾದ ಋಶ್ಯಶೃಂಗಮುನಿಯು ನಿನ್ನ ಆಜ್ಞೆಯಿಂದ ಯಾಗವನ್ನು ನಿರ್ವಹಿಸಲಿ," ಎಂದು ನುಡಿಯುವನು. || ೫ || ಆಗಲಾ ರೋಮಪಾದನು ದಶರಥನ ಮಾತನ್ನು ಕೇಳಿ, ಮನದಲ್ಲಿ ಯೋಚಿಸಿ, ತಪೋಬಲದಿಂದಲೆ ಯಾಗವನ್ನು ಮಾಡಿ, ಪುತ್ರಸಂತಾನವನ್ನು ಗ್ರಹಿಸಲು ಶಕ್ತನೂ, ಶಾಂತಾಪತಿಯೂ ಆದ ಋಶ್ಯಶೃಂಗನನ್ನು ಕಳುಹುವನು. || ೬ || ಬಳಿಕಲಾ ದಶರಥರಾಜನು ಬ್ರಾಹ್ಮಣೋತ್ತಮನಾದ ಆ ಋಶ್ಯಶೃಂಗನನ್ನು ಕರೆದುಕೊಂಡು ಕಳೆದುಹೋದ ಚಿಂತೆಯುಳ್ಳವನಾಗಿ ಸಂತುಷ್ಟಾಂತರಂಗದಿಂದ ಆ ಯಜ್ಞವನ್ನು ಮಾಡುವನು. || ೭ || ಯಶಸ್ಸನ್ನಪೇಕ್ಷಿಸುತ್ತಿರುವ ನರಪತಿಯಾದ ಆ ದಶರಥ ರಾಜನು ಅಂಜಲಿಬದ್ಧನಾಗಿ ದ್ವಿಜಶ್ರೇಷ್ಠನಾದ ಆ ಋಶ್ಯಶೃಂಗಮುನಿಯನ್ನು ಯಜ್ಞಾರ್ಥವಾಗಿಯೂ, ಪುತ್ರಾರ್ಥವಾಗಿ

ಸ್ವರ್ಗಾರ್ಥಂಚ ನರೇಶ್ವರಃ|| ಲಭತೇಚ ಸ ತಂ ಕಾಮಂ ದ್ವಿಜಮುಖ್ಯಾ ದ್ವಿಶಾಂ ಪತಿಃ || ೯ || ಪುತ್ರಾಶ್ಚಾಸ್ಯ ಭವಿಷ್ಯಂತಿ ಚತ್ವಾರೋಽಮಿತವಿಕ್ರಮಾಃ|| ವಂಶ ಪ್ರತಿಷ್ಠಾನಕರಾ ಸ್ಸರ್ವಲೋಕೇಷು ವಿಶ್ರುತಾಃ || ೧೦ || ಏವಂ ಸ ದೇವ ಪ್ರವರಃ ಪೂರ್ವಂ ಕಥಿತವಾನ್ ಕಥಾಂ || ಸನತ್ಕುಮಾರೋ ಭಗವಾನ್ ಪುರಾ ದೇವಯುಗೇ ಪ್ರಭುಃ ||೧೧|| ಸತ್ವಂಪುರುಷಶಾರ್ದೂಲ ತಮಾನಯ ಸು ಸತ್ಕೃತಂ || ಸ್ವಯಮೇವ ಮಹಾರಾಜ ಗತ್ವಾ ಸ ಬಲವಾಹನಃ ||೧೨|| ಅನುಮಾನ್ಯ ವಸಿಷ್ಠಂಚ ಸೂತವಾಕ್ಯಂ ನಿಶಮ್ಯಚ|| (ವಸಿಷ್ಠೇನಾಭ್ಯನುಜ್ಞಾತೋ ರಾಜಾ

ಮುಖ್ಯಾತ್=ಬ್ರಾಹ್ಮಣಶ್ರೇಷ್ಠನಾದ ಋಶ್ಯಶೃಂಗನಿಂದ, ತಂಕಾಮಂಚ- ಆ ಕಾಮವನ್ನೂ ಕ್ರತುವನ್ನೂ ಸಹ, ಲಭತೇ-ಹೊಂದುವನು || ೮-೯ || ಅಸ್ಯ-ಈ ದಶರಥರಾಯನಿಗೆ, ಅಮಿತವಿಕ್ರಮಾಃ-ಅಮಿತ ಪರಾಕ್ರಮವುಳ್ಳ, ವಂಶಪ್ರತಿಷ್ಠಾನಕರಾಃ-ಕುಲಸ್ಥಾಪನವನ್ನು ಮಾಡುತ್ತಿರುವ, ಸರ್ವಲೋಕೇಷು- ಎಲ್ಲ ಲೋಕಗಳಲ್ಲಿಯೂ, ವಿಶ್ರುತಾಃ-ಪ್ರಸಿದ್ಧರಾದ, ಚತ್ವಾರಃ-ನಾಲ್ಕುಮಂದಿ, ಪುತ್ರಾಶ್ಚ - ಗಂಡು ಮಕ್ಕಳೂ, ಭವಿಷ್ಯಂತಿ ಆಗುವರು. || ೧೦ || ಏವಂ - ಹೀಗೆ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನ ನಾದ, ಪ್ರಭುಃ-ತತ್ವಾವಧಾರಣ ಸಮರ್ಥನಾದ, ದೇವಪ್ರವರಃ-ದೇವರ್ಷಿಯಾದ, ಸನತ್ಕುಮಾರಃ- ಸನತ್ಕುಮಾರನು, ಹೇದೇವ-ಎಲೈ ಸ್ವಾಮಿಯೇ, ಪುರಾಯುಗೇ-ಕೃತಯುಗದಲ್ಲಿ, ಪೂರ್ವಂ-ಬಹಳ ದಿವಸದಕೆಳಗೆ, ಕಥಾಂ-ಈ ಕಥೆಯನ್ನು, ಕಥಿತವಾನ್-ಹೇಳಿದನು || ೧೧ || ಹೇಪುರುಷಶಾರ್ದೂಲ- ಎಲೈ ಪುರುಷಶ್ರೇಷ್ಠನೇ! ಹೇ ಮಹಾರಾಜ-ಎಲೈ ಮಹಾರಾಯನೇ!ಸತ್ವಂ ಆ ನೀನು,ಸುಸತ್ಕೃತಂ- ಪೂಜಾರ್ಹನಾದ, ತಂ-ಆ ಋಶ್ಯಶೃಂಗನನ್ನು, ಸ್ವಯಮೇವ ನೀನ, ಸಬಲವಾಹನಃ ಪರಿವಾರದಿಂ ದಲೂ, ವಾಹನದಿಂದಲೂ ಒಡಗೂಡಿ, ಗತ್ವಾ-ಹೋಗಿ, ಆನಯ-ಕರದುಕೊಂಡುಬಾ ||೧೨|| ಸೂತ ವಾಕ್ಯಂ-ಸಾರಥಿಯಾದ ಸುಮಂತ್ರನ ಈ ವಚನವನ್ನು, ನಿಶಮ್ಯ ಕೇಳಿ, ವಸಿಷ್ಠಂಚ - ವಸಿಷ್ಠಋಷಿ ಯನ್ನು, ಅನುಮಾನ್ಯ-ಸಮ್ಮತಿಸಿ, ಸದ್ವಿಜಃ-ಆ ಋಶ್ಯಶೃಂಗನು,ಯತ್ರ-ಎಲ್ಲಿರುವನೋ, ತತ್ರ-ಅಲ್ಲಿಗೆ, ಸಹಾಮಾತ್ಯಃ-ಮಂತ್ರಿಗಳಿಂದೊಡಗೂಡಿದ ದಶರಥರಾಯನು, ಸಾಂತಃಪುರಃ - ಅಂತಃಪುರಸ್ತ್ರೀಯ

ಯೂ, ಸ್ವರ್ಗಾರ್ಥವಾಗಿಯೂ, ಋತ್ವಿಜನನ್ನಾಗಿ ವರಿಸಿ, ಆತನಿಂದ ಆ ಕಾಮ್ಯ ಯಜ್ಞ ವನ್ನು ಹೊಂದುವನು. || ೯ || ಈ ದಶರಥರಾಯನಿಗೆ ಸಮಸ್ತ ಲೋಕಗಳಲ್ಲಿಯೂ ಪ್ರಖ್ಯಾತರೂ, ವಂಶವನ್ನುಳಿಸುವವರೂ, ಅಪರಿಮಿತ ಪರಾಕ್ರಮಿಗಳೂ, ಆದ ನಾಲ್ಕುಮಂದಿ ಗಂಡುಮಕ್ಕಳುಂಟಾಗುವರು.'' ಎಂದು ಪೂರ್ವಕಾಲದಲ್ಲಿ ಕೃತಯುಗದಲ್ಲಿ ದೇವಶ್ರೇಷ್ಠ ನಾಗಿಯೂ, ಪೂಜ್ಯನಾಗಿಯೂ, ಸಮರ್ಥನಾಗಿಯೂ, ಇರುವ ಸನತ್ಕುಮಾರ ಮುನಿಯು ಹೇಳಿದ್ದನು. || ೧೧ || ಆದುದರಿಂದ ''ಎಲೈ ನರಶ್ರೇಷ್ಠನಾದ ದಶರಥರಾಜನೇ ! ನೀನು ಬಲಸಮೇತನಾಗಿ ಹೋಗಿ, ಆ ಋಶ್ಯಶೃಂಗನನ್ನು ಪೂಜಿಸಿ, ಕರೆದುಕೊಂಡು ಬಾ'' ಎಂದು ನುಡಿದನು. || ೧೨ || ಆಗಲಾ ದಶರಥರಾಜನು ಸೂತನಾದ ಸುಮಂತ್ರನ ಮಾತನ್ನು ಕೇಳಿ, ವಸಿಷ್ಠನನ್ನು ಸಮ್ಮತಿಗೊಳಿಸಿ, ಅಂತಃಪುರ ಸ್ತ್ರೀಯರಿಂದಲೂ, ಮಂತ್ರಿಗಳಿಂದಲೂ, ಆ ಋಶ್ಯಶೃಂಗನಿರುವ,ಅಂಗದೇಶವನ್ನು ಕುರಿತು,ತೆರಳಿದನು. ಬಳಿಕ ವನಗಳನ್ನೂ,ನದಿಗಳನ್ನೂ,

ಸಂಪೂರ್ಣಮಾನಸಃ) ||ಸಾಂತಃಪುರಸ್ಸಹಾಮಾತ್ಯಃ ಪ್ರಯಯೌ ಯತ್ರ ಸ ದ್ವಿಜಃ ||೧೩|| ವನಾನಿ ಸರಿತಶ್ಚೈವ ವ್ಯತಿಕ್ರಮ್ಯ ಶನೈಶ್ಶನೈಃ || ಅಭಿಚಕ್ರಾಮ ತಂ ದೇಶಂ ಯತ್ರ ವೈ ಮುನಿಪುಂಗವಃ ||೧೪|| ಆಸಾದ್ಯ ತಂ ದ್ವಿಜಶ್ರೇಷ್ಠಂ ರೋಮಪಾದ ಸಮೀಪಗಂ|| ಋಷಿಪುತ್ರಂ ದದರ್ಶಾದೌ ದೀಪ್ಯಮಾನಮಿವಾನಲಂ ||೧೫|| ತತೋ ರಾಜಾ ಯಥಾನ್ಯಾಯಂ ಪೂಜಾಂ ಚಕ್ರೇ ವಿಶೇಷತಃ || ಸಖಿತ್ವಾತ್ತಸ್ಯ ವೈ ರಾಜ್ಞಃ ಪ್ರಹೃಷ್ಟೇನಾಂತರಾತ್ಮನಾ ||೧೬||

ರಿಂದೊಡಗೂಡಿ, ಪ್ರಯಯೌ-ತೆರಳಿದನು ||೧೩|| ವನಾನಿ ವನಗಳನ್ನು, ಸರಿತಶ್ಚೈವ-ನದಿಗಳನ್ನೂ, ಶನೈಶ್ಶನೈಃ-ಮೆಲ್ಲಮೆಲ್ಲಗೆ, ವ್ಯತಿಕ್ರಮ್ಯ-ದಾಂಟಿ, ಮುನಿಪುಂಗವಃ-ಮುನಿಶ್ರೇಷ್ಠನಾದ ಋಶ್ಯಶೃಂಗನು, ಯತ್ರ-ಯಾವ ದೇಶದಲ್ಲಿರುವನೋ ತಂದೇಶಂ ಆ ಸ್ಥಳಕ್ಕೆ, ಅಭಿಚಕ್ರಾಮ-ಹೊರಟನು ||೧೪|| ಆಸಾದ್ಯ-ಹೋಗಿ ರೋಮಪಾದಸಮೀಪಗಂ ರೋಮಪಾದರಾಯನ ಸಮೀಪದಲ್ಲಿರುವ, ಅನಲಮಿವ-ಅಗ್ನಿಯಂತೆ, ದೀಪ್ಯಮಾನಂ-ಹೊಳೆಯುತ್ತಿರುವ, ದ್ವಿಜಶ್ರೇಷ್ಠಂ-ಬ್ರಾಹ್ಮಣಶ್ರೇಷ್ಠನಾದ, ಋಷಿಪುತ್ರಂ-ವಿಭಂಡಕಋಷಿ ಕುಮಾರನಾದ, ತಂ-ಆ ಋಶ್ಯಶೃಂಗನನ್ನು, ಆದೌ-ಮೊದಲು, ದದರ್ಶ-ಕಂಡನು ||೧೫|| ತತಃ ಬಳಿಕ, ರಾಜಾ-ರೋಮಪಾದರಾಯನು, ತಸ್ಯ ರಾಜ್ಞಃ-ಆ ದಶರಥ ಮಹಾರಾಯನಿಗೆ, ಸಖಿತ್ವಾತ್-ಸ್ನೇಹಭಾವದಿಂದ, ಪ್ರಹೃಷ್ಟೇನ-ಸಂತೋಷಯುಕ್ತಮಾದ, ಅಂತರಾತ್ಮನಾ-ಮನಸ್ಸಿನಿಂದಲೂ ಕೂಡಾ, ವಿಶೇಷತಃ-ವಿಶೇಷವಾಗಿ, ಯಥಾನ್ಯಾಯಂ-ಶಾಸ್ತ್ರೋಕ್ತವಾಗಿ, ಪೂಜಾಂ-ಪೂಜೆಯನ್ನು, ಚಕ್ರೇ-ಮಾಡಿದನು ||೧೬|| ರೋಮಪಾದೇನಚ-ರೋಮಪಾದನಿಂದಲೂ, ಧೀಮತೆ ಬುದ್ಧಿಶಾಲಿಯಾದ, ಋಷಿಪುತ್ರಾಯ-ಋಶ್ಯಶೃಂಗನಿಗೋಸ್ಕರ, ಸಖ್ಯಂಚ-ದಶರಥರಾಯನ ಸಖ್ಯವನ್ನು, (೧)ಸಂಬಂಧಕಂಚೈವ-ಮಾವನೆಂಬ ಸಂಬಂಧವೂ,

ಸಹ ಮೆಲ್ಲಮೆಲ್ಲನೆ ದಾಂಟಿ, ಆ ಮುನಿಪುಂಗವನಾದ ಋಷ್ಯಶೃಂಗನಿರುವ ಅಂಗದೇಶವನ್ನು ಸೇರಿದನು ||೧೪|| ಅಲ್ಲಿಯಾದಶರಥನು ರೋಮಪಾದನೆಂಬ ರಾಜನ ಸಮೀಪವನ್ನೈದಿರುವ, ಅಗ್ನಿಯಂತ ಕಂಗೊಳಿಸುತ್ತಿರುವ, ದ್ವಿಜಶ್ರೇಷ್ಠನೂ, ವಿಭಂಡಕಋಷಿಯ ಪುತ್ರನೂ ಆದ ಆ ಋಶ್ಯಶೃಂಗನನ್ನು ಕಂಡನು. ||೧೫|| ಆ ಬಳಿಕ ರೋಮಪಾದರಾಜನು ದಶರಥರಾಜನಲ್ಲಿನ ಸ್ನೇಹದಿಂದ ಸಂತುಷ್ಟಾಂತರಂಗನಾಗಿ ನ್ಯಾಯವನ್ನರಿತು ವಿಶೇಷವಾಗಿ ಪೂಜಿಸಿದುದಲ್ಲದೆ, ||೧೬|| ಮತಿವಂತನಾದ ಋಷ್ಯಶೃಂಗನಿಗೆ, ದಶರಥರಾಜನಿಗೂ ತನಗೂ ಇರುವ

ಟಿಪ್ಪಣಿ. (೧) (ಗೋ) ದಶರಥನು ಶಾಂತಾದೇವಿಗೆ ಸಾಕ್ಷಾತ್ ತಂದೆಯೆಂದು ಹೇಳಿರುವುದು. (ಶಾಂತಾಯಾ ಜನಕಪಿತೃತ್ವರೂಪಸಂಬಂಧಃ) ಎಂದು ತಿಲಕ ವ್ಯಾಖ್ಯಾನಕಾರನು ವಿಶದವಾಗಿ ಬರೆದಿರುವುದು ಹೀಗೆ;—ದಶರಥರಾಯನಿಗೆ ಶಾಂತಾದೇವಿಯು ಕುಮರಿಯಾದುದರಿಂದ ಆತನಿಗೆ ಋಶ್ಯಶೃಂಗನು ಅಳಿಯನೆಂದು ಕರೆಯಲ್ಪಡಲು ಯೋಗ್ಯನು ಅದು ಅಲ್ಲದೆ ಕೆಲವಡೆಗಳಲ್ಲಿ ಈ ರೀತಿಯಾದ ಪಾಠವು ಇರುತ್ತದೆ.

ಅನೇನ ಮೇಽನಪತ್ಯಾಯ ದತ್ತೇಯಂ ವರವರ್ಣಿನೀ | ಯಾಚತೇ ಪುತ್ರ ತುಲ್ಯೈಷಾ ಶಾಂತಾ ಪ್ರಿಯವರಾತ್ಮಜಾ ||
ಸೋಽಯಂ ತೇ ಶ್ವಶುರೋ ಬ್ರಹ್ಮನ್ ಯಥೈವಾಹಂ ತಥಾನೃಪ ||

ಅಯ್ಯಾ! ಋಶ್ಯಶೃಂಗಮುನಿಯೇ! ದಶರಥರಾಜನಿಂದ ಮಕ್ಕಳಿಲ್ಲದ ನನಗೆ ತನ್ನ ಮಗಳಾದ ಈ ಕನ್ಯೆಯು ದತ್ತವಾಗಿ ಕೊಡಲ್ಪಟ್ಟಳು ಈ ಪ್ರಿಯ ಪುತ್ರಿಯಾದ ಶಾಂತೆಯು ನನಗೆ ಪುತ್ರಸಮಾನಳು ಅಂತಹ ಈತನು (ದಶರಥನು) ನಿನಗೆ ನಾನು ಹೇಗೋ ಹಾಗೆಯೇ ಮಾವನಾಗಬೇಕು, ಎಂದು ಇದರ ಅರ್ಥ ಈ ವಿಧವಾದ ಹತ್ತಿರ ಸಂಬಂಧವಿದ್ದುದರಿಂದಲೇ ದಶರಥರಾಯನು ಅಂತಃಪುರ ಸ್ತ್ರೀಯರೊಡಗೂಡಿ ರೋಮಪಾದನ ಪಟ್ಟಣಕ್ಕೆ ಬಂದುದು.

ರೋಮಪಾದೇನ ಚಾಖ್ಯಾತಂ ಋಷಿಪುತ್ರಾಯ ಧೀಮತೇ ‖ ಸಖ್ಯಂ ಸಂಬಂಧಕಂ ಚೈವ ತದಾ ತಂ ಪ್ರತ್ಯಪೂಜಯತ್ ‖೧೭‖ ಏವಂ ಸುಸತ್ಕೃತಸ್ತೇನ ಸಹೋಷಿತ್ವಾ ನರರ್ಷಭಃ ‖ ಸಪ್ತಾಷ್ಟದಿವಸಾನ್ ರಾಜಾ ರಾಜಾನಮಿದಮಬ್ರವೀತ್ ‖೧೮‖ ಶಾಂತಾ ತವ ಸುತಾ ರಾಜನ್ ಸಹ ಭರ್ತ್ರಾ ವಿಶಾಂಪತೇ ‖ ಮದೀಯಂ ನಗರಂ ಯಾತು ಕಾರ್ಯಂ ಹಿ ಮಹದುದ್ಯತಂ ‖೧೯‖ ತಥೇತಿ ರಾಜಾ ಸಂಶ್ರುತ್ಯ ಗಮನಂ ತಸ್ಯ ಧೀಮತಃ ‖ ಉವಾಚ ವಚನಂ ವಿಪ್ರಂ ಗಚ್ಛ ತ್ವಂ ಸಹ ಭಾರ್ಯಯಾ ‖೨೦‖ ಋಷಿಪುತ್ರಃ ಪ್ರತಿಶ್ರುತ್ಯ ತಥೇತ್ಯಾಹ ನೃಪಂ ತದಾ ‖ ನೃಪೇಣಾಭ್ಯನುಜ್ಞಾತಃ

---

ತದಾ-ಆಗ (ಸಃ-ಆ ಋಶ್ಯಶೃಂಗನು) ತಂ-ಆ ದಶರಥರಾಯನನ್ನು, ಪ್ರತ್ಯಪೂಜಯತ್-ಪೂಜಿಸಿದನು ನರರ್ಷಭಃ-ನರಶ್ರೇಷ್ಠನಾದ. ಸರಾಜಾ-ಆ ದಶರಥಮಹಾರಾಜನು, ಏವಂ-ಈಪರಿಯಾಗಿ, ಸುಸತ್ಕೃತಃ-ಚನ್ನಾಗಿ ಪೂಜಿಸಲ್ಪಟ್ಟು, ತೇನಸಹ- ಆ ಋಶ್ಯಶೃಂಗನೊಡನೆ, ಸಪ್ತಾಷ್ಟ ದಿವಸಾನ್-ಯೇಳೆಂಟುದಿವಸಗಳು, ಉಷಿತ್ವಾ ಇದ್ದು, ರಾಜಾನಂ-ರೋಮಪಾದರಾಜನನ್ನು ಕುರಿತು, ಇದಂ-ಈ ಮುಂದೆ ಹೇಳುವಂತೆ, ಅಬ್ರವೀತ್-ನುಡಿದನು ‖ ೧೮ ‖ ಹೇರಾಜನ್ - ಎಲೈ ರೋಮಪಾದರಾಯನೆ ? ಹೇ ವಿಶಾಂಪತೆ-ಎಲೈ ಅರಸೆ! ತವ ನಿನ್ನ, ಸುತಾ - ಮಗಳಾದ, ಶಾಂತಾ - ಶಾಂತಾದೇವಿಯು, ಭರ್ತ್ರಾಸಹ-ಗಂಡನೊಡಗೂಡಿ, ಉದ್ಯತಂ-ಒದಗಿರುವ, ಮಹತ್ ದೊಡ್ಡದಾದ, ಕಾರ್ಯಂ-ಯಜ್ಞಕಾರ್ಯಕ್ಕಾಗಿ, ಮದೀಯನಗರಂ-ನನ್ನ ಪಟ್ಟಣವನ್ನು, ಕುರಿತು, ಯಾತು-ಬರಲಿ, ಧೀಮತಃ-ಬುದ್ಧಿಶಾಲಿಯಾದ, ತಸ್ಯ-ಆ ಋಶ್ಯಶೃಂಗನ, ಗಮನಂ- ಹೊರಡುವಿಕೆಯನ್ನು, ಸಂಶ್ರುತ್ಯ-ಕೇಳಿ, ತ್ವಂ- ನೀನು, ಭಾರ್ಯಯಾಸಹ-ಹೆಂಡತಿಯೊಡನೆ, ಗಚ್ಛೇತಿ-ಹೋಗೆಂದು, ವಿಪ್ರಂ-ಬ್ರಾಹ್ಮಣನಾದ ಋಶ್ಯಶೃಂಗನನ್ನು ಕುರಿತು, ವಚನಂ ಮಾತನ್ನು, ಉವಾಚ-ನುಡಿದನು ‖ ೨೦ ‖ ಋಷಿಪುತ್ರಃ - ವಿಭಂಡಕಋಷಿಪುತ್ರನಾದ ಋಶ್ಯಶೃಂಗನು, ಪ್ರತಿಶ್ರುತ್ಯ-ಆ ಮಾತನ್ನು ಕೇಳಿ, ತದಾ-ಆಗ, ನೃಪಂ-ರೋಮಪಾದ ರಾಜನನ್ನು ಕುರಿತು, ತಥೇತಿ- ಹಾಗೆಯೇ ಆಗಲೆಂದು, ಆಹ-ಹೇಳಿದನು, ಸಃ-ಆ ಋಶ್ಯಶೃಂಗನು, ನೃಪೇಣ - ರೋಮಪಾದರಾಜನಿಂದ, ಅಭ್ಯನುಜ್ಞಾತಃ-ಸಮ್ಮತಿಸಲ್ಪಟ್ಟವನಾಗಿ, ಭಾರ್ಯಯಾಸಹ ಹೆಂಡತಿಯೊಡನೆ, ಪ್ರಯಯೌ - ಹೊರ

---

ಸಖ್ಯವನ್ನು ಮಾವನೆಂಬ ಪೂರ್ವ ಸಂಬಂಧವನ್ನೂ ತಿಳಿಸಲು, ಆ ಋಶ್ಯಶೃಂಗಮುನಿಯು ಆ ದಶರಥನನ್ನು ಪೂಜಿಸಿದನು ‖೧೭‖ ಇಂತು ಪೂಜಿಸಲ್ಪಟ್ಟ, ನರಶ್ರೇಷ್ಠನಾದ ಆ ದಶರಥರಾಜನು ಋಶ್ಯಶೃಂಗನೊಡನೆ ಏಳೆಂಟು ದಿವಸಗಳಿದ್ದು, ಅಂಗದೇಶಾಧಿಪತಿಯಾದ ರೋಮಪಾದ ರಾಜನನ್ನು ಕುರಿತಿಂತೆಂದನು. ‖೧೮‖ "ಎಲೈ ರಾಜನೇ! ನಿನ್ನ ಕುವರಿಯಾದ ಶಾಂತಾದೇವಿಯು ಪತಿಸಮೇತಳಾಗಿ ನಗರಕ್ಕೆ ಹೊರಡಲಿ, ಮಹತ್ತರವಾದ ಯಜ್ಞಕಾರ್ಯವು ಪ್ರಾರಂಭವಾಗಿರುವುದು." ಎಂದು ನುಡಿದನು.‖೧೯‖ ಆಗಲಾ ರೋಮಪಾದನು ಋಶ್ಯಶೃಂಗ ಮುನಿಯನ್ನು ಕಳುಹಿಸಿಕೊಡುತ್ತೇನೆಂದು ಪ್ರತಿಜ್ಞೆ ಮಾಡಿ, ಎಲೈ "ಋಶ್ಯಶೃಂಗನೆ! ನೀನು ಪತ್ನೀಸಹಿತನಾಗಿ ಹೋಗಿ ಬಾ" ಎಂದು ಆ ಬ್ರಾಹ್ಮಣನನ್ನು ಕುರಿತು ನುಡಿದನು. ‖ ೨೦ ‖ ಆಗಲಾ ಋಶ್ಯಶೃಂಗಮುನಿಯು ಅದನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿ, ಆತನಿಂದ ಅಪ್ಪಣೆ

ವ್ರಿಯಯಾ ಸಹ ಭಾರ್ಯಯಾ||೨೧||ತಾವನ್ಯೋನ್ಯಾಂಜಲಿಂ ಕೃತ್ವಾಸ್ನೇಹಾ
ತ್ಸಂಶ್ಲಿಷ್ಯಚೋರಸಾ|| ನನಂದತು ರ್ದಶರಥೋ ರೋಮಪಾದಶ್ಚ ವೀರ್ಯವಾನ್||
ತತಸ್ಸುಹೃದ ಮಾಪೃಚ್ಛ್ಯ ಪ್ರಸ್ಥಿತೋ ರಘುನಂದನಃ || ಪೌರೇಭ್ಯಃ ಪ್ರೇಷ
ಯಾಮಾಸ ದೂತಾನ್ವೈ ಶೀಘ್ರಗಾಮಿನಃ || ೨೩|| ಕ್ರಿಯತಾಂ ನಗರಂ ಸರ್ವಂ
ಕ್ಷಿಪ್ರಮೇವ ಸ್ವಲಂಕೃತಂ || ಧೂಪಿತಂ ಸಿಕ್ತಸಮ್ಮೃಷ್ಟಂ ಪತಾಕಾಭಿರಲಂ
ಕೃತಂ || ೨೪ || ತತಃ ಪ್ರಹೃಷ್ಟಾಃ ಪೌರಾಸ್ತೇ ಶ್ರುತ್ವಾ ರಾಜಾನಮಾಗತಂ ||

ಟನು || ೨೧ || ದಶರಥಃ - ದಶರಥರಾಯನು, ವೀರ್ಯವಾನ್ ಪರಾಕ್ರಮಶಾಲಿಯಾದ, ರೋಮಪಾದಶ್ಚ-ರೋಮಪಾದರಾಯನೆಂಬ, ತೌ-ಅವರಿಬ್ಬರೂ, ಅನ್ಯೋನ್ಯಾಂಜಲಿಂ ಅನ್ಯೋನ್ಯ ಪರಸ್ಪರವಾಗಿ, ಅಂಜಲಿಂ-ನಮಸ್ಕಾರವನ್ನು, ಕೃತ್ವಾ-ಮಾಡಿ, ಸ್ನೇಹಾತ್-ಮೈತ್ರಿಯಿಂದ, ಉರಸಾ-ವಕ್ಷಸ್ಥಲದಿಂದ, ಸಂಶ್ಲಿಷ್ಯ-ಆಲಿಂಗನವಂ ಮಾಡಿಕೊಂಡು, ಸುಹೃದಂ - ಸ್ನೇಹಿತನಾದ ರೋಮಪಾದರಾಯನನ್ನು, ಆಪೃಚ್ಛ್ಯ-ಅನುಜ್ಞೆಯನ್ನು ಕೇಳಿ, ಪ್ರಸ್ಥಿತಃ-ಹೊರಟು, ಪೌರೇಭ್ಯಃ-ಅಯೋಧ್ಯಾ ಪಟ್ಟಣವಾಸಿಗಳಿಗೋಸುಗ, ಶೀಘ್ರಗಾಮಿನಃ=ವೇಗದಿಂದ ನಡೆಯುವ,ದೂತಾನ್ವೈ-ಭೃತ್ಯರನ್ನು, ಪ್ರೇಷಯಾಮಾಸ ಕಳುಹಿಸಿದನು. || ೨೨-೨೩ || ಸರ್ವಂ ಸಮಸ್ತವಾದ, ನಗರಂ-ಪಟ್ಟಣವು, ಕ್ಷಿಪ್ರಮೇವ-ಜಾಗ್ರತೆಯಾಗಿಯೆ, ಸ್ವಲಂಕೃತಂ-ಬಾಳೆಕಂಭ ಮುಂತಾದವುಗಳಿಂದ ಅಲಂಕರಿಸಲ್ಪಟ್ಟದ್ದಾಗಿ, ಕ್ರಿಯತಾಂ - ಮಾಡಲ್ಪಡಲಿ, ಧೂಪಿತಂ ಕೃಷ್ಣಾಗರು ಧೂಪಗಳಿಂದ ಹುಟ್ಟಿದ ಧೂಮದಿಂದ ಸುವಾಸನೆಯುಳ್ಳದ್ದಾಗಿಯೂ, ಸಿಕ್ತಸಮ್ಮೃಷ್ಟಂ, ಸಿಕ್ತ - ಗೋಮಯೋದಕದಿಂದ ಸಾರಿಸಲ್ಪಟ್ಟದ್ದಾಗಿಯೂ, ಸಮ್ಮೃಷ್ಟಂ-ಸಮ್ಮಾರ್ಜನೆ ಮಾಡಲ್ಪಟ್ಟದ್ದಾಗಿಯೂ, ಪತಾಕಾದಿಭಿ -ಧ್ವಜಪಟಗಳಿಂದ, ಅಲಂಕೃತಂ ಅಲಂಕರಿಸಲ್ಪಟ್ಟದ್ದಾಗಿಯೂ, ಕ್ರಿಯತಾಂ-ಮಾಡಲ್ಪಡಲಿ, ಇತಿ-ಇಂತೆಂದು, ಪ್ರೇಷಯಾಮಾಸ - ಕಳುಹಿದನು || ೨೪ || ತತಃ-ಬಳಿಕ, ತೇಪೌರಾಃ-ಆ ಪಟ್ಟಣಿಗರೆಲ್ಲರು, ರಾಜಾನಂ ದಶರಥನನ್ನು, ಆಗತಂ- ಬಂದವನನ್ನಾಗಿ, ಶ್ರುತ್ವಾ-ಕೇಳಿ, ಪ್ರಹೃಷ್ಟಾಸ್ಸಂತಃ - ಸಂತೋಷಗೊಂಡು ರಾಜ್ಞಾ ಅರಸಿನಿಂದ, ಯತ್-ಯಾವಕಾರ್ಯವು, ಪ್ರೇಷಿತಂ-ಹೇಳಿ ಕಳುಹಿಸಲ್ಪಟ್ಟಿತೋ, ತತ್ಸರ್ವಂ-ಅದೆಲ್ಲವನ್ನು, ತದಾ-ಆಗ, ತಥಾ-

ಯನ್ನು ಪಡೆದು, ಭಾರ್ಯಾಸಮೇತನಾಗಿ ಹೊರಟನು. || ೨೧ || ವೀರರಾದ ಆ ರೋಮಪಾದ ದಶರಥರೆಂಬ ರಾಜರು ಪರಸ್ಪರ ಸ್ನೇಹದಿಂದ ಒಬ್ಬರನ್ನೊಬ್ಬರಪ್ಪಿಕೊಂಡು ಬಹಳವಾಗಿ ಆನಂದಿಸಿದರು. || ೨೨ || ಬಳಿಕ ದಶರಥನು ರೋಮಪಾದನ ಅನುಮತಿಯನ್ನು ಪಡೆದು, ತನ್ನ ಪಟ್ಟಣದ ಜನರಿಗೆ ತಿಳಿಸಲು ತ್ವರಿತಗಾಮಿಗಳಾದ ದೂತರನ್ನು ಕರೆದು, "ಪಟ್ಟಣವೆಲ್ಲ ಪುಷ್ಪಗಳಿಂದಲೂ, ಬಾಳೆಕಂಭಗಳಿಂದಲೂ, ಅಲಂಕರಿಸಲ್ಪಟ್ಟುದಾಗಿ, ಹಾಲುಮಡ್ಡಿ ಮುಂತಾದ ಧೂಪಗಳಿಂದ ವಾಸನೆ ಕಟ್ಟಲ್ಪಟ್ಟುದಾಗಿಯೂ, ಗೋಮಯದಿಂದ ನಾರಿಸಲ್ಪಟ್ಟುದಾಗಿಯೂ, ಧ್ವಜಗಳಿಂದ ಅಲಂಕೃತವಾಗಿಯೂ, ಇರುವಂತೆ ಮಾಡಲ್ಪಡಲಿ" ಎಂದಾಜ್ಞಾಪಿಸಿ ಕಳುಹಿದನು ಆ ಬಳಿಕ ನಗರವಾಸಿಗಳಾದ ಜನರೆಲ್ಲರು, ನರನಾಥನಾದ ದಶರಥರಾಜನ ಆಗಮನವನ್ನು ಕೇಳಿ ಒಡೆಯನಾಜ್ಞೆಗೆ ವಿರೋಧವಾಗಿರದಂತೆ ನಡಿಸಿದರು. ||೨೪|| ಅನಂತರದಲ್ಲಿ ದಶರಥರಾಜನು ಶಂಖ ದುಂದುಭಿ ಮುಂತಾದ ಧ್ವನಿಗಳೊಡನೆ ಆ ಬ್ರಾಹ್ಮಣ

ತಥಾಪ್ರಚಕ್ರುಸ್ತತ್ಸರ್ವಂ ರಾಜ್ಞಾಯತ್ಪ್ರೇಷಿತಂ ತದಾ ||೨೫|| ತತಸ್ಸ್ವಲಂ ಕೃತಂ ರಾಜಾ ನಗರಂ ಪ್ರವಿವೇಶಹ || ಶಂಖ ದುಂದುಭಿ ನಿರ್ಘೋಷೈಃ ಪುರ ಸ್ಕೃತ್ಯ ದ್ವಿಜರ್ಷಭಂ || ೨೬ || ತತಃ ಪ್ರಮುದಿತಾ ಸ್ಸರ್ವೇ ದೃಷ್ಟ್ವಾತಂ ನಾಗರಾದ್ವಿಜಂ|| ಪ್ರವೇಶ್ಯಮಾನಂ ಸತ್ಕೃತ್ಯ ನರೇಂದ್ರೇಣೇಂದ್ರ ಕರ್ಮಣಾ||೨೭|| ಅಂತಃಪುರಂ ಪ್ರವೇಶ್ಯೈನಂ ಪೂಜಾಂ ಕೃತ್ವಾ ಚ ಶಾಸ್ತ್ರತಃ || ಕೃತಕೃತ್ಯಂ ತದಾತ್ಮಾನಂ ಮೇನೇ ತಸ್ಯೋಪವಾಹನಾತ್ || ೨೮ || ಅಂತಃಪುರಸ್ತ್ರಿಯ ಸ್ಸರ್ವಾ ಶಾಂತಾಂ ದೃಷ್ಟ್ವಾ ತಥಾಗತಾಂ|| ಸಹಭರ್ತ್ರಾ ವಿಶಾಲಾಕ್ಷೀಂ ಪ್ರೀತ್ಯಾ

---

ಹಾಗೆಯೇ, ಪ್ರಚಕ್ರುಃ-ಮಾಡಿದರು ||೨೫|| ತತಃ-ಬಳಿಕ, ರಾಜಾ-ದಶರಥರಾಯನು, ಶಂಖದುಂದುಭಿ ನಿರ್ಘೋಷೈಃ, ಶಂಖ - ಜಯಶಂಖ ಶಬ್ದಗಳಿಂದಲೂ, ದುಂದುಭಿನಿರ್ಘೋಷೈಃ - ಭೇರಿಧ್ವನಿಯೇ ಮೊದಲಾದ ಮಂಗಳ ವಾದ್ಯಗಳಿಂದಲೂ, ದ್ವಿಜರ್ಷಭಂ- ಬ್ರಾಹ್ಮಣ ಶ್ರೇಷ್ಠನಾದ ಋಶ್ಯಶೃಂಗ ನನ್ನು, ಪುರಸ್ಕೃತ್ಯ- ಮುಂದುಮಾಡಿಕೊಂಡು, ಅಲಂಕೃತಂ - ಅಲಂಕರಿಸಲ್ಪಟ್ಟ, ನಗರಂ - ಪಟ್ಟಣ ವನ್ನು, ಪ್ರವಿವೇಶಹ-ಹೊಕ್ಕನು || ೨೬ || ತತಃ-ಬಳಿಕ, ಸರ್ವೇ - ಎಲ್ಲ, ನಾಗರಾಃ-ಪಟ್ಟಣವಾ ಸಿಗಳು, ಇಂದ್ರಕರ್ಮಣಾ-ದೇವೇಂದ್ರನಿಗೆ ಸದೃಶವಾದ ವ್ಯಾಪಾರವುಳ್ಳ, ನರೇಂದ್ರೇಣ - ದಶರಥರಾ ಯನಿಂದ, ಸತ್ಕೃತ್ಯ-ಪೂಜಿಸಲ್ಪಟ್ಟ, ಪ್ರವೇಶ್ಯಮಾನಂ- ನಗರವನ್ನು ಪ್ರವೇಶಿಸಲ್ಪಡುತ್ತಿರುವ, ತಂ ದ್ವಿಜಂ ಆ ಬ್ರಾಹ್ಮಣನನ್ನು, ದೃಷ್ಟ್ವಾ-ಕಂಡು, ಪ್ರಮುದಿತಾಃ- ಸಂತೋಷಯುಕ್ತರಾದರು ||೨೭|| ಏನಂ ಈ ಋಶ್ಯಶೃಂಗನನ್ನು, ಅಂತಃಪುರಂ-ಅಂತಃಪುರದಲ್ಲಿ, ಪ್ರವೇಶ್ಯ-ಪ್ರವೇಶಮಾಡಿಸಿ, ಶಾಸ್ತ್ರತಃ- ಶಾಸ್ತ್ರೋಕ್ತವಾಗಿ, ಪೂಜಾಂ-ಪೂಜೆಯನ್ನು, ಕೃತ್ವಾಚ-ಮಾಡಿ, ತದಾ - ಆಗ, ತಸ್ಯ - ಆ ಋಶ್ಯ ಶೃಂಗನ, ಉಪವಾಹನಾತ್ - ಕರೆದುಕೊಂಡು ಬರುವಿಕೆಯಿಂದ, ಆತ್ಮಾನಂ-ತನ್ನನ್ನು, ಕೃತಕೃತ್ಯಂ- ಕೃತಾರ್ಥನನ್ನಾಗಿ, ಮೇನೆ-ಎಣಿಸಿದನು || ೨೮ || ಸರ್ವಾಃ - ಸಮಸ್ತರಾದ, ಅಂತಃಪುರಸ್ತ್ರಿ ಯಃ-ಅಂತಃಪುರಸ್ತ್ರೀಯರು, ತಥಾ-ಹಾಗೆಯೇ, ಭರ್ತ್ರಾಸಹ-ಗಂಡನಾದ ಋಶ್ಯಶೃಂಗನಿಂದೊಡ ಗೂಡಿ, ಆಗತಾಂ-ಬಂದಿರುವ, ವಿಶಾಲಾಕ್ಷೀಂ ವಿಸ್ತಾರವಾದ ನೇತ್ರಗಳುಳ್ಳ, ಶಾಂತಾಂ - ಶಾಂತಾ ದೇವಿಯನ್ನು, ದೃಷ್ಟ್ವಾ-ಕಂಡು, ಪ್ರೀತ್ಯಾ-ವಿಶ್ವಾಸದಿಂದ, ಆನಂದಂ-ಹರ್ಷವನ್ನು, ಉಪಾಗಮನ್-

---

ಶ್ರೇಷ್ಠನಾದ ಋಶ್ಯಶೃಂಗನನ್ನು ಮುಂದಿರಿಸಿಕೊಂಡು ನಗರವನ್ನು ಪ್ರವೇಶಿಸಿದನು. ||೨೬|| ಆ ಬಳಿಕ ಅಯೋಧ್ಯಾ ಪುರವಾಸಿಗಳಾದ ಜನರೆಲ್ಲರು ದಶರಥರಾಜನಿಂದ ಪ್ರವೇಶಮಾಡಿಸಲ್ಪಡು ತ್ತಿರುವ ಆ ದ್ವಿಜಶ್ರೇಷ್ಠನಾದ ಋಶ್ಯಶೃಂಗಮುನಿಯನ್ನು ಕಂಡು ಬಹಳವಾಗಿ ಸಂತೋಷಿಸಿ ದರು. ||೨೭|| ಆಗಲಾ ದಶರಥನು ಆ ಮುನಿಯನ್ನು, ಅಂತಃಪುರಕ್ಕೆ ಕರೆದುಕೊಂಡು ಹೋಗಿ ಶಾಸ್ತ್ರೋಕ್ತವಾಗಿ ಪೂಜಿಸಿ, ಕೃತಕೃತ್ಯನಾದೆನೆಂದು ತಿಳಿದನು ||೨೮|| ಅಂತಃಪುರಸ್ತ್ರೀಯ ರೆಲ್ಲರೂ ಪತಿಸಹಿತಳಾಗಿ ಬಂದಿರುವ ಶಾಂತಾದೇವಿಯನ್ನು ಕಂಡು, ಮಹದಾನಂದವನ್ನೈದಿ

ನಂದ ಮುಮಾಗರ್ಮ || ೨೯ || ಪೂಜ್ಯಮಾನಾ ಚ ತಾಭಿಸ್ಸಾ ರಾಜ್ಞಾಚೈವ ವಿಶೇಷತಃ|| ಉವಾಸ ತತ್ರ ಸುಖಿತಾ ಕಂಚಿತ್ಕಾಲಂ ಸಹರ್ತ್ವಿಜಾ || ೩೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಾದಶಸ್ಸರ್ಗಃ.

---

ಹೊಂದಿದರು || ೨೯ || ಸಾ ಆ ಶಾಂತಾದೇವಿಯು, ತಾಭಿಃ - ಆ ಅಂತಃಪುರಸ್ತ್ರೀಯರಿಂದಲೂ, ರಾಜ್ಞಾಚೈವ-ಅರಸನಾದ ದಶರಥನಿಂದಲೂ, ವಿಶೇಷತಃ-ವಿಶೇಷವಾಗಿ, ಪೂಜ್ಯಮಾನಾ-ಬಹುಮಾನಿಸಲ್ಪಟ್ಟವಳಾಗಿ, ತತ್ರ-ಆ ಅಂತಃಪುರದಲ್ಲಿ, ಋತ್ವಿಜಾಸಹ - ಋಶ್ಯಶೃಂಗನಿಂದೊಡಗೂಡಿ, ಸುಖಿತಾ-ಸಂಜಾತ ಸುಖವುಳ್ಳವಳಾಗಿ, ಕಂಚಿತ್ಕಾಲಂ-ಸ್ವಲ್ಪಕಾಲವು, ಉವಾಸ-ಇದ್ದಳು. ||೩೦||

ಇತ್ಯಾರ್ಷೆ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಾದಶಸ್ಸರ್ಗಃ.

---

ದರು. || ೨೯ || ಆಗ ಶಾಂತಾದೇವಿಯು ರಾಣಿವಾಸದವರಿಂದಲೂ, ದಶರಥರಾಜನಿಂದಲೂ, ಪೂಜಿಸಲ್ಪಟ್ಟು ಪತಿಯಿಂದೊಡಗೂಡಿ ಸ್ವಲ್ಪಕಾಲ ಸುಖದಿಂದ್ದಳು || ೩೦ ||

ಇಂತಿದು ಅಯೋಧ್ಯಾಪುರಕ್ಕೆ ಋುಶ್ಯಶೃಂಗಾಗಮನ ವರ್ಣನವೆಂಬ

ಹನ್ನೊಂದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದ್ವಾದಶಸ್ಸರ್ಗ ಪ್ರಾರಂಭಃ.

ತತಃ ಕಾಲೇ ಬಹುತಿಥೇ ಕಸ್ಮಿಂಶ್ಚಿತ್ಸು ಮನೋಹರೇ|| ವಸಂತೇ ಸಮನು ಪ್ರಾಪ್ತೇ ರಾಜ್ಞೋ ಯಷ್ಟುಂ ಮನೋಭವತ್ ||೧|| ತತಃ ಪ್ರಸ್ಸಾದ್ಯ ಶಿರಸಾ ತಂ ವಿಪ್ರಂ ದೇವವರ್ಣಿನಂ || ಯಜ್ಞಾಯ ವರಯಾಮಾಸ ಸಂತಾನಾರ್ಥಂ ಕುಲಸ್ಯವೈ||೨||ತಥೇತಿ ಚ ಸ ರಾಜಾನ ಮುವಾಚ ಚ ಸುಸತ್ಕೃತಃ|| ಸಂಭಾರಾ ಸ್ಸಂಭ್ರಿಯಂತಾಂ ತೇ ತುರಗಶ್ಚ ವಿಮುಚ್ಯತಾಂ ||೩ || ತತೋ ರಾಜಾ ಬ್ರವೀ ದ್ವಾಕ್ಯಂ ಸುಮಂತ್ರಂ ಮಂತ್ರಿಸತ್ತಮಂ || ಸುಮಂತ್ರಾವಾಹಯ ಕ್ಷಿಪ್ರಂ

---

ತತಃ-ಬಳಿಕ, ಬಹುತಿಥೇ-ಬಹಳ ದಿವಸಗಳ, ಕಾಲೇ-ಕಾಲವು, ಗತೇಸತಿ-ಕಳೆದುಹೋಗಲು, ಸುಮನೋಹರೇ-ಪ್ರಶಸ್ತವಾದ, ವಸಂತೇ-ವಸಂತರೂಪವಾದ,ಕಸ್ಮಿಂಶ್ಚಿತ್-ಒಂದಾನೊಂದು ಕಾಲವು, ಸಮನುಪ್ರಾಪ್ತೇಸತಿ-ಬರಲು, ರಾಜ್ಞಃ-ದಶರಥನಿಗೆ, ಯಷ್ಟುಂ-ಅಶ್ವಮೇಧಕ್ರತುವನ್ನು ಮಾಡಲೋ ಸುಗ, ಮನಃ-ಬುದ್ಧಿಯು, ಅಭವತ್-ಉಂಟಾಯಿತು || ೧ || ತತಃ-ಬಳಿಕ, ದೇವವರ್ಣಿನಂ-ದೇವತೆ ಗಳ ವರ್ಚಸ್ಸಿನಂತೆ ವರ್ಚಸ್ಸುಳ್ಳ, ತಂವಿಪ್ರಂ - ಆ ಬ್ರಹ್ಮರ್ಷಿಯನ್ನು, ಶಿರಸಾ-ಶಿರಸ್ಸಿನಿಂದ, ಪ್ರಸಾದ್ಯ-ನಮಸ್ಕಾರ ಪೂರ್ವಕ ಸಮ್ಮತಿಸಿ, ಕುಲಸ್ಯ-ಕುಲದ, ಸಂತಾನಾರ್ಥಂ - ಅಭಿವೃದ್ಧ್ಯರ್ಥ ವಾಗಿ, ಯಜ್ಞಾಯ-ಯಜ್ಞಕ್ಕೋಸ್ಕರ, ವರಯಾಮಾಸವೈ-ವರಿಸಿದನಷ್ಟೆ || ೨ || ಸುಸತ್ಕೃತಃ-ಚನ್ನಾಗಿ ಪೂಜಿಸಲ್ಪಟ್ಟ, ಸಃ-ಆ ಋಶ್ಯಶೃಂಗನು, ರಾಜಾನಂ-ಅರಸಾದ ದಶರಥನನ್ನು ಕುರಿತು,ತಥಾ-ಹಾಗೆಯೇ ಆಗಲೆಂದು ಅಂಗೀಕರಿಸಿ, ಸಂಭಾರಾಃ-ಅಶ್ವಮೇಧಕ್ಕೆ ಬೇಕಾದ ಸಾಮಗ್ರಿಗಳು, ಸಂಭ್ರಿ ಯಂತಾಂ-ಸಂಪಾದಿಸಲ್ಪಡಲಿ, ತೇ-ನಿನ್ನ ಸಂಬಂಧವಾದ, ತುರಗಶ್ಚ-ಕುದುರೆಯೂ,ವಿಮುಚ್ಯತಾಂ-ಬಿಡಲ್ಪಡಲಿ, ಇತಿ-ಇಂತೆಂದು, ಉವಾಚ-ಹೇಳಿದನು || ೩ || ತತಃ-ಅನಂತರದಲ್ಲಿ, ರಾಜಾ-ದಶರಥ ರಾಯನು, ಹೇಸುಮಂತ್ರ-ಎಲೈ ಸುಮಂತ್ರನೇ ! ಸುಯಜ್ಞಂ- ಸುಯಜ್ಞನನ್ನೂ, ವಾಮದೇವಂಚ-

---

ಋಶ್ಯಶೃಂಗಮುನಿಯು ಬಂದು ಬಹು ದಿನಗಳಾದ ಬಳಿಕ ಮನೋಹರವಾದ ವಸಂತ ಋತುವು ಪ್ರಾಪ್ತವಾಗಲು, ದಶರಥರಾಜನಿಗೆ ಯಜ್ಞಮಾಡಲು ಬುದ್ಧಿಯುಂಟಾಯಿತು ||೧|| ಅನಂತರ ದಶರಥರಾಜನು ದೇವತೆಗಳಂತೆ ಕಂಗೊಳಿಸುತ್ತಿರುವ ದೇಹಕಾಂತಿಯುಳ್ಳ ಆಬ್ರಹ್ಮ ರ್ಷಿಯನ್ನನುಮೋದಿಸಿ, ಸಾಷ್ಟಾಂಗಪ್ರಣಾಮಮಂಗೈದು ಸಂತಾನವು ಅವಿಚ್ಛೇದವಾಗಿರಲು, ಯಜ್ಞಾರ್ಥವಾಗಿ ವರಣೆಯನ್ನು ಕೊಟ್ಟನು. || ೨ || ಚನ್ನಾಗಿ ಪೂಜಿಸಲ್ಪಟ್ಟ ಆ ಋಶ್ಯ ಶೃಂಗನು, ಹಾಗೆಯೇ ಆಗಬಹುದೆಂದು ರಾಜನಿಗೆ ಹೇಳಿ "ಯಜ್ಞಸಾಮಗ್ರಿಗಳೆಲ್ಲವೂ ಸಿದ್ಧ ವಾಗಿರಲಿ; ಅಶ್ವವೂ ಬಿಡಲ್ಪಡಲಿ" ಎಂದು ನುಡಿದನು. || ೩ || ಆ ಬಳಿಕ ದಶರಥರಾಜನು ಮಂತ್ರಿಶ್ರೇಷ್ಠನಾದ ಸುಮಂತ್ರನನ್ನುಕುರಿತು, "ಎಲೈ ಸುಮಂತ್ರನೇ ! ಸುಯಜ್ಞ, ವಾಮ

**ಋತ್ವಿಜೋ ಬ್ರಹ್ಮವಾದಿನಃ ॥ ೪ ॥ ಸುಯಜ್ಞಂ ವಾಮದೇವಂಚ ಜಾಬಾಲಿಮಥಕಾಶ್ಯಪಂ॥ ಪುರೋಹಿತಂ ವಸಿಷ್ಠಂಚ ಯೇಚಾನ್ಯೇ ದ್ವಿಜಸತ್ತಮಾಃ॥೫॥ ತತಸ್ಸುಮಂತ್ರಸ್ತ್ವರಿತಂ ಗತ್ವಾ ತ್ವರಿತವಿಕ್ರಮಃ ॥ ಸಮಾನಯತ್ಸತಾನ್ ವಿಪ್ರಾನ್ ಸಮಸ್ತಾನ್ ವೇದಪಾರಗಾನ್ ॥ ೬ ॥ ತಾನ್ ಪೂಜಯಿತ್ವಾ ಧರ್ಮಾತ್ಮಾ ರಾಜಾ ದಶರಥಸ್ತದಾ ॥ ಧರ್ಮಾರ್ಥಸಹಿತಂ ಯುಕ್ತಂ ಶ್ಲಕ್ಷ್ಣಂ ವಚನಮಬ್ರವೀತ್ ॥ ೭ ॥ ಮಮ ಲಾಲಪ್ಯಮಾನಸ್ಯ ಪುತ್ರಾರ್ಥಂ ನಾಸ್ತಿ ವೈ ಸುಖಂ ॥ ತದರ್ಥಂ ಹಯಮೇಧೇನ ಯಕ್ಷ್ಯಾಮೀತಿ ಮತಿರ್ಮಮ॥೮॥ ತದಹಂಯಷ್ಟು**

ವಾಮದೇವನನ್ನೂ, ಜಾಬಾಲಿಂಚ- ಜಾಬಾಲಿಯನ್ನೂ, ಕಾಶ್ಯಪಂಚ ಕಾಶ್ಯಪನನ್ನೂ, ಪುರೋಹಿತಂ-ಕುಲಾಚಾರ್ಯನಾದ, ವಸಿಷ್ಠಂಚ - ವಸಿಷ್ಠನನ್ನೂ, ಅನ್ಯೇ-ಮತ್ತೆ ಕೆಲವರಾದ, ದ್ವಿಜಸತ್ತಮಾಃ-ಬ್ರಾಹ್ಮಣಶ್ರೇಷ್ಠರೂ, ಯೇ-ಯಾರೋ, ತಾನ್-ಅಂತಹ, ಬ್ರಹ್ಮವಾದಿನಃ-ಬ್ರಹ್ಮಜ್ಞರಾದ, ಋತ್ವಿಜಃ-ಋತ್ವಿಕ್ಕುಗಳನ್ನು, ಕ್ಷಿಪ್ರಂ - ಶೀಘ್ರವಾಗಿ, ಆವಾಹಯ - ಕರದುಕೊಂಡು ಬಾ, ಇತಿ-ಇಂತೆಂದು, ಮಂತ್ರಿಸತ್ತಮಂ-ಮಂತ್ರಿಶ್ರೇಷ್ಠನಾದ, ಸುಮಂತ್ರಂ-ಸುಮಂತ್ರನನ್ನು ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥ ೪-೫ ॥ ತತಃ-ಬಳಿಕ, ತ್ವರಿತವಿಕ್ರಮಃ - ತ್ವರಿತಗಮನವುಳ್ಳ, ಸಸುಮಂತ್ರಃ-ಆ ಸುಮಂತ್ರನು, ತ್ವರಿತಂ - ಜಾಗ್ರತೆಯಾಗಿ, ಗತ್ವಾ- ಹೋಗಿ. ವೇದಪಾರಗಾನ್ - ವೇದವೇದಾಂಗ ಪಾರಂಗತರಾದ, ಸಮಸ್ತಾನ್ ಸಮಸ್ತರಾದ, ತಾನ್ವಿಪ್ರಾನ್-ಆ ಬ್ರಾಹ್ಮಣರನ್ನು, ಸಮಾನಯತ್-ಕರದುಕೊಂಡು ಬಂದನು. ಧರ್ಮಾತ್ಮಾ-ಧರ್ಮಿಷ್ಠನಾದ, ದಶರಥೋ ರಾಜಾ-ದಶರಥರಾಯನು, ತದಾ-ಆಗ, ತಾನ್-ಆ ಬ್ರಾಹ್ಮಣರನ್ನು, ಪೂಜಯಿತ್ವಾ- ಸತ್ಕರಿಸಿ, ಧರ್ಮಾರ್ಥ ಸಹಿತಂ-ಧರ್ಮಾರ್ಥಗಳಿಂದ ಕೂಡಿರುವ, ಶ್ಲಕ್ಷ್ಣಂ-ಮಧುರವಾದ, ಯುಕ್ತಂ - ಯೋಗ್ಯವಾದ, ವಚನಂ-ಮಾತನ್ನು, ಅಬ್ರವೀತ್-ನುಡಿದನು ॥ ೭ ॥ ಪುತ್ರಾರ್ಥಂ-ಪುತ್ರನಿಮಿತ್ತವಾಗಿ, ಲಾಲಪ್ಯಮಾನಸ್ಯ-ಪರಿತಪಿಸುತ್ತಿರುವ, ಮಮ-ನನಗೆ, ಸುಖಂ- ಪುತ್ರಪ್ರಾಪ್ತಿಯಿಂದ ಹುಟ್ಟಿದ ಸುಖವು, ನಾಸ್ತಿವೈ-ಇಲ್ಲವಷ್ಟೆ, ತದರ್ಥಂ- ಆ ಪುತ್ರಪ್ರತಿಬಂಧಕದೋಷನಿವೃತ್ತ್ಯರ್ಥವಾಗಿ, ಹಯಮೇಧೇನ-ಅಶ್ವಮೇಧಕ್ರತುವಿನಿಂದ, ಯಕ್ಷ್ಯಾಮೀತಿ- ಯಜ್ಞಮಾಡುವೆನೆಂದು, ಮಮ-ನನಗೆ, ಮತಿಃ-ಬುದ್ಧಿಯು, ಆಸೀತ್-ಆಯಿತು ॥ ೮ ॥ ತತ್-ಆಕಾರಣ, ಅಹಂ-ನಾನು, ಶಾಸ್ತ್ರದೃಷ್ಟೇನ - ಶಾಸ್ತ್ರದಿಂ ತೋರಿಸಲ್ಪಟ್ಟ

ದೇವ, ಜಾಬಾಲಿ, ಕಾಶ್ಯಪ, ವಸಿಷ್ಠರೇ ಮುಂತಾದ ಬ್ರಹ್ಮಜ್ಞರಾದ ಬ್ರಾಹ್ಮಣೋತ್ತಮರನ್ನು ಋತ್ವಿಗ್ವರಣಾರ್ಥವಾಗಿ ಕರೆಯಿಸು" ಎಂದನು, ಆಗಲಾ ಸುಮಂತ್ರನು ತ್ವರಿತಗಮನವುಳ್ಳವನಾಗಿ ವೇದಪಾರಗರಾದ ಆ ದ್ವಿಜೋತ್ತಮರನ್ನೆಲ್ಲ ಕರೆದುಕೊಂಡು ಬಂದನು. ॥೪-೬॥ ಆಗ ಮಹಾಧರ್ಮಾತ್ಮನಾದ ಆ ದಶರಥನು ಆ ದ್ವಿಜಶ್ರೇಷ್ಠರನ್ನು ಯಥಾವಿಧಿಯಾಗಿ ಪೂಜಿಸಿ, ಧರ್ಮಾರ್ಥರೂಪ ಪ್ರಯೋಜನಯುಕ್ತವಾದ ಈ ಮಾತನ್ನು ನುಡಿದನು. ॥೭॥ "ಮಕ್ಕಳಿಗೋಸುಗ ಪರಿತಪಿಸುತ್ತಿರುವ ನನಗೆ ಪುತ್ರಪ್ರಾಪ್ತಿಯಿಂದುಂಟಾದ ಸುಖವಿಲ್ಲವಷ್ಟೆ; ಆ ಪ್ರಯೋಜನಕ್ಕಾಗಿಯೇ ಅಶ್ವಮೇಧ ಕ್ರತುವಿನಿಂದ ಯಾಗಮಾಡಬೇಕೆಂದು ಮತಿಯುಂಟಾಗಿದೆ. ॥೮॥ ಆದಕಾರಣ ನಾನು ಶಾಸ್ತ್ರದೃಷ್ಟವಾದ ವ್ಯಾಪಾರದಿಂದ ಯಾಗವನ್ನು ಮಾಡಬೇಕೆಂತಲೂ

ಮಿಚ್ಛಾಮಿ ಶಾಸ್ತ್ರದೃಷ್ಟೇನ ಕರ್ಮಣಾ॥ ಋಷಿಪುತ್ರಪ್ರಭಾವೇನ ಕಾಮಾನ್
ಪ್ರಾಪ್ಸ್ಯಾಮಿ ಚಾಪ್ಯಹಂ॥೯॥ ತತಸ್ಸಾಧ್ವಿತಿ ತದ್ವಾಕ್ಯಂ ಬ್ರಾಹ್ಮಣಾಃ ಪ್ರತ್ಯ
ಪೂಜಯನ್॥ ವಸಿಷ್ಠಪ್ರಮುಖಾಸ್ಸರ್ವೇ ಪಾರ್ಥಿವಸ್ಯ ಮುಖಾಚ್ಚ್ಯುತಂ॥೧೦॥
ಋಶ್ಯಶೃಂಗಪುರೋಗಾಶ್ಚ ಪ್ರತ್ಯೂಚುರ್ನೃಪತಿಂ ತದಾ ॥ ಸಂಭಾರಾ
ಸ್ಸಂಭ್ರಿಯಂತಾಂ ತೇ ತುರಗಶ್ಚ ವಿಮುಚ್ಯತಾಂ ॥೧೧॥ ಸರ್ವಥಾಪ್ರಾಪ್ಸ್ಯಸೇ
ಪುತ್ರಾಂಶ್ಚತ್ವಾರೋಽಮಿತವಿಕ್ರಮಾನ್॥ ಯಸ್ಯ ತೇ ಧಾರ್ಮಿಕೀಬುದ್ಧಿ ರಿಯಂ
ಪುತ್ರಾರ್ಥಮಾಗತಾ॥೧೨॥ತತಃಪ್ರೀತೋ ಭವದ್ರಾಜಾ ಶ್ರುತ್ವಾ ತದ್ವಿಜಭಾಷಿತಂ॥

ಕರ್ಮಣಾ - ವ್ಯಾಪಾರದಿಂದ, ಯಷ್ಟುಂ - ಯಜ್ಞಮಾಡಲು, ಇಚ್ಛಾಮಿ-ಇಚ್ಛಿಸುವೆನು, ಋಷಿಪುತ್ರ ಪ್ರಭಾವೇನಚ, ಋಷಿಪುತ್ರ -ಋಶ್ಯಶೃಂಗನ, ಪ್ರಭಾವೇನಚ - ಮಹಾತ್ಮ್ಯೆಯಿಂದಲೂ, ಕಾಮಾನ್-ಇಷ್ಟಾರ್ಥಗಳನ್ನು, ಅಹಮಪಿ - ನಾನೂ, ಪ್ರಾಪ್ಸ್ಯಾಮಿ- ಹೊಂದುವೆನೆಂದು, ॥೯॥ ತತಃ- ಬಳಿಕ, ವಸಿಷ್ಠಪ್ರಮುಖಾಃ ವಸಿಷ್ಠ-ವಸಿಷ್ಠನೇ, ಪ್ರಮುಖಾಃ-ಮೊದಲಾಗಿವುಳ್ಳ, ಸರ್ವೇ-ಸಮಸ್ತ ರಾದ, ಬ್ರಾಹ್ಮಣಾಃ=ಬ್ರಾಹ್ಮಣರು, ಪಾರ್ಥಿವಸ್ಯ-ಅರಸಾದ ದಶರಥನ, ಮುಖಾತ್-ಮುಖದಿಂದ, ಚ್ಯುತಂ-ನುಡಿಯಲ್ಪಟ್ಟ, ತದ್ವಾಕ್ಯಂ - ಆ ಮಾತನ್ನು, ಸಾಧ್ವಿತಿ-ಚನ್ನಾಗಿಧೆಯೆಂದು, ಪ್ರತ್ಯಪೂಜ ಯನ್-ಶ್ಲಾಘಿಸಿದರು ॥ ೧೦ ॥ ತದಾ-ಆ ಸಮಯದಲ್ಲಿ, ಋಶ್ಯಶೃಂಗಪುರೋಗಾಃ-ಋಶ್ಯಶೃಂಗನೇ ಮೊದಲಾದ ಬ್ರಾಹ್ಮಣಶ್ರೇಷ್ಠರೆಲ್ಲರು, ತೇಸಂಭಾರಾಃ-ಆಸಾಮಗ್ರಿಗಳು, ಸಂಭ್ರಿಯಂತಾಂ-ಸಂಪಾ ದಿಸಲ್ಪಡಲಿ, ತುರಗಶ್ಚ-ಅಶ್ವವೂ, ವಿಮುಚ್ಯತಾಂ-ಬಿಡಲ್ಪಡಲಿ, ಯಸ್ಯತೇ-ಯಾವನಿನಗೆ, ಧಾರ್ಮಿಕೀ- ಧರ್ಮವಾದ, ಬುದ್ಧಿಃ-ಮತಿಯು, ಪುತ್ರಾರ್ಥಂ-ಮಕ್ಕಳಿಗೋಸ್ಕರ, ಆಗತಾ-ಇರುವದೋ, (ಸತ್ವಂ- ಅಂತಹ ನೀನು,) ಅಮಿತವಿಕ್ರಮಾನ್ ಮಹಾಪರಾಕ್ರಮಿಗಳಾದ, ಚತ್ವಾರಃ-ನಾಲ್ಕುಮಂದಿ,ಪುತ್ರಾನ್- ಮಕ್ಕಳನ್ನು, ಸರ್ವಥಾ-ಹೇಗಾದರೂ, ಪ್ರಾಪ್ಸ್ಯಸೇ ಹೊಂದುವೆ, ಇತಿ-ಇಂತೆಂದು, ನೃಪತಿಂ-ರಾಜ ನಾದ ದಶರಥನನ್ನು ಕುರಿತು, ಪ್ರತ್ಯೂಚುಃ- ಪ್ರತ್ಯುತ್ತರ ಕೊಟ್ಟರು ॥ ೧೨ ॥ ತತಃ-ಬಳಿಕ,ರಾಜಾ - ಒಡೆಯನಾದ ದಶರಥನು, ತದ್ದ್ವಿಜಭಾಷಿತಂ-ಆ ಬ್ರಾಹ್ಮಣರ ಮಾತನ್ನು, ಶ್ರುತ್ವಾ-ಕೇಳಿ, ಪ್ರೀತಃ- ಸಂತಸಗೊಂಡವನು, ಅಭವತ್-ಆದನು, ರಾಜಾ-ದಶರಥನು, ಹರ್ಷೇಣ- ಸಂತೋಷದಿಂದ, ಶುಭಾ ಕ್ಷರಂ-ಶುಭಕರವಾದ ಅಕ್ಷರಗಳುಳ್ಳಂತೆ,ಇದಂ-ಈ ಮಾತನ್ನು,ಅಮಾತ್ಯಾನ್-ಮಂತ್ರಿಗಳನ್ನು ಕುರಿತು,

ವಿಭಂಡಕ ಋಷಿಪುತ್ರನಾದ ಋಶ್ಯಶೃಂಗ ಮುನಿಯ ಪ್ರಭಾವದಿಂದ ಪುತ್ರರನ್ನು ಪಡೆಯ ಬೇಕೆಂತಲೂ, ಇಚ್ಛಿಸುವೆನು.” ಎಂದು ನುಡಿದ ಆ ರಾಯನ ಮಾತುಗಳನ್ನುಕೇಳಿ, ॥೯॥ ವಸಿ ಷ್ಠನೇಮುಂತಾದ ಆಋಷಿಸತ್ತಮರೆಲ್ಲರು ಆತನನ್ನುಶ್ಲಾಘಿಸಿ, ಆತನನ್ನುಕುರಿತಿಂತೆಂದರು॥೧೦॥ “ಎಲೈ ಒಡೆಯನೇ! ಅಶ್ವಮೇಧ ಸಾಮಗ್ರಿಗಳನ್ನು ಸಿದ್ಧಗೊಳಿಸು; ಈ ಯಾಗಕ್ಕೆ ಅರ್ಹವಾದ ಕುದುರೆಯನ್ನು ಬಿಡುವವನಾಗು; ॥೧೧॥ ಪುತ್ರವಿಷಯವಾಗಿ ಇಂತಹ ಧರ್ಮಬುದ್ಧಿಯು ನಿನಿಗುಂಟಾಗಿರುವುದರಿಂದ ಎಲ್ಲಾ ವಿಧದಿಂದಲೂ, ಮಹಾ ಸಮರ್ಥರಾದ ನಾಲ್ಕು ಮಂದಿ ಮಕ್ಕಳನ್ನು ಪಡಿಯುವೆ.” ॥೧೨॥ ಹೀಗೆಂದ ಆ ಮುನಿಯ ಮಾತುಗಳನ್ನು ಕೇಳಿ, ಆ ದಶ

ಅಮಾತ್ಯಾಂಶ್ಚಾಬ್ರವೀದ್ರಾಜಾ ಹರ್ಷೇಣೇದಂ ಶುಭಾಕ್ಷರಂ ||೧೩|| ಗುರೂಣಾಂ ವಚನಾಚ್ಛೀಘ್ರಂ ಸಂಭಾರಾ ಸ್ಸಂಭ್ರಿಯಂತು ಮೇ || ಸಮರ್ಥಾಧಿಷ್ಠಿತಶ್ಚಾಶ್ವಸ್ಸೋಪಾಧ್ಯಾಯೋ ವಿಮುಚ್ಯತಾಂ ||೧೪||ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಂ || ಶಾಂತಯಶ್ಚಾಭಿವರ್ಧಂತಾಂ ಯಥಾಕಲ್ಪಂ ಯಥಾವಿಧಿ||೧೫|| ಶಕ್ಯಃ ಪ್ರಾಪ್ತುಮಯಂ ಯಜ್ಞಸ್ಸರ್ವೇಣಾಪಿ ಮಹೀಕ್ಷಿತಾ || ನಾಪರಾಧೋ ಭವೇತ್ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ ||೧೬|| ಛಿದ್ರಂಹಿ ಮೃಗಯಂತೇತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ || ನಿಹತಸ್ಯಚ ಯಜ್ಞಸ್ಯ ಸದ್ಯಃ ಕರ್ತಾ ವಿನಶ್ಯತಿ||೧೭|| ತದ್ಯಥಾ ವಿಧಿ ಪೂರ್ವಂಮೇ ಕ್ರತುರೇಷ ಸಮಾ

ಅಬ್ರವೀತ್-ನುಡಿದನು ||೧೩|| ಮೇ-ನನ್ನ, ಗುರೂಣಾಂ ಗುರುಗಳ, ವಚನಾತ್- ಮಾತಿನಂತೆ, ಶೀಘ್ರಂ-ಜಾಗ್ರತೆಯಾಗಿ, ಸಂಭಾರಾಃ-ಸಾಮಗ್ರಿಗಳು, ಸಂಭ್ರಿಯಂತು-ಸಂಪಾದಿಸಲ್ಪಡಲಿ, ಸಮರ್ಥಾಧಿಷ್ಠಿತಃ-ಸಮರ್ಥರಿಂದ ರಕ್ಷಿಸಲ್ಪಡುತ್ತಿರುವ, ಅಶ್ವಃ-ಅಶ್ವವು, ಸೋಪಾಧ್ಯಾಯಃ-ಋತ್ವಿಕ್ಸಹಿತವಾಗಿ, ವಿಮುಚ್ಯತಾಂ - ಬಿಡಲ್ಪಡಲಿ ||೧೪|| ಸರಯ್ವಾಃ - ಸರಯೂ ನದಿಯ, ಉತ್ತರೇತೀರೆ- ಉತ್ತರ ದಡದಲ್ಲಿ, ಯಜ್ಞಭೂಮಿಶ್ಚ - ಯಜ್ಞಭೂಮಿಯೂ, ವಿಧೀಯತಾಂ-ಮಾಡಲ್ಪಡಲಿ, ಶಾಂತಯಶ್ಚ - ಶಾಂತಿಗಳೂ, ಯಥಾಕಲ್ಪಂ - ಕಲ್ಪಾನುಸಾರವಾಗಿಯೂ, ಯಥಾವಿಧಿ - ಶಾಸ್ತ್ರೋಕ್ತವಾಗಿಯೂ, ಅಭಿವರ್ಧಂತಾಂ - ವೃದ್ಧಿ ಹೊಂದಿಸಲ್ಪಡಲ ||೧೫|| ಕ್ರತುಸತ್ತಮೇ- ಯಜ್ಞೋತ್ತಮವಾದ, ಅಸ್ಮಿನ್ - ಈ ಅಶ್ವಮೇಧಯಾಗದಲ್ಲಿ, ಕಷ್ಟಃ - ಕ್ಲೇಶಕರವಾದ, ಅಪರಾಧಃ - ಅಪರಾಧವು, ನಭವೇದ್ಯದಿ - ಆಗದಿದ್ದರೆ, ಸರ್ವೇಣ - ಸಮಸ್ತ, ಮಹೀಕ್ಷಿತಾಪಿ - ರಾಜರಿಂದಲೂ, ಅಯಂಯಜ್ಞಃ - ಈ ಯಾಗವು, ಪ್ರಾಪ್ತುಂ - ಹೊಂದಲು, ಶಕ್ಯಃ - ಸಮರ್ಥವು. ||೧೬|| ಅತ್ರ - ಈ ಯಾಗದಲ್ಲಿ, ವಿದ್ವಾಂಸಃ ಶಾಸ್ತ್ರಜ್ಞರಾದ, ಬ್ರಹ್ಮರಾಕ್ಷಸಾಃ- ಬ್ರಹ್ಮರಾಕ್ಷಸರು, ಛಿದ್ರಂ - ಅವಕಾಶವನ್ನು, ಮೃಗಯಂತೇಹಿ - ಹುಡುಕುತ್ತಿರುವರಷ್ಟೆ, ನಿಹತಸ್ಯ - ಅಪಚಾರಬಂದ, ಯಜ್ಞಸ್ಯ - ಯಾಗದ, ಕರ್ತಾಚ - ಯಜಮಾನನೂ, ಸದ್ಯಃ - ತಕ್ಷಣದಲ್ಲಿ, ವಿನಶ್ಯತಿ - ನಾಶವಾಗುವನು. ||೧೭|| ತತ್ - ಆದಕಾರಣ, ಮೇ - ನಾನು ಮಾಡುವ,

---

ರಥನು ಸಂತುಷ್ಟನಾಗಿ ಮಂತ್ರಿಗಳನ್ನು ಕುರಿತು, ||೧೩|| "ಎಲೈ ಮಂತ್ರಿವರೇಣ್ಯರೇ ! ನನ್ನ ಗುರುವಿನ ಆಜ್ಞೆಯಿಂದ ಯಾಗಕ್ಕೆ ಬೇಕಾದ ಪದಾರ್ಥಗಳನ್ನು ಸಿದ್ಧಗೊಳಿಸಿರಿ; ಸಮರ್ಥರಾದ ರಾಜಪುತ್ರರಿಂದ ರಕ್ಷಿಸಲ್ಪಡುವ ಯಜ್ಞೀಯಾಶ್ವವು ಉಪಾಧ್ಯಾಯ ಸಹಿತವಾಗಿ ಬಿಡಲ್ಪಡಲಿ; ||೧೪|| ಸರಯೂನದಿಯ ಉತ್ತರತೀರದಲ್ಲಿ ಯಾಗಭೂಮಿಯು ಮಾಡಲ್ಪಟ್ಟು ಅಲ್ಲಿ ಯಥಾಕ್ರಮವಾಗಿಯೂ, ಯಥಾಶಾಸ್ತ್ರವಾಗಿಯೂ,ಶಾಂತಿಗಳು ನಡೆಸಲ್ಪಡಲಿ. ||೧೫|| ಉತ್ತಮೋತ್ತಮವಾದ ಈ ಯಾಗದಲ್ಲಿ ದುಃಖಕರವಾದ ಅಪಚಾರವಿಲ್ಲದಿದ್ದರೆ ರಾಜರೆಲ್ಲರು ಇದನ್ನು ಮಾಡಬಹುದು. ಆದರೆ ಇದರಲ್ಲಿ ವಿದ್ವಾಂಸರಾದ ಬ್ರಹ್ಮರಾಕ್ಷಸರು ರಂಧ್ರಾನ್ವೇಷಿಗಳಾಗಿರುವರು. ಅಪಚಾರವು ಕಂಡುಬಂದರೆ ಕರ್ತನು ತಕ್ಷಣದಲ್ಲಿಯೆ ನಾಶವಾಗು

ವ್ಯತೇ|| ತಥಾ ವಿಧಾನಂ ಕ್ರಿಯತಾಂ ಸಮರ್ಥಾಃ ಕರಣೇಷ್ವಿಹ ||೧೮|| ತಥೇತಿ ಚ ತತಸ್ಸರ್ವೇ ಮಂತ್ರಿಣಃ ಪ್ರತ್ಯಪೂಜಯನ್ || ಪಾರ್ಥಿವೇಂದ್ರಸ್ಯ ತದ್ವಾಕ್ಯಂ ಯಥಾಜ್ಞಪ್ತ ಮಕುರ್ವತ || ೧೯ || ತತೋ ದ್ವಿಜಾಸ್ತೇ ಧರ್ಮಜ್ಞ ಮಸ್ತುವನ್ ಪಾರ್ಥಿವರ್ಷಭಂ || ಅನುಜ್ಞಾತಾ ಸ್ತತಸ್ಸರ್ವೇ ಪುನರ್ಜಗ್ಮು ರ್ಯಥಾಗತಂ || ೨೦ || ಗತೇಷ್ವಥ ದ್ವಿಜಾಗ್ರ್ಯೇಷು ಮಂತ್ರಿಣಸ್ತಾನ್ನರಾಧಿಪಃ|| ವಿಸರ್ಜಯಿತ್ವಾ ಸ್ವಂ ವೇಶ್ಮ ಪ್ರವಿವೇಶ ಮಹಾದ್ಯುತಿಃ ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾದಶಸ್ಸರ್ಗಃ.

---

ವಿಷಕ್ರತುಃ ಈ ಯಾಗವು, ಯಥಾವಿಧಿಪೂರ್ವಂ - ಶಾಸ್ತ್ರೋಕ್ತವಾಗಿ ಹೇಗೆ, ಸಮಾಪ್ಯತೇ - ಪೂರ್ತಿಯಾಗುವದೋ, ಇಹ - ಈ ಯಾಗ ವಿಷಯದಲಿ, ಕರಣೇಷು - ಆಚರಿಸುವ ಕರ್ಮದಲ್ಲಿ, ಸಮರ್ಥಾಃ - ಶಕ್ತಿಯುಳ್ಳ ನೀವು, ತಥಾವಿಧಾನಂ - ಆ ವಿಧಾನವನ್ನು, ಕ್ರಿಯತಾಂ - ಮಾಡಿರಿ, ||೧೮|| ತತಃ - ಬಳಿಕ, ಸರ್ವೇ - ಸಮಸ್ತರಾದ, ಮಂತ್ರಿಣಃ - ಮಂತ್ರಿಗಳು, ಪಾರ್ಥಿವೇಂದ್ರಸ್ಯ - ರಾಜಾಧಿರಾಜನಾದ ದಶರಥನ, ತದ್ವಾಕ್ಯಂ - ಆ ಮಾತನ್ನು, ತಥೇತಿ - ಹಾಗೆಯೇ ಆಗಲೆಂದು, ಪ್ರತ್ಯಪೂಜಯನ್- ಪೂಜಿಸಿದರು, ಯಥಾಜ್ಞಪ್ತಂ - ಆಜ್ಞೆಯಾದಂತೆ, ಅಕುರ್ವತ-ಮಾಡಿದರು. ||೧೯|| ತತಃ - ಬಳಿಕ, ತೇದ್ವಿಜಾಃ - ಆ ಬ್ರಾಹ್ಮಣರು, ಧರ್ಮಜ್ಞಂ - ಧರ್ಮವನ್ನರಿತ, ಪಾರ್ಥಿವರ್ಷಭಂ - ರಾಜಶ್ರೇಷ್ಠನಾದ ದಶರಥನನ್ನು, ಅಸ್ತುವನ್ - ಸ್ತುತಿಸಿದರು ತತಃ - ಬಳಿಕ, ಅನುಜ್ಞಾತಾಃ- ಆಜ್ಞಪ್ತರಾಗಿ, ಯಥಾಗತಂ - ಬಂದಂತೆಯು, ಪುನಃ - ಮರಳಿ, ಜಗ್ಮುಃ-ಹೊರಟುಹೋದರು. ||೨೦|| ಅಥ - ಬಳಿಕ, ದ್ವಿಜಾಗ್ರ್ಯೇಷು - ಬ್ರಾಹ್ಮಣೋತ್ತಮರು, ಗತೇಷುಸತ್ಸು - ಹೊರಟುಹೋಗಲು, ನರಾಧಿಪಃ - ದಶರಥನು, ತಾನ್‌ಮಂತ್ರಿಣಃ - ಆ ಮಂತ್ರಿಗಳನ್ನು, ವಿಸರ್ಜಯಿತ್ವಾ - ತೊರೆದು, ಮಹಾದ್ಯುತಿಃ - ಅತಿಕಾಂತಿಯುಳ್ಳವನಾಗಿ, ಸ್ವಂ - ಸ್ವಕೀಯವಾದ, ವೇಶ್ಮ - ಮನೆಯನ್ನು, ಪ್ರವಿವೇಶ - ಹೊಕ್ಕನು. ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾದಶಸ್ಸರ್ಗಃ.

---

ವನು. ಆದುದರಿಂದ ಸಮರ್ಥರಾದ ನೀವು ಈ ಯಾಗವು ಹೇಗೆ ಶಾಸ್ತ್ರೋಕ್ತವಾಗಿ ಪೂರ್ಣವಾಗುವದೋ, ಆರೀತಿ ನಡೆಯಿಸಿರಿ"ಎಂದನು. ಆಗಲಾ ಮಂತ್ರಿಗಳೆಲ್ಲರು ರಾಜಾಧಿರಾಜನಾದ ದಶರಥರಾಜನ ಮಾತನ್ನು, ಗೌರವಿಸಿ, ಆತನಪ್ಪಣೆಯಂತೆಯೆ ನಡೆದುಕೊಂಡರು. ||೧೬—೧೯|| ಅನಂತರದಲ್ಲಿ ಆ ಬ್ರಾಹ್ಮಣೋತ್ತಮರು ರಾಜಶ್ರೇಷ್ಠನಾದ ದಶರಥನನ್ನು ಸ್ತುತಿಸಿ, ಅಪ್ಪಣೆಯನ್ನು ಪಡೆದು ತೆರಳಿದರು. || ೨೦ || ಬಳಿಕ ದಶರಥರಾಯನು ಮಂತ್ರಿಗಳನ್ನು ಕಳುಹಿಸಿ, ಪುತ್ರಲಾಭವಾಗುವದೆಂಬ ಸಂತೋಷದಿಂದುಂಟಾದ ಕಾಂತಿಯಿಂದೊಡಗೂಡಿ, ತನ್ನಮನೆಗೆ ಹೋದನು. ||೨೧||

ಇಂತಿದು ದಶರಥನ ಅಶ್ವಮೇಧಯಾಗ ನಿಶ್ಚಯವೆಂಬ ಹನ್ನೆರಡನೆಯ ಸರ್ಗವು ಸ ಮಾ ಪ್ತ ವಾ ದು ದು.

# ಬಾಲಕಾಂಡೆ ತ್ರಯೋದಶಸ್ಸರ್ಗಃ

---

ಪುನಃಪ್ರಾಪ್ತೇ ವಸಂತೇ ತು ಪೂರ್ಣಸಂವತ್ಸರೋ ಭವತ್|| ಪ್ರಸವಾರ್ಥಂ ಗತೋ ಯಷ್ಟುಂ ಹಯಮೇಧೇನ ವೀರ್ಯವಾನ್ ||೧|| ಅಭಿವಾದ್ಯ ವಸಿಷ್ಠಂಚ ನ್ಯಾಯತಃ ಪ್ರತಿಪೂಜ್ಯಚ || ಅಬ್ರವೀತ್ಪ್ರಶ್ರಿತಂ ವಾಕ್ಯಂ ಪ್ರಸವಾರ್ಥಂ ದ್ವಿಜೋತ್ತಮಂ ||೨|| ಯಜ್ಞೋ ಮೇ ಕ್ರಿಯತಾಂ ಬ್ರಹ್ಮನ್ ಯಥೋಕ್ತಂ ಮುನಿ ಪುಂಗವ || ಯಥಾ ನ ವಿಘ್ನಃ ಕ್ರಿಯತೇ ಯಜ್ಞಾಂಗೇಷು ವಿಧೀಯತಾಂ ||೩|| ಭವಾನ್ ಸ್ನಿಗ್ಧಸ್ಸುಹೃನ್ಮಹ್ಯಂ ಗುರುಶ್ಚ ಪರಮೋ ಮಹಾನ್|| ವೋಢವ್ಯೋ

---

ಪುನರ್ವಸಂತೇತು - ಎರಡನೆಯ ವಸಂತಋತುವು, ಪ್ರಾಪ್ತೇಸತಿ - ಒದಗಿಬರಲು, ಸಂವತ್ಸರಃ - ಅಶ್ವವನ್ನು ಬಿಟ್ಟದಿನ ಮೊದಲುಗೊಂಡು ಸಂವತ್ಸರವು, ಪೂರ್ಣಃ-ಸಂಪೂರ್ಣವು, ಅಭವತ್-ಆಯಿತು, ವೀರ್ಯವಾನ್ - ಸಮರ್ಥನಾದ ದಶರಥನು, ಹಯಮೇಧೇನ - ಅಶ್ವಮೇಧ ಕ್ರತುವಿನಿಂದ, ಪ್ರಸವಾರ್ಥಂ - ಪುತ್ರರೂಪಫಲವನ್ನು ಹೊಂದಲೋಸುಗ, ಯಷ್ಟುಂ - ಯಾಗ ಮಾಡಲು, (ತಿ) ವಸಿಷ್ಠಾಂತಿಕಂ - ವಸಿಷ್ಠರ ಬಳಿಗೆ, ಗತಃ - ಹೋದನು, (ಗೋ) ದೇವಯಜನಂ - ಯಜ್ಞಶಾಲೆಯನ್ನು ಕುರಿತು, ಗತಃ - ಹೋದನು. ||೧|| ದ್ವಿಜೋತ್ತಮಂ - ಬ್ರಾಹ್ಮಣ ಶ್ರೇಷ್ಠನಾದ, ವಸಿಷ್ಠಂಚ - ವಸಿಷ್ಠ ಋಷಿಯನ್ನೂ, ಅಭಿವಾದ್ಯ - ನಮಸ್ಕರಿಸಿ, ನ್ಯಾಯತಃ - ಯಥಾಶಾಸ್ತ್ರವಾಗಿ, ಪ್ರತಿಪೂಜ್ಯಚ - ಪೂಜೆಯನ್ನೂ ಮಾಡಿ, ಪ್ರಸವಾರ್ಥಂ - ಸಂತಾನಾರ್ಥವಾಗಿ, ಪ್ರಶ್ರಿತಂ - ವಿನಯಭಾವದಿಂದೊಡಗೂಡಿ, ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನಾದ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ ! ಮೇ-ನನ್ನ ಸಂಬಂಧವಾದ, ಯಜ್ಞಃ- ಅಶ್ವಮೇಧ ಕ್ರತುವು, ಯಥೋಕ್ತಂ-ಯಥಾ ಶಾಸ್ತ್ರೀಯವಾಗಿ, ಕ್ರಿಯತಾಂ - ಮಾಡಲ್ಪಡಲಿ, ಯಜ್ಞಾಂಗೇಷು - ದ್ರವ್ಯ ದೇವತಾ ಕರ್ಮಾದಿ ರೂಪವಾದ ಯಜ್ಞಾವಯವಗಳಲ್ಲಿ, ಯಥಾ- ಹೇಗೆ, ವಿಘ್ನಃ - ವಿಘ್ನವು, ನಕ್ರಿಯತೇ- ಮಾಡಲ್ಪಡುವದಿಲ್ಲವೋ, ತಥಾ - ಆ ಪ್ರಕಾರವಾಗಿ, ವಿಧೀಯತಾಂ - ಮಾಡಲ್ಪಡಲಿ, ಇತಿ - ಇಂತೆಂದು, ವಾಕ್ಯಂ - ವಚನವನ್ನು, ಅಬ್ರವೀತ್ - ನುಡಿದನು- || ೩ || ಭವಾನ್ - ನೀನು, ಸ್ನಿಗ್ಧಃ - ಬಹುಕಾಲ ಸ್ನೇಹಿತನು, ಸುಹೃತ್ - ಮಿತ್ರನು, ಮಹ್ಯಂ - ನನಗೆ, ಮಹಾನ್ - ದೊಡ್ಡವನಾದ, ಪರಮಃ - ವಾಮದೇವಾದಿಗಳಿಗಿಂತಲೂ ಉತ್ಕೃಷ್ಟನಾದ, ಗುರುಃ - ಗುರುವಾದವನು, ಅತಃ - ಈ ಕಾರಣದಿಂದ, ಉಧ್ಯತಃ -

---

ವಸಂತಕಾಲವು ಪ್ರಾಪ್ತವಾಗಿ ಸಂವತ್ಸರವು ಪರಿಪೂರ್ಣವಾಗಲು, ಮಹಾ ಪರಾಕ್ರಮಿಶಾಲಿಯಾದ ಆ ದಶರಥರಾಯನು ಪುತ್ರಾರ್ಥವಾಗಿ ಯಜ್ಞವನ್ನು ಮಾಡಬೇಕೆಂದು ಸರಯೂತೀರಕ್ಕೆ ಹೊರಟು, ಗುರುವಾದ ವಸಿಷ್ಠಋಷಿಗಳ ಪಾದಕ್ಕೆರಗಿ, ಯಥಾವಿಧಿಯಾಗಿ ಪೂಜಿಸಿ, "ಎಲೈ ಮುನಿಪುಂಗವನೆ! ವಿಘ್ನವಿಲ್ಲದೆ ಈ ಯಾಗವು ಹೇಗೆ ಸಮಾಪ್ತಿಯನ್ನೈದುವುದೋ, ಹಾಗೆ ಕರ್ಮವನ್ನು ನೆರವೇರಿಸಬೇಕು ; ಸ್ನೇಹಿತನೂ, ಗುರುವೂ ನೀನೇ ; ಈ




ಮಹರ್ಷಿರ್ವಾಲ್ಮೀಕಿಃ

ಮುಖ ಪತ್ರ

ಭವತಾಚ್ಚೈವ ಭಾರೋ ಯಜ್ಞಸ್ಯ ಚೋದ್ಯತಃ॥೪॥ತಥೇತಿ ಚ ಸ ರಾಜಾನ ಮಬ್ರವೀದ್ವಿಜಸತ್ತಮಃ ॥ ಕರಿಷ್ಯೇ ಸರ್ವಮೇವೈತ ದ್ಭವತಾಯ ತ್ಸಮರ್ಥಿತಂ ॥೫॥ ತತೋಽಬ್ರವೀದ್ದ್ವಿಜಾ- ನ್ವೃದ್ಧಾನ್ ಯಜ್ಞಕರ್ಮಸು ನಿಷ್ಠಿತಾನ್॥ ಸ್ಥಾಪತ್ಯೇ ನಿಷ್ಠಿತಾಂಶ್ಚೈವ ವೃದ್ಧಾನ್ ಪರಮಧಾರ್ಮಿಕಾನ್ ॥೬॥ ಕರ್ಮಾಂತಿಕಾನ್ ಶಿಲ್ಪಕರಾನ್ ವರ್ಧಕೀನ್ ಖನಕಾನಪಿ॥ಗಣಕಾನ್ ಶಿಲ್ಪಿನಶ್ಚೈವ ತಥೈವ ನಟ ನರ್ತಕಾನ್॥೭॥ತಥಾ ಶುಚೀನ್ ಶಾಸ್ತ್ರವಿದಃ ಪುರುಷಾನ್ ಸು ಬಹುಶ್ರುತಾನ್ ॥ ಯಜ್ಞಕರ್ಮ ಸಮೀಹ

---

ಉದ್ಯಮಿಸಿರುವ, ಯಜ್ಞಸ್ಯ - ಯಾಗದ, ಭಾರಶ್ಚ - ಭಾರವೂ ಕೂಡ, ಭವತೈವ - ನಿನ್ನಿಂದಲೇ, ವೋಢವ್ಯಃ=ವಹಿಸತಕ್ಕುದೆಂಬ, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು ॥ ೪ ॥ ದ್ವಿಜಸತ್ತಮಃ-ಬ್ರಾಹ್ಮಣಶ್ರೇಷ್ಠನಾದ, ಸಃ-ಆ ವಸಿಷ್ಠಋಷಿಯು, ತಥಾ - ಹಾಗೆಯೇ ಆಗಲೆಂದು, ಭವತಾ-ನಿನ್ನಿಂದ, ಯತ್ ಸಮರ್ಥಿತಂ - ಯಾವದು ಅರಂಭಮಾಡಲ್ಪಟ್ಟಿತೋ, ಏತತ್ಸರ್ವಮೇವ-ಆ ಸಮಸ್ತಕಾರ್ಯಗಳನ್ನೂ, ಕರಿಷ್ಯೇ-ಮಾಡುವೆನು, ಇತಿ-ಇಂತೆಂದು, ರಾಜಾನಂ - ದಶರಥರಾಯನನ್ನು ಕುರಿತು, ಅಬ್ರವೀತ್ ನುಡಿದನು ॥ ೫ ॥ ತತಃ-ಬಳಿಕ, ಯಜ್ಞಕರ್ಮಸು - ಯಾಗಕರ್ಮಗಳಲ್ಲಿ, ನಿಷ್ಠಿತಾನ್-ಅನುಷ್ಠಾನಪರರಾದ, ವೃದ್ಧಾನ್-ವೃದ್ಧವಯಸ್ಕರಾದ, ದ್ವಿಜಾನ್-ಬ್ರಾಹ್ಮಣರನ್ನು,ಸ್ಥಾಪತ್ಯೇ ಆಯಾ ಯಾಗೋಪಯುಕ್ತವಾದ ಉಪಕರಣಗಳನ್ನು ಸಿದ್ಧಪಡಿಸುವಿಕೆಯಲ್ಲಿ, ನಿಷ್ಠಿತಾನ್-ಸಮರ್ಥರಾದ, ವೃದ್ಧಾಂಶ್ಚೈವ - ವೃದ್ಧರನ್ನೂ ಕುರಿತು, ಪರಮ ಧಾರ್ಮಿಕಾನ್ - ಪರಮಧರ್ಮಿಷ್ಠರಾದ, ಕರ್ಮಾಂತಿಕಾನ್-ಕರ್ಮಸ್ವರೂಪವನ್ನು ತಿಳಿದಂಥವರನ್ನು ಕುರಿತು, ಶಿಲ್ಪಕರಾನ್-ಚಿತ್ರಕಾರರನ್ನು, ವರ್ಧಕೀನ್- ಮರಗೆಲಸಗಾರರನ್ನು, ಖನಕಾನಪಿ-ಅಗಿಯುವ ಕೆಲಸದವರನ್ನೂ, ಗಣಕಾನ್-ಲೇಖಕರನ್ನೂ, ಶಿಲ್ಪಿನಶ್ಚೈವ-ಅಲಂಕಾರಮಾಡುವವರನ್ನೂ,ತಥೈವ-ಹಾಗೆಯೆ, ನಟನರ್ತಕಾನ್,ನಟ-ನಾಟ್ಯಮಾಡಿಸುವವರನ್ನೂ, ನರ್ತಕಾನ್-ನಾಟ್ಯಮಾಡುವವರನ್ನೂ, ತಥಾ-ಹಾಗೆಯೇ, ಶುಚೀನ್-ಪರಿಶುದ್ಧರಾದ, ಶಾಸ್ತ್ರವಿದಃ-ಶಾಸ್ತ್ರವೇತ್ತೃಗಳನ್ನೂ, ಬಹುಶ್ರುತಾನ್-ಬಹಳ ಶಾಸ್ತ್ರ ಮಾರ್ಗಗಳನ್ನು ಕೇಳಿರುವ, ಪುರುಷಾನ್-ಪುರುಷರನ್ನು ಕುರಿತು, ಭವಂತಃ-ನೀವೆಲ್ಲರೂ, ರಾಜಶಾಸನಾತ್ - ರಾಜಾಜ್ಞೆಯಿಂದ, ಯಜ್ಞಕರ್ಮ-ಯಾಗ ಕರ್ಮವನ್ನು, ನಿರ್ವರ್ತಯಿತುಂ - ನೆರವೇರಿಸಲು, ಸಮೀಹಂತಾಂ-

---

ಭಾರವನ್ನೆಲ್ಲಾ ನೀನು ವಹಿಸಬೇಕು"ಎಂದು ಹೇಳಿದನು.॥೧-೪॥ಆ ದ್ವಿಜಶ್ರೇಷ್ಠನಾದ ವಸಿಷ್ಠಮುನಿಯು ರಾಜನ ಮಾತನ್ನು ಕೇಳಿ, "ಎಲೈ ರಾಯನೇ! ನೀನು ನುಡಿದಂತೆ ಅಶ್ವಮೇಧ ಯಾಗದ ಸಮಸ್ತ ಕಾರ್ಯವನ್ನೂ ನಾನೇ ಮಾಡುವೆನು." ಎಂದನು. ॥ ೫ ॥ ಬಳಿಕಲಾ ವಸಿಷ್ಠನು ಅನಂತರದಲ್ಲಿ ವೃದ್ಧರಾಗಿಯೂ, ಯಾಗ ಕರ್ಮದಲ್ಲಿ ನಿಷ್ಠಾಪರರಾಗಿಯೂ, ಇರುವ ಬ್ರಾಹ್ಮಣರನ್ನು ಬೇಕಾದ ದ್ರವ್ಯಗಳನ್ನು ಕೊಡಲು, ಆಯಾ ಪ್ರದೇಶಗಳಲ್ಲಿ ನಿಂತಿರುವರಾಗಿಯೂ, ಮುದುಕರೂ, ಮಹಾಧರ್ಮವಂತರೂ ಆದವರನ್ನೂ, ಕೆಲಸಗಾರರನ್ನೂ, ಚಿತ್ರಕಾರರನ್ನೂ, ಬಡಗಿಕೆಲಸದವರನ್ನೂ. ಕಲ್ಲುಕೆಲಸದವರನ್ನೂ, ಬರೆಯತಕ್ಕವರನ್ನೂ, ಅಲಂಕಾರ ಮಾಡುವವರನ್ನೂ, ಗಾಯಕರನ್ನೂ, ನಾಟ್ಯ ಮಾಡಿಸುವವರನ್ನೂ, ಹಾಗೆಯೆ ಮಹಾ ಪರಿಶುದ್ಧವಾದ ಕರ್ಮಗಳರಿತವರನ್ನೂ ಕುರಿತು, "ಒಡೆಯನಾದ ದಶರಥನಾಜ್ಞೆಯಿಂದ

ಹಂತಾಂ ಭವಂತೋ ರಾಜಶಾಸನಾತ್॥೮॥ ಇಷ್ಟಕಾಬಹುಸಾಹಸ್ರಾ ಶ್ರೀಘ್ರ ಮಾನೀಯತಾಮಿತಿ ॥ ಔಪಕಾರ್ಯಾಃ ಕ್ರಿಯಂತಾಂಚ ರಾಜ್ಞಾಂ ಬಹುಗುಣಾನ್ವಿತಾಃ ॥೯॥ ಬ್ರಾಹ್ಮಣಾವಸಥಾಶ್ಚೈವ ಕರ್ತವ್ಯಾಶ್ಶತಶಶ್ಶುಭಾಃ॥ ಭಕ್ಷ್ಯಾನ್ನಪಾನೈರ್ಬಹುಭಿ ಸ್ಸಮುಪೇತಾ ಸ್ಸುನಿಷ್ಠಿತಾಃ ॥೧೦॥ ತಥಾ ಪೌರಜನಸ್ಯಾಪಿ ಕರ್ತವ್ಯಾ ಬಹುವಿಸ್ತರಾಃ ॥ ಆವಾಸಾ ಬಹುಭಕ್ಷ್ಯಾಢ್ಯೈ ಸರ್ವಕಾಮೈ ರುಪಸ್ಥಿತಾಃ ॥೧೧॥ ತಥಾಜಾನಪದಸ್ಯಾಪಿ ಜನಸ್ಯ ಬಹುಶೋಭನಂ॥ದಾತವ್ಯಮನ್ನಂ ವಿಧಿವತ್ಸತ್ಕೃತ್ಯ ನತು ಲೀಲಯಾ॥೧೨॥ ಸರ್ವವರ್ಣಾ ಯಥಾಪೂಜಾಂ ಪ್ರಾಪ್ನು

ಇಚ್ಛಿಸಿರಿ; ಬಹುಸಾಹಸ್ರಾಃ-ಅನೇಕ ಸಹಸ್ರ, ಇಷ್ಟಕಾಃ-ಇಟ್ಟಿಕೆಗಳು, ಶೀಘ್ರಂ- ಜಾಗ್ರತೆಯಾಗಿ, ಆನೀಯತಾಂ-ತರಲ್ಪಡಲಿ, ಇತಿ-ಎಂದು, ಅಬ್ರವೀತ್-ನುಡಿದನು ॥೬-೮॥ ರಾಜ್ಞಾಂಚ - ಅರಸುಗಳಿಗೂ, ಬಹುಗುಣಾನ್ವಿತಾಃ-ಪ್ರಾಶಸ್ತ್ಯಾದಿಗುಣಗಳಿಂದ ಯುಕ್ತವಾದ,ಔಪಕಾರ್ಯಾಃ-ಭವನಗಳು, ಕ್ರಿಯಂತಾಂ-ಮಾಡಲ್ಪಡಲಿ, ಶುಭಾಃ - ಶುಭಕರವಾದ, ಬ್ರಾಹ್ಮಣಾವಸಥಾಶ್ಚೈವ, ಬ್ರಾಹ್ಮಣಾಃ-ಬ್ರಾಹ್ಮಣರ, ಅವಸಥಾಶ್ಚೈವ-ಮನೆಗಳೂ, ಶತಶಃ - ನೂರಾರು, ಕರ್ತವ್ಯಾಃ - ಮಾಡತಕ್ಕವುಗಳು, ಬಹುಭಿಃ-ಅನೇಕ, ಭಕ್ಷ್ಯಾನ್ನಪಾನೈಃ,ಭಕ್ಷ್ಯ-ಭಕ್ಷಣಯೋಗ್ಯವಾದ ಪದಾರ್ಥಗಳಿಂದಲೂ, ಅನ್ನ-ಅನ್ನಗಳಿಂದಲೂ ಕೂಡಿರುವ, ಸುನಿಷ್ಠಿತಾಃ-ಚನ್ನಾಗಿ ಮಾಡಲ್ಪಟ್ಟ, ಬಹುವಿಸ್ತರಾಃ - ಬಹುವಿಸ್ತಾರಗಳಾದ, ಬಹುಭಕ್ಷ್ಯಾಢ್ಯೈ-ಬಹುಭಕ್ಷ್ಯಗಳಿಂದ, ಸರ್ವಕಾಮೈಃ-ಬೇಕಾದ ಎಲ್ಲ ಪದಾರ್ಥಗಳಿಂದ, ಉಪೇತಾಃ-ಕೂಡಿರುವ, ಆವಾಸಾಃ ವಾಸಸ್ಥಾನಗಳು, ತಥಾ-ಹಾಗೆಯೇ, ಪೌರಜನಸ್ಯಾಪಿ-ಪಟ್ಟಣಿಗರಿಗೂ ಕೂಡ, ಕರ್ತವ್ಯಾಃ-ಮಾಡತಕ್ಕವುಗಳು, ತಥಾ-ಹಾಗೆಯೇ, ಜಾನಪದಸ್ಯ-ಇತರ ದೇಶವಾಸಿಗಳಾದ, ಜನಸ್ಯಾಪಿ-ಜನಗಳಿಗೂ ಕೂಡ, ಸತ್ಕೃತ್ಯ ಮರ್ಯಾದೆಮಾಡಿ, ಬಹುಶೋಭನಂ-ಬಹಳ ರುಚಿಕರವಾದ, ಅನ್ನಂ-ಅನ್ನವು, ವಿಧಿವತ್-ಶಾಸ್ತ್ರೋಕ್ತವಾಗಿ, ದಾತವ್ಯಂ-ಕೊಡತಕ್ಕದು,ಲೀಲಯಾತು-ಹಾಸ್ಯಾದಿವಿಲಾಸಗಳಿಂದ, ನದಾತವ್ಯಂ ಕೊಡತಕ್ಕದಲ್ಲ , ಯಥಾ-ಹೇಗೆ, ಸರ್ವವರ್ಣಾಃ - ಬ್ರಾಹ್ಮಣಾದಿ ಸಮಸ್ತಜಾತೀಯರು, ಸುಸತ್ಕೃತಾಃ-ಚನ್ನಾಗಿ ಮರ್ಯಾದೆ ಮಾಡಲ್ಪಟ್ಟು, ಪೂಜಾಂ-ಪೂಜೆಯನ್ನು, ಪ್ರಾಪ್ನುವಂತಿ-ಹೊಂದುವರೋ! ಅವಜ್ಞಾ-ಅಪಮಾನವಚನವು, ಕಾಮಕ್ರೋಧವಶಾದಪಿ- ಕಾಮದಿಂದಲೇ ಆಗಲಿ, ಕ್ರೋಧದಿಂದಲಾಗಲಿ, ನಪ್ರಯೋಕ್ತವ್ಯಾ - ಪ್ರಯೋಗಮಾಡತಕ್ಕದಲ್ಲ,

---

ನೀವೆಲ್ಲರೂ ಯಾಗಕಾರ್ಯಗಳಲ್ಲಿ ಸಿದ್ಧರಾಗಿರಿ ; ಅನೇಕ ಸಹಸ್ರವಾದ ಇಟಿಕೆಗಳನ್ನು ಬೇಗನೆ ತೆಗೆದುಕೊಂಡು ಬನ್ನಿರಿ” ಎಂದನು. ॥೮॥ ಇಷ್ಟೆಯಲ್ಲದೆ ಈ ಮಹಾಯಾಗವನ್ನು ನೋಡಲು, ಬರುವ ರಾಜರಿಗೆ ಬಹಳ ಶ್ಲಾಘ್ಯವಾಗಿರುವ ಭವನಗಳೂ,ವಾಸಮಾಡುವಮನೆಗಳೂ ಮಾಡಲ್ಪಡಲಿ; ಬಗೆಬಗೆಯಅನ್ನಪಾನಾದಿಗಳಿಂದೊಡಗೂಡಿರುವ,ಭೋಜ್ಯವೂ ಬಹುವಿಸ್ತಾರವಾದ ಅನ್ನಶಾಲೆಗಳೂ ಅಪೇಕ್ಷಿತವಾಗಿರುವಂತೆ ನಗರವಾಸಿಗಳಿಗೋಸುಗ ಮಾಡಲ್ಪಡಬೇಕು. ದೇಶವಾಸಿಗಳಾದ ಜನರಿಗೆಲ್ಲ ಅವರವರ ವರ್ಣಾಶ್ರಮಗಳಿಗನುಸಾರವಾಗಿ ಅನ್ನವನೀಯಬೇಕು. ತಮಾಷೆಗಾದರೂ ಕಾಮಕ್ರೋಧಾದಿಗಳಿಂದ ಯಾರನ್ನೂ ಅವಮಾನ ಪಡಿಸಕೂಡದು. ಇದಲ್ಲದೆ ಯಾಗಕಾರ್ಯಗಳಲ್ಲಿ ಕೆಲಸವನ್ನು ಮಾಡುತ್ತಿರುವವರಿಗೆ ಕ್ರಮವನ್ನರಿತು ವಿಶೇಷವಾಗಿ

ವಂತಿ ಸು ಸತ್ಕೃತಾಃ || ಸಚಾವಜ್ಞಾ ಪ್ರಯೋಕ್ತವ್ಯಾ ಕಾಮ ಕ್ರೋಧ ವಶಾದಪಿ ||೧೩|| ಯಜ್ಞ ಕರ್ಮಸು ಯೇವ್ಯಗ್ರಾಃ ಪುರುಷಾಶ್ಶಿಲ್ಪಿನಸ್ತಥಾ ||ತೇಷಾಮಪಿ ವಿಶೇಷೇಣ ಪೂಜಾಕಾರ್ಯಾ ಯಥಾಕ್ರಮಂ ||೧೪|| ತೇಚಸ್ಯು ಸ್ಸಂಭೃತಾ ಸ್ಸರ್ವೇ ವಸುಭಿ ರ್ಭೋಜನೇನಚ || ಯಥಾ ಸರ್ವಂ ಸುವಿಹಿತಂ ನಕಿಂಚಿತ್ಪರಿಹೀಯತೆ ||೧೫|| ತಥಾ ಭವಂತಃ ಕುರ್ವಂತು ಪ್ರೀತಿಸ್ನಿಗ್ಧೇನ ಚೇತಸಾ||ತತಸ್ಸರ್ವೇ ಸಮಾಗಮ್ಯ ವಸಿಷ್ಠ ಮಿದಮಬ್ರುವನ್ ||೧೬|| ಯಥೋಕ್ತಂ ತತ್ಸುವಿಹಿತಂ ನಕಿಂಚಿತ್ಪರಿಹೀಯತೆ || ಯಥೋಕ್ತಂ ತತ್ಕರಿಷ್ಯಾಮೋ ನಕಿಂಚಿ ತ್ಪರಿಹಾಸ್ಯತೆ ||೧೭|| ತತಸ್ಸುಮಂತ್ರ ಮಾನೀಯ ವಸಿಷ್ಠೋ ವಾಕ್ಯಮಬ್ರವೀತ್ || ನಿಮಂತ್ರಯಸ್ವ

---

ಯೇಪುರುಷಾಃ-ಯಾವಪುರುಷರು ಯಜ್ಞಕರ್ಮಸು- ಯಾಗ ಕರ್ಮಗಳಲ್ಲಿ,ವ್ಯಗ್ರಾಃ-ಜಾಗರೂಕರೋ! ತಥಾ-ಹಾಗೆಯೇ, ಯೇ - ಯಾರು, ಶಿಲ್ಪಿನಃ - ಯಾಗಶಾಲಾನಿರ್ಮಾಣ ಕರ್ತರೋ, ತೇಷಾಮಪಿ-ಅವರಿಗೂ, ಯಥಾಕ್ರಮಂ-ಕ್ರಮಾನುಸಾರವಾಗಿ, ಪೂಜಾ-ಮರ್ಯಾದೆಯು,ವಿಶೇಷೇಣ-ವಿಶೇಷವಾಗಿ, ಕಾರ್ಯಾ-ಮಾಡತಕ್ಕದು,ತೇಸರ್ವೇಚ-ಅವೆಲ್ಲರೂಕೂಡ, ಯಥಾ-ಹೇಗೆ, ವಸುಭಿಃ-ದ್ರವ್ಯಗಳಿಂದಲೂ, ಭೋಜನೇನಚ-ಭೋಜನದಿಂದಲೂ, ಸಂಭೃತಾಃ-ತುಂಬಿದವರು, ಸ್ಯುಃ-ಆಗುವರೋ, ತಥಾ-ಹಾಗೆ, ಸರ್ವಂ-ಸಮಸ್ತ ಕಾರ್ಯವೂ, ಸುವಿಹಿತಂ-ಚನ್ನಾಗಿ ಮಾಡಲ್ಪಟ್ಟದ್ದಾಗಿ, ಕಿಂಚಿತ್- ಸ್ವಲ್ಪವಾದರೂ, ನಪರಿಹೀಯತೆ - ಲೋಪಮಾಡಲ್ಪಡುವದಿಲ್ಲವೋ, ತಥಾ- ಹಾಗೆ, ಭವಂತಃ - ನೀವು, ಪ್ರೀತಿಸ್ನಿಗ್ಧೇನ, ಪ್ರೇಮದಿಂದಲೂ ಸ್ನೇಹದಿಂದಲೂ ಯುಕ್ತವಾದ, ಚೇತಸಾ-ಮನಸ್ಸಿನಿಂದ, ಕುರ್ವಂತು - ಮಾಡಿರಿ, ಇತಿ-ಇಂತೆಂದು, ಅಬ್ರವೀತ್-ನುಡಿದನು || ೯-೧೫ || ತತಃ-ಬಳಿಕ, ಸರ್ವೇ-ಎಲ್ಲರೂ, ಸಮಾಗಮ್ಯ-ಬಂದು, ವಸಿಷ್ಠಂ-ವಸಿಷ್ಠನನ್ನು ಕುರಿತು, ಯಥೋಕ್ತಂ-ಅಜ್ಞಾನುಸಾರವಾಗಿ, ತತ್- ಆ ಕಾರ್ಯವು ಸುವಿಹಿತಂ-ಚೆನ್ನಾಗಿ, ಮಾಡಲ್ಪಟ್ಟಿತು, ಕಿಂಚಿತ್-ಸ್ವಲ್ಪವೂ, ನಪರಿಹೀಯತೆ - ಕೊರತೆಯಾಗಲಿಲ್ಲ, ಯಥಾ-ಮುಂದೆ ಹೇಗೆ, ಉಕ್ತಂ - ಹೇಳಲ್ಪಡುತ್ತೋ, ತತ್ ಅದನ್ನು, ಕರಿಷ್ಯಾಮಃ - ಮಾಡುವೆವು, ಕಿಂಚಿತ್-ಸ್ವಲ್ಪವಾದರೂ, ನಪರಿಹಾಸ್ಯತೆ - ಕಡಮೆಮಾಡಲ್ಪಡುವದಿಲ್ಲ, ಇತಿ-ಇಂತೆಂದು, ಇದಂ ಈ ವಚನವನ್ನು, ಅಬ್ರುವನ್-ನುಡಿದರು ||೧೬-೧೭|| ತತಃ-ಅನಂತರದಲ್ಲಿ,ವಸಿಷ್ಠಃ-ವಸಿಷ್ಠನು,ಸುಮಂತ್ರಂ-ಸುಮಂತ್ರನನ್ನು, ಆನೀಯ ಕರೆಯಿಸಿ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು, ಪೃಥಿವ್ಯಾಂ-

---

ಉಪಚರಿಸಬೇಕು. ದ್ರವ್ಯಗಳಿಂದಲಾಗಲೀ, ಭೋಜನಗಳಿಂದಲಾಗಲೀ, ಅವರೆಲ್ಲರನ್ನೂ, ಚನ್ನಾಗಿ ವಶಪಡಿಸಿಕೊಂಡು ವಿಧಿವತ್ತಾಗಿ ಕೆಲಸಗಳು ನಡೆಯಿಸಿದ್ದಾದರೆ, ನಮಗೇನೂ ಕೊರತೆಯಾಗಲಾರದು ; ಆದುದರಿಂದ ನೀವೆಲ್ಲರೂ ಸಂತೋಷಚಿತ್ತರಾಗಿ ನಾನು ಹೇಳಿದಂತೆಯೇ ಮಾಡಬೇಕು.'' ಎಂದು ವಸಿಷ್ಠಮುನಿಯು ನುಡಿದನು. ||೧೫|| ಆ ಬಳಿಕ ಕೆಲಸಪಟ್ಟಣಿಗರು ವಸಿಷ್ಠಋಷಿಯ ಬಳಿಗೆ ಬಂದು, ‘‘ಎಲೈ ಮಹಾಮುನಿಯೇ ! ತಾವು ಹೇಳಿದಂತೆ ಮಾಡುತ್ತಿದ್ದರೆ ನಮಗೇನೂ ಕಡಮೆಯಾಗಲಾರದು. ಹಾಗೆಯೇ ಮಾಡುವೆವು'' ಎಂದು ನುಡಿದರು. || ೧೭ || ಆಗಲಾ ವಸಿಷ್ಠಮುನಿಯು ಮಂತ್ರಿಯಾದ ಸುಮಂತ್ರನನ್ನು ಕರೆಯಿಸಿ, ‘‘ಎಲೈ ಮಂತ್ರಿಶ್ರೇಷ್ಠನೆ!‘‘ ಈ ಭೂಮಂಡಲದಲ್ಲಿರುವ ಧರ್ಮಿಷ್ಠರಾದ ನರಪತಿಗ

ನೃಪತೀನ್ ಪೃಥಿವ್ಯಾಂ ಯೇಚ ಧಾರ್ಮಿಕಾಃ ||೧೮|| ಬ್ರಾಹ್ಮಣಾನ್ ಕ್ಷತ್ರಿಯಾನ್ ವೈಶ್ಯಾನ್ ಶೂದ್ರಾಂಶ್ಚೈವ ಸಹಸ್ರಶಃ|| ಸಮಾನಯಸ್ವ ಸತ್ಕೃತ್ಯ ಸರ್ವದೇಶೇಷು ಮಾನವಾನ್ || ೧೯ || ಮಿಥಿಲಾಧಿಪತಿಂ ಶೂರಂ ಜನಕಂ ಸತ್ಯವಿಕ್ರಮಂ || ನಿಷ್ಠಿತಂ ಸರ್ವಶಾಸ್ತ್ರೇಷು ತಥಾ ವೇದೇಷು ನಿಷ್ಠಿತಂ ||೨೦|| ತಮಾನಯ ಮಹಾಭಾಗಂ ಸ್ವಯಮೇವ ಸು ಸತ್ಕೃತಂ || ಪೂರ್ವ ಸಂಬಂಧಿನಂ ಜ್ಞಾತ್ವಾ ತತಃ ಪೂರ್ವಂ ಬ್ರವೀಮಿ ತೇ || ೨೧ || ತಥಾ ಕಾಶೀಪತಿಂ ಸ್ನಿಗ್ಧಂ ಸತತಂ ಪ್ರಿಯವಾದಿನಂ|| ವಯಸ್ಯಂ ರಾಜಸಿಂಹಸ್ಯ ಸ್ವಯಮೇವಾನಯಸ್ವಹ ||೨೨|| ತಥಾ

ಭೂಮಿಯಲ್ಲಿ, ಯೇ-ಯಾರು, ಧಾರ್ಮಿಕಾಃ-ಧರ್ಮಿಷ್ಠರೋ, ತಾನ್-ಅಂತಹ, ನೃಪತೀನ್-ಅರಸರನ್ನು, ನಿಮಂತ್ರಯಸ್ವ-ಕರದುಬಾ || ೧೮ || ಬ್ರಾಹ್ಮಣಾನ್ - ಬ್ರಾಹ್ಮಣರನ್ನು. ಕ್ಷತ್ರಿಯಾನ್ - ಕ್ಷತ್ರಿಯರನ್ನು, ವೈಶ್ಯಾನ್ - ವೈಶ್ಯರನ್ನು, ಸಹಸ್ರಶಃ ಅನೇಕರಾದ, ಶೂದ್ರಾಂಶ್ಚೈವ-ಶೂದ್ರರನ್ನೂ, ಸರ್ವದೇಶೇಷು- ಸಮಸ್ತದೇಶಗಳಲ್ಲಿಯ, ಮಾನವಾನ್ - ಮನುಷ್ಯರನ್ನು, ಸತ್ಕೃತ್ಯ-ಬಹುಮಾನಮಾಡಿ, ಸಮಾನಯಸ್ವ - ಕರದುಕೊಂಡುಬಾ || ೧೯ || ಮಿಥಿಲಾಧಿಪತಿಂ - ಮಿಥಿಲಾ ಪಟ್ಟಣಕ್ಕೆ ಅಧಿಪತಿಯಾದ,ಶೂರಂ-ಶೂರನಾದ, ಸತ್ಯವಿಕ್ರಮಂ ಸತ್ಯವಾದ ನಡವಳಿಕೆಯುಳ್ಳ ಸರ್ವಶಾಸ್ತ್ರೇಷು-ಸಕಲ ಶಾಸ್ತ್ರಗಳಲ್ಲಿಯೂ, ನಿಷ್ಠಿತಂ-ಅನುಷ್ಠಾನಪರನಾದ, ತಥಾ-ಹಾಗೆಯೆ, ವೇದೇಷು-ವೇದಗಳಲ್ಲಿ, ನಿಷ್ಠಿತಂ-ಪಾರಂಗತನಾದ, ಮಹಾಭಾಗಂ-ಪುಣ್ಯವಂತನಾದ, ತಂಜನಕಂ-ಆ ಜನಕರಾಯನನ್ನು, ಸ್ವಯಮೇವ-ನೀನೆ, ಸುಸತ್ಕೃತಂ - ಸತ್ಕಾರಮಾಡಲ್ಪಟ್ಟವನಾಗಿ, ಆನಯ - ಕರದುಕೊಂಡುಬಾ ||೨೦|| ಪೂರ್ವಸಂಬಂಧಿನಂ, ಪೂರ್ವ - ಪ್ರಾಚೀನನಾದ, (ಅಂದರೆ - ಬಹಳಕಾಲದಿಂದಲೂ,) ಸಂಬಂಧಿನಂ-ಸಂಬಂಧಿಯಾದವನನ್ನು, ಪೂರ್ವಂ-ಪೂರ್ವದಲ್ಲಿಯೇ, ಸಂಬಂಧಿನಂ - ಭವಿಷ್ಯತ್ಸಂಬಂಧವುಳ್ಳವನನ್ನಾಗಿ, ಜ್ಞಾತ್ವಾ-ಯೋಗಬಲದಿಂದ ತಿಳಿದು,ತತಃ-ಆಕಾರಣದಿಂದ, ತೇ-ನಿನಗೆ ಪೂರ್ವಂ-ಮೊದಲು, ಬ್ರವೀಮಿ-ಹೇಳಿದ್ದೇನೆ || ೨೧ || ತಥಾ ಹಾಗೆ, ಸ್ವಯಮೇವ-ನೀನೆ, ರಾಜಸಿಂಹಸ್ಯ-ರಾಜಶ್ರೇಷ್ಠನಾದ ದಶರಥರಾಯನಿಗೆ, ವಯಸ್ಯಂ - ಸ್ನೇಹಿತನಾದ, (ಯದ್ವಾ ವಯಸ್ಯಂ-ಸಮಾನವಯಸ್ಕನಾದ,) ಸತತಂ-ನಿರಂತರವು, ಪ್ರಿಯವಾದಿನಂ-ಇಷ್ಟವನ್ನೇ ಹೇಳುತ್ತಿರುವ,ಸ್ನಿಗ್ಧಂ-ಮಿತ್ರನಾದ, ಕಾಶೀಪತಿಂ-ಕಾಶಿರಾಯನನ್ನು, ಆನಯಸ್ವಹ ಕರದುಕೊಂಡುಬಾ || ೨೨ || ತಥಾ-ಹಾಗೆಯೇ, ತ್ವಂ-ನೀನು, ಪರಮಧಾರ್ಮಿಕಂ-ಪರಮಧರ್ಮಿಷ್ಠನಾದ, ವೃದ್ಧಂ - ವೃದ್ಧನಾದ, ರಾಜ

---

ಳನ್ನೂ, ದೇಶದೇಶಗಳಲ್ಲಿರುವ ಅನೇಕಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ,ಶೂದ್ರರನ್ನೂ ಸಹಾ, ಅವರವರ ಯೋಗ್ಯತೆಗನುಸಾರವಾಗಿ ಬಹುಮಾನಿಸಿ ಕರೆಯಿಸು, ||೧೮-೧೯|| ಮಿಥಿಲ ದೇಶಾಧಿಪತಿಯೂ, ಶೂರನೂ, ಸತ್ಯಪರಾಕ್ರಮಿಯೂ, ಶಾಸ್ತ್ರಜ್ಞನೂ, ವೇದಪಾರಂಗತನೂ, ಮಹಾಪುಣ್ಯಶಾಲಿಯೂ, ಆದ ಜನಕರಾಜನು ಮುಂದ ಬಂಧುವಾಗುವನೆಂದು ಯೋಗಬಲದಿಂದರಿತು ಈಗ ಮುಂಚಿತವಾಗಿಯೇ ಹೇಳಿರುವೆನಾದುದರಿಂದ ನೀನೇ ಹೋಗಿ ಮರ್ಯಾದಿಸಿ ಕರೆದುಕೊಂಡು ಬಾ; || ೨೧ || ರಾಜಾಧಿರಾಜನೂ, ದಶರಥರಾಯನಿಗೆ ಪ್ರಿಯಸ್ನೇಹಿತನೂ ಆದ ಕಾಶೀರಾಜನನ್ನೂ ಹಾಗೆಯೇ ಮಹಾ ಧರ್ಮವಂತ

ಕೇಕಯು ರಾಜಾನಂ ವೃದ್ಧಂ ಪರಮ ಧಾರ್ಮಿಕಂ ॥ ಶ್ವಶುರಂ ರಾಜಸಿಂಹಸ್ಯ ಸಪುತ್ರಂ ತ್ವಮಿಹಾನಯ॥೨೩॥ ಅಂಗೇಶ್ವರಂ ಮಹಾಭಾಗಂ ರೋಮಪಾದಂ ಸುಸತ್ಕೃತಂ ॥ ವಯಸ್ಯಂ ರಾಜಸಿಂಹಸ್ಯ ಸಮಾನಯ ಯಶಸ್ವಿನಂ ॥ ೨೪ ॥ ಪ್ರಾಚೀನಾನ್ ಸಿಂಧು ಸೌವೀರಾನ್ ಸೌರಾಷ್ಟ್ರೇಯಾಂಶ್ಚ ಪಾರ್ಥಿವಾನ್॥ದಾಕ್ಷಿಣಾತ್ಯಾನ್ನರೇಂದ್ರಾಂಶ್ಚ ಸಮಸ್ತಾ ನಾನಯಸ್ವಹ॥೨೫॥ ಸಂತಿಸ್ನಿಗ್ಧಾಶ್ಚ ಯೇಚಾನ್ಯೇ ರಾಜಾನಃ ಪೃಥಿವೀತಲೆ ॥ ತಾನಾನಯ ಯಥಾಕ್ಷಿಪ್ರಂ ಸಾನುಗಾನ್ ಸಹಬಾಂಧವಾನ್ ॥೨೬॥ ವಸಿಷ್ಠವಾಕ್ಯಂ ತಚ್ಛ್ರುತ್ವಾ ಸುಮಂತ್ರ ಸ್ತ್ವರಿತಸ್ತದಾ॥ ವ್ಯಾದಿಶ

ಸಿಂಹಸ್ಯ-ರಾಜಶ್ರೇಷ್ಠನಾದ ದಶರಥರಾಯನಿಗೆ, ಶ್ವಶುರಂ-ಮಾವನಾದ, ಕೇಕಯರಾಜಾನಂ-ಕೇಕಯಾಧಿಪತಿಯನ್ನು, ಸಪುತ್ರಂ-ಮಕ್ಕಳಿಂದೊಡಗೂಡಿದವನನ್ನಾಗಿ, ಇಹ - ಇಲ್ಲಿಗೆ, ಆನಯ - ಕರೆದುಕ್ಕೊಂಡು ಬಾ ॥ ೨೩ ॥ ತಥಾ - ಹಾಗೆಯೇ, ರಾಜಸಿಂಹಸ್ಯ - ದಶರಥರಾಯನಿಗೆ, ವಯಸ್ಯಂ-ಸ್ನೇಹಿತನಾದ, ಮಹಾಭಾಗಂ - ಪುಣ್ಯವಂತನಾದ, ಯಶಸ್ವಿನಂ - ಕೀರ್ತಿವಂತನಾದ, ಅಂಗೇಶ್ವರಂ-ಅಂಗದೇಶಾಧಿ ಪತಿಯಾದ, ರೋಮಪಾದಂ-ರೋಮಪಾದನನ್ನು, ಸುಸತ್ಕೃತಂ - ಮರ್ಯಾದಿಸಿದವನನ್ನಾಗಿ, ಸಮಾನಯ - ಕರೆದುಕೊಂಡುಬಾ ॥ ೨೪ ॥ ಸಮಸ್ತಾನ್ - ಸಮಸ್ತರಾದ, ಪ್ರಾಚೀನಾನ್-ಪ್ರಾಗ್ದೇಶವರ್ತಿಗಳಾದ, ಸಿಂಧುಸೌವೀರಾನ್ - ಸಿಂಧುದೇಶದವರನ್ನೂ ಸೌವೀರ ದೇಶದವರನ್ನೂ, ಸೌರಾಷ್ಟ್ರೇಯಾನ್-ಸೌರಾಷ್ಟ್ರದೇಶಾಧಿಪತಿಗಳಾದ, ಪಾರ್ಥಿವಾನ್=ಅರಸುಗಳನ್ನು,ದಾಕ್ಷಿಣಾತ್ಯಾನ್-ದಕ್ಷಿಣದಿಕ್ಕಿನಲ್ಲಿರುವ, ನರೇಂದ್ರಾನ್ - ರಾಜರನ್ನು, ಆನಯಸ್ವಹ - ಕರದುಕ್ಕೊಂಡುಬಾ ॥ ೨೫ ॥ ಅನ್ಯೇ - ಮತ್ತೆ ಕೆಲವರಾದ, ಯೇರಾಜಾನಃ ಯಾವ ಅರಸರು. ಪೃಥಿವೀತಲೇ- ಭೂಮಂಡಲದಲ್ಲಿ, ಸ್ನಿಗ್ಧಾಶ್ಚ - ಸ್ನೇಹಿತರಾಗಿ, ಸಂತಿ - ಇರುವರೋ, ಸಹಬಾಂಧವಾನ್ - ಬಂಧುಗಳಿಂದೊಡಗೂಡಿದ, ಸಾನುಗಾನ್- ಪರಿವಾರ ಸಮೇತರಾದ, ತಾನ್ - ಅವರೆಲ್ಲರನ್ನು, ಯಥಾಕ್ಷಿಪ್ರಂ - ಜಾಗ್ರತೆಯಾಗಿ, ಆನಯ-ಕರದುಕೊಂಡುಬಾ ॥ ೨೬ ॥ ತದ್ವಸಿಷ್ಠವಾಕ್ಯಂ-ಆ ವಸಿಷ್ಠಋಷಿಯಮಾತನ್ನು, ಶ್ರುತ್ವಾ-ಕೇಳಿ, ಸುಮಂತ್ರಃ-ಸುಮಂತ್ರನು. ತ್ವರಿತಃ-ಜಾಗ್ರತೆಯಾಗಿ, ತದಾ-ಆಕಾಲದಲ್ಲಿ, ತತ್ರ-ಆಯಾಯ ದೇಶಗಳಲ್ಲಿ, ರಾಜ್ಞಾಂ-ಅರಸರ, ಆನಯನೇ-ಕರೆದುಕೊಂಡು ಬರುವಿಕೆಯಲ್ಲಿ,ಶುಭಾನ್-ಸಮರ್ಥರಾದ

ನಾಗಿಯೂ, ವೃದ್ಧನಾಗಿಯೂ, ದಶರಥರಾಜನಿಗೆ ಮಾವನಾಗಿಯೂ, ಇರುವ ಕೇಕಯ ದೇಶಾಧಿಪತಿಯನ್ನು ಪುತ್ರಸಮೇತವಾಗಿ ಬರಬೇಕೆಂದು ನೀನೆ ಕರೆದುಬರಬೇಕು ॥೨೨-೨೩॥ ಇವರಲ್ಲದೆ ಅಂಗದೇಶಾಧಿಪತಿಯಾಗಿಯೂ, ದಶರಥರಾಜನಿಗೆ ಪ್ರೀತಿಪಾತ್ರನಾದ ಸ್ನೇಹಿತನಾಗಿಯೂ, ಇರುವ ಮಹಾಭಾಗ್ಯಸಂಪನ್ನನಾದ ರೋಮಪಾದ ರಾಜನನ್ನು ಕರೆದುಕೊಂಡು ಬಾ ॥೨೪॥ "ಎಲೈ ಸಮಂತ್ರನೇ ! ಮೇಲೆ ಹೇಳಿರುವ ರಾಜರನ್ನೆಲ್ಲಾ ನೀನೇ ಹೋಗಿ, ಕರೆದುಈ ಭೂಮಂಡಲದಲ್ಲಿ ದಶರಥರಾಜನಿಗೆ ಸ್ನೇಹಿತರಾಗಿರುವ ಪ್ರಾಗ್ದೇಶವರ್ತಿಗಳು, ದಕ್ಷಿಣ ದಿಗ್ವಾಸಿಗಳಾದ ಸಿಂಧು, ಸೌವೀರ, ಸೌರಾಷ್ಟ್ರವೇ ಮುಂತಾದ ದೇಶಗಳಲ್ಲಿರುವ ನರಪತಿಗಳನ್ನು ಬಂಧುಸಮೇತರನ್ನಾಗಿ ಕರೆಯಿಸು" ಎಂದು ಹೇಳಿದನು. ವಸಿಷ್ಠ ಮಹಾಮುನಿಯು ಹೀಗೆ ಹೇಳಲು, ಆ ಸುಮಂತ್ರನು ಪೃಥ್ವೀಪತಿಗಳನ್ನು ಕರೆಯಿಸಲು, ಶೀಘ್ರಗಾಮಿಗಳಾದ ಪುರುಷ

ತ್ಪುರುಷಾನ್ ತತ್ರ ರಾಜಾಜ್ಞಾಮಾನಯನೇಶುಭಾನ್ ॥ ೨೭ ॥ ಸ್ವಯಮೇವಹಿ ಧರ್ಮಾತ್ಮಾ ಪ್ರಯಯೌ ಮುನಿಶಾಸನಾತ್ ॥ ಸುಮಂತ್ರಸ್ತ್ವರಿತೋ ಭೂತ್ವಾ ಸಮಾನೇತುಂ ಮಹೀಕ್ಷಿತಃ ॥ ೨೮ ॥ ತೇಚ ಕರ್ಮಾಂತಿಕಾ ಸ್ಸರ್ವೇ ವಸಿಷ್ಠಾಯ ಚ ಧೀಮತೇ॥ ಸರ್ವಂ ನಿವೇದಯಂತಿಸ್ಮ ಯಜ್ಞೇ ಯದುಪಕಲ್ಪಿತಂ॥೨೯॥ ತತಃ ಪ್ರೀತೋ ದ್ವಿಜಶ್ರೇಷ್ಠ ಸ್ತಾನ್ ಸರ್ವಾ ನಿದಮಬ್ರವೀತ್ ॥ ಅವಜ್ಞಯಾ ನ ದಾತವ್ಯಂ ಕಸ್ಯಚಿಲ್ಲೀಲಯಾಪಿವಾ॥೩೦॥ಅವಜ್ಞಯಾಕೃತಂ ಹನ್ಯಾ ದ್ದಾತಾರಂ ನಾತ್ರಸಂಶಯಃ ॥ ತತಃಕೈಶ್ಚಿ ದಹೋರಾತ್ರೈ ರುಪಯಾತಾ ಮಹೀಕ್ಷಿತಃ ॥೩೧ ॥ ಬಹೂನಿ ರತ್ನಾನ್ಯಾದಾಯ ರಾಜ್ಞೋ ದಶರಥಸ್ಯವೈ ॥ ತತೋ

---

ಪುರುಷಾನ್-ರಾಜಪುರುಷರನ್ನು, ವ್ಯಾದಿಶತ್-ಆಜ್ಞಾಪಿಸಿದನು ॥ ೨೭ ॥ ಧರ್ಮಾತ್ಮಾ - ಧರ್ಮಿಷ್ಠನಾದ, ಸುಮಂತ್ರಃ-ಸುಮಂತ್ರನು, ಮುನಿಶಾಸನಾತ್ - ವಸಿಷ್ಠನಾಜ್ಞೆಯಿಂದ, ಸ್ವಯಮೇವ- ತಾನೆ, ಮಹೀಕ್ಷಿತಃ-ಅರಸರನ್ನು, ಸಮಾನೇತುಂ- ಕರೆಯಲು, ತ್ವರಿತೋಭೂತ್ವಾ - ಜಾಗ್ರತೆಯುಳ್ಳವನಾಗಿ, ಪ್ರಯಯೌಹಿ-ಹೊರಟನಷ್ಟೆ ॥ ೨೮ ॥ ಸರ್ವೇ ಸಮಸ್ತರಾದ, ತೇಕರ್ಮಾಂತಿಕಾಶ್ಚ - ಆಯಾಯ ವ್ಯಾಪಾರವಮಾಡುವ ಜನರು, ಯಜ್ಞೇ-ಯಾಗದಲ್ಲಿ, ಯತ್-ಯಾವದು, ಉಪಕಲ್ಪಿತಂ - ನಿರ್ಮಿತವಾಗಿದೆಯೋ, ತತ್ಸರ್ವಂ-ಅದನ್ನೆಲ್ಲ, ಧೀಮತೆ - ಬುದ್ಧಿಶಾಲಿಯಾದ, ವಸಿಷ್ಠಾಯ - ವಸಿಷ್ಠಋಷಿಗೆ, ನಿವೇದಯಂತಿಸ್ಮ-ತಿಳಿಸಿದರಷ್ಟೆ ॥ ೨೯ ॥ ತತಃ-ಬಳಿಕ, ಪ್ರೀತಃ ಸಂತೋಷಗೊಂಡ, ದ್ವಿಜಶ್ರೇಷ್ಠಃ-ಬ್ರಾಹ್ಮಣಶ್ರೇಷ್ಠನಾದ ವಸಿಷ್ಠಋಷಿಯು, ತಾನ್‌ಸರ್ವಾನ್ - ಅವರೆಲ್ಲರನ್ನು ಕುರಿತು, ಇದಂ-ಈ ಮುಂದೆ ಹೇಳುವ ಮಾತನ್ನು, ಅಬ್ರವೀತ್-ನುಡಿದನು ಕಸ್ಯಚಿತ್ - ಒಬ್ಬರಿಗಾದರು, ಅವಜ್ಞಯಾ-ಅವಮಾನದಿಂದ, ನದಾತವ್ಯಂ-ಕೊಡತಕ್ಕದ್ದಲ್ಲ, ಲೀಲಯಾಪಿವಾ - ವಿಲಾಸದಿಂದಲೂ, ನದಾತವ್ಯಂ-ಕೊಡತಕ್ಕದ್ದಲ್ಲ, ಅವಜ್ಞಯಾ ಅವಮಾನದಿಂದ,ಕೃತಂ-ಮಾಡಲ್ಪಟ್ಟದ್ದು, ದಾತಾರಂ-ಕೊಟ್ಟವನನ್ನು, ಹನ್ಯಾತ್-ಹೊಡದೀತು, ಅತ್ರ-ಈ ಅರ್ಥದಲ್ಲಿ, ಸಂಶಯೋನ-ಸಂಶಯವಿಲ್ಲ ॥ ೩೦ ॥ ತತಃ-ಬಳಿಕ, ಮಹೀಕ್ಷಿತಃ-ಅರಸರು, ದಶರಥಸ್ಯ- ದಶರಥನೆಂಬ,ರಾಜ್ಞೋವೈ- ಅರಸಿಗಾದರೆ,ಬಹೂನಿ-ಅನೇಕ, ರತ್ನಾನಿ-ರತ್ನಗಳನ್ನು, ಆದಾಯ-ತೆಗದುಕೊಂಡು, ಕೈಶ್ಚಿತ್-ಕೆಲವು, ಅಹೋರಾತ್ರೈಃ-ಹಗಲುರಾತ್ರಿಗಳಿಂದಲೆ, ಉಪಯಾತಾಃ - ಬಂದರು ॥ ೩೧ ॥ ತತಃ - ಅನಂತರದಲ್ಲಿ, ವಸಿಷ್ಠಃ-

---

ರನ್ನು ಕಳುಹಿಸಿಕೊಟ್ಟು, ತಾನು ಮುಖ್ಯ ರಾಜರನ್ನು ಕರೆಯಲೋಸುಗ ತ್ವರೆಯುಳ್ಳವನಾಗಿ ಹೊರಟುಹೋದನು. ॥ ೨೮ ॥ ಆ ಸಮಯದಲ್ಲಿ ಆಯಾ ಉದ್ಯೋಗಸ್ಥರೆಲ್ಲರು ಯಜ್ಞದಲ್ಲಿ ತಮಗೆ ಅಪ್ಪಣೆಯಾಗಿದ್ದ ಕೆಲಸಗಳನ್ನು ಮಾಡಿ ಬಿನ್ನವಿಸಿದರು. ಆಗೆ ವಸಿಷ್ಠ ಋಷಿಯು ಸುಪ್ರೀತನಾಗಿ ಬ್ರಾಹ್ಮಣ ಶ್ರೇಷ್ಠರನ್ನು ಕುರಿತಿಂತೆಂದನು. ॥ ೨೯ ॥ “ ಈ ಯಾಗದಲ್ಲಿ ಅನಾದರಣೆಯಿಂದಲಾಗಲಿ, ಅಶ್ರದ್ಧೆಯಿಂದಲಾಗಲಿ,ಅಶನ ವಸನಾದಿಗಳನ್ನು ಕೊಡತಕ್ಕುದಲ್ಲ. ಆದರಣೆಯಿಲ್ಲದೆ ಮಾಡಿದ ಕೃತ್ಯವು ದಾತನಿಗೆ ನಾಶವನ್ನುಂಟುಮಾಡೀತು. ಈ ವಿಷಯದಲ್ಲಿ ಸಂಶಯವಿಲ್ಲ ” ಎಂದು ನುಡಿದನು. ॥೩೦॥ ಅನಂತರ ಭೂಪತಿಗಳೆಲ್ಲರು, ಕೆಲವು ದಿನಗಳಲ್ಲಿಯೇ ದಶರಥರಾಜನಿಗೋಸುಗ ಬಗೆಬಗೆಯಾದ ರತ್ನಗಳನ್ನು ತೆಗೆದುಕೊಂಡುಬಂದರು॥೩೧॥

ವಸಿಷ್ಠ ಸ್ಸುಪ್ರೀತೋ ರಾಜಾನಮಿದಮಬ್ರವೀತ್||೩೨|| ಉಪಯಾತಾ ನರವ್ಯಾ
ಘ್ರ ರಾಜಾನ ಸ್ತವಶಾಸನಾತ್ || ಮಯಾಪಿ ಸತ್ಕೃತಾಸ್ಸರ್ವೇ ಯಥಾರ್ಹಂ
ರಾಜಸತ್ತಮಾಃ||೩೩|| ಯಜ್ಞೀಯಂಚ ಕೃತಂ ರಾಜನ್ ಪುರುಷೈಸ್ಸುಸಮಾಹಿತೈಃ||
ನಿರ್ಯಾತುಚ ಭವಾನ್ ಯಷ್ಟುಂ ಯಜ್ಞಾಯತನಮಂತಿಕಾತ್||೩೪|| ಸರ್ವಕಾಮೈ ರುಪ
ಹೃತೈ ರುಪೇತಂ ವೈಸಮಂತತಃ || ದ್ರಷ್ಟುಮರ್ಹಸಿ ರಾಜೇಂದ್ರಮನಸೇವ ವಿನಿ
ರ್ಮಿತಂ ||೩೫|| ತಥಾ ವಸಿಷ್ಠ ವಚನಾ ದೃಶ್ಯಶೃಂಗಸ್ಯ ಚೋಭಯೋಃ ||ಶುಭೇ

---

ವಸಿಷ್ಠಋಷಿಯು, ಸುಪ್ರೀತಃ-ಸಂತೋಷಗೊಂಡವನಾಗಿ, ರಾಜಾನಂ-ದಶರಥರಾಯನನ್ನು ಕುರಿತು, ಇದಂ-ಈ ಮಾತನನ್ನು, ಅಬ್ರವೀತ್-ನುಡಿದನು. ಹೇನರವ್ಯಾಘ್ರ - ಎಲೈ ನರಶ್ರೇಷ್ಠನೆ, ತವ-ನಿನ್ನ ಶಾಸನಾತ್-ಆಜ್ಞೆಯಿಂದ, ರಾಜಾನಃ-ಅರಸರು, ಉಪಯಾತಾಃ ಬಂದಿರುವರು || ೩೨ || ಹೇರಾಜನ್-ಎಲೈ ಅರಸೆ! ಸರ್ವೇ-ಸಮಸ್ತರಾದ, ರಾಜಸತ್ತಮಾಃ-ರಾಜಶ್ರೇಷ್ಠರು, ಮಯಾಪಿ- ನನ್ನಿಂದಲೂ ಕೂಡ, ಯಥಾರ್ಹಂ-ಯಥಾಯೋಗ್ಯವಾಗಿ, ಸತ್ಕೃತಾಃ - ಮರ್ಯಾದೆ ಮಾಡಲ್ಪಟ್ಟರು, ಸುಸಮಾಹಿತೈಃ-ಸಮಾಧಾನಚಿತ್ತರಾದ, ಪುರುಷೈಃ-ರಾಜಪುರುಷರಿಂದ, ಯಜ್ಞೀಯಂಚ - ಯಾಗೋಪಸಮುದಾಯವೂ, ಕೃತಂ- ಮಾಡಲ್ಪಟ್ಟಿತು || ೩೩ || ಭವಾನ್-ನೀನು, ಸಮಂತತೋವೈ-ಎಲ್ಲ ಕಡೆಯಿಂದಲೂ, ಉಪಹೃತೈಃ - ತರಲ್ಪಟ್ಟ, ಸರ್ವಕಾಮೈಃ - ಸರ್ವೋಪಕರಣಗಳಿಂದಲೂ, ಉಪೇತಂ-ಕೂಡಿರುವ, ಅಂತಿಕಾತ್-ಸಮೀಪದಲ್ಲಿರುವ, ಯಜ್ಞಾಯತನಂಚ - ಯಾಗಶಾಲೆಯನ್ನೂ ಕುರಿತು, ಯಷ್ಟುಂ-ಯಾಗಮಾಡಲೋಸುಗ, ನಿರ್ಯಾತು ಹೊರಡು || ೩೪ || ಹೇರಾಜೇಂದ್ರ-ಎಲೈ ರಾಜಶ್ರೇಷ್ಠನೆ! ಮನಸಾ ಮನಸ್ಸಿನಿಂದ, ವಿನಿರ್ಮಿತಮಿವಸ್ಥಿತಂ - ನಿರ್ಮಿಸಲ್ಪಟ್ಟಿರುವುದೋ ಎಂಬಂತಿರುವ ಯಾಗಶಾಲೆಯನ್ನು, ದ್ರಷ್ಟುಂ-ನೋಡಲು, ಅರ್ಹಸಿ-ಅರ್ಹನಾಗಿರುವೆ || ೩೫ || ಜಗತೀಪತಿಃ-ಭೂಪತಿಯಾದ ದಶರಥನು, ವಸಿಷ್ಠವಚನಾತ್-ವಸಿಷ್ಠರ ವಚನದಿಂದಲೂ, ಋಶ್ಯಶೃಂಗಸ್ಯ - ಋಶ್ಯಶೃಂಗನೆಂಬ, ಉಭಯೋಃ-ಈರ್ವರ, ವಚನಾತ್ - ವಚನದಿಂದಲೂ, ಶುಭೇ - ಮಂಗಳಕರವಾದ,

---

ಆ ಬಳಿಕ ವಸಿಷ್ಠಋಷಿಯು ಸಂತುಷ್ಟಾಂತರಂಗವುಳ್ಳವನಾಗಿ, ನರಪತಿಶ್ರೇಷ್ಠನಾದ ದಶರಥನನ್ನು ಕುರಿತು, "ಎಲೈ ಪುರುಷವ್ಯಾಘ್ರನೇ! ನಿನ್ನಾಜ್ಞೆಯಿಂದ ನರನಾಥರೆಲ್ಲರು ಬಂದಿರುವರು. ರಾಜಶ್ರೇಷ್ಠರಾದ ಅವರೆಲ್ಲರು ಯಥಾರ್ಹವಾಗಿ ನನ್ನಿಂದಲೂ, ಬಹುಮಾನ ನಿರತರಾಗುವರು. ಎಲೈ ರಾಜನೇ! ಯಾಗಕ್ಕೆ ಬೇಕಾದ ಸ್ರುಕ್ಸ್ರುವಾದಿಗಳೇ ಮುಂತಾದ ಪದಾರ್ಥಗಳು ಪುರುಷರಿಂದ ತರಿಸಲ್ಪಟ್ಟಿರುವುದು. ಆದುದರಿಂದ ನೀನು ಯಾಗ ಮಾಡಲು, ಸಕಲ ಸಾಮಗ್ರಿಗಳಿಂದ ತುಂಬಿರುವ ಸಮೀಪದಲ್ಲಿಯೇ ಇರುವ ಯಾಗಶಾಲೆಗೆ ತೆರಳು. ಎಲೈ ರಾಜಶ್ರೇಷ್ಠನೇ! ಮನಸ್ಸಿನಿಂದ ನಿರ್ಮಿತವಾಗಿರುವಂತಿರುವ ಆ ಯಾಗಶಾಲೆಯನ್ನು ನೋಡಲು, ಅರ್ಹನಾಗಿರುವೆ." ಎಂದನು. ಋಶ್ಯಶೃಂಗನೂ ಹಾಗೆಯೇ ಹೇಳಿದನು. ಆಗಲಾ ನಥ

ದಿವಸ ನಕ್ಷತ್ರೇ ನಿರ್ಯಾತೋಜಗತೀಪತಿಃ||೩೬||ತತೋ ವಸಿಷ್ಠ ಪ್ರಮುಖಾಸ್ಸ
ರ್ವಏವ ದ್ವಿಜೋತ್ತಮಾಃ || ಋಶ್ಯಶೃಂಗಂ ಪುರಸ್ಕೃತ್ಯ ಯಜ್ಞಕರ್ಮಾರಭಂ
ಸ್ತದಾ||೩೭||ಯಜ್ಞವಾಟಿ ಗತಾಸ್ಸರ್ವೇ ಯಥಾಶಾಸ್ತ್ರಂ ಯಥಾವಿಧಿ ||೩೭|||
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯೋದಶಸ್ಸರ್ಗಃ.

---

ದಿವಸೇ-ದಿನದಲ್ಲಿ, ನಕ್ಷತ್ರೇ-ನಕ್ಷತ್ರದಲ್ಲಿ, ನಿರ್ಯಾತಃ-ಹೊರಟನು || ೩೬ || ತತಃ-ಬಳಿಕ, ವಸಿಷ್ಠ ಪ್ರಮುಖಾಃ-ವಸಿಷ್ಠನೇ ಮೊದಲಾದ, ಸರ್ವ ಏವ - ಸಮಸ್ತರಾದ, ದ್ವಿಜೋತ್ತಮಾಃ - ಬ್ರಾಹ್ಮಣ ಶ್ರೇಷ್ಠರು, ಋಶ್ಯಶೃಂಗಂ-ಋಶ್ಯಶೃಂಗಋಷಿಯನ್ನು, ಪುರಸ್ಕೃತ್ಯ-ಮುಂದೆಮಾಡಿ, ತದಾ-ಆಕಾಲ ದಲ್ಲಿ, ಯಜ್ಞಕರ್ಮ-ಯಾಗವ್ಯಾಪಾರವನ್ನು. ಆರಭಣ್ ಉಪಕ್ರಮಿಸಿದರು || ೩೭ || ಯಜ್ಞವಾಟಂ ಯಾಗಶಾಲೆಯನ್ನು, ಗತಾಃ-ಹೊಂದಿರುವ, ಸರ್ವೇ-ಸಮಸ್ತ ಋತ್ವಿಕ್ಕುಗಳು, ಯಥಾಶಾಸ್ತ್ರಂ-ಶಾಸ್ತ್ರೋಲ್ಲಂಘನವಿಲ್ಲದಂತೆ, ಯಥಾವಿಧಿ-ಶಾಸ್ತ್ರಾನುಸಾರವಾಗಿ, ಯಜ್ಞಕರ್ಮ-ಯಾಗಕರ್ಮವನ್ನು, ಆರಭಣ್-ಉಪಕ್ರಮಿಸಿದರು. || ೩೭|||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ತ್ರಯೋದಶಸ್ಸರ್ಗಃ.

---

ನಾಥನಾದ ದಶರಥನು ಶುಭನಕ್ಷತ್ರ, ಯುಕ್ತವಾದ ಶುಭದಿನದಲ್ಲಿ ಯಾಗಶಾಲೆಯನ್ನು ಕುರಿತು ತೆರಳಿದನು. ||೩೬|| ಬಳಿಕ ವಸಿಷ್ಠನೇ ಮುಂತಾದ ಬ್ರಾಹ್ಮಣೋತ್ತಮರೆಲ್ಲರು ಋಶ್ಯ ಶೃಂಗ ಋಷಿಯನ್ನು ಮುಂದುಮಾಡಿಕೊಂಡು ಯಾಗಶಾಲೆಯನ್ನು ಸೇರಿ ಯಾಗ ಕರ್ಮವನ್ನು ಪ್ರಾರಂಭಿಸಿದರು. ||೩೭|||

ಇಂತಿದು ಅಶ್ವಮೇಧ ಯಾಗಾರಂಭಣವೆಂಬ ಹದಿಮೂರನೆಯ ಸರ್ಗವು
ಸಮಾಪ್ತವಾದುದು

# ಬಾಲಕಾಂಡೇ ಚತುರ್ದಶ ಸ್ಸರ್ಗಃ.

---

ಅಥ ಸಂವತ್ಸರೇ ಪೂರ್ಣೇ ತಸ್ಮಿನ್ ಪ್ರಾಪ್ತೇ ತುರಂಗಮೇ॥ಸರಯ್ವಾಶ್ಚೋತ್ತರೇ ತೀರೇ ರಾಜ್ಞೋ ಯಜ್ಞೋಽಭ್ಯವರ್ತತ॥೧॥ ಋಶ್ಯಶೃಂಗಂ ಪುರಸ್ಕೃತ್ಯ ಕರ್ಮ ಚಕ್ರು ರ್ದ್ವಿಜರ್ಷಭಾಃ॥ಅಶ್ವಮೇಧೇ ಮಹಾಯಜ್ಞೇ ರಾಜ್ಞೋಽಸ್ಯ ಸುಮಹಾತ್ಮನಃ ॥ ೨ ॥ ಕರ್ಮಕುರ್ವಂತಿ ವಿಧಿವದ್ಯಾಜಕಾ ವೇದಪಾರಗಾಃ ॥ ಯಥಾವಿಧಿ ಯಥಾನ್ಯಾಯಂ ಪರಿಕ್ರಾಮಂತಿ ಶಾಸ್ತ್ರತಃ ॥ ೩ ॥ ಪ್ರವರ್ಗ್ಯಂ ಶಾಸ್ತ್ರತಃ ಕೃತ್ವಾ ತಥೈವೋಪಸದಂ ದ್ವಿಜಾಃ ॥ ಚಕ್ರುಶ್ಚ ವಿಧಿವತ್ಸರ್ವ ಮಧಿಕಂ ಕರ್ಮ ಶಾಸ್ತ್ರತಃ ॥ ೪ ॥ ಅಭಿಪೂಜ್ಯತತೋ ಹೃಷ್ಟಾ ಸ್ಸರ್ವೇಚಕ್ರು ರ್ಯಥಾವಿಧಿ ॥

---

ಅಥ-ಬಳಿಕ, ಸಂವತ್ಸರೇ ಸಂವತ್ಸರವು, ಪೂರ್ಣೇಸತಿ - ಪೂರ್ಣವಾಗುತ್ತಿರಲು, ತಸ್ಮಿನ್ ತುರಂಗಮೇ-ಆ ಕುದುರೆಯು,ಪ್ರಾಪ್ತೇಸತಿ-ಹಿಂತಿರುಗಿಬರಲು,ಸರಯ್ವಾಃ-ಸರಯೂನದಿಯ, ಉತ್ತರೇ ತೀರೆ-ಉತ್ತರದಡದಲ್ಲಿ, ರಾಜ್ಞಃ-ದಶರಥರಾಯನ ಸಂಬಂಧವಾದ, ಯಜ್ಞಃ - ಅಶ್ವಮೇಧಕ್ರತುವು, ಅಭ್ಯವರ್ತತ-ನಡೆಯಿತು ॥ ೧ ॥ ಸುಮಹಾತ್ಮನಃ-ಮಹಾಮನಸ್ವಿಯಾದ, ಅಸ್ಯರಾಜ್ಞಃ-ಈ ದಶರಥ ರಾಯನ, ಅಶ್ವಮೇಧೇ - ಅಶ್ವಮೇಧವೆಂಬ, ಮಹಾಯಜ್ಞೇ - ದೊಡ್ಡಯಾಗದಲ್ಲಿ, ದ್ವಿಜರ್ಷಭಾಃ-ಬ್ರಾಹ್ಮಣಶ್ರೇಷ್ಠರು, ಋಶ ಶೃಂಗಂ-ಋಶ್ಯಶೃಂಗನನ್ನು, ಪುರಸ್ಕೃತ್ಯ-ಮುಂದಿರಿಸಿಕೊಂಡು, ಕರ್ಮ-ಯಾಗಕರ್ಮವನ್ನು, ಚಕ್ರುಃ-ಮಾಡಿದರು ॥ ೨ ॥ ವೇದಪಾರಗಾಃ - ವೇದವೇದಾರ್ಥಪಾರಂಗತರಾದ, ಯಾಜಕಾಃ-ಋತ್ವಿಕ್ಕುಗಳು, ವಿಧಿವತ್-ಯಥಾಶಾಸ್ತ್ರೀಯವಾಗಿ, ಯಥಾವಿಧಿ-ಕಲ್ಪಸೂತ್ರಾತಿಕ್ರಮಣವಿಲ್ಲದಂತೆ, ಕರ್ಮ ಯಾಗವನ್ನು, ಕುರ್ವಂತಿ-ಮಾಡಿದರು, ಶಾಸ್ತ್ರತಃ-ಶಾಸ್ತ್ರದಿಂದ, ಯಥಾನ್ಯಾಯಂ-ಮೀಮಾಂಸಾಶಾಸ್ತ್ರಾತಿಕ್ರಮಣವಿಲ್ಲದಂತೆ, ಪರಿಕ್ರಾಮಂತಿ- ಕರ್ಮಾನುಷ್ಠಾನಾರ್ಥವಾಗಿ ಸಂಚಾರಮಾಡಿದರು ॥ ೩ ॥ ದ್ವಿಜಾಃ-ಬ್ರಾಹ್ಮಣರು, ಶಾಸ್ತ್ರತಃ-ಕಲ್ಪಸೂತ್ರಾನುಸಾರವಾಗಿ, ಪ್ರವರ್ಗ್ಯಂ-ಪ್ರವರ್ಗ್ಯ ಹೋಮವನ್ನು, ಕೃತ್ವಾ-ಮಾಡಿ, ತಥೈವ-ಹಾಗೆಯೇ, ಉಪಸದಂ-ಉಪಸತ್ತುಯೆಂಬ ಇಷ್ಟಿವಿಶೇಷವನ್ನು, ಸರ್ವಂ - ಸಮಸ್ತವಾದ, ಶಾಸ್ತ್ರತಃ - ಶಾಸ್ತ್ರದಿಂದ ಪ್ರಾಪ್ತವಾದ, ಅಧಿಕಂಕರ್ಮ - ಹೆಚ್ಚಾದ ಕರ್ಮವಿಶೇಷವನ್ನು, ವಿಧಿವತ್ - ಯಥಾಶಾಸ್ತ್ರೋಕ್ತವಾಗಿ, ಚಕ್ರುಶ್ಚ-ಮಾಡಿಯೂ ಮಾಡಿದರು ॥ ೪ ॥ ತತಃ - ಪ್ರವರ್ಗ್ಯಹೋಮಗಳಾದ ಬಳಿಕ,

---

ಆ ಬಳಿಕ ಸಂವತ್ಸರವು ಪರಿಪೂರ್ತಿಯಾಗಿ ಅಶ್ವಮೇಧ ಕುದುರೆಯು ಹಿಂತಿರುಗಿ ಬರಲು, ಸರಯೂ ನದಿಯ ಉತ್ತರತೀರದಲ್ಲಿ ದಶರಥರಾಜನ ಅಶ್ವಮೇಧಯಾಗವು ನಡೆಯಿತು. ॥ ೧ ॥ ಮಹಾತ್ಮನಾದ ಆ ದಶರಥರಾಜನ ಯಾಗದಲ್ಲಿ ವೇದಪಾರಂಗತರಾದ ಬ್ರಾಹ್ಮಣೋತ್ತಮರೆಲ್ಲರೂ ಋಶ್ಯಶೃಂಗಮುನಿಯನ್ನು ಮುಂದು ಮಾಡಿಕೊಂಡು ಶಾಸ್ತ್ರೋಕ್ತವಾಗಿ, ಮೀಮಾಂಸಾಶಾಸ್ತ್ರಾತಿಕ್ರಮಣವಿಲ್ಲದಂತೆ ಕರ್ಮಾನುಷ್ಠಾನಗಳನ್ನು ಮಾಡುತ್ತಿದ್ದರು. ॥ ೩ ॥ ಇಷ್ಟೆಯಲ್ಲದೆ ಆ ಬ್ರಾಹ್ಮಣಶ್ರೇಷ್ಠರು ಕಲ್ಪಸೂತ್ರಾನುಸಾರವಾಗಿ ಪ್ರವರ್ಗ್ಯವೆಂಬ ಹೋಮವನ್ನೂ, ಅನಂತರದಲ್ಲಿ ಉಪಸದವೆಂಬ ಇಷ್ಟಿವಿಶೇಷವನ್ನೂ, ಆ

ಪ್ರಾತಸ್ಸವನ ಪೂರ್ವಾಣಿ ಕರ್ಮಾಣಿ ಮುನಿಪುಂಗವಾಃ ||೫|| ಐಂದ್ರಶ್ಚವಿಧಿ ವದ್ದತ್ತೋ ರಾಜಾ ಚಾಭಿಷ್ಟುತೋಽನಘಃ || ಮಾಧ್ಯಂ ದಿನಂಚ ಸವನಂ ಪ್ರಾವರ್ತತ ಯಥಾಕ್ರಮಂ || ೬ || ತೃತೀಯ ಸವನಂ ಚೈವ ರಾಜ್ಞೋಽಸ್ಯಸು ಮಹಾತ್ಮನಃ||ಚಕ್ರುಸ್ತೇಶಾಸ್ತ್ರತೋ ದೃಷ್ಟ್ವಾ ತಥಾಬ್ರಾಹ್ಮಣಪುಂಗವಾಃ||೭|| ನಚಾಹುತಮಭೂತ್ತತ್ರ ಸ್ಖಲಿತಂ ವಾಪಿಕಿಂಚನ||ದೃಶ್ಯತೇ ಬ್ರಹ್ಮವತ್ಸರ್ವಂ

ಸರ್ವೇ-ಸಮಸ್ತರಾದ, ಮುನಿಪುಂಗವಾಃ-ಋಷಿಶ್ರೇಷ್ಠರು,ಹೃಷ್ಟಾಃ ಹರ್ಷಯುಕ್ತರಾಗಿ,ಅಭಿಪೂಜ್ಯ-ಪೂಜಿಸಿ, ಪ್ರಾತಸ್ಸವನಪೂರ್ವಾಣಿ, ಪ್ರಾತಸ್ಸವನ-ಪ್ರಾತಸ್ಸವನವೆಂಬ ಕರ್ಮವೇ, ಪೂರ್ವಾಣಿ-ಮೊದಲಾಗಿವುಳ್ಳ, ಕರ್ಮಾಣಿ-ಮಾಧ್ಯಂದಿನಸವನ, ತೃತೀಯಸವನಾಖ್ಯಕರ್ಮಗಳನ್ನು, ಯಥಾವಿಧಿ - ಯಥಾಶಾಸ್ತ್ರೋಕ್ತವಾಗಿ, ಚಕ್ರುಃ-ಮಾಡಿದರು || ೫ || (ಗೋ) ಐಂದ್ರಃ-ಇಂದ್ರಗ್ರಹದಲ್ಲಿರುವ ಸೋಮಾಂಶವು, ವಿಧಿವತ್-ಯಥಾಕಲ್ಪಾನುಸಾರವಾಗಿ, ದತ್ತಃ-ಇಂದ್ರನಿಗೆ ಕೊಡಲ್ಪಟ್ಟಿತು, ಯದ್ವಾಐಂದ್ರಃ-ಇಂದ್ರದೇವತಾಕವಾದ ಹವಿರ್ಭಾಗವು, ಅಂದರೆ-ಧಾನ, ಕರಂಭ, ಪರಿವಾಪ, ಪುರೋಡಾಶ, ಪಯಸ್ಯಗಳೆಂಬ ಪಂಚವಿಧವಾದ ಹವಿರ್ಭಾಗಗಳು, ವಿಧಿವತ್-ಯಥಾಶಾಸ್ತ್ರವಾಗಿ, ದತ್ತಃ - ಕೊಡಲ್ಪಟ್ಟಿತು,ಅನಘಃ-ನಿರ್ದೋಷವಾದ, ರಾಜಾ-ಸೋಮರಾಜನು (ಅಂದರೆ-ಸೋಮಲತೆಯು,)ಅಭಿಷ್ಟುತಃ-ಸ್ತುತಿಶಸ್ತ್ರಗಳಿಂದ ಸ್ತೋತ್ರಮಾಡಲ್ಪಟ್ಟಿತು, ಮಾಧ್ಯಂದಿನಂ ಮಧ್ಯಾಹ್ನಕಾಲದಲ್ಲಿ ಮಾಡತಕ್ಕ, ಸವನಂಚ-ಹೋಮವಿಶೇಷವೂ, ಯಥಾಕ್ರಮಂ-ಕ್ರಮಾನುಸಾರವಾಗಿ, ಪ್ರಾವರ್ತತ-ನಡೆಯಿತು||೬|| ಸುಮಹಾತ್ಮನಃ-ಒಳ್ಳೇಮನಸ್ವಿಯಾದ, ಅಸ್ಯರಾಜ್ಞಃ-ಈ ದಶರಥರಾಯನ ಕರ್ತೃಕವಾದ, ತೃತೀಯ ಸವನಂಚೈವ-ಸಾಯಂಸವನವೆಂಬ ಕರ್ಮವನ್ನು, ತೇಬ್ರಾಹ್ಮಣಪುಂಗವಾಃ-ಆ ಬ್ರಾಹ್ಮಣಶ್ರೇಷ್ಠರು, ಶಾಸ್ತ್ರತಃ-ಶಾಸ್ತ್ರದಿಂದ, ದೃಷ್ಟ್ವಾ-ಕಂಡು, ತಥಾ-ಅದೇ ಶಾಸ್ತ್ರೋಕ್ತಪ್ರಕಾರವಾಗಿ, ಚಕ್ರುಃ-ಮಾಡಿದರು || ೭ || ತತ್ರ – ಆ ಯಾಗದಲ್ಲಿ, ಅಹುತಂ ಹೋಮಮಾಡಲ್ಪಡದೇ ಇರುವದು, ನಾಭೂತ್-ಆಗಲಿಲ್ಲ, ಸ್ಖಲಿತಂವಾಪಿ - ಪಾತ್ರದಿಂದ ಸ್ಖಲಿತವಾದುದನ್ನು, ಕಿಂಚ - ಒಂದಾನೊಂದಾದರೂ, ನದೃಶ್ಯತೇ-ಕಾಣಲ್ಪಡಲಿಲ್ಲ, ಸರ್ವಂ-ಸಮಸ್ತಕರ್ಮವನ್ನು, ಬ್ರಹ್ಮವತ್ - ಮಂತ್ರವತ್ತಾಗಿಯೂ,ಕ್ಷೇಮಯುಕ್ತಂ ಕ್ಷೇಮಕರವಾದ ರಕ್ಷೋಘ್ನಮಂತ್ರಾದಿಗಳಿಂದ ಯುಕ್ತವಾಗಿಯೂ, ಚಕ್ರಿ

ಬಳಿಕ ಯಥಾವಿಧಾನವಾಗಿ ಪೂಜಿಸಿ, ಪ್ರಾತಸ್ಸವನ, ಮಧ್ಯಂದಿನಸವನ, ತೃತೀಯ ಸವನವೆಂಬ ಕರ್ಮಗಳಿಗೂ ಸಂಕಲ್ಪಗಳನ್ನು ಮಾಡಿ ಕ್ರಮವಾಗಿ ಮಾಡಿದರು. ಇಂದ್ರದೇವತಾಕವಾದ ಧಾನ, ಕರಂಭ, ಪರಿವಾಪ, ಪುರೋಡಾಶ, ಪಯಸ್ಯಗಳೆಂಬ ವಿಧವಿಧವಾದ ಹವಿರ್ಭಾಗಗಳನ್ನು ಯಥಾಶಾಸ್ತ್ರವಾಗಿ ಕೊಟ್ಟು ಸೋಮರಾಜನನ್ನು (ಸೋಮಲತೆಯನ್ನು) ಸ್ತುತಿಸಿ, ಆ ಬಳಿಕ ಮಾಧ್ಯಾಹ್ನಕಾಲದಲ್ಲಿ ಮಾಡತಕ್ಕ ಪೂಜಾವಿಶೇಷಗಳನ್ನು ಮಾಡಿ ಸಾಯಂತನಸವನವನ್ನು ಶಾಸ್ತ್ರೋಕ್ತಪ್ರಕಾರ ಮಾಡಿದರು.||೫-೭||ಆ ಯಾಗದಲ್ಲಿ ಹೋಮಮಾಡಲ್ಪಡದೆ ಇರುವದಾಗಲಿ, ಪಾತ್ರಸ್ಖಲಿತವಾದುದಾಗಲೀ, ಯಾವುದೊಂದೂ ಕಂಡುಬರಲಿಲ್ಲವು. ಆ ಬ್ರಾಹ್ಮಣೋತ್ತಮರೆಲ್ಲರು ಮಂತ್ರವತ್ತಾಗಿಯೂ, ಕ್ಷೇಮಕರವಾದ ರಕ್ಷೋಘ್ನ

ಷ್ಟೇವಮಯುಕ್ತಂ ಹಿ ಚಕ್ರಿರೆ ||೮|| ನ ತೇಷ್ವಹಸ್ಸು ಶ್ರಾಂತೋವಾ ಕ್ಷುಧಿತೋ ವಾಪಿದೃಶ್ಯತೆ || ನಾವಿದ್ವಾನ್ ಬ್ರಾಹ್ಮಣಸ್ತತ್ರ ನಾಶತಾನುಚರಸ್ತಥಾ ||೯|| ಬ್ರಾಹ್ಮಣಾ ಭುಂಜತೇ ನಿತ್ಯಂ ನಾಥವತಂಶ್ಚ ಭುಂಜತೇ|| ತಾಪಸಾಭುಂಜತೇಚಾಪಿ ಶ್ರವಣಾಭುಂಜತೇ ತಥಾ ||೧೦|| ವೃದ್ಧಾಶ್ಚ ವ್ಯಾಧಿತಾಶ್ಚೈವ ಸ್ತ್ರಿಯೋಬಾಲಾ ಸ್ತಥೈವಚ || ಅನಿಶಂ ಭುಂಜಮಾನಾನಾಂ ನತೃಪ್ತಿರುಪಲಭ್ಯತೆ ||೧೧|| ದೀಯತಾಂ ದೀಯತಾಮನ್ನಂ ವಾಸಾಂಸಿ ವಿವಿಧಾನಿಚ|| ಇತಿ ಸಂಚೋದಿತಾ ಸ್ತತ್ರ ತಥಾಚಕ್ರುರನೇಕಶಃ ||೧೨|| ಅನ್ನಕೂಟಾಸ್ಯಬಹುವೋ ದೃಶ್ಯಂತೇ ಪರ್ವತೋ

---

ರೇಹಿ-ಮಾಡಿಪರಷ್ಟೆ ||೮|| ತೇಷ್ವಹಸ್ಸು-ಆ ಹಗಲುಗಳಲ್ಲಿ, ಬ್ರಾಹ್ಮಣಃ-ಬ್ರಾಹ್ಮಣನು, ಶ್ರಾಂತೋವಾ-ಬಳಲಿದವನಾದರೂ, ನ-ಇಲ್ಲ, ಕ್ಷುಧಿತೋವಾಪಿ-ಕ್ಷುದ್ಬಾಧಿತನಾದವನು, ನದೃಶ್ಯತೇ-ಕಾಣಲ್ಪಡಲಿಲ್ಲ, ತತ್ರ-ಆ ಯಾಗದಲ್ಲಿ, ಅವಿದ್ವಾನ್-ವಿದ್ವಾಂಸನಲ್ಲದವನು, ನ-ಇಲ್ಲ, ತಥಾ-ಹಾಗೆಯೇ, ಅಶತಾನುಚರಃ-ನೂರುಮಂದಿ ಶಿಷ್ಯರಿಲ್ಲದವನು, ನ-ಇಲ್ಲ ||೯|| ಬ್ರಾಹ್ಮಣಾಃ-ಬ್ರಾಹ್ಮಣರು, ನಿತ್ಯಂ-ನಿರಂತರವೂ, ಭುಂಜತೇ-ಭೋಜನ ಮಾಡುತ್ತಾರೆ, ನಾಥವಂತಶ್ಚ-ಶೂದ್ರಾದಿಗಳೂ, ಭುಂಜತೇ-ಭೋಜನ ಮಾಡುತ್ತಾರೆ, ತಾಪಸಾಶ್ಚಾಪಿ-ತಪಸ್ವಿಗಳೂ, ಭುಂಜತೇ-ಭೋಜನಮಾಡುತ್ತಾರೆ, ಶ್ರವಣಾಃ-ದಿಗಂಬರರೂ, (ಗೋ) ತುರೀಯಾಶ್ರಮವನ್ನು ಹೊಂದಿದವರು, ತಥಾ-ಹಾಗೆಯೇ, ಭುಂಜತೇ-ಭೋಜನಮಾಡುತ್ತಾರೆ||೧೦|| ವೃದ್ಧಾಶ್ಚ-ವೃದ್ಧರೂ, ವ್ಯಾಧಿತಾಶ್ಚೈವ-ರೋಗಾರ್ತರೂ, ಸ್ತ್ರಿಯಃ-ಹೆಂಗಸರೂ, ತಥೈವ-ಹಾಗೆಯೇ, ಬಾಲಾಶ್ಚ-ಹುಡುಗರೂ, ಭುಂಜತೇ-ಭೋಜನ ಮಾಡುತ್ತಾರೆ, (ಗೋ) ಅನಿಶಂ-ನಿರಂತರವೂ, ಭುಂಜಮಾನಾನಾಮಪಿ-ಭೋಜನಮಾಡುತ್ತಿರುವವರಾದರೂ, ರಸಾತಿಶಯವಿದ್ದುದರಿಂದ, ತೃಪ್ತಿಃ-ತೃಪ್ತಿಯು, ನೋಪಲಭ್ಯತೆ-ಕಾಣಲ್ಪಡುವದಿಲ್ಲ, (ಮ) ಅನಿಶಂ-ನಿರಂತರವೂ, ಭುಂಜಮಾನಾನಾಂ-ಭೋಜನಮಾಡುವಜನರ ವಿಷಯವಾಗಿ, ತೃಪ್ತಿಃ-ರಾಜನಿಗೆ ತೃಪ್ತಿಯು, ನೋಪಲಭ್ಯತೆ-ಕಾಣಲ್ಪಡಲಿಲ್ಲ ||೧೧|| ಅನ್ನಂ-ಅನ್ನವು, ದೀಯತಾಂ-ಕೊಡಲ್ಪಡಲಿ, ವಿವಿಧಾನಿ-ನಾನಾಬಗೆಗಳಾದ, ವಾಸಾಂಸಿ ವಸ್ತ್ರಗಳೂ, ದೀಯತಾಂ-ಕೊಡಲ್ಪಡಲಿ, ಇತಿ-ಈ ಪರಿಯಾಗಿ, ತತ್ರ-ಆ ಯಾಗದಲ್ಲಿ, ಸಂಚೋದಿತಾಃ-ಪ್ರೇರಿತರಾದ, ಅನೇಕಶಃ-ಅನೇಕ ಜನರು, ತಥಾ-ಹಾಗೆಯೇ, ಚಕ್ರುಃ-ಮಾಡಿದರು ||೧೨|| ತದಾ-ಆ ಕಾಲದಲ್ಲಿ, ತತ್ರ-

---

ಮಂತ್ರಗಳಿಂದ ಯುಕ್ತವಾದುದಾಗಿಯೂ, ಇರುವಂತೆ ಕರ್ಮವನ್ನಾಚರಿಸುತ್ತಿದ್ದರು ||೮|| ಆ ಹಗಲುಗಳಲ್ಲಿ ಯಾವ ಬ್ರಾಹ್ಮಣನಾದರೂ ಬಳಲಿದವನಾಗಲೀ, ಕ್ಷುದ್ಬಾಧೆಯುಳ್ಳವನಾಗಲಿ, ಆಗಿರಲಿಲ್ಲ. ಆ ಯಾಗದಲ್ಲಿ ವಿದ್ವಾಂಸನಲ್ಲದೇ ಇರುವವನೂ, ನೂರುಮಂದಿಗೆ ಕಡಮೆಯಾದ ಶಿಷ್ಯರುಳ್ಳವನೂ, ಇರಲೇ ಇಲ್ಲ. ಬ್ರಾಹ್ಮಣರೂ, ದಾಸಜನರಾದ ಶೂದ್ರಾದಿಗಳೂ, ತಾಪಸರೂ, ದಿಗಂಬರರೂ, ವೃದ್ಧರೂ, ವ್ಯಾಧಿಗ್ರಸ್ತರೂ, ಸ್ತ್ರೀಯರೂ, ಬಾಲರೂ ಕೂಡ ನಿರಂತರವೂ ಭುಜಿಸುತ್ತಿದ್ದರು. ಆದರೂ ದಶರಥ ರಾಜನು ತೃಪ್ತನಾಗದೇ, "ಇನ್ನೂ ಅನ್ನವಡಿಸ್ನಿರಿ; ಮತ್ತೂ ಬಗೆಬಗೆಯಾದ ವಸ್ತ್ರಗಳನ್ನು ಕೊಡಿರಿ" ಎಂದು ಹೇಳುತ್ತಿದ್ದನು. ಆದಕಾರಣ ಒಡೆಯನಿಂದ ಪ್ರೇರಿತರಾದ ಅನೇಕ ಜನರು ಹಾಗೆಯೇ ಕೊಡುತ್ತಿದ್ದರು. ||೧೨|| ಆ ಯಾಗೋತ್ಸವದಲ್ಲಿ ಶಾಕಶಾಸ್ತ್ರೋಕ್ತವಾಗಿ ಪ್ರತಿದಿವಸ

ಪಮಾಃ || ದಿವಸೇ ದಿವಸೇ ತತ್ರ ಸಿದ್ಧಸ್ಯ ವಿಧಿವತ್ತದಾ ||೧೩|| ನಾನಾ ದೇಶಾದನುಪ್ರಾಪ್ತಾಃ ಪುರುಷಾಃ ಸ್ತ್ರೀಗಣಾಸ್ತಥಾ || ಅನ್ನಪಾನೈಸ್ಸುವಿಹಿತಾ ಸ್ತಸ್ಮಿನ್ ಯಜ್ಞೇ ಮಹಾತ್ಮನಃ ||೧೪|| ಅನ್ನಂಹಿ ವಿಧಿವತ್ಸ್ವಾದು ಪ್ರಶಂ ಸಂತಿ ದ್ವಿಜರ್ಷಭಾಃ|| ಅಹೋತೃಪ್ತಾಸ್ಮ ಭದ್ರಂ ತೇ ಇತಿ ಶುಶ್ರಾವ ರಾಘವಃ ||೧೫|| ಸ್ವಲಂಕೃತಾಶ್ಚ ಪುರುಷಾ ಬ್ರಾಹ್ಮಣಾನ್ ಪರ್ಯವೇಷಯನ್ || ಉಪಾಸತೇ ಚತಾನನ್ಯೇ ಸುಮೃಷ್ಟ ಮಣಿಕುಂಡಲಾಃ ||೧೬|| ಕರ್ಮಾಂತರೇ ತದಾ ವಿಪ್ರಾ

ಆ ಯಾಗದಲ್ಲಿ,ವಿಧಿವತ್-ಪಾಕಶಾಸ್ತ್ರೋಕ್ತಪ್ರಕಾರವಾಗಿ,ದಿವಸೇ ದಿವಸೇ-ಪ್ರತಿ ದಿವಸದಲ್ಲಯೂ, ಸಿದ್ಧಸ್ಯ - ಪಕ್ವವಾದ, ಅನ್ನಸ್ಯ - ಅನ್ನದ. ಬಹವಃ - ಬಹಳವಾದ, ಕೂಟಾಶ್ಚ - ರಾಶಿಗಳೂ, ಪರ್ವತೋಪಮಾಃ-ಬೆಟ್ಟಗಳಿಗೆ ಸಮಾನವಾಗಿ, ದೃಶ್ಯಂತೇ - ಕಾಣಲ್ಪಟ್ಟವು, ಮಹಾತ್ಮನಃ- ಮಹಾ ಮನಸ್ವಿಯಾದ ದಶರಥ ರಾಯನ, ತಸ್ಮಿನ್ ಯಜ್ಞೇ - ಆ ಅಶ್ವಮೇಧ ಯಾಗದಲ್ಲಿ.ನಾನಾದೇಶಾತ್- ನಾನಾದೇಶಗಳಿಂದ, ಅನುಪ್ರಾಪ್ತಾಃ - ಬಂದಿರುವ, ಪುರುಷಾಃ - ಪುರುಷರೂ, ತಥಾ - ಹಾಗೆಯೇ, ಸ್ತ್ರೀಗಣಾಃ - ಅಂಗನೆಯರ ಗುಂಪುಗಳೂ, ಅನ್ನಪಾನೈಃ, ಅನ್ನ - ಚತುರ್ವಿಧಾನ್ನಗಳಿಂದಲೂ, ಪಾನೈಃ - ಪಾನಯೋಗ್ಯವಾದ ಪದಾರ್ಥಗಳಿಂದಲೂ, ಸುವಿಹಿತಾಃ - ಅತಿಶಯವಾಗಿ ತೃಪ್ತಿಗೊಂ ಡರು. ||೧೪|| ದ್ವಿಜರ್ಷಭಾಃ - ಬ್ರಾಹ್ಮಣ ಶ್ರೇಷ್ಠರು, ಸ್ವಾದು - ರುಚಿಕರವಾದ, ಅನ್ನಂ- ಅನ್ನವನ್ನು, ವಿಧಿವತ್ - ಉಪಚಾರ ಯುಕ್ತವಾಗಿ, ಪ್ರಶಂಸಂತಿ - ಶ್ಲಾಘಿಸಿದರು, ಅಹೋ - ಆಶ್ಚ ರ್ಯವು, ತೃಪ್ತಾಃ - ಸಂತುಷ್ಟಿಯಾದವರು, ಸ್ಮಃ - ಆದೆವು, ತೇ - ನಿನಿಗೆ, ಭದ್ರಂ - ಶುಭವು, ಅಸ್ತು- ಆಗಲಿ, ಇತಿ - ಇಂತೆಂಬ ಹರ್ಷೋಕ್ತಿಯನ್ನು, ರಾಘವಃ ರಘುಕುಲೋತ್ಪನ್ನನಾದ ದಶರಥನು, ಶುಶ್ರಾವ - ಕೇಳಿದನು. ||೧೫|| ಸ್ವಲಂಕೃತಾಃ-ಉಂಗುರ, ಉಡಿದಾರ, ದಿವ್ಯ ದುಕೂಲಾದಿಗಳಿಂದ ಅಲಂಕೃತರಾದ, ಪುರುಷಾಶ್ಚ - ಪುರುಷರೂ, ಬ್ರಾಹ್ಮಣಾನ್ - ಬ್ರಾಹ್ಮಣರನ್ನು ಉದ್ದೇಶಿಸಿ, ಪರ್ಯ ವೇಷಯನ್ - ಬಡಿಸಿದರು, ತಾನ್ - ಆ ಬಡಿಸುವವರನ್ನು ಅನ್ಯೇ - ಮತ್ತು ಕೆಲವರು, ಸುಮೃಷ್ಟಮಣಿ

---

ದಲ್ಲಿಯೂ, ಪಕ್ವವಾದ ಅನ್ನರಾಶಿಗಳು ದೊಡ್ಡದೊಡ್ಡ ಬೆಟ್ಟಗಳಂತೆ ಕಾಣುತ್ತಿದ್ದವು ಇದ ಲ್ಲದೆ ದೇಶದೇಶಗಳಿಂದ ಬಂದಿರುವ ಸ್ತ್ರೀ ಪುರುಷರ ಗುಂಪುಗಳೆಲ್ಲ ಚತುರ್ವಿಧವಾದ ಅನ್ನಗಳಿಂದಲೂ, ಪಾನಯೋಗ್ಯವಾದ ಪದಾರ್ಥಜಾಲಗಳಿಂದಲೂ, ಬಹಳ ತೃಪ್ತಿಹೊಂದಿದ ವರಾದರು. ||೧೪|| ಆ ಸಮಯದಲ್ಲಿ ಬ್ರಾಹ್ಮಣ ಶ್ರೇಷ್ಠರೆಲ್ಲರು ಆ ಅನ್ನವನ್ನು ಅತಿ ರುಚಿಯಾಗಿರುವದೆಂದು ಶ್ಲಾಘಿಸುತ್ತ ಬೇಕಾದಷ್ಟು ಭುಜಿಸಿ, ಇಂತಹ ಅನ್ನಪ್ರದಾತನನ್ನು ನಾವೆಲ್ಲಿಯೂ ಕಾಣೆವೆಂದು ಅತ್ಯಾಶ್ಚರ್ಯಭರಿತರಾಗಿ ಬಹಳ ತೃಪ್ತಿಗೊಂಡು "ಎಲೈ ರಘು ಕುಲ ಲಲಾಮನಾದ ದಶರಥನೆ ! ನಿನಿಗೆ ಶುಭವಾಗಲಿ" ಎಂದು ಹೇಳುತ್ತಿದ್ದರು. ಆ ನರ ನಾಥನಾದ ದಶರಥ ರಾಜನು ಆ ಘೋಷವನ್ನು ಕೇಳಿ ಸಂತಸಗೂಂಡನು. ||೧೫|| ಉಂಗುರ, ಉಡಿದಾರ, ದಿವ್ಯ ದುಕೂಲಾದಿಗಳಿಂದಲಂಕೃತರಾದ ಪುರುಷರು ಬ್ರಾಹ್ಮಣರಿಗೆಲ್ಲ ಬಡಿಸು ತ್ತಿದ್ದರು. ಆ ಬಡಿಸುವವರನ್ನು ಕುಂಡಲಾಲಂಕೃತರಾದ ಮತ್ತೂ ಕೆಲವರು ಅನುಸರಿಸು ತ್ತಿದ್ದರು. ||೧೬|| ಆ ಸಮಯದಲ್ಲಿ ವಾಚಾಳಿಗಳಾಗಿಯೂ, ಧೀರರಾಗಿಯೂ, ಇರುವ

ಹೇತುವಾದಾನ್ ಬಹೂನಪಿ ॥ ಪ್ರಾಹುಸ್ಸ್ಮವಾಗ್ಮಿನೋ ಧೀರಾಃ ಪರಸ್ಪರ ಜಿಗೀಷಯಾ ॥೧೭॥ ದಿವಸೇದಿವಸೇ ತತ್ರ ಸಂಸ್ತರೇ ಕುಶಲಾದ್ವಿಜಾಃ ॥ ಸರ್ವಕರ್ಮಾಣಿ ಚಕ್ರುಸ್ತೇ ಯಥಾಶಾಸ್ತ್ರಂ ಪ್ರಚೋದಿತಾಃ ॥೧೮॥ ನಾಷಡಂಗವಿದತ್ರಾಸೀನ್ನಾವ್ರತೋ ನಾಬಹುಶ್ರುತಃ ॥ ಸದಸ್ಯಾಸ್ತಸ್ಯ ವೈರಾಜ್ಞೋ ನಾವಾದಕುಶಲಾ ದ್ವಿಜಾಃ ॥೧೯॥ ಪ್ರಾಪ್ತೇ ಯೂಪೋಚ್ಛ್ರಯೇ ತಸ್ಮಿನ್ ಷಡ್ಬೈಲ್ವಾಃ ಖಾದಿರಾಸ್ತಥಾ ॥ ತಾವಂತೋಬಿಲ್ವಸಹಿತಾಃ ಪರ್ಣಿನಶ್ಚ ತಥಾಪರೇ ॥೨೦॥ ಶ್ಲೇಷ್ಮಾತಕಮಯೋ

---

ಕುಂಡಲಾಃ - ಸ್ವಚ್ಛಂದಗಳಾಗ ರತ್ನಕುಂಡಲಗಳುಳ್ಳವರಾಗಿ, ಉಪಾಸತೇ - ಸೇವಿಸಿದರು, ॥೧೬॥ ತದಾ - ಆ ಕಾಲದಲ್ಲಿ, ವಾಗ್ಮಿನಃ - ವಾಚಾಳಿಗಳಾದ, ಧೀರಾಃ - ಬುದ್ಧಿಶಾಲಿಗಳಾದ, ವಿಪ್ರಾಃ- ಬ್ರಾಹ್ಮಣರು, ಕರ್ಮಾಂತರೇ, ಕರ್ಮ - ಪ್ರಾತಸ್ಸವನ, ಮಾಧ್ಯಂದಿನ, ತೃತೀಯ ಸವನಾದಿ ಕರ್ಮಗಳ, ಅಂತರೇ-ಮಧ್ಯಕಾಲಗಳಲ್ಲಿ, ಪರಸ್ಪರಜಿಗೀಷಯಾ, ಪರಸ್ಪರ-ಒಬ್ಬರನ್ನೊಬ್ಬರು, ಜಿಗೀಷಯಾ-ಜಯಿಸಲಿಚ್ಛಿಸಿ, ಬಹೂನ್-ನಾನಾಬಗೆಗಳಾದ, ಹೇತುವಾದಾನ್ - ಕರ್ಮಸಾಧನ ವಿಷಯಗಳಾದ ವಾದಗಳನ್ನು ಪ್ರಾಹುಸ್ಮ - ಹೇಳಿದರಷ್ಟೆ. ॥ ೧೭ ॥ ತತ್ರಸಂಸ್ತರೇ - ಆ ಯಾಗದಲ್ಲಿ, ದಿವಸೇದಿವಸೇ - ಪ್ರತಿದಿವಸವೂ, ಕುಶಲಾಃ - ಪಂಡಿತರಾದ, ತೇದ್ವಿಜಾಃ - ಆ ಬ್ರಾಹ್ಮಣರು, ಪ್ರಚೋದಿತಾಃ-ವೃದ್ಧರಿಂದ ಪ್ರೇರಿತರಾಗಿ, ಯಥಾಶಾಸ್ತ್ರಂ-ಶಾಸ್ತ್ರವನ್ನನುಸರಿಸಿ, ಸರ್ವಕರ್ಮಾಣಿ - ಸರ್ವತಂತ್ರಗಳನ್ನು, ಚಕ್ರುಃ-ಮಾಡಿದರು ॥ ೧೮ ॥ ತಸ್ಯರಾಜ್ಞಃ-ಆ ದಶರಥರಾಯನ, ಅತ್ರ-ಈ ಯಾಗದಲ್ಲಿ, ಅಷಡಂಗವಿತ್-ಷಡಂಗಗಳನ್ನು ತಿಳಿಯದೇ ಇರುವವನು, ನಾಸೀತ್ ಇರಲಿಲ್ಲ, ಅವ್ರತಃ-ಪ್ರಾಜಾಪತ್ಯಾದಿ ವ್ರತಚತುಷ್ಟಯ ಹೀನನು, ನ-ಇಲ್ಲ, ಅಬಹುಶ್ರುತಃ-ಬಹುಶಾಸ್ತ್ರಜ್ಞನಲ್ಲದವನು, ನ-ಇಲ್ಲ, ಅವಾದಕುಶಲಾಃ-ಪ್ರವಾದ ಮಾಡುವ ಶಕ್ತಿಯಿಲ್ಲದ, ದ್ವಿಜಾಃ-ಬ್ರಾಹ್ಮಣರು, ಸದಸ್ಯಾಃ-ಸದಸ್ಯರಾಗಿ, ನ-ಇರಲಿಲ್ಲ ॥ ೧೯ ॥ ತಸ್ಮಿನ್-ಆ ಯಾಗದಲ್ಲಿ, ಯೂಪೋಚ್ಛ್ರಯೇ-ಯೂಪಸ್ತಂಭಪ್ರತಿಷ್ಠಾಪನಕಾಲವು, ಪ್ರಾಪ್ತೇಸತಿ-ಬರಲು, ಬೈಲ್ವಾಃ-ಬಿಲ್ವವಿಕಾರಗಳಾದ, ಷಟ್- ಆರುಸ್ತಂಭಗಳೂ, ತಥಾ-ಹಾಗೆಯೇ, ಖಾದಿರಾಃ-ಕಗ್ಗಲೀಗಿಡದ ಸಂಬಂಧವಾದ ಕಂಭಗಳು ಆರು, ತಾವಂತಃ-ಅದೇ ಸಂಖ್ಯೆಯುಳ್ಳ, ಅಬಿಲ್ವಸಹಿತಾಃ-ಅಬಿಲ್ವಸ್ತಂಭಗಳಿಗಿಂತಲೂ ಭಿನ್ನವಾದ ದೇವದಾರುಸ್ತಂಭ

---

ಬ್ರಾಹ್ಮಣೋತ್ತಮರು ಪ್ರಾತಸ್ಸವನವೇ ಮುಂತಾದ ಕರ್ಮಗಳ ಮಧ್ಯೆ ಒಬ್ಬರನ್ನೊಬ್ಬರು ಜಯಿಸಬೇಕೆಂಬಿಚ್ಛೆಯಿಂದ ಬಗೆಬಗೆಯಾಗಿ ಕರ್ಮಸಾಧನ ವಿಷಯವಾದ ವಾದಗಳನ್ನು ನಡೆಯಿಸುತ್ತಿದ್ದರು, ॥೧೭॥ ಆಯಾಗದಲ್ಲಿ ಪಂಡಿತರಾದ ಬ್ರಾಹ್ಮಣರು ಪ್ರತಿದಿವಸದಲ್ಲಿಯೂ ವೃದ್ಧರಿಂದ ಪ್ರೇರಿತರಾಗಿ ಸರ್ವ ತಂತ್ರಗಳನ್ನೂ, ಯಥಾವಿಧಿಯಾಗಿ ಮಾಡುತ್ತಿದ್ದರು. ॥೧೮॥ ಆದಶರಥರಾಜನ ಯಾಗಶಾಲೆಯ-ಸಭೆಯಲ್ಲಿರುವ ಬ್ರಾಹ್ಮಣರೆಲ್ಲರೂ,ಪ್ರಸಂಗಶಕ್ತಿಯುಳ್ಳವರಾಗಿದ್ದರೇ ಹೊರತು ಷಡಂಗವೇತ್ತನಾಗದೆಯೂ, ಪ್ರಾಜಾಪತ್ಯಾದಿ ವ್ರತಚತುಷ್ಟಯ ಹೀನನಾಗಿಯೂ, ಬಹು ಶಾಸ್ತ್ರಜ್ಞನಲ್ಲದೆಯೂ, ಇರುವ ಬ್ರಾಹ್ಮಣನೊಬ್ಬನೂ ಇರಲಿಲ್ಲ. ॥ ೧೯ ॥ ಆ ಯಾಗದಲ್ಲಿ ಯೂಪಸ್ತಂಭ ಪ್ರತಿಷ್ಠಾಪನಕಾಲವು ಪ್ರಾಪ್ತವಾಗಲು, ಬಿಲ್ವವೃಕ್ಷ ಸಂಬಂಧವಾದ ಆರು ಸ್ತಂಭಗಳೂ, ಕಗ್ಗಲೀ ಮರದಿಂದ ಮಾಡಿದ ಆರು ಕಂಭ

ದಿಷ್ಟಃ ದೇವದಾರು ಮಯಸ್ತಥಾ || ದ್ವಾವೇ ವ ವಿಹಿತೌ ತತ್ರ ಬಾಹುವ್ಯಸ್ತ ಪರಿಗ್ರಹೌ || ೨೧ || ಕಾರಿತಾಸ್ಸರ್ವಏವೈತೇಶಾಸ್ತ್ರಜ್ಞೈರ್ಯಜ್ಞಕೋವಿದೈಃ|| ಶೋಭಾರ್ಥಂ ತಸ್ಯಯಜ್ಞಸ್ಯ ಕಾಂಚನಾಲಂಕೃತಾಭವನ್ ||೨೨|| ಏಕವಿಂಶತಿ ಯೂಪಾಸ್ತೇ ಏಕವಿಂಶತ್ಯರತ್ನಯಃ|| ವಾಸೋಭಿರೇಕವಿಂಶದ್ಭಿ ರೇಕೈಕಂ ಸಮ ಲಂಕೃತಾಃ ||೨೩|| ವಿನ್ಯಸ್ತಾವಿಧಿವತ್ಸರ್ವೇ ಶಿಲ್ಪಿಭಿಸ್ಸುಕೃತಾದೃಢಾಃ||ಅಷ್ಟಾ

ಗಳಿಂದ, ಸಹಿತಾಃ-ಕೂಡಿಕೊಂಡಿರುವ, ಅಪರೇ ಮತ್ತು ಕೆಲವಾದ, ಪರ್ಣಿನಶ್ಚ - ಪಾಲಾಶಸ್ತಂಭ ಗಳೂ, ತಥಾ-ಹಾಗೆಯೆ, ಶ್ಲೇಷ್ಮಾತಕಮಯಸ್ತು - ಚಳ್ಳೇಮರದ ವಿಕಾರವಾದ ಸ್ತಂಭವೂ,ಏಕಃ- ಒಂದು, ತಥಾ-ಹಾಗೆಯೇ, ದೇವದಾರುಮಯಃ - ದೇವದಾರು ವಿಕಾರವಾದ ಸ್ತಂಭವೂ, ಏಕಃ- ಒಂದು, ತತ್ರ-ಆ ಯೂಪಸ್ತಂಭಗಳಲ್ಲಿ, ದ್ವಾವೇವ-ಎರಡೆರಡು, ಬಾಹುವ್ಯಸ್ತಪರಿಗ್ರಹೌ - ಎರಡು ತೋಳಿನ ಅಗಲದಷ್ಟು ವಿಸ್ತಾರವುಳ್ಳವುಗಳಾಗಿ, ವಿಹಿತೌ ಮಾಡಲ್ಪಟ್ಟವು, ಸರ್ವೇ-ಸಮಸ್ತ,ಏತೇ- ಈ ಯೂಪಸ್ತಂಭಗಳು, ಶಾಸ್ತ್ರಜ್ಞೈಃ-ಶಾಸ್ತ್ರವನ್ನು ತಿಳಿದಿರುವ, ಯಜ್ಞಕೋವಿದೈಃ – ಯಾಗ ವನ್ನು ಆಚರಿಸುವ ಋತ್ವಿಕ್ಕುಗಳಿಂದ, ಕಾರಿತಾಃ-ಮಾಡಲ್ಪಟ್ಟವುಗಳಾಗಿ,ತಸ್ಯ-ಆ ದಶರಥರಾಯನ, ಯಜ್ಞಸ್ಯ-ಯಾಗಕ್ಕೆ, ಶೋಭಾರ್ಥಂ-ಪ್ರಕಾಶಾರ್ಥವಾಗಿ, ಕಾಂಚನಾಲಂಕೃತಾಃ ಕಾಂಚನ-ಭಂಗಾ ರದ ಪಟ್ಟಿಗಳಿಂದ, ಅಲಂಕೃತಾಃ-ಅಲಂಕರಿಸಲ್ಪಟ್ಟವುಗಳು, ಅಭವನ್-ಆದವು ||೨೨| ಏಕವಿಂಶತ್ಯ ರತ್ನಯಃ, ವಿಕವಿಂಶತಿ-ಇಪ್ಪತ್ತೊಂದು ಸಂಖ್ಯೆಯುಳ್ಳ, ಅರತ್ನಯಃ-ಚತುರ್ವಿಂಶತ್ಯಂಗುಳ ಪರಿಮಿತ ಪ್ರಮಾಣವುಳ್ಳ, ತೇ ಏಕವಿಂಶತಿಯೂಪಾಃ- ಆ ಇಪ್ಪತ್ತೊಂದು ಸಂಖ್ಯೆಯುಳ್ಳ ಯೂಪಸ್ತಂಭಗಳು, ಏಕವಿಂಶದ್ಭಿಃ-ಇಪ್ಪತ್ತೊಂದು ಸಂಖ್ಯೆಯುಳ್ಳ, ವಾಸೋಭಿಃ-ವಸ್ತ್ರಗಳಿಂದ, ಏಕೈಕಂ- ಒಂದೊಂದು ಪ್ರತ್ಯೇಕ ಪ್ರತ್ಯೇಕವಾಗಿ, ಸಮಲಂಕೃತಾಃ-ಅಲಂಕರಿಸಲ್ಪಟ್ಟವು || ೨೩ || ಶಿಲ್ಪಿಭಿಃ-ಮರಗೆಲಸ ದವರಿಂದ, ಸುಕೃತಾಃ-ಹೆಚ್ಚುಕಡಮೆಯಿಲ್ಲದಂತೆ ಮಾಡಲ್ಪಟ್ಟ, ದೃಢಾಃ-ರಂಧ್ರಾದಿ ದೋಷರಹಿತಗ ಳಾದ, ಸರ್ವ ಏವ-ಸಮಸ್ತವೂ, ಅಷ್ಟಾಶ್ರಯಃ-ಎಂಟುಕೋಣಗಳುಳ್ಳ, ಶ್ಲಕ್ಷ್ಣರೂಪಸಮನ್ವಿತಾಃ, ಶ್ಲಕ್ಷ್ಣ-ನುಣ್ಣಗಿರುವ, ರೂಪ - ರೂಪದಿಂದ, ಸಮನ್ವಿತಾಃ - ಕೂಡಿಕೊಂಡಿರುವ, ಸರ್ವೇ-ಸಮಸ್ತ

---

ಗಳೂ,ದೇವದಾರು ಕಂಭಯುಕ್ತವಾದುದೂ,ಮುತ್ತುಗದ ಮರದಿಂದ ಮಾಡಿದ ಆರು ಸ್ತಂಭ ಗಳೂ, ಒಂದು ಚಳ್ಳೀ ಮರದ ಕಂಭವು, ದೇವದಾರು ವೃಕ್ಷ ಸ್ತಂಭವೊಂದೂ, ಆ ದಶರಥ ರಾಯನು ಮಾಡುವ ಅಶ್ವಮೇಧ ಯಾಗದಲ್ಲಿ ಶೋಭಾಯಮಾನವಾಗಿರುವಂತೆ ಶಾಸ್ತ್ರಜ್ಞ ರಾದ ಬ್ರಾಹ್ಮಣರಿಂದ ಭಂಗಾರದ ಕಟ್ಟುಗಳುಳ್ಳವುಗಳಾಗಿಯೂ, ಬಾಹುದ್ವಯ ಪ್ರಮಾಣ ವುಳ್ಳವುಗಳಾಗಿಯೂ, ಜಂಟಿಜಂಟಿಯಾಗಿ ಮಾಡಲ್ಪಟ್ಟವುಗಳಾಗಿಯೂ, ಇಪ್ಪತ್ತೊಂದು ಮೊಟಕು ಮೊಳಗಳ ಪ್ರಮಾಣವುಳ್ಳವುಗಳಾಗಿಯೂ, ಇರುವ ಆ ಇಪ್ಪತ್ತೊಂದು ಯೂಪ ಸ್ತಂಭಗಳೂ, ಇಪ್ಪತ್ತೊಂದು ವಸ್ತ್ರಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಒಂದೊಂದು ವಸ್ತ್ರ ದಿಂದ ಒಂದೊಂದು ಹೊದಿಸಲ್ಪಟ್ಟವುಗಳಾಗಿಯೂ, ಹೆಚ್ಚುಕಡಿಮೆ ಇಲ್ಲದಂತೆ ಬಡಗೀ ಕೆಲಸ ಗಾರರಿಂದ ಮಾಡಲ್ಪಟ್ಟವುಗಳಾಗಿಯೂ, ರಂಧ್ರಗಳಿಲ್ಲದಂತೆಯೂ, ಎಂಟು ಮೂಲೆಗಳು ಳ್ಳಂತೆಯೂ, ಅಭ್ಯಂಗನಾದಿಗಳಿಂದ ಮನೋಹರವಾದ ರೂಪಯುಕ್ತವಾಗಿರುವಂತೆಯೂ,

ಶ್ರಿಯಸ್ಸರ್ವಾಏವ ಶ್ಲಕ್ಷ್ಣಾರೂಪ ಸಮನ್ವಿತಾಃ ॥ ೨೪ ॥ ಆಚ್ಛಾದಿತಾ ಸ್ತೇ ವಾಸೋಭಿಃ ಪುಷ್ಪೈರ್ಗಂಧೈಶ್ಚ ಭೂಷಿತಾಃ ॥ ಸಪ್ತರ್ಷಯೋ ದೀಪ್ತಿಮಂತೋ ವಿರಾಜಂತೇ ಯಥಾವಿಧಿ ॥ ೨೫ ॥ ಇಷ್ಟಕಾಶ್ಚ ಯಥಾನ್ಯಾಯಂ ಕಾರಿತಾಶ್ಚ ಪ್ರಮಾಣತಃ ॥ ಸ್ಥಿತೋಽಗ್ನಿ ರ್ಬ್ರಾಹ್ಮಣೈ ಸ್ತತ್ರ ಕುಶಲೈ ಶ್ಶುಲ್ಬಕರ್ಮಣಿ ॥ ೨೬ ॥ ಸ ಚಿತ್ಯೋ ರಾಜಸಿಂಹಸ್ಯ ಸಂಚಿತಃ ಕುಶಲೈ ರ್ದ್ವಿಜೈಃ ॥ ಗರುಡೋ ರುಕ್ಮಪಕ್ಷೋವೈ ತ್ರಿಗುಣೋಽಷ್ಟಾದಶಾತ್ಮಕಃ ॥ ೨೭ ॥ ನಿಯುಕ್ತಾಸ್ತತ್ರಪಶವ

ಯೂಪಸ್ತಂಭಗಳು, ವಿಧಿವತ್-ಶಾಸ್ತ್ರೋಕ್ತವಾಗಿ, ವಿನ್ಯಸ್ತಾಃ-ಸ್ಥಾಪಿಸಲ್ಪಟ್ಟವು ॥೨೪॥ ವಾಸೋಭಿಃ-ವಸ್ತ್ರಗಳಿಂದ, ಆಚ್ಛಾದಿತಾಃ-ಹೊದಿಸಲ್ಪಟ್ಟ, ಗಂಧೈಃ-ಗಂಧಗಳಿಂದಲೂ, ಪುಷ್ಪೈಶ್ಚ-ಪುಷ್ಪಗಳಿಂದಲೂ, ಭೂಷಿತಾಃ-ಅಲಂಕರಿಸಲ್ಪಟ್ಟ, ತೇ ಆ ಯೂಪಸ್ತಂಭಗಳು,ದಿವಿ-ಅಂತರಿಕ್ಷಮಾರ್ಗದಲ್ಲಿ, ದೀಪ್ತಿಮಂತಃ - ಪ್ರಕಾಶಿಸುತ್ತಿರುವ, ಸಪ್ತಋಷಯೋಯಥಾ - ಸಪ್ತಋಷಿಗಳಂತೆ, ವಿರಾಜಂತೇ-ಹೊಳೆಯುತಿದ್ದವು ॥ ೨೫ ॥ ಶುಲ್ಬಕರ್ಮಣಿ-ಯಾಗಕರ್ಮದಲ್ಲಿ, ಕುಶಲೈಃ-ಬುದ್ಧಿವಂತರಾದ, ಬ್ರಾಹ್ಮಣೈಃ-ಬ್ರಾಹ್ಮಣರಿಂದ.ಇಷ್ಟಕಾಶ್ಚ-ಇಟಿಕೆಗಳೂ, ಯಥಾನ್ಯಾಯಂ-ಶಾಸ್ತ್ರಾನುಸಾರವಾಗಿ,ಪ್ರಮಾಣತಃ-ಪ್ರಮಾಣದ ದೆಶೆಯಿಂದ,ಕಾರಿತಾಶ್ಚ-ಮಾಡಲ್ಪಟ್ಟವು,ತತ್ರ ಇಟಿಕೆಗಳಿಂದ ಮಾಡಲ್ಪಟ್ಟ ವೇದಿಕೆಯಲ್ಲಿ,ಅಗ್ನಿಃ-ಅಗ್ನಿಯು,ಸ್ಥಿತಃ-ಸ್ಥಾಪಿಸಲ್ಪಟ್ಟಿತು ॥೨೬॥ ರಾಜಸಿಂಹಸ್ಯ - ರಾಜಶ್ರೇಷ್ಠನಾದ ದಶರಥನ ಯಜ್ಞಸಂಬಂಧವಾದ,ಸಚಿತ್ಯಃ-ಚಯನ ಪೂರ್ವಕ ಪ್ರತಿಷ್ಠಾಪಿತವಾದ ಆ ಅಗ್ನಿಯು,ಕುಶಲೈಃ-ಚಯನ ಕರ್ಮದಲ್ಲಿ ಸಮರ್ಥರಾದ, ದ್ವಿಜೈಃ-ಬ್ರಾಹ್ಮಣರಿಂದ ಸಂಚಿತಃ-ನಿರ್ಮಿತವಾಗಿ, ರುಕ್ಮಪಕ್ಷಃ-ಭಂಗಾರಮಯವಾದ ರೆಕ್ಕೆಗಳುಳ್ಳ, ಗರುಡಃ-ಗರುಡಾಕಾರವುಳ್ಳದ್ದಾಗಿಯೂ, (೧) ತ್ರಿಗುಣಃ-ಮೂರರಷ್ಟು ಹೆಚ್ಚಾದ ಪ್ರಸ್ತಾರಗಳುಳ್ಳದಾಗಿ, ಅಷ್ಟಾದಶಾತ್ಮಕಃ-ಹದಿನೆಂಟು ಪ್ರಸ್ತಾರಗಳುಳ್ಳದ್ದಾಯಿತು, ॥೨೭॥

ಶಾಸ್ತ್ರೋಕ್ತವಾಗಿ ಸ್ಥಾಪಿಸಲ್ಪಟ್ಟಿದ್ದವು. ॥ ೨೪ ॥ ವಸ್ತ್ರಗಳಿಂದ ಹೊದಿಸಲ್ಪಟ್ಟ ಮತ್ತು ಗಂಧಪುಷ್ಪಾದಿಗಳಿಂದಲಂಕೃತವಾದ ಆ ಇಪ್ಪತ್ತೊಂದು ಯೂಪಸ್ತಂಭಗಳು ಅಂತರಿಕ್ಷದಲ್ಲಿ ಹೊಳೆಯುತ್ತಿರುವ ಕಶ್ಯಪಾದಿಸಪ್ತರ್ಷಿಗಳಂತೆ ಕಂಗೊಳಿಸುತ್ತಿದ್ದವು. ॥ ೨೫ ॥ ಯಾಗಕರ್ಮದಲ್ಲಿ ಮತಿವಂತರಾದ ಬ್ರಾಹ್ಮಣರಿಂದ ಶಾಸ್ತ್ರಾನುಸಾರವಾಗಿ ಇಟಿಕೆಗಳು ಹೆಚ್ಚುಕಡಿಮೆಯಿಲ್ಲದಂತೆ ಮಾಡಲ್ಪಟ್ಟು ಅವುಗಳಿಂದ ನಿರ್ಮಿತವಾದ ವೇದಿಕೆಯಲ್ಲಿ ಅಗ್ನಿಯು ಸ್ಥಾಪಿಸಲ್ಪಟ್ಟಿತು ॥ ೨೬ ॥ ಚಯನ ಮಾಡತಕ್ಕ ಪ್ರದೇಶವು, ಭಂಗಾರದ ಗರಿಗಳುಳ್ಳ ಗರುಡನ ಆಕಾರವಾಗಿಯೂ, ತ್ರಿಗುಣೀಕೃತವಾದ ಷಟ್ಪ್ರಸ್ತಾರಗಳುಳ್ಳದಾಗಿಯೂ, ಮಾಡಲ್ಪಟ್ಟಿತು. ॥೨೭॥ ಆ ಯೂಪಸ್ತಂಭಗಳಲ್ಲಿ ಆಯಾದೇವತೆಗಳನ್ನುದ್ದೇಶಿಸಿ, ಯಥಾಶಾಸ್ತ್ರವಾಗಿ ಸರ್ಪಗಳೂ,

ಟಿಪ್ಪಣಿ. (೧) (ಗೋ) ಅಂದರೆ, ಇಷ್ಟಕಚಯನ ಪುರಸ್ಸರವಾಗಿ ಗರುಡಾಕಾರ ವೇದಿಕೆಯನ್ನು ಮಾಡಿ, ಅದಕ್ಕೆ ಭಂಗಾರದ ರೆಕ್ಕೆಗಳನ್ನು ನಿರ್ಮಿಸಿ,ಅಂತಹ,ಗರುಡಾಕಾರ ವೇದಿಕೆಯಲ್ಲಿ ಆರು ವಿಧವಾಗಿ ಪ್ರಸ್ತಾರಗಳನ್ನು ಮಾಡಿ, (ಆರು ವಿಧ ಪ್ರಸ್ತಾರಗಳು ತ್ರಿಗುಣಿತವಾದರೆ ಹದಿನೆಂಟು ಪ್ರಸ್ತಾರಗಳಾಯಿತು.) ಅಂತಹ ಹದಿನೆಂಟು ಪ್ರಸ್ತಾರಗಳುಳ್ಳ ವೇದಿಕೆಯಲ್ಲಿ ಈ ಬ್ರಾಹ್ಮಣರಿಂದ ಅಗ್ನಿಪ್ರತಿಷ್ಠಾಪಿತವಾಯಿತೆಂಬುದು ಭಾವವು.

ಸ್ತತ್ರದುದ್ದಿಶ್ಯದೈವತಂ|| ಉರಗಾಃ ಪಕ್ಷಿಣಶ್ಚೈವ ಯಥಾಶಾಸ್ತ್ರಂ ಪ್ರಚೋದಿತಾಃ || ೨೮ || ಶಾಮಿತ್ರೇತು ಹಯಸ್ತತ್ರ ತಥಾ ಜಲಚರಾಶ್ಚಯೇ || ಋತ್ವಿಗ್ಭಿಸ್ಸರ್ವ ಮೇವೈತ ನ್ನಿಯುಕ್ತಂ ಶಾಸ್ತ್ರತಸ್ತದಾ ||೨೯|| ಪಶೂನಾಂತ್ರಿಶತಂ ತತ್ರಯೂಪೇಷು ನಿಯತಂತದಾ|| ಅಶ್ವರತ್ನೋತ್ತಮಂ ತಸ್ಯ ರಾಜ್ಞೋ ದಶರಥಸ್ಯಚ ||೩೦|| ಕೌಸಲ್ಯಾ ತಂ ಹಯಂ ತತ್ರ ಪರಿಚರ್ಯ ಸಮಂತತಃ|| ಕೃಪಾಣೈರ್ವಿಶಶಾಸೈನಂ ತ್ರಿಭಿಃ ಪರಮಯಾಮುದಾ || ೩೧ || ಪತತ್ರಿಣಾ ತದಾ ಸಾರ್ಧಂ ಸುಸ್ಥಿತೇನಚ ಚೇತಸಾ || ಅವಸದ್ರಜನೀ ಮೇಕಾಂ ಕೌಸಲ್ಯಾ ಧರ್ಮಕಾಮ್ಯಯಾ||೩೨||ಹೋತಾಧ್ವರ್ಯುಸ್ತಥೋದ್ಗಾತಾ ಹಸ್ತೇನಸಮಯೋಜಯನ್||

ತತ್ರ-ಆ ಯೂಪಸ್ತಂಭಗಳಲ್ಲಿ, ಯಥಾಶಾಸ್ತ್ರಂ - ಶಾಸ್ತ್ರವನ್ನನುಸರಿಸಿ, ಪ್ರಚೋದಿತಾಃ -ಹೇಳಲ್ಪಟ್ಟ, ಉರಗಾಃ-ಸರ್ಪಗಳೂ, ಪಕ್ಷಿಣಶ್ಚ ಪಕ್ಷಿಗಳೂ, ತತ್ತತ್ ದೈವತಮುದ್ದಿಶ್ಯ ಆಯಾಯ ದೇವತೆಯನ್ನುದ್ದೇಶಿಸಿ, ನಿಯುಕ್ತಾಃ-ಕಟ್ಟಲ್ಪಟ್ಟವು || ೨೮ || ತತ್ರ-ಆ ಯಾಗದಲ್ಲಿ ಶಾಮಿತ್ರೇತು-ವಿಶಸನ ಕರ್ಮದಲ್ಲಿ, ಹಯಃ-ಅಶ್ವವು, ತಥಾ-ಹಾಗೆಯೇ, ಜಲಚರಾಶ್ಚ ಆಮೆಮೊದಲಾದ ಜಲಜಂತುಗಳೂ, ಯೇ-ಯಾವುವೋ, ಏತತ್ಸರ್ವಮೇವ-ಈ ಜಂತುಸಮುದಾಯವು, ತದಾ-ಆಗ, ಶಾಸ್ತ್ರತಃ-ಶಾಸ್ತ್ರಾನುಸಾರವಾಗಿ, ಋತ್ವಿಗ್ಭಿಃ-ಋತ್ವಿಕ್ಕುಗಳಿಂದ, ನಿಯುಕ್ತಂ-ಕಟ್ಟಲ್ಪಟ್ಟಿತು || ೨೯ || ತಸ್ಯ-ಆ, ದಶರಥಸ್ಯರಾಜ್ಞಃ - ದಶರಥರಾಯನ, ತತ್ರ-ಆ ಯಾಗದಲ್ಲಿ, ಯೂಪೇಷು - ಯೂಪಸ್ತಂಭಗಳಲ್ಲಿ, ಪಶೂನಾಂ-ಪಶುಗಳ, ತ್ರಿಶತಂ-ಮುನ್ನೂರು,ಅಶ್ವರತ್ನೋತ್ತಮಂಚ-ರತ್ನದಂತೆ ಶ್ರೇಷ್ಠವಾದ ಅಶ್ವವೂ, ತದಾ ಆಗ, ನಿಯತಂ-ನಿಯಮದಿಂದ ಕಟ್ಟಲ್ಪಟ್ಟಿತು || ೩೦ || ತತ್ರ ಆ ಯಾಗದಲ್ಲಿ, ಕೌಸಲ್ಯಾ-ಕೌಸಲ್ಯಾದೇವಿಯು, ತಂಹಯಂ-ಆ ಕುದುರೆಯನ್ನು, ಸಮಂತತಃ-ಎಲ್ಲ ಕಡೆಯಲ್ಲಿ, ಪರಿಚರ್ಯ-(ಮ) ಪ್ರೋಕ್ಷಣಾದಿಗಳಿಂದ ಸಂಸ್ಕಾರಮಾಡಿ, ಪರಮಯಾಮುದಾ - ಬಹಳ ಸಂತೋಷದಿಂದ, ಏನಂ-ಈ ಅಶ್ವವನ್ನು, ತ್ರಿಭಿಃ-ಮೂರು, ಕೃಪಾಣೈಃ- ಕತ್ತಿಗಳಿಂದ, ವಿಶಶಾಸ - ಬಿಡಿಸಿದಳು, (ಗೋ) ತ್ರಿಭಿಃ-ಮೂರಾದ, ಕೃಪಾಣೈಃ-ವಿಶಸನಸಾಧನವಾದ ಸುವರ್ಣ ಸೂಜಿಗಳಿಂದ ಮೂರು ಬಗೆಯಾಗಿ ವಿಶಸನಮಾಡಿದಳು, ಕೌಸಲ್ಯಾ - ಕೌಸಲ್ಯಾದೇವಿಯು, ತದಾ-ಆ ಕಾಲದಲ್ಲಿ, ಪತತ್ರಿಣಾಸಾರ್ಧಂ-ಅಶ್ವದೊಡನೆ, ಸುಸ್ಥಿತೇನ-ಸ್ಥಿರವಾದ, ಚೇತಸಾ-ಮನದಿಂದ, ಧರ್ಮಕಾಮ್ಯಯಾ-ಧರ್ಮಾಪೇಕ್ಷೆಯಿಂದ, ಏಕಾಂ-ಒಂದು, ರಜನೀಂ - ರಾತ್ರಿಯಲ್ಲಿ, ಅವಸತ್- ಪತ್ನೀಶಾಲೆಯಲ್ಲಿ ಇದ್ದಳು || ೩೨ || ಹೋತಾ-

---

ಪಶುಗಳೂ ಕಟ್ಟಲ್ಪಟ್ಟಿದ್ದವು. ಅದಲ್ಲದೆ, ಆ ಯಾಗದಲ್ಲಿ ವಿಶಸನಕಾಲದಲ್ಲಿ ಆಮೆಯೇ ಮೊದಲಾದ ಜಲಜಂತುಗಳು ಕಟ್ಟಲ್ಪಟ್ಟಿದ್ದವಲ್ಲದೆ, ಯೂಪಸ್ತಂಭಗಳಲ್ಲಿ ಮುನ್ನೂರು ಪಶುಗಳೂ, ಉತ್ತಮಾಶ್ವವೂ ಕಟ್ಟಲ್ಪಟ್ಟಿದ್ದವು. || ೩೦ || ಆ ಸಮಯದಲ್ಲಿ ಕೌಸಲ್ಯಾದೇವಿಯು ಕುದುರೆಯನ್ನು ಎಲ್ಲ ಕಡೆಯಲ್ಲಿಯೂ ಪೂಜಿಸಿ, ಪರಮಸಂತೋಷವಾಗಿ ಮೂರುಕತ್ತಿಗಳಿಂದ ಆಕುದುರೆಯನ್ನು ಮೂರುಬಗೆಯಾಗಿ ವಿಶಸನಮಾಡಿ ಸ್ಥಿರಚಿತ್ತತೆಯಿಂದಲೂ, ಧರ್ಮಾಪೇಕ್ಷೆಯಿಂದಲೂ, ಯುಕ್ತಳಾಗಿ, ಆ ಅಶ್ವದೊಡನೆ ಒಂದು ರಾತ್ರಿಯಿದ್ದಳು || ೩೨ || ಅನಂತರದಲ್ಲಿ ಹೋತ, ಅಧ್ವರ್ಯು, ಉದ್ಗಾತರೆಂಬ ಮೂರುಮಂದಿಯಾದ ಯಾಜಕರು ರಾಜನ

ಮಹಿಷ್ಯಾ ಪರಿವೃತ್ತ್ಯಾಚ ವಾವಾತಾಂಚ ತಥಾಪರಾಂ || ೩೩ ||

ಹೋತೃವೆಂಬ ಋಗ್ವೇದ ಮಂತ್ರಜ್ಞನಾದ ಋತ್ವಿಜನು,ಅಧ್ವರ್ಯುಃ-ಯಜುರ್ವೇದ ಮಂತ್ರಜ್ಞನಾದ ಋತ್ವಿಜನು,ತಥಾ-ಹಾಗೆಯೇ,ಉದ್ಗಾತಾ-ಸಾಮವೇದ ಮಂತ್ರಜ್ಞನಾದ ಉದ್ಗಾತೃವೆಂಬ ಮೂರುಜನ ಪ್ರಧಾನ ಋತ್ವಿಕ್ಕುಗಳು, ಮಹಿಷ್ಯಾ-(ಗೋ) (೧) ಯಜಮಾನನ ಜ್ಯೇಷ್ಠಪತ್ನಿಯೊಡನೆಯೂ, ಪರಿವೃತ್ಯಾಚ-ಪರಿವೃತ್ತಿಯೆಂಬ ಎರಡನೆಯ ರಾಜಪತ್ನಿಯೊಡನೆಯೂ, ಅಪರಾಂ-ಮತ್ತೊಬ್ಬಳಾದ, ವಾವಾತಾಂಚ-ವಾವಾತೆಯೆಂಬ ಕನಿಷ್ಠಪತ್ನಿಯನ್ನು,ಹಸ್ತೇನ-ಹಸ್ತದಿಂದ.ಸಮಯೋಜಯನ್-ಪರಿಗ್ರಹಿಸಿದರು, (ತಿ) ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಮುರುಮಂದಿ ಭಾರ್ಯೆಯರಲ್ಲಿ ಕ್ಷತ್ರಿಯರಾಣಿಗೆ ಮಹಿಷೀ ಎಂತಲೂ, ವೈಶ್ಯಜಾತೀಯಳಾದ ಪತ್ನಿಗೆಪರಿವೃತ್ತಿಯೆಂತಲೂ, ಸಂಭೋಗಾನರ್ಹಳಾಗಿ ಪತಿಶಿಶ್ರೂಷೆಗೆ ಮಾತ್ರ ಅರ್ಹಳಾದ ಶೂದ್ರಸ್ತ್ರೀಗೆ ವಾವಾತಾ ಎಂತಲೂ ಹೆಸರು. ಈ ಮೂವರನ್ನೂ ಹೋತಾ, ಅಧ್ವರ್ಯು, ಉದ್ಗಾತಾ ಎಂಬ ಪ್ರದಾನ ಋತ್ವಿಕ್ಕುಗಳು ಶಾಸ್ತ್ರದಿಂದ ಗ್ರಹಿಸಿದರು (೨) || ೩೩ ||

ಟಿಪ್ಪಣಿ (೧) "ರಮಣವತ್ ಹಸ್ತೇನಾಗೃಹ್ಣನ್" ಇತ್ಯರ್ಥಃ. ಹೋತಾ, ಅಧ್ವರ್ಯು, ಉದ್ಗಾತಾ,ಎಂಬ ಈ ಮೂವರೂ, ಮಹಿಷೀ, ಪರಿವೃತ್ತೀ, ವಾವಾತಾ ಎಂಬೀ ಮೂವರನ್ನೂ ಪತಿಗಳಿಂತೆ ಹಸ್ತದಿಂದ ಸ್ವೀಕರಿಸಿದರೆಂದರ್ಥ. ಇದಕ್ಕೆ ಅಶ್ವಮೇಧೀಯ ಸೂತ್ರಾಧಾರ—"ಮಹಿಷೀಂ ಬ್ರಹ್ಮಣೇ ದದಾತಿ ವಾವಾತಾಂ ಹೋತ್ರೇ ಪರಿವೃತ್ತಿ ಮುದ್ಗಾತ್ರೇ ಪಾಲಾಕಲೀ ಮಧ್ವರ್ಯವೇ" ಎಂದು. ಇದು ಗೋವಿಂದರಾಜೀಯವು. (೨) ಮಹಿಷೀ, ಪರಿವೃತ್ತೀ, ವಾವಾತಾಎಂಬೀ ಮೂವರನ್ನೂ "ಅಶ್ವೇನ ಸಮಯೋಜಯನ್" ಅಂದರೆ ಕುದುರೆಯೊಡನೆ ಸೇರಿಸಿದರು. ಎಂದು ಕೆಲವರು ವ್ಯಾಖ್ಯಾನ ಮಾಡುವರು

ಇತ್ತ ನಾಸ್ತಿಕರೂ ಅಲ್ಲ ಅತ್ತ ಆಸ್ತಿಕರೂ ಅಲ್ಲ ಎತ್ತೆತ್ತಲೂ ಸಂಶಯವನ್ನೇ ತಾಳುತ್ತಿರುವ ಅಶಾಸ್ತ್ರೀಯವಾದ ಕೆಲ ಗುಂಪಿನವರು "ಪತತ್ರಿಣಾ ತದಾ ಸಾರ್ಥಂ"ಎಂಬ ಶ್ಲೋಕಾರ್ಥವನ್ನೂ"ಹೋತಾಧ್ವರ್ಯುಸ್ತಥೋದ್ಗಾತಾ"ಎಂಬ ಶ್ಲೋಕಾರ್ಥವನ್ನೂ ವ್ಯಾಖ್ಯಾನಕಾರರ ಶ್ರೌತ ಮಂತ್ರ ಸೂತ್ರಾದಿಗಳ ಪ್ರಮಾಣ ಸಹಿತವಾದ ವ್ಯಾಖ್ಯಾನವನ್ನೂ ನೋಡಿ ತತ್ವವನ್ನರಿಯಲು ಸಮರ್ಥರಲ್ಲದಿದ್ದರೂ ಮಾನವಕೋಟಿಗೆ ಅದು ವಿರುದ್ಧವಾದುದೆಂದು ತಿರಸ್ಕರಿಸಿ, ಗಹಗಹಿಸುವರು. ಇಲ್ಲಿ ಅಂಥವರಿಗೆ ನಾವು ಸಮಾಧಾನ ಹೇಳಬೇಕಾದುದಿಲ್ಲ. ಶಾಸ್ತ್ರ, ವೇದ, ವೇದೋಕ್ತ ಕರ್ಮ,ಇವುಗಳಲ್ಲಿ ಅಭಿಮಾನ ಶಾಲಿಗಳಾದ ಆಸ್ತಿಕರಿಗೆ ಹೇಳಬೇಕಾದುದು ನಮ್ಮ ಕರ್ತವ್ಯ ಈ ಗುಂಪಿಗೆ ಸೇರಿದವರೇ ನಂಬುಗೆಯನ್ನು ಹೊಂದಬಹುದು. ವಿವೇಕದಿಂದ ವಿಚಾರಮಾಡಿದರೆ; "ಕೌಸಲ್ಯಾ ತಂ ಹಯಂ ತತ್ರ"ಎಂಬ ಶ್ಲೋಕದಲ್ಲಿ ಅಶ್ವಮೇಧದ ಕುದುರೆಯ ಮಂತ್ರಯುಕ್ತವಾದ ವಿಶಸನ ಕ್ರಿಯೆಯು ಹೇಳಲ್ಪಟ್ಟಿರುವುದು ವಿಶಸನ ಕ್ರಿಯೆಯಾದಮೇಲೆ ಆಗಬೇಕಾದ ಮೃತಾಶ್ವದ ಉಪಚಾರವನ್ನು ಬಣ್ಣಿಸಲು ಹೇಳಿದ ಶ್ಲೋಕಗಳಿವು 'ಧರ್ಮಕಾಮ್ಯಯಾ ಕೌಸಲ್ಯಾ ಏಕಾಂ ರಜನೀಂ ಪತತ್ರಿಣಾ ಸಾರ್ಥಮವಸತ್"ಎಂದು ಹೇಳಿರುವುದರಿಂದ ಮೃತಾಶ್ವದೊಡನೆ ಧರ್ಮೇಚ್ಛೆಯುಳ್ಳ ಕೌಸಲ್ಯೆಯು ಒಂದು ರಾತ್ರಿ ಇದ್ದಳು. ಎಂಬುದು ನ್ಯಾಯವೇ? ಎಂದರೆ ಮೃತಾಶ್ವೋಪಚಾರವೆಂಬ ಒಂದು ಪದದಿಂದಲೇ ವಾಚಕರು ಸಂದೇಹವನ್ನು ನಿರಸನ ಮಾಡಿಕೊಳ್ಳಬಹುದು. ಅಶ್ವದೊಡನೆ ರಾಣಿಯು ಇರುವ ಕಾಲದಲ್ಲಿ ಅಧ್ವರ್ಯವು "ಪ್ರಜನೇ ಪ್ರಜನನಂ ಸನ್ನಿಧಾಯ" ಇತ್ಯಾದಿಗಳೆಲ್ಲವನ್ನೂ ಹೇಳಿರುವರಲ್ಲಾ ಎಂದು ಶಂಕಿಸಿದರೆ ಅದಕ್ಕೆ ಇಷ್ಟೇ ಸಮಾಧಾನ ಅಶ್ವವು ಬಹು ವೀರ್ಯವತ್ತಾದ ಪ್ರಾಣಿ ರಾಣಿಯು ಅದರೊಡನೆ ತದೇಕಾಯತ್ತಚಿತ್ತಳಾಗಿದ್ದರೆ ಮಹಾ ವೀರ್ಯವಂತನಾದ ಪುತ್ರನನ್ನು ಪಡೆವಳೆಂದು ನಂಬಿಕೆಯುಂಟಾಗುವದು. ಧರ್ಮಶಾಸ್ತ್ರಗಳು, ಎಂತಹರನ್ನು ಸ್ತ್ರೀಯು ಕಾಮೇಚ್ಛೆಯಿಂದ ನೋಡುವಳೋ, ಅಂತಹ ಮಕ್ಕಳನ್ನೇ ಪಡೆವಳೆಂದು ಸಾರುತ್ತಿರುವುವು ಅಂತೆಯೇ ಮಹಾ ವೀರ್ಯವಂತರಾದ ಮಕ್ಕಳನ್ನು ಪಡೆಯಬೇಕೆಂಬ ಇಚ್ಛೆಯನ್ನು ರಾಣಿಯ ಹೃತ್ಪಥದಲ್ಲಿ ಹುರಿದುಂಬಿಸಲು, ಮಹರ್ಷಿಗಳು ಶ್ರೌತ ಸೂತ್ರಾದಿಗಳನ್ನು ಹೀಗೆ ಹೇಳಿರಬಾರದೇಕೆ ' ಇದಂತಿರಲಿ, ವೇದ, ಶಾಸ್ತ್ರ, ಶ್ರುತಿ, ಸ್ಮೃತಿ, ಇವುಗಳಲ್ಲಿ ಹೇಳಿರತಕ್ಕ ಕರ್ಮ, ಇವುಗಳೆಲ್ಲವನ್ನೂ ಬಲ್ಲವರಾರು ? ಮಹರ್ಷಿಗಳಲ್ಲವೇ ಇದಕ್ಕಾಗಿಯೇ ಇವರಿಗೆ ಮಂತ್ರದ್ರಷ್ಟೃಗಳೆನ್ನುವದು. ಇವರಿಂದ ಬೋಧಿಸಲ್ಪಟ್ಟ ಕರ್ಮಗಳನ್ನಾಚರಿಸುವುದು ಮಾನವನ ಕರ್ತವ್ಯ ಇದರಿಂದ ಸುಖ ಪಟ್ಟವರನೇಕರುಂಟೆಂದು ಧರ್ಮ ಗ್ರಂಥಗಳು ಸಾರುತ್ತಿವೆ. ಇಂತಿದು ಐಹಿಕ ವ್ಯಾಪಾರವು, ಪಾರಲೌಕಿಕ ಫಲದಲ್ಲಿ ಶಂಕಿಸುವವರೂ ಮೊದಲೇ ಹೇಳಿದ ಗುಂಪಿಗೆ ಸೇರಿದ ಮಾನವರೇ' ಅವರೆಲ್ಲರಿಗೂ ಒಂದು ಮಾತನ್ನು ಹೇಳುವೆವು – ಯಾರು ಮಂತ್ರದ್ರಷ್ಟೃಗಳೋ ಅವರೇ ಇಹ, ಪರ ಲೋಕ ಫಲವನ್ನು ಸಂಪೂರ್ಣವಾಗಿ ತಿಳಿದವರೆಂದು ಇಷ್ಟು ಬರೆದುದೂ ಆಸ್ತಿಕರಗಲ್ಲ, ನಾಸ್ತಿಕರಿಗಲ್ಲ, ತತ್ವಜ್ಞರಿಗಲ್ಲ, ಅತತ್ವಜ್ಞರಿಗಲ್ಲ, ಇವೆಲ್ಲಕ್ಕೂ ವ್ಯತಿರಿಕ್ತವಾದ ಬೇರೆ ಗುಂಪಿನವರಿಗೆ.

ಪತತ್ರಿಣಸ್ತಸ್ಯ ವಪಾ ಮುದ್ಧೃತ್ಯ ನಿಯತೇಂದ್ರಿಯಃ॥ ಋತ್ವಿಕ್ಪರಮಸಂಪನ್ನ ಶ್ಶ್ರಪಯಾಮಾಸ ಶಾಸ್ತ್ರತಃ ॥ ೩೪ ॥ ಧೂಮಗಂಧಂ ವಪಾಯಾಸ್ತು ಜಿಘ್ರತಿಸ್ಮನರಾಧಿಪಃ॥ಯಥಾಕಾಲಂಯಥಾನ್ಯಾಯಂನಿರ್ಣುದನ್ಪಾಪಮಾತ್ಮನಃ॥೩೫॥ ಹಯಸ್ಯಯಾನಿಚಾಂಗಾನಿ ತಾನಿ ಸರ್ವಾಣಿ ಬ್ರಾಹ್ಮಣಾಃ॥ ಅಗ್ನೌಪ್ರಾಸ್ಯಂತಿ ವಿಧಿವತ್ಸಮಂತ್ರಾ ಷ್ಷೋಡಶರ್ತ್ವಿಜಃ ॥ ೩೬ ॥ ಪ್ಲಕ್ಷ ಶಾಖಾಸು ಯಜ್ಞಾನಾ ಮನ್ಯೇಷಾಂ ಕ್ರಿಯತೇಹವಿಃ॥ಅಶ್ವಮೇಧಸ್ಯ ಯಜ್ಞಸ್ಯ ವೈತಸೋಭಾಗಇಷ್ಯತೇ॥ ॥೩೭॥ ತ್ರ್ಯಹೋಶ್ವಮೇಧಸ್ಸ್ಯಂಖ್ಯಾತಃ ಕಲ್ಪಸೂತ್ರೇಣ ಬ್ರಾಹ್ಮಣೈಃ ॥

---

ತಸ್ಯಪತತ್ರಿಣಃ-ಆ ಅಶ್ವದ, ವಪಾಂ-ವಪಾಸ್ಥಾನೀಯವಾದ ತೇಜನೀಯೆಂಬ ಮೇದಸ್ಸನ್ನು, ಉದ್ಧೃತ್ಯ-ತೆಗೆದು, ನಿಯತೇಂದ್ರಿಯಃ-ಏಕಾಗ್ರಚಿತ್ತವುಳ್ಳ,ಪರಮಸಂಪನ್ನಃ-ಪರಮಚಾತುರ್ಯ ಯುಕ್ತನಾದ, ಋತ್ವಿಕ್-ಅಧ್ವರ್ಯನು ಶಾಸ್ತ್ರಾನುಸಾರವಾಗಿ, ಶ್ರಪಯಾಮಾಸ-ಅಗ್ನಿ ತಾಪವನ್ನು ಮಾಡಿಸಿದನು, ॥೩೪॥ ನರಾಧಿಪಃ-ದಶರಥರಾಯನು,ಯಥಾಕಾಲಂ-ಹೋಮಕಾಲವನ್ನನುಸರಿಸಿ, ಯಥಾನ್ಯಾಯಂ-ಶಾಸ್ತ್ರಾತಿಕ್ರಮಣವಿಲ್ಲದೆ, ಆತ್ಮನಃ-ತನ್ನ, ಪಾಪಂ - ಪಾಪವನ್ನು, ನಿರ್ಣುದನ್ - ಹೋಗಲಾಡಿಸಿಕೊಂಡವನಾಗಿ, ವಪಾಯಾಃ-ವಪಾಸ್ಥಾನಾಪನ್ನವಾದ ಮೇದಸ್ಸಿನ, ಧೂಮಗಂಧಂ-ಹೊಗೆಯನ್ನು, ಜಿಘ್ರತಿಸ್ಮ-ಆಘ್ರಾಣಮಾಡಿದನಷ್ಟೆ ॥ ೩೫ ॥ ಹಯಸ್ಯ-ಅಶ್ವದ, ಅಂಗಾನಿಚ ಅಂಗಗಳೂ,ಯಾನಿಚ-ಯಾವವಿದ್ದವೋ, ತಾನಿಸರ್ವಾಣಿ-ಆ ಅಂಗಗಳನ್ನು, ಷೋಡಶರ್ತ್ವಿಜಾಃ- ಹದಿನಾರು ಸಂಖ್ಯೆಯುಳ್ಳ ಋತ್ವಿಕ್ಕಗಳಾದ, ಬ್ರಾಹ್ಮಣಾಃ - ಬ್ರಾಹ್ಮಣರು, ಸಮಂತ್ರಾಃ - ಮಂತ್ರೋಚ್ಚಾರಣದಿಂದ ಕೂಡಿ, ಅಗ್ನೌ-ಅಗ್ನಿಯಲ್ಲಿ, ವಿಧಿವತ್-ಯಥಾಶಾಸ್ತ್ರವಾಗಿ, ಪ್ರಾಸ್ಯಂತಿ-ಹೋಮಮಾಡಿದರು ॥ ೩೬ ॥ ಅನ್ಯೇಷಾಂ-ಇತರಗಳಾದ, ಯಜ್ಞಾನಾಂ-ಯಾಗಗಳ, ಹವಿಃ-ಹವಿರ್ಭಾಗವು, ಪ್ಲಕ್ಷಶಾಖಾಸು, ಪ್ಲಕ್ಷ-ಬಸರಿಗಿಡದ, ಶಾಖಾಸು-ರೆಂಬೆಗಳಲ್ಲಿ, ಕ್ರಿಯತೇ- ಅವದಾನಮಾಡಲ್ಪಡುತ್ತೆ, ಅಶ್ವಮೇಧಸ್ಯ -ಅಶ್ವಮೇಧವೆಂಬ, ಯಜ್ಞಸ್ಯ-ಯಾಗದ, ಭಾಗಃ-ಹೋಮದ್ರವ್ಯವು,ವೈತಸಃ-ನೀರವಂಜೀಗಿಡದಶಾಖೆಯಲ್ಲಿ ಅವದಾನಮಾಡತಕ್ಕದೆಂದು, ಇಷ್ಯತೇ-ಶಾಸ್ತ್ರಸಮ್ಮತವಾಗಿಧೆ ॥ ೩೭ ॥ ಕಲ್ಪಸೂತ್ರೇಣ - ಕಲ್ಪವೆಂಬ ಪ್ರಯೋಗಸಾಧಕವಾದ ಸೂತ್ರದಿಂದ,ಬ್ರಾಹ್ಮಣೈಃ- ಬ್ರಾಹ್ಮಣರಮಾತಿನಿಂದಲೂ,ಅಶ್ವಮೇಧಃ-

---

ಉತ್ತಮ ಮಧ್ಯಮ ಅಧಮ ಪತ್ನಿಗಳಾದ, ಮಹಿಷೀ, ಪರಿವೃತ್ತಿ,ವಾವಾತರೆಂಬ ಮೂವ್ವರಾದ ಭಾರ್ಯೆಯರನ್ನು ಹಸ್ತದಿಂದ ಪರಿಗ್ರಹಿಸಿದರು. ॥ ೩೩ ॥ ಏಕಾಗ್ರಚಿತ್ತನಾಗಿಯೂ, ಪ್ರಯೋಗತಂತ್ರ ಚಾತುರ್ಯಸಂಪನ್ನನಾಗಿಯೂ, ಇರುವ ಋುತ್ವಿಜನು ಆ ಅಶ್ವದ ಚಂದ್ರಾಖ್ಯವೆಂಬ ಮೇದವನ್ನು ತೆಗೆದು ಯಥಾಶಾಸ್ತ್ರವಾಗಿ ಹೋಮಮಾಡಿದನು. ॥ ೩೪॥ ಆ ಸಮಯದಲ್ಲಿ ದಶರಥರಾಜನು, ತನ್ನ ಪಾಪವನ್ನು ಹೋಗಲಾಡಿಸಿಕೊಳ್ಳಲು ಹೋಮ ಕಾಲವತಿಕ್ರಮಿಸದೆ, ಶಾಸ್ತ್ರೋಕ್ತವಾಗಿ ಧೂಮಗಂಧವನ್ನಾಘ್ರಾಣಿಸಿದನು ॥ ೩೫ ॥ ಆ ಹದಿನಾರುಮಂದಿ ಋುತ್ವಿಕ್ಕುಗಳು ಮಂತ್ರೋಚ್ಚಾರಣೆಯಿಂದೊಡಗೂಡಿ ಆ ಕುದುರೆಯ ಅಂಗೆಗಳನ್ನೆಲ್ಲ ಅಗ್ನಿಯಲ್ಲಿ ವಿಧಿವತ್ತಾಗಿ ಹೋಮಮಾಡುತ್ತಿದ್ದರು॥೩೬॥ಇತರಯಾಗಗಳಲ್ಲಿಹವಿರ್ಭಾಗವನ್ನು ಬಸರೀಗಿಡದ ರೆಂಬೆಗಳಿಂದ ಕೊಡುವರಷ್ಟೆ ! ಈ ಅಶ್ವಮೇಧಯಾಗದಲ್ಲಾದರೆ ಹವಿರ್ಭಾಗವು ನೀರುಹಬ್ಬೇಗಿಡದ ಶಾಖೆಯಿಂದ ಕೊಡತಕ್ಕದೆಂತಲೂ,ಈ ಯಾಗವು ಮೂರು ದಿನಗಳವರೆಗೂ ಮಾಡಬೇ

ಚತುಷ್ಟೋಮಮಹಸ್ತಸ್ಯ ಪ್ರಥಮಂ ಪರಿಕಲ್ಪಿತಂ ॥ ೩೮ ॥ ಉಕ್ಥ್ಯಂ ದ್ವಿತೀಯಂಸಂಖ್ಯಾತ ಮತಿರಾತ್ರಂ ತಥೋತ್ತರಂ ॥ ಕಾರಿತಾಸ್ತತ್ರ ಬಹವೋ ವಿಹಿತಾ ಶ್ಶಾಸ್ತ್ರದರ್ಶನಾತ್ ॥ ೩೯ ॥ ಜ್ಯೋತಿಷ್ಟೋಮಾಯುಷೀ ಚೈವ ಮತಿರಾತ್ರೌ ವಿನಿರ್ಮಿತೌ ॥ ಅಭಿಜಿದ್ವಿಶ್ವಜಿಚ್ಚೈವ ಮಪ್ತೋರ್ಯಾಮೋ ಮಹಾ ಕ್ರತುಃ ॥ ೪೦ ॥ ಪ್ರಾಚೀಂಹೋತ್ರೇ ದದೌರಾಜಾ ದಿಶಂ ಸ್ವಕುಲವರ್ಧನಃ ॥ ಅಧ್ವರ್ಯವೇ ಪ್ರತೀಚೀಂತು ಬ್ರಹ್ಮಣೇ ದಕ್ಷಿಣಾಂದಿಶಂ ॥೪೧॥ ಉದ್ಗಾತ್ರೇಚ

---

ಅಶ್ವಮೇಧಯಾಗವು, ತ್ರ್ಯಹಃ-ಮೂರುದಿನಗಳವರೆವಿಗೂ ನಡೆಯತಕ್ಕುದೆಂದು, ಸಂಖ್ಯಾತಃ-ಸಂಖೆ ಮಾಡಲ್ಪಟ್ಟಿರುವುದು, ತಸ್ಯ-ಆ ಮೂರುದಿನಗಳಲ್ಲಿ, ಚತುಷ್ಟೋಮಂ - ಅಗ್ನಿಷ್ಟೋಮವೆಂಬ ಯಾಗ ವಿಶೇಷವು, ಪ್ರಥಮಂ-ಮೊದಲನೆಯದಾದ,ಅಹರಿತಿ-ದಿನವೆಂದೂ, ಪರಿಕಲ್ಪಿತಂ-ಎಣಿಸಲ್ಪಟ್ಟಿರುವುದು, ಉಕ್ಥ್ಯಂ-ಉಕ್ಥ್ಯವೆಂಬ ಯಾಗವು, ದ್ವಿತೀಯಂ-ಎರಡನೇ ದಿನದಲ್ಲಿ ಮಾಡತಕ್ಕುದೆಂತಲೂ, ಸಂಖ್ಯಾತಂ-ಗಣನೆಮಾಡಲ್ಪಟ್ಟಿದೆ, ಅತಿರಾತ್ರಂ-ಅತಿರಾತ್ರಕ್ರತುವು,ತಥಾ-ಹಾಗೆಯೇ, ಉತ್ತರಂ-ಮೂರನೆಯ ದಿವಸ ಮಾಡತಕ್ಕುದೆಂದು, ಸಂಖ್ಯಾತಂ - ಎಣಿಸಲ್ಪಟ್ಟಿದೆ. ॥ ೩೮ ॥ ಶಾಸ್ತ್ರದರ್ಶನಾತ್-ಶಾಸ್ತ್ರಾವಲೋಕನದಿಂದ, ವಿಹಿತಾಃ-ವಿಧಿಸಲ್ಪಟ್ಟ, ಜ್ಯೋತಿಷ್ಟೋಮಾಯುಷೀಚ-ಜ್ಯೋತಿಷ್ಟೋಮ, ಆಯುಷ್ಟೋಮಗಳೆಂಬ ಕ್ರತುಗಳೆರಡು, ಏವಂ-ಈ ರೀತಿ, ವಿನಿರ್ಮಿತೌ-ವಿಧಿಸಲ್ಪಟ್ಟ, ಅತಿರಾತ್ರೌ-ಎರಡು ಅತಿರಾತ್ರಗಳು,ಅಭಿಜಿತ್-ಅಭಿಜಿತ್ ಎಂಬ ಕ್ರತುವು, ವಿಶ್ವಜಿತ್-ವಿಶ್ವಜಿತ್ತು ಎಂಬ ಕ್ರತುವೂ, ಏವಂ-ಇದೇಪ್ರಕಾರ, ಅಪ್ತೋರ್ಯಾಮಃ - ಅಪ್ತೋರ್ಯಾಮವೆಂಬ, ಮಹಾಕ್ರತುಃ - ಮಹಾಯಾಗವು ಎಂಬ, ಬಹವಃ-ಅನೇಕ ಕ್ರತುಗಳು, ತತ್ರ ಆ ಅಶ್ವಮೇಧದಲ್ಲಿ, ದಶರಥೇನ - ದಶರಥರಾಯನಿಂದ, ಕಾರಿತಾಃ-ಮಾಡಿಸಲ್ಪಟ್ಟವು ॥ ೪೦ ॥ ಸ್ವಕುಲವರ್ಧನಃ-ತನ್ನ ವಂಶವನ್ನು ವೃದ್ಧಿಗೊಳಿಸಲಿಚ್ಛೆಯುಳ್ಳ, ರಾಜಾ-ದಶರಥರಾಯನು, ಪ್ರಾಚೀಂದಿಶಂ - ಪೂರ್ವದಿಕ್ಕನ್ನು, ಹೋತ್ರೇ- ಹೋತೃವೆಂಬ ಪ್ರಥಮಾರ್ತ್ವಿಜ್ಯಮಾಡಿದವನಿಗೆ, ದದೌ-ಕೊಟ್ಟನು,ಅಧ್ವರ್ಯವೇ-ಅಧ್ವರ್ಯವನ್ನು ಮಾಡಿದ ಋತ್ವಿಕ್ಕಿಗೆ, ಪ್ರತೀಚೀಂ-ಪಶ್ಚಮದಿಕ್ಕನ್ನು, ದದೌ-ಕೊಟ್ಟನು, ಬ್ರಹ್ಮಣೇ - ಬ್ರಹ್ಮತ್ವಮಾಡಿದವನಿಗೆ, ದಕ್ಷಿಣಾಂ

---

ಕೆಂತಲೂ ಪ್ರಥಮ ದಿನ ಕೃತ್ಯಕ್ಕೆ ಅಗ್ನಿಷ್ಟೋಮವೆಂತಲೂ, ಎರಡನೇ ದಿವಸದಲ್ಲಿ ಮಾಡುವ ಕರ್ಮಕ್ಕೆ ಉಕ್ಥ್ಯವೆಂತಲೂ, ಮೂರನೆಯ ದಿನದಲ್ಲಿ ಮಾಡುವ ಕೃತ್ಯಕ್ಕೆ ಅತಿರಾತ್ರವೆಂತಲೂ ವಿವರಿಸಿ ಹೇಳಲ್ಪಟ್ಟಿರುವದು ಸರಿಯಷ್ಟೆ,॥೩೮॥ ಆ ದಶರಥ ರಾಜನು ಮಾಡಿದ ಅಶ್ವಮೇಧ ಯಾಗದಲ್ಲಾದರೊ, ಬ್ರಾಹ್ಮಣೋತ್ತಮರೆಲ್ಲರು, ಜ್ಯೋತಿಷ್ಟೋಮವು, ಆಯುಷ್ಟೋಮವು ಎರಡತಿರಾತ್ರಿಗಳು, ಅಭಿಜಿತುವು, ವಿಶ್ವಜಿತುವು, ಆಪ್ತೋರ್ಯಾಮವೆಂಬ ಮಹಾಯಜ್ಞವು, ಎಂಬ ಯಾಗಗಳನ್ನೆಲ್ಲ ಮಾಡಿಸಿದರು. ॥ ೪೦ ॥ ತನ್ನ ವಂಶಾಭಿವೃದ್ಧಿಯನ್ನು ಮಾಡಬೇಕೆಂದಿಚ್ಛಿಸುತ್ತಿರುವ ಆ ದಶರಥರಾಜನು ಪೂರ್ವಕಾಲದಲ್ಲಿ ಬ್ರಹ್ಮದೇವನಿಂದ ಮಾಡಲ್ಪಟ್ಟ ಅಶ್ವಮೇಧ ಯಾಗವಿಧಾನದಲ್ಲಿ ಉಕ್ತವಾಗಿರುವಂತೆ, ಹೋತೃವೆಂಬ ಪ್ರಥಮ ಋತ್ವಿಜನಿಗೆ ಪೂರ್ವದಿಕ್ಕನ್ನೂ, ಅಧ್ವರ್ಯವನ್ನು ನಡೆಯಿಸಿದ ಋತ್ವಿಜನಿಗೆ ಪಶ್ಚಿಮ ದಿಕ್ಕನ್ನೂ, ಬ್ರಹ್ಮತ್ವ

**ತಥೋದೀಚೀಂ ದಕ್ಷಿಣೈಷಾ ವಿನಿರ್ಮಿತಾ || ಅಶ್ವಮೇಧೇ ಮಹಾಯಜ್ಞೇ ಸ್ವಯಂಭು ವಿಹಿತೇ ಪುರಾ||೪೨||ಕ್ರತುಂ ಸಮಾಪ್ಯತು ತದಾ ನ್ಯಾಯತಃ ಪುರುಷರ್ಷಭಃ|| ಋತ್ವಿಗ್ಭ್ಯೋಹಿದದೌ ರಾಜಾಧರಾಂ ತಾಂ ಕ್ರತುವರ್ಧನಃ||೪೩||ಋತ್ವಿಜಸ್ತ್ವಬ್ರುವನ್ ಸರ್ವೇ ರಾಜಾನಂ ಗತ ಕಲ್ಮಷಂ || ಭವಾನೇವ ಮಹೀಂ ಕೃತ್ಸ್ನಾಮೇಕೋರಕ್ಷಿತು ಮರ್ಹತಿ ||೪೪|| ನಭೂಮ್ಯಾ ಕಾರ್ಯ ಮಸ್ಮಾಕಂ ನಹಿಶಕ್ತಾಃ ಸ್ಮ ಪಾಲನೇ||ರತಾಸ್ಸ್ವಾಧ್ಯಾಯಕರಣೇ ವಯಂ ನಿತ್ಯಂ ಹಿ ಭೂಮಿಪ ||೪೫|| ನಿಷ್ಕ್ರಯಂ ಕಿಂಚಿದೇವೇಹ ಪ್ರಯಚ್ಛತು ಭವಾನಿತಿ || ಮಣಿರತ್ನಂ ಸುವ**

ದಿಶಂ-ದಕ್ಷಿಣದಿಕ್ಕನ್ನೂ, ತತಃ-ಬಳಿಕ, ಉದ್ಗಾತ್ರೇ - ಔದ್ಗಾತ್ರಾರ್ತ್ವಿಜ್ಯಮಾಡಿ **ದ**ವನಿಗೆ, ಉದೀಚೀಂ- ಉತ್ತರದಿಕ್ಕನ್ನು, ದದೌ- **ಕೊಟ್ಟ**ನು, ಏಷಾದಕ್ಷಿಣಾ-ಈ ದಕ್ಷಿಣೆಯು, ಪುರಾ-**ಪೂ**ರ್ವದಲ್ಲಿ, ಸ್ವಯಂಭುವಿಹಿತೇ,ಸ್ವಯಂಭು-ಬ್ರಹ್ಮದೇವನಿಂದ, ವಿಹಿತೇ-ಮಾಡಲ್ಪಟ್ಟ, ಅಶ್ವಮೇದೇ-**ಅ**ಶ್ವಮೇಧವೆಂಬ, ಮಹಾಯಜ್ಞೇ-ಮಹಾಕ್ರತುವಿನಲ್ಲಿ, ವಿನಿರ್ಮಿತಾ-ಕಲ್ಪಿತವಾಗಿರುವುದು || ೪೨ || **ಕ್ರ**ತುವರ್ಧನಃ-ಯಜ್ಞಫಲವನ್ನು ವೃದ್ಧಿಹೊಂದಿಸುತ್ತಿರುವ, ಪುರುಷರ್ಷಭಃ - ಪುರುಷಶ್ರೇಷ್ಠನಾದ, ರಾಜಾ-ದಶರಥರಾಯನು, ಕ್ರತುಂ-ಯಜ್ಞವನ್ನು, ನ್ಯಾಯತಃ-ಯಥಾಶಾಸ್ತ್ರವಾಗಿ, ಸಮಾಪ್ಯ-**ಪೂ**ರ್ತಿಗೊಳಿಸಿ, ತದಾತು-ಆಗ, ಋತ್ವಿಗ್ಭ್ಯಃ-ಆಋತ್ವಿಜ್ಯಮಾಡಿದವರಿಗ,ತಾಂಧರಾಂ ಆಭೂಮಿಯನ್ನು, ದದೌಹಿ-**ಕೊಟ್ಟ**ನಷ್ಟೆ || ೪೩ || ಸರ್ವೇ-ಸಮಸ್ತ, ಋತ್ವಿಜಸ್ತು ಋತ್ವಿಕ್ಕುಗಳು, ರಾಜಾನಂ-ಅರಸಾದ ದಶರಥನನ್ನು ಕುರಿತು, ಹೇನರಶ್ರೇಷ್ಠ-ಎಲೈ ಅರಸೇ, ಭವಾನ್ ನೀನು, ಏಕಏವ-ಒಬ್ಬನೇ, ಕೃತ್ಸ್ನಾ-ಸಮಸ್ತವಾದ, ಮಹೀಂ-ಭೂಮಿಯಯನ್ನು, ರಕ್ಷಿತುಂ-ಸಂರಕ್ಷಣೆ ಮಾಡಲು ಅರ್ಹತಿ ಯೋಗ್ಯನಾಗಿ**ರು**ವೆ, ಹೇಭೂಮಿಪಾಲ-ಎಲೈ ರಾಜನೇ ! ಅಸ್ಮಾಕಂ-ನಮಗೆ, ಭೂಮ್ಯಾ - ಭೂಮಿಯಿಂದ, ಕಾರ್ಯಂ-**ಪ್ರ**ಯೋಜನವು, ನ-ಇಲ್ಲ, ಹಿ-ಯಾವಕಾರಣ, ಪಾಲನೇ-ಸಂರಕ್ಷಣೆಯಲ್ಲಿ, ನಶಕ್ತಾಸ್ಮ-ಸಮರ್ಥರಾಗ**ಲಾ**ರೆವೋ, ವಯಂ-ನಾವು, ನಿತ್ಯಂ-ನಿರಂತರದಲ್ಲಿಯು, ಸ್ವಾಧ್ಯಾಯಕರಣೇ-ವೇದಾಧ್ಯಯನ ಮಾಡು**ವ**ದರಲ್ಲಿ, ರತಾಹಿ-ಆಸಕ್ತರಷ್ಟೆ, ಇಹ-ಈಗ, ನಿಷ್ಕ್ರಯಂ-ಪ್ರತಿದ್ರವ್ಯವನ್ನು, ಕಿಂಚಿತ್-ಯಾವ**ದ**ನ್ನಾದರು, ಭವಾನ್-ನೀನು, ಪ್ರಯಚ್ಛತು-ಕೂಡು || ೪೫ || ಮಣಿರತ್ನಂ-ಶ್ರೇಷ್ಠವಾದ ಮಣಿಗಳೇ ಆಗಲಿ, ಸುವರ್ಣಂವಾ-ಸುವರ್ಣವೇ ಆಗಲಿ, ಗಾವಃ-ಗೋವುಗಳೇ ಆಗಲಿ, ಯತ್ - ಯಾವದೇ

---

ಮಾಡಿದವನಿಗೆ ದಕ್ಷಿಣ ದಿಕ್ಕನ್ನೂ, ಔದ್ಗಾತ್ರೇಯಾರ್ತ್ವಿಜ್ಯವನ್ನು ಮಾಡಿದವನಿಗೆ ಉತ್ತರ ದಿಕ್ಕನ್ನೂ ಕೊಡಬೇಕೆಂದು ನಿಶ್ಚಯಿಸಿ, ಕ್ರತುವು ಪರಿಪೂರ್ತಿಯಾದ ಬಳಿಕ, ಆ ಋತ್ವಿಕ್ಕುಗಳಿಗೆಲ್ಲ ಯಥಾನ್ಯಾಯವಾಗಿ ಭೂಮಿಯನ್ನು ಕೊಡಲು, ಆಋತ್ವಿಜರೆಲ್ಲರೂ, ಪಾಪವಿಮುಕ್ತನಾದ ದಶರಥರಾಜನನ್ನು ಕುರಿತಿಂತೆಂದರು,"ಎಲೈ ರಾಜನೇ! ಭೂ ಪರಿಪಾಲನೆಯನ್ನುಮಾಡುವ ವಿಷಯದಲ್ಲಿ ನೀನೊಬ್ಬನೇ ಶಕ್ತನಾಗಿರುವೆ. ನಮಗೆ ಶಕ್ತಿಸಾಲದು. ಎಲೈ ಭೂಪತಿಯೇ! ನಾವೆಲ್ಲರೂ ನಿರಂತರವು ಜಪ ತಪಾದಿಗಳಲ್ಲಿ ಆಸಕ್ತರಾಗಿರುವೆವು. ನಮಗೆ ಭೂಮಿಯಿಂದ ಪ್ರಯೋಜನವಿಲ್ಲ. ಆದಕಾರಣ ನೀನು ಈ ಭೂಪ್ರದಾನಕ್ಕೆ ಏನಾದರೂ ಪ್ರತಿಯಾಗಿ ಮೌಲ್ಯರೂಪವಾಗಿ ರತ್ನಗಳನ್ನಾಗಲೀ, ಸುವರ್ಣವನ್ನಾಗಲೀ, ಗೋವು

ರ್ಣಂವಾ ಗಾವೋ ಯದ್ವಾ ಸಮುದ್ಯತಂ ||೪೭|| ತತ್ಪ್ರಯಚ್ಛ ನರಶ್ರೇಷ್ಠ ಧರಣ್ಯಾ ನಪ್ರಯೋಜನಂ || ಏವಮುಕ್ತೋ ನರಪತಿ ರ್ಬ್ರಾಹ್ಮಣೈರ್ವೇದ ಪಾರಗೈಃ ||೪೭|| ಗವಾಂ ಶತಸಹಸ್ರಾಣಿ ದಶತೇಭ್ಯೋ ದದೌನೃಪಃ || ದಶ ಕೋಟೀಸ್ಸುವರ್ಣಸ್ಯ ರಜತಸ್ಯ ಚತುರ್ಗುಣಂ || ೪೮ || ಋತ್ವಿಜಶ್ಚ ತತ ಸ್ಸರ್ವೇ ಪ್ರದದುಸ್ಸಹಿತಾವಸು|| ಋಶ್ಯಶೃಂಗಾಯ ಮುನಯೇ ವಸಿಷ್ಠಾಯ ಚ ಧೀಮತೆ || ೪೯ || ತತಸ್ತೇ ನ್ಯಾಯತಃ ಕೃತ್ವಾ ಪ್ರವಿಭಾಗಂ ದ್ವಿಜೋ ತ್ತಮಾಃ || ಸುಪ್ರೀತ ಮನಸಸ್ಸರ್ವೇ ಪ್ರತ್ಯೂಚು ರ್ಮುದಿತಾಭೃಶಂ || ೫೦ || ತತಃಪ್ರಸರ್ಪಕೇಭ್ಯಸ್ತು ಹಿರಣ್ಯಂ ಸು ಸಮಾಹಿತಃ || ಜಾಂಬೂನದಂ ಕೋಟಿ

ಆಗಲಿ, ಸಮುದ್ಯತಂ ಉಪಸ್ಥಿತವಾಗಿದೆಯೋ, ತತ್-ಅದನ್ನು, ಪ್ರಯಚ್ಛ-ಕೊಡು, ಧರಣ್ಯಾ-ಭೂಮಿ ಯಿಂದ ಪ್ರಯೋಜನಂ-ಪ್ರಯೋಜನವು, ನ-ಇಲ್ಲ, ಇತಿ-ಇಂತೆಂದು, ಅಬ್ರುವನ್-ನುಡಿದರು ||೪೭|| ಏವಂ-ಈ ಪರಿಯಾಗಿ, ನರಪತಿಃ ಮನುಷ್ಯಾಧಿಪತಿಯಾದ, ನೃಪಃ-ದಶರಥರಾಯನು, ವೇದಪಾರಗೈಃ-ವೇದವೇದಾಂಗಪಾರಂಗತರಾದ, ಬ್ರಾಹ್ಮಣೈಃ-ಬ್ರಾಹ್ಮಣರಿಂದ, ಉಕ್ತಃ - ಕೇಳಲ್ಪಟ್ಟು, ತೇಭ್ಯಃ-ಆ ಬ್ರಾಹ್ಮಣರಿಗೆ, ಗವಾಂ-ಗೋವುಗಳ, ದಶಸಹಸ್ರಾಣಿ-ಹತ್ತುಸಹಸ್ರಗಳನ್ನು, ದದೌ-ಕೊಟ್ಟನು ; ಸುವರ್ಣಸ್ಯ-ವರಹಗಳ, ದಶಕೋಟೀಃ-ಹತ್ತುಕೋಟಿಗಳನ್ನು, ರಜತಸ್ಯ-ರೂಪಾಯಿಗಳ,ಚತುರ್ಗುಣಂ-ನಲವತ್ತು ಕೋಟಿಗಳನ್ನು, ದದೌ-ಕೊಟ್ಟನು || ೪೮ || ತತಃ-ಬಳಿಕ, ಸರ್ವೇ-ಸಮಸ್ತ, ಋತ್ವಿಜಃ-ಋತ್ವಿಕ್ಕುಗಳು, ಸಹಿತಾಃ-ಸೇರಿ, ವಸು-ದ್ರವ್ಯವನ್ನು, ಋಶ್ಯಶೃಂಗಾಯ-ಋಶ್ಯಶೃಂಗನೆಂಬ, ಮುನಯೆ-ಋಷಿಗೆ, ಧೀಮತೆ-ಜ್ಞಾನೈಶ್ವರ್ಯಸಂಪನ್ನನಾದ, ವಸಿಷ್ಠಾಯಚ-ವಸಿಷ್ಠಋಷಿಗೂ, ವಸು-ದ್ರವ್ಯ ವನ್ನು, ಪ್ರದದುಃ-ಕೊಟ್ಟರು||೪೯||ತತಃ-ಬಳಿಕ, ಸರ್ವೇ-ಸಮಸ್ತರಾದ,ದ್ವಿಜೋತ್ತಮಾಃ-ಬ್ರಾಹ್ಮಣಶ್ರೇಷ್ಠರಾದ, ತೇ-ಆ ಅಷ್ಟಾದಶಋತ್ವಿಕ್ಕುಗಳು, ನ್ಯಾಯತಃ-ನ್ಯಾಯದಿಂದ, ಪ್ರವಿಭಾಗಂ-ವಿಭಾಗವನ್ನು, ಕೃತ್ವಾ-ಮಾಡಿ, ಸುಪ್ರೀತಮನಸಃ - ಸಂತುಷ್ಟವಾದ ಮನಸ್ಸುಳ್ಳವರಾಗಿ, ಭೃಶಂ-ಬಹಳವಾಗಿ, ಮುದಿತಾಃ-ಸಂತೋಷಯುಕ್ತರಾಗಿ, ಪ್ರತ್ಯೂಚುಃ-ಪ್ರತ್ಯುತ್ತರ ಹೇಳಿದರು||೫೦|| ತತಃ-ಬಳಿಕ, ಸುಸಮಾಹಿತಃ-ಚನ್ನಾಗಿಸಮಾಧಾನಚಿತ್ತನಾದ ದಶರಥನು, ಪ್ರಸರ್ಪಕೇಭ್ಯಃ-ಯಾಗದರ್ಶನಾರ್ಥವಾಗಿ ಬಂದ ಬ್ರಾಹ್ಮಣರಿಗೆ, ಜಾಂಬೂನದಂ-ಜಂಬೂನದಿಯಲ್ಲಿ ಹುಟ್ಟದ, ಕೋಟಿಸಂಖ್ಯಂ-ಅನೇಕ ಸಂಖ್ಯೆಯುಳ್ಳ

ಗಳನ್ನಾಗಲೀ, ಯಾವದನ್ನಾದರೂ ಕೊಟ್ಟರೆ ನಮಗೆ ಪ್ರಯೋಜನವಾಗಿರುತ್ತದೆ." ಎಂದು ನುಡಿದರು. || ೪೭ || ಆಗ ಆ ನರಪತಿಯಾದ ದಶರಥರಾಜನು ಹತ್ತು ಲಕ್ಷ ಗೋವುಗಳನ್ನೂ, ಹತ್ತು ಕೋಟಿ ವರಹಾಗಳನ್ನೂ, ನಲವತ್ತುಕೋಟಿ ರೂಪಾಯಿಗಳನ್ನೂ ಕೊಟ್ಟನು ||೪೮|| ಆ ಬಳಿಕ ಋತ್ವಿಕ್ಕುಗಳೆಲ್ಲರೂ ಒಂದೆಡೆ ಸೇರಿ ಋಶ್ಯಶೃಂಗಮುನಿಗೂ ಮತಿವಂತನಾದ ವಸಿಷ್ಠಋಷಿಗೂ ಆ ದ್ರವ್ಯವನ್ನೆಲ್ಲಾ ಒಪ್ಪಿಸಿ, ಎಲ್ಲರೂ ಭಾಗಗಳನ್ನು ಹಂಚಿಕೊಂಡು ಸಂತುಷ್ಟಾಂತರಂಗವುಳ್ಳವರಾಗಿ ಪ್ರತ್ಯುತ್ತರವಿತ್ತರು. || ೫೦ || ಆ ಬಳಿಕ ದಶರಥರಾಜನು ಸಾವಧಾನ ಚಿತ್ತನಾಗಿ ಯಾಗ ದರ್ಶನಾರ್ಥವಾಗಿ ಬಂದಿದ್ದ ಬ್ರಾಹ್ಮಣೋತ್ತಮರಿಗೆಲ್ಲ ಕೋಟಿ ಸುವರ್ಣಗಳನ್ನು ಕೊಟ್ಟನು. ಆ ಸಮಯದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನು ಬಂದು ಹಸ್ತಾ

ಸಂಖ್ಯಂ ಬ್ರಾಹ್ಮಣೇಭ್ಯೋ ದದೌ ತದಾ ‖ ೫೧ ‖ ದರಿದ್ರಾಯ ದ್ವಿಜಾಯಾಥ ಹಸ್ತಾಭರಣಮುತ್ತಮಂ ‖ ಕಸ್ಮೈಚಿದ್ಯಾಚಮಾನಾಯ ದದೌ ರಾಘವ ನಂದನಃ ‖ ೫೨ ‖ ತತಃಪ್ರೀತೇಷು ನೃಪತಿ ರ್ದ್ವಿಜೇಷು ದ್ವಿಜವತ್ಸಲಃ‖ ಪ್ರಣಾಮಮಕರೋತ್ತೇಷಾಂ ಹರ್ಷಪರ್ಯಾಕುಲೇಕ್ಷಣಃ ‖ ೫೩ ‖ ತಸ್ಯಾಶಿಷೋಥ ವಿಧಿವ ದ್ಬ್ರಾಹ್ಮಣೈ ಸ್ಸಮುದೀರಿತಾಃ ‖ ಉದಾರಸ್ಯ ನೃವೀರಸ್ಯ ಧರಣ್ಯಾಂ ಪ್ರಣತಸ್ಯಚ ‖೫೪ ‖ ತತಃ ಪ್ರೀತಮನಾ ರಾಜಾ ಪ್ರಾಪ್ಯ ಯಜ್ಞ ಮನುತ್ತಮಂ‖ಪಾಪಾಪಹಂ ಸ್ವರ್ನಯನಂ ದುಷ್ಕರಂ ಪಾರ್ಥಿವರ್ಷಭೈಃ‖೫೫‖ ತತೋಬ್ರವೀ ದ್ದೃಶ್ಯಶೃಂಗಂ ರಾಜಾ ದಶರಥಸ್ತದಾ ‖ ಕುಲಸ್ಯವರ್ಧನಂ

---

ಹಿರಣ್ಯಂ - ದ್ರವ್ಯವನ್ನು, ತದಾ-ಆಗ, ದದೌ-ಕೊಟ್ಟನು ‖೫೧‖ ಅಥ-ಅನಂತರದಲ್ಲಿ, ರಾಘವನಂದನಃ- ರಘುಕುಲೋತ್ಪನ್ನನಾದ ದಶರಥನು, ಉತ್ತಮಂ - ಉತ್ಕೃಷ್ಟವಾದ, ಹಸ್ತಾಭರಣಂ - ಕಡೆಗವನ್ನು, ಯಾಚಮಾನಾಯ - ಬೇಡುತ್ತಿರುವ, ದರಿದ್ರಾಯ - ರಿಕ್ತನಾದ, ಕಸ್ಮೈಚಿತ್‌ದ್ವಿಜಾಯ - ಒಬ್ಬಾನೊಬ್ಬ ಬ್ರಾಹ್ಮಣನಿಗೆ, ದದೌ - ಕೊಟ್ಟನು. ‖ ೫೨ ‖ ತತಃ - ಅನಂತರದಲ್ಲಿ, ದ್ವಿಜವತ್ಸಲಃ- ಬ್ರಾಹ್ಮಣಾಭಿಮಾನಿಯಾದ, ನೃಪತಿಃ - ದಶರಥನು, ದ್ವಿಜೇಷು - ಬ್ರಾಹ್ಮಣರು, ಪ್ರೀತೇಷುಸತ್ಸು- ತೃಪ್ತರಾಗಲು, ಹರ್ಷಪರ್ಯಾಕುಲೇಕ್ಷಣಃ, ಹರ್ಷ - ಆನಂದಾಸ್ರುಗಳಿಂದ, ಪರ್ಯಾಕುಲ - ವ್ಯಾಪ್ತಗಳಾದ, ಈಕ್ಷಣಃ - ನೇತ್ರಗಳುಳ್ಳವನಾಗಿ, ತೇಷಾಂ - ಆ ಬ್ರಾಹ್ಮಣರಿಗೆ, ಪ್ರಣಾಮಂ - ವಂದನವನ್ನು, ಅಕರೋತ್ ಮಾಡಿದನು ‖ ೫೩ ‖ ಅಥ - ಬಳಿಕ, ಉದಾರಸ್ಯ - ಮಹೌದಾರ್ಯನಾದ, ಧರಣ್ಯಾಂ - ನೆಲದಲ್ಲಿ, ಪ್ರಣತಸ್ಯಚ - ನಮಸ್ಕಾರ ಮಾಡುತ್ತಿರುವ, ನೃವೀರಸ್ಯ - ನರಶ್ರೇಷ್ಠನಾದ, ತಸ್ಯ - ಆ ದಶರಥನಿಗೆ, ಬ್ರಾಹ್ಮಣೈಃ - ಬ್ರಾಹ್ಮಣರಿಂದ, ಆಶಿಷಃ - ಆಶೀರ್ವಾದಗಳು, ವಿಧಿವತ್- ಶಾಸ್ತ್ರೋಕ್ತವಾಗಿ, ಸಮುದೀರಿತಾಃ - ಹೇಳಲ್ಪಟ್ಟವು ‖ ೫೪ ‖ ತತಃ - ಅನಂತರದಲ್ಲಿ, ರಾಜಾ- ದಶರಥರಾಯನು, ಅನುತ್ತಮಂ - ಸರ್ವೋತ್ತಮವಾದ, ಪಾರ್ಥಿವರ್ಷಭೈಃ- ರಾಜಶ್ರೇಷ್ಠರಿಂದಲೂ, ದುಷ್ಕರಂ - ಮಾಡಲಸಾಧ್ಯವಾದ, ಪಾಪಾಪಹಂ - ಪಾಪನಿವೃತ್ತಿ ಸಾಧನವದ, ಸ್ವರ್ನಯನಂ- ಸ್ವರ್ಗಪ್ರಾಪಕವಾದ, ಯಜ್ಞಂ - ಅಶ್ವಮೇಧ ಕ್ರತುವನ್ನು, ಪ್ರಾಪ್ಯ - ಹೊಂದಿ, ಪ್ರೀತಮನಾಃ- ಸಂತೋಷಗೊಂಡ ಮನಸ್ಸುಳ್ಳವನಾದನು. ‖೫೫‖ ತತಃ - ಅನಂತರದಲ್ಲಿ ದಶರಥಃ - ದಶರಥನೆಂಬ, ರಾಜಾ - ಅರಸನು, ಋಶ್ಯಶೃಂಗಂ - ಋಶ್ಯಶೃಂಗನನ್ನು ಕುರಿತು, ಹೇಸುವ್ರತ- ಎಲೈ ತಪೋನಿಷ್ಠನೆ ! ತ್ವಂ - ನೀನು, ಕುಲಸ್ಯ - ಕುಲಕ್ಕೆ, ವರ್ಧನಂತು - ಅಭಿವೃದ್ಧಿ ಸಂಪಾದಕವಾದ ಕರ್ಮ

---

ಭರಣವನ್ನಪೇಕ್ಷಿಸಲು, ರಘುನಂದನನಾದ ದಶರಥನು ಅದನ್ನೂ ಕೊಟ್ಟನು. ದ್ವಿಜಶ್ರೇಷ್ಠರೆಲ್ಲರು ಸಂತುಷ್ಟಾಂತರಂಗವುಳ್ಳವರಾದರು. ಆಬಳಿಕ ದಶರಥರಾಜನು ಆನಂದ ಬಾಷ್ಪಗಳನ್ನು ಸುರಿಯುತ್ತಿರುವ ನೇತ್ರಗಳುಳ್ಳವನಾಗಿ, ಆ ಬ್ರಾಹ್ಮಣೋತ್ತಮರ ಪಾದಗಳಿಗೆರಲು ಅವರೆಲ್ಲರೂ ಉದಾರನಾದ ಆ ದಶರಥರಾಜನಿಗೆ ವಿಧಿವತಾಗಿ ಆಶೀರ್ವಾದಗಳನ್ನು ಮಾಡಿದರು. ‖೫೩‖ ಆಗ ನರನಾಥನಾದ ಆ ದಶರಥರಾಜನು ಇತರ ರಾಜರು ಮಾಡಲಸಾಧ್ಯವಾದ ಪಾಪಹರವಾದ,ಪುತ್ರರನ್ನು ಹೊಂದುವದರ ಮೂಲಕ ಸ್ವರ್ಗಪ್ರಾಪ್ತಿಕರವಾದ, ಸರ್ವೋತ್ತಮವಾದ,

ತ್ವಂತು ಕರ್ತುಮರ್ಹಸಿ ಸುವ್ರತ || ೫೬ || ತಥೇತಿ ಚ ಸ ರಾಜಾನ ಮುವಾಚ
ದ್ವಿಜಸತ್ತಮಃ||ಭವಿಷ್ಯಂತಿ ಸುತಾರಾಜನ್ ಚತ್ವಾರಸ್ತೇ ಕುಲೋದ್ವಹಾಃ ||೫೭||
(ಸ ತಸ್ಯ ವಾಕ್ಯಂ ಮಧುರಂ ನಿಶಮ್ಯ ಪ್ರಣಮ್ಯತಸ್ಮೈ ಪ್ರಯತೋ ನೃಪೇಂದ್ರಃ|
ಜಗಾಮ ಹರ್ಷಂ ಪರಮಂ ಮಹಾತ್ಮಾತಮೃಶ್ಯಶೃಂಗಂ ಪುನರಪ್ಯುವಾಚ|| )

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ದಶಸ್ಸರ್ಗಃ.



---

ವನ್ನು, ಕರ್ತುಂ - ಮಾಡಿಸಲು, ಅರ್ಹಸಿ - ಅರ್ಹನಾಗು, ಇತಿ - ಇಂತೆಂದು, ತದಾ - ಆಗ, ಅಬ್ರವೀತ್ - ನುಡಿದನು. || ೫೬ || ದ್ವಿಜಸತ್ತಮಃ - ಬ್ರಾಹ್ಮಣಶ್ರೇಷ್ಠನಾದ, ಸಃ-ಆ ಋಶ್ಯಶೃಂಗ ಋಷಿಯು, ತಥಾ - ಹಾಗೆಯೆ, ಹೇರಾಜನ್ - ಎಲೈ ರಾಜನೆ ! ತೇ - ನಿನಗೆ, ಕುಲೋದ್ವಹಾಃ- ವಂಶೋದ್ಧಾರಕರಾದ, ಚತ್ವಾರಃ - ನಾಲ್ವರಾದ, ಸುತಾಃ - ಕುವರರು, ಭವಿಷ್ಯಂತಿ - ಆಗುವರು, ಇತಿ - ಇಂತೆಂದು, ರಾಜಾನಂ - ದಶರಥ ರಾಯನನ್ನು ಕುರಿತು, ಉವಾಚ - ಹೇಳಿದನು. ||೫೭|| ತಸ್ಯ - ಆ ಋಶ್ಯಶೃಂಗ ಋಷಿಯ, ಮಧುರಂ - ಪುತ್ರತಾಪ ಶಾಂತಿಕರವಾದ, ವಾಕ್ಯಂ-ವಚನವನ್ನು, ನಿಶಮ್ಯ - ಕೇಳಿ, ತಸ್ಮೈ - ಆ ಋಶ್ಯಶೃಂಗ ಋಷಿಗೆ, ಪ್ರಣಮ್ಯ - ನಮಸ್ಕರಿಸಿ, ಪ್ರಯತಃ- ಕೃತಾರ್ಥನಾದ, ಮಹಾತ್ಮಾ- ಮಹಾ ಮನಸ್ವಿಯಾದ, ನೃಪೇಂದ್ರಃ - ರಾಜಶ್ರೇಷ್ಠನಾದ, ಸಃ - ಆ ದಶರಥನು, ಪರಮಂ - ಬಹಳವಾದ, ಹರ್ಷಂ - ಸಂತೋಷವನ್ನು, ಜಗಾಮ - ಪಡೆದನು. ಋಶ್ಯಶೃಂಗಃ - ಋಶ್ಯಶೃಂಗನು, ತಂ - ಆದಶರಥನನ್ನು ಕುರಿತು, ಪುನರಪಿ-ಮತ್ತೂ, ಉವಾಚ - ಹೇಳಿದನು | ೫೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ದಶಸ್ಸರ್ಗಃ.



---

ಆ ಯಾಗವನ್ನು ಹೊಂದಿ,ಋಶ್ಯಶೃಂಗನನ್ನು ಕುರಿತು“ಎಲೈ ಮಹಾ ಮುನಿಯೇ! ವಂಶಾಭಿವೃದ್ಧಿಕರವಾದ ಪುತ್ರಕಾಮೇಷ್ಟಿಯಾಗವನ್ನುಮಾಡಿಸಬೇಕೆಂದಿಚ್ಛಿಸುತ್ತೇನೆ” ಎಂದು ನುಡಿಯಲು ಆತನು ಹಾಗೆಯೇ, ಆಗಲೆಂದು ಒಪ್ಪಿ“ಎಲೈ ರಾಜಶ್ರೇಷ್ಠನೇ! ನಿನಗೆ ವಂಶಾಭಿವೃದ್ಧಿಕರರಾದ ನಾಲ್ಕು ಮಂದಿ ಗಂಡುಮಕ್ಕಳು ಜನಿಸುವರು” ಎಂದನು. ಆಗಲಾ ಮನುಜೇಂದ್ರನಾದ ದಶರಥನದನ್ನು ಕೇಳಿ ಮಹಾ ಸಂತೋಷವನ್ನು ಹೊಂದಲು, ಋಶ್ಯಶೃಂಗನು ಮರಳಿ ಹೀಗೆಂದನು. || ೫೮ ||

ಇಂತಿದು ಅಶ್ವಮೇಧಯಾಗವಿವರಣವೆಂಬ ಹದಿನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚದಶಸ್ಸರ್ಗಃ.



ಮೇಧಾವೀತು ತತೋಧ್ಯಾತ್ವಾ ಸಕಿಂಚಿದಿದಮುತ್ತರಂ ॥ ಲಬ್ಧಸಂಜ್ಞಸ್ತ ತಸ್ತಂತು ವೇದಜ್ಞೋ ನೃಪಮಬ್ರವೀತ್ ॥೧॥ ಇಷ್ಟಿಂತೇಽಹಂ ಕರಿಷ್ಯಾಮಿ ಪುತ್ರೀಯಾಂ ಪುತ್ರಕಾರಣಾತ್॥ ಅಥರ್ವಶಿರಸಿಪ್ರೋಕ್ತೈ ರ್ಮಂತ್ರೈ ಸ್ಸಿದ್ಧಾಂ ವಿಧಾನತಃ ॥೨॥ ತತಃಪ್ರಾಕ್ರಮ್ಯತಾಮಿಷ್ಟಿಂ ಪುತ್ರೀಯಾಂ ಪುತ್ರಕಾರಣಾತ್॥ ಜುಹಾವಚಾಗ್ನೌ ತೇಜಸ್ವೀ ಮಂತ್ರದೃಷ್ಟೇನ ಕರ್ಮಣಾ ॥ ೩ ॥ ತತೋ ದೇವಾ ಸ್ಸಗಂಧರ್ವಾ ಸ್ಸಿದ್ಧಾಶ್ಚ ಪರಮರ್ಷಯಃ ॥ ಭಾಗಪ್ರತಿಗ್ರಹಾರ್ಥಂವೈ

---

ತತಃ - ಪ್ರತಿಜ್ಞಾನಂತರದಲ್ಲಿ, ಮೇಧಾವೀ - ಬುದ್ಧಿಶಾಲಿಯಾದ, ವೇದಜ್ಞಃ - ಅಥರ್ವಣ ವೇದಜ್ಞನಾದ, ಸಃ - ಆ ಋಶ್ಯಶೃಂಗಋಷಿಯು, ಕಿಂಚಿತ್ - ಸ್ವಲ್ಪ, ಧ್ಯಾತ್ವಾ - ಆಲೋಚಿಸಿ, ತತಃ - ಬಳಿಕ, ಲಬ್ಧಸಂಜ್ಞಃ, ಲಬ್ಧ - ಹೊಂದಲ್ಪಟ್ಟ, ಸಂಜ್ಞಃ - ಜ್ಞಪ್ತಿಯುಳ್ಳವನಾಗಿ, ತಂನೃಪಂ- ಆ ದಶರಥ ರಾಯನನ್ನು ಕುರಿತು, ಇದಂ - ಈ ಮುಂದೆ ಹೇಳುವ ರೀತಿ, ಉತ್ತರಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಅಹಂ - ನಾನು, ಪುತ್ರೀಯಾಂ - ಪುತ್ರೋತ್ಪತ್ತಿ ಹೇತು ಭೂತ ವಾದ, ಅಥರ್ವಶಿರಸಿ - ಅಥರ್ವಶಿರಸ್ಸಿನಲ್ಲಿ, ಪ್ರೋಕ್ತೈಃ - ಹೇಳಲ್ಪಟ್ಟ, ಮಂತ್ರೈಃ - ಮಂತ್ರಗಳಿಂದ, ಸಿದ್ಧಾಂ = ನಿಷ್ಪನ್ನವಾದ, ಇಷ್ಟಿಂ - ಪುತ್ರಕಾಮೇಷ್ಟಿಯನ್ನು, ತೇ - ನಿನಿಗೆ, ಪುತ್ರಕಾರಣಾತ್- ಪುತ್ರನಿಮಿತ್ತವಾಗಿ, ಕರಿಷ್ಯಾಮಿ - ಮಾಡಿಸುವೆನು, ಇತಿ-ಇಂತೆಂದು, (ಅಬ್ರವೀತ್-ನುಡಿದನು) ॥೨॥ ತತಃ - ಬಳಿಕ. ತೇಜಸ್ವೀ-ಮಂತ್ರಾನುಷ್ಠಾನ ಶಕ್ತಿವಂತನಾದ ಋಷಿಯು. ಪುತ್ರೀಯಾಂ-ಪುತ್ರೋ ತ್ಪತ್ತಿ ಸಾಧಕವಾದ, ತಾಮಿಷ್ಟಿಂ - ಆ ಪುತ್ರಕಾಮೇಷ್ಟಿಯನ್ನು, ಪುತ್ರಕಾರಣಾತ್ - ಪುತ್ರನಿಮಿತ್ತ ವಾಗಿ, ಪ್ರಾಕ್ರಮ್ಯ - ಉಪಕ್ರಮಿಸಿ, ಮಂತ್ರದೃಷ್ಟೇನ - ಮಂತ್ರದಿಂದ ಪ್ರತಿಪಾದ್ಯವಾದ, ಕರ್ಮಣಾ- ಕರ್ಮದಿಂದ, ಅಗ್ನೌ - ಅಗ್ನಿಯಲ್ಲಿ, ಜುಹಾವಚ - ಹೋಮವನ್ನು ಮಾಡಿದನು. ॥೩॥ ತತಃ-ಬಳಿಕ, ಸಗಂಧರ್ವಾಃ - ಗಂಧರ್ವರಿಂದೊಡಗೂಡಿದ, ದೇವಾಃ - ದೇವತೆಗಳೂ, ಸಿದ್ಧಾಶ್ಚ - ಸಿದ್ಧರೂ, ಪರಮರ್ಷಯಃ - ಶ್ರೇಷ್ಠರಾದ ಋಷಿಗಳೂ, ಯಥಾವಿಧಿ ವಿಧ್ಯುಕ್ತವಾಗಿ, ಭಾಗಪ್ರತಿಗ್ರಹಾರ್ಥಂ-

---

ಆ ಬಳಿಕ ಮಹಾಮತಿವಂತನಾದ ಆ ಮುನಿಯು, ಧ್ಯಾನನಿಷ್ಠನಾಗಿ ಈ ದಶರಥ ರಾಯನಿಗೆ ಪುತ್ರರು ಹೇಗೆ ಉಂಟಾಗುವರೆಂದು ಯೋಚಿಸಿ, ಆ ಕ್ಷಣದಲ್ಲಿಯೇ ದಶರಥನನ್ನು ಕುರಿತಿಂತೆಂದನು ॥ ೧ ॥ "ಎಲೈ ದಶರಥರಾಯನೇ ! ನಿನಗೆ ಪುತ್ರರು ಜನಿಸಲು, ಪುತ್ರೋ ತ್ಪತ್ತಿ ನಿಮಿತ್ತ ಭೂತವಾದ ಪು ತ್ರ ಕಾ ಮೇ ಷ್ಟಿ ಯೆಂ ಬ ಯಾಗವನ್ನು ಮಾಡಿಸುವೆನು" ಎಂದು ಪುತ್ರಾರ್ಥವಾಗಿ ಅಥರ್ವ ಶಿರಸ್ಸಿನಲ್ಲಿ ಪ್ರೋಕ್ತವಾಗಿರುವ ಮಂತ್ರಗಳಿಂದ ಸಿದ್ಧಿಯಾ ಗತಕ್ಕ ಆ ಪುತ್ರಕಾಮೇಷ್ಟಿಯಾಗವನ್ನು ಪ್ರಾರಂಭಿಸಿ ಮಹಾತೇಜಸ್ವಿಯಾಗಿ ಮಂತ್ರದೃಷ್ಟ ವಾದ ಕರ್ಮದಿಂದ ಯಥಾವಿಧಿಯಾಗಿ ಅಗ್ನಿಯಲ್ಲಿ ಹೋಮಮಾಡಿದನು. ॥ ೩ ॥ ಆ ಬಳಿಕ ದೇವತೆಗಳೂ, ಸಿದ್ಧರೂ, ಮಹರ್ಷಿಗಳೂ, ಗಂಧರ್ವರೂ, ಬ್ರಹ್ಮನೂ ತಮ್ಮ ತಮ್ಮ ಹವಿ

ಸಮವೇತಾ ಯಥಾವಿಧಿ ॥ ೪ ॥ ತಾಸ್ಸಮೇತ್ಯ ಯಥಾನ್ಯಾಯಂ ತಸ್ಮಿನ್ಸದಸಿ ದೇವತಾಃ॥ ಅಬ್ರುವನ್ ಲೋಕಕರ್ತಾರಂ ಬ್ರಹ್ಮಾಣಂ ವಚನಂ ಮಹತ್॥೫॥ ಭಗವನ್ ತ್ವತ್ಪ್ರಸಾದೇನ ರಾವಣೋ ನಾಮ ರಾಕ್ಷಸಃ ॥ ಸರ್ವಾನ್ನೋ ಬಾಧತೇ ವೀರ್ಯಾ ಚ್ಛಾಸಿತುಂ ತಂ ನಶಕ್ನುಮಃ॥೬॥ ತ್ವಯಾ ತಸ್ಮೈ ವರೋ ದತ್ತಃ ಪ್ರೀತೇನ ಭಗವನ್ ಪುರಾ ॥ ಮಾನಯಂತಶ್ಚ ತಂ ನಿತ್ಯಂ ಸರ್ವಂ ತಸ್ಯ ಕ್ಷಮಾಮಹೇ ॥ ೭ ॥ ಉದ್ವೇಜಯತಿ ಲೋಕಾಂಸ್ತ್ರೀ ನುಚ್ಛ್ರಿತಾನ್ದ್ವೇಷ್ಟಿ ದುರ್ಮತಿಃ॥ ಶಕ್ರಂ ತ್ರಿದಶ ರಾಜಾನಂ ಪ್ರಧರ್ಷಯಿತುಮಿಚ್ಛತಿ॥೮॥ ಋಷೀನ್

---

ಭಾಗ-ಹವಿರ್ಭಾಗಗಳನ್ನು, ಪ್ರತಿಗ್ರಹಾರ್ಥಂವೈ - ಪರಿಗ್ರಹಿಸುವದಕ್ಕೋಸ್ಕರ, ಸಮುಪೇತಾಃ- ಯಾಗಶಾಲೆಯಲ್ಲಿ ಕೂಡಿದರು. ॥ ೪ ॥ ತಾದೇವತಾಃ - ಆ ದೇವತೆಗಳು, ತಸ್ಮಿನ್ಸದಸಿ- ಆ ಸಭೆಯಲ್ಲಿ, ಯಥಾನ್ಯಾಯಂ - ಕ್ರಮಾನುಸಾರವಾಗಿ, ಸಮೇತ್ಯ - ಸೇರಿ, ಲೋಕಕರ್ತಾರಂ - ಲೋಕಸ್ವಾಮಿಯಾದ, ಬ್ರಹ್ಮಾಣಂ - ಬ್ರಹ್ಮದೇವರನ್ನು ಕುರಿತು, ಮಹತ್ - ದೊಡ್ಡದಾದ, ವಚನಂ- ಮಾತನ್ನು, ಅಬ್ರುವನ್ - ನುಡಿದರು ॥ ೫ ॥ ಹೇಭಗವನ್ - ಎಲೈ ಪೂಜ್ಯನಾದ ಬ್ರಹ್ಮದೇವನೇ, ರಾವಣೋನಾಮ - ರಾವಣನೆಂದು ಪ್ರಸಿದ್ಧನಾದ, ರಾಕ್ಷಸಃ - ರಾಕ್ಷಸನು, ತ್ವತ್ಪ್ರಸಾದೇನ- ನಿನ್ನ ಅನುಗ್ರಹದಿಂದ ಹುಟ್ಟಿದ, ವೀರ್ಯಾತ್ - ಸಾಮರ್ಥ್ಯದ ದಶೆಯಿಂದ, ಸರ್ವಾನ್ - ಸಮಸ್ತರಾದ, ನಃ - ನಮ್ಮನ್ನು, ಬಾಧತೇ - ಬಾಧಿಸುತ್ತಾನೆ, ತಂ - ಆ ರಾವಣನನ್ನು, ಶಾಸಿತುಂ = ಶಿಕ್ಷಿಸಲು, ನಶಕ್ನುಮಃ - ಸಮರ್ಥರಾಗಲಾರೆವು. ॥ ೬ ॥ ಹೇಭಗವನ್ - ಎಲೈ ಷಡ್ಗುಣೈಶ್ವರ್ಯಸಂಪನ್ನನೇ! ಪುರಾ - ಪೂರ್ವದಲ್ಲಿ, ಪ್ರೀತೇನ - ಸಂತುಷ್ಟನಾದ, ತ್ವಯಾ - ನಿನ್ನಿಂದ, ತಸ್ಮೈ- ಆ ರಾವಣನಿಗೆ, ವರಃ - ವರವು, ದತ್ತಃ - ಕೊಡಲ್ಪಟ್ಟಿತು, ನಿತ್ಯಂ - ನಿರಂತರದಲ್ಲಿಯೂ, ತಂಚ- ಆ ರಾವಣನನ್ನೇ, ಮಾನಯಂತಃ - ಪೂಜೆಮಾಡುತ್ತ, ತಸ್ಯ - ಆ ರಾವಣನ, ಸರ್ವಂ - ಎಲ್ಲ ಬಾಧೆಯನ್ನು, ಕ್ಷಮಾಮಹೇ - ಸಹಿಸುತ್ತಿರುವೆವು. ॥೭॥ ದುರ್ಮತಿಃ-ದುಷ್ಟಬುದ್ಧಿಯುಳ್ಳ ರಾವಣನು,ತ್ರೀನ್‌ಲೋಕಾನ್- ಮೂರು ಲೋಕಗಳನ್ನು, ಉದ್ವೇಜಯತಿ - ಹೆದರಿಸುತ್ತಾನೆ. ಉಚ್ಛ್ರಿತಾನ್ - ಉತ್ಕೃಷ್ಟ ಪದವಿಯುಳ್ಳ ಲೋಕಪಾಲಕರನ್ನು, ದ್ವೇಷ್ಟಿ - ದ್ವೇಷಿಸುತ್ತಾನೆ, ತ್ರಿದಶರಾಜಾನಂ - ದೇವರಾಜನಾದ, ಶಕ್ರಂ - ಇಂದ್ರನನ್ನು, ಪ್ರಧರ್ಷಯಿತುಂ - ತಿರಸ್ಕರಿಸಲು, ಇಚ್ಛತಿ - ಅಪೇಕ್ಷಿಸುತ್ತಾನೆ. ॥ ೮ ॥

---

ರ್ಭಾಗಗಳನ್ನು ಯಥಾ ಕ್ರಮವಾಗಿ ತೆಗೆದುಕೊಳ್ಳಲು ಆ ಸದಸ್ಸಿನಲ್ಲಿ ನೇರಿದರು. ॥ ೪ ॥ ಆಗಲಾ ದೇವತೆಗಳೆಲ್ಲರೂ ಲೋಕಕರ್ತನಾದ ಬ್ರಹ್ಮನನ್ನು ಕುರಿತು ॥೫॥ "ಎಲೈ ಭಗವಂತನೇ! ನಿನ್ನ ಪ್ರಸಾದದಿಂದ ರಾವಣನೆಂಬ ರಾಕ್ಷಸನು ಬಹಳ ಶೌರ್ಯದಿಂದ ನಮ್ಮೆಲ್ಲರನ್ನೂ ಬಾಧಿಸುತ್ತಿರುವನು.ಆತನನ್ನು ನಿಗ್ರಹಿಸಲು ನಾವು ಶಕ್ತರಾಗಲಾರೆವು. ॥೬॥ ಎಲೈ ಪೂಜ್ಯನೇ! ಪೂರ್ವದಲ್ಲಿ ಸುಪ್ರೀತನಾದ ನೀನು ಅವನಿಗೆ ಪರಿಪರಿಯಾದ ವರಗಳನ್ನು ಕೊಟ್ಟಿರುವೆ. ಆದಕಾರಣ ನಾವೆಲ್ಲರೂ ಅವನಿಗೆ ಬಹುಮಾನಗಳನ್ನು ಮಾಡುತ್ತ ನಿರಂತರವೂ ಅವನ ಬಾಧೆಗಳನ್ನೆಲ್ಲ ಸಹಿಸಿಕೊಂಡಿರುವೆವು.॥೭॥ಆ ದುರ್ಮಾರ್ಗನಾದ ರಾವಣನು ಲೋಕತ್ರಯವನ್ನು ಹೆದರಿಸುವದಲ್ಲದೆ ದೇವೇಂದ್ರನಾದ ಇಂದ್ರನನ್ನೂ ಹೆದರಿಸಲಿಚ್ಛಿಸುತ್ತಾನೆ. ವರದಾನ

ಯಕ್ಷಾನ್ ಸಗಂಧರ್ವಾನಸುರಾನ್ ಬ್ರಾಹ್ಮಣಾಂಸ್ತಥಾ ॥ ಅತಿಕ್ರಾಮತಿ ದುರ್ಧರ್ಷೋ ವರದಾನೇನಮೋಹಿತಃ ॥೯॥ ನೈನಂಸೂರ್ಯಃಪ್ರತಪತಿ ಪಾರ್ಶ್ವೇ ವಾತಿ ನ ಮಾರುತಃ॥ಚಲೋರ್ಮಿಮಾಲೀ ತಂ ದೃಷ್ಟ್ವಾ ಸಮುದ್ರೋಪಿ ನ ಕಂಪತೇ ॥೧೦॥ ತನ್ಮಹನ್ನೋಭಯಂ ತಸ್ಮಾದ್ರಾಕ್ಷಸಾದ್ಘೋರದರ್ಶನಾತ್ ॥ ವಧಾರ್ಥಂ ತಸ್ಯ ಭಗವನ್ನುಪಾಯಂ ಕರ್ತುಮರ್ಹಸಿ ॥ ೧೧ ॥ ಏವಮುಕ್ತಸ್ಸುರೈಸ್ಸರ್ವೈಶ್ಚಿಂತಯಿತ್ವಾ ತತೋಬ್ರವೀತ್ ॥ ಹಂತಾಯಂ ವಿದಿತಸ್ತಸ್ಯ

ದುರ್ಧರ್ಷಃ - ದುಷ್ಟನಾದ, ಸಃ _ ಆ ರಾವಣನು, ವರದಾನೇನ - ವರಪ್ರದಾನದಿಂದ, ಮೋಹಿತಃ- ಮತ್ತನಾಗಿ, ಋಷೀನ್ - ಋಷಿಗಳನ್ನೂ, ಯಕ್ಷಾನ್- ಯಕ್ಷರನ್ನೂ, ಗಂಧರ್ವಾನ್-ಗಂಧರ್ವರನ್ನೂ, ಅಸುರಾನ್ - ರಾಕ್ಷಸರನ್ನೂ, ತಥಾ - ಹಾಗೆಯೇ, ಬ್ರಾಹ್ಮಣಾನ್ -ಬ್ರಾಹ್ಮಣರನ್ನೂ, ಅತಿಕ್ರಾಮತಿ- ಪೀಡಿಸುತ್ತಾನೆ ॥ ೯ ॥ ಏನಂ - ಈ ರಾವಣನನ್ನು ಕುರಿತು, ಸೂರ್ಯಃ - ಸೂರ್ಯನು, ನಪ್ರತಪತಿ- ತಪಿಸುವದಿಲ್ಲವು, ಮಾರುತಃ - ಗಾಳಿಯು, ಪಾರ್ಶ್ವೇ - ರಾವಣ ಸಮೀಪದಲ್ಲಿ, ನವಾತಿ-ಬೀಸುವ ದಿಲ್ಲ, ಚಲೋರ್ಮಿಮಾಲೀ, ಚಲ - ಕದಲುತ್ತಿರುವ, ಊರ್ಮಿಮಾಲೀ - ತರಂಗ ಪಙ್ತಿಗಳುಳ್ಳ, ಸಮುದ್ರೋಪಿ - ಸಮುದ್ರನೂ, ತಂ - ಆ ರಾವಣನನ್ನು, ದೃಷ್ಟ್ವಾ - ಕಂಡು, ನಕಂಪತೇ- ಚಲಿಸುವದಿಲ್ಲ, ॥ ೧೦ ॥ ತತ್ - ಆ ಕಾರಣ, ನಃ - ನಮಗೆ, ಘೋರದರ್ಶನಾತ್ - ಭಯಂಕರ ವಾದ ನೋಡುವಿಕೆಯುಳ್ಳ, ತಸ್ಮಾದ್ರಾಕ್ಷಸಾತ್ - ಆ ರಕ್ಕಸನ ದೆಶೆಯಿಂದ, ಮಹದ್ಭಯಂ-ಮಹಾ ಭಯವು, ಉತ್ಪನ್ನಂ = ಹುಟ್ಟಿತು, ಹೇಭಗವನ್ - ಎಲೈ ಬ್ರಹ್ಮದೇವನೇ! ತಸ್ಯ - ಆ ರಾವಣನ, ವಧಾರ್ಥಂ - ಸಂಹಾರಕ್ಕೋಸುಗ, ಉಪಾಯಂ - ಸಾಧನೆಯನ್ನು, ಕರ್ತುಂ- ಮಾಡಲು, ಅರ್ಹಸಿ- ಯೋಗ್ಯನಾಗು, ಏವಂ - ಈ ಪರಿಯಾಗಿ, ಸರ್ವೈಃ - ಸಮಸ್ತ, ಸುರೈಃ - ದೇವತೆಗಳಿಂದ, ಉಕ್ತಃ- ಹೇಳಲ್ಪಟ್ಟ ಬ್ರಹ್ಮನು, ಚಿಂತಯಿತ್ವಾ - ಆಲೋಚಿಸಿ , ತತಃ - ಬಳಿಕ, ಹಂತ - ಆಶ್ಚರ್ಯವು, ದುರಾತ್ಮನಃ - ಬಲಿಷ್ಠನಾದ, ತಸ್ಯ-ಆ ರಾವಣನಿಗೆ,ಇಯಂ-ಇದು. ವಧೋಪಾಯಂ-ಸಂಹಾರೋಪಾಯವು

ಮೋಹಿತನಾದುದರಿಂದ ತಿರಸ್ಕರಿಸಲಸಾಧ್ಯನಾದ ಆ ರಾವಣನು,ಋಷಿಗಳನ್ನೂ,ಯಕ್ಷರನ್ನೂ, ಗಂಧರ್ವರನ್ನೂ, ದೇವತೆಗಳನ್ನೂ, ಹಾಗೆಯೇ ಬ್ರಾಹ್ಮಣರನ್ನೂ ಬಾಧಿಸುವನು. ॥ ೯ ॥ ಆ ರಾವಣನನ್ನು ಕಂಡು ಸೂರ್ಯನು ಮಂದಕಿರಣಗಳುಳ್ಳವನಾಗುವನು! ವಾಯುವು ಅವನ ಕಡೆ ಬೀಸುವುದೇ ಇಲ್ಲವು. ಚಂಚಲವಾದ ತರಂಗಗಳುಳ್ಳ ಸಮುದ್ರನೂ ಅವನನ್ನು ಕಂಡು ಗಡಗಡನೆ ನಡುಗುತ್ತಿರುವನು.॥೧೦॥ಆದಕಾರಣ ಮಹಾಕ್ರೂರದೃಷ್ಟಿಯುಳ್ಳ ಆ ರಾವಣನೆಂಬ ರಾಕ್ಷಸನ ದೆಶೆಯಿಂದ ನಮಗೆಲ್ಲ ಮಹಾ ಭೀತಿಯುಂಟಾಗಿರುವದು. ಎಲೈ ಭಗವಂತನೇ! ಅವನ ನಾಶಕ್ಕೇನಾದರೂ ಒಂದುಪಾಯವನ್ನುಮಾಡಲು ಶಕ್ತನಾಗಿರುವೆ" ಎಂದರು. ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಚತುರ್ಮುಖಬ್ರಹ್ಮನು ಸ್ವಲ್ಪಕಾಲ ಯೋಚಿಸಿಂತೆಂದನು॥೧೧॥"ಆ ದುರಾತ್ಮನ ಸಂಹಾರಕ್ಕೆ ಇದೇ ಉಪಾಯವು. ಮತ್ತಾವದೂ ಇಲ್ಲವು. ಆ ರಾವಣನು ಗಂಧರ್ವ, ಯಕ್ಷ, ದೇವ, ದಾನವ, ರಾಕ್ಷಸರಿಂದ ಅವಧ್ಯನಾಗಿರಬೇಕೆಂದು ಪ್ರಾರ್ಥಿಸಲು ಹಾಗೆಯೇ

ವಧೋಪಾಯೋ ದುರಾತ್ಮನಃ ॥ ೧೨ ॥ ತೇನ ಗಂಧರ್ವ ಯಕ್ಷಾಣಾಂ ದೇವ ದಾನವ ರಕ್ಷಸಾಂ ॥ ಅವಧ್ಯೋಽಸ್ಮೀತಿವಾಗುಕ್ತಾ ತಥೇತ್ಯುಕ್ತಂಚ ತನ್ಮಯಾ ॥೧೩॥ ನಾಕೀರ್ತಯದವಜ್ಞಾನಾತ್ತದ್ರಕ್ಷೋ ಮಾನುಷಾಂಸ್ತದಾ ॥ ತಸ್ಮಾತ್ಸಮಾನುಷಾದ್ವಧ್ಯೋಽಮೃತ್ಯುರ್ನಾನ್ಯೋಽಸ್ಯವಿದ್ಯತೇ॥೧೪॥ ಏತಚ್ಛ್ರುತ್ವಾಪ್ರಿಯಂ ವಾಕ್ಯಂ ಬ್ರಹ್ಮಣಾ ಸಮುದಾಹೃತಂ ॥ ದೇವಾಮಹರ್ಷಯ ಸ್ಸರ್ವೇ ಪ್ರಹೃಷ್ಟಾಸ್ತೇ ಭವಂಸ್ತದಾ ॥ ೧೫ ॥ ಏತಸ್ಮಿ ನ್ನಂತರೇ ವಿಷ್ಣು ರುಪಯಾತೋ ಮಹಾದ್ಯುತಿಃ ॥ ಶಂಖ ಚಕ್ರ ಗದಾಪಾಣಿಃ ಪೀತವಾಸಾ ಜಗತ್ಪತಿಃ ॥೧೬॥

ವಿದಿತಃ- ತಿಳಿಯಲ್ಪಟ್ಟಿತು. ಇತಿ- ಇಂತೆಂದು, ಅಬ್ರವೀತ್-ನುಡಿದನು. ॥ ೧೧ ೧೨ ॥ ತೇನ- ಆ ರಾವಣನಿಂದ, ಗಂಧರ್ವಯಕ್ಷಾಣಾಂ, ಗಂಧರ್ವ - ಗಂಧರ್ವರಿಗೂ, ಯಕ್ಷಾಣಾಂ - ಯಕ್ಷರಿಗೂ, ದೇವದಾನವರಕ್ಷಸಾಂ, ದೇವ - ದೇವತೆಗಳಿಗೂ, ದಾನವ-ದಾನವರಿಗೂ, ರಕ್ಷಸಾಂ-ರಾಕ್ಷಸರಿಗೂ, ಅವಧ್ಯಃ - ವಧಾರ್ಹನಲ್ಲದವನು, ಅಸ್ಮೀತಿ - ಆಗುವನೆಂಬ, ವಾಕ್-ಮಾತು, ಉಕ್ತಾ - ಹೇಳಲ್ಪಟ್ಟಿತು, ತತ್ ಅದು, ತಥೇತಿ- ಹಾಗೆಯೇ ಸರಿಯೆಂದು, ಮಯಾಚ- ನನ್ನಿಂದಲೂ, ಉಕ್ತಂ-ಹೇಳಲ್ಪಟ್ಟಿತು ॥ ೧೩ ॥ ತದಾ-ಆ ಕಾಲದಲ್ಲಿ, ತದ್ರಕ್ಷಃ-ಆ ರಾಕ್ಷಸನು, ಅವಜ್ಞಾನಾತ್-ಅವಮಾನದ ದೆಶೆಯಿಂದ, ಮನುಷ್ಯಾನ್ - ಮನುಷ್ಯರನ್ನು, ನಾಕೀರ್ತಯತ್-ಹೇಳಲಿಲ್ಲ, ತಸ್ಮಾತ್-ಆದಕಾರಣ, ಸಃ ಆ ರಾವಣನು, ಮಾನುಷಾತ್-ಮನುಷ್ಯನಿಂದ, ವಧ್ಯಃ- ವಧಾರ್ಹನು. ಅನ್ಯಃ-ಮತ್ತೊಬ್ಬನು, ಅಸ್ಯ-ಈ ರಾವಣನಿಗೆ, ಮೃತ್ಯುಃ-ಮಾರಕನು, ನವಿದ್ಯತೇ - ಇರುವದಿಲ್ಲ ॥ ೧೪ ॥ ಬ್ರಹ್ಮಣಾ-ಬ್ರಹ್ಮನಿಂದ, ಸಮುದಾಹೃತಂ- ಹೇಳಲ್ಪಟ್ಟ, ಪ್ರಿಯಂ-ಇಷ್ಟವಾದ, ಏತದ್ವಾಕ್ಯಂ- ಈ ಮಾತನ್ನು, ಶ್ರುತ್ವಾ-ಕೇಳಿ, ತದಾ-ಆಗ, ಸರ್ವೇ-ಸಮಸ್ತರಾದ, ತೇದೇವಾಃ-ಆ ದೇವತೆಗಳೂ,ಮಹರ್ಷಯಶ್ಚ-ಮಹರ್ಷಿಗಳೂ, ಪ್ರಹೃಷ್ಟಾಃ - ಸಂತೋಷಗೊಂಡವರು, ಅಭವನ್-ಆದರು ॥ ೧೫ ॥ ಏತಸ್ಮಿನ್ನಂತರೇ-ಇಷ್ಟರೊಳಗೆ, ಮಹಾದ್ಯುತಿಃ-ಮಹಾಪ್ರಕಾಶವುಳ್ಳ, ಶಂಖಚಕ್ರಗದಾಪಾಣಿಃ,ಶಂಖ-ಶಂಖವೂ, ಚಕ್ರ-ಚಕ್ರವೂ, ಗದಾ-ಗದೆಯೂ, ಪಾಣಿಃ-ಹಸ್ತಗಳಲ್ಲಿವುಳ್ಳ, ಪೀತವಾಸಾಃ-ಪೀತಾಂಬರನಾದ, ಜಗತ್ಪತಿಃ-ಲೋಕಸ್ವಾಮಿಯಾದ, ವಿಷ್ಣುಃ-ವಿಷ್ಣುವು, ಉಪಯಾತಃ-ಬಂದವನಾಗಿ, ಬ್ರಹ್ಮಣಾಚ-ಬ್ರಹ್ಮನೊಡನೆ, ಸಮಾಗಮ್ಯ-ಸೇರಿ, ತತ್ರ-ಆ ಸಭೆಯಲ್ಲಿ,ಸಮಾಹಿತಃ-ಸಮಾಧಾನಚಿತ್ತನಾಗಿ, ತಸ್ಥೌ-ನಿಂತನು ॥ ೧೬ ॥ ಸರ್ವೇ-ಸಮಸ್ತರಾದ, ಸುರಾಃ-ದೇವತೆಗಳು, ತಂ ಆ ಶ್ರೀಮಹಾ

ಆಗಲೆಂದು ವರವನ್ನು ಕೊಟ್ಟೆನು. ಆದರೆ ಆ ರಾಕ್ಷಸನು ಅವಮಾನಕ್ಕಾಗಿ ಮನುಷ್ಯರಿಂದ ಅವಧ್ಯತೆಯನ್ನು ಕೇಳಲಿಲ್ಲವು. ಆದಕಾರಣ ಈತನಿಗೆ ಮನುಷ್ಯರಿಂದ ಮೃತ್ಯುವುಂಟಾಗುವದೇ ಹೊರ್ತು ಇತರರಿಂದ ಆಗಲಾರದು.” ಸಾಕ್ಷಾಚ್ಚತುರ್ಮುಖನು ಇಂತು ನುಡಿಯಲು, ದೇವತೆಗಳೂ, ಮಹರ್ಷಿಗಳೂ ಸಂತುಷ್ಟಾಂತರಂಗವುಳ್ಳವರಾದರು. ॥೧೨-೧೫॥ ಇಷ್ಟರಲ್ಲಿಯೇ ಜಗತ್ಪತಿಯಾದ ಸಾಕ್ಷಾದ್ವಿಷ್ಣುವು ಶಂಖ, ಚಕ್ರ,ಗದೆಗಳೆಂಬ ಆಯುಧಗಳನ್ನು ಹಿಡಿದಿರುವವನಾಗಿಯೂ, ಪೀತಾಂಬರಧಾರಿಯಾಗಿಯೂ,ಏಕಕಾಲದಲ್ಲಿ ಉತ್ಪನ್ನರಾದ ಕೋಟಿಸೂರ್ಯರ ಕಾಂತಿಯಂತೆ ಕಂಗೊಳಿಸುತ್ತಿರುವ ದೇಹಕಾಂತಿಯುಳ್ಳವನಾಗಿಯೂ, ತ್ವರೆಯಾಗಿ ಬಂದು ಬ್ರಹ್ಮ

ಬ್ರಹ್ಮಣಾಚ ಸಮಾಗಮ್ಯ ತತ್ರತಸ್ಥಾ ಸಮಾಹಿತಃ || ತಮಬ್ರುವನ್ ಸುರಾ ಸ್ಸರ್ವೇ ಸಮಭಿಷ್ಟೂಯಸನ್ನತಾಃ || ೧೭ || ತ್ವಾಂ ನಿಯೋಕ್ಷ್ಯಾಮಹೇ ವಿಷ್ಣೋ ಲೋಕಾನಾಂ ಹಿತಕಾಮ್ಯಯಾ || ರಾಜ್ಞೋ ದಶರಥಸ್ಯತ್ವಮಯೋಧ್ಯಾಧಿಪತೇಃ ಪ್ರಭೋಃ||೧೮|| ಧರ್ಮಜ್ಞಸ್ಯ ವದಾನ್ಯಸ್ಯ ಮಹರ್ಷಿ ಸಮತೇಜಸಃ||ತಸ್ಯಭಾರ್ಯಾಸು ತಿಸೃಷು ಹ್ರೀ ಶ್ರೀ ಕೀರ್ತ್ಯುಪಮಾಸುಚ ||೧೯|| ವಿಷ್ಣೋಪುತ್ರತ್ವಮಾಗಚ್ಛಕೃತ್ವಾ ತ್ಮಾನಂ ಚತುರ್ವಿಧಂ || ತತ್ರ ತ್ವಂ ಮಾನುಷೋಭೂತ್ವಾ ಪ್ರವೃದ್ಧಂ ಲೋಕ ಕಂಟಕಂ||೨೦||ಅವಧ್ಯಂದೈವತೈ ರ್ವಿಷ್ಣೋಸಮರೇಜಹಿರಾವಣಂ||ಸಹಿದೇವಾಂಶ್ಚ

---

ವಿಷ್ಣುವನ್ನು, ಸಮಭಿಷ್ಟೂಯ-ಚನ್ನಾಗಿ ಸ್ತೋತ್ರಮಾಡಿ, ಸನ್ನತಾಃ ಬಹಳ ನಮ್ರರಾಗಿ. ಹೇವಿಷ್ಣೋ-ಎಲೈ ವಿಷ್ಣುವೇ ! ಲೋಕಾನಾಂ-ಲೋಕಗಳಿಗೆ, ಹಿತಕಾಮ್ಯಯಾ- ಹಿತವನ್ನುಂಟುಮಾಡಲೋಸುಗ, ತ್ವಾಂ-ನಿನ್ನನ್ನು, ನಿಯೋಕ್ಷ್ಯಾಮಹೇ - ನಮ್ಮ ಪ್ರಾರ್ಥನೆಯಿಂದ ಉತ್ಸಾಹಯುಕ್ತನನ್ನಾಗಿ ಮಾಡುತ್ತೇವೆ. || ೧೭ || ಹೇ ವಿಷ್ಣೋ-ಎಲೈ ಶ್ರೀಮಹಾವಿಷ್ಣುವೇ ತ್ವಂ - ನೀನು, ಅಯೋಧ್ಯಾಧಿಪತೇಃ - ಅಯೋಧ್ಯಾಪಟ್ಟಣಕ್ಕೆ ಅಧಿಪತಿಯಾದ, ಪ್ರಭೋಃ-ಸಮರ್ಥನಾದ, ಧರ್ಮಜ್ಞಸ್ಯ - ಧರ್ಮಿಷ್ಠನಾದ, ವದಾನ್ಯಸ್ಯ-ದಾತನಾದ, ಮಹರ್ಷಿಸಮತೇಜಸಃ, ಮಹರ್ಷಿ ಮಹಾ ಋಷಿಗಳಿಗೆ, ಸಮ-ಸಮಾನವಾದ, ತೇಜಸಃ-ವರ್ಚಸ್ಸುಳ್ಳ, ತಸ್ಯ-ಪ್ರಸಿದ್ಧನಾದ, ದಶರಥಸ್ಯ - ದಶರಥನೆಂಬ, ರಾಜ್ಞಃ-ಅರಸಿನ ಸಂಬಂಧಿಗಳಾದ, ಹ್ರೀಶ್ರೀಕೀರ್ತ್ಯುಪಮಾಸು, ಹ್ರೀ-ಲಜ್ಜಾಭಿಮಾನದೇವತೆಗೂ, ಶ್ರೀ-ಲಕ್ಷ್ಮೀದೇವಿಗೂ, ಕೀರ್ತಿ ಕೀರ್ತಿಗೂ, ಉಪಮಾಸು-ಸಮಾನರಾದ, ತಿಸೃಷು-ಮೂವರಾದ, ಭಾರ್ಯಾಸುಚ-ಹೆಂಡತಿಯರಲ್ಲಿಯೂ ಸಹ, ತ್ವಂ-ನೀನು, ಆತ್ಮಾನಂ-ನಿನ್ನನ್ನು, ಚತುರ್ವಿಧಂ - ನಾಲ್ಕುವಿಧಗಳುಳ್ಳವನನ್ನಾಗಿ, ಕೃತ್ವಾ ಮಾಡಿ, ಪುತ್ರತ್ವಂ-ಪುತ್ರಭಾವವನ್ನು, ಆಗಚ್ಛ ಹೊಂದು ||೧೮-೧೯|| ಹೇವಿಷ್ಣೋ-ಎಲೈ ಶ್ರೀಮಹಾವಿಷ್ಣುವೇ ! ತತ್ರ-ಆ ಅಯೋಧ್ಯಾಪಟ್ಟಣದಲ್ಲಿ, ತ್ವಂ-ನೀನು, ಮಾನುಷಃ-ಮನುಷ್ಯನು, ಭೂತ್ವಾ-ಆಗಿ, ಲೋಕಕಂಟಕಂ-ಲೋಕಕ್ಕೆ ಶತೃವಾದ, ಪ್ರವೃದ್ಧಂ-ವೃದ್ಧಿಗೊಂಡ, ದೇವತೈಃ-ದೇವತೆಗಳಿಂದ, ಅವಧ್ಯಂ-ವಧಿಸಲಸಾಧ್ಯನಾದ, ರಾವಣಂ-ರಾವಣನನ್ನು, ಸಮರೇ-ಕಾಳಗದಲ್ಲಿ, ಜಹಿ-ಸಂಹರಿಸು ||೨೦|| ಹಿ-ಯಾವಕಾರಣದಿಂದ, ಮೂರ್ಖಃ-ಮುಷ್ಕರವುಳ್ಳ, ರಾಕ್ಷಸಃ - ರಾಕ್ಷಸನಾದ,

---

ನಿಂದೊಡಗೂಡಿ ಆ ಸದಸ್ಸಿನಲ್ಲಿ ನಿಲ್ಲಲು, ದೇವತೆಗಳೆಲ್ಲರೂ ವಿಧೇಯರಾಗಿ ಆ ಮಹಾವಿಷ್ಣುವನ್ನು ಸ್ತುತಿಸಿ ಇಂತೆಂದರು. ||೧೭|| ಎಲೈ ಮಹಾವಿಷ್ಣುವೇ ! ಲೋಕಗಳಿಗೆಲ್ಲ ಹಿತವನ್ನುಂಟುಮಾಡಲು ನಿನ್ನನ್ನು ಪ್ರೋತ್ಸಾಹಗೊಳಿಸುವೆವು. ||೧೬-೧೭|| ಎಲೈ ಪ್ರಭುವೇ ! ಅಯೋಧ್ಯಾಪುರಿಗಧಿಪತಿಯಾಗಿಯೂ, ಧರ್ಮಜ್ಞನಾಗಿಯೂ, ಬಹುದಾತನಾಗಿಯೂ, ಮಹರ್ಷಿಗೆ ಸಮಾನವಾದ ಮಹಾತೇಜಸ್ಸುಳ್ಳವನಾಗಿಯೂ, ಇರುವ ಆ ದಶರಥರಾಜನ ಹ್ರೀ, ಶ್ರೀ, ಕೀರ್ತಿಗಳಿಗೆ ಸದೃಶರಾದ ಕೌಸಲ್ಯಾ, ಸುಮಿತ್ರಾ, ಕೈಕೇಯಿಗಳೆಂಬ ಭಾರ್ಯೆಯರಲ್ಲಿ ಉಪಕರಣಸಹಿತವಾದ, ನಿನ್ನನ್ನು ನಾಲ್ಕು ವಿಧವಾಗಿ ಮಾಡಿಕೊಂಡು ಪುತ್ರತ್ವವನ್ನು ಹೊಂದು ||೧೮-೧೯|| ಎಲೈ ಮಹಾ ವಿಷ್ಣುವೇ ! ನೀನು ಆ ದಶರಥನ ಭಾರ್ಯಾತ್ರಯದಲ್ಲಿ ಮಾನುಷಾವತಾರ ಭೂತನಾಗಿ ಲೋಕಕಂಟಕನಾಗಿಯೂ, ದೇವಾಸುರರಿಂದಲೂ, ಕೊಲ್ಲಲಸಾಧ್ಯ

ಗಂಧರ್ವಾನ್ ಸಿದ್ಧಾಂಶ್ಚ ಮುನಿಸತ್ತಮಾನ್ ॥ ೨೧ ॥ ರಾಕ್ಷಸೋ ರಾವಣೋ
ಮೂರ್ಖೋವೀರ್ಯೋತ್ಸೇಕೇನಬಾಧತೇ॥ಋಷಯಶ್ಚತತಸ್ತೇನ ಗಂಧರ್ವಾಪ್ಸರಸ
ಸ್ತಥಾ ॥೨೨॥ ಕ್ರೀಡಂತೋ ನಂದನವನೇ ಕ್ರೂರೇಣ ಕಿಲ ಹಿಂಸಿತಾಃ॥ವಧಾರ್ಥಂ
ವಯಮಾಯಾತಾ ಸ್ತಸ್ಯವೈ ಮುನಿಭಿಸ್ಸಹ ॥೨೩॥ ಸಿದ್ಧಗಂಧರ್ವ ಯಕ್ಷಾಶ್ಚ
ತತಸ್ತ್ವಾಂ ಶರಣಂ ಗತಾಃ ॥ ತ್ವಂಗತಿಃ ಪರಮಾದೇವ ಸರ್ವೇಷಾಂನಃ
ಪರಂತಪ ॥೨೪॥ ವಧಾಯದೇವ ಶತ್ರೂಣಾಂ ನೃಣಾಂ ಲೋಕೇ ಮನಃ ಕುರು॥

ಸರಾವಣಃ-ಆ ರಾವಣನು, ವೀರ್ಯೋತ್ಸೇಕೇನ - ಪರಾಕ್ರಮದಿಂದುಂಟಾದ ಗರ್ವದಿಂದ, ದೇವಾಶ್ಚ-ದೇವತೆಗಳನ್ನೂ, ಗಂಧರ್ವಾನ್-ಗಂಧರ್ವರನ್ನೂ,ಸಿದ್ಧಾಂಶ್ಚ-ಸಿದ್ಧಪುರುಷರನ್ನೂ, ಮುನಿಸತ್ತಮಾಂಶ್ಚ-ಮುನಿಶ್ರೇಷ್ಠರನ್ನೂ, ಬಾಧತೇ ಪೀಡಿಸುತ್ತಾನೆ. ತತ್-ಆ ಕಾರಣ, ರಾವಣಂ- ರಾವಣಾಸುರನನ್ನು, ಜಹಿ-ಸಂಹರಿಸು ॥ ೨೧ ॥ ಕ್ರೂರೇಣ-ಉಗ್ರಸ್ವಭಾವವುಳ್ಳ, ತೇನ-ಆ ರಾವಣನಿಂದ, ನಂದನವನೇ ದೇವೇಂದ್ರೋದ್ಯಾನದದಲ್ಲಿ,ಕ್ರೀಡಂತಃ-ವಿಹರಿಸುತ್ತಿರುವ, ಋಷಯಶ್ಚ-ಋಷಿಗಳೂ,ತಥಾ-ಹಾಗೆಯೆ, ಗಂಧರ್ವಾಪ್ಸರಸಃ - ಗಂಧರ್ವರೂ, ಅಪ್ಸರಸ್ತ್ರೀಯರೂ, ತತಃ - ಅದೇಗರ್ವದದಿಂದ, ಹಿಂಸಿತಾಃ-ಕಿಲ-ಬಾಧಿಸಲ್ಪಟ್ಟರಷ್ಟೆ ॥ ೨೨ ॥ ತಸ್ಯ-ಆ ರಾವಣನ, ವಧಾರ್ಥಂ-ಸಂಹಾರಾರ್ಥವಾಗಿ, ಮುನಿಭಿಸ್ಸಹ-ಋಷಿಗಳೊಡನೆ,ಸಿದ್ಧಗಂಧರ್ವಯಕ್ಷಾಶ್ಚ-ಸಿದ್ಧರೂ,ಗಂಧರ್ವರೂ,ಯಕ್ಷರೂ, ವಯಂಚ-ನಾವೂ, ಆಯಾತಾವೈ-ಬಂದಿರುವೆವಷ್ಟೆ, ತತಃ-ಆ ರಾವಣನವಧೆಗೋಸುಗ, ತ್ವಾಂ-ನಿನ್ನನ್ನು, ಶರಣಂ-ರಕ್ಷಕನನ್ನಾಗಿ, ಗತಾಃ-ಹೊಂದಿರುವೆವು ॥ ೨೩ ॥ ಹೇದೇವ - ಎಲೈ ಸ್ವಾಮಿಯೇ ! ಹೇ ಪರಂತಪ ಎಲೈ ಶತ್ರು ಸಂಹಾರಕನೇ ! ಸರ್ವೇಷಾಂ-ಸಮಸ್ತರಾದ, ನಃ-ನಮಗೆ, ತ್ವಂ-ನೀನು, ಪರಮಾಗತಿಃ-ಉತ್ಕೃಷ್ಟವಾದ ಉಪಾಯವು, (ಗೋ) ಆಪತ್ಕಾಲದಲ್ಲಿ ಗಮ್ಯಸ್ಥಾನವಾಗಿರುವೆ,ದೇವಶತ್ರೂಣಾಂ-ದೇವತೆಗಳಿಗೆ ಶತ್ರುಗಳಾದ ರಾಕ್ಷಸರ, ವಧಾಯ-ಸಂಹಾರಕ್ಕೋಸ್ಕರ, ನೃಣಾಂ ಲೋಕೇ-ಮನುಷ್ಯಲೋಕದಲ್ಲಿ, ಅವತರಿತುಂ-ಅವತಾರ ಮಾಡಲು, ಮನಃ-ಮನವನ್ನು, ಕುರು-ಮಾಡು, ಇತಿ-ಇಂತೆಂದು, ಅಬ್ರುವನ್-ನುಡಿದನು ॥ ೨೪ ॥ ಏವಂ-ಹೀಗೆ, ಉಕ್ತಃ - ಹೇಳಲ್ಪಟ್ಟ, ಸರ್ವಲೋಕನಮಸ್ಕೃತಃ,ಸರ್ವಲೋಕ-ಸಮಸ್ತಜನರಿಂದಲೂ,ನಮಸ್ಕೃತಃ-ವಂದಿಸಲ್ಪಟ್ಟ, ತ್ರಿದಶಪುಂಗವಃ-ದೇವತಾ

ನಾಗಿ ಬೆಳೆಯುತ್ತಿರುವ ಆ ರಾವಣನನ್ನು ಸಂಗ್ರಾಮದಲ್ಲಿ ನಿಗ್ರಹಿಸು. ॥೨೦॥ ಮೂರ್ಖನಾದ ಆ ರಾವಣನೆಂಬರಾಕ್ಷಸನು ಗಂಧರ್ವರನ್ನೂ, ಸಿದ್ಧರನ್ನೂ, ಮುನಿಶ್ರೇಷ್ಠರನ್ನೂ ಕೂಡ ವೀರ್ಯೋತ್ಸೇಕದಿಂದ ಬಾಧಿಸುತ್ತಿರುವನು. ॥ ೨೧ ॥ ಇದಲ್ಲದೆ ಆ ರಾವಣನಿಂದ ಋಷಿಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಸಹ ನಂದನವನದಲ್ಲಿ ಕ್ರೀಡಿಸುತ್ತಿರುವರಾಗಿ ಹಿಂಸಿಸಲ್ಪಟ್ಟಿರುವರಷ್ಟೆ ! ಆದಕಾರಣ ವಧಾರ್ಥವಾಗಿ ಸಿದ್ಧ, ಗಂಧರ್ವ, ಯಕ್ಷರಾದ ನಾವೆಲ್ಲರೂ ಮುನಿಗಳಿಂದೊಡಗೂಡಿ ನಿನ್ನನ್ನೇ ಶರಣು ಹೊಂದಿರುವೆವು. ॥೨೨-೨೩ ॥ ಎಲೈ ಶತ್ರುಸಂಹಾರಕನಾದ ದೇವನೇ! ನಮಗೆಲ್ಲ ನೀನೆ ಗತಿ, ನಿನ್ನನ್ನು ಬಿಟ್ಟರೆ ಮತ್ತಾರೂ ಇಲ್ಲವು. ರಾವಣ, ಇಂದ್ರಜಿತ್ತು,ಲವಣಾಸುರ, ಗಂಧರ್ವಾದಿಗಳ ವಧಾರ್ಥವಾಗಿ ಅವತರಿಸಲು, ಮನಮಾಡು" ಎಂದು ಪ್ರಾರ್ಥಿಸಿದರು.ಆ ದೇವೇಶನೂ, ದೇವಶ್ರೇಷ್ಠನೂ, ಸರ್ವ ಜನರಿಂದಲೂ

ಏವಮುಕ್ತಸ್ತುದೇವೇಶೋ ವಿಷ್ಣುಸ್ತ್ರಿದಶಪುಂಗವಃ||೨೫||ಪಿತಾಮಹಪುರೋಗಾಂ ಸ್ತಾನ್ ಸರ್ವಲೋಕ ನಮಸ್ಕೃತಃ || ಅಬ್ರವೀತ್ತ್ರಿದಶಾನ್ ಸರ್ವಾನ್ ಸಮೇತಾನ್ ಧರ್ಮಸಂಹಿತಾನ್ ||೨೬|| ಭಯಂ ತ್ಯಜತ ಭದ್ರಂವೋ ಹಿತಾರ್ಥಂ ಯುಧಿರಾವಣಂ||ಸಪುತ್ರಪೌತ್ರಂಸಾಮಾತ್ಯಂಸಮಿತ್ರಜ್ಞಾತಿಬಾಂಧವಂ||೨೭||ಹತ್ವಾ ಕ್ರೂರಂ ದುರಾತ್ಮಾನಂ ದೇವರ್ಷೀಣಾಂ ಭಯಾವಹಂ|| ದಶವರ್ಷ ಸಹಸ್ರಾಣಿ ದಶವರ್ಷ ಶತಾನಿಚ||೨೮||ವತ್ಸ್ಯಾಮಿ ಮಾನುಷೇಲೋಕೇ ಪಾಲಯನ್ಪೃಥಿವೀಮಿಮಾಂ|| ಏವಂದತ್ವಾವರಂದೇವೋ ದೇವಾನಾಂ ವಿಷ್ಣುರಾತ್ಮವಾನ್||೨೯||ಮಾನುಷೇ ಚಿಂತಯಾಮಾಸ ಜನ್ಮಭೂಮಿಮಥಾತ್ಮನಃ || ತತಃಪದ್ಮಪಲಾಶಾಕ್ಷಃಕೃತ್ವಾತ್ಮಾನಂ

ಶ್ರೇಷ್ಠನಾದ, ದೇವೇಶಃ-ದೇವಸ್ವಾಮಿಯಾದ, ವಿಷ್ಣುಃ - ಶ್ರೀ ಮಹಾವಿಷ್ಣುವಾದರೆ, ಪಿತಾಮಹ ಪುರೋಗಾನ್,ಪಿತಾಮಹ-ಬ್ರಹ್ಮನೇ, ಪುರೋಗಾನ್-ಮೊದಲಾಗಿವುಳ್ಳ, ಸಮೇತಾನ್-ಗುಂಪುಸೇರಿದ, ಧರ್ಮಸಂಹಿತಾನ್-ಸ್ವಧರ್ಮದಿಂದ ಕೂಡಿಕೊಂಡಿರುವ, ಸರ್ವಾನ್-ಸಮಸ್ತರಾದ,ತಾಂ ಸ್ತ್ರಿದಶಾನ್-ಆ ದೇವತೆಗಳನ್ನು ಕುರಿತು, ವಃ-ನಿಮಗೆ, ಭದ್ರಂ-ಶುಭವು, ಅಸ್ತು-ಆಗಲಿ, ಭಯಂ - ಭಯವನ್ನು, ತ್ಯಜತ-ಬಿಡಿರಿ,|| ೨೫-೨೬ || ವಃ-ನಿಮಗೆ, ಹಿತಾರ್ಥಂ-ಹಿತನಿಮಿತ್ತವಾಗಿ, ದೇವರ್ಷೀಣಾಂ-ದೇವತೆಗಳಿಗೂ ಋಷಿಗಳಿಗೂ, ಭಯಾವಹಂ-ಭಯಂಕರನಾದ, ಸಮಿತ್ರಜ್ಞಾತಿಬಾಂಧವಂ-ಮಿತ್ರರಿಂದಲೂ, ಜ್ಞಾತಿಗಳಿಂದಲೂ,ಬಂಧುಗಳಿಂದಲೂ ಕೂಡಿಕೊಂಡಿರುವ,ಸಾಮಾತ್ಯಂ-ಮಂತ್ರಿಗಳಿಂದೊಡಗೂಡಿದ, ಸಪುತ್ರಪೌತ್ರಂ-ಮಕ್ಕಳು ಮಮ್ಮಕ್ಕಳಿಂದೊಡಗೂಡಿದ, ದುರಾತ್ಮಾನಂ ದುಷ್ಟಬುದ್ಧಿಯುಳ್ಳ,ಕ್ರೂರಂ-ಕ್ರೂರನಾದ, ರಾವಣಂ-ರಾವಣನನ್ನು, ಯುಧಿ-ಕಾಳಗದಲ್ಲಿ,ಹತ್ವಾ-ಕೊಂದು, ಮಾನುಷೇಲೋಕೇ-ಮನುಷ್ಯಲೋಕದಲ್ಲಿ, ದಶವರ್ಷಸಹಸ್ರಾಣಿ-ಹತ್ತುಸಹಸ್ರವರುಷಗಳು, ದಶವರ್ಷಶತಾನಿಚ- ಒಂದು ಸಾವಿರ ವರುಷಗಳೂ, ಇಮಾಂಪೃಥ್ವೀಂ-ಈ ಭೂಮಿಯನ್ನು, ಪಾಲಯನ್- ಪರಿಪಾಲನೆಮಾಡುತ್ತ, ವತ್ಸ್ಯಾಮಿ-ಇರುವೆನು, ಇತಿ-ಇಂತೆಂದು, ಅಬ್ರವೀತ್-ನುಡಿದನು ||೨೭-೨೮|| ಆತ್ಮವಾನ್-ಸ್ವರೂಪಜ್ಞನಾದ, (ಗೋ) ಆತ್ಮವಾನ್-ಸರ್ವಾತ್ಮಶೇಷಿಯಾದ, ವಿಷ್ಣುರ್ದೇವಃ - ಶ್ರೀಮಹಾವಿಷ್ಣುವು, ದೇವಾನಾಂ-ದೇವತೆಗಳಿಗೆ, ಏವಂ-ಈರೀತಿ, ವರಂ-ವರವನ್ನು, ದತ್ವಾ-ಕೊಟ್ಟು, ಅಥ-ಬಳಿಕ,ಮಾನುಷೇ-ಮನುಷ್ಯರಲ್ಲಿ, ಆತ್ಮನಃ-ತನಗೆ, ಜನ್ಮಭೂಮಿಂ-ಉತ್ಪತ್ತಿಸ್ಥಾನವನ್ನು, ಚಿಂತಯಾಮಾಸ-ಆಲೋಚಿಸಿದನು ||೨೯|| ತತಃ-ಅನಂತರದಲ್ಲಿ, ಪದ್ಮಪಲಾಶಾಕ್ಷಃ-ಕಮಲಪತ್ರಗಳಂತಿರುವ ನೇತ್ರಗಳುಳ್ಳ

ನಮಸ್ಕರಿಸಲ್ಪಡುತ್ತಿರುವವನೂ, ಆದ ಮಹಾ ವಿಷ್ಣುವು ಶರಣಾಗತರಕ್ಷಣ ಧರ್ಮಯುಕ್ತನಾಗಿ ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳನ್ನೂ ಕುರಿತು, ||೨೬|| "ಎಲೈ ದೇವತೆಗಳಿರಾ ! ನೀವೆಲ್ಲರೂ ಭಯವನ್ನು ತೊರೆಯಿರಿ, ನಿಮಗೆ ಶುಭವಾಗಲಿ;ನಿಮ್ಮ ಹಿತಕ್ಕೋಸುಗ ಪುತ್ರ, ಪೌತ್ರ, ಮಂತ್ರಿ, ಮಿತ್ರ, ಜ್ಞಾತಿ, ಬಂಧು, ಸಹಿತವಾಗಿರುವವನೂ, ದೇವರ್ಷಿಗಳಿಗೆ ಭಯಂಕರವಾಗಿರುವವನೂ, ದುರ್ಬುದ್ಧಿಯೂ, ಕ್ರೂರನೂ, ಆದ ಆ ದಶಕಂಠನನ್ನು ಸಂಹರಿಸಿ, ಹನ್ನೊಂದು ಸಹಸ್ರ ವರ್ಷಗಳ ವರೆವಿಗೂ ಮನುಷ್ಯ ಲೋಕದಲ್ಲಿ ಭೂಪರಿಪಾಲನೆ ಮಾಡುತ್ತಿರುವೆನು." ಎಂದು ನುಡಿದು, ಮನುಷ್ಯಲೋಕದಲ್ಲಿ ತನಗೆ ಉತ್ಪತ್ತಿಸ್ಥಾನ

ಚತುರ್ವಿಧಂ || ೩೦ || ಪಿತರಂ ರೋಚಯಾಮಾಸ ತದಾ ದಶರಥಂ ನೃಪಂ ||
ತತೋದೇವಾ ಸ್ಸಗಂಧರ್ವಾ ಸ್ಸರುದ್ರಾಸ್ಸಾಪ್ಸರೋಗಣಾಃ || ೩೧ || ಸ್ತುತಿಭಿ
ರ್ದಿವ್ಯ ರೂಪಾಭಿ ಸ್ತುಷ್ಟುವುರ್ಮಧುಸೂದನಂ || ತಮುದ್ಧತಂ ರಾವಣಮುಗ್ರತೇ
ಜಸಂ ಪ್ರವೃದ್ಧದರ್ಪಂ ತ್ರಿದಶೇಶ್ವರದ್ವಿಷಂ||೩೨|| ವಿರಾವಣಂ ಸಾಧು ತಪಸ್ವಿಕಂ
ಟಕಂತಪಸ್ವಿನಾ ಮುದ್ಧರತಂ ಭಯಾವಹಂ||ತಮೇವ ಹತ್ವಾ ಸ ಬಲಂ ಸಬಾಂಧವಂ

ಶ್ರೀಮಹಾವಿಷ್ಣುವು, ತದಾ - ಆಗ, ಆತ್ಮಾನಂ - ತನ್ನನ್ನು, ಚತುರ್ವಿಧಂ - ನಾಲ್ಕು ಬಗೆಯಾದ ಶರೀರಗಳುಳ್ಳವನನ್ನಾಗಿ, ಕೃತ್ವಾ-ಮಾಡಿ, ದಶರಥಂ-ದಶರಥನೆಂಬ. ನೃಪಂ-ಅರಸನನ್ನು, ಪಿತರಂ-ತಂದೆಯನ್ನಾಗಿ, ರೋಚಯಾಮಾಸ-ಇಚ್ಛಿಸಿದನು || ೩೦ || ತತಃ-ಬಳಿಕ, ಸಗಂಧರ್ವಾಃ-ಗಂಧರ್ವರಿಂದೊಡಗೂಡಿದ, ಸರುದ್ರಾಃ-ಏಕಾದಶರುದ್ರರಿಂದ ಕೂಡಿರುವ, ಸಾಪ್ಸರೋಗಣಾಃ-ಅಪ್ಸರಸ್ಸುಗಳ ತಂಡಗಳಿಂದೊಡಗೂಡಿರುವ, ದೇವಾಃ-ದೇವತೆಗಳು, ದಿವ್ಯರೂಪಾಭಿಃ - ದೇವತಾ ಸಂಬಂಧವಾದ ಆತ್ಮಸ್ವರೂಪ ವಿಷಯಕವಾದ, ಸ್ತುತಿಭಿಃ-ಸ್ತೋತ್ರಗಳಿಂದ, ಮಧುಸೂದನಂ – ಶ್ರೀಮಹಾವಿಷ್ಣುವನ್ನು, ತುಷ್ಟುವುಃ - ಸ್ತೋತ್ರಮಾಡಿದರು || ೩೧ || ಉದ್ಧತಂ-ಉತ್ಪತ್ತಿಕಾಲ ಮೊದಲುಗೊಂಡು ಧೂರ್ತನಾದ, ತಂ-ಪ್ರಸಿದ್ಧನಾದ, ಉಗ್ರತೇಜಸಂ-ಭಯಂಕರವಾದ ಪ್ರತಾಪವುಳ್ಳ,ಪ್ರವೃದ್ಧದರ್ಪಂ - ವೃದ್ಧಿಹೊಂದುತ್ತಿರುವ ಗರ್ವವುಳ್ಳ, ತ್ರಿದಶೇಶ್ವರದ್ವಿಷಂ - ಇಂದ್ರನಿಗೆ ದ್ವೇಷಿಯಾದ, ವಿರಾವಣಂ-ಲೋಕವನ್ನ ಳಿಸುತ್ತಿರುವ, ತಪಸ್ವಿಕಂಟಕಂ - ತಪಸ್ಸುಮಾಡುತ್ತಿರುವವರಿಗೆ ಶತೃವಾದ, ತಪಸ್ವಿನಾಂ-ಋಷಿಗಳಿಗೆ, ಭಯಾವಹಂ-ಭಯಂಕರವಾದ, ತಂರಾವಣಂ-ಆ ರಾವಣನನ್ನು, ಸಾಧು-ಚನ್ನಾಗಿ, ಉದ್ಧತಂ-ಮೂಲೋತ್ಪಾಟನೆಮಾಡು || ೩೨ || ಹೇಸುರೇಂದ್ರ - ಎಲೈ ದೇವಾಧಿಪತಿಯಾದ ಉಪೇಂದ್ರನೇ! ಸಬಲಂ-ಸೈನ್ಯದಿಂದೊಡಗೂಡಿದ, ಸಬಾಂಧವಂ- ಬಂಧುಳಿಂದ ಕೂಡಿರುವ, ವಿರಾವಣಂ ಲೋಕವನ್ನು ದೀನಧ್ವನಿಯುಳ್ಳದ್ದನ್ನಾಗಿ ಮಾಡುತ್ತಿರುವ, ಅಗ್ರ್ಯಪೌರುಷಂ, ಅಗ್ರ್ಯ-ಶ್ರೇಷ್ಠವಾದ,ಪೌರುಷಂ-ಪರಾಕ್ರಮವುಳ್ಳ, ತಂರಾವಣಂ- ಆರಾವಣಾಸುರನನ್ನು,ಹತ್ವೈವ-ಕೊಂದೇ, ಗತಜ್ವರಃ, ಗತ - ಹೋಗಲಾಡಿಸಲ್ಪಟ್ಟ, ಜ್ವರಃ - ಲೋಕತಾಪವುಳ್ಳವನಾಗಿ, ಯದ್ವಾ ಗತಜ್ವರಃ - (ಗೋ) ಆಶ್ರಿತ ಸಂರಕ್ಷಣದಿಂದ ಸಂತಾಪರಹಿತನಾಗಿ, ಗತದೋಷಕಲ್ಮಷಂ, ಗತ -

ವನ್ನು ಯೋಚಿಸಿ, ತನ್ನನ್ನು ಚತುರ್ವಿಧವಾಗಿ ಮಾಡಿಕೊಂಡು, ದಶರಥನನ್ನೇ ತಂದೆಯಾಗಿ ಬಯಸಿದನು. ||೨೭-೩೦|| ಆ ಬಳಿಕ ಏಕಾದಶ ರುದ್ರರಿಂದಲೂ, ಅಪ್ಸರಸ್ತ್ರೀಯರಿಂದಲೂ, ಗಂಧರ್ವರಿಂದಲೂ, ಒಡಗೂಡಿದ ದೇವತೆಗಳೆಲ್ಲರೂ, ದಿವ್ಯಾತ್ಮ ಸ್ವರೂಪ ವಿಷಯಕವಾದ ಆ ಮಧುಸೂದನನ್ನು ಸ್ತುತಿಸಿದರು. ||೩೧|| "ಎಲೈ ದೇವಾದಿದೇವನೇ! ಹುಟ್ಟಿದಂದಿನಿಂದ ಬಹಳ ಗರ್ವಿಷ್ಠನಾಗಿಯೂ, ಭಯಂಕರವಾದ ತೇಜಸ್ಸುಳ್ಳವನಾಗಿಯೂ, ಇಂದ್ರ ವಿರೋಧಿಯಾಗಿಯೂ, ಲೋಕಗಳನ್ನೆಲ್ಲ ಗೋಳಾಡಿಸುತ್ತಿರುವವನಾಗಿಯೂ, ತಪಸ್ವಿಗಳಿಗೆ ವಿರೋಧಿಯಾಗಿಯೂ, ಬಹಳ ಭಯಂಕರವಾಗಿಯೂ, ಬಲಸಮೇತನಾಗಿಯೂ, ಬಂಧು

ನಿರಾವಣಂ ರಾವಣ ಮುಗ್ರ್ಯಪೌರುಷಂ || ಸ್ವರ್ಲೋಕ ಮಾಗಚ್ಛ ಗತಜ್ವರಶ್ಚಿರಂ
ಸುರೇಂದ್ರಗುಪ್ತಂ ಗತದೋಷ ಕಲ್ಮಷಂ || ೩೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚದಶಸ್ಸರ್ಗಃ.

---

ಹೋದ,ದೋಷ-ರೋಗಾದಿ ದೋಷರೂಪವಾದ, ಕಲ್ಮಷಂ-ಪಾಪವುಳ್ಳ, (ಮ) ಗತದೋಷಕಲ್ಮಷಂ, ಗತ-ಹೋದ, ದೋಷಕಲ್ಮಷಂ-ಕಾಮಕ್ರೋಧಾದಿ ದೋಷಜನ್ಯಮಾಲಿನ್ಯವುಳ್ಳ, ಚಿರಂ-ಬಹುಕಾಲದಿಂದ,ಗುಪ್ತಂ-ಸಂರಕ್ಷಣೆಮಾಡಲ್ಪಟ್ಟ; ಸ್ವರ್ಲೋಕ-ಸ್ವರ್ಗಲೋಕವನ್ನು ಕುರಿತು,ಆಗಚ್ಛ-ಬಾ, (ಗೋ) ಗುಪ್ತಂ-ಅಜ್ಞಾನಿಗಳಿಗೆ ಹೊಂದಲಶಕ್ಯವಾದ, ಸ್ವರ್ಲೋಕಂ - ಸ್ವಪ್ರಕಾಶವಾದ ವೈಕುಂಠವನ್ನು ಕುರಿತು, ಆಗಚ್ಛ-ಬಾ. || ೩೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚದಶಸ್ಸರ್ಗಃ.

---

ಸಹಿತನಾಗಿಯೂ, ಶ್ರೇಷ್ಠವಾದ ಪರಾಕ್ರಮವುಳ್ಳವನಾಗಿಯೂ, ಇರುವ ಆ ದಶಕಂಠನನ್ನು ಸಂಹರಿಸಿ, ರಾಗದ್ವೇಷಾದಿ ದೋಷರಹಿತನಾದ ನಿನ್ನಿಂದ ರಕ್ಷಿತವಾದ ವೈಕುಂಠ ಲೋಕವನ್ನು ಹೊಂದು ||೩೨-೩೩||

ಇಂತಿದು ದೇವತೆಗಳಿಗೆ ನಾರಾಯಣಮೂರ್ತಿಯ ಅಭಯ ಪ್ರದಾನ
ವರ್ಣನವೆಂಬ ಹದಿನೈದನೆಯ ಸರ್ಗವು
ಸಮಾಪ್ತವಾದುದು.



# ಬಾಲಕಾಂಡೇ ಷೋಡಶಸ್ಸರ್ಗಃ.

---

ತತೋ ನಾರಾಯಣೋ ದೇವೋ ನಿಯುಕ್ತ ಸ್ಸುರಸತ್ತಮೈಃ ॥ ಜಾನನ್ನಪಿ ಸುರಾನೇವಂ ಶ್ಲಕ್ಷ್ಣಂ ವಚನಮಬ್ರವೀತ್ ॥೧॥ ಉಪಾಯಃ ಕೋ ವಧೇ ತಸ್ಯ ರಾವಣಸ್ಯ ದುರಾತ್ಮನಃ ॥ ಯಮಹಂ ತಂ ಸಮಾಸ್ಥಾಯ ನಿಹನ್ಯಾಮೃಷಿ ಕಂಟಕಂ ॥೨॥ ಏವಮುಕ್ತಾ ಸ್ಸುರಾಸ್ಸರ್ವೇ ಪ್ರತ್ಯೂಚುರ್ವಿಷ್ಣುಮವ್ಯಯಂ ॥ ಮಾನುಷೀಂ ತನುಮಾಸ್ಥಾಯ ರಾವಣಂ ಜಹಿ ಸಂಯುಗೇ ॥೩॥ ಸಹಿ ತೇಪೇ ತಪ ಸ್ತೀವ್ರಂ ದೀರ್ಘಕಾಲಮರಿಂದಮ ॥ ಯೇನ ತುಷ್ಟೋ ಭವದ್ಬ್ರಹ್ಮಾ ಲೋಕ

---

ತತ -ಅನಂತರದಲ್ಲಿ, ನಾರಾಯಣಃ-ಶ್ರೀ ವಿಷ್ಣುವೆಂಬ, ದೇವಃ ದೇವನು, ಜಾನನ್ನಪಿ-ತಿಳಿದವನಾದರೂ, ಸುರ ಸತ್ತಮೈಃ - ದೇವಶ್ರೇಷ್ಠರಿಂದ, ನಿಯುಕ್ತಃ - ಪ್ರಾರ್ಥಿಸಲ್ಪಟ್ಟವನಾಗಿ, ಸುರಾನ್ ದೇವತೆಗಳನ್ನು ಕುರಿತು ಶ್ಲಕ್ಷ್ಣಂ - ಮೃದುವಾದ, ವಚನಂ - ಮಾತನ್ನು, ಏವಂ - ಈ ಮುಂದೆ ಹೇಳುವ ಪ್ರಕಾರವಾಗಿ, ಅಬ್ರವೀತ್-ನುಡಿದನು ॥ ೧ ॥ ದುರಾತ್ಮನಃ - ದುಷ್ಟನಾದ, ತಸ್ಯ ರಾವಣಸ್ಯ-ಆ ರಾವಣನ, ವಧೇ-ಸಂಹಾರದಲ್ಲಿ, ಕಃ-ಯಾವುದು, ಉಪಾಯಃ - ಸಾಧನವು ? ಯಂ-ಯಾವ ಸಾಧನವನ್ನು, ಸಮಾಸ್ಥಾಯ-ಸ್ವೀಕರಿಸಿ, ಋಷಿಕಂಟಕಂ- ಋಷಿಗಳಿಗೆ ಹಗೆಯನಾದ, ತಂ-ಆ ರಾವಣನನ್ನು, ನಿಹನ್ಯಾಂ-ಹೊಡೆನೇನು ॥ ೨ ॥ ಏವಂ-ಈ ಪರಿಯಾಗಿ, ಉಕ್ತಾಃ - ಹೇಳಲ್ಪಟ್ಟ, ಸರ್ವೇಸುರಾಃ-ಸಮಸ್ತದೇವತೆಗಳೂ, ಮಾನುಷೀಂ-ಮನುಷ್ಯ ಸಂಬಂಧವಾದ, ತನುಂ- ಶರೀರವನ್ನು, ಆಸ್ಥಾಯ- ಹೊಂದಿ, ಸಂಯುಗೇ-ಕಾಳಗದಲ್ಲಿ, ರಾವಣಂ-ರಾವಣನನ್ನು, ಜಹಿ - ಸಂಹರಿಸು, ಇತಿ-ಇಂತೆಂದು, ಅವ್ಯಯಂ ನಾಶ ರಹಿತನಾದ, ವಿಷ್ಣುಂ-ನಾರಾಯಣನನ್ನು ಕುರಿತು, ಪ್ರತ್ಯೂಚುಃ- ಪ್ರತ್ಯುತ್ತರಕೊಟ್ಟರು ॥ ೩ ॥ ಹೇ-ಅರಿಂದಮ ಎಲೈ ಶತ್ರುಸಂಹಾರಕನೇ! ಸಃ-ಆ ರಾವಣಾಸುರನು, ದೀರ್ಘ ಕಾಲಂ-ಬಹುಕಾಲ, ತೀವ್ರಂ-ಉಗ್ರವಾದ, ತಪಃ-ತಪಸ್ಸನ್ನು, ತೇಪೇಹಿ - ತಪಿಸಿದನಷ್ಟೆ, ಯೇನ ಯಾವ ತಪಸ್ಸಿನಿಂದ, ಲೋಕಕೃತ್- ಲೋಕಕರ್ತನಾದ, ಲೋಕ ಪೂರ್ವಜಃ- ಜನಗಳಿಗೆಲ್ಲ,

---

ಅನಂತರದಲ್ಲಿ ಶ್ರೀಮನ್ನಾರಾಯಣ ಮೂರ್ತಿಯು ದೇವತೆಗಳಿಂದ ಪ್ರೇರೇಪಿಸಲ್ಪಟ್ಟು ತಿಳಿದವನಾದರೂ, ಅವರನ್ನೇ ಕುರಿತು, ಮಧುರವಾದ ಈ ಮಾತನ್ನು ನುಡಿದನು. ‘‘ಆ ದುರಾತ್ಮನಾದ ರಾವಣನ ಸಂಹಾರ ವಿಷಯದಲ್ಲಿ ಏನುಪಾಯವು ; ಯಾವ ಸಾಧನದಿಂದ ಋಷಿಕಂಟಕನಾದ ಆ ರಾವಣನನ್ನು ಸಂಹರಿಸಲಿ ?’’ ಎಂದು ಹೇಳಿದ ಶ್ರೀಮನ್ನಾರಾಯಣನನ್ನು ಕುರಿತು, ಆ ದೇವತೆಗಳು ‘‘ಎಲೈ ಭಗವಂತನೇ ! ಮಾನುಷಾಕಾರವನ್ನು ಧರಿಸಿ, ಋಷಿಕಂಟಕನಾದ ಆ ರಾವಣನನ್ನು ಸಂಹರಿಸು, ಮತ್ತಾರಿಂದಲೂ ಆಗುವದಿಲ್ಲ. ಎಲೈ ಶತೃನಾಶಕನೇ ! ಆ ರಾವಣನು ಪೂರ್ವ ಕಾಲದಲ್ಲಿ ನಾಕ್ಷಾಚ್ಚತುರ್ಮುಖ ಬ್ರಹ್ಮನು ಸಂತೋಷಿಸುವಂತೆ ಬಹುಕಾಲ ಭಯಂಕರವಾದ ತಪ

ಕೃಲ್ಲೋಕ ಪೂರ್ವಜಃ || ೪ || ಸಂತುಷ್ಟಃ ಪ್ರದದೌ ತಸ್ಮೈ ರಾಕ್ಷಸಾಯ ವರಂಪ್ರಭುಃ || ನಾನಾವಿಧೇಭ್ಯೋ ಭೂತೇಭ್ಯೋ ಭಯಂ ನಾನ್ಯತ್ರ ಮಾನುಷಾತ್ || ೫ || ಅವಜ್ಞಾತಾಃ ಪುರಾ ತೇನ ವರದಾನೇ ಹಿ ಮಾನವಾಃ || ಏವಂ ಪಿತಾಮಹಾತ್ತಸ್ಮಾದ್ವರಂ ಪ್ರಾಪ್ಯ ಸ ದರ್ಪಿತಃ || ೬ || ಉತ್ಸಾದಯತಿ ಲೋಕಾಂಸ್ತ್ರೀನ್ ಸ್ತ್ರಿಯಶ್ಚಾಪ್ಯಪಕರ್ಷತಿ||ತಸ್ಮಾತ್ತಸ್ಯವಧೋದೃಷ್ಟೋ ಮಾನುಷೇಭ್ಯಃ ಪರಂತಪ || ೭ || ಇತ್ಯೇತದ್ವಚನಂ ಶ್ರುತ್ವಾ ಸುರಾಣಾಂ ವಿಷ್ಣುರಾತ್ಮವಾನ್|| ಪಿತರಂ ರೋಚಯಾಮಾಸ ತದಾ ದಶರಥಂ ನೃಪಂ ||೮|| ಸಚಾಪ್ಯ

---

ಪೂರ್ವದಲ್ಲಿಯೇ ಹುಟ್ಟಿದ, ಬ್ರಹ್ಮಾ-ಬ್ರಹ್ಮನು, ತುಷ್ಟಃ - ಸಂತುಷ್ಟನು, ಅಭವತ್-ಆದನು || ೪ || ಪ್ರಭುಃ-ಸಮರ್ಥನಾದ ಚತುರ್ಮುಖನು, ಸಂತುಷ್ಟಃ-ಸಂತೋಷಗೊಂಡು, ಮಾನುಷಾತ್-ಮನುಷ್ಯನಿಗಿಂತಲೂ, ಅನ್ಯತ್ರ - ಭಿನ್ನ ಸ್ಥಳದಲ್ಲಿ, ನಾನಾ ವಿಧೇಭ್ಯಃ-ಬಗೆಬಗೆಗಳಾದ, ಭೂತೇಭ್ಯಃ - ಭೂತಗಳಿಂದ, ಭಯಂ-ಮರಣ ಭಯವು, ನೇತಿ-ಇಲ್ಲವೆಂದು, ರಾಕ್ಷಸಾಯ-ರಾಕ್ಷಸನಾದ, ತಸ್ಮೈ-ಆ ರಾವಣನಿಗೆ, ವರಂ-ವರವನ್ನು, ಪ್ರದದೌ-ಕೊಟ್ಟನು || ೫ || ಪುರಾ-ಪೂರ್ವದಲ್ಲಿ, ತೇನ ಆ ರಾವಣಾಸುರನಿಂದ, ವರದಾನೇ-ವರಪ್ರದಾನಕಾಲದಲ್ಲಿ, ಮಾನವಾಃ-ಮನುಷ್ಯರು, ಅವಜ್ಞಾತಾಹಿ-ಅಲಕ್ಷ್ಯ ಮಾಡಲ್ಪಟ್ಟರಷ್ಟೆ, ಏವಂ - ಈ ಪರಿಯಾಗಿ, ತಸ್ಮಾತ್ಪಿತಾಮಹಾತ್ - ಆ ಬ್ರಹ್ಮನ ದೆಸೆಯಿಂದ, ವರಂ-ವರವನ್ನು, ಪ್ರಾಪ್ಯ ಪಡೆದು, ದರ್ಪಿತಃ-ಗರ್ವಿಷ್ಠನಾದ, ಸಃ-ಆ ರಾವಣನು ತ್ರೀನ್‌ಲೋಕಾನ್-ಮೂರುಲೋಕಗಳನ್ನೂ, ಉತ್ಸಾದಯತಿ - ಮೂಲೋತ್ಪಾಟನ ಮಾಡುತ್ತಾನೆ, ಸ್ತ್ರಿಯಶ್ಚಾಪಿ-ಹೆಂಗಸರನ್ನೂ, ಅಪಕರ್ಷತಿ-ಸೆಳೆಯುತ್ತಾನೆ ||೬|| ಹೇಪರಂತಪ-ಎಲೈ ಶತ್ರುಸಂಹಾರಕನೇ,ತಸ್ಮಾತ್-ಆಕಾರಣ, ತಸ್ಯ-ಆ ರಾವಣನ, ವಧಃ-ಸಂಹಾರವು, ಮಾನುಷೇಭ್ಯಃ ಮನುಷ್ಯರಿಂದ, ದೃಷ್ಟಃ- ತೋರಲ್ಪಟ್ಟಿತು || ೭ || ಇತಿ-ಈ ಪರಿಯಾಗಿ, ಸುರಾಣಾಂ-ದೇವತೆಗಳ, ಏತದ್ವಚನಂ - ಈಮಾತನ್ನು, ಶ್ರುತ್ವಾ-ಕೇಳಿ, ಆತ್ಮವಾನ್-ಧೈರ್ಯಶಾಲಿಯಾದ, ವಿಷ್ಣುಃ-ಶ್ರೀಮಹಾವಿಷ್ಣುವು, ತದಾ ಆ ಕಾಲದಲ್ಲಿ, ದಶರಥಂ-ದಶರಥನೆಂಬ, ನೃಪಂ - ರಾಜನನ್ನು, ಪಿತರಂ - ತಂದೆಯನ್ನಾಗಿ, ರೋಚಯಾಮಾಸ - ಇಚ್ಛೈಸಿದನು || ೮ || ತಸ್ಮಿನ್ಕಾಲೇ - ಆಗ, ಮಹಾದ್ಯುತಿಃ - ಮಹಾತೇಜಸ್ವಿಯಾದ, ಅರಿ

---

ಸ್ಸನ್ನು ಮಾಡಿದನು. || ೧-೪ || "ಮನುಷ್ಯರನ್ನು ಬಿಟ್ಟು, ಸಮಸ್ತ ಭೂತಗಳಿಂದಲೂ, ಅವಧ್ಯತೆಯನ್ನು ಹೊಂದು" ಎಂದು ವರವನ್ನು ಕೊಟ್ಟನು. || ೫ || ಮಾನವರಾದರೆ ಆ ರಾವಣನಿಂದಲೇ ಅವಮಾನ ಮಾಡಲ್ಪಟ್ಟರಾದ ಕಾರಣ ಅವರಿಂದ ಮಾತ್ರ ಅವಧ್ಯತ್ವವನ್ನು ಹೊಂದಲಿಲ್ಲ. ಈ ಪರಿ ಬ್ರಹ್ಮದೇವನಿಂದ ಆ ರಾವಣನು ವರವನ್ನು ಪಡೆದು, ಬಹಳವಾಗಿ ಕೊಬ್ಬಿದ ಗರ್ವದಿಂದ ಲೋಕತ್ರಯವನ್ನು ಗಡಗಡನೆ ನಡುಗುವಂತೆ ಹೆದರಿಸುತ್ತಿರುವನು. ಇಷ್ಟೆಯಲ್ಲದೆ ಸುಂದರಿಯರನೆಲ್ಲ ಅಪಹರಿಸುತ್ತಲೂ ಇರುವನು. || ೬ || "ಎಲೈ ಶತ್ರು ಶಮನ ಶೀಲನೇ ! ಆ ಹೇತುವಿನಿಂದ ರಾವಣನ ಸಂಹಾರವು ಮನುಷ್ಯರಿಂದಲೇ ಆಗತಕ್ಕದು" ಎಂದು ನುಡಿಯುತ್ತಿರುವ ದೇವತೆಗಳ ಮಾತನ್ನು ಕೇಳಿ, ಮಹಾವಿಷ್ಣುವು ದಶರಥರಾಜನನ್ನು ತನಗೆ ಜನಕನಾಗಿರುವುದಕ್ಕೆ ಅರ್ಹನೆಂದು ಯೋಚಿಸಿದನು. ||೭-೮|| ಶತ್ರು

ಪುತ್ರೋ ನೃಪತಿ ಸ್ತ್ರಸ್ಮಿನ್ಕಾಲೇ ಮಹಾದ್ಯುತಿಃ|| ಅಯಜತ್ಪುತ್ರಿಯಾಮಿಷ್ಟಿಂ ಪುತ್ರೇಪ್ಸುರರಿಸೂದನಃ ||೯|| ಸಕೃತ್ವಾ ನಿಶ್ಚಯಂ ವಿಷ್ಣು ರಾಮಂತ್ರ್ಯ ಚ ಪಿತಾಮಹಂ || ಅಂತರ್ಧಾನಂ ಗತೋ ದೇವೈಃ ಪೂಜ್ಯಮಾನೋ ಮಹರ್ಷಿಭಿಃ||೧೦|| ತತೋ ವೈಜಯಮಾನಸ್ಯ ಪಾವಕಾದತುಲ ಪ್ರಭಂ|| ಪ್ರಾದುರ್ಭೂತಂ ಮಹದ್ಭೂತಂ ಮಹಾವೀರ್ಯಂ ಮಹಾಬಲಂ||೧೧|| ಕೃಷ್ಣ ರಕ್ತಾಂಬರಧರಂ ರಕ್ತಾಸ್ಯಂ ದುಂದುಭಿಸ್ವನಂ|| ಸ್ನಿಗ್ಧಹರ್ಯಕ್ಷತನುಜ ಶ್ಮಶ್ರು ಪ್ರವರಮೂರ್ಧಜಂ|| ||೧೨|| ಶುಭಲಕ್ಷಣಸಂಪನ್ನಂ ದಿವ್ಯಾಭರಣಭೂಷಿತಂ|| ಶೈಲಶೃಂಗಸಮುತ್ಸೇಧಂ

---

ಸೂದನಃ-ಶತ್ರುಸಂಹಾರಕನಾದ, ಸನೃಪತಿಶ್ಚಾಪಿ- ಆ ದಶರಥರಾಜನೂ, ಅಪುತ್ರಃ-ಪುತ್ರರಹಿತನಾದ ಕಾರಣವೇ, ಪುತ್ರೇಪ್ಸುಃ-ಪುತ್ರರನ್ನು ಬೇಡುತ್ತಿರುವವನಾಗಿ, ಪುತ್ರೀಯಾಂ- ಪುತ್ರಪ್ರಯೋಜವಾದ, ಇಷ್ಟಿಂ- ಪುತ್ರಕಾಮೇಷ್ಟಿಯನ್ನು, ಅಯಜತ್ ಮಾಡಿದನು ||೯|| ಸವಿಷ್ಣುಶ್ಚ-ಆ ಶ್ರೀಮಹಾವಿಷ್ಣುವೂ, ನಿಶ್ಚಯಂ ನಿಶ್ಚಯವನ್ನು, ಕೃತ್ವಾ - ಮಾಡಿ, ಪಿತಾಮಹಂ ಬ್ರಹ್ಮದೇವನನ್ನು ಕುರಿತು, ಆ ಮಂತ್ರ್ಯ-ಆಲೋಚಿಸಿ, ದೇವೈಃ-ದೇವತೆಗಳಿಂದಲೂ, ಮಹರ್ಷಿಭಿಃ-ಮಹರ್ಷಿಗಳಿಂದಲೂ, ಪೂಜ್ಯಮಾನಃ-ಪೂಜಿಸಲ್ಪಟ್ಟು, ಅಂತರ್ಧಾನಂ-ಅಂತರ್ಧಾನವನ್ನು, ಗತಃ-ಹೊಂದಿದನು || ೧೧ || ತತಃ-ಬಳಿಕ, ಮಹಾವೀರ್ಯಂ- ಮಹಾಶಕ್ತಿಯುಳ್ಳ, ಮಹಾಬಲಂ-ಮಹಾಸಾಮರ್ಥ್ಯವುಳ್ಳ, ಕೃಷ್ಣರಕ್ತಾಂಬರಧರಂ-ಕಪ್ಪಾಗಿಯೂ ಕೆಂಪಾಗಿಯೂ ಇರುವ ವಸ್ತ್ರಗಳನ್ನು ಧರಿಸಿರುವ, ರಕ್ತಾಸ್ಯಂ - ಕೆಂಪಾದಮುಖವುಳ್ಳ, ದುಂದುಭಿಸ್ವನಂ-ಭೇರಿಯಧ್ವನಿಯಂತೆ ಧ್ವನಿಯುಳ್ಳ, ಸ್ನಿಗ್ಧಹರ್ಯಕ್ಷತನುಜಶ್ಮಶ್ರುಪ್ರವರಮೂರ್ಧಜಂ-ಸ್ನಿಗ್ಧ-ಸ್ನೇಹಯುಕ್ತವಾದ, ಹರ್ಯಕ್ಷ-ಸಿಂಹದಂತೆ,ತನುಜ-ರೋಮಗಳೂ,ಶ್ಮಶ್ರು-ಮೀಸೆಗಳೂ, ಪ್ರವರ-ಶ್ರೇಷ್ಠವಾದ, ಮೂರ್ಧಜಂ ತಲೆಗೂದಲುಗಳೂ ಉಳ್ಳ, ಶುಭಲಕ್ಷಣಸಂಪನ್ನಂ,ಶುಭ-ಶುಭಕರಗಳಾದ,

---

ನಾಶಕನೂ, ಪುತ್ರಹೀನನೂ, ಆದ ದಶರಥರಾಜನು ಕಾಂತಿಯುಳ್ಳವನಾಗಿಯೂ, ಪುತ್ರರನ್ನಪೇಕ್ಷಿಸುತ್ತಿರುವನಾಗಿಯೂ, ಪುತ್ರಕಾಮೇಷ್ಟಿ ಯಾಗವನ್ನು ಮಾಡುತ್ತಿರಲು, ನಾರಾಯಣ ಮೂರ್ತಿಯು ಮನುಷ್ಯನಾಗಿ ಅವತರಿಸಬೇಕೆಂದು ನಿಶ್ಚಯಿಸಿ, ನೀವೆಲ್ಲರೂ ಹೇಳಿದಂತೆ ಸಾಧಿಸುವೆನೆಂದು ಬ್ರಹ್ಮನಿಗೆ ಹೇಳಿ, ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸಂಸ್ತುಯಮಾನನಾಗಿ ಅಂತರ್ಧಾನವನ್ನೈದಿದನು ||೯-೧೦|| ಆ ಬಳಿಕ ಮಹಾಶಕ್ತಿಯುಳ್ಳವನಾಗಿಯೂ, ಬಹಳ ಪರಾಕ್ರಮವುಳ್ಳವನಾಗಿಯೂ, ಕಪ್ಪು, ಕೆಂಪು ಬೆರೆತಿರುವ ವಸ್ತ್ರವನ್ನುಟ್ಟಿರುವನಾಗಿಯೂ, ಕೆಮ್ಮೊಗವುಳ್ಳವನಾಗಿಯೂ, ಭೇರೀಧ್ವನಿಯಂತೆ ಧ್ವನಿಯುಳ್ಳವನಾಗಿಯೂ, ನುಣುಪಾಗಿರುವ ಸಿಂಹದ ರೋಮಗಳಂತೆ ಜಿಡ್ಡುಳ್ಳವುಗಳಾಗಿರುವ ರೋಮಗಳೂ, ಮೀಸೆಯೂ, ತಲೆಗೂದಲೂ ಉಳ್ಳವನಾಗಿಯೂ, ಸಾಮುದ್ರಿಕಾ ಶಾಸ್ತ್ರೋಕ್ತವಾದ ಸಲ್ಲಕ್ಷಣಯುಕ್ತನಾಗಿ, ದಿವ್ಯಾಲಂಕಾರ ಭೂಷಿತನಾಗಿ ಪರ್ವತಶೃಂಗದಂತೆ ಔನ್ನತ್ಯವುಳ್ಳವನಾಗಿಯೂ, ಕೊಬ್ಬಿದ ಶಾರ್ದೂಲದಂತೆ ವಿಕ್ರಮವುಳ್ಳವನಾಗಿ, ಸೂರ್ಯನಂತೆ ಕಂಗೊಳಿಸುವ ಆಕಾರವುಳ್ಳವನಾಗಿ, ಪ್ರಜ್ವಲಿಸುತ್ತಿರುವ ಅಗ್ನಿಜ್ವಾಲೆಯಂತೆ ಹೊಳೆಯು

ದೃಪ್ತಶಾರ್ದೂಲ ವಿಕ್ರಮಂ ||೧೩|| ದಿವಾಕರ ಸಮಾಕಾರಂ ದೀಪ್ತಾನಲ ಶಿಖೋಪಮಂ|| ತಪ್ತಜಾಂಬೂನದ ಮಯೀಂ ರಾಜತಾಂತ ಪರಿಚ್ಛದಾಂ ||೧೪|| ದಿವ್ಯ ಪಾಯಸ ಸಂಪೂರ್ಣಾಂ ಪಾತ್ರೀಂ ಪತ್ನೀಮಿವಪ್ರಿಯಾಂ || ಪ್ರಗೃಹ್ಯ ವಿಪುಲಾಂ ದೋರ್ಭ್ಯಾಂ ಸ್ವಯಂ ಮಾಯಾಮಯೀಮಿವ ||೧೫|| ಸಮವೇಕ್ಷ್ಯಾಬ್ರವೀ ದ್ವಾಕ್ಯ ಮಿದಂ ದಶರಥಂನೃಪಂ|| ಪ್ರಾಜಾಪತ್ಯಂ ನರಂವಿದ್ಧಿ ಮಾಮಿಹಾಭ್ಯಾಗತಂ ನೃಪ || ೧೬ || ತತಃಪರಂ ತದಾ ರಾಜಾ ಪ್ರತ್ಯುವಾಚ ಕೃತಾಂಜಲಿಃ || ಭಗವನ್ ಸ್ವಾಗತಂ ತೇಽಸ್ತು ಕಿಮಹಂ ಕರವಾಣಿತೇ || ೧೭ || ಅಥೋ ಪುನರಿದಂ ವಾಕ್ಯಂ ಪ್ರಾಜಾಪತ್ಯೋ ನರೋಽಬ್ರವೀತ್ || ರಾಜನ್ನರ್ಚ

ಲಕ್ಷಣ-ಸಾಮುದ್ರಿಕೋಕ್ತಲಕ್ಷಣಗಳಿಂದ, ಸಂಪನ್ನಂ - ಕೂಡಿಕೊಂಡಿರುವ, ದಿವ್ಯಾಭರಣಭೂಷಿತಂ ಮನೋಹರಗಳಾದ ಒಡಿವೆಗಳಿಂದಲಂಕೃತನಾದ, ಶೈಲಶೃಂಗಸಮುತ್ಸೇಧಂ - ಬೆಟ್ಟದ ಶಿಖರದಂತೆ ಉದ್ದವಾಗಿರುವ, ದೃಪ್ತಶಾರ್ದೂಲವಿಕ್ರಮಂ-ಗರ್ವಿತವಾದ ವ್ಯಾಘ್ರದಂತೆ ಪರಾಕ್ರಮವುಳ್ಳ,ದಿವಾ ಕರಸಮಾಕಾರಂ-ಸೂರ್ಯನಿಗೆಸಮಾನವಾದ ಆಕಾರವುಳ್ಳ, ದೀಪ್ತಾನಲಶಿಖೋಪಮಂ-ಪ್ರಜ್ವಲಿಸುತ್ತಿರುವ ಅಗ್ನಿಶಿಖೆಗೆ ಸಮಾನನಾದ, ಮಹದ್ಭೂತಂ-ಮಹಾಪುರುಷನು, ತಪ್ತಜಾಂಬೂನದಮಯೀಂ - ಅಪ ರಂಜಿಯಿಂದ ನಿರ್ಮಿತವಾದ, ರಾಜತಾಂತಪರಿಚ್ಛದಾಂ-ರತ್ನವಿಕಾರವಾದ ಮೇಲ್ಮುಚ್ಚಳವುಳ್ಳ, ದಿವ್ಯ ಪಾಯಸಸಂಪೂರ್ಣಾಂ- ದೇವತಾಸಂಬಂಧವಾದ ಪಾಯಸದಿಂದ ಪೂರಿತವಾದ, ಮಾಯಾಮಯೀ ಮಿವ-ಮಾಯಾಸ್ವರೂಪದಂತಿರುವ, ವಿಪುಲಾಂ-ವಿಸ್ತಾರವಾದ, ಪ್ರಿಯಾಂ-ಇಷ್ಟಳಾದ, ಪತ್ನೀಮಿವ ಸ್ಥಿತಾಂ-ಪತ್ನಿಯಂತಿರುವ, ಪಾತ್ರೀಂ-ಬಟ್ಟಲನ್ನು, ಸ್ವಯಂ- ತಾನು, ದೋರ್ಭ್ಯಾಂ- ಬಾಹುದ್ವಯ ಗಳಿಂದ,ಪ್ರಗೃಹ್ಯ-ಪರಿಗ್ರಹಿಸಿ, ಯಜಮಾನಸ್ಯ-ಯಜ್ಞಮಾಡುತ್ತಿರುವ ದಶರಥನ, ಪಾವಕಾತ್-ಆಹ ವನೀಯಾಗ್ನಿಯಿಂದ, ಅತುಲಪ್ರಭಂ-ಸಮಾನವಿಲ್ಲದಕಾಂತಿಯುಳ್ಳವನಾಗಿ, ಪ್ರಾದುರ್ಭೂತಂ-ಆವಿರ್ಭವಿ ಸಿದನು ||೧೧-೧೫|| ದಶರಥಂ-ದಶರಥನೆಂಬ, ನೃಪಂ-ರಾಜನನ್ನು,ಸಮವೇಕ್ಷ್ಯ-ಕಂಡು,ಹೇನೃಪ- ಎಲೈ ದೊರೆಯೇ ! ಇಹ-ಈಗ, ಅಭ್ಯಾಗತಂ-ಬಂದ, ಮಾಂ-ನನ್ನನ್ನು, ಪ್ರಾಜಾಪತ್ಯಂ-ಪ್ರಾಜಾಪ ತ್ಯನೆಂಬ,ನರಂ-ಪುರುಷನನ್ನಾಗಿ, ವಿದ್ಧಿ-ತಿಳಿ, ಇತಿ-ಇಂತೆಂದು, ಇದಂ ವಾಕ್ಯಂ-ಈ ಮಾತನ್ನು, ಅಬ್ರ ವೀತ್-ನುಡಿದನು || ೧೬ || ತತಃಪರಂ-ಆ ಬಳಿಕ, ರಾಜಾ - ದಶರಥರಾಜನು, ತದಾ - ಆಗ, ಕೃತಾಂಜಲಿಃ-ಅಂಜಲಿಬದ್ಧನಾಗಿ, ಹೇ ಭಗವನ್-ಎಲೈ ಸ್ವಾಮಿಯೇ, ತೇ-ನಿನಗೆ, ಸ್ವಾಗತಂ-ಸುಖಾಗ ಮನವು, ಅಸ್ತು-ಆಗಲಿ, ಅಹಂ-ನಾನು, ತೇ-ನಿನಗೆ, ಕಿಂಕರವಾಣಿ-ಏನುಮಾಡಲಿ, ಇತಿ-ಇಂತೆಂದು, ಪ್ರತ್ಯುವಾಚ-ಪ್ರತ್ಯುತ್ತರವನ್ನಿತ್ತನು || ೧೭ || ಅಥ-ಅನಂತರದರಲ್ಲಿ, ಪ್ರಾಜಾಪತ್ಯಃ-ಪ್ರಾಜಾಪ

ತ್ತಿರುವ ಕಾಂತಿಯುಳ್ಳವನಾಗಿ ಇರುವ ಒಬ್ಬಾನೊಬ್ಬಪುರುಷನು ಅಪರಂಜಿಮಯವಾಗಿಯೂ, ಮಧ್ಯಪ್ರದೇಶದಲ್ಲಿ ಬೆಳ್ಳಿಯಿಂದ ಮಾಡಲ್ಪಟ್ಟ ಬಳ್ಳೀ, ವೃಕ್ಷ, ಮುಂತಾದ ಆಕಾರಗಳುಳ್ಳ ದ್ದಾಗಿಯೂ, ದಿವ್ಯವಾದ ಪಾಯಸದಿಂದ ತುಂಬಲ್ಪಟ್ಟುದಾಗಿಯೂ ಇರುವ, ಪತ್ನಿಯೋ, ಎಂ ಬಂತಿರುವ ವಿಸ್ತಾರವಾದ ಪಾತ್ರೆಯನ್ನು ಭುಜಗಳಿಂದಪ್ಪಿಕೊಂಡು ಯಾಗಮಾಡುತ್ತಿರುವ ದಶರಥರಾಜನ ಸಮಕ್ಷಮದಲ್ಲಿ ಆಹವನಿಯಾಗ್ನಿಯಿಂದ ಆವಿರ್ಭವಿಸಿ ದಶರಥ ರಾಜನನ್ನು ಕುರಿತಿಂತೆಂದನು. “ಎಲೈ ರಾಜನೇ ! ನನ್ನನ್ನು ಬ್ರಹ್ಮನಿಂದ ಪ್ರೇರಿತನಾಗಿಲ್ಲಿಗೆ ಬಂದಿರುವ ನನ್ನಾಗಿ ತಿಳಿ.” ಎಂದು ನುಡಿದ ಬಳಿಕ, ದಶರಥರಾಜನು ಅಂಜಲಿಬದ್ಧನಾಗಿ ಎಲೈ ಪೂಜ್ಯನೇ!

ಯಜತಾ ದೇವಾನದ್ಯಪ್ರಾಪ್ತಮಿದಂ ತ್ವಯಾ ॥ ೧೮ ॥ ಇದಂ ತು ನೃಪಶಾರ್ದೂಲ
ಪಾಯಸಂ ದೇವನಿರ್ಮಿತಮ್ ॥ ಪ್ರಜಾಕರಂ ಗೃಹಾಣ ತ್ವಂ ಧನ್ಯಮಾರೋಗ್ಯ
ವರ್ಧನಮ್ ॥೧೯॥ ಭಾರ್ಯಾಣಾಮನುರೂಪಾಣಾಮಶ್ನೀತೇತಿ ಪ್ರಯಚ್ಛವೈ ॥
ತಾಸು ತ್ವಂ ಪ್ರಾಪ್ಸ್ಯಸೇ ಪುತ್ರಾನ್ ಯದರ್ಥಂ ಯಜಸೇ ನೃಪ ॥೨೦॥ ತಥೇತಿ
ನೃಪತಿಃ ಪ್ರೀತಶ್ಶಿರಸಾ ಪ್ರತಿಗೃಹ್ಯ ತಾಮ್ ॥ ಪಾತ್ರೀಂ ದೇವಾನ್ನಸಂಪೂರ್ಣಾಂ
ದೇವದತ್ತಾಂ ಹಿರಣ್ಮಯೀಮ್ ॥ ೨೧ ॥ ಅಭಿವಾದ್ಯ ಚ ತದ್ಭೂತಮದ್ಭುತಂ
ಪ್ರಿಯದರ್ಶನಮ್ ॥ ಮುದಾ ಪರಮಯಾ ಯುಕ್ತಶ್ಚಕಾರಾಭಿಪ್ರದಕ್ಷಿಣಮ್ ॥

---

ತ್ಯನೆಂಬ, ನರಃ ಪುರುಷನು, ಇದಂವಾಕ್ಯಂ-ಈ ಮಾತನ್ನು, ಪುನಃ-ಮತ್ತೆ, ಅಬ್ರವೀತ್ - ನುಡಿದನು, ಹೇ ರಾಜನ್-ಎಲೈ ಅರಸೇ ? ದೇವಾನ್-ದೇವತೆಗಳನ್ನು, ಅರ್ಚಯತಾ-ಪೂಜಿಸುತ್ತಿರುವ, ತ್ವಯಾ-ನಿನ್ನಿಂದ, ಇದಂ-ಇದು, ಅದ್ಯ-ಈಗ, ಪ್ರಾಪ್ತಂ ಹೊಂದಲ್ಪಟ್ಟಿತು ॥ ೧೮ ॥ ಹೇನೃಪಶಾರ್ದೂಲ-ಎಲೈ ರಾಜಶ್ರೇಷ್ಠನೇ, ತ್ವಂ ನೀನು, ದೇವನಿರ್ಮಿತಂ, ದೇವ- ಭಗವಂತನಿಂದ, ನಿರ್ಮಿತಂ-ಮಾಡಲ್ಪಟ್ಟ, ಪ್ರಜಾಕರಂ ಪುತ್ರೋತ್ಪಾದಕವಾದ, ಧನ್ಯಂ-ಪುಣ್ಯಕರವಾದ, ಆರೋಗ್ಯವರ್ಧನಂ-ಆರೋಗ್ಯವನ್ನು ವೃದ್ಧಿಗೊಳಿಸುತ್ತಿರುವ, ಇದಂ ಪಾಯಸಂ ತು-ಈ ಪರಮಾನ್ನವನ್ನು, ಗೃಹಾಣ-ಪರಿಗ್ರಹಿಸು. ॥೧೯॥ ಹೇ ನೃಪ-ಎಲೈ ಅರಸೇ, ಅನುರೂಪಾಣಾಂ-ಸಮಾನವಾದ ರೂಪವುಳ್ಳ, ಭಾರ್ಯಾಣಾಂ-ಧರ್ಮಪತ್ನಿಯರಿಗೆ, ಅಶ್ನೀತೇತಿ-ಭಕ್ಷಣೆಮಾಡಿರೆಂದು, ಪ್ರಯಚ್ಛವೈ-ಕೊಟ್ಟುಬಿಡು, ತ್ವಂ-ನೀನು, ಯದರ್ಥಂ-ಯಾವ ಪುತ್ರಾರ್ಥವಾಗಿ, ಯಜಸೇ – ಯಜ್ಞ ಮಾಡುತ್ತಿರುವೆಯೋ, ತಾನ್ ಪುತ್ರಾನ್ - ಅಂತಹ ಮಕ್ಕಳನ್ನು, ತಾಸು-ಆ ಹೆಂಡತಿಯರಲ್ಲಿ, ಪ್ರಾಪ್ಸ್ಯಸೇ-ಹೊಂದುವೆ ॥ ೨೦ ॥ ನೃಪತಿಃ-ಅರಸಾದ ದಶರಥನು, ತಥೇತಿ - ಹಾಗೆಯೇ ಆಗಲೆಂದು, ದೇವದತ್ತಾಂ, ದೇವ - ಪ್ರಾಜಾಪತ್ಯಪುರುಷನಿಂದ, ದತ್ತಾಂ-ಕೊಡಲ್ಪಟ್ಟ, ದೇವಾನ್ನಸಂಪೂರ್ಣಾಂ, ದೇವ-ದೇವತಾ ಸಂಬಂಧವಾದ, ಅನ್ನ- ಪರಮಾನ್ನದಿಂದ, ಸಂಪೂರ್ಣಾಂ-ತುಂಬಲ್ಪಟ್ಟ, ಹಿರಣ್ಮಯೀಂ- ಸುವರ್ಣವಿಕಾರವಾದ, ತಾಂಪಾತ್ರೀಂ-ಆ ಪಾತ್ರೆಯನ್ನು, ಶಿರಸಾ-ಶಿರಸ್ಸಿನಿಂದ, ಪ್ರತಿಗೃಹ್ಯ-ಸ್ವೀಕರಿಸಿ, ಪ್ರೀತಃ-ಸಂತುಷ್ಟನಾದನು ॥ ೨೧ ॥ ಪರಮಯಾ-ಬಹಳವಾದ, ಮುದಾ-ಸಂತೋಷದಿಂದ, ಯುಕ್ತಃ-ಕೂಡಿದ ದಶರಥರಾಜನು, ಅದ್ಭುತಂ-ಆಶ್ಚರ್ಯಕರವಾದ, ಪ್ರಿಯದರ್ಶನಂ-ಸುಖಕರವಾದ ನೋಟವುಳ್ಳ, ತದ್ಭೂತಂ - ಆ ಮನುಷ್ಯನನ್ನು ಕುರಿತು, ಅಭಿವಾದ್ಯಚ-ನಮಸ್ಕಾರವನ್ನು ಮಾಡಿ, ಅಭಿಪ್ರದಕ್ಷಿಣಂ-ಸರ್ವಪ್ರದೇಶಗಳಲ್ಲಿಯೂ ಬಾರಿ ಬಾರಿಗೂ ಪ್ರದಕ್ಷಿಣವನ್ನು, ಚಕಾರ-ಮಾಡಿದನು ॥ ೨೨ ॥ ತತಃ- ಬಳಿಕ, ದಶರಥಃ-ದಶರಥನು,

---

ಸುಖಾಗಮನವಾಗಲಿ ; ನಿನಗೆ ನಾನು ಮಾಡಬೇಕಾದುದೇನು ?" ಎಂದು ನುಡಿದನು. ಆಗಲಾ ಪ್ರಾಜಾಪತ್ಯ ನರನು ಇಂತೆಂದನು. "ಎಲೈ ನರನಾಥನೇ ! ದೇವತೆಗಳನ್ನರ್ಚಿಸುತ್ತಿರುವ ನಿನಿಗೋಸುಗ ಇದನ್ನು ತಂದಿರುವೆನು. ಈ ದೇವನಿರ್ಮಿತವಾದ ಪಾಯಸವು ಪುತ್ರಾಭಿವೃದ್ಧಿಕರವಾಗಿಯೂ, ಧನ್ಯವಾಗಿಯೂ, ಆರೋಗ್ಯ ಭಾಗ್ಯವನ್ನುಂಟುಮಾಡುತ್ತಿರುವದಾಗಿಯೂ ಇರುವುದು. ಇಂತಹ ಪಾಯಸವನ್ನು ಸ್ವೀಕರಿಸಿ, ನಿನಗನುರೂಪರಾಗಿರುವ ಪತ್ನಿಗಳಿಗೆ ಕೊಟ್ಟರೆ, ಯಾವ ಪುತ್ರರಿಗೋಸ್ಕರ ಈ ಯಾಗವನ್ನು ಮಾಡಿದೆಯೋ, ಅಂತಹ ಮಕ್ಕಳನ್ನು ಆ ಭಾರ್ಯೆಯರಲ್ಲಿಯೇ ಪಡಿಯುವೆ" ಎಂದು ಹೇಳಿದನು. ॥೧೧-೨೦॥ ದಶರಥ

ತತೋ ದಶರಥಃ ಪ್ರಾಪ್ಯ ಪಾಯಸಂ ದೇವನಿರ್ಮಿತಂ ||೨೨|| ಬಭೂವ ಪರಮ ಪ್ರೀತಃ ಪ್ರಾಪ್ಯವಿತ್ತಮಿವಾಧನಃ || ತತಸ್ತದದ್ಭುತ ಪ್ರಖ್ಯಂ ಭೂತಂ ಪರಮ ಭಾಸ್ವರಂ ||೨೩|| ಸಂವರ್ತಯಿತ್ವಾ ತತ್ಕರ್ಮ ತತ್ರೈವಾಂತರ ಧೀಯತ || ಹರ್ಷರಶ್ಮಿಭಿರುದ್ಯೋತಂ ತಸ್ಯಾಂತಃ ಪುರಮಾಬಭೌ ||೨೪|| ಶಾರದಸ್ಯಾಭಿರಾಮಸ್ಯ ಚಂದ್ರಸ್ಯೇವ ನಭೋಂಶುಭಿಃ ಸೋಂತಃಪುರಂಪ್ರವಿ ಶ್ಯೈವ ಕೌಸಲ್ಯಾ ಮಿದಮಬ್ರವೀತ್ || ೨೫ || ಪಾಯಸಂ ಪ್ರತಿಗೃಹ್ಣೀಷ್ವ ಪುತ್ರೀಯಂ ತ್ವಿದಮಾತ್ಮನಃ || ಕೌಸಲ್ಯಾಯೈ ನರಪತಿಃ ಪಾಯಸಾರ್ಧಂ

---

ದೇವನಿರ್ಮಿತಂ-ಭಗವನ್ನಿರ್ಮಿತವಾದ, ಪಾಯಸಂ - ಪರಮಾನ್ನವನ್ನು, ಪ್ರಾಪ್ಯ-ಹೊಂದಿ, ಅಧನಃ-ದರಿದ್ರನು, ವಿತ್ತಂ-ಹಣವನ್ನು, ಪ್ರಾಪ್ಯೇವ-ಹೊಂದಿದಂತೆ, ಪರಮಪ್ರೀತಃ-ಬಹಳ ಸಂತೋಷಗೊಂಡವನು, ಬಭೂವ-ಆದನು ॥ ೨೩ ॥ ತತಃ-ಬಳಿಕ, ಅದ್ಭುತ ಪ್ರಭಂ-ಆಶ್ಚರ್ಯಕರವಾದ ಕಾಂತಿಯುಳ್ಳ, ಪರಮಭಾಸ್ವರಂ-ಬಹಳವಾಗಿ ಪ್ರಕಾಶಿಸುತ್ತಿರುವ, ತದ್ಭೂತ- ಆ ಪುರುಷನು, ತತ್ಕರ್ಮ-ಆ ಪಾಯಸಪ್ರದಾನರೂಪವಾದ ಕರ್ಮವನ್ನು. ಸಂವರ್ತಯಿತ್ವಾ ನೆರವೇರಿಸಿ, ತತ್ರೈವ- ಆ ಅಗ್ನಿ ಕುಂಡದಲ್ಲಿಯೇ, ಅಂತರಧೀಯತ-ಅಂತರ್ಹಿತನಾದನು || ೨೪ || ಹರ್ಷರಶ್ಮಿಭಿಃ, ಹರ್ಷ-ಸಂತೋಷದಿಂದ ಹುಟ್ಟಿದ, ರಶ್ಮಿಭಿಃ-ದಂತಕಾಂತಿಗಳಿಂದ, ಉದ್ಯೋತಂ-ಹೊಳೆಯುತ್ತಿರುವ, ತಸ್ಯ-ಆ ದಶರಥ ರಾಜನ, ಅಂತಃಪುರಂ-ಅಂತಃಪುರವು, ಶಾರದಸ್ಯ- ಶರತ್ಕಾಲದಲ್ಲಿ ಹುಟ್ಟಿದ, ಅಭಿರಾಮಸ್ಯ-ಮನೋಹರನಾದ, ಚಂದ್ರಸ್ಯ-ಚಂದ್ರನ, ಅಂಶುಭಿಃ-ಕಿರಣಗಳಿಂದ ಕೂಡಿದ,ನಭಇವ-ನಕ್ಷತ್ರ ಮಂಡಲದಂತೆ, ಆಬಭೌ-ಹೊಳೆಯುತ್ತಿದ್ದಿತು ||೨೫|| ಸಃ-ಆ ದಶರಥರಾಜನು, ಅಂತಃಪುರಂ-ಪತ್ನೀಶಾಲೆಯನ್ನು, ಪ್ರವಿಶ್ಯೈವ-ಪ್ರವೇಶಮಾಡಿ, ಕೌಸಲ್ಯಾಂ-ಕೌಸಲ್ಯಾದೇವಿಯನ್ನು ಕುರಿತು, ಆತ್ಮನಃ-ನಿನಗೆ, ಇದಂ ಪಾಯಸಂ - ಈ ಪರಮಾನ್ನವು, ಪುತ್ರೀಯಂ - ಸಂತಾನಕರವಾದುದು, ಇದಂ-ಈ ಪಾಯಸವನ್ನು, ಪ್ರತಿಗೃಹ್ಣೀಷ್ವ - ಸ್ವೀಕರಿಸು, ಇತಿ - ಇಂತೆಂದು, ಅಬ್ರವೀತ್ - ನುಡಿದನು || ೨೬ || (ಗೋ) ನರಪತಿಃ-ದಶರಥರಾಜನು, ತದಾ - ಆಗ, ಕೌಸಲ್ಯಾಯೈ - ಕೌಸಲ್ಯಾ

---

ರಾಜನು ಹಾಗೆಯೇ ಆಗಲೆಂದು ಹೇಳಿ, ದಿವ್ಯಪಾಯಸ ಸಂಪೂರ್ಣವಾಗಿರುವ ದೇವದತ್ತವಾದ ಮತ್ತು ಸುವರ್ಣ ವಿಕಾರವಾದ ಆ ಪಾತ್ರೆಯನ್ನು ತೆಗೆದುಕೊಂಡು ಅದ್ಭುತಕರವಾದ ಆ ಮಹದ್ಭೂತವನ್ನು ವಂದಿಸಿ, ಮಹದಾನಂದಭರಿತನಾಗಿ ಪ್ರದಕ್ಷಿಣೆ ಮಾಡಿದನು. ||೨೧-೨೨|| ಬಳಿಕ ದಶರಥರಾಯನು ನಿರ್ಧನಪುರುಷನು ಧನವನ್ನು ಹೊಂದಿ ಸಂತೋಷಿಸುವಂತೆ ಆ ಪಾಯಸವನ್ನು ಹೊಂದಿ ಮಹಾಸಂತೋಷಚಿತ್ತವುಳ್ಳವನಾದನು. ಆ ಪುರುಷನು ಅದ್ಭುತವಾದ ಕಾಂತಿವಿಶೇಷವುಳ್ಳದ್ದಾಗಿಯೂ, ಪ್ರಕಾಶಿಸುತ್ತಿರುವ ಆ ಪಾಯಸ ಪಾತ್ರೆಯನ್ನು ಕೊಟ್ಟ ಬಳಿಕ ಅಲ್ಲಿಯೇ ಅಂತರ್ಧಾನವನ್ನೈದಿದನು. ||೨೩-೨೪|| ಆ ಪಾಯಸ ಪ್ರದಾನದಿಂದುಂಟಾದ ಕಾಂತಿವಿಶೇಷಗಳಿಂದ ಬಹು ಪ್ರಕಾಶವಾಗಿರುವ ಆ ಅಂತಃಪುರ ಸ್ತ್ರೀಯರೆಲ್ಲರು, ಮನೋಹರವಾದ ಶರತ್ಕಾಲದ ಚಂದ್ರಕಿರಣಗಳಿಂದ ಕಂಗೊಳಿಸುವ ನಭದಂತೆ ಕಂಗೊಳಿಸುತಿದ್ದರು. || ೨೫ || ಆ ಬಳಿಕ ದಶರಥರಾಜನು ಅಂತಃಪುರವನ್ನು ಸೇರಿ,

ದದೌ ತದಾ॥೨೬॥ ಅರ್ಧಾದರ್ಧಂ ದದೌ ಚಾಪಿ ಸುಮಿತ್ರಾಯೈ ನರಾಧಿಪಃ॥ ಕೈಕೇಯ್ಯೈ ಚಾವಶಿಷ್ಟಾರ್ಧಂ ದದೌ ಪುತ್ರಾರ್ಥಕಾರಣಾತ್ ॥೨೭॥ ಪ್ರದದೌ ಚಾವಶಿಷ್ಟಾರ್ಧಂ ಪಾಯಸಸ್ಯಾಮೃತೋಪಮಂ ॥ ಅನುಚಿಂತ್ಯ ಸುಮಿತ್ರಾಯೈ

---

ದೇವಿಗೆ, ಪಾಯಸಾರ್ಧಂ, ಪಾಯಸ - ಪರಮಾನ್ನದಲ್ಲಿ, ಅರ್ಧಂ - ಅರ್ಧ ಭಾಗವನ್ನು, ದದೌ - ಕೊಟ್ಟನು, ನರಾಧಿಪಃ - ನರಪತಿಯಾದ ದಶರಥನು, ಅರ್ಧಾತ್ - ಕೌಸಲ್ಯಾದೇವಿಗೆ ಕೊಟ್ಟು ಉಳಿದ ಅರ್ಧ ಭಾಗದಲ್ಲಿ, ಅರ್ಧಂ - ಪಾದಾಂಶವನ್ನು, ಸುಮಿತ್ರಾಯೈಚಾಪಿ - ಸುಮಿತ್ರಾದೇವಿಗೆ ಕೊಟ್ಟು ಉಳಿದುದರಲ್ಲಿ, ಅರ್ಧಂ - ಎಂಟನೆಯ ಒಂದು ಭಾಗವನ್ನು, ಪುತ್ರಾರ್ಥಕಾರಣಾತ್- ಪುತ್ರರೂಪ ನಿಮಿತ್ತವಾಗಿ, ಕೈಕೇಯ್ಯೈಚ - ಕೈಕೇಯಿಗೂ, ದದೌ - ಕೊಟ್ಟನು, ಮಹೀಪತಿಃ - ದಶರಥರಾಜನು, (೧) ಅನುಚಿಂತ್ಯ - ಆಲೋಚಿಸಿ, ಅಮೃತೋಪಮಂ-ಅಮೃತಕ್ಕೆ ಸಮಾನವಾದ, ಪಾಯಸಸ್ಯ - ಪರಮಾನ್ನದ, ಅವಶಿಷ್ಟಾರ್ಧಂ, ಅವಶಿಷ್ಟ - ಉಳಿದ, ಅರ್ಧಂ - ಎಂಟನೆಯ ಒಂದು ಭಾಗವನ್ನು, ಸುಮಿತ್ರಾಯೈಚ - ಸುಮಿತ್ರಾ ದೇವಿಗೂ, ಪುನರೇವ- ಮರಳಿ, ಪ್ರದದೌ - ಕೊಟ್ಟನು. (೨) ನರಪತಿಃ - ದಶರಥನು, ಕೌಸಲ್ಯಾಯ್ಯೈ - ಕೌಸಲ್ಯಾ ದೇವಿಗೆ, ಪಾಯಸಾರ್ಧಂ, ಪಾಯಸ - ಪರಮಾನ್ನದಲ್ಲಿ ಅರ್ಧಂ - ಅರ್ಧಾರ್ಧವಾಗಿ, ದದೌ - ವಿಭಾಗ ಮಾಡಿದನು. ಅರ್ಧಾದರ್ಧಂ, ಅರ್ಧಾತ್ - ಅರ್ಧ ಭಾಗದಲ್ಲಿ, ಅರ್ಧಂ-ನಾಲ್ಕನೆಯ ಒಂದು ಭಾಗವನ್ನು, ಕೌಸಲ್ಯಾಯೈ- ಕೌಸಲ್ಯಾ ದೇವಿಗೆ, ಸುಮಿತ್ರಾಯ್ಯೈಚಾಪಿ - ಸುಮಿತ್ರಾದೇವಿಗೂ, ದದೌ - ಕೊಟ್ಟನು ಅವಶಿಷ್ಟಾರ್ಧಂ, ಅವಶಿಷ್ಟ - ಮಿಕ್ಕ ಅರ್ಧಾಂಶದಲ್ಲಿ, ಅರ್ಧಂ-ಚತುರ್ಥಾಂಶವನ್ನು, ಕೈಕೇಯ್ಯೈಚ-ಕೈಕೇಯಿಯಾದೇವಿಗೂ, ಪುತ್ರಾರ್ಥ ಕಾರಣಾತ್ - ಪುತ್ರಾರ್ಥವಾಗಿ, ದದೌ - ಕೊಟ್ಟನು, ನರಾಧಿಪಃ- ನರರಾಜನಾದ ದಶರಥ ರಾಜನು, ಅಮೃತೋಪಮಂ - ಅಮೃತ ಸಮಾನವಾದ, ಪಾಯಸಸ್ಯ- ಪಾಯಸದ, ಅವಶಿಷ್ಟಾರ್ಧಂ, ಅವಶಿಷ್ಟ - ಮಿಕ್ಕ, ಅರ್ಧಂಚ - ಚತುರ್ಥಾಂಶವನ್ನೂ ಕೂಡ, ಅನುಚಿಂತ್ಯ - ಆಲೋಚಿಸಿ, ಸುಮಿತ್ರಾಯ್ಯೈ - ಸುಮಿತ್ರಾ ದೇವಿಗೆ, ಪುನರೇವ - ಮತ್ತು, ಪ್ರದದೌ- ಕೊಟ್ಟನು. (೨) ನರಪತಿಃ - ದಶರಥರಾಯನು, ಕೌಸಲ್ಯಾಯೈ - ಕೌಸಲ್ಯಾದೇವಿಗೆ, ತದಾ-

---

ಕೌಸಲ್ಯೆಯನ್ನು ಕುರಿತು, "ಎಲೈ ಕೌಸಲ್ಯೆಯೇ ! ಪುತ್ರೋತ್ಪತ್ತಿಯಾಗಲೋಸುಗ ಈ ಪಾಯಸವನ್ನು ಸ್ವೀಕರಿಸುವವಳಾಗು" ಎಂದು ಹೇಳಿ, ಆ ಪಾಯಸದಲ್ಲಿ ಸಮವಾಗಿ ಎರಡು ಭಾಗಗಳನ್ನು ಮಾಡಿ, ಒಂದು ಪಾಲನ್ನು ಆಕೆಗೆ ಕೊಟ್ಟು, ಉಳಿದ ಭಾಗದಲ್ಲಿ ಅರ್ಧವನ್ನು ಸುಮಿತ್ರಾ ದೇವಿಗೆ ಹಂಚಿ, ಅದರಲ್ಲಿಯೂ ಮಿಕ್ಕ ಅಂಶದಲ್ಲಿ ಅರ್ಧಪಾಲು ಮಾಡಿ ಕೈಕೇಯಿಯಾದೇವಿಗೆ ಕೊಟ್ಟು, ಮಿಕ್ಕಿರುವ ಅರ್ಧಪಾಲನ್ನು ಯೋಚಿಸಿ, ಮರಳಿ ಸುಮಿತ್ರಾದೇವಿಗೇನೆ ಕೊಟ್ಟನು. ಆ ದಶರಥನ ಪಟ್ಟದರಸಿಯರು ಸಂತೋಷಚಿತ್ತರಾಗಿ, ಆ

---

ಟ (೧)ಪಾಯಸ ವಿತರಣವನ್ನೆಸಗುವ ಎರಡು ಶ್ಲೋಕಗಳನ್ನು ತಮ್ಮ ತಮ್ಮ ಅಭಿಪ್ರಾಯದೊಡನೆ ವ್ಯಾಖ್ಯಾನಿಸಿರುವ ತಿಲಕ, ಮಾಹೇಶ್ವರ ತೀರ್ಥೀಯ, ಗೋವಿಂದ ರಾಜೀಯ, ಕತಕಾದಿಗಳ ಫಲಿತಾಭಿಪ್ರಾಯವು ಹೀಗೆ.—

ಪ್ರಾಜಾಪತ್ಯ ಪುರುಷನಿಂದ ದೊರಕಿದ ಪರಮಾನ್ನವನ್ನು ದಶರಥನು ಅತ್ಯಾದರದಿಂದ ಪರಿಗ್ರಹಿಸಿ, ಮೊದಲು ಜ್ಯೇಷ್ಠ ಮಹಿಷಿಯಾದ ಕೌಸಲ್ಯಾದೇವಿಗೆ ಆ ಪಾಯಸದಲ್ಲಿ ಅರ್ಧವನ್ನು ಕೊಟ್ಟು, ಉಳಿದ ಅರ್ಧದಲ್ಲಿ ಅರ್ಧ ಭಾಗವನ್ನು ಸುಮಿತ್ರಾ ದೇವಿಗೆ ಕೊಟ್ಟು, ಅವಶಿಷ್ಟವಾದ ಚತುರ್ಥಾಂಶವನ್ನು ಎರಡು ಭಾಗ ಮಾಡಿ ಅದರಲ್ಲಿ ಒಂದು ಭಾಗ

ಆಗ, ಪಾಯಸಾರ್ಧಂ, ಪಾಯಸ - ಪರಮಾನ್ನದಲ್ಲಿ, ಅರ್ಧಂ—ಅರ್ಧಾಂಶವನ್ನು, ದದೌ- ಕೊಟ್ಟನು. ಕೌಸಲ್ಯಾ ದೇವಿಗೆ ಕೊಟ್ಟ ಅರ್ಧದಲ್ಲಿ, ಅರ್ಧಂ - ಚತುರ್ಥಾಂಶವನ್ನು, ಸುಮಿತ್ರಾಯೈ - ಸುಮಿತ್ರಾ

ಪಾಯಸವನ್ನು ತೆಗೆದುಕೊಂಡು ಬಹುಮಾನಿಸಿದರು. || ೨೭ || ಆ ಬಳಿಕ ದಶರಥರಾಜನ ಪಟ್ಟದರಸಿಯರು ಉತ್ತಮವಾದ ಪಾಯಸವನ್ನು ಪ್ರತ್ಯೇಕಪ್ರತ್ಯೇಕವಾಗಿ ಭುಜಿಸಿ, ಅಗ್ನಿಗೂ

ವನ್ನು ಕೈಕೇಯಿಗೆ ಕೊಟ್ಟು, ಉಳಿದ ಎಂಟನೆಯ ಒಂದು ಭಾಗ (ಅಷ್ಟಮಾಂಶ) ವನ್ನು ಮರಳಿ ಸುಮಿತ್ರಾದೇವಿಗೇನೆ ಕೊಟ್ಟವನಾದನು

ವ್ಯಾಖ್ಯಾನಕಾರರೇನೋ ಈ ರೀತಿ ಅಭಿಪ್ರಾಯಪಟ್ಟರು ಆದರೆ ವಾಲ್ಮೀಕಿಮುನಿ ಪ್ರಣೀತವಾದ ಮುಂದಿನ ಗ್ರಂಥದಲ್ಲಿ ಈ ಅರ್ಥಕ್ಕೆ ವಿರುದ್ಧವಾದ ಅಭಿಪ್ರಾಯವು ಹೊರಸೂಸುವದಲ್ಲ! ಅದು ಹೇಗಂದರೆ—೧೮ ನೆಯ ಸರ್ಗದಲ್ಲಿ ರಾಮಾವತಾರ ಘಟ್ಟದಲ್ಲಿ "ಕೌಸಲ್ಯಾ ಜನಯದ್ರಾಮಂ ದಿವ್ಯಲಕ್ಷಣ ಲಕ್ಷಿತಂ || ವಿಷ್ಣೋರರ್ಧಂ ಮಹಾಭಾಗಂ ಪುತ್ರಮಿಕ್ಷ್ವಾಕುನಂದನಂ || " ಎಂದಿರುವುದು ಇಲ್ಲಿ ರಾಮನು ಅರ್ಧ ಭಾಗ ಸಂಭೂತನೆಂಬುವದೇನೋ ವ್ಯಕ್ತವಾಗುವುದು ಮುಂದೆ ಅದೇ ೧೮ನೆ ಸರ್ಗದಲ್ಲಿ 'ಭರತೋನಾಮ ಕೈಕೇಯ್ಯಾಂ ಜಜ್ಞೇ ಸತ್ಯಪರಾಕ್ರಮಃ || ಸಾಕ್ಷಾದ್ವಿಷ್ಣೋಶ್ಚತುರ್ಭಾಗಸ್ಸರ್ವೈಸ್ಸಮುದಿತೋಗುಣೈಃ || " ಎಂದು ಹೇಳಿರುವದರಿಂದ ಭರತನು ನಾಲ್ಕನೆಯ ಒಂದು ಭಾಗದ ಅಂಶದವನೆಂದು ಸ್ಪಷ್ಟವಾಗುವಾಗ ಅಷ್ಟಮಾಂಶ ಸಂಭೂತನೆಂದು ಹೇಳಲು ಕಾರಣನೇನು ? ಎಂದು ಶಂಕಿಸಿದರೆ, ಮೇಲಿನ ಶ್ಲೋಕದಲ್ಲಿರುವ "ಸಾಕ್ಷಾದ್ವಿಷ್ಣೋಃ" ಎಂಬ ಪದದಿಂದ ವಿಷ್ಣುವಿನ ಅರ್ಧಾಂಶ ರೂಪಿಯಾದ, ರಾಮನ ಚತುರ್ಥಾಂಶದವನೆಂದು ಅರ್ಥವಾಗುವುದು ಎಂದರೆ ಅಷ್ಟಮಾಂಶದವನೆಂದು ಹೇಳಿದ ಹಾಗಾಯಿತು ಇದರಿಂದ ಏನೂ ವಿರೋಧವಿಲ್ಲ. ಹೀಗಿದ್ದರೂ "ಅಥಲಕ್ಷ್ಮಣ ಶತ್ರುಘ್ನೌ ಸುಮಿತ್ರಾಜನಯತ್ಸುತೌ | ವೀರೌಸರ್ವಾಸ್ತ್ರ ಕುಶಲೌ ವಿಷ್ಣೋರರ್ಧಸಮನ್ವಿತೌ || " ಎಂದು ಹೇಳಿರುವುದರಿಂದ ಲಕ್ಷ್ಮಣ, ಶತ್ರುಘ್ನರು ಚತುರ್ಥಾಂಶಗಳಿಂದ ಹುಟ್ಟಿದವರೆಂದು ವ್ಯಕ್ತವಾಗುತ್ತಿರುವಾಗ, ಸುಮಿತ್ರೆಗಾಗಿ ಹಂಚಿದ ಸಾರ್ಧ ಪಾದಾಂಶ ಭಾಗವು ಹೇಗೆ ತಾನೇ ಸಮಂಜಸವಾದೀತು ಎಂಬ ಸಂಶಯವು ತಲದೋರುವುದು, ಇಲ್ಲಿ ಏಕದೇಶವಾಚಿಕವಾದ 'ಅರ್ಧದ" ಶಬ್ದದ ಮಾನಾಂಶ ಪರತ್ವಾಭಾವದಿಂದ ವಿರೋಧಕ್ಕೆ ಅವಕಾಶವೇ ಇಲ್ಲ ಇದೂ ಅಲ್ಲದೆ ಪಾಯಸವಿತರಣ ರೀತಿಯಿಂದಲೇ ರಾಮ, ಲಕ್ಷ್ಮಣಾದಿಗಳ ಉತ್ಪತ್ತಿ ಕ್ರಮವು ಚಿತ್ರೀಸಲ್ಪಟ್ಟಿರುವುದು, ಅದೆಂತನೆ —, ಮೊದಲು ದಶರಥನು ಪಾಯಸಾರ್ಧವನ್ನು ಕೌಸಲ್ಯೆಗೆ ಕೊಡಲು ಆಕೆಯು ತಕ್ಷಣವೇ ಪ್ರಾಶನಮಾಡಿದವಳಾದಳು ಬಳಿಕ ಸುಮಿತ್ರೆಗೆ ಉಳಿದ ಅರ್ಧದಲ್ಲಿ ಅರ್ಧವನ್ನು ಕೊಡಲು ಆಕೆಯು ಮಿಕ್ಕರ್ಧವನ್ನು ಏನುಮಾಡುವನೆಂಬುದನ್ನು ನೋಡಲು ಪ್ರಾಶನ ಮಾಡದೆ ಸುಮ್ಮನಿದ್ದಳು ಆಗ ದಶರಥನು ಆ ಚತುರ್ಥಾಂಶದಲ್ಲಿ ಎರಡು ಭಾಗಮಾಡಿ ಅದರಲ್ಲೊಂದಾದ ಅಷ್ಟಮಾಂಶವನ್ನು ಕೈಕೇಯಿಗೆ ಕೊಡಲು ಆಕೆಯು ಭಕ್ಷಿಸಿದಳು ಬಳಿಕ ದಶರಥನು ಕೊನಗೆ ಉಳಿದ ಅಷ್ಟಮಾಂಶವನ್ನು ಜ್ಯೇಷ್ಠಾ, ಕನಿಷ್ಠಾ ನ್ಯಾಯವನ್ನರಿತು, ಕೈಕೇಯಿಯು ಅತ್ಯಂತ ಪ್ರಿಯಪಾತ್ರಳಾಗಿದ್ದರೂ ಆ ಪ್ರೀತಿಯು ಭೋಗಕ್ಕೆ ಮಾತ್ರವೇ ಎಂದೂ, ಧರ್ಮ ವಿಷಯದಲ್ಲಲ್ಲವೆಂದೂ ಸಿದ್ಧಾಂತ ಮಾಡಿಕೊಂಡ ಧರ್ಮಜ್ಞನಾದ ದಶರಥನು ಎರಡನೆಯ ಭಾರ್ಯೆಯಾದ ಸುಮಿತ್ರಾದೇವಿಗೇನೇ ಕೊಟ್ಟನು ಇದರಿಂದ ದಶರಥನಿಗೆ ಪಕ್ಷಪಾತವಿಲ್ಲವೆಂದ ಹಾಗಾಯಿತು ಆದುದರಿಂದಲೇ ಮೊದಲು ಪ್ರಾಶನಮಾಡಿದ ಕೌಸಲ್ಯೆಯು ರಾಮಚಂದ್ರನನ್ನು ಮೊದಲು ಪ್ರಸವಿಸಿದಳೆಂದೂ, ಅವಳಾದ ಮೇಲೆ ಎರಡನೆಯ ಸಲ ಪ್ರಾಶನ ಮಾಡಿದ ಕೈಕೇಯಿಯು ಭರತನನ್ನು ಹೆತ್ತಳೆಂದೂ, ಇದಾದ ಮಾರನೆಯ ದಿನ ಸುಮಿತ್ರಾದೇವಿಯು ಲಕ್ಷ್ಮಣ, ಶತ್ರುಘ್ನರನ್ನು ಪ್ರಸವಿಸಿದಳೆಂಬುದೂ ಮೇಲ ನಾವು ಚಿತ್ರಿಸಿದ ಕ್ರಮಕ್ಕನುಗುಣವಾಗಿರುವುದು ಇಂತಿದು ವಾಲ್ಮೀಕಿರಾಮಾಯಣ ವ್ಯಾಖ್ಯಾನಕಾರರೆಲ್ಲರ ಒಟ್ಟು ಅಭಿಮತವು ಕೆಲವರು ಅಧ್ಯಾತ್ಮ ರಾಮಾಯಣ, ಸ್ಕಾಂದಮಹಾಪುರಾಣಾದಿಗಳಲ್ಲಿಯೂ, ಭೋಜರಾಜ, ಕಾಳಿದಾಸಾದಿಗಳು ಬರೆದ ಗ್ರಂಥಗಳಲ್ಲಿಯೂ ಬೇರೆ ವಿಧವಾಗಿ ಹೇಳಿರುವ ಪಾಯಸ ವಿತರಣವನ್ನು ನೋಡಿ, ವಾಲ್ಮೀಕಿಯ ಗ್ರಂಥವನ್ನಾಕ್ಷೇಪಿಸುವರು ಆದರೆ ಜ್ಯೇಷ್ಠಾ, ಕನಿಷ್ಠಾನ್ಯಾಯವೂ, ದಶರಥನ ಸ್ವಹಸ್ತದತ್ತ ಪಾಯಸ ವಿತರಣವೂ ಅಧ್ಯಾತ್ಮರಾಮಾಯಣಾದಿ ಮೇಲಿನ ಗ್ರಂಥಗಳಲ್ಲಿ ಹೇಳಲ್ಪಡದ ಇರುವದರಿಂದಲೂ, ಆ ಗ್ರಂಥಗಳಲ್ಲಿ ಹೇಳಿದ ಪಾಯಸ ವಿತರಣ ವಿಷಯವು ಕಲ್ಪಾಂತರ ವಿಷಯವಾದುದರಿಂದಲೂ, ಆದಿಕವಿಯ ಪಾಯಸ ವಿತರಣವಿಷಯದಲ್ಲಿ ಲೇಶಮಾತ್ರವೂ ದೋಷವಿರುವದಿಲ್ಲ ಇದಕ್ಕಿಂತಲೂ ಹೆಚ್ಚಿನ ವಿಷಯವನ್ನು ತಿಳಿಯಲಾಶಿಸುವ ವಾಚಕರು " ರಾಮಾಯಣ ರಹಸ್ಯ ರತ್ನಾಕರ " ವನ್ನು ನೋಡಿ ತಿಳಿಯಬಹುದು ಗ್ರಂಥ ಬಾಹುಳ್ಯದಿಂದ ಅದನ್ನೆಲ್ಲ ಇಲ್ಲಿ ಕೊಟ್ಟಿರುವದಿಲ್ಲ.

(೨). ಇದು ಮುನಿಭಾವಬೋಧಿನೀ ಕಾರನ ಅಭಿಪ್ರಾಯ.

ಪುನರೇವ ಮಹೀಪತಿಃ || ೨೮ || ಏವಂ ತಾಸಾಂ ದದೌ ರಾಜಾ ಭಾರ್ಯಾಣಾಂ ಪಾಯಸಂ ಪೃಥಕ್ || ತಾಸ್ತ್ವೇ ತತ್ಪಾಯಸಂ ಪ್ರಾಪ್ಯ ನರೇಂದ್ರಸ್ಯೋತ್ತಮಾಸ್ತ್ರಿಯಃ ||೨೯|| ಸಮಾನಂ ಮೇನಿರೇ ಸರ್ವಾಃ ಪ್ರಹರ್ಷೋದಿತಚೇತಸಃ|| ತತಸ್ತು ತಾಃ ಪ್ರಾಶ್ಯ ತದುತ್ತಮಸ್ತ್ರಿಯೊ ಮಹೀಪತೇ ರುತ್ತಮ ಪಾಯಸಂ ಪೃಥಕ್ || ಹುತಾಶನಾದಿತ್ಯ ಸಮಾನತೇಜಸ ಶ್ಚಿರೇಣ ಗರ್ಭಾ ಪ್ರತಿಪೇದಿರೇ ತದಾ || ೩೦ || ತತಸ್ತು ರಾಜಾ ಪ್ರಸಮೀಕ್ಷ್ಯ ತಾಃ ಸ್ತ್ರಿಯಃ ಪ್ರರೂಢಗರ್ಭಾಃ

---

ದೇವಿಗೆ, ಕೌಸಲ್ಯಯಾ - ಕೌಸಲ್ಯಾ ದೇವಿಯಿಂದ, ದದೌ - ಕೊಡಿಸಿದನು, ನರಾಧಿಪಃ - ದಶರಥ ರಾಯನು, ಅವಶಿಷ್ಟಾರ್ಧಂ - ಉಳಿದ ಅರ್ಧವನ್ನು, ಪುತ್ರಾರ್ಥಕಾರಣಾತ್ - ಪುತ್ರರೂಪ ಪ್ರಯೋಜನ ನಿಮಿತ್ತವಾಗಿ, ಕೈಕೇಯ್ಯೈ - ಕೈಕೇಯಿದೇವಿಗೆ, ದದೌ - ಕೊಟ್ಟನು, ಮಹೀಪತಿಃ - ದಶರಥ ರಾಜನು, ಅನುಚಿಂತ್ಯ - ಆಲೋಚಿಸಿ, ಅವಶಿಷ್ಟಾರ್ಧಂ, ಅವಶಿಷ್ಟ - ಕೈಕೇಯಿಗೆ ಕೊಟ್ಟ ಅರ್ಧ ಭಾಗದಲ್ಲಿ, ಅರ್ಧಂ - ಚತುರ್ಥಾಂಶವನ್ನು, ಸುಮಿತ್ರಾಯೈ - ಸುಮಿತ್ರೆಗೆ, ಪುನರೇವ - ಮತ್ತು, ಕೈಕೇಯ್ಯಾ - ಕೈಕೇಯೀ ದೇವಿಯಿಂದ, ಪ್ರದದೌ - ಕೊಡಿಸಿದನು. || ೨೮ || ರಾಜಾ - ದಶರಥ ರಾಜನು, ಏವಂ - ಈ ರೀತಿ, ತಾಸಾಂ ಭಾರ್ಯಾಣಾಂ - ಆ ಮೂರು ಮಂದಿ ಪತ್ನಿಯರಿಗೂ- ಪಾಯಸಂ - ಪಾಯಸವನ್ನು, ಪೃಥಕ್ - ಪ್ರತ್ಯೇಕವಾಗಿ, ದದೌ - ಕೊಟ್ಟನು. ||೨೯|| ನರೇಂದ್ರಸ್ಯ- ರಾಜನ, ಉತ್ತಮಾಸ್ತ್ರಿಯಃ-ಪಟ್ಟದರಸಿಯರಾದ, ತಾಃ - ಆ ಕೌಸಲ್ಯಾ, ಸುಮಿತ್ರಾ, ಕೈಕೇಯಿಗಳೆಂಬ, ಸರ್ವಾಃ-ಎಲ್ಲರೂ, ಪ್ರಹರ್ಷೋದಿತಚೇತಸಃ, ಪ್ರಹರ್ಷೋದಿತ-ಸಂತೋಷವನ್ನು ಹೊಂದಿದ, ಚೇತಸಃ - ಮನಸ್ಸುಳ್ಳವರಾಗಿ, ಸಮಾನಂ - ಬಹುಮಾನವನ್ನು, ಮೇನಿರೇ- ಎಣಿಸಿದರು || ೩೦ || ತತಸ್ತು - ಬಳಿಕ, ಮಹೀಪತೇಃ - ದಶರಥ ರಾಯನ, ಉತ್ತಮಾಸ್ತ್ರಿಯಃ – ಪಟ್ಟದ ರಾಣಿಯರಾದ, ತಾಃ - ಆ ಮೂವರು, ತತ್ - ಆ, ಉತ್ತಮಪಾಯಸಂ - ಉತ್ಕೃಷ್ಟವಾದ ಪರಮಾನ್ನವನ್ನು, ಪೃಥಕ್ ಪ್ರತ್ಯೇಕವಾಗಿ, ಪ್ರಾಶ್ಯ - ಭುಜಿಸಿ, ಹುತಾಶನಾದಿತ್ಯ ಸಮಾನ ತೇಜಸಃ, ಹುತಾಶನ- ಅಗ್ನಿಗೂ, ಆದಿತ್ಯ - ಸೂರ್ಯನಿಗೂ, ಸಮಾನ-ಸರಿಯಾದ, ತೇಜಸಃ - ತೇಜಸ್ಸುಳ್ಳವರಾಗಿ, ತದಾ- ಆ ಕಾಲದಲ್ಲಿ, ಚಿರೇಣ - ಬಹುಕಾಲದಿಂದ, ಗರ್ಭಾನ್ - ಗರ್ಭಗಳನ್ನು, ಪ್ರತಿಪೇದಿರೇ - ಹೊಂದಿದರು. || ೩೧ || ತತಃ - ಬಳಿಕ, ರಾಜಾ - ದಶರಥರಾಯನು, ಪ್ರರೂಢಗರ್ಭಾಃ, ಪ್ರರೂಢ - ಅಭಿವೃದ್ಧಿಯಾದ, ಗರ್ಭಾಃ - ಗರ್ಭಗಳುಳ್ಳ, ತಾಸ್ಸ್ತ್ರಿಯಃ - ಆ ಸ್ತ್ರೀಯರನ್ನು, ಪ್ರಸಮೀಕ್ಷ್ಯ- ಕಂಡು, ಪ್ರತಿಲಬ್ಧಮಾನಸಃ, ಪ್ರತಿಲಬ್ಧ - ಸ್ವಸ್ಥವಾದ, ಮಾನಸಃ-ಮನಸ್ಸುಳ್ಳವನಾಗಿ, ತ್ರಿದಿವೇ - ಸ್ವರ್ಗದಲ್ಲಿ, ಸುರೇಂದ್ರಸಿದ್ಧರ್ಷಿಗಣಾಭಿಪೂಜಿತಃ, ಸುರೇಂದ್ರ - ದೇವತಾಶ್ರೇಷ್ಠರಿಂದಲೂ, ಸಿದ್ಧ- ಸಿದ್ಧರಿಂದಲೂ, ಋಷಿಗಣ - ಋಷಿಗಳ ಸಮೂಹದಿಂದಲೂ, ಅಭಿಪೂಜಿತಃ - ಪೂಜಿಸಲ್ಪಟ್ಟ, ಹರ್ಯ್ಯಥಾ - ದೇವೇಂದ್ರನಂತೆ, ಹೃಷ್ಟಃ - ಸಂತೋಷಗೊಂಡವನು, ಬಭೂವ - ಆದನು.

---

ಸೂರ್ಯನಿಗೂ, ಸದೃಶವಾದ ತೇಜಸ್ಸುಳ್ಳವರಾಗಿ ಗರ್ಭವನ್ನು ಧರಿಸಿದರು. ಅನಂತರ ದಶರಥರಾಜನು ಗರ್ಭಿಣಿಯರಾದ ಆ ಪಟ್ಟದರಸಿಯರನ್ನು ನೋಡಿ, ಸಂಪೂರ್ಣ ಮನೋರಥವುಳ್ಳವನಾಗಿ ದೇವತಾಗಣಗಳಿಂದಲೂ, ಋಷಿತಂಡಗಳಿಂದಲೂ, ಪೂಜಿಸಲ್ಪಡುತ್ತಿರುವ

ಪ್ರತಿ ಲಬ್ಧಮಾನಸಃ ॥ ಬಭೂವಹೃಷ್ಟ ಸ್ತ್ರಿದಿವೇ ಯಥಾ ಹರಿ ಸ್ಸುರೇಂದ್ರ ಸಿದ್ಧರ್ಷಿ ಗಣಾಭಿಪೂಜಿತಃ ॥೩೨॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷೋಡಶಸ್ಸರ್ಗಃ.



(ತಿ)ತ್ರಿದಿವೇ - ಸ್ವರ್ಗದಲ್ಲಿ, ಯಥಾ - ಹೇಗೆ, ಹರಿಃ-ದೇವೇಂದ್ರನು, ಹೃಷ್ಟಃ - ಸಂತೋಷಚಿತ್ತನು, ಬಭೂವ - ಆದನೋ, ತಥಾ - ಹಾಗೆಯೆ, ಹೃಷ್ಟಃ - ಸಂತೋಷಗೊಂಡವನಾಗಿ, ಸುರೇಂದ್ರಸಿದ್ಧರ್ಷಿ ಗಣಾಭಿಪೂಜಿತಃ, ಸುರೇಂದ್ರ - ದೇವತಾಶ್ರೇಷ್ಠರ, ಸಿದ್ಧ - ಸಿದ್ಧರ, ಋಷಿ - ಋಷಿಗಳ, ಗಣ - ತಂಡಗಳಿಂದ, ಅಭಿಪೂಜಿತಃ - ಪೂಜಿಸಲ್ಪಟ್ಟವನು, ಬಭೂವ - ಆದನು. ॥೩೨॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷೋಡಶಸ್ಸರ್ಗಃ.



ದೇವೇಂದ್ರನು ಸ್ವರ್ಗದಲ್ಲಿ ಸಂತೋಷಚಿತ್ತನಾಗಿರುವಂತೆ ಸಂತುಷ್ಟಾಂತರಂಗ ವುಳ್ಳವನಾದನು. ॥೩೨॥

ಇಂತಿದು ಪಾಯಸ ವಿತರಣವೆಂಬ ಹದಿನಾರನೆಯ ಸರ್ಗವು

ಸಮಾಪ್ತವಾದುದು.



# ಬಾಲಕಾಂಡೇ ಸಪ್ತ ದಶಸ್ಸರ್ಗಃ.



ಪುತ್ರತ್ವಂತು ಗತೇ ವಿಷ್ಣೌ ರಾಜ್ಞಸ್ತಸ್ಯಮಹಾತ್ಮನಃ || ಉವಾಚ ದೇವತಾಸ್ಸರ್ವಾ ಸ್ಸ್ವಯಂಭೂರ್ಭಗವಾನಿದಂ ||೧|| ಸತ್ಯಸಂಧಸ್ಯ ವೀರಸ್ಯ ಸರ್ವೇಷಾಂನೋ ಹಿತೈಷಿಣಃ || ವಿಷ್ಣೋಃ ಸ್ಸಹಾಯಾನ್ ಬಲಿನ ಸ್ಸೃಜಧ್ವಂ ಕಾಮರೂಪಿಣಃ || ೨ || ಮಾಯಾವಿದಶ್ಚ ಶೂರಾಂಶ್ಚ ವಾಯುವೇಗ ಸಮಾನ್ಜವೇ|| ನಯಜ್ಞಾನ್ ಬುದ್ಧಿ ಸಂಪನ್ನಾನ್ ವಿಷ್ಣುತುಲ್ಯ ಪರಾಕ್ರಮಾನ್ ||೩|| ಅಸಂಹಾರ್ಯಾನುಪಾಯಜ್ಞಾನ್ ದಿವ್ಯಸಂಹನನಾನ್ವಿತಾನ್|| ಸರ್ವಾಸ್ತ್ರ ಗುಣಸಂಪನ್ನಾ ನಮೃತಪ್ರಾಶನಾನಿವ ||೪||

---

ವಿಷ್ಣೌತು - ಶ್ರೀ ಮಹಾವಿಷ್ಣುವು, ಮಹಾತ್ಮನಃ - ಪುಣ್ಯವಂತನಾದ, ತಸ್ಯರಾಜ್ಞಃ- ಆ ದಶರಥರಾಯನಿಗೆ, ಪುತ್ರತ್ವಂ - ಪುತ್ರಭಾವವನ್ನು, ಗತೇಸತಿ- ಹೊಂದುತ್ತಿರಲು, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಸ್ವಯಂಭೂಃ - ಚತುರ್ಮುಖ ಬ್ರಹ್ಮನು, ಸರ್ವಾಃ- ಸಮಸ್ತರಾದ, ದೇವತಾಃ ದೇವತೆಗಳನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. || ೧ || ಸರ್ವೇಷಾಂ - ಸಮಸ್ತರಾದ, ನಃ - ನಮಗೆ, ಹಿತೈಷಿಣಃ - ಹಿತವನ್ನು ಕೋರುತ್ತಿರುವ, ಸತ್ಯಸಂಧಸ್ಯ - ಸತ್ಯಪ್ರತಿಜ್ಞೆಯುಳ್ಳ, ವೀರಸ್ಯ - ಶೂರನಾದ, ಬಲಿನಃ ಬಲಾಢ್ಯನಾದ, ವಿಷ್ಣೋಃ-ಶ್ರೀ ಮಹಾವಿಷ್ಣುವಿಗೆ, ಕಾಮರೂಪಿಣಃ - ಕಾಮರೂಪಿಗಳಾದ, ಸಹಾಯಾನ್- ಕಿಂಕರರನ್ನು, ಸೃಜಧ್ವಂ- ಸೃಷ್ಟಿಮಾಡಿರಿ. ||೨|| ಮಾಯಾವಿದಃ - ಕಪಟವನ್ನು ತಿಳಿದಿರುವ, ಶೂರಾಂಶ್ಚ - ಶೂರರೂ ಆದ, ಜವೇ - ವೇಗದಲ್ಲಿ, ವಾಯುವೇಗಸಮಾನ್, ವಾಯುವೇಗ-ವಾಯುವೇಗಕ್ಕೆ, ಸಮಾನ್-ಸಮಾನರಾದ, ನಯಜ್ಞಾನ್-ಯುಕ್ತಿವಂತರಾದ, ಬುದ್ಧಿಸಂಪನ್ನಾನ್-ತಿಳಿವಳಿಕೆಯುಳ್ಳ, ವಿಷ್ಣುತುಲ್ಯಪರಾಕ್ರಮಾನ್, ವಿಷ್ಣು - ಶ್ರೀ ಮಹಾವಿಷ್ಣುವಿಗೆ, ತುಲ್ಯ - ಸಮಾನವಾದ, ಪರಾಕ್ರಮಾನ್ - ಪರಾಕ್ರಮಗಳುಳ್ಳ, ಅಸಂಹಾರ್ಯಾನ್ - ಸಂಹರಿಸಲಸಾಧ್ಯರಾದ, ಉಪಾಯಜ್ಞಾನ್-ಸಾಧ್ಯುಪಾಯಗಳನ್ನು ತಿಳಿದಿರುವ,

---

ಶ್ರೀಮನ್ನಾರಾಯಣ ಮೂರ್ತಿಯು ಮಹಾತ್ಮನಾದ ದಶರಥರಾಜನಿಗೆ ಪುತ್ರಭಾವವನ್ನು ಹೊಂದಿದವನಾಗಲು, ಜಗತ್ಪಿತಾಮಹನಾದ ಬ್ರಹ್ಮನು ದೇವತೆಗಳನ್ನುಕುರಿತು ||೧|| ‘‘ನಮ್ಮೆಲ್ಲರಿಗೂ ಪ್ರಿಯವನ್ನುಂಟುಮಾಡುವ ಮಹಾವೀರನಾದ ಶ್ರೀ ಮಹಾವಿಷ್ಣುವಿಗೆ ಸಹಾಯಭೂತರಾಗಿಯೂ, ಬಲವಂತರಾಗಿಯೂ, ಕಾಮರೂಪಿಗಳಾಗಿಯೂ, ಬಹುಮಾಯೆಗಳನ್ನರಿತವರಾಗಿಯೂ, ಶೂರರಾಗಿಯೂ, ವಾಯುವಿನಂತೆ ಬಹು ವೇಗವುಳ್ಳವರಾಗಿಯೂ, ನಯಜ್ಞರಾಗಿಯೂ, ಮತಿವಂತರಾಗಿಯೂ, ವಿಷ್ಣುವಿಗೆ ಸಮಾನವಾದ ಪರಾಕ್ರಮವುಳ್ಳವರಾಗಿಯೂ, ವಧಿಸಲಸಾಧ್ಯರಾಗಿಯೂ, ಯುಕ್ತಿವಂತರಾಗಿಯೂ, ದಿವ್ಯವಾದ ಆಕಾರವುಳ್ಳವರಾಗಿಯೂ, ಸರ್ವಾಸ್ತ್ರ ಪ್ರಯೋಗ, ಉಪಸಂಹಾರಾದಿ ಗುಣಗಳಿಂದ ಯುಕ್ತರಾಗಿಯೂ,

ಅಪ್ಸರಸ್ಸು ಚ ಮುಖ್ಯಾಸು ಗಂಧರ್ವೀಣಾಂ ತನೂಷು ಚ|| ಯಕ್ಷಪನ್ನಗ ಕನ್ಯಾಸು ಋಕ್ಷೀ ವಿದ್ಯಾಧರೀಷು ಚ||ಕಿನ್ನರೀಣಾಂ ಚ ಗಾತ್ರೇಷು ವಾನರೀಣಾಂ ತನೂಷು ಚ||) ಸೃಜಧ್ವಂ ಹರಿರೂಪೇಣ ಪುತ್ರಾಂಸ್ತುಲ್ಯ ಪರಾಕ್ರಮಾನ್||೫|| ಪೂರ್ವಮೇವ ಮಯಾ ಸೃಷ್ಟೋ ಜಾಂಬವಾನೃಕ್ಷಪುಂಗವಃ||ಜೃಂಭಮಾಣಸ್ಯ ಸಹಸಾ ಮಮ ವಕ್ತ್ರಾದಜಾಯತ ||೬|| ತೇ ತಥೋಕ್ತಾ ಭಗವತಾ ತತ್ಪ್ರತಿಶ್ರುತ್ಯ ಶಾಸನಂ|| ಜನಯಾಮಾಸುರೇವಂ ತೇ ಪುತ್ರಾನ್ವಾನರ ರೂಪಿಣಃ ||೭|| ಋಷಯಶ್ಚ ಮಹಾತ್ಮಾ ನಸ್ಸಿದ್ಧ

ಸಿಹ್ಮಸಂಹನನಾನ್ವಿತಾನ್, ಸಿಂಹ್ಮಸಂಹನನ ಸಿಂಹ್ಮಗಳಿಗೆ ಸಮಾನವಾದ ಶರೀರಗಳಿಂದ, ಅನ್ವಿತಾನ್- ಕೂಡಿಕೊಂಡಿರುವ, ಸರ್ವಾಸ್ತ್ರಗುಣಸಂಪನ್ನಾನ್, ಸರ್ವ - ಸಮಸ್ತವಾದ, ಅಸ್ತ್ರ-ಅಸ್ತ್ರ ಶಸ್ತ್ರಗಳ, ಗುಣ - ತಿಳಿವಳಿಕೆಯೆಂಬ ಗುಣದಿಂದ, ಸಂಪನ್ನಾನ್ - ಕೂಡಿಕೊಂಡಿರುವ, ಅಮೃತಪ್ರಾಶನಾನಿವಸ್ಥಿತಾನ್ - ಅಮೃತಪಾನ ಮಾಡಿದಂತಿರುವ, ತುಲ್ಯಪರಾಕ್ರಮಾನ್ ತುಲ್ಯ - ಸಮಾನವಾದ, ಪರಾಕ್ರಮಾನ್ - ಶಕ್ತಿಯುಳ್ಳ, ಹರಿರೂಪೇಣ - ವಾನರ ರೂಪದಿಂದ, ಉಪಲಕ್ಷಿತಾನ್ - ಕೂಡಿಕೊಂಡಿರುವ, ಪುತ್ರಾನ್ - ಮಕ್ಕಳನ್ನು, ಮುಖ್ಯಾಸು - ಮುಖ್ಯರಾದ, ಅಪ್ಸರಸ್ಸು - ಅಪ್ಸರ ಸ್ತ್ರೀಯರಲ್ಲಿಯೂ, ಗಂಧರ್ವೀಣಾಂ - ಗಂಧರ್ವ ಸ್ತ್ರೀಯರ, ತನೂಷು ಚ - ಶರೀರಗಳಲ್ಲಿಯೂ, ಸೃಜಧ್ವಂ- ಸೃಷ್ಟಿಮಾಡಿರಿ. ||೫|| ಪೂರ್ವಮೇವ - ಪೂರ್ವದಲ್ಲಿಯೆ, ಮಯಾ - ನನ್ನಿಂದ, ಜಾಂಬವಾನ್- ಜ್ಞಾಂಬವಂತನೆಂಬ, ಋಕ್ಷಪುಂಗವಃ ಶ್ರೇಷ್ಠನಾದ ಕರಡಿ ಜಾತೀಯನು, ಸೃಷ್ಟಃ - ಸೃಷ್ಟಿಮಾಡಲ್ಪಟ್ಟನು, ಜೃಂಭಮಾಣಸ್ಯ - ಆಕಳಿಸುತ್ತಿರುವ, ಮಮ - ನನ್ನ, ವಕ್ತ್ರಾತ್-ಮುಖದಿಂದ, ಸಹಸಾ-ಜಾಗ್ರತೆಯಾಗಿ, ಅಜಾಯತ - ಹುಟ್ಟಿದನು. ||೬|| ಭಗವತಾ - ಪೂಜ್ಯನಾದ ಬ್ರಹ್ಮನಿಂದ, ತಥಾ- ಆ ಪರಿಯಾಗಿ, ಉಕ್ತಾಃ - ಹೇಳಲ್ಪಟ್ಟ, ತೇ - ಪ್ರಸಿದ್ಧರಾದ, ತೇ - ಆ ದೇವತೆಗಳು, ತಚ್ಛಾಸನಂ- ಆ ಬ್ರಹ್ಮನಾಜ್ಞೆಯನ್ನು, ಪ್ರತಿಶ್ರುತ್ಯ - ಕೇಳಿ, ವಾನರರೂಪಿಣಃ ವಾನರಾಕಾರಗಳುಳ್ಳ, ಪುತ್ರಾನ್- ಪುತ್ರರನ್ನು, ಏವಂ - ಇದೇ ಪ್ರಕಾರವಾಗಿ, ಜನಯಾಮಾಸುಃ - ಹುಟ್ಟಿಸಿದರು. ||೭|| ಮಹಾತ್ಮಾನಂ - ಮಹಾತ್ಮರಾದ, ಋಷಯಶ್ಚ - ಋಷಿಗಳೂ, ಸಿದ್ಧವಿದ್ಯಾಧರೋರಗಾಃ, ಸಿದ್ಧ-ಸಿದ್ಧರೂ,

ಅಮೃತ ಪ್ರಾಶನವನ್ನು ಮಾಡಿದವರಂತೆ ಕ್ಷುತ್ಪಿಪಾಸಾದಿ ರಹಿತರಾಗಿಯೂ, ಸಮಾನವಾದ ಪರಾಕ್ರಮವುಳ್ಳವರಾಗಿಯೂ, ಇರುವ ಪುತ್ರರನ್ನು ವಾನರಾಕಾರ ವುಳ್ಳವರಾಗಿ ಅಪ್ಸರ ಸ್ತ್ರೀಯರಲ್ಲಿಯೂ, ಗಂಧರ್ವಾಂಗನೆಯರಲ್ಲಿಯೂ ಸೃಜಿಸಿರಿ ||೨-೫|| ಪೂರ್ವಕಾಲದಲ್ಲಿಯೇ ಜಾಂಬವಂತನೆಂಬ ಕರಡಿ ಜಾತೀಯನು ನನ್ನಿಂದ ಸೃಜಿಸಲ್ಪಟ್ಟಿರುವನು. ನಾನು ಆಕಳಿಸುತ್ತಿರುವ ಸಮಯದಲ್ಲಿ ಆ ಜಾಂಬವಂತನು ನನ್ನ ಮುಖದಿಂದ ಹುಟ್ಟಿದನು." ಎಂದು ನುಡಿದನು. ಆಗ ಭಗವಂತನಾದ ನಾಕ್ಷಾಚ್ಚತುರ್ಮುಖನ ಮಾತನ್ನು ಕೇಳಿದ್ದ ಆ ದೇವತೆಗಳೂ, ಮಹಾತ್ಮರಾದ ಋಷಿಗಳೂ, ಸಿದ್ಧ, ವಿದ್ಯಾಧರ, ನಾಗದೇವತೆಗಳೆಂಬುವರೂ, ಚಾರಣರೂ, ಸಹ ಆತನಾಜ್ಞೆಯಂತೆ, ಕಾಮರೂಪಿಗಳಾದ ಪುತ್ರರನ್ನೀರೀತಿ ಸೃಜಿಸಿದವರಾದರು. ||೬-೮|| ಇಂದ್ರನು ತನಗೆ ಸಮಾನವಾದ ಕಾಂತಿಯುಳ್ಳ ಕಪಿಸಾರ್ವಭೌಮನಾದ ವಾಲಿಯೆಂಬವನನ್ನು ಸೃಜಿಸಲು, ಸೂರ್ಯನು ಸುಗ್ರೀವನ್ನು ಸೃಷ್ಟಿಸಿದನು. || ೯ ||

ವಿದ್ಯಾಧರೋರಗಾಃ|| ಚಾರಣಾಶ್ಚಸುತಾನ್ ವೀರಾನ್ ಸಸೃಜುರ್ವನ ಚಾರಿಣಃ ||೮||
ವಾನರೇಂದ್ರಂ ಮಹೇಂದ್ರಾಭಮಿಂದ್ರೋ ವಾಲಿನ ಮೂರ್ಜಿತಂ || ಸುಗ್ರೀವಂ
ಜನಯಾಮಾಸ ತಪನಸ್ತಪತಾಂವರಃ||೯||ಬೃಹಸ್ಪತಿ ಸ್ತ್ವಜನಯ ತ್ತಾರಂ ನಾಮ
ಮಹಾಹರಿಂ || ಸರ್ವವಾನರ ಮುಖ್ಯಾನಾಂ ಬುದ್ಧಿ ಮಂತಮನುತ್ತಮಂ ||೧೦||
ಧನದಸ್ಯಸುತಶ್ಶ್ರೀಮಾನ್ ವಾನರೋ ಗಂಧಮಾದನಃ || ವಿಶ್ವಕರ್ಮಾ ತ್ವಜನಯ
ನ್ನಳಂ ನಾಮ ಮಹಾಹರಿಂ ||೧೧|| ಪಾವಕಸ್ಯಸುತ ಶ್ಶ್ರೀಮಾನ್ನೀಲೋಗ್ನಿಸದೃಶ
ಪ್ರಭಃ || ತೇಜಸಾ ಯಶಸಾವೀರ್ಯಾ ದತ್ಯರಿಚ್ಯತ ವಾನರಾನ್ ||೧೨|| ರೂಪದ್ರವಿಣ

---

ವಿದ್ಯಾಧರ - ವಿದ್ಯಾಧರರೂ, ಉರಗಾಃ - ಸರ್ಪಗಳೂ, ಚಾರಣಾಶ್ಚ - ಚಾರಣರೂ, ವೀರಾನ್-ಶೂರರಾದ, ವನಚಾರಿಣಃ ವಾನರ ರೂಪಿಗಳಾದ, ಸುತಾನ್- ಮಕ್ಕಳನ್ನು, ಸಸೃಜುಃ-ಸೃಜಿಸಿದರು- ||೮|| ಇಂದ್ರಃ - ದೇವೇಂದ್ರನು, ಮಹೇಂದ್ರಾಭಂ, ಮಹೇಂದ್ರ - ದೇವೇಂದ್ರನ, ಅಭಂ-ಪ್ರಕಾಶದಂತೆ ಪ್ರಕಾಶಮುಳ್ಳ, ಊರ್ಜಿತಂ - ಪ್ರವರ್ಧಮಾನನಾದ, ವಾಲಿನಂ - ವಾಲಿಯೆಂಬ, ವಾನರೇಂದ್ರಂ ವಾನರಾಧ್ಯಕ್ಷನನ್ನು, ಜನಯಾಮಾಸ - ಹುಟ್ಟಿಸಿದನು, ತಪತಾಂ - ತಪಿಸಿಸುವವರ, ವರಃ- ಶ್ರೇಷ್ಠನಾದ, ತಪನಃ - ಸೂರ್ಯನು, ಸುಗ್ರೀವಂ - ಸುಗ್ರೀವನನ್ನು, ಜನಯಾಮಾಸ- ಹುಟ್ಟಿಸಿದನು. ||೯|| ಬೃಹಸ್ಪತಿಸ್ತು - ಬೃಹಸ್ಪತಿಯು, ಸರ್ವವಾನರಮುಖ್ಯಾನಾಂ- ಸಮಸ್ತ ವಾನರ ಶ್ರೇಷ್ಠರೊಳಗೆ ಬುದ್ಧಿಮಂತಂ - ಬುದ್ಧಿಶಾಲಿಯಾದ, ಅನುತ್ತಮಂ- ಸರ್ವೋತ್ತಮನಾದ, ತಾರ.ನಾಮ- ತಾರನೆಂಬ, ಪ್ರಸಿದ್ಧನಾದ, ಮಹಾಹರಿಂ - ಮಹಾ ಕಪಿಯನ್ನು, ಅಜನಯತ್ - ಹುಟ್ಟಿಸಿದನು ||೧೦|| ಗಂಧಮಾದನಃ - ಗಂಧಮಾದನನೆಂಬ, ಶ್ರೀಮಾನ್ - ಸಂಪದ್ಯುಕ್ತನಾದ, ವಾನರಃ - ಕಪಿಯು, ಧನದಸ್ಯ- ಕುಬೇರನಿಗೆ, ಸುತಃ - ಕುವರನು ವಿಶ್ವಕರ್ಮಾತು - ವಿಶ್ವಕರ್ಮ ಬ್ರಹ್ಮನು, ನಳಂನಾಮ-ನಳನೆಂದು ಪ್ರಸಿದ್ಧನಾದ, ಮಹಾಹರಿಂ-ಮಹಾಕಪಿಯನ್ನು, ಅಜನಯತ -ಹುಟ್ಟಿಸಿದನು. ||೧೧|| ಶ್ರೀಮಾನ್= ಸಂಪದ್ಯುಕ್ತನಾದ, ಅಗ್ನಿಸದೃಶಪ್ರಭಃ, ಅಗ್ನಿ - ಅಗ್ನಿಗೆ, ಸದೃಶ - ಸಮಾನವಾದ ,ಪ್ರಭಃ - ಕಾಂತಿಯುಳ್ಳ, ನೀಲಃ - ನೀಲನೆಂಬ, ಪಾವಕಸ್ಯ ಅಗ್ನಿಯ, ಸುತಃ-ಕುಮಾರನು, ತೇಜಸಾ-ತೇಜಸ್ಸಿನಿಂದ, ಯಶಸಾ-ಕೀರ್ತಿಯಿಂದ, ವೀರ್ಯಾತ್ - ಪರಾಕ್ರಮದಿಂದ, ವಾನರಾನ್ - ವಾನರರನ್ನು, ಅತ್ಯರಿಚ್ಯತ- ಅತಿಕ್ರಮಿಸಿದವನಾದನು. ||೧೨|| ರೂಪದ್ರವಿಣಸಂಪನ್ನೌ, ರೂಪ - ಸೌಂದರ್ಯದಿಂದಲೂ,

---

ಬೃಹಸ್ಪತಿಯು ಸಮಸ್ತರಾದ ವಾನರೋತ್ತಮರಲ್ಲಿ ಮಹಾ ಮತಿವಂತನಾಗಿಯೂ, ಸರ್ವೋತ್ತಮನಾಗಿಯೂ, ಇರುವ ತಾರನೆಂಬ ಮಹಾಕಪಿಯನ್ನು ಸೃಜಿಸಿದನು || ೧೦ || ಗಂಧಮಾದನನೆಂಬ ಸಂಪದ್ಯುಕ್ತನಾದ ವಾನರನು ಕುಬೇರನ ಪುತ್ರನಾಗಿ ಜನಿಸಿದನು. ಬಳಿಕ ದೇವಶಿಲ್ಪಿಯಾದ ವಿಶ್ವಕರ್ಮನು ನಳನೆಂಬ ಮಹಾವಾನರನನ್ನು ಹುಟ್ಟಿಸಿದನು. || ೧೧ || ಪಾವಕಪುತ್ರನಾದ ನೀಲನೆಂಬ ಕಪಿನಾಯಕನು, ಅಗ್ನಿಗೆ ಸದೃಶವಾದ ಪ್ರಭೆಯುಳ್ಳವನಾಗಿ, ತೇಜಸ್ಸಿನಿಂದಲೂ, ಯಶಸ್ಸಿನಿಂದಲೂ, ವೀರ್ಯದಿಂದಲೂ, ಸರ್ವವಾನರರಿಗಿಂತಲೂ ಅತಿಶಯವಾಗಿದ್ದನು.|| ೧೨ ||ರೂಪದಿಂದಲೂ, ಬಲದಿಂದಲೂ, ಯುಕ್ತವಾಗಿರುವ ಅಶ್ವಿನೀ ದೇವತೆಗಳು, ಮೈಂದ, ದ್ವಿವಿದರೆಂಬ ಮಹಾ ಪರಾಕ್ರಮಶಾಲಿಗಳಾದ ವಾನರರಿಬ್ಬರನ್ನು ಹುಟ್ಟಿಸಿದರು

ಸಂಪನ್ನಾ ವಶ್ವಿನೌ ರೂಪಸಮ್ಮತೌ|| ಮೈಂದಂಚ ದ್ವಿವಿದಂ ಚೈವ ಜನಯಾಮಾ ಸತುಸ್ಸ್ವಯಂ ||೧೩|| ವರುಣೋಜನಯಾಮಾಸ ಸುಷೇಣಂ ವಾನರರ್ಷಭಂ || ಶರಭಂ ಜನಯಾಮಾಸ ಪರ್ಜನ್ಯಸ್ತು ಮಹಾಬಲಂ ||೧೪|| ಮಾರುತಸ್ಯಾತ್ಮಜ ಶ್ಶ್ರೀಮಾನ್ ಹನುಮಾನ್ನಾಮವಾನರಃ||ವಜ್ರಸಂಹನನೋಪೇತೋ ವೈನತೇಯ ಸಮೋಜವೇ|| (ಸರ್ವವಾನರ ಮುಖ್ಯೇಷು ಬುದ್ಧಿಮಾನ್ ಬಲವಾನಪಿ) || ೧೫ || ತೇಸೃಷ್ಟಾ ಬಹುಸಾಹಸ್ರಾ ದಶಗ್ರೀವ ವಧೇರತಾಃ|| ಅಪ್ರಮೇಯಬಲಾ ವೀರಾ ವಿಕ್ರಾಂತಾಃ ಕಾಮರೂಪಿಣಃ ||೧೬|| ಮೇರುಮಂದರ ಸಂಕಾಶಾ ವಪುಷ್ಮಂತೊ ಮಹಾಬಲಾಃ|| ಋಕ್ಷವಾನರಗೋಪುಚ್ಛಾಃ ಕ್ಷಿಪ್ರಮೇವಾಭಿಜಜ್ಞಿರೇ||೧೭||ಯಸ್ಯ

ದ್ರವಿಣ - ದ್ರವ್ಯದಿಂದಲೂ, ಸಂಪನ್ನೌ - ಕೂಡಿಕೊಂಡಿರುವ, ಅಶ್ವಿನೌ - ಅಶ್ವಿನೀದೇವತೆಗಳು, ರೂಪಸಮ್ಮತೌ - ಸೌಂದರ್ಯದಿಂದ ಕೂಡಿಕೊಂಡಿರುವ, ಮೈಂದಂಚ - ಮೈಂದನೆಂಬ, ದ್ವಿವಿದಂಚೈವ - ದ್ವಿವಿದನೆಂಬ, ಉಭೌ - ಇಬ್ಬರನ್ನು, ಸ್ವಯಂ- ತಾವು, ಜನಯಾಮಾಸತುಃ-ಹುಟ್ಟಿಸಿದರು. ||೧೩|| ವರುಣಃ-ವರುಣನು, ವಾನರರ್ಷಭಂ - ವಾನರಶ್ರೇಷ್ಠನಾದ, ಸುಷೇಣಂ-ಸುಷೇಣನನ್ನು, ಜನಯಾಮಾಸ - ಹುಟ್ಟಿಸಿದನು. ಪರ್ಜನ್ಯಸ್ತು - ಪರ್ಜನ್ಯನು, ಮಹಾಬಲಂ ಮಹಾಬಲಶಾಲಿಯಾದ, ಶರಭಂ-ಶರಭನೆಂಬುವನನ್ನು, ಜನಯಾಮಾಸ - ಹುಟ್ಟಿಸಿದನು ||೧೪|| ಮಾರುತಸ್ಯ-ವಾಯುವಿಗೆ, ಆತ್ಮಜಃ-ಕುಮಾರನಾದ, ಶ್ರೀಮಾನ್-ಸಂಪದ್ಯುಕ್ತನಾದ, ಹನುಮಾನ್ನಾಮ-ಹನುಮಂತನೆಂದು ಪ್ರಸಿದ್ಧನಾದ,ವಾನರಃ-ಕಪಿಯು, ವಜ್ರಸಂಹನನೋಪೇತಃ,ವಜ್ರ-ವಜ್ರದಂತಿರುವ,ಸಂಹನನ-ಶರೀರದಿಂದ, ಉಪೇತಃ ಕೂಡಿಕೊಂಡಿರುವನಾಗಿ, ಜವೇ-ವೇಗದಲ್ಲಿ, ವೈನತೇಯಸಮಃ, ವೈನತೇಯ-ಗರುಡನಿಗೆ, ಸಮಃ-ಸಮಾನನಾದವನು, ಅಭೂತ್-ಆದನು. || ೧೫ || ಅಪ್ರಮೇಯಬಲಾಃ, ಅಪ್ರಮೇಯ-ಅಪಾರವಾದ, ಬಲಾಃ - ಸಾಮರ್ಥ್ಯವುಳ್ಳ, ವೀರಾಃ-ಶೂರರಾದ, ವಿಕ್ರಾಂತಾಃ-ಪರಾಕ್ರಮಶಾಲಿಗಳಾದ, ಕಾಮರೂಪಿಣಃ - ಬೇಕಾದ ರೂಪವನ್ನು ತಾಳುವ ಶಕ್ತಿಯುಳ್ಳ, ಬಹುಸಾಹಸ್ರಾಃ-ಅನೇಕ ಸಹಸ್ರ ಸಂಖ್ಯೆಯುಳ್ಳ, ತೇ-ಆ ವಾನರರು, ದಶಗ್ರೀವವಧೇ, ದಶಗ್ರೀವ-ರಾವಣನ, ವಧೇ-ಸಂಹಾರದಲ್ಲಿ, ರತಾಃ - ಆಸಕ್ತರಾಗಿ, ಸೃಷ್ಟಾಃ-ಸೃಷ್ಟಿಮಾಡಲ್ಪಟ್ಟರು. || ೧೬ || ಮೇರುಮಂದರ ಸಂಕಾಶಾಃ, ಮೇರುಮಂದರ - ಮೇರುಪರ್ವತಕ್ಕೂ, ಮಂದರ ಪರ್ವತಕ್ಕೂ, ಸಂಕಾಶಾಃ - ಸಮಾನರಾದ, ವಪುಷ್ಮಂತಃ - ದೃಢವಾದ ಶರೀರಗಳುಳ್ಳ, ಮಹಾಬಲಾಃ - ಬಹಳ ಬಲಿಷ್ಠರಾದ, ಋಕ್ಷವಾನರಗೋಪುಚ್ಛಾಃ - ಕರಡಿ, ಕಪಿ, ಶಿಂಗಳೀಕಗಳೆಂದಿವರು, ಕ್ಷಿಪ್ರಮೇವ - ಜಾಗ್ರತೆಯಾಗಿಯೇ, ಅಭಿಜಜ್ಞಿರೇ - ಹುಟ್ಟಿದರು. || ೧೭ || ಯಸ್ಯದೇವಸ್ಯ - ಯಾವ ಯಾವ ದೇವತೆಗೆ, ಯದ್ರೂಪಂ-

||೧೩|| ವರುಣನು, ಸುಷೇಣನೆಂಬ ವಾನರನನ್ನು ಸೃಜಿಸಲು, ಪರ್ಜನ್ಯನು ಶರಭನೆಂಬವನನ್ನು ಸೃಷ್ಟಿಸಿದನು. || ೧೪ || ಗರುಡನಂತೆ ಬಹಳ ವೇಗವಂತನಾಗಿಯೂ, ವಜ್ರಾಯುಧದಂತೆ ಬಹುದೃಢವಾದ ದೇಹವುಳ್ಳವನಾಗಿಯೂ, ಇರುವ ಮಹಾತೇಜಸ್ವಿಯಾದ ಹನುಮಂತನೆಂಬ ವಾನರನು ವಾಯುವಿಗೆ ಪುತ್ರನಾಗಿ ಜನಿಸಿದನು. || ೧೫ || ರಾವಣ ಸಂಹಾರಾರ್ಥವಾಗಿ ಸೃಜಿಸಲ್ಪಟ್ಟ ಬಹು ಮಂದಿಯಾದ ಆ ವಾನರ, ಕರಡಿ, ಶಿಂಗಳೀಕ ರೂಪವಾಗಿರುವವರೆಲ್ಲರೂ ಅಪರಿಮಿತವಾದ ಬಲವುಳ್ಳವರಾಗಿಯೂ, ವೀರರಾಗಿಯೂ, ಬಲು ಪರಾಕ್ರಮವುಳ್ಳವ

ದೇವಸ್ಯ ಯದ್ರೂಪಂ ತೇಜೋಯಚ್ಚ ಪರಾಕ್ರಮಃ ॥ ಅಜಾಯತ ಸಮಸ್ತೇ
ನತಸ್ಯತಸ್ಯಸುತಃಪೃಥಕ್ ॥೧೮॥ ಗೋಲಾಂಗೂಲೀಷು ಚೋತ್ಪನ್ನಾಃ ಕೇಚಿತ್ಸಂ
ಮತ ವಿಕ್ರಮಾಃ ॥ ಋಕ್ಷೀಷುಚ ತಥಾಜಾತಾವಾನರಾಃ ಕಿನ್ನರೀಷುಚ ॥೧೯॥
ದೇವಾಮಹರ್ಷಿಗಂಧರ್ವಾಸ್ತಾರ್ಕ್ಷ್ಯಾಯಕ್ಷಾಯಶಸ್ವಿನಃ ॥ನಾಗಾಃಕಿಂಪುರುಷಾ
ಶ್ಚೈವ ಸಿದ್ಧವಿದ್ಯಾಧರೋರಗಾಃ॥೨೦॥ಬಹವೋಜನಯಾ ಮಾಸು ಹೃಷ್ಟಾಸ್ತತ್ರ
ಸಹಸ್ರಶಃ ॥ ವಾನರಾ ಸು ಮಹಾ ಕಾಯಾ ಸರ್ವಾ ವೈವನಚಾರಿಣಃ ॥೨೧॥
ಅಪ್ಸರಸ್ಸುಚಮುಖ್ಯಾಸು ತಥಾ ವಿದ್ಯಾಧರೀಷುಚ॥ನಾಗ ಕನ್ಯಾಸುಚತಥಾ ಗಂಧ

ಎಂತಹ ರೂಪವೋ, ಯಃವೇಷಃ - ಯಾವ ವೇಷವೊ, ಯಃಪರಾಕ್ರಮಶ್ಚ - ಯಾವ ಪರಾಕ್ರಮವೋ, ತಸ್ಯತಸ್ಯ - ಆಯಾಯ ದೇವರಿಗೆ, ತೇನ-ಆ ರೂಪಾದಿಗಳಿಂದ, ಸಮಃ - ಸಮಾನನಾದ, ಸುತಃ - ಕುವರನು, ಪೃಥಕ್ - ಪ್ರತ್ಯೇಕವಾಗಿ, ಅಜಾಯತ - ಹುಟ್ಟಿದನು ॥೧೮॥ ಕೇಚಿತ್ - ಕೆಲ ವಾನರರು, ಗೊಲಾಂಗೂಲೀಷು - ಹೆಣ್ಣು ಶಿಂಗಳೀಕಗಳಲ್ಲಿ, ಉತ್ಪನ್ನಾಃ - ಹುಟ್ಟಿದರು. ಸಮ್ಮತವಿಗ್ರಹಾಃ, ಸಮ್ಮತ - ರೂಪದಿಂದ ಪ್ರಸಿದ್ಧವಾದ, ವಿಗ್ರಹಾಃ - ಶರೀರಗಳುಳ್ಳ, ವಾನರಾಃ - ವಾನರರು, ಋಕ್ಷೀಷು - ಹೆಣ್ಣು ಕರಡಿಗಳಲ್ಲಿಯೂ, ತಥಾ - ಹಾಗೆಯು, ಕಿನ್ನರೀಷುಚ - ಕಿನ್ನರ ಸ್ತ್ರೀಯರಲ್ಲಿಯೂ, ಜಾತಾಃ - ಹುಟ್ಟಿದರು. ॥ ೧೯ ॥ ದೇವಾಃ - ದೇವತೆಗಳು, ಮಹರ್ಷಿಗಂಧರ್ವಾಃ - ಮಹರ್ಷಿ - ಮಹರ್ಷಿಗಳು, ಗಂಧರ್ವಾಃ - ಗಂಧರ್ವರೂ, ತಾರ್ಕ್ಷ್ಯಾಃ- ಗರುಡಪಕ್ಷಿಗಳೂ, ಯಕ್ಷಾಃ- ಯಕ್ಷರೂ, ಯಶಸ್ವಿನಃ - ಯಶೋವಂತರಾದ, ನಾಗಾಃ -ಪ್ರಸಿದ್ಧ ಸರ್ಪಗಳೂ, ಕಿಂಪುರುಷಾಶ್ಚೈವ- ಕಿಂಪುರುಷರೂ ಕೂಡ, ಸಿದ್ಧವಿದ್ಯಾಧರೋರಗಾಃ - ಸಿದ್ಧರೂ, ವಿದ್ಯಾಧರರೂ, ಸರ್ಪಗಳೂ ಎಂಬ, ಬಹವಃ - ಬಹಳ ಮಂದಿ, ಹೃಷ್ಟಾಸ್ಸಂತಃ - ಸಂತೋಷಗೊಂಡವರಾಗಿ, ತತ್ರ- ಆಯಾಯ ಸ್ತ್ರೀಯರಲ್ಲಿ, ಸಹಸ್ರಶಃ - ಅಸಂಖ್ಯಾತರಾದ, ಸುಮಹಾಕಾಯಾ - ಅತಿ ದೃಢವಾದ ಶರೀರಗಳುಳ್ಳ, ವನಚಾರಿಣಃ - ವನಸಂಚಾರಿಗಳಾದ, ಸರ್ವಾ-ಸಮಸ್ತರಾದ, ವಾನರಾ- ಕಪಿಗಳನ್ನು, ಮುಖ್ಯಾಸು - ಮುಖ್ಯ ಮುಖ್ಯರಾದ, ಅಪ್ಸರಸ್ಸುಚ - ಅಪ್ಸರಸ್ತ್ರೀಯರುಗಳಲ್ಲಿಯೂ, ತಥಾ - ಹಾಗೆಯೆ, ವಿದ್ಯಾಧರೀಷುಚ - ವಿದ್ಯಾಧರ ಸ್ತ್ರೀಯರಲ್ಲಿಯೂ, ನಾಗಕನ್ಯಾಸುಚ-ನಾಗ ಕನ್ನಿಕೆಯರಲ್ಲಿಯೂ, ತಥಾ - ಹಾಗೆಯು, ಗಂಧರ್ವೀಣಾಂ - ಗಂಧರ್ವಸ್ತ್ರೀಯರುಗಳ, ತನೂಷುಚ- ಶರೀರಗಳಲ್ಲಿಯೂ, ಜನಯಾಮಾಸುಃ - ಹುಟ್ಟಿಸಿದರು ॥ ೨೨ ॥ ಕಾಮರೂಪಬಲೋಪೇತಾಃ-

ರಾಗಿಯೂ, ಕಾಮರೂಪಿಗಳಾಗಿಯೂ, ಮೇರು ಮಂದರ ಪರ್ವತಗಳಿಗೆ ಸಮಾನರಾಗಿಯೂ, ದೃಢವಾದ ದೇಹಗಳುಳ್ಳವರಾಗಿಯೂ, ಬೇಗನೆ ಜನಿಸಿದರು. ॥೧೭॥ ಯಾವ ದೇವತೆಗಳು, ಯಾವ ಸೌಂದರ್ಯ, ಯಾವ ಪರಾಕ್ರಮುಗಳಿಂದ ಹೇಗಿದ್ದರೋ ಹಾಗೆಯೇ, ಪ್ರತ್ಯೇಕ ಪ್ರತ್ಯೇಕವಾಗಿ ಅವರವರ ಮಕ್ಕಳು ಕಪಿಗಳಾಗಿ ಜನಿಸಿದರು. ॥೧೮॥ ಹೀಗೆ ಹುಟ್ಟಿದವರಲ್ಲಿ ಕೆಲವರು ಹೆಣ್ಣು ಶಿಂಗಳೀಕಗಳಲ್ಲಿಯೂ, ಮತ್ತೆ ಕೆಲವರು ಕರಡಿಗಳಲ್ಲಿಯೂ, ಇನ್ನು ಕೆಲವರು ಕಿನ್ನರ ಸ್ತ್ರೀಯರಲ್ಲಿಯೂ, ಉತ್ಪನ್ನರಾದರು. ॥೧೯॥ ಇದಲ್ಲದೆ, ದೇವತೆಗಳೂ, ಮಹರ್ಷಿಗಳೂ, ಗಂಧರ್ವ, ಗರುಡ, ಯಕ್ಷ, ನಾಗ, ಕಿನ್ನರ, ಕಿಂಪುರುಷ, ಸಿದ್ಧ, ವಿದ್ಯಾಧರರೇ

ರ್ವ್ವೀಣಾಂತನೂಷುಚ ||೨೨|| ಕಾಮರೂಪ ಬಲೋಪೇತಾ ಯಥಾ ಕಾಮಂ ವಿಚಾರಿಣಃ || ಸಿಂಹಶಾರ್ದ್ದೂಲಸದೃಶಾ ದರ್ಪ್ಪೇಣಚ ಬಲೇನಚ ||೨೩|| ಶಿಲಾಪ್ರಹರಣಾಸ್ಸರ್ವೇ ಸರ್ವ್ವೇ ಪಾದಪ ಯೋಧಿನಃ ||ನಖದಂಷ್ಟ್ರಾಯುಧಾಸ್ಸರ್ವ್ವೇ ಸರ್ವ್ವೇ ಸರ್ವಾಸ್ತ್ರಕೋವಿದಾಃ || ೨೪ || ವಿಚಾಲಯೇಯುಶ್ಶೈಲೇಂದ್ರಾನ್ಭೇದಯೇಯುಸ್ಸ್ಥಿರಾ ದ್ರುಮಾ || ಕ್ಷೋಭಯೇಯುಶ್ಚ ವೇಗೇನ ಸಮುದ್ರಂ ಸರಿತಾಂ ಪತಿಂ ||೨೫|| ಧಾರಯೇಯುಃ ಕ್ಷಿತಿಂ ಪದ್ಭ್ಯಾಮಾಪ್ಲವೇಯುರ್ಮ್ಮಹಾರ್ಣವಂ || ನಭಸ್ಥಲಂ ವಿಶೇಯುಶ್ಚ ಗೃಹ್ಣೀಯುರಪಿತೋಯದಾ || ೨೬ || ಗೃಹ್ಣೀಯು

---

ಕಾಮರೂಪ- ಇಚ್ಛಾವಿಷಯವಾದ ರೂಪದಿಂದಲೂ, ಬಲ ತ್ರಾಣದಿಂದಲೂ, ಉಪೇತಾಃ- ಕೂಡಿರುವ, ಯಥಾಕಾಮಂ ಇಚ್ಛಾನುಸಾರವಾಗಿ, ವಿಚಾರಿಣಃ-ಸಂಚಾರಶೀಲರಾದ, ದರ್ಪ್ಪೇಣಚ-ಗರ್ವದಿಂದಲೂ, ಬಲೇನಚ - ದೇಹಬಲದಿಂದಲೂ, ಸಿಂಹಶಾರ್ದೂಲಸದೃಶಾಃ-ಸಿಂಹವ್ಯಾಘ್ರಗಳಿಗೆ ಸಮಾನರಾದ, ಸರ್ವೇ - ಸಮಸ್ತರೂ, ಶಿಲಾಪ್ರಹರಣಾಃ - ಪಾಷಾಣಗಳೇ ಆಯುಧಗಳಾಗಿ ಉಳ್ಳ, ಸರ್ವ್ವೇ-ಎಲ್ಲರೂ, ಪಾದಪಯೋಧಿನಃ - ಗಿಡಗಳಿಂದಲೇ ಯುದ್ಧಮಾಡತಕ್ಕವರು, ಸರ್ವೇ-ಸಮಸ್ತರೂ, ನಖದಂಷ್ಟ್ರಾಯುಧಾಃ - ಉಗುರುಗಳೂ, ಕೋರೆಹಲ್ಲುಗಳೇ ಆಯುಧಗಳಾಗಿ ಉಳ್ಳ, ಸರ್ವ್ವೇ-ಸಮಸ್ತರೂ, ಸರ್ವಾಸ್ತ್ರಕೋವಿದಾಃ, ಸರ್ವಾಸ್ತ್ರ - ಸಮಸ್ತಾಸ್ತ್ರಗಳಲ್ಲಿಯೂ, ಕೋವಿದಾಃ - ಪಂಡಿತರೂ, ಶೈಲೇಂದ್ರಾನ್ - ದೊಡ್ಡಬೆಟ್ಟಗಳನ್ನು, ವಿಚಲಯೇಯುಃ - ಕದಲಿಸುವರು, ಸ್ಥಿರಾನ್-ಸ್ಥಿರಗಳಾದ, ದ್ರುಮಾನ್-ಗಿಡಗಳನ್ನು, ಭೇದಯೇಯುಃ - ಕೀಳುವರು, ಸರಿತಾಂ - ನದಿಗಳಿಗೆ, ಪತಿಂ-ಪತಿಯಾದ, ಸಮುದ್ರಂ-ಸಮುದ್ರನನ್ನು, ವೇಗೇನ-ತ್ವರೆಯಿಂದ, ಕ್ಷೋಭಯೇಯುಃ - ಕೆಸರಾಗಿ ಮಾಡುವರು, ಕ್ಷಿತಿಂ-ಭೂಮಿಯನ್ನು, ಧಾರಯೇಯುಃ - ತಲೆಯಮೇಲೆ ಧರಿಸುವರು ಪದ್ಭ್ಯಾಂ-ಕಾಲುಗಳಿಂದ, ಮಹಾರ್ಣ್ಣವಂ ದೊಡ್ಡ ಕಡಲನ್ನು, ಆಪ್ಲವೇಯುಃ - ದಾಟುವರು, ನಭಸ್ಥಲಂ-ಅಂತರಿಕ್ಷ ಮಾರ್ಗವನ್ನು ಕುರಿತು, ವಿಶೇಯುಶ್ಚ - ಹೋಗುವರು, ತೋಯದಾನಪಿ - ಮೇಘಗಳನ್ನೂ ಕೂಡ, ಗೃಹ್ಣೀಯುಃ - ಹಿಡಿದು ಕೊಳ್ಳುವರು, ವನೇ - ವನದಲ್ಲಿ, ಪ್ರವ್ರಜತಃ - ಓಡಿಹೋಗುತಿರುವ, ಮತ್ತಾನ್-

---

ಮುಂತಾದವರೆಲ್ಲರೂ, ಪರಮಾನಂದಭರಿತರಾಗಿ, ಉತ್ತಮರಾದ ಅಪ್ಸರ ಸ್ತ್ರೀಯರಲ್ಲಿಯೂ, ವಿದ್ಯಾಧರಾಂಗನೆಯರಲ್ಲಿಯೂ, ನಾಗಕನ್ಯೆಯರಲ್ಲಿಯೂ, ಹಾಗೆಯೆ ಗಂಧರ್ವ ಸ್ತ್ರೀಯರಲ್ಲಿಯೂ, ಮಹಾ ಶರೀರಗಳುಳ್ಳವರೂ, ವನಸಂಚಾರ ಶೀಲರೂ ಆದ ಅನೇಕ ವಾನರರನ್ನು ಹುಟ್ಟಿಸಿದರು. ||೨೨|| ಇಚ್ಛಾವಿಷಯವಾದ ರೂಪ, ಬಲ, ಸಂಪನ್ನರಾಗಿಯೂ, ಇಷ್ಟವಿದ್ದಂತೆ ತಿರುಗುವವರಾಗಿಯೂ, ಗರ್ವದಿಂದಲೂ, ಬಲದಿಂದಲೂ, ಸಿಂಹ, ಹುಲಿಗಳಿಗೆ, ಸದೃಶರಾಗಿರುವರೂ, ಶಿಲೆಗಳೇ ಆಯುಧಗಳಾಗಿ ಉಳ್ಳವರಾಗಿ ವೃಕ್ಷಗಳಿಂದಲೇ ಯುದ್ಧಮಾಡುವವರೂ, ಉಗುರು, ಕೋರೆಹಲ್ಲುಗಳೇ ಆಯುಧಗಳಾಗುಳ್ಳವರೂ, ಸರ್ವಾಸ್ತ್ರಗಳನ್ನರಿತಿರುವರೂ, ಪರ್ವತೋತ್ತಮಗಳನ್ನು ಕದಲಿಸುವವರಾಗಿಯೂ, ಬಲವಾಗಿ ಬೇರೂರಿರುವ ವೃಕ್ಷಗಳನ್ನೇ ಬೇರು ಸಹಿತ ಕಿತ್ತೊಗೆವವರೂ, ನದೀ ಪತಿಯಾದ ಸಮುದ್ರನನ್ನು ಅಲ್ಲಕಲ್ಲೋಲ ಮಾಡುವರೂ, ಭೂಮಿಯನ್ನೆಲ್ಲ ಹೊರುತ್ತಿರುವರೂ, ಕಡಲನ್ನೂ ಸಹ ದಾಂಟಿ

ರಪಿ ಮಾತಂಗಾನ್ ಮತ್ತಾನ್ ಪ್ರವ್ರಜತೋ ವನೇ॥ನರ್ದಮಾನಾಶ್ಚ ನಾದೇನ ಪಾತ
ಯೇಯುರ್ವಿಹಂಗಮಾನ್ ॥೨೭॥ ಈದೃಶಾನಾಂ ಪ್ರಸೂತಾನಿ ಹರೀಣಾಂ ಕಾಮ
ರೂಪಿಣಾಂ ॥ ಶತಂ ಶತಸಹಸ್ರಾಣಿ ಯೂಥಪಾನಾಂ ಮಹಾತ್ಮನಾಂ ॥ ೨೮ ॥
ತೇಪ್ರಧಾನೇಷು ಯೂಥೇಷು ಹರೀಣಾಂ ಹರಿಯೂಥಪಾಃ ॥ ಬಭೂವುರ್ಯೂಥಪ
ಶ್ರೇಷ್ಠಾ ವೀರಾಂಶ್ಚಾಜನಯನ್‌ಹರೀನ್ ॥೨೯॥ ಅನ್ಯೇ ಋಕ್ಷವತಃ ಪ್ರಸ್ಥಾನುಪ
ತಸ್ಥುಸ್ಸಹಸ್ರಶಃ॥ ಅನ್ಯೇ ನಾನಾವಿಧಾನ್ ಶೈಲಾನ್ ಭೇಜಿರೇ ಕಾನನಾನಿಚ ॥೩೦॥
ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಂ ॥ ಭ್ರಾತರಾವುಪತಸ್ಥು

---

ಮದವೇರಿದ, ಮಾತಂಗಾನಪಿ - ಆನೆಗಳನ್ನೂ, ಗೃಹ್ಣೀಯುಃ - ಹಿಡಿದುಕೊಳ್ಳುವರು, ನಾದೇನ - ಧ್ವನಿಯಿಂದ, ನರ್ದಮಾನಾಃ - ಕೂಗುತ್ತಿರುವವರಾಗಿ, ವಿಹಂಗಮಾನ್ - ಹಕ್ಕಿಗಳನ್ನು, ಪಾತಯೇಯುಃ - ಬೀಳಿಸುವರು ॥ ೨೭ ॥ ಈದೃಶಾನಾಂ - ಇಂತಹ, ಕಾಮರೂಪಿಣಾಂ- ಕಾಮರೂಪಿಗಳಾದ, ಮಹಾತ್ಮನಾಂ ಮಹಾಪ್ರಭಾವವುಳ್ಳ, ಯೂಥಪಾನಾಂ - ಯೂಥಪತಿಗಳಾದ, ಹರೀಣಾಂ -ವಾನರರ, ಶತಂ - ನೂರು ಸಂಖ್ಯೆಯುಳ್ಳ, ಶತಸಹಸ್ರಾಣಿ - ಲಕ್ಷಗಳು, ಪ್ರಸೂತಾನಿ - ಹೆರಲ್ಪಟ್ಟವು ॥ ೨೮ ॥ ತೇ = ಆ ವಾನರರು, ಹರಿಯೂಥಪಾಃ - ವಾನರತಂಡಗಳಿಗೆ ಅಧಿಪತಿಗಳಾಗಿ, ಹರೀಣಾಂ-ಕಪಿಗಳ. ಪ್ರಧಾನೇಷು - ಮುಖ್ಯಗಳಾದ, ಯೂಥೇಷು - ತಂಡಗಳಲ್ಲಿ, ಯೂಥಪಶ್ರೇಷ್ಠಾಃ - ಯೂಥಪತಿಗಳಲ್ಲಿಶ್ರೇಷ್ಠರು, ಬಭೂವುಃ - ಆದರು, ವೀರಾನ್ - ಶೂರರಾದ, ಹರೀನ್ - ವಾನರರನ್ನು, ಅಜನಯನ್ = ಹುಟ್ಟಿಸಿದರು ॥ ೨೯ ॥ ಅನ್ಯೇ - ಕೆಲವರು, ಋಕ್ಷವತಃ - ಕರಡಿಗಳುಳ್ಳ, ಸಹಸ್ರಶಃ - ಸಹಸ್ರಾರುಗಳಾದ, ಪ್ರಸ್ಥಾನ್ - ಜರತೆಗಳಲ್ಲಿ, ಉಪತಸ್ಥುಃ - ನಿಂತರು, ಅನ್ಯೇ - ಮತ್ತು ಕೆಲವರು, ನಾನಾವಿಧಗಳಾದ, ಶೈಲಾನ್ - ಬೆಟ್ಟಗಳನ್ನು, ಕಾನನಾನಿಚ - ಕಾಡುಗಳನ್ನೂ ಕೂಡ, ಭೇಜಿರೆ - ಹೊಂದಿದರು, ॥ ೩೦ ॥ ಸರ್ವೇ =ಸಮಸ್ತರಾದ, ಹರೀಶ್ವರಾಃ - ವಾನರಯೂದ ಪತಿಗಳಾದ, ತೇ-ಆ ವಾನರರು ಸೂರ್ಯಪುತ್ರಂ - ಸೂರ್ಯನ ಮಗನಾದ, ಸುಗ್ರೀವಂಚ - ಸುಗ್ರೀವನನ್ನೂ, ಶಕ್ರಪುತ್ರಂ - ಇಂದ್ರಪುತ್ರನಾದ, ವಾಲಿನಂಚೇತಿ - ವಾಲಿಯೆಂಬ, ಭ್ರಾತರಾ - ಅಣ್ಣತಮ್ಮಂದಿರನ್ನೂ, ನಳಂ-ನಳನನ್ನೂ, ನೀಲಂ - ನೀಲನನ್ನು, ಹನೂಮಂತಂ- ಹನೂಮಂತನನ್ನು, ಅನ್ಯಾನ್- ಮತ್ತು ಕೆಲವರಾದ, ಹರಿಯೂಥಪಾನ್ - ಕಪಿಯೂಥಪತಿಗಳನ್ನೂ, ಉಪತಸ್ಥುಃ - ಸೇವಿಸಿದರು ॥ ೩೧ ॥ ತಾರ್ಕ್ಷ್ಯಬಲ

---

ತ್ತಿರುವವರೂ, ಗಗನ ಮಾರ್ಗದಲ್ಲಿ ಹೋಗುವವರೂ, ಮೇಘಗಳನ್ನು ಸಹ ಹಿಡಿವವರೂ, ಮದವೇರಿ ಕಾಡುಗಳಲ್ಲಿ ತಿರುಗುವ ಕಾಡಾನೆಗಳನ್ನೂ ಹಿಡಿಯುವವರೂ, ಹರ್ಷದಿಂದ ಕುಣಿದಾಡುತ್ತಿರುವವರೂ, ಕೂಗಿನಿಂದಲೇ ಗಗನ ಗಾಮಿಗಳಾದ ಹಕ್ಕಿಗಳನ್ನೆಲ್ಲ ಕೆಳಗೆ ಬೀಳಿಸುವವರೂ, ಮಹಾತ್ಮರೂ, ಕಾಮ ರೂಪಿಗಳೂ ಆದ ಹರಿಯೂಥಪತಿಗಳು ನೂರು ಲಕ್ಷ ಮಂದಿ ಜನಿಸಿದರು. ॥೨೯॥ ಇನ್ನು ಕೆಲವರು ಗಿರಿ ವಿಶೇಷಗಳ ಜರತೆಗಳನ್ನೂ, ಇನ್ನೂ ಕೆಲವರು ನಾನಾ ವಿಧವಾದ ಪರ್ವತಗಳನ್ನೂ, ದೊಡ್ಡ ದೊಡ್ಡ ಕಾಡುಗಳನ್ನೂ ಹೊಂದಿದರು. ॥೩೦॥ ಈ ಕಪೀಶ್ವರರೆಲ್ಲ ಸೂರ್ಯ ಪುತ್ರನಾದ ಸುಗ್ರೀವನನ್ನೂ, ಇಂದ್ರ ಕುಮಾರನಾದ ವಾಲಿಯನ್ನೂ, ಸೇವಿಸುತ್ತಿದ್ದರು. ಇನ್ನು ಕೆಲವರು ನಳ, ನೀಲ, ಹನುಮಂತ, ಮುಂತಾದವರನ್ನು ಹೊಂದಿ,

ಸ್ತೇ ಸರ್ವಮೇವ ಹರೀಶ್ವರಾಃ ||೩೧|| ನಳಂ ನೀಲಂ ಹನೂಮಂತಮನ್ಯಾಂಶ್ಚ ಹರಿ ಯೂಥಪಾನ್||ತೇ ತಾರ್ಕ್ಷ್ಯಬಲಸಂಪನ್ನಾ ಸ್ಸರ್ವೇಯುದ್ಧ ವಿಶಾರದಾಃ||೩೨|| ವಿಚರಂತೋರ್ದಯರ್ದ ದರ್ಪಾ ತ್ಸಿಂಹ ವ್ಯಾಘ್ರಮಹೋರಗಾನ್ || ತಾಂಶ್ಚ ಸರ್ವಾ ನ್ಮಹಾಬಾಹುರ್ವಾಲೀ ವಿಪುಲ ವಿಕ್ರಮಃ || ೩೩ || ಜುಗೋಪ ಭುಜವೀರ್ಯೇಣ ಋಕ್ಷ ಗೋಪುಚ್ಛ ವಾನರಾನ್ || ತೈರಿಯಂ ಪೃಥಿವೀ ಶೂರೈ ಸ್ಸಪರ್ವತ ವನಾರ್ಣ ವಾ ||೩೪|| ಕೀರ್ಣಾ ವಿವಿಧಸಂಸ್ಥಾನೈ ರ್ನಾನಾ ವ್ಯಂಜನ ಲಕ್ಷಣೈಃ || ತೈರ್ಮೇಘ

ಸಂಪನ್ನಾಃ - ಗರುಡ ಬಲದಿಂದ ಸಂಪನ್ನರಾದ, ಸರ್ವೇ - ಸಮಸ್ತರಾದ, ತೇ - ಆ ವಾನರರು, ಯುದ್ಧವಿಶಾರದಾಃ, ಯುದ್ಧ - ಯುದ್ಧದಲ್ಲಿ, ವಿಶಾರದಾಃ - ಸಮರ್ಥರಾಗಿ, ವಿಚರಂತಃ-ಸಂಚರಿಸುತ್ತ, ದರ್ಪಾತ್ - ಗರ್ವದಿಂದ, ಸಿಂಹವ್ಯಾಘ್ರಮಹೋರಗಾನ್ - ಸಿಂಹಗಳನ್ನೂ, ಹುಲಿಗಳನ್ನೂ, ದೊಡ್ಡ ಸರ್ಪಗಳನ್ನೂ, ಹೊಡೆಯುವವರಾದರು, || ೩೨ || ಮಹಾಬಾಹುಃ - ಮಹಾಬಲಶಾಲಿಯಾದ, ವಿಪುಲವಿಕ್ರಮಃ-ವಿಸ್ತಾರವಾದ ಪರಾಕ್ರಮವುಳ್ಳ, ವಾಲೀ-ವಾಲಿಯು, (೧) ಭುಜವೀರ್ಯೇಣ-ಬಾಹು ಬಲದಿಂದ, ಸರ್ವಾನ್ - ಸಮಸ್ತರಾದ, ತಾನ್-ಆ, ಋಕ್ಷಗೋಪುಚ್ಛವಾನರಾನ್-ಕರಡಿಗಳನ್ನೂ, ಶಿಂಗ ಳೀಕಗಳನ್ನೂ, ಕೋತಿಗಳನ್ನೂ, ಜುಗೋಪ - ಪಾಲಿಸಿದನು. ||೩೩|| ವಿವಿಧಸಂಸ್ಥಾನೈಃ, ವಿವಿಧ- ನಾನಾಬಗೆಗಳಾದ, ಸಂಸ್ಥಾನೈಃ - ಹ್ರಸ್ವ, ದೀರ್ಘ, ಸ್ಥೂಲ, ಸೂಕ್ಷ್ಮಗಳಾದ ಆಕಾರಗಳುಳ್ಳ, ನಾನಾವ್ಯಂಜನಲಕ್ಷಣೈಃ, ನಾನಾವ್ಯಂಜನ - ಅನೇಕ ಭೇದಗಳನ್ನು ತೋರಿಸುತ್ತಿರುವ, ಲಕ್ಷಣೈಃ- ತತ್ತಚ್ಛರೀರಾಸಾಧಾರಣ ಧರ್ಮಗಳುಳ್ಳ, ಶೂರೈಃ - ಶೂರರಾದ, ತೈಃ - ಆ ವಾನರರಿಂದ, ಸಪರ್ವತ ವನಾರ್ಣವಾ - ಬೆಟ್ಟಗಳಿಂದಲೂ, ಕಾಡುಗಳಿಂದಲೂ, ಸಮುದ್ರಗಳಿಂದಲೂ, ಒಡಗೂಡಿದ, ಇಯಂ ಪೃಥಿವೀ - ಈ ಭೂಮಿಯು, ಕೀರ್ಣಾ - ತುಂಬಿತು. ಮೇಘಬೃಂದಾಚಲಕೂಟಕಲ್ಪೈಃ, ಮೇಘ- ಮೇಘಗಳ, ಬೃಂದಂ - ಸಮೂಹವುಳ್ಳ, ಅಚಲ - ಪರ್ವತದ, ಕೂಟ - ಶಿಖರಕ್ಕೆ, ಕಲ್ಪೈಃ-ಸಮಾನ ರಾದ, ಮಹಾಬಲೈಃ - ಅತಿಬಲಿಷ್ಠರಾದ, ಭೀಮಶರೀರರೂಪೈಃ, ಭೀಮ - ಭಯವನ್ನು ಹುಟ್ಟಿ ಸುವ, ಶರೀರರೂಪೈಃ - ಶರೀರ ವೇಷಗಳುಳ್ಳ, ತೈಃ - ಅಂಥಾ, ವಾನರಯೂಥಪಾಲೈಃ - ಕಪಿ

ಅವರವರ ಕೈಕೆಳಗಿರುವವರಾದರು. ||೩೧|| ಗರುಡನಂತೆ ಬಲಿಷ್ಠರಾದ ಆ ವಾನರಪುಂಗವ ರೆಲ್ಲರೂ ಯುದ್ಧ ವಿಶಾರದರೆನಿಸಿ ಗರ್ವದಿಂದ ಸಿಂಹ ವ್ಯಾಘ್ರಾದಿಗಳನ್ನೆಲ್ಲ ಹೆದರಿಸುತ್ತಾ ತಿರು ಗುತ್ತಿದ್ದರು. || ೩೨ || ಮಹಾ ಪರಾಕ್ರಮಶಾಲಿಯಾದ ವಾಲಿಯು ತನ್ನ ಭುಜಬಲದಿಂದ ಕರಡಿಗಳಾಗಿಯೂ, ಶಿಂಗಳೀಕಗಳಾಗಿಯೂ, ಕಪಿಗಳಾಗಿಯೂ, ಇರುವ ಅವರನ್ನೆಲ್ಲ ಸಂರಕ್ಷಿಸು ತ್ತಿದ್ದನು. || ೩೩ || ರಾಮ ಸಹಾಯಾರ್ಥವಾಗಿಯೇ ಹುಟ್ಟಿರುವ ಮಹಾಶೂರರೂ ಭಯಂಕ

ಟಿ (೧). ಈ ಸರ್ಗದಲ್ಲಿ ವಾಲ್ಮೀಕಿ ಋಷಿಯ ಅಭಿಪ್ರಾಯವು ಸ್ಪೈಜವಾಗಿದ್ದರೂ ವಾಚಕರಿಗೆ ಕೆಲ ಸಂಶಯ ಗಳು ತಲೆ ದೋರುವವು. ಪುರಾಣಾದಿ ಗ್ರಂಥಗಳಲ್ಲಿ ವಾಲಿ ಸುಗ್ರೀವಾದಿಗಳ ಜನನವು ಸಮುದ್ರ ಮಥನಾತ್ಪೂರ್ವದಲ್ಲಿ ಆಗಿದ್ದಿತೆಂದೂ, ಅಮೃತಮಥನ ಕಾಲದಲ್ಲಿ ಅವರೂ ಭಾಗಿಗಳಾಗಿದ್ದರೆಂದೂ ಹೇಳಲ್ಪಟ್ಟಿರುವುದು ಈ ಸರ್ಗದಲ್ಲಿ ದಶರಥನು ಮಾಡಿದ ಅಶ್ವಮೇಧ ಯಾಗದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದಿದ್ದ ದೇವ, ಋಷಿ, ವಿದ್ಯಾಧರ, ನಾಗ, ಚಾರಣಾದಿ ಗಳು ಬ್ರಹ್ಮನಾಜ್ಞೆಯಿಂದ ವಾನರರನ್ನು ಸೃಜಿಸಿದರೆಂದು ಸ್ಪಷ್ಟವಾಗಿ ಹೇಳಿದೆ, ಇದಕ್ಕೆ ಮಹೇಶ ತೀರ್ಥಿಯ ವ್ಯಾಖ್ಯಾನ ಕಾರನ ಸಮಾಧಾನ:—

ಬೃಂದಾಚಲ ಕೂಟಕಲ್ಪೈ ರ್ಮಹಾಬಲೈ ರ್ವಾನರಯೂಥಪಾಲೈಃ || ಬಭೂವ ಭೂ
ರ್ಭೀಮಶರೀರರೂಪೈ ಸ್ಸಮಾವೃತಾ ರಾಮಸಹಾಯ ಹೇತೋಃ ||೩೫||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತ ದಶಸ್ಸರ್ಗಃ

---

ಯೂಥಪತಿಗಳಿಂದ, ರಾಮಸಹಾಯಹೇತೋಃ- ಶ್ರೀರಾಮ ಸಹಾಯಾರ್ಥವಾಗಿ, ಭೂಃ-ಭೂಮಿಯು, ಸಮಾವೃತಾ - ವ್ಯಾಪ್ತವಾದುದು, ಬಭೂವ - ಆಯಿತು. || ೩೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತದಶಸ್ಸರ್ಗಃ.

---

ರವಾದ ಶರೀರವೇಷಗಳುಳ್ಳವರೂ ಆದ ಆ ವಾನರಯೂಥಪತಿಗಳಿಂದ ಪರ್ವತ, ವನ, ಸಮು ದ್ರಗಳಿಂದೊಡಗೂಡಿದ ಇಡೀ ಭೂಮಂಡಲವೇ ತುಂಬಿಹೋಯಿತು.

ಇಂತಿದು ವಾಲಿ ಸುಗ್ರೀವಾದಿ ಮಹಾಕಪಿಗಳ ಜನ್ಮವೃತ್ತಾಂತ ಕಥನವೆಂಬ ಹದಿನೇಳನೆಯ ಸರ್ಗವು ಸಮಾಪ್ತವಾದುದು.



---

ರಾಮನು ಳಿಗನೆಯ ವಯಸ್ಸಿನಲ್ಲಿ ರಾವಣನನ್ನು ಸಂಹರಿಸಿದನು ಎಂದು ಹೇಳಿರುವುದರಿಂದಲೂ, ಉತ್ತರ ಕಾಂಡ ದಲ್ಲಿ "ಅರ್ಜುನೇನ ವಿಮುಕ್ತಸ್ತು ರಾವಣೋ ರಾಕ್ಷಸಾಧಿಪಃ || ತತಃಕದಾಚಿಕ್ಕಿಷ್ಕಿಂಧಾಂ ನಗರೀಂ ವಾಲಿಪಾಲಿತಾಂ || ಗತ್ವಾಹ್ವಯತಿ ಯುದ್ಧಾಯ ವಾಲಿನಂ ಹೇಮಮಾಲಿನಂ || ಕಾರ್ತವೀರ್ಯಾರ್ಜುನನಿಂದ ಬಿಡಲ್ಪಟ್ಟ ರಾವಣನು ಗರ್ವಿತನಾಗಿ ಒಂದಾನೊಂದು ಕಾಲದಲ್ಲಿ ಕಿಷ್ಕಿಂಧಾಧಿಪತಿಯೂ, ಸುವರ್ಣ ಮಾಲಿಯೂ ಆದ ವಾಲಿಯನ್ನು ಯುದ್ಧಕ್ಕೆ ಕರೆದನು" ಎಂದಿರುವುದರಿಂದ ಕಾರ್ತವೀರ್ಯನೂ, ವಾಲಿಯೂ ಸಮಕಾಲೀನರೆಂದು ಅರ್ಥವಾಗುವಾಗ, ರಾವಣ ವಧೆಯ ಕಾಲದ ಮಧ್ಯ ದಲ್ಲಿಯೇ ವಾಲಿಯು ಹುಟ್ಟಿ ಸತ್ತನೆಂಬುದು ಅನುಚಿತವಾಗಿ ತೋರುವುದು ಇಲ್ಲಿ ಸಮಾಧಾನವೇನೆಂದರೆ ಬ್ರಹ್ಮನು ಇಂದ್ರಾದಿಗಳನ್ನು ಕುರಿತು ವಾನರರನ್ನು ಸೃಜಿಸಿರೆಂದು ಆಜ್ಞಾಪಿಸಲಿಲ್ಲ ಹಿಂದೆಯೇ ಅಂದರೆ ಅಮೃತ ಮಥನಾತ್ಪೂರ್ವ ದಲ್ಲಿಯೇ ಇಂದ್ರಾದಿಗಳು ವಾಲಿ ಸುಗ್ರೀವಾದಿಗಳನ್ನು ಸೃಜಿಸಿದ್ದುದರಿಂದ ಬ್ರಹ್ಮನು ಅವರಿಗೆ ಅಪ್ಪಣೆ ಮಾಡಲಿಲ್ಲವೆಂದಭಿ ಪ್ರಾಯ. ಆದರೆ ರಾಮ ಸಹಾಯಾರ್ಥವಾಗಿ ಅನೇಕ ಕೋಟಿ ವಾನರ ಪುಂಗವರನ್ನು ಸೃಜಿಸಲು, ಚಾರಣ, ಋಷಿ, ವಿದ್ಯಾಧ ರಾದಿ ಸಾಮಾನ್ಯ ದೇವತೆಗಳಿಗೆ ಅಪ್ಪಣೆ ಮಾಡಿದನೆಂದು ಅರ್ಥಮಾಡಬೇಕು. ಇದಕ್ಕೋಸುಗವೇ "ಋಷಯಶ್ಚ ಮಹಾ ತ್ಮಾನಃ ಸಸೃಜುರ್ವನಚಾರಿಣಃ(೮)" ಎಂದು ಈ ಸರ್ಗದಲ್ಲಿಯೇ ಹೇಳಲ್ಪಟ್ಟಿರುವುದು ಆದುದರಿಂದ ವಾಲಿ, ಸುಗ್ರೀ ವರ ಜನನ ವಿಷಯದಲ್ಲಿ ವಾಚಕರು ಸಂಶಯಪಡಬಾರದು ಗೋವಿಂದ ರಾಜೀಯ ವ್ಯಾಖ್ಯಾನ ಕಾರನು ಇನ್ನೂ ಅನೇಕ ಕಾರಣಗಳಿಂದ ಈ ಸಂಶಯವನ್ನು ದೂರಮಾಡಿರುವನು, ಅದರಲ್ಲಿ ಮುಖ್ಯವಾದ ಒಂದು ಅಂಶವನ್ನು ಮಾತ್ರ ಇಲ್ಲಿ ಕೊಡ ಲಾಗಿದೆ ಉತ್ತರಕಾಂಡದಲ್ಲಿ ಮಯಾಸುರನು ಮಂದೋದರಿಯನ್ನು ರಾವಣನಿಗೆ ಭಾರ್ಯಾರ್ಥವಾಗಿ ಕೊಡುವ ಸಮಯದಲ್ಲಿ ಅವನನ್ನು ಕುರಿತು "ದ್ವೌಸುತೌತು ಮಮ ತ್ವಸ್ಯಾಂ ಭಾರ್ಯಾಯಾಂ ಸಂಬಭೂವತುಃ|| ಮಾಯಾವೀ ಪ್ರಥಮಸ್ತಾವತ್ ದುಂ ದುಭಿಸ್ತದನಂತರಃ ||" ಎಂದು ಹೇಳಿ ದುಂದುಭಿಯು ವರದಾನದಿಂದಲೂ, ಬಲದಿಂದಲೂ ಕೊಬ್ಬಿ ವಾಲಿಯಿಂದ ಮಡಿ ದನು ಎಂದು ಹೇಳಿರುವದು. ಆದುದರಿಂದ ವಾಲಿಯು ರಾವಣನ ವಿವಾಹಾತ್ಪೂರ್ವವೇ ಇದ್ದನೆಂದು ಅರ್ಥವಾಗುವುದು.

# ಬಾಲಕಾಂಡೇ ಅಷ್ಟಾದಶಸ್ಸರ್ಗಃ.



**ನಿರ್ವೃತ್ತೇತು ಕ್ರತೌ ತಸ್ಮಿನ್ ಹಯಮೇಧೇ ಮಹಾತ್ಮನಃ || ಪ್ರತಿಗೃಹ್ಯ ಸುರಾ ಭಾಗಾನ್ ಪ್ರತಿಜಗ್ಮುರ್ಯಥಾಗತಂ ||೧|| ಸಮಾಪ್ತ ದೀಕ್ಷಾ ನಿಯಮಃ ಪತ್ನೀಗಣ ಸಮನ್ವಿತಃ || ಪ್ರವಿವೇಶ ಪುರೀಂ ರಾಜಾ ಸಭೃತ್ಯ ಬಲವಾಹನಃ || ೨ || ಯಥಾ ರ್ಹಂ ಪೂಜಿತಾಸ್ತೇನ ರಾಜ್ಞಾನ್ವೈ ಪೃಥಿವೀಶ್ವರಾಃ || ಮುದಿತಾಃ ಪ್ರಯಯು ರ್ದೇಶಾನ್ ಪ್ರಣಮ್ಯ ಮುನಿಪುಂಗವಂ ||೩|| ಶ್ರೀಮತಾಂ ಗಚ್ಛತಾಂ ತೇಷಾಂ ಸ್ವಪುರಾಣಿ ಪುರಾತ್ತತಃ || ಬಲಾನಿ ರಾಜ್ಞಾಂ ಶುಭ್ರಾಣಿ ಪ್ರಹೃಷ್ಟಾನಿ**

---

ಮಹಾತ್ಮನಃ - ದಶರಥನ, ತಸ್ಮಿನ್ - ಆ ಪುತ್ರಕಾಮೇಷ್ಟಿ ಸಹಿತವಾದ, ಹಯಮೇಧೇತು-ಅಶ್ವಮೇಧ ಯಜ್ಞವು, ನಿವೃತ್ತೇಸತಿ - ಪೂರ್ಣವಾಗಲು, ಸುರಾಃ - ದೇವತೆಗಳು, ಭಾಗಾನ್ - ಹವಿರ್ಭಾಗಗಳನ್ನು, ಪ್ರತಿಗೃಹ್ಯ - ಸ್ವೀಕರಿಸಿ, ಪ್ರತಿಜಗ್ಮುಃ - ಹೊರಟುಹೋದರು || ೧ || ಸಮಾಪ್ತ ದೀಕ್ಷಾನಿಯಮಃ, ಸಮಾಪ್ತ - ಪೂರ್ಣಗೊಂಡ, ದೀಕ್ಷಾನಿಯಮಃ - ದೀಕ್ಷಾರ್ಥವಾದ ವ್ರತವುಳ್ಳ, ಪತ್ನೀಗಣಸಮನ್ವಿತಃ, ಪತ್ನೀ - ಹೆಂಡತಿಯರ, ಗಣ - ಸಮುದಾಯದಿಂದ, ಸಮನ್ವಿತಃ - ಕೂಡಿರುವ, ರಾಜಾ - ದಶರಥನು, ಸಭೃತ್ಯಬಲವಾಹನಃ -ಭೃತ್ಯ, ಬಲ, ವಾಹನಗಳಿಂದ ಕೂಡಿ, ಪುರೀಂ-ಅಯೋಧ್ಯಾ ಪಟ್ಟಣವನ್ನು, ಪ್ರವಿವೇಶ - ಪ್ರವೇಶಿಸಲುದ್ಯುಕ್ತನಾದನು ||೨|| ಪೃಥಿವೀಶ್ವರಾನ್ವೈ-ಸಾಮಂತರಾಜರೂ, ಯಥಾರ್ಹಂ - ಯಥಾಯೋಗ್ಯವಾಗಿ, ತೇನರಾಜ್ಞಾ - ಆ ದಶರಥ ರಾಜನಿಂದ, ಪೂಜಿತಾಃ-ಬಹುಮಾನಿಸಲ್ಪಟ್ಟು, ಮುನಿಪುಂಗವಂ - (ಗೊ) ವಸಿಷ್ಠನನ್ನು (ತಿ) ಋಶ್ಯಶೃಂಗ ಋಷಿಯನ್ನು, ಪ್ರಣಮ್ಯ - ವಂದಿಸಿ, ಮುದಿತಾಃ - ಸಂತೋಷಚಿತ್ತರಾಗಿ, ದೇಶಾನ್ - ತಮ್ಮ ತಮ್ಮ ದೇಶಗಳನ್ನು ಕುರಿತು, ಯಯುಃ - ಹೊರಟುಹೋದರು. ||೩|| ತತಃಪುರಾತ್ - ಆ ಅಯೋಧ್ಯಾ ಪಟ್ಟಣದಿಂದ, ಸ್ವಪುರಾಣಿ - ತಮ್ಮ ಪಟ್ಟಣಗಳನ್ನು ಕುರಿತು, ಗಚ್ಛತಾಂ - ಹೋಗುತ್ತಿರುವ,

---

ಪುತ್ರಕಾಮೇಷ್ಟಿ ಯಾಗಸಹಿತವಾದ ಅಶ್ವಮೇಧ ಯಾಗವು ಪೂರ್ತಿಯಾಗಲು, ದೇವತೆಗಳೆಲ್ಲರೂ, ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿ, ಸಂತೋಷಚಿತ್ತರಾಗಿ ಹೊರಟುಹೋದರು. ಯಜ್ಞದೀಕ್ಷಾವಿಸರ್ಜನವಾದ ಬಳಿಕ, ಪತ್ನೀಸಹಿತನಾದ ದಶರಥ ರಾಯನು ಭೃತ್ಯರಿಂದಲೂ, ಕಿಂಕರರಿಂದಲೂ, ವಾಹನಗಳಿಂದಲೂ, ಒಡಗೂಡಿ ಪಟ್ಟಣಕ್ಕೆ ತೆರಳಲುದ್ಯುಕ್ತನಾದನು. ಯಜ್ಞಾರ್ಥವಾಗಿ ಬಂದಿದ್ದ ಭೂಪತಿಗಳೆಲ್ಲರೂ ಆ ದಶರಥರಾಜನಿಂದ ಅವರವರ ಯೋಗ್ಯತೆಗನುಸಾರವಾಗಿ, ಮರ್ಯಾದಿತರಾಗಿ ಸಂತಸಗೊಂಡು, ವಸಿಷ್ಠ, ಋಶ್ಯಶೃಂಗ ಮುನಿಗಳಿಗೆರಗಿ ತಮ್ಮ ದೇಶಗಳನ್ನು ಕುರಿತು ತೆರಳಿದರು. || ೩ || ಆ ಅಯೋಧ್ಯಾ ಪುರದಿಂದ ತೆರಳುತ್ತಿರುವ ರಾಜರ ಸೇನೆಗಳು ದಶರಥ ರಾಜನಿಂದ ಕೊಡಲ್ಪಟ್ಟ

ಚಕಾಶಿರೇ||೪||ಗತೇಷು ಪೃಥಿವೀಶೇಷು ರಾಜಾ ದಶರಥಸ್ತದಾ||ಪ್ರವಿವೇಶಪುರೀಂ ಶ್ರೀಮಾನ್ ಪುರಸ್ಕೃತ್ಯ ದ್ವಿಜೋತ್ತಮಾನ್ || ೫ || ಶಾಂತಯಾ ಪ್ರಯಯೌ ಸಾರ್ಧಮೃಶ್ಯಶೃಂಗ ಸ್ಸುಪೂಜಿತಃ || ಅನ್ವೀಯಮಾನೋರಾಜ್ಞಾಥ ಸಾನುಯಾತ್ರೇಣ ಧೀಮತಾ || ೬ || ಏವಂ ವಿಸೃಜ್ಯತಾನ್ ಸರ್ವಾನ್ ರಾಜಾ ಸಂಪೂರ್ಣ ಮಾನಸಃ || ಉವಾಸ ಸುಖಿತಸ್ತತ್ರ ಪುತ್ರೋತ್ಪತ್ತಿಂ ವಿಚಿಂತಯನ್ || ೭ || ತತೋಯಜ್ಞೇ ಸಮಾಪ್ತೇತು ಋತೂನಾಂ ಷಟ್ಸಮತ್ಯಯುಃ|| ತತಶ್ಚ ದ್ವಾದಶೇ ಮಾಸೇಚೈತ್ರೇನಾವಮಿಕೇ ತಿಥೌ||೮||ನಕ್ಷತ್ರೇದಿತಿ ದೈವತ್ಯೇಸ್ವೋಚ್ಚ ಸಂಸ್ಥೇಷು

---

ಶ್ರೀಮತಾಂ-ಕಾಂತಿಯುಕ್ತರಾದ, ತೇಷಾಂರಾಜ್ಞಾಂ- ಆ ಅರಸರ, ಬಲಾನಿ - ಸೇನೆಗಳು, ಶುಭ್ರಾಣಿ- ಹೊಸ ಉಡುಪುಗಳಿಂದ ಶುಭ್ರವಾಗಿಯೂ, ಪ್ರಹೃಷ್ಟಾನಿ - ಸಂತೋಷವುಳ್ಳದ್ದಾಗಿಯೂ, ಚಕಾಶಿರೇ - ಹೊಳೆಯುತ್ತಿದ್ದವು. ||೪|| ಪೃಥಿವೀಶೇಷು - ರಾಜರು, ಗತೇಷುಸತ್ಸು - ಹೊರಟುಹೋಗಲು, ತದಾ - ಆಗ, ಶ್ರೀಮಾನ್ - ಕಾಂತಿಯುಕ್ತನಾದ, ದಶರಥೋರಾಜ್ಞಾ - ದಶರಥ ರಾಜನು, ದ್ವಿಜೋತ್ತಮಾನ್ - ಬ್ರಾಹ್ಮಣ ಶ್ರೇಷ್ಠರನ್ನು, ಪುರಸ್ಕೃತ್ಯ - ಮುಂದಿರಿಸಿಕೊಂಡು, ಪುರೀಂ-ಅಯೋಧ್ಯಾಪಟ್ಟಣವನ್ನು, ಪ್ರವಿವೇಶ- ಹೊಕ್ಕನು || ೫ || ಅಥ - ಅಯೋಧ್ಯಾಪುರ ಪ್ರವೇಶಾನಂತರ, ಋಶ್ಯಶೃಂಗಃ - ಋಶ್ಯಶೃಂಗಮುನಿಯು, ಧೀಮತಾ - ಬುದ್ಧಿಶಾಲಿಯಾದ, ಸಾನುಯಾತ್ರೇಣ ಅನುಚರರಿಂದೊಡಗೂಡಿದ, ರಾಜ್ಞಾ - ರೋಮಪಾದ ರಾಜನಿಂದ, ಅನ್ವೀಯಮಾನಃ - ಅನುರಿಸಲ್ಪಟ್ಟು, ಶಾಂತಯಾಸಾರ್ಧಂ - ಶಾಂತಾದೇವಿಯೊಡನೆ, ಸುಪೂಜಿತಃ - ಪೂಜಿತನಾಗಿ, ಪ್ರಯಯೌ - ತೆರಳಿದನು. || ೬ || ಏವಂ - ಹೀಗೆ, ರಾಜಾ - ದಶರಥನು, ಸಂಪೂರ್ಣಮಾನಸಃ-ಸಫಲವಾದ ಮನೋರಥವುಳ್ಳವನಾಗಿ, ತಾನ್ ಸರ್ವಾನ್ - ಅವರೆಲ್ಲರನ್ನು, ವಿಸೃಜ್ಯ - ಕಳುಹಿಸಿಕೊಟ್ಟು, ಸುಖಿತಃ-ಸಂತಸಗೊಂಡು, ಪುತ್ರೋತ್ಪತ್ತಿಂ - ಮಕ್ಕಳ ಉತ್ಪತ್ತಿಯನ್ನು, ವಿಚಿಂತಯನ್ - ಆಲೋಚಿಸುತ್ತ, ತತ್ರ- ಆ ಪಟ್ಟಣದಲ್ಲಿ, ಉವಾಸ ಇದ್ದನು. || ೭ || ಯಜ್ಞೇತು - ಯಜ್ಞವು, ಸಮಾಪ್ತೇಸತಿ-ಸಂಪೂರ್ಣವಾಗಲು, ತತಃ - ಬಳಿಕ, ಋತೂನಾಂ - ಋತುಗಳ, ಷಟ್ - ಆರು, ಸಮತ್ಯಯುಃ ಕಳೆದುಹೋದವು || ೭ || ತತಃ - ಬಳಿಕ, ದ್ವಾದಶೇ - ಪಾಯಸವನ್ನು ಹಂಚಿದ ಹನ್ನೆರಡನೆಯ, ಚೈತ್ರೇ ಮಾಸೇ - ಚೈತ್ರ ಮಾಸದ, ನಾವಮಿಕೇ - ನವಮೀಯ, ತಿಥೌ -

---

ವಸ್ತ್ರಾದಿಗಳಿಂದ ಶುಭ್ರವಾಗಿ ಹೊಳೆಯುತ್ತಿದ್ದವು. ||೪|| ಆ ನರನಾಥರೆಲ್ಲರೂ ಹೊರಟುಹೋಗಲು, ದಶರಥ ರಾಜನು ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ತನ್ನ ನಗರವನ್ನು ಸೇರಿದನು. || ೫ || ಅನಂತರದಲ್ಲಿ ಋಶ್ಯಶೃಂಗ ಮುನಿಯು ಧೀಮಂತನೂ ಮಹಾತ್ಮನೂ ಆದ ಸೇವಕ ಜನರಿಂದೊಡಗೂಡಿದ ರೋಮಪಾದ ರಾಜನಿಂದನುಸೃತನಾಗಿ ಚನ್ನಾಗಿ ಪೂಜಿಸಲ್ಪಟ್ಟು ಶಾಂತಾದೇವಿಯೊಡನೆ ಹೊರಟುಹೋದನು. ||೬|| ಹೀಗೆ ದಶರಥರಾಜನು ಸಫಲವಾದ ಮನೋರಥವುಳ್ಳವನಾಗಿ ಅವರೆಲ್ಲರನ್ನೂ ಕಳುಹಿಸಿಕೊಟ್ಟು, ಪುತ್ರ ಜನನವನ್ನಪೇಕ್ಷಿಸುತ್ತ ಸುಖವಾಗಿರುತ್ತಿರಲು ಆರು ಋತುಗಳು ಕಳೆದುಹೋದವು. || ೭ || ಅಶ್ವಮೇಧ ಪರಿಸಮಾಪ್ತಿಯಾದುದು ಮೊದಲ್ಗೊಂಡು ಹನ್ನೆರಡನೆಯ ಮಾಸವಾದ ಚೈತ್ರ ಶುಕ್ಲ ನವಮೀ ತಿಥಿಯಲ್ಲಿ, ಅದಿತಿ ದೇವತಾಕವಾದ ಪುನರ್ವಸೂ ನಕ್ಷತ್ರದಲ್ಲಿ, ಸೂರ್ಯ, ಅಂಗಾರಕ, ಶನಿ, ಗುರು, ಶುಕ್ರರೆಂಬ ಐದು ಗ್ರಹಗಳು ತಮ್ಮ ತಮ್ಮ

ಪಂಚಸು || ಗ್ರಹೇಷು ಕರ್ಕಟೇಲಗ್ನೇ ವಾಕ್ಪತಾವಿಂದುನಾಸಹ || ೯ ||
ಪ್ರೋದ್ಯಮಾನೇಜಗನ್ನಾಥಂ ಸರ್ವಲೋಕ ನಮಸ್ಕೃತಂ|| ಕೌಸಲ್ಯಾಜನಯದ್ರಾ
ಮಂ ಸರ್ವ ಲಕ್ಷಣ ಸಂಯುತಂ || ೧೦ || ವಿಷ್ಣೋರರ್ಧಂ ಮಹಾಭಾಗಂ ಪುತ್ರ
ಮೈಕ್ಷ್ವಾಕವರ್ಧನಂ||ಕೌಸಲ್ಯಾ ಶುಶುಭೇ ತೇನ ಪುತ್ರೇಣಾಮಿತತೇಜಸಾ||೧೧||
ಯಥಾ ವರೇಣದೇವಾನಾಮದಿತಿರ್ವಜ್ರಪಾಣಿನಾ||ಭರತೋನಾಮಕೈಕೇಯ್ಯಾಂ
ಜಜ್ಞೇಸತ್ಯ ಪರಾಕ್ರಮಃ || ೧೧ || ಸಾಕ್ಷಾದ್ವಿಷ್ಣೋಶ್ಚತುರ್ಭಾಗಸ್ಸರ್ವೈಸ್ಸಮು
ದಿತೋಗುಣೈಃ || ಅಥ ಲಕ್ಷ್ಮಣ ಶತೃಘ್ನೌ ಸುಮಿತ್ರಾ ಜನಯತ್ಸುತೌ || ೧೨ ||

ದಿವಸದಲ್ಲಿ, ಅದಿತಿದೈವತ್ಯೇ - ಅದಿತಿ ದೇವತಾಕವಾದ, ನಕ್ಷತ್ರೇ - ಪುನರ್ವಸೂ ನಕ್ಷತ್ರದಲ್ಲಿ, ಪಂಚಸುಗ್ರಹೇಷು - ಸೂರ್ಯ, ಅಂಗಾರಕ, ಶನಿ, ಗುರು, ಶುಕ್ರರೆಂಬ, ಐದು ಗ್ರಹಗಳು, ಸ್ವೋಚ್ಚ ಸಂಸ್ಥೇಷುಸತ್ಸು, ಸ್ವ - ತಮಗೆ, ಉಚ್ಚ - ಉಚ್ಚಸ್ಥಾನಗಳಾದ, ಮೇಷ, ಮಕರ, ತುಲಾ, ಕರ್ಕಾಟಕ, ಮೀನರಾಶಿಗಳೆಂಬ ಉಚ್ಚಸ್ಥಾನದಲ್ಲಿ, ಇರುತ್ತಿರಲು, ವಾಕ್ಪತೌ - ಬೃಹಸ್ಪತಿಯು, ಇಂದುನಾಸಹ - ಚಂದ್ರನೊಡನ, ಪ್ರೋದ್ಯಮಾನೇಸತಿ- ಉದಯವನ್ನು ಹೊಂದಿದವನಾಗಲು, ಕರ್ಕಟಕೇ- ಕರ್ಕಟಕವೆಂಬ, ಲಗ್ನೇ - ಉದಯ ಲಗ್ನದಲ್ಲಿ, ಕೌಸಲ್ಯಾ - ಕೌಸಲ್ಯಾ ದೇವಿಯು, ಜಗನ್ನಾಥಂ - ಲೋಕಕ್ಕೆ ನಾಯಕನಾದ, ಸರ್ವಲೋಕನಮಸ್ಕೃತಂ - ಸರ್ವಜನರಿಂದಲೂ ನಮಸ್ಕರಿಸಲ್ಪಟ್ಟ, ಸರ್ವಲಕ್ಷಣಸಂಯುತಂ, ಸರ್ವ - ಸಮಸ್ತವಾದ, ಲಕ್ಷಣ - ಶಾಸ್ತ್ರೋಕ್ತ ಲಕ್ಷಣಗಳಿಂದ, ಸಂಯುತಂ - ಕೂಡಿರುವ, ವಿಷ್ಣೋಃ - ಶ್ರೀಮಹಾವಿಷ್ಣುವಿನ, ಅರ್ಧಂ - ಅರ್ಧಾಂಶ ಸಂಭೂತನಾದ, ಮಹಾಭಾಗಂ - ಮಹಾ ಪುಣ್ಯಶಾಲಿಯಾದ, ಐಕ್ಷ್ವಾಕವರ್ಧನಂ - ಇಕ್ಷ್ವಾಕುವಂಶಾಭಿ ವೃದ್ಧಿಕರನಾದ, ರಾಮಂ - ಶ್ರೀರಾಮನೆಂಬ, ಪುತ್ರಂ - ಕುಮಾರನನ್ನು, ಅಜನಯತ್-ಹೆತ್ತಳು. || ೧೦ ||

ಉಚ್ಚಸ್ಥಾನಗಳಾದ ಮೇಷ, ಮಕರ, ತುಲಾ, ಕರ್ಕಾಟಕ, ಮೀನ ರಾಶಿಗಳೆಂಬ ಐದು ಸ್ಥಾನಗಳಲ್ಲಿರುತಿರಲು, ಮತ್ತು ಬೃಹಸ್ಪತಿಯು ಚಂದ್ರನೊಡನೆ ಉದಯಿಸಲು, ಕರ್ಕಾಟಕ ಲಗ್ನದಲ್ಲಿ, ಕೌಸಲ್ಯಾದೇವಿಯು, ಲೋಕನಾಯಕನಾಗಿಯೂ, ಸರ್ವಜನರಿಂದ ನಮಸ್ಕರಿಸಲ್ಪಡು

ಟಿಪ್ಪಣಿ (೧) ಈ ಗ್ರಹಸ್ಥಿತಿಯ ಫಲವೇನೆಂದರೆ,—ಶ್ಲೋ|| ಏಕಗ್ರಹೋಚ್ಚ ಜಾತಸ್ಯ ಸರ್ವಾರಿಷ್ಟ ವಿನಾಶನಂ| ದ್ವಿಗ್ರಹೋಚ್ಚೇತು ಸಾಮಂತ ಸ್ತ್ರಿಗ್ರಹೋಚ್ಚೇನ್ಮಹೀಪತಿಃ || ಚತುರ್ಗ್ರಹೋಚ್ಚೇ ಸಂಮ್ರಾಟ್ಸ್ಯಾತ್ಪಂಚೋಚ್ಚೇ ಲ್ಲೋಕನಾಯಕಃ || ಎಂಬಂತೆ ಒಂದು ಗ್ರಹ ಉಚ್ಚವಾಗಿದ್ದರೆ ಸರ್ವಾರಿಷ್ಟ ವಿನಾಶವೂ, ಎರಡು ಗ್ರಹಗಳು ಉಚ್ಚವಾಗಿದ್ದಲ್ಲಿ ಮಂಡಲಾಧಿಪನೂ ಮೂರು ಗ್ರಹಗಳು ಉಚ್ಚವಾಗಿದ್ದರೆ ಭೂಮಿಪತಿಯೂ, ನಾಲ್ಕು ಗ್ರಹಗಳು ಉಚ್ಚವಾಗಿದ್ದರೆ ಚಕ್ರವರ್ತಿಯೂ, ಐದು ಗ್ರಹಗಳು ಉಚ್ಚಸ್ಥಾನಗತಗಳಾಗಿದ್ದರೆ ಲೋಕನಾಯಕನೂ ಆಗುವನು, ಎಂದು ಹೇಳಿರುವುದರಿಂದ ಲೋಕನಾಯಕನಾಗುವನೆಂದು ಹೇಳಲ್ಪಟ್ಟಿತು. ಪ್ರತ್ಯೇಕ ಪ್ರತ್ಯೇಕವಾಗಿ ಈ ಉಚ್ಚ ಗ್ರಹಸ್ಥಿತಿಗಳ ಫಲವೇನೆಂದರೆ—ಶ್ಲೋ|| ಸೂರ್ಯೇ ಸ್ವೋಚ್ಚಗತೇ ಜಾತ ಸ್ಸೇನಾಪತ್ಯ ಮವಾಪ್ನುಯಾತ್ . ಭೌಮೇಸ್ವೋಚ್ಚಗತೇ ಜಾತೋ ವನೇ ರಾಜಾ ಭವಿಷ್ಯತಿ ||ಗುರೌಸ್ವೋಚ್ಚಗತೇಜಾತೋ ಧನೀ ರಾಜಾಧಿಪೋ ಭವೇತ್||ಶುಕ್ರೇ ಸ್ವೋಚ್ಚಗತೇಜಾತೋ ರಾಜ್ಯಶ್ರಿಯ ಮವಾಪ್ನುಯಾತ್ || ಶನೌಸ್ವೋಚ್ಚಗತೇಜಾತೋ ರಾಜ್ಯಾಧಿಪ ಸಮೋ ಭವೇತ್ || ಎಂಬಂತೆ ಸೂರ್ಯನು ಉಚ್ಚಸ್ಥಾನಗತನಾಗಿರುವ ಸಮಯದಲ್ಲಿ ಹುಟ್ಟಿದವನು ಸೇನಾಧಿಪತಿಯಾಗುವನು ಅಂಗಾರಕನು ತನಗೆ ಉಚ್ಚಸ್ಥಾನವಾದ ಮಕರ ರಾಶಿಗತನಾಗಿರುವ ಕಾಲದಲ್ಲಿ ಹುಟ್ಟಿದವನು ವನಾಧಿಪನಾಗುವನು.ಗುರುವು ತನಗೆ ಉಚ್ಚಸ್ಥಾನವಾದ ಕರ್ಕಾ

ಟಕದಲ್ಲಿರುವ ಕಾಲದಲ್ಲಿ ಹುಟ್ಟಿದವನು, ಧನವಂತನಾಗಿಯೂ ರಾಜ್ಯಾಧಿಪತಿಯಾಗಿಯೂ, ಇರುವನು ಶುಕ್ರನು ತನಗೆ ಸ್ವೋಚ್ಚಸ್ಥಾನವಾದ ಮೀನರಾಶಿಗತನಾಗಿರುವ ಕಾಲದಲ್ಲಿ ಹುಟ್ಟಿದವನು ರಾಜೈಶ್ವರ್ಯವನ್ನು ಹೊಂದುವನು ಶನಿಯು ತನಗ ಉಚ್ಚಸ್ಥಾನವಾದ ತುಲಾರಾಶಿಗತನಾಗಿರುವ ಸಮಯದಲ್ಲಿ ಹುಟ್ಟಿದವನು ರಾಜ್ಯಾಧಿಪ ಸಮಾನನಾಗಿರುವನು. ಚೈತ್ರಮಾಸದ ಫಲ –"ಶ್ಲೋ॥ ಚೈತ್ರೇಮಧುರಭಾಷೀಸ್ಯಾ ದಹಂಕಾರ ಸುಖಾನ್ವಿತಃ ॥" ಚೈತ್ರ ಮಾಸದಲ್ಲಿ ಹುಟ್ಟಿದವನು ಮಧುರವಾಗಿ ಮಾತನಾಡುವವನು, ಅಹಂಕಾರ ಸುಖವುಳ್ಳವನೂ ಆಗುವನು ನವಮೀ ಜನ್ಮ ಫಲವು–ಶ್ಲೋ॥ "ದೀರ್ಘವೈರೀ ಭುವಿಖ್ಯಾತಃವಶ್ಯಶ್ಶೂರಶ್ಚಪಂಡಿತಃ । ನಿರ್ಭಯಸ್ಸರ್ವಭೂತೇಭ್ಯೋ ನವಮ್ಯಾಂ ಜಾಯತೇನರಃ ।" ಎಂಬಂತೆ ನವಮೀತಿಥಿಯಲ್ಲಿ ಹುಟ್ಟಿದವನು ದೀರ್ಘದ್ವೇಷವುಳ್ಳವನೂ, ಮಹಾಪ್ರಖ್ಯಾತನೂ, ಇಂದ್ರಿಯನಿಗ್ರಹವುಳ್ಳವನೂ, ಶೂರನೂ, ಪಂಡಿತನೂ, ಸಮಸ್ತ ಭೂತಗಳಿಗೂ ಹೆದರದೇ ಇರುವವನೂ ಆಗುವನು ಪುನರ್ವಸೂ ನಕ್ಷತ್ರದ ಫಲ,— "ಶ್ಲೋ॥ ಸಹಿಷ್ಣುರ್ಗೂಢವೃತ್ತಿಶ್ಚ ಶ್ಲೇಷ್ಮತೋ ನಾಟ್ಯಕೋವಿದಃ । ಅಗೃಧ್ನುರಲ್ಪಸಂತುಷ್ಟಃ ಶೀಘ್ರಗೋದಿತಿಧಿಷ್ಣ್ಯಜಃ ॥" ಎಂಬಂತೆ ಪುನರ್ವಸೂ ನಕ್ಷತ್ರದಲ್ಲಿ ಹುಟ್ಟಿದವನು ಸಹನೆಯುಳ್ಳವನಾಗಿಯೂ, ಗೂಢಾಭಿಪ್ರಾಯವುಳ್ಳವನಾಗಿಯೂ, ಶ್ಲೇಷ್ಮವ್ಯಾಧಿ ಯುಳ್ಳವನಾಗಿಯೂ, ನಾಟ್ಯದಲ್ಲಿ ಪಂಡಿತನಾಗಿಯೂ ಆಶೆಯಿಲ್ಲದವನಾಗಿಯೂ, ಅಲ್ಪಸಂತೋಷವುಳ್ಳವನಾಗಿಯೂ, ಬೇಗನೆ ನಡೆಯುವವನಾಗಿಯೂ, ಆಗುವನು ಕರ್ಕಾಟಕ ಲಗ್ನ ಫಲ—ಶ್ಲೋ॥ "ಕರ್ಕಟೇ ಲಗ್ನಗೇ ಚಂದ್ರಯುಕ್ತೇ ದೃಷ್ಟೇಚ ಭೋಗವಾನ್ । ಗುರುಣಾಪಿ ಕ್ಷಿತೇ ಯುಕ್ತೇ ಧನಾಢ್ಯೋ ಬಹುಭೋಗವಾನ್ ॥ ಎಂದು ಹೇಳಲ್ಪಟ್ಟಿರುತ್ತೆ. ಹೀಗೆ ಹೇಳಿರುವುದರಿಂದ ಕರ್ಕಾಟಕ ಲಗ್ನದಲ್ಲಿ ಕನ್ಯಾಂಶದಲ್ಲಿ ಹುಟ್ಟಿದನೆಂದು ತೋರುವುದು. ಕನ್ಯಾರಾಶಿಯು ಬುಧಾಂಶವಾಗಿರುವದರಿಂದ ಶ್ರೀರಾಮನು ಶ್ಯಾಮಲವರ್ಣನಾಗಿದ್ದಾನೆಂದು ಹೇಳಬಹುದು, ಇಂತಹ ಗುಣಗಳಿಂದ ಯುಕ್ತವಾಗಿರುವ ದಿವಸದಲ್ಲಿ ಶ್ರೀ ರಾಮನು ಹುಟ್ಟಿದನೆಂಬ ಭಾವವು

---

॥ ಶುಭಮಸ್ತು ॥

## ಶ್ರೀ ರಾಮ ಜನ್ಮ ಜಾತಕ.

ಆದಿತ್ಯಾದಿ ಗ್ರಹಾಸ್ಸರ್ವೇ ಸನಕ್ಷತ್ರಾ ಸ್ಸರಾಶಯಃ ।
ಕುರ್ವಂತು ಮಙ್ಗಳಂ ನಿತ್ಯಂ ಯಸ್ಯೈಷಾ ಜನ್ಮಪತ್ರಿಕಾ ॥

ಜನನೀ ಜನ್ಮ ಸೌಖ್ಯಾನಾಂ ವರ್ಧನೀ ಕುಲಸಮ್ಪದಾಂ ॥
ಪದವೀ ಪೂರ್ವ ಪುಣ್ಯಾನಾಂ ಲಿಖ್ಯತೇ ಜನ್ಮಪತ್ರಿಕಾ ॥

ಬ್ರಹ್ಮದೇವರ ದಿನಮಾನದಲ್ಲಿ ಈಗ ನಡೆಯುತ್ತಿರುವ ಏಳನೆಯ ವೈವಸ್ವತ ಮನ್ವಂತರದ ಇದನೆಯ ತ್ರೇತಾಯುಗದಲ್ಲಿ ಮೂವತ್ತು ಸಾವಿರ ವರ್ಷಗಳು ನಡೆಯಬೇಕಾದ್ದು ಇರುವದಕ್ಕೆ ಪೂರ್ವಭಾವಿಯಾಗಿ ಪ್ರಾಪ್ತವಾದ ವಿಳಂಬಿನಾಮ ಸಂವತ್ಸರ ಮೇಷಮಾಸ, ಚೈತ್ರ ಶುಕ್ಲ ನವಮಿ, ಬುಧವಾರ, ಪುನರ್ವಸೂ ನಕ್ಷತ್ರ, ಮಧ್ಯಾಹ್ನ ಸಮಯದಲ್ಲಿ ಕರ್ಕಾಟಕ ಲಗ್ನದಲ್ಲಿ ಐದು ಗ್ರಹಗಳು ಉಚ್ಚರಾಗಿರುವ ಕಾಲದಲ್ಲಿ **ಶ್ರೀರಾಮಮೂರ್ತಿಯ ಜನನವಾದುದು.** ಉಚ್ಚವೆಂದರೆ, ಅಪಾರವಾದ ಸಂತೋಷ, ನೆನೆದ ಕೋರಿಕೆಗಳನ್ನು ಕೊಡುವ ಸ್ಥಿತಿ

ಆ ಜನನ ಕಾಲದಲ್ಲಿ, ಅಶ್ವಿನೀ ನಕ್ಷತ್ರ ೩ನೆಯ ಚರಣದಲ್ಲಿ ಸೂರ್ಯಗ್ರಹ ಉಚ್ಚ, ಪುನರ್ವಸೂ ನಕ್ಷತ್ರ, ನಾಲ್ಕನೆಯ ಚರಣ, ಸ್ವಕ್ಷೇತ್ರವಾದ ಕರ್ಕಾಟಕ ರಾಶಿಯಲ್ಲಿ ಚಂದ್ರಗ್ರಹವೂ, ಶ್ರವಣನಕ್ಷತ್ರ ೩ನೆಯ ಚರಣದ ಮಕರ ರಾಶಿಯಲ್ಲಿ ಅಂಗಾರಕ ಗ್ರಹ ಉಚ್ಚ, ಉತ್ತರಾಭಾದ್ರನಕ್ಷತ್ರ ೩ನೆಯ ಚರಣದ ಮೀನ ರಾಶಿಯಲ್ಲಿ ಬುಧಗ್ರಹ ನೀಚನು, ಪುಷ್ಯನಕ್ಷತ್ರ ಪ್ರಥಮಚರಣ ಕರ್ಕಾಟಕ ರಾಶಿಯಲ್ಲಿ ಚಂದ್ರಗ್ರಹ ಸಹಿತವಾಗಿ ಗುರು ಉಚ್ಚ, ರೇವತಿ ನಕ್ಷತ್ರ ನಾಲ್ಕನೆಯ ಚರಣ, ಮೀನರಾಶಿಯಲ್ಲಿ ಶುಕ್ರ ಗ್ರಹ ಉಚ್ಚ, ಸ್ವಾತೀ ನಕ್ಷತ್ರ ನಾಲ್ಕನೆಯ ಪಾದದ ತುಲಾರಾಶಿಯಲ್ಲಿ ಶನಿ ಗ್ರಹ ಉಚ್ಚ, ಪುಬ್ಬ ನಕ್ಷತ್ರ ೪ನೆಯಚರಣ ಸಿಂಹರಾಶಿಯಲ್ಲಿ ರಾಹುವು, ಪೂರ್ವಾಭಾದ್ರ ನಕ್ಷತ್ರ ೨ನೆಯ ಚರಣ ಕುಂಭರಾಶಿಯಲ್ಲಿ ಕೇತುವು, ಈ ಪ್ರಕಾರವಾಗಿ ಸೂರ್ಯಾದಿ ನವಗ್ರಹಗಳು ಇರುವ ಶುಭದಿನದಲ್ಲಿ **ಶ್ರೀರಾಮದೇವರು** ಜನನವಾದುದು.

ಜನನ ಕಾಲದ ಲಗ್ನಕುಂಡಲಿ ಮತ್ತು ಅಂಶಕುಂಡಲಿ,

| | | | |
|---|---|---|---|
| ಬು ೭<br>ಶು ೧೨ | ಶ ೧೨ | | |
| ಕೇತು ೨ | ರಾಶಿ | | ಚಂ ೪<br>ಗುರು ೫<br>ಲಗ್ನ |
| ಕುಜ ೩ | ಕುಂಡಲಿ | | ರಾಹು ೮ |
| | | ರವಿ ೩ | |

| | | | |
|---|---|---|---|
| ಶುಕ್ರಃ<br>ಶನಿಃ | | ಕೇ | ರ<br>ಕು |
| | ಅಂಶ | | ಚಂ |
| | ಕುಂಡಲಿ | | ಗು |
| | ಲ | ಬು | |

ಇಂತಹ ಜನನ ಕಾಲದಲ್ಲಿ ಪುನರ್ವಸೂ ನಕ್ಷತ್ರ, ನಾಲ್ಕನೆಯ ಚರಣ ಸಂಧಿಸಿದ್ದರಿಂದ ಕೃತ್ತಿಕಾ ನಕ್ಷತ್ರದ ಪ್ರಕಾರ ದೆಶೆಯನ್ನು ನೋಡುವಾಗ್ಯೆ ಜನ್ಮಕಾಲದಲ್ಲಿ ಗುರು ಮಹಾ ದೆಶೆಯಲ್ಲಿ ನಾಲ್ಕು ವರ್ಷಗಳು ನಡಿಯಬೇಕಾದುದು ಉಳಿದಿತ್ತು. ಆನಂತರ ಶನಿ ದಶಾ, ಬುಧ ಭುಕ್ತಿ ನಡಿಯುವ ಸಮಯ, ಜನ್ಮಾದಿ ಲನ ವರ್ಷ ಪರಾಭವ ಸಂವತ್ಸರ ಚೈತ್ರ ಶುಕ್ಲ ಪಂಚಮೀ ದಿನ ಉಪನಯನ ಮಹೋತ್ಸವವೂ, ಆನಂತರ ಶುಕ್ರಾಂತರ್ದೆಶೆಯಲ್ಲಿ ಜನ್ಮಾದಿ ೧೨ನೇ ವರ್ಷ ಕೀಲಕ ಸಂವತ್ಸರ ಫಾಲ್ಗುಣ ಶುದ್ಧ ಪೂರ್ಣಿಮಾ, ಉತ್ತರಾ ಫಲ್ಗುನೀ ನಕ್ಷತ್ರದಲ್ಲಿ ಭೂಮಿಯಿಂದ ಹುಟ್ಟಿದ ದಿನ ಮೊದಲು ಆರನೆ ವರ್ಷ ವಯಸ್ಸು ನಡಿಯುತ್ತಿರುವ (ಶಾಪ್ಪಿತವಾದ ಪ್ರಾಯವುಳ್ಳ) ಸೀತಾದೇವಿಯ ಕಲ್ಯಾಣೋತ್ಸವವು ನಡೆಯಿತು.

ಆನಂತರ ಸೀತಾ ಸಹಿತವಾಗಿ ೧೨ ವರ್ಷಗಳ ಕಾಲ ಅಯೋಧ್ಯಾ ಪಟ್ಟಣದ ವಾಸವು, ಆ ಮೇಲೆ ರುಧಿರೋದ್ಗಾರಿ ಸಂವತ್ಸರ ಚೈತ್ರ ಶುಕ್ಲ ಪಂಚಮೀ ನೀಚಗ್ರಹವಾಗಿದ್ದ ಬುಧ ಮಹಾ ದೆಶೆಯಲ್ಲಿ ವನವಾಸಕ್ಕೆ ಪ್ರಾರಂಭವೂ, ಪುನಃ ಈಶ್ವರ ಸಂವತ್ಸರ ಚೈತ್ರ ಶುದ್ಧ ಷಷ್ಠೀ ದಿನ ವನವಾಸದಿಂದ ಅಯೋಧ್ಯಾನಗರ ಪ್ರವೇಶವೂ, ಆದಕ್ಕೆ ಮಾರನೆಯ ದಿನವಾದ ಸಪ್ತಮೀ ಪುಷ್ಯ ನಕ್ಷತ್ರದಲ್ಲಿ ಶ್ರೀಮದಯೋಧ್ಯಾ ಪಟ್ಟಾಭಿಷೇಕೋತ್ಸವವು ನಡೆಯಿತು ಈ ಪ್ರಕಾರವಾಗಿ ಒಂಭತ್ತು ಸಾವಿರ ವರ್ಷಗಳ ಮೇಲೆ ಹತ್ತು ತಿಂಗಳು ಅಂದರೆ ೯೯೭೪ ವರ್ಷಗಳು ಸೀತಾದೇವಿ ಸಹಿತವಾಗಿ ಇದ್ದರು. ಆನಂತರ ೧೦೨೫ ವರ್ಷ ಮತ್ತು ೨ ತಿಂಗಳು ಸೀತಾದೇವಿಯು ಇಲ್ಲದೇನೇ ಶ್ರೀರಾಮನು ಅಯೋಧ್ಯಾ ನಗರದಲ್ಲಿ ವಾಸಿಸಿ ತದನಂತರ ವೈಕುಂಠಕ್ಕೆ ತೆರಳಿದನು. ಇದರಿಂದ ಜನ್ಮಾರಭ್ಯ ಹನ್ನೊಂದು ಸಹಸ್ರ ವರ್ಷಗಳು ಭೂಲೋಕದಲ್ಲಿ ಇದ್ದಂತೆ ನಿರ್ಣಯವಾಗುತ್ತೆ.

ವೀರೌ ಸರ್ವಾಸ್ತ್ರ ಕುಶಲೌ ವಿಷ್ಣೋರರ್ಧಸಮನ್ವಿತೌ॥ ಪುಷ್ಯೇ ಜಾತಸ್ತು ಭರತೋ ಮೀನಲಗ್ನೇ ಪ್ರಸನ್ನಧೀಃ ॥ ೧೩ ॥ ಸಾರ್ಪೇ ಜಾತೌತು ಸೌಮಿತ್ರೀ ಕುಳೀರೇಭ್ಯುದಿತೇರವೌ ॥ ರಾಜ್ಞಃ ಪುತ್ರಾ ಮಹಾತ್ಮಾನಶ್ಚತ್ವಾರೋ ಜಜ್ಞಿರೇ ಪೃಥಕ್ ॥ ೧೪ ॥ ಗುಣವಂತೋಽನುರೂಪಾಶ್ಚ ರುಚ್ಯಾ ಪ್ರೋಷ್ಠಪದೋಪಮಾಃ ॥

ಕೌಸಲ್ಯಾ - ಕೌಸಲ್ಯಾ ದೇವಿಯು, ಅಮಿತತೇಜಸಾ - ಅಪಾರವಾದ ತೇಜಸ್ಸುಳ್ಳ, ತೇನಪುತ್ರೇಣ- ಆ ಕುವರನಿಂದ, ದೇವಾನಾಂ - ದೇವತೆಗಳ, ವರೇಣ - ಉತ್ತಮನಾದ, ವಜ್ರಪಾಣಿನಾ-ವಜ್ರಹಸ್ತನಾದ ಇಂದ್ರನಿಂದ, ಅದಿತಿರ್ಯಥಾ - ಅದಿತಿಯಂತೆ, ಶುಶುಭೇ-ಹೊಳೆಯುತ್ತಿದ್ದಳು. ॥೧೧॥ ಸತ್ಯಪರಾಕ್ರಮಃ - ಸತ್ಯವಾದ ಪರಾಕ್ರಮವುಳ್ಳ, ಸಾಕ್ಷಾತ್ - ಪ್ರತ್ಯಕ್ಷವಾಗಿ, (ಗೊ) ವ್ಯವಧಾನವಿಲ್ಲದಂತೆ, ವಿಷ್ಣೋಃ - ಶ್ರೀಮನ್ಮಹಾವಿಷ್ಣುವಿನ, ಚತುರ್ಭಾಗಃ- ಚತುರ್ಥಾಂಶದಲ್ಲಿ ಅರ್ಧಪಾಲಾದ (ಮ) ಅಂದರೆ ಅಷ್ಟಮಾಂಶ ಸ್ವರೂಪನಾದ ಅಥವ ಚತುರ್ಥಾಂಶ ಸ್ವರೂಪನಾದ, ಸರ್ವೈಃ-ಸಮಸ್ತಗಳಾದ, ಗುಣೈಃ - ಕಲ್ಯಾಣ ಗುಣಗಳಿಂದ, ಸಮುದಿತಃ ಕೂಡಿರುವ, ಭರತೋನಾಮ - ಭರತನೆಂದು ಪ್ರಸಿದ್ಧನಾದ ಪುತ್ರನು, ಕೈಕೇಯ್ಯಾಂ - ಕೈಕೇಯೀ ದೇವಿಯಲ್ಲಿ, ಜಜ್ಞೇ - ಹುಟ್ಟಿದನು. ॥೧೨॥ ಅಥ- ಅನಂತರದಲ್ಲಿ, ಸುಮಿತ್ರಾ - ಸುಮಿತ್ರಾ ದೇವಿಯು, ವೀರೌ - ಶೂರರಾದ, ಸರ್ವಾಸ್ತ್ರಕುಶಲೌ- ಸಮಸ್ತ ಅಸ್ತ್ರ ವಿದ್ಯೆಯಲ್ಲಿಯೂ ನಿಪುಣರಾದ, ವಿಷ್ಣೋಃ - ಶ್ರೀ ಮಹಾ ವಿಷ್ಣುವಿನ, ಅರ್ಧಸಮನ್ವಿತೌ - ಅರ್ಧ-(ಗೋ) ಅಂಶಗಳಿಂದ, ಅಂದರೆ ಅಷ್ಟಮಾಂಶಗಳಿಂದ, ಸಮನ್ವಿತೌ - ಕೂಡಿರುವ, ಲಕ್ಷ್ಮಣಶತ್ರುಘ್ನೌ - ಲಕ್ಷ್ಮಣ ಶತ್ರುಘ್ನರೆಂಬ, ಸುತೌ- ಮಕ್ಕಳನ್ನು, ಅಜನಯತ್ - ಪ್ರಸವಿಸಿದಳು. ॥ ೧೩ ॥ ಪ್ರಸನ್ನಧೀಃ - ಶುದ್ಧವಾದ ಮನಸ್ಸುಳ್ಳ, ಭರತಃ - ಭರತನು, ಪುಷ್ಯೇ - ಪುಷ್ಯ ನಕ್ಷತ್ರದಲ್ಲಿ, ಮೀನಲಗ್ನೇ - ಮೀನಲಗ್ನದಲ್ಲಿ, ಜಾತಃ - ಹುಟ್ಟಿದನು, ಸೌಮಿತ್ರೀ - ಸುಮಿತ್ರಾಪುತ್ರರಾದ ಲಕ್ಷ್ಮಣ ಶತ್ರುಘ್ನರು, ಸಾರ್ಪೇ - ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರದಲ್ಲಿ, ಕುಳೀರೇ- ಕರ್ಕಾಟಕ ಲಗ್ನದಲ್ಲಿ, ರವೌ - ಸೂರ್ಯನು, ಅಭ್ಯುದಿತೇಸತಿ - ಉದಯವನ್ನು ಹೊಂದುತ್ತಿರಲು, ಜಾತೌ - ಹುಟ್ಟಿದರು. ॥ ೧೪ ॥ ರಾಜ್ಞಃ - ದಶರಥರಾಯನಿಗೆ, ಮಹಾತ್ಮಾನಃ - ಮಹಾನು

ಕಿರುವವನಾಗಿಯೂ, ಸಮಸ್ತವಾದ ಸಾಮುದ್ರಿಕಾ ಶಾಸ್ತ್ರೋಕ್ತ ಲಕ್ಷಣಗಳಿಂದ ಕೂಡಿರುವವನಾಗಿಯೂ, ಸಾಕ್ಷಾಚ್ಛ್ರೀಮಹಾ ವಿಷ್ಣುವಿನ ಅರ್ಧಾಂಶ ಸಂಭೂತನಾಗಿಯೂ, ಮಹಾಪುಣ್ಯವಂತನಾಗಿಯೂ, ಇಕ್ಷ್ವಾಕುವಂಶವನ್ನು ವೃದ್ಧಿಗೊಳಿಸುತ್ತಿರುವವನಾಗಿಯೂ, ಇರುವ ಶ್ರೀ ರಾಮನೆಂಬ ಪುತ್ರನನ್ನು ಪಡೆದಳು ॥೧೦॥ ಮಹಾತೇಜಸ್ವಿಯಾದ ಆ ಪುತ್ರನಿಂದ ಕೂಡಿದ ಕೌಸಲ್ಯಾದೇವಿಯು ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನಿಂದ ಕೂಡಿದ ಅದಿತಿದೇವಿಯಂತೆ ಹೊಳೆಯುತ್ತಿದ್ದಳು. ॥೧೧॥ ಸತ್ಯಪರಾಕ್ರಮಿಯಾದ ಭರತನೆಂಬ ಪುತ್ರನು, ಸಾಕ್ಷಾತ್ ಶ್ರೀ ಮಹಾವಿಷ್ಣುವಿನ ಅಷ್ಟಮಾಂಶ ಸಂಭೂತನೂ, ಸಮಸ್ತವಾದ ಗುಣಗಳಿಂದೊಪ್ಪುತ್ತಿರುವವನೂ ಆಗಿ, ಕೈಕೇಯೀದೇವಿಯ ಗರ್ಭದಲ್ಲಿ ಜನಿಸಿದನು.॥೧೨॥ ಅನಂತರದಲ್ಲಿ ಲಕ್ಷ್ಮಣ ಶತ್ರುಘ್ನರೆಂಬೀರ್ವರೂ, ವೀರರಾಗಿಯೂ ಸರ್ವಾಸ್ತ್ರ ಕುಶಲರಾಗಿಯೂ, ವಿಷ್ಣುವಿನ ಅಷ್ಟಮಾಂಶಗಳಿಂದ ಕೂಡಿದವರಾಗಿಯೂ ಆಗಿ, ಸುಮಿತ್ರಾದೇವಿಯ ಗರ್ಭದಲ್ಲಿ ಜನಿಸಿದರು. ॥ ೧೩ ॥ ಪುಷ್ಯಮೀ

ಜಗುಃ ಕಲಂ ಚ ಗಂಧರ್ವಾ ನನೃತುಶ್ಚಾಪ್ಸರೋಗಣಾಃ || ೧೫ || ದೇವದುಂದು ಭಯೋನೇದುಃ ಪುಷ್ಪವೃಷ್ಟಿಶ್ಚಖಾ ಚ್ಚ್ಯುತಾ||ಉತ್ಸವಶ್ಚ ಮಹಾನಾಸೀದಯೋಧ್ಯಾಯಾಂ ಜನಾಕುಲಃ||೧೬||ರಥ್ಯಾಶ್ಚಜನಸಂಬಾಧಾ ನಟನರ್ತಕ ಸಂಕುಲಾಃ|| ಗಾಯನೈಶ್ಚ ವಿರಾವಿಣ್ಯೋ ವಾಹನೈಶ್ಚ ತಥಾ ಪರೈಃ||೧೭||ಪ್ರದೇಯಾಂಶ್ಚ ದದೌ ರಾಜಾ ಸೂತ ಮಾಗಧ ವಂದಿನಾಂ||ಬ್ರಾಹ್ಮಣೇಭ್ಯೋ ದದೌ ವಿತ್ತಂ ಗೋಧನಾನಿ ಸಹಸ್ರಶಃ || ೧೮ || ಅತೀತ್ಯೈಕಾದಶಾಹಂತು ನಾಮಕರ್ಮ ತಥಾಕರೋತ್||

---

ಭಾವರಾದ, ಪೃಥಕ್ - ಪ್ರತ್ಯೇಕ ಪ್ರತ್ಯೇಕವಾಗಿ ವಿಲಕ್ಷಣಗಳಾದ, ಗುಣವಂತಃ - (ಗೋ) ಸ್ವಾಮಿತ್ವ, ಪಾರತಂತ್ರ್ಯಾದಿ ಗುಣಗಳುಳ್ಳ, ಚತ್ವಾರಃ - ನಾಲ್ವರು, ಪುತ್ರಾಃ- ಮಕ್ಕಳು, ಅನುರೂಪಾಶ್ಚ-ಪರಸ್ಪರ ಸಾದೃಶ್ಯವುಳ್ಳವರಾಗಿ, ರುಚಾ - ಕಾಂತಿಯಿಂದ, ಪ್ರೋಷ್ಠಪದೋಪಮಾಃ - ಪೂರ್ವಾಭಾದ್ರೋತ್ತರಾಭಾದ್ರಾ ನಕ್ಷತ್ರಗಳಿಗೆ ಸಮಾನರಾಗಿ, ಜಜ್ಞಿರೇ - ಹುಟ್ಟಿದರು ||೧೫|| ಗಂಧರ್ವಾಃ-ದೇವಗಾಯಕರು, ಕಲಂ - ಮಧುರವಾಗಿ, ಜಗುಃ - ಗಾನಮಾಡಿದರು. ಅಪ್ಸರೋಗಣಾಶ್ಚ-ಅಪ್ಸರಸ್ತ್ರೀಯರ ತಂಡಗಳೂ ಸಹಾ, ನನೃತುಃ - ನರ್ತನ ಮಾಡಿದವು ದೇವದುಂದುಭಯಃ - ಭೇರೀ ಮುಂತಾದ ದೇವತಾ ವಾದ್ಯಗಳೂ, ನೇದುಃ - ಧ್ವನಿಗೊಂಡವು, ಪುಷ್ಪವೃಷ್ಟಿಶ್ಚ - ಹೂಮಳೆಯು, ಖಾತ್ - ಅಂತರಿಕ್ಷದಿಂದ, ಚ್ಯುತಾ - ಜಾರಿತು. || ೧೬ || ಅಯೋಧ್ಯಾಯಾಂ - ಅಯೋಧ್ಯಾಪಟ್ಟಣದಲ್ಲಿ, ಜನಾಕುಲಃ - ಕುತೂಹಲದಿಂದ ಹೊರಬರುತ್ತಿರುವ, ಮಹಾನ್ - ದೊಡ್ಡ, ಉತ್ಸವಶ್ಚ-ಸಂತೋಷದಿಂದ ಮಾಡತಕ್ಕ ಕಾರ್ಯವು, ಆಸೀತ - ಆಯಿತು. ||೧೭|| ಜನಸಂಬಾಧಾಃ ಜನಗಳಿಂದ ತುಂಬಿರುವ, ರಥ್ಯಾಶ್ಚ - ಬೀದಿಗಳೂ ಕೂಡಾ, ನಟನರ್ತಕಸಂಕುಲಾಃ, ನಟ - ನಾಟ್ಯಮಾಡುವವರಿಂದಲೂ, ನರ್ತಕ - ನರ್ತನಮಾಡಿಸುವವರಿಂದಲೂ, ಸಂಕುಲಾಃ - ತುಂಬಿ, ಗಾಯನೈಶ್ಚ-ಗಾಯಕರಿಂದಲೂ, ವಾದನೈಶ್ಚ - ವಾದ್ಯಗಾರರಿಂದಲೂ, ತಥಾ - ಹಾಗೆಯೇ, ಅಪರೈಶ್ಚ - ಮತ್ತೂ ಕೆಲವು, ಜನರಿಂದಲೂ, ವಿರಾವಿಣ್ಯಃ - ಧ್ವನಿಗೊಂಡವು. ||೧೮|| ರಾಜಾ - ದಶರಥನು, ಬ್ರಾಹ್ಮಣೇಭ್ಯಃ-

---

ನಕ್ಷತ್ರದಲ್ಲಿ, ಮೀನ ಲಗ್ನದಲ್ಲಿ, ಭರತನು ಪ್ರಸನ್ನಚಿತ್ತನಾಗಿಯೂ, ಲಕ್ಷ್ಮಣ ಶತ್ರುಘ್ನರಿಂಬೀರ್ವರು ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರದಲ್ಲಿ ಕರ್ಕಾಟಕ ಲಗ್ನದಲ್ಲಿ ಸೂರ್ಯೋದಯ ಕಾಲದಲ್ಲಿಯೂ ಜನಿಸಿದರು || ೧೪ || ಆ ದಶರಥ ರಾಜನಿಗೆ ಮಹಾತ್ಮರೂ, ಗುಣವಂತರೂ, ಪರಸ್ಪರಸಾದೃಶ್ಯವುಳ್ಳವರೂ, ಕಾಂತಿಯಿಂದ ಪೂರ್ವಾಭಾದ್ರಉತ್ತರಾಭಾದ್ರಾ ನಕ್ಷತ್ರಗಳಂತೆ ಹೊಳೆಯುತ್ತಿರುವವರೂ ಆದ ನಾಲ್ವರು ಕುಮಾರರು ಜನಿಸಿದರು. ಆಗ ಗಂಧರ್ವರು ಗಾನ ಮಾಡಿದರು. ಅಪ್ಸರಸ್ತ್ರೀಯರು ನರ್ತಿಸಿದರು;ದೇವದುಂದುಭಿಗಳು ಧ್ವನಿಗೈದವು; ಅಂತರಿಕ್ಷದಿಂದ ಪುಷ್ಪವೃಷ್ಟಿಯು ಸುರಿಯುತಲಿದ್ದಿತು. ಇದಲ್ಲದೆ ಆ ಅಯೋಧ್ಯಾ ಪಟ್ಟಣದಲ್ಲಿ ಮಹಾಜನರಿಂದ ತುಂಬಿ ತುಳುಕಾಡುತ್ತಿದ್ದು ಬಹಳ ದೊಡ್ಡ ಉತ್ಸವವು ನಡೆಯುತ್ತಿತ್ತು. ಜನ ಸಮುದಾಯದಿಂದ ನಿಬಿಡವಾಗಿದ್ದ ರಾಜವೀಧಿಗಳು ನಟರಿಂದಲೂ, ನರ್ತಕರಿಂದಲೂ, ತುಂಬಿದವುಗಳಾಗಿ ಗಾಯಕರಿಂದಲೂ,ವಾದ್ಯಗಾರರಿಂದಲೂ, ಜನಗಳಿಂದಲೂ ಸಂಭ್ರಮವಾದ ಕಲಕಲ ಧ್ವನಿಗೈಯುತ್ತಿದ್ದವು. ||೧೫-೧೮|| ಮಹದುತ್ಸವವು ನಡೆಯುತ್ತಿರಲು, ದಶರಥರಾಜನು

ಜ್ಯೇಷ್ಠಂ ರಾಮಂ ಮಹಾತ್ಮಾನಂ ಭರತಂ ಕೈಕಯೀಸುತಂ ||೧೯|| ಸೌಮಿತ್ರಿಂ ಲಕ್ಷ್ಮಣಮಿತಿ ಶತ್ರುಘ್ನ ಮಪರಂತಥಾ || ವಸಿಷ್ಠಃ ಪರಮ ಪ್ರೀತೋ ನಾಮಾನಿ ಕುರುತೇ ತದಾ || ೨೦ || ಬ್ರಾಹ್ಮಣಾನ್ ಭೋಜಯಾಮಾಸ ಪೌರಾನ್ ಜಾನಪದಾನಪಿ || ಅದದಾದ್ಬ್ರಾಹ್ಮಣಾನಾಂ ಚ ರತ್ನೌಘಮಮಿತಂ ಬಹು || ೨೧ || ತೇಷಾಂ ಕೇತುರಿವ ಜ್ಯೇಷ್ಠೋ ರಾಮೋ ರತಿಕರಃ ಪಿತುಃ || ಬಭೂವಭೂಯೋ

ಬ್ರಾಹ್ಮಣರಿಗೆ, ವಿತ್ತಂ - ಧನವನ್ನೂ, ಸಹಸ್ರಶಃ - ಅನೇಕ ಸಹಸ್ರಗಳಾದ, ಗೋಧನಾನಿ - ಗೋಧನಗಳನ್ನೂ, ಸೂತಮಾಗಧವಂದಿನಾಂ, ಸೂತ - ಪೂರ್ವ ಕಥೆಗಳನ್ನು ಹೇಳಿ ಸ್ತುತಿಸುವ ಭಟ್ಟರಾಜರಿಗೂ, ಮಾಗಧ - ವಂಶಾವಳಿಯನ್ನು ಸ್ತೋತ್ರ ಮಾಡುವವರಿಗೂ, ವಂದಿನಾಂ-ಪ್ರತೋಪಯುಕ್ತವಾದ ಸ್ತೋತ್ರಮಾಡತಕ್ಕ ಭಟ್ಟರಾಜರಿಗೂ, ಪ್ರದೇಯಾಂಶ್ಚ - ಕೊಡತಕ್ಕ ದ್ರವ್ಯಗಳನ್ನು, ದದೌ - ಕೊಟ್ಟನು || ೧೯ || ತಥಾ - ಹಾಗೆಯೇ, ಏಕಾದಶಾಹಂತು - ಹನ್ನೊಂದನೆಯ ದಿವಸವನ್ನು, ಅತೀತ್ಯ - ಕಳೆದು, ನಾಮಕರ್ಮ - ನಾಮಕರಣವನ್ನು, ಅಕರೋತ್ ಮಾಡಿದನು. ಮಹಾತ್ಮಾನಂ - ಮಹಾನುಭಾವನಾದ, ಜ್ಯೇಷ್ಠಂ - ದೊಡ್ಡ ಮಗನನ್ನು, ರಾಮಂ - ಶ್ರೀರಾಮನೆಂಬ ಹೆಸರುಳ್ಳವನನ್ನಾಗಿಯೂ, ಕೈಕೇಯಿಸುತಂ - ಕೈಕೇಯಿ ದೇವಿಯ ಮಗನನ್ನು, ಭರತಂ-ಭರತನೆಂದೂ, ಸೌಮಿತ್ರಿಂ- ಸುಮಿತ್ರಾ ದೇವಿಯ ಮಕ್ಕಳಲ್ಲಿ ಜ್ಯೇಷ್ಠನನ್ನು, ಲಕ್ಷ್ಮಣಂ- ಲಕ್ಷ್ಮಣನೆಂದೂ ಹಾಗೆಯೇ, ಅಪರಂ - ಮತ್ತೊಬ್ಬ ಸುಮಿತ್ರಾದೇವಿಯ ಮಗನನ್ನು, ಶತ್ರುಘ್ನಂ-ಶತ್ರುಘ್ನನೆಂದೂ, ಅಕರೋತ್ - ನಾಮಕರಣ ಮಹೋತ್ಸವವನ್ನು ಮಾಡಿದನು, ತದಾ - ಆಗ, ಪರಮಪ್ರೀತಃ-ಬಹಳ ಸಂತಸಗೊಂಡ, ವಸಿಷ್ಠಃ - ವಸಿಷ್ಠ ಋಷಿಯು, ಇತಿ - ಹಿಂದೆ ಹೇಳಿದ, ನಾಮಾನಿ - ಹೆಸರುಗಳನ್ನು, ಕುರುತೇಸ್ಮ - ಮಾಡಿದನಷ್ಟೆ. ||೨೦-೨೧|| ಬ್ರಾಹ್ಮಣಾನ್ - ಬ್ರಾಹ್ಮಣರನ್ನು, ಪೌರಾನ್ - ಪಟ್ಟಣಸ್ಥರಾದ ಇತರ ಪ್ರಜೆಗಳನ್ನೂ, ಜಾನಪದಾನಪಿ - ರಾಷ್ಟ್ರವಾಸಿಗಳಾದ ಪ್ರಜೆಗಳನ್ನೂ, ಭೋಜಯಾ

ಪೂರ್ವಕಥೆಗಳು ಹೇಳುತ್ತಿರುವ ಹೊಗಳುಭಟ್ಟರಿಗೂ ವಂಶಾವಳಿಯನ್ನು ಸ್ತುತಿಸುತ್ತಿರುವವರಿಗೂ, ಪ್ರಕೃತೋಪಯುಕ್ತವಾದಂತ ಸ್ತೋತ್ರ ಮಾಡುತ್ತಿರುವವರಿಗೂ, ಅವರವರ ಯೋಗ್ಯತಾನುಸಾರವಾಗಿ ಉಡುಗೆರಗಳೇ ಮುಂತಾದ ಬಹುಮಾನಗಳನ್ನು ಕೊಟ್ಟು ಬ್ರಾಹ್ಮಣರನೇಕರಿಗೆ ದ್ರವ್ಯವನ್ನೂ, ಅನೇಕ ಗೋವುಗಳನ್ನೂ ಕೊಟ್ಟನು, ||೧೯||ಹತ್ತು ದಿನಗಳು ಕಳದ ಬಳಿಕ ಹನ್ನೊಂದನೆಯ ದಿನದಲ್ಲಿ ಜೇಷ್ಠ ಪುತ್ರನೂ, ಮಹಾತ್ಮನೂ ಆದ ಕೌಸಲ್ಯಾಪುತ್ರನಿಗೆ ರಾಮನೆಂದೂ, ಕೈಕೆಯಿ ಕುಮಾರನಿಗ ಭರತನೆಂದೂ, ಸುಮಿತ್ರಾ ಗರ್ಭ ಸಂಭೂತರಾದ ಅವಳಿ ಜವಳಿ ಮಕ್ಕಳಿಗೆ ಲಕ್ಷ್ಮಣ ಶತ್ರುಘ್ನರೆಂದೂ ನಾಮಕರಣ ಮಾಡಬೇಕೆಂದಿಚ್ಛಿಸಿದನು. ಆಗ ಮಹಾ ಸಂತುಷ್ಟನಾದ ವಸಿಷ್ಠಮುನಿಯು ಹಾಗೆಯೇ ನಾಮಕರಣವನ್ನು ಮಾಡಿಸಿದನು.||೨೦-೨೧||ಆ ಸಮಯದಲ್ಲಿ ದಶರಥರಾಜನು ಬ್ರಾಹ್ಮಣರಿಗೂ, ಪಟ್ಟಣಸ್ಥರಿಗೂ, ತನ್ನ ದೇಶ ವಾಸಿಗಳಿಗೂ, ಭೋಜನಗಳನ್ನುಮಾಡಿಸಿ. ಅನೇಕ ರತ್ನಗಳನ್ನೂ ದ್ರವ್ಯವನ್ನೂ ಕೊಟ್ಟು, ಆ ಮಕ್ಕಳಿಗೆ ಜಾತಕರ್ಮಾದಿ ಕರ್ಮಗಳನ್ನು ನಡೆಯಿಸಿದನು. ||೨೨|| ಆ ಮಕ್ಕಳಲ್ಲಿ ಜ್ಯೇಷ್ಠ ಪುತ್ರನಾದ ಶ್ರೀರಾಮನು ಸಮಸ್ತ ಭೂತಗಳಲ್ಲಿಯೂ, ಬ್ರಹ್ಮನಂತೆ ಎಲ್ಲರಿಗೂ

ಭೂತಾನಾಂ ಸ್ವಯಂಭೂರಿವ ಸಮ್ಮತಃ ||೨೩|| ಸರ್ವೇ ವೇದವಿದಶ್ಶೂರಾಸ್ಸರ್ವೇ ಲೋಕಹಿತೇ ರತಾಃ || ಸರ್ವೇ ಜ್ಞಾನೋಪಸಂಪನ್ನಾ ಸ್ಸರ್ವೇ ಸಮುದಿತಾಗುಣೈಃ ||೨೪|| ತೇಷಾಮಪಿ ಮಹಾತೇಜಾ ರಾಮ ಸ್ಸತ್ಯಪರಾಕ್ರಮಃ || ಇಷ್ಟಸ್ಸರ್ವಸ್ಯ ಲೋಕಸ್ಯ ಶಶಾಂಕ ಇವ ನಿರ್ಮಲಃ || ೨೫ || ಗಜಸ್ಕಂಧೇಶ್ವಪೃಷ್ಠೇಚ ರಥ ಚರ್ಯಾಸು ಸಮ್ಮತಃ||ಧನುರ್ವೇದೇ ಚ ನಿರತಃ ಪಿತೃಶುಶ್ರೂಷಣೇ ರತಃ||೨೬|| ಬಾಲ್ಯಾತ್ಪ್ರಭೃತಿಸುಸ್ನಿಗ್ಧೋ ಲಕ್ಷ್ಮಣೋ ಲಕ್ಷ್ಮಿವರ್ಧನಃ || ರಾಮಸ್ಯ ಲೋಕ

---

ಮಾಸ- ಭೋಜನ ಮಾಡಿಸಿದನು, ಬ್ರಾಹ್ಮಣಾಂಚ - ಬ್ರಾಹ್ಮಣರಿಗೂ, ಅಮಿತಂ - ಅಪಾರವಾದ, ಬಹು - ಬಹಳವಾದ, ರತ್ನೌಘಂ - ರತ್ನರಾಶಿಗಳನ್ನು, ಅದದಾತ್ - ಕೊಟ್ಟನು. ||೨೨|| ತೇಷಾಂ- ಆ ನಾಲ್ವರಿಗೂ, ಜನ್ಮಕ್ರಿಯಾದೀನಿ - ಜಾತಕರ್ಮವೇ ಮೊದಲಾದ, ಸರ್ವಕರ್ಮಾಣಿ-ಸಮಸ್ತ ಕರ್ಮಗಳನ್ನೂ, ಅಕಾರಯತ್ - ಮಾಡಿಸಿದನು. ತೇಷಾಂ - ಆ ನಾಲ್ವರೊಳಗೆ, ಜ್ಯೇಷ್ಠಃ - ದೊಡ್ಡವನಾದ, ರಾಮಃ - ಶ್ರೀರಾಮನು, ಕೇತುರಿವ - ಧ್ವಜದಂತೆ, ಪಿತುಃ - ತಂದೆಗೆ, ಭೂಯಃ-ಮತ್ತು, ರತಿಕರಃ- ಸಂತೋಷಕರನಾಗಿ, ಸಮ್ಮತಃ - ಇಷ್ಟನಾದವನು, ಬಭೂವ - ಆದನು ||೨೩|| ಸರ್ವೇ-ಸಮಸ್ತರೂ, ವೇದವಿದಃ - ವೇದವೇದಾಂಗಗಳನ್ನು ತಿಳಿದವರು, ಸರ್ವೇ - ಎಲ್ಲರೂ, ಶೂರಾಃ- ಶೂರರು, ಸರ್ವೇ - ಎಲ್ಲರೂ, ಲೋಕಹಿತೇ - ಜನರ ಸೌಖ್ಯದಲ್ಲಿ, ರತಾಃ - ಆಸಕ್ತರು, ಸರ್ವೇ - ಸಮಸ್ತರೂ, ಜ್ಞಾನೋಪಸಂಪನ್ನಾಃ- ವೇದ ಧರ್ಮ ತತ್ವಜ್ಞಾನದಿಂದ ಕೂಡಿದವರು, ಸರ್ವೇ- ಸಮಸ್ತರೂ, ಗುಣೈಃ- ಸದ್ಗುಣಗಳಿಂದ, ಸಮುದಿತಾಃ - ಕೂಡಿದವರು, ಬಭೂವುಃ - ಆದರು. || ೨೪ || ತೇಷಾಮಪಿ - ಆ ನಾಲ್ವರೊಳಗೆ, ಮಹಾತೇಜಾಃ - ಮಹಾ ತೇಜೋವಂತನಾದ, ಸತ್ಯಪರಾಕ್ರಮಃ - (ಮ) ಸಫಲವಾದ ಪರಾಕ್ರಮವುಳ್ಳ, (ಗೋ) ಸತ್ಯದಿಂದ ಶತ್ರುಸಂಹಾರಕನಾದ, ರಾಮಃ-ಶ್ರೀರಾಮನು, ಸರ್ವಸ್ಯಲೋಕಸ್ಯ - ಸಮಸ್ತ ಜನಕ್ಕ, ನಿರ್ಮಲಃ - ನಿರ್ಮಲವಾದ, ಶಶಾಂಕಇವ - ಚಂದ್ರನಂತೆ, ಇಷ್ಟಃ- ಪ್ರೀತಿವಿಷಯನು, ಬಭೂವ - ಆದನು. || ೨೫ || ಗಜಸ್ಕಂಧೇ - ಆನೆಯ ಭುಜಶಿರಸ್ಸಿನಮೇಲೆಯೂ, ಅಶ್ವಪೃಷ್ಠೇಚ = ಕುದುರೆಗಳ ಬೆನ್ನಿನಮೇಲೆಯೂ, ರಥಚರ್ಯಾಸು - ಯುದ್ಧಾರ್ಥವಾಗಿ ರಥಗಳನ್ನು ನಡಿಸುವ ವ್ಯಾಪಾರಗಳಲ್ಲಿಯೂ, ಸಮ್ಮತಃ - ಗಜನಾದಿಗಳಿಂದಲೂ, ಅಪ್ಪಸಾದಿಗಳಿಂದಲೂ, ಬಹುಮಾನಿಸಲ್ಪಟ್ಟವನು, ಧನುರ್ವೇದೇಚ - ಧನುರ್ವೇದದಲ್ಲಿಯೂ, ನಿರತಃ - ಆಸಕ್ತನು, ಪಿತೃಶುಶ್ರೂಷಣೇ- ಪಿತೃಸೇವೆಯಲ್ಲಿ, ರತಃ - ಆಸಕ್ತಿಯುಳ್ಳವನು, ಅಭವತ್ - ಆದನು. ||೨೬ || ಲಕ್ಷ್ಮಿವರ್ಧನಃ- ಗೋ) ಭಗವದ್ಭಕ್ತಿರೂಪ ಲಕ್ಷ್ಮಿಯನ್ನು ವೃದ್ಧಿಗೊಳಿಸುತ್ತಿರುವ, (ತಿ) ಲಕ್ಷ್ಮಿವರ್ಧನಃ - ಐಶ್ವರ್ಯ

---

ಪ್ರಿಯಕರನಾಗಿದ್ದನು. || ೨೩ || ಆ ಮಕ್ಕಳೆಲ್ಲರೂ ವೇದಜ್ಞರಾಗಿಯೂ, ಲೋಕಹಿತ ಚಿಂತಕರಾಗಿಯೂ ಜ್ಞಾನಸಂಪನ್ನರಾಗಿಯೂ, ಸದ್ಗುಣಗಳಿಂದೂಪ್ಪುತ್ತಿರುವವರಾಗಿಯೂ ಇರುತ್ತಿದ್ದರು. || ೨೪ || ಸತ್ಯ ಪರಾಕ್ರಮಿಯಾಗಿಯೂ ಆ ನಾಲ್ವರಲ್ಲಿ ಮಹಾತೇಜಸ್ವಿಯೂ ಆದ ಶ್ರೀರಾಮನು, ಚಂದ್ರನಂತೆ ಜನರಿಗೆಲ್ಲಾ ಪ್ರಿಯಕರನಾಗಿಯೂ, ನಿರ್ಮಲಚಿತ್ತನಾಗಿಯೂ, ಇರುತ್ತಿದ್ದನಲ್ಲದೆ ಆನೆಯ ಸವಾರಿಯಲ್ಲಿಯೂ, ಕುದುರೆಯ ಸವಾರಿಯಲ್ಲಿಯೂ, ರಥಗಳನ್ನು ನಡಿಸುವುದರಲ್ಲಿಯೂ,ಧನುರ್ವೇದದಲ್ಲಿಯೂ ನಿಪುಣನಾಗಿ, ತಂದೆಯ ಶುಶ್ರೂಷೆಯಲ್ಲಿ ಆಸಕ್ತನಾಗಿದ್ದನು, || ೨೬ || ಭಗವದ್ಭಕ್ತಿ ರೂಪವಾದ ಲಕ್ಷ್ಮಿಯನ್ನು ವೃದ್ಧಿಗೊಳಿಸು

ರಾಮಸ್ಯ ಭ್ರಾತುರ್ಜ್ಯೇಷ್ಠಸ್ಯ ನಿತ್ಯಶಃ || ೨೭ || ಸರ್ವ ಪ್ರಿಯಕರಸ್ತಸ್ಯ ರಾಮಸ್ಯಾಪಿ ಶರೀರತಃ || ಲಕ್ಷ್ಮಣೋ ಲಕ್ಷ್ಮಿಸಂಪನ್ನೋ ಬಹಿಃ ಪ್ರಾಣಇವಾಪರಃ || ೨೮|| ನಚ ತೇನವಿನಾ ನಿದ್ರಾಂ ಲಭತೇ ಪುರುಷೋತ್ತಮಃ ॥ ಮೃಷ್ಟಮನ್ನಮುಪಾನೀತ ಮಶ್ನಾತಿ ನಚ ತಂ ವಿನಾ ||೨೯|| ಯದಾಹಿ ಹಯಮಾರೂಢೋ ಮೃಗಯಾಂ ಯಾತಿ ರಾಘವಃ || ತದೈನಂಪೃಷ್ಠತೋನ್ವೇತಿ ಸ ಧನುಃ ಪರಿಪಾಲಯನ್ || ೩೦ || ಭರತಸ್ಯಾಪಿ ಶತ್ರುಘ್ನೋ ಲಕ್ಷ್ಮಣಾವರಜೋಹಿ ಸಃ ||ಪ್ರಾಣೈಃ

---

ಸಂಪನ್ನನಾದ, ಲಕ್ಷ್ಮಣಃ - ಲಕ್ಷ್ಮಣನು, ಲೋಕರಾಮಸ್ಯ - ಜನರಂಜಕನಾದ, ರಾಮಸ್ಯ - ಶ್ರೀರಾಮನಿಗೆ, ಬಾಲ್ಯಾತ್ಪ್ರಭೃತಿ - ಬಾಲ್ಯಾವಸ್ಥೆ ಮೊದಲುಗೊಂಡು, ಸುಸ್ನಿಗ್ಧಃ - ಸ್ನೇಹಿತನಾದನು. ಜ್ಯೇಷ್ಠಸ್ಯ - ಜೇಷ್ಠನಾದ, ಭ್ರಾತುಃ ಅಣ್ಣನಾದ, ತಸ್ಯರಾಮಸ್ಯ-ಆ ಶ್ರೀರಾಮನಿಗೆ, ನಿತ್ಯಶಃ-ನಿರಂತರವೂ, ಶರೀರತೋಪಿ - (ಮ) ಶರೀರಕ್ಕಿಂತಲೂ, (ಗೋ) ಶರೀರತೋಪಿ - ರಾಮನ ಶರೀರಾದಿ ತ್ರಿಕರಣಗಳಿಂದಲೂ, ಅಂದರೆ ಕಾಯಿಕ,ವಾಚಕ,ಮಾನಸಿಕ ವ್ಯಾಪಾರಗಳಿಂದಲೂ, ಸರ್ವಪ್ರಿಯಕರಃ, ಸರ್ವ - ಸರ್ವಾಂಶಗಳಲ್ಲಿಯೂ, (ಮ) ಸರ್ವಾವಸ್ಥೆಗಳಲ್ಲಿಯೂ, ಪ್ರಿಯಕರಃ - (೧) ಹಿತಕರನಾದ, ಲಕ್ಷ್ಮಿಸಂಪನ್ನಃ - (ಮ) ಸಂಪದ್ಯುಕ್ತನಾದ, (ಗೋ) ಭಗವದ್ಭಕ್ತಿರೂಪ ಲಕ್ಷ್ಮೀ ಸಂಪನ್ನನಾದ, ಲಕ್ಷ್ಮಣಃ - ಲಕ್ಷ್ಮಣನು, ಬಹಿಃ - ಹೊರಗಣ, ಅಪರಃ - ಮತ್ತೊಂದು, ಪ್ರಾಣಇವ - ಪ್ರಾಣದಂತೆ, ನಿತ್ಯಶಃ - ನಿರಂತರವೂ, ಸ್ಥಿತ - ಇದ್ದನು. ||೨೭-೨೮|| ಪುರುಷೋತ್ತಮಃ - ಪುರುಷಶ್ರೇಷ್ಠನಾದ ಶ್ರೀರಾಮನೂ ಸಹಾ, ತೇನವಿನಾ - ಆ ಲಕ್ಷ್ಮಣನನ್ನ ಬಿಟ್ಟು, ನಿದ್ರಾಂ - ನಿದ್ರೆಯನ್ನು, ನಲಭತೇ-ಹೊಂದುವದಿಲ್ಲವು, ಉಪಾನೀತಂ - ತರಲ್ಪಟ್ಟ, ಮೃಷ್ಟಂ - ಷಡ್ರಸೋಪೇತವಾದ, ಅನ್ನಂಚ - ಅನ್ನವನ್ನು ಕೂಡ, ತಂವಿನಾ- ಆ ಲಕ್ಷ್ಮಣನನ್ನು ಬಿಟ್ಟು, ನಾಶ್ನಾತಿ - ಊಟಮಾಡುವದಿಲ್ಲ. ||೨೯|| ಯದಾ - ಯಾವಾಗ ರಾಘವಃ - ಶ್ರೀರಾಮನು, ಹಯಂ - ಕುದುರೆಯನ್ನು, ಆರೂಢಃ - ಏರಿದವನಾಗಿ, ಮೃಗಯಾಂ - ಬೇಟೆಯನ್ನು ಕುರಿತು, ಯಾತಿಹಿ - ಹೋಗುತ್ತಾನೆಯೋ, ತದಾ - ಆಗ, ಲಕ್ಷ್ಮಣಃ-ಲಕ್ಷ್ಮಣನು, ಸಧನುಃ - ಧನುಸ್ಸಿನಿಂದೊಡಗೂಡಿ, ಏನಂ-ಈ ಶ್ರೀ ರಾಮನನ್ನು, ಪರಿಪಾಲಯನ್ - ಸಂರಕ್ಷಣೆ ಮಾಡುತ್ತ, ಪೃಷ್ಠತೋನ್ವೇತಿಹಿ - ಬೆನ್ನಟ್ಟಿ ಹೋಗುವನಷ್ಟೆ || ೩೦ || ಲಕ್ಷ್ಮ

---

ತ್ತಿರುವ ಲಕ್ಷ್ಮಣನು ಲೋಕರಂಜಕನು, ಹಿರಿಯಣ್ಣನಾದ ಶ್ರೀರಾಮನಿಗೆ ಬಾಲ್ಯದಿಂದಲೂ ಪ್ರಿಯವಾಗಿರುವವನೂ, ಎಲ್ಲವಿಷಯಗಳಲ್ಲಿಯೂ. ಆತನ ಶರೀರಕ್ಕಿಂತಲೂ ಪ್ರಿಯವನ್ನುಂಟುಮಾಡುತ್ತಿರುವವನೂ, ಮಹಾ ಧೈರ್ಯ ಸಂಪನ್ನನಾಗಿಯೂ ಆತನ ಹೊರಗಣ ಪ್ರಾಣದಂತೆ ನಿರಂತರವೂ ಇರುತ್ತಿರುವವನಾದನು. ||೨೮|| ಪುರುಷೋತ್ತಮನಾದ ಶ್ರೀರಾಮನಾದರೆ, ಲಕ್ಷ್ಮಣಸ್ವಾಮಿಯನ್ನು ಬಿಟ್ಟು ನಿದ್ದೆಯನ್ನು ಸಹ ಹೊಂದುತ್ತಿರಲಿಲ್ಲವು ||೨೯|| ರಾಮನು ಕುದರೆಯನ್ನೇರಿ ಬೇಟೆಗೆ ತೆರಳಿದರೆ ಲಕ್ಷ್ಮಣನು ಆತನ ಹಿಂದೆ ಬಿಲ್ಲನ್ನು ಹಿಡಿದು ಹೊರಡುತ್ತಿ

---

ಟಿ (೧) "ರಾಮಸ್ಯ ದಕ್ಷಿಣೋ ಬಾಹುರ್ನಿತ್ಯಂ ಪ್ರಾಣೋ ಬಹಿಶ್ಚರಃ" ಎಂದು ಹೇಳಿರುವದರಿಂದ ಹೀಗೆ ಬಣ್ಣಿಸಿದ್ದಾರೆ. ಎಂದು ಗೋವಿಂದರಾಜೀಯವು.

ಪ್ರಿಯತರೋ ನಿತ್ಯಂ ತಸ್ಯ ಚಾಸೀತ್ತಥಾ ಪ್ರಿಯಃ ||೩೧|| ಸ ಚತುರ್ಭಿರ್ಮಹಾ ಭಾಗ್ಯೈಃ ಪುತ್ರೈರ್ದಶರಥಃ ಪ್ರಿಯೈಃ || ಬಭೂವ ಪರಮ ಪ್ರೀತೋ ದೇವೈರಿವ ಪಿತಾಮಹಃ ||೩೨|| ತೇ ಯದಾ ಜ್ಞಾನಸಂಪನ್ನಾ ಸ್ಸರ್ವೈ ಸ್ಸಮುದಿತಾ ಗುಣೈಃ|| ಹ್ರೀಮಂತಃ ಕೀರ್ತಿಮಂತಶ್ಚ ಸರ್ವಜ್ಞಾ ದೀರ್ಘ ದರ್ಶಿನಃ||೩೩|| ತೇಷಾಮೇವಂ ಪ್ರಭಾವಾನಾಂ ಸರ್ವೇಷಾಂ ದೀಪ್ತತೇಜಸಾಂ|| ಪಿತಾದಶರಥೋ ಹೃಷ್ಟೋ ಬ್ರಹ್ಮ ಲೋಕಾಧಿಪೋ ಯಥಾ || ೩೪ || ತೇಚಾಪಿ ಮನುಜ ವ್ಯಾಘ್ರಾ ವೈದಿಕಾಧ್ಯ

---

ಣಾವರಜಃ - ಲಕ್ಷ್ಮಣನ ತಮ್ಮನಾದ, ಶತ್ರುಘ್ನೋಪಿ- ಶತ್ರುಘ್ನನೂ, ಭರತಸ್ಯ - ಭರತನಿಗೆ, ಪ್ರಾಣೈಃ - ಪ್ರಾಣಗಳಿಗಿಂತಲೂ, ಪ್ರಿಯತರಃ - ಅತ್ಯಂತ ಹಿತಕರನಾದವನು, ಅಭವತ್ - ಆದನು, ತಥಾ - ಹಾಗೆಯೆ, ತಸ್ಯಚ - ಆ ಭರತನಿಗೂ, ನಿತ್ಯಂ - ಯಾವಾಗಲೂ, ಪ್ರಿಯಃ - ಇಷ್ಟನಾದ ವನು, ಆಸೀತ್ - ಆದನು. || ೩೧ || ಸದಶರಥಃ ಆ ದಶರಥರಾಯನು, ಮಹಾಭಾಗ್ಯೈಃ - ಮಹಾ, ಪುಣ್ಯಶಾಲಿಗಳಾದ, ಪ್ರಿಯೈಃ - ಇಷ್ಟರಾದ, ಚತುರ್ಭಿಃ - ನಾಲ್ವರಾದ, ಪುತ್ರೈಃ - ಮಕ್ಕಳಿಂದ, ದೇವೈಃ - ಇಂದ್ರಾಗ್ನಿ ಯಮ ವರುಣರಿಂದ, ಪಿತಾಮಹಇವ-ಬ್ರಹ್ಮನಂತೆ, ಪರಮಪ್ರೀತಃ - ಬಹಳ ಸಂತೋಷಗೊಂಡವನು, ಬಭೂವ - ಆದನು ||೩೨|| ತೇ-ಆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರು, ಜ್ಞಾನಸಂಪನ್ನಾಃ - ಶಾಸ್ತ್ರಜ್ಞಾನದಿಂದ ಕೂಡಿದವರಾಗಿ, ಸರ್ವೈಃ-ಸಮಸ್ತ, ಗುಣೈಃ-ಸೌಶೀಲ್ಯ, ಪಿತೃಭಕ್ತ್ಯಾದಿ ಗುಣಗಳಿಂದ, ಸಮುದಿತಾಃ - ಯುಕ್ತರಾಗಿ, ಹ್ರೀಮಂತಃ - ನಿಷಿದ್ಧಕಾರ್ಯ ವಿಷಯದಲ್ಲಿ ಲಜ್ಜಾಯುಕ್ತರಾಗಿ, ಯಥಾ - ಹೇಗೆ, ಕೀರ್ತಿಮಂತಃ - ಯಶೋವಂತರಾಗಿಯೂ, ಸರ್ವಜ್ಞಾಃ - ಲೌಕಿಕ ಸರ್ವ ವಿಷಯಕ ಜ್ಞಾನವಂತರಾಗಿಯೂ, ದೀರ್ಘದರ್ಶಿನಃ - ದೂರದೃಷ್ಟಿಯು ಳ್ಳವರೂ, ಬಭೂವುಃ - ಆದರು, ಏವಂಪ್ರಭಾವಾನಾಂ - ಇಂತಹ ಮಹಾತ್ಮ್ಯೆಯುಳ್ಳ, ದೀಪ್ತತೇ ಜಸಾಂ, ದೀಪ್ತ - ಹೊಳೆಯುತ್ತಿರುವ, ತೇಜಸಾಂ - ಪ್ರಕಾಶವುಳ್ಳ, ಸರ್ವೇಷಾಂ - ಸಮಸ್ತರಾದ, ತೇಷಾಂ - ಆ ನಾಲ್ವರಿಗೂ, ಪಿತಾ - ತಂದೆಯಾದ, ದಶರಥಃ - ದಶರಥನು, ಬ್ರಹ್ಮಲೋಕಾಧಿಪೋ ಯಥಾ, ಬ್ರಹ್ಮಲೋಕ - ಸತ್ಯಲೋಕಕ್ಕೆ, ಅಧಿಪೋಯಥಾ -ಅಧಿಪತಿಯು ಹೇಗೋ. ತಥಾ = ಹಾಗೆ ಯೇ, ಹೃಷ್ಟಃ - ಸಂತೋಷಚಿತ್ತನು, ಆಸೀತ್ - ಆದನು ||೩೪|| ಮನುಜವ್ಯಾಘ್ರಾಃ - ಮನುಷ್ಯ

---

ದ್ದನು. |೩೦| ಲಕ್ಷ್ಮಣನ ತಮ್ಮನಾದ ಶತ್ರುಘ್ನನು ಭರತನಿಗೆ ಯಾವಾಗಲೂ ಪ್ರಾಣಗ ಳಿಗಿಂತಲೂ ಪ್ರಿತಿಪಾತ್ರನಾಗಿರುತ್ತಿದ್ದನು || ೩೧ || ಮಹಾಭಾಗ್ಯವಂತರೂ ಪ್ರಿಯರೂ ಆದ ಈ ನಾಲ್ಕುಮಂದಿ ಮಕ್ಕಳೊಡನೆ ಆ ದಶರಥರಾಜನು ನಾಕ್ಸಾಚ್ಚತುರ್ಮುಖ ಬ್ರಹ್ಮನು ದೇವ ತೆಗಳೊಡನೆ ಸಂತುಷ್ಟನಾಗಿರುವಂತೆ ಸಂತುಷ್ಟಾಂತರಂಗವುಳ್ಳವನಾಗಿದ್ದನು. ||೩೨||ಆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ಕು ಮಂದಿ ಕುವರರು, ಜ್ಞಾನಸಂಪನ್ನರಾಗಿಯೂ, ಎಲ್ಲ ಗುಣಗಳಿಂದೊಪ್ಪುತ್ತಿರುವವರಾಗಿಯೂ, ನಿಷಿದ್ಧಕಾರ್ಯಗಳಲ್ಲಿ ಲಜ್ಜೆಯುಳ್ಳವರಾಗಿಯೂ, ದೂರಾಲೋಚನೆಯುಳ್ಳವರಾಗಿಯೂ ವೃದ್ಧಿಹೊಂದುತ್ತಿದ್ದರು. ಇಂಥಾ ಮಹಾತ್ಮ್ಯವುಳ್ಳ ಮಹಾ ತೇಜಸ್ವಿಗಳಾದ ಆ ಕುಮಾರರ ತಂದೆಯಾದ ದಶರಥ ರಾಜನು ಸತ್ಯಲೋಕಾಧಿಪ. ತಿಯಂತೆ ಸಂತೋಷಚಿತ್ತವುಳ್ಳವನಾಗಿದ್ದನು. || ೩೪|| ಆ ದಶರಥರಾಜ ನಂದನರು

ಯನೇ ರತಾಃ || ಪಿತೃಶುಶ್ರೂಷಣರತಾ ಧನುರ್ವೇದೇ ಚ ನಿಷ್ಠಿತಾಃ ||೩೫|| ಅಥ ರಾಜಾ ದಶರಥ ಸ್ತೇಷಾಂ ದಾರಕ್ರಿಯಾಂ ಪ್ರತಿ || ಚಿಂತಯಾಮಾಸ ಧರ್ಮಾತ್ಮಾ ಸೋಪಾಧ್ಯಾಯ ಸ್ಸಬಾಂಧವಃ ||೩೬|| ತಸ್ಯ ಚಿಂತಯಮಾನಸ್ಯ ಮಂತ್ರಿಮಧ್ಯೇ ಮಹಾತ್ಮನಃ || ಅಭ್ಯಗಚ್ಛನ್ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ||೩೭|| ಸರಾಜ್ಞೋ ದರ್ಶನಾಕಾಂಕ್ಷೀ ದ್ವಾರಾ ಧ್ಯಕ್ಷಾನುವಾಚಹ || ಶೀಘ್ರಮಾಖ್ಯಾತ ಮಾಂ ಪ್ರಾಪ್ತಂ ಕೌಶಿಕಂ ಗಾಧಿನಸ್ಸುತಂ ||೩೮|| ತಚ್ಛ್ರುತ್ವಾ ವಚನಂ ತ್ರಾಸಾ

---

ಶ್ರೇಷ್ಠರಾದ, ತೇಚಾಪಿ - ಆ ನಾಲ್ವರೂ, ವೈದಿಕಾಧ್ಯಯನೇ - ವೇದಾಧ್ಯಯನದಲ್ಲಿ, ರತಾಃ- ಆಸಕ್ತರಾಗಿಯೂ, ಪಿತೃಶುಶ್ರೂಷಣರತಾಃ- ತಾಯಿತಂದೆಗಳ ಸೇವೆಯಲ್ಲಿ ಆಸಕ್ತರಾಗಿಯೂ, ಧನುರ್ವೇದೇಚ - ಧನುರ್ವಿದ್ಯೆಗಳಲ್ಲಿಯೂ, ನಿಷ್ಠಿತಃ - ಪಾರಂಗತರಾಗಿ, ಆಸನ್ - ಆದರು. || ೩೫ || ಅಥ- ಬಳಿಕ, ಧರ್ಮಾತ್ಮಾ ಧರ್ಮಿಷ್ಠನಾದ, ರಾಜಾ ದಶರಥಃ - ರಾಜನಾದ ದಶರಥನು, ಸೋಪಾಧ್ಯಾಯಃ - ಪುರೋಹಿತರಿಂದೊಡಗೂಡಿ, ಸಬಾಂಧವಃ - ಬಂಧುಸಮೇತನಾಗಿ, ತೇಷಾಂ - ಆ ಶ್ರೀರಾಮಾದಿಗಳಿಗೆ, ದಾರಕ್ರಿಯಾಂಪ್ರತಿ-ಕನ್ಯಾನ್ವೇಷಣೆಯನ್ನು ಕುರಿತು, ಚಿಂತಯಾಮಾಸ - ಆಲೋಚಿಸಿದನು. ||೩೬|| ಮಂತ್ರಿಮಧ್ಯೇ - ಮಂತ್ರಿಗಳ ಮಧ್ಯದಲ್ಲಿ, ಮಹಾತ್ಮನಃ- ಮಹಾತ್ಮನಾದ, ತಸ್ಯ- ಆ ದಶರಥನು, (೧) ಚಿಂತಯಮಾನಸ್ಯತು-ಆಲೋಚನೆ ಮಾಡುತಿರಲು, (ಗೋ) ಚಿಂತಯಮಾನಸ್ಯ - ಆಲೋಚಿಸುತ್ತಿರುವ, ತಸ್ಯ -ಆ ಶ್ರೀರಾಮನ ಇಷ್ಟದಂತೆ, ಮಹಾತೇಜಾಃ - ಬ್ರಹ್ಮತೇಜಸ್ಸನ್ನೊಳಗೊಂಡ, ವಿಶ್ವಾಮಿತ್ರಃ- ವಿಶ್ವಾಮಿತ್ರನೆಂಬ, ಮಹಾಮುನಿಃ- ಮಹರ್ಷಿಯು, ಅಭ್ಯಗಚ್ಛತ್ - ಬಂದನು. ||೩೭|| ಸಃ - ಆ ವಿಶ್ವಾಮಿತ್ರನು, ರಾಜ್ಞಃ - ದಶರಥರಾಯನನ್ನು, ದರ್ಶನಾಕಾಂಕ್ಷೀ - ನೋಡಲಪೇಕ್ಷಿಸಿ, ದ್ವಾರಾಧ್ಯಕ್ಷಾನ್ - ದ್ವಾರಪಾಲಕರನ್ನು ಕುರಿತು, ಗಾಧಿನಃ - ಗಾಧಿರಾಯನಿಗೆ, ಸುತಂ - ಕುಮಾರನಾದ, ಕೌಶಿಕಂ - ಕುಶಿಕ ವಂಶೋತ್ಪನ್ನನಾದ, ಮಾಂ - ನನ್ನನ್ನು, ಪ್ರಾಪ್ತಂ - ಬಂದಿರುವನನ್ನಾಗಿ, ಶೀಘ್ರಂ - ಬೇಗನೆ, ಆಖ್ಯಾತ-ಹೇಳಿರಿ, ಇತಿ - ಇಂತೆಂದು, ಉವಾಚಹ - ಹೇಳಿದನಷ್ಟೆ, || ೩೮ || ತದ್ವಚನಂ – ಆ ಮಾತನ್ನು, ಶ್ರುತ್ವಾ- ಕೇಳಿ, ತ್ರಾಸಾತ್ - ಭಯದಿಂದ, ಸಂಭ್ರಾಂತಮನಸಃ - ಚಕಿತವಾದ ಮನವುಳ್ಳವರಾಗಿ, ಸರ್ವೇ-

---

ವೈದಿಕಸಂಬಂಧವಾದ ಸ್ಮೃತಿ, ಇತಿಹಾಸ ಪುರಾಣಾದಿಗಳ ಅಧ್ಯಯನದಲ್ಲಿ ಆಸಕ್ತಿಯುಳ್ಳವರೂ, ಜನಕನ ಸೇವೆಯಲ್ಲಿ ನ್ಯಸ್ತಚಿತ್ತರೂ, ಧನುರ್ವೇದದಲ್ಲಿ ನಿಷ್ಣಾ ಪರರೂ ಆದರು. ||೩೫|| ಅನಂತರದಲ್ಲಿ ಮಹಾ ಧರ್ಮವಂತನಾದ ದಶರಥ ರಾಜನು, ಉಪಾಧ್ಯಾಯರಿಂದಲೂ ಬಂಧುಗಳಿಂದಲೂ ಒಡಗೂಡಿ ರಾಮಾದಿಗಳಿಗೆ ವಿವಾಹವನ್ನು ಮಾಡಬೇಕೆಂದು ಚಿಂತಿಸುತಿದ್ದನು. ||೩೬|| ಹೀಗೆ ಚಿಂತಿಸುತಿರಲು, ಮಹಾ ತೇಜಸ್ವಿಯಾದ ವಿಶ್ವಾಮಿತ್ರನೆಂಬ ಋಷಿಯು ಬಂದು, ದ್ವಾರಪಾಲಕರನ್ನು ಕುರಿತು''ಎಲೈ ದ್ವಾರರಕ್ಷಕರೆ! ಗಾಧಿ ರಾಜನ

---

ಟಿ. (೧) ದಶರಥರಾಯನು ಶ್ರೀರಾಮಚಂದ್ರನಿಗೆ ಕನ್ಯೆಯನ್ನು ಹುಡುಕಲು ಸಮರ್ಥನಾಗಿದ್ದರೂ ರಾಮವೈಭವವನ್ನು ಲೋಕಕ್ಕೆ ಹರಡಲು ಯೋಚಿಸಿದನು ಎಂದು ಅಭಿಪ್ರಾಯವು ಏಕೆಂದರೆ, ವಸಿಷ್ಠ ಋಷಿಯು ಸುಮಂತ್ರನನ್ನು ಕುರಿತು "ಪೂರ್ವಸಂಬಂಧಿನಂ ಜ್ಞಾತ್ವಾ ತತಃ ಪೂರ್ವಂ ಬ್ರವೀಮಿತೇ" ಎಂದು ಅಶ್ವಮೇಧಯಾಗಕ್ಕೆ ರಾಜರನ್ನು

ದ್ರಾಜ್ಞೋ ವೇಶ್ಮ ಪ್ರದುದ್ರುವುಃ ॥ ಸಂಭ್ರಾಂತಮನಸಸ್ಸರ್ವೇ ತೇನ ವಾಕ್ಯೇನ ಚೋದಿತಾಃ ॥ ೬೯ ॥ ತೇ ಗತ್ವಾ ರಾಜಭವನಂ ವಿಶ್ವಾಮಿತ್ರಮೃಷಿಂ ತದಾ ॥ ಪ್ರಾಪ್ತಮಾವೇದಯಾಮಾಸು ರ್ನೃಪಾಯೈಕ್ಷ್ವಾಕವೇ ತದಾ ॥೪೦॥ ತೇಷಾಂ ತದ್ವಚನಂ ಶ್ರುತ್ವಾ ಸ ಪುರೋಧಾ ಸ್ಸಮಾಹಿತಃ॥ಪ್ರತ್ಯುಜ್ಜಗಾಮ ತಂ ಹೃಷ್ಟೋ ಬ್ರಹ್ಮಾಣಮಿವ ವಾಸವಃ ॥೪೧॥ ತಂ ದೃಷ್ಟ್ವಾ ಜ್ವಲಿತಂ ದೀಪ್ತ್ಯಾ ತಾಪಸಂ ಸಂಶಿತವ್ರತಂ ॥ ಪ್ರಹೃಷ್ಟವದನೋ ರಾಜಾ ತತೋಽರ್ಘ್ಯ ಮುಪಹಾರಯತ್ ॥೪೨॥

---

ಸಮಸ್ತರೂ, ತೇನವಾಕ್ಯೇನ - ಆ ಮಾತಿನಿಂದ, ಚೋದಿತಾಃ - ಪ್ರೇರಿತರಾಗಿ, ರಾಜ್ಞಃ - ದಶರಥ ರಾಯನ, ವೇಶ್ಮ - ಮನೆಯನ್ನು ಕುರಿತು, ಪ್ರದುದ್ರುವುಃ -ಓಡಿಹೋದರು. ।೩೯। ತದಾ - ಆಗ, ತೇ- ಆ ದ್ವಾರಪಾಲಕರು, ರಾಜಭವನಂ - ರಾಜಗೃಹವನ್ನು, ಗತ್ವಾ - ಹೊಂದಿ, ತದಾ ಆಗಲೇನೆ, ವಿಶ್ವಾಮಿತ್ರಂ - ವಿಶ್ವಾಮಿತ್ರನೆಂಬ, ಋಷಿಂ - ಋಷಿಯನ್ನು, ಪ್ರಾಪ್ತಂ - ಬಂದವನನ್ನಾಗಿ, ಐಕ್ಷ್ವಾಕವೇ- ಇಕ್ಷ್ವಾಕು ವಂಶೋತ್ಪನ್ನನಾದ, ನೃಪಾಯ ದಶರಥರಾಯನಿಗೆ, ಆವೇದಯಾಮಾಸುಃ - ತಿಳಿಸಿದರು ॥೪೦॥ ತೇಷಾಂ - ಆ ದ್ವಾರಪಾಲಕರ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸಮಾಹಿತಃ- ಸಾವಧಾನ ಚಿತ್ತನಾದ ದಶರಥರಾಯನು, ಸಪುರೋಧಾಃ - ಪುರೋಹಿತರಿಂದೊಡಗೂಡಿ, ಹೃಷ್ಟಃ- ಸಂತೋಷಚಿತ್ತನಾಗಿ, ತಂ - ಆ ವಿಶ್ವಾಮಿತ್ರನನ್ನು, ವಾಸವಃ - ದೇವೇಂದ್ರನು, ಬ್ರಹ್ಮಾಣಮಿವ- ಬ್ರಹ್ಮದೇವರನ್ನಂತೆ, ಪ್ರತ್ಯುಜ್ಜಗಾಮ ಎದಿರುಗೊಂಡನು. ॥೪೧॥ ರಾಜಾ - ದಶರಥನು, ದೀಪ್ತ್ಯಾ - ಬ್ರಹ್ಮತೇಜಸ್ಸಿನಿಂದ, ಜ್ವಲಿತಂ - ಪ್ರಜ್ವಲಿಸುತ್ತಿರುವ, ಸಂಶಿತವ್ರತಂ - ನಿಯಮ ಸಂಪನ್ನನಾದ, ತಾಪಸಂ - ಋಷಿಯಾದ, ತಂ - ಆ ವಿಶ್ವಾಮಿತ್ರನನ್ನು, ದೃಷ್ಟ್ವಾ - ಕಂಡು, ಪ್ರಹೃಷ್ಟ ವದನಃ - ಸಂತೋಷಯುಕ್ತವಾದ ಮುಖವುಳ್ಳವನಾಗಿ, ತತಃ - ತಕ್ಷಣದಲ್ಲಿ, ಅರ್ಘ್ಯಂ - ಪೂಜಾ ದ್ರವ್ಯವನ್ನು, ಉಪಹಾರಯತ್ - ಸಮರ್ಪಿಸಿದನು. ॥ ೪೨ ॥ ಸಃ - ಆ ವಿಶ್ವಾಮಿತ್ರ ಋಷಿಯು, ರಾಜ್ಞಃ - ರಾಜನಿಂದ, ಶಾಸ್ತ್ರದೃಷ್ಟೇನ - ಶಾಸ್ತ್ರದಲ್ಲಿ ವಿಹಿತವಾದ, ಕರ್ಮಣಾ - ವ್ಯಾಪಾರದಿಂದ,

---

ಕುಮಾರನಾದ ಕೌಶಿಕನು ಬಂದಿರುವನೆಂದು ನಿಮ್ಮ ಅರಸಿಗೆ ಬಿನ್ನವಿಸಿರಿ" ಎಂದು ಹೇಳಿದನು. ಈ ಮಾತನ್ನು ಕೇಳಿದ ದ್ವಾರಪಾಲಕರು ಚಂಚಲ ಚಿತ್ತರಾಗಿ ಅರಮನೆಗೆ ಬೇಗನೆ ಓಡಿ ಬಂದು, ಒಡೆಯನಾದ ದಶರಥ ರಾಜನಿಗೆ, ವಿಶ್ವಾಮಿತ್ರ ಮುನಿಯು ಬಂದಿರುವನೆಂದು ತಿಳುಹಿದರು. ॥೪೦॥ ದ್ವಾರಪಾಲಕರ ಮಾತನ್ನು ಕೇಳಿ ದಶರಥನು ಸಾವಧಾನ ಚಿತ್ತನಾಗಿ, ಪುರೋಹಿತನಿಂದೊಡಗೂಡಿ, ದೇವೇಂದ್ರನು ಬ್ರಹ್ಮನನ್ನು ಎದಿರ್ಗೊಳ್ಳುವಂತೆ ಈ ಮುನಿಯನ್ನೆದುರ್ಗೊಂಡನು ॥೪೧॥ ಕಾಂತಿಯಿಂದ ಕಂಗೊಳಿಸುತ್ತಿರುವ ಆ ವಿಶ್ವಾಮಿತ್ರ ಮುನಿಯನ್ನು ನೋಡಿ, ದಶರಥರಾಜನು ಸಂತಸಗೊಂಡು ಅರ್ಘ್ಯಾದಿಗಳನ್ನು ಕೊಟ್ಟು ಸತ್ಕರಿಸಿದನು, ಆಗಲಾ ತಾಪಸನು ಅವುಗಳನ್ನು ಶಾಸ್ತ್ರೋಕ್ತವಾಗಿ ಸ್ವೀಕರಿಸಿ, ಆತನ ಪುರ, ಭಂಡಾರ,

---

ಕರೆದುಬಾರೆಂದು ಹೇಳುವಾಗ ಹೇಳಿತುವನು ದಶರಥನು ವಸಿಷ್ಠನ ಸಹಾಯದಿಂದ ಕನ್ಯಾನ್ವೇಷಣೆ ಮಾಡಬಹುದಾಗಿದ್ದಿತು ಹಾಗೆ ಮಾಡದೆ ವಿಶ್ವಾಮಿತ್ರಾಗಮನವನ್ನು ಬಯಸಿದುದು ರಾಮವೈಭವ ಪ್ರದರ್ಶನಕ್ಕೋಸುಗವೇ ಎಂದು ಸ್ಪಷ್ಟವಾಗುವುದು,

# ವಾಚಕರಲ್ಲಿ ವಿನಂತಿ

ಪ್ರಮಾದ ವಶದಿಂದ ಈ ಸಂಚಿಕೆಯಲ್ಲಿ ಕೆಲ ಅಶುದ್ಧಗಳು ಬಿದ್ದಿರುತ್ತವೆ ಅವುಗಳನ್ನು ವಾಚಕರ ಅವಗಾಹನೆಗೆ ಇಲ್ಲಿ ಕೊಟ್ಟಿರುತ್ತೇವೆ ದಯವಿಟ್ಟು ತಿದ್ದಿಕೊಳ್ಳಬೇಕೆಂದು ಪ್ರಾರ್ಥನೆ ಮುಂದಕ್ಕೆ ಇದಕ್ಕೆ ಹೆಚ್ಚು ಗಮನ ಕೊಡಲಾಗುವುದು

| ಪುಟ | ಪಂಙ್ತಿ | ಅಶುದ್ಧ | ಶುದ್ಧ |
|---|---|---|---|
| ೧೯೩ | ೫ | ಸಾಧ್ಯನುಷ್ಠಿತಂ | ಸಾಧ್ವನುಷ್ಠಿತಂ |
| ೧೯೪ | ೫ | ಆಗಪುದಂ | ಆಗಮನಂ |
| ೧೯೫ | ೬ | ಕಾರ್ಯಂ | ಕಾರ್ಯ |
| ೧೯೬ | ೧ | ದೇವತಂ | ದ್ಯವತಂ |
| ೧೯೯ | ೨ | ತೇಷಾನಪಿ | ತೇಷಾಮಪಿ |
| ,, | ೫ | ರಾಘವಾನನ್ಯೋ( | ರಾಘವಾದನ್ಯೋಃ |
| ೨೦೫ | ೩ | ಷಷ್ಟಿಪರ್ಷ | ಷಷ್ಟಿರ್ವರ್ಷ |
| ೨೦೬ | ೨ | ಪುಂಗನಃ | ಪುಂಗನ |
| ೨೦೮ | ೧೫ | ಆದತ್ತ | ಆಧತ್ತೇ |
| ೨೧೨ | ೬ | ನಾಸುರಾ | ಕೇಚಿನ್ನಾಸುರಾ |
| ೨೧೪ | ೧ | ಸುರಸ್ಯನಾ | ಸುರಸ್ಯೈನ್ಯಾ |
| ೨೧೬ | ೨ | ರಾಜಾದಶರಥೇನಚ | ಪಿತ್ರಾದಶರಥೇನಚ |
| ,, | ೪ | ಮೂರ್ಧ್ನ್ಯಾಸಾಸ್ರಾಯ | ಮೂರ್ಧ್ನ್ಯಾಃ ಶಾಸ್ರಾಯ |

ಸರಾಜ್ಞಃ ಪ್ರತಿ ಗೃಹ್ಯಾರ್ಘ್ಯಂ ಶಾಸ್ತ್ರ ದೃಷ್ಟೇನ ಕರ್ಮಣಾ || ಕುಶಲಂ ಚಾವ್ಯಯಂ ಚೈವಪರ್ಯಪೃಚ್ಛನ್ನರಾಧಿಪಂ ||೪೩ || ಪುರೇ ಕೋಶೇ ಜನಪದೇ ಬಾಂಧವೇಷುಸುಹೃತ್ಸುಚ || ಕುಶಲಂ ಕೌಶಿಕೋರಾಜ್ಞಃ ಪರ್ಯಪೃಚ್ಛತ್ಸು ಧಾರ್ಮಿಕಃ ||೪೪||ಅಪಿ ತೇ ಸನ್ನತಾಸ್ಸರ್ವೇ ಸಾಮಂತಾ ರಿಪವೋ ಜಿತಾಃ|| ದೈವಂಚ ಮಾನುಷಂಚಾಪಿ ಕರ್ಮತೇ ಸಾಧ್ಯನುಷ್ಠಿತಂ ||೪೫|| ವಸಿಷ್ಠಂ ಚ ಸಮಾಗಮ್ಯ ಕುಶಲಂ ಮುನಿ ಪುಂಗವಃ || ಋಷೀಂಶ್ಚ ತಾನ್ ಯಥಾನ್ಯಾಯಂ ಮಹಾಭಾಗಾನುವಾಚಹ ||೪೬|| ತೇಸರ್ವೇ ಹೃಷ್ಟಮನಸ ಸ್ತಸ್ಯರಾಜ್ಞೋ ನಿವೇಶನಂ || ವಿವಿಶುಃ

---

ಅರ್ಘ್ಯಂ - ಪೂಜೆಯನ್ನು, ಪ್ರತಿಗೃಹ್ಯ - ಪರಿಗ್ರಹಿಸಿ, ನರಾಧಿಪಂ - ದಶರಥರಾಯನನ್ನು ಕುರಿತು, ಅವ್ಯಯಂ - ನಾಶರಹಿತವಾದ, ಕುಶಲಂಚ- (ಗೋ) ಕ್ಷೇಮವನನ್ನೂ, (ಮ) - ಅವ್ಯಯಂಚೈವ- ರಾಜ್ಯಾಂಗಗಳಲ್ಲಿಯೂ ಕ್ಷೇಮವನ್ನೂ, ಕುಶಲಂಚ-ತನ್ನಮನೆಯಕ್ಷೇಮವನ್ನೂ ಕೂಡ, ಪರ್ಯಪೃಚ್ಛತ್-ಪ್ರಶ್ನೆಮಾಡಿದನು || ೪೩ || ಸುಧಾರ್ಮಿಕಃ - ಮಹಾ ಧರ್ಮಶೀಲನಾದ, ಸಕೌಶಿಕಃ - ಆ ವಿಶ್ವಾಮಿತ್ರನು, ರಾಜ್ಞಃ - ದಶರಥ ರಾಯನ, ಪುರೇ - ಪಟ್ಟಣದಲ್ಲಿಯೂ, ಕೋಶೇ - ಬೊಕ್ಕಸದಲ್ಲಿಯೂ ಜನಪದೇ - ರಾಜ್ಯದಲ್ಲಿಯೂ, ಬಾಂಧವೇಷು - ಬಂಧುಗಳಲ್ಲಿಯೂ, ಸುಹೃತ್ಸುಚ - ಸ್ನೇಹಿತರಲ್ಲಿಯೂ ಕುಶಲಂ - ಕ್ಷೇಮವನ್ನು, ಪರ್ಯಪೃಚ್ಛತ್ - ಕೇಳಿದನು, ತೇ - ನಿನಗೆ, ಸರ್ವೇ - ಸಮಸ್ತರಾದ, ಸಾಮಂತಾಃ - ಸಮೀಪ ದೇಶದ ಅರಸರು, ಸನ್ನತಾಅಪಿ - ನಮ್ರರಾಗಿರುವರಷ್ಟೆ, ರಿಪವಃ-ಶತ್ರುಗಳು, ಜಿತಾಅಪಿ - ಜಯಿಸಲ್ಪಟ್ಟರಷ್ಟೆ, ತೇ - ನಿನ್ನ, (ಗೋ) ದೈವಂ - ದೇವತೋದ್ದೇಶಕವಾದ, ಕರ್ಮ- ಯಜ್ಞಾದಿ ಕರ್ಮಗಳೂ, ಮಾನುಷಂಚಾಪಿ - ಅತಿಥಿ ಸತ್ಕಾರ ರೂಪವಾದ ಮನುಷ್ಯರ ಕರ್ಮವೂ ಸಹ (ಮ) ದೈವಂಕರ್ಮ - ಅಗ್ನಿಷ್ಟೋಮಾದಿ ಕ್ರತುರೂಪವಾದ ಕರ್ಮವೂ, ಮಾನುಷಂ - ಸಾಮ ದಾನ ಭೇದಾದಿ ರೂಪ ಮನುಷ್ಯಕರ್ಮವೂ ಸಹಾ, ಸಾಧು - ಚನ್ನಾಗಿ, ಅನುಷ್ಠಿತಮಪಿ - ಆಚರಿಸಲ್ಪಟ್ಟಿತಷ್ಟೆ || ೪೫ || ಮುನಿಪುಂಗವಃ - ಋಷಿಶ್ರೇಷ್ಠನಾದ ವಿಶ್ವಾಮಿತ್ರನು, ವಸಿಷ್ಠಂಚ - ವಸಿಷ್ಠ ಋಷಿಯನ್ನು, ಸಮಾಗಮ್ಯ - ಹೊಂದಿ, ಕುಶಲಂ - ಕ್ಷೇಮವನ್ನು, ಪರ್ಯಪೃಚ್ಛತ್ - ಪ್ರಶ್ನಿಸಿದನು, ಮಹಾಭಾಗಾನ್ - ಪುಣ್ಯವಂತರಾದ, ತಾನ್ - ಆ ಪ್ರಸಿದ್ಧರಾದ, ಋಷೀಂಶ್ಚ - ವಾಮದೇವಾದಿ ಋಷಿಗಳನ್ನೂ, ಯಥಾನ್ಯಾಯಂ - ಯೋಗ್ಯತಾನುಸಾರವಾಗಿ, ಕುಶಲಂ- ಕ್ಷೇಮವನ್ನು, ಉವಾಚಹ- ಹೇಳಿದನು. || ೪೬ || ತೇಸರ್ವೇ - ಆ ಋಷಿಗಳೆಲ್ಲರೂ, ಹೃಷ್ಟಮನಸಃ - ಸಂತೋಷಚಿತ್ತರಾಗಿ, ತಸ್ಯರಾಜ್ಞಃ - ಆ ದಶರಥ ರಾಯನ, ನಿವೇಶನಂ - ಮನೆಯನ್ನು ವಿವಿಶುಃ - ಹೊಕ್ಕರು, ಪೂಜಿತಾಃ-

---

ದೇಶ, ಬಂಧುಇವರೆಲ್ಲರ,ಯೋಗಕ್ಷೇಮಗಳನ್ನು ಕೇಳಿ, "ಎಲೈ ಅರಸೇ! ನಿನ್ನ ದೇಶದ ಸಮೀಪವರ್ತಿಗಳಾದ ರಾಜರು, ನಿನಗೆ ನಮ್ರರಾಗಿರುವರಷ್ಟೆ; ನಿನ್ನ ಶತ್ರುಗಳು ಜಯಿಸಲ್ಪಟ್ಟಿರುವರೇ? ಯಜ್ಞಾದಿ ಕರ್ಮಗಳೂ, ಸಾಮ, ದಾನ, ಭೇದಾದಿ ಲೌಕಿಕ ವ್ಯಾಪಾರಗಳೂ, ಚನ್ನಾಗಿ ನಡೆಯಿಸಲ್ಪಡುತ್ತಿರುವುದಲ್ಲವೆ," ಎಂದನು. ಬಳಿಕಲಾ ಮುನಿಯು, ವಸಿಷ್ಠಋಷಿಯ ಕ್ಷೇಮವನ್ನು ವಿಚಾರಿಸಿ, ಮಹಾತ್ಮರಾದ ಮತ್ತೂ ಕೆಲಋಷಿಗಳನ್ನು ಯಥಾ ಯೋಗ್ಯವಾಗಿ ಮಾತನಾಡಿಸಿದನು. ಆಗ ಅವರೆಲ್ಲರೂ,ಸಂತಸಗೊಂಡು,ಅರಮನೆಯನ್ನು ಹೊಕ್ಕು, ಅವರವರ

ಪೂಜಿತಾ ಸ್ತತ್ರನಿಷೇದುಶ್ಚ ಯಥಾರ್ಹತಃ||೪೭||ಅಥ ಹೃಷ್ಟಮನಾ ರಾಜಾ ವಿಶ್ವಾಮಿತ್ರಂ ಮಹಾಮುನಿಂ || ಉವಾಚ ಪರಮೋದಾರೋ ಹೃಷ್ಟಸ್ತಮಭಿಪೂಜಯನ್ || ೪೮ || ಯಥಾಮೃತಸ್ಯ ಸಂಪ್ರಾಪ್ತಿರ್ಯಥಾವರ್ಷ ಮನೂದಕೇ || ಯಥಾಸದೃಶದಾರೇಷು ಪುತ್ರಜನ್ಮಾಪ್ರಜಸ್ಯಚ ||೪೯|| ಪ್ರಣಷ್ಟಸ್ಯ ಯಥಾಲಾಭೋ ಯಥಾಹರ್ಷೋ ಮಹೋದಯೇ || ತಥೈವಾಗಮನಂ ಮನ್ಯೇ ಸ್ವಾಗತಂತೇ ಮಹಾಮುನೇ ||೫೦|| ಕಂಚತೇ ಪರಮಂ ಕಾಮಂ ಕರೋಮಿಕಿ ಮುಹರ್ಷಿತಃ ||

ಬಹುಮಾನಿಸಲ್ಪಟ್ಟವರಾಗಿ, ತತ್ರ - ಆ ಮನೆಯಲ್ಲಿ, ಯಥಾರ್ಹತಃ - ಯಥಾ ಯೋಗ್ಯವಾಗಿ, ನಿಷೇದುಶ್ಚ - ಕುಳಿತುಕೊಂಡರು. ||೪೭|| ಅಥ - ಬಳಿಕ, ಹೃಷ್ಟಮನಾಃ - ಹರ್ಷಯುಕ್ತವಾದ ಮನಸ್ಸುಳ್ಳ, ಪರಮೋದಾರಃ - ಉದಾರಿಯಾದ, ರಾಜಾ - ದಶರಥರಾಯನು, ಮಹಾಮುನಿಂ ಮಹಾಋಷಿಯಾದ, ತಂವಿಶ್ವಾಮಿತ್ರಂ - ಆ ವಿಶ್ವಾಮಿತ್ರನನ್ನು, ಅಭಿಪೂಜಯನ್ - ಚನ್ನಾಗಿ ಪೂಜಿಸಿ, ಹೃಷ್ಟಃ - ಸಂತೋಷಗೊಂಡು, ಉವಾಚ - ಹೇಳಿದನು || ೪೮ || ಹೇಮಹಾಮುನೇ - ಎಲೈ ಮಹರ್ಷಿಯೇ! ಅಮೃತಸ್ಯ - ಅಮೃತದ, ಪ್ರಾಪ್ತಿಃ-ದೊರಿಯುವಿಕೆಯು, ಯಥಾ-ಹೇಗೋ, ಅನೂದಕೇ - ನೀರಿಲ್ಲದೆಡೆಯಲ್ಲಿ, ವರ್ಷಂ - ಮಳೆ ಸುರಿವುದು, ಯಥಾ - ಹೇಗೋ, ಅಪುತ್ರಸ್ಯ - ಮಕ್ಕಳಿಲ್ಲದವನಿಗೆ, ಸದೃಶದಾರೇಷು - ಅನುರೂಪಳಾದ, ಹೆಂಡತಿಯಲ್ಲಿ, ಪುತ್ರಜನ್ಮಾ- ಪುತ್ರೋತ್ಪತ್ತಿಯು, ಯಥಾ - ಹೇಗೋ, ಪ್ರಣಷ್ಟಸ್ಯ - ಕಳೆದುಹೋದ ವಸ್ತುವಿನ, ಲಾಭಃ - ಲಾಭವು, ಯಥಾ-ಹೇಗೊ ಮಹೋದಯೇ - ಬಹಳ ಅಭಿವೃದ್ಧಿ ಕಾಲದಲ್ಲಿ, ಹರ್ಷಃ - ಸಂತೋಷವು, ಯಥಾ - ಹೇಗೋ, ತಥೈವ - ಹಾಗೆಯೇ, ತೇ - ನಿನ್ನ, ಆಗಮನಂ - ಬರುವಿಕೆಯು ಎಂದು, ಮನ್ಯೇ - ಎಣಿಸಿಧೇನೆ, ಹೇಮಹಾಮುನೇ - ಎಲೈ ಮಹರ್ಷಿಯೇ! ತೇ - ನಿನಗೆ, ಸ್ವಾಗತಂ - ಸುಖಾಗಮನವೇ ! ಹರ್ಷಿತಃ - ಸಂತೋಷವನ್ನು ಹೊಂದಿದ ನಾನು ತೇ-ನಿನಗೆ, ಪರಮಂ ಉತ್ಕೃಷ್ಟವಾದ, ಕಂಕಾಮಂ ಯಾವ ಕೋರಿಕೆಯನ್ನು, ಕರೋಮಿ - ಮಾಡಲಿ, ಕಿಮು - ಹೇಗೆ, ಕರೋಮಿ - ಮಾಡಲಿ, ಹೇಕೌಶಿಕ - ಎಲೈ ಕುಶಿಕ ವಂಶೋತ್ಪನ್ನನಾದ ವಿಶ್ವಾಮಿತ್ರನೇ ! ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ ! ದಿಷ್ಟ್ಯಾ - ದೈವಾಧೀನದಿಂದ, ಪ್ರಾಪ್ತಃ - ಬಂದವನು, ಅಸಿ - ಆಗಿರುವೆ, ಮೆ - ನನಗೆ, ಪಾತ್ರ

ಯೋಗ್ಯತೆಗೆಳಿಗನುಸಾರವಾಗಿ ಪೂಜಿಸಲ್ಪಟ್ಟು, ಪೀಠಗಳಲ್ಲಿ ಕುಳಿತುಕೊಂಡರು || ೪೭ || ಮಹಾ ಸಂತೋಷಚಿತ್ತನಾದ ದಶರಥರಾಜನು, ಮಹಾಮುನಿಯಾದ ವಿಶ್ವಾಮಿತ್ರನನ್ನು ಪೂಜಿಸಿ.||೪೮|| ಎಲೈ ಮುನಿಯೇ ! ಅಮೃತ ಲಾಭವು ಹೇಗೋ, ಅನಾವೃಷ್ಟಿ ಸಮಯದಲ್ಲಿ ವರ್ಷಪ್ರಾಪ್ತಿಯು ಹೇಗೋ,ಮಕ್ಕಳಿಲ್ಲದಿರುವ ಮನುಷ್ಯನಿಗೆ ಸರಿಯಾದ ಸತಿಯಲ್ಲಿ ಪುತ್ರೋತ್ಪತ್ತಿಯು ಹೇಗೆ ಸಂತೋಷಜನಕವಾಗಿರುವದೋ, ನಷ್ಟವಾದ ಪದಾರ್ಥದಲಾಭವು ಹೇಗೋ, ಮಹದುಚ್ಛ್ರಾಯಕಾಲದಲ್ಲಿ ಹೇಗೆ, ಸಂತೋಷವುಂಟಾಗುವದೋ, ಹಾಗೆಯೇ ನಿನ್ನ ಆಗಮನವೆಂದೆಂದೆಣಿಸಿರುವೆನು. ನಿನಗೆ ಸುಖಾಗಮನವೇ ? || ೫೦ || ಎಲೈ ಬ್ರಾಹ್ಮಣೋತ್ತಮನಾದ ವಿಶ್ವಾಮಿತ್ರಮುನಿಯೆ! ನಾನು ಸಂತೋಷಚಿತ್ತನಾಗಿ, ನಿನಗಾಗಿ

ಪಾತ್ರಭೂತೋಸಿಮೇ ಬ್ರಹ್ಮನ್ ದಿಷ್ಟ್ಯಾಪ್ರಾಪ್ತೋಸಿ ಕೌಶಿಕ || ೫೧ || ಅದ್ಯಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ||೫೨|| ಪೂರ್ವಂ ರಾಜರ್ಷಿ ಶಬ್ದೇನ ತಪ ಸಾದ್ಯೋತಿ ತಪ್ರಭಃ || ಬ್ರಹ್ಮರ್ಷಿತ್ವ ಮನುಪ್ರಾಪ್ತಃ ಪೂಜ್ಯೋಸಿ ಬಹುಧಾಮ ಯಾ || ೫೩ || ತದದ್ಭುತಮಿದಂ ಬ್ರಹ್ಮನ್ ಪವಿತ್ರಂಪರಮಂ ಮಮ || ಶುಭಕ್ಷೇ ತ್ರಗತ ಶ್ಚಾಹಂ ತವ ಸಂದರ್ಶನಾತ್ಪ್ರಭೋ ||೫೪|| ಬ್ರೂಹಿಯ ತ್ಪ್ರಾರ್ಥಿತಂ ತುಭ್ಯಂ ಕಾರ್ಯಂ ಮಾಗಮನಂ ಪ್ರತಿ || ಇಚ್ಛಾಮ್ಯನುಗೃಹೀತೋಹಂ ತ್ವದರ್ಥ ಪರಿವೃದ್ಧಯೇ || ೫೫ || ಕಾರ್ಯ ಸ್ಯವಿಮರ್ಶಂ ಚ ಗಂತುಮರ್ಹಸಿ ಕೌಶಿಕ ||

---

ಭೂತಃ - ದಾನಕ್ಕೆ ಅರ್ಹನಾಗಿರುವೆ, ||೫೧|| ಮೇ- ನನ್ನ, ಜನ್ಮ - ಜನ್ಮವು, ಅದ್ಯ - ಈಗ ಸಫಲಂ- ಸಫಲಗೊಂಡಿತು, ಜೀವಿತಂಚ - ಬದುಕಿರುವಿಕೆಯೂ, ಸುಜೀವಿತಂ - ಒಳ್ಳೆಯ ಬದುಕುಳ್ಳದ್ದಾ ಯಿತು. ||೫೨|| ಪೂರ್ವಂ - ಮೊದಲು, ರಾಜರ್ಷಿಶಬ್ದೇನ - ರಾಜರ್ಷಿ ಎಂಬ ಶಬ್ದದಿಂದ, ಉಪ ಲಕ್ಷಿತಃ - ಕೂಡಿಕೊಂಡಿರುವವನಾದೆ, ತಪಸಾ- ತಪಸ್ಸಿನಿಂದ, ದ್ಯೋತಿತಪ್ರಭಃ, ದ್ಯೋತಿತ-ಪ್ರಕಾಶಿ ಸಲ್ಪಟ್ಟ, ಪ್ರಭಃ - ತೇಜಸ್ಸುಳ್ಳವನಾಗಿ, ಬ್ರಹ್ಮರ್ಷಿತ್ವಂ- ಬ್ರಾಹ್ಮಣ ಋಷಿತ್ವವನ್ನು, ಅನುಪ್ರಾಪ್ತಃ ಹೊಂದಿದಂತಹ ನೀನು, ಮಯಾ - ನನ್ನಿಂದ, ಬಹುಧಾ - ಬಹು ಪ್ರಕಾರವಾಗಿ, ಪೂಜಾರ್ಹಃ-ಪೂಜಾ ರ್ಹನು, ಅಸಿ - ಆಗಿರುವೆ. ||೫೩|| ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ತದಿದಂ-ಈ ಆಗಮನವು, ಮಮ - ನನಗೆ, ಪರಮಂಪವಿತ್ರಂ-ಬಹಳ ಪವಿತ್ರಕರನಾದದೂ ಅದ್ಭುತಂಚ-ಆಶ್ಚರ್ಯಕರವಾದುದೂ, ಆಗಿರುವುದು, ಹೇಪ್ರಭೋ - ಎಲೈ ತತ್ವಾವಧಾರಣ ಸಮರ್ಥನೇ, ತವ - ನಿನ್ನ, ಸಂದರ್ಶನಾತ್ - ದರ್ಶನದಿಂದ, ಅಹಂಚ - ನಾನೂ, ಶುಭಕ್ಷೇತ್ರಗತಃ, ಶುಭಕ್ಷೇತ್ರ - ಶುಭಕರವಾದ ಸ್ಥಾನವನ್ನು, ಗತಃ - ಹೊಂದಿದವನಾದೆನು. ||೫೪|| ಆಗಮನಂಪ್ರತಿ - ಆಗಮನವನ್ನು ಕುರಿತು, ಯತ್ ಯಾವ, ಕಾರ್ಯಂ - ಪ್ರಯೋಜನವು, ತುಭ್ಯಂ- ನಿನ್ನಿಂದ, ಪ್ರಾರ್ಥಿತಂ- ಅಪೇಕ್ಷಿಸಲ್ಪಟ್ಟಿರುವದೋ, ತತ್ - ಅದನ್ನು, ಬ್ರೂಹಿ - ಹೇಳು, ಅಹಂ - ನಾನು, ತ್ವದರ್ಥಪರಿವೃದ್ಧಯ-ನಿನ್ನ ಕಾರ್ಯಾಭಿ ವೃದ್ಧಿ ಗೋಸುಗ, ಅನುಗೃಹೀತಃ - ಅನುಗ್ರಹಿಸಲ್ಪಡಬೇಕೆಂದು, ಇಚ್ಛಾಮಿ - ಬೇಡುತ್ತೇನೆ. ||೫೫||

---

ಯಾವ ಕಾರ್ಯವನ್ನು ಮಾಡಲಿ; ಯಾವ ರೀತಿಯಾಗಿ ಮಾಡಲಿ; ದೈವಾಧೀನದಿಂದ ಬಂದವ ನಾದೆಯಲ್ಲದೆ ದಾನ ಮಾಡುವದಕ್ಕೆ ಅರ್ಹನಾಗಿಯೂ ಇರುವೆಯಲ್ಲವೆ? ಈಗ ನನ್ನ ಜನ್ಮವು ಸಾರ್ಥಕವಾದುದು; ನನ್ನ ಜೀವಿತವು ಸಫಲಹೊಂದಿತು. ||೫೨|| ಪೂರ್ವದಲ್ಲಿ ರಾಜರ್ಷಿ ಯೆಂಬ ಶಬ್ದದಿಂದ ಕೂಡಿ, ಆ ಬಳಿಕ ತಪಸ್ಸಿನಿಂದ ಪ್ರಕಾಶಿಸುವ ಪ್ರಭೆಯುಳ್ಳವನಾಗಿ ಬ್ರಹ್ಮರ್ಷಿಯೆಂಬ ನಾಮಧೇಯವನ್ನು ಪಡದವನಾದಕಾರಣ ಎಲ್ಲ ರೀತಿಗಳಲ್ಲಿಯೂ ನೀನೆ ನನಗೆ ಪೂಜ್ಯನಾಗಿರುವೆ. || ೫೩ || ಎಲೈ ಬ್ರಾಹ್ಮಣನೇ! ಈ ನಿನ್ನ ಆಗಮನವು, ನನಗೆ ಪವಿತ್ರ ಕರವಾದುದಾಗಿಯೂ, ಆಶ್ಚರ್ಯಕರವಾದುದಾಗಿಯೂ ಇರುವದು. ಎಲೈ ಪ್ರಭುವೇ ! ನಿನ್ನ ಸಂದರ್ಶನದಿಂದ ನಾನೂ ಶುಭಕ್ಷೇತ್ರದಲ್ಲಿರುವವನಾದೆನು. || ೫೪ || ನಿನ್ನ ಆಗಮನವು ಯಾವಕಾರ್ಯೋದ್ದೇಶಕವಾದುದೋ, ಅದನ್ನು ಅಪ್ಪಣೆ ಕೊಡಿಸಬೇಕೆಂದಿಚ್ಛಿಸುತ್ತೇನೆ. ಇದಲ್ಲದೆ ನಾನು ತಮ್ಮ ಕಾರ್ಯಾಭಿವೃದ್ಧಿಗೋಸುಗ ಅನುಗ್ರಹಿಸಲ್ಪಡಬೇಕು. || ೫೫ || ಎಲೈ

ಕರ್ತಾ ಚಾ ಹಮಶೇಷೇಣ ದೇವತಂ ಹಿ ಭವಾನ್ಮಮ || ೫೭ || ಮಮಚಾ ಯಮನು ಪ್ರಾಪ್ತೋಮಹಾನಭ್ಯುದ ಯೋದ್ವಿಜ|| ತವಾಗ ಮನಜಃ ಕೃತ್ಸ್ನೋಧ ರ್ಮಶ್ಚಾನುತ್ತಮೋಮಮ || ೫೭|| ಇತಿ ಹೃದಯ ಸುಖಂ ನಿಶಮ್ಯವಾಕ್ಯಂ ಶ್ರುತಿ ಸುಖಮಾತ್ಮವತಾವಿನೀತಮುಕ್ತಂ || ಪ್ರಥಿತ ಗುಣಯಶಾಗುಣೈರ್ವಿ ಶಿಷ್ಟಃ ಪರಮಋಷಿಃ ಪರಮಂ ಜಗಾಮಹರ್ಷಂ ||೫೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾದಶಸ್ಸರ್ಗಃ

---

ಹೇಕೌಶಿಕ - ಎಲೈ ವಿಶ್ವಾಮಿತ್ರನೇ, ಕಾರ್ಯಸ್ಯ - ಕಾರ್ಯದ, ವಿಮರ್ಶಂ - ಸಂಶಯವನ್ನು. (ಅಥವಾ ಕಾರ್ಯಮಾಡುವನೂ ಇಲ್ಲವೊ ಎಂಬ ವಿಚಾರವನ್ನು.) ಗಂತುಂ - ಹೊಂದಲು, ನಾರ್ಹಸಿ- ಅರ್ಹನಾಗ ಬೇಡ, ಹಿ - ಯಾವ ಕಾರಣದಿಂದ, ಭವಾನ್ - ನೀನು, ಮಮ ನನಗ, ದೈವತಂ – ದೇವಸ್ವರೂಪ ನಾಗಿರುವೆಯೋ, ತತ್ - ಆ ಕಾರಣದಿಂದ, ಅಹಂಚ - ನಾನು, ಅಶೇಷೇಣ - ಸಮಸ್ತ ಭಾವದಿಂ ದಲೂ, ಕರ್ತಾ - ಕಾರ್ಯವನ್ನು ಸಾಧಿಸಿಕೊಡುವೆನು, || ೫೬ || ಹೇದ್ವಿಜ - ಎಲೈ ಬ್ರಾಹ್ಮಣನೆ, ಮಮಚ - ನನಗೂ ಕೂಡ, ಅಯಂ - ಇದು, ಮಹಾನ್ - ದೊಡ್ಡದಾದ, ಅಭ್ಯುದಯಃ- ಶ್ರೇಯಸ್ಸು ಒದಗಿತು, ತವ - ನಿನ್ನ, ಆಗಮನಜಃ - ಆಗಮನದಿಂದ ಹುಟ್ಟಿದ, ಕೃತ್ಸ್ನಃ-ಸಮಸ್ತವಾದ,ಧರ್ಮಃ- ಧರ್ಮವೂ, ಮಮ - ನನಗೆ, ಅನುತ್ತಮಃ – ಸರ್ವೋತ್ತಮವಾದುದಾಯಿತು || ೫೭ || ಇತಿ-ಹೀಗೆ, ಆತ್ಮವತಾ - ಆತ್ಮಜ್ಞಾನಿಯಾದ ದಶರಥರಾಜನಿಂದ, ವಿನೀತಂ - ನಮ್ರಭಾವದಿಂದ ಯುಕ್ತವಾ ದಂತೆ, ಉಕ್ತಂ - ಹೇಳಲ್ಪಟ್ಟ, ಶ್ರುತಿಸುಖಂ - ಶ್ರೋತ್ರಗಳಿಗೆ ಇಂಪಾದ, ಹೃದಯಸುಖಂ-ಹೃದಯ- ಕ್ಕೆ ಆನಂದಕರವಾದ, ವಾಕ್ಯಂ - ವಚನವನ್ನು, ನಿಶಮ್ಯ - ಕೇಳಿ, ಪ್ರಥಿತಗುಣಯಶಾಃ, ಪ್ರಥಿತ ಪ್ರಸಿದ್ಧವಾದ, ಗುಣ – ಗುಣಗಳಿಂದ ಹುಟ್ಟಿದ, ಯಶಾಃ-ಕೀರ್ತಿಗಳುಳ್ಳ, ಗುಣೈಃ- ಶಮದಮಾದಿ ಅಶೇಷ ಗುಣಗಳಿಂದ ಹುಟ್ಟಿದ, ಯಶಾಃ - ಕೀರ್ತಿಗಳುಳ್ಳ, ಗುಣೈಃ - ಶಮದಮಾದಿ ಅಶೇಷ ಗುಣ ಗಳಿಂದ, ವಿಶಿಷ್ಟಃ - ಕೂಡಿಕೊಂಡಿರುವ, ಪರಮರ್ಷಿಃ – ಮಹರ್ಷಿಯಾದ ವಿಶ್ವಾಮಿತ್ರನು, ಪರಮ ಹರ್ಷಂ - ಬಹಳ ಸಂತೋಷವನ್ನು, ಜಗಾಮ - ಹೊಂದಿದನು. ||೫೮||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾದಶಸ್ಸರ್ಗಃ.

---

ವಿಶ್ವಾಮಿತ್ರನೇ! ಕಾರ್ಯವನ್ನು ಮಾಡುವನೋ, ಇಲ್ಲವೊ ಎಂಬ ಸಂಶಯವನ್ನು ಹೊಂದಲಾ ಗದು. ಏಕಂದರೆ—ನೀನೆನಗೆ ದೇವತಾ ಸ್ವರೂಪನಾಗಿರುವೆಯಾದಕಾರಣ ನಾನು, ನಿನ್ನ ಇಷ್ಟಾನುಸಾರವಾಗಿ ಸಮಸ್ತ ಕಾರ್ಯವನ್ನೂ ನೆರವೇರಿಸುವೆನು. || ೫೬ || ಎಲೈ ಬ್ರಾಹ್ಮಣನೇ! ಇದು ನನಗೆ ಬಹಳ ಶ್ರೇಯಸ್ಕರವಾಗಿರುವದು; ನಿನ್ನ ಬರುವಿಕೆಯಿಂದುಂಟಾದ ಧರ್ಮ ವೆಲ್ಲಾ ನನಗೇನೆ, ಸರ್ವೋತ್ತಮವಾದುದು'' || ೫೭|| ಹೀಗೆ ಮಹಾಜ್ಞಾನಿಯಾದ ದಶರಥ ನಿಂದ ಹೇಳಲ್ಪಟ್ಟ ವಾಕ್ಯವನ್ನು ಕೇಳಿ, ಮಹಾ ಪ್ರಸಿದ್ಧನಾಗಿಯೂ, ಶಮದಮಾದಿ ಗುಣ ಗಳಿಂದ ಕೂಡಿರುವವನಾಗಿಯೂ ಇರುವ, ವಿಶ್ವಾಮಿತ್ರ ಋಷಿಯು, ಮಹಾ ಹರ್ಷ ವನ್ನೈದಿದನು. || ೫೮ ||

ಇಂತಿದು ಶ್ರೀರಾಮ ಜನನ, ವಿಶ್ವಮಿತ್ರಾಗಮನವೆಂಬ ಹದಿನೆಂಟನೆಯ
ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕೋನವಿಂಶಸ್ಸರ್ಗಃ.



**ತಚ್ಛ್ರುತ್ವಾ ರಾಜಸಿಂಹಸ್ಯ ವಾಕ್ಯಮದ್ಭುತವಿಸ್ತರಂ ||ಹೃಷ್ಟರೋಮಾ ಮಹಾತೇಜಾ ವಿಶ್ವಾಮಿತ್ರೋಽಭ್ಯಭಾಷತ || ೧ || ಸದೃಶಂರಾಜ ಶಾರ್ದೂಲ ತವೈತದ್ಭುವಿನಾನ್ಯಥಾ || ಮಹಾವಂಶ ಪ್ರಸೂತಸ್ಯ ವಸಿಷ್ಠವ್ಯಪದೇಶಿನಃ || ೨ || ಯತ್ತುಮೇಹೃದ್ಗತಂ ವಾಕ್ಯಂತಸ್ಯ ಕಾರ್ಯಸ್ಯನಿಶ್ಚಯಂ ||ಕುರುಷ್ವರಾಜ ಶಾರ್ದೂಲ ಭವ ಸತ್ಯಪ್ರತಿಶ್ರವಾಃ || ೩ || ಅಹಂನಿಯಮಮಾತಿಷ್ಠೇ ಸಿದ್ಧ್ಯರ್ಥಂ ಪುರುಷರ್ಷಭ ||**

---

ರಾಜಸಿಂಹಸ್ಯ - ರಾಜಶ್ರೇಷ್ಠನಾದ ದಶರಥರಾಯನ, ಅದ್ಭುತವಿಸ್ತರಂ - ಆಶ್ಚರ್ಯವಾದ ವಿಸ್ತಾರವುಳ್ಳ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ಹೃಷ್ಟರೋಮಾ - ರೋಮಹರ್ಷಣವುಳ್ಳವನಾದ, ಮಹಾತೇಜಾಃ - ಮಹಾ ತೇಜಸ್ವಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಅಭ್ಯಭಾಷತ - ಮಾತನಾಡಿದನು. ||೧|| ಹೇ ರಾಜಶಾರ್ದೂಲ - ಎಲೈ ರಾಜಶ್ರೇಷ್ಠನೆ, ಮಹಾವಂಶ ಪ್ರಸೂತಸ್ಯ - ಮಹಾ ಕುಲೋತ್ಪನ್ನನಾದ, ವಸಿಷ್ಠವ್ಯಪದೇಶಿನಃ - ವಸಿಷ್ಠ ಋಷಿಯಿಂದ ಕೀರ್ತಿಯುಳ್ಳ, (ಗೋ) ವಸಿಷ್ಠವ್ಯಪದೇಶಿನಃ- ವಸಿಷ್ಠ ಋಷಿಯು ಉಪದೇಶವುಳ್ಳ, ತವ - ನಿನಗೆ, ಏತತ್ - ಇದು, ಭುವಿ - ಭೂಮಿಯಲ್ಲಿ, ಸದೃಶಂ-ಸಮಾನವಾಗಿರುವುದು, ಅನ್ಯಥಾ-ಬೇರೆ, ನ-ಅಲ್ಲ, ||೨|| ಮೇ - ನನ್ನ, ಹೃದ್ಗತಂ - ಹೃದಯವನ್ನು ಹೊಂದಿರುವ, ಯತ್ - ಯಾವ ಕಾರ್ಯವು, ವಾಕ್ಯಂ-ಹೇಳತಕ್ಕುದ್ದೋ, ತಸ್ಯ - ಆ ಕಾರ್ಯದ, ನಿಶ್ಚಯಂ- ಅಧ್ಯವಸಾಯವನ್ನು, ಕುರುಷ್ವ-ಮಾಡು, ಸತ್ಯಪ್ರತಿಶ್ರವಾಃ, ಸತ್ಯ - ಫಲವಾದ, ಪ್ರತಿಶ್ರವಾಃ - ಪ್ರತಿಜ್ಞೆಯುಳ್ಳವನು, ಭವ - ಆಗು. || ೩ || ಹೇಪುರುಷರ್ಷಭಃ - ಎಲೈ ಪುರುಷಶ್ರೇಷ್ಠನಾದ ದ ಶ ರ ಥ ನೆ, ಸಿದ್ಧ್ಯರ್ಥಂ - ಫಲಸಿದ್ಧಿಗೋಸ್ಕರ, ನಿಯಮಂ - ಯಜ್ಞಾದಿ ದೀಕ್ಷೆಯನ್ನು, ಅತಿಷ್ಠೇ - ಅನುಷ್ಠಾನ ಮಾಡುತ್ತೇನೆ, ತಸ್ಯ- ಆ ನಿಯಮಕ್ಕೆ,

---

ಮಹಾ ತೇಜಸ್ವಿಯಾದ ವಿಶ್ವಾಮಿತ್ರನು, ರಾಜಾಧಿರಾಜನಾದ ದಶರಥರಾಯನ ಮಾತನ್ನು ಕೇಳಿ ರೋಮಾಂಚವುಳ್ಳವನಾಗಿ||೧||"ಎಲೈ ರಾಜಶ್ರೇಷ್ಠನೆ! ಈ ಭೂಮಂಡಲದಲ್ಲಿ ಮಹಾ ವಂಶದಲ್ಲಿ ಹುಟ್ಟಿದವನಾಗಿಯೂ, ವಸಿಷ್ಠಮುನಿಯಿಂದ ಉಪದೇಶಿಸಲ್ಪಟ್ಟವನಾಗಿಯೂ, ಇರುವ ನಿನಗೆ ಈ ಮಾತು ಸಲ್ಲತಕ್ಕುದೇ ಹೊರ್ತು ಮತ್ತು ಬೇರೆಯಿಲ್ಲವು. ||೨|| ಎಲೈ ನರಶ್ರೇಷ್ಠನೇ! ನನ್ನ ಮನೋಗತವಾಗಿರುವ ಕಾರ್ಯವಾವುದೋ, ಆಕೃತ್ಯದ ನಿಶ್ಚಯವನ್ನು ಮಾಡಿ ಸತ್ಯ ಪ್ರತಿಜ್ಞೆಯುಳ್ಳವನಾಗು. ||೩|| ಎಲೈ ಪುರುಷಶ್ರೇಷ್ಠನೇ! ನಾನು ಸಿದ್ಧಿಗೋಸ್ಕ ನಿಯಮನಿಷ್ಠನಾಗಿರಲು, ಆನಿಯಮಕ್ಕೆ ವಿಘ್ನಕಾರಿಗಳಾಗಿಯೂ, ಕಾಮರೂಪಿಗ

ತಸ್ಯವಿಘ್ನಕರೌ ದ್ವೌತುರಾಕ್ಷಸೌ ಕಾಮರೂಪಿಣೌ ||೪|| ವ್ರತೇಮೇಬಹುಶಶ್ಚೀರ್ಣೇ ಸಮಾಪ್ತ್ಯಾಂ ರಾಕ್ಷಸಾವಿಮೌ|| ಮಾರೀಚಶ್ಚ ಸುಬಾಹುಶ್ಚ ವೀರ್ಯವಂತೌ ಸುಶಿಕ್ಷಿತೌ || ಸಮಾಂಸರುಧಿರೌಘೇಣವೇದಿಂತಾಮಭ್ಯವರ್ಷತಾಂ ||೫|| ಅವಧೂತೇ ತಥಾಭೂತೇ ತಸ್ಮಿನ್ನಿಯಮನಿಶ್ಚಯೇ|| ಕೃತಶ್ರಮೋ ನಿರುತ್ಸಾಹ ಸ್ತಸ್ಮಾದ್ದೇಶಾದಪಾಕ್ರಮೇ ||೬|| ನಚಮೇಕ್ರೋಧ ಮುತ್ಸ್ರಷ್ಟುಂಬುದ್ಧಿರ್ಭವತಿ ಪಾರ್ಥಿವ || ತಥಾಭೂತಾಹಿ ಸಾಚರ್ಯಾ ನ ಶಾಪಸ್ತತ್ರಮುಚ್ಯತೇ ||೭|| ಸ್ವಪುತ್ರಂ ರಾಜಶಾರ್ದೂಲಂ ರಾಮಂ ಸತ್ಯಪರಾಕ್ರಮಂ ||ಕಾಕಪಕ್ಷಧರಂ ಶೂರಂ ಜ್ಯೇಷ್ಠಂ

---

ವಿಘ್ನಕರೌ - ವಿಘ್ನಕಾರಿಗಳಾದ, ಕಾಮರೂಪಿಣೌ - ಇಚ್ಛಾನುಸಾರವಾಗಿ ರೂಪವಂತರಾದ, ದ್ವೌ ರಾಕ್ಷಸೌ - ಇಬ್ಬರು ರಾಕ್ಷಸರು, ಸ್ತಃ - ಇರುತ್ತಾರೆ. || ೪ || ವ್ರತೇ - ದೀಕ್ಷಾರೂಪವಾದ ನಿಯಮವು, ಮೇ - ನನ್ನಿಂದ, ಬಹುಶಃ - ಅನೇಕ ಬಗೆಯಾಗಿ, ಚೀರ್ಣೇಸತಿ - ಸಂಕಲ್ಪಿತವಾಗಲು, ಸಮಾಪ್ತ್ಯಾಂ- ಸಮಾಪ್ತಿ ಕಾಲದಲ್ಲಿ, ಮಾರೀಚಶ್ಚ - ಮಾರೀಚನೆಂಬ, ಸುಬಾಹುಶ್ಚ - ಸುಬಾಹುವೆಂಬ, ಇಮೌರಾಕ್ಷಸೌ - ಈ ರಾಕ್ಷಸರಿಬ್ಬರು, ವೀರ್ಯವಂತೌ - ಮಹಾ ಪರಾಕ್ರಮಶಾಲಿಗಳು, ಸುಶಿಕ್ಷಿತೌ - ಯುದ್ಧರಂಗದಲ್ಲಿ ಕೇವಲ ಶಿಕ್ಷಿತರಾದ ಕಾರಣ, ಸಮಾಂಸರುಧಿರೌಘೇಣ, ಸಮಾಂಸ- ಮಾಂಸದಿಂದೊಡಗೂಡಿದ, ರುಧಿರೌಘೇಣ - ರಕ್ತಪ್ರವಾಹದಿಂದ, ತಾಂವೇದಿಂ - ಆ ಯಜ್ಞವೇದಿಯನ್ನು, ಅಭ್ಯವರ್ಷತಾಂ - ಸುರಿಸುತ್ತಾರೆ || ೫ || ತಥಾಭೂತೇ - ಅಂತಹ, ತಸ್ಮಿನ್- ಆ, ನಿಯಮಶ್ಚಯೆ - ಯಜ್ಞದೀಕ್ಷೆಯ ಸಂಕಲ್ಪವು, ಅವಧೂತೇ ಸತಿ - ವಿಘ್ನ ಮಾಡಲು, ಕೃತಶ್ರಮಃ, ಕೃತ - ಮಾಡಲ್ಪಟ್ಟ, ಶ್ರಮಃ - ದೇಹ ಪ್ರಯಾಸವುಳ್ಳವನಾಗಿ, ನಿರುತ್ಸಾಹಃ - ಸಂತೋಷ ರಹಿತನಾಗಿ, ತಸ್ಮಾದ್ದೇಶಾತ್ -ಆ ಯಜ್ಞಶಾಲಾ ಪ್ರದೇಶದ ದೆಶೆಯಿಂದ, ಅಪಾಕ್ರಮೇ-ಹೊರಟು ಬಂದೆನು. || ೬ || ಹೇಪಾರ್ಥಿವ - ಎಲೈ ಅರಸನೆ, ಕ್ರೋಧಂ - ಕೋಪವನ್ನು, ಉತ್ಸ್ರಷ್ಟುಂ - ಬಿಡುವದಕ್ಕೋಸ್ಕರ, ಮೇ - ನನಗೆ, ಬುದ್ಧಿಶ್ಚ - ಬುದ್ಧಿಯೂ, ನಭವತಿ - ಆಗುವದಿಲ್ಲ. ಸಾಚರ್ಯಾ- ಆ ಯಜ್ಞದೀಕ್ಷಾ ನಿಯಮಾನುಷ್ಠಾನವು, ತಥಾಭವತಾಹಿ ಅಂತಹುದಷ್ಟೆ, ಶಾಪಃ - ಶಾಪವಚನವು, ತತ್ರ - ಆ ಮಾರೀಚ ಸುಬಾಹುಗಳಲ್ಲಿ, ನಮುಚ್ಯತೇ - ಬಿಡಲ್ಪಡುವದಿಲ್ಲ. ||೭|| ಸ್ವಪುತ್ರಂ, ಸ್ವ- ನಿನಗೆ, ಪುತ್ರಂ - ಪುತ್ರನಾದ, ರಾಜಶಾರ್ದೂಲಂ - ರಾಜಶ್ರೇಷ್ಠನಾದ, ಸತ್ಯಪರಾಕ್ರಮಂ- ಸತ್ಯ

---

ಳಾಗಿಯೂ ಇರುವ ರಾಕ್ಷಸರಿಬ್ಬರಿರುತ್ತಾರೆ. ||೪|| ನಾನು ಬಹು ಪ್ರಕಾರವಾಗಿ, ನಿಯಮ ಸಂಕಲ್ಪವನ್ನು ಮಾಡಲು, ಆ ಪಾಪಿಗಳೂ, ಪರಾಕ್ರಮಶಾಲಿಗಳೂ, ಶಸ್ತ್ರಾಸ್ತ್ರ ಶಿಕ್ಷಿತರೂ ಆದ ಮಾರೀಚ ಸುಬಾಹುಗಳೆಂಬ ರಾಕ್ಷಸರೀರ್ವರೂ, ಮಾಂಸ, ರಕ್ತ, ತಂಡಗಳಿಂದ ಆಯಜ್ಞವೇದಿಕೆಯಲ್ಲಿ ವರ್ಷಿಸಿದರು. ||೫|| ಅಂತಹ ಆಯಜ್ಞದೀಕ್ಷೆಯ ಸಂಕಲ್ಪವು, ವಿಘ್ನಮಾಡಲ್ಪಟ್ಟುದಾಗಿಯೂ, ದೇಹ ಪ್ರಯಾಸ ಉಳ್ಳವನಾಗಿಯೂ, ಸಂತೋಷ ರಹಿತನಾಗಿಯೂ ಆಗಿ ಅಲ್ಲಿಂದ ಹೊರಟು ಬಂದೆನು. || ೬ || ಎಲೈ ಅರಸೇ ! ಕೋಪವನ್ನು ಬಿಡಲ್ಕೆ ನನಗೆ ಬುದ್ಧಿಯುಂಟಾಗುವದಿಲ್ಲವು. ಯಜ್ಞ ದೀಕ್ಷಾನಿಯಮಾನುಷ್ಠಾನವಂತಹದುಷ್ಟೆ. ಆದಕಾರಣ ನಾನು ಶಾಪ ವಚನವನ್ನು ಆ ಮಾರೀಚ ಸುಬಾಹುಗಳಲ್ಲಿ ಬಿಡುವದಿ

ನೇ ದಾತು ಮರ್ಹಸಿ ||೮|| ಶಕ್ತೋಹ್ಯೇಷಮ ಯಾಗುಪ್ತೋದಿವ್ಯೇನ ಸ್ವೇನ ತೇಜಸಾ || ರಾಕ್ಷಸಾಯೇ ವಿಕರ್ತಾರಸ್ತೇಷಾನಪಿವಿನಾಶನೇ ||೯|| ಶ್ರೇಯಶ್ಚಾಸ್ಮೈ ಪ್ರದಾಸ್ಯಾಮಿ ಬಹುರೂಪಂ ನಸಂಶಯಃ||ತ್ರಯಾಣಾಮ ಪಿಲೋಕಾ ನಾಂಯೇನ ಖ್ಯಾತಿಂ ಗಮಿಷ್ಯತಿ || ೧೦ || ನಚತೌರಾಮಮಾಸಾದ್ಯಶಕ್ತೌ ಸ್ಥಾತುಂ ಕಥಂಚನ || ನಚತೌ ರಾಘವಾನನ್ಯೋಹಂತುಮುತ್ಸಹತೇಪುಮಾನ್ ||೧೧|| ವಿರ್‍ಯೋ

ದಿಂದ ಶತ್ರುನಿಗ್ರಹ ಮಾಡಲರ್ಹನಾದ, ಕಾಕಪಕ್ಷಧರಂ - ಕಿವಿಗಳ ಮೇಲಿನ ಜಂಡಿಕೆಗಳನ್ನು ಧರಿಸಿರುವನಾದ, ಶೂರಂ - ಶೂರನಾದ, ಜ್ಯೇಷ್ಠಂ - ಜ್ಯೇಷ್ಠನಾದ, ರಾಮಂ - ಶ್ರೀರಾಮನನ್ನು, ಮೇ- ನನಗೆ, ದಾತುಂ - ಕೊಡಲು, ಅರ್ಹಸಿ - ಯೋಗ್ಯನಾಗು, || ೮ || ಏಷಃ- ಈ ಶ್ರೀರಾಮನು, ಮಯಾ - ನನ್ನಿಂದ, ದಿವ್ಯೇನ - ದೇವತಾ ಸಂಬಂಧವಾದ, ಸ್ವೇನ - ಸ್ವಕೀಯವಾದ, ತೇಜಸಾ- ವೈಷ್ಣವ ತೇಜಸ್ಸಿನಿಂದಲೂ, ಗುಪ್ತಃ-ಸಂರಕ್ಷಿತನಾಗಿ, ವಿಘ್ನಕರ್ತಾರಃ-ವಿಘ್ನಕರ್ತರಾದ, ರಾಕ್ಷಸಾಃ- ರಾಕ್ಷಸರು, ಯೇ - ಯಾರುಂಟೋ, ತೇಷಾಂ - ಆ ರಾಕ್ಷಸರ, ವಿನಾಶನೇಪಿ - ನಾಶನದಲ್ಲಿಯೂ, ಶಕ್ತೋಹಿ - ಸಮರ್ಥನಷ್ಟೆ, ಅಸ್ಮೈ - ಈ ಶ್ರೀರಾಮನಿಗೆ, ಬಹುರೂಪಂ - ಬಹು ಬಗೆಯಾದ, ಶ್ರೇಯಃ - ಶ್ರೇಯಸ್ಸನ್ನು, ಪ್ರದಾಸ್ಯಾಮಿ-ಕೊಡುತ್ತೇನೆ, ನಸಂಶಯಃ - ಸಂಶಯವಿಲ್ಲವು, ಯೇನ- ಯಾವ ಶ್ರೇಯಸ್ಸಿನಿಂದ, ತ್ರಯಾಣಾಂ - ಮೂರಾದ, ಲೋಕಾನಾಮಪಿ - ಲೋಕಗಳಲ್ಲಿಯೂ, ಖ್ಯಾತಿಂ - ಪ್ರಸಿದ್ಧಿಯನ್ನು, ಗಮಿಷ್ಯತಿ - ಹೊಂದುವನು, ||೧೦|| ತೌ - ಆ ಸುಬಾಹು ಮಾರೀಚರು ರಾಮಂ - ಶ್ರೀರಾಮನನ್ನು, ಆಸಾದ್ಯ - ಹೊಂದಿ, ಕಥಂಚನ - ಅತಿ ಪ್ರಯಾಸದಿಂದಲಾದರೂ, ಸ್ಥಾತುಂ - ನಿಲ್ಲಲು, ನಶಕ್ತೌ - ಸಮರ್ಥರಲ್ಲ, ತೌ - ಅವರಿಬ್ಬರನ್ನು, ಹಂತುಂ - ಹೊಡಿಯಲು ರಾಘವಾತ್ - ಶ್ರೀರಾಮನಗಿಂತಲೂ ಅನ್ಯಃಪುಮಾನ್ - ಮತ್ತೊಬ್ಬ ಪುರುಷನು, ನೋತ್ಸಹತೇ- ಉದ್ಯುಕ್ತನಾಗಲಾರನು ||೧೧|| ಹೇರಾಜಶಾರ್ದೂಲ - ಎಲೈ ರಾಜಶ್ರೇಷ್ಠನೆ, ವೀರ್‍ಯೋತ್ಸಿಕ್ತೌ- ಪರಾಕ್ರಮದಿಂದ ಗರ್ವಿತರಾದ, ಕಾಲಪಾಶ ವಶಂಗತೌ - ಯಮನ ದಂಡಕ್ಕೆ ಸ್ವಾಧೀನರಾದ,

ಲ್ಲವು ||೭|| ನಿನಗೆ ಜ್ಯೇಷ್ಠಪುತ್ರನಾಗಿಯೂ, ರಾಜಶ್ರೇಷ್ಠನಾಗಿಯೂ, ಸತ್ಯದಿಂದ ಶತ್ರುನಿಗ್ರಹವನ್ನು ಮಾಡಲರ್ಹನಾಗಿಯೂ, ಕಿವಿಗಳ ಮೇಲಿನ ಜಂಡಿಕೆಗಳನ್ನು ಧರಿಸಿರುವವನೂ ಶೂರನೂ ಆದ ಶ್ರೀರಾಮನನ್ನು ನನಗೆ ಕೊಡಲು ಅರ್ಹನಾಗು. || ೮ || ಈ ಶ್ರೀರಾಮನು ನನ್ನಿಂದಲೂ ದೇವತಾ ಸಂಬಂಧವಾದ ತನ್ನಲ್ಲಿ ಅಡಗಿರುವ ವೈಷ್ಣವ ತೇಜಸ್ಸಿನಿಂದಲೂ ಸಂರಕ್ಷಿತನಾಗಿ, ಆ ಯಜ್ಞ ವಿಘ್ನಕರ್ತರಾದ ರಾಕ್ಷಸರನ್ನು ನಾಶಮಾಡಲು ಸಮರ್ಥನಾಗಿರುವನು. ನಿನ್ನ ಕುಮಾರನಾದ ಶ್ರೀರಾಮನು ಯಾವ ಶ್ರೇಯಸ್ಸಿನಿಂದ ಲೋಕತ್ರಯದಲ್ಲಿ ಬಹು ಪ್ರಖ್ಯಾತಿಯುಳ್ಳವನಾಗುವನೋ, ಅಂತಹ ಬಹು ಬಗೆಯಾದ ಶ್ರೇಯಸ್ಸುಗಳನ್ನ ಕೊಡುವನು. ಈ ವಿಷಯದಲ್ಲಿ ಸಂಶಯವಿಲ್ಲವು. ಆ ಸುಬಾಹು ಮಾರೀಚರು ಶ್ರೀರಾಮನನ್ನು ಹೊಂದಿ ಬಹಳ ಪ್ರಯಾಸದಿಂದಲಾದರೂ, ನಿಲ್ಲುವದಕ್ಕೆ ಸಮರ್ಥರಾಗುವುದಿಲ್ಲವು. ಅವರಿಬ್ಬರನ್ನು ಹೊಡೆಯಲು ಶ್ರೀರಾಮನಿಗಿಂತಲೂ ಮತ್ತೊಬ್ಬ ಪುರುಷನು ಶಕ್ತನಾಗಲಾರನು || ೧೧ || ಎಲೈ ರಾಜ ಶ್ರೇಷ್ಠನೇ ! ಪರಾಕ್ರಮದಿಂದ ಗರ್ವಿತರಾದ, ಯಮನ ದಂಡಕ್ಕೆ

ತ್ಸಿಕ್ತೌಹಿತೌ ಪಾಪೌಕಾಲ ಪಾಶವಶಂಗತೌ || ರಾಮಸ್ಯ ರಾಜಶಾರ್ದೂಲನ ಪರ್ಯಾಪ್ತೌ ಮಹಾತ್ಮನಃ ||೧೨|| ನಚ ಪುತ್ರಕೃತ ಸ್ನೇಹಂ ಕರ್ತುಮರ್ಹಸಿ ಪಾರ್ಥಿವ ||ಅಹಂತೇ ಪ್ರತಿಜಾನಾಮಿ ಹತೌತೌವಿದ್ಧಿ ರಾಕ್ಷಸೌ ||೧೩|| ಅಹಂವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ||ವಸಿಷ್ಠೋಽಪಿ ಮಹಾತೇಜಾಯೇ ಚೇಮೇತಪಸಿ ಸ್ಥಿತಾಃ ||೧೪|| ಯದಿತೇ ಧರ್ಮಲಾಭಂಚ ಯಶಶ್ಚ ಪರಮಂಭುವಿ || ಸ್ಥಿತಮಿಚ್ಛಸಿ ರಾಜೇಂದ್ರ ರಾಮಂ ಮೇದಾತುಮರ್ಹಸಿ ||೧೫|| ಯದ್ಯನುಜ್ಞಾಂ ಕಾಕುತ್ಸ್ಥದದತೇ ತವಮಂತ್ರಿಣಃ|| ವಸಿಷ್ಠ ಪ್ರಮುಖಾಸ್ಸರ್ವೇತತೋರಾಮಂ ವಿಸ

---

ಪಾಪೌ - ಪಾಪಿಷ್ಠರಾದ, ತೌ - ಆ ಸುಬಾಹು ಮಾರೀಚರಿಬ್ಬರೂ, ಮಹಾತ್ಮನಃ - ಮಹಾಧೈರ್ಯಶಾಲಿಯಾದ, ರಾಮಸ್ಯ - ಶ್ರೀರಾಮನಿಗೆ, ನಪರ್ಯಾಪ್ತೌಹಿ - ಸಾಲಲಾರರಷ್ಟೆ || ೧೨ || ಹೇ ಪಾರ್ಥಿವ - ಎಲೈ ದಶರಥರಾಯನೆ, ಪುತ್ರಕೃತಸ್ನೇಹಂ - ಪುತ್ರಭಾವದಿಂದ, ಮಾಡಲ್ಪಟ್ಟ ಪ್ರೇಮವನ್ನು, ಕರ್ತುಂ - ಮಾಡಲು, ನಾರ್ಹಸಿ - ಅರ್ಹನಾಗಬೇಡ, ತೇ - ನಿನಗೆ, ಅಹಂ - ನಾನು, ಪ್ರತಿಜಾನಾಮಿ - ಪ್ರತಿಜ್ಞೆ ಕೊಡುತ್ತೇನೆ. ತೌರಾಕ್ಷಸೌ - ಆ ರಾಕ್ಷಸರಿಬ್ಬರನ್ನು, ಹತೌ - ಸತ್ತವರನ್ನಾಗಿ, ವಿದ್ಧಿ - ತಿಳಿದುಕೊ || ೧೩ || ಅಹಂ - ನಾನು, ಮಹಾತ್ಮನಂ - ಅಪರಿಚ್ಛಿನ್ನಮಾಹಾತ್ಮ್ಯವುಳ್ಳ, (ಗೋ) ಮಹಾತ್ಮಾನಂ - ಮಹಾ ಶರೀರವುಳ್ಳ, ಅಥವಾ - ಮಹಾತ್ಮಾನಂ - ಜೀವನಿಗಿಂತಲೂ ದೊಡ್ಡ ಚೇತನ ಸ್ವರೂಪನಾದ, ಅಥವಾ - ಮಹಾತ್ಮಾನಂ - ಮಹಾ ಸ್ವಭಾವವುಳ್ಳ ಸತ್ಯಪರಾಕ್ರಮಂ, ಸತ್ಯ - ಕಾಲತ್ರಯದಲ್ಲಿಯೂ ಏಕರೂಪನಾದ, ಪರಾಕ್ರಮೌ-ಪರಾಕ್ರಮವುಳ್ಳ, (ಗೋ) ಸತ್ಯಪರಾಕ್ರಮಂ, ಸತ್ಯ- ಸಫಲವಾದ, ಪರಾಕ್ರಮಂ - ಶೌರ್ಯವುಳ್ಳ, ಸತ್ಯಪರಾಕ್ರಮಂ - ಸತ್ಯದಿಂದಲೆ - ಶತ್ರುಗಳನಿಗ್ರಹ ಸಮರ್ಥನಾದ, ರಾಮಂ ಶ್ರೀರಾಮನನ್ನು, ವೇದ್ಮಿ-ತಿಳಿದಿರುವೆನು ಮಹಾತೇಜಾಃ - ಬ್ರಹ್ಮತೇಜಸ್ವಿಯಾದ, ವಸಿಷ್ಠೋಽಪಿ - ವಸಿಷ್ಠಋಷಿಯೂ, ವೇತ್ತಿ - ತಿಳಿದಿರುವನು, ಇಮೇ - ಈ ಏದುರಾಗಿರುವ, ಯೇ - ಯಾವ ಋಷಿಗಳು, ತಪಸಿ - ತಪಸ್ಸಿನಲ್ಲಿ ಸ್ಥಿತಾಃ

---

ಸ್ವಾಧೀನರಾದ ಪಾಪಿಷ್ಠರೂ ಆದ ಆ ಸುಬಾಹು ಮಾರೀಚ ರೀರ್ವರು, ಮಹಾ ಧೈರ್ಯಶಾಲಿಯಾದ ಶ್ರೀರಾಮನಿಗೆ ಪಥ್ಯರಾಗಿರುವರು || ೧೨ || ಎಲೈ ದಶರಥರಾಯನೇ ! ಪುತ್ರನೆಂಬ ಪ್ರೇಮವನ್ನು ತ್ಯಜಿಸು. ನಿನಗೆ ನಾನು ಪ್ರತಿಜ್ಞೆಮಾಡಿ ಹೇಳುವೆನು ಕೇಳು, ಆ ಸುಬಾಹು ಮಾರೀಚರೆಂಬೀರ್ವರನ್ನು ಸಂಹಾರ ಮಾಡಲ್ಪಟ್ಟವರನ್ನಾಗಿ ತಿಳಿಯುವವನಾಗು. || ೧೩ || ನಾನು ಅಪರಿಚ್ಛಿನ್ನ ಮಾಹಾತ್ಮ್ಯವುಳ್ಳವನೂ ಸತ್ಯಪರಾಕ್ರಮಿಯೂ ಆದ ಶ್ರೀರಾಮನನ್ನು ಅರಿತಿರುವೆನಲ್ಲದೆ ಮಹಾ ತೇಜಸ್ವಿಯಾದ ವಸಿಷ್ಠಮುನಿಯೂ ಸಹಾ ಅರಿತಿರುವನು. ನನ್ನಂತೆಯೇ ತಪಸ್ವಿಗಳಾಗಿರುವರಾರೋ, ಅವರೂ ಸಹಾ ತಿಳಿದಿರುತ್ತಾರೆ. ನಾನು ಗುರೂಪಾಸನೆಯಿಂದ ಜ್ಞಾನಿಯಾದ ಅಥವಾ ಯೋಗಬಲಸಾಕ್ಷಾತ್ಕಾರದಿಂದ ಉತ್ತಮಾಧನು ಯಾಥಾರ್ಥ್ಯವನ್ನು ತಿಳಿದಿರುವೆನು. ನೀನಾದರೆ ಕರ್ಮಠನು; ಇದಲ್ಲದೆ ನಾನು ಜಟಾವಲ್ಕಲಧಾರಿಯಾಗಿರುವೆನು, ನೀನಾದರೋ ರೋಷಾವೇಶವುಳ್ಳವನು; ಇದೂ ಅಲ್ಲದೆ

ರ್ಜಯ ॥ ೧೬ ॥ ಅಭಿಪ್ರೇತಮಸಂಸಕ್ತಮಾತ್ಮಜಂದಾತುಮರ್ಹಸಿ॥ ದಶರಾತ್ರಂಹಿ ಯಜ್ಞಸ್ಯ ರಾಮಂ ರಾಜೀವಲೋಚನಂ ॥ ೧೭ ॥ ನಾತ್ಯೇತಿ ಕಾಲೋ ಯಜ್ಞಸ್ಯ ಯಥಾಯಂ ಮಮರಾಘವ । ತಥಾಕುರುಷ್ವ ಭದ್ರಂತೇ ಮಾಚ

---

ಇರುವರೋ, ತೇ - ಅವರು, ವಿದಂತಿ - ತಿಳಿಯುವರು. ॥ ೧೪ ॥ ತೇ - ನಿನಗೆ, ಧರ್ಮಲಾಭಂ ಧರ್ಮಪ್ರಾಪ್ತಿಯನ್ನು, ಪರಮಂ - ಬಹಳವಾದ, ಯಶಶ್ಚ - ಕೀರ್ತಿಯನ್ನು, ಭುವಿ - ಭೂಮಂಡಲದಲ್ಲಿ, ಸ್ಥಿತಂ - ಇರಬೇಕೆಂದು, ಇಚ್ಛಸಿಯದಿ - ಕೋರುವೆಯಾದರೆ, ಹೇರಾಜೇಂದ್ರ - ಎಲೈ ರಾಜಶ್ರೇಷ್ಠನೇ, ರಾಮಂ - ಶ್ರೀರಾಮನನ್ನು, ಮೇ - ನನಗೆ, ದಾತುಂ - ಕೊಡಲು, ಅರ್ಹಸಿ- ಅರ್ಹನಾಗು, ॥೧೫॥ ಹೇಕಾಕುಸ್ಥ - ಎಲೈ ಕಕುಸ್ಥವಂಶೋತ್ಪನ್ನನೇ, ವಸಿಷ್ಠಪ್ರಮುಖಾಃ, ವಸಿಷ್ಠ-ವಸಿಷ್ಠ ಋಷಿಯೇ, ಪ್ರಮುಖಾಃ - ಮೊದಲಾಗಿ ಉಳ್ಳ, ಸರ್ವೇ - ಸಮಸ್ತ, ತವ - ನಿನ್ನ, ಮಂತ್ರಿಣಶ್ಚ- ಮಂತ್ರಿಗಳೂ, ಅನುಜ್ಞಾಂ - ಸಮ್ಮತಿಯನ್ನು, ದದತೇಯದಿ - ಕೊಡುವರೇ ಆದರೆ, ತತಃ - ಬಳಿಕ, ರಾಮಂ - ಶ್ರೀರಾಮನನ್ನು, ವಿಸರ್ಜಯ - ಕಳುಹಿಸಿಕೊಡು, ॥ ೧೬ ॥ ಅಭಿಪ್ರೇತಂ- ಪ್ರಿಯನಾದ ಆತ್ಮಜಂ - ಕುಮಾರನಾದ, ರಾಜೀವಲೋಚನನಂ - ಪುಂಡರೀಕಾಕ್ಷನಾದ, ರಾಮಂ - ಶ್ರೀರಾಮನನ್ನು, ಯಜ್ಞಸ್ಯ - ಯಾಗಕ್ಕೋಸ್ಕರ, ದಶರಾತ್ರಂ - ಹತ್ತು ದಿವಸವು, ಅಸಂಸಕ್ತಂಯಥಾ- ಜರ್ಜಯಿಲ್ಲದಂತೆ, ದಾತುಂ - ಕೊಡಲು, ಅರ್ಹಸಿ - ಯೋಗ್ಯನಾಗು. ॥೧೭॥ ಹೇರಾಘವ- ಎಲೈ ದಶರಥನೇ, ಮಮ - ನನ್ನ, ಯಜ್ಞಸ್ಯ - ಯಾಗಕ್ಕೆ, ಅಯಂಕಾಲಃ - ಈ ಕಾಲವು, ಯಥಾ-ಹೇಗೆ ನಾತ್ಯೇತಿ - ಅತಿಕ್ರಮಿಸುವುದಿಲ್ಲವೋ, ತಥಾ - ಹಾಗೆಯೆ, ಕುರುಷ್ವ-ಮಾಡು, ತೇ - ನಿನಗೆ, ಭದ್ರಂ- ಶುಭವು, ಅಸ್ತು - ಆಗಲಿ, ಶೋಕೇ - ದುಃಖದಲ್ಲಿ, ಮನಃ - ಮನಸ್ಸನ್ನು, ಮಾಕೃಥಾಃ - ಮಾಡ

---

ನಾನು ಸಾತ್ವಿಕಪ್ರಕೃತಿಯುಳ್ಳವನು ? ನೀನು ರಾಜಸಪ್ರಕೃತಿಯುಳ್ಳವನು; **“ ಗರ್ಭಭೂತಾಸ್ತಪೋಧನಾಃ ”** ಎಂಬಂತೆ ನಾನು ಆತನ ಕುಕ್ಷಿಗತನಾದವನು, ನೀನು ಶ್ರೀರಾಮನಲ್ಲಿ ಪುತ್ರತ್ವಾಭಿಮಾನವುಳ್ಳವನು ; ನಾನು ಯೋಗಕ್ರಮಜ್ಞಾನವುಳ್ಳವನು , ನೀನು ಭೋಗಕ್ರಮಗಳನ್ನರಿತವನು ; ನಾನು ಮೋಕ್ಷಕಾಮೇಷ್ಟಿಯಾಗವನ್ನು ಗೈವವನು. ನೀನು ಪುತ್ರಕಾಮೇಷ್ಟಿಯಜ್ಞವನ್ನುಮಾಡಿದವನು ; ನಾನು ಧರ್ಮಮೋಕ್ಷಗಳಲ್ಲಿ ಆಸಕ್ತನಾದವನು ; ನೀನು ಅರ್ಥಕಾಮಗಳಲ್ಲಿ ಸಿಲುಕಿದ ಮನವುಳ್ಳವನು ಇಂತಹ ನಾನು ಶ್ರೀರಾಮನನ್ನು ಮಹಾ ಮಹಿಮೆಯುಳ್ಳವನನ್ನಾಗಿಯೂ, ಪರಮಾರ್ಥ ಪರಾಕ್ರಮವುಳ್ಳವನನ್ನಾಗಿಯೂ ತಿಳಿದಿರುವೆನು. ಇಂತಹ ವಸ್ತುವನ್ನು ನೀನು ಹೇಗೆತಾನೆ ತಿಳಿಯುವೆ? ಆದರೆ ನನಗೆ ವಿರೋಧಿಯೂ, ನಿನಗೆ ಹಿತನೂ, ಕುಲಗುರುವೂ ಆದ ವಸಿಷ್ಠಋಷಿಯೂ, ನನ್ನಂತಯೇ ತಪಸ್ವಿಗಳಾದವರೂ ಈತನ ತತ್ವವನ್ನರಿತಿರುವರು. ಆದಕಾರಣ ನನ್ನ ವಚನದಲ್ಲಿ ನಂಬಿಕೆಯಿಲ್ಲದಿದ್ದರೆ, ನಿನಿಗಾಪ್ತನಾಗಿರುವ ಈ ವಸಿಷ್ಠ ಮುನಿಯನ್ನಾದರೂ ಕೇಳಿತಿಳಿದುಕೊಳ್ಳಬಹುದು.ಎಂಬ ಭಾವವು ಇಲ್ಲಿತೋರುತ್ತದೆ. ॥ ೧೪॥ ಎಲೈ ರಾಜೇಂದ್ರನೆ ! ಭೂಮಂಡಲದಲ್ಲಿ, ನಿನಗೆ ಧರ್ಮ ಲಾಭವೂ, ಉತ್ಕೃಷ್ಟವಾದ ಯಶಸ್ಸೂ, ಇರಬೇಕೆಂದಿಚ್ಛಿಸುವೆಯಾದರೆ ಶ್ರೀರಾಮನನ್ನು ಕೊಡಲು ಯೋಗ್ಯನಾಗು. ಅಥವ ವಸಿಷ್ಠರೇ ಮುಂತಾದ ನಿನ್ನಮಂತ್ರಿಗಳೆಲ್ಲರೂ ಅಪ್ಪಣೆಯನ್ನುಕೊಟ್ಟರೆ,ಶ್ರೀರಾಮನನ್ನು

ಶೋಕೇ ಮನಃಕೃಥಾಃ ||೧೮|| ಇತ್ಯೇವಮುಕ್ತ್ವಾ ಧರ್ಮಾತ್ಮಾ ಧರ್ಮಾರ್ಥಸಹಿತಂ ವಚಃ । ವಿರರಾಮ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ || ೧೯ || ಸತನ್ನಿಶಮ್ಯ ರಾಜೇಂದ್ರೋ ವಿಶ್ವಾಮಿತ್ರವಚಶ್ಶುಭಂ| ಶೋಕಮಭ್ಯಗಮತ್ತೀವ್ರಂ ವ್ಯಷೀದತಭಯಾನ್ವಿತಃ || ೨೦ || ಇತಿ ಹೃದಯ ಮನೋವಿದಾರಣಂ ಮುನಿವಚನಂ ತದತೀವ ಶುಶ್ರುವಾನ್ । ನರಪತಿರಭವನ್ಮಹಾಂ ಸ್ತದಾ ವ್ಯಥಿತಮನಾಃ ಪ್ರಚಚಾಲಚಾಸನಾತ್ || ೨೧ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನವಿಂಶಸ್ಸರ್ಗಃ.

---

ಬೇಡ. || ೧೮ || ಧರ್ಮಾತ್ಮಾ - ಧರ್ಮಿಷ್ಠನಾದ, ಮಹಾತೇಜಾಃ - ಮಹಾತೇಜೋವಂತನಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನೆಂಬ, ಮಹಾಮುನಿಃ - ಮಹಾಋಷಿಯು, ಧರ್ಮಸಹಿತಂ - ಧರ್ಮಗಳಿಂದ ಕೂಡಿದ, ವಚಃ - ಮಾತನ್ನು, ಇತ್ಯೇವ - ಈ ಪ್ರಕಾರವಾಗಿ, ಉಕ್ತ್ವಾ-ಹೇಳಿ, ವಿರರಾಮ-ಸುಮ್ಮನಾದನು || ೧೯ || ಸ ರಾಜೇಂದ್ರಃ - ರಾಜಶ್ರೇಷ್ಠನಾದ ಆ ದಶರಥ ರಾಯನು, ಶುಭಂ-ಶುಭಕರವಾದ, ತತ್ - ಆ, ವಿಶ್ವಾಮಿತ್ರವಚಃ- ವಿಶಾಮಿತ್ರ ಋಷಿಯ ಮಾತನ್ನು,ನಿಶಮ್ಯ - ಕೇಳಿ, ಭಯಾನ್ವಿತಃ - ಭಯದಿಂದ ಕೂಡಿ, ತೀವ್ರಂ - ತೀಕ್ಷ್ಣವಾದ, ಶೋಕಂ-ವ್ಯಸನವನ್ನು,ಅಭ್ಯಗಮತ್ ಹೊಂದಿ, ವ್ಯಷೀದತ - ವ್ಯಸನಗೊಂಡನು || ೨೦ || ಇತಿ - ಈ ಪೂರ್ವೋಕ್ತವಾದ, ಹೃದಯ ಮನೋವಿದಾರಣಂ - ಹೃದಯವನ್ನೂ ಮನಸ್ಸನ್ನೂ ಸೀಳುತ್ತಿರುವ, ತನ್ಮುನಿವಚನಂ - ಆ ವಿಶ್ವಾಮಿತ್ರನ ಮಾತನ್ನು, ಶುಶ್ರುವಾನ್ - ಕೇಳಿ, ಮಹಾನ್ - ಮಹಾತ್ಮನಾದ, ನರಪತಿಃ - ದಶರಥರಾಯನು, ತದಾ - ಆ ಕಾಲದಲ್ಲಿ, ಅತೀವ - ಬಹಳವಾಗಿ, ವ್ಯಥಿತಮನಾಃ - ವ್ಯಸನಗೊಂಡ ಮನವುಳ್ಳವನು, ಅಭವತ್ - ಆದನು ಆಸನಾತ್ - ಪೀಠದಿಂದಲೂ, ಪ್ರಚಚಾಲ - ಕದಲಿದನು. ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನವಿಂಶಸ್ಸರ್ಗಃ,

---

ಕಳುಹಿಕೊಡು. || ೧೬ || ನಾನು ಯಜ್ಞ ಮಾಡಬೇಕಾಗಿರುವುದರಿಂದ ಹತ್ತು ದಿನಗಳ ಮಟ್ಟಿಗೆ ನಿನ್ನ ಪ್ರಿಯಪುತ್ರನಾಗಿರುವವನೂ, ಪುಂಡರೀಕಾಕ್ಷನೂ, ಆದ ಶ್ರೀರಾಮನನ್ನು ಯೋಚಿಸದೆ ಕಳುಹಿಸಿಕೊಡು ಎಲೈ ರಾಘವನೆ ! ನನ್ನ ಯಜ್ಞದ ಸಮಯವು ಹೇಗೆ ಅತಿಕ್ರಮಿಸದಿರುವದೋ ಹಾಗೆ ಮಾಡುವವನಾಗು ; ನಿನಿಗೆ ಶುಭವಾಗಲಿ; ದುಃಖಿಸಬೇಡ" ಎಂದು ಧರ್ಮಾತ್ಮನಾದ ವಿಶ್ವಾಮಿತ್ರ ಮುನಿಯು, ಧರ್ಮಾರ್ಥಯುಕ್ತವಾಗಿರುವ ಮಾತನ್ನು ಹೇಳಿ ಸುಮ್ಮನಾದನು. ||೧೯|| ರಾಜೇಂದ್ರನಾದ ಆ ದಶರಥನು ಶುಭಕರವಾದ ವಿಶ್ವಾಮಿತ್ರನ ವಾಕ್ಯವನ್ನು ಕೇಳಿ ಭಯದಿಂದೊಡಗೂಡಿ, ತೀವ್ರವಾದ ದುಃಖವನ್ನು ಹೊಂದಿದನು. ||೨೦|| ಈ ಪ್ರಕಾರವಾಗಿ ಹೃದಯವನ್ನೂ ಮನವನ್ನೂ ಭೇದಿಸುತ್ತಿರುವ ಆ ವಿಶ್ವಾಮಿತ್ರನ ವಚನವನ್ನು ಕೇಳಿ ಮಹಾತ್ಮನಾದ ದಶರದರಾಜನು ಬಹಳ ದುಃಖಾಕ್ರಾಂತನಾಗಿ ಸಿಂಹಾಸನದಿಂದ ಕೆಳಕ್ಕೆ ಬಿದ್ದವನಾದನು. || ೨೧ ||

ಇಂತಿದು ವಿಶ್ವಾಮಿತ್ರನ ರಾಮಯಾಚನಾಕ್ರಮವರ್ಣನವೆಂಬ
ಹತ್ತೊಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ವಿಂಶಸ್ಸರ್ಗಃ.



**ತಚ್ಛ್ರುತ್ವಾ ರಾಜಶಾರ್ದೂಲೋ ವಿಶ್ವಾಮಿತ್ರಸ್ಯ ಭಾಷಿತಮ್। ಮುಹೂರ್ತಮಿವ ನಿಸ್ಸಂಜ್ಞ ಸ್ಸಂಜ್ಞಾವಾನಿದಮಬ್ರವೀತ್ ॥೧॥ ಊನಷೋಡಶ ವರ್ಷೋಮೇ ರಾಮೋ ರಾಜೀವಲೋಚನಃ । ನಯುದ್ಧ ಯೋಗ್ಯತಾಮಸ್ಯ ಪಶ್ಯಾಮಿ ಸಹರಾಕ್ಷಸೈಃ ॥೨॥ ಇಯಮಕ್ಷೌಹಿಣೀ ಪೂರ್ಣಾ ಯಸ್ಯಾಹಂ ಪತಿರೀಶ್ವರಃ। ಅನಯಾಸಂವೃತೋಗತ್ವಾ ಯೋದ್ಧಾಹಂ ತೈರ್ನಿಶಾಚರೈಃ ॥ ೩ ॥ ಇಮೇ ಶೂರಾಶ್ಚ ವಿಕ್ರಾಂತಾ ಭೃತ್ಯಾಮೇಸ್ತ್ರವಿಶಾರದಾಃ । ಯೋಗ್ಯಾರಕ್ಷೋಗಣೈ**

---

ರಾಜಶಾರ್ದೂಲಃ - ರಾಜಶ್ರೇಷ್ಠನಾದ ದಶರಥನು, ವಿಶ್ವಾಮಿತ್ರಸ್ಯ - ವಿಶ್ವಾಮಿತ್ರನ, ತದ್ಭಾಷಿತಂ - ಆ ಮಾತನ್ನು, ಶ್ರುತ್ವಾ - ಕೇಳಿ, ಮುಹೂರ್ತಂ- ಸ್ವಲ್ಪಕಾಲ, ನಿಸ್ಸಂಜ್ಞಇವಸ್ಥಿತಃ- ಪ್ರಜ್ಞೆ ತಪ್ಪಿದವನಂತೆ ಇದ್ದು, ಸಂಜ್ಞಾವಾನ್ - ಬಳಿಕ ಪ್ರಜ್ಞಾವಂತನಾಗಿ, ಇದಂ ಈ ಮಾತನ್ನು ಅಬ್ರವೀತ್ - ನುಡಿದನು. ॥ ೧ ॥ ಮೇ - ನನ್ನ ಸಂಬಂಧಿಯಾದ, ರಾಜೀವಲೋಚನಃ - ಕಮಲ ಗಳಂತೆ ವಿಶಾಲವಾದ ನೇತ್ರಗಳುಳ್ಳ, ರಾಮಃ - ಶ್ರೀರಾಮನು, ಊನಷೋಡಶವರ್ಷಃ- ಹನ್ನೆರಡು ವರುಷ ವಯಸ್ಸುಳ್ಳವನು, ಅಸ್ಯ - ಈ ಶ್ರೀರಾಮನಿಗೆ, ರಾಕ್ಷಸೈಸ್ಸಹ - ರಾಕ್ಷಸರೊಡನೆ, ಯುದ್ಧ ಯೋಗ್ಯತಾಂ - ಕಾಳಗ ಸಾಮರ್ಥ್ಯವನ್ನು, ನಪಶ್ಯಾಮಿ - ಕಾಣೆನು, ॥೨॥ ಯಸ್ಯಾಃ - ಯಾವ ಅಕ್ಷೋಹಿಣೀ ಸೈನ್ಯಕ್ಕೆ, ಅಹಂ - ನಾನು, ಈಶ್ವರಃ - ಪ್ರಭುವಾಗಿ, ಪತಿಃ - ಸ್ವಾಮಿಯಾಗಿರುವೆನೊ ಇಯಂ - ಇಂತಹ, ಅಕ್ಷೋಹಿಣೀ - ಅಕ್ಷೋಹಿಣೀ ಸೈನ್ಯವು, ಪೂರ್ಣಾ - ರಥ ಗಜತುರಗಾದಿಗ ಳಿಂದ ಸಂಪೂರ್ಣವಾಗಿರುವುದು ಅನಯಾ - ಇಂತಹ ಸೈನ್ಯದಿಂದ, ಸಂವೃತಃ - ಕೂಡಿದ, ಅಹಂ- ನಾನು, ಗತ್ವಾ - ಹೋಗಿ, ತೈರ್ನಿಶಾಚರೈಃ - ಆ ರಾಕ್ಷಸರೊಡನೆ, ಯೋದ್ಧಾ - ಯುದ್ಧ ಮಾಡಲು ದ್ಯುಕ್ತನು, ಅಸ್ಮಿ - ಆಗಿದ್ದೇನೆ. ॥ ೩ ॥ ಮೇ - ನನ್ನ, ಇಮೇ - ಈ, ಭೃತ್ಯಾಃ-ಆಳುಗಳು,

---

ಆ ನರನಾಥನಾದ ದಶರಥರಾಜನು ವಿಶ್ವಾಮಿತ್ರನ ಮಾತನ್ನು ಕೇಳಿ ಸ್ವಲ್ಪಹೊತ್ತು ಪ್ರಜ್ಞೆತಪ್ಪಿ ಪುನಃ ಚೇತರಿಸಿಕೊಂಡು ಹೀಗೆಂದನು. ॥ ೧ ॥ "ಮುನಿಯೇ ! ನನ್ನ ಪ್ರಿಯ ಪುತ್ರನೂ ತಾವರೆಯ ಎಸಳಿನಂತೆ ವಿಸ್ತಾರವಾದ ನೇತ್ರಗಳುಳ್ಳವನೂ ಆದ ಶ್ರೀರಾಮನು ಹನ್ನೆರಡುವರುಷಗಳ ವಯಸ್ಸುಳ್ಳ ಬಾಲಕನಷ್ಟೆ ? ಇಂತಹ ಕುಮಾರನಾದ ಇವನಿಗೆ ರಾಕ್ಷಸ ರೊಡನೆ ಯುದ್ಧಮಾಡುವ ಯೋಗ್ಯತೆಯನ್ನು ಕಾಣೆನು ॥೨॥ ಯಾವ ಅಕ್ಷೋಹಿಣೀ ಸೈನ್ಯವು ರಥ ಗಜತುರಗಾದಿಗಳಿಂದ ಸಂಪೂರ್ಣವಾಗಿರುವುದೋ ಇದರಿಂದೊಡಗೂಡಿದ ನಾನು ಆ ರಾಕ್ಷಸನೊಡನೆ ಯುದ್ಧಮಾಡಲು ಶಕ್ತನಾಗಿರುವೆನು. ॥ ೩ ॥ ನನ್ನ ಈ ಭೃತ್ಯರು

ರ್ಯೋದ್ಧುಂ ನರಾಮಂ ನೇತುಮರ್ಹಸಿ || ೪ || ಅಹಮೇವ ಧನುಷ್ಪಾಣಿ ರ್ಗೋಪ್ತಾ ಸಮರಮೂರ್ಧನಿ। ಯಾವತ್ಪ್ರಾಣಾನ್ಧರಿಷ್ಯಾಮಿ ತಾವದ್ಯೋತ್ಸ್ಯೇ ನಿಶಾಚರೈಃ ||೫|| ನಿರ್ವಿಘ್ನಾ ವ್ರತಚರ್ಯಾಸಾ ಭವಿಷ್ಯತಿ ಸುರಕ್ಷಿತಾ । ಅಹಂ ತತ್ರಾಗಮಿಷ್ಯಾಮಿ ನರಾಮಂ ನೇತುಮರ್ಹಸಿ || ೬ || ಬಾಲೋಹ್ಯ ಕೃತ ವಿದ್ಯಶ್ಚ ನಚವೇತ್ತಿ ಬಲಾಬಲಂ । ನಚಾಸ್ತ್ರ ಬಲಸಂಯುಕ್ತೋ ನಚ ಯುದ್ಧ ವಿಶಾರದಃ ||೭|| ನಚಾಸೌ ರಕ್ಷಸಾಂಯೋಗ್ಯಃ ಕೂಟಯುದ್ಧಾ ಹಿತೇ ಧ್ರುವಂ || ವಿಪ್ರಯುಕ್ತೋಹಿ ರಾಮೇಣ ಮುಹೂರ್ತ ಮಪಿನೋತ್ಸಹೇ ||

ಶೂರಾಃ - ಶೌರ್ಯವುಳ್ಳವರು, ವಿಕ್ರಾಂತಾಶ್ಚ ಪರಾಕ್ರಮಶಾಲಿಗಳೂ ಹೌದು, ಅಸ್ತ್ರವಿಶಾರದಾಃ- ಅಸ್ತ್ರವಿದ್ಯೆಯಲ್ಲಿ ಸಮರ್ಥರಾದ ಕಾರಣವೇ, ರಕ್ಷೋಗಣೈಃ-ರಾಕ್ಷಸರ ಗುಂಪುಗಳೊಡನೆ, ಯೋದ್ಧುಂ - ಯುದ್ಧಮಾಡಲು. ಯೋಗ್ಯಾಃ - ಅರ್ಹರಾಗಿರುವರು, ರಾಮಂ - ಶ್ರೀರಾಮನನ್ನು, ನೇತುಂ - ಕರೆದುಕೊಂಡು ಹೋಗಲು, ನಾರ್ಹಸಿ - ಅರ್ಹನಾಗಬೇಡ, || ೪ || ಧನುಷ್ಪಾಣಿಃ- ಧನುರ್ಧಾರಿಯಾದ, ಅಹಮೇವ - ನಾನೇ, ಸಮರಮೂರ್ಧನಿ - ಯುದ್ಧರಂಗದಲ್ಲಿ, ಗೋಪ್ತಾ- ಸಂರಕ್ಷಕನಾಗಿ, ಪ್ರಾಣಾನ್ - ಪ್ರಾಣಗಳನ್ನು, ಯಾವದ್ಧರಿಷ್ಯಾಮಿ - ಎದುವರೆವಿಗೂ ಧರಿಸುವೆನೋ, ತಾವತ್ - ಅದುವರೆವಿಗೂ, ನಿಶಾಚರೈಃ - ರಾಕ್ಷಸರೊಡನೆ, ಯೋತ್ಸ್ಯೇ ಯುದ್ಧ ಮಾಡುವೆನು. ಸಾವ್ರತಚರ್ಯಾ – ಆ ಯಜ್ಞದೀಕ್ಷಾನುಷ್ಠಾನವು, ನಿರ್ವಿಘ್ನಾ- ವಿಘ್ನರಹಿತವಾಗಿ, ಸುರಕ್ಷಿತಾ-ಸಂರಕ್ಷಿಸಲ್ಪಟ್ಟುದು, ಭವಿಷ್ಯತಿ-ಆಗುವುದು, ಅಹಂ- ನಾನು, ತತ್ರ - ಆ ಯಜ್ಞದಲ್ಲಿ, ಆಗಮಿಷ್ಯಾಮಿ-ಬರುತ್ತೇನೆ. ರಾಮಂ – ಶ್ರೀರಾಮನನ್ನು, ನೇತುಂ – ಕರೆದುಕೊಂಡು ಹೋಗಲು, ನಾರ್ಹಸಿ-ಅರ್ಹನಾಗಬೇಡ. || ೬ || ಬಾಲಃ - ಬಾಲ್ಯವಯಸ್ಸುಳ್ಳ ಶ್ರೀರಾಮನು, ಅಕೃತವಿದ್ಯಶ್ಚ - ಶಿಕ್ಷಿಸಲ್ಪಡದೆ ಇರುವ ದನುರ್ವಿದ್ಯೆಯುಳ್ಳವನಾದ ಕಾರಣ, ಬಲಾಬಲಂ- ಶತೃಗಳ ಪ್ರಾಬಲ್ಯ ದೌರ್ಬಲ್ಯಗಳನ್ನು, ನವೇತ್ತಿಜ - ಅರಿಯನು; ಅಸ್ತ್ರಬಲಸಂಯುಕ್ತಶ್ಚ - ಬ್ರಹ್ಮಾಸ್ತ್ರಾದ್ಯಸ್ತ್ರಗಳಿಂದೊಡಗೂಡಿದವನೂ, ನ – ಅಲ್ಲವು, ಯುದ್ಧವಿಶಾರದಃ - ಯುದ್ಧಸಮರ್ಥನೂ, ನ ಅಲ್ಲವು, || ೭ || ಹಿ - ಯಾವಕಾರಣ

ಶೂರರಾಗಿಯೂ ಪರಾಕ್ರಮಿಗಳಾಗಿಯೂ, ಶಸ್ತ್ರಾಸ್ತ್ರ ಪಾರಂಗತರಾಗಿಯೂ, ರಕ್ಷೋಗಣಗಳೊಡನೆ ಕಾಳಗಮಾಡಲು ಯೋಗ್ಯರಾಗಿಯೂ ಇರುವರು. ಆದಕಾರಣ ನಾನು ಬರುವೆನೇ ಹೊರತು, ಶ್ರೀರಾಮನನ್ನು ಕಳುಹಲಾರೆನು. ||೪|| ಆ ರಣರಂಗದಲ್ಲಿ ನಾನು ಎದುವರೆವಿಗೂ ಪ್ರಾಣಗಳನ್ನು ಧರಿಸುವೆನೊ, ಅದುವರೆವಿಗೂ ಕೋದಂಡಪಾಣಿಯಾಗಿ ರಾಕ್ಷಸರೊಡನೆ ಯುದ್ಧಮಾಡುತ್ತ ರಕ್ಷಕನಾಗಿರುತ್ತೇನೆ. || ೫ || ಇದರಿಂದ ನಿನ್ನ ವ್ರತ ದೀಕ್ಷೆಯೂ ನಿರ್ವಿಘ್ನವಾಗಿ ಪರಿಪಾಲಿಸಲ್ಪಡುವುದು. ಆದುದರಿಂದ ನಾನು ಅಲ್ಲಿಗೆ ಬರುವೆನೇ ಹೊರತು, ಶ್ರೀರಾಮನನ್ನು ಕಳುಹಿಸಲಾರೆನು. ||೬|| ನನ್ನ ಕುಮಾರನಾದ ಶ್ರೀರಾಮನು ಬಾಲನಾಗಿಯೂ, ಧನುರ್ವಿದ್ಯೆಯನ್ನರಿಯದವನಾಗಿಯೂ, ಬಲಾಬಲಗಳನ್ನು ತಿಳಿಯದವನಾಗಿಯೂ, ಅಸ್ತ್ರ ಬಲವಿಲ್ಲದಿರುವವನಾಗಿಯೂ ಯುದ್ಧಪಂಡಿತನಲ್ಲದಿರುವವನಾಗಿಯೂ ಇರುವನು. ರಾಕ್ಷಸರೊಡನೆ ಕಾಳಗವನ್ನುಮಾಡಲು ಯೋಗ್ಯನಲ್ಲವು. ಆ ರಾಕ್ಷಸರಾದರೋ ಕೂಟಯೋಧಿಗಳಾಗಿರುವರು;

ಜೀವಿತುಂ ಮುನಿಶಾರ್ದೂಲ ನರಾಮಂ ನೇತುಮರ್ಹಸಿ ||೮|| ಯದಿವಾರಾಘವಂ ಬ್ರಹ್ಮನ್ ನೇತುಮಿಚ್ಛಸಿ ಸುವ್ರತ। ಚತುರಂಗ ಸಮಾಯುಕ್ತಂ ಮಯಾಚ ಸಹಿತಂನಯ ||೯|| ಷಷ್ಟಿರ್ವರ್ಷ ಸಹಸ್ರಾಣಿ ಜಾತಸ್ಯ ಮಮಕೌಶಿಕ। ದುಃಖೇನೋತ್ಪಾದಿತಶ್ಚಾಯಂ ನರಾಮಂ ನೇತುಮರ್ಹಸಿ ||೧೦|| ಚತುರ್ಣಾ ಮಾತ್ಮಜಾನಾಂಹಿ ಪ್ರೀತಿಃ ಪಾರಮಿಕಾಮಮ। ಜ್ಯೇಷ್ಠಂ ಧರ್ಮಪ್ರಧಾನಂಚ

---

ದಿಂದ, ತೇ - ಆ ರಕ್ಕಸರು, ಧ್ರುವಂ - ನಿಶ್ಚಯವಾಗಿ, ಕೂಟಯುದ್ಧಾಃ - ಕಪಟದಿಂದ ಯುದ್ಧವುಳ್ಳ ವರೋ, ತೇನ - ಆ ಕಾರಣದಿಂದ, ಅಸೌ - ಈ ಶ್ರೀರಾಮನು, ರಕ್ಷಸಾಂ - ರಾಕ್ಷಸರ, ಯುದ್ಧೇ - ಕಾಳಗದಲ್ಲಿ, ಯೋಗ್ಯಸ್ಸ - ಸಮರ್ಥನೂ, ನ - ಅಲ್ಲವು , ರಾಮೇಣ - ಶ್ರೀರಾಮನಿಂದ, ವಿಪ್ರ ಯುಕ್ತಃ - ವಿರಹಿತನಾಗಿ, ಮುಹೂರ್ತಮಪಿ - ಸ್ವಲ್ಪಕಾಲವೂ ಜೀವಿತುಂ-ಬದುಕಲು, ನೋತ್ಸಹೇ- ಉದ್ಯುಕ್ತನಾಗಲಾರೆನು. ಹೇಮುನಿಶಾರ್ದೂಲ - ಎಲೈ ಋಷಿಶ್ರೇಷ್ಠನೇ, ರಾಮಂ-ಶ್ರೀರಾಮನನ್ನು, ನೇತುಂ ಕರೆದುಕೊಂಡು ಹೋಗಲು, ನಾರ್ಹಸಿ - ಯೋಗ್ಯನಾಗಬೇಡ, ||೮|| ಅಥವಾ- ಹಾಗ ಲ್ಲದೇ ಹೋದರೆ, ಹೇಸುವ್ರತ - ಎಲೈ ನಿಯಮವುಳ್ಳವರನೇ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ರಾಘವಂ - ಶ್ರೀರಾಮನನ್ನು, ನೇತುಂ - ಕರೆದುಕೊಂಡು ಹೋಗಲು, ಇಚ್ಛಸಿಯದಿ - ಅಪೇಕ್ಷಿಸು ವೆಯೋ ಆದರೆ, ಚತುರಂಗಸಮಾಯುಕ್ತಂ - ಚತುರಂಗ ಬಲದಿಂದ ಕೂಡಿದ, ಮಯಾಚ-ನನ್ನಿಂದಲೂ, ಸಹಿತಂ - ಕೂಡಿರುವ ಶ್ರೀರಾಮಚಂದ್ರನನ್ನು, ನಯ - ಕರೆದುಕೊಂಡು ಹೋಗು. ||೯|| ಹೇ ಕೌಶಿಕ - ಎಲೈ ವಿಶ್ವಾಮಿತ್ರನೇ, ಜಾತಸ್ಯ - ಹುಟ್ಟಿದ, ಮಮ - ನನಗೆ, ಷಷ್ಟಿಃ-ಅರವತ್ತು ಸಂಖ್ಯೆ ಯುಳ್ಳ, ವರ್ಷಸಹಸ್ರಾಣಿ - ಸಂವತ್ಸರ ಸಹಸ್ರಗಳು, ಅತೀತಾನಿ - ಕಳೆದುಹೋದುವು; ಅಯಂ- ಈ ಶ್ರೀರಾಮನು; ದುಃಖೇನ - ಉಪವಾಸಾದೀಕ್ಷಾದಿ ನಿಯಮಜನ್ಯಕ್ಲೇಶದಿಂದ, ಉತ್ಪಾದಿತಶ್ಚ-ಸೃಜಿ ಸಲ್ಪಟ್ಟನು, ರಾಮಂ - ಶ್ರೀರಾಮನನ್ನು, ನೇತುಂ - ಕರೆದುಕೊಂಡು ಹೋಗಲು, ನಾರ್ಹಸಿ ಅರ್ಹ ನಾಗಬೇಡ, ||೧೦|| ಹಿ - ಯಾವ ಕಾರಣ, ಚತುರ್ಣಾಂ - ನಾಲ್ವರಾದ,ಆತ್ಮಜಾನಾಂ-ಕುವರರೊ ಳಗೆ, ರಾಮೇ - ಶ್ರೀರಾಮನಲ್ಲಿ, ಮಮ ನನಗೆ, ಪ್ರೀತಿಃ - ವಿಶ್ವಾಸವು, ಪಾರಮಿಕಾ-ಬಹಳವಾ ಗಿದೆಯೋ, ತಸ್ಮಾತ್ - ಆ ಕಾರಣ, ಧರ್ಮಪ್ರದಾನಂ - ಧರ್ಮವೇ ಪ್ರಾಧಾನ್ಯವುಳ್ಳ, ಜ್ಯೇಷ್ಠಂ- ಜ್ಯೇಷ್ಠನಾದ, ರಾಮಂ - ಶ್ರೀರಾಮನನ್ನು, ನೇತುಂ - ಕರದುಕೊಂಡು ಹೋಗಲು, ನಾರ್ಹಸಿ

---

ಎಲೈ ಮುನಿಶ್ರೇಷ್ಠನೆ ! ಇವೂ ಅಲ್ಲದ, ಶ್ರೀರಾಮನನ್ನಗಲಿ ಸ್ವಲ್ಪಹೊತ್ತಾದರೂ ಬದುಕಲಾರೆ ನು ! ಆತನನ್ನು ಕಳುಹಿಸಲಾರೆನು. ||೮|| ಎಲೈ ವಿಶ್ವಾಮಿತ್ರನೆ ! ಶ್ರೀರಾಮನನ್ನೇ ಕರೆದು ಕೊಂಡು ಹೋಗಬೇಕೆಂದಿಚ್ಛೆಯು ನಿನಗುಂಟಾಗಿದ್ದರೆ, ಚತುರಂಗಬಲಸಮೇತನನ್ನಾಗಿಯೂ, ನನ್ನಿಂದೊಡಗೂಡಿದವನನ್ನಾಗಿಯೂ, ಕರೆದುಕೊಂಡುಹೋಗು. ||೯|| ಎಲೈ ವಿಶ್ವಾಮಿ ತ್ರನೇ ! ನನಗೆ ಅರವತ್ತು ಸಾವಿರವರುಷಗಳಾದ ಬಳಿಕ ಬಹಳ ಕಷ್ಟದಿಂದೀ ಶ್ರೀರಾಮನು ಪಡೆಯಲ್ಪಟ್ಟನಾದುದರಿಂದ ನಾನವನನ್ನು ಕಳುಹಿಸಲಾರೆನು. ||೧೦|| ಇದಲ್ಲದೆ ನನ್ನ ಕುಮಾರರಾದ ನಾಲ್ವರಲ್ಲಿ ನನಗೆ ಈ ಶ್ರೀರಾಮನಲ್ಲಿಯೇ ಬಹಳವಾದ ಪ್ರೇಮವುಂಟಾಗಿರು ವುದು. ಜ್ಯೇಷ್ಠಕುಮಾರನಾಗಿಯೂ, ಧರ್ಮಪ್ರಧಾನನಾಗಿಯೂ ಇರುವ ಈ ಶ್ರೀರಾಮನನ್ನು

ನರಾಮಂ ನೇತುಮರ್ಹಸಿ ‖ ೧೧ ‖ ಕಿಂವೀರ್ಯಾ ರಾಕ್ಷಸಾಸ್ತೇಚ ಕಸ್ಯಪುತ್ರಾಶ್ಚ ಕೇಚತೇ। ಕಥಂಪ್ರಮಾಣಾಃ ಕೇಚೈತಾರ್ನ್ ರಕ್ಷಂತಿ ಮುನಿಪುಂಗವಃ‖೧೨‖ಕಥಂಚ ಪ್ರತಿಕರ್ತವ್ಯಂ ತೇಷಾಂ ರಾಮೇಣ ರಕ್ಷಸಾಂ। ಮಾಮಕೈರ್ವಾಬಲೈ।ರ್ಬ್ರಹ್ಮರ್ನ್ ಮಯಾವಾ ಕೂಟಯೋಧಿನಾಂ ‖ ೧೩ ‖ ಸರ್ವಂಮೇಶಂಸಭಗರ್ವನ್ ಕಥಂ ತೇಷಾಂ ಮಯಾರಣೇ। ಸ್ಥಾತವ್ಯಂ ದುಷ್ಟಭಾವಾನಾಂ ವೀರ್ಯೋತ್ಸಿಕ್ತಾಹಿ ರಾಕ್ಷಸಾಃ ‖ ೧೪ ‖ ತಸ್ಯತದ್ವಚನಂ ಶ್ರುತ್ವಾ ವಿಶ್ವಾಮಿತ್ರೋಭ್ಯ ಭಾಷತ‖ ಪೌಲಸ್ತ್ಯ ವಂಶಪ್ರಭವೋ ರಾವಣೋ ನಾಮರಾಕ್ಷಸಃ ‖ ೧೫ ‖ ಸಬ್ರಹ್ಮಣಾ ದತ್ತವರ ಸ್ತ್ರೈಲೋಕ್ಯಂ ಬಾಧತೇಭೃಶಂ। ಮಹಾಬಲೋ ಮಹಾವೀರ್ಯೋ

---

ಅರ್ಹನಾವುಬೇಡ, ‖ ೧೧ ‖ ಹೇಮುನಿಪುಂಗವ, ಎಲೈ ಋಷಿಶ್ರೇಷ್ಠನೇ, ತೇರಾಕ್ಷಸಾಃ - ಆ ರಾಕ್ಷಸರು, ಕಿಂವೀರ್ಯಾಃ - ಎಂತಹ ಪರಾಕ್ರಮವುಳ್ಳವರು? ಕಸ್ಯ - ಯಾವನ, ಪುತ್ರಾಶ್ಚ - ಮಕ್ಕಳು? ತೇ- ಆವರು, ಕೇಚ - ಯಾರು ? ಕಥಂಪ್ರಮಾಣಾಃ - ಎಷ್ಟು ಉದ್ದವಾಗಿರುವರು? ಕೇಚ - ಯಾರು, ಏತಾರ್ನ್ - ಇವರನ್ನು, ರಕ್ಷತಿ - ಸಂರಕ್ಷಣೆ ಮಾಡುವರು ? ‖ ೧೨‖ ರಾಮೇಣ-ಶ್ರೀರಾಮನಿಂದ, ತೇಷಾಂ ರಕ್ಷಸಾಂ - ಆ ರಾಕ್ಷಸರಿಗ, ಕಥಂಚ - ಹೇಗೆ, ಪ್ರತಿಕರ್ತವ್ಯಂ - ಪ್ರತಿಕ್ರಿಯೆ ಮಾಡ ತಕ್ಕುದು? ಹೇಬ್ರಹ್ಮರ್ನ್ - ಎಲೈ ಬ್ರಾಹ್ಮಣನೇ, ಕೂಟಯೋಧಿನಾಂ - ಕಪಟದಿಂದ ಯುದ್ಧಮಾಡುವ, ತೇಷಾಂ - ಆ ರಾಕ್ಷಸರಿಗೆ, ಮಯಾವಾ - ನನ್ನಿಂದಲೇ ಆಗಲಿ, ಮಾಮಕೈಃ - ನನ್ನ ಸಂಬಂಧಿಗಳಾದ, ಬಲೈರ್ವಾ - ಸೈನ್ಯಗಳಿಂದಲೇ ಆಗಲಿ, ಕಥಂಚಪ್ರತಿಕರ್ತವ್ಯಂ - ಹೇಗೆ ಪ್ರತಿಕ್ರಿಯೆ ಮಾಡಕ್ಕುದು. ‖ ೧೩ ‖ ಹೇಭಗವರ್ನ್ - ಎಲೈ ಸದ್ಗುಣೈಶ್ವರ್ಯಸಂಪನ್ನನೇ, ಹಿ- ಯಾವ ಕಾರಣ ರಾಕ್ಷಸಾಃ - ರಕ್ಕಸರು, ವೀರ್ಯೋತ್ಸಿಕ್ತಾಃ - ಪರಾಕ್ರಮದಿಂದ ಗರ್ವಿತರೋ, ತೇಷಾಂ- ಅಂತಹ, ದುಷ್ಟಭಾವಾನಾಂ - ದುಷ್ಟಸ್ವಭಾವವುಳ್ಳ ರಾಕ್ಷಸರ, ರಣೇ - ಕಾಳಗದಲ್ಲಿ, ಮಯಾ- ನನ್ನಿಂದ, ಕಥಂಸ್ಥಾತ್ಯಂ - ಹೇಗೇ ನಿಲ್ಲತಕ್ಕದು ಮೇ - ನನಗೆ, ಸರ್ವಂ - ಸಮಸ್ತವನ್ನು, ಶಂಸ-ಹೇಳು, ‖ ೧೪ ‖ ತಸ್ಯ - ಆ ದಶರಥನ, ತದ್ವಚನಂ - ಆ ಮಾತನ್ನು, ಶೃತ್ವಾ - ಕೇಳಿ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ಅಭ್ಯಭಾಷತ - ಮಾತನಾಡಿದನು ‖೧೫‖ ಪೌಲಸ್ತ್ಯವಂಶಪ್ರಭವಃ, ಪೌಲಸ್ತ್ಯ- ಪುಲಸ್ತ್ಯ ಬ್ರಹ್ಮ ಸಂಬಂಧವಾದ, ವಂಶ - ಕುಲದಲ್ಲಿ, ಪ್ರಭವಃ - ಹುಟ್ಟಿರುವ,ರಾವಣೋನಾಮ-

---

ಕರದುಕೊಂಡು ಹೋಗಬೇಡ. ‖೧೧‖ ಎಲೈ ಮುನಿಪುಂಗವನೇ, ಆ ರಾಕ್ಷಸರು ಎಂತಹ ಪರಾಕ್ರಮಿಗಳು ? ಯಾರ ಮಕ್ಕಳು ? ಅವರಾರು ? ಎಂತಹ ಶರೀರವುಳ್ಳವರು ! ಅವರಿಗೆ ಒಡೆಯರಾರು ? ‖೧೨‖ ಎಲೈ ಬ್ರಾಹ್ಮಣೋತ್ತಮನೆ ! ಕೂಟಯೋಧಿಗಳಾದ ರಕ್ಕಸರಿಗೆ ಪ್ರತಿಯಾಗಿ ರಾಮನಾಗಲೀ, ನಾನಾಗಲೀ, ಅಥವ ನನ್ನ ಸೈನ್ಯಗಳಾಗಲೀ, ಏನು ಮಾಡಬೇಕೋ ಅದನ್ನು ಹೇಳು ! ಆ ರಾಕ್ಷಸರು ಪರಾಕ್ರಮದಿಂದ ಬಹಳ ಕೊಬ್ಬಿದವರಷ್ಟೆ ! ಅಂತಹರಿಗೆ ಎದುರಾಗಿ ರಣರಂಗದಲ್ಲಿ ನಾನು ಹೇಗೆ ನಿಲ್ಲಬೇಕು?'' ಎಂದು ದಶರಥರಾಯನು ನುಡಿಯಲು, ವಿಶ್ವಾಮಿತ್ರ ಮಹಾಮುನಿಯಿಂತೆಂದನು ‖೧೫‖ ''ಪುಲಸ್ತ್ಯವಂಶದಲ್ಲಿ ಹುಟ್ಟಿರುವ ರಾವಣನೆಂಬ ರಾಕ್ಷಸನೋರ್ವನಿರುವನು. ಆತನು ಬ್ರಹ್ಮನಿಂದ ವರವನ್ನು ಪಡೆದವನಾದ

ರಾಕ್ಷಸೈರ್ಬಹುಭಿರ್ವೃತಃ ||೧೭|| ಶ್ರೂಯತೇಹಿ ಮಹಾವೀರ್ಯೋ ರಾವಣೋ ರಾಕ್ಷಸಾಧಿಪಃ | ಸಾಕ್ಷಾದ್ವೈಶ್ರವಣ ಭ್ರಾತಾ ಪುತ್ರೋ ವಿಶ್ರವಸೋಮುನೇಃ || ೧೭ || ಯದಾಸ್ವಯಂ ನಯಜ್ಞಸ್ಯ ವಿಘ್ನಕರ್ತಾ ಮಹಾಬಲಃ | ತೇನ ಸಂಚೋದಿತೌ ದ್ವೌತು ರಾಕ್ಷಸೌ ಸುಮಹಾಬಲೌ | ಮಾರೀಚಶ್ಚ ಸುಬಾಹುಶ್ಚ ಯಜ್ಞವಿಘ್ನಂ ಕರಿಷ್ಯತಃ ||೧೯|| ಇತ್ಯುಕ್ತೋ ಮುನಿನಾತೇನ ರಾಜೋವಾಚ ಮುನಿಂತದಾ| ನಹಿಶಕ್ತೋಽಸ್ಮಿ ಸಂಗ್ರಾಮೇ ಸ್ಥಾತುಂ ತಸ್ಯ ದುರಾತ್ಮನಃ||೨೦|| ಸತ್ವಂ ಪ್ರಸಾದಂ ಧರ್ಮಜ್ಞ ಕುರುಷ್ವ ಮಮಪುತ್ರಕೇ | ಮಮಚೈವಾಲ್ಪ

---

ರಾವಣನೆಂದು ಪ್ರಸಿದ್ಧನಾದ, ರಾಕ್ಷಸಃ - ರಕ್ಕಸನು, ಅಸ್ತಿ - ಇರುವನು. ಸಃ - ಆ ರಾವಣನು, ಬ್ರಹ್ಮಣಾ - ಬ್ರಹ್ಮದೇವನಿಂದ, ದತ್ತವರಃ - ಕೊಡಲ್ಪಟ್ಟ ವರವುಳ್ಳವನಾಗಿ,ತ್ರೈಲೋಕ್ಯಂ ಲೋಕ ತ್ರಯವನ್ನೂ, ಭೃಶಂ ಬಹಳವಾಗಿ, ಬಾಧತೇ - ಹಿಂಸಗೊಳಿಸುತ್ತಾನೆ. ||೧೭|| ಮಹಾಬಲಃ- ಮಹಾ ಬಲವಂತನಾದ, ಮಹಾವೀರ್ಯಃ - ಮಹಾ ಪರಾಕ್ರಮಶಾಲಿಯಾದ, ರಾವಣಃ - ರಾವಣನೆಂಬ, ರಾಕ್ಷಸಾಧಿಪಃ - ರಾಕ್ಷಸರ ರಾಜನು, ಬಹುಭಿಃ - ಅನೇಕ, ರಾಕ್ಷಸೈಃ - ರಾಕ್ಷಸರಿಂದ, ವೃತಃ-ಸುತ್ತುವರೆಯಲ್ಪಟ್ಟ, ಮಹಾವೀರ್ಯಃ ಪರಾಕ್ರಮವಂತನೆಂದು, ಶ್ರೂಯತೇಹಿ - ಕೇಳಲ್ಪಟ್ಟಿರುವನಷ್ಟೆ, ಸಾಕ್ಷಾತ್-ಪ್ರತ್ಯಕ್ಷವಾಗಿ, ವೈಶ್ರವಣಭ್ರಾತಾ - ಕುಬೇರನಿಗೆ ತಮ್ಮನಾದ, ವಿಶ್ರವಸಃ- ವಿಶ್ರವಸ್ಸೆಂಬ, ಮುನೇಃ ಋಷಿಗೆ, ಪುತ್ರಃ-ಮಗನಾದುದರಿಂದ, ಮಹಾಬಲಃ - ಮಹಾಬಲಿಷ್ಠನಾದ ರಾವಣನು, ಸ್ವಯಂ-ತಾನು, ಯದಾ - ಯಾವಕಾಲದಲ್ಲಿ, ಯಜ್ಞಸ್ಯ - ಯಜ್ಞಕ್ಕೆ, ವಿಘ್ನಕರ್ತಾ- ವಿಘ್ನಮಾಡುವದು ನ-ಅಲ್ಲವೋ, ತದಾ-ಆ ಕಾಲದಲ್ಲಿ, ತೇನ - ಆ ರಾವಣನಿಂದ, ಸಂಚೋದಿತೌ- ಕಳುಹಲ್ಪಟ್ಟ, ಮಾರೀಚಶ್ಚ - ಮಾರೀಚನು, ಸುಬಾಹುಶ್ಚೇತಿ - ಸುಬಾಹುವೆಂಬ, ಸುಮಹಾಬಲೌ- ಮಹಾಬಲಿಷ್ಠರಾದ, ದ್ವೌ-ಇಬ್ಬರು, ರಾಕ್ಷಸೌ-ರಕ್ಕಸರು, ಯಜ್ಞವಿಘ್ನಂ-ಯಜ್ಞಕ್ಕೆ, ವಿಘ್ನವನ್ನು, ಕರಿಷ್ಯತಃ-ಮಾಡುವರು. || ೧೯ || ತೇನಮುನಿನಾ ಆ ವಿಶ್ವಾಮಿತ್ರನಿಂದ, ಇತ್ಯುಕ್ತಃ ಹೀಗೆ ಹೇಳಲ್ಪಟ್ಟ, ರಾಜಾ-ದಶರಥರಾಜನು, ತದಾ ಆ ಕಾಲದಲ್ಲಿ,ಮುನಿಂ- ವಿಶ್ವಾಮಿತ್ರನನ್ನು ಕುರಿತು, ದುರಾತ್ಮನಃ- ದುಷ್ಟನಾದ, ತಸ್ಯ - ಆ ರಾವಣನ, ಸಂಗ್ರಾಮೇ - ಕಾಳಗದಲ್ಲಿ, ಸ್ಥಾತುಂ - ನಿಲ್ಲಲು, ಶಕ್ತಃ-ಸಮರ್ಥನು, ನಾಸ್ಮಿ - ಆಗಲಾರೆನು, ಇತಿ - ಇಂತೆಂದು, ಉವಾಚ - ಹೇಳಿದನು || ೨೦ ||

---

ಕಾರಣ ಮಹಾಬಲಿಷ್ಠನಾಗಿಯೂ, ಬಹು ಪರಾಕ್ರಮಿಯಾಗಿಯೂ, ಅನೇಕ ರಾಕ್ಷಸರಿಂದೊಡಗೂಡಿದವನಾಗಿಯೂ ಇರುತ್ತ, ಲೋಕತ್ರಯವನ್ನು ಹಿಂಸಿಸುತ್ತಿರುವನೆಂದು ಎಲ್ಲರಿಂದಲೂ ಕೇಳಲ್ಪಟ್ಟಿರುವನಷ್ಟೆ ? ರಾಕ್ಷಸಾಧಿಪನಾದ ರಾವಣನು ಸಾಕ್ಷಾತ್ಕುಬೇರನ ತಮ್ಮನಾಗಿಯೂ, ವಿಶ್ರವಸ್ಸಿನ ಪುತ್ರನಾಗಿಯೂ ಇರುವನು; ಅವನೇ ಪ್ರತ್ಯಕ್ಷವಾಗಿ ಬಂದು, ನನ್ನ ಯಜ್ಞಕ್ಕೆ ವಿಘ್ನವನ್ನು ಮಾಡದಿದ್ದರೂ, ಆತನಿಂದ ಪ್ರೇರಿತರಾದವರೂ, ಮಹಾ ಬಲವಂತರಾದವರೂ, ಆದ ಮಾರೀಚ ಸುಬಾಹುಗಳೆಂಬೀರ್ವರೂ ನನ್ನ ಯಜ್ಞಕ್ಕೆ ವಿಘ್ನವನ್ನುಂಟುಮಾಡುತ್ತಲಿರುವರು. ವಿಶ್ವಾಮಿತ್ರ ಮುನಿಯು ಹೀಗೆನ್ನಲು, ಅದನ್ನು ಕೇಳಿ, ದಶರಥನಿಂತೆಂದನು. "ಎಲೈ ಧರ್ಮಜ್ಞನೇ ! ಆ ದುರಾತ್ಮನ ಮುಂದೆ ನಿಲ್ಲಲೂ ಸಹ ನನಗೆ ಶಕ್ತಿಸಾಲದು.

ಭಾಗ್ಯಸ್ಯ ದೈವತಂಹಿ ಭವಾನ್ಗುರುಃ ||೧೧|| ದೇವ ದಾನವ ಗಂಧರ್ವಾ ಯಕ್ಷಾಃ ಪತಗ ಪನ್ನಗಾಃ । ನಶಕ್ತಾ ರಾವಣಂ ಸೋಢುಂ ಕಿಂಪುನರ್ಮಾನವಾ ಯುಧಿ ||೨೨|| ಸಹಿವೀರ್ಯವತಾಂ ವೀರ್ಯಮಾದತ್ತೇಯುಧಿರಾಕ್ಷಸಃ । ತೇನ ಚಾಹಂ ನಶಕ್ತೋಸ್ಮಿ ಸಂಯೋದ್ಧುಂ ತಸ್ಯವಾಬಲೈಃ । ಸಬಲೋವಾ ಮುನಿ ಶ್ರೇಷ್ಠ ಸಹಿತೋ ವಾ ಮಮಾತ್ಮಜೈಃ||೨೩||ಕಥಮಪ್ಯಮರಪ್ರಖ್ಯಂಸಂಗ್ರಾಮಾ ಣಾಮಕೋವಿದಂ। ಬಾಲಂಮೇತನಯಂ ಬ್ರಹ್ಮನ್ನೈವದಾಸ್ಯಾಮಿ ಪುತ್ರಕಂ||

ಹೇಧರ್ಮಜ್ಞ-ಎಲೈ ಧರ್ಮವನ್ನರಿತವನೆ, ಹಿ-ಯಾವಕಾರಣದ, ಅಲ್ಪಭಾಗ್ಯಸ್ಯ-ಅಲ್ಪ ಪುಣ್ಯನಾದ, ಮಮ-ನನಗೆ, ಭವಾನೇವ-ನೀನೆ,ದೈವತಂ-ದೇವತಾಸ್ವರೂಪನು, ಗುರುಶ್ಚ ಗುರುವೂ ಆಗಿರುವೆಯೋ, ತಸ್ಮಾತ್ ಆ ಕಾರಣ, ಸತ್ವಂ-ಆ ನೀನು, ಮಮ-ನನ್ನ, ಪುತ್ರಕೇ- ಸ್ವಲ್ಪವಯಸ್ಸುಳ್ಳ ಮಗನಲ್ಲಿ, ಪ್ರಸಾದಂ ಅನುಗ್ರಹವನ್ನು, ಕುರುಷ್ವ ಮಾಡು ||೨೧|| ದೇವದಾನವಗಂಧರ್ವಾಃ - ದೇವತೆ ಗಳೂ ದಾನವರೂ ಗಂಧರ್ವರೂ, ಯಕ್ಷಾಃ-ಯಕ್ಷರೂ, ಪತಗಪನ್ನಗಾಃ - ಪಕ್ಷಿಗಳೂ ಸರ್ಪಗಳೂ, ಯುಧಿ-ಕಾಳಗದಲ್ಲಿ, ರಾವಣಂ-ರಾವಣನನ್ನು, ಸೋಢುಂ-ಸಹಿಸಲು, ನಶಕ್ತಾಃ - ಸಮರ್ಥರಲ್ಲವು, ಮಾನವಾಃ ಪುನಃ-ಮನುಷ್ಯರಾದರೆ, ಕಿಂ-ಏನು ಹೇಳತಕ್ಕದು ||೨೨|| ಸಃರಾಕ್ಷಸಃ ಆ ರಾಕ್ಷ ಸನು, ಹಿ-ಯಾವಕಾರಣ, ಯುಧಿ-ಕಾಳಗದಲ್ಲಿ, ವೀರ್ಯವತಾಂ-ಪರಾಕ್ರಮಶಾಲಿಗಳ,ವೀರ್ಯಂ-ಸಾಮ ರ್ಥ್ಯವನ್ನು, ಆದತ್ತೇ-ಸೆಳೆಯುತ್ತಾನೆಯೋ,ತೇನ-ಅಂಥಾರಾವಣನೊಡನೆಯೇ ಆಗಲಿ,ತಸ್ಯ ಬಲೈರ್ವಾ- ಅವನ ಸೈನ್ಯಗಳೊಡನೆಯೇ ಆಗಲಿ, ಸಂಯೋದ್ಧುಂ-ಯುದ್ಧಮಾಡಲು, ಅಹಂ ನಾನು, ಶಕ್ತಃ- ಸಮ ರ್ಥನು, ನಾಸ್ಮಿ ಆಗಲಾರೆನು, ಹೇಮುನಿಶ್ರೇಷ್ಠ-ಎಲೈ ಋಷಿಶ್ರೇಷ್ಠನ, ಸಬಲೋವಾ-ಸೈನ್ಯದಿಂ ದೊಡಗೂಡಿದವನೇ ಆಗಲಿ, ಮಮ - ನನ್ನ, ಆತ್ಮಜೈಃ - ಮಕ್ಕಳಿಂದ, ಸಹಿತೋವಾ - ಕೂಡಿದವ ನೇ ಆಗಲಿ, ಯೋದ್ಧುಂ - ಯುದ್ಧಮಾಡಲು, ಶಕ್ತಃ - ಸಮರ್ಥನು, ನಾಸ್ಮಿ - ಆಗಲಾರೆನು. ||೨೩|| ಹೇಬ್ರಹ್ಮನ್ - ಎಲೈಬ್ರಾಹ್ಮಣನೆ, ಅಮರಪ್ರಖ್ಯಂ- ದೇವತಾ ತೇಜಸ್ಸುಳ್ಳ, ಸಂಗ್ರಾಮಾಣಾಂ-ಯುದ್ಧ ಗಳಲ್ಲಿ, ಅಕೋವಿದಂ - ಅಪಂಡಿತನಾದ, ಬಾಲಂ - ಹುಡುಗನಾದ, ಪುತ್ರಕಂ - ಪುನ್ನಾಮಕವಾದ ನರಕದಿಂದ ದಾಟಿಸುತ್ತಿರುವ, ಮೇ - ನನ್ನ, ತನಯಂ - ಕುಮಾರನನ್ನು, ಕಥಮಪಿ - ಅತಿಪ್ರಯಾಸ ದಿಂದಲಾದರೂ, ನೈವದಾಸ್ಯಾಮಿ - ಕೊಡಲಾರೆನು. ||೨೪|| ಅಥ-ಬಳಿಕ, ಯುದ್ಧೇ - ಕಾಳಗದಲ್ಲಿ

ನೀನು ನನ್ನ ಮಗನ ವಿಷಯದಲ್ಲಿ ಅನುಗ್ರಹವನ್ನು ಮಾಡು. ಮಂದಭಾಗ್ಯವುಳ್ಳ ನನಗೆ ನೀನೇ ದೈವವು ; ನೀನೇ ಗುರುವು ; ||೨೧|| ದೇವ, ದಾನವ, ಗಂಧರ್ವ, ಯಕ್ಷ, ಪಕ್ಷಿ, ನಾಗಗಳೇ ಮುಂತಾದ ದೇವತೆಗಳೂ, ಆ ರಾವಣನನ್ನು, ರಣರಂಗದಲ್ಲಿಎದುರಿಸಲಾರರೆಂದ ಮೇಲೆ ಮನುಷ್ಯರೇನು ತಾನೆ ಮಾಡಬಲ್ಲರು?||೨೨|| ಆ ರಾವಣನು ಸಂಗರದಲ್ಲಿ ವೀರ್ಯವಂತರಿ ಗೆಲ್ಲ ಮಹಾ ಭಯಂಕರವಾದ ಪರಾಕ್ರಮವಂತನು ಎಲೈ ಋಷಿಶ್ರೇಷ್ಠನೇ ! ಅಂತಹ ರಾವಣನೊಡನೆಯಾಗಲಿ, ಆತನ ಬಲಗಳೊಡನೆಯಾಗಲಿ, ಯುದ್ಧಮಾಡಲು, ಸೈನ್ಯ ಸಮೇತ ನಾದವನಾದರೂ, ಸಪುತ್ರರಿಂದೊಡಗೂಡಿದನಾದರೂ ನಾನು ಶಕ್ತನಲ್ಲವು. ||೨೩|| ಎಲೈ ಬ್ರಾಹ್ಮಣನೇ ! ದೇವನಪ್ರಭನೂ, ಸಂಗರದಲ್ಲಿ ಪಂಡಿತನಲ್ಲದವನೂ, ಬಾಲನೂ ಆದ ನನ್ನ ಕುಮಾರನನ್ನು ಕಳುಹಿಸಿಕೊಡುವುದೇ ಇಲ್ಲವು. ||೨೪|| ಯಮಸದೃಶರೂ, ಸುಂದೋ

ಅಥಕಾಲೋಪಮೌ ಯುದ್ಧೇ ಸುತೌ ಸುಂದೋಪ ಸುಂದಯೋಃ। ಯಜ್ಞವಿಘ್ನ ಕರೌತೌತೇ ನೈವದಾಸ್ಯಾಮಿ ಪುತ್ರಕಂ ॥ ೨೫ ॥ ಮಾರೀಚಶ್ಚ ಸುಬಾಹುಶ್ಚ ವೀರ್ಯವಂತೌ ಸುಶಿಕ್ಷಿತೌ । ತಯೋರನ್ಯ ತರೇಣಾಹಂ ಯೋದ್ಧಾಸ್ಯಾಂಸ ಸುಹೃದ್ಗಣಃ ॥ ೨೬ ॥ ಇತಿನರಪತಿ ಜಲ್ಪನಾದ್ದ್ವಿಜೇಂದ್ರಂ ಕುಶಿಕಸುತಂ ಸುಮಹಾನ್ ವಿವೇಶಮನ್ಯುಃ । ಸುಹುತ ಇವಮಖೇಗ್ನಿ ರಾಜ್ಯಸಿಕ್ತ ಸ್ಸಮಭವದುಜ್ವಲಿತೋ ಮಹರ್ಷಿವಹ್ನಿಃ ॥ ೨೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ವಿಂಶಸ್ಸರ್ಗಃ.

---

ಕಾಲೋಪಮೌ - ಯಮನಿಗೆ ಸಮಾನರಾದ, ಸುಂದೋಪಸುಂದಯೋಃ - ಸುಂದೋಪಸುಂದರಿಗೆ, ಸುತೌ - ಕುಮಾರರಾದ, ತೌ - ಆ ಸುಬಾಹು ಮಾರೀಚರಿಬ್ಬರು, ತೇ - ನಿನ್ನ, ಯಜ್ಞವಿಘ್ನಕರೌ- ಯಾಗಕ್ಕೆ ವಿಘ್ನಕರ್ತರಾಗಿರುವರಲ್ಲವೆ ? ಪುತ್ರಕಂ - ದಯಾಪಾತ್ರನಾದ, ನನ್ನ ಕುಮಾರನನ್ನು, ನೈವದಾಸ್ಯಾಮಿ - ಕೊಡಲಾರೆನು, ॥ ೨೫ ॥ ಮಾರೀಚಶ್ಚ - ಮಾರೀಚನೂ, ಸುಬಾಹುಶ್ಚ- ಸುಬಾಹುವೂ, ವೀರ್ಯವಂತೌ - ಪರಾಕ್ರಮಶಾಲಿಗಳೂ, ಸುಶಿಕ್ಷಿತೌ - ಕಾಳಗದಲ್ಲಿ ಬಹಳ ಅಭ್ಯಾಸವುಳ್ಳವರೂ, ತಯೋಃ – ಅವರಿಬ್ಬರಲ್ಲಿ, ಅನ್ಯತರೇಣ- ಒಬ್ಬನೊಡನೆ, ಅಹಂ- ನಾನು, ಸಸುಹೃದ್ಗಣಃ- ಸ್ನೇಹಿತರಿಂದಲೂ, ಬಲದಿಂದಲೂ ಕೂಡಿ, ಯೋದ್ಧಾ - ಯುದ್ಧಮಾಡತಕ್ಕವನು, ಸ್ಯಾಂ-ಆಗುವೆನು, ॥ ೨೬ ॥ ಇತಿ - ಹೀಗೆ, ನರಪತಿಜಲ್ಪನಾತ್ - ದಶರಥರಾಯನ ಮಾತಿನಿಂದ, ದ್ವಿಜೇಂದ್ರಂ-ಬ್ರಾಹ್ಮಣಶ್ರೇಷ್ಠನಾದ ಕುಶಿಕಸುತಂ - ವಿಶ್ವಾಮಿತ್ರನನ್ನು, ಸುಮಹಾನ್- ಬಹಳವಾದ, ಮನ್ಯುಃ- ಕೋಪವು, ವಿವೇಶ - ಹೊಕ್ಕಿತು, ಮಖೇ - ಯಾಗದಲ್ಲಿ, ಆಜ್ಯಸಿಕ್ತಃ - ಆಜ್ಯದಿಂದ ನೆನಿಸಲ್ಪಟ್ಟ, ಸುಹುತಃ- ಚನ್ನಾಗಿ ಹೋಮ ಮಾಡಲ್ಪಟ್ಟ, ಅಗ್ನಿರಿವ - ಬೆಂಕಿಯಂತೆ, ಮಹರ್ಷಿವಹ್ನಿಃ - ವಿಶ್ವಾಮಿತ್ರನೆಂಬ ಅಗ್ನಿಯು, ಉಜ್ವಲಿತಃ - ಪ್ರಜ್ವಲಿಸಿದುದು, ಅಭವತ್ - ಆಯಿತು ॥೨೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಿಂಶಸ್ಸರ್ಗಃ

---

ಪಸುಂದರ ಪುತ್ರರೂ ಆದ ಮಾರೀಚ ಸುಬಾಹುಗಳೆಂಬೀರ್ವರು ನಿನ್ನ ಯಜ್ಞ ವಿಘ್ನಕಾರಿಗಳಾಗಿದ್ದರೂ, ನನಗೆ ಪ್ರೀತಿಪಾತ್ರನಾದ ಪುತ್ರನನ್ನು ಕೊಡಲಾರೆನು. ॥ ೨೬ ॥ ಆ ಮಾರೀಚ ಸುಬಾಹುಗಳೆಂಬೀರ್ವರು ಬಹು ವೀರ್ಯವುಳ್ಳವರಾಗಿಯೂ, ಸಂಗರದಲ್ಲಿ ತೀವ್ರವಾದ ಅಭ್ಯಾಸವುಳ್ಳವರಾಗಿಯೂ ಇರುವರು. ಅಂತಹರಲ್ಲಿ ಒಬ್ಬನೊಡನೆ ನಾನು ಸೈನ್ಯಸಮೇತನಾಗಿ ಯುದ್ಧಮಾಡಬಲ್ಲೆನೇ ಹೊರತು, ಈರ್ವರೊಡನೆ ಯುದ್ಧದಲ್ಲಿ ನಿಲ್ಲಲಾರೆನು.” ದಶರಥರಾಜನಿಂತು ನುಡಿಯಲು, ಬಹಳವಾದ ಕೋಪವು ವಿಶ್ವಾಮಿತ್ರ ಮುನಿಯನ್ನು ಆವರಿಸಿತು. ಆ ಸಮಯದಲ್ಲಿ ವಿಶ್ವಾಮಿತ್ರನೆಂಬ ಅಗ್ನಿಯು ಯಾಗದಲ್ಲಿ ಹವನ ಮಾಡಲ್ಪಡುತ್ತಿರುವುದಾಗಿಯೂ ಆಜ್ಯದಿಂದ ತೊಯಿಸಲ್ಪಟ್ಟು, ಪ್ರಜ್ವಲಿಸುತ್ತಿರುವುದಾಗಿಯೂ ಇರುವ ಅಗ್ನಿಯಂತೆ ಜ್ವಲಿಸುತ್ತಿದ್ದಿತು. ॥೨೭॥

ಇಂತಿದು ದಶರಥರಾಯನ ರಾಮ ಪ್ರೇಷಣಾಸಹನ ವರ್ಣನವೆಂಬ
ಇಪ್ಪತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕವಿಂಶಸ್ಸರ್ಗಃ.



ತಚ್ಛ್ರುತ್ವಾ ವಚನಂ ತಸ್ಯ ಸ್ನೇಹಪರ್ಯಾಕುಲಾಕ್ಷರಂ । ಸಮನ್ಯುಃ ಕೌಶಿಕೋ ವಾಕ್ಯಂ ಪ್ರತ್ಯುವಾಚ ಮಹೀಪತಿಂ ॥ ೧ ॥ ಪೂರ್ವಮರ್ಥಂ ಪ್ರತಿಶ್ರುತ್ಯ ಪ್ರತಿಜ್ಞಾಂ ಹಾತುಮಿಚ್ಛಸಿ ! ರಾಘವಾಣಾಮಯುಕ್ತೋಽಯಂ ಕುಲಸ್ಯಾಸ್ಯ ವಿಪರ್ಯಯಃ ॥ ೨ ॥ ಯದೀದಂತೇಕ್ಷಮಂರಾಜನ್ ಗಮಿಷ್ಯಾಮಿ ಯಥಾಗತಂ । ಮಿಥ್ಯಾಪ್ರತಿಜ್ಞಃ ಕಾಕುತ್‌ಸ್ಥ ಸುಖೀಭವ ಸಬಾಂಧವಃ ॥ ೩ ॥ ತಸ್ಯರೋಷ ಪರೀತಸ್ಯ ವಿಶ್ವಾಮಿತ್ರಸ್ಯ ಧೀಮತಃ॥ ಚಚಾಲ ವಸುಧಾ ಕೃತ್ಸ್ನಾ ವಿವೇಶಚ

---

ಕೌಶಿಕಃ - ವಿಶ್ವಾಮಿತ್ರನು, ಸ್ನೇಹಪರ್ಯಾಕುಲಾಕ್ಷರಂ, ಸ್ನೇಹ - ಸ್ನೇಹದಿಂದ, ಪರ್ಯಾಕುಲ ಮಿಳಿತವಾದ, ಅಕ್ಷರಂ - ವರ್ಣಗಳುಳ್ಳ, ತಸ್ಯ - ಆ ದಶರಥರಾಯನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸಮನ್ಯುಃ - ಕೋಪದಿಂದೊಡಗೂಡಿ, ಮಹೀಪತಿಂ- ದಶರಥ ರಾಯನನನ್ನು ಕುರಿತು, ವಾಕ್ಯಂ - ಮಾತನ್ನು ಪ್ರತ್ಯುವಾಚ - ಹೇಳಿದನು ॥ ೧ ॥ ಪೂರ್ವಂ - ಮೊದಲು, ಅರ್ಥಂ-ಕಾರ್ಯವನ್ನು, ಪ್ರತಿಶ್ರುತ್ಯ - ಪ್ರತಿಜ್ಞೆಮಾಡಿ, ಪ್ರತಿಜ್ಞಾಂ- ಪ್ರತಿಜ್ಞೆಯನ್ನು, ಹಾತುಂ- ಬಿಡಲು, ಇಚ್ಛಸಿ- ಇಚ್ಛಿಸುವೆ, ಅಯಂ - ಈ, ವಿಪರ್ಯಯಃ ವ್ಯತಾಸವು, ರಾಘವಾಣಾಂ - ರಘುವಂಶದ ರಾಜರ, ಅಸ್ಯಕುಲಸ್ಯ - ಈ ವಂಶಕ್ಕೆ, ಅಯುಕ್ತಃ - ಯುಕ್ತವಲ್ಲ. ॥ ೨ ॥ ಹೇರಾಜನ್- ಎಲೈ ರಾಜನ, ತೇ- ನಿನಗೆ, ಇದಂ - ಇದು, ಕ್ಷಮಂಯದಿ - ಯೋಗ್ಯವೇ ಆದರೆ, ಯಥಾಗತಂ - ಬಂದಂತೆಯು, ಗಮಿಷ್ಯಾಮಿ - ತೆರಳುವೆನು, ಹೇಕಾಕುಸ್ಥ- ಎಲೈ ಕಕುತ್ ಸ್ಥ ವಂಶೋತ್ಪನ್ನನೇ, ತ್ವಂ- ನೀನು, ಮಿಥ್ಯಾ ಪ್ರತಿಜ್ಞಃ - ಮಿಥ್ಯಾ ಪ್ರತಿಜ್ಞೆಯುಳ್ಳವನಾಗಿ, ಸಬಾಂಧವಃ - ಬಂಧುಗಳಿಂದೊಡಗೂಡಿ, ಸುಖೀಭವ- ಸುಖವಾಗಿರು. ॥ ೩ ॥ ಧೀಮತಃ - ಬುದ್ಧಿವಂತನಾದ, ತಸ್ಯವಿಶ್ವಾಮಿತ್ರಸ್ಯ - ಆ ವಿಶ್ವಾಮಿತ್ರನು, ರೋಷಪರೀತಸ್ಯ - ಕೋಪಿಷ್ಠನಾಗಲು, ಕೃತ್ಸ್ನಾ-ಸಮಸ್ತವಾದ, ವಸುಧಾ-ಭೂಮಿಯು, ಚಚಾಲ- ನಡುಗಿತು, ಸುರಾನ್ - ದೇವತೆಗಳನ್ನು, ಭಯಂ - ಭಯವು, ವಿವೇಶಚ - ಪ್ರವೇಶಿಸಿತು, ॥ ೪ ॥

---

ಸ್ನೇಹದಿಂದ ವ್ಯಾಕುಲವಾದ ನುಡಿಗಳುಳ್ಳ ಆ ದಶರಥರಾಜನ ಮಾತನ್ನು ಕೇಳಿ ವಿಶ್ವಾಮಿತ್ರಮುನಿಯು ಅತಿಯಾದ ಕೋಪವುಳ್ಳವನಾಗಿ, ಆ ನರನಾಥನನ್ನು, ಕುರಿತಿಂತೆಂದನು. ॥ ೧ ॥ "ಎಲೈ ಅರಸೇ ! ಪೂರ್ವದಲ್ಲಿ ಕಾರ್ಯವನ್ನು ಕುರಿತು ಪ್ರತಿಜ್ಞೆಮಾಡಿ ಈಗ ಅದನ್ನು ಲ್ಲಂಘಿಸಲಿಚ್ಛಿಸುವೆಯಾ ? ಇದು ಈ ರಘುಕುಲಕ್ಕೆ ತಕ್ಕುದಲ್ಲವು ॥೨॥ ಎಲೈ ರಾಜನೇ ! ಇದು ನಿನಿಗೆ ಯೋಗ್ಯವಾಗಿದ್ದರೆ, ನಾನು ಬಂದದಾರಿಯನ್ನು ಹಿಡಿದು ಹೊರಟು ಹೋಗೆವೆನು. ಕಕುಸ್ಥ ವಂಶೋತ್ಪನ್ನನಾದ ನೀನು ಪ್ರತಿಜ್ಞಾಹೀನನಾಗಿ, ಬಾಂಧವರೊಡನೆ ಸುಖವಾಗಿರು" ಎಂದು ವಿಶ್ವಾಮಿತ್ರಮುನಿಯು ರೋಷಾವೇಶವುಳ್ಳವನಾಗಲು, ಭೂಮಿಯು ಕಂಪಿಸತೊಡಗಿತು. ದೇವತೆಗಳೆಲ್ಲರೂ ಹೆದರಿದರು, ॥ ೪ ॥ ಆ ಸಮಯದಲ್ಲಿ ಮಹಾ

ಭಯಂಸುರಾಃ||೪|| ತ್ರಸ್ತರೂಪಂತು ವಿಜ್ಞಾಯ ಜಗತ್ಸರ್ವಂ ಮಹಾನೃಷಿಃ|
ನೃಪತಿಂ ಸುವ್ರತೋಧೀರೋ ವಸಿಷ್ಠೋ ವಾಕ್ಯಮಬ್ರವೀತ್ ||೫|| ಇಕ್ಷ್ವಾ
ಕೂಣಾಂ ಕುಲೇಜಾತೋ ಸಾಕ್ಷಾದ್ಧರ್ಮ ಇವಾಪರಃ । ಧೃತಿಮಾನ್ ಸುವ್ರತ
ಶ್ರೀಮಾ ನ್ನಧರ್ಮಂಹಾತುಮರ್ಹಸಿ ||೬|| ತ್ರಿಷು ಲೋಕೇಷು ವಿಖ್ಯಾತೋ
ಧರ್ಮಾತ್ಮಾ ಚೇತಿರಾಘವ| ಸ್ವಧರ್ಮಂ ಪ್ರತಿಪದ್ಯಸ್ವ ನಾಧರ್ಮಂ ವೋಢು
ಮರ್ಹಸಿ ||೭|| ಸಂಶ್ರುತ್ಯೈವಂ ಕರಿಷ್ಯಾಮೀ ತ್ಯಕುರ್ವಾಣಸ್ಯ ರಾಘವ ।

ಸುವ್ರತಃ - ಮಹಾ ನಿಯಮವುಳ್ಳ, ಧೀರಃ - ಮಹಾ ಜ್ಞಾನಿಯಾದ, ಮಹಾನ್‌ಋಷಿಃ - ಮಹಾಋಷಿಯಾದ, ವಸಿಷ್ಠಃ - ವಸಿಷ್ಠ ಋಷಿಯು, ಸರ್ವಂಜಗತ್ - ಸರ್ವಲೋಕವನ್ನು, ತ್ರಸ್ತರೂಪಂ-ಭಯಗೊಂಡುದನ್ನಾಗಿ, ವಿಜ್ಞಾಯ - ಅರಿತು, ನೃಪತಿಂ - ರಾಜನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ||೫|| ಇಕ್ಷ್ವಾಕೂಣಾಂ - ಇಕ್ಷ್ವಾಕು ವಂಶಸ್ಥರ, ಕುಲೇ-ವಂಶದಲ್ಲಿ, ಜಾತಃ - ಹುಟ್ಟಿ, ಸಾಕ್ಷಾತ್ - ಪ್ರತ್ಯಕ್ಷವಾಗಿ, ಅಪರಃ-ಮತ್ತೊಂದಾದ, ಧರ್ಮಇವ ಧರ್ಮದಂತಿರುವ, ತ್ವಂ - ನೀನು, ಧೃತಿಮಾನ್ - ಧೈರ್ಯವಂತನು, ಸುವ್ರತಃ - ನಿಷ್ಠಾಪರನು, ಶ್ರೀಮಾನ್-ಐಶ್ವರ್ಯವಂತನು ಧರ್ಮಂ - ಧರ್ಮವನ್ನು, ಹಾತುಂ - ಬಿಡಲು, ನಾರ್ಹಸಿ - ಅರ್ಹನಾಗಬೇಡ, ||೬|| ಹೇ ರಾಘವ - ಎಲೈ ರಘುಕುಲೋತ್ಪನ್ನನ, ಧರ್ಮಾತ್ಮೇತಿ- ಧರ್ಮಿಷ್ಠನೆಂದು, ತ್ರಿಷುಲೋಕೇಷು-ಮೂರು ಲೋಕಗಳಲ್ಲಿಯೂ, ವಿಖ್ಯಾತಃ - ಪ್ರಖ್ಯಾತನಾದ ನೀನು, ಸ್ವಧರ್ಮಂ-ಸ್ವಕೀಯವಾದ ಧರ್ಮವನ್ನು, ಪ್ರತಿಪದ್ಯಸ್ವ - ಹೊಂದು, ಅಧರ್ಮಂ - ಧರ್ಮಹಾನಿಯನ್ನು, ವೋಢುಂ ವಹಿಸಲು, ನಾರ್ಹಸಿ- ಅರ್ಹನಾಗಬೇಡ, ||೭|| ಹೇರಾಘವ - ಎಲೈ ದಶರಥನ, ಏವಂ - ಈ ಪರಿಯಾಗಿ, ಕರಿಷ್ಯಾಮೀತಿ- ಮಾಡುತ್ತೇನೆಂದು, ಸಂಶ್ರುತ್ಯ - ಪ್ರತಿಜ್ಞೆಮಾಡಿ, ಪಶ್ಚಾತ್ - ಬಳಿಕ, ಅಕುರ್ವಾಣಸ್ಯ - ಮಾಡದಿರುವ

ಜ್ಞಾನಿಯಾದ ವಸಿಷ್ಠಋಷಿಯು, ಲೋಕಗಳಿಗೆಲ್ಲಾ ಮಹಾಭಯವುಂಟಾಯಿತೆಂದರಿತು ರಾಜನನ್ನು ಕುರಿತು, ||೫|| "ಎಲೈ ದಶರಥನೇ ! ಇಕ್ಷ್ವಾಕು ವಂಶದಲ್ಲಿ ಹುಟ್ಟಿ ಸಾಕ್ಷಾದ್ಧರ್ಮರೂಪವಾಗಿಯೇ ಇರುವೆಯಲ್ಲದೆ, ಧೈರ್ಯಸಂಪನ್ನನಾಗಿಯೂ, ಮಹಾ ನಿಯಮವುಳ್ಳವನಾಗಿಯೂ, ಮಹದೈಶ್ವರ್ಯಸಂಪನ್ನನಾಗಿಯೂ, ಇರುವೆಯಲ್ಲವೆ? ಆದುದರಿಂದ ಧರ್ಮವನ್ನು ಬಿಡಬೇಡ; ||೬|| ಎಲೈ ರಘುವಂಶೋತ್ಪನ್ನನಾದವನೇ ! ಲೋಕತ್ರಯದಲ್ಲಿಯೂ, ಧರ್ಮಿಷ್ಠನೆಂದು ಮಹಾಖ್ಯಾತಿಯನ್ನು ಪಡೆದಿರುವ ನೀನು, ಧರ್ಮವನ್ನೇ ಆಶ್ರಯಿಸುವವನಾಗು, ಅಧರ್ಮವನ್ನು ವಹಿಸಬೇಡ. ||೭|| ಎಲೈ ರಾಜನೇ ! ಕಾರ್ಯವನ್ನು ಮಾಡಿ ಕೊಡುವೆನೆಂದು ಶಪಥಮಂಗೈದು ನೆರವೇರಿಸಿದಿರುವ ಪುರುಷನಿಗೆ ಇಷ್ಟಾ(೧)ಪೂರ್ತವಧೆಯು ಸಂಭವಿಸುವದು. ಆದಕಾರಣ ರಾಮನನ್ನು ಕಳುಹಿಸಿಕೊಡು

ಟೀ|| [೧] ಇಷ್ಟವಂದರೆ, ಅಶ್ವಮೇಧಾದಿ ಕ್ರತುಗಳು. ಪೂರ್ತವಂದರೆ, ಶ್ಲೋ|| ವಾಪೀಕೂಪತಟಾಕಾದಿಪ್ರತಿಷ್ಠಾ ಸೇತುಬಂಧನಂ । ಅನ್ನಪ್ರಧಾನಮಾರಾಮಃ ಪೂರ್ತಮಿತ್ಯಭಿಧೀಯತೇ ಎಂದರೆ ವಾಪೀಕೂಪತಟಾಕಾದಿ ಪ್ರತಿಷ್ಠೆಯು ಸೇತುಬಂಧನೆಯು, ಅನ್ನಪ್ರಧಾನವು, ವನಪ್ರತಿಷ್ಠೆಯು, ಇವುಗಳಿಗೆ ಪೂರ್ತವಂದು ಹೆಸರು.]

ಇಷ್ಟಾಪೂರ್ತ ವಧೋಭೂಯಾತ್ತಸ್ಮಾದ್ರಾಮಂ ವಿಸರ್ಜಯ ||೮|| ಕೃತಾಸ್ತ್ರಮಕೃತಾಸ್ತ್ರಂವಾ ನೈನಂಶಕ್ಷ್ಯಂತಿ ರಾಕ್ಷಸಾಃ | ಗುಪ್ತಂಕುಶಿಕ ಪುತ್ರೇಣ ಜ್ವಲನೇನಾಮೃತಂಯಥಾ ||೯|| ಏಷವಿಗ್ರಹವಾನ್ ಧರ್ಮ ಏಷವೀರ್ಯವತಾಂ ವರಃ | ಏಷಬುದ್ಧ್ಯಾಧಿಕೋ ಲೋಕೇ ತಪಸಶ್ಚ ಪರಾಯಣಂ ||೧೦|| ಏಷೋಸ್ತ್ರಾನ್ ವಿವಿಧಾನ್ ವೇತ್ತಿ ತ್ರೈಲೋಕ್ಯೇ ಸಚರಾಚರೇ | ನೈನಮನ್ಯಃಪುಮಾನ್ ವೇತ್ತಿ ನಚವೇತ್ಸ್ಯಂತಿಕೇಚನ ||೧೧|| ನದೇವಾನರ್ಷಯಃ ನಾಸುರಾ ನಚ

ವನಿಗೆ, (ಮ) ಇಷ್ಟಾಪೂರ್ತವಧಃ - ಇಷ್ಟ-ಅಶ್ವಮೇಧಾದಿಕ್ರತುಗಳ, ಪೂರ್ತ - ವಾಪೀಕೂಪತಟಾಕ ನಿರ್ಮಾಣಾದಿ ರೂಪವಾದ ಕರ್ಮದ, ವಧಃ- ನಾಶನವು, ಭೂಯಾತ್ - ಆದೀತು, ತಸ್ಮಾತ್- ಆದಕಾರಣ, ರಾಮಂ - ಶ್ರೀರಾಮನನ್ನು, ವಿಸರ್ಜಯ - ಕಳುಹಿಸಿಕೊಡು || ೮ || ಕೃತಾಸ್ತ್ರಂ-ಶಿಕ್ಷಿತವಾದ ಅಸ್ತ್ರವಿದ್ಯೆಯುಳ್ಳವನನ್ನೇ ಆಗಲಿ, ಅಕೃತಾಸ್ತ್ರಂವಾ - ಅನಭ್ಯಸ್ತ ಶಸ್ತ್ರ ವಿದ್ಯೆಯುಳ್ಳವನನ್ನೇ ಆಗಲಿ, ಕುಶಿಕಪುತ್ರೇಣ- ವಿಶ್ವಾಮಿತ್ರನಿಂದ, ಗುಪ್ತಂ- ಸಂರಕ್ಷಿತನಾದ, ಏನಂ- ಈ ಶ್ರೀರಾಮನನ್ನು, ಜ್ವಲನೇನ - ಅಗ್ನಿಚಕ್ರದಿಂದ, ಅಮೃತಂಯಥಾ - ಅಮೃತವನ್ನಂತೆ, ಧರ್ಷಯಿತುಂ-ತಿರಸ್ಕರಿಸುವದಕ್ಕೆ, ರಾಕ್ಷಸಾ - ರಕ್ಕಸರು, ನಶಕ್ಷ್ಯಂತಿ - ಸಮರ್ಥರಾಗಲಾರರು || ೯ || ಏಷಃ - ಈ ವಿಶ್ವಾಮಿತ್ರನು, ವಿಗ್ರಹವಾನ್ - ಶರೀರ ಧಾರಿಯಾದ, ಧರ್ಮಃ- ಧರ್ಮಸ್ವರೂಪನು, ಏಷಃ - ಈತನು, ವೀರ್ಯವತಾಂ - ಪರಾಕ್ರಮಶಾಲಿಗಳಲ್ಲಿ, ವರಃ - ಶ್ರೇಷ್ಠನು, ಏಷಃ - ಈತನು, ಬುಧ್ಯಾ-ಬುದ್ಧಿಯಿಂದ, ಲೋಕೇ - ಲೋಕದಲ್ಲಿ, ಅಧಿಕಃ - ಹೆಚ್ಚಾದವನು, ಏಷಃ - ಈತನು, ತಪಸಶ್ಚ-ತಪಸ್ಸಿಗೂ ಪರಾಯಣಂ - ಪರಮಸ್ಥಾನವು. || ೧೦ || ಏಷಃ - ಈತನು, ಸಚರಾಚರೇ- ಸ್ಥಾವರ ಜಂಗಮಗಳಿಂದೊಡಗೂಡಿದ, ತ್ರೈಲೋಕ್ಯೇ-ಲೋಕತ್ರಯದಲ್ಲಿ, ವಿವಿಧಾನ್-ನಾನಾಬಗೆಗಳ ದ, ಅಸ್ತ್ರಾನ್ ಅಸ್ತ್ರಗಳನ್ನು, ವೇತ್ತಿ - ತಿಳಿದಿರುವನು ಏನಂ - ಈ ವಿಶ್ವಾಮಿತ್ರನನ್ನು, (ತಿ) ಈ ಅಸ್ತ್ರ ಸಮೂಹವನ್ನು, ಅನ್ಯಃಪುಮಾನ್- ಮತ್ತೊಬ್ಬ ಪುರುಷನು, ನವೇತ್ತಿ - ತಿಳಿವುದಿಲ್ಲ. ಕೇಚನ - ಯಾರೂ ಕೂಡ, ನವೇತ್ಸ್ಯಂತಿಚ - ತಿಳಿಯಲಾರರು || ೧೧ || ದೇವಾಃ - ದೇವತೆಗಳು, ನವೇತ್ಸ್ಯಂತಿ - ತಿಳಿದವರಲ್ಲ,

|| ೮ || ಈ ಶ್ರೀರಾಮನು ಅಸ್ತ್ರಶಿಕ್ಷೆಯುಳ್ಳವನಾದರೂ ಸರಿಯೆ, ಇಲ್ಲದವನಾದರೂ ಸರಿಯೆ, ಹೇಗಾದರೂ ವಿಶ್ವಾಮಿತ್ರಮುನಿಯಿಂದ ರಕ್ಷಿತನಾಗಿದ್ದರೆ, ಆ ರಾಕ್ಷಸರು ಅಗ್ನಿಚಕ್ರದಿಂದ ಸುತ್ತುವರೆಯಲ್ಪಟ್ಟ ಅಮೃತದಂತೆ ಈತನನ್ನು ಏನೂ ಮಾಡಲಾರರು. || ೯ || ನೀನೀತನ ಮಹಾತ್ಮ್ಯವನ್ನು ತಿಳಿದವನಲ್ಲವು ಈ ಮುನಿಯಾದರೊ ದೇಹಧಾರಿಯಾದ ಧರ್ಮಸ್ವರೂಪನಾಗಿರುವನು, ಪರಾಕ್ರಮಿಗಳಲ್ಲಿ ಉತ್ತಮನಾದವನು. ಈಲೋಕದಲ್ಲಿ ಈತನಂತಹ ಮತಿವಂತನಾರೂ ಇಲ್ಲವು, ಈತನು ಧರ್ಮಕ್ಕೆ ಸ್ಥಾನಭೂತನಾದವನು. ಇದಲ್ಲದೆ ಈ ಕೌಶಿಕನು ಚರಾಚರಾತ್ಮಕವಾದ ಈ ಲೋಕತ್ರಯದಲ್ಲಿ ವಿಧವಿಧವಾಗಿರುವ ಅಸ್ತ್ರಗಳನ್ನೆಲ್ಲಾ ತಿಳಿದಿರುವನು. ಈ ಅಸ್ತ್ರಜಾಲವನ್ನು ಮತ್ತೊಬ್ಬ ಪುರುಷನು ತಿಳಿದಿಲ್ಲವು. || ೧೧ || ಈ ವಿಶ್ವಾಮಿತ್ರಮುನಿಯು ರಾಜ್ಯಭಾರವನ್ನು ಮಾಡುತ್ತಿರುವ ಸಮಯದಲ್ಲಿ, ಮಹಾಧರ್ಮವಂತರಾದ ಭೃಶಾಶ್ವಪುತ್ರ ರೂಪವಾದ ಈ ಅಸ್ತ್ರಗಳು ಈತ

ರಾಕ್ಷಸಾಃ । ಗಂಧರ್ವ ಯಕ್ಷಪ್ರವರಾ ಸ್ಸಕಿನ್ನರ ಮಹೋರಗಾಃ॥ ಸರ್ವಾಸ್ತ್ರಾಣಿ ಭೃಶಾಶ್ವಸ್ಯ ಪುತ್ರಾಃ ಪರಮಧಾರ್ಮಿಕಾಃ । ಕೌಶಿಕಾಯ ಪುರಾದತ್ತಾ ಯದಾ ರಾಜ್ಯಂ ಪ್ರಶಾಸತಿ ॥ ೧೩ ॥ ತೇಪಿಪುತ್ರಾ ಭೃಶಾಶ್ವಸ್ಯ ಪ್ರಜಾಪತಿ ಸುತಾ ಸುತಾಃ । ನೈಕರೂಪಾ ಮಹಾವೀರ್ಯಾ ದೀಪ್ತಿಮಂತೋ ಜಯಾವಹಾಃ ॥೧೪॥ ಜಯಾಚ ಸುಪ್ರಭಾ ಚೈವ ದಕ್ಷಕನ್ಯೇ ಸುಮಧ್ಯಮೇ । ತೇಸುವಾತೇಸ್ತ್ರ ಶಸ್ತ್ರಾಣಿ ಶತಂ ಪರಮಭಾಸ್ವರಂ ॥೧೫॥ ಪಂಚಾಶತಂ ಸುತಾಂಲೇಭೆ ಜಯಾ

ಋಷಯಃ - ಋಷಿಗಳಾದ, ಕೇಚಿತ - ಕೆಲವರು, ನ-ತಿಳಿಯಲಾರರು, ಅಸುರಾಃ - ಅಸುರರೆಂಬ ರಾಕ್ಷಸರು, ನ - ತಿಳಿಯಲಾರರು, ರಾಕ್ಷಸಾಶ್ಚ - ರಾಕ್ಷಸರೂ, ನ - ಅರಿಯರು, ಸಕಿನ್ನರಮಹೋ ರಗಾಃ ಕಿನ್ನರರಿಂದಲೂ, ಸರ್ಪಗಳಿಂದಲೂ, ಒಡಗೂಡಿದ ಗಂಧರ್ವಯಕ್ಷಪ್ರವರಾಃ- ಶ್ರೇಷ್ಠರಾದ ಗಂಧರ್ವರೂ, ಯಕ್ಷರೂ ನವೇತ್ಸ್ಯಂತಿ-ಅರಿತವರಾಗಲಾರರು. ॥ ೧೨ ॥ ಅಯಂ-ಈ ವಿಶ್ವಾಮಿತ್ರನು, ಯದಾ - ಯಾವಾಗ, ರಾಜ್ಯಂ - ರಾಜ್ಯವನ್ನು, ಪ್ರಶಾಸತಿ- ಪರಿಪಾಲನ ಮಾಡುತ್ತಿದ್ದನೂ, ತದಾ- ಆ, ಕೌಶಿಕಾಯ - ವಿಶ್ವಾಮಿತ್ರನಿಗೋಸ್ಕರ, ಪರಮಧಾರ್ಮಿಕಾಃ - ಬಹಳ ಧರ್ಮಿಷ್ಠರಾದ, ಭೃಶಾ ಶ್ವಸ್ಯ-ಭೃಶಾಶ್ವನಿಗೆ, ಪುತ್ರಾಃ - ಪುತ್ರರೂಪವಾದ, ಸರ್ವಾಸ್ತ್ರಾಣಿ-ಸಮಸ್ತಾಸ್ತ್ರಗಳೂ, ಪುರಾ- ಪೂರ್ವ ಕಾಲದಲ್ಲಿ, ದತ್ತಾಃ - ಕೊಡಲ್ಪಟ್ಟವು, (ಪಾ) ಶಿವನಿಂದ ಕೊಡಲ್ಪಟ್ಟವು, ॥೧೩॥ ಭೃಶಾ ಶ್ವಸ್ಯ - ಭೃಶಾಶ್ವನ, ತೇ - ಅಸ್ತ್ರರೂಪರಾದ, ಪುತ್ರಾಃ - ಮಕ್ಕಳು, ಪ್ರಜಾಪತಿಸುತಾಸುತಾಃ, ಪ್ರಜಾಪತಿ - ದಕ್ಷಬ್ರಹ್ಮನ, ಸುತಾ - ಕನ್ಯಕೆಯರ, ಸುತಾಃ - ಮಕ್ಕಳು, ನೈಕರೂಪಾಃ-ಅನೇಕ ಬಗೆ ಯಾಗಿರುವರು, ಮಹಾವೀರ್ಯಾಃ - ಮಹಾಶಕ್ತಿವಂತರು, ದೀಪ್ತಿಮಂತಃ- ಪ್ರಕಾಶವಂತರು, ಜಯಾ ವಹಾಃ - ಜಯವನ್ನು ಕೊಡುವರು ॥ ೧೪ ॥ ಜಯಾಚ - ಜಯೆ, ಸುಪ್ರಭಾಚ-ಸುಪ್ರಭೆ ಎಂಬ ಸುಮಧ್ಯಮೇ- ಒಳ್ಳೆಯ ಮಧ್ಯಪ್ರದೇಶವುಳ್ಳ, ದಕ್ಷಕನ್ಯೇ, ದಕ್ಷ - ದಕ್ಷಬ್ರಹ್ಮನ, ಕನ್ಯೇ - ಇಬ್ಬರು ಹೆಣ್ಣುಮಕ್ಕಳು, ಸ್ತಃ - ಇದ್ದರು. ತೇ - ಅವರಿಬ್ಬರು ಪರಮಭಾಸ್ವರಂ - ಬಹಳವಾಗಿ ಪ್ರಕಾಶಿಸು ತ್ತಿರುವ, ಶತನಂ - ನೂರಾದ, ಅಸ್ತ್ರಶಸ್ತ್ರಾಣಿ - ಅಸ್ತ್ರ ಶಸ್ತ್ರಗಳನ್ನು ಸುವಾತೇ-ಹೆತ್ತರು, ॥೧೫॥ ಜಯಾನಾಮ - ಜಯಾ ಎಂಬ ಹೆಸರುಳ್ಳವಳು, ಅಸುರಸೈನ್ಯಾಂನಾಂ-ರಾಕ್ಷಸರ ಸೈನ್ಯಗಳ, ವಧಾಯ - ಸಂಹಾರಾರ್ಥವಾಗಿ, ಅಮೇಯಾನ್- ಅಪರಿಮಿತಗಳಾದ, ಕಾಮರೂಪಿಣಃ-ಕಾಮರೂಪಿ

ನಿಗೆ ಕೊಡಲ್ಪಟ್ಟವು. ದೇವ, ಋಷಿ, ಅಸುರ, ರಾಕ್ಷಸ ಗಂಧರ್ವ, ಯಕ್ಷನಾಗಗಳೇ ಮೊದಲಾದವರೂ ಸಹ ಇವುಗಳನ್ನರಿತವರಲ್ಲವು. ॥ ೧೩ ॥ ಆ ಅಸ್ತ್ರರೂಪಗಳಾದ ಭೃಶಾಶ್ವನ ಪುತ್ರರು, ದಕ್ಷಬ್ರಹ್ಮನ ಕನ್ಯೆಯರಾದ "ಜಯಾ ಪ್ರಭಾ" ಎಂಬೀರ್ವರಿಂದ ಹುಟ್ಟಿದವರಾಗಿಯೂ, ಬಗೆಬಗೆಯಾದ ಆಕಾರಗಳುಳ್ಳವರಾಗಿಯೂ,ಮಹಾಪರಾಕ್ರಮಿಗಳಾ ಗಿಯೂ, ಪ್ರಕಾಶವಂತರಾಗಿಯೂ, ಜಯವನ್ನುಂಟುಮಾಡುತ್ತಿರುವವರಾಗಿಯೂ ಇರುವರು. ಪೂರ್ವಕಾಲದಲ್ಲಿ ಒಳ್ಳೆಯ ಕಟಿಪ್ರದೇಶವುಳ್ಳ "ಜಯಾ, ಸುಪ್ರಭಾ" ಎಂಬ ದಕ್ಷಕನ್ಯೆಯ ರೀರ್ವರಿದ್ದರು. ಅವರು ಬಹುಪ್ರಕಾಶವಾಗಿರುವ ನೂರು ಅಸ್ತ್ರ ಶಸ್ತ್ರಗಳನ್ನು ಹೆತ್ತವ ರಾದರು. ಜಯೆ ಎಂಬ ಬಾಲಿಕಾಮಣಿಯು. ಅಸುರನಾಶಕ್ಕೋಸುಗ ಅಸದೃಶರಾಗಿಯೂ

ನಾಮ ಪರಾನ್ಪುರಾ। ವಧಾಯಾಸುರಸೈನ್ಯಾನಾ ಮಮೇಯಾನ್ ಕಾಮರೂಪಿಣಃ॥೧೬
ಸುಪ್ರಭಾ ಜನಯಚ್ಚಾಪಿ ಪುತ್ರಾನ್ ಪಂಚಾಶತಂ ಪುನಃ । ಸಂಹಾರಾನ್ನಾಮ
ದುರ್ಧರ್ಷಾನ್ ದುರಾಕ್ರಾಮಾನ್ ಬಲೀಯಸಃ ॥ ೧೭ ॥ ತಾನಿಚಾಸ್ತ್ರಾಣಿ
ವೇತ್ತ್ಯೇಷ ಯಥಾವತ್ಕುಶಿಕಾತ್ಮಜಃ । ಅಪೂರ್ವಾಣಾಂಚ ಜನನೇ ಶಕ್ತೋ
ಭೂಯಸ್ಸಧರ್ಮವಿತ್ ॥ ೧೮ ॥ ಏವಂವೀರ್ಯೋ ಮಹಾತೇಜಾ ವಿಶ್ವಾಮಿತ್ರೋ
ಮಹಾಯಶಾಃ । ನರಾಮ ಗಮನೇ ರಾಜನ್ ಸಂಶಯಂ ಕರ್ತುಮರ್ಹಸಿ ॥

ಗಳಾದ, ಪರಾನ್ - ಶ್ರೇಷ್ಠರಾದ, ಪಂಚಾಶತಂ - ಐವತ್ತು ಸಂಖ್ಯೆಯುಳ್ಳ, ಸುತಾನ್-ಮಕ್ಕಳನ್ನು, ಪುರಾ - ಪೂರ್ವದಲ್ಲಿಯೇ, ಲೇಭೇ = ಪಡೆದಳು, ॥ ೧೬ ॥ ಸುಪ್ರಭಾಚ-ಸುಪ್ರಭೆಯೆಂಬುವಳು, ಬಲೀಯಸಃ - ಬಲಿಷ್ಠರಾದ, ಪರಾಕ್ರಮಾನ್ - ಆಕ್ರಮಿಸಲಸಾಧ್ಯರಾದ, ದುರ್ಧರ್ಷಾನ್- ತಿರಸ್ಕರಿಸಲಶಕ್ಯರಾದ, ಸಂಹಾರಾನ್ನಾಮ - ಸಂಹಾರರೆಂದು ಪ್ರಸಿದ್ಧರಾದ, ಪಂಚಾಶತಂ - ಐವತ್ತು ಸಂಖ್ಯೆಯುಳ್ಳ, ಪುತ್ರಾನಪಿಪುನಃ - ಮಕ್ಕಳನ್ನು ಮರಳಿ, ಅಜನಯತ್ - ಹಡೆದಳು ॥ ೧೭ ॥ ಏಷಃ ಕುಶಿಕಾತ್ಮಜಃ - ಈ ವಿಶ್ವಾಮಿತ್ರನು, ತಾನ್ಯಸ್ತ್ರಾಣಿ- ಆ ಅಸ್ತ್ರಗಳನ್ನೂ, ಯಥಾವತ್ - ಯಥಾಶಾಸ್ತ್ರವಾಗಿ, ವೇತ್ತಿ - ತಿಳಿದಿರುವನು, ಭೂಯಃ - ಮತ್ತು, ಧರ್ಮವಿತ್ - ಧರ್ಮವನ್ನರಿತ, ಸಃ ಆ ವಿಶ್ವಾಮಿತ್ರನು, ಅಪೂರ್ವಾಣಾಂಚ - ಪೂರ್ವದಲ್ಲಿಲ್ಲದ ಅಸ್ತ್ರಗಳ, ಜನನೇ - ನಿರ್ಮಾಣದಲ್ಲಿಯು, ಶಕ್ತಃ - ಸಮರ್ಥನು, ॥ ೧೮ ॥ ಹೇರಾಜನ್ - ಎಲೈರಾಜನೆ, ಏವಂ - ಇಂತಹ, ವೀರ್ಯಃ-ಸಾಮರ್ಥ್ಯವುಳ್ಳ, ಮಹಾತೇಜಾಃ - ಮಹಾ ಬ್ರಹ್ಮತೇಜಸ್ವಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಮಹಾಯಶಾಃ - ಮಹಾಕೀರ್ತಿವಂತನು, ರಾಮಗಮನೇ - ಶ್ರೀರಾಮನ ಪ್ರಯಾಣದಲ್ಲಿ, ಸಂಶಯಂ- ಸಂಶಯವನ್ನು, ಕರ್ತುಂ - ಮಾಡಲು, ನಾರ್ಹಸಿ - ಯೋಗ್ಯನಾಗಬೇಡ, ಕುಶಿಕಾತ್ಮಜಃ - ವಿಶ್ವಾಮಿತ್ರನು, ಸ್ವಯಂ - ತಾನೇ, ತೇಷಾಂ - ಆ ರಾಕ್ಷಸರ, ನಿಗ್ರಹಣೇ - ನಿಗ್ರಹದಲ್ಲಿ, ಶಕ್ತಃ - ಸಮರ್ಥನು, ತವ - ನಿನ್ನ, ಪುತ್ರಹಿತಾರ್ಥಾಯ, ಪುತ್ರ-ಮಗನಾದ ಶ್ರೀರಾಮನಿಗೆ, ಹಿತಾರ್ಥಾಯ- ಶ್ರೇಯೋಲಾಭಕ್ಕೋಸ್ಕರ, ತ್ವಾಂ - ನಿನ್ನನ್ನು ಕುರಿತು, ಉಪೇತ್ಯ-ಬಂದು, ಅಭಿಯಾಚತೇ - ಬೇಡುತ್ತಾನೆ

ಕಾಮರೂಪವುಳ್ಳವರಾಗಿಯೂ, ಇರುವ ಉತ್ತಮರಾದ ಐವತ್ತು ಮಕ್ಕಳನ್ನು ಪಡೆಯಲು ಸುಪ್ರಭೆಯಂಬಾಕೆಯು ತಿರಸ್ಕರಿಸಲಸಾಧ್ಯರಾದವರೂ ಆಕ್ರಮಿಸಲಶಕ್ಯರೂ ಮಹಾಬಲಳ್ಳವರೂ ಆದ ಸಂಹಾರಗಳೆಂಬ ಐವತ್ತು ಮಕ್ಕಳನ್ನು ಪಡದಳು, ಈ ಕುಶಿಕಕಂದನನಾದ ವಿಶ್ವಾಮಿತ್ರನು ಯಥಾಶಾಸ್ತ್ರವಾಗಿ ಆ ಅಸ್ತ್ರಶಸ್ತ್ರಗಳನ್ನರಿತಿರುವನು ; ಇದಲ್ಲದೆ ಈತನು ಪೂರ್ವದಲ್ಲಿಲ್ಲದಿರುವ ಅಸ್ತ್ರಗಳನ್ನು ನಿರ್ಮಿಸಲು, ಶಕ್ತಿಯುಳ್ಳವನಾಗಿರುವನು. ॥ ೧೮ ॥ ಎಲೈ ರಾಜನೇ ! ಮಹಾತೇಜಸ್ವಿಯಾಗಿಯೂ ಮಹಾಯಶಸ್ವಿಯಾಗಿಯೂ, ಇರುವ ವಿಶ್ವಾಮಿತ್ರಮುನಿಯು ಇಂತಹ ಪರಾಕ್ರಮವುಳ್ಳವನು ; ಶ್ರೀರಾಮನನ್ನು ಕಳುಹುವದರಲ್ಲಿ ಸಂದೇಹವನ್ನು ಬಿಡು. ಈ ಕುಶಿಕಪುತ್ರನು ಆರಕ್ಕಸರನ್ನು ನಿಗ್ರಹಿಸುವದಕ್ಕೆ, ಸ್ವಯಮೇವ ಶಕ್ತಿಯುಳ್ಳವನಾದರೂ, ನಿನ್ನ ಕುವರನ ಅಭಿವೃದ್ಧಿಗೋಸ್ಕರ, ನಿನ್ನನ್ನು ಪ್ರಾರ್ಥಿಸುವನು" ಇಂತು ನುಡಿದ ವಸಿಷ್ಠಮಹಾಮುನಿಯು

ತೇಷಾಂನಿಗ್ರಹಣೇ ಶಕ್ತ ಸ್ಸ್ವಯಂಚ ಕುಶಿಕಾತ್ಮಜಃ । ತವಪುತ್ರಹಿತಾರ್ಥಾಯ ತ್ವಾಮುಪೇತ್ಯಾಭಿಯಾಚತೇ ||೨೦|| ಇತಿ ಮುನಿವಚನಾ ತ್ಪ್ರಸನ್ನಚಿತ್ತೋರಘು ವೃಷಭಸ್ತುಮುಮೋದ ಭಾಸ್ವರಾಂಗಃ । ಗಮನಮಭಿರುರೋಚ ರಾಘವಸ್ಯ ಪ್ರಥಿತಯಶಾಃ ಕುಶಿಕಾತ್ಮಜಾಯಬುದ್ಧ್ಯಾ || ೨೧ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕವಿಂಶಸ್ಸರ್ಗಃ.



---

|| ೨೧ || ಪ್ರಥಿತಯಶಾಃ, ಪ್ರಥಿತ - ಪ್ರಖ್ಯಾತವಾದ, ಯಶಾಃ - ಕೀರ್ತಿಯುಳ್ಳ ರಘುವೃಷಭಸ್ತು - ರಘುವಂಶದಲ್ಲಿ ಶ್ರೇಷ್ಠನಾದ ದಶರಥರಾಯನು, ಇತಿ - ಹೀಗೆ, ಮುನಿವಚನಾತ್ - ವಸಿಷ್ಠರ ವಚನದಿಂದ, ಪ್ರಸನ್ನಚಿತ್ತಃ-ವ್ಯಸನವಿಲ್ಲದ ಮನಸ್ಸುಳ್ಳವನಾಗಿ, ಭಾಸ್ವರಾಂಗಃ, ಭಾಸ್ವರ - ತೇಜಸ್ವಿಯಾದ, ಅಂಗ - ಶರೀರವುಳ್ಳವನಾಗಿ, ಮುಮೋದ ಸಂತೋಷಿಸಿದನು, ಕುಶಿಕಾತ್ಮಜಾಯ-ವಿಶ್ವಾಮಿತ್ರನಿಗೆ, ರಾಘವಸ್ಯ - ಶ್ರೀರಾಮನ, ಗಮನಂ - ಪ್ರಯಾಣವನ್ನು, ಬುದ್ಧ್ಯಾ-ಮನಸ್ಸಿನಿಂದ, ಅಭಿರುರೋಚ - ಸಮ್ಮತಿಸಿದನು ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕವಿಂಶಸ್ಸರ್ಗಃ.

---

ಮಾತುಗಳನ್ನು ಕೇಳಿ ಮಹಾ ಪ್ರಸಿದ್ಧವಾದ ಕೀರ್ತಿಯುಳ್ಳ ದಶರಥನು ವ್ಯಸನವಿಲ್ಲದ ಮನಸ್ಸುಳ್ಳವನಾಗಿಯೂ, ಹೊಳೆಯುತ್ತಿರುವ ದೇಹಕಾಂತಿಯುಳ್ಳವನಾಗಿಯೂ ಆಗಿ ಸಂತೋಷಿಸಿ ವಿಶ್ವಾಮಿತ್ರನಿಗೋಸ್ಕರ ಶ್ರೀರಾಮನನ್ನು ಕಳುಹಿಸಬೇಕೆಂದು ಯೋಚಿಸಿದನು. ||೨೧||

ಇಂತಿದು ವಸಿಷ್ಠಕೃತ ರಾಮಪ್ರೇಷಣ ಪ್ರೇರಣ ವೃತ್ತಾಂತವೆಂಬ ಇಪ್ಪತ್ತೊಂದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದ್ವಾವಿಂಶಸ್ಸರ್ಗಃ.



ತಥಾ ವಸಿಷ್ಠೇಬ್ರುವತಿ ರಾಜಾದಶರಥ ಸ್ಸುತಂ । ಪ್ರಹೃಷ್ಟವದನೋರಾಮ ಮಾಜುಹಾವ ಸಲಕ್ಷ್ಮಣಂ ॥ ೧ ॥ ಕೃತಸ್ವಸ್ತ್ಯಯನಂ ಮಾತ್ರಾ ರಾಜಾ ದಶ ರಥೇನಚ । ಪುರೋಧಸಾ ವಸಿಷ್ಠೇನ ಮಂಗಳೈ ರಭಿಮಂತ್ರಿತಮ್ ॥ ಸಪುತ್ರಂ ಮೂರ್ಧ್ನ್ಯುಪಾಘ್ರಾಯ ರಾಜಾ"ದಶರಥಃ ಪ್ರಿಯಂ । ದದೌ ಕುಶಿಕಪುತ್ರಾಯ ಸುಪ್ರೀತೇನಾಂತರಾತ್ಮನಾ ॥ ೩ ॥ ತತೋವಾಯುಸ್ಸುಖಸ್ಪರ್ಶೋ ನೀರ ಜಸ್ಕೋವವೌತದಾ। ವಿಶ್ವಾಮಿತ್ರಗತಂದೃಷ್ಟ್ವಾ ರಾಮಂರಾಜೀವಲೋಚನಂ॥

---

ವಸಿಷ್ಠೇ - ವಸಿಷ್ಠ ಋಷಿಯು, ತಥಾ - ಆ ಪರಿಯಾಗಿ, ಬ್ರುವತಿಸತಿ- ಹೇಳಲು, ರಾಜಾ- ಅರಸಾದ, ದಶರಥಃ - ದಶರಥನು, ಪ್ರಹೃಷ್ಟವದನಃ - ಪ್ರಸನ್ನ ಮುಖವುಳ್ಳವನಾಗಿ, ಸುತಂ ಕುಮಾ ರನಾದ, ಸಲಕ್ಷ್ಮಣಂ - ಲಕ್ಷ್ಮಣನೊಡಗೂಡಿದ, ರಾಮಂ - ಶ್ರೀರಾಮನನ್ನು ಆಜುಹಾವ- ಕರೆದನು. ॥ ೧ ॥ ಮಾತ್ರಾ - ತಾಯಿಯಾದ, ಕೌಸಲ್ಯಾ ದೇವಿಯಿಂದ, ಪಿತ್ರಾ - ತಂದೆಯಾದ, ದಶರಥೇನಚ - ದಶರಥನಿಂದಲೂ ಕೃತಸ್ವಸ್ತ್ಯಯನಂ - ಮಾಡಲ್ಪಟ್ಟ ಆಶೀರ್ವಚನಗಳುಳ್ಳ, ಪುರೋ ಧಸಾ - ಪುರೋಹಿತನಾದ, ವಸಿಷ್ಠೇನ ವಸಿಷ್ಠಋಷಿಯಿಂದ, ಮಂಗಳೈಃ - ಮಂಗಳಾಶಾಸನಗಳಿಂದ, ಅಭಿಮಂತ್ರಿತಂ - ಮಂತ್ರಿಸಲ್ಪಟ್ಟ ಪ್ರಿಯಂ - ಇಷ್ಟನಾದ, ಪುತ್ರಂ- ಮಗನನ್ನು, ರಾಜಾ-ಅರಸಾದ, ದಶರಥಃ - ದಶರಥ ರಾಯನು, ಮೂರ್ಧ್ನಿ - ಶಿರಸ್ಸಿನಲ್ಲಿ, ಉಪಾಘ್ರಾಯ - ಆಘ್ರಾಣಿಸಿ, ಸುಪ್ರೀ ತೇನ - ಸಂತೋಷಗೊಂಡ, ಅಂತರಾತ್ಮನಾ - ಅಂತಃಕರಣದಿಂದ, ಕುಶಿಕಪುತ್ರಾಯ- ವಿಶ್ವಾಮಿತ್ರನಿ ಗೋಸ್ಕರ, ದದೌ - ಕೊಟ್ಟನು, ॥೩॥ ತತಃ- ಪುತ್ರಸಮರ್ಪಣಾನಂತರದಲ್ಲಿ, ವಿಶ್ವಾಮಿತ್ರಗತಂ- ವಿಶ್ವಾಮಿತ್ರನನ್ನು ಹೊಂದಿದ, ರಾಜೀವಲೋಚನಂ- ಕಮಲಗಳ ದಳಗಳಂತೆ ನೇತ್ರಗಳುಳ್ಳ, ರಾಮಂ- ಶ್ರೀರಾಮನನ್ನು, ದೃಷ್ಟ್ವಾ- ಕಂಡು, ತದಾ- ಆ ಕಾಲದಲ್ಲಿ, ಸುಖಸ್ಪರ್ಶಃ - ಸುಖಕರವಾದ ಸ್ಪರ್ಶ ವುಳ್ಳ, ನೀರಜಸ್ಕಃ - ಕೆಂಧೂಳಿಯಿಲ್ಲದಿರುವ, ವಾಯುಃ - ಮಂದಮಾರುತವು, ವವೌ- ಬೀಸಿತು. ॥೪॥

---

ವಸಿಷ್ಠಮುನಿಯು ಈ ರೀತಿ ಹೇಳಲು ದಶರಥರಾಯನು ಸಂತುಷ್ಟಸ್ವಾಂತವು ಳ್ಳವನಾಗಿ, ಲಕ್ಷ್ಮಣಸಹಿತನಾಗಿರುವ ಶ್ರೀರಾಮನನ್ನು ಕರೆದನು. ॥ ೧ ॥ ತಾಯಿಯಾದ ಕೌಸಲ್ಯಾದೇವಿಯಿಂದಲೂ, ತಂದೆಯಾದ ದಶರಥನಿಂದಲೂ, ಪುರೋಹಿತನಾದ ವಸಿಷ್ಠ ಮುನಿಯಿಂದಲೂ, ಮಂಗಳಾಶಾಸನಗಳಿಂದ ಮಂತ್ರಿಸಲ್ಪಟ್ಟ ಪ್ರಿಯಪುತ್ರನಾದ ಶ್ರೀರಾ ಮನನ್ನು ದಶರಥರಾಯನು ಶಿರದಲ್ಲಿ ಆಘ್ರಾಣಿಸಿ ಸಂತುಷ್ಟಾಂತರಂಗನಾಗಿ ವಿಶ್ವಾಮಿತ್ರ ಮುನಿಗೆ ಅರ್ಪಿಸಿದನು. ॥ ೩ ॥ ಆ ಬಳಿಕ ವಿಶ್ವಾಮಿತ್ರನನ್ನು ಹೊಂದಿರುವ ಶ್ರೀರಾಮ ನನ್ನು ಕಂಡು ವಾಯುವು ಸುಖ ಸ್ಪರ್ಶದಿಂದ ಕೆಂಧೂಳಿಯಿಲ್ಲದೆ, ಬೀಸುತ್ತಿದ್ದಿತು ॥೪॥

ಪುಷ್ಪವೃಷ್ಟಿರ್ಮಹತ್ಯಾಸೀ ದ್ದೇವದುಂದುಭಿ ನಿಸ್ಸ್ವನೈಃ ॥ ಶಂಖದುಂದುಭಿ ನಿರ್ಘೋಷಃ ಪ್ರಯಾತೇತುಮಹಾತ್ಮನಿ ॥೫॥ ವಿಶ್ವಾಮಿತ್ರೋ ಯಯಾವಗ್ರೇ ತತೋ ರಾಮೋ ಧನುರ್ಧರಃ ॥ ಕಾಕಪಕ್ಷಧರೋ ಧನ್ವೀ ತಂಚ ಸೌಮಿತ್ರಿರನ್ವಗಾತ್ ॥ ೬ ॥ ಕಲಾಪಿನೌ ಧನುಷ್ಪಾಣೀ ಶೋಭಯಾನೌ ದಿಶೋದಶ ॥ ವಿಶ್ವಾಮಿತ್ರಂ ಮಹಾತ್ಮಾನಂ ತ್ರಿಶೀರ್ಷಾ ವಿವಪನ್ನಗೌ ॥ ೭ ॥ ಅನುಜಗ್ಮತುರಕ್ಷುದ್ರೌ ಪಿತಾಮಹ ಮಿವಾಶ್ವಿನೌ ॥ ತದಾಕುಶಿಕ ಪುತ್ರಂತು ಧನುಷ್ಪಾಣೀ ಸ್ವಲಂ

---

ಮಹಾತ್ಮನಿ - ಮಹಾತ್ಮನಾದ ಶ್ರೀರಾಮನು, ಪ್ರಯಾತೇತು- ಪ್ರಯಾಣ ಮಾಡಲು, ಮಹತೀ- ಬಹಳವಾದ, ಪುಷ್ಪವೃಷ್ಟಿಃ- ಪುಷ್ಪವರ್ಷವು, ದೇವದುಂದುಭಿನಿಸ್ಸ್ವನೈಃ, ದೇವ - ದೇವತೆಗಳ, ದುಂದುಭಿ - ನೌಪತ್ತುಗಳ, ನಿಸ್ವನೈಃ - ಧ್ವನಿಗಳಿಂದ ಕೂಡಿದ್ದು, ಆಸೀತ್ - ಆಯಿತು, ಶಂಖದುಂದುಭಿನಿರ್ಘೋಷಃ - ಶಂಖಗಳ ಭೇರೀವಾದ್ಯಗಳ ಧ್ವನಿಯೂ ಕೂಡ, ಆಸೀತ್ - ಆಯಿತು ॥೫॥ ವಿಶ್ವಾಮಿತ್ರಃ - ವಿಶ್ವಾಮಿತ್ರನು, ಅಗ್ರೇ - ಮುಂದುಗಡೆ, ಯಯೌ - ತೆರಳಿದನು, ತತಃ - ಬಳಿಕ, ಧನುರ್ಧರಃ-ಧನುರ್ಧಾರಿಯಾದ, ಕಾಕಪಕ್ಷಧರಃ- ಜುಲ್ಫಾ ಕೂದಲುಗಳನ್ನು ಧರಿಸಿರುವ, ರಾಮಃ- ಶ್ರೀರಾಮನು, ಯಯೌ - ತೆರಳಿದನು, ಧನ್ವೀ - ಧನುರ್ಧಾರಿಯಾದ, ಸೌಮಿತ್ರಿಃ - ಲಕ್ಷ್ಮಣಸ್ವಾಮಿಯು, ತಂಚ - ಆ ಶ್ರೀರಾಮನನ್ನು, ಅನ್ವಗಾತ್ - ಅನುಸರಿಸಿ ನಡೆದನು ॥ ೬ ॥ ಕಲಾಪಿನೌ - ಬತ್ತಳಿಕೆಗಳುಳ್ಳ, ಧನುಷ್ಪಾಣೀ - ಧನುಸ್ಸನ್ನು ಹಿಡಿದ ಕೈಗಳುಳ್ಳ, ದಶದಿಶಃ- ಹತ್ತು ದಿಕ್ಕುಗಳನ್ನೂ, ಶೋಭಯಾನೌ - ಪ್ರಕಾಶಗೊಳಿಸುತ್ತಿರುವ, ಅಕ್ಷುದ್ರೌ- ಮಹಾ ಪರಾಕ್ರಮಿಗಳಾದ, ತೌ - ಆ ರಾಮಲಕ್ಷ್ಮಣರು, ತ್ರಿಶೀರ್ಷಾ - ಮೂರು ತಲೆಗಳುಳ್ಳ, ಪನ್ನಗಾವಿವ - ಸರ್ಪಗಳಂತೆ, ಮಹಾತ್ಮಾನಂ- ಮಹಾ ಮನಸ್ವಿಯಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಅಶ್ವಿನೌ - ಅಶ್ವನೀ ದೇವತೆಗಳು, ಪಿತಾಮಹಮಿವ - ಬ್ರಹ್ಮನನ್ನು ಅನುಸರಿಸುವಂತೆ, ಅನುಜಗ್ಮತುಃ - ಅನುಸರಿಸಿದರು. ॥ ೭ ॥ ತದಾ_ ಆಕಾಲದಲ್ಲಿ, ಧನುಷ್ಪಾಣೀ - ಧನುರ್ಧಾರಿಗಳಾದ, ಸ್ವಲಂಕೃತೌ- ಅಲಂಕೃತರಾದ, ಬದ್ಧಗೋಧಾಂಗುಳಿತ್ರಾಣೌ, ಬದ್ಧ - ಕಟ್ಟಲ್ಪಟ್ಟ, ಗೋಧಾಂಗುಳಿತ್ರಾಣೌ - ಚರ್ಮಮಯವಾದ ಬೆರಳು ಕವಚಗ

---

ಮಹಾತ್ಮನಾದ ಶ್ರೀರಾಮನು ತೆರಳುತ್ತಿರಲು ದೇವದುಂದುಭಿಧ್ವನಿಸಹಿತವಾಗಿ ಮಹತ್ತರವಾದ ಪುಷ್ಪವೃಷ್ಟಿಯು ಸುರಿಯುತ್ತಿದ್ದಿತು. ಶಂಖ ಭೇರೀ ಮುಂತಾದ ವಾದ್ಯಗಳ ಘೋಷವೂ ಧ್ವನಿಗೊಂಡಿತು. ॥ ೫ ॥ ಬಳಿಕ ವಿಶ್ವಾಮಿತ್ರನು ಮುಂದುಗಡೆ ತೆರಳಲು ಶ್ರೀರಾಮನು ಕೋದಂಡ ಪಾಣಿಯಾಗಿಯೂ, ಕಾಕಪಕ್ಷಧರನಾಗಿಯೂ, ಹಿಂದುಗಡೆ ತೆರಳಿದನು. ಆತನನ್ನನುಸರಿಸಿ ಲಕ್ಷ್ಮಣನು ಹೋಗುತ್ತಿದ್ದನು. ॥ ೬ ॥ ಸರಳು ಬತ್ತಳಿಕೆಗಳುಳ್ಳವರಾಗಿಯೂ, ಕೋದಂಡಪಾಣಿಗಳಾಗಿಯೂ, ದಶದಿಕ್ಕುಗಳನ್ನು ಕಂಗೊಳಿಸುವಂತೆ ಮಾಡುತ್ತಿರುವವರೂ, ಅಲ್ಪನಾದವರ್ಳ್ಳವರಾಗದೆ ಇರುವವರೂ ಆದ, ಆ ರಾಮ ಲಕ್ಷ್ಮಣರು ಮೂರು ಹೆಡೆಗಳುಳ್ಳ ಸರ್ಪಗಳಂತೆ ಆ ವಿಶ್ವಾಮಿತ್ರನನ್ನು ಅಶ್ವಿನೀದೇವತೆಗಳು ಬ್ರಹ್ಮನನ್ನನುಸರಿಸುವಂತೆ ಅನುಸರಿಸಿ ಹೋಗುತ್ತಿದ್ದರು. ॥ ೭ ॥ ಕೋದಂಡಧಾರಿಗಳೂ, ಆಭರಣಾದಿಗಳಿಂದ ಅಲಂಕರಿಸಲ್ಪಟ್ಟವರೂ, ಚರ್ಮವಿಕಾರವಾದ ಬೆರಳುಕವಚಗಳುಳ್ಳವರೂ, ಖಡ್ಗಗಳುಳ್ಳವರೂ,

ಕೃತೌ॥೮॥ ಬದ್ಧಗೋಧಾಂಗುಲಿತ್ರಾಣೌ ಖಡ್ಗವಂತೌ ಮಹಾದ್ಯುತೀ॥ಕುಮಾರೌ ಚಾರುವಪುಷೌ ಭ್ರಾತರೌ ರಾಮಲಕ್ಷ್ಮಣೌ ॥೯॥ ಅನುಯಾತೌ ಶ್ರಿಯಾ ದೀಪ್ತ್ಯಾ ಶೋಭಯೇತಾಮನಿಂದಿತೌ ॥ ಸ್ಥಾಣುಂ ದೇವಮಿವಾಚಿಂತ್ಯಂ ಕುಮಾರಾವಿವಪಾವಕೀ ॥೧೦ ಅಧ್ಯರ್ಧಯೋಜನಂ ಗತ್ವಾ ಸರಯ್ವಾ ದಕ್ಷಿಣೇ ತಟೇ ॥ ರಾಮೇತಿ ಮಧುರಾಂ ವಾಣೀಂ ವಿಶ್ವಾಮಿತ್ರೋಽಭ್ಯಭಾಷತ ॥೧೧॥ ಗೃಹಾಣ ವತ್ಸ ಸಲಿಲಂ ಮಾ ಭೂತ್ಕಾಲಸ್ಯ ಪರ್ಯಯಃ॥ಮಂತ್ರಗ್ರಾಮಂ ಗೃಹಾಣತ್ವಂ ಬಲಾಮತಿಬಲಾಂ ತಥಾ॥೧೨॥ನಶ್ರಮೋ ನಜ್ವರೋ ವಾ ತೇ ನರೂಪಸ್ಯ

ಳುಳ್ಳ, ಖಡ್ಗವಂತೌ - ಖಡ್ಗಧಾರಿಗಳಾದ ಮಹಾದ್ಯುತೀ - ಮಹಾಪ್ರಕಾಶವುಳ್ಳ, ಕುಮಾರೌ - ಕುಮಾರರಾದ, ಚಾರುವಪುಷೌ - ಮನೋಹರವಾದ ಶರೀರಗಳುಳ್ಳ, ಭ್ರಾತರೌ - ಅಣ್ಣ ತಮ್ಮಂದಿರಾದ, ಅನಿಂದಿತೌ - ದೋಷರಹಿತರಾದ, ರಾಮಲಕ್ಷ್ಮಣೌ - ರಾಮ ಲಕ್ಷ್ಮಣರು, ಅಚಿಂತ್ಯಂ - ಧ್ಯಾನಿಸಲು ಅಶಕ್ಯನಾದ, ಸ್ಥಾಣುಂದೇವಮಿವ - ಪರಮೇಶ್ವರನಂತೆ, ಪಾವಕೀ - ಅಗ್ನಿಪುತ್ರರಾದ, ಕುಮಾರಾವಿವ - (ವ.) ಸ್ಕಂದವಿಶಾಖರೆಂಬ ಕುಮಾರರಂತೆ, ಕುಶಿಕಪುತ್ರಂ - ವಿಶ್ವಾಮಿತ್ರನನ್ನು, ಅನುಯಾತೌ - ಅನುಸರಿಸಿ ಹೋಗುತ್ತ, ಶ್ರಿಯಾ - ಸಂಪತ್ತಿನಿಂದಲೂ, ದೀಪ್ತ್ಯಾ - ಕಾಂತಿಯಿಂದಲೂ, ಶೋಭಯೇತಾಂ - ಹೊಳೆಯುತ್ತಿದ್ದರು ॥೧೦॥ ವಿಶ್ವಾಮಿತ್ರಃ- ವಿಶ್ವಾಮಿತ್ರನು, ಅಧ್ಯರ್ಧಯೋಜನಂ - ಅರ್ಧ ಯೋಜನವನ್ನು ಗತ್ವಾ - ಹೋಗಿ, ಸರಯ್ವಾಃ - ಸರಯೂ ನದಿಯ, ದಕ್ಷಿಣೇತಟೇ - ದಕ್ಷಿಣ ತೀರದಲ್ಲಿ, ಹೇರಾಮ - ಎಲೈ ಶ್ರೀರಾಮನೇ, ಇತಿ - ಎಂದು, ಮಧುರಾಂ - ಇಂಪಾಗಿರುವ, ವಾಣೀಂ - ಮಾತನ್ನು, ಅಭ್ಯಭಾಷತ - ನುಡಿದನು ॥೧೧॥ ಹೇವತ್ಸ - ಎಲೈ ಮಗನೆ, ಸಲಿಲಂ - ಉದಕವನ್ನು, ಗೃಹಾಣ - ಗ್ರಹಿಸು, ಕಾಲಸ್ಯ - ಕಾಲದ, ವಿಪರ್ಯಯಃ - ಅತಿಕ್ರಮಣವು, ಮಾಭೂತ್ - ಆಗದಿರಲಿ, ತ್ವಂ ನೀನು, ಮಂತ್ರಗ್ರಾಮಂ - ಮಂತ್ರಗಳ ಸಮುದಾಯವನ್ನೂ, ತಥಾ - ಹಾಗೆಯೆ, ಬಲಾಂ - ಬಲಾ ಎಂಬ ವಿದ್ಯೆಯನ್ನು, ಅತಿಬಲಾಂ - ಅತಿಬಲಾ ಎಂಬ ವಿದ್ಯೆಯನ್ನು, ಗೃಹಾಣ - ಪರಿಗ್ರಹಿಸು, ತೇನ - ಆ "ಬಲಾ, ಅತಿಬಲಾ" ಎಂಬ ವಿದ್ಯೆಗಳ ಸ್ವೀಕಾರದಿಂದ, ಶ್ರಮಃ-ಬಳಲಿಕೆಯೂ, ಜ್ವರಃ - ತಾಪವೂ, ನ-ಆಗುದದಿಲ್ಲ, ರೂಪಸ್ಯ - ರೂಪದ,

ಬಹಳವಾದ ಕಾಂತಿಯುಳ್ಳವರೂ, ಸೊಬಗಿನಿಂದಕೂಡಿದ ದೇಹವುಳ್ಳವರೂ, ಬಾಲಕರೂ ಆದ ಆ ರಾಮ ಲಕ್ಷ್ಮಣರೆಂಬ ಅಣ್ಣತಮ್ಮಂದಿರು ಕುಶಿಕನಂದನನಾದ ವಿಶ್ವಾಮಿತ್ರನನ್ನನುಸರಿಸಿ ಹೋಗುತ್ತಿರುವ ಸಮಯದಲ್ಲಿ, ಧ್ಯಾನಿಸಲಸಾಧ್ಯನಾದ ಪರಮೇಶ್ವರನನ್ನನುಸರಿಸಿ ಗಮಿಸುತ್ತಿರುವ ಅಗ್ನಿಕುಮಾರರಾದ ಸ್ಕಂದ ವಿಶಾಖರೆಂಬ ಕುವರರಂತೆ ಹೊಳೆಯುತ್ತಿದ್ದರು ॥೧೦॥ ವಿಶ್ವಾಮಿತ್ರಮಹರ್ಷಿಯು ಒಂದೂವರೆ ಗಾವುದ ದೂರದಷ್ಟು ಪ್ರಯಾಣವನ್ನು ಬೆಳಸಿ, ಸರಯೂನದಿಯ ದಕ್ಷಿಣ ತೀರದಲ್ಲಿ "ಎಲೈ ರಾಮನೇ!" ಎಂದು ಕೂಗಿ ಹೀಗೆಂದನು. ॥೧೧॥ 'ವತ್ಸ! ರಾಮಚಂದ್ರ' ತಡೆಮಾಡದೆ ಆಚಮನವನ್ನು ಮಾಡಿ, ಬಲ, ಅತಿಬಲಗಳೆಂಬ ಈ ಮಂತ್ರಸಮೂಹವನ್ನು ಪರಿಗ್ರಹಿಸು.॥೧೨॥ ಈ ಮಂತ್ರ ಸ್ವೀಕಾರದಿಂದ ನಿನಗೆ ಬಳಲಿಕೆಯಾಗಲಿ, ಜ್ವರಗಳಾಗಲಿ, ರೂಪವ್ಯತ್ಯಾಸವಾಗಲಿ ಉಂಟಾಗುವದಿಲ್ಲವು.

ವಿಪರ್ಯಯಃ ॥ ನಚಸುಪ್ತಂ ಪ್ರಮತ್ತಂವಾ ಧರ್ಷಯಿಷ್ಯಂತಿ ನೈರೃತಾಃ ॥ ೧೩ ॥ ನಬಾಹ್ವೋಸ್ಸದೃಶೋ ವೀರ್ಯೇ ಪೃಥಿವ್ಯಾಮಸ್ತಿಕಶ್ಚನ ॥ ತ್ರಿಷುಲೋಕೇಷು ವೈರಾಮ ನಭವೇತ್ಸದೃಶಸ್ತವ॥೧೪॥ ನಸೌಭಾಗ್ಯೇ ನ ದಾಕ್ಷಿಣ್ಯೇ ಜ್ಞಾನೇ ಬುದ್ಧಿನಿಶ್ಚಯೇ॥ ನೋತ್ತರೇಪ್ರತಿವಕ್ತವ್ಯೇ ಸಮೋಲೋಕೇ ತವಾನಘ॥೧೫॥ಏತದ್ವಿದ್ಯಾದ್ವಯೇ ಲಬ್ಧೇ ಭವಿತಾನಾಸ್ತಿ ತೇ ಸಮಃ॥ ಬಲಾತ್ವತಿ ಬಲಾಚೈವ ಸರ್ವಜ್ಞಾನಸ್ಯಮಾತರೌ॥೧೬॥ಕ್ಷುತ್ಪಿಪಾಸೇ ನತೇರಾಮ ಭವಿಷ್ಯೇತೇ ನರೋತ್ತಮ॥

---

ವಿಪರ್ಯಯಃ - ವ್ಯತ್ಯಾಸವು, ನ - ಇಲ್ಲ, ಸುಪ್ತಂ - ನಿದ್ರೆ ಹೋಗುತ್ತಿರುವವನನ್ನಾಗಲೀ, ಪ್ರಮತ್ತಂವಾ - ದೇಹವನ್ನು ಮರೆತಿರುವವನನ್ನಾಗಲಿ, ನೈರ್‍ಋತಾಃ - ರಾಕ್ಷಸರು, ನಧರ್ಷಯಿಷ್ಯಂತಿ - ತಿರಸ್ಕರಿಸಲಾರರು. ॥ ೧೩ ॥ ಹೇರಾಮ - ಎಲೈ ಶ್ರೀರಾಮನೆ, ಬಾಹ್ವೋಃ - ಭುಜಗಳ, ವಿರ್ಯೇ - ಪರಾಕ್ರಮದಲ್ಲಿ, ತವ - ನಿನಗೆ, ಸದೃಶಃ - ಸಮಾನನು, ಪೃದಿವ್ಯಾಂ - ಈ ಭೂಮಂಡಲದಲ್ಲಿ, ಕಶ್ಚನ - ಒಬ್ಬನು, ನ - ಇಲ್ಲವು, ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯೂ, ತವ - ನಿನಗೆ, ಸದೃಶಃ- ಸಮಾನನು, ನ - ಇಲ್ಲ,॥೧೪॥ ಹೇಅನಘ ಎಲೈ ನಿರ್ದೋಷನೆ, ಸೌಭಾಗ್ಯೇ-ಸೌಂದರ್ಯದಲ್ಲಿಯೂ,ತವ- ನಿನಗೆ, ಸಮಃ - ಸಮಾನನು, ನ - ಇಲ್ಲ, ದಾಕ್ಷಿಣ್ಯೇ - ಸಾಮರ್ಥ್ಯದಲ್ಲಿ, ನ - ಇಲ್ಲ, ಜ್ಞಾನೇ ಜ್ಞಾನದಲ್ಲಿ, ನ - ಇಲ್ಲ, ಬುದ್ಧಿನಿಶ್ಚಯೇ - ಬುದ್ಧಿಯಿಂದ ಕಾರ್ಯನಿಶ್ಚಯದಲ್ಲಿ, ಉತ್ತರೇ - ಪ್ರತ್ಯುತ್ತರವು, ಪ್ರತಿವಕ್ತವ್ಯೇಸತಿ - ಹೇಳಬೇಕೆಂದರೆ, ಲೋಕೇ- ಲೋಕದಲ್ಲ, ತವ - ನಿನಗೆ, ಸಮಃ-ಸಮಾನನು, ನ ಇಲ್ಲ ॥೧೫॥ಏತತ್- ಈ ವಿದ್ಯಾದ್ವಯೇ-ಎರಡು ವಿದ್ಯಗಳು, ಲಬ್ಧೇಸತಿ ಹೊಂದಲ್ಪಡಲು,ತೇ-ನಿನಗೆ, ಸಮಃ-ಸಮಾನನು,ನಾಸ್ತಿ-ಇರುವುದಿಲ್ಲ,ನಭವಿತಾ ಆಗಲಾರನು ಬಲಾ- ಬಲವೆಂಬ,ಅತಿಬಲಾಚೈವ-ಅತಿಬಲಾ ಎಂಬ ಈ ಎರಡು ವಿದ್ಯೆಗಳು, ಸರ್ವಜ್ಞಾನಸ್ಯ - ಸಮಸ್ತ ಸೂಕ್ಷ್ಮಾರ್ಥ ಜ್ಞಾನಕ್ಕೂ, ಮಾತರೌ- ತಾಯಿಗಳು ॥ ೧೬ ॥ ಹೇನರೋತ್ತಮ - ಎಲೈ ಮನುಜಶ್ರೇಷ್ಠನ, ಹೇರಾಮ - ಎಲೈ ರಾಮನೆ, ಪಥಿ - ಮಾರ್ಗದಲ್ಲಿ, ಬಲಾಂ - ಬಲಾ ಎಂಬ ವಿದ್ಯೆಯನ್ನು, ಅತಿಬಲಾಂಚೈವ - ಅತಿಬಲಾ ಎಂಬ ವಿದ್ಯೆಯನ್ನು, ಪಠತಃ - ಪಠನೆಮಾಡುತ್ತಿರುವ, ತೇ - ನಿನಗೆ, ಕ್ಷುತ್ಪಿಪಾಸೇ - ಹಸಿವೂ, ನೀರಡಿ

---

ಇಷ್ಟೆಯಲ್ಲದೆ, ನಿದ್ದೆಹೋಗುತ್ತಿದ್ದರೂ, ಮತ್ತನಾಗಿದ್ದರೂ, ನಿನ್ನನ್ನು ರಕ್ಕಸರು ಹೆದರಿಸಲಾರರು. ॥ ೧೩॥ ಎಲೈ ಶ್ರೀರಾಮನೇ ! ಭುಜಪರಾಕ್ರಮದಲ್ಲಿ ನಿನಿಗೆ ಸಮಾನನಾದವನು ಈ ಭೂಮಿಯಲ್ಲಿ ಯಾರೂ ಇಲ್ಲವು. ನಿನಿಗ ಸರಿಯಾದವನು ಈ ಲೋಕತ್ರಯದಲ್ಲಿ ಯಾವನೂ ಇರಲಾರನು. ಎಲೈ ನಿರ್ದೋಷಿಯೆ! ಸೌಂದರ್ಯದಲ್ಲಿಯೇ ಆಗಲಿ, ಸಾಮರ್ಥ್ಯದಲ್ಲಿಯೇ ಆಗಲಿ,ಬುದ್ಧಿ ನಿಶ್ಚಯದಲ್ಲಿಯೇ ಆಗಲಿ,ಕಾಲೋಚಿತವಾಗಿ ಪ್ರತ್ಯುತ್ತರಕೊಡುವುದರಲ್ಲಿಯೇ ಆಗಲಿ, ನಿನಿಗೆ ಸರಿಯಾದವನು ಈ ಲೋಕದಲ್ಲಿ ಯಾರೂ ಇಲ್ಲವು. ॥೧೪-೧೫॥ ಈ ವಿದ್ಯಾದ್ವಯವು ನಿನಿಗೆ ಉಪದೇಶವಾದರೆ, ನಿನಿಗೆ ಸರಿಯಾದವನು ಈಗ ಯಾರೂ ಇಲ್ಲವು. ಮುಂದೆಯೂ ಹುಟ್ಟಹೋಗಲಾರರು , ಬಲ ಅತಿಬಲ ಎಂಬೀ ಎರಡುವಿದ್ಯೆಗಳು ಸರ್ವಜ್ಞಾನಗಳಿಗೂ, ತಾಯಿಗಳಾಗಿರುವವು. ॥ ೧೬ ॥ ಎಲೈ ಪುರುಷೋತ್ತಮನೇ ! ಮಾರ್ಗದಲ್ಲಿ ಈ ವಿದ್ಯೆಗಳನ್ನು ಪಠಿಸುತ್ತಿರುವ ನಿನಗೆ ಹಸಿವು ಬಾಯಾರಿಕೆಗಳುಂಟಾಗಲಾರವು. ಈ ಎರಡು ವಿಧ್ಯೆಗಳನ್ನು ಪಠನಮಾಡುತ್ತಿದ್ದರೆ ಮಹಾ ಕೀರ್ತಿಯುಂಟಾಗುವದು. ಎಲೈ

ಬಲಾಮತಿಬಲಾಂಚೈವ ಪಠತಃ ಪಥಿರಾಘವ ||೧೭|| ವಿದ್ಯಾದ್ವಯಮಧೀಯಾನೇ ಯಶಶ್ಚಾಪ್ಯ ತುಲಂತ್ವಯಿ || ಪಿತಾಮಹಸುತೇಹ್ಯೇತೇ ವಿದ್ಯೇ ತೇಜಸ್ಸಮನ್ವಿತೇ ||೧೮|| ಪ್ರದಾತುಂ ತವ ಕಾಕುತ್ಥ್ಸ ಸದೃಶಸ್ತ್ವಂಹಿ ಧಾರ್ಮಿಕ|| ಕಾಮಂ ಬಹುಗುಣಾಸ್ಸರ್ವೇ ತ್ವಯ್ಯೇತೇ ನಾತ್ರಸಂಶಯಃ ||೧೯|| ತಪಸಾ ಸಂಭೃತೇ ಚೈತೇ ಬಹುರೂಪೇ ಭವಿಷ್ಯತಃ|| ತತೋ ರಾಮೋ ಜಲಂ ಸ್ಪೃಷ್ಟ್ವಾ ಪ್ರಹೃಷ್ಟ ವದನಶ್ಶುಚಿಃ||೨೦|| ಪ್ರತಿಜಗ್ರಾಹ ತೇವಿದ್ಯೇ ಮಹರ್ಷೇ ರ್ಭಾವಿತಾತ್ಮನಃ || ವಿದ್ಯಾಸಮುದಿತೋ ರಾಮ ಶ್ಶುಶುಭೇ ಭೂರಿವಿಕ್ರಮಃ||೨೧|| ಸಹಸ್ರರಶ್ಮಿ ರ್ಭಗವಾನ್

---

ಕೆಗಳೂ, ನಭವಿಷ್ಯೇತೇ - ಆಗಲಾರವು ||೧೭|| ಹೇರಾಘವ - ಎಲೈ ಶ್ರೀರಾಮನೆ, ವಿದ್ಯಾದ್ವಯಂ - ಈ ಎರಡು ವಿದ್ಯೆಗಳನ್ನು, ಅಧೀಯಾನೇ- ಅಧ್ಯಯನ ಮಾಡುತ್ತಿರುವ, ತ್ವಯಿ - ನಿನ್ನಲ್ಲಿ, ಯಶಶ್ಚ - ಕೀರ್ತಿಯೂ, ಅತುಲಂ - ಸಮಾನವಿಲ್ಲದ್ದಾಗುವುದು, ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೆ, ಹೇಧಾರ್ಮಿಕ - ಎಲೈ ಧರ್ಮಿಷ್ಠನ, ಪಿತಾಮಹಸುತೇ - ಬ್ರಹ್ಮದೇವನ ಮಕ್ಕಳಾದ, ತೇಜಸ್ಸಮನ್ವಿತೇ - ಪ್ರಭಾವದಿಂದ ಕೂಡಿರುವ, ಏತೇವಿದ್ಯೇ - ಈ ವಿದ್ಯೆಗಳನ್ನು, ತವ - ನಿನಗೆ, ಪ್ರದಾತುಂ - ಕೊಡಲು, ತ್ವಂ - ನೀನು, ಸದೃಶೋಽಪಿ - ಅರ್ಹನಷ್ಟೆ. ||೧೮|| ತ್ವಯಿ ನಿನ್ನಲ್ಲಿ, ಸರ್ವೇ - ಸಮಸ್ತಗಳಾದ, ಏತೇ - ಈ, ಗುಣಾಃ - ಗುಣಗಳು, ಕಾಮಂ - ಅತ್ಯಂತವಾಗಿ, ಬಹು- ಬಹಳವಾಗಿ, ಸಂತಿ - ಇರಲೇ ಇವೆ, ಅತ್ರ - ಈ ವಿಷಯಲ್ಲಿ, ಸಂಶಯಃ - ಸಂಶಯವು, ನ - ಇಲ್ಲ, ತಪಸಾ - ತಪಸ್ಸಿನಿಂದ, ಸಂಭೃತೇ - ಸಂಪಾದಿಸಲ್ಪಟ್ಟ, ಏತೇ -ಈ ವಿದ್ಯೆಗಳೆರಡೂ, ಬಹುರೂಪೇ- ಬಹುವಿಸ್ತಾರವುಳ್ಳವುಗಳು, ಭವಿಷ್ಯತಃ - ಆಗುವವು. ||೧೯|| ತತಃ - ಬಳಿಕ, ರಾಮಃ - ಶ್ರೀರಾಮನು, ಪ್ರಹೃಷ್ಟವದನಃ - ಸಂತೋಷಗೊಂಡ ಮುಖವುಳ್ಳವನಾಗಿ, ಜಲಂ - ಉದಕವನ್ನು, ಸ್ಪೃಷ್ಟ್ವಾ - ಆಚಮನಮಾಡಿ, ಶುಚಿಃ - ಪರಿಶುದ್ಧನಾಗಿ, ಭಾವಿತಾತ್ಮನಃ - ಧ್ಯಾನಮಾಡಲ್ಪಟ್ಟ ಆತ್ಮಸ್ವರೂಪವುಳ್ಳ, ಮಹರ್ಷೇಃ - ವಿಶ್ವಾಮಿತ್ರನಿಂದ, ತೇವಿದ್ಯೇ- ಆ ವಿದ್ಯೆಗಳನ್ನು,ಪ್ರತಿಜಗ್ರಾಹ- ಸ್ವೀಕರಿಸಿದನು. ||೨೦|| ವಿದ್ಯಾಸಮುದಿತಃ - ವಿದ್ಯೆಗಳಿಂದ ಕೂಡಿರುವ, ಭೂರಿವಿಕ್ರಮಃ - ಪರಾಕ್ರಮಶಾಲಿಯಾದ, ರಾಮಃ - ಶ್ರೀರಾಮನು, ಶರದಿ - ಶರತ್ಕಾಲದಲ್ಲಿ, ಸಹಸ್ರರಶ್ಮಿಃ - ಸಾವಿರ ಕಿರಣ

---

ಕುಕುತ್ಸ್ಥವಂಶೋತ್ಪನ್ನನಾದ ಧರ್ಮವಂತನೆ! ತೇಜೋಯುಕ್ತವಾದದೂ ಬ್ರಹ್ಮಪುತ್ರರರೂಪವಾಗಿಯೂ ಇರುವ, ಈ ಎರಡು ವಿದ್ಯೆಗಳನ್ನು ನಿನಿಗುಪದೇಶಮಾಡುವೆನು. ನೀನೇ ಇದಕ್ಕೆ ಅರ್ಹನಾಗಿರುವವನು, ಮತ್ತಾರೂ ಅಲ್ಲವು. ||೧೮|| ಸಮಸ್ತವಾದ ಸದ್ಗುಣಗಳು ನಿನ್ನಲ್ಲಿಯೇ ಇರುವವು. ಈ ವಿದ್ಯೆಗಳೂ ಸಹಾ ತಪದಿಂದ ಸಂಪಾದಿಸಲ್ಪಟ್ಟರೆ ಬಹು ರೂಪವಾಗಿರುವವು." ವಿಶ್ವಾಮಿತ್ರಮುನಿಯು ಹೀಗೆನುಡಿದ ಬಳಿಕ, ಶ್ರೀರಾಮನು ಅರಳಿದ ಮುಖವುಳ್ಳವನಾಗಿ ಆಚಮನವನ್ನುಮಾಡಿ, ಪರಿಶುದ್ಧನಾಗಿ ಧ್ಯಾನಿಸಲ್ಪಟ್ಟ ಆತ್ಮಸ್ವರೂಪವುಳ್ಳ ಆ ವಿಶ್ವಾಮಿತ್ರಮುನಿಯಿಂದ ಆ ಮಂತ್ರಗಳನ್ನು ಸ್ವೀಕರಿಸಿದನು ||೨೦|| ಆ ಮಂತ್ರಗಳಿಂ ದೊಡಗೂಡಿದ ಬಹು ಪರಾಕ್ರಮಿಯಾದ ಶ್ರೀರಾಮನು ಶರತ್ಕಾಲ ಸೂರ್ಯನಂತೆ ಹೊಳೆ

ಶರದೀವ ದಿವಾಕರಃ ॥ ಗುರುಕಾರ್ಯಾಣಿ ಸರ್ವಾಣಿ ನಿಯುಜ್ಯ ಕುಶಿಕಾತ್ಮಜೇ॥ ಊಷುಸ್ತಾಂ ರಜನೀಂತತ್ರ ಸರಯ್ವಾಂ ಸುಸುಖಂತ್ರಯಃ ॥ ೨೨ ॥
ದಶರಥನೃಪಸೂನುಸತ್ತಮಾಭ್ಯಾಂ ತೃಣಶಯನೇನುಚಿತೇಸಹೋಷಿತಾಭ್ಯಾಂ ॥
ಕುಶಿಕಸುತವಚೋನು ಲಾಲಿತಾಭ್ಯಾಂ ಸುಖಮಿವಸಾ ವಿಬಭೌ ವಿಭಾವರೀಚ ॥೨೩॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾವಿಂಶಸ್ಸರ್ಗಃ.



ಗಳುಳ್ಳ, ಭಗವಾನ್ - ಪೂಜ್ಯನಾದ, ದಿವಾಕರಇವ - ಸೂರ್ಯನಂತೆ, ಶುಶುಭೇ - ಹೊಳೆಯುತ್ತಿದ್ದನು. ॥ ೨೧ ॥ ಸರ್ವಾಣಿ - ಸಮಸ್ತಗಳಾದ, ಗುರುಕಾರ್ಯಾಣಿ - ಗುರುಸೇವೆ ಮೊದಲಾದ ಕಾರ್ಯಗಳನ್ನು, ಕುಶಿಕಾತ್ಮಜೇ - ವಿಶ್ವಾಮಿತ್ರನಲ್ಲಿ, ನಿಯುಜ್ಯ - ವಿನಿಯೋಗಮಾಡಿ, ತತ್ರಸರಯ್ವಾಂ - ಆ ಸರಯೂ ನದೀತೀರದಲ್ಲಿ, ತೇತ್ರಯಃ -ಆಮೂವರೂ, ತಾಂರಜನೀಂ-ಆ ರಾತ್ರಿಯಲ್ಲಿ, ಸುಸುಖಂ-ಸುಖವಾಗಿ, ಊಷುಃ - ವಾಸಮಾಡಿದರು. ॥ ೨೨ ॥ ಅನುಚಿತೇ - ಅನರ್ಹವಾದ, ತೃಣಶಯನೇ - ಹುಲ್ಲಿನ ಹಾಸಿಗೆಯಲ್ಲಿ, ಸಹೋಷಿತಾಭ್ಯಾಂ - ಕೂಡಿಮಲಗಿರುವ, ಕುಶಿಕಸುತವಚೋನು ಲಾಲಿತಾಭ್ಯಾಂ - ವಿಶ್ವಾಮಿತ್ರನ ಮಾತುಗಳಿಂದ ಲಾಲಿಸಲ್ಪಟ್ಟ, ದಶರಥನೃಪಸೂನು ಸತ್ತಮಾಭ್ಯಾಂ-ದಶರಥರಾಯನ ಕುವರರಿಗೆ, ಸಾವಿಭಾವರೀಚ - ಆ ರಾತ್ರಿಯು, ಸುಖಮಿವ - ಸುಖವಾಗಿ, ವಿಬಭೌ - ಬೆಳಗಾಯಿತು. ॥ ೨೩ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾವಿಂಶಸ್ಸರ್ಗಃ.



ಯುತ್ತಿದ್ದನು. ॥ ೨೧ ಗುರುಸೇವೆ ಮೊದಲಾದ ಕಾರ್ಯಗಳನ್ನು ವಿಶ್ವಾಮಿತ್ರಮುನಿಯಲ್ಲಿ ಸಮರ್ಪಿಸಿ, ಆ ಮೂವರೂ ಸರಯೂತೀರದಲ್ಲಿ ಸುಖವಾಗಿ ಆ ರಾತ್ರಿಯನ್ನು ಕಳೆದರು. ॥ ೨೨ ॥ ಅನರ್ಹವಾದ ತೃಣಶಯನದಲ್ಲಿ ಮಲಗಿರುವವರಾಗಿಯೂ, ವಿಶ್ವಾಮಿತ್ರನ ಮೃದುಮಧುರವಾದ ವಚನಗಳಿಂದ ಲಾಲಿತರಾಗಿಯೂ ಇರುವ ಆ ದಶರಥನಂದನರಿಗೆ ಸುಖವಾಗಿ ಬೆಳಗಾಯಿತು ॥೨೩॥

ಇಂತಿದು ವಿಶ್ವಾಮಿತ್ರಕೃತ ಬಲಾಬಲ ಮಂತ್ರೋಪದೇಶವರ್ಣನವೆಂಬ
ಇಪ್ಪತ್ತೆರಡನೆಯ ಸರ್ಗವು ಸಮಾಪ್ತವಾದದು.



# ಬಾಲಕಾಂಡೇ ತ್ರಯೋವಿಂಶಸ್ಸರ್ಗಃ.



ಪ್ರಭಾತಾಯಾಂತುಶರ್ವರ್ಯಾಂ ವಿಶ್ವಾಮಿತ್ರೋ ಮಹಾಮುನಿಃ ॥ ಅಭ್ಯಭಾಷತ ಕಾಕುತ್ಸ್ಥೌ ಶಯಾನೌ ಪರ್ಣಸಂಸ್ತರೇ ॥೧॥ ಕೌಸಲ್ಯಾಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ॥ ಉತ್ತಿಷ್ಠನರಶಾರ್ದೂಲ ಕರ್ತವ್ಯಂದೈವ ಮಾಹ್ನಿಕಂ ॥೨॥ ತಸ್ಯರ್ಷೇಃ ಪರಮೋದಾರಂ ವಚಶ್ಶ್ರುತ್ವಾ ನೃಪಾತ್ಮಜೌ॥ ಸ್ನಾತ್ವಾಕೃತೋದಕೌ ವೀರೌಜಪತುಃ ಪರಮಂಜಪಂ ॥೩॥ ಕೃತಾಹ್ನಿಕೌ ಮಹಾವೀರ್ಯೌ ವಿಶ್ವಾಮಿತ್ರಂ ತಪೋಧನಂ ॥ ಅಭಿವಾದ್ಯಾಭಿ ಸಂಹೃಷ್ಟೌ ಗಮ

---

ಶರ್ವರ್ಯಾಂ - ರಾತ್ರಿಯು, ಪ್ರಭಾತಾಯಾಂ - ಬೆಳಗಾಗುತ್ತಿರಲು, ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಪರ್ಣಸಂಸ್ತರೇ - ಪರ್ಣಮಯವಾದ ಶಯನದಲ್ಲಿ, ಶಯಾನೌ - ಮಲಗಿರುವ, ಕಾಕುತ್ಸ್ಥೌ - ರಾಮಲಕ್ಷ್ಮಣರನ್ನು ಕುರಿತು, ಅಭ್ಯಭಾಷತ - ನುಡಿದನು. ॥೧॥ ಹೇರಾಮ - ಎಲೈ ಶ್ರೀರಾಮನೆ, ಕೌಸಲ್ಯಾ - ಕೌಸಲ್ಯಾದೇವಿಯು, ಸುಪ್ರಜಾಃ - ಶುಭಕರವಾದ ಪುತ್ರನುಳ್ಳವಳಾದಳು, ಪೂರ್ವಾಸಂಧ್ಯಾ - ಪ್ರಾತಸ್ಸಂಧ್ಯವು, ಪ್ರವರ್ತತೇ - ಪ್ರವರ್ತಿಸಿತು, ಹೇನರಶಾರ್ದೂಲ - ಎಲೈ ನರಶ್ರೇಷ್ಠನೇ, ಉತ್ತಿಷ್ಠ - ಏಳು, ಆಹ್ನಿಕಂ - ಹಗಲುಮಾಡತಕ್ಕ, ದೈವತಂ - ದೇವತಾ ಸಂಬಂಧವಾದ ಕರ್ಮವು, ಕರ್ತವ್ಯಂ- ಮಾಡತಕ್ಕದ್ದು, ತಸ್ಯಋಷೇಃ - ಆ ವಿಶ್ವಾಮಿತ್ರನ, ಪರಮೋದಾರಂ - ಬಹಳ ಗಂಭೀರವಾದ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ನೃಪಾತ್ಮಜೌ - ರಾಜಪುತ್ರರೂ, ವೀರೌ - ಶೂರರೂ ಆದ ರಾಮ ಲಕ್ಷ್ಮಣರು, ಸ್ನಾತ್ವಾ - ಸ್ನಾನಮಾಡಿ, ಕೃತೋದಕೌ, ಕೃತ-ಮಾಡಲ್ಪಟ್ಟ, ಉದಕೌ - ಅರ್ಘ್ಯಪ್ರದಾನಾದಿ ರೂಪವುಳ್ಳವರಾಗಿ, ಪರಮಂ - ಶ್ರೇಷ್ಠವಾದ, ಜಪಂ - ಮಂತ್ರವನ್ನು, ಜಪತುಃ-ಜಪಿಸಿದರು. ॥೩॥ ಕೃತಾಹ್ನಿಕೌ, ಕೃತ- ಮಾಡಲ್ಪಟ್ಟ, ಆಹ್ನಿಕೌ - ಪ್ರಾತಸ್ಸಂಧ್ಯಾವಂದನಾದಿ ಕರ್ಮಗಳುಳ್ಳ, ಮಹಾವೀರ್ಯೌ - ಮಹಾಪ್ರತಾಪಶಾಲಿಗಳಾದ ರಾಮಲಕ್ಷ್ಮಣರು, ತಪೋಧನಂ- ತಪವೇ ಧನವಾಗುಳ್ಳ, ವಿಶ್ವಾಮಿತ್ರಂ-ವಿಶ್ವಾಮಿತ್ರ

---

ರಾತ್ರಿಯು ಕಳೆದು ಬೆಳಗಾಗಲು, ಮಹಾಮುನಿಯಾದ ವಿಶ್ವಾಮಿತ್ರನು ಪರ್ಣವಿಕಾರವಾದ ಹಾಸಿಗೆಯಲ್ಲಿ ಮಲಗಿರುವ ರಾಮ ಲಕ್ಷ್ಮಣರನ್ನು ಕುರಿತು ॥೧॥ "ಎಲೈ ಶ್ರೀರಾಮಚಂದ್ರನೇ! ಕೌಸಲ್ಯಾದೇವಿಯೇ ಸುಪುತ್ರವಂತಳು. ಎಲೈ ನರಶ್ರೇಷ್ಠನೇ! ಏಳು; ಪ್ರಾತಸ್ಸಂಧ್ಯೆಯು ಪ್ರವರ್ತಿಸಿರುವದು; ದೇವನಿರ್ಮಿತವಾದ ಆಹ್ನಿಕವನ್ನು ಮಾಡಬೇಕು". ಎಂದನು. ಆಗಲಾ ರಾಮ ಲಕ್ಷ್ಮಣರು, ಸ್ನಾನವಂಗೈದು ಆಚಮನವನ್ನುಮಾಡಿ ಉತ್ತಮವಾಗಿ ಜಪಿಸಿ, ತಪೋನಿಧಿಯಾದ ವಿಶ್ವಾಮಿತ್ರನ ಪಾದಪದ್ಮಗಳಿಗೆರಗಿ, ಬಹಳ

ನಾಯಾಭಿತಸ್ಥತುಃ ॥ ೪ ॥ ತೌ ಪ್ರಯಾತೌ ಮಹಾವೀರ್ಯೌ ದಿವ್ಯಾಂ ತ್ರಿಪಥ
ಗಾಂನದೀಂ ॥ ದದೃಶಾತೇ ತತಸ್ತತ್ರ ಸರಯ್ವಾಸ್ಸಂಗಮೇ ಶುಭೇ ॥ ೫ ॥
ತತ್ರಾಶ್ರಮಪದಂ ಪುಣ್ಯ ಮೃಷೀಣಾ ಮುಗ್ರತೇಜಸಾಂ ॥ ಬಹುವರ್ಷ ಸಹ
ಸ್ರಾಣಿ ತಪ್ಯತಾಂ ಪರಮಂತಪಃ ॥೬॥ ತಂದೃಷ್ಟ್ವಾ ಪರಮಪ್ರೀತೌ ರಾಘವೌ
ಪುಣ್ಯಮಾಶ್ರಮಂ॥ ಊಚತುಸ್ತಂ ಮಹಾತ್ಮಾನಂ ವಿಶ್ವಾಮಿತ್ರಮಿದಂವಚಃ॥
॥೭॥ ಕಸ್ಯಾಯಮಾಶ್ರಮಃ ಪುಣ್ಯಃ ಕೋನ್ವಸ್ಮಿನ್ ವಸತೇಪುಮಾನ್ ॥ ಭಗವನ್

ನನ್ನು, ಅಭಿವಾದ್ಯ - ವಂದಿಸಿ, ಅಭಿಸಂಹೃಷ್ಟೌ - ಹರ್ಷಯುಕ್ತರಾಗಿ, ಗಮನಾಯ - ಮುಂದೆ ಹೊರಡಲು, ಅಭಿತಸ್ಥತುಃ - ಎದುರಾಗಿ ನಿಂತರು ॥ ೪ ॥ ತತಃ - ಆ ಪ್ರದೇಶದಿಂದ, ಪ್ರಯಾತೌ - ಹೊರಟಿರುವ, ಮಹಾವೀರ್ಯೌ - ಮಹಾಸಾಮರ್ಥ್ಯವಂತರಾದ, ತೌ-ಆ ರಾಮಲಕ್ಷ್ಮಣರು, ದಿವ್ಯಾಂ-ದೇವತಾಸಂಬಂಧವಾದ, ತ್ರಿಪಥಗಾಂ- (ಗೋ) ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಮಾರ್ಗಗಳನ್ನು ಹೊಂದಿರುವ, ನದೀಂ - ಗಂಗಾನದಿಯನ್ನು, ಸರಯ್ವಾಃ - ಸರಯೂ ನದಿಯ, ಶುಭೇ - ಶುಭಕರವಾದ, ತತ್ರ - ಆ ಪ್ರಸಿದ್ಧವಾದ, ಸಂಗಮೇ - ಸಂಗಮಕ್ಷೇತ್ರದಲ್ಲಿ ದದೃಶಾತೇ - ಕಂಡರು ॥ ೫ ॥ ತತ್ರ - ಆ ಸಂಗಮ ಕ್ಷೇತ್ರದಲ್ಲಿ, ಬಹುವರ್ಷಸಹಸ್ರಾಣಿ - ಅನೇಕ ಸಹಸ್ರ ವರ್ಷಗಳ, ಪರಮಂ - ಬಹಳವಾದ, ತಪಃ - ತಪಸ್ಸನ್ನು, ತಪ್ಯತಾಂ - ಮಾಡುತ್ತಿರುವ, ಉಗ್ರತೇಜಸಾಂ - ಶ್ರೇಷ್ಠವಾದ ತೇಜೋವಂತರಾದ, ಋಷೀಣಾಂ - ಋಷಿಗಳ, ಪುಣ್ಯಂ - ಪುಣ್ಯಕರವಾದ, ಆಶ್ರಮಪದಂ - ಆಶ್ರಮಸ್ಥಳವನ್ನು, ದದೃಶಾತೆ - ಕಂಡರು ॥ ೬ ॥ ರಾಘವೌ ರಾಮಲಕ್ಷ್ಮಣರು, ಪುಣ್ಯಂ-ಪುಣ್ಯಕರವಾದ, ತಮಾಶ್ರಮಂ - ಆ ಆಶ್ರಮವನ್ನು, ದೃಷ್ಟ್ವಾ - ಕಂಡು, ಪರಮಪ್ರೀತೌ - ಬಹಳ ಸಂತೋಷಗೊಂಡು, ಮಹಾತ್ಮಾನಂ - ಮಹಾಪ್ರಭಾವರಾದ, ತಂವಿಶ್ವಾಮಿತ್ರಂ - ಆ ವಿಶ್ವಾಮಿತ್ರನನ್ನು ಕುರಿತು, ಇದಂವಚಃ - ಈ ಮಾತನ್ನು, ಊಚತುಃ - ಹೇಳಿದರು. ॥ ೭ ॥ ಹೇ ಭಗವನ್ -ಎಲೈ ಷಡ್ಗುಣೈಶ್ವರ್ಯ ಸಂಪನ್ನನೆ! ಪುಣ್ಯಃ - ಪುಣ್ಯಕರವಾದ, ಅಯಮಾಶ್ರಮಃ - ಈ ಆಶ್ರಮವು, ಕಸ್ಯ-ಯಾರದು? ಕಃಪುಮಾನ್ - ಯಾವ ಪುರುಷನು, ಅಸ್ಮಿನ್ - ಈ ಆಶ್ರಮದಲ್ಲಿ, ವಸತೇ - ಇರುತ್ತಾನೆ? ಶ್ರೋತುಂ - ಕೇಳಲು, ಇಚ್ಛಾವಃ - ಇಚ್ಛಿಸುತ್ತೇವೆ, ನೌ - ನಮಗಿಬ್ಬರಿಗೂ, ಪರಂ - ಬಹಳವಾದ,

ಸಂತುಷ್ಟರಾಗಿ, ತೆರಳಲು ಎದುರಾಗಿ ನಿಂತರು ॥೨-೪॥ ಆ ಪ್ರದೇಶದಿಂದ ಮುಂದರಿಯುತ್ತಿರುವ ಮಹಾ ಪರಾಕ್ರಮಿಗಳಾದ ರಾಮ ಲಕ್ಷ್ಮಣರೀರ್ವರು, ದೇವತಾ ಸಂಬಂಧವಾಗಿಯೂ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನೂ ಹೊಂದಿರುವ ಗಂಗಾನದಿಯನ್ನು ಆ ಸರಯೂನದಿಯ ಸಂಗಮಸ್ಥಳದಲ್ಲಿ ಕಂಡರು. ॥ ೫ ॥ ಅಲ್ಲಿಯಾದರೋ, ಅನೇಕ ವರ್ಷಗಳಿಂದ ತಪಸ್ಸಂಗೈಯ್ಯುತ್ತಿರುವ ಮಹಾ ತೇಜಸ್ವಿಗಳಾದ ಋಷಿಗಳ ಪುಣ್ಯಸ್ಥಾನಗಳನ್ನು ಕಂಡು ಮಹಾ ಸಂತುಷ್ಟರಾಗಿ ಮಹಾತ್ಮನಾದ ವಿಶ್ವಾಮಿತ್ರನನ್ನು ಕುರಿತು 'ಎಲೈ ಪೂಜ್ಯನೇ! ಈ ಪುಣ್ಯಾಶ್ರಮವು ಯಾರದು? ಇದರಲ್ಲಿ ಯಾರು ನೆಲಸಿರುವರು? ನಮಗಿದನ್ನು ಕೇಳಲು ಬಹಳವಾದ ಕುತೂಹಲವಿರುವುದು" ಎಂದು ನುಡಿದರು. ॥೬-೭॥ ಆಗ ವಿಶ್ವಾಮಿತ್ರಮುನಿಯು ಮಂದಹಾಸವುಳ್ಳವನಾಗಿಂತೆಂದನು, "ರಾಮ !

ಶ್ರೋತುಮಿಚ್ಛಾವಃ ಪರಂಕೌತೂಹಲಂ ಹಿನೌ ‖ ೮ ‖ ತಯೋಸ್ತದ್ವಚನಂ ಶ್ರುತ್ವಾ ಪ್ರಹಸ್ಯಮುನಿಪುಂಗವಃ ‖ ಅಬ್ರವೀಚ್ಛ್ರೂಯತಾಂ ರಾಮ ಯಸ್ಯಾಯಂಪೂರ್ವ ಆಶ್ರಮಃ ‖ ೯ ‖ ಕಂದರ್ಪೋ ಮೂರ್ತಿಮಾನಾಸೀ ತ್ಕಾಮಇತ್ಯುಚ್ಯತೇಬುಧೈಃ ‖೧೦‖ ತಪಸ್ಯಂತ ಮಿಹಸ್ಥಾಣುಂ ನಿಯಮೇನ ಸಮಾಹಿತಂ ‖ ಕೃತೋದ್ವಾಹಂತು ದೇವೇಶಂ ಗಚ್ಛಂತಂ ಸಮರುದ್ಗಣಂ ‖ ಧರ್ಷಯಾಮಾಸ ದುರ್ಮೇಧಾ ಹುಂಕೃತಶ್ಚ ಮಹಾತ್ಮನಾ‖೧೧‖ಅವದಗ್ಧಸ್ಯರೌದ್ರೇಣ ಚಕ್ಷುಷಾ

---

ಕೌತೂಹಲಂಹಿ - ಕುತೂಹಲವಷ್ಟೆ. ‖ ೮ ‖ ತಯೋಃ - ಅವರ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಮುನಿಪುಂಗವಃ - ವಿಶ್ವಾಮಿತ್ರನು, ಪ್ರಹಸ್ಯ - ನಕ್ಕು, ಹೇರಾಮ - ಎಲೈ ಶ್ರೀರಾಮನೆ, ಅಯಂ - ಇದು, ಯಸ್ಯ - ಯಾವನ, ಪೂರ್ವಃ - ಬಹುಪುರಾತನವಾದ, ಆಶ್ರಮಃ- ಆಶ್ರಮವೋ, ಸಃ - ಅದು, ಶ್ರೂಯತಾಂ - ಕೇಳಲ್ಪಡಲಿ, ಇತಿ - ಇಂತೆಂದು, ಅಬ್ರವೀತ್ - ನುಡಿದನು. ‖ ೯ ‖ ಯಃ - ಯಾವ, ಕಂದರ್ಪಃ - ಮನ್ಮಥನು, ಮೂರ್ತಿಮಾನ್ - ಶರೀರವುಳ್ಳವನಾಗಿ, ಬುಧೈಃ-ದೇವತೆಗಳಿಂದ, ಕಾಮಇತಿ - ಕಾಮನೆಂದು, ಉಚ್ಯತೇ - ಹೇಳಲ್ಪಡುತ್ತಾನೆಯೋ, ಸಃ - ಆ ಕಂದರ್ಪನು, ಆಸೀತ್ - ಇದ್ದನು, ದುರ್ಮೇಧಾಃ - ದುರ್ಬುದ್ಧಿಯುಳ್ಳ ಆ ಕಾಮನು, ಇಹ - ಇಲ್ಲಿ, ತಪಸ್ಯಂತಂ - ತಪಸ್ಸು ಮಾಡುತ್ತಿರುವ, ನಿಯಮೇನ - ಬ್ರಹ್ಮಚರ್ಯನಿಯಮದಿಂದ, ಸಮಾಹಿತಂ - ಸಮಾಧಿಚಿತ್ತನಾದ, ಕೃತೋದ್ವಾಹಂ, ಕೃತ - ಮಾಡಲ್ಪಟ್ಟ ಉದ್ವಾಹಂ - ವಿವಾಹವುಳ್ಳ, ಗಚ್ಛಂತಂ - ಬರುತ್ತಿರುವ, (ಗೋ)ಸಮರುದ್ಗಣಂ - ದೇವತೆಗಳ ಗುಂಪುಗಳಿಂದೊಡಗೂಡಿದ, ದೇವೇಶಂ-ದೇವತಾಧಿಪತಿಯಾದ, ಸ್ಥಾಣುಂ - ಶಿವನನ್ನು, ಧರ್ಷಯಾಮಾಸ - ಪಾರ್ವತಿಯನ್ನು ಮೋಹಿಸವಂತೆ ಮಾಡಿದನು, (ಮ) ಉದ್ವಾಹಂ - ವಿವಾಹವನ್ನು, ಕೃತ್ವಾ = ಮಾಡಿಕೊಂಡು, ಗಚ್ಛಂತಂ-ಬರುತ್ತಿರುವ, ಇಹ - ಈ ಆಶ್ರಮದಲ್ಲಿ, ತಪಸ್ಯಂತಂ- ತಪಸ್ಸು ಮಾಡುತ್ತಿರುವ, ಸ್ಥಾಣುಂ=ಪರಮೇಶ್ವರನನ್ನು, ಧರ್ಷಯಾಮಾಸ=ತಿರಸ್ಕರಿಸಿದನು.(ಮುನಿಪ್ರಭಾಪ್ರಕಾಶಿಕಾ)ಸಃ-ಆಮನ್ಮಥನು,ಗಚ್ಛಂತಂ-ಅಂತಃಬಹಿಶ್ಚ ಸಂಚಾರ ಮಾಡುತ್ತಿರುವ, ಮರುದ್ಗಣಂ - ಪಂಚಪ್ರಾಣ ಸಮುದಾಯವನ್ನು ಕುರಿತು, ಕೃತೋದ್ವಾಹಂ, ಕೃತ - ಮಾಡಲ್ಪಟ್ಟ, ಉದ್ವಾಹಂ - ನಿರೋಧವುಳ್ಳ, ನಿಯಮೇನ-ನಿಯಮದಿಂದ, ಸಮಾಹಿತಂ - ಕೂಡಿಕೊಂಡಿರುವ, ತಪಸ್ಯಂತಂ - ತಪಸ್ಸು ಮಾಡುತ್ತಿರುವ, ಸ್ಥಾಣುಂ-ಈಶ್ವರನನ್ನು, ಧರ್ಷಯಾಮಾಸ - ತಿರಸ್ಕರಿಸಿದನು, ಅಥವ ತಪಸಿ-ತಪೋವಿಷಯವಲ್ಲಿ, ಅಂತಂ-ಸಿದ್ಧಿಯನ್ನು, ಗಚ್ಛಂತಂ - ಹೊಂದುತ್ತಿರುವ, ಸಮರುದ್ಗಣಂ - ದೇವತಾ ತಂಡಗಳಿಂದೊಡಗೂಡಿದ, ಕೃತೋದ್ವಾಹಂ - ಕೃತಾಭ್ಯುತ್ಥಾನವುಳ್ಳ, ಸ್ಥಾಣುಂ- ಪರಮೇಶ್ವರನನ್ನು, ಧರ್ಷಯಾಮಾಸ-ತಿರಸ್ಕರಿಸಿದನು, ಮಹಾತ್ಮನಾ - ಮಹಾ ಪ್ರಭಾವವಂತನಾದ ಪರಮೇಶ್ವರನಿಂದ, ಹುಂಕೃತಶ್ಚ- ಹುಂಕಾರದಿಂದ ತಿರಸ್ಕರಿಸಲ್ಪಟ್ಟನು. ‖ ೧೧ ‖ ಹೇರಘುನಂದನ- ಎಲೈ ರಘುವಂಶಕ್ಕೆ ಆನಂದಕರನೆ,

---

ಕೇಳು; ಪೂರ್ವದಲ್ಲಿ ಕಾಮನೆಂದು ಹೇಳಲ್ಪಡುತ್ತಿರುವ ಮನ್ಮಥನು ದೇಹಧಾರಿಯಾಗಿದ್ದನು. ಈ ಸ್ಥಳದಲ್ಲಿ ತಪಸ್ಸನ್ನು ಮಾಡುತ್ತಿರುವವನೂ, ನಿಯಮದಿಂದೊಡಗೂಡಿದವನೂ, ವಿವಾಹಿತನು, ಮರುದ್ಗಣಸಹಿತವಾಗಿ ಹೋಗುತ್ತಿರುವವನೂ ಆದ ಪರಮೇಶ್ವರನನ್ನು ತಿರಸ್ಕರಿಸಿ ಆ ಮಹಾತ್ಮನಿಂದ ಹುಂಕೃತನಾದನು. ‖೮-೧೧‖ ಪರಮೇಶ್ವರನ ಫಾಲನೇತ್ರದಿಂದ ಸುಡಲ್ಪಟ್ಟ

ರಘುನಂದನ || ವ್ಯಶೀರ್ಯಂತ ಶರೀರಾತ್ಸ್ವಾತ್ಸರ್ವಗಾತ್ರಾಣಿ ದುರ್ಮತೇಃ ||೧೨||
ತಸ್ಯಗಾತ್ರಂ ಹತಂ ತತ್ರ ನಿರ್ದಗ್ಧಸ್ಯ ಮಹಾತ್ಮನಾ || ಅಶರೀರಃ ಕೃತಃ ಕಾಮಃ
ಕ್ರೋಧಾದ್ದೇವೇಶ್ವರೇಣಹಿ ||೧೩|| ಅನಂಗ ಇತಿ ವಿಖ್ಯಾತ ಸ್ತದಾ ಪ್ರಭೃತಿ
ರಾಘವ||ಸಚಾಂಗವಿಷಯಶ್ಶ್ರೀಮಾ ಯತ್ರಾಂಗಂ ಪ್ರಮುಮೋಚಹ ||೧೪||
ತಸ್ಯಾಯಮಾಶ್ರಮಃಪುಣ್ಯ ಸ್ತಸ್ಯೇಮೇ ಮುನಯಃ ಪುರಾ|| ಶಿಷ್ಯಾ ಧರ್ಮಪರಾ
ನಿತ್ಯಂ ತೇಷಾಂ ಪಾಪಂ ನವಿದ್ಯತೇ ||೧೫|| ಇಹಾದ್ಯ ರಜನೀಂ ರಾಮ ವಸೇಮ
ಶುಭದರ್ಶನ || ಪುಣ್ಯಯೋಸ್ಸರಿತೋರ್ಮಧ್ಯೇ ಶ್ವಸ್ತರಿಷ್ಯಾಮಹೇವಯಂ ||೧೬||

---

ರೌದ್ರೇಣ-ಕ್ರೂರವಾದ, ಚಕ್ಷುಷಾ-ನೇತ್ರದಿಂದ, ಅವದಗ್ಧಸ್ಯ-ದಹಿಸಲ್ಪಟ್ಟ, ದುರ್ಮತೇಃ-ದುಷ್ಟಬುದ್ಧಿಯುಳ್ಳ ಮನ್ಮಥನ, ಸರ್ವಗಾತ್ರಾಣಿ – ಅವಯವಗಳೆಲ್ಲವು, ಸ್ವಾತ್-ತನ್ನ, ಶರೀರಾತ್-ಶರೀರದಿಂದ, ವ್ಯಶೀರ್ಯಂತ - ಸೀಳಿಹೋದವು || ೧೨ || ಮಹಾತ್ಮನಾ – ಮಹಾ ಪ್ರಭಾವಂತನಾದ, ದೇವೇಶ್ವರೇಣ - ದೇವೋತ್ತಮನಾದ ಶಿವನ, ಕ್ರೋಧಾತ್ - ಕೋಪದಿಂದ, ನಿರ್ದಗ್ಧಸ್ಯ - ದಹಿಸಲ್ಪಟ್ಟ, ತಸ್ಯ-ಆಮನ್ಮಥನ, ಗಾತ್ರಂ-ಶರೀರವು, ತತ್ರ-ಅಲ್ಲಿಯೆ, ಹತಂ_ಬಿದ್ದುಹೋಯಿತು, ಕಾಮಃ-ಕಾಮನು ಅಶರೀರಃ-ಶರೀರ ರಹಿತನಾಗಿ, ಕೃತೋಹಿ- ಮಾಡಲ್ಪಟ್ಟನಷ್ಟೆ.||೧೩||ಹೇರಾಘವ-ಎಲೈ ಶ್ರೀರಾಮನೆ! ತದಾಪ್ರಭೃತಿ - ಅಂದಿನಿಂದ, ಅನಂಗಇತಿ - ಅನಂಗನೆಂದು, ವಿಖ್ಯಾತಃ - ಪ್ರಸಿದ್ಧನಾದನು, ಯತ್ರ-ಯಾವ ದೇಶದಲ್ಲಿ, ಅಂಗಂ – ಶರೀರವನ್ನು, ಪ್ರಮುಮೋಚಹ-ಬಿಟ್ಟನೋ, ಸಃ-ಅದು, ಶ್ರೀಮಾ-ಸಂಪದ್ಯುಕ್ತವಾದ, ಅಂಗವಿಷಯಶ್ಚ -ಅಂಗದೇಶವೆಂದು, ವಿಖ್ಯಾತಃ - ಪ್ರಸಿದ್ಧವಾಯಿತು. ||೧೪|| ತಸ್ಯ – ಆ ಪರಮೇಶ್ವರನ, ಪುಣ್ಯಃ – ಪುಣ್ಯಕರವಾದ, ಆಶ್ರಮಃ – ಆಶ್ರಮವು, ಪುರಾ-ಪೂರ್ವದಲ್ಲಿ, ಅಯಂ – ಇದು, ಇಮೇಃಮುನಯಃ – ಈ ಋಷಿಗಳು, ತಸ್ಯ – ಆ ಪರಮೇಶ್ವರನ, ಶಿಷ್ಯಾಃ - ಶಿಷ್ಯರಾಗಿ, ನಿತ್ಯಂ – ನಿರಂತರವು, ಧರ್ಮಪರಾಃ – ಧರ್ಮದಲ್ಲೇ ಆಸಕ್ತರು, ತೇಷಾಂ - ಆ ಋಷಿಗಳಿಗೆ, ಪಾಪಂ – ಪಾಪವು, ನವಿದ್ಯತೇ – ಇಲ್ಲವೇ ಇಲ್ಲವು, ||೧೫|| ಹೇರಾಮ-ಎಲೈ ಶ್ರೀರಾಮನೆ! ಹೇಶುಭದರ್ಶನ - ಎಲೈ ಶುಭದೃಷ್ಟಿಯುಳ್ಳವನೆ, ಅದ್ಯ - ಈಗ, ಇಹ - ಇಲ್ಲಿ, ರಜನೀಂ - ರಾತ್ರಿಯಲ್ಲಿ, ಪುಣ್ಯಯೋಃ – ಪುಣ್ಯಕರಗಳಾದ, ಸರಿತೋಃ-ಸರಯೂ ಗಂಗಾನದಿಗಳ, ಮಧ್ಯೇ- ಸಂಗಮದಲ್ಲಿ, ವಸೇಮ – ಇರೋಣ, ಶ್ವಃ-ನಾಳೆ, ವಯಂ - ನಾವು, ತರಿಷ್ಯಾಮಹೇ - ದಾಟುವೆವು, || ೧೬ ||

---

ದುರ್ಬುದ್ಧಿಯುಳ್ಳ ಮನ್ಮಥನ ಶರೀರವೆಲ್ಲ ಸೀಳಿಹೋಯಿತು. ||೧೨|| ಆಗಲಾ ಕಾಮನ ಶರೀರವು ಅಲ್ಲಿಯೇ ಬಿದ್ದು ಅಶರೀರವಾಯಿತು. || ೧೩ || "ಎಲೈ ರಘುನಂದನನೇ ! ಅದುಮೊದಲ್ಗೊಂಡು ಆಕಾಮನು ಅನಂಗನೆಂದು ವಿಖ್ಯಾತನಾದನು. ಆತನು ಶರೀರತ್ಯಾಗವನ್ನು ಮಾಡಿದ ಸ್ಥಳವು ಅಂಗದೇಶವೆಂದು ಪ್ರಸಿದ್ಧಿಯಾಗಿರುವದು. ||೧೪|| ಪೂರ್ವದಲ್ಲಿ ಇದು ಆ ಪರಮೇಶ್ವರನಿಗೆ ಆಶ್ರಮವಾಗಿದ್ದಿತು. ಈ ಋಷಿಗಳು ಆತನ ಶಿಷ್ಯರಾಗಿ ನಿರಂತರವೂ ಧರ್ಮಪರರಾಗಿರುವರು ; ಇವರಿಗೆ ಪಾಪಲೇಶವೆಂಬುದೇ ಇಲ್ಲವು. || ೧೫ || ಎಲೈ ಶ್ರೀರಾಮನೇ ! ನಾವು ಈ ಸರಯೂನದಿ, ಗಂಗಾನದಿಗಳ, ಸಂಗಮಕ್ಷೇತ್ರದಲ್ಲಿ ಈ ರಾತ್ರಿ ಇದ್ದು. ನಾಳೆಯ ಪ್ರಾತಃಕಾಲದಲ್ಲಿ ನದಿಯನ್ನು ದಾಂಟುವ. || ೧೬ || ಓ ನರಶ್ರೇಷ್ಠ !

ಅಭಿಗಚ್ಛಾಮಹೇ ಸರ್ವೇ ಶುಚಯಃ ಪುಣ್ಯಮಾಶ್ರಮಂ || ಸ್ನಾತಾಶ್ಚ ಕೃತ ಜಪ್ಯಾಶ್ಚ ಹುತಹವ್ಯಾ ನರೋತ್ತಮ || ೧೭ || ತೇಷಾಂ ಸಂವದತಾಂ ತತ್ರ ತಪೋ ದೀರ್ಘೇಣ ಚಕ್ಷುಷಾ|| ವಿಜ್ಞಾಯ ಪರಮಪ್ರೀತಾ ಮುನಯೋ ಹರ್ಷ ಮಾಗಮನ್ || ೧೮ || ಅರ್ಘ್ಯಂ ಪಾದ್ಯಂ ತಥಾತಿಥ್ಯಂ ನಿವೇದ್ಯ ಕುಶಿಕಾತ್ಮಜೇ|| ರಾಮಲಕ್ಷ್ಮಣಯೋಃ ಪಶ್ಚಾದಕುರ್ವನ್ನತಿಥಿಕ್ರಿಯಾಂ ||೧೯|| ಸತ್ಕಾರಂ ಸಮನುಪ್ರಾಪ್ಯ ಕಥಾಭಿ ರಭಿರಂಜಯನ್ || ಯಥಾರ್ಹಮಜಪನ್ ಸಂಧ್ಯಾ ಮೃಷಯಸ್ತೇ ಸಮಾಹಿತಾಃ ||೨೦|| ತತ್ರವಾಸಿಭಿರಾನೀತಾ ಮುನಿಭಿ ಸ್ಸುವ್ರ

ಹೇನರೋತ್ತಮ - ಎಲೈ ನರಶ್ರೇಷ್ಠನೆ, ಸ್ನಾತಾಶ್ಚ - ಸ್ನಾನ ಮಾಡಿದವರಾಗಿ, ಶುಚಯಃ-ಪರಿಶುದ್ಧರಾದ, ಸರ್ವೇ - ಸಮಸ್ತರಾದ ನಾವು, ಕೃತಜಪ್ಯಾಶ್ಚ, ಕೃತ- ಮಾಡಲ್ಪಟ್ಟ, ಜಪ್ಯಾಃ ಜಪಿಸತಕ್ಕ ಮಂತ್ರಗಳುಳ್ಳವರಾಗಿ, ಹುತಹವ್ಯಾಃ, ಹುತ- ಹೋಮ ಮಾಡಲ್ಪಟ್ಟ, ಹವ್ಯಾಃ - ಹವಿರ್ಭಾಗಗಳುಳ್ಳವರಾಗಿ, ಪುಣ್ಯಂ - ಪುಣ್ಯಕರವಾದ, ಆಶ್ರಮಂ - ಆಶ್ರಮವನ್ನು ಕುರಿತು, ಅಭಿಗಚ್ಛಾಮಹೇ-ಹೋಗೋಣ, || ೧೭ || ತೇಷಾಂ - ಆ ಮೂವರು, ತತ್ರ- ಆ ಸಂಗಮಕ್ಷೇತ್ರದಲ್ಲಿ, ಸಂವದತಾಂ-ಮಾತನಾಡುತ್ತಿರಲು, ತಪೋದೀರ್ಘೇಣ, ತಪಃ - ತಪಸ್ಸಿನಿಂದ, ದೀರ್ಘೇಣ-ದೂರದೃಷ್ಟಿಯುಳ್ಳ, ಚಕ್ಷುಷಾ- ಜ್ಞಾನಚಕ್ಷುಸ್ಸಿನಿಂದ, ವಿಜ್ಞಾಯ-ತಿಳಿದು, ಪರಮಪ್ರೀತಾಃ - ಬಹಳ ಸಂತೋಷಗೊಂಡ, ಮುನಯಃ - ಋಷಿಗಳು, ಹರ್ಷಂ - ಸಂತೋಷವನ್ನು, ಆಗಮನ್ - ಹೊಂದಿದರು, || ೧೮ || ಕುಶಿಕಾತ್ಮಜೇ - ವಿಶ್ವಾಮಿತ್ರನಲ್ಲಿ, ಅರ್ಘ್ಯಂ-ಅರ್ಘ್ಯವನ್ನು, ಪಾದ್ಯಂ - ಪಾದೋದಕವನ್ನು, ತಥಾ - ಹಾಗೆಯೇ, ಆತಿಥ್ಯಂಚ - ಅತಿಥಿ ಸತ್ಕಾರವನ್ನು, ನಿವೇದ್ಯ - ಸಮರ್ಪಿಸಿ, ಪಶ್ಚಾತ್ - ಬಳಿಕ, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರಿಬ್ಬರಿಗೂ, ಅತಿಥಿಕ್ರಿಯಾಂ - ಅತಿಥಿ ಸತ್ಕಾರವನ್ನು, ಅಕುರ್ವನ್-ಮಾಡಿದರು. || ೧೯ || ತೇಋಷಯಃ - ಆ ಋಷಿಗಳು, ಸತ್ಕಾರಂ - ಪೂಜೆಯನ್ನು, ಸಮನುಪ್ರಾಪ್ಯ - ಹೊಂದಿ, ಕಥಾಭಿಃ - ಪ್ರಸ್ತಾಪಗಳಿಂದ, ಯಥಾರ್ಹಂ - ಯಥಾ ಯೋಗ್ಯವಾಗಿ, ಅಭಿರಂಜಯನ್ - ಮನಸ್ಸಂತೋಷಗೊಳಿಸಿದರು, ಸಮಾಹಿತಾಃ . ಸಮಾಧಾನ ಚಿತ್ತರಾಗಿ, ಸಂಧ್ಯಾಂ-ಸಂಧ್ಯಾಭಿಮಾನ ದೇವತೆಯನ್ನು, ಅಜಪನ್ - ಉಪಾಸನೆಮಾಡಿದರು. ||೨೦|| ತತ್ರ- ಆ ಆಶ್ರಮದಲ್ಲಿ, ವಾಸಿಭಿಃ - ನಿವಾಸಿಗಳಾದ, ಸುವ್ರತೈಃ - ನಿಯಮನಿಷ್ಠಾಪರರಾದ, ಮುನಿಭಿಃಸಹ- ಋಷಿಗಳೊಡನೆ, ಆನೀತಾ - ಕರೆದುಕೊಂಡು ಹೋಗಲ್ಪಟ್ಟವರಾಗಿ, ತದಾ - ಆ ಕಾಲದಲ್ಲಿ,

ನಾವೆಲ್ಲರೂ, ಸ್ನಾನಸಂಧ್ಯೆ ಜಪವನ್ನು ಮಾಡಿ ಹವಿರ್ಭಾಗಗಳನ್ನಿತ್ತು ಪುಣ್ಯಕರವಾದ ಆಶ್ರಮವನ್ನು ಪ್ರವೇಶಿಸುವ" ಎಂದನು. ಹೀಗೆಮಾತನಾಡುತ್ತಿರಲು, ಆಶ್ರಮವಾಸಿಗಳಾದ ಮಹಾ ಮುನಿಗಳು, ಜ್ಞಾನದೃಷ್ಟಿಯಿಂದ ಇವರ ಬರುವಿಕೆಯನ್ನು ತಿಳಿದು ಸಂತುಷ್ಟರಾಗಿ ಕುಶಿಕಪುತ್ರನಾದ ವಿಶ್ವಾಮಿತ್ರನಿಗೆ ಅರ್ಘ್ಯಪಾದ್ಯಾದಿಗಳನ್ನೂ, ಹಾಗೆಯೇ ಆತಿಥ್ಯವನ್ನೂಮಾಡಿ ರಾಮ ಲಕ್ಷ್ಮಣರಿಗೂ ಅತಿಥಿಸತ್ಕಾರಗಳನ್ನರ್ಪಿಸಿ ಪ್ರಸ್ತಾವಗಳಿಂದ ಯಥಾಯೋಗ್ಯವಾಗಿ ಮನಸ್ಸಂತೋಷಗೊಳಿಸಿ, ಸಾವಧಾನಚಿತ್ತರಾಗಿ,ಸಂಧ್ಯೋಪಾಸನೆಯನ್ನುಮಾಡಿದರು||೨೦||ಆ ಆಶ್ರಮದಲ್ಲಿ ವಾಸಿಸುತ್ತಿರುವ ಮುನಿಗಳಿಂದ ಕರೆದುಕೊಂಡು ಹೋಗಲ್ಪಟ್ಟ

ತೈಸ್ಸಹ || ನ್ಯವಸನ್ ಸುಸುಖಂ ತತ್ರ ಕಾಮಾಶ್ರಮಪದೇ ತದಾ ||೨೧|| ಕಥಾಭಿ ರಭಿರಾಮಾಭಿ ರಭಿರಾಮೌ ನೃಪಾತ್ಮಜೌ||ರಮಯಾಮಾಸ ಧರ್ಮಾತ್ಮಾ ಕೌಶಿಕೋ ಮುನಿಪುಂಗವಃ ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯೋವಿಂಶಸ್ಸರ್ಗಃ.



---

ತತ್ರ-ಆ, ಕಾಮಾಶ್ರಮಪದೇ - ಮನ್ಮಥಾಶ್ರಮಸ್ಥಾನದಲ್ಲಿ, ಸುಸುಖಂ - ಬಹಳ ಸುಖವಾಗಿ, ನ್ಯವಸನ್ - ಇರುತ್ತಿದ್ದರು, ||೨೧|| ಧರ್ಮಾತ್ಮಾ - ಧರ್ಮಿಷ್ಠನಾದ, ಮುನಿಪುಂಗವಃ - ಋಷಿಶ್ರೇಷ್ಠನಾದ, ಕೌಶಿಕಃ - ಕುಶಿಕ ವಂಶೋತ್ಪನ್ನನಾದ ವಿಶ್ವಾಮಿತ್ರನು, ಅಭಿರಾಮಾಭಿಃ- ಇಂಪಾಗಿರುವ, ಕಥಾಭಿಃ - ಕಥೆಗಳಿಂದ, ಅಭಿರಾಮೌ - ಮನೋಹರಗಳಾದ, ನೃಪಾತ್ಮಜೌ - ರಾಜಪುತ್ರರಾದ ರಾಮಲಕ್ಷಣರನ್ನು, ರಮಯಾಮಾಸ - ಸಂತೋಷಗೊಳಿಸಿದನು. || ೨೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯೋವಿಂಶಸ್ಸರ್ಗಃ.

---

ವರಾಗಿ ಸುಖವಾಗಿದ್ದರು || ೨೧ || ಆ ಸಮಯದಲ್ಲಿ ಮುನಿಪುಂಗವನಾದ ವಿಶ್ವಾಮಿತ್ರ ಮುನಿಯು ಮನೋಹರಗಳಾದ ಕಥೆಗಳಿಂದ ಆ ರಾಮ ಲಕ್ಷ್ಮಣರನ್ನು ಸಂತೋಷಗೊಳಿಸಿದನು. || ೨೨ ||

ಇಂತಿದು ವಿಶ್ವಾಮಿತ್ರಕೃತ ಕಾಮಾಶ್ರಮ ವರ್ಣನವೆಂಬ
ಇಪ್ಪತ್ತಮೂರನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಚತುರ್ವಿಂಶಸ್ಸರ್ಗಃ.



ತತಃಪ್ರಭಾತೇ ವಿಮಲೇ ಕೃತಾಹ್ನಿಕ ಮರಿಂದಮೌ || ವಿಶ್ವಾಮಿತ್ರಂ ಪುರಸ್ಕೃತ್ಯ ನದ್ಯಾಸ್ತೀರಮುಪಾಗತೌ ||೧|| ತೇಚ ಸರ್ವೇ ಮಹಾತ್ಮಾನೋ ಮುನಯ ಸ್ಸಂಶಿತವ್ರತಾಃ || ಉಪಸ್ಥಾಪ್ಯ ಶುಭಾಂ ನಾವಂ ವಿಶ್ವಾಮಿತ್ರಮಥಾ ಬ್ರುವನ್ || ೨ || ಆರೋಹತು ಭವಾನ್ನಾವಂ ರಾಜಪುತ್ರಪುರಸ್ಕೃತಃ || ಅರಿಷ್ಟಂಗಚ್ಛ ಪಂಥಾನಂ ಮಾಭೂತ್ಕಾಲವಿಪರ್ಯಯಃ || ೩ || ವಿಶ್ವಾಮಿತ್ರ ಸ್ತಥೇತ್ಯುಕ್ತ್ವಾ ತಾನೃಷೀನಭಿಪೂಜ್ಯಚ || ತತಾರ ಸಹಿತಸ್ತಾಭ್ಯಾಂ ಸರಿತಂ ಸಾಗರಂಗಮಾಂ || ೪ || ತತಶ್ಶುಶ್ರಾವವೈಶಬ್ದ ಮತಿಸಂರಂಭವರ್ಧಿತಂ ||

---

ತತಃ - ಅನಂತರದಲ್ಲಿ, ವಿಮಲೇ - ನಿರ್ಮಲವಾದ, ಪ್ರಭಾತೇ - ಪ್ರಾತಃಕಾಲದಲ್ಲಿ, ಅರಿಂದಮೌ - ಶತೃಸಂಹಾರಕರಾದ ರಾಮಲಕ್ಷ್ಮಣರು, ಕೃತಾಹ್ನಿಕಾ - ಮಾಡಲ್ಪಟ್ಟ ಪ್ರಾತಃಕಾಲದ ನಿತ್ಯಕರ್ಮವುಳ್ಳ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಪುರಸ್ಕೃತ್ಯ- ಮುಂದಿರಿಸಿಕೊಂಡು, ನದ್ಯಾಃ- ಗಂಗಾನದಿಯ, ತೀರಂ - ದಡವನ್ನು ಕುರಿತು, ಉಪಾಗತೌ - ಬಂದರು ||೧|| ಮಹಾತ್ಮಾನಃ-ಮಹಾ ಮನಸ್ವಿಗಳಾದ, ಸಂಶಿತವ್ರತಾಃ - ತೀಕ್ಷ್ಣವಾದ ಕೃಚ್ಛ್ರಚಾಂದ್ರಾಯಣಾದಿ ವ್ರತಗಳುಳ್ಳ, ಸರ್ವೇ- ಸಮಸ್ತ, ತೇಮುನಯಃ - ಆ ಋಷಿಗಳು, ಶುಭಾಂ-ಶುಭವಾದ, ನಾವಂ-ಹಡಗನ್ನು, ಉಪಸ್ಥಾಪ್ಯ- ಸಮೀಪದಲ್ಲಿ ನಿಲ್ಲಿಸಿ, ಅಥ - ಬಳಿಕ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಅಬ್ರುವನ್ ನುಡಿದರು. || ೨ || ಭವಾನ್ - ನೀನು, ರಾಜಪುತ್ರಪುರಸ್ಕೃತಃ - ರಾಜಪುತ್ರರಿಂದ ಪೂಜಿಸಲ್ಪಟ್ಟು, ನಾವಂ- ಹಡಗನ್ನು, ಆರೋಹತು-ಏರುವವನಾಗು, ಅರಿಷ್ಟಂ-ಶುಭವಾಗುವಂತೆ, ಪಂಥಾನಂ-ಮಾರ್ಗದಲ್ಲಿ, ಗಚ್ಛ-ಹೋಗು, ಕಾಲವಿಪರ್ಯಯಃ-ಕಾಲವಿಳಂಬವು, ಮಾಭೂತ್-ಆಗದಿರಲಿ, ||೩|| ವಿಶ್ವಾಮಿತ್ರಃ- ವಿಶ್ವಾಮಿತ್ರನು, ತಥೇತಿ-ಹಾಗೆಯೇಆಗಲೆಂದು, ತಾನ್‌ಋಷೀನ್-ಆ ಋಷಿಗಳನ್ನುಕುರಿತು, ಉಕ್ತ್ವಾ- ಹೇಳಿ, ಅಭಿಪೂಜ್ಯಚ- ಬಹುಮಾನಿಸಿ, ತಾಭ್ಯಾಂ - ಆ ರಾಮಲಕ್ಷ್ಮಣರೊಡನೆ, ಸಹಿತಂ - ಕೂಡಿ, ಸಾಗರಂಗಮಾಂ - ಸಮುದ್ರವನ್ನು ಕುರಿತು ಹೋಗುವ, ಸರಿತಂ - ಗಂಗಾನದಿಯನ್ನು, ತತಾರ- ದಾಟಿದನು. || ೪ || ತತಃ - ಬಳಿಕ, ರಾಮಃ-ಶ್ರೀರಾಮನು, ಕನೀಯಸಾಸಹ- ತಮ್ಮನೊಡನೆ,

---

ಪ್ರಾತಃಕಾಲವಾಗಲು, ರಾಮ ಲಕ್ಷ್ಮಣರು ಪ್ರಾತಸ್ಸಂಧ್ಯಾವಂದನೆಯನ್ನು ಮಾಡಿ ವಿಶ್ವಾಮಿತ್ರನನ್ನು ಮುಂದುಮಾಡಿಕೊಂಡು ನದಿಯತೀರವನ್ನು ಹೊಂದಲು, ಮಹಾತ್ಮರೂ ಚಾಂದ್ರಾಯಣಾದಿ ವ್ರತಾನುಷ್ಠಾನಪರರೂ ಆದ ಆ ತಾಪಸರೆಲ್ಲರೂ, ಶುಭವಾದ ಹಡಗನ್ನು ಸಮೀಪದಲ್ಲಿ ನಿಲ್ಲಿಸಿ ವಿಶ್ವಾಮಿತ್ರನನ್ನು ಕುರಿತು || ೨ || "ಎಲೈ ಕೌಶಿಕನೇ! ನೀನು ರಾಜಪುತ್ರರಾದ ರಾಮ ಲಕ್ಷ್ಮಣರಿಂದ ಪೂಜಿತನಾಗಿ ಹಡಗನ್ನೇರಿ ದಾರಿಯಲ್ಲಿ ಶುಭವಾಗಿ ಹೋಗು ; ಕಾಲ ವಿಳಂಬವಾಗದಿರಲಿ" ಎಂದರು. ಆಗ ವಿಶ್ವಾಮಿತ್ರಮುನಿಯು

ಮಧ್ಯಮಾಗಮ್ಯತೋಯಸ್ಯ ಸಹರಾಮಃ ಕನೀಯಸಾ ॥ ೫ ॥ ಅಥರಾಮ
ಸ್ಸರಿನ್ಮಧ್ಯೇ ಪಪ್ರಚ್ಛ ಮುನಿಪುಂಗವಂ॥ವಾರಿಣೋ ಭಿದ್ಯಮಾನಸ್ಯ ಕಿಮಯಂ
ತುಮುಲೋಧ್ವನಿಃ ॥೬॥ ರಾಘವಸ್ಯ ವಚಶ್ಶ್ರುತ್ವಾ ಕೌತೂಹಲ ಸಮನ್ವಿತಃ॥
ಕಥಯಾಮಾಸ ಧರ್ಮಾತ್ಮಾ ತಸ್ಯ ಶಬ್ದಸ್ಯ ನಿಶ್ಚಯಂ ॥ ೭ ॥ ಕೈಲಾಸಪರ್ವತೇ
ರಾಮ ಮನಸಾ ನಿರ್ಮಿತಂ ಸರಃ ॥ ಬ್ರಹ್ಮಣಾ ನರಶಾರ್ದೂಲ ತೇನೇದಂ ಮಾ
ನಸಂ ಸರಃ ॥೮॥ ತಸ್ಮಾತ್ಸುಸ್ರಾವ ಸರಸ ಸ್ಸಾಯೋಧ್ಯಾಮುಪಗೂಹತೇ ॥

---

ತೋಯಸ್ಯ - ಗಂಗೋದಕದ, ಮಧ್ಯಂ - ಮಧ್ಯಪ್ರದೇಶವನ್ನು ಕುರಿತು, ಆಗಮ್ಯ ಬಂದು, ಅತಿಸಂರಂಭವರ್ಧಿತಂ, ಅತಿ - ಅತ್ಯಂತವಾಗಿ, ಸಂರಂಭ - ಪರಸ್ಪರ ತರಂಗ ಘಟ್ಟನೆಯಿಂದ, ವರ್ಧಿತಂ- ಪ್ರವರ್ಧಮಾನವಾದ, ಶಬ್ದಂವೈ - ಧ್ವನಿಯನ್ನು, ಶುಶ್ರಾವ - ಕೇಳಿದನು ॥೫॥ ಅಥ ಅನಂತರದಲ್ಲಿ, ರಾಮಃ - ಶ್ರೀರಾಮನು, ಸರಿನ್ಮಧ್ಯೇ - ಗಂಗಾ ಸರಯೂ ನದಿಗಳ ಮಧ್ಯದಲ್ಲಿ, ಭಿದ್ಯಮಾನಸ್ಯ - ಅನ್ಯೋನ್ಯವಾಗಿ ಕೂಡುತ್ತಿರುವ, ವಾರಿಣಃ - ಉದಕದ, ತುಮುಲಃ-ಸಂಕುಲವಾದ, ಅಯಂ ಧ್ವನಿಃ - ಈ ಧ್ವನಿಯು, ಕಿಂ - ಏತ್ತಣದು, ॥ ೬ ॥ ರಾಘವಸ್ಯ - ಶ್ರೀರಾಮನ, ವಚಃ-ವಚನವನ್ನು, ಶ್ರುತ್ವಾ - ಕೇಳಿ, ಕೌತೂಹಲಸಮನ್ವಿತಃ - ಹೇಳಬೇಕೆಂಬ ಅಭಿಲಾಷೆಯಿಂದ ಕೂಡಿದ, ಧರ್ಮಾತ್ಮಾ- ಧರ್ಮಿಷ್ಠನಾದ ವಿಶ್ವಾಮಿತ್ರನು, ತಸ್ಯಶಬ್ದಸ್ಯ - ಆ ಧ್ವನಿಯ, ನಿಶ್ಚಯಂ - ಉತ್ಪತ್ತಿ ಕಾರಣವನ್ನು, ಕಥಯಾಮಾಸ - ಹೇಳಿದನು. ॥ ೭ ॥ ಹೇರಾಮ - ಎಲೈ ಶ್ರೀರಾಮನೆ, ಕೈಲಾಸಪರ್ವತೇ ಕೈಲಾಸವೆಂಬ ಪರ್ವತದಲ್ಲಿ, ಬ್ರಹ್ಮಣಾ-ಬ್ರಹ್ಮದೇವನಿಂದ, ಮನಸಾ- ಮನಸ್ಸಿನಿಂದ, ಸರಃ- ಸರೋವರವು, ನಿರ್ಮಿತಂ - ನಿರ್ಮಿಸಲ್ಪಟ್ಟಿತು, ಹೇನರಶಾರ್ದೂಲ - ಎಲೈ ಮನುಷ್ಯಶ್ರೇಷ್ಠನ,ತೇನ-ಆ ಮನೋನಿರ್ಮಾಣ ರೂಪಕಾರಣದಿಂದ, ಇದಂಸರಃ - ಈ ಸರೋವರವು, ಮಾನಸಂ - ಮಾನಸವೆಂಬ ಹೆಸರುಳ್ಳದ್ದಾಯಿತು ॥೮॥ ತಸ್ಮಾತ್ಸರಸಃ - ಆ ಸರೋವರದಿಂದ, ಸಾ - ಆ ಸರಯೂನದಿಯು, ಸುಸ್ರಾವ- ಪ್ರವಹಿಸಿತು, ಸರಃಪ್ರವೃತ್ತಾ - ಮಾನಸ ಸರಸ್ಸಿನಿಂದ ಪ್ರವಹಿಸಿದ, ಪುಣ್ಯಾ-ಪುಣ್ಯಕರವಾದ ಆ ನದಿಯು, ಸರಯೂಃ- ಸರಯೂ ಎಂಬ ಹೆಸರುಳ್ಳದ್ದಾಗಿ, ಬ್ರಹ್ಮಸರಶ್ಚ್ಯುತಾ - ಬ್ರಹ್ಮಸರೋವರದಿಂದ ಪ್ರವಹಿಸಿದ್ದು, ಅಯೋಧ್ಯಾಂ- ಅಯೋಧ್ಯಾ ಪಟ್ಟಣವನ್ನು,ಉಪಗೂಹತೇ- ಸುತ್ತಿಕೊಂಡಿದೆ.॥೯॥

---

ಹಾಗೆಯೇ ಆಗಲೆಂದು ಆ ಮುನಿಗಳನ್ನು ಪೂಜಿಸಿ ಆ ರಾಮ ಲಕ್ಷ್ಮಣರೊಡನೆ ನದಿಯನ್ನು ದಾಂಟಿದನು. ಆ ಬಳಿಕ ಶ್ರೀರಾಮನು ತಮ್ಮನೊಡನೆ ಗಂಗೋದಕ ಮಧ್ಯಕ್ಕೆ ಬಂದು, ಅಲ್ಲಿ ಬಹುತರಂಗೆಗಳಿಂದ ಆಗುತ್ತಿದ್ದ ತುಮುಲವಾದ ಶಬ್ದವನ್ನು ಕೇಳಿ, ಭೇದಿಸಲ್ಪಡುತ್ತಿರುವ ಶಬ್ದವು ಸರಿನ್ಮಧ್ಯದಲ್ಲಿ ಉಂಟಾಗುವಪದಕ್ಕೆ ಕಾರಣವೇನೆಂದು ವಿಶ್ವಾಮಿತ್ರನನ್ನು ಕೇಳಿದನು. ವಿಶ್ವಾಮಿತ್ರನು ಅದನ್ನು ಹೇಳಲು ಕುತೂಹಲಗೊಂಡು ಹೀಗೆಂದನು. ॥ ೭ ॥ "ಎಲೈ ಶ್ರೀರಾಮನೆ ! ಪೂರ್ವದಲ್ಲಿ ಕೈಲಾಸ ಪರ್ವತದಲ್ಲಿ ಬ್ರಹ್ಮನಿಂದ ಒಂದು ಸರೋವರವು ಮನಸ್ಸಿನಿಂದ ನಿರ್ಮಿಸಲ್ಪಟ್ಟಿತು; ಮನೋ ನಿರ್ಮಾಣ ರೂಪವಾದುದರಿಂದ ಈ ಸರೋವರವು ಮಾನಸವೆಂಬ ಹೆಸರುಳ್ಳದ್ದಾಯಿತು. ॥೮॥ ಆ ಸರೋವರದಿಂದ ಈ ನದಿಯುಂಟಾಯಿತು; ಆದುದರಿಂದ ಈ ನದಿಯು ಸರಯೂ ಎಂಬ ಹೆಸರುಳ್ಳದ್ದಾಗಿ ಅಯೋಧ್ಯಾಪಟ್ಟಣವನ್ನು

ಸರಃಪ್ರವೃತ್ತಾ ಸರಯೂಃ ಪುಣ್ಯಾ ಬ್ರಹ್ಮಸರಶ್ಚ್ಯುತಾ||೯|| ತಸ್ಯಾಯಮತುಲ ಶ್ಶಬ್ದೋ ಜಾಹ್ನವೀಮಭಿವರ್ತತೇ || ವಾರಿಸಂಕ್ಷೋಭಜೋರಾಮ ಪ್ರಣಾಮಂ ನಿಯತಃಕುರು ||೧೦|| ತಾಭ್ಯಾಂತು ತಾವುಭೌ ಕೃತ್ವಾ ಪ್ರಣಾಮಮತಿ ಧಾರ್ಮಿಕೌ || ತೀರಂ ದಕ್ಷಿಣಮಾಸಾದ್ಯ ಜಗ್ಮತುರ್ಲಘುವಿಕ್ರಮೌ ||೧೧|| ಸವನಂ ಘೋರಸಂಕಾಶಂ ದೃಷ್ಟ್ವಾ ನೃಪವರಾತ್ಮಜಃ|| ಅವಿಪ್ರಹತಮೈಕ್ಷ್ವಾಕಃ ಪಪ್ರಚ್ಛ ಮುನಿಪುಂಗವಂ ||೧೨|| ಅಹೋ ವನಮಿದಂ ದುರ್ಗಂ ಝಿಲ್ಲಿಕಾ ಗಣನಾದಿತಂ || ಭೈರವೈಶ್ಶ್ವಾಪದೈಃ ಪೂರ್ಣಂ ಶಕುಂತೈರ್ದಾರುಣಾ

---

ಹೇರಾಮ - ಎಲೈ ಶ್ರೀರಾಮನೆ, ತಸ್ಯ - ಆ ಸರಯೂ ನದಿಯ, ಅತುಲಃ ಸಮಾನವಿಲ್ಲದಿರುವ, ವಾರಿ ಸಂಕ್ಷೋಭಜಃ, ವಾರಿ-ಉದಕದ, ಸಂಕ್ಷೋಭಜಃ-ಪರಸ್ಪರ ಘಟ್ಟನಯಿಂದ ಹುಟ್ಟಿರುವ, ಅಯಂ-ಈ, ಶಬ್ದಃ ಘೋಷವು, ಜಾಹ್ನವೀಂ - ಗಂಗೆಯನ್ನು, ಅಭಿವರ್ತತೇ- ಹೊಂದುತ್ತದೆ, ನಿಯತಃ- ಭಕ್ತಿ ನಿಯಮದಿಂದ ಯುಕ್ತನಾದವನಾಗಿ, ಪ್ರಣಾಮಂ - ನಮಸ್ಕಾರವನ್ನು, ಕುರು -ಮಾಡು. ||೧೦||ಅತಿ ಧಾರ್ಮಿಕೌ - ಅತಿ ಧರ್ಮಿಷ್ಠರಾದ, ತಾವುಭೌತು - ಆ ರಾಮ ಲಕ್ಷ್ಮಣರು, ತಾಭ್ಯಾಂ - ಆ ಸರಯೂ ಗಂಗಾ ನದಿಗಳಿಗೆ, ಪ್ರಣಾಮಂ- ನಮಸ್ಕಾರವನ್ನು, ಕೃತ್ವಾ-ಮಾಡಿ, ದಕ್ಷಿಣಂ - ದಕ್ಷಿಣ ದಿಕ್ಕಿನಲ್ಲಿ ರುವ, ತೀರಂ - ದಡವನ್ನು, ಆಸಾದ್ಯ- ಹೊಂದಿ, ಲಘುವಿಕ್ರಮೌ-ಶೀಘ್ರವಾದ ಪಾದನ್ಯಾಸವುಳ್ಳವ ರಾಗಿ, ಜಗ್ಮತುಃ - ಹೊರಟರು. ||೧೧|| ನೃಪವರಾತ್ಮಜಃ - ರಾಜಶ್ರೇಷ್ಠನೂ ದಶರಥನ ಕುಮಾರನೂ, ಐಕ್ಷ್ವಾಕಃ - ಇಕ್ಷ್ವಾಕು ವಂಶೋತ್ಪನ್ನನೂ ಆದ, ಸಃ- ಆ ಶ್ರೀರಾಮನು, ಘೋರ ಸಂಕಾಶಂ - ಭಯಂಕರವಾದ ರೂಪವುಳ್ಳ, ಅವಿಪ್ರಹತಂ - ಯಾರಿಂದಲೂ ತುಳಿಯಲ್ಪಡದಿರುವ, ವನಂ - ವನವನ್ನು, ದೃಷ್ಟ್ವಾ-ಕಂಡು, ಮುನಿಪುಂಗವಂ - ವಿಶ್ವಾಮಿತ್ರನನ್ನು ಕುರಿತು, ಪಪ್ರಚ್ಛ- ಪ್ರಶ್ನೆಮಾಡಿದನು, ||೧೨|| ಅಹೋ - ಆಶ್ಚರ್ಯವು, ಝಿಲ್ಲಿಕಾಗಣನಾದಿತಂ- ಹುಳವಿಶೇಷತಂಡ ಗಳಿಂದ ಧ್ವನಿಗೊಳಿಸುತ್ತಿರುವ, ಭೈರವೈಃ - ಭಯಂಕರವಾದ, ಶ್ವಾಪದೈಃ - ಹುಲಿ ಜಾತಿಗಳ ಭೇದ ಗಳಿಂದ, ಪೂರ್ಣಂ - ತುಂಬಿರುವ, ದಾರುಣಾರುತೈಃ - ಕ್ರೂರಧ್ವನಿಗಳುಳ್ಳ, ಶಕುಂತೈಃ - ಪಕ್ಷಿಗಳಿಂ ದಲೂ, ನಾನಾಪ್ರಕಾರೈಃ - ಬಹು ಬಗೆಗಳಾದ, ವಾಶ್ಯದ್ಭಿಃ - ಕೂಗುತ್ತಿರುವ, ಶಕುನೈಃ-ಪಕ್ಷಿಗಳಿಂ

---

ಸುತ್ತುವರೆದಿರುವುದು ||೯|| ಎಲೈ ಶ್ರೀರಾಮನೇ! ಆ ಸರಯೂ ನದೀನೀರಿನ ಸಂಘಟ್ಟನೆಯಿಂದ ಹುಟ್ಟಿದ ಶಬ್ದವಿದು ; ಭಕ್ತಿಯುಳ್ಳವನಾಗಿ ನಮಸ್ಕಾರವನ್ನು ಮಾಡು" ಎಂದು ನುಡಿಯಲು, ಧರ್ಮಿಷ್ಠರಾದ ಆ ರಾಮ ಲಕ್ಷ್ಮಣರೀರ್ವರು ಆ ಗಂಗಾ ಸರಯೂ ನದಿಗಳಿಗೆ ನಮಸ್ಕಾರವನ್ನು ಮಾಡಿ ದಕ್ಷಿಣ ತೀರವನ್ನು ಹೊಂದಿ ಶೀಘ್ರಗಾಮಿಗಳಾಗಿ ಹೊರಟರು ||೧೦-೧೧||ದಶರಥನಂದನನೂ ಇಕ್ಷ್ವಾಕು ವಂಶೋತ್ಪನ್ನನೂ ಆದ ಶ್ರೀರಾಮನು ಬಹು ಭಯಂಕರವಾಗಿಯೂ, ಯಾರಿಂದಲೂ ತುಳಿಯಲ್ಪಡದಿರುವದಾಗಿಯೂ, ಇರುವ ಒಂದಾನೊಂದು ವನವನ್ನು ಕಂಡು, ವಿಶ್ವಾಮಿತ್ರನನ್ನು ಕುರಿತು. ||೧೨|| "ಎಲೈ ಪೂಜ್ಯನೇ! ಚಿಮುಟೆಗಳ ತಂಡಗಳಿಂದ ಧ್ವನಿಗೈಯುತ್ತಿರುವುದಾಗಿಯೂ, ಭಯಂಕರವಾದ ಹುಲಿಗಳಿಂದ ತುಂಬಿರುವದಾಗಿಯೂ, ಕ್ರೂರ ಧ್ವನಿಗಳುಳ್ಳ ಹಕ್ಕಿಗಳಿಂದಲೂ, ಬಗೆಬಗೆಗಳಾಗಿ

ರುತೈಃ||೧೩|| ನಾನಾಪ್ರಕಾರೈಃ ಶಕುನೈರ್ವಾಶ್ಯದ್ಭಿರ್ಭೈರವಸ್ವನೈಃ|| ಸಿಂಹವ್ಯಾಘ್ರವರಾಹೈಶ್ಚ ವಾರಣೈಶ್ಚೋಪಶೋಭಿತಂ ||೧೪|| ಧವಾಶ್ವಕರ್ಣ ಕಕುಭೈರ್ಬಿಲ್ವತಿಂದುಕ ಪಾಟಲೈಃ|| ಸಂಕೀರ್ಣಂ ಬದರೀಭಿಶ್ಚ ಕಿನ್ವೇತದ್ದಾರುಣಂವನಂ||೧೫|| ತಮುವಾಚ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ || ಶ್ರೂಯತಾಂ ವತ್ಸಕಾಕುತ್‌ಸ್ಥ ಯಸ್ಯೈತದ್ದಾರುಣಂ ವನಂ ||೧೬|| ಏತೌಜನಪದಾಸ್ಫೀತೌ ಪೂರ್ವಮಾಸ್ತಾಂ ನರೋತ್ತಮ || ಮಲದಾಶ್ಚಕರೂಶಾಶ್ಚ ದೇವನಿರ್ಮಾಣ ನಿರ್ಮಿತೌ ||೧೭|| ಪುರಾ ವೃತ್ರವಧೇ ರಾಮ ಮಲೇನ ಸಮಭಿಪ್ಲುತಂ|| ಕ್ಷುಧಾ

ದಲೂ, ಭೈರವಸ್ವನೈಃ - ಭಯಂಕರ ಧ್ವನಿಗಳುಳ್ಳ, ಸಿಂಹವ್ಯಾಘ್ರವರಾಹೈಶ್ಚ - ಸಿಂಹಗಳಿಂದಲೂ, ಹುಲಿಗಳಿಂದಲೂ, ಕಾಡುಹಂದಿಗಳಿಂದಲೂ, ವಾರಣೈಶ್ಚ-ಕಾಡಾನೆಗಳಿಂದಲೂ ಉಪಶೋಭಿತಂ-ಹೊಳೆಯುತ್ತಿರುವ, ಧವಾಶ್ವಕರ್ಣಕಕುಭೈಃ, ಧವ - ಕಗ್ಗಲೀ ಗಿಡಗಳಿಂದಲೂ, ಅಶ್ವಕರ್ಣ - ಬಿಳೀಮತ್ತೀ ಗಿಡಗಳಿಂದಲೂ, ಕಕುಭೈಃ - ರಕ್ತಾರ್ಜುನ ವೃಕ್ಷಗಳಿಂದಲೂ, ಬಿಲ್ವತಿಂದುಕಪಾಟಲೈಃ, ಬಿಲ್ವ-ಬಿಲ್ವ ಗಿಡಗಳಿಂದಲೂ, ತಿಂದುಕ - ತುಂಬುರ ಗಿಡಗಳಿಂದಲೂ, ಪಾಟಲೈಃ - ಪಾದರೀ ಗಿಡಗಳಿಂದಲೂ, ಬದರೀಭಿಶ್ಚ - ಎಳಚೇ ಗಿಡಗಳಿಂದಲೂ, ಸಂಕೀರ್ಣಂ - ತುಂಬಿರುವ, ಇದಂವನಂ - ಈ ವನವು, ದುರ್ಗಂ - ಹೊರಡಲಸಾಧ್ಯವಾದುದಾಗಿರುವುದು, ದಾರುಣಂ - ಕ್ರೂರವಾದ, ಏತದ್ವನಂ-ಈವನವು, ಕಿನ್ನು -ಏನು ಹೆಸರುಳ್ಳದ್ದು ? ||೧೪-೧೫|| ಮಹಾತೇಜಾಃ -ಮಹಾತೇಜಸ್ವಿಯಾದ, ಮಹಾಮುನಿಃ-ಮಹಾ ಋಷಿಯಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನು, ತಂ - ಆ ಶ್ರೀರಾಮನನ್ನು ಕುರಿತು, ಹೇ ಕಾಕುಸ್ಥ - ಎಲೈ ಕಕುತ್‌ಸ್ಥವಂಶೋತ್ಪನ್ನನೇ, ದಾರುಣಂ- ಕ್ರೂರವಾದ, ಇದಂವನಂ - ಈ ವನವು, ಯಸ್ಯ-ಯಾರದೋ, ತತ್ - ಅದು, ಶ್ರೂಯತಾಂ- ಕೇಳಲ್ಪಡಲಿ, ಇತಿ - ಇಂತೆಂದು, ಉವಾಚ-ಹೇಳಿದನು ||೧೬|| ಹೇನರೋತ್ತಮ-ಎಲೈ ನರಶ್ರೇಷ್ಠನೆ, ಪೂರ್ವಂ - ಮೊದಲು, ಮಲದಾಶ್ಚ-ಮಲದಗಳೂ, ಕರೂಶಾಶ್ಚ - ಕರೂಶಗಳೂ ಎಂಬ, ದೇವನಿರ್ಮಾಣ ನಿರ್ಮಿತೌ - ದೈವಪ್ರಯತ್ನದಿಂದ ನಿರ್ಮಿತವಾದ, ಸ್ಫೀತೌ - ಸಮೃದ್ಧವಾದ. ಏತೌಜನಪದೌ- ಈ ದೇಶಗಳು, ಆಸ್ತಾಂ - ಇದ್ದವು.||೧೭|| ಹೇರಾಮ - ಎಲೈ ಶ್ರೀರಾಮನೆ, ಪುರಾ - ಪೂರ್ವದಲ್ಲಿ, ವೃತ್ರವಧೇ - ವೃತ್ರಾಸುರ ಸಂಹಾರ

ಕೂಗುತ್ತಿರುವ ಪಕ್ಷಿಗಳಿಂದಲೂ, ಕಾಡಾನೆಗಳಿಂದಲೂ ಕಂಗೊಳಿಸುತ್ತಿರುವದಾಗಿಯೂ, ಕಗ್ಗಲೀ, ಬಿಳೀ, ಮತ್ತೀ, ರಕ್ತಾರ್ಜುನ, ಬಿಲ್ವ, ಪಾದರೀ, ಯಳಿಚೇ ಮುಂತಾದ ವೃಕ್ಷ ಸಮೂಹಗಳಿಂದ, ತುಂಬಿರುವ ಮಹಾಕ್ರೂರವಾದ ದೂ, ಹೊಂದಲಸಾಧ್ಯವಾದುದೂ ಆಗಿರುವ ಈವನವು ಯಾರದು? ಬಹಳ ಆಶ್ಚರ್ಯಕರವಾಗಿರುವದಲ್ಲವೆ” ಎಂದನು. ಆಗ ಮಹಾತೇಜಸ್ವಿಯಾದ ವಿಶ್ವಾಮಿತ್ರಮುನಿಯು ರಾಮನನ್ನು ಕುರಿತಿಂತೆಂದನು.||೧೬||“ರಾಮಚಂದ್ರ! ಕೇಳು, ಪೂರ್ವಕಾಲದಲ್ಲಿ ಮಲದವೆಂತಲೂ, ಕರೂಶವೆಂತಲೂ ಪ್ರಸಿದ್ಧವಾದುದೂ, ದೇವಪ್ರಯತ್ನದಿಂದ ನಿರ್ಮಿತವಾದುದೂ, ವಿಸ್ತಾರವಾದುದೂ ಆದ ದೇಶಗಳಿದ್ದವು. ||೧೭|| ಹಿಂದೆ ವೃತ್ರ ಸಂಹಾರವಾಗಲು ಆ ಪಾಪದಿಂದಲೂ, ಹಸಿವಿನಿಂದಲೂ, ಬಳಲಿದ ದೇವೇಂದ್ರನನ್ನು

ಚೈವ ಸಹಸ್ರಾಕ್ಷಂ ಬ್ರಹ್ಮಹತ್ಯಾ ಸಮಾವಿಶತ್ ||೧೮|| ತಮಿಂದ್ರಂ ಸ್ನಾಪಯರ್ಯ
ದೇವಾ ಋಷಯಶ್ಚ ತಪೋಧನಾಃ || ಕಲಶೈ ಸ್ನಾಪಯಾಮಾಸುರ್ಮಲಂ
ಚಾಸ್ಯ ಪ್ರಮೋಚಯರ್ಯ ||೧೯|| ಇಹಭೂಮ್ಯಾಂ ಮಲಂದತ್ವಾ ದತ್ವಾ ಕಾರೂಶ
ಮೇವಚ || ಶರೀರಜಂ ಮಹೇಂದ್ರಸ್ಯ ತತೋ ಹರ್ಷಂ ಪ್ರಪೇದಿರೇ ||೨೦||
ನಿರ್ಮಲೋ ನಿಷ್ಕರೂಶಶ್ಚ ಶುಚಿರಿಂದ್ರೋ ಯದಾಭವತ್ || ದದೌದೇಶಸ್ಯ
ಸುಪ್ರೀತೋ ವರಂಪ್ರಭುರನುತ್ತಮಂ ||೨೧|| ಇಮೌಜನಪದೌಸ್ಫೀತೌ ಖ್ಯಾತಿಂ

---

ವಾಗಲು, ಮಲೇನ - ಪಾಪವಿಶೇಷದಿಂದ, ಅಥವ ಅಶುಚಿತ್ವದಿಂದ, ಕ್ಷುಧಾವೈ-ಹಸಿವಿನಿಂದಲೂ, ಸಮಭಿಪ್ಲುತಂ - ಮಗ್ಗಿಹೋದ, ಸಹಸ್ರಾಕ್ಷಂ - ದೇವೇಂದ್ರನನ್ನು, ಬ್ರಹ್ಮಹತ್ಯಾ - ಬ್ರಹ್ಮಹತ್ಯೆಯು, ಸಮಾವಿಶತ್ - ಹೊಕ್ಕಿತು. ||೧೮|| ದೇವಾಃ - ದೇವತೆಗಳು, ತಪೋಧನಾಃ - ತಪಸ್ಸೇ ಧನವಾಗುಳ್ಳ, ಋಷಯಶ್ಚ - ಋಷಿಗಳೂ, ತಮಿಂದ್ರಂ - ಆ ಇಂದ್ರನನ್ನು, ಸ್ನಾಪಯರ್ಯ- ಗಂಗಾಸ್ನಾನ ಮಾಡಿಸಿದರು, ಕಲಶೈಃ - ಮಂತ್ರಪೂತಗಳಾದ ಕಲಶೋದಕಗಳಿಂದಲೂ, ಸ್ನಾಪಯಾಮಾಸುಃ- ಅಭಿಷೇಕ ಮಾಡಿಸಿದರು, ಅಸ್ಯ - ಈ ಇಂದ್ರನ, ಮಲಂಚ - ಮಾಲಿನ್ಯವನ್ನೂ. ಪ್ರಮೋಚಯರ್ಯ-ಬಿಡಿಸಿದರು ||೧೯|| ಇಹಭೂಮ್ಯಾಂ - ಈ ಭೂಮಿಯಲ್ಲಿ, ಮಹೇಂದ್ರಸ್ಯ - ಮಹೇಂದ್ರನ, ಶರೀರಜಂ - ಶರೀರದಲ್ಲಿ ಹುಟ್ಟಿರುವ, ಕಾರೂಶಮೇವಚ - ಹಶಿವನ್ನು, ದತ್ವಾ - ಕೊಟ್ಟು, ಮಲಂಚ ಮಲವನ್ನು, ದತ್ವಾ - ಕೊಟ್ಟು, ತತಃ - ಒಳಿಕ, ಹರ್ಷಂ - ಸಂತೋಷವನ್ನು, ಪ್ರಪೇದಿರೇ-ಹೊಂದಿದರು. ||೨೦|| ನಿರ್ಮಲಃ - ಪಾಪರಹಿತನಾದ, ನಿಷ್ಕರೂಶಶ್ಚ-'ಕ್ಷುದ್ಬಾಧಾ ರಹಿತನಾದ, ಇಂದ್ರಃ- ದೇವೇಂದ್ರನು, ಯದಾ - ಯಾವಾಗ. ಶುಚಿಃ - ಪರಿಶುದ್ಧನು, ಅಭವತ್- ಆದನೋ, ತದಾ - ಆಗ- ಪ್ರಭುಃ - ಸಮರ್ಥನಾದ ದೇವೇಂದ್ರನು, ಸುಪ್ರೀತಃ - ಸಂತುಷ್ಟನಾಗಿ, ದೇಶಸ್ಯ - ದೇಶಕ್ಕೆ, ಅನುತ್ತಮಂ - ಸರ್ವೋತ್ತಮವಾದ, ವರಂ-ವರವನ್ನು, ದದೌ-ಕೊಟ್ಟನು. ||೨೧|| ಸ್ಫೀತೌ-ಸಮೃದ್ಧಗಳಾದ, ಇಮೌಜನಪದೌ - ಈ ದೇಶಗಳು, ಮಮ - ನನ್ನ, ಅಂಗಮಲಧಾರಿಣೌ, ಅಂಗ-ದೇಹದಲ್ಲಿನ, ಮಲ - ಮಾಲಿನ್ಯವನ್ನು ಧಾರಿಣೌ - ಧರಿಸಿದವುಗಳಾದ ಕಾರಣ, ಮಲದಾಶ್ಚ - ಮಲದೇಶಗಳು, ಕರೂಶಾಶ್ಚ - ಕರೂಶ ದೇಶಗಳೂ ಎಂದು, ಲೋಕೇ - ಲೋಕದಲ್ಲಿ, ಖ್ಯಾತಿಂ-ಪ್ರಖ್ಯಾತಿಯನ್ನು, ಗಮಿಷ್ಯತಃ ಹೊಂದುವವು, ಇತಿ = ಇಂತೆಂದು, ಅನುತ್ತಮಂ=ಸರ್ವೋತ್ತಮವಾದ, ವರಂ=ವರವನ್ನು

---

ಬ್ರಹ್ಮತ್ಯೆಯೂ ಆವರಿಸಿತು. ಆ ಸಮಯದಲ್ಲಿ ದೇವತೆಗಳೂ, ಋುಷಿಗಳೂ ಸಹಾ ಇಂದ್ರನಿಗೆ ಗಂಗಾಸ್ನಾನವನ್ನುಮಾಡಿಸಿ ಮಂತ್ರಪೂತಗಳಾದ ಉದಕಗಳಿಂದಲೂ ಅಭಿಮಂತ್ರಿಸಿ ||೧೯|| ಈ ಭೂಮಿಯಲ್ಲಿ ಅವನ ಶರೀರದಲ್ಲಿ ಹುಟ್ಟಿರುವ ಮಲವನ್ನೂ, ಹಶಿವನ್ನೂ ಬಿಡಿಸಿ ಮಹಾ ಸಂತೋಷವನ್ನು ಹೊಂದಿದರು ||೨೦|| ಆ ಸಮಯದಲ್ಲಿ ಇಂದ್ರನು ನಿರ್ಮಲನಾಗಿಯೂ, ಹಶಿವಿಲ್ಲದವನಾಗಿಯೂ, ಪರಿಶುದ್ಧನಾಗಿಯೂ, ಸುಪ್ರೀತನಾಗಿಯೂ ಆಗಿ, ಈ ದೇಶಕ್ಕೆ ಸರ್ವೋತ್ತಮವಾದ ವರವನ್ನು ಕೊಟ್ಟನು. ||೨೧|| "ನನ್ನ ಮಲವನ್ನು ಧರಿಸಿರುವ ಈ ದೇಶಗಳು ಮಲದವೆಂತಲೂ, ಕರೂಶವೆಂತಲೂ, ಪ್ರಸಿದ್ಧವಾಗಿರಲಿ"

ಲೋಕೇ ಗಮಿಷ್ಯತಃ|| ಮಲದಾಶ್ಚ ಕರೂಶಾಶ್ಚ ಮಮಾಂಗಮಲಧಾರಿಣೌ||೨೨|| ಸಾಧುಸಾಧ್ವಿತಿ ತಂ ದೇವಾಃ ಪಾಕಶಾಸನಮಬ್ರುವನ್ || ದೇಶಸ್ಯಪೂಜಾಂ ತಾಂ ದೃಷ್ಟ್ವಾ ಕೃತಾಂ ಶಕ್ರೇಣ ಧೀಮತಾ ||೨೩|| ಏತೌ ಜನಪದೌಸ್ಫೀತೌ ದೀರ್ಘ ಕಾಲಮರಿಂದಮ || ಮಲದಾಶ್ಚ ಕರೂಶಾಶ್ಚ ಮುದಿತೌ ಧನಧಾನ್ಯತಃ || ೨೪ || ಕಸ್ಯಚಿತ್ತ್ವಥಕಾಲಸ್ಯ ಯಕ್ಷೀವೈ ಕಾಮರೂಪಿಣೀ|| ಬಲಂ ನಾಗಸಹಸ್ರಸ್ಯ ಧಾರ ಯಂತೀ ತದಾಹ್ಯಭೂತ್ ||೨೫|| ತಾಟಕಾನಾಮ ಭದ್ರಂ ತೇ ಭಾರ್ಯಾ ಸುಂದಸ್ಯ ಧೀಮತಃ|| ಮಾರೀಚೋ ರಾಕ್ಷಸಃ ಪುತ್ರೋ ಯಸ್ಯಾಶ್ಶಕ್ರಪರಾಕ್ರಮಃ ||೨೬|| ವೃತ್ತಬಾಹುರ್ಮಹಾವೀರ್ಯೋ ವಿಪುಲಾಸ್ಯ ತನುರ್ಮಹಾನ್||ರಾಕ್ಷಸೋ ಭೈರವಾ

---

ದದೌ - ಕೊಟ್ಟನು, || ೨೨ || ದೇವಾಃ - ದೇವತೆಗಳು, ದೇಶಸ್ಯ - ದೇಶಕ್ಕೆ, ಧೀಮತಾ-ಬುದ್ಧಿಶಾಲಿ ಯಾದ, ಶಕ್ರೇಣ - ದೇವೇಂದ್ರನಿಂದ, ಕೃತಾಂ - ಮಾಡಲ್ಪಟ್ಟ, ತಾಂಪೂಜಾಂ - ಆ ಮರ್ಯಾದೆ ಯನ್ನು, ದೃಷ್ಟ್ವಾ-ಕಂಡು, ಪಾಕಶಾಸನಂ - ದೇವೇಂದ್ರನನ್ನು ಕುರಿತು, ಸಾಧುಸಾಧು- ಬಹಳ ಚಂದವೆಂದು, ಅಬ್ರುವನ್-ನುಡಿದರು || ೨೩ || ಹೇಅರಿಂದಮ ಎಲೈ ಶತ್ರುಸಂಹಾರಕನೆ! ಸ್ಫೀತೌ- ಅಭಿವೃದ್ಧಿ ಪಡದಿರುವ, ಮಲದಾಶ್ಚ ಕರೂಶಾಶ್ಚೇತಿ - ಮಲದಗಳೂ ಕರೂಶಗಳೂ ಎಂಬ, ಏತೌ ಜನಪದೌ - ಈ ದೇಶಗಳು, ದೀರ್ಘಕಾಲಂ - ಬಹುಕಾಲದಿಂದ, ಧನಧಾನ್ಯತಃ- ಧನಗಳಿಂದಲೂ, ಧಾನ್ಯಗಳಿಂದಲೂ, ಮುದಿತೌ - ಸಂತೋಷವಾಗಿದ್ದವು || ೨೪ || ಕಸ್ಯಚಿತ್ಕಾಲಸ್ಯ- ಅಥ - ಸ್ವಲ್ಪಕಾಲವು ಕಳೆದಮೇಲೆ, ಕಾಮರೂಪಿಣೀ - ಕಾಮರೂಪಿಯಾದ, ಯಕ್ಷೀವೈ - ಯಕ್ಷಸ್ತ್ರೀಯು, ತದಾ - ಆ ಕಾಲದಲ್ಲಿ, ನಾಗಸಹಸ್ರಸ್ಯ - ಸಹಸ್ರ ಆನೆಗಳ, ಬಲಂ - ಬಲವನ್ನು, ಧಾರಯಂತೀ- ಧರಿಸಿರುವಳಾಗಿ, ಧೀಮತಃ - ಬುದ್ಧಿಶಾಲಿಯಾದ, ಸುಂದಸ್ಯ - ಸುಂದನಿಗೆ, ತಾಟಕಾನಾಮ-ತಾಟಕಿ ಎಂದು ಪ್ರಸಿದ್ಧಳಾದ, ಭಾರ್ಯಾ - ಹೆಂಡತಿಯು, ಅಭೂತ್ - ಆದಳು, ತೇ- ನಿನಗೆ, ಭದ್ರಂ-ಶುಭವು, ಅಭವತ್ - ಆಗಲಿ, || ೨೫ || ಯಸ್ಯಾಃ - ಯಾವ ತಾಟಕಿಗೆ, ಪುತ್ರಃ - ಮಗನಾದ, ಶಕ್ರಪರಾ ಕ್ರಮಃ, ಶಕ್ರ - ದೇವೇಂದ್ರನ, ಪರಾಕ್ರಮಃ- ಪರಾಕ್ರಮದಂತೆ ಪರಾಕ್ರಮವುಳ್ಳ, ವೃತ್ತಬಾಹುಃ, ವೃತ್ತ - ಗುಂಡಗಿರುವ, ಬಾಹುಃ-ಭುಜಗಳುಳ್ಳ, ಮಾರೀಚಃ - ಮಾರೀಚನೆಂಬ, ರಾಕ್ಷಸಃ-ರಕ್ಕಸನು, ಅಭೂತ್ - ಆದನು. || ೨೬ || ಮಹಾವೀರ್ಯಃ - ಮಹಾ ಪರಾಕ್ರಮಶಾಲಿಯಾದ, ವಿಪುಲಾಸ್ಯ

---

ಹೀಗೆ ವರವನ್ನು ಕೊಟ್ಟು ಆ ದೇಶಗಳನ್ನು ಪೂಜಿಸಲು ಅದನ್ನು ಕಂಡು ಬ್ರಹ್ಮರ್ಷಿಗಳೂ ದೇವತೆಗಳೂ "ಸಾಧು ! ಸಾಧು" ಎಂದು ಇಂದ್ರನನ್ನು ಕೊಂಡಾಡಿದರು. ||೨೨-೨೩|| ಎಲೈ ಶತ್ರುನಾಶಕನೇ ! ಮಲದವೂ, ಕರೂಶವೂ ಎಂಬ ಈ ದೇಶಗಳೂ ಬಹಳ ಅಭಿವೃದ್ಧಿಯಾ ಗಿಯೂ, ಧನ ಧಾನ್ಯಾದಿಗಳಿಂದ ಸಮೃದ್ಧಿಯಾಗಿಯೂ ಇದ್ದವು. || ೨೪ || ಕೆಲಕಾಲದ ಬಳಿಕ ಕಾಮರೂಪಿಣಿಯೂ ಸುಂದನೆಂಬುವನ ಭಾರ್ಯೆಯೂ ಆದ "ತಾಟಕಿ" ಎಂಬ ಯಕ್ಷಾಂ ಗನೆಯು ಸಾವಿರಾನೆಗಳ ಬಲವುಂಟಾಗಿದ್ದಳು || ೨೫ || ಆಕೆಗೆ ಮಾರೀಚನೆಂಬ ಪುತ್ರನುಂ ಟಾದನು. ಅವನು ಗುಂಡಾಗಿರುವ ತೋಳುಗಳುಳ್ಳವನಾಗಿಯೂ, ಮಹಾ ಪರಾಕ್ರಮಿಯಾ

ಕಾರೋ ನಿತ್ಯಂ ತ್ರಾಸಯತೇ ಪ್ರಜಾಃ ||೨೭|| ಇಮೌ ಜನಪದೌ ನಿತ್ಯಂ ವಿನಾಶಯತಿ ರಾಘವ|| ಮಲದಾಂಶ್ಚ ಕರೂಶಾಂಶ್ಚ ತಾಟಕಾ ದುಷ್ಟಚಾರಿಣೀ ||೨೮|| ಸೇಯಂ ಪಂಥಾನಮಾವಾರ್ಯ ವಸತ್ಯಧ್ಯರ್ಧಯೋಜನೇ|| ಇತ ಏವಚ ಗಂತವ್ಯಂ ತಾಟಕಾಯಾ ವನಂ ಯತಃ ||೨೯|| ಸ್ವಬಾಹುಬಲಮಾಶ್ರಿತ್ಯ ಜಹೀಮಾಂ ದುಷ್ಟಚಾರಿಣೀಂ || ಮನ್ನಿಯೋಗಾದಿಮಂದೇಶಂ ಕುರು ನಿಷ್ಕಂಟಕಂ ಪುನಃ || ||೩೦|| ನಹಿಕಶ್ಚಿದಿಮಂದೇಶಂ ಶಕ್ನೋತ್ಯಾಗಂತುಮೀದೃಶಂ|| ಯಕ್ಷಿಣ್ಯಾಘೋರಯಾ ರಾಮ ಉತ್ಸಾದಿತಮಸಹ್ಯಯಾ ||೩೧|| ಏತತ್ತೇ ಸರ್ವಮಾಖ್ಯಾತಂ

---

ತನುಃ – ವಿಸ್ತಾರವಾದ ಮುಖವೂ ಶರೀರವೂ ಉಳ್ಳ, ಮಹಾನ್ – ದೊಡ್ಡವನಾದ, ಭೈರವಾಕಾರಃ-ಭಯಂಕರವಾದ ಆಕಾರವುಳ್ಳ, ರಾಕ್ಷಸಃ ರಾಕ್ಷಸನಾದ ಮಾರೀಚನು, ನಿತ್ಯಂ-ನಿರಂತರದಲ್ಲಿಯೂ, ಪ್ರಜಾಃ - ಪ್ರಜೆಗಳನ್ನು, ತ್ರಾಸಯತೇ- ಹೆದರಿಸುತ್ತಾನೆ. ||೨೭|| ಹೇರಾಘವ-ಎಲೈ ಶ್ರೀರಾಮನೆ! ದುಷ್ಟಚಾರಿಣೀ – ದುರ್ವ್ಯಾಪಾರವನ್ನು ಮಾಡುತ್ತಿರುವ, ತಾಟಕಾಚ- ತಾಟಕಿಯೂ, ಮಲದಾಂಶ್ಚ-ಮಲದಗಳೆಂಬ, ಕರೂಶಾಶ್ಚೇತಿ – ಕರೂಶಗಳೂ ಎಂಬ, ಇಮೌಜನಪದೌ-ಈ ದೇಶಗಳನ್ನು, ನಿತ್ಯಂ-ನಿರಂತರದಲ್ಲಿಯು, ವಿನಾಶಯತಿ ನಾಶಮಾಡುತ್ತಾಳೋ ||೨೮|| ಸೇಯಂ – ಈ ತಾಟಕಿಯು, ಅಧ್ಯರ್ಧಯೋಜನೇ – ಎರಡು ಹರದಾರಿಯಲ್ಲಿ, ಪಂಥಾನಂ - ಮಾರ್ಗವನ್ನು, ಆವಾರ್ಯ - ಆವರಿಸಿ, ವಸತಿ – ಇರುವಳು, ಯತಃ - ಯಾವ ದೇಶದಲ್ಲಿ, ತಾಟಕಾಯಾಃ - ತಾಟಕಿಯು, ವನಂ- ವನವು, ಅಸ್ತಿ – ಇರುವುದೋ, ಇತಏವಚ - ಈ ಮಾರ್ಗದಲ್ಲಿಯೇ, ಗಂತವ್ಯಂ - ಹೊಗತಕ್ಕದು. ||೨೯|| ಸ್ವಬಾಹುಬಲಂ, ಸ್ವ - ಸ್ವಕೀಯವಾದ, ಬಾಹುಬಲಂ - ಭುಜಬಲವನ್ನು, ಆಶ್ರಿತ್ಯ - ಆಶ್ರಯಿಸಿ, ದುಷ್ಟಚಾರಿಣೀಂ-ದುಷ್ಟ ಸ್ವಭಾವಳಾದ,ಇಮಾಂ ಈ ತಾಟಕಿಯನ್ನು, ಮನ್ನಿಯೋಗಾತ್-ನನ್ನ ಆಜ್ಞೆಯಿಂದ, ಜಹಿ – ಹೊಡೆಯುವನಾಗು, ಇಮಂ ದೇಶಂ - ಪುನಃ - ಈ ದೇಶವನ್ನಾದರೆ, ನಿಷ್ಕಂಟಕಂ-ನಿಶ್ಶತ್ರುವಾಗಿ, ಕುರು – ಮಾಡು. ||೩೦|| ಹೇರಾಮ- ಎಲೈ ಶ್ರೀರಾಮನ, ಕಶ್ಚಿತ್ – ಒಬ್ಬಾನೊಬ್ಬನೂ, ಅಸಹ್ಯಯಾ – ಸಹಿಸಲಸಾಧ್ಯಳಾದ, ಘೋರಯಾ – ಕ್ರೂರಳಾದ, ಯಕ್ಷಿಣ್ಯಾ – ತಾಟಕಿ ಎಂಬ ಯಕ್ಷಿಣಿಯಿಂದ, ಉತ್ಸಾದಿತಂ – ಜನವಿಲ್ಲದಂತೆ ಮಾಡಲ್ಪಟ್ಟ, ಈದೃಶಂ – ಇಂತಹ ಅವಸ್ಥೆಯನ್ನೇ ಹೊಂದಿದ, ಇಮಂದೇಶಂ – ಈ ದೇಶವನ್ನು ಕುರಿತು, ಆಗಂತುಂ - ಬರಲು, ನಶಕ್ನೋತಿ-ಸಮರ್ಥನಲ್ಲವು, ||೩೧|| ವನಂ - ವನವು, ಯಥಾ - ಹೇಗೆ, ದಾರುಣಂ- ಕ್ರೂರವಾಯಿತೋ,

---

ಗಿಯೂ, ವಿಸ್ತಾರವಾದ ಮುಖವೂ, ಆಕಾರವೂ ಉಳ್ಳವನಾಗಿಯೂ, ಭಯಂಕರನಾಗಿಯೂ ಇರುತ್ತ ನಿರಂತರವೂ ಪ್ರಜೆಗಳನ್ನೆಲ್ಲ ಹೆದರಿಸುತ್ತಿರುವನು. ||೨೭|| ಎಲೈ ಶ್ರೀರಾಮನೇ! ಮಹಾ ದುಷ್ಟಳಾದ ತಾಟಕಿಯೆಂಬವಳು ಸಹ ಈ ದೇಶಗಳನ್ನು ಪ್ರತಿನಿತ್ಯವೂ ನಾಶಮಾಡುವಳು ||೨೮|| ಅಂತಹ ತಾಟಕಿಯ ವನವು ಈ ದಾರಿಗೆ ಎರಡು ಹರಿದಾರಿಯ ದೂರದಲ್ಲಿರುವದು. ಆ ತಾಟಕಾವನದಲ್ಲಿಯೇ ನಾವು ಹೋಗಬೇಕು. ನೀನು ನನ್ನಾಜ್ಞೆಯಿಂದ ಬಾಹುಬಲವನ್ನಾಶ್ರಯಿಸಿ ಈ ದುಷ್ಟಳನ್ನು ನಿಗ್ರಹಿಸಿ ಈ ದೇಶವನ್ನು ನಿಷ್ಕಂಟಕವನ್ನಾಗಿಮಾಡು. ||೩೦|| ಸಹಿಸಲಸಾಧ್ಯಳೂ ಕ್ರೂರಳೂ ಆದ ತಾಟಕಿಯಿಂದ ಜನರಹಿತವಾಗಿ ಮಾಡಲ್ಪಟ್ಟ ಇಂತಹ ದೇಶವನ್ನು ಕುರಿತು ಬರುವದಕ್ಕೆ ಯಾವನೂ ಶಕ್ತನಾಗಲಾರನು. ||೩೧|| ಈ ವನವು

ಯುಧ್ಯೈತದ್ದಾರುಣಂ ವನಂ ॥ ಯಕ್ಷ್ಯೋತ್ಸಾದಿತಂಸರ್ವಮದ್ಯಾಪಿ ನನಿವ
ರ್ತತೇ ॥ ೩೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ವಿಂಶಸ್ಸರ್ಗಃ.



ಯಕ್ಷ್ಯಾ ಚ - ಯಕ್ಷಸ್ತ್ರೀಯಿಂದ, ಸರ್ವಂ - ಸಮಸ್ತವು, ಯಥಾ - ಹೇಗೆ, ಉತ್ಸಾದಿತಂಚ-ಉತ್ಪಾಟನ ಮಾಡಲ್ಪಟ್ಟಿತೋ, ಅದ್ಯಾಪಿ - ಈಗಲೂ, ಜನಃ - ಜನವು, ನನಿವರ್ತತೇ- ಹಿಂತಿರುಗಲಿಲ್ಲವೋ, ಸರ್ವಂ - ಸಮಸ್ತವಾದ, ತತ್ ಆ, ಏತತ್- ಇದು, ತೇ-ನಿನಗೆ, ಆಖ್ಯಾತಂ-ಹೇಳಲ್ಪಟ್ಟಿತು. ॥೩೨॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ವಿಂಶಸ್ಸರ್ಗಃ.



ಹೇಗೆ ಕ್ರೂರವಾಯಿತೋ, ಆಯಕ್ಷಸ್ತ್ರೀಯಿಂದ ಸರ್ವವೂ ಹೇಗೆ ಉತ್ಪಾಟನಮಾಡಲ್ಪಟ್ಟಿತೋ, ಅದು ಇದುವರೆವಿಗೂ ಮೊದಲಿನಸ್ಥಿತಿಗೆ ಬರಲಿಲ್ಲವು. ಇದು ನಿನಗೆ ಹೇಳಲ್ಪಟ್ಟಿರುವುದು. ॥ ೩೨ ॥

ಇಂತಿದು ತಾಟಕಾ ವೃತ್ತಾಂತವರ್ಣನವೆಂಬ
ಇಪ್ಪತ್ತನಾಲ್ಕನೆಯ ಸರ್ಗವು ಸಮಾಪ್ತವಾದುದು.



---

**ಅಥ ತಸ್ಯಾಪ್ರಮೇಯಸ್ಯ ಮುನೇರ್ವಚನಮುತ್ತಮಂ॥ ಶ್ರುತ್ವಾ ಪುರುಷಶಾರ್ದೂಲಃ ಪ್ರತ್ಯುವಾಚ ಶುಭಾಂಗಿರಂ॥೧॥ ಅಲ್ಪವೀರ್ಯಾ ಯದಾ ಯಕ್ಷಾಃ ಶ್ರೂಯಂತೇ ಮುನಿಪುಂಗವ ॥ ಕಥಂ ನಾಗಸಹಸ್ರಸ್ಯ ಧಾರಯತ್ಯಬಲಾ ಬಲಂ ॥೨॥ ವಿಶ್ವಾಮಿತ್ರೋಽಬ್ರವೀದ್ವಾಕ್ಯಂ ಶೃಣು ಯೇನ ಬಲೋತ್ತರಾ ॥ವರದಾನಕೃತಂ ವೀರ್ಯಂ ಧಾರಯತ್ಯಬಲಾ ಬಲಂ ॥ ೩ ॥ ಪೂರ್ವಮಾಸೀನ್ಮಹಾಯಕ್ಷಸ್ಸುಕೇತುರ್ನಾಮ**

---

ಅಥ - ಅನಂತರದಲ್ಲಿ, ಅಪ್ರಮೇಯಸ್ಯ- ಅಪಾರ ಪ್ರಭಾವವುಳ್ಳ, ತಸ್ಯಮುನೇಃ- ಆ ವಿಶ್ವಾಮಿತ್ರನ, ಉತ್ತಮಂ - ಉತ್ತಮವಾದ, ವಚನಂ- ಮಾತನ್ನು, ಶ್ರುತ್ವಾ-ಕೇಳಿ, ಪುರುಷಶಾರ್ದೂಲಃ- ಪುರುಷಶ್ರೇಷ್ಠನಾದ ಶ್ರೀರಾಮನು, ಶುಭಾಂ - ಶುಭಕರವಾದ, ಗಿರಂ - ಮಾತನ್ನು, ಪ್ರತ್ಯುವಾಚ- ಹೇಳಿದನು. ॥ ೧ ॥ ಹೇ ಮುನಿಪುಂಗವ - ಎಲೈ ಋಷಿಯೆ ! ಯದಾ - ಯಾವಕಾರಣ, ಯಕ್ಷಾಃ- ಯಕ್ಷರು, ಅಲ್ಪವೀರ್ಯಾಃ - ಸ್ವಲ್ಪ ಸಾಮರ್ಥ್ಯವಂತರಾಗಿ, ಶ್ರೂಯಂತೇ - ಕೇಳಲ್ಪಡುತ್ತಾರೋ, ತದಾ - ಆ ಕಾರಣದಿಂದ, ಅಬಲಾ - ಯಕ್ಷ ಸ್ತ್ರೀಯು, ನಾಗಸಹಸ್ರಸ್ಯ - ಸಾವಿರ ಆನೆಗಳ ಬಲವನ್ನು, ಕಥಂ - ಹೇಗೆ, ಧಾರಯತಿ - ಧರಿಸುವಳು ॥ ೨ ॥ ವಿಶ್ವಾಮಿತ್ರಃ - ವಿಶ್ವಾಮಿತ್ರನು, ವಾಕ್ಯಂ - ಈ ಮಾತನ್ನು, ಅಬ್ರವೀತ್ - ನುಡಿದನು, ಶೃಣು - ಕೇಳೈಯ್ಯಾ, ಯೇನ - ಯಾವ ಕಾರಣ, ಬಲೋತ್ತರಾಃ, ಬಲ- ದೇಹತ್ರಾಣದಲ್ಲಿ, ಉತ್ತರಾಃ- ಉತ್ಕೃಷ್ಟಳೋ, ಅಬಲಾ - ಸ್ತ್ರೀಯಾದರೂ, ವರದಾನಕೃತಂ, ವರದಾನ - ಬ್ರಹ್ಮನ ಪ್ರದಾನದಿಂದ, ಕೃತಂ- ಮಾಡಲ್ಪಟ್ಟ, ವೀರ್ಯಂ- ಸಾಮರ್ಥ್ಯವನ್ನೂ, ಬಲಂಚ - ಬಲವನ್ನೂ, ಧಾರಯತಿ - ಧರಿಸುವಳು, ॥ ೩ ॥ ಪೂರ್ವಂ-ಪೂರ್ವದಲ್ಲಿ, ವೀರ್ಯವಾನ್ - ಪರಾಕ್ರಮಶಾಲಿಯಾದ, ಶುಭಾಚಾರಃ - ಸದಾಚಾರ ಸಂಪನ್ನನಾದ, ಸುಕೇತುರ್ನಾಮ-ಸುಕೇತುವೆಂದು ಪ್ರಸಿದ್ಧನಾದ, ಮಹಾಯಕ್ಷಃ - ಯಕ್ಷಶ್ರೇಷ್ಠನು, ಆಸೀತ್-ಇದ್ದನು.

---

ಅಪಾರಮಹಿಮೆಯುಳ್ಳ ವಿಶ್ವಾಮಿತ್ರಮುನಿಯು ಹೀಗೆ ಹೇಳಲು, ಆ ನರಶ್ರೇಷ್ಠನಾದ ರಘುರಾಮನು ಶುಭಕರವಾದ ಈ ಮಾತನ್ನು ಪ್ರತ್ಯುತ್ತರವಾಗಿ ನುಡಿದನು. ॥ ೧ ॥ "ಮುನಿಪುಂಗವ ! ಯಕ್ಷರು ಅಲ್ಪವೀರ್ಯರೆಂದು ಕೇಳಲ್ಪಟ್ಟಿರುವರಲ್ಲ! ಹೀಗಿರುವಲ್ಲಿ ಈ ಅಬಲೆಯು ಸಾವಿರಾನೆಗಳ ಬಲವನ್ನು ಹೊಂದಿದುದೆಂತು"; ಇಂತೆನಲಾ ವಿಶ್ವಾಮಿತ್ರನು ಹೇಳತೊಡಗಿದನು. "ರಾಮ ! ಅಬಲೆಯಾದವಳು ವರಪ್ರದಾನದಿಂದುಂಟಾದ ಬಲವನ್ನು ಹೊಂದಿ ಮಹಾ ಬಲವಂತಳಾದಳು ॥ ೨-೩ ॥ ಪೂರ್ವಕಾಲದಲ್ಲಿ ಮಹಾಪರಾಕ್ರಮಿಯಾದ ಸುಕೇತುವೆಂಬ ಯಕ್ಷನಿದ್ದನು. ಆತನು ಮಕ್ಕಳಿಗೋಸುಗ ತಪವಂಗೈದನು. ಆ ಸಮಯದಲ್ಲಿ ಪಿತಾಮಹನು ಆತನ ತಪಸ್ಸಿಗೆ ಮೆಚ್ಚಿ ತಾಟಕಿ ಎಂಬ ಕನ್ಯಾರತ್ನವನ್ನು ಕೊಟ್ಟು

ವೀರ್ಯವಾನ್ ॥ ಅನಪತ್ಯಶ್ಶುಭಾಚಾರಸ್ಸಚ ತೇಪೇ ಮಹತ್ತಪಃ ॥ ೪ ॥ ಪಿತಾಮಹಸ್ತು ಸುಪ್ರೀತಸ್ತಸ್ಯ ಯಕ್ಷಪತೇಸ್ತದಾ॥ ಕನ್ಯಾರತ್ನಂ ದದೌ ರಾಮ ತಾಟಿಕಾಂ ನಾಮ ನಾಮತಃ ॥ ೫ ॥ ದದೌ ನಾಗಸಹಸ್ರಸ್ಯ ಬಲಂಚಾಸ್ಯಾಃ ಪಿತಾಮಹಃ ॥ ನತ್ವೇವಪುತ್ರಂ ಯಕ್ಷಾಯ ದದೌ ಬ್ರಹ್ಮಾ ಮಹಾಯಶಾಃ ॥ ೬ ॥ ತಾಂತು ಜಾತಾಂ ವಿವರ್ಧಂತೀಂ ರೂಪ ಯೌವನ ಶಾಲಿನೀಂ॥ಝರ್ಝರಪುತ್ರಾಯ ಸುಂದಾಯ ದದೌ ಭಾರ್ಯಾಂ ಯಶಸ್ವಿನೀಂ ॥ ೭ ॥ ಕಸ್ಯಚಿತ್ತ್ವಥಕಾಲಸ್ಯ ಯಕ್ಷೀಪುತ್ರಮಜಾಯತ॥ ಮಾರೀಚಂ ನಾಮ ದುರ್ಧರ್ಷಂ ಯಶ್ಶಾಪಾದ್ರಾಕ್ಷಸೋಽಭವತ್ ॥ ೮ ॥ ಸುಂದೇತು ನಿಹತೇ ರಾಮ ಸಾಗಸ್ತ್ಯ ಮೃಷಿಸತ್ತಮಂ ॥

---

ಸಃ - ಆಯಕ್ಷನು, ಅನಪತ್ಯಃ ಮಕ್ಕಳಿಲ್ಲದೆ, ಮಹತ್ - ಮಹತ್ತರವಾದ, ತಪಃ - ತಪವನ್ನು, ತೇಪೇ - ತಪಿಸಿದನು. ॥ ೪ ॥ ತದಾ - ಆಗ, ಹೇರಾಮ - ಎಲೈ ಶ್ರೀರಾಮನೆ, ಪಿತಾಮಹಸ್ತು- ಬ್ರಹ್ಮದೇವನು, ಸುಪ್ರೀತಃ - ಸಂತುಷ್ಟನಾಗಿ, ಯಕ್ಷಪತೇಃ - ಯಕ್ಷರಾಜನಾದ, ತಸ್ಯ - ಆ ಸುಕೇತುವಿಗೆ, ನಾಮತಃ - ಹಸರಿನಿಂದ, ತಾಟಕಾನ್ನಾಮ - ತಾಟಕಾ ಎಂದು ಪ್ರಸಿದ್ಧಳಾದ, ಕನ್ಯಾರತ್ನಂ - ಸ್ತ್ರೀ ರತ್ನವನ್ನು, ದದೌ - ಕೊಟ್ಟನು. ॥೫॥ ಪಿತಾಮಹ - ಬ್ರಹ್ಮದೇವನು, ಅಸ್ಯಾಃ- ಈತಾಟಕಿಗೆ, ನಾಗಸಹಸ್ರಸ್ಯ - ಸಾವಿರಾನೆಗಳ, ಬಲಂ-ಸಾಮರ್ಥ್ಯವನ್ನು, ದದೌ - ಕೊಟ್ಟನು, ಮಹಾಯಶಾಃ - ಮಹಾ ಕೀರ್ತಿವಂತನಾದ, ಬ್ರಹ್ಮಾ - ಚತುರ್ಮುಖನು, ಯಕ್ಷಾಯ - ಯಕ್ಷನಿಗೆ, ಪುತ್ರಂ - ಕುವರನನ್ನು, ನದದಾವೇವ ಕೊಡಲೇ ಇಲ್ಲವು. ॥೬॥ ಜಾತಾಂ - ಹುಟ್ಟಿದ, ವಿವರ್ಧಂತೀಂ - ವೃದ್ಧಿಗೊಂಡಿರುವ, ರೂಪ ಯೌವನಶಾಲಿನೀಂ - ರೂಪದಿಂದಲೂ, ಯೌವನದಿಂದಲೂ, ಒಪ್ಪುತ್ತಿರುವ, ತಾಂತು - ಆ ಕನ್ಯೆಯನ್ನು, ಝರ್ಝರಪುತ್ರಾಯ - ಝರ್ಝರನೆಂಬುವನ ಮಗನಾದ, ಸುಂದಾಯ - ಸುಂದನಿಗೆ, ಯಶಸ್ವಿನೀ - ಕೀರ್ತಿವಂತಳಾದ, ಭಾರ್ಯಾಂ - ಹೆಂಡತಿಯನ್ನಾಗಿ, ದದೌ - ಕೊಟ್ಟನು. ॥ ೭ ॥ ಕಸ್ಯಚಿತ್ಕಾಲಸ್ಯ-ಕೆಲಕಾಲವಾದ ಬಳಿಕ, ಯಕ್ಷೀ-ತಾಟಕಿಯು, ದುರ್ಧರ್ಷಂ- ತಿರಸ್ಕರಿಸಲಸಾಧ್ಯನಾದ, ಮಾರೀಚನ್ನಾಮ - ಮಾರೀಚನೆಂದು ಪ್ರಸಿದ್ಧನಾದ, ಪುತ್ರಂ - ಕುವರನನ್ನು, ಅಜಾಯ - ಹೆತ್ತಳು, ಯಃ - ಯಾವ ಮಾರೀಚನು, ಶಾಪಾತ್ - ಅಗಸ್ತ್ಯ ಶಾಪದಿಂದ, ರಾಕ್ಷಸಃ - ರಾಕ್ಷಸನು, ಅಭವತ್ - ಆದನೋ, ॥ ೮ ॥ ಹೇರಾಮ-ಎಲೈ ಶ್ರೀರಾಮನೆ, ಸುಂದೇತು- ಸುಂದನಾದರೆ, ನಿಹತೇಸತಿ - ಮೃತಳಾಗಲು, ಸಾತಾಟಕಾ - ಆ ತಾಟಕಿಯು, ಋಷಿಸತ್ತಮಂ-ಋಷಿ

---

ಆ ಕನ್ಯಕೆಗೆ ಸಾವಿರಾನೆಗಳ ಬಲವನ್ನು ದಯಪಾಲಿಸಿದನು. ಇಷ್ಟುಮಾತ್ರ ಅನುಗ್ರಹಿಸಿದನೇ ಹೊರತು ಆ ಯಕ್ಷನಿಗೆ ಪುತ್ರಲಾಭವನ್ನುಂಟುಮಾಡಲಿಲ್ಲವು. ॥ ೪-೬ ॥ ಆ ಸುಕೇತುವೆಂಬ ಯಕ್ಷನು ಬಹುರೂಪವತಿಯಾಗಿ ಹುಟ್ಟಿ ವೃದ್ಧಿಹೊಂದುತ್ತಿರುವ ಆ ಕುವರಿಯನ್ನು ಝರ್ಝರನೆಂಬವನ ಪುತ್ರನಾದ ಸುಂದನಿಗೆ ಕೊಟ್ಟು ವಿವಾಹವನ್ನು ಬೆಳೆಯಿಸಿದನು. ॥ ೭ ॥ ಸ್ವಲ್ಪಕಾಲವಾದ ಬಳಿಕ, ಆ ತಾಟಕಿಯು ತಿರಸ್ಕರಿಸಲಸಾಧ್ಯನಾದ ಮಾರೀಚನೆಂಬ ಪುತ್ರನನ್ನು ಹೆತ್ತಳು. ಅವನು ಶಾಪದಿಂದ ರಾಕ್ಷಸನಾದನು. ॥ ೮ ॥ ರಾಮ! ಆ

ತಾಟಕಾ ಸಹಪುತ್ರೇಣ ಪ್ರಧರ್ಷಯಿತುಮಿಚ್ಛತಿ ॥ ೯ ॥ ಭಕ್ಷಾರ್ಥಂ ಜಾತ ಸಂರಂಭಾ ಗರ್ಜಂತೀ ಸಾಭ್ಯಧಾವತ॥ಆಪತಂತೀಂತು ತಾಂ ದೃಷ್ಟ್ವಾ ಅಗಸ್ತ್ಯೋ ಭಗವಾನೃಷಿಃ ॥ ೧೦ ॥ ರಾಕ್ಷಸತ್ವಂ ಭಜಸ್ವೇತಿ ಮಾರೀಚಂ ವ್ಯಾಜಹಾರಸಃ ॥ ಅಗಸ್ತ್ಯಃ ಪರಮಕ್ರುದ್ಧಸ್ತಾಟಕಾಮಪಿ ಶಪ್ತವಾನ್ ॥ ೧೧ ॥ ಪುರುಷಾದೀ ಮಹಾಯಕ್ಷೀ ವಿರೂಪಾ ವಿಕೃತಾನನಾ॥ ಇದಂ ರೂಪಂ ವಿಹಾಯಾಥ ದಾರುಣಂ ರೂಪಮಸ್ತು ತೇ ॥ ೧೨ ॥ ಸೈಷಾ ಶಾಪಕೃತಾಮರ್ಷಾ ತಾಟಕಾ ಕ್ರೋಧ ಮೂರ್ಛಿತಾ ॥ ದೇಶಮುತ್ಸಾದಯತ್ಯೇನಮಗಸ್ತ್ಯ ಚರಿತಂ ಶುಭಂ ॥೧೩॥

---

ಶ್ರೇಷ್ಠನಾದ, ಅಗಸ್ತ್ಯಂ - ಅಗಸ್ತ್ಯ ಮುನಿಯನ್ನು, ಪುತ್ರೇಣಸಹ - ಕುವರನಿಂದೊಡಗೂಡಿ, ಪ್ರಧರ್ಷಯಿತುಂ ತಿರಸ್ಕರಿಸಲು, ಇಚ್ಛತಿ - ಇಚ್ಛಿಸಿದಳು. ॥೯॥ ಸಾ-ಆ ತಾಟಕಿಯು, ಭಕ್ಷಾರ್ಥಂ-ಭಕ್ಷಣಾರ್ಥವಾಗಿ, ಜಾತಸಂರಂಭಾ - ಹುಟ್ಟಿದ ಆಸಕ್ತಿಯುಳ್ಳವನಾಗಿ, ಗರ್ಜಂತೀಂ-ಗರ್ಜಿಸುತ್ತ, ಅಭ್ಯಧಾವತ - ಓಡಿಬಂದಳು. ಭಗವಾನ್ - ಪೂಜ್ಯನೂ, ಋಷಿಃ - ಋಷಿಯೂ ಆದ, ಸಃಅಗಸ್ತ್ಯಃ-ಆ ಅಗಸ್ತ್ಯನು, ಆಪತಂತೀಂ - ಬರುತ್ತಿರುವ, ತಾಂತು - ಆ ತಾಟಕಿಯನ್ನು, ದೃಷ್ಟ್ವಾ- ಕಂಡು, ಮಾರೀಚಂ - ಮಾರೀಚನನ್ನು ಕುರಿತು, ರಾಕ್ಷಸತ್ವಂ - ರಾಕ್ಷಸತ್ವವನ್ನು, ಭಜಸ್ವೇತಿ- ಹೊಂದು ಎಂದು, ವ್ಯಾಜಹಾರ - ಹೇಳಿದನು. ॥೧೦॥ ಅಗಸ್ತ್ಯಃ - ಅಗಸ್ತ್ಯನು, ಪರಮಕ್ರುದ್ಧಃ - ಬಹಳ ಕೊಪಿಷ್ಟನಾಗಿ, ತಾಟಕಾಮಪಿ - ತಾಟಕಿಯನ್ನೂ, ಪುರುಷಾದೀ - ಪುರುಷರನ್ನು ಭಕ್ಷಣೆ ಮಾಡುತ್ತಿರುವ, ಮಹಾಯಕ್ಷೀ - ಮಹಾ ಯಕ್ಷಳಾಗಿ, ವಿರೂಪಾ - ಕುರೂಪಿಯಾಗು, ವಿಕೃತಾನನಾ-ವಿಕಾರವಾದ ಮುಖವುಳ್ಳವಳಾಗು, ಇದಂರೂಪಂ - ಈ ರೂಪವನ್ನು, ವಿಹಾಯ - ಬಿಟ್ಟು, ಅಥ-ಬಳಿಕ, ತೇ - ನಿನಗೆ, ದಾರುಣಂ - ಕ್ರೂರವಾದ, ರೂಪಂ - ರೂಪವು, ಅಸ್ತು - ಆಗಲಿ, ಇತಿ-ಎಂದು, ಶಪ್ತವಾನ್ - ಶಪಿಸಿದನು. ॥ ೧೨ ॥ ಸೈಷಾತಾಟಕಾ-ಅಂತಹ ಈ ತಾಟಕಿಯು, ಶಾಪಕೃತಾಮರ್ಷಾ-ಶಾಪದಿಂದುಂಟಾದ ಕೋಪದಿಂದ, ಕ್ರೋಧಮೂರ್ಛಿತಾ - ಅತಿಯಾದ ಕ್ರೋಧದಿಂದ ವ್ಯಾಪ್ತಳಾಗಿ, ಅಗಸ್ತ್ಯಚರಿತಂ ಅಗಸ್ತ್ಯಋಷಿಯಿಂದ ಸಂಚರಿಸಲ್ಪಟ್ಟ, ಶುಭಂ - ಶುಭಕರವಾದ, ಏನಂದೇಶಂ - ಈ ಸ್ಥಳವನ್ನು, ಉತ್ಸಾದಯತಿ - ಜನರಹಿತವನ್ನಾಗಿ ಮಾಡಿದಳು. ॥ ೧೩ ॥ ಹೇ

---

ಸುಂದನು ಮೃತನಾಗಲು ತಾಟಕಿಯು ಪುತ್ರನಿಂದೊಡಗೂಡಿ ಅಗಸ್ತ್ಯಮುನಿಯನ್ನು ಹೆದರಿಸಬೇಕೆಂದಿಚ್ಛಿಸಿ ಆತನನ್ನು ತಿನ್ನಲು ತ್ವರೆಯುಳ್ಳವಳಾಗಿ ಗರ್ಜಿಸುತ್ತಾ ಓಡಿಬಂದಳು ॥೯॥ ಮೇಲೆಬಿದ್ದು ನುಗ್ಗಿಬರುತ್ತಿರುವ ಆ ತಾಟಕಿಯನ್ನು ಕಂಡು ಅಗಸ್ತ್ಯಮಹಾಮುನಿಯು "ರಾಕ್ಷಸ ಭಾವವನ್ನು ಹೊಂದು" ಎಂದು ಮಾರೀಚನಿಗೆ ಶಾಪವನ್ನು ಕೊಟ್ಟು ॥ ೧೧ ॥ ತಾಟಕಿಯನ್ನೂ ಸಹಾ ಈ ರೂಪವನ್ನು ಅಗಲಿ ದಾರುಣವಾದ ರೂಪವುಂಟಾಗಲಿ, ಪುರುಷರನ್ನು ಭುಜಿಸುತ್ತಿರುವವಳಾಗಿಯೂ, ವಿಕಾರ ಮುಖಿಯಾಗಿಯೂ, ಇರುವ ಯಕ್ಷಳಾಗು." ಎಂದು ಶಾಪವನ್ನು ಕೊಡಲು ಆ ತಾಟಕಿಯು ಕೋಪಾಟೋಪವುಳ್ಳವಳಾಗಿ ಆ ದೇಶವನ್ನೆಲ್ಲ ಹಾಳುಮಾಡಿದಳು ॥ ೧೨ ೧೩ ॥ ಎಲೈ

ಏನಾಂ ರಾಘವ ದುರ್ವೃತ್ತಾಂ ಯಕ್ಷೀಂ ಪರಮದಾರುಣಾಂ || ಗೋಬ್ರಾಹ್ಮಣ ಹಿತಾರ್ಥಾಯ ಜಹಿ ದುಷ್ಟಪರಾಕ್ರಮಾಂ || ೧೪ || ನಹ್ಯೇನಾಂ ಶಾಪಸಂಸ್ಪೃಷ್ಟಾಂ ಕಶ್ಚಿದುತ್ಸಹತೇ ಪುಮಾನ್ || ನಿಹಂತುಂ ತ್ರಿಷುಲೋಕೇಷು ತ್ವಾಮೃತೇ ರಘುನಂದನ || ೧೫ || ನಹಿ ತೇ ಸ್ತ್ರೀವಧಕೃತೇ ಘೃಣಾಕಾರ್ಯಾ ನರೋತ್ತಮ || ಚಾತುರ್ವರ್ಣ್ಯ ಹಿತಾರ್ಥಾಯ ಕರ್ತವ್ಯಂ ರಾಜಸೂನುನಾ || ೧೬ || ನೃಶಂಸಮನೃಶಂಸಂವಾ ಪ್ರಜಾರಕ್ಷಣ ಕಾರಣಾತ್ || ಪಾತಕಂವಾ ಸದೋಷಂವಾ ಕರ್ತವ್ಯಂ ರಕ್ಷತಾ ಸತಾ || ೧೭ || ರಾಜ್ಯಭಾರನಿಯುಕ್ತಾನಾಮೇಷಧರ್ಮಃ

---

ರಾಘವ - ಎಲೈ ರಾಮನೆ, ದುರ್ವೃತ್ತಾಂ - ದುಷ್ಟವೃತ್ತಿಯುಳ್ಳ, ಪರಮದಾರುಣಾಂ - ಕ್ರೂರಳಾದ, ದುಷ್ಟಪರಾಕ್ರಮಾಂ - ದೋಷಯುಕ್ತವಾದ ಪರಾಕ್ರಮವುಳ್ಳ, ಏನಾಂಯಕ್ಷೀಂ - ಈ ಯಕ್ಷ ಸ್ತ್ರೀ ಯನ್ನು, ಗೋಬ್ರಾಹ್ಮಣಹಿತಾರ್ಥಾಯ - ಗೋವುಗಳ ಮತ್ತು ಬ್ರಾಹ್ಮಣರ ಹಿತಕ್ಕೋಸುಗ, ಜಹಿ - ಸಂಹರಿಸು, ||೧೪|| ಶಾಪಸಂಸ್ಪೃಷ್ಟಾಂ- ಶಾಪಗ್ರಸ್ತಳಾದ, ಏನಾಂ-ಈ ಯಕ್ಷಸ್ತ್ರೀಯನ್ನು, ನಿಹಂತುಂ - ಕೊಲ್ಲಲು, ಹೇರಘುನಂದನ- ಎಲೈ ರಘುನಂದನನೆ, ತ್ವಾಮೃತೇ - ನಿನ್ನನ್ನು ಬಿಟ್ಟು, ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯೂ, ಕಶ್ಚಿತ್‌ಪುಮಾನ್ - ಯಾವ ಪುರುಷನೂ, ನೋತ್ಸಹತೇ - ಸಮರ್ಥನಾಗಲಾರನು. ||೧೫|| ಹೇನರೋತ್ತಮ - ಎಲೈ ಪುರುಷಶ್ರೇಷ್ಠನೇ, ತೇ - ನಿನಗೆ, ಸ್ತ್ರೀವಧಕೃತೇ - ಸ್ತ್ರೀಸಂಹಾರನೆಂದು, ಘೃಣಾ - ಜುಗುಪ್ಸೆಯು, ನಕಾರ್ಯಾ - ಮಾಡತಕ್ಕದಲ್ಲ, ರಾಜಸೂನುನಾ - ರಾಜಪುತ್ರನಿಂದ, ಚಾತುರ್ವರ್ಣ್ಯಹಿತಾರ್ಥಾಯ - ಬ್ರಹ್ಮ, ಕ್ಷತ್ರಿಯ ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳ ಹಿತಕ್ಕೋಸುಗ, ಕರ್ತವ್ಯಂ - ಮಾಡತಕ್ಕದ್ದು ||೧೬|| ನೃಶಂಸಂ - ಘಾತುಕ ಕರ್ಮವೇ ಆಗಲಿ, ಅನೃಶಂಸಂವಾ - ಘಾತಕವಲ್ಲದಿರುವ ಕರ್ಮವೇ ಆಗಲಿ, ಪಾತಕಂವಾ - ಪಾಪವೇ ಆಗಲಿ, ಸದೋಷಂವಾ - ದೋಷಸಹಿತವಾದುದೇ ಆಗಲಿ, ರಕ್ಷತಾ-ರಕ್ಷಣೆ ಮಾಡುತ್ತಿರುವ, ಸತಾ - ಸತ್ಪುರುಷನಾದ ರಾಜಪುತ್ರನಿಂದ, ಪ್ರಜಾರಕ್ಷಣಕಾರಣಾತ್- ಪ್ರಜಾಸಂರಕ್ಷಣೆ ಎಂಬ ಕಾರಣದಿಂದ, ಕರ್ತವ್ಯಂ - ಮಾಡತಕ್ಕದು, ||೧೭|| ಹೇಕಾಕುತ್‌ಸ್ಥ - ಎಲೈ

---

ರಾಘವನೇ! ದುರ್ವೃತ್ತಳಾಗಿಯೂ, ಬಹು ಕ್ರೂರಳಾಗಿಯೂ, ದುಷ್ಟಪರಾಕ್ರಮವುಳ್ಳವಳಾಗಿಯೂ, ಆಗಿರುವ ಈ ಯಕ್ಷ ಸ್ತ್ರೀಯನ್ನು ಗೋ, ಬ್ರಾಹ್ಮಣರ ಹಿತಕ್ಕಾಗಿ ನಿಗ್ರಹಿಸುವವನಾಗು. ||೧೪|| ರಘುನಂದನ! ಶಾಪಗ್ರಸ್ತಳಾದ ಈ ಯಕ್ಷೀಯನ್ನು ನಿಗ್ರಹಿಸಲು ನಿನ್ನನ್ನು ಬಿಟ್ಟು ಲೋಕತ್ರಯದಲ್ಲಿ ಯಾರೂ ಸಮರ್ಥರಲ್ಲವು || ೧೫ || ಎಲೈ ನರಶ್ರೇಷ್ಠನೇ! ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರ ಹಿತಕ್ಕಾಗಿ ನೀನಿವಳನ್ನು ಸಂಹರಿಸ ಬೇಕಾದುದರಿಂದ ಸ್ತ್ರೀಯನ್ನು ವಧಿಸುವುದು ಹೇಗೆಂದು ದಯೆಗೊಳ್ಳಬೇಡ. ||೧೬|| ಪ್ರಜಾರಂಜಕನಾದ ಪುರುಷನು ಪ್ರಜಾಸಂರಕ್ಷಣೆಗೋಸುಗ ಘಾತಕ ಕರ್ಮವೇ ಆಗಲಿ, ಘಾತಕವಲ್ಲದ ಕಾರ್ಯವೇ ಆಗಲಿ, ಪಾಪವೇ ಆಗಲಿ, ಅಪವಾದ ಸಹಿತವಾದುದೇ ಆಗಲಿ ಯಾವುದೇ ಆದರೂ ಅದನ್ನು ಮಾಡತಕ್ಕುದು ಅವನ ಧರ್ಮ. ||೧೭||ಎಲೈ ಕಕುತ್ಸ್ಥ

ಸ್ಸನಾತನಃ|| ಅಧರ್ಮ್ಯಾಂ ಜಹಿ ಕಾಕುತ್ಸ್ಥ ಧರ್ಮೋಹ್ಯಸ್ಯಾ ನವಿದ್ಯತೇ||೧೮|| ಶ್ರೂಯತೇಹಿ ಪುರಾ ಶಕ್ರೋ ವಿರೋಚನ ಸುತಾಂ ನೃಪ|| ಪೃಥಿವೀಂ ಹಂತು ಮಿಚ್ಛಂತೀಂ ಮಂಥರಾಮಭ್ಯಸೂದಯತ್ ||೧೯|| ವಿಷ್ಣುನಾಪಿ ಪುರಾ ರಾಮ ಭೃಗುಪತ್ನೀ ದೃಢವ್ರತಾ|| ಅನಿಂದ್ರಂ ಲೋಕಮಿಚ್ಛಂತೀ ಕಾವ್ಯಮಾತಾ ನಿಷೂದಿತಾ ||೨೦|| ಏತೈಶ್ಚಾನ್ಯೈಶ್ಚ ಬಹುಭೀ ರಾಜಪುತ್ರ ಮಹಾತ್ಮಭಿಃ || ಅಧರ್ಮನಿರತಾ ನಾರ್ಯೋ ಹತಾಃ ಪುರುಷಸತ್ತಮೈಃ ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚವಿಂಶಸ್ಸರ್ಗಃ.

ಕಕುತ್ಸ್ಥ ವಂಶೋತ್ಪನ್ನನಾದ ಶ್ರೀರಾಮನೆ ! ರಾಜ್ಯಭಾರನಿಯುಕ್ತಾನಾಂ - ರಾಜ್ಯಪರಿಪಾಲನೆಯಲ್ಲಿ ನಿಯಮಿಸಲ್ಪಟ್ಟ ರಾಜರಿಗೆ, ಏಷಃಧರ್ಮಃ - ಈ ಧರ್ಮವು, ಸನಾತನಃ - ಶಾಶ್ವತವು, ಅಸ್ಯಾಃ-ತಾಟಕಿಗೆ, ಧರ್ಮಃ - ಧರ್ಮವು, ಹಿ - ಯಾವ ಕಾರಣ, ನವಿದ್ಯತೇ - ಇಲ್ಲವೋ, ತಸ್ಮಾತ್- ಆ ಕಾರಣ, ಅಧರ್ಮ್ಯಾಂ - ಅಧರ್ಮಿಷ್ಠಳಾದ ಇವಳನ್ನು, ಜಹಿ - ಸಂಹಾರಮಾಡು. ||೧೮|| ಹೇನೃಪ- ಎಲೈ ಅರಸೆ, ಪುರಾ - ಪೂರ್ವದಲ್ಲಿ, ಶಕ್ರಃ ದೇವೇಂದ್ರನು, ಪೃಥಿವೀಂ - ಭೂಮಿಯನ್ನು, ಹಂತುಂ- ಹೊಡೆಯಲೋಸುಗ, ಇಚ್ಛಂತೀ - ಬಯಸಿದ, ವಿರೋಚನ ಸುತಾಂ - ವಿರೋಚನ ಮಗಳಾದ, ಮಂಥರಾಂ - ಮಂಥರಾ ದೇವಿಯನ್ನು, ಅಭ್ಯಸೂದಯತ್ - ಸಂಹಾರ ಮಾಡಿದನು, ಇತಿ - ಎಂದು, ಶ್ರೂಯತೇಹಿ - ಕೇಳಲ್ಪಡುತ್ತದಷ್ಟೆ. ||೧೯|| ಹೇರಾಮ - ಎಲೈ ಶ್ರೀರಾಮನೇ, ಪುರಾ ಪೂರ್ವದಲ್ಲಿ, ಅನಿಂದ್ರಂ ಇಂದ್ರರಹಿತವಾದ, ಲೋಕಂ - ಸ್ವರ್ಗಲೋಕವನ್ನು, ಇಚ್ಛಂತೀ - ಅಪೇಕ್ಷಿಸುತ್ತಿರುವ, ಕಾವ್ಯಮಾತಾ - ಶುಕ್ರಾಚಾರ್ಯರಿಗೆ ತಾಯಿಯಾದ, ದೃಢವ್ರತಾ - ದೃಢವಾದ ನಿಯಮವುಳ್ಳ, ಭೃಗುಪತ್ನೀ - ಭೃಗುಋಷಿಯ ಹೆಂಡತಿಯು, ವಿಷ್ಣುನಾಪಿ - ಶ್ರೀ ಮಹಾ ವಿಷ್ಣುವಿನಿಂದಲೂ, ನಿಷೂದಿತಾ - ಸಂಹರಿಸಲ್ಪಟ್ಟಳು ||೨೦|| ಹೇರಾಜಪುತ್ರ - ಎಲೈ ರಾಜಪುತ್ರನೇ, ಏತೈಶ್ಚ-ಇವರಿಂದಲೂ, ಅನ್ಯೈಶ್ಚ - ಮತ್ತು ಕೆಲವರಿಂದಲೂ, ಬಹುಭಿಃ - ಅನೇಕರಾದ, ಮಹಾತ್ಮಭಿಃ - ಮಹಾ ಪ್ರಭಾವವಂತರಾದ, ಪುರುಷಸತ್ತಮೈಃ - ಪುರುಷಶ್ರೇಷ್ಠರಿಂದ, ಅಧರ್ಮನಿರತಾಃ - ಅಧರ್ಮಲೋಲುಪರಾದ, ನಾರ್ಯಃ-ಸ್ತ್ರೀಯರು, ಹತಾಃ - ಸಂಹರಿಸಲ್ಪಟ್ಟಿರುವರು. ||೨೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚವಿಂಶಸ್ಸರ್ಗಃ.

ಕುಲತಿಲಕನೇ ! ರಾಜ್ಯ ಪರಿಪಾಲನೆಗಾಗಿ ನಿಯತರಾದವರಿಗೆ ಈ ಧರ್ಮವು ಅನಾದಿ ಸಿದ್ಧವಾದುದು ಈ ತಾಟಕಿಗೆ ಧರ್ಮವೆಂಬದು ಇಲ್ಲನೇ ಇಲ್ಲವು, ಎಂದ ಮೇಲೆ ಅಧರ್ಮಿಷ್ಠಳಾದ ಈಕೆಯನ್ನು ಸಂಹರಿಸಲು ದಯೆ ಏಕೆ? ಎಲೈ ರಾಜಪುತ್ರನೇ ! ಪೂರ್ವಕಾಲದಲ್ಲಿ ಇಂದ್ರನು ಭೂಮಿಯನ್ನು ಹೊಡೆಯ ಬೇಕೆಂದಿಚ್ಛಿಸುತ್ತಿರುವ ವಿರೋಚನಪುತ್ರಿಯಾದ ಮಂಥರಾದೇವಿಯನ್ನು ಸಂಹರಿಸಿದನೆಂದು ಕೇಳಲ್ಪಟ್ಟಿರುವದಷ್ಟೆ ? ಇದು ಅಲ್ಲದೆ ಪೂರ್ವದಲ್ಲಿ ಲೋಕವೆಲ್ಲ ಇಂದ್ರರಹಿತವಾಗಿರಬೇಕೆಂದಿಚ್ಛಿಸುತ್ತಿರುವವಳಾಗಿಯೂ, ಶುಕ್ರಾಚಾರ್ಯರಿಗೆ ತಾಯಿಯಾಗಿಯೂ, ಇರುವ ಭೃಗುಋಷಿಯ ಪತ್ನಿಯೂ ವಿಷ್ಣುವಿನಿಂದ ಸಂಹರಿಸಲ್ಪಟ್ಟಳು. ||೨೦|| ಎಲೈ ರಾಜಪುತ್ರನೇ ! ಇವರಿಂದಲೂ, ಮತ್ತೆ ಕೆಲವರಿಂದಲೂ, ಅಧರ್ಮಿಷ್ಠರಾದ ಸ್ತ್ರೀಯರು ಸಂಹೃತರಾದರು. ||೨೧||

ಇಂತಿದು ವಿಶ್ವಾಮಿತ್ರಕೃತ ತಾಟಕಾ ವಧಪ್ರೇರಣವೆಂಬ

ಇಪ್ಪತ್ತೈದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಷಡ್ವಿಂಶಸ್ಸರ್ಗಃ.

---

ಮುನೇರ್ವಚನಮಕ್ಲೀಬಂ ಶ್ರುತ್ವಾ ನರವರಾತ್ಮಜಃ|| ರಾಘವಃ ಪ್ರಾಂಜಲಿ ರ್ಭೂತ್ವಾ ಪ್ರತ್ಯುವಾಚ ದೃಢವ್ರತಃ || ೧ || ಪಿತುರ್ವಚನನಿರ್ದೇಶಾತ್ಪಿತು ರ್ವಚನ ಗೌರವಾತ್ || ವಚನಂ ಕೌಶಿಕಸ್ಯೇತಿ ಕರ್ತವ್ಯಮವಿಶಂಕಯಾ ||೨|| ಅನುಶಿಷ್ಟೋಽಸ್ಮ್ಯಯೋಧ್ಯಾಯಾಂ ಗುರುಮಧ್ಯೇಮಹಾತ್ಮನಾ|| ಪಿತ್ರಾ ದಶರ ಥೇನಾಹಂ ನಾವಜ್ಞೇಯಂ ಹಿ ತದ್ವಚಃ ||೩|| ಸೋಽಹಂ ಪಿತುರ್ವಚಶ್ಶ್ರುತ್ವಾ ಶಾಸನಾದ್ಬ್ರಹ್ಮವಾದಿನಃ || ಕರಿಷ್ಯಾಮಿ ನಸಂದೇಹಸ್ತಾಟಕಾ ವಧಮು ತ್ತಮಂ || ೪ || ಗೋಬ್ರಾಹ್ಮಣಹಿತಾರ್ಥಾಯ ದೇಶಸ್ಯಾಸ್ಯ ಸುಖಾಯಚ ||

---

ನರವರಾತ್ಮಜಃ - ರಾಜಪುತ್ರನಾದ, ದೃಢವ್ರತಃ - ದೃಢಪ್ರತಿಜ್ಞೆಯುಳ್ಳ, ರಾಘವಃ-ಶ್ರೀ ರಾಮನು, ಅಕ್ಲೀಬಂ - ಧೈರ್ಯಯುಕ್ತವಾದ, ಮುನೇಃ - ವಿಶ್ವಾಮಿತ್ರನ, ವಚನಂ - ಮಾತನ್ನು ಶ್ರುತ್ವಾ - ಕೇಳಿ, ಪ್ರಾಂಜಲಿರ್ಭೂತ್ವಾ - ಅಂಜಲಿಬದ್ಧನಾಗಿ, ಪ್ರತ್ಯುವಾಚ - ಪ್ರತ್ಯುತ್ತರವನ್ನಿ ತ್ತನು. || ೧ || ಪಿತುಃ - ತಂದೆಯ, ವಚನನಿರ್ದೇಶಾತ್ - ಅಣತಿಯಿಂದಲೂ, ಪಿತುಃ - ತಂದೆಯ, ವಚನಗೌರವಾತ್ - ಮಾತಿನಲ್ಲಿನ ಗುರುತ್ವದಿಂದಲೂ, ಕೌಶಿಕಸ್ಯ- ವಿಶ್ವಾಮಿತ್ರನ, ವಚನಂ-ಮಾತು, ಅವಿಶಂಕಯಾ - ನಿಸ್ಸಂದೇಹವಾಗಿ, ಕರ್ತವ್ಯಮಿತಿ - ಮಾಡತಕ್ಕುದೆಂದು, || ೨ || ಅಯೋ ಧ್ಯಾಯಾಂ - ಅಯೋಧ್ಯಾ ಪಟ್ಟಣದಲ್ಲಿ, ಗುರುಮಧ್ಯೇ-ವಸಿಷ್ಠಾದಿ ಗುರುಜನ ಮಧ್ಯದಲ್ಲಿ, ಮಹಾ ತ್ಮನಾ - ಮಹಾತ್ಮನೂ, ಪಿತ್ರಾ - ತಂದೆಯೂ ಆದ, ದಶರಥೇನ - ದಶರಥಮಹಾರಾಯನಿಂದ, ಅಹಂ - ನಾನು, ಅನುಶಿಷ್ಟಃ - ಆಜ್ಞಾಪಿಸಲ್ಪಟ್ಟವನು, ಅಸ್ಮಿ-ಆದೆನು. ತದ್ವಚಃ - ಆ ದಶರಥನ ಮಾತು, ನಾವಜ್ಞೇಯಂಹಿ - ತೆಗೆದುಹಾಕಬಾರದಷ್ಟೆ, || ೩ || ಸೋಽಹಂ - ಅಂತಹ ನಾನು, ಪಿತುಃ- ತಂದೆಯ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಬ್ರಹ್ಮವಾದಿನಃ - ಬ್ರಹ್ಮಜ್ಞನಾದ ನಿನ್ನ, ಶಾಸ ನಾತ್ - ಆಜ್ಞೆಯಿಂದ, ಉತ್ತಮಂ - ಉತ್ಕೃಷ್ಟವಾದ, ತಾಟಕಾವಧಂ- ತಾಟಕಾ ಸಂಹಾರವನ್ನು, ಕರಿಷ್ಯಾಮಿ - ಮಾಡುವೆನು, ಸಂದೇಹಃ - ಸಂಶಯವು, ನ- ಇಲ್ಲವು. || ೪ || ಗೋಬ್ರಾಹ್ಮಣಹಿತಾ ರ್ಥಾಯ - ಗೋವುಗಳ ಮತ್ತು ಬ್ರಾಹ್ಮಣರ ಹಿತಕ್ಕಾಗಿಯೂ, ಅಸ್ಯದೇಶಸ್ಯ-ಈ ದೇಶದ, ಸುಖಾ

---

ರಾಜಪುತ್ರನೂ ದೃಢಪ್ರತಿಜ್ಞೆಯುಳ್ಳವನೂ ಆದ ಶ್ರೀರಾಮನು ಧೈರ್ಯಯುಕ್ತವಾದ ವಿಶ್ವಾಮಿತ್ರನ ವಚನವನ್ನು ಕೇಳಿ ಅಂಜಲಿಬದ್ಧನಾಗಿ ಹೀಗೆಂದನು. || ೧ || "ಜನಕ ನಾಜ್ಞೆಯಿಂದಲೂ, ಆತನ ವಚನದಲ್ಲಿರುವ ಗುರುತ್ವದಿಂದಲೂ, ವಿಶ್ವಾಮಿತ್ರನ ವಚನವು ಮಾಡತಕ್ಕುದೆಂದು ಅಯೋಧ್ಯಾನಗರಿಯಲ್ಲಿ ವಸಿಷ್ಠಾದಿಗಳ ಮುಂದೆ ತಂದೆಯಾದ ದಶರಥರಾಯನಿಂದ ಆಜ್ಞಾಪಿಸಲ್ಪಟ್ಟವನಾದೆನು. ಆ ಮಾತು ತೆಗೆದುಹಾಕತಕ್ಕುದಲ್ಲವು.

ತವಚೈವಾಪ್ರಮೇಯಸ್ಯ ವಚನಂ ಕರ್ತುಮುದ್ಯತಃ ||೫|| ಏವಮುಕ್ತ್ವಾ ಧನುರ್ಮಧ್ಯೇ ಬಧ್ವಾ ಮುಷ್ಟಿಮರಿಂದಮಃ || ಜ್ಯಾಶಬ್ದಮಕರೋತ್ತೀವ್ರಂ ದಿಶಶ್ಶಬ್ದೇನ ನಾದಯನ್ || ೬ || ತೇನಶಬ್ದೇನ ವಿತ್ರಸ್ತಾಸ್ತಾಟಿಕಾ ವನವಾಸಿನಃ || ತಾಟಿಕಾಚ ಸುಸಂಕ್ರುದ್ಧಾ ತೇನಶಬ್ದೇನ ಮೋಹಿತಾ || ೭ || ತಂ ಶಬ್ದಮಭಿನಿಧ್ಯಾಯ ರಾಕ್ಷಸೀ ಕ್ರೋಧ ಮೂರ್ಛಿತಾ|| ಶ್ರುತ್ವಾಚಾಭ್ಯದ್ರವದ್ವೇಗಾದ್ಯತಶ್ಶಬ್ದೋ ವಿನಿಸ್ಸೃತಃ || ೮ || ತಾಂ ದೃಷ್ಟ್ವಾ ರಾಘವಃ ಕ್ರುದ್ಧಾಂ ವಿಕೃತಾಂ ವಿಕೃತಾನನಾಂ || ಪ್ರಮಾಣೇನಾತಿವೃದ್ಧಾಂ ಚ ಲಕ್ಷ್ಮಣಂ ಸೋಭ್ಯ

ಯಚ - ಸುಖಕ್ಕಾಗಿಯೂ, ಅಪ್ರಮೇಯಸ್ಯ - ಅಪಾರ ಪ್ರಭಾವವುಳ್ಳ, ತವಚ - ನಿನ್ನ, ವಚನಂ ಚೈವ- ಮಾತನ್ನೂ ಕೂಡ, ಕರ್ತುಂ-ಮಾಡುವದಕ್ಕೆ, ಉದ್ಯತಃ-ಉದ್ಯುಕ್ತನಾಗಿರುವೆನು, ೫||ಏವಂ- ಹೀಗೆ, ಉಕ್ತ್ವಾ - ಹೇಳಿ, ಅರಿಂದಮಃ - ಶತ್ರುಸಂಹಾರಕನಾದ ಶ್ರೀರಾಮನು, ಧನುರ್ಮಧ್ಯೇ- ಧನುಸ್ಸಿನ ಮಧ್ಯದಲ್ಲಿ, ಮುಷ್ಟಿಂ - ಹಿಡಿಯನ್ನು, ಬಧ್ವಾ - ಹಿಡಿದು, ಶಬ್ದೇನ- ಟಂಕಾರ ಧ್ವನಿಯಿಂದ, ದಿಶಃ - ದಿಕ್ಕುಗಳನ್ನು, ನಾದಯನ್ - ಧ್ವನಿಗೊಳಿಸುತ್ತ, ತೀವ್ರಂ - ಕಠೋರವಾದ, ಜ್ಯಾಶಬ್ದಂ- ಧನುಷ್ಟಂಕಾರವನ್ನು, ಅಕರೋತ್ - ಮಾಡಿದನು. || ೬ || ತಾಟಕಾವನವಾಸಿನಃ- ತಾಟಕಾ ವನದಲ್ಲಿರುವವರು, ತೇನಶಬ್ದೇನ- ಆ ಶಬ್ದದಿಂದ, ವಿತ್ರಸ್ತಾಃ - ಹೆದರಿದರು. ತಾಟಕಾಚ - ತಾಟಕಿಯೂ, ತೇನಶಬ್ದೇನ-ಆ ಟಂಕಾರದಿಂದ, ಸುಸಂಕ್ರುದ್ಧಾ - ಬಹಳ ಕೋಪಿಷ್ಠಳಾಗಿ, ಮೋಹಿತಾಚ-ಏಗ್ಭ್ರಾಂತಳಾದಳು. || ೭ || ತಂಶಬ್ದಂ - ಆ ಶಬ್ದವನ್ನು, ಅಭಿನಿಧ್ಯಾಯ - ಕೇಳಿ, ರಾಕ್ಷಸೀ - ತಾಟಕಿಯು, ಕ್ರೋಧಮೂರ್ಛಿತಾ - ಕ್ರೋಧದಿಂದ ಮೈಮರೆತು, ಶ್ರುತ್ವಾ - ಕೇಳಿ, ಯತಃ - ಯಾವ ಸ್ಥಳದಿಂದ, ಶಬ್ದಃ - ಶಬ್ದವು, ವಿನಿಸ್ಸೃತಃ - ಹೊರಟಿತೋ, ತತ್ರ - ಅಲ್ಲಿಗೆ, ವೇಗಾತ್ - ಬೇಗನೆ, ಅಭ್ಯದ್ರವಚ್ಚ- ಓಡಿಬಂದಳು || ೮ || ಸರಾಘವಃ- ಆ ಶ್ರೀರಾಮನು, ಕ್ರುದ್ಧಾಂ - ಕೋಪಿಷ್ಠಳಾದ, ವಿಕೃತಾಂ- ವಿಕಾರವುಳ್ಳ, ಪ್ರಮಾಣೇನ - ಔನ್ನತ್ಯದಿಂದಲೂ, ಅತಿವೃದ್ಧಾಂಚ- ಬಹಳ ವಾರ್ಧಕ್ಯಾವಸ್ಥೆಯುಳ್ಳ ತಾಂ - ಆ ತಾಟಕಿಯನ್ನು, ದೃಷ್ಟ್ವಾ - ಕಂಡು, ಲಕ್ಷ್ಮಣಂ - ಲಕ್ಷ್ಮಣ ಸ್ವಾಮಿಯನ್ನು ಕುರಿತು,

ಆದಕಾರಣ ನಾನು ಬ್ರಹ್ಮಜ್ಞನಾದ ವಿಶ್ವಾಮಿತ್ರಮುನಿಯ ಆಜ್ಞೆಯಿಂದ ತಾಟಕಾವಧೆಯಂಗೈಯುವೆನು. ಇದರಲ್ಲಿ ಸಂದೇಹವಿಲ್ಲವು. ಗೋಬ್ರಾಹ್ಮಣರ ಹಿತಾರ್ಥವಾಗಿಯೂ, ಈ ದೇಶದ ಸುಖಕ್ಕಾಗಿಯೂ ಅಪಾರವಾದ ಮಹಾತ್ಮ್ಯವುಳ್ಳ ತಮ್ಮ ಮಾತನ್ನೇ ಮಾಡಲುದ್ಯುಕ್ತನಾಗಿರುವೆನು.''ಹೀಗೆಂದು ಹೇಳಿದ ರಾಮಚಂದ್ರನು ಧನುಸ್ಸಿನ ಮಧ್ಯವನ್ನು ಹಿಡಿದು ಟಂಕಾರದಿಂದ ದಿಕ್ಕುಗಳನ್ನೆಲ್ಲಾ ಧ್ವನಿಗೊಳಿಸುತ್ತ ಜ್ಯಾಶಬ್ದವಂಗೈದನು || ೨-೬ || ಆ ಶಬ್ದದಿಂದ ಆ ತಾಟಕಾ ವನವಾಸಿಗಳೆಲ್ಲರೂ ಹೆದರಿದರು. ತಾಟಕಿಯೂ ಆಶಬ್ದದಿಂದ ಕೋಪಗೊಂಡು ಭ್ರಾಂತಳಾದಳು || ೭ || ಕೋಪದಿಂದ ಮೈಮರೆತು ಶಬ್ದವೆತ್ತಣಿಂದ ಬಂದಿತೋ ಆಕಡೆಗೆ ಓಡಿಬಂದಳು. || ೮ || ಕೋಪವುಳ್ಳವಳಾಗಿಯೂ, ವಿಕಾರಳಾಗಿಯೂ, ವಿಕಾರಮುಖಿಯಾಗಿಯೂ, ಬಹಳ ವೃದ್ಧಳಾಗಿಯೂ ಇರುವ ಆ ತಾಟಕಿಯನ್ನು ಕಂಡು ಶ್ರೀರಾಮನು ಲಕ್ಷ್ಮಣನನ್ನು ಕುರಿತು “ಲಕ್ಷ್ಮಣ ! ಈ ಯಕ್ಷಿಣಿಯು ಮಹಾ ಭಯಂಕರವಾದ

ಭಾಷತ ||೯|| ಪಶ್ಯ ಲಕ್ಷ್ಮಣ ಯಕ್ಷಿಣ್ಯಾ ಭೈರವಂ ದಾರುಣಂ ವಪುಃ|| ಭಿದ್ಯೇರನ್ ದರ್ಶನಾದಸ್ಯಾ ಭೀರೂಣಾಂ ಹೃದಯಾನಿಚ ||೧೦||ಏನಾಂ ಪಶ್ಯ ದುರಾಧರ್ಷಾಂ ಮಾಯಾ ಬಲಸಮನ್ವಿತಾಂ || ವಿನಿವೃತ್ತಾಂ ಕರೋಮ್ಯದ್ಯ ಹೃತಕರ್ಣಾಗ್ರ ನಾಸಿಕಾಂ ||೧೧|| ನಹ್ಯೇನಾಮುತ್ಸಹೇ ಹಂತುಂ ಸ್ತ್ರೀಸ್ವಭಾವೇನ ರಕ್ಷಿತಾಂ|| ವೀರ್ಯಂಚಾಸ್ಯಾಗತಿಂಚಾಪಿ ಹನಿಷ್ಯಾಮೀತಿ ಮೇ ಮತಿಃ ||೧೨|| ಏವಂ ಬ್ರುವಾಣೇ ರಾಮೇತು ತಾಟಿಕಾ ಕ್ರೋಧಮೂರ್ಛಿತಾ || ಉದ್ಯಮ್ಯಬಾಹೂ ಗರ್ಜಂತೀ ರಾಮಮೇವಾಭ್ಯಧಾವತ ||೧೩|| ವಿಶ್ವಾಮಿತ್ರಸ್ತು ಬ್ರಹ್ಮರ್ಷಿ ಹುಂಕಾರೇಣಾಭಿಭರ್ತ್ಸ್ಯತಾಂ || ಸ್ವಸ್ತಿ ರಾಘವಯೋರಸ್ತು ಜಯಂಚೈವಾಭ್ಯ

---

ಅಭ್ಯಭಾಷತ - ನುಡಿದನು. ||೯|| ಹೇಲಕ್ಷ್ಮಣ - ಎಲೈ ಲಕ್ಷ್ಮಣನೆ, ಯಕ್ಷಿಣ್ಯಾ - ಯಕ್ಷಸ್ತ್ರೀಯ, ಭೈರವಂ - ಭಯಂಕರವಾದ, ದಾರುಣಂ - ಕ್ರೂರವಾದ, ವಪುಃ - ಶರೀರವನ್ನು, ಪಶ್ಯ - ನೋಡು, ಅಸ್ಯಾಃ - ಇವಳ, ದರ್ಶನಾತ್ - ನೋಟದಿಂದ, ಭೀರೂಣಾಂ - ಭಯಶಾಲಿಗಳ, ಹೃದಯಾನಿಚ- ಹೃದಯಗಳೂ, ಭಿದ್ಯೇರನ್ - ಭೇದಿಸಲ್ಪಡುವವು. ||೧೦|| ಮಾಯಾಬಲಸಮನ್ವಿತಾಂ- ಮಾಯಾ ಶಕ್ತಿಯಿಂದೊಡಗೂಡಿರುವ, ದುರಾಧರ್ಷಾಂ- ತಿರಸ್ಕರಿಸಲಸಾಧ್ಯಳಾದ, ಏನಾಂ- ಈ ತಾಟಕಿಯನ್ನು, ಅದ್ಯ - ಈಗ, ಹೃತಕರ್ಣಾಗ್ರನಾಸಿಕಾಂ - ಕತ್ತರಿಸಲ್ಪಟ್ಟ ಕಿವಿಗಳೂ, ಮೂಗೂ ಉಳ್ಳವಳನ್ನಾಗಿ, ವಿನಿವೃತ್ತಾಂ - ಹಿಂತಿರಿಗಿ ಓಡಿಹೋದವಳನ್ನಾಗಿ, ಕರೋಮಿ - ಮಾಡುತ್ತೇನೆ, ಪಶ್ಯ-ನೋಡು. ||೧೧|| ಸ್ತ್ರೀ ಸ್ವಭಾವೇನ - ಹೆಂಗಸಿನ ಸ್ವಭಾವದಿಂದ, ರಕ್ಷಿತಾಂ - ರಕ್ಷಿಸಲ್ಪಟ್ಟ, ಏನಾಂ-ಇವಳನ್ನು, ಹಂತುಂ - ಸಂಹರಿಸಲು, ನೋತ್ಸಹೇಹಿ - ಉದ್ಯುಕ್ತನಾಗಲಾರನಷ್ಟೆ, ಅಸ್ಯಾಃ - ಈ ತಾಟಕಿಯ, ವೀರ್ಯಂಚ - ಸಾಮರ್ಥ್ಯವನ್ನೂ, ಗತಿಂಚ - ಗಮನವನ್ನೂ, ಹನಿಷ್ಯಾಮೀತಿ - ಹೊಡೆಯುವೆನೆಂದು, ಮೇ - ನನ್ನ, ಮತಿಃ - ಬುದ್ಧಿಯು. ||೧೨|| ಏವಂ - ಈ ಪರಿಯಾಗಿ, ರಾಮೇತು-ಶ್ರೀರಾಮನು, ಬ್ರುವಾಣೇಸತಿ - ಹೇಳುತ್ತಿರಲು, ತಾಟಕಾ ತಾಟಕಿಯು, ಕ್ರೋಧಮೂರ್ಛಿತಾ-ಕೋಪದಿಂದ ಕೆರಳಿ, ಬಾಹೂ - ಭುಜಗಳನ್ನು, ಉದ್ಯಮ್ಯ-ಮೇಲಕ್ಕೆತ್ತಿಕೊಂಡು, ಗರ್ಜಂತೀ- ಕೂಗುತ್ತ, ರಾಮಮೇವ - ಶ್ರೀರಾಮನನ್ನೇ ಕುರಿತು, ಅಭ್ಯಧಾವತ - ಓಡಿಬಂದಳು. ||೧೩|| ಬ್ರಹ್ಮರ್ಷಿಃ - ಬ್ರಹ್ಮ ಋಷಿಯಾದ, ವಿಶ್ವಾಮಿತ್ರಸ್ತು-ವಿಶ್ವಾಮಿತ್ರನಾದರೆ, ಹುಂಕಾರೇಣ-ಹುಂಕಾರದಿಂದ, ತಾಂ-ಆ ತಾಟಕಿಯನ್ನು, ಅಭಿಭರ್ತ್ಸ್ಯ - ಹೆದರಿಸಿ, ರಾಘವಯೋಃ - ಶ್ರೀರಾಮಲಕ್ಷ್ಮಣರಿಗೆ, ಸ್ವಸ್ತಿ - ಶುಭವೂ,

---

ದೇಹವನ್ನು ನೋಡು ! ಈಕೆಯ ದರ್ಶನದಿಂದ ಭಯಸ್ಥರ ಎದೆಯೊಡದುಹೋಗುವದು. ತಿರಸ್ಕರಿಸಲಸಾಧ್ಯವಾದ ಮಾಯಾಬಲದಿಂದೊಡಗೂಡಿದ ಈ ರಾಕ್ಷಸಿಯನ್ನು ಕತ್ತರಿಸಲ್ಪಟ್ಟ ಕಿವಿಗಳೂ, ಮೂಗೂ ಉಳ್ಳವಳಾಗಿ ಹಿಂತಿರುಗಿಹೋಗುವಂತೆ ಮಾಡುವೆನು,ನೋಡು||೯-೧೧|| ಸ್ತ್ರೀಸ್ವಭಾವದಿಂದ ರಕ್ಷಿಸಲ್ಪಟ್ಟವಳಾದಕಾರಣ ಈ ರಕ್ಕಸಿಯನ್ನು ಕೊಲ್ಲುವದಿಲ್ಲವು. ಆದರೆ ಇವಳ ವೀರ್ಯವನ್ನೂ ಗತಿಯನ್ನೂ ಸಹಾ ಕೊನೆಗಾಣಿಸಬೇಕೆಂದು ಬುದ್ಧಿಯುಂಟಾಗಿರುವುದು" ಎಂದನು. ರಾಮಚಂದ್ರನು ಹೀಗೆ ನುಡಿಯುತ್ತಿರಲು,ಕ್ರೋಧದಿಂದ ಮೈಮರತಿರುವ ತಾಟಕಿಯು ಭುಜಗಳನ್ನೆತ್ತಿಕೊಂಡು ಗರ್ಜಿಸುತ್ತ ರಾಮನನ್ನೇ ಕುರಿತು ಓಡಿಬಂದಳು ||೧೨-೧೩||

ಭಾಷತ ॥ ೧೪ ॥ ಉದ್ಧೂನ್ವಾನಾ ರಜೋಘೋರಂ ತಾಟಕಾ ರಾಘವಾವುಭೌ ॥ ರಜೋಮೋಹೇನ ಮಹತಾ ಮುಹೂರ್ತಂ ಸಾವ್ಯಮೋಹಯತ್ ॥ ೧೫ ॥ ತತೋ ಮಾಯಾಂ ಸಮಾಸ್ಥಾಯ ಶಿಲಾವರ್ಷೇಣ ರಾಘವೌ ॥ ಅವಾಕಿರತ್ಸು ಮಹತಾ ತತಶ್ಚುಕ್ರೋಧರಾಘವಃ ॥ ೧೬ ॥ ಶಿಲಾವರ್ಷಂ ಮಹತ್ತಸ್ಯಾಶ್ಶರ ವರ್ಷೇಣರಾಘವಃ ॥ ಪ್ರತಿಹತ್ಯೋಪಧಾವಂತ್ಯಾಃ ಕರೌ ಚಿಚ್ಛೇದ ಪತ್ರಿಭಿಃ ॥ ೧೭ ॥ ತತಶ್ಛಿನ್ನಭುಜಾಂ ಶ್ರಾಂತಾಮಭ್ಯಾಶೇ ಪರಿಗರ್ಜತೀಂ ॥ ಸೌಮಿತ್ರಿರಕರೋತ್ಕ್ರೋಧಾದ್ಧೃತಕರ್ಣಾಗ್ರನಾಸಿಕಾಂ ॥ ೧೮ ॥ ಕಾಮರೂಪಧರಾಸದ್ಯಃ

ಜಯಂಚೈವ - ಜಯವೂ ಕೂಡ, ಅಸ್ತು - ಆಗಲೆಂದು, ಅಭ್ಯಭಾಷತ - ನುಡಿದನು. ॥ ೧೪ ॥ ಸಾತಾಟಕಾ - ಆ ತಾಟಕಿಯು, ಘೋರಂ - ಭಯಂಕರವಾದ, ರಜಃ - ಪರಾಗವನ್ನು, ಉದ್ಧೂನ್ವಾನಾ - ಎರಚುತ್ತ, ಮಹತಾ-ದೊಡ್ಡದಾದ, ರಜೋಮೋಹೇನ - ಕೆಂಧೂಳಿಯ ಅಂಧಕಾರದಿಂದ, ಮುಹೂರ್ತಂ - ಸ್ವಲ್ಪಕಾಲವು, ರಾಘವಾವುಭೌ- ರಾಮಲಕ್ಷ್ಮಣರಿಬ್ಬರನ್ನು, ವ್ಯಮೋಹಯತ್-ಭ್ರಾಂತಿಗೊಳಿಸಿದಳು. ॥೧೫॥ ತತಃ-ಬಳಿಕ, ಮಾಯಾಂ- ಅಂತರ್ಧಾನಶಕ್ತಿಯನ್ನು, ಸಮಾಸ್ಥಾಯ ಹೊಂದಿ, ಮಹತಾ - ಬಹಳವಾದ, ಶಿಲಾವರ್ಷೇಣ - ಕಲ್ಲುಮಳೆಯಿಂದ, ರಾಘವೌ - ರಾಮಲಕ್ಷ್ಮಣರಿಬ್ಬರನ್ನು, ಅವಾಕಿರತ್ - ಸುರಿಸಿದಳು, ತತಃ - ಬಳಿಕ, ರಾಘವಃ - ಶ್ರೀರಾಮನು, ಚುಕ್ರೋಧ - ಕೋಪಗೊಂಡನು. ॥ ೧೬ ॥ ರಾಘವಃ - ಶ್ರೀರಾಮನು, ಮಹತ - ಬಹಳವಾದ, ತಸ್ಯಾ -ಆತಾಟಕಿಯ, ಶಿಲಾವರ್ಷಂ - ಕಲ್ಲುಮಳೆಯನ್ನು, ಶರವರ್ಷೇಣ - ಬಾಣವರ್ಷದಿಂದ, ಪ್ರತಿಹತ್ಯ - ಹೊಡೆದು, ಉಪಧಾವಂತ್ಯಾಃ - ಸಮೀಪದಲ್ಲಿ ಓಡಿಬರುತ್ತಿರುವ, ತಸ್ಯಾಃ - ಆ ತಾಟಕಿಯ, ಕರೌ - ಹಸ್ತಗಳನ್ನು, ಪತ್ರಿಭಿಃ - ಬಾಣಗಳಿಂದ, ಚಿಚ್ಛೇದ - ಕತ್ತರಿಸಿದನು. ॥ ೧೭ ॥ ತತಃ - ಬಳಿಕ, ಸೌಮಿತ್ರೀ-ಲಕ್ಷ್ಮಣಸ್ವಾಮಿಯು, ಛಿನ್ನಭುಜಾಂ, ಛಿನ್ನ - ಕತ್ತರಿಸಲ್ಪಟ್ಟ, ಭುಜಾಂ ಭುಜಗಳುಳ್ಳ, ಶ್ರಾಂತಾಂ-ಬಳಲಿ, ಅಭ್ಯಾಶೇ - ಸಮೀಪದಲ್ಲಿ, ಪರಿಗರ್ಜತೀಂ - ಗರ್ಜಿಸುತ್ತಿರುವ ತಾಟಕಿಯನ್ನು, ಕ್ರೋಧಾತ್ - ಕೋಪದಿಂದ, ಹೃತಕರ್ಣಾಗ್ರನಾಸಿಕಾಂ, ಹೃತ-ಅಪಹರಿಸಲ್ಪಟ್ಟ, ಕರ್ಣ-ಕಿವಿಗಳೂ ಅಗ್ರನಾಸಿಕಾಂ - ನಾಸಿಕಾಗ್ರವೂ ಉಳ್ಳವಳನ್ನಾಗಿ, ಅಕರೋತ್ - ಮಾಡಿದನು. ॥ ೧೮ ॥ ಕಾಮರೂಪಧರಾ - ಬೇಕಾದ ರೂಪವನ್ನು ಧರಿಸುವುದರಲ್ಲಿ ಶಕ್ತಳಾದ, ಯಕ್ಷೀ-ಯಕ್ಷಸ್ತ್ರೀಯು,

ಆ ಸಮಯದಲ್ಲಿ ವಿಶ್ವಾಮಿತ್ರನು ಹುಂಕಾರದಿಂದ ಆ ತಾಟಕಿಯನ್ನು ಧಿಕ್ಕರಿಸಿ, ರಾಮಲಕ್ಷ್ಮಣರಿಗೆ ಶುಭವುಂಟಾಗಿ ಜಯಶಾಲಿಗಳಾಗಿರಲೆಂದು ಹೇಳುತಿದ್ದನು ॥ ೧೪ ॥ ಆ ತಾಟಕಿಯು ರಾಮ ಲಕ್ಷ್ಮಣರನ್ನುಕುರಿತು ಕೆಂಧೂಳಿಯನ್ನೆರಚುತ್ತ ಅವರೀರ್ವರನ್ನು ರಜೋಂಧಕಾರದಿಂದ ಮೋಹಗೊಳಿಸಿದಳು. ॥ ೧೫ ॥ ಆ ಬಳಿಕ ಪುನಃ ಮಾಯೆಯನ್ನು ಹೊಂದಿ ಶಿಲಾವರ್ಷದಿಂದ ರಾಮ ಲಕ್ಷ್ಮಣರನ್ನು ಹೊಡೆಯುತ್ತಿರಲು, ಶ್ರೀರಾಮನು ಕಡುಕುಪಿತನಾಗಿ ಆ ಶಿಲಾವರ್ಷವನ್ನು ಬಾಣವರ್ಷದಿಂದ ಛೇದಿಸಿ ಸಮೀಪದಲ್ಲಿ ಓಡಿಬರುತ್ತಿರುವ ಆ ತಾಟಕಿಯ ಕೈಗಳನ್ನು ಕತ್ತರಿಸಿದನು. ॥ ೧೬-೧೭ ॥ ಆಗ ಲಕ್ಷ್ಮಣನು ಕತ್ತರಿಸಲ್ಪಟ್ಟ ಭುಜಗಳುಳ್ಳವಳಾಗಿಯೂ, ಬಳಲಿದವಳಾಗಿಯೂ, ಸಮೀಪದಲ್ಲಿ ಗರ್ಜಿಸುತ್ತಿರುವಳಾಗಿಯೂ, ಆಗಿರುವ

ಕೃತ್ವಾರೂಪಾಣ್ಯನೇಕಶಃ || ಅಂತರ್ಧಾನಂಗತಾ ಯಕ್ಷೀ ಮೋಹಯಂತೀವ ಮಾಯಯಾ || ೧೯ || ಅಶ್ಮವರ್ಷಂ ವಿಮುಂಚಂತೀ ಭೈರವಂ ವಿಚಚಾರಹ || ತತಸ್ತಾವಶ್ಮವರ್ಷೇಣ ಕೀರ್ಯಮಾಣೌ ಸಮಂತತಃ ||೨೦|| ದೃಷ್ಟ್ವಾ ಗಾಧಿಸುತಶ್ಶ್ರೀಮಾನಿದಂವಚನಮಬ್ರವೀತ್||ಅಲಂತೇಘೃಣಯಾ ರಾಮ ಪಾಪೈಷಾ ದುಷ್ಟಚಾರಿಣೀ || ೨೧ || ಯಜ್ಞವಿಘ್ನಕರೀ ಯಕ್ಷೀ ಪುರಾ ವರ್ಧತಿ ಮಾಯಯಾ|| ವಧ್ಯತಾಂ ತಾವದೇವೈಷಾ ಪುರಾ ಸಂಧ್ಯಾ ಪ್ರವರ್ತತೇ ||೨೨||

---

ಸದ್ಯಃ - ಆಗಲೇ, ಅನೇಕಶಃ ಅನೇಕಗಳಾದ, ರೂಪಾಣಿ - ಆಕಾರಗಳನ್ನು, ಕೃತ್ವಾ - ಹೊಂದಿ ಅಂತರ್ಧಾನಂ - ತಿರೋಧಾವನ್ನು, ಗತ್ವಾ - ಹೊಂದಿ, ಮಾಯಯಾ- ಮಾಯೆಯಿಂದ, ಮೋಹಯಂತೀವ-ಮೋಹಗೊಳಿಸುವಂತೆ ಇದ್ದು ಅಶ್ಮವರ್ಷಂ - ಶಿಲಾವೃಷ್ಟಿಯನ್ನು, ವಿಮುಂಚಂತೀ- ಬಿಡುತ್ತ, ಭೈರವಂ ಭಯಂಕರವಾಗುವಂತೆ, ವಿಚಚಾರಹ - ಸಂಚರಿಸಿದಳು. || ೧೯ || ತತಃ-ಬಳಿಕ ಅಶ್ಮವರ್ಷೇಣ - ಶಿಲಾವೃಷ್ಟಿಯಿಂದ, ಸಮಂತತಃ - ಎಲ್ಲೆಡೆಯಲ್ಲಿಯೂ ಕೀರ್ಯಮಾಣೌ - ಎರಚಲ್ಪಡುತ್ತಿರುವ, ತೌ - ಆ ರಾಮಲಕ್ಷ್ಮಣರನ್ನು, ದೃಷ್ಟ್ವಾ-ಕಂಡು, ಶ್ರೀಮಾನ್ - ಸಂಪದ್ಯುಕ್ತನಾದ, ಗಾಧಿಸುತಃ - ವಿಶ್ವಾಮಿತ್ರನು, ಇದಂವಚನಂ - ಮುಂದೆ ಹೇಳುವ ಮಾತನ್ನು, ಅಬ್ರವೀತ್ - ನುಡಿದನು. ||೨೦|| ಹೇರಾಮ - ಎಲೈ ಶ್ರೀರಾಮನ ತೇ - ನಿನಗೆ, ಘೃಣಯಾ - ಕೃಪೆಯಿಂದ, ಅಲಂ-ಸಾಕು, ದುಷ್ಟಚಾರಿಣೀ - ದುರ್ವ್ಯಾಪಾರಿಯೂ, ಯಜ್ಞವಿಘ್ನಕರೀ - ಯಜ್ಞಾದಿ ಕರ್ಮಗಳಿಗೆ ವಿಘ್ನಕರ್ತಳೂ,ಆದ ಪಾಪಾ ಪಾಪಿಷ್ಠಳೂ ಆದ,ಏಷಾಯಕ್ಷೀ-ಈ ಯಕ್ಷಸ್ತ್ರೀಯು,ಮಾಯಯಾ-ಮಾಯಾಶಕ್ತಿಯಿಂದ, ಪುರಾವರ್ಧತಿ - ವೃದ್ಧಿಹೊಂದುವಳು, || ೨೧ || ಯಾವತ್ - ಎಷ್ಟರಲ್ಲಿ, ಸಂಧ್ಯಾ-ಸಂಧ್ಯಾಕಾಲವು, ಪುರಾಪ್ರವರ್ತತೇ ಪ್ರವರ್ತಿಸುವುದೋ, ತಾವದೇವ - ಅಷ್ಟರಲ್ಲಿಯೇ, ಏಷಾ-ಈ ಯಕ್ಷಸ್ತ್ರೀಯು, ವಧ್ಯತಾಂ - ಸಂಹರಿಸಲ್ಪಡಲಿ, ರಕ್ಷಾಂಸಿ - ರಕ್ಕಸರು, ಸಂಧ್ಯಾಕಾಲೇಷು-ಸಂಧ್ಯಾಕಾಲದಲ್ಲಿ, ದುರ್ಧರ್ಷಾಣಿ - ತಿರಸ್ಕರಿಸಲಸಾಧ್ಯರು, ಭವಂತಿಹಿ - ಆಗುವರಷ್ಟೆ, || ೨೨ || ತದಾ-ಆ ಕಾಲದಲ್ಲಿ, ಇತಿ - ಹೀಗೆ, ಉಕ್ತಃ - ಹೇಳಲ್ಪಟ್ಟ, ಸತು - ಆ ಶ್ರೀರಾಮನು, ಶಬ್ದವೇದಿತ್ವಂ-

---

ಆ ತಾಟಕಿಯ ಕಿವಿಗಳನ್ನೂ, ಮೂಗನ್ನೂ ಕತ್ತರಿಸಿದನು. || ೧೮ || ಕಾಮರೂಪಳಾದ ಆ ಯಕ್ಷಿಣಿಯು ತತ್‌ಕ್ಷಣದಲ್ಲಿಯೇ ಅಂತರ್ಹಿತಳಾಗಿ ಅನೇಕರೂಪಗಳನ್ನು ತಾಳಿ ಮಾಯೆಯಿಂದ ಮೋಹಗೊಳಿಸುವಳಂತೆ ಶಿಲಾವರ್ಷವನ್ನು ಸುರಿಸುತ್ತ ಸಂಚರಿಸುತ್ತಿದ್ದಳು. ||೧೯|| ಆಗ ಮಹಾ ತೇಜಸ್ವಿಯಾದ ವಿಶ್ವಾಮಿತ್ರಮುನಿಯು ಎತ್ತೆತ್ತಲೂ ಪಾಷಾಣವರ್ಷದಿಂದ ವ್ಯಾಪ್ತರಾದ ರಾಮಲಕ್ಷ್ಮಣರನ್ನುಕಂಡು || ೨೦ || “ ರಘುನಂದನ ! ದಯೆಯು ಇಲ್ಲಿಗೆಸಾಕು ? ದುಷ್ಟಳಾಗಿ ಸಂಚರಿಸುತ್ತಿರುವ ಈ ತಾಟಕಿಯು ಪಾಪಿಯು ; ಯಜ್ಞಕ್ಕೆ ವಿಘ್ನಕರಳಾಗಿ ಮುಂದೆ ವೃದ್ಧಿಹೊಂದುವಳು ; || ೨೧|| || ರಾಕ್ಷಸರು ಸಂಧ್ಯಾಕಾಲಗಳಲ್ಲಿ ತಿರಸ್ಕರಿಸಲಸಾಧ್ಯರಷ್ಟೆ ; ಆದಕಾರಣ ಸಂಜೆಯಾಗುವದರೊಳಗಾಗಿಯೇ ಈ ರಕ್ಕಸಿಯನ್ನು

ರಕ್ಷಾಂಸಿ ಸಂಧ್ಯಾಕಾಲೇಷು ದುರ್ಧರ್ಷಾಣಿ ಭವಂತಿವೈ || ಇತ್ಯುಕ್ತಸ್ತು ತದಾ ಯಕ್ಷೀಮಶ್ಮವೃಷ್ಟ್ಯಾಭಿವರ್ಷತೀಂ ||೨೩|| ದರ್ಶಯಞ್ಛಬ್ದವೇದಿತ್ವಂ ತಾಂ ರುರೋಧ ಸಸಾಯಕೈಃ|| ಸಾ ರುದ್ಧಾ ಶರಜಾಲೇನ ಮಾಯಾಬಲಸಮನ್ವಿತಾ || ೨೪ || ಅಭಿದುದ್ರಾವ ಕಾಕುತ್ಸ್ಥಂ ಲಕ್ಷ್ಮಣಂಚ ವಿನೇದುಷೀ || ತಾಮಾಪತಂತೀಂ ವೇಗೇನ ವಿಕ್ರಾಂತಾಮಶನೀಮಿವ || ೨೫ || ಶರೇಣೋರಸಿ ವಿವ್ಯಾಧ ಸಾ ಪಪಾತ ಮಮಾರಚ || ತಾಂಹತಾಂ ಭೀಮಸಂಕಾಶಾಂ ದೃಷ್ಟ್ವಾ ಸುರಪತಿಸ್ತದಾ || ೨೬ || ಸಾಧುಸಾಧ್ವಿತಿ ಕಾಕುತ್ಸ್ಥಂ ಸುರಾಶ್ಚ ಸಮಪೂಜಯನ್ || ಉವಾಚ ಪರಮಪ್ರೀತಸ್ಸಹಸ್ರಾಕ್ಷಃ ಪುರಂದರಃ ||೨೭|| ಸುರಾಶ್ಚ ಸರ್ವೇ

---

ಶಬ್ದಾನುರೂಪವಾಗಿ ಲಕ್ಷ್ಯಭೇದನ ಮಾಡತಕ್ಕ ಸಾಮರ್ಥ್ಯವನ್ನು, ದರ್ಶಯನ್ - ತೋರಿಸುತ್ತ, ಅಶ್ಮವೃಷ್ಟ್ಯಾ - ಶಿಲಾವರ್ಷದಿಂದ, ಅಭಿವರ್ಷತೀಂ - ಸುರಿಸುತ್ತಿರುವ, ತಾಂಯಕ್ಷೀಂ - ಆ ಯಕ್ಷಸ್ತ್ರೀಯಾದ ತಾಟಕಿಯನ್ನು, ಸಾಯಕೈಃ - ಬಾಣಗಳಿಂದ, ರುರೋಧ - ತಡೆಮಾಡಿದನು. || ೨೩ || ಸಾ - ಆ ತಾಟಕಿಯು, ಶರಜಾಲೇನ - ಬಾಣತಂಡಗಳಿಂದ, ರುದ್ಧಾ - ತಡೆಯಲ್ಪಟ್ಟವಳಾದ ಕಾರಣ, ಮಾಯಾಬಲಸಮನ್ವಿತಾ - ಮಾಯಾಶಕ್ತಿಯಿಂದ ಕೂಡಿದವಳಾಗಿ, ವಿನೇದುಷೀ- ಅರಚುತ್ತ, ಕಾಕುತ್ಸ್ಥಂ - ಶ್ರೀರಾಮನನ್ನು, ಲಕ್ಷ್ಮಣಂಚ ಲಕ್ಷ್ಮಣನನ್ನೂ, ಕುರಿತು, ಅಭಿದುದ್ರಾವ-ಓಡಿಬಂದಳು || ೨೪ || ವೇಗೇನ - ಜಾಗ್ರತೆಯಿಂದ, ವಿಕ್ರಾಂತಾಂ - ಬರುತ್ತಿರುವ, ಅಶನೀಮಿವ ಸಿಡಿಲಿನಂತೆ, ಆಪತಂತೀಂ – ಮೇಲೆ ಬೀಳುತ್ತಿರುವ, ತಾಂ - ಆ ತಾಟಕಿಯನ್ನು, ಶರೇಣ - ಒಂದು ಬಾಣದಿಂದ, ವಿವ್ಯಾಧ - ಹೊಡೆದನು, ಸಾ - ಆ ತಾಟಕಿಯು, ಪಪಾತ - ಕೆಳಗೆ ಬಿದ್ದಳು. ಮಮಾರಚ - ಮೃತಿಯನ್ನೂ ಹೊಂದಿದಳು, || ೨೫ || ಭೀಮಸಂಕಾಶಾಂ- ಅತಿ ಭಯಂಕರಳಾದ, ತಾಂ– ಆ ತಾಟಕಿಯನ್ನು, ಹತಾಂ - ಹತಳನ್ನಾಗಿ, ದೃಷ್ಟ್ವಾ - ಕಂಡು, ತದಾ - ಆ ಕಾಲದಲ್ಲಿ, ಸುರಪತಿಃ- ದೇವೇಂದ್ರನು, ಸುರಾಶ್ಚ – ದೇವತೆಗಳೂ, ಕಾಕುತ್ಸ್ಥಂ - ಶ್ರೀರಾಮನನ್ನು, ಸಾಧುಸಾಧ್ವಿತಿ- ಬಹಳ ಚಂದವಾಯಿತೆಂದು, ಸಮಪೂಜಯನ್ - ಶ್ಲಾಘಿಸಿದರು. || ೨೬ || ಸಹಸ್ರಾಕ್ಷಃ-ಸಹಸ್ರ ನೇತ್ರಗಳುಳ್ಳ, ಪುರಂದರಃ - ದೇವೇಂದ್ರನು, ಪರಮಪ್ರೀತಃ- ಬಹಳ ಸಂತೋಷಗೊಂಡವನಾಗಿ, ಉವಾಚ- ಹೇಳಿದನು ಅಥ - ಬಳಿಕ, ಸರ್ವೇ - ಸಮಸ್ತ, ಸುರಾಶ್ಚ– ದೇವತೆಗಳು, ಸಂಹೃಷ್ಟಾ ಹರ್ಷ

---

ನಿಗ್ರಹಿಸು " ಎಂದು ನುಡಿದನು ಆಗಲಾ ರಾಮನು ಶಬ್ದಾನುಗುಣವಾಗಿ ಲಕ್ಷ್ಯಭೇದದ ಸಾಮರ್ಥ್ಯವನ್ನು ತೋರಿಸುತ್ತ ಶಿಲಾವರ್ಷವಂ ವರ್ಷಿಸುತ್ತಿರುವ ಆ ತಾಟಕಿಯನ್ನು ಬಾಣಗಳಿಂದ ತಡೆದನು ||೨೨-೨೩|| ಶರತಂಡಗಳಿಂದ ಬಂಧಿತಳಾದ ಆ ತಾಟಕಿಯು ಮಾಯಾಬಲದಿಂದೊಡಗೂಡಿ ಘೋಷಿಸುತ್ತ ರಾಮಲಕ್ಷ್ಮಣರನ್ನು ಕುರಿತು ಓಡಿಬಂದಳು || ೨೪ || ಸಿಡಿಲಿನಂತೆ ವೇಗವಾಗಿ ಬರುತ್ತಿರುವ ಆ ತಾಟಕಿಯನ್ನು ಎದೆಯಲ್ಲಿ ಒಂದು ಶರದಿಂದ ಹೊಡೆಯಲು, ಆ ರಾಕ್ಷಸಿಯು ಮೃತಳಾಗಿ ಕೆಳಗೆ ಬಿದ್ದುಹೋದಳು || ೨೫ || ಆ ಸಮಯದಲ್ಲಿ ಇಂದ್ರನೂ, ದೇವತೆಗಳೂ, ಮಹಾ ಭಯಂಕರಳಾದ ಆ ತಾಟಕಿಯು ಮೃತಳಾದುದನ್ನು ಕಂಡು, " ಬಲುಚಂದವಾಯಿತು ! ಬಲುಚಂದವಾಯಿತು ! " ಎಂದು ಶ್ರೀರಾಮನನ್ನು




ತಾಟಕಾವಧ

ಸಂಹೃಷ್ಟಾ ವಿಶ್ವಾಮಿತ್ರಮಥಾಬ್ರುವನ್ || ಮುನೇ ಕೌಶಿಕ ಭದ್ರಂ ತೇ ಸೇಂದ್ರಾಸ್ಸರ್ವೇ ಮರುದ್ಗಣಾ ||೨೮|| ತೋಷಿತಾಃ ಕರ್ಮಣಾನೇನ ಸ್ನೇಹಂ ದರ್ಶಯ ರಾಘವೇ || ಪ್ರಜಾಪತೇರ್ಭೃಶಾಶ್ವಸ್ಯ ಪುತ್ರಾನ್ ಸತ್ಯಪರಾಕ್ರಮಾನ್ || ೨೯ || ತಪೋಬಲಭೃತಾಂ ಬ್ರಹ್ಮನ್ ರಾಘವಾಯ ನಿವೇದಯ || ಪಾತ್ರಭೂತಶ್ಚ ತೇ ಬ್ರಹ್ಮಂಸ್ತವಾನುಗಮನೇ ಧೃತಃ ||೩೦|| ಕರ್ತವ್ಯಂಚ ಮಹತ್ಕರ್ಮ ಸುರಾಣಾಂ ರಾಜಸೂನುನಾ || ಏವಮುಕ್ತ್ವಾ ಸುರಾಸ್ಸರ್ವೇ ಹೃಷ್ಟಾ ಜಗ್ಮುರ್ಯಥಾಗತಂ ||

---

ಯುಕ್ತರಾಗಿ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಅಬ್ರುವನ್ ನುಡಿದರು. || ೨೭ || ಮುನೇ- ಕೌಶಿಕ - ಎಲೈ ವಿಶ್ವಾಮಿತ್ರ ಋಷಿಯೇ, ತೇ- ನಿನಗೆ, ಭದ್ರಂ - ಶುಭವು, ಅಸ್ತು-ಆಗಲಿ, ಸೇಂದ್ರಾಃ - ಇಂದ್ರನಿಂದೊಡಗೂಡಿದ, ಸರ್ವೇ - ಸಮಸ್ತರಾದ, ಮರುದ್ಗಣಾಃ - ಬೃಂದಾರಕ ಬೃಂದಗಳೆಲ್ಲ, ಅನೇನಕರ್ಮಣಾ - ಈ ತಾಟಕಾ ಸಂಹಾರರೂಪ ವ್ಯಾಪಾರದಿಂದ, ತೋಷಿತಾಃ-ಆನಂದ ಹೊಂದಿಸಲ್ಪಟ್ಟರು, ರಾಘವೇ - ಶ್ರೀರಾಮನಲ್ಲಿ, ಸ್ನೇಹಂ - ಮೈತ್ರಿಯನ್ನು, ದರ್ಶಯ- ತೋರಿಸು. ||೨೮|| ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ಸತ್ಯಪರಾಕ್ರಮಾನ್- ಸತ್ಯದಿಂದ ಶತ್ರುಗಳನ್ನಾಕ್ರಮಿಸುತ್ತಿರುವ, ತಪೋಬಲಭೃತಾನ್ - ನಿನ್ನ ತಪಸ್ಸಾಮರ್ಥ್ಯದಿಂದ ಸಂಪಾದಿಸಲ್ಪಟ್ಟ, ಪ್ರಜಾಪತೇಃ-ಸೃಷ್ಟಿಕರ್ತನಾದ, ಭೃಶಾಶ್ವಸ್ಯ - ಭೃಶಾಶ್ವನ, ಪುತ್ರಾನ್ - ಮಕ್ಕಳನ್ನು, ರಾಘವಾಯ - ಶ್ರೀರಾಮನಿಗೆ, ನಿವೇದಯ - ತಿಳಿಸು, || ೨೯ || ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ಅಯಂ - ಈ ಶ್ರೀರಾಮನು, ತೇ - ನಿನಗೆ, ಪಾತ್ರಭೂತಶ್ಚ - ಅಸ್ತ್ರೋಪದೇಶಕ್ಕೆ ಪಾತ್ರನಾಗಿಧಾನೆ, ತವ-ನಿನ್ನ, ಅನುಗಮನೇ-ಶುಶ್ರೂಷೆಯಲ್ಲಿ, ಧೃತಃ - ಸ್ಥಿರಚಿತ್ತನಾಗಿರುವನು, ರಾಜಸೂನುನಾ - ರಾಜಕುಮಾರನಾದ, ಶ್ರೀರಾಮನಿಂದ, ಸುರಾಣಾಂ - ದೇವತೆಗಳ, ಮಹತ್ - ಬಹಳವಾದ, ಕರ್ಮ - ಕಾರ್ಯವು, ಕರ್ತವ್ಯಂ- ಮಾಡತಕ್ಕದು, || ೩೦ || ಏವಂ - ಈ ಪರಿಯಾಗಿ, ಉಕ್ತ್ವಾ-ಹೇಳಿ, ಸರ್ವೇ - ಸಮಸ್ತರಾದ, ಸುರಾಃ - ದೇವತೆಗಳು, ಹೃಷ್ಟಾಃ - ಸಂತೋಷಗೊಂಡವರಾಗಿ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಪುರಸ್ಕೃತ್ಯ - ಪೂಜಿಸಿ, ಯಥಾಗತಂ - ಬಂದಂತೆ, ಜಗ್ಮುಃ - ಹೊರಟುಹೋದರು, ತತಃ-ಬಳಿಕ ಸಂಧ್ಯಾ - ಸಂಧ್ಯಾಕಾಲವು, ಪ್ರವರ್ತತೇ - ಪ್ರವರ್ತಿಸಿತು, ತತಃ - ಬಳಿಕ, ಮುನಿವರಃ- ವಿಶ್ವಾ

---

ಹೊಗಳಿ || ೨೭ || ಸಂತುಷ್ಟರಾಗಿ ವಿಶ್ವಾಮಿತ್ರನನ್ನು ಕುರಿತು “ ಎಲೈ ಕೌಶಿಕನೇ ! ಇಂದ್ರಾದಿ ದೇವತೆಗಳೆಲ್ಲರೂ, ಈ ರಾಮಚಂದ್ರನ ಕೃತ್ಯದಿಂದ ಬಲುಸಂತೋಷಿಸುತ್ತಿರುವರು. ಶ್ರೀರಾಮನಲ್ಲಿ ಸ್ನೇಹವನ್ನುತೋರು, ನಿನಗೆ ಶುಭವಾಗಲಿ; || ೨೭-೨೮ || ಎಲೈ ಬ್ರಾಹ್ಮಣನೇ! ತಪೋಬಲದಿಂದ ಸಂಪಾದಿಸಲ್ಪಟ್ಟ ಸತ್ಯಪರಾಕ್ರಮಗಳುಳ್ಳವೂ, ಭೃಶಾಶ್ವನೆಂಬ ಬ್ರಹ್ಮನಪುತ್ರರೂಪವಾಗಿರುವವೂ ಆದ ಶಸ್ತ್ರಾಸ್ತ್ರಗಳನ್ನೂ, ಶ್ರೀರಾಮನಿಗೆ ತಿಳುಹಿಸು. || ೨೯ || ಎಲೈ ಬ್ರಾಹ್ಮಣೋತ್ತಮನೇ ! ನಿನಗೆ ಅಸ್ತ್ರೋಪದೇಶಕ್ಕೆ ಪಾತ್ರಭೂತನಾದವನೀತನೇ ಸರಿ ? ನಿನ್ನ ಶುಶ್ರೂಷೆಯಲ್ಲಿಯೇ ಸ್ಥಿರಚಿತ್ತನಾಗಿರುವನು. ಈ ರಾಜಪುತ್ರನಿಂದ ಮಹತ್ತರವಾದ ದೇವಕಾರ್ಯವಾಗಬೇಕಾದುದಿರುವುದು ” ಎಂದು ನುಡಿದು ವಿಶ್ವಾಮಿತ್ರನನ್ನು ಪೂಜಿಸಿ ಸಂತುಷ್ಟರಾಗಿ ಹೊರಟು ಹೋದರು. ಬಳಿಕ ಸಂಜೆಯಾಯಿತು.

೩೧ || ವಿಶ್ವಾಮಿತ್ರಂ ಪುರಸ್ಕೃತ್ಯ ತತಸ್ಸಂಧ್ಯಾ ಪ್ರವರ್ತತೇ || ತತೋಮುನಿ
ವರಃ ಪ್ರೀತಸ್ತಾಟಕಾ ವಧತೋಷಿತಃ || ೩೨ || ಮೂರ್ಧ್ನಿರಾಮಮುಪಾಘ್ರಾಯ
ಇದಂ ವಚನಮಬ್ರವೀತ್|| ಇಹಾದ್ಯ ರಜನೀಂರಾಮ ವಸೇಮ ಶುಭದರ್ಶನ ||
೩೩|| ಶ್ವಃ ಪ್ರಭಾತೇ ಗಮಿಷ್ಯಾಮಸ್ತದಾಶ್ರಮಪದಂ ಮಮ || ವಿಶ್ವಾಮಿತ್ರ
ವಚಶ್ಶ್ರುತ್ವಾ ಹೃಷ್ಟೋ ದಶರಥಾತ್ಮಜಃ || ೩೪ || ಉವಾಸ ರಜನೀಂ ತತ್ರ
ತಾಟಕಾಯಾ ವನೇಸುಖಂ|| ಮುಕ್ತಶಾಪಂ ವನಂ ತಚ್ಚ ತಸ್ಮಿನ್ನೇವ ತದಾಹನಿ||
೩೫ || ರಮಣೀಯಂ ವಿಬಭ್ರಾಜ ಯಥಾ ಚೈತ್ರರಥಂ ವನಂ || ನಿಹತ್ಯತಾಂ

---

ಮಿತ್ರನು. ಪ್ರೀತಃ- ಪ್ರೇಮವುಳ್ಳವನಾಗಿ, ತಾಟಕಾವಧತೋಷಿತಃ-ತಾಟಕಾ ಸಂಹಾರದಿಂದ ಸಂತು ಷ್ಟನಾಗಿ, ರಾಮಂ - ಶ್ರೀರಾಮನನ್ನು, ಮೂರ್ಧ್ನಿ - ಮಂಡೆಯಲ್ಲಿ, ಉಪಾಘ್ರಾಯ - ಆಘ್ರಾಣಿಸಿ, ಇದಂ-ಈವಕ್ಷ್ಯಮಾಣವಾದ, ವಚನ-ವಾಕ್ಯನ್ನು, ಅಬ್ರವೀತ್-ನುಡಿದನು. || ೩೨ || ಹೇರಾಮ ಎಲೈ ಶ್ರೀರಾಮನೆ, ಹೇಶುಭದರ್ಶನ - ಎಲೈ ಶುಭಕರವಾದ ದರ್ಶನವುಳ್ಳವನೆ, ಅದ್ಯ-ಈಗ,ರಜನೀಂ- ರಾತ್ರಿ ಯಲ್ಲಿ, ಇಹ - ಇಲ್ಲಿಯೇ ವಸೇಮ - ಇರೋಣ, ಶ್ವಃ - ನಾಳೆಯು, ಪ್ರಭಾತೇ-ಪ್ರಾತಃಕಾಲದಲ್ಲಿ ತತ್ - ಆ ಪೂರ್ವೋಕ್ತವಾದ, ಮಮ - ನನ್ನ, ಆಶ್ರಮಪದಂ - ಪರ್ಣಶಾಲೆಯನ್ನು ಕುರಿತು, ಗಮಿ ಷ್ಯಾಮಿ = ಹೋಗೋಣ. || ೩೩ || ವಿಶ್ವಾಮಿತ್ರವಚಃ - ವಿಶ್ವಾಮಿತ್ರ ಋಷಿಯ ಮಾತನ್ನು, ಶ್ರುತ್ವಾ-ಕೇಳಿ, ಪ್ರಹೃಷ್ಟ - ಸಂತೋಷಯುಕ್ತನಾದ, ದಶರಥಾತ್ಮಜಃ-ಶ್ರೀರಾಮನು, ತತ್ರ ಅಲ್ಲಿಯೇ, ತಾಟಕಾಯಾಃವನೇ - ತಾಟಕಿಯ ವನದಲ್ಲಿಯು, ಸುಖಂ - ಸುಖವಾಗಿ, ರಜನೀಂ - ರಾತ್ರಿಯಲ್ಲಿ, ಉವಾಸ - ವಾಸಮಾಡಿದನು. ||೩೪| ತದಾ - ಆ ಕಾಲದಲ್ಲಿ, ಮುಕ್ತಶಾಪಂ, ಮುಕ್ತ ಬಿಡಲ್ಪಟ್ಟ, ಶಾಪಂ - ಶಾಪವುಳ್ಳ, ತಚ್ಚವನಂ ಆ ವನವು, ತಸ್ಮಿನ್ಅಹನ್ಯೇವ-ಆ ಹಗಲಿನಲ್ಲಿಯೆ, ರಮಣೀಯಂ- ಮನೋಹರವಾದ, ಚೈತ್ರರಥಂ- ಚೈತ್ರರಥವೆಂಬ, ವನಂಯಥಾ - ವನದಂತೆ, ವಿಬಭ್ರಾಜ-ಹೊಳೆಯು ತ್ತಿದ್ದಿತು || ೩೫ || ಸಃರಾಮಃ - ಆ ಶ್ರೀರಾಮನು, ಯಕ್ಷಸುತಾಂ - ಯಕ್ಷನಿಗೆ ಕುವರಿಯಾದ,

---

||೩೦-೩೧|| ಆಗ ರಾಮಲಕ್ಷ್ಮಣರಲ್ಲಿ ಪ್ರೇಮವುಳ್ಳ ವಿಶ್ವಾಮಿತ್ರಮುನಿಯು ತಾಟಕಾ ಸಂಹಾ ರದಿಂದ ಸಂತುಷ್ಟನಾಗಿ ಶ್ರೀರಾಮನ ಮಂಡೆಯನ್ನಾಘ್ರಾಣಿಸಿ ಹೀಗೆಂದನು. ||೩೨|| "ಎಲೈ ಶುಭದರ್ಶನವುಳ್ಳ ಶ್ರೀರಾಮನೇ! ಈರಾತ್ರಿಯನ್ನಿಲ್ಲಿಯೇ ಕಳೆದು, ನಾಳಿನ ಪ್ರಾತಃಕಾಲದಲ್ಲಿ ಹಿಂದೆಹೇಳಿದ ನನ್ನಪರ್ಣಶಾಲೆಯನ್ನು ಕುರಿತು ಹೋಗೋಣ, ಎಂದು ನುಡಿಯಲು, ರಾಮನು ಸಂತೋಷಯುಕ್ತನಾಗಿರುವ ಆ ವಿಶ್ವಾಮಿತ್ರಋಷಿಯ ಮಾತನ್ನುಕೇಳಿ ಆ ತಾಟಕಾ ವನದ ಲ್ಲಿಯೇ ಸುಖವಾಗಿ ಆ ರಾತ್ರಿಯನ್ನು ಕಳೆದನು ||೩೩-೩೪|| ಆಗಲಾ ವನವು ಶಾಪವಿಮುಕ್ತ ವಾಗಿ ಆ ಹಗಲಿನಲ್ಲಿಯೇ ಮನೋಹರವಾದ ಚೈತ್ರರಥವೆಂಬ ವನದಂತೆ ಹೊಳೆಯುತ್ತಿದ್ದಿತು. || ೩೫ || ತಾಟಕಿಯನ್ನುಹೊಡೆದು ದೇವತೆಗಳಿಂದಲೂ, ಸಿದ್ಧರಗುಂಪುಗಳಿಂದಲೂ, ಶ್ಲಾಘಿ

ಯಕ್ಷಸುತಾಂ ಸರಾಮಃ ಪ್ರಶಸ್ಯಮಾನಸ್ಸುರಸಿದ್ಧಸಂಘೈಃ ‖ ಉವಾಸ ತಸ್ಮಿನ್ಮು
ನಿನಾ ಸಹೈವ ಪ್ರಭಾತವೇಳಾಂ ಪ್ರತಿಬೋಧ್ಯಮಾನಃ ‖೩೬‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಡ್ತ್ರಿಂಶಸ್ಸರ್ಗಃ.

---

ತಾಂ - ಆ ತಾಟಕಿಯನ್ನು, ನಿಹತ್ಯ- ಹೊಡೆದು, ಸುರಸಿದ್ಧಸಂಘೈಃ- ದೇವತೆಗಳ, ಸಿದ್ಧರ, ಸಮೂಹ ಗಳಿಂದ, ಪ್ರಶಸ್ಯಮಾನಃ - ಶ್ಲಾಘಿಸಲ್ಪಟ್ಟವನಾಗಿ, ತಸ್ಮಿನ್ನೇವ-ಆ ವನದಲ್ಲಿಯೇ, ಮುನಿನಾಸಹ- ವಿಶ್ವಾಮಿತ್ರನೊಡಗೂಡಿ, ಉವಾಸ - ಇದ್ದು, ಪ್ರಭಾತವೇಳಾಂ - ಪ್ರಾತಃಕಾಲದಲ್ಲಿ, ಪ್ರತಿಬೋಧ್ಯಮಾನಃ - ವಿಶ್ವಾಮಿತ್ರನಿಂದ ಎಚ್ಚರಗೊಳಿಸಲ್ಪಟ್ಟವನಾದನು. ‖೩೬‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಡ್ತ್ರಿಂಶಸ್ಸರ್ಗಃ.

---

ಸಲ್ಪಟ್ಟ ಶ್ರೀರಾಮಚಂದ್ರನು ಆ ತಾಟಕಾ ವನದಲ್ಲಿಯೇ ವಿಶ್ವಾಮಿತ್ರನಿಂದೊಡಗೂಡಿ ನಿದ್ದೆಯಂಗೈದು ಪ್ರಾತಃಕಾಲದಲ್ಲಿ ವಿಶ್ವಾಮಿತ್ರ ಋಷಿಯಿಂದ ಎಚ್ಚರಗೊಳಿಸ ಲ್ಪಟ್ಟನು. ‖೩೬‖

ಇಂತಿದು ತಾಟಕಾ ಸಂಹಾರಕದನವೆಂಬ

ಇಪ್ಪತ್ತಾರನೆಯ ಸರ್ಗವು ಸಮಾಪ್ತವಾದುದು.

---

# ಬಾಲಕಾಂಡೇ ಸಪ್ತವಿಂಶಸ್ಸರ್ಗಃ



ಅಥತಾಂ ರಜನೀಮುಷ್ಯ ವಿಶ್ವಾಮಿತ್ರೋ ಮಹಾಯಶಾಃ || ಪ್ರಹಸ್ಯರಾಘವಂ ವಾಕ್ಯಮುವಾಚ ಮಧುರಾಕ್ಷರಂ ||೧|| ಪರಿತುಷ್ಟೋಽಸ್ಮಿ ಭದ್ರಂ ತೇ ರಾಜಪುತ್ರ ಮಹಾಯಶಃ || ಪ್ರೀತ್ಯಾ ಪರಮಯಾ ಯುಕ್ತೋ ದದಾಮ್ಯಸ್ತ್ರಾಣಿ ಸರ್ವಶಃ ||೨|| ದೇವಾಸುರಗಣಾನ್ವಾಪಿ ಸಗಂಧರ್ವೋರಗಾನಪಿ || ಯೈರಮಿತ್ರಾನ್ ಪ್ರಸಹ್ಯಾಜೌ ವಶೀಕೃತ್ಯ ಜಯಿಷ್ಯಸಿ || ೩ || ತಾನಿ ದಿವ್ಯಾನಿ ಭದ್ರಂ ತೇ ದದಾಮ್ಯಸ್ತ್ರಾಣಿ ಸರ್ವಶಃ || ದಂಡಚಕ್ರಂ ಮಹದ್ದಿವ್ಯಂ ತವ ದಾಸ್ಯಾಮಿ ರಾಘವ || ೪ || ಧರ್ಮ

---

ಅಥ-ಬಳಿಕ, ಮಹಾಯಶಾಃ ಮಹಾಕೀರ್ತಿವಂತನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ತಾಂ ರಜನೀಂ ಆ ರಾತ್ರಿಯಲ್ಲಿ, ಉಷ್ಯ-ಇದ್ದು, ಪ್ರಹಸ್ಯ- ನಸುನಗೆಗೊಂಡು, ರಾಘವಂ ಶ್ರೀರಾಮನನ್ನು ಕುರಿತು, ಮಧುರಾಕ್ಷರಂ ಇಂಪಾದವರ್ಣಗಳುಳ್ಳ, ವಾಕ್ಯಂ-ಮಾತನ್ನು, ಉವಾಚ ಹೇಳಿದನು||೧|| ಹೇರಾಜಪುತ್ರ - ಎಲೈ ದಾಶರಥಿಯೇ, ಹೇ ಮಹಾಯಶಃ - ಎಲೈ ಮಹಾಕೀರ್ತಿವಂತನೆ, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಪರಿತುಷ್ಟಃ ಸಂತೋಷಗೊಂಡವನು, ಅಸ್ಮಿ-ಆದೆನು, ಪರಮಯಾ-, ಬಹಳವಾದ, ಪ್ರೀತ್ಯಾ - ಪ್ರೇಮದಿಂದ, ಯುಕ್ತಃ-ಕೂಡಿ, ಸರ್ವಶಃ-ಸಮಸ್ತ, ಅಸ್ತ್ರಾಣಿ-ಅಸ್ತ್ರಗಳನ್ನು, ದದಾಮಿ-ಕೊಡುತ್ತೇನೆ || ೨ || ಆಜೌ-ಕಾಳಗದಲ್ಲಿ, ಯೈಃ-ಯಾವ ಅಸ್ತ್ರಗಳಿಂದ, ಅಮಿತ್ರಾನ್-ಶತ್ರುಗಳನ್ನು, ಪ್ರಸಹ್ಯ-ಬಲಾತ್ಕರಿಸಿ, ವಶೀಕೃತ್ಯ - ಸ್ವಾಧೀನಪಡಿಸಿಕೊಂಡು, ಸಗಂಧರ್ವೋರಗಾನಪಿ-ಗಂಧರ್ವ ಸರ್ಪಗಳಿಂದೊಡಗೂಡಿದ, ದೇವಾಸುರಗಣಾನ್ವಾಪಿ-ದೇವತೆಗಳನ್ನಾದರೂ, ರಾಕ್ಷಸ ಸಮೂಹಗಳನ್ನಾದರೂ, ಜಯಿಷ್ಯಸಿ-ಜಯಿಸುವೆ ||೩|| ದಿವ್ಯಾನಿ-ದೇವತಾಸಂಬಂಧಗಳಾದ, ಸರ್ವಶಃ ಸಮಸ್ತ, ತಾನ್ಯಸ್ತ್ರಾಣಿ-ಆ ಅಸ್ತ್ರಗಳನ್ನು, ತೇ-ನಿನಗೆ, ದದಾಮಿ - ಕೊಡುತ್ತೇನೆ, ಹೇ ರಾಘವ-ಎಲೈ ಶ್ರೀರಾಮನೇ, ತವ - ನಿನಗೆ, ದಿವ್ಯಂ - ದೇವತಾಸಂಬಂಧವಾದ, ಮಹತ್- ದೊಡ್ಡ ದಂಡಚಕ್ರಂ- ದಂಡಚಕ್ರವೆಂಬ ಅಸ್ತ್ರವನ್ನು, ದಾಸ್ಯಾಮಿ-ಕೊಡುವೆನು, || ೪ || ಹೇವೀರ-

---

ಬಳಿಕ ಮಹಾ ಕೀರ್ತವಂತನಾದ ವಿಶ್ವಾಮಿತ್ರನು ಆ ತಾಟಕಾ ವನದಲ್ಲಿ ರಾತ್ರಿಯನ್ನು ಕಳೆದು, ಸೂರ್ಯೋದಯವಾಗುತ್ತಲೆ, ನಗಮುಖವುಳ್ಳವನಾಗಿ, ಶ್ರೀರಾಮನನ್ನು ಕುರಿತು ಇಂಪಾದ ವರ್ಣಗಳುಳ್ಳ ಈ ಮಾತನ್ನು ನುಡಿದನು. || ೧ || "ಮಹಾ ಕೀರ್ತಿವಂತನಾದ ರಘುರಾಮ! ನೀನು ಮಾಡಿದ ತಾಟಕಾ ವಧೆಯಿಂದ ನಾನು ಸಂತುಷ್ಟನಾಗಿರುವೆನು. ನಿನಗೆ ಶುಭವಾಗಲಿ; ಪ್ರೇಮದಿಂದ ನಿನಗಾಗಿ ಅಸ್ತ್ರಗಳೆಲ್ಲವನ್ನೂ ಕೊಡುವೆನು. || ೨ || ಕಾಳಗದಲ್ಲಿ ಶತ್ರುಗಳನ್ನು ಯಾವ ಅಸ್ತ್ರಗಳಿಂದಲೂ, ಬಲದಿಂದಲೂ, ಸ್ವಾಧೀನಪಡಿಸಿಕೊಂಡು ಗಂಧರ್ವರಿಂದೊಡಗೂಡಿದ ದೇವ ರಾಕ್ಷಸ ಸಮೂಹಗಳನ್ನಾದರೂ ಜಯಿಸುವಿಯೋ,ಅಂತಹ

ಚಕ್ರಂ ತತೋ ವೀರ ಕಾಲಚಕ್ರಂ ತಥೈವಚ | ವಿಷ್ಣುಚಕ್ರಂ ತಥಾತ್ಯುಗ್ರಮೈಂದ್ರ ಮಸ್ತ್ರಂ ತಥೈವಚ ॥ ೫ ॥ ವಜ್ರಮಸ್ತ್ರಂ ನರಶ್ರೇಷ್ಠ ಶೈವಂ ಶೂಲವರಂ ತಥಾ ॥ ಅಸ್ತ್ರಂ ಬ್ರಹ್ಮಶಿರಶ್ಚೈವ ಐಷೀಕಮಪಿ ರಾಘವ ॥೬॥ ದದಾಮಿ ತೇ ಮಹಾಬಾಹೋ ಬ್ರಾಹ್ಮಮಸ್ತ್ರಮನುತ್ತಮಂ ॥ ಗದೇ ದ್ವೇ ಚೈವ ಕಾಕುತ್ಸ್ಥ ಮೋದಕೀ ಶಿಖರೀ ಉಭೇ ॥ ೭ ॥ ಪ್ರದೀಪ್ತೇ ರಘುಶಾರ್ದೂಲ ಪ್ರಯಚ್ಛಾಮಿ ನೃಪಾತ್ಮಜ ॥ ಧರ್ಮಪಾಶಮಹಂ ರಾಮ ಕಾಲಪಾಶಂ ತಥೈವಚ ॥ ೮ ॥ ಪಾಶಂ ವಾರುಣಮಸ್ತ್ರಂಚ ದದಾಮ್ಯಹಮನುತ್ತಮಂ॥ ಅಶನೀ ದ್ವೇ ಪ್ರಯಚ್ಛಾಮಿ

---

ಎಲೈ ಶೂರನೇ, ತತಃ-ಬಳಿಕ, ಧರ್ಮಚಕ್ರಂ- ಧರ್ಮಚಕ್ರವೆಂಬ ಅಸ್ತ್ರವನ್ನೂ, ತಥೈವ- ಹಾಗೆಯೇ ಕಾಲಚಕ್ರಂ-ಕಾಲಚಕ್ರವೆಂಬ ಅಸ್ತ್ರವನ್ನೂ, ತಥಾ - ಹಾಗೆಯೇ, ಅತ್ಯುಗ್ರಂ - ಅತಿತೀಕ್ಷ್ಣವಾದ ವಿಷ್ಣುಚಕ್ರಂ-ವಿಷ್ಣುಚಕ್ರವನ್ನೂ, ತಥೈವ-ಹಾಗೆಯೇ, ಐಂದ್ರಂ ಇಂದ್ರದೇವತಾಕವಾದ, ಅಸ್ತ್ರಂ-ಅಸ್ತ್ರವನ್ನೂ, ಹೇ ನರಶ್ರೇಷ್ಠ ಎಲೈ ನರಶ್ರೇಷ್ಠನೆ, ವಜ್ರಂ-ವಜ್ರವೆಂಬ, ಅಸ್ತ್ರಂ ಅಸ್ತ್ರವನ್ನೂ, ತಥಾ - ಹಾಗೆಯೇ, ಶೈವಂ - ಶಿವಸಂಬಂಧವಾದ, ಶೂಲವರಂ-ಶೂಲವರವೆಂಬ ಅಸ್ತ್ರವನ್ನೂ, ದದಾಮಿ-ಕೊಡುತ್ತೇನೆ, ಹೇ ರಾಘವ-ಎಲೈ ಶ್ರೀರಾಮನೇ, ಬ್ರಹ್ಮಶಿರಶ್ಚೈವ - ಬ್ರಹ್ಮಶಿರಸ್ಸೆಂಬ, ಅಸ್ತ್ರಂ-ಅಸ್ತ್ರವನ್ನೂ, ಐಷೀಕಮಪಿ-ಇಷೀಕಾಸ್ತ್ರವನ್ನೂ ತೇ-ನಿನಗೆ, ದದಾಮಿ - ಕೊಡುತ್ತೇನೆ, ಹೇ ಮಹಾಬಾಹೋ - ಎಲೈ ಭುಜಪರಾಕ್ರಮಶಾಲಿಯೇ, ಬ್ರಾಹ್ಮಂ - ಬ್ರಹ್ಮಸಂಬಂಧವಾದ, ಅನುತ್ತಮಂ- ಸರ್ವೋತ್ತಮವಾದ, ಅಸ್ತ್ರಂ - ಅಸ್ತ್ರವನ್ನು, ದದಾಮಿ- ಕೊಡುತ್ತೇನೆ ॥ ೫-೬ ॥ ಹೇ ಕಾಕುತ್ಸ್ಥ- ಎಲೈ ಕಕುತ್ಸ್ಥವಂಶೋತ್ಪನ್ನನೇ, ದ್ವೇ ಎರಡಾದ, ಮೋದಕೀ ಮೋದಕೀ ಎಂಬ, ಶಿಖರೀ-ಶಿಖರೀ ಎಂಬ, ಉಭೇ ಎರಡು, ಗದೇ-ಗದಾಯುಧಗಳು, ವಿದ್ಯೇತೇ-ಇರುವವು, ಪ್ರದೀಪ್ತೇ-ಉರಿಯುತ್ತಿರುವ, ತೇ-ಆ ಗದಾಯುಧಗಳೆರಡನ್ನೂ, ಹೇ ರಘುಶಾರ್ದೂಲ-ಎಲೈ ರಘುಶ್ರೇಷ್ಠನೇ, ಹೇ ನೃಪಾತ್ಮಜ-ಎಲೈ ರಾಜಪುತ್ರನೇ, ತೇ-ನಿನಗೆ, ಪ್ರಯಚ್ಛಾಮಿ- ಕೊಡುತ್ತೇನೆ. ॥೭॥ ಹೇ ರಾಮ - ಎಲೈ ಶ್ರೀರಾಮನೇ, ಧರ್ಮಪಾಶಂ-ಧರ್ಮಪಾಶವೆಂಬ, ತಥೈವ-ಹಾಗೆಯೇ, ಕಾಲಪಾಶಂಚ ಕಾಲಪಾಶವೆಂಬ ಅಸ್ತ್ರಗಳನ್ನೂ, ಅಹಂ-ನಾನು, ದದಾಮಿ - ಕೊಡುತ್ತೇನೆ, ಅನುತ್ತಮಂ - ಸರ್ವೋತ್ತಮವಾದ, ವಾರುಣಂ-ವರುಣದೇವತಾಕವಾದ, ಪಾಶಂ-ಪಾಶಸ್ವರೂಪವಾದ, ಅಸ್ತ್ರಂ-ಅಸ್ತ್ರವನ್ನು, ಅಹಂ, ನಾನು, ದದಾಮಿ ಕೊಡುವೆನು. ॥ ೮ ॥ ಹೇ ರಘುನಂದನ ಎಲೈ ಶ್ರೀರಾಮನೇ, ಶುಷ್ಕಾರ್ದ್ರೇ-ಶುಷ್ಕವಾಗಿಯೂ ಆರ್ದ್ರವಾಗಿಯೂ ಇರುವ, ದ್ವೇ ಅಶನೀ-ಎರಡು ಸಿಡಿಲುಗಳನ್ನು ಪ್ರಯಚ್ಛಾಮಿ-ಕೊಡುತ್ತೇನೆ, ತಥಾ-ಹಾಗೆಯೆ, ಪೈನಾಕಂ - ಪಿನಾಕಿದೇವತಾಕವಾದ, ಅಸ್ತ್ರಂಚ - ಅಸ್ತ್ರವನ್ನೂ,

---

ದಂಡಚಕ್ರವನ್ನೂ, ಧರ್ಮಚಕ್ರವನ್ನೂ, ಕಾಲಚಕ್ರವನ್ನೂ, ವಿಷ್ಣುಚಕ್ರವನ್ನೂ, ಐಂದ್ರಾಸ್ತ್ರವನ್ನೂ, ಬ್ರಹ್ಮಾಸ್ತ್ರವನ್ನೂ, ಮೋದಕಿಯು, ಶಿಖರಿಯು ಎಂಬ ಗದಾಯುಧಗಳನ್ನೂ, ಧರ್ಮಪಾಶ, ವರುಣಪಾಶವೆಂಬ ಪಾಶಗಳನ್ನೂ, ಶುಷ್ಕಾರ್ದ್ರಗಳೆಂಬೆರಡು ವಿಧವಾಗಿರುವ ಸಿಡಿಲುಗಳನ್ನೂ, ಪಿನಾಕ, ನಾರಾಯಣ, ಆಗ್ನೇಯ, ಶಿಖರ, ವಾಯವ್ಯ, ಹಯಶಿರಸ್ಸು, ಕ್ರೌಂಚಗಳೆಂಬ ಅಸ್ತ್ರಗಳನ್ನೂ, ರಾಕ್ಷಸರಿಗಾಯುಧಗಳಾಗಿರುವ ಕಂಕಾಳ, ಮುಸಲ, ಕಾಪಾಲ,

ಶುಷ್ಕಾರ್ದ್ರೇ ರಘುನಂದನ ॥ ೯ ॥ ದದಾಮಿ ಚಾಸ್ತ್ರಂ ಪೈನಾಕಮಸ್ತ್ರಂ ನಾರಾಯಣಂ ತಥಾ॥ ಆಗ್ನೇಯಮಸ್ತ್ರಂ ದಯಿತಂ ಶಿಖರಂ ನಾಮ ನಾಮತಃ॥ ೧೦ ॥ ವಾಯವ್ಯಂ ಪ್ರಥನಂನಾಮ ದದಾಮಿ ಚ ತವಾನಘ ॥ ಅಸ್ತ್ರಂ ಹಯಶಿರೋನಾಮ ಕ್ರೌಂಚಮಸ್ತ್ರಂ ತಥೈವಚ ॥೧೧॥ ಶಕ್ತಿದ್ವಯಂಚ ಕಾಕುತ್ಸ್ಥ ದದಾಮಿ ತವ ರಾಘವ॥ಕಂಕಾಳಂ ಮುಸಲಂ ಘೋರಂ ಕಾಪಾಲಮಥಕಂಕಣಂ॥ ೧೨॥ ಧಾರಯಂತ್ಯಸುರಾ ಯಾನಿ ದದಾಮ್ಯೇತಾನಿ ಸರ್ವಶಃ॥ವೈದ್ಯಾಧರಂ ಮಹಾಸ್ತ್ರಂಚ ನಂದನಂ ನಾಮ ನಾಮತಃ॥೧೩॥ ಅಸಿರತ್ನಂ ಮಹಾಬಾಹೋ ದದಾಮಿ ಚ ನೃಪಾತ್ಮಜ ॥ ಗಾಂಧರ್ವಮಸ್ತ್ರಂ ದಯಿತಂ ಮಾನವಂ ನಾಮ ನಾಮತಃ ॥

---

ನಾರಾಯಣಂ-ನಾರಾಯಣ ದೇವತಾಕವಾದ, ಅಸ್ತ್ರಂಚ ಅಸ್ತ್ರವನೂ, ದದಾಮಿ ಕೊಡುವೆನು. ॥೯॥ ಹೇ ಅನಘ-ಎಲೈ ನಿರ್ದೋಷನೇ, ನಾಮತಃ-ಹೆಸರಿನಿಂದ, ಶಿಖರಂನಾಮ- ಶಿಖರವೆಂದು ಪ್ರಸಿದ್ಧವಾದ, ಆಗ್ನೇಯಂ ಅಸ್ತ್ರಂ-ಆಗ್ನೇಯಾಸ್ತ್ರವನ್ನು,ಪ್ರಥನಂನಾಮ-ಪ್ರಥನನೆಂದು ಪ್ರಸಿದ್ಧವಾದ, ಅಸ್ತ್ರಂ-ಅಸ್ತ್ರವನ್ನೂ, ವಾಯವ್ಯಂ ವಾಯವ್ಯಾಸ್ತ್ರವನ್ನೂ, ತವ-ನಿನಗೆ, ದದಾಮಿ-ಕೊಡುತ್ತೇನೆ॥೧೦॥ ಹಯಶಿರೋನಾಮ- ಹಯಶಿರಸ್ಸೆಂದು ಪ್ರಸಿದ್ಧವಾದ, ಅಸ್ತ್ರಂ ಅಸ್ತ್ರವನ್ನೂ, ತಥೈವ-ಹಾಗೆಯೆ, ಕ್ರೌಂಚಂ - ಕ್ರೌಂಚವೆಂಬ, ಅಸ್ತ್ರಂಚ -ಅಸ್ತ್ರವನ್ನೂ, ದದಾಮಿ-ಕೊಡುತ್ತೇನೆ, ಹೇಕಾಕುತ್ಸ್ಥ- ಎಲೈ ಕಕುತ್ಸ್ಥ ವಂಶದಲ್ಲಿ ಹುಟ್ಟಿದವನೇ, ಹೇರಾಘವ ಎಲೈ ಶ್ರೀರಾಮನೇ, ಶಕ್ತಿದ್ವಯಂಚ- ಎರಡು ಶಕ್ತಿಗಳನ್ನೂ, ತವ - ನಿನಗೆ, ದದಾಮಿ - ಕೊಡುತ್ತೇನೆ. ॥೧೧॥ ಕಂಕಾಲಂ - ಕಂಕಾಲವೆಂಬ, ಘೋರಂ ಭಯಂಕರವಾದ, ಮುಸಲಂ - ಮುಸಲವೆಂಬ, ಕಾಪಾಲಂ- ಕಾಪಾಲವೆಂಬ, ಕಂಕಣಂ - ಕಂಕಣವೆಂಬ, ಅಸ್ತ್ರಂ - ಅಸ್ತ್ರವನ್ನೂ, ದದಾಮಿ ಕೊಡುತ್ತೇನೆ. ॥ ೧೨ ॥ ಅಸುರಾಃ - ರಾಕ್ಷಸರು, ಯಾನಿ - ಯಾವ ಅಸ್ತ್ರಗಳನ್ನು, ಧಾರಯಂತಿ- ಧರಿಸುವರೋ, ಸರ್ವಶಃ- ಸಮಸ್ತಗಳಾದ, ಏತಾನಿ - ಈ ಅಸ್ತ್ರಗಳನ್ನು, ದದಾಮಿ - ಕೊಡುತ್ತೇನೆ, ಹೇನೃಪಾತ್ಮಜ- ಎಲೈ ರಾಜಪುತ್ರನೇ, ನಾಮತಃ - ಹೆಸರಿನಿಂದ, ನಂದನಂನಾಮ - ನಂದನವೆಂದು ಪ್ರಸಿದ್ಧವಾದ, ಅಸಿರತ್ನಂ- ಶ್ರೇಷ್ಠವಾದ ಕತ್ತಿಯನ್ನು, ವೈದ್ಯಾಧರಂ - ವಿದ್ಯಾಧರ ಸಂಬಂಧವಾದ, ಮಹಾಸ್ತ್ರಂಚ- ದೊಡ್ಡ ಅಸ್ತ್ರವನ್ನೂ, ದದಾಮಿ - ಕೊಡುತ್ತೇನೆ, ಹೇಮಹಾಬಾಹೋ - ಎಲೈ ಭುಜಬಲಪರಾಕ್ರಮಶಾಲಿಯೇ, ಹೇನೃಪಾತ್ಮಜ- ಎಲೈ ರಾಜಪುತ್ರನೇ, ದಯಿತಂ - ಪ್ರಿಯವಾದ, ನಾಮತಃ - ಹೆಸರಿನಿಂದ, ಮಾನವನ್ನಾಮ - ಮಾನವನೆಂದು ಪ್ರಸಿದ್ಧವಾದ, ಗಾಂಧರ್ವಂ - ಗಂಧರ್ವದೇವತಾಕವಾದ, ಅಸ್ತ್ರಂ - ಅಸ್ತ್ರವನ್ನೂ, ದದಾಮಿ- ಕೊಡುತ್ತೇನೆ. ॥೧೪॥ ಹೇರಾಘವ - ಎಲೈ ಶ್ರೀರಾಮನೇ,

---

ವಿದ್ಯಾಧರ, ಕಂಕಣಗಳೆಂಬವುಗಳನ್ನೂ, ನಂದಕ, ಅಸಿರತ್ನಗಳೆಂಬ ಶಕ್ತಿಗಳನ್ನೂ, ಗಾಂಧರ್ವ, ಮಾನವ, ಪ್ರಸ್ವಾಪನ, ಪ್ರಶಮನ, ಸೌರ, ದರ್ಪಣ, ಶೋಷಣ, ಸಂತಾಪನ, ವಿಲೇಪನ, ಮದನ, ಪೈಶಾಚ, ಮೋಹನ, ತಾಮಸ, ಸೌಮನಸ, ಮೌಸಲ, ಸತ್ಯ, ಮಾಯಾಧರ, ತೇಜಃಪ್ರಭ, ಪರತೇಜೋಪಕರ್ಷಣ,ಸೌಮ್ಯ, ಶಿಶಿರ, ಸೋಮ, ಸುದಾಮನ, ದಾರುಣಗಳೆಂಬ ಅಸ್ತ್ರಗಳನ್ನೂ ಇದಿಗೋ ನಿನಗಾಗಿ ಕೊಡುವೆನು"ಎಂದು ನುಡಿದು ಸ್ನಾನವಂಗೈದು ಪೂರ್ವಾಭಿ

೧೪|| ಪ್ರಸ್ವಾಪನ ಪ್ರಶಮನೇ ದದ್ಮಿ ಸೌರಂಚ ರಾಘವ || ದರ್ಪಣಂ ಶೋಷಣಂ ಚೈವ ಸಂತಾಪನ ವಿಲಾಪನೇ || ೧೫ || ಮದನಂಚೈವ ದುರ್ಧರ್ಷಂ ಕಂದರ್ಪ ದಯಿತಂ ತಥಾ||ಪೈಶಾಚಮಸ್ತ್ರಂ ದಯಿತಂ ಮೋಹನಂ ನಾಮ ನಾಮತಃ||೧೬|| ಪ್ರತೀಚ್ಛ ನರಶಾರ್ದೂಲ ರಾಜಪುತ್ರ ಮಹಾಯಶಃ || ತಾಮಸಂ ನರಶಾರ್ದೂಲ ಸೌಮನಂಚ ಮಹಾಬಲ ||೧೭|| ಸಂವರ್ಧಂಚೈವ ದುರ್ಧರ್ಷಂ ಮೌಸಲಂಚ ನೃಪಾತ್ಮಜ|| ಸತ್ಯಮಸ್ತ್ರಂ ಮಹಾಬಾಹೋ ತಥಾ ಮಾಯಾಧರಂ ಪರಂ||೧೮|| ಘೋರಂ ತೇಜಃ ಪ್ರಭಂ ನಾಮ ಪರತೇಜೋಪಕರ್ಷಣಂ||ಸೌಮ್ಯಾಸ್ತ್ರಂ ಶಿಶಿರಂ ನಾಮ ತ್ವಷ್ಟುರಸ್ತ್ರಂ ಸುದಾಮನಂ ||೧೯|| ದಾರುಣಂಚ ಭಗಸ್ಯಾಪಿ ಸೀತೇಷು

---

ಪ್ರಸ್ವಾಪನಪ್ರಶಮನೇ - ಪ್ರಸ್ವಾಪನ ಪ್ರಶಮನವೆಂಬ ಅಸ್ತ್ರದ್ವಯವನ್ನು, ಸೌರಂಚ-ಸೌರಾಸ್ತ್ರವನ್ನೂ, ದದ್ಮಿ - ಕೊಡುವೆನು, ದರ್ಪಣಂ- ದರ್ಪಣವೆಂಬ, ಶೋಷಣಂಚೈವ - ಶೋಷಣವೂ ಎಂಬ ಅಸ್ತ್ರವನ್ನೂ, ಸಂತಾಪನವಿಲಾಪನೇ- ಸಂತಾಪನ ವಿಲಾಪನವೆಂಬ ಅಸ್ತ್ರಗಳನ್ನೂ, ದುರ್ಧರ್ಷಂ- ತಿರಸ್ಕರಿಸಲಸಾಧ್ಯವಾದ, ಮದನಂಚೈವ - ಮದನವೆಂಬ ಅಸ್ತ್ರವನ್ನೂ, ತಥಾ-ಹಾಗೆಯೇ, ಕಂದರ್ಪದಯಿತಂ- ಕಂದರ್ಪದಯಿತವೆಂಬ ಅಸ್ತ್ರವನ್ನೂ, ದದಾಮಿ - ಕೊಡುತ್ತೇನೆ. ||೧೫|| ನಾಮತಃ- ಹೆಸರಿನಿಂದ, ದಯಿತಂ - ಶ್ರೇಷ್ಠವಾದ, ಮೋಹನಂನಾಮ - ಮೋಹನವೆಂದು ಪ್ರಸಿದ್ಧವಾದ, ಪೈಶಾಚಂ-ಪಿಶಾಚಸಂಬಂಧವಾದ, ಅಸ್ತ್ರಂ ಅಸ್ತ್ರವನ್ನು, ಪ್ರತೀಚ್ಛ-ಗ್ರಹಿಸು, ಹೇನರಶಾರ್ದೂಲ- ಎಲೈ ನರಶ್ರೇಷ್ಠನೆ, ಹೇರಾಜಪುತ್ರ-ಎಲೈ ರಾಜಕುಮಾರನೇ, ಹೇಮಹಾಯಶಃ- ಎಲೈ ಕೀರ್ತಿವಂತನೇ, ತಾಮಸಂ-ತಾಮಸವೆಂಬ ಅಸ್ತ್ರವನ್ನು, ಪ್ರತೀಚ್ಛ-ಗ್ರಹಿಸು. ||೧೬|| ಹೇಮಹಾಬಲ-ಎಲೈ ಮಹಾಬಲಿಷ್ಠನೆ, ಹೇನರಶಾರ್ದೂಲ- ಎಲೈ ನರಶ್ರೇಷ್ಠನೇ, ಸೌಮನಂಚ- ಸೌಮನವೆಂಬ ಅಸ್ತ್ರವನ್ನೂ, ದುರ್ಧರ್ಷಂ- ತಿರಸ್ಕರಿಸಲಸಾಧ್ಯವಾದ, ಸಂವರ್ಧಂಚೈವ- ಸಂವರ್ಧವೆಂಬ ಅಸ್ತ್ರವನ್ನೂ, ಹೇನೃಪಾತ್ಮಜ - ಎಲೈ ರಾಜಪುತ್ರನೇ, ಮೌಸಲಂಚ- ಮೌಸಲವೆಂಬ ಅಸ್ತ್ರವನ್ನು, ಪ್ರತೀಚ್ಛ - ಗ್ರಹಿಸು, || ೧೭ || ಹೇಮಹಾಬಾಹೋ - ಎಲೈ ಮಹಾಭುಜಗಳುಳ್ಳವನೇ, ಸತ್ಯಂ - ಸತ್ಯವೆಂಬ, ಅಸ್ತ್ರಂ - ಅಸ್ತ್ರವನ್ನೂ, ತಥಾ - ಹಾಗೆಯೆ, ಪರಂ- ಶ್ರೇಷ್ಠವಾದ, ಮಾಯಾಧರಂ - ಮಾಯಾಧರವೆಂಬ ಅಸ್ತ್ರವನ್ನೂ, ಘೋರಂ-ಭಯಂಕರವಾದ, ಪರತೇಜೋಪಕರ್ಷಣಂ - ಶತ್ರುಗಳ ತೇಜಸ್ಸನ್ನು ಅಪಹರಿಸತಕ್ಕ ಶಕ್ತಿಯುಳ್ಳ, ತೇಜಃಪ್ರಭನ್ನಾಮ - ತೇಜಃಪ್ರಭಾ ಎಂದು ಪ್ರಸಿದ್ಧವಾದ ಅಸ್ತ್ರವನ್ನೂ, ಶಿಶಿರಂನಾಮ - ಶಿಶಿರವೆಂಬ, ಸೌಮ್ಯಾಸ್ತ್ರಂ - ಸೋಮದೇವತಾಕವಾದ ಅಸ್ತ್ರವನ್ನೂ, ಸುದಾಮನಂ - ಸುದಾಮನವೆಂಬ, ತ್ವಷ್ಟುಃ- ತ್ವಷ್ಟುಬ್ರಹ್ಮನ, ಅಸ್ತ್ರಂ- ಅಸ್ತ್ರವನ್ನೂ, ಭಗಸ್ಯ - ಭಗದೇವತಾಕವಾದ, ದಾರುಣಂಚ - ದಾರುಣಾಸ್ತ್ರವನ್ನೂ, ಅಥ- ಬಳಿಕ, ಮಾನವಂ- ಮಾನವವೆಂಬ, ಸೀತೇಷುಂ - ಸೀತೇಷುವೆಂಬ ಅಸ್ತ್ರವನ್ನೂ ||೧೮-೧೯|| ಹೇರಾಮ-ಎಲೈ ಶ್ರೀರಾ

---

ಮುಖವಾಗಿ ನಿಂತು ಪ್ರೇಮದಿಂದೀ ಮಂತ್ರಸಮೂಹವನ್ನು ಕೊಟ್ಟು ||೩-೨೧|| ಯಾವ ಅಸ್ತ್ರಸಂಗ್ರಹಣವು ದೇವತೆಗಳಿಂದಲೂ, ಹೊಂದಲಶಕ್ಯವಾದುದೋ, ಅಂತಹ ಅಸ್ತ್ರ

ಮಥಮಾನವಂ || ಏತಾನ್ ರಾಮ ಮಹಾಬಾಹೋ ಕಾಮರೂಪಾನ್ಮಹಾಬಲಾನ್ || ೨೦ || ಗೃಹಾಣ ಪರಮೋದಾರಾನ್ ಕ್ಷಿಪ್ರಮೇವ ನೃಪಾತ್ಮಜ || ಸ್ಥಿತಸ್ತು ಪ್ರಾಙ್ಮುಖೋ ಭೂತ್ವಾ ಶುಚಿರ್ಮುನಿವರಸ್ತದಾ || ೨೧ || ದದೌ ರಾಮಾಯ ಸುಪ್ರೀತೋ ಮಂತ್ರಗ್ರಾಮಮನುತ್ತಮಂ || ಸರ್ವ ಸಂಗ್ರಹಣಂ ಯೇಷಾಂ ದೈವತೈರಪಿ ದುರ್ಲಭಂ || ೨೨ || ತಾನ್ಯಸ್ತ್ರಾಣಿ ತದಾ ವಿಪ್ರೋ ರಾಘವಾಯ ನ್ಯವೇದಯತ್ || ಜಪತಸ್ತು ಮುನೇಸ್ತಸ್ಯ ವಿಶ್ವಾಮಿತ್ರಸ್ಯ ಧೀಮತಃ ||೨೩|| ಉಪತಸ್ಥುರ್ಮಹಾರ್ಹಾಣಿ ಸರ್ವಾಣ್ಯಸ್ತ್ರಾಣಿ ರಾಘವಂ || ಊಚುಶ್ಚ ಮುದಿತಾಸ್ಸರ್ವೇ ರಾಮಂ ಪ್ರಾಂಜಲಯಸ್ತದಾ ||೨೪|| ಇಮೇಸ್ಮ

ಮನ, ಹೇಮಹಾಬಾಹೋ- ಎಲೈ ಮಹಾಭುಜವುಳ್ಳವನೇ, ಹೇನೃಪಾತ್ಮಜ- ಎಲೈ ರಾಜಕುವರನೇ, ಕಾಮರೂಪಾನ್ - ಕಾಮರೂಪಿಗಳಾದ, ಮಹಾಬಲಾನ್ - ಮಹಾಶಕ್ತಿಯುಳ್ಳ, ಪರಮೋದಾರಾನ್ - ಬಹಳ ಸಾಮರ್ಥ್ಯವುಳ್ಳ, ಏತಾನ್ ಈ ಪರಾಸ್ತ್ರಗಳನ್ನು, ಕ್ಷಿಪ್ರಮೇವ-ಜಾಗ್ರತೆಯಾಗಿ, ಗೃಹಾಣ-ಪರಿಗ್ರಹಿಸು || ೨೦ || ತದಾ - ಆ ಕಾಲದಲ್ಲಿ, ಶುಚಿಃ - ಸ್ನಾನಗಳಿಂದ ಪರಿಶುದ್ಧನಾದ, ಮುನಿವರಃ - ಶ್ರೇಷ್ಠನಾದ ವಿಶ್ವಾಮಿತ್ರನು, ಪ್ರಾಙ್ಮುಖಃ - ಪೂರ್ವಾಭಿಮುಖನು, ಭೂತ್ವಾ - ಆಗಿ, ಸ್ಥಿತಸ್ಸನ್ - ನಿಂತು, ರಾಮಾಯ ಶ್ರೀರಾಮನಿಗಾಗಿ, ಸುಪ್ರೀತಃ - ಬಹಳ ಪ್ರೇಮವುಳ್ಳವನಾಗಿ, ಅನುತ್ತಮಂ - ಸರ್ವೋತ್ತಮವಾದ, ಮಂತ್ರಗ್ರಾಮಂ - ಮಂತ್ರಗಳ ಸಮೂಹವನ್ನು, ದದೌ ಕೊಟ್ಟನು, ||೨೧|| ಏಷಾಂ= ಯಾವ ಅಸ್ತ್ರಗಳ, ಸರ್ವಸಂಗ್ರಹಣಂ ಪರಿಗ್ರಹಿಸುವಿಕೆಯು,ದೇವತೈರಪಿ-ದೇವತೆಗಳಿಂದಲೂ, ದುರ್ಲಭಂ - ಹೊಂದಲಸಾಧ್ಯವಾದುದೊ, ವಿಪ್ರಃ-ಬ್ರಾಹ್ಮಣನಾದ ವಿಶ್ವಾಮಿತ್ರನು, ತಾನ್ಯಸ್ತ್ರಾಣಿ - ಆ ಅಸ್ತ್ರಗಳನ್ನು, ತದಾ - ಆಗ, ರಾಘವಾಯ-ಶ್ರೀರಾಮನಿಗೆ, ನ್ಯವೇದಯತ್ - ತಿಳುಹಿದನು. || ೨೨ || ಜಪತಃ - ಜಪಿಸುತ್ತಿರುವವನೂ, ಧೀಮತಃ- ಜ್ಞಾನವಂತನೂ, ಮುನೇಃ - ಋಷಿಯೂ ಆದ, ತಸ್ಯವಿಶ್ವಾಮಿತ್ರಸ್ಯ- ಆ ವಿಶ್ವಾಮಿತ್ರನ, ಆಜ್ಞಯಾ - ಆಜ್ಞೆಯಿಂದ, ಮಹಾರ್ಹಾಣಿ - ಶ್ರೇಷ್ಠಗಳಾದ, ಸರ್ವಾಣ್ಯಸ್ತ್ರಾಣಿ-ಸಮಸ್ತ ಅಸ್ತ್ರಗಳು, ರಾಘವಂ - ಶ್ರೀರಾಮನನ್ನು ಕುರಿತು, ಉಪತಸ್ಥುಃ - ಹೊಂದಿದವು ||೨೩|| ಸರ್ವೇ - ಸಮಸ್ತವಾದ ಅಸ್ತ್ರಾಭಿಮಾನ ಪುರುಷರು, ಮುದಿತಾಃ - ಸಂತೋಷಗೊಂಡು, ರಾಮಂ - ಶ್ರೀರಾಮನನ್ನು ಕುರಿತು, ತದಾ-ಆಗ, ಪ್ರಾಂಜಲಯಃ - ಅಂಜಲಿಬದ್ಧರಾಗಿ, ಹೇರಾಘವ - ಎಲೈ ಶ್ರೀರಾಮನ, ಇಮೇ-ನಾವು, ಪರಮೋದಾರಾಃ-ಬಹಳ ಉದಾರಿಗಳಾದವರೂ, ತವ-ನಿನ್ನ, ಕಿಂಕರಾಃ - ಕಿಂಕರರೂ ಆಗಿ, ಸ್ಮ- ಇರುವೆವು ಎಂದು, ಊಚುಃ-ಹೇಳಿದರು.||೨೪|| ಕಾಕುತ್ಸ್ಥಃ-ಶ್ರೀರಾಮಚಂದ್ರನು, ತಾನ್-ಆ ಅಸ್ತ್ರಾಭಿಮಾನ

ಗಳನ್ನು ರಾಮಪೂರ್ತಿ(೧)ಗೆರುಹಿಡನು ||೨೨|| ಇಂತು ಉಪದೇಶಿಸಿದ ಅಸ್ತ್ರಗಳಿಗೆ ವೀರ್ಯತೆಯುಂಟಾಗಲು ಜಪಿಸುತ್ತಿರುವವನೂ, ಮಹಾ ಜ್ಞಾನಿಯೂ ಆದ ವಿಶ್ವಾಮಿತ್ರ

ಟಿಪ್ಪಣಿ (೧)ವಿಶ್ವಾಮಿತ್ರಮುನಿಯು ಮೊದಲೇ ಬಲಾತಿಬಲಗಳೆಂಬ ಮಂತ್ರಗಳನ್ನು ರಾಮಚಂದ್ರನಿಗೆ ಉಪದೇಶ ಮಾಡಿದ್ದನು. ಈಗಲಾದರೋ ಆ ಮುನಿಯು ಈಗ ಹೇಳಿದ ಮಂತ್ರಪೂರ್ವಕವಾದ ಅಸ್ತ್ರಗಳನ್ನುಪದೇಶಿಸಿದನೆಂದು ಭಾವವು.

ಪರಮೋದಾರಾಃ ಕಿಂಕರಾಸ್ತವ ರಾಘವ || ಪ್ರತಿಗೃಹ್ಯಚ ಕಾಕುತ್ಸ್ಥಸ್ಸಮಾ
ಲಂಬ್ಯ ಚಪಾಣಿನಾ || ೨೫ || ಮಾನಸಾಮೇ ಭವಿಷ್ಯಧ್ವಮಿತಿ ತಾನಭ್ಯಚೋ
ದಯತ್ || ತತಃಪ್ರೀತಮನಾ ರಾಮೋ ವಿಶ್ವಾಮಿತ್ರಂ ಮಹಾಮುನಿಂ || ೨೬ ||
ಅಭಿವಾದ್ಯ ಮಹಾತೇಜಾ ಗಮನಾಯೋಪಚಕ್ರಮೇ || ೨೬|| ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತವಿಂಶಸ್ಸರ್ಗಃ.



ಪುರುಷರನ್ನು, ಪಾಣಿನಾ-ಹಸ್ತದಿಂದ, ಪ್ರತಿಗೃಹ್ಯ - ಪರಿಗ್ರಹಿಸಿ, ಸಮಾಲಂಬ್ಯಚ- ಸ್ಪರ್ಶನವನ್ನೂ ಮಾಡಿ, ಮೇ - ನನ್ನ, ಮಾನಸಾಃ - ಮನೋಸುನಾಂಗಳು, ಭವಿಷ್ಯಧ್ವಮಿತಿ- ಆಗುವಿರೆಂದು, ಅಭ್ಯಚೋದಯತ್ - ಆಜ್ಞಾಪಿಸಿದನು. || ೨೫ || ತತಃ- ಒಳಿಕ, ಪ್ರೀತಮನಾಃ - ಸಂತೋಷಯುಕ್ತವಾದ ಮನಸ್ಸುಳ್ಳ, ರಾಮಃ- ಶ್ರೀರಾಮನು, ಮಹಾಮುನಿಂ - ಮಹಾಮುನಿಯಾದ, ವಿಶ್ವಾಮಿತ್ರಂ- ವಿಶ್ವಾಮಿತ್ರನನ್ನು, ಅಭಿವಾದ್ಯ - ನಮಸ್ಕರಿಸಿ, ಮಹಾತೇಜಾಃ (ಗೋ) ಅಸ್ತ್ರಗಳ ಉಪದೇಶದಿಂದ ಹುಟ್ಟಿದ ಮಹಾ ತೇಜಸ್ಸುಳ್ಳವನಾಗಿ, ಗಮನಾಯ - ಮುಂದೆ ಹೊರಡಲು, ಉಪಚಕ್ರಮೇ- ಉಪಕ್ರಮಿಸಿದನು. ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತವಿಂಶಸ್ಸರ್ಗಃ.



ಮುನಿಯ ಆಜ್ಞೆಯಿಂದ ಆ ಅಸ್ತ್ರಾಭಿಮಾನ ದೇವತೆಗಳೆಲ್ಲ ಸಂತಸಗೊಂಡ ರಾಮನನ್ನು ಹೊಂದಿ ಅಂಜಲಿಬದ್ಧರಾಗಿ "ಶ್ರೀರಾಮ! ನಾವೆಲ್ಲರೂ ನಿನಗೆ ಕಿಂಕರರಾಗಿರುವೆವು; ನಮ್ಮನ್ನು ಪರಿಗ್ರಹಿಸು" ಎಂದು ನುಡಿದರು. ಆಗಲಾ ರಘುನಂದನನು ಆ ಅಸ್ತ್ರಾಭಿಮಾನಿ ದೇವತೆಗಳನ್ನು ಹಸ್ತದಿಂದ ಸ್ವೀಕರಿಸಿ, ನನ್ನ ಮನೋಗತರಾಗಿರೆಂದು, ಆಜ್ಞಾಪಿಸಿ ಸಂತೋಷಚಿತ್ತನಾಗಿ ವಿಶ್ವಾಮಿತ್ರನನ್ನು ವಂದಿಸಿ, ಪ್ರಯಾಣೋದ್ಯುಕ್ತನಾದನು. ||೨೪-೨೬||

ಇಂತಿದು ಶ್ರೀರಾಮಕೃತ ತಾಟಕಾ ಸಂಹಾರ, ವಿಶ್ವಾಮಿತ್ರಕೃತ ಮಂತ್ರ
ಗ್ರಾಮೋಪದೇಶ ವರ್ಣನವೆಂಬ ಇಪ್ಪತ್ತೇಳನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಅಷ್ಟಾವಿಂಶಸ್ಸರ್ಗಃ.

---

ಪ್ರತಿಗೃಹ್ಯ ತತೋಽಸ್ತ್ರಾಣಿ ಪ್ರಹೃಷ್ಟವದನಶ್ಶುಚಿಃ ॥ ಗಚ್ಛನ್ನೇವಚ ಕಾಕುತ್ಸ್ಥೋ ವಿಶ್ವಾಮಿತ್ರಮಥಾ ಬ್ರವೀತ್ ॥ ೧ ॥ ಗೃಹೀತಾಸ್ತ್ರೋಽಸ್ಮಿ ಭಗವನ್ ದುರಾಧರ್ಷಸ್ಸುರೈರಪಿ ॥ ಅಸ್ತ್ರಾಣಾಂತ್ವಹಮಿಚ್ಛಾಮಿ ಸಂಹಾರಂ ಮುನಿಪುಂಗವ ॥೨॥ ಏವಂ ಬ್ರುವತಿ ಕಾಕುತ್ಸ್ಥೇ ವಿಶ್ವಾಮಿತ್ರೋ ಮಹಾಮುನಿಃ ॥ ಸಂಹಾರಂ ವ್ಯಾಜಹಾರಾಥ ಧೃತಿಮಾನ್ ಸುವ್ರತಶ್ಶುಚಿಃ ॥ ೩ ॥ ಸತ್ಯವಂತಂ ಸತ್ಯಕೀರ್ತಿಂ ಧೃಷ್ಟಂ ರಭಸಮೇವಚ ॥ ಪ್ರತಿಹಾರತರಂ ನಾಮ ಪರಾಙ್ಮುಖ

---

ತತಃ - ಬಳಿಕ, ಅಸ್ತ್ರಾಣಿ – ಅಸ್ತ್ರಗಳನ್ನು, ಪ್ರತಿಗೃಹ್ಯ - ಪರಿಗ್ರಹಿಸಿ, ಪ್ರಹೃಷ್ಟವದನಃ, ಪ್ರಹೃಷ್ಟ - ಸಂತೋಷಯುಕ್ತನಾದ, ವದನಃ - ಮುಖವುಳ್ಳ, ಶುಚಿಃ - ಪರಿಶುದ್ಧನಾದ, ಕಾಕುತ್ಸ್ಥಃ – ಶ್ರೀರಾಮನು, ಗಚ್ಛನ್ನೇವ - ಹೋಗುತ್ತ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಅಥ - ಬಳಿಕ, ಅಬ್ರವೀತ್ - ನುಡಿದನು. ॥ ೧ ॥ ಹೇಭಗವನ್ - ಎಲೈ ಪೂಜ್ಯನೇ, ಹೇ ಮುನಿಪುಂಗವ - ಎಲೈ ಮುನಿಶ್ರೇಷ್ಠನೆ, ಗೃಹೀತಾಸ್ತ್ರಃ, ಗೃಹೀತ ಗ್ರಹಿಸಲ್ಪಟ್ಟ, ಅಸ್ತ್ರಃ-ಅಸ್ತ್ರಗಳುಳ್ಳವನು, ಅಸ್ಮಿ - ಆದೆನು, ಸುರೈರಪಿ - ದೇವತೆಗಳಿಂದಲೂ, ದುರಾಧರ್ಷಃ – ತಿರಸ್ಕರಿಲಸಾಧ್ಯನಾದೆನು, ಕಿಂತು - ಆದರೆ, ಅಹಂ - ನಾನು, ಅಸ್ತ್ರಾಣಾಂ - ಅಸ್ತ್ರಗಳ, ಸಂಹಾರಂ - ಉಪಸಂಹಾರವನ್ನು, ಜ್ಞಾತುಂ - ತಿಳಿದುಕೊಳ್ಳಲು, ಇಚ್ಛಾಮಿ-ಅಪೇಕ್ಷಿಸುವೆನು, ॥ ೨ ॥ ಕಾಕುತ್ಸ್ಥೇ-ಶ್ರೀರಾಮನು, ಏವಂ - ಹೀಗೆ, ಬ್ರುವತಿ - ಹೇಳಲು, ಮಹಾಮುನಿಃ - ಮಹಾಋಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಅಥ - ಬಳಿಕ, ಧೃತಿಮಾನ್ - ಧೈರ್ಯವಂತನಾಗಿ, ಸುವ್ರತಃ - ನಿಯಮನಿಷ್ಠಾಪರನಾಗಿ, ಶುಚಿಃ-ಸ್ನಾನಾದಿಗಳಿಂದ ಪರಿಶುದ್ಧನಾಗಿ, ಸಂಹಾರಂ- ಉಪಸಂಹಾರವನ್ನು, ವ್ಯಾಜಹಾರ - ಉಪದೇಶ ಮಾಡಿದನು ॥ ೩ ॥ ಹೇರಾಮವ - ಎಲೈ ಶ್ರೀರಾಮನೆ, ಸತ್ಯವಂತಂ- ಸತ್ಯವ ತನೆಂಬ ಅಸ್ತ್ರವನ್ನು, ಸತ್ಯಕೀರ್ತಿಂ - ಸತ್ಯಕೀರ್ತಿಯನ್ನು, ಧೃಷ್ಟಂ-ಧೃಷ್ಟನನ್ನು, ರಭಸಮೇವಚ-

---

ಈರೀತಿ ರಾಮಚಂದ್ರನು ಅಸ್ತ್ರಗಳನ್ನು ಪರಿಗ್ರಹಿಸಿದ ಬಳಿಕ ಮಾರ್ಗದಲ್ಲಿ ಹೋಗುತ್ತ ಸಂತುಷ್ಟನಾಗಿ ವಿಶ್ವಾಮಿತ್ರನನ್ನು ಕುರಿತು ॥ ೧ ॥ "ಪೂಜ್ಯರೇ! ತಮ್ಮ ಅನುಗ್ರಹದಿಂದ ಅಸ್ತ್ರಗಳನ್ನುಪರಿಗ್ರಹಿಸಿ ದೇವತೆಗಳಿಗೂ ಕೂಡ ಜಯಿಸಲಸಾಧ್ಯನಾದೆನು. ಈಗಲಾದರೋ, ಈ ಅಸ್ತ್ರಗಳ ಉಪಸಂಹಾರವನ್ನು ಗ್ರಹಿಸಲಿಚ್ಛಿಸುವೆನು"ಎಂದನು.॥೨॥ರಾಮಚಂದ್ರನಿಂತು ನುಡಿಯಲು ಆ ವಿಶ್ವಾಮಿತ್ರಮುನಿಯು, ಅಸ್ತ್ರೋಪ ಸಂಹಾರವನ್ನು ಹೀಗೆ ಹೇಳಿದನು. "ರಾಮ! ಸತ್ಯವಂತ,ಸತ್ಯಕೀರ್ತಿ, ಧೃಷ್ಟ, ರಭಸ, ಪ್ರತಿಹಾರತರ, ಪರಾಙ್ಮುಖ,ಅವಾಙ್ಮುಖ,

ಮವಾಙ್ಮುಖಂ ॥ ೪ ॥ ಲಕ್ಷಾಕ್ಷವಿಷಮೌ ಚೈವ ದೃಢನಾಭ ಸುನಾಭಕೌ ॥ ದಶಾಕ್ಷಶತವಕ್ತ್ರೌಚ ದಶಶೀರ್ಷ ಶತೋದರೌ ॥೫॥ ಪದ್ಮನಾಭ ಮಹಾನಾಭೌ ದುಂದುನಾಭ ಸುನಾಭಕೌ ॥ ಜ್ಯೋತಿಷಂ ಕೃಶನಂಚೈವ ನೈರಾಶ್ಯವಿಮಲಾವುಭೌ ॥ ೬ ॥ ಯೋಗಂಧರಹರಿದ್ರೌಚ ದೈತ್ಯಪ್ರಶಮನೌತಥಾ ॥ (ಶುಚಿರ್ಬಾಹುರ್ಮಹಾಬಾಹುರ್ನಿಷ್ಕುಲಿರ್ವಿರುಚಿಸ್ತಥಾ)॥ ಸಾರ್ಚಿರ್ಮಾಲೀ ಧೃತಿರ್ಮಾಲೀ ವೃತ್ತಿ

---

ರಭಸನನ್ನೂ, ಪ್ರತಿಹಾರತರಂನಾಮ-ಪ್ರತಿಹಾರತರನೆಂದು ಪ್ರಸಿದ್ಧವಾದವನನ್ನೂ, ಪರಾಙ್ಮುಖಂ-ಪರಾಙ್ಮುಖನನ್ನೂ, ಅವಾಙ್ಮುಖಂ - ಅವಾಙ್ಮುಖನನ್ನೂ, ಲಕ್ಷಾಕ್ಷವಿಷಮೌಚೈವ-ಲಕ್ಷಾಕ್ಷ, ವಿಷಮನೆಂಬವರನ್ನೂ, ದೃಢನಾಭಸುನಾಭಕೌ- ದೃಢನಾಭ ಸುನಾಭನೆಂಬುವರನ್ನೂ, ದಶಾಕ್ಷಶತವಕ್ತ್ರೌಚ-ದಶಾಕ್ಷ ಶತವಕ್ತ್ರರೆಂಬುವರನ್ನೂ, ದಶಶೀರ್ಷಶತೋದರೌ – ದಶಶೀರ್ಷನು ಶತೋದರನೂ ಎಂಬುವರನ್ನೂ, ಪದ್ಮನಾಭ ಮಹಾನಾಭೌ - ಪದ್ಮನಾಭ ಮಹಾನಾಭನೆಂಬುವರನ್ನೂ, ದುಂದುನಾಭ ಸುನಾಭಕೌ-ದುಂದುನಾಭನು ಸುನಾಭನೆಂಬವರನ್ನೂ,ಜ್ಯೋತಿಷಂ- ಜ್ಯೋತಿಷನೆಂಬವನನ್ನೂ,ಕೃಶನಂಚೈವ - ಕೃಶನನೆಂಬುವನನ್ನೂ, ನೈರಾಶ್ಯವಿಮಲೌ - ನೈರಾಶ್ಯ ವಿಮಲರೆಂಬ, ಉಭೌ- ಇಬ್ಬರನ್ನು, ಯೋಗಂಧರ ಹರಿದ್ರೌಚ - ಯೋಗಂಧರ ಹರಿದ್ರನೆಂಬುವರನ್ನೂ, ದೈತ್ಯಪ್ರಶಮನೌ-ದೈತ್ಯ ಪ್ರಶಮನೆಂಬವರನ್ನೂ, ಶುಚಿರ್ಬಾಹುಃ- ಶುದ್ಧವಾದ ಬಾಹುಗಳುಳ್ಳವನೆಂಬುವನನ್ನು,ಮಹಾಬಾಹುಃ-ಮಹಾಬಾಹುವೆಂಬವನನ್ನೂ, ನಿಷ್ಕುಲಿಃ - ನಿಷ್ಕುಲಿಯೆಂಬುವನನ್ನೂ, ವಿರುಚಿಃ - ವಿರುಚಿಯೆಂಬುವನನ್ನು, ತಥಾ-ಹಾಗೆಯೇ, ಸಾರ್ಚಿರ್ಮಾಲೀ-ಸಾರ್ಚಿರ್ಮಾಲಿಯನ್ನೂ, ಧೃತಿರ್ಮಾಲೀ-ಧೃತಿರ್ಮಾಲಿಯನ್ನೂ ವೃತ್ತಿಮಾನ್ - ವೃತ್ತಿಮಂತನನ್ನೂ, ರುಚಿರಃ - ರುಚಿರನನ್ನೂ, ತಥಾ-ಹಾಗೆಯೇ, ಪಿತ್ರ್ಯಸೌಮನಸಂ-ಪಿತ್ರ್ಯಸೌಮನಸನನ್ನೂ, ವಿಧೂತಮಕರೌ- ವಿಧೂತಮಕರರೆಂಬ, ಉಭೌ-ಇಬ್ಬರನ್ನು, ಕರವೀರಕರಂಚೈವ - ಕರವೀರಕರನೆಂಬವನನ್ನೂ, ಧನಧಾನ್ಯೌಚ-ಧನನೂ ಧಾನ್ಯನೆಂಬವರನ್ನೂ, ಕಾಮರೂಪಂ-ಕಾಮರೂಪನನ್ನೂ, ಕಾಮರುಚಿಂ - ಕಾಮರುಚಿಯನ್ನೂ,ಮೋಹಂ-ಮೋಹನನ್ನೂ,ತಥಾ-ಹಾಗೆಯೇ, ಆವರಣಂ-ಆವರಣನನ್ನೂ, ಜೃಂಭಕಂ-ಜೃಂಭಕನನ್ನೂ, ಸರ್ವನಾಭಂಚ-ಸರ್ವನಾಭನನ್ನೂ, ತಥಾ-

---

ಲಕ್ಷಾಕ್ಷ, ವಿಷಮ, ದೃಢನಾಭ, ಸುನಾಭಕ, ದಶಾಕ್ಷ, ಶತವಕ್ತ್ರ, ದಶಶೀರ್ಷ, ಶತೋದರ, ಪದ್ಮನಾಭ, ಮಹಾನಾಭ, ದುಂದುನಾಭ, ಸುನಾಭಕ,ಜ್ಯೋತಿಷ, ಕೃಶನ, ನೈರಾಶ್ಯ, ವಿಮಲ, ಯೋಗಂಧರ, ಹರಿದ್ರ, ದೈತ್ಯ, ಪ್ರಶಮನ, ಸಾರ್ಚಿರ್ಮಾಲಿ, ಧೃತಿರ್ಮಾಲಿ, ವೃತ್ತಿಮಂತ, ರುಚಿರ, ಪಿತ್ರ್ಯಸೌಮನಸ, ವಿಧೂತ, ಮಕರ, ಕರವೀರಕರ, ಧನ, ಧಾನ್ಯ, ಕಾಮರೂಪ, ಕಾಮರುಚಿ, ಮೋಹನ, ವಾರಣ, ಜೃಂಭಕ, ಸರ್ವನಾಭ, ಸಂತಾನ, ವರಣರೆಂಬ ಕಾಮರೂಪಿಗಳೂ ಮಹಾ ತೇಜಸ್ವಿಗಳೂ ಆದ ಭೃಶಾಶ್ವನ ಮಕ್ಕಳನ್ನು ಪರಿಗ್ರಹಿಸು, ನಿನಗೆ ಶುಭವುಂಟಾಗುವದು” ಹೀಗೆನ್ನಲು ಆ ರಾಮನು ಸಂತುಷ್ಟಾನ್ತಃಕರಣವುಳ್ಳವನಾಗಿ ಆ ಮುನಿಯ ಅಪ್ಪಣೆಯಂತೆನಡದುಕೊಳ್ಳುವೆನೆಂದು ನುಡಿದು ಅವುಗಳನ್ನು ಪರಿಗ್ರಹಿಸಲು,ಮಹಾ ಪ್ರಕಾಶಮಾನನಾದ ತೇಜಸ್ಸುಳ್ಳವೂ , ದೇಹಧಾರಿಗಳಾಗಿರುವವೂ ಆದ ಅಸ್ತ್ರಗಳಲ್ಲಿ ಕೆಲವು ಅಂಗಾರಗಳಿಗೆ ಸಮಾನವಾಗಿಯೂ, ಇನ್ನು ಕೆಲವು ಹೊಗೆಗೆ ಸಮಾನವಾಗಿಯೂ, ಮತ್ತೆ ಕೆಲವು

33

ನ್ಮಾ ರುಚಿರಸ್ತಥಾ ||೭|| ಪಿತ್ರ್ಯಸೌಮನಸಂ ಚೈವ ವಿಧೂತ ಮಕರಾವುಭೌ ||
ಕರವೀರಕರಂ ಚೈವ ಧನಧಾನ್ಯೌಚ ರಾಘವ ||೮|| ಕಾಮರೂಪಂ ಕಾಮರುಚಿಂ
ಮೋಹನಮಾವರಣಂ ತಥಾ || ಜೃಂಭಕಂ ಸರ್ವನಾಭಂಚ ಸಂತಾನವರಣೌ
ತಥಾ ||೯|| ಭೃಶಾಶ್ವತನಯಾನ್ರಾಮ ಭಾಸ್ವರಾನ್ ಕಾಮರೂಪಿಣಃ|| ಪ್ರತೀಚ್ಛ
ಮಮ ಭದ್ರಂ ತೇ ಪಾತ್ರಭೂತೋಽಸಿ ರಾಘವ ||೧೦|| ಬಾಢಮಿತ್ಯೇವಕಾಕು
ತ್ಸ್ಥಃ ಪ್ರಹೃಷ್ಟೇನಾಂತರಾತ್ಮನಾ || (ಜಗ್ರಾಹಮಂತ್ರಗ್ರಾಮಂ ತೇಪ್ಯುಪ
ತಸ್ಥುಶ್ಚ ರಾಘವಂ) || ದಿವ್ಯಭಾಸ್ವರ ದೇಹಾಶ್ಚ ಮೂರ್ತಿಮಂತಸ್ಸುಖ
ಪ್ರದಾಃ||೧೧||ಕೇಚಿದಂಗಾರಸದೃಶಾಃ ಕೇಚಿದ್ಧೂಮೋಪಮಾಸ್ತಥಾ||ಚಂದ್ರಾರ್ಕ
ಸದೃಶಾಃ ಕೇಚಿತ್ಪ್ರಹ್ವಾಂಜಲಿಪುಟಾಸ್ತಥಾ ||೧೨|| ರಾಮಂ ಪ್ರಾಂಜಲಯೋ

ಹಾಗೆಯು, ಸಂತಾನವರಣೌ - ಸಂತಾನನು ವರಣನು ಎಂಬುವರನ್ನೂ, ಭಾಸ್ವರಾನ್-ಪ್ರಕಾಶಿಸುತ್ತಿರುವ, ಕಾಮರೂಪಿಣಃ-ಕಾಮರೂಪಿಗಳಾದ, ಭೃಶಾಶ್ವತನಯಾನ್,ಭೃಶಾಶ್ವ- ಭೃಶಾಶ್ವನೆಂಬ ಬ್ರಹ್ಮನ, ತನಯಾನ್-ಪುತ್ರರನ್ನೂ, ಪ್ರತೀಚ್ಛ-ಪರಿಗ್ರಹಿಸು. ಹೇ ರಾಮ-ಎಲೈ ಶ್ರೀರಾಮನೇ, ಹೇ ರಾಘವ-ಎಲೈ ರಘುವಂಶೋದ್ಭವನೇ! ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ನೀನು - ನನಗೆ, ಪಾತ್ರಭೂತಃ-ಉಪದೇಶಕ್ಕೆ ಅರ್ಹನು, ಅಸಿ ಆಗಿರುವೆ, ||೧೦|| ಕಾಕುತ್ಸ್ಥ -ಶ್ರೀರಾಮನು. ಬಾಢಮಿತ್ಯೇವ-ಹಾಗೆಯೇ ಆಗಲೆಂದಂಗೀಕರಿಸಿ. ಪ್ರಹೃಷ್ಟೇನ ಸಂತೋಷಗೊಂಡ, ಅಂತರಾತ್ಮನಾ ಮನಸ್ಸಿನಿಂದ, ಮಂತ್ರಗ್ರಾಮಂ ಮಂತ್ರ ಸಮೂಹವನ್ನು, ಜಗ್ರಾಹ - ಪರಿಗ್ರಹಿಸಿದನು, ತೇಪಿ-ಆ ಮಂತ್ರಗಳೂ, ರಾಘವಂ ಶ್ರೀರಾಮನನ್ನು, ಉಪತಸ್ಥುಃ- ಹೊಂದಿದವು, ||೧೧|| ದಿವ್ಯಭಾಸ್ವರದೇಹಾಶ್ಚ, ದಿವ್ಯ-ಮನೋಹರಗಳಾದ, ಭಾಸ್ವರ-ಪ್ರಕಾಶಕರಗಳಾದ, ದೇಹಾಶ್ಚ-ದೇಹಗಳುಳ್ಳ, ಮೂರ್ತಿಮಂತಃ-ದೇಹಧಾರಿಗಳಾದ, ಸುಖಪ್ರದಾಃ-ಸುಖವನ್ನುಂಟುಮಾಡತಕ್ಕವುಗಳಾದ, ಕೇಚಿತ್-ಕೆಲವರೂ, ಅಂಗಾರಸದೃಶಾಃ,ಅಂಗಾರ-ಕೆಂಡಗಳಿಗೆ, ಸದೃಶಾಃ-ಸಮಾನರಾಗಿ, ಕೇಚಿತ್-ಕೆಲವರೂ, ಧೂಮೋಪಮಾಃ-ಹೊಗೆಗೆ ಸಮಾನರಾಗಿ, ತಥಾ-ಹಾಗೆಯೇ, ಕೇಚಿತ್-ಕೆಲವರು, ಚಂದ್ರಾರ್ಕಸದೃಶಾಃ-ಚಂದ್ರ-ಸೂರ್ಯರಿಗೆ ಸದೃಶರಾಗಿ, ತಥಾ - ಹಾಗೆಯು, ಪ್ರಹ್ವಾಂಜಲಿಪುಟಾಃ, ಪ್ರಹ್ವ-ನಮ್ರಗಳಾದ, ಅಂಜಲಿಪುಟಾಃ - ಬಗುನೆಗಳುಳ್ಳವರಾಗಿ, ರಾಮಂ - ಶ್ರೀರಾಮನನ್ನು ಕುರಿತು, ಪ್ರಾಂಜಲಯಃ- ಅಂಜಲಿಬದ್ಧರು, ಭೂತ್ವಾ - ಆಗಿ, ಮಧುರಭಾಷಿಣಃ - ಕಿವಿಗಿಂಪಾಗಿರುವ ಮಾತುಗಳುಳ್ಳವರಾಗಿ, ಹೇನರಶಾರ್ದೂಲ - ಎಲೈ ಪುರುಶ್ರೇಷ್ಠನೇ! ಇಮೇ - ನಾವು, ಸ್ಮ-ಸಿದ್ಧರಾಗಿರುವೆವು, ತೇ- ನಿನಗೆ, ಕಿಂ - ಯಾವುದನ್ನು, ಕರವಾಮ - ಮಾಡುವೆವು, ಶಾಧಿ - ಅಜ್ಞಾಪಿಸು, ಇತಿ ಇಂತೆಂದು,

---

ಸೂರ್ಯ ಚಂದ್ರರಿಗೆ ಸಮಾನವಾಗಿಯೂ, ಇರುವವುಗಳಾಗಿ ಕೈಮುಗಿದು ಇಂತೆಂದು ನುಡಿದವು. "ಎಲೈ ನರಶ್ರೇಷ್ಠನೇ! ನಾವಾವ ಕಾರ್ಯವಂಗೈಯ್ಯಬೇಕೋ, ಅಪ್ಪಣೆಯಾಗಬೇಕು" ಎಂದು ನುಡಿಯಲು, ರಘುಕುಲತಿಲಕನು ಅವುಗಳನ್ನು ಕುರಿತು ನೀವು ನನ್ನ ಮನೋಗತರಾಗಿ ಕಾರ್ಯಮಾಡುವ ಕಾಲದಲ್ಲಿ ಸಹಾಯಕರಾಗಿ, ಈಗ ನಿಮಿಗಿಷ್ಟವಿದ್ದೆಡೆಗೆ ಹೋಗಬಹುದು" ಎಂದನು. ಆಗಲಾ ಅಸ್ತ್ರಾಭಿಮಾನ ದೇವತೆಗಳು ಆತನಿಗೆ ಪ್ರದಕ್ಷಿಣ ನಮಸ್ಕಾ

ಭೂತ್ವಾ ಬ್ರುವನ್ ಮಧುರಭಾಷಿಣಃ || ಇಮೇ ಸ್ಮ ನರಶಾರ್ದೂಲ ಶಾಧಿ ಕಿಂ ಕರವಾಮ ತೇ || ೧೩ || ಮಾನಸಾಃ ಕಾರ್ಯಕಾಲೇಷು ಸಾಹಾಯ್ಯಂ ಮೇ ಕರಿಷ್ಯಥ || ಗಮ್ಯತಾಮಿತಿ ತಾನಾಹ ಯಥೇಷ್ಟಂ ರಘುನಂದನಃ || ೧೪ || ಅಥ ತೇ ರಾಮಮಾಮಂತ್ರ್ಯ ಕೃತ್ವಾ ಚಾಪಿ ಪ್ರದಕ್ಷಿಣಂ || ಏವಮಸ್ತ್ವಿತಿ ಕಾಕುತ್ಸ್ಥಮುಕ್ತ್ವಾ ಜಗ್ಮುರ್ಯಥಾಗತಂ ||೧೫|| (ತತಸ್ತು ರಾಮಃ ಕಾಕುತ್ಸ್ಥಶ್ಶಾಸನಾದ್ಬ್ರಹ್ಮವಾದಿನಃ || ಲಕ್ಷ್ಮಣಾಯದದೌ ತಾನ್ಸರ್ವಾನ್ ಪರಾನಸ್ತ್ರಾನ್ರಘುನಂದನಃ || ಸಂಹಾರಾನ್ಸಹ ಸಂಹೃಷ್ಟಃ ಶ್ರೀಮಾನ್ ತಸ್ಮೈ ನ್ಯವೇದಯತ್) ಸಚ ತಾನ್ರಾಘವೋ ಜ್ಞಾತ್ವಾ ವಿಶ್ವಾಮಿತ್ರಂ ಮಹಾಮುನಿಂ || ಗಚ್ಛನ್ನೇವಾಥ ಮಧುರಂ ಶ್ಲಕ್ಷ್ಣಂ ವಚನಮಬ್ರವೀತ್ || ೧೬ || ಕಿನ್ನ್ವೇತನ್ಮೇಘಸಂಕಾಶಂ

---

(ಅಬ್ರುವನ್ - ನುಡಿದರು || ೧೩ || ರಘುನಂದನಃ- ಶ್ರೀರಾಮನು, ಕಾರ್ಯಕಾಲೇಷು - ಕಾರ್ಯವಾಗಬೇಕಾದಾಗ, ಮಾನಸಾಃ - ಮನೋನುಸಾರಿಗಳಾಗಿ, ಮೇ - ನನಗೆ, ಸಾಹಾಯ್ಯಂ- ಸಹಾಯವನ್ನು, ಕರಿಷ್ಯಥ - ಮಾಡುವಿರಿ, ಯಥೇಷ್ಟಂ ಇಷ್ಟಾನುಸಾರವಾಗಿ, ಗಮ್ಯತಾಂ - ಹೋಗಿರಿ, ಇತಿ-ಎಂದು, ತಾನ್ - ಆ ಅಸ್ತ್ರಾಭಿಮಾನ ಪುರುಷರನ್ನು ಕುರಿತು, ಆಹ - ಹೇಳಿದನು, ||೧೪|| ಅಥ-ಅನಂತರದಲ್ಲಿ, ತೇ - ಆ ಅಸ್ತ್ರಾಭಿಮಾನ ಪುರುಷರು, ಕಾಕುತ್ಸ್ಥಂ - ಕಕುತ್ಸ್ಥ ವಂಶೋತ್ಪನ್ನನಾದ, ರಾಮಂ- ಶ್ರೀರಾಮನನ್ನು ಕುರಿತು, ಆಮಂತ್ರ್ಯ - ಹೇಳಿ, ಪ್ರದಕ್ಷಿಣಂಚಾಪಿ - ಪ್ರದಕ್ಷಿಣವನ್ನೂ, ಕೃತ್ವಾ- ಮಾಡಿ, ಏವಮಸ್ತ್ವಿತಿ - ಹಾಗೆಯೇ ಆಗಲೆಂದು, ಉಕ್ತ್ವಾ - ಹೇಳಿ, ಯಥಾಗತಂ - ಬಂದಹಾಗೆ, ಜಗ್ಮುಃ - ಹೊರಟುಹೋದರು, ||೧೫|| ತತಸ್ತು - ಆ ಬಳಿಕ, ಕಕುತ್ಸ್ಥಃ - ಕಕುತ್ಸ್ಥ ವಂಶೋತ್ಪನ್ನನೂ, ರಘುನಂದನಃ - ರಘುಕುಲಕ್ಕೆ ಆನಂದವನ್ನುಂಟುಮಾಡುವವನೂ, ಶ್ರೀಮಾನ್ - ಸಂಪದ್ಯುಕ್ತನೂ ಆದ, ರಾಮಃ - ರಾಮನು, ಬ್ರಹ್ಮವಾದಿನಃ - ಬ್ರಹ್ಮಜ್ಞಾನಿಯಾದ ವಿಶ್ವಾಮಿತ್ರನ, ಶಾಸನಾತ್ - ಅಣತಿಯಂತೆ, ಸಂತುಷ್ಟಃ - ಸಂತೋಷಗೊಂಡು, ತಾನ್ ಸರ್ವಾನ್ - ಸಮಸ್ತವಾದ ಮಂತ್ರಯುಕ್ತವಾದ, ಪರಾನಸ್ತ್ರಾನ್ - ಶ್ರೇಷ್ಠವಾದ ಅಸ್ತ್ರಗಳೆಲ್ಲವನ್ನೂ, ಸಂಹಾರಾನ್-ಅವುಗಳ ಉಪಸಂಹಾರವನ್ನೂ, ತಸ್ಮೈ ಲಕ್ಷ್ಮಣಾಯ - ಆ ಲಕ್ಷ್ಮಣನಿಗೆ, ನ್ಯವೇದಯತ್ - ಅರುಹಿದನು, ಸರಾಘವಶ್ಚ - ಆ ಶ್ರೀರಾಮನೂ, ತಾನ್ - ಆ ಅಸ್ತ್ರಗಳನ್ನು, ಜ್ಞಾತ್ವಾ - ತಿಳಿದು, ಅಥ-ಬಳಿಕ, ಗಚ್ಛನ್ನೇವ-ಹೋಗುತ್ತ, ಮಹಾಮುನಿಂ - ಮಹಾಋಷಿಯಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಮಧುರಂ - ಇಂಪಾಗಿರುವ, ಶ್ಲಕ್ಷ್ಣಂ - ಮೃದುವಾದ, ವಚನಂ ಮಾತನ್ನು, ಅಬ್ರವೀತ್ - ನುಡಿದನು. || ೧೬ || ಪರ್ವತಸ್ಯ - ಬೆಟ್ಟಕ್ಕೆ, ಅವಿದೂರತಃ-ಸಮೀಪದಲ್ಲಿ, ಇತಃ-ಇತ್ತ ಕಡೆ, ಮೇಘಸಂಕಾಶಂ - ಮೋಡಗಳಿಗೆ ಸಮಾನವಾದ, ಏತತ್ - ಈ, ವೃಕ್ಷಷಂಡಂ- ವೃಕ್ಷಗಳ ಗುಂಪು,

---

ರವಂಗೈದು ಹಾಗೆಯೇ ಆಗಲೆಂದು ಹೇಳಿ ಬಂದಂತೆ ಹೊರಟುಹೋದರು.||೩-೧೫|| ಆ ಬಳಿಕ ರಾಘವನು ಬ್ರಹ್ಮಜ್ಞಾನಿಯಾದ ವಿಶ್ವಾಮಿತ್ರನಾಣತಿಯಂತೆ ಆ ಅಸ್ತ್ರ ಶಸ್ತ್ರಗಳೆಲ್ಲವನ್ನೂ ತಮ್ಮನಾದ ಲಕ್ಷ್ಮಣನಿಗೂ ಅರುಹಿದನು. ಹೀಗೆ ಆರಾಮನು ಶಸ್ತ್ರಾಸ್ತ್ರಗಳ ಸಂಧಾನೋಪಸಂಹಾರಗಳನ್ನರಿತು ಮುಂಬರಿಯುತ್ತ ವಿಶ್ವಾಮಿತ್ರನನ್ನು ಕುರಿತಿಂತೆಂದನು || ೧೬ || "ಮುನಿಪುಂಗವ! ಈ ಪರ್ವತದ ಸಮೀಪದಲ್ಲಿ ಸೂರ್ಯನಂತೆ ಕಣ್ಣಿಗೊಪ್ಪಿ ರಂಜಿಸುವ

ಪರ್ವತಸ್ಯಾವಿದೂರತಃ||ವೃಕ್ಷಷಂಡಮಿತೋಭಾತಿ ಪರಂಕೌತೂಹಲಂಹಿಮೇ ||೧೬||
ದರ್ಶನೀಯಂ ಮೃಗಾಕೀರ್ಣಂ ಮನೋರಮಮತೀವಚ || ನಾನಾಪ್ರಕಾರೈ
ಶ್ಶಕುನೈ ರ್ವಲ್ಗುನಾದೈ ರಲಂಕೃತಂ || ೧೭ || ನಿಸ್ಸೃತಾಸ್ಸ್ಮ ಮುನಿಶ್ರೇಷ್ಠ
ಕಾಂತಾರಾದ್ರೋಮಹರ್ಷಣಾತ್ || ಅನಯಾತ್ವವಗಚ್ಛಾಮಿ ದೇಶಸ್ಯ
ಸುಖವತ್ತಯಾ ||೧೮|| ಸರ್ವಂ ಮೇ ಶಂಸ ಭಗವನ್ ಕಸ್ಯಾಶ್ರಮಪದಂತ್ವಿದಂ||
ಸಂಪ್ರಾಪ್ತಾ ಯತ್ರ ತೇ ಪಾಪಾ ಬ್ರಹ್ಮಘ್ನಾ ದುಷ್ಟಚಾರಿಣಃ||೨೦||ತವಯಜ್ಞ
ಸ್ಯವಿಘ್ನಾಯ ದುರಾತ್ಮಾನೋ ಮಹಾಮುನೇ || ಭಗವಂಸ್ತಸ್ಯ ಕೋದೇಶ

ಕಿನ್ನು - ಏತರದು, ಮೇ - ನನಗೆ, ಪರಮಂ - ಬಹಳ, ಕೌತೂಹಲಂಹಿ - ಕುತೂಹಲವನ್ನೆ, ದರ್ಶನೀಯಂ - ದೃಷ್ಟಿಗೆ ಇಂಪಾಗಿರುವ, ಮೃಗಾಕೀರ್ಣಂ - ಮೃಗಗಳಿಂದ ವ್ಯಾಪ್ತವಾದ, ಅತೀವಚ-ಬಹಳವಾಗಿ, ಮನೋರಮಂ - ಮನೋರಮ್ಯವಾದ, ನಾನಾಪ್ರಕಾರೈಃ - ನಾನಾಬಗೆಗಳಾದ, ವಲ್ಗುನಾದೈಃ - ಮನೋಹರ ಧ್ವನಿಗಳುಳ್ಳ, ಶಕುನೈಃ - ಪಕ್ಷಿಗಳಿಂದ, ಅಲಂಕೃತಂ- ಅಲಂಕರಿಸಲ್ಪಟ್ಟ, ವೃಕ್ಷಷಂಡಂ - ವೃಕ್ಷಗಳ ಗುಂಪು, ಭಾತಿ - ಪ್ರಕಾಶಿಸುತ್ತದೆ, || ೧೭ || ಹೇಮುನಿಶ್ರೇಷ್ಠ-ಎಲೈ ಋಷಿಶ್ರೇಷ್ಠನೆ, ರೋಮಹರ್ಷಣಾತ್ - ರೋಮಾಂಚಕರವಾದ, ಕಾಂತಾರಾತ್ - ವನದಿಂದ, ನಿಸ್ಸೃತಾಃ - ಹೊರಟುಬಂದವರು, ಸ್ಮ-ಆದೆವು, ಅನಯಾ-ಈ, ದೇಶಸ್ಯ-ಪ್ರದೇಶದ, ಸುಖವತ್ತಯಾ-ಸುಖವುಳ್ಳ ಭಾವದಿಂದ, ಇದಂ - ಇದು, ಆಶ್ರಮಪದಂ ಆಶ್ರಮಸ್ಥಾನವು ಎಂದು, ಅವಗಚ್ಛಾಮಿ-ಎಣಿಸುವೆನು, ಕಸ್ಯ-ಇದು ಯಾರದು, ಹೇಭಗವನ್-ಎಲೈ ಪೂಜ್ಯನ, ಸರ್ವಂ-ಸಮಸ್ತವನ್ನು, ಮೇ-ನನಗೆ, ಶಂಸ - ಹೇಳು, || ೧೮ || ಹೇಮಹಾಮುನೇ - ಎಲೈ ಮಹರ್ಷಿಯೆ, ಯತ್ರ - ಯಾವ ಆಶ್ರಮದಲ್ಲಿ, ಬ್ರಹ್ಮಘ್ನಾಃ - ಬ್ರಹ್ಮದ್ರೋಹಿಗಳಾದ, ದುಷ್ಟಚಾರಿಣಃ - ದುರ್ವ್ಯಾಪಾರಿಗಳಾದ ದುರಾತ್ಮಾನಃ - ದುಷ್ಟರೂ, ಪಾಪಾಃ - ಪಾಪಿಷ್ಠರೂ ಆದ ಆ ರಾಕ್ಷಸರು, ತವ-ನಿನ್ನ, ಯಜ್ಞಸ್ಯ-ಯಜ್ಞಕ್ಕೆ, ವಿಘ್ನಾಯ - ವಿಘ್ನಕ್ಕೋಸುಗ, ಸಂಪ್ರಾಪ್ತಾಃ - ಬಂದವರು, ಭವಂತಿ-ಆಗುತ್ತಾರೋ, || ೨೦ || ಹೇಭಗವನ್ - ಎಲೈ ಪೂಜ್ಯನ, ಯತ್ರ - ಯಾವ ಆಶ್ರಮದಲ್ಲಿ, ತವ-ನಿನ್ನ, ಸಾ-ಆ, ಯಾಜ್ಞಕೀ - ಯಜ್ಞ ಸಂಬಂಧವಾದ, ಕ್ರಿಯಾ ಕರ್ಮವು, ರಕ್ಷಿತವ್ಯಾ- ಸಂರಕ್ಷಣೆಮಾಡತಕ್ಕುದೋ, ರಾಕ್ಷಸಾಃ - ರಾಕ್ಷಸರು, ಯತ್ರ - ಯಾವ ಆಶ್ರಮದಲ್ಲಿ, ಮಯಾ - ನನ್ನಿಂದ, ವಧ್ಯಾಶ್ಚ-ವಧಾ

ವೃಕ್ಷ ಸಮೂಹವುಳ್ಳದ್ದಾಗಿಯೂ, ಇಂಪಾಗಿ ಕೂಗುತ್ತಿರುವ ವಿಧವಿಧವಾದ ಪಕ್ಷಿ ಸಮೂಹಗಳಿಂದಲೂ, ಅನೇಕ ಮೃಗಸಿಪಹಗಳಿಂದಲೂ, ಮನೋಹರವಾಗಿ ಕಾಣುತ್ತಿರುವ ಈ ವನದ ಪೂರ್ವೋತ್ತರಗಳನ್ನು ತಿಳಿಯಲು, ನನಗೆ ಬಹಳವಾದ ಕುತೂಹಲವುಂಟಾಗಿರುವದು. ಮುನೀಶ್ವರನೇ ! ಇಲ್ಲಿಗೆ ಅನೇಕ ವನಗಳನ್ನು ದಾಟಿ ಬಂದೆವಲ್ಲವೇ ? ಈ ಮುಂದೆ ಕಾಣಿಸುವ ಆಶ್ರಮವಾರದು ? || ೧೬ || ಮಹಾತ್ಮನಾದ ನಿನ್ನ ಯಜ್ಞವಿಘ್ನವನ್ನು ಬಯಸುವ, ಬ್ರಹ್ಮದ್ರೋಹಿಗಳೂ, ಪಾಪಾತ್ಮರೂ ಆದ ರಕ್ಕಸರು ಎತ್ತಣಿಂದ ಬರುವರು ? ಈ ಪ್ರದೇಶವು ಮಳಲು ಭೂಮಿಯಾಗಿ ಎತ್ತನೋಡಿದರೂ ಮಂಗಳಕರವಾಗಿಯೇ ಕಾಣು

ಸ್ಥಾಯತ್ರ ತವಯಾಜ್ಞಿಕೀ ||೨೦|| ರಕ್ಷಿತವ್ಯಾ ಕ್ರಿಯಾಬ್ರಹ್ಮನ್ ಮಯಾ ವಧ್ಯಾಶ್ಚ ರಾಕ್ಷಸಾಃ || ಏತತ್ಸರ್ವಂ ಮುನಿಶ್ರೇಷ್ಠ ಶ್ರೋತುಮಿಚ್ಛಾಮ್ಯಹಂ ಪ್ರಭೋ ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಅಷ್ಟಾವಿಂಶಸ್ಸರ್ಗಃ.



ಹರ್ಷೋ, ಹೇಬ್ರಹ್ಮನ್-ಎಲೈ ಬ್ರಾಹ್ಮಣನೆ! ಹೇಮುನಿಶ್ರೇಷ್ಠ-ಎಲೈ ಮುನಿಶ್ರೇಷ್ಠನೆ! ಹೇಪ್ರಭೋ-ಮಹಾ ಸಾಮರ್ಥ್ಯವುಳ್ಳವನೆ! ತಸ್ಯ - ಆ ಆಶ್ರಮದ, ದೇಶಃ - ಪ್ರದೇಶವು, ಕಃ-ಯಾವದು, ಏತತ್ಸರ್ವಂ - ಇದೆಲ್ಲವನ್ನೂ, ಶ್ರೋತುಂ - ಕೇಳಲು, ಅಹಂ-ನಾನು, ಇಚ್ಛಾಮಿ-ಇಚ್ಛಿಸುತ್ತೇನೆ, ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾವಿಂಶಸ್ಸರ್ಗಃ.

---

ತ್ತಿರುವುದು. ನೀನು ಮಾಡುವ ಯಾಗವನ್ನು ಸಂರಕ್ಷಿಸಬೇಕಾದ ಸ್ಥಳವಾವುದು? ಪಾಪಿಗಳಾದ ಆ ರಕ್ಕಸರನ್ನು ವಧಿಸಬೇಕಾದ ಸ್ಥಳವಾವುದು? ಇದೆಲ್ಲವನ್ನು ಕೇಳಲಿಚ್ಛಿಸುವೆವು ದಯವಿಟ್ಟು ಹೇಳುವನಾಗು" ಎಂದು ಹೇಳಿದರು. ||೧೭-೨೨||

ಇಂತಿದು ವಿಶ್ವಾಮಿತ್ರಕೃತ ಅಸ್ತ್ರೋಪಸಂಹಾರಕಥನವೆಂಬ ಇಪ್ಪತ್ತೆಂಟನೆಯ ಸರ್ಗವು ಸಮಾಪ್ತವಾದುದು.

---

# ಬಾಲಕಾಂಡೇ ಏಕೋನತ್ರಿಂಶಸ್ಸರ್ಗಃ.



ಅಥತಸ್ಯಾಪ್ರಮೇಯಸ್ಯ ತದ್ವನಂಪರಿಪೃಚ್ಛತಃ॥ ವಿಶ್ವಾಮಿತ್ರೋ ಮಹಾತೇಜಾ ವ್ಯಾಖ್ಯಾತುಮುಪಚಕ್ರಮೇ ||೧|| ಇಹರಾಮ ಮಹಾಬಾಹೋ ವಿಷ್ಣುರ್ದೇವ ವರಃಪ್ರಭುಃ || ವರ್ಷಾಣಿ ಸುಬಹೂನ್ಯೇವ ತಥಾ ಯುಗ ಶತಾನಿಚ||೨|| ತಪಶ್ಚ ರಣಯೋಗಾರ್ಥಮುವಾಸ ಸು ಮಹಾತಪಾಃ ||೩|| ಏಷ ಪೂರ್ವಾಶ್ರಮೋ ರಾಮ ವಾಮನಸ್ಯ ಮಹಾತ್ಮನಃ || ಸಿದ್ಧಾಶ್ರಮ ಇತಿಖ್ಯಾತ ಸ್ಸಿದ್ಧೋಹ್ಯತ್ರ ಮಹಾ

---

ಅಥ-ಅನಂತರದಲ್ಲಿ, ಮಹಾತೇಜಾಃ - ಮಹಾ ತೇಜೋವಂತನಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ತದ್ವನಂ - ಆ ವನವನ್ನು, ಪರಿಪೃಚ್ಛತಃ - ಕೇಳುತ್ತಿರುವ, ಅಪ್ರಮೇಯಸ್ಯ - ಅಪಾರ ಪ್ರಭಾವವುಳ್ಳ, ತಸ್ಯ - ಆ ಶ್ರೀರಾಮನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ವ್ಯಾಖ್ಯಾತುಂ-ಉತ್ತರ ಹೇಳಲು, ಉಪಚಕ್ರಮೇ - ಆರಂಭಿಸಿದನು ||೧|| ಹೇರಾಮ - ಎಲೈ ಶ್ರೀರಾಮನೆ, ಹೇ ಮಹಾಬಾಹೋ ! ಎಲೈ ಮಹಾ ಭುಜಬಲಶಾಲಿಯೆ, ದೇವವರಃ- ದೇವತಾಶ್ರೇಷ್ಠನೂ, ಪ್ರಭುಃ-ಸ್ವಾಮಿಯೂ ಆದ, ವಿಷ್ಣುಃ - ಶ್ರೀಮಹಾವಿಷ್ಣುವು, ಇಹ - ಈ ವನದಲ್ಲಿ, ಬಹೂನಿ - ಅನೇಕ, ವರ್ಷಾಣಿ - ಸಂವತ್ಸರಗಳು, ತಥಾ - ಹಾಗೆಯು, ಯುಗಶತಾನಿಚ- ನೂರು ಯುಗಗಳು, ತಪಶ್ಚರಣ ಯೋಗಾರ್ಥಂ - ತಪಸ್ಸು ಮಾಡುವ ನಿಮಿತ್ತವಾಗಿಯೂ, ಯೋಗನಿಮಿತ್ತವಾಗಿಯೂ (ಗೋ) ತಪಶ್ಚರಣ - ತಪೋನುಷ್ಠಾನವೆಂಬ, ಯೋಗಾರ್ಥಂ - ಉಪಾಯಾರ್ಥವಾಗಿ, ಮಹಾತಪಾಃ - ಮಹಾ ತಪಸ್ಸುಳ್ಳವನಾಗಿ, ಉವಾಸ - ವಾಸಮಾಡಿದನು. |೨| ಹೇರಾಮ - ಎಲೈ ರಾಮನೆ ! ಏಷಃ-ಇದು, ಮಹಾತ್ಮನಃ - ಮಹಾತ್ಮನಾದ, ವಾಮನಸ್ಯ – ವಾಮನ ಮೂರ್ತಿಯ, ಪೂರ್ವಾಶ್ರಮಃ ಪುರಾತನವಾದ ಆಶ್ರಮವು, ಹಿ - ಯಾವ ಕಾರಣ, ಅತ್ರ - ಈ ಆಶ್ರಮದಲ್ಲಿ, ಮಹಾತಪಾಃ-ಮಹಾ ತಪಸ್ವಿಯಾದ, ವಿಷ್ಣುವು, ಸಿದ್ಧಃ - ಕಾರ್ಯಸಿದ್ಧಿಯನ್ನು ಪಡೆದನೋ, ಅತಃ - ಈ ಕಾರಣ, ಸಿದ್ಧಾಶ್ರಮ ಇತಿ - ಸಿದ್ಧಾಶ್ರಮವೆಂದು, ಖ್ಯಾತಃ - ಪ್ರಸಿದ್ಧವಾಯಿತು ||೪|| ಏತಸ್ಮಿನ್ನೇವಕಾಲೇತು-ಈ ಕಾಲದಲ್ಲಿಯೇ, ವೈರೋಚನಿಃ - ವಿರೋಚನ ಪುತ್ರನಾದ, ಬಲಿಃ- ಬಲಿ ಎಂಬ, ರಾಜಾ-ಅರಸು, ಸೇಂದ್ರಾನ್-ಇಂದ್ರನಿಂದೊಡಗೂಡಿದ, ಸಮರುದ್ಗಣಾನ್-ವಾಯುಗಣಗಳಿಂದೊಡಗೂಡಿರುವ, ದೈವತ

---

ಅಪಾರ ಮಹಿಮನಾದ ಶ್ರೀ ರಾಮಚಂದ್ರನು ಆ ವನ ವಿಚಾರವಾಗಿ ಪ್ರಶ್ನಿಸುತ್ತಿರಲು, ಮಹಾ ತೇಜಸ್ವಿಯಾದ ವಿಶ್ವಾಮಿತ್ರಮುನಿಯು, ಅದರ ವೃತ್ತಾಂತವನ್ನು ಹೇಳಲುಪಕ್ರಮಿಸಿದನು. "ರಾಮಚಂದ್ರ ! ಕೇಳು, ದೇವೋತ್ತಮನಾದ ಮಹಾವಿಷ್ಣುವು ಈ ಆಶ್ರಮದಲ್ಲಿಯೇ ಅನೇಕ ಯುಗಗಳವರಿವಿಗೂ ತಪೋಯೋಗಕ್ಕಾಗಿ ತಪಸ್ಸುಮಾಡುತ್ತ ವಾಸಿಸುತ್ತಿದ್ದನು; ಇಲ್ಲಿಯೇ ವಾಮನಮೂರ್ತಿಯೂ ನೆಲಸಿದ್ದನು, ಇಲ್ಲಿ ತಪವಂಗೈಯುತ್ತಿರುವವನು ಸಿದ್ಧಪುರುಷನು; ಇದು ಸಿದ್ಧಾಶ್ರಮವೆಂದು ಪ್ರಸಿದ್ಧಿಯಾಗಿರುವುದು.

ತವಾಃ ॥೩॥ ಏತಸ್ಮಿನ್ನೇವ ಕಾಲೇತು ರಾಜಾ ವೈರೋಚನಿರ್ಬಲಿಃ ॥ ನಿರ್ಜಿತ್ಯ ದೈವತಗಣಾನ್ ಸೇಂದ್ರಾಂಶ್ಚ ಸಮರುದ್ಗಣಾನ್ ॥ ಕಾರಯಾಮಾಸ ತದ್ರಾಜ್ಯಂ ತ್ರಿಷುಲೋಕೇಷು ವಿಶ್ರುತಃ ॥ ೫ ॥ ಬಲೇಸ್ತು ಯಜಮಾನಸ್ಯ ದೇವಾಸ್ಸಾಗ್ನಿ ಪುರೋಗಮಾಃ॥ ಸಮಾಗಮ್ಯ ಸ್ವಯಂಚೈವ ವಿಷ್ಣುಮೂಚುರಿಹಾಶ್ರಮೇ ॥೬॥ ಬಲಿರ್ವೈರೋಚನಿರ್ವಿಷ್ಣೋ ಯಜತೇ ಯಜ್ಞಮುತ್ತಮಂ ॥ ಅಸಮಾಪ್ತೇ ಕ್ರತೌ ತಸ್ಮಿನ್ ಸ್ವಕಾರ್ಯ ಮಭಿಪದ್ಯತಾಂ ॥ ೭ ॥ ಯೇಚೈನಮಭಿವರ್ತಂತೇ ಯಾಚಿತಾರಇತಸ್ತತಃ ॥ ಯಚ್ಚ ಯತ್ರಯಥಾವಚ್ಚ ಸರ್ವಂ ತೇಭ್ಯಃ ಪ್ರಯ

ಗಣಾನ್ - ದೇವತೆಗಳ ಕೂಟಗಳನ್ನು, ನಿರ್ಜಿತ್ಯ - ಜಯಿಸಿ, ತ್ರಿಷು- ಮೂರಾದ, ಲೋಕೇಷು-ಲೋಕ ಗಳಲ್ಲಿ, ವಿಶ್ರುತಃ - ಪ್ರಸಿದ್ಧನಾಗಿ, ತದ್ರಾಜ್ಯಂ ಆ ರಾಜ್ಯವನ್ನು, ಕಾರಯಾಮಾಸ - ಮಂತ್ರಿಗಳಿಂ ದಾಳಿಸಿದನು ॥೫॥ ಬಲೇಸ್ತು - ಬಲಿಚಕ್ರವರ್ತಿಯು, ಯಜಮಾನಸ್ಯ - ಯಜ್ಞಮಾಡುತ್ತಿರಲು, ಸಾಗ್ನಿ ಪುರೋಗಮಾಃ - ಅಗ್ನಿಯೇ ಮೊದಲಾದವರಿಂದ ಕೂಡಿದ, ದೇವಾಃ- ದೇವತೆಗಳು, ಸ್ವಯಂ ಚೈವ - ತಾನೇ, ಸಮಾಗಮ್ಯ - ಬಂದು, ಇಹಾಶ್ರಮೇ - ಈ ಆಶ್ರಮದಲ್ಲಿ, ವಿಷ್ಣುಂ-ಶ್ರೀ ಮಹಾ ವಿಷ್ಣುವನ್ನು ಕುರಿತು, ಊಚುಃ - ಹೇಳಿದರು, ॥ ೬ ॥ ಹೇವಿಷ್ಣೋ- ಎಲೈ ನಾರಾಯಣನ, ವೈರೋ ಚನಿಃ – ವಿರೋಚನ ಪುತ್ರನಾದ, ಬಲಿಃ - ಬಲಿಚಕ್ರವರ್ತಿಯು, ಉತ್ತಮಂ - ಉತ್ತಮವಾದ, ಯಜ್ಞಂ – ಯಜ್ಞವನ್ನು, ಯಜತೇ - ಮಾಡುತ್ತಾನೆ, ತಸ್ಮಿನ್ಕ್ರತೌ - ಆ ಯಜ್ಞವು, ಅಸಮಾಪ್ತೇ- ಸಂಪೂರ್ಣವಾಗದೇ ಇರುವಾಗಲೇ, ಸ್ವಕಾರ್ಯಂ, ಸ್ವ - ಸ್ವಕೀಯವಾದ, ಕಾರ್ಯಂ-ದೇವಕಾರ್ಯವು, ಅಭಿಪದ್ಯತಾಂ - ಸಂಪಾದಿಸಲ್ಪಡಲಿ, ॥ ೭ ॥ ಯೇಚ - ಯಾರು, ಏನಂ - ಈ ಬಲಿಚಕ್ರವರ್ತಿಯನ್ನು ಕುರಿತು, ಯತ್ರ- ಯಾವ ಧನ, ಕನಕ, ವಸ್ತು, ವಾಹನಾದಿ ಪದಾರ್ಥಗಳಲ್ಲಿ, ಯಚ್ಚ-ಯಾವ ವಸ್ತು ವನ್ನು, ಯಾಚಿತಾರಃ - ಬೇಡುತ್ತಿರುವರಾಗಿ, ಇತಸ್ತತಃ - ಈ ದೇಶ ಪರದೇಶಗಳಿಂದ, ಅಭಿವ ರ್ತಂತೇ - ಬರುತ್ತಾರೆಯೋ, ತೇಭ್ಯಃ ಅವರಿಗೆ, ತತ್ಸರ್ವಂ- ಅವೆಲ್ಲವನ್ನೂ, ಯಥಾವಚ್ಚ-ಶಾಸ್ತ್ರೋ ಕ್ತಪ್ರಕಾರವಾಗಿ, ಪ್ರಯಚ್ಛತಿ - ಕೊಡುತ್ತಾನೆ, ಹೇವಿಷ್ಣೋ-ಎಲೈ ಶ್ರೀಮನ್ನಾರಾಯಣನ, ಸತ್ವಂ- ಅಂತಹ ನೀನು, ಸುರಹಿತಾರ್ಥಾಯ - ದೇವತೆಗಳ ಹಿತಕ್ಕೋಸುಗ, ಮಾಯಾಯೋಗಂ - ಮಾಯಾ ಶಕ್ತಿಯ ಸಂಬಂಧವನ್ನು, ಉಪಾಶ್ರಿತಃ - ಹೊಂದಿ, ವಾಮನತ್ವಂ – ವಾಮನ ರೂಪವನ್ನು, ಗತಃ-

॥ ೧-೩॥ ಹಿಂದಲು ವಿರೋಚನ ಮಗನಾದ ಬಲಿಯು, ದೇವತೆಗಳನ್ನೂ, ಮರುದ್ಗಣ ಗಳನ್ನೂ, ದೇವೇಂದ್ರನನ್ನೂ ಗೆದ್ದು, ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗಿ, ಆ ಇಂದ್ರನ ಅಮರಾವತಿಯನ್ನು ತನ್ನವರಿಂದ ಆಳಿಸಿದನು. ॥ ೪-೫ ॥ ಇಂತಿರುವ ಈ ಬಲಿರಾಜನು ಯಾಗಮಾಡುತ್ತಿರಲು ಅಗ್ನಿಯೇ ಮೊದಲಾದ ದೇವತೆಗಳೆಲ್ಲರೂ ಈ ಆಶ್ರಮದಲ್ಲಿ ವಾಸಮಾ ಡುತ್ತಿದ್ದ ವಿಷ್ಣುವಿನ ಬಳಿಸಾರಿ "ಎಲೈ ವಿಷ್ಣುವೇ ! ಬಲಿಚಕ್ರವರ್ತಿಯು ಮಹತ್ತರವಾದ ಯಜ್ಞವನ್ನು ಮಾಡುತ್ತಿರುವನು. ಈ ಯಜ್ಞಕಾರ್ಯವು ಮುಗಿವುದರೊಳಗಾಗಿ ದೇವತಾಕಾರ್ಯವು ಮುಗಿಸಲ್ಪಡಲಿ. ಈ ಬಲಿರಾಯನು ದೇಶದೇಶಗಳಿಂದ ಬಂದು ಏನೇನನ್ನು ಯಾವ ಯಾವಸ್ಥಳಗಳಲ್ಲಿ ಯಾಚಿಸುತ್ತಿರುವರೋ ಅವೆಲ್ಲವನ್ನೂ ಕೊಡುತ್ತಿರುವನು.

ಚ್ಛತಿ॥೮॥ ಸತ್ವಂಸುರಹಿತಾರ್ಥಾಯ ಮಾಯಾಯೋಗ ಮುಪಾಶ್ರಿತಃ॥ ವಾಮನತ್ವಂ ಗತೋ ವಿಷ್ಣೋ ಕುರು ಕಲ್ಯಾಣಮುತ್ತಮಂ ॥ ೯ ॥ ಏತಸ್ಮಿನ್ನಂತರೇ ರಾಮ ಕಾಶ್ಯಪೋಗ್ನಿ ಸಮಪ್ರಭಃ ॥ ಅದಿತ್ಯಾ ಸಹಿತೋ ರಾಮ ದೀಪ್ಯಮಾನ ಇವೌಜಸಾ॥೧೦॥ದೇವೀಸಹಾಯೋ ಭಗವಾನ್ ದಿವ್ಯಂ ವರ್ಷಸಹಸ್ರಕಂ॥ವ್ರತಂ ಸಮಾಪ್ಯ ವರದಂ ತುಷ್ಟಾವ ಮಧುಸೂದನಂ ॥೧೧॥ ತಪೋಮಯಂ ತಪೋ ರಾಶಿಂ ತಪೋಮೂರ್ತಿಂ ತಪಾತ್ಮಕಂ ॥ ತಪಸಾ ತ್ವಾಂ ಸುತಪ್ತೇನ ಪಶ್ಯಾಮಿ ಪುರುಷೋತ್ತಮಂ ॥ ೧೨ ॥ ಶರೀರೇ ತವ ಪಶ್ಯಾಮಿ ಜಗತ್ಸರ್ವಮಿದಂ

---

ಹೊಂದಿ, ಉತ್ತಮಂ - ಸರ್ವೋತ್ತಮವಾದ, ಕಲ್ಯಾಣಂ- ಶುಭವಾದ ದೇವಕಾರ್ಯವನ್ನು, ಕುರು- **ಮಾಡು** ॥ ೯ ॥ ಹೇರಾಮ - ಎಲೈ ಶ್ರೀರಾಮನೇ, ಏತಸ್ಮಿನ್ನಂತರೇ - ಈ ಮಧ್ಯದಲ್ಲಿ, ಅಗ್ನಿಸಮ ಪ್ರಭಃ - ಯಜ್ಞೇಶ್ವರನಿಗೆ ಸಮಾನವಾದ ಕಾಂತಿಯುಳ್ಳ, ಅದಿತ್ಯಾ - ಅದಿತಿದೇವಿಯೊಡನೆ, ಸಹಿತಃ- **ಕೂಡಿ**, ಓಜಸಾ - ತೇಜಸ್ಸಿನಿಂದ ದೀಪ್ಯಮಾನಇವ ಪ್ರಜ್ವಲಿಸುವಂತಿರುವ, ಭಗವಾನ್ ಪೂಜ್ಯನಾದ, ಕಾಶ್ಯಪಃ - ಕಾಶ್ಯಪ ಋಷಿಯು, ದಿವ್ಯಂ - ದೇವಮಾನದಿಂದ ಲಬ್ಧವಾದ, ವರ್ಷಸಹಸ್ರಕಂ- ಸಾವಿರ ವರ್ಷಗಳ ಪ್ರಮಾಣವುಳ್ಳ, ವ್ರತಂ - ನಿಯಮವನ್ನು, ಸಮಾಪ್ಯ-ಪೂರ್ತಿಗೊಳಿಸಿ, ದೇವೀ (೧) ಸಹಾಯಃ - ಅದಿತಿ ದೇವಿಯೇ ಸಹಾಯವಾಗಿ ಉಳ್ಳವನಾಗಿ, ವರದಂ - ವರಪ್ರದಾಯಕನಾದ, ಮಧುಸೂದನಂ - ಶ್ರೀ ಮಹಾವಿಷ್ಣುವನ್ನು, ತುಷ್ಟಾವ - ಸ್ತೋತ್ರಮಾಡಿದನು, ॥೧೦-೧೧॥ ತಪೋ ಮಯಂ-(ಮ) ಜ್ಞಾನಪ್ರಚುರನಾದ, (ಗೋ) ತಪೋಮಯಂ - ತಪಸ್ಸಿನಿಂದಾ ಆರಾಧ್ಯನಾದ, ತಪೋರಾಶಿಂ - ತೇಜೋರಾಶಿ ಸ್ವರೂಪನಾದ, ತಪೋಮೂರ್ತಿಂ - ಜ್ಞಾನರೂಪವಾದ ವಿಗ್ರಹವುಳ್ಳ, ತಪಾತ್ಮಕಂ - (ಮುನಿಭಾವಪ್ರಕಾಶಿಕೆ) ಜ್ಞಾನಸ್ವರೂಪಿಯಾದ, ಪುರುಷೋತ್ತಮಂ- ಪುರುಷಶ್ರೇಷ್ಠನಾದ, ತ್ವಾಂ - ನಿನ್ನನ್ನು. ಸುತಪ್ತೇನ - ಸಾಂಗವಾಗಿ ಮಾಡಲ್ಪಟ್ಟ, ತಪಸಾ - ವ್ರತದಿಂದ, ಪಶ್ಯಾಮಿ - ನೋಡುತ್ತೇನೆ, ॥ ೧೨ ॥ ಹೇಪ್ರಭೋ - ಎಲೈ ಸ್ವಾಮಿಯೆ, ತವ - ನಿನ್ನ, ಶರೀರೇ-

---

ಆದುದರಿಂದ ಎಲೈ ನಾರಾಯಣಮೂರ್ತಿಯೇ! ಶರಣಾಗತರಕ್ಷಕನಾದ ನೀನು ದೇವತೆಗಳ ಹಿತಕ್ಕೋಸುಗ ಮಾಯಾಯೋಗವನ್ನಾಶ್ರಯಿಸಿ ವಾಮನರೂಪವನ್ನು ತಾಳಿ ರಾಜ್ಯಭ್ರಷ್ಟರಾದ ನಮಗೆ ಮಂಗಳವನ್ನುಂಟುಮಾಡು." ಎಂದು ಬೇಡಿದರು. ॥ ೬-೯ ॥ ಕೇಳಯ್ಯಾ ರಾಮಚಂದ್ರ ! ಈ ಮಧ್ಯದಲ್ಲಿ ಅಗ್ನಿ ಸಮಾನವಾದ ತೇಜಸ್ಸನ್ನುಳ್ಳ ಕಾಶ್ಯಪನು ಅದಿತಿದೇವಿಯೊಡಗೂಡಿ ದಿವ್ಯಸಹಸ್ರ ವರ್ಷಗಳ ತಪಸ್ಸನ್ನಾಚರಿಸಿ ಪ್ರಕಾಶಿಸುತ್ತ ಆ ವ್ರತವು ಪೂರ್ಣವಾದ ಬಳಿಕ ಪ್ರತ್ಯಕ್ಷನಾದ ಮಹಾವಿಷ್ಣುವನ್ನೀರೀತಿ ಸ್ತುತಿಸಿದನು. "ಓ ಸ್ವಾಮಿಯೇ ! ತಪೋಮಯನಾಗಿಯೂ, ತೇಜೋರಾಶಿಯಾಗಿಯೂ, ತಪೋವಿಕಾರವಾದ ದೇಹಧಾರಿಯೂ, ತಪಾತ್ಮಕವಾದ ಧೈರ್ಯವುಳ್ಳವನಾಗಿಯೂ, ಜ್ಞಾನ ಸ್ವರೂಪನೂ, ಪುರುಷೋತ್ತಮನೂ ಆದ ನಿನ್ನನ್ನು ತಪೋಮಯವಾದ ದೃಷ್ಟಿಯಿಂದಲೇ ನೋಡಿದವನಾದೆನು. ॥ ೧೦-೧೨ ॥

---

ಟಿಪ್ಪಣಿ (೧) ಈ ಶ್ಲೋಕದಲ್ಲಿ ಅದಿತ್ಯಾ ಸಹಿತಃ-ದೇವೀಸಹಾಯಃ-ಎಂಬೆರಡು ಪದಗಳಿಗೆ ಪೌನರುಕ್ತ್ಯ ದೋಷಪರಿಹಾರಾರ್ಥವಾಗಿ, ಕೆಲವರು ಹೀಗರ್ಥಮಾಡುತ್ತಾರೆ ಅದಿತ್ಯಾಃ - ಅದಿತಿ ದೇವಿಗೆ, ಹಿತಃ - ಹಿತಕರನಾದ, ಸಃ-ಆ ಕಾಶ್ಯಪನು ಎಂದು.

ಪ್ರಭೋ || ತ್ವಮನಾದಿರನಿರ್ದೇಶ್ಯ ಸ್ತ್ವಾಮಹಂ ಶರಣಂಗತಃ ||೧೩|| ತಮು
ವಾಚ ಹರಿಃ ಪ್ರೀತಃ ಕಾಶ್ಯಪಂ ಧೂತಕಲ್ಮಷಂ|| ವರಂ ವರಯ ಭದ್ರಂತೇ ವರಾ
ರ್ಹೋಽಸಿ ಮತೋ ಮಮ ||೧೪|| ತಚ್ಛ್ರುತ್ವಾ ವಚನಂ ತಸ್ಯ ಮಾರೀಚಃ
ಕಾಶ್ಯಪೋಽಬ್ರವೀತ್ ||೧೫|| ಅದಿತ್ಯಾ ದೇವತಾನಾಂಚ ಮಮಚೈವಾನು
ಯಾಚತಃ|| ವರಂ ವರದ ಸುಪ್ರೀತೋ ದಾತುಮರ್ಹಸಿ ಸುವ್ರತ||೧೬||ಪುತ್ರತ್ವಂ
ಗಚ್ಛ ಭಗವನ್ನದಿತ್ಯಾ ಮಮಚಾನಘ || ಭ್ರಾತಾಭವ ಯವೀಯಾಂಸ್ತ್ವಂ

---

ಶರೀರದಲ್ಲಿ, ಇದಂ- ಈ ಪರಿದೃಶ್ಯಮಾನವಾದ, ಸರ್ವಂ - ಸಮಸ್ತವಾದ, ಜಗತ್-ಲೋಕವನ್ನು, ಪಶ್ಯಾಮಿ - ನೋಡುತ್ತೇನೆ. ತ್ವಂ-ನೀನು, ಅನಾದಿಃ - ಉತ್ಪತ್ತಿರಹಿತನು, ಅನಿರ್ದೇಶ್ಯಃ - ಇಷ್ಟರವನೆಂದು ತಿಳಿಯಲಸದಳನು, ತ್ವಾಂ-ನಿನ್ನನ್ನು, ಅಹಂ- ನಾನು,ಶರಣಂ ಶರಣಾಗತ ರಕ್ಷಕನನ್ನಾಗಿ, ಗತಃ - ಹೊಂದಿರುವೆನು, || ೧೩ || ಹರಿಃ - ಶ್ರೀಮಹಾವಿಷ್ಣುವು, ಪ್ರೀತಃ- ಸಂತುಷ್ಟನಾಗಿ, ಧೂತಕಲ್ಮಷಂ - ಕೊಡಹಲ್ಪಟ್ಟ ಪಾಪಗಳುಳ್ಳ, ತಂಕಾಶ್ಯಪಂ - ಆ ಕಾಶ್ಯಪ ಋಷಿಯನ್ನು ಕುರಿತು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಮಮ - ನನಗೆ, ವರಾರ್ಹಃ - ವರದಾನಕ್ಕೆ ಯೋಗ್ಯನಾದವನಾಗಿ, ಮತಃ - ಯಿಷ್ಟನು. ಅಸಿ - ಆಗಿರುವೆ, ವರಂ - ವರವನ್ನು, ವರಯ - ಬೇಡು, ಇತಿ - ಎಂದು, ಉವಾಚ - ಹೇಳಿದನು || ೧೪ || ತಸ್ಯ - ಆ ಮಹಾವಿಷ್ಣುವಿನ, ತದ್ವಚನಂ - ಆ ಮಾತನ್ನು, ಶ್ರುತ್ವಾ ಕೇಳಿ, ಮಾರೀಚಃ - ಮರೀಚ ಪುತ್ರನಾದ, ಕಾಶ್ಯಪಃ - ಕಶ್ಯಪಋಷಿಯು, ಅಬ್ರವೀತ್ - ನುಡಿದನು, ಹೇಸುವ್ರತ - (ಗೋ) ಎಲೈ ಭಕ್ತಾನುಗ್ರಹರೂಪ ವ್ರತವುಳ್ಳವನೆ, ಹೇವರದ - ಎಲೈ ವರಪ್ರದಾಯಕನ, ಅದಿತ್ಯಾಃ - ಅದಿತಿದೇವಿಗೂ, ದೇವತಾಂಚ- ದೇವತೆಗಳಿಗೂ, ಅನುಯಾಚತಃ-ಬೇಡುತ್ತಿರುವ, ಮಮಚೈವ - ನನಗೂ, ಸುಪ್ರೀತಃ- ಸಂತುಷ್ಟನಾಗಿ, ವರಂ - ಅಭೀಷ್ಟವನ್ನು, ದಾತುಂ - ಕೊಡಲು, ಅರ್ಹಸಿ - ಅರ್ಹನಾಗು, ||೧೬|| ಹೇಭಗವನ್ - ಎಲೈ ಷಡ್ಗುಣೈಶ್ವರ್ಯ ಸಂಪನ್ನನೆ, ಹೇಅನಘ - ಎಲೈ ನಿರ್ದೋಷನೇ, ಹೇಅಸುರಸೂದನ - ದೈತ್ಯಸಂಹಾರಕನ! ತ್ವಂ - ನೀನು, ಅದಿತ್ಯಾಃ- ಅದಿತಿದೇವಿಗೂ, ಮಮಚ - ನನಗೂ, ಪುತ್ರತ್ವಂ - ಪುತ್ರಭಾವವನ್ನು, ಗಚ್ಛ - ಹೊಂದು, ತ್ವಂ - ನೀನು, ಶಕ್ರಸ್ಯ - ದೇವೇಂದ್ರನಿಗೆ, ಯವೀಯಾನ್ - ಕನಿಷ್ಠನಾದ, ಭ್ರಾತಾ - ತಮ್ಮನು, ಭವ - ಆಗು, ಶೋಕಾರ್ತಾನಾಂ - ದುಃಖಿತ

---

ದೇವ ! ನಿನ್ನ ಶರೀರದಲ್ಲಿ ಇಡೀ ಜಗತ್ತನ್ನೇ ನೋಡುತ್ತಿರುವೆನು. ನೀನೇ ಪುರಾಣಪುರುಷನು. ಉತ್ಪತ್ತಿರಹಿತನೂ ನೀನೇ, ನೀನು ತೋರಿಸಲಸಾಧ್ಯನಾಗಿರುವೆ, ಇಂತಿರುವ ನಿನ್ನನ್ನು ನಾನು ಶರಣಾಗತನನ್ನಾಗಿ ಹೊಂದಿರುವೆನು" ||೧೩|| ಕಾಶ್ಯಪ ಮುನಿಯಿಂತು ಪ್ರಾರ್ಥಿಸಲು, ಜಗತ್ಪತಿಯಾದ ಮಹಾ ವಿಷ್ಣುವು ಸಂತಸಗೊಂಡು ಪಾಪರಹಿತನಾದ ಆತನನ್ನು ಕುರಿತು, "ಮುನಿಯೇ ! ನಿನಗೆ ಬೇಕಾದ ವರವನ್ನು ಬೇಡು, ನೀನು ವರಾರ್ಹನಾಗಿರುವೆ" ಎಂದನು. ಆ ಬಳಿಕ ಮರೀಚ ಪುತ್ರನಾದ ಕಾಶ್ಯಪನು ಮಹಾ ವಿಷ್ಣುವನ್ನು ಕುರಿತು, "ಎಲೈ ವರಪ್ರದಾಯಕನಾದ ನಾರಾಯಣನೇ! ದೇವತೆಗಳಿಗೂ ನನಗೂ ವರವನ್ನು ಕೊಡುವವನೇ ಆದರೆ ಅದಿತಿ ದೇವಿಯಲ್ಲಿ ನನಗೆ ಪುತ್ರಭಾವವನ್ನೂ,

ಶಕ್ರಸ್ಯಾಸುರಸೂದನ || ಶೋಕಾರ್ತಾನಾಂ ತು ದೇವಾನಾಂ ಸಾಹಾಯ್ಯಂ ಕರ್ತುಮರ್ಹಸಿ || ೧೭ || ಅಯಂ ಸಿದ್ಧಾಶ್ರಮೋ ನಾಮ ಪ್ರಸಾದಾತ್ತೇ ಭವಿಷ್ಯತಿ|| ಸಿದ್ಧೇಕರ್ಮಣಿ ದೇವೇಶ ಉತ್ತಿಷ್ಠ ಭಗವನ್ನಿತಃ||೧೮||ಅಥ ವಿಷ್ಣು ರ್ಮಹಾತೇಜಾ ಅದಿತ್ಯಾಂ ಸಮಜಾಯತ || ವಾಮನಂ ರೂಪಮಾಸ್ಥಾಯ ವೈರೋಚನಿಮುಪಾಗಮತ್ ||೧೯|| ತ್ರೀನ್ಕ್ರಮಾನಥಭಿಕ್ಷಿತ್ವಾ ಪ್ರತಿಗೃಹ್ಯಚ ಮಾನದಃ|| ಆಕ್ರಮ್ಯ ಲೋಕಾನ್ ಲೋಕಾತ್ಮಾ ಸರ್ವಭೂತ ಹಿತೇರತಃ ||೨೦|| ಮಹೇಂದ್ರಾಯ ಪುನಃ ಪ್ರಾದಾನ್ನಿಯಮ್ಯ ಬಲಿಮೋಜಸಾ || ತ್ರೈಲೋಕ್ಯಂ

---

ರಾದ, ದೇವಾನಾಂತು - ದೇವತೆಗಳಿಗೆ, ಸಹಾಯ್ಯಂ - ಸಹಾಯವನ್ನು, ಕರ್ತುಂ - ಮಾಡಲು, ಅರ್ಹಸಿ - ಯೋಗ್ಯನಾಗು, || ೧೭ || ತೇ - ನಿನ್ನ, ಪ್ರಸಾದಾತ್ - ಅನುಗ್ರಹದಿಂದ, ಅಯಂ- ಇದು, ಸಿದ್ಧಾಶ್ರಮೋನಾಮ - ಸಿದ್ಧಾಶ್ರಮವೆಂದು ಪ್ರಸಿದ್ಧವಾದುದು, ಭವಿಷ್ಯತಿ ಆಗುವದು, ಹೇದೇವೇಶ - ಎಲೈ ದೇವೋತ್ತಮನೆ, ಹೇಭಗವನ್ - ಎಲೈ ಭಗವಂತನೆ, ಕರ್ಮಣಿ - ನನ್ನ ತಪೋರೂಪ ವ್ಯಾಪಾರವು, ಸಿದ್ಧೇ - ಸಫಲವಾದ ಮೇಲೆ, ಇತಃ - ಈ ಆಶ್ರಮದಿಂದ, ಉತ್ತಿಷ್ಠ- ಹೊರಡು, || ೧೮ || ಅಥ - ಬಳಿಕ, ಮಹಾತೇಜಾಃ - ಮಹಾಮಾಹಾತ್ಮ್ಯವುಳ್ಳ, ವಿಷ್ಣುಃ-ಶ್ರೀ ನಾರಾಯಣನು, ಅದಿತ್ಯಾಂ - ಅದಿತಿಯಲ್ಲಿ, ಸಮಜಾಯತ - ಹುಟ್ಟಿದನು, ವಾಮನಂ - ಕುಬ್ಜ ವಾದ, ರೂಪಂ - ಆಕಾರವನ್ನು, ಆಸ್ಥಾಯ - ಹೊಂದಿ, ವೈರೋಚನಿಂ - ವಿರೋಚನ ಪುತ್ರನಾದ ಬಲಿಯನ್ನು ಕುರಿತು, ಉಪಾಗಮತ್ - ಹೊಂದಿದನು || ೧೯ || ಅಥ - ಬಳಿಕ, ಸರ್ವಭೂತ ಹಿತೇ - ಸಮಸ್ತ ಪ್ರಾಣಿಗಳ ಹಿತಕಾರ್ಯದಲ್ಲಿ, ರತಃ - ಆಸಕ್ತನಾದ, ಮಹಾತೇಜಾಃ - ಮಹಾ ತೇಜಸ್ವಿಯಾದ, ಮಾನದಃ - ಬಹುಮಾನ ಪ್ರದಾಯಕನಾದ ವಾಮನ ಮೂರ್ತಿಯು, ತ್ರೀನ್‌ಕ್ರಮಾನ್ - ಮೂರು ಹಜ್ಜೆಗಳನ್ನು, ಭಿಕ್ಷಿತ್ವಾ - ಯಾಚಿಸಿ, ಪ್ರತಿಗೃಹ್ಯಚ - ಪ್ರತಿಗ್ರಹವನ್ನು ಮಾಡಿ, ಲೋಕಾತ್ಮಾ - ಸರ್ವಲೋಕಗಳೂ ತನ್ನ ಶರೀರದಲ್ಲಿ ವುಳ್ಳವನಾದ ಕಾರಣ, ಲೋಕಾನ್- ಲೋಕಗಳನ್ನು, ಆಕ್ರಮ್ಯ - ಆಕ್ರಮಿಸಿ, ಮಹೇಂದ್ರಾಯ - ದೇವೇಂದ್ರನಿಗೆ, ಪುನಃ - ಮರಳಿ, ಪ್ರಾದಾತ್ - ಕೊಟ್ಟನು, ಓಜಸಾ - ಪರಾಕ್ರಮದಿಂದ, ಬಲಿಂ ಬಲಿಚಕ್ರವರ್ತಿಯನ್ನು, ನಿಯಮ್ಯ- ಬಂಧಿಸಿ, ತ್ರೈಲೋಕ್ಯಂ - ಲೋಕತ್ರಯವನ್ನು, ಪುನಃ - ಮತ್ತೆ, ಶಕ್ರವಶಂ - ಇಂದ್ರನಿಗೆ

---

ಇಂದ್ರನಿಗೆ ಭ್ರಾತೃಭಾವವನ್ನೂ ತಾಳಿ, ಶೋಕಸಂತಪ್ತರಾದ ದೇವತೆಗಳಿಗೆ ಸಹಾಯ ಕನಾಗು. ||೧೪-೧೭|| ದೇವ ! ಈ ಆಶ್ರಮವು ನಿನ್ನ ಅನುಗ್ರಹದಿಂದ ಸಿದ್ಧಾಶ್ರಮ ವೆಂದು ಪ್ರಸಿದ್ಧಿಯಾಗಲಿ. ನನ್ನ ತಪಸ್ಸಿನರೂಪವಾದ ಕರ್ಮವು ಮುಗಿದೊಡನೆಯೇ ಇಲ್ಲಿಂದ ತೆರಳುವವನಾಗು" ಎಂದನು. || ೧೮ || ಅನಂತರ ಭೂತಭಾವನನಾದ ಮಹಾವಿಷ್ಣುವು ಅದಿತಿದೇವಿಯಲ್ಲಿ ಜನಿಸಿ, ವಾಮನ ರೂಪವನ್ನು ತಾಳಿ, ಬಲಿಯಿದ್ದೆಡೆಗೆ ತೆರಳಿ, ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಬೇಡಿ, ಸ್ವೀಕರಿಸಿ, ಸ್ವಮಾಯೆಯಿಂದಲೇ ಬೆಳೆದು ಮೂರು ಲೋಕಗಳನ್ನೂ ಆಕ್ರಮಿಸಿ, ದೇವೇಂದ್ರನಿಗೆ ಮರಳಿ ಅವುಗಳನ್ನು



ಬಲಿ ನಿಯಮನ

ಸ ಮಹಾತೇಜಾ ಶ್ಚಕ್ರೇ ಶಕ್ರವಶಂಪುನಃ||೨೧|| ತೇನೈಷ ಪೂರ್ವಮಾಕ್ರಾಂತ ಆಶ್ರಮಶ್ಶ್ರಮನಾಶನಃ || ಮಯಾಪಿ ಭಕ್ತ್ಯಾ ತಸ್ಯೈಷ ವಾಮನಸ್ಯೋಪ ಭುಜ್ಯತೇ|| ೨೨ || ಏತಮಾಶ್ರಮಮಾಯಾಂತಿ ರಾಕ್ಷಸಾ ವಿಘ್ನಕಾರಿಣಃ || ಅತ್ರೈವ ಪುರುಷವ್ಯಾಘ್ರ ಹಂತವ್ಯಾ ದುಷ್ಟಚಾರಿಣಃ ||೨೩|| ಅದ್ಯ ಗಚ್ಛಾ ಮಹೇ ರಾಮ ಸಿದ್ಧಾಶ್ರಮಮನುತ್ತಮಂ || ತದಾಶ್ರಮ ಪದಂ ತಾತ ತವಾಪ್ಯೇತದ್ಯಥಾ ಮಮ || ೨೪ || ಪ್ರವಿಶನ್ನಾಶ್ರಮಪದಂ ವ್ಯರೋಚತ ಮಹಾಮುನಿಃ || ಶಶೀವ ಗತ ನೀಹಾರಃ ಪುನರ್ವಸು ಸಮನ್ವಿತಃ || ೨೫ ||

---

ಸ್ವಾಧೀನವನ್ನಾಗಿ, ಚಕ್ರೇ - ಮಾಡಿದನು. ||೨೧|| ತೇನ - ಆ ವಾಮನ ಮೂರ್ತಿಯಿಂದ, ಏಷಃ- ಈ, ಆಶ್ರಮಃ - ಆಶ್ರಮವು, ಪೂರ್ವಂ - ಪೂರ್ವದಲ್ಲಿ, ಆಕ್ರಾಂತಃ - ಆಕ್ರಮಿಸಲ್ಪಟ್ಟಿತು, ಶ್ರಮ ನಾಶನಃ - ಶ್ರಮಪರಿಹಾರಕವಾದ, ತಸ್ಯವಾಮನಸ್ಯ - ಆ ವಾಮನಮೂರ್ತಿಯ, ಏಷಃ - ಈ ಆಶ್ರ ಮವು, ಮಯಾಪಿ ನನ್ನಿಂದಲೂ, ಭಕ್ತ್ಯಾ - ಭಕ್ತಿಯಿಂದ, ಉಪಭುಜ್ಯತೇ - ಉಪಭುಕ್ತವಾಗಿರು ವುದು. || ೨೨ || ಹೇಪುರುಷವ್ಯಾಘ್ರ - ಎಲೈ ಪುರುಷಶ್ರೇಷ್ಠನೆ, ಏತಮಾಶ್ರಮಂ - ಈ ಆಶ್ರ ಮವನ್ನು ಕುರಿತು, ವಿಘ್ನಕಾರಿಣಃ - ವಿಘ್ನಕಾರಿಗಳಾದ, ರಾಕ್ಷಸಾಃ - ಮಾರೀಚಾದಿ ರಾಕ್ಷಸರು, ಆಯಾಂತಿ -ಬರುತ್ತಾರೆ, ದುಷ್ಟಚಾರಿಣಃ - ದುರ್ವ್ಯಾಪಾರಿಗಳಾದ ರಾಕ್ಷಸರು, ಅತ್ರೈವ-ಇಲ್ಲಿಯೇ, ತ್ವಯಾ - ನಿನ್ನಿಂದ, ಹಂತವ್ಯಾಃ - ಹೊಡಿಯಲ್ಪಡತಕ್ಕವರು. || ೨೩ || ಹೇರಾಮ - ಎಲೈ ರಾಮನೆ, ಹೇತಾತ - ಎಲೈ ತಂದೆಯೆ, ಅದ್ಯ - ಈಗ, ಅನುತ್ತಮಂ - ಸರ್ವೋತ್ತಮವಾದ, ಸಿದ್ಧಾ ಶ್ರಮಂ - ಸಿದ್ಧಾಶ್ರಮವನ್ನು ಕುರಿತು ಗಚ್ಛಾಮಹೇ - ಹೋಗುವ, ತದಾಶ್ರಮಪದಂ ಆ ಆಶ್ರ ಮಸ್ಥಳವು, ಮಮ - ನನಗೆ, ಯಥಾ - ಹೇಗೆಯೋ, ತವಾಪಿ - ನಿನಗೂ, ಏತತ್ - ಇದು, ತಥೈವ- ಹಾಗೆಯೇ || ೨೪ || ಆಶ್ರಮಪದಂ - ಆಶ್ರಮಸ್ಥಾನವನ್ನು, ಪ್ರವಿಶ್ಯ - ಪ್ರವೇಶಿಸಿದ, ಮಹಾ ಮುನಿಃ - ಮಹರ್ಷಿಯಾದ ವಿಶ್ವಾಮಿತ್ರನು, ಗತನೀಹಾರಃ, ಗತ - ಹೋದ, ನೀಹಾರಃ-ಮಂಜುಳ್ಳ, ಪುನರ್ವಸು ಸಮನ್ವಿತಃ - ಪುನರ್ವಸೂ ನಕ್ಷತ್ರದಿಂದ ಕೂಡಿರುವ, ಶಶೀವ- ಚಂದ್ರನಂತೆ, ವ್ಯರೋಚತ- ಹೊಳೆಯುತ್ತಿದ್ದನು || ೨೫ || ಸಿದ್ಧಾಶ್ರಮವಾಸಿನಃ - ಸಿದ್ಧಾಶ್ರಮ ನಿವಾಸಿಗಳಾದ, ಸರ್ವೇ- ಸಮಸ್ತರಾದ, ಮುನಯಃ - ಋಷಿಗಳು, ತಂ - ಆ ವಿಶ್ವಾಮಿತ್ರನನ್ನು, ದೃಷ್ಟ್ವಾ - ಕಂಡು, ಸಹಸಾ -ಜಾಗ್ರತೆಯಾಗಿ, ಉತ್ಪತ್ಯೋತ್ಪತ್ಯ - ಮೇಲಕ್ಕೆ ಎದ್ದು ಪ್ರತ್ಯುತ್ಥಾನಮಾಡಿ,ವಿಶ್ವಾಮಿತ್ರಂ-

---

ಕೊಟ್ಟವನಾದನು. ||೧೯-೨೧||"ವತ್ಸ! ಪೂರ್ವದಲ್ಲಿ ಈ ಆಶ್ರಮವು ಆ ವಾಮನರೂಪಿಯಾದ ವಿಷ್ಣುವಿನಿಂದ ಆಕ್ರಮಿಸಲ್ಪಟ್ಟದ್ದಿತು, ಅದು ಈಗ ನನ್ನಿಂದ ಭಕ್ತಿ ಪೂರ್ವಕವಾಗಿ ಸೇವಿಸ ಲ್ಪಡುತ್ತಿರುವುದು. ಎಲೈ ಪುರುಷಶ್ರೇಷ್ಠನೇ ! ಯಜ್ಞಭಂಗವನ್ನಾಚರಿಸುವ, ರಾಕ್ಷಸರು ಈ ಆಶ್ರಮವನ್ನು ಕುರಿತು ಬರುವರು, ಆಪಾಪಿಗಳನ್ನಿಲ್ಲಿಯೇ ಸಂಹರಿಸಬೇಕು. ಈ ಸಿದ್ಧಾ ಶ್ರಮವನ್ನೀಗಲೇ ಪ್ರವೇಶಿಸುವ, ಇದು ನನಗೆ ಹೇಗೆ ಭಕ್ತಿಗೆ ನೆಲೆಯಾಗಿರುವುದೋ ನಿನಗೂ ಅದೇ ರೀತಿಯಾಗಿರುವುದು" ಎಂದು ವಿಶ್ವಾಮಿತ್ರನು ನುಡಿದನು. ಇಂತು ನುಡಿದ ಆತನು ಮಂಜಿನಿಂದ ಬಿಡಲ್ಪಟ್ಟವನೂ, ಪುನರ್ವಸೂ ನಕ್ಷತ್ರಯುಕ್ತನೂ,ಆದ

ತಂ ದೃಷ್ಟ್ವಾ ಮುನಯಸ್ಸರ್ವೇ ಸಿದ್ಧಾಶ್ರಮನಿವಾಸಿನಃ|| ಉತ್ಪತ್ಯೋತ್ಪತ್ಯ ಸಹಸಾ ವಿಶ್ವಾಮಿತ್ರಮಪೂಜಯನ್ ||೨೬|| ಯಥಾರ್ಹಂ ಚಕ್ರಿರೇ ಪೂಜಾಂ ವಿಶ್ವಾಮಿತ್ರಾಯ ಧೀಮತೇ || ತಥೈವ ರಾಜಪುತ್ರಾಭ್ಯಾಮಕುರ್ವನ್ನತಿಥಿ ಕ್ರಿಯಾಂ ||೨೭|| ಮುಹೂರ್ತಮಥ ವಿಶ್ರಾಂತೌ ರಾಜಪುತ್ರಾವರಿಂದಮೌ|| ಪ್ರಾಂಜಲೀ ಮುನಿಶಾರ್ದೂಲಮೂಚತೂ ರಘುನಂದನೌ || ೨೮ || ಅದ್ಯೈವ ದೀಕ್ಷಾಂ ಪ್ರವಿಶ ಭದ್ರಂ ತೇ ಮುನಿಪುಂಗವ|| ಸಿದ್ಧಾಶ್ರಮೋಽಯಂ ಸಿದ್ಧಸ್ಸ್ಯಾತ್ಸತ್ಯಮಸ್ತು ವಚಸ್ತವ ||೨೯|| ಏವಮುಕ್ತೋ ಮಹಾತೇಜಾ ವಿಶ್ವಾಮಿತ್ರೋ ಮಹಾನೃಷಿಃ||ಪ್ರವಿವೇಶ ತದಾ ದೀಕ್ಷಾಂ ನಿಯತೋ ನಿಯತೇಂದ್ರಿಯಃ ||೩೦||

---

ವಿಶ್ವಾಮಿತ್ರನನ್ನು, ಅಪೂಜಯನ್ - ಪೂಜಿಸಿದರು. || ೨೬ || ಧೀಮತೇ – ಜ್ಞಾನಸಂಪನ್ನನಾದ, ವಿಶ್ವಾಮಿತ್ರಾಯ - ವಿಶ್ವಾಮಿತ್ರನಿಗೆ, ಯಥಾರ್ಹಂ- ಶಾಸ್ತ್ರೋಕ್ತವಾಗಿ, ಪೂಜಾಂ ಪೂಜೆಯನ್ನು, ಚಕ್ರಿರೇ - ಮಾಡಿದರು, ತಥೈವ - ಹಾಗೆಯೇ, ರಾಜಪುತ್ರಾಭ್ಯಾಂ - ರಾಮಲಕ್ಷ್ಮಣರಿಬ್ಬರಿಗೂ, ಅತಿಥಿಕ್ರಿಯಾಂ - ಅತಿಥಿ ಸತ್ಕಾರವನ್ನು, ಅಕುರ್ವನ್ - ಮಾಡಿದರು || ೨೭ || ಅರಿಂದಮೌ- ಶತ್ರುಸಂಹಾರಕರಾದ, ರಾಜಪುತ್ರೌ - ಅರಸು ಮಕ್ಕಳಾದ ರಘುನಂದನೌ - ರಾಮಲಕ್ಷ್ಮಣರು, ಮುಹೂರ್ತಂ - ಸ್ವಲ್ಪಕಾಲ ವಿಶ್ರಾಂತೌ - ವಿಶ್ರಮಿಸಿಕೊಂಡು, ಅಥ - ಬಳಿಕ, ಪ್ರಾಂಜಲೀ- ಅಂಜಲಿಬದ್ಧರಾಗಿ, ಮುನಿಶಾರ್ದೂಲಂ-ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಊಚತುಃ- ಹೇಳಿದರು. ||೨೮|| ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೇ, ಅದ್ಯೈವ - ಈಗಲೆ, ದೀಕ್ಷಾಂ- ಯಜ್ಞಸಂಕಲ್ಪವನ್ನು, ಪ್ರವಿಶ - ಪ್ರವೇಶಿಸು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಅಯಂ ಸಿದ್ಧಾಶ್ರಮಃ-ಈ ಸಿದ್ಧಾಶ್ರಮವು, ಸಿದ್ಧಃ-ಅನ್ವರ್ಥ ನಾಮಧೇಯವಾದುದು, ಸ್ಯಾತ್-ಆಗಲಿ, ತವ - ನಿನ್ನ, ವಚಃ - ಮಾತು, ಸತ್ಯಂ - ಸಫಲವು, ಅಸ್ತು - ಆಗಲಿ, ಏವಂ - ಹೀಗೆ, ಉಕ್ತಃ- ಹೇಳಲ್ಪಟ್ಟ, ಮಹಾತೇಜಾಃ - ಮಹಾತೇಜೋವಂತನಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ನಿಯತಃ - ಶುದ್ಧವಾದ ಮನಸ್ಸುಳ್ಳವನಾಗಿ, ನಿಯತಃ - ನಿಯಮಿಸಲ್ಪಟ್ಟ, ಇಂದ್ರಿಯಃ- (ಗೋ) ಕರ್ಮೇಂದ್ರಿಯಗಳುಳ್ಳವನಾಗಿ, ದೀಕ್ಷಾಂ - ಯಜ್ಞದೀಕ್ಷೆಯನ್ನು,ಪ್ರವಿವೇಶ -ಹೊಕ್ಕನು || ೨೯ ೩೦|| ಕುಮಾರಾವಪಿ - ಬಾಲರಾದ ರಾಮಲಕ್ಷ್ಮಣರಿಗೂ, ತಾಂರಾತ್ರಿಂ - ಆ ರಾತ್ರಿಯಲ್ಲಿ, ಸುಸಮಾಹಿತಾ-

---

ಚಂದ್ರನಂತೆ ಹೊಳೆಯುತ್ತ ಆ ಆಶ್ರಮವನ್ನು ಪ್ರವೇಶಿಸಿದನು. ಆಗಲಾ ಸಿದ್ಧಾಶ್ರಮವಾಸಿಗಳಾದ ತಾಪಸರೆಲ್ಲರೂ ವಿಶ್ವಾಮಿತ್ರನನ್ನು ಕಂಡು ಪ್ರತ್ಯುತ್ಥಾನಾದಿಗಳಿಂದ ಪೂಜಿಸಿದುದೂ ಅಲ್ಲದೆ ರಾಜಪುತ್ರರಾದ ರಾಮ ಲಕ್ಷ್ಮಣರಿಗೂ ಅರ್ಘ್ಯಪಾದ್ಯಾದಿಗಳನ್ನಿತ್ತು ಅತಿಥಿಸತ್ಕಾರವನ್ನು ಮಾಡಿದರು ||೨೬ ೨೭|| ಬಳಿಕ ಆ ರಾಜಕುಮಾರರೀರ್ವರೂ ಸ್ವಲ್ಪ ವಿಶ್ರಮಿಸಿಕೊಂಡು ಮುನಿವರ್ಯನಾದ ವಿಶ್ವಾಮಿತ್ರನನ್ನು ಕುರಿತು,"ಮುನೀಶ್ವರಾ! ಈಗಲೇ ಯಾಗದೀಕ್ಷೆಯನ್ನು ವಹಿಸುವವನಾಗು, ನಿನಗೆ ಮಂಗಳವಾಗುವುದು. ಈ ಸಿದ್ಧಾಶ್ರಮವು ಹೆಸರಿಗೆ ತಕ್ಕುದಾಗಲಿ, ನಿನ್ನ ಮಾತು ಸತ್ಯವಾಗಲಿ"ಎಂದರು ಅವರಿಂತು ನುಡಿಯಲು ವಿಶ್ವಾಮಿತ್ರನು ಜಿತೇಂದ್ರಿಯನಾಗಿ ದೀಕ್ಷಾಬದ್ಧನಾದನು ||೨೮-೩೦|| ರಾಜಪುತ್ರರಾದ ರಾಮ ಲಕ್ಷ್ಮಣರು ಆರಾತ್ರಿಯಲ್ಲಿ

ಕುಮಾರಾವಪಿ ತಾಂ ರಾತ್ರಿಮುಷಿತ್ವಾ ಸು ಸಮಾಹಿತೌ ।। ಪ್ರಭಾತಕಾಲೇ ಚೋತ್ಥಾಯ ಪೂರ್ವಾಂ ಸಂಧ್ಯಾಮುಪಾಸ್ಯಚ ।।೩೦।। ಸ್ಪೃಷ್ಟೋದಕೌ ಶುಚೀ ಜಪ್ಯಂ ಸಮಾಪ್ಯ ನಿಯಮೇನಚ ।। ಹುತಾಗ್ನಿಹೋತ್ರಮಾಸೀನಂ ವಿಶ್ವಾಮಿತ್ರ ಮವಂದತಾಂ ।। ೩೨ ।।

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನತ್ರಿಂಶಸ್ಸರ್ಗಃ.

---

ಜಾಗರೂಕರಾಗಿ, ಉಷಿತ್ವಾ - ಇದ್ದು, ಪ್ರಭಾತಕಾಲೇ - ಪ್ರಾತಃಕಾಲದಲ್ಲಿ, ಉತ್ಥಾಯಚ- ಎದ್ದು, ಪೂರ್ವಾಂಸಂಧ್ಯಾಂ - ಪ್ರಾತಸ್ಸಂಧ್ಯೆಯನ್ನು, ಉಪಾಸ್ಯ - ಉಪಾಸನೆ ಮಾಡಿ, ಸ್ಪೃಷ್ಟೋದಕೌ - ಆಚಮನ ಮಾಡಲ್ಪಟ್ಟ ಉದಕವುಳ್ಳರಾಗಿ, ಶುಚೀ ಪರಿಶುದ್ಧರಾಗಿ, ನಿಯಮೇವಚ-ವಾಙ್ನಿಯಮದಿಂದ, ಜಪ್ಯಂ - ಜಪವನ್ನು, ಸಮಾಪ್ಯ - ಮುಗಿಸಿ, ಹುತಾಗ್ನಿಹೋತ್ರಂ - ಹೋಮಮಾಡಲ್ಪಟ್ಟ ಅಗ್ನಿಹೋತ್ರಾದ್ಯಕರ್ಮಗಳುಳ್ಳ, ಆಸೀನಂ ಕುಳಿತಿರುವ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಅವಂದತಾಂ - ನಮಸ್ಕರಿಸಿದರು. ।।೩೧-೩೨।।

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನತ್ರಿಂಶಸ್ಸರ್ಗಃ.

---

ಜಾಗರೂಕರಾಗಿದ್ದು ಪ್ರಾತಃಕಾಲವಾದ ಕೂಡಲೆ ನಿತ್ಯಕರ್ಮಗಳನ್ನು ಮಾಡಿ, ಪರಿಶುದ್ಧರಾಗಿ, ಜಪವಂ ಗೈದು, ಅಗ್ನಿಹೋತ್ರವನ್ನಾಚರಿಸಿ ಕುಳಿತಿದ್ದ ವಿಶ್ವಾಮಿತ್ರನನ್ನು ನಮಸ್ಕರಿಸಿದರು. ।।೩೧-೩೨।।

ಇಂತಿದು ವಾಮನಾಶ್ರಮ ವೃತ್ತಾಂತ, ವಿಶ್ವಾಮಿತ್ರ, ಯಾಗದೀಕ್ಷಾವಿಧಾನ

ಕಥನವೆಂಬ ಇಪ್ಪತ್ತೊಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ತ್ರಿಂಶಸ್ಸರ್ಗಃ.



ಅಥ ತೌ ದೇಶಕಾಲಜ್ಞೌ ರಾಜಪುತ್ರಾವರಿಂದಮೌ||ದೇಶೇಕಾಲೇಚ ವಾಕ್ಯಜ್ಞಾವಬ್ರೂತಾಂ ಕೌಶಿಕಂ ವಚಃ ||೧|| ಭಗವನ್ ಶ್ರೋತುಮಿಚ್ಛಾವೋ ಯಸ್ಮಿನ್ ಕಾಲೇನಿಶಾಚರೌ ||ಸಂರಕ್ಷಣೀಯೌ ತೌ ಬ್ರಹ್ಮನ್ನಾತಿವರ್ತೇತ ತತ್ ಕ್ಷಣಂ||೨|| ಏವಂ ಬ್ರುವಾಣೌ ಕಾಕುತ್ಸ್ಥೌ ತ್ವರಮಾಣೌ ಯುಯುತ್ಸಯಾ|| ಸರ್ವೇ ತೇ ಮುನಯಃ ಪ್ರೀತಾಃ ಪ್ರಶಶಂಸುರ್ನೃಪಾತ್ಮಜೌ ||೩|| ಅದ್ಯಪ್ರಭೃತಿ ಷಡ್ರಾತ್ರಂ ರಕ್ಷತಂ ರಾಘವೌ ಯುವಾಂ || ದೀಕ್ಷಾಂ ಗತೋಹ್ಯೇಷಮುನಿರ್ಮೌನಿತ್ವಂಚ

---

ಅಥ - ಬಳಿಕ, ದೇಶಕಾಲಜ್ಞೌ - ದೇಶಕಾಲಗಳನ್ನು ತಿಳಿದಿರುವ, ಅರಿಂದಮೌ- ಶತೃಸಂಹಾರಕರಾದ, ರಾಜಪುತ್ರೌ - ಅರಸು ಮಕ್ಕಳಾದ, ವಾಕ್ಯಜ್ಞೌ-(ತಿ) ಪರಕೀಯ ವಚನಾರ್ಥವನ್ನೇ ತಿಳಿದಿರುವ, ತೌ - ಆ ರಾಮಲಕ್ಷ್ಮಣರು, ಕೌಶಿಕಂ - ವಿಶ್ವಾಮಿತ್ರನನ್ನು ಕುರಿತು, ದೇಶೇ - ಉಚಿತ ದೇಶದಲ್ಲಿ, ಕಾಲೇಚ- ಉಚಿತಕಾಲದಲ್ಲಿಯೂ, ವಚಃ-ಮಾತನ್ನು, ಅಬ್ರೂತಾಂ-ಹೇಳಿದರು. ||೧|| ಹೇಭಗವನ್ - ಎಲೈ ಷಡ್ಗುಣೈಶ್ವರ್ಯ ಸಂಪನ್ನನೆ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ತೌನಿಶಾಚರೌ ಆ ರಾಕ್ಷಸರಿಬ್ಬರೂ, ಯಸ್ಮಿನ್ಕಾಲೇ - ಯಾವ ಕಾಲದಲ್ಲಿ, ಸಂರಕ್ಷಣೀಯೌ - ಸಂಹರಣೀಯರೋ, ತತ್ ಕ್ಷಣಂ - ಆ ಕ್ಷಣವು, ನಾತಿವರ್ತೇತ - (ನ) ಅಜ್ಞಾತನಾಗಿ ಅತಿಕ್ರಮಿಸಿ ಹೋಗಬಾರದು, ಶ್ರೋತುಂ - ಅದನ್ನು ಕೇಳಲು, ಇಚ್ಛಾವಃ - ಅಪೇಕ್ಷಿಸುತ್ತೇವೆ. ||೨|| ಇತಿ - ಈ ಪರಿಯಾಗಿ, ಬ್ರುವಾಣೌ - ಹೇಳುತ್ತಿರುವ, ಯುಯುತ್ಸಯಾ - ಯುದ್ಧೇಚ್ಛೆಯಿಂದ, ತ್ವರಮಾಣೌ - ಜಾಗ್ರತೆಗೊಳಿಸುತ್ತಿರುವ, ಕಾಕುತ್ಸ್ಥೌ-ಕಕುತ್ಸ್ಥ ವಂಶೋತ್ಪನ್ನರಾದ, ನೃಪಾತ್ಮಜೌ- ರಾಜಕುವರರಾದ ರಾಮಲಕ್ಷ್ಮಣರನ್ನು, ಸರ್ವೇ-ಸಮಸ್ತ, ತೇಮುನಯಃ-ಆ ಋಷಿಗಳು, ಪ್ರೀತಾಃ-ಸಂತೋಷಗೊಂಡು, ಪ್ರಶಶಂಸುಃ-ಶ್ಲಾಘಿಸಿ ಹೇಳಿದರು ||೩|| ಹೇರಾಘವೌ-ಎಲೈ ರಾಮಲಕ್ಷ್ಮಣರಿರಾ! ಅದ್ಯಪ್ರಭೃತಿ- ಈ ಮೊದಲು, ಷಡ್ರಾತ್ರಂ - ಆರು ರಾತ್ರಿಗಳಲ್ಲಿ, ಯುವಾಂ-ನೀವು, ರಕ್ಷತಂ - ಸಂರಕ್ಷಣೆಮಾಡಿರಿ, ಏಷಮುನಿಃ - ಈ ವಿಶ್ವಾಮಿತ್ರನು, ದೀಕ್ಷಾಂ - ಸಂಕಲ್ಪವನ್ನು, ಗತಃ - ಹೊಂದಿ, ಮೌನಿತ್ವಂಚ-

---

ಬಳಿಕ ದೇಶಕಾಲಗಳನ್ನರಿತ ರಾಜಪುತ್ರರಾದ ರಾಮ ಲಕ್ಷ್ಮಣರೀರ್ವರೂ ವಿಶ್ವಾಮಿತ್ರಋಷಿಯನ್ನು ಕುರಿತು, "ಪೂಜ್ಯನೇ! ಯಾವಕಾಲದಲ್ಲಿ ನಿನ್ನ ಯಜ್ಞಕ್ಕೆ ವಿಘ್ನವನ್ನಾಚರಿಸುವ ರಕ್ಕಸರು ಸಂಹರಿಸಲ್ಪಡತಕ್ಕವರೋ ಅದು ಅತಿಕ್ರಮಿಸಬಾರದು. ಆದುದರಿಂದ ಬೇಗನೆ ಹೇಳಿದರೆ ಕೇಳಲಿಚ್ಛಿಸುತ್ತೇವೆ." ಎಂದು ಹೇಳಿ ಯುದ್ಧೇಚ್ಛೆಯಿಂದ ತ್ವರೆಯುಳ್ಳವರಾಗಲು ಆ ಆಶ್ರಮದಲ್ಲಿದ್ದ ಋಷಿಗಳೆಲ್ಲರೂ ಅವರನ್ನು ಬಹಳವಾಗಿ ಶ್ಲಾಘಿಸುತ್ತ, "ಎಲೈ ರಾಜಕುವರರೇ ! ಇಂದಿನಿಂದ ಆರು ರಾತ್ರಿಗಳವರಿವಿಗೂ ಈ ಆಶ್ರಮವನ್ನು

ಗಮಿಷ್ಯತಿ ॥ ೪ ॥ ತೌತು ತದ್ವಚನಂ ಶ್ರುತ್ವಾ ರಾಜಪುತ್ರೌ ಯಶಸ್ವಿನೌ॥ ಅನಿದ್ರೌ ಷಡಹೋರಾತ್ರಂ ತಪೋವನಮರಕ್ಷತಾಂ ॥ ೫ ॥ ಉಪಾಸಾಂ ಚಕ್ರತುರ್ವೀರೌ ಯತ್ತೌ ಪರಮ ಧನ್ವಿನೌ ॥ ರರಕ್ಷತುರ್ಮುನಿವರಂ ವಿಶ್ವಾಮಿತ್ರಮರಿಂದಮೌ ॥೬॥ ಅಥ ಕಾಲೇ ಗತೇ ತಸ್ಮಿನ್ ಷಷ್ಠೇಽಹನಿ ಸಮಾಗತೇ ॥ ಸೌಮಿತ್ರಿಮಬ್ರವೀದ್ರಾಮೋ ಯತ್ತೋಭವ ಸಮಾಹಿತಃ ॥ ೭ ॥ ರಾಮಸ್ಯೈವಂ ಬ್ರುವಾಣಸ್ಯ ತ್ವರಿತಸ್ಯ ಯುಯುತ್ಸಯಾ ॥ ಪ್ರಜಜ್ವಾಲ ತತೋವೇದಿ

---

ವಾಜ್ಞೆಯನ್ನು, ಗಮಿಷ್ಯತಿ - ಹೊಂದುವನು. ॥ ೪ ॥ ಯಶಸ್ವಿನೌ - ಕೀರ್ತಿವಂತರಾದ, ತೌರಾಜಪುತ್ರೌ - ಆ ರಾಮಲಕ್ಷ್ಮಣರು, ತದ್ವಚನಂ - ಆ ಋಷಿಗಳ ಮಾತನ್ನು, ಶ್ರುತ್ವಾ-ಕೇಳಿ, ಷಡಹೋರಾತ್ರಂ - ಆರು ಹಗಲು ರಾತ್ರಿಗಳಲ್ಲಿ, ಅನಿದ್ರೌ - ನಿದ್ರಾರಹಿತರಾಗಿ, ತಪೋವನಂ-ತಪೋವನವನ್ನು, ಅರಕ್ಷತಾಂ - ಪಾಲಿಸಿದರು, ॥ ೫ ॥ ವೀರೌ-ಪರಾಕ್ರಮಶಾಲಿಗಳಾದ, ಅರಿಂದಮೌ-ಶತ್ರುಸಂಹಾರಕರಾದ ಆ ರಾಮಲಕ್ಷ್ಮಣರು, ಪರಮಧನ್ವಿನೌ-ಶ್ರೇಷ್ಠವಾದ ಧನುಸ್ಸುಗಳನ್ನು ಧರಿಸಿ, ಯತ್ತೌ - ಸನ್ನದ್ಧರಾಗಿ, ಉಪಾಸಾಂಚಕ್ರತುಃ - ಕುಳಿತುಕೊಂಡಿದ್ದರು, ಮುನಿವರಂ-ಋಷಿಶ್ರೇಷ್ಠನಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ರರಕ್ಷತುಃ - ಸಂರಕ್ಷಣೆ ಮಾಡಿದರು. ॥೬॥ ಅಥ-ಬಳಿಕ, ತಸ್ಮಿನ್ಕಾಲೇ - ಐದು ದಿನಗಳ ಕಾಲವು, ಗತೇಸತಿ - ಕಳೆದುಹೋಗಲು, ಷಷ್ಠೇ-ಆರನೆಯ, ಅಹನಿ - ಹಗಲು, ಸಮಾಗತೇಸತಿ - ಬರುತಿರಲು, ರಾಮಃ-ಶ್ರೀರಾಮನು, ಸೌಮಿತ್ರಿಂ-ಲಕ್ಷ್ಮಣನನ್ನು ಕುರಿತು, ಯತ್ತಃ - ಸನ್ನದ್ಧನಾಗಿ, ಸಮಾಹಿತಃ - ಏಕಾಗ್ರಚಿತ್ತನು, ಭವ - ಆಗು, ಇತಿ-ಇಂತೆಂದು, ಅಬ್ರವೀತ್ - ನುಡಿದನು, ॥ ೭ ॥ ಯುಯುತ್ಸಯಾ- ಯುದ್ಧೇಚ್ಛೆಯಿಂದ, ತ್ವರಿತಸ್ಯ-ತ್ವರೆಗೊಳ್ಳುತ್ತಿರುವ, ರಾಮಸ್ಯ - ಶ್ರೀರಾಮನು, ಏವಂ - ಹೀಗೆ, ಬ್ರುವಾಣಸ್ಯ - ಹೇಳುತ್ತಿರಲು, ತತಃ - ಬಳಿಕ, ಸೋಪಾಧ್ಯಾಯಪುರೋಹಿತಾಃ - ಉಪಾಧ್ಯಾಯರಿಂದಲೂ, ಪುರೋಹಿತರಿಂದಲೂ,

---

ರಕ್ಷಿಸಿರಿ. ವಿಶ್ವಾಮಿತ್ರಮುನಿಯು ದೀಕ್ಷಾಬದ್ಧನಾಗಿರುವುದರಿಂದ ಮೌನವನ್ನಾಶ್ರಯಿಸಿರುವನು,'' ಎಂದರು. ॥ ೧-೪ ॥ ಇಂತು ನುಡಿದ ವಿಶ್ವಾಮಿತ್ರಾಶ್ರಮ ವಾಸಿಗಳಾದ ಮುನಿಗಳ ಮಾತುಗಳನ್ನು ಕೇಳಿದ, ಕೀರ್ತಿವಂತರೂ, ರಾಜಪುತ್ರರೂ ಆದ ರಾಮಲಕ್ಷ್ಮಣರು ನಿದ್ರೆಯಿಲ್ಲದೆಯೇನೇ ಆ ತಪೋವನವನ್ನು ಆರು ರಾತ್ರಿಗಳು ಸಂರಕ್ಷಿಸಿದರು. ॥೫॥ ಶ್ರೇಷ್ಠವಾದ ಬಿಲ್ಲುಗಾರರೂ, ಯಾವಾಗಲೂ ಸನ್ನದ್ಧರಾಗಿರುವವರೂ, ಶತ್ರುಸಂಹಾರಕರೂ ಆದ ಈ ರಾಜಕುವರರು ಮುನಿಶ್ರೇಷ್ಠನಾದ ಕೌಶಿಕನನ್ನು ರಕ್ಷಿಸುತ್ತ ವಾಸಿಸುತ್ತಿದ್ದರು ॥೬॥ ಈ ರೀತಿ ಆರು ರಾತ್ರಿಗಳು ಕಳೆದು ಪ್ರಧಾನವಾದ ಏಳನೆಯ ದಿನವು ಸಮಾಗತವಾಗಲು ರಾಮನು ತಮ್ಮನನ್ನು ಕುರಿತು ''ಲಕ್ಷ್ಮಣಾ ! ಸನ್ನದ್ಧನಾಗಿರು'' ಎಂದು ಹೇಳಿದನು. ॥ ೭ ॥ ರಾಮನಿಂತು ಯುದ್ಧೇಚ್ಛೆಯಿಂದ ಜಾಗ್ರತೆಗೊಳ್ಳುತ್ತಿರಲು ರಾಕ್ಷಸಾಗಮನ ಸೂಚನೆಯನ್ನೀಸಗಲು ಉಪಾಧ್ಯಾಯರಿಂದಲೂ, ಪುರೋಹಿತರಿಂದಲೂ, ದರ್ಭೆ, ಸೋಮಪಾನಪಾತ್ರೆ, ಸಮಿತ್ತು ಇವುಗಳಿಂದಲೂ, ವಿಶ್ವಾಮಿತ್ರನಿಂದಲೂ, ಋತ್ವಿಜರಿಂದಲೂ,

ಸ್ತ್ವೋಪಾಧ್ಯಾಯ ಪುರೋಹಿತಾಃ ॥ ೮ ॥ ಸದರ್ಭಚಮಸಸ್ರುಕ್ಕಾ ಸಸಮಿ
ತ್ಕುಸುಮೋಚ್ಚಯಾ ॥ ವಿಶ್ವಾಮಿತ್ರೇಣ ಸಹಿತಾ ವೇದಿರ್ಜಜ್ವಾಲ ಸರ್ತ್ವಿಜಾ॥೯॥
ಮಂತ್ರವಚ್ಚ ಯಥಾನ್ಯಾಯಂ ಯಜ್ಞೋಽಸೌ ಸಂಪ್ರವರ್ತತೇ ॥ ಆಕಾಶೇಚ
ಮಹಾಂಚ್ಛಬ್ದಃ ಪ್ರಾದುರಾಸೀದ್ಭಯಾನಕಃ ॥೧೦॥ ಆವಾರ್ಯ ಗಗನಂ ಮೇಘೋ
ಯಥಾಪ್ರಾವೃಷಿ ನಿರ್ಗತಃ ॥ ತಥಾಮಾಯಾಂ ವಿಕುರ್ವಾಣೌ ರಾಕ್ಷಸಾವ
ಭ್ಯಧಾವತಾಂ ॥ ೧೧ ॥ ಮಾರೀಚಶ್ಚ ಸುಬಾಹುಶ್ಚ ತಯೋರನುಚರಾಸ್ತಥಾ॥
ಆಗಮ್ಯ ಭೀಮಸಂಕಾಶಾ ರುಧಿರೌಘಮವಾಕಿರನ್ ॥೧೨॥ ಸಾ ತೇನ ರುಧಿರೌ
ಘೇಣ ವೇದಿರ್ಜಜ್ವಾಲಮಂಡಿತಾ ॥ ದೃಷ್ಟ್ವಾವೇದಿಂ ತಥಾ ಭೂತಾಂ ಸಾನುಜಃ

ಒಡಗೂಡಿದ, ವೇದಿಃ - ಯಜ್ಞವೇದಿಕೆಯು, ಪ್ರಜಜ್ವಾಲ - ಹೊಳೆಯುತ್ತಿತ್ತು. ॥೮॥ ಸದರ್ಭಚ ಮಸಸ್ರುಕ್ಕಾ - ದರ್ಭೆಗಳಿಂದಲೂ ಸೋಮಪಾನ ಪಾತ್ರೆಗಳಿಂದಲೂ, ಸ್ರುಕ್ಕುಗಳಿಂದಲೂ ಕೂಡಿರುವ, ಸಸಮಿತ್ಕುಸುಮೋಚ್ಚಯಾ - ಸಮಿತ್ತುಗಳಿಂದಲೂ, ಪುಷ್ಪರಾಶಿಗಳಿಂದಲೂ ಒಡಗೂಡಿದ, ವಿಶ್ವಾ ಮಿತ್ರೇಣ - ವಿಶ್ವಾಮಿತ್ರನಿಂದ, ಸಹಿತಾ - ಕೂಡಿರುವ, ಸರ್ತ್ವಿಜಾ - ಋತ್ವಿಕ್ಕುಗಳಿಂದ ಕೂಡಿದ, ವೇದಿಃ - ಯಜ್ಞವೇದಿಕೆಯು, ಜಜ್ವಾಲ - ಉರಿಯುತ್ತಿತ್ತು. ॥ ೯ ॥ ಅಸೌಯಜ್ಞಃ -ಈಯಜ್ಞವು, ಮಂತ್ರವತ - ಮಂತ್ರವತ್ತಾಗಿ, ಯಥಾನ್ಯಾಯಂ - ಯಥಾಶಾಸ್ತ್ರವಾಗಿ, ಸಂಪ್ರವರ್ತತೇ-ಪ್ರವ ರ್ತಿಸಿತು, ಆಕಾಶೇಚ - ಆಕಾಶದಲ್ಲಿಯೂ, ಭಯಾನಕಃ - ಭಯಂಕರವಾದ, ಮಹಾನ್ - ದೊಡ್ಡ ದಾದ, ಶಬ್ದಶ್ಚ - ಶಬ್ದವೂ, ಪ್ರಾದುರಾಸೀತ್ - ಹುಟ್ಟಿತು, ॥೧೦॥ ಯಥಾ-ಹೇಗೆ, ಪ್ರಾವೃಷಿ- ವರ್ಷಾಕಾಲದಲ್ಲಿ, ಮೇಘಃ - ಮೇಘವು, ಗಗನಂ - ಅಂತರಿಕ್ಷವನ್ನು, ಆವಾರ್ಯ - ಸುತ್ತಿಕೊಂಡು, ನಿರ್ಗತಃ - ಹೊರಡವುದೋ, ತಥಾ - ಹಾಗೆಯೇ ಮಾಯಾಂ - ಮಾಯೆಯನ್ನು, ವಿಕುರ್ವಾಣೌ ಮಾಡುತ್ತಿರುವ, ರಾಕ್ಷಸೌ - ರಾಕ್ಷಸರಿಬ್ಬರೂ, ಅಭ್ಯಧಾವತಾಂ - ಓಡಿಬಂದರು, ॥ ೧೧ ॥ ಮಾರೀಚಶ್ಚ - ಮಾರೀಚನೂ, ಸುಬಾಹುಶ್ಚ - ಸುಬಾಹುವೂ, ತಯೋಃ - ಆ ಇಬ್ಬರಿಗೂ, ಯೇ - ಯಾರು, ಅನುಚರಾಶ್ಚ - ಸೇವಕರೋ, ತೇಚ- ಅವರೂ, ಭೀಮಸಂಕಾಶಾಃ - ಭಯಂಕರರಾಗಿ, ಆಗಮ್ಯ - ಬಂದು, ರುಧಿರೌಘಂ - ರಕ್ತ ಪ್ರವಾಹವನ್ನು, ಅವಾಕಿರನ್ - ಸುರಿಸಿದರು, ॥ ೧೨ ॥ ಸಾವೇದಿಃ - ಆ ವೇದಿಕೆಯು, ತೇನರುಧಿ ರೌಘೇಣ - ಆ ರಕ್ತಪ್ರವಾಹದಿಂದ, ಮಂಡಿತಾ - ಅಲಂಕೃತವಾಗಿ, ಜಜ್ವಾಲ - ಉರಿಯುತ್ತಿದ್ದಿತು, ತಥಾಭೂತಾಂ ಈ ರೀತಿಯಾದ, ವೇದೀಂ - ಯಜ್ಞಕುಂಡವನ್ನು, ದೃಷ್ಟ್ವಾ - ಕಂಡು,

ಒಡಗೂಡಿದ ಯಜ್ಞವೇದಿಕೆಯು ಮಹತ್ತರವಾಗಿ ಜ್ವಲಿಸತೊಡಗಿತು. ॥೮-೯॥ ಮಂತ್ರ ಪೂರ್ವಕವಾಗಿಯೂ, ನ್ಯಾಯಸಮ್ಮತವಾಗಿಯೂ, ಇರುವ ಯಜ್ಞವು ನಡೆಯುತ್ತಿರಲು ಆಕಾಶದಲ್ಲಿ ಭಯಂಕರವಾದ ಮತ್ತು ಮಹತ್ತರವಾದ ಶಬ್ದವೊಂದು ಹುಟ್ಟಿತು. ॥ ೧೦ ॥ ಬಳಿಕ ವರ್ಷಾಕಾಲದಲ್ಲಿ ಮೇಘವು ಆಕಾಶವೆಲ್ಲವನ್ನೂ ಆವರಿಸಿ ಹೊರಹೊರಡುವಂತೆ ಮಾಯೆಯನ್ನುಂಟುಮಾಡುತ್ತ ಮಾರೀಚ, ಸುಬಾಹುಗಳೂ, ಅವರ ಅನುಚರರೂ,ಓಡಿಬಂದು ರಕ್ತವರ್ಷವನ್ನು ಸುರಿಸಿದರು, ॥೧೧-೧೨॥ ಅಲಂಕೃತವಾದ ಯಜ್ಞವೇದಿಕೆಯೂ



ಯಾಗ ರಕ್ಷಣ.

ಕ್ರೋಧಸಂಯುತಃ) ಸಹಸಾಭಿದ್ರುತೋ ರಾಮಸ್ತಾನಪಶ್ಯತ್ತತೋ ದಿವಿ ||೧೩|| ತಾವಾಪತಂತೌ ಸಹಸಾ ದೃಷ್ಟ್ವಾ ರಾಜೀವಲೋಚನಃ || ಲಕ್ಷ್ಮಣಂತ್ವಭಿಸಂಪ್ರೇಕ್ಷ್ಯ ರಾಮೋ ವಚನ ಮಬ್ರವೀತ್ ||೧೪|| ಪಶ್ಯ ಲಕ್ಷ್ಮಣ ದುರ್ವೃತ್ತಾನ್ರಾಕ್ಷಸಾನ್ಪಿಶಿತಾಶನಾನ್ || ಮಾನವಾಸ್ತ್ರಸಮಾಧೂತಾನನಿಲೇನಯಥಾಘನಾನ್ ||೧೫|| ಮಾನವಂ ಪರಮೋದಾರ ಮಸ್ತ್ರಂ ಪರಮಭಾಸ್ವರಂ || ಚಿಕ್ಷೇಪ ಪರಮಕ್ರುದ್ಧೋ

---

ಸಾನುಜಃ - ತಮ್ಮನಾದ ಲಕ್ಷ್ಮಣಸಹಿತನಾಗಿ, ಕ್ರೋಧಸಂಯುತಃ - ಕೋಪದಿಂದಾವೃತನಾಗಿ-ಸಹಸಾ-ಜಾಗ್ರತೆಯಾಗಿ, ಅಭಿದ್ರುತಃ - ಓಡಿಬಂದ, ರಾಮಃ - ಶ್ರೀರಾಮನು, ತತಃ-ಬಳಿಕ, ದಿವಿ-ಅಂತರಿಕ್ಷದಲ್ಲಿ, ತಾನ್ - ಅವರನ್ನು, ಅಪಶ್ಯತ್ - ಕಂಡನು || ೧೩ || ರಾಜೀವಲೋಚನಃ - ಕಮಲಾಕ್ಷನಾದ, ರಾಮಃ - ಶ್ರೀರಾಮನು, ಸಹಸಾ - ಜಾಗ್ರತೆಯಾಗಿ, ಆಪತಂತೌ- ತನ್ನ ಬಳಿಗೆ ಬರುತ್ತಿರುವ, ತೌ - ಆ ಸುಬಾಹು ಮಾರೀಚರನ್ನು, ದೃಷ್ಟ್ವಾ - ಕಂಡು, ಲಕ್ಷ್ಮಣಂತು-ಲಕ್ಷ್ಮಣನನ್ನು, ಅಭಿಸಂಪ್ರೇಕ್ಷ್ಯ - ನೋಡಿ, ವಚನಂ - ಮಾತನ್ನು, ಅಬ್ರವೀತ - ನುಡಿದನು, || ೧೪ || ಹೇಲಕ್ಷ್ಮಣ - ಎಲೈ ಲಕ್ಷ್ಮಣನೆ, ಅನಿಲೇನ - ವಾಯುವಿನಿಂದ, ಘನಾನ್ಯಥಾ - ಮೇಘಗಳು ಹೇಗೆ ಚದುರಿಸಲ್ಪಡುವವೋ,ತಥಾ-ಹಾಗೆಯು, ದುರ್ವೃತ್ತಾನ್-ದುರ್ವ್ಯಾಪಾರಿಗಳಾದ,ಪಿಶಿತಾಶನಾನ್-ಮಾಂಸಭಕ್ಷಕರಾದ, ರಾಕ್ಷಸಾನ್-ರಾಕ್ಷಸರನ್ನು, ಮಾನವಾಸ್ತ್ರ ಸಮಾಧೂತಾನ್-ಮಾನವಾಸ್ತ್ರ-ಮಾನವಾಸ್ತ್ರದಿಂದ, ಸಮಾಧೂತಾನ್-ಕೊಡಹಲ್ಪಟ್ಟವರನ್ನಾಗಿ,ಪಶ್ಯ-ನೋಡು, ಇತಿ-ಇಂತೆಂದು, ಉಕ್ತ್ವಾ-ಹೇಳಿ, ||೧೫|| (೧)ರಾಘವಃ-ಆ ಶ್ರೀರಾಮನು,ಪರಮಕ್ರುದ್ಧಃ-ಬಹಳಕೋಪಿಷ್ಠನಾಗಿ,ಪರಮೋದಾರಃ-ಶ್ರೇಷ್ಠವಾದ, ಪರಮಭಾಸ್ವರಂ ಬಹಳ ಪ್ರಕಾಶವುಳ್ಳ, ಮಾನವಂ-ಮಾನವವೆಂಬ, ಅಸ್ತ್ರಂ - ಅಸ್ತ್ರ

---

ಈ ರಕ್ತಪ್ರವಾಹದಿಂದ ಅತಿಯಾಗಿ ಜ್ವಲಿಸಿತು. ಇದನ್ನು ಕಂಡ ಲಕ್ಷ್ಮಣಯುತನಾದ ಶ್ರೀರಾಮನು ಬಹಳವಾಗಿ ಕೋಪಗೊಂಡು ಅಂತರಿಕ್ಷದಲ್ಲಿ ನೋಡಿದನು. || ೧೩ || ಆಗ ರಾಜೀವಲೋಚನನಾದ ರಾಮಚಂದ್ರನು ತನ್ನ ಬಳಿ ಸಾರುತ್ತಿರುವ ಆ ಸುಬಾಹು ಮಾರೀಚರನ್ನು ನೋಡಿ ಲಕ್ಷ್ಮಣನನ್ನು ಕುರಿತು, "ಲಕ್ಷ್ಮಣಾ ! ದುರ್ವೃತ್ತರೂ, ಮಾಂಸ ಭಕ್ಷಕರೂ ಆದ ಈ ರಾಕ್ಷಸರು, ಮೇಘಗಳು ವಾಯುವಿನಿಂದ ಚದುರಿಸಲ್ಪಡುವಂತೆ ಮಾನವಾಸ್ತ್ರದಿಂದ ದೂರ ಮಾಡಲ್ಪಡುವದನ್ನು ನೋಡು" ಎಂದು ಹೇಳಿ ಬಹಳವಾಗಿ ಕೋಪಗೊಂಡು ಶ್ರೇಷ್ಠವಾದ ಮಾನವಾಸ್ತ್ರವನ್ನು ಆ ಮಾರೀಚನೆದೆಗೆಸೆದನು ||೧೪-೧೬|| ಬಳಿಕಲಾ ಮಾರೀಚನು ಮಹತ್ತರವಾದ ಆ ಮಾನವಾಸ್ತ್ರದಿಂದ ಹೊಡೆಯಲ್ಪಟ್ಟು ಸಂಪೂರ್ಣ

---

ಟೀ|| (೧) ಕರಿಷ್ಯಾಮಿ ನ ಸಂದೇಹೋ ನೋತ್ಸಹೇ ಹಂತುಮೀದೃಶಾನ್ || ಇತ್ಯುಕ್ತ್ವಾವಚನಂ ರಾಮ ಶ್ಚಾಪೇ ಸಂಧಾಯ ವೇಗವಾನ್|| ಎಂದು ಪ್ರಾಚೀನ ಗ್ರಂಥಗಳಲ್ಲಿ ಅಧಿಕ ಪಾಠವಿರುವುದೆಂದು ತಿಲಕ ವ್ಯಾಖ್ಯಾನಕಾರನು ಬರೆಯುತ್ತಾನೆ. ಆಧುನಿಕ ಪಾಠದಲ್ಲಿ ಈ ಶ್ಲೋಕವಿದ್ದಿದ್ದಲ್ಲಿ ರಾಮವಚನ ಸ್ವಾರಸ್ಯವು ಮತ್ತಷ್ಟು ಸುರಸವಾಗಿರುತ್ತಿದ್ದಿತೆಂದು ನಮ್ಮ ಅಭಿಪ್ರಾಯ. ಅಲ್ಲಿಗೆ "ಅನಿಲೇನ ಯಥಾ ವಾಯುವಿನಿಂದ ಹೇಗೆ, ಘನಾನಿವ-ಮೇಘಗಳು ಹೇಗೋ ಅಂದರೆ ಚಲಿಸಲ್ಪಡುವವೋ, ತಥಾ-ಹಾಗೆ, ಕರಿಷ್ಯಾಮಿ – ಮಾಡುತ್ತೇನೆ, ನ ಸಂದೇಹಃ-ಸಂಶಯವಿಲ್ಲವು, ಈದೃಶಾನ್-ಇಂತಹ ದುರ್ಬಲರನ್ನು, ಹಂತುಂ-ಕೊಲ್ಲಲು, ನೋತ್ಸಹೇ-ಉತ್ಸುಕಗೊಳ್ಳುವದಿಲ್ಲವು. . . . . ."ಎಂದರ್ಥವಾಗುವುದು.

ಮಾರೀಚೋರಸಿ ರಾಘವಃ ||೧೬|| ಸ ತೇನ ಪರಮಾಸ್ತ್ರೇಣ ಮಾನವೇನ ಸಮಾಹಿತಃ || ಸಂಪೂರ್ಣಂ ಯೋಜನಶತಂ ಕ್ಷಿಪ್ತಸ್ಸಾಗರ ಸಂಪ್ಲವೇ || ೧೭ || ವಿಚೇತಸಂ ವಿಘೂರ್ಣಂತಂ ಶೀತೇಷು ಬಲತಾಡಿತಂ||ನಿರಸ್ತಂದೃಶ್ಯಮಾರೀಚಂ ರಾಮೋ ಲಕ್ಷ್ಮಣಮಬ್ರವೀತ್ ||೧೮|| (ಪಶ್ಯಲಕ್ಷ್ಮಣಶೀತೇಷುಂಮಾನವಂಧರ್ಮಸಂಹಿತಂ|| ಮೋಹಯಿತ್ವಾನಯತ್ಯೇನಂನಚಪ್ರಾಣೈರ್ವ್ಯಯುಜ್ಯತಃ) ಇಮಾನಪಿ ವಧಿಷ್ಯಾಮಿ ನಿರ್ಘೃಣಾನ್ ದುಷ್ಟಚಾರಿಣಃ|| ರಾಕ್ಷಸಾನ್ ಪಾಪಕರ್ಮಸ್ಥಾನ್ ಯಜ್ಞಘ್ನಾನ್ ರುಧಿರಾಶನಾನ್ || ೧೯ || ಸಂಗೃಹ್ಯಾಸ್ತ್ರಂ ತತೋ ರಾಮೋದಿವ್ಯಮಾಗ್ನೇಯಮ

ವನ್ನು, ಮಾರೀಚೋರಸಿ - ಮಾರೀಚನ ವಕ್ಷಸ್ಥಳದಲ್ಲಿ, ಚಿಕ್ಷೇಪ - ಎಸೆದನು. ||೧೬|| (೧)ಸಃ - ಆ ಮಾರೀಚನು, ಮಾನವೇನ - ಮಾನವವೆಂಬ, ತೇನಪರಮಾಸ್ತ್ರೇಣ - ಆ ಶ್ರೇಷ್ಠವಾದ ಅಸ್ತ್ರದಿಂದ, ಸಂಪೂರ್ಣಂ - ಸಂಪೂರ್ಣವಾದ, ಯೋಜನಶತಂ - ನೂರು ಯೋಜನವು, ಸಮಾಹಿತಃ- ತಳ್ಳಲ್ಪಟ್ಟವನಾಗಿ, ಸಾಗರಸಂಪ್ಲವೇ - ಸಮುದ್ರ ಪ್ರವಾಹದಲ್ಲಿ, ಕ್ಷಿಪ್ತಃ-ಚಿಮ್ಮಲ್ಪಟ್ಟನು, || ೧೭ || ರಾಮಃ- ಶ್ರೀರಾಮನು, ಶೀತೇಷುಬಲತಾಡಿತಃ - (೨) ಶೀತೇಷುವೆಂಬ ಅಸ್ತ್ರದ ಬಲದಿಂದ ಹೊಡೆಯಲ್ಪಟ್ಟವನಾದ ಕಾರಣ, ವಿಚೇತಸಂ - ಪ್ರಜ್ಞಾಹೀನನಾದ, ವಿಘೂರ್ಣಂತಂ - ಹೊಡೆಯಲ್ಪಟ್ಟುದರಿಂದಲೇ ಮತ್ತನಂತೆ ತಿರುಗುತ್ತಿರುವ, ಮಾರೀಚಂ - ಮಾರೀಚನನ್ನು, ನಿರಸ್ತಂ- ಹೊರಡಿಸಲ್ಪಟ್ಟವನನ್ನಾಗಿ, ದೃಶ್ಯ-ಕಂಡು, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಅಬ್ರವೀತ್ - ನುಡಿದನು. || ೧೮ || ನಿರ್ಘೃಣಾನ್ -ನಿರ್ದಯರಾದ, ದುಷ್ಟಚಾರಿಣಃ- ದುರ್ವ್ಯಾಪಾರಿಗಳಾದ, ಪಾಪಕರ್ಮಸ್ಥಾನ್ ದುಷ್ಕೃತ್ಯದಲ್ಲಿಯೇ ಆಸಕ್ತಿಯುಳ್ಳ, ಯಜ್ಞಘ್ನಾನ್ - ಯಜ್ಞಧ್ವಂಸಕರಾದ, ರುಧಿರಾಶನಾನ್- ರಕ್ತಪಾನ ಮಾಡುವ, ಇಮಾನ್ ರಾಕ್ಷಸಾನಪಿ - ಈ ರಾಕ್ಷಸರನ್ನೂ, ವಧಿಷ್ಯಾಮಿ- ಸಂಹರಿಸುವೆನು, || ೧೯ ||

---

ಮಾಪ ನೂರು ಯೋಜನಗಳ ದೂರದಷ್ಟು ಒಯ್ಯಲ್ಪಟ್ಟು ಸಾಗರ ಪ್ರವಾಹದಲ್ಲಿ ಬೀಳಿಸಲ್ಪಟ್ಟನು. || ೧೭ || ಪ್ರಜ್ಞಾಹೀನನಾಗಿಯೂ, ಮಾನವಾಸ್ತ್ರವಿದ್ಧನಾದುದರಿಂದಲೇ ಮತ್ತನಂತೆ ತಿರುಗುತ್ತಿರುವವನಾಗಿಯೂ, ಇರುವ ಮಾರೀಚನನ್ನು ನೋಡಿದ ರಾಮನು ಲಕ್ಷ್ಮಣನನ್ನು ಕುರಿತು, "ಲಕ್ಷ್ಮಣಾ ! ಮಹಾಧರ್ಮದಿಂದೊಡಗೂಡಿದುದಾಗಿಯೂ, ಶೀತಳವಾಗಿಯೂ, ಇರುವ ಈ ಮಾನವಾಸ್ತ್ರವನ್ನು ನೋಡು, ಇದು ಈ ಮಾರೀಚನ ಪ್ರಾಣಗಳನ್ನು ನೀಗದೆ ಮೂರ್ಛಾಕ್ರಾಂತನನ್ನಾಗಿ ಮಾಡಿ ಒಯ್ಯುತ್ತಿರುವುದು. ಇನ್ನು ದಯಾಹೀನರೂ, ದುಷ್ಟಚರಿತ್ರೆಯುಳ್ಳವರೂ, ಪಾಪಕರ್ಮಿಗಳೂ, ಯಜ್ಞನಾಶಕರೂ, ರಕ್ತ

---

(೧) ಇಲ್ಲಿಗೆ ಒಂದು ಸಾವಿರ ಶ್ಲೋಕಗಳಾದವು ಇಲ್ಲಿ ಗಾಯತ್ರೀ ಮಂತ್ರದ ದ್ವಿತೀಯಾಕ್ಷರವಾದ 'ಸ"ಎಂಬ ಅಕ್ಷರವು ನಿವೇಶಿತವಾಗಿದೆ ಇದು ಗೋವಿಂದರಾಜೀಯ ವ್ಯಾಖ್ಯಾನವಂತೆ. ೨. ಶೀತೇಷು-ಎಂಬುದು ಮಾನವಾಸ್ತ್ರಕ್ಕೆ ಮತ್ತೊಂದು ಹೆಸರು ಮಾರೀಚನ ಸಾಗರ ಪ್ಲವನಾನಂತರದಲ್ಲಿ ರಾಮನು ಸುಮ್ಮನಾದುದಕ್ಕೆ ಮಾರೀಚನಿಂದ ಮುಂದಾಗಬೇಕಾದ ಸಹಾಯವೇ ಕಾರಣವೆಂದು ತಿಳಿಯಬೇಕು

* ಇದು ಸ್ಪಷ್ಟವಾದ ಅಧಿಕಪಾಠ ಏಕೆಂದರೆ-(೧) ಈ ಶ್ಲೋಕದ ಹಿಂದೆಯೇ ಲಕ್ಷ್ಮಣನನ್ನು ಕುರಿತು ರಾಮನು ಮಾಯನಿಂದ ಮೃಗಗಳು ಹೇಗೆ ಚದುರಿಸಲ್ಪಡುವವೋ ಹಾಗೆಯೇ ಈ ಮಾನವಾಸ್ತ್ರದಿಂದ ರಾಕ್ಷಸರು ಚದುರಿಸಲ್ಪಡುವರೆಂದು ಹೇಳಿರುವನು. (೨) ಮಾರೀಚಸಾಗರದ ಸಂಪ್ಲವವಾದಮೇಲೆ ಹೇಳಿರುವ ಶ್ಲೋಕವಿದು.

ಮದ್ಭುತಂ|| ಸುಬಾಹೋರಸಿ ಚಿಕ್ಷೇಪ ಸ ವಿದ್ಧಃ ಪ್ರಾಪತದ್ಭುವಿ ||೨೦|| ಶೇಷಾನ್
ವಾಯವ್ಯಮಾದಾಯ ನಿಜಘಾನ ಮಹಾಯಶಾಃ|| ರಾಘವಃ ಪರಮೋದಾರೋ
ಮುನೀನಾಂ ಮುದಮಾವಹನ್||೨೧||ಸ ಹತ್ವಾ ರಾಕ್ಷಸಾನ್ ಸರ್ವಾನ್ ಯಜ್ಞಘ್ನಾನ್
ರಘುನಂದನಃ || ಋಷಿಭಿಃ ಪೂಜಿತಸ್ತತ್ರ ಯಥೇಂದ್ರೋ ವಿಜಯೇ ಪುರಾ ||೨೨||
ಅಥ ಯಜ್ಞೇ ಸಮಾಪ್ತೇ ತು ವಿಶ್ವಾಮಿತ್ರೋ ಮಹಾಮುನಿಃ|| ನಿರೀತಿಕಾ ದಿಶೋ

---

ತತಃ - ಬಳಿಕ, ರಾಮಃ - ಶ್ರೀರಾಮನು, ಅದ್ಭುತಂ - ಆಶ್ಚರ್ಯಕರವಾದ, ದಿವ್ಯಂ- ದೇವತಾ ಸಂಬಂಧವಾದ, ಆಗ್ನೇಯಮಸ್ತ್ರಂ - ಆಗ್ನೇಯಾಸ್ತ್ರವನ್ನು, ಸಂಗೃಹ್ಯ- ತೆಗೆದುಕೊಂಡು, ಸುಬಾಹೋರಸಿ - ಸುಬಾಹುವೆಂಬ ರಾಕ್ಷಸನ ಎದೆಯಲ್ಲಿ, ಚಿಕ್ಷೇಪ - ಎಸೆದನು, ಸಃ-ಆ ಸುಬಾಹುವು, ವಿದ್ಧಃ- ಹೊಡೆಯಲ್ಪಟ್ಟು, ಭುವಿ - ನೆಲದಲ್ಲಿ, ಪ್ರಾಪತತ್ - ಬಿದ್ದನು ||೨೦|| ಮಹಾಯಶಾಃ ಮಹಾಕೀರ್ತಿವಂತನಾದ, ಪರಮೋದಾರಃ-ಸರ್ವೋತ್ಕೃಷ್ಟನಾದ, ರಾಘವಃ-ಶ್ರೀರಾಮನು, ಮುನೀನಾಂ-ಋಷಿಗಳಿಗೆ, ಮುದಂ - ಸಂತೋಷವನ್ನು, ಆವಹನ್ - ಮಾಡುತ್ತ, ವಾಯವ್ಯಂ - ವಾಯವ್ಯಾಸ್ತ್ರವನ್ನು, ಆದಾಯ - ತೆಗೆದುಕೊಂಡು, ಶೇಷಾನ್ - ಮಿಕ್ಕವರನ್ನು, ನಿಜಘಾನ-ಹೊಡೆದನು ||೨೧|| ಸಃ ರಘುನಂದನಃ - ಆ ಶ್ರೀರಾಮನು, ಯಜ್ಞಘ್ನಾನ್ - ಯಜ್ಞನಾಶಕರಾದ, ಸರ್ವಾನ್ - ಸಮಸ್ತ ರಾಕ್ಷಸಾನ್ - ರಾಕ್ಷಸರನ್ನು, ಹತ್ವಾ-ಕೊಂದು, ಪುರಾ - ಪೂರ್ವದಲ್ಲಿ, ವಿಜಯೇ-ಜಯವಾಗುತ್ತಿರಲು, ಇಂದ್ರೋಯಥಾ- ದೇವೇಂದ್ರನಂತೆ, ತತ್ರ - ಆ ಸಿದ್ಧಾಶ್ರಮದಲ್ಲಿ, ಋಷಿಭಿಃ-ಋಷಿಗಳಿಂದ, ಪೂಜಿತಃ - ಪೂಜಿಸಲ್ಪಟ್ಟನು, || ೨೨ || ಅಥ - ಬಳಿಕ, ಯಜ್ಞೇ - ಯಜ್ಞವು, ಸಮಾಪ್ತೇಸತಿ - ಪೂರ್ಣವಾಗಲು, ಮಹಾಮುನಿಃ-ಮಹರ್ಷಿಯಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು,

---

ಪಾನಾಸಕ್ತರೂ ಆದ ಈ ರಕ್ಕಸರನ್ನೂ, ಸಂಹರಿಸುತ್ತೇನೆ" ಎಂದು ಹೇಳಿ ದೇವತಾಸಂಬಂಧವಾಗಿಯೂ, ಅದ್ಭುತವಾಗಿಯೂ, ಇರುವ ಆಗ್ನೇಯಾಸ್ತ್ರವನ್ನು ಹೂಡಿ ಸುಬಾಹುವಿನ ವಕ್ಷಸ್ಥಳಕ್ಕೆ ಹೊಡೆದನು. ಈ ಹೊಡೆತದಿಂದ ಅವನೂ ನೆಲಕ್ಕುರುಳಿದನು ||೧೮-೨೦|| ಆಗಲಾ ರಾಮಚಂದ್ರನು ಆ ವನವಾಸಿಗಳಾದ ಮುನಿಗಳೆಲ್ಲರಿಗೂ ಆನಂದವನ್ನುಂಟುಮಾಡುತ್ತ ಉಳಿದ ನಿಶಾಚರರೆಲ್ಲರನ್ನೂ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿ, ನೆಲಕ್ಕುರುಳಿಸಿ ಹಿಂದೆ ದೇವೇಂದ್ರನು ತನ್ನ ವಿಜಯಕಾಲದಲ್ಲಿ ಋಷಿಗಳಿಂದ ಹೇಗೆ ಪೂಜಿಸಲ್ಪಟ್ಟನೋ ಹಾಗೆಯೇ ಪೂಜಿತನಾದನು || ೨೧-೨೨ || ಅನಂತರ ಯಜ್ಞವು ಸಮಾಪ್ತವಾಗಲು ಮಹರ್ಷಿಯಾದ ವಿಶ್ವಾಮಿತ್ರನು ದಶದಿಕ್ಕುಗಳೂ ಬಾಧಾರಹಿತಗಳಾಗಿರುವ

---

ಕಾರ್ಯವಾದಮೇಲೆ ಕಾರಣ ಹೇಳಿದಂತಾಗುವುದು ಇದರಿಂದ ಪೂರ್ವಾಪರ ವಿರುದ್ಧವು ಪ್ರತ್ಯಕ್ಷಪ್ರಮಾಣ ಹೇ ಲಕ್ಷ್ಮಣ- ಎಲೈ ಲಕ್ಷ್ಮಣನೇ, ಧರ್ಮಸಂಹಿತಂ-ಧರ್ಮದಿಂದ ಕೂಡಿಕೊಂಡಿರುವ, ಮಾನವಂ-ಮಾನವಾಸ್ತ್ರವು, ಶೀತೇಷುಂ-ತಣ್ಣಗಿರುವ ಬಾಣವನ್ನು, ಪಶ್ಯ-ನೋಡು, ಇಮಂ-ಈ ಮಾರೀಚನನ್ನು, ಮೋಹಯಿತ್ವಾ-ಪ್ರಜ್ಞೆತಪ್ಪಿಸಿ, ನಯತಿ-ತೆಗೆದುಕೊಂಡು ಹೋಗುತ್ತದೆ, ಪ್ರಾಣೈಃ-ಪ್ರಾಣಗಳಿಂದ, ನವ್ಯಯುಜ್ಯತ-ವಿಯೋಗವನ್ನು ಹೊಂದಿಸಲ್ಪಡಲಿಲ್ಲ.)

ದೃಷ್ಟ್ವಾ ಕಾಕುತ್ಥ್ಸಮಿದಮಬ್ರವೀತ್ ॥ ೨೩ ॥ ಕೃತಾರ್ಥೋಽಸ್ಮಿ ಮಹಾಬಾಹೋ ಕೃತಂ ಗುರುವಚಸ್ತ್ವಯಾ ॥ ಸಿದ್ಧಾಶ್ರಮಮಿದಂ ಸತ್ಯಂ ಕೃತಂ ರಾಮ ಮಹಾಯಶಃ ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಂಶಸ್ಸರ್ಗಃ.

---

ದಿಶಃ - ದಿಕ್ಕುಗಳನ್ನು, ನಿರೀತಿಕಾಃ - ಬಾಧಾರಹಿತಗಳನ್ನಾಗಿ, ದೃಷ್ಟ್ವಾ - ಕಂಡು, ಕಾಕುತ್ಸ್ಥಂ-ಶ್ರೀರಾಮನನ್ನು ಕುರಿತು, ಇದಂ - ಈ ಮುಂದಿನ ಮಾತನ್ನು, ಅಬ್ರವೀತ್-ನುಡಿದನು. ॥ ೨೩ ॥ ಹೇಮಹಾಬಾಹೋ - ಎಲೈ ಮಹಾ ಭುಜಬಲ ಪರಾಕ್ರಮಶಾಲಿಯು ! ಅಹಂ - ನಾನು, ಕೃತಾರ್ಥಃ-ಧನ್ಯನು, ಅಸ್ಮಿ - ಆದೆನು, ಹೇರಾಮ - ಎಲೈ ಶ್ರೀರಾಮನೆ ! ತ್ವಯಾ - ನಿನ್ನಿಂದ, ಗುರುವಚಃ-ಗುರ್ವಾಜ್ಞೆಯು, ಕೃತಂ - ಮಾಡಲ್ಪಟ್ಟಿತು, ಹೇಮಹಾಯಶಃ - ಎಲೈ ಮಹಾ ಕೀರ್ತಿವಂತನೆ! ಇದಂ ಸಿದ್ಧಾಶ್ರಮಂ - ಈ ಸಿದ್ಧಾಶ್ರಮವು, ತ್ವಯಾ - ನಿನ್ನಿಂದ, ಸತ್ಯಂ- ಯಥಾರ್ಥ ನಾಮಧೇಯವುಳ್ಳದಾಗಿ, ಕೃತಂ - ಮಾಡಲ್ಪಟ್ಟಿತು. ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಂಶಸ್ಸರ್ಗಃ.

---

ದನ್ನು ಕಂಡು ಕಕುತ್ಸ್ಥವಂಶೋತ್ಪನ್ನನಾದ ರಾಮಚಂದ್ರನನ್ನು ಕುರಿತು "ಮಹಾ ಭುಜಬಲಶಾಲಿಯಾದ ರಘುನಂದನನೇ ! ನಿನ್ನಿಂದ ಇದೀಗ ಕೃತಾರ್ಥನಾದೆನು! ಎಲೈ ಯಶೋವಂತನೇ ! ತಂದೆಯಾಜ್ಞೆಯು ನಿನ್ನಿಂದಾಚರಿಸಲ್ಪಟ್ಟಿತು! ಈ ಆಶ್ರಮವೆಂಬುದು ಈಗ ಸತ್ಯವಾಯಿತು!!" ಎಂದನು ॥೨೩-೨೪॥

ಇಂತಿದು ಸುಬಾಹು ಮಾರೀಚ ಗರ್ಹಣ ವೃತ್ತಾಂತವೆಂಬ

ಮೂವತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕತ್ರಿಂಶಸ್ಸರ್ಗಃ

---

ಅಥ ತಾಂ ರಜನೀಂ ತತ್ರ ಕೃತಾರ್ಥೌ ರಾಮಲಕ್ಷ್ಮಣೌ ॥ ಊಷತು
ರ್ಮುದಿತೌ ವೀರೌ ಪ್ರಹೃಷ್ಟೇನಾಂತರಾತ್ಮನಾ ॥೧॥ ಪ್ರಭಾತಾಯಾಂತು
ಶರ್ವರ್ಯಾಂ ಕೃತ ಪೌರ್ವಾಹ್ಣಿಕ ಕ್ರಿಯೌ ॥ ವಿಶ್ವಾಮಿತ್ರ ಮೃಷೀಂಶ್ಚಾನ್ಯಾ
ಸಹಿತಾವಭಿಜಗ್ಮತುಃ ॥ ೨ ॥ ಅಭಿವಾದ್ಯ ಮುನಿಶ್ರೇಷ್ಠಂ ಜ್ವಲಂತಮಿವ
ಪಾವಕಂ ॥ ಊಚತುರ್ಮಧುರೋದಾರಂ ವಾಕ್ಯಂ ಮಧುರಭಾಷಿಣೌ ॥೩॥
ಇಮೌ ಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ ॥ ಆಜ್ಞಾ ಪಯ

---

ಅಥ ಬಳಿಕ, ತತ್ರ - ಆ ಯಜ್ಞಶಾಲೆಯಲ್ಲಿ, ಮುದಿತೌ - ಸಂತೋಷಯುಕ್ತರಾಗಿ, ಕೃತಾರ್ಥೌ - ಫಲಿಸಿದ ಪ್ರಯತ್ನವುಳ್ಳವರೂ, ವೀರೌ - ಶೂರರೂ ಆದ, ರಾಮಲಕ್ಷ್ಮಣೌ - ರಾಮ ಲಕ್ಷ್ಮಣರು, ಪ್ರಹೃಷ್ಟೇನ - ಹರ್ಷಗೊಂಡ, ಅಂತರಾತ್ಮನಾ - ಮನಸ್ಸಿನಿಂದ. ತಾಂರಜನೀಂ - ಆ ರಾತ್ರಿಯಲ್ಲಿ, ಊಷತುಃ - ಇದ್ದರು. ॥೧॥ ಶರ್ವರ್ಯಾಂತು-ರಾತ್ರಿಯು ಕಳೆದು, ಪ್ರಭಾತಾಯಾಂ-ಬೆಳಗಾಗುತ್ತಿರಲು, ಕೃತಪೌರ್ವಾಹ್ಣಿಕಕ್ರಿಯೌ, ಕೃತ ಮಾಡಲ್ಪಟ್ಟ, ಪೌರ್ವಾಹ್ಣಿಕಕ್ರಿಯೌ-ಪ್ರಾತಃ ಕಾಲ ಕರ್ಮವುಳ್ಳ ರಾಮಲಕ್ಷ್ಮಣರು, ಸಹಿತೌ - ಕೂಡಿ, ವಿಶ್ವಾಮಿತ್ರಂ ವಿಶ್ವಾಮಿತ್ರನನ್ನೂ, ಅನ್ಯಾನ್ಮೃಷೀಂಶ್ಚ - ಇತರ ಋಷಿಗಳನ್ನೂ ಕುರಿತು, ಅಭಿಜಗ್ಮತುಃ - ಬಂದರು ॥ ೨ ॥ ಮಧುರ ಭಾಷಿಣೌ - ಮನಕ್ಕಿಂಪಾದ ಮಾತುಗಳುಳ್ಳ ರಾಮಲಕ್ಷ್ಮಣರು, ಪಾವಕಾವಿವ- ಅಗ್ನಿಯಂತೆ, ಜ್ವಲಂತಂ - ಹೊಳೆಯುತ್ತಿರುವ, ಮುನಿಶ್ರೇಷ್ಠಂ- ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು, ಅಭಿ ವಾದ್ಯ - ನಮಸ್ಕರಿಸಿ, ಮಧುರೋದಾರಂ - ಶ್ರಾವ್ಯವಾಗಿಯೂ ಗಂಭೀರವಾಗಿಯೂ ಇರುವಂತೆ, ವಾಕ್ಯಂ - ವಚನವನ್ನು, ಊಚತುಃ - ಹೇಳಿದರು. ॥ ೩ ॥ ಹೇಮುನಿಶಾರ್ದೂಲ- ಎಲೈ ಋಷಿ ಶ್ರೇಷ್ಠನೆ, ಇಮೌ-ಈ ನಾವು, ಸಮುಪಸ್ಥಿತೌ-ಸಮೀಪವರ್ತಿಗಳು, ಸ್ಮ-ಆಗಿರುವೆವು, ಯಥೇಷ್ಟಂ-

---

ಆ ಬಳಿಕ ವಿಶ್ವಾಮಿತ್ರನ ಯಾಗಕ್ಕೆ ಅಂತರಾಯವನ್ನುಂಟುಮಾಡುತ್ತಿದ್ದ ಸುಬಾಹುವನ್ನು ಕೊಂದು ಮಾರೀಚನನ್ನು ತೂರಿ, ಕೃತಕೃತ್ಯರೂ, ಹರ್ಷಯುಕ್ತರೂ, ಸಂತಸಗೊಂಡ ಅಂತರಂಗವುಳ್ಳವರೂ, ಆದ ರಾಮ ಲಕ್ಷ್ಮಣರು ಆ ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ನಿತ್ಯಕೃತ್ಯಗಳನ್ನು ನೆರವೇರಿಸಿ, ವಿಶ್ವಾಮಿತ್ರನನ್ನೂ ಇತರ ಋಷಿಗಳನ್ನೂ ಸಮೀಪಿಸಿದರು. ॥ ೧-೨ ॥ ಆಗ ಆ ಈರ್ವರೂ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ ಮುನಿಪುಂಗವನಾದ ವಿಶ್ವಾಮಿತ್ರನನ್ನು ನಮಸ್ಕರಿಸಿ ಮಧುರತೆಯಿಂದ ಉದಾರವಾದ ಮಾತನ್ನು ಹೀಗೆ ಹೇಳಿದರು. ॥ ೩ ॥ "ಓ ಮುನಿಶ್ರೇಷ್ಠನೇ ! ಇದೋ ಕಿಂಕರರಾದ ನಾವೀರ್ವರೂ ನಿನ್ನೆಡೆಗೆ ಬಂದಿರುವೆವು; ಬೇಕಾದಂತೆ ಅಪ್ಪಣೆಮಾಡು. ಯಾವ ಆಜ್ಞೆಯನ್ನು ನೆರವೇರಿಸ

ಯಥೇಷ್ಟಂ ವೈ ಶಾಸನಂ ಕರವಾವಕಿಂ ॥ ೪ ॥ ಏವಮುಕ್ತಾಸ್ತತಸ್ತಾಭ್ಯಾಂ ಸರ್ವ ಏವ ಮಹರ್ಷಯಃ ॥ ವಿಶ್ವಾಮಿತ್ರಂ ಪುರಸ್ಕೃತ್ಯ ರಾಮಂ ವಚನಮಬ್ರುವನ್ ॥೫॥ ಮೈಥಿಲಸ್ಯ ನರಶ್ರೇಷ್ಠ ಜನಕಸ್ಯ ಭವಿಷ್ಯತಿ॥ ಯಜ್ಞಃ ಪರಮಧರ್ಮಿಷ್ಠಸ್ತಸ್ಯ ಯಾಸ್ಯಾಮಹೇ ವಯಂ ॥ ೬ ॥ ತ್ವಂಚೈವ ನರಶಾರ್ದೂಲ ಸಹಾಸ್ಮಾಭಿರ್ಗಮಿಷ್ಯಸಿ ॥ ಅದ್ಭುತಂಚ ಧನೂರತ್ನಂ ತತ್ರ ತದ್ದ್ರಷ್ಟುಮರ್ಹಸಿ ॥ ೭ ॥ ತದ್ಧಿ ಪೂರ್ವಂ ನರಶ್ರೇಷ್ಠ ದತ್ತಂ ಸದಸಿ ದೈವತೈಃ ॥ ಅಪ್ರಮೇಯಬಲಂ ಘೋರಂ ಮಖೇ ಪರಮಭಾಸ್ವರಂ ॥೮॥ ನಾಸ್ಯ ದೇವಾ ನಗಂಧರ್ವಾ ನಾಸುರಾ ನಚ ರಾಕ್ಷಸಾಃ ॥ ಕರ್ತುಮಾರೋಪಣಂ

---

ಇಷ್ಟಾನುಸಾರವಾಗಿ, ಆಜ್ಞಾಪಯ-ಅಪ್ಪಣೆಮಾಡು, ಕಿಂಶಾಸನಂ - ಯಾವ ಆಜ್ಞೆಯನ್ನು, ಕರವಾವವೈ - ಮಾಡುವೆವು, ॥ ೪ ॥ ತತಃ - ಬಳಿಕ, ಏವಂ - ಈ ಪರಿಯಾಗಿ, ತಾಭ್ಯಾಂ-ಆ ರಾಮಲಕ್ಷ್ಮಣರಿಂದ, ಉಕ್ತಾಃ - ಹೇಳಲ್ಪಟ್ಟ, ಸರ್ವಏವ - ಸಮಸ್ತರಾದ, ಮಹರ್ಷಯಃ-ಮಹರ್ಷಿಗಳು, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಪುರಸ್ಕೃತ್ಯ - ಮುಂದಿರಿಸಿಕೊಂಡು, ರಾಮಂ - ಶ್ರೀರಾಮನನ್ನು ಕುರಿತು, ವಚನಂ - ಮಾತನ್ನು, ಅಬ್ರುವನ್ - ನುಡಿದನು. ॥೫॥ (ಗೊಂ) ಹೇನರಶ್ರೇಷ್ಠ - ಎಲೈ ಪುರುಷಶ್ರೇಷ್ಠನೆ, ಮೈಥಿಲಸ್ಯ-ಮಿದಿಲಾಧಿಪತಿಯಾದ, ಜನಕಸ್ಯ-ಜನಕರಾಯನ, ಪರಮಧರ್ಮಿಷ್ಠಃ - ಬಹಳ ಧರ್ಮಪ್ರಧಾನವಾದ, ಯಜ್ಞಃ-ಯಜ್ಞವು, (ತಿ) ಹೇಪರಮ-ಎಲೈ ಸರ್ವೋತ್ಕೃಷ್ಟವಾದ ಜಯಲಕ್ಷ್ಮೀ ಸಂಪನ್ನನೇ, ಧರ್ಮಿಷ್ಠಃ - ಧರ್ಮಪ್ರಧಾನವಾದ, ತಸ್ಯ - ಆ ಪ್ರಸಿದ್ಧನಾದ, ಜನಕಸ್ಯ - ಜನಕರಾಯನ, ಯಜ್ಞಃ - ಯಜ್ಞವು, ಭವಿಷ್ಯತಿ - ಆಗುತ್ತದೆ, ವಯಂ - ನಾವು, ಯಾಸ್ಯಾಮಹೇ - ಹೋಗುತ್ತೇವೆ. ॥ ೬ ॥ ಹೇನರಶಾರ್ದೂಲ- ಎಲೈ ಪುರುಷವ್ಯಾಘ್ರನೆ, ಅಸ್ಮಾಭಿಸ್ಸಹ - ನಮ್ಮೊಂದೊಡಗೂಡಿ, ತ್ವಂಚೈವ - ನೀನೂ ಸಹಾ, ಗಮಿಷ್ಯಸಿಯದಿ - ಬಂದರೆ, ತತ್ರ - ಆ ಯಜ್ಞಶಾಲೆಯಲ್ಲಿ, ಅದ್ಭುತಂ - ಆಶ್ಚರ್ಯಕರವಾದ, ತತ್ - ಪ್ರಸಿದ್ಧವಾದ, ಧನೂರತ್ನಂಚ - ಶ್ರೈವ ಧನುಶ್ರೇಷ್ಠವನ್ನು, ದ್ರಷ್ಟುಂ-ನೋಡಲು, ಅರ್ಹಸಿ - ಯೋಗ್ಯನಾಗುವೆ, ॥೭॥ ಹೇನರಶ್ರೇಷ್ಠ - ಎಲೈ ನರಶ್ರೇಷ್ಠನೆ, ಪೂರ್ವಂ - ಪೂರ್ವದಲ್ಲಿ, ಮಖೇ - ದೇವರಾಜನ ಯಜ್ಞದಲ್ಲಿ, ಅಪ್ರಮೇಯಬಲಂ - ಅಪಾರವಾದ ಬಲವುಳ್ಳ, ಘೋರಂ - ಭಯಂಕರವಾದ, ಪರಮಭಾಸ್ವರಂ - ಬಹಳ ಪ್ರಕಾಶಮಾನವಾದ, ತತ್ - ಆ ಧನುಸ್ಸು, ದೈವತೈಃ- ದೇವತೆಗಳಿಂದ, ಸದಸಿ–ದೇವರಾಜನ ಯಜ್ಞಸಭೆಯಲ್ಲಿ, ದತ್ತಂ - ಕೊಡಲ್ಪಟ್ಟಿತು, ಅಸ್ಯ - ಈ ಧನುಸ್ಸಿನ, ಆರೋಪಣಂ - ನಾರಿಯ

---

ಬೇಕು ”ಹೀಗೆಂದ ರಾಮಲಕ್ಷ್ಮಣರನ್ನು ಕುರಿತು, ಋಷಿಗಳೆಲ್ಲರೂ ವಿಶ್ವಾಮಿತ್ರನನ್ನುಮುಂದು ಮಾಡಿಕೊಂಡು “ರಾಮಾ ! ಮಿಥಿಲಾಧಿಪತಿಯೂ, ಮಹಾಧರ್ಮಿಷ್ಠನೂ ಆದ ಜನಕರಾಯನ ಯಾಗವು ನಡೆವುದು. ಅಲ್ಲಿಗೆ ನಾವೆಲ್ಲರೂ ಹೋಗಲುಳ್ಳವರು. ಎಲೈ ಪುರುಷಶ್ರೇಷ್ಠನೇ ! ನೀನೂ ನಮ್ಮೊಡನೆ ಹೊರಡುವೆ; ಅಲ್ಲಿ ಅದ್ಭುತವಾದ ಧನುಸ್ಸನ್ನು ಕಾಣುವೆ. ರಾಮ ! ಅಪಾರವಾದ ಬಲವುಳ್ಳುದೂ, ಬಹು ಘೋರವಾದುದೂ, ಅತಿ ಪ್ರಕಾಶಮಾನವಾದುದೂ ಆದ ಆ ಧನುಸ್ಸು ದೇವಸದಸ್ಸಿನಲ್ಲಿ ದೇವತೆಗಳಿಂದ ಕೊಡಲ್ಪಟ್ಟುದು. ॥ ೪-೮ ॥ ಈ ಧನುಸ್ಸನ್ನು ಆರೋಪಣ ಮಾಡಲು ದೇವತೆಗಳೇ ಆಗಲಿ,

ಶಕ್ತಾ ನಕಥಂಚನಮಾನುಷಾಃ ॥ ೯ ॥ ಧನುಷಸ್ತಸ್ಯವೀರ್ಯಂತು ಜಿಜ್ಞಾ ಸಂತೋ ಮಹೀಕ್ಷಿತಃ ॥ ನಶೇಕುರಾರೋಪಯಿತುಂ ರಾಜಪುತ್ರಾ ಮಹಾ ಬಲಾಃ ॥ ೧೦ ॥ ತದ್ಧನುರ್ನರಶಾರ್ದೂಲ ಮೈಥಿಲಸ್ಯ ಮಹಾತ್ಮನಃ ॥ ತತ್ರದ್ರಕ್ಷ್ಯಸಿ ಕಾಕುತ್ಸ್ಥ ಯಜ್ಞಂಚಾದ್ಭುತ ದರ್ಶನಂ ॥೧೧॥ ತದ್ಧಿ ಯಜ್ಞಫಲಂ ತೇನ ಮೈಥಿಲೇನೋತ್ತಮಂ ಧನುಃ ॥ ಯಾಚಿತಂ ನರಶಾ ರ್ದೂಲ ಸುನಾಭಂ ಸರ್ವದೈವತೈಃ ॥ ೧೨ ॥ ಆಯಾಗಭೂತಂ ನೃಪತೇ ಸ್ತಸ್ಯ ವೇಶ್ಮನಿ ರಾಘವ ॥ ಅರ್ಚಿತಂ ವಿವಿಧೈರ್ಗಂಧೈರ್ಧೂಪೈಶ್ಚಾ

ಧನುಸ್ಸನ್ನು, ಕರ್ತುಂ - ಮಾಡಲು, ದೇವಾಃ ದೇವತೆಗಳು, ನಶಕ್ತಾಃ - ಸಮರ್ಥರಲ್ಲವು, ಗಂಧರ್ವಾಃ - ಗಂಧರ್ವರು, ನ-ಸಮರ್ಥರಲ್ಲ, ಮಾನುಷಾಃ - ಮನುಷ್ಯರಾದರೆ, ಕಥಂಚನ - ಅತಿ ಪ್ರಯಾಸದಿಂದಲೂ, ನಶಕ್ತಾಃ - ಸಮರ್ಥರಲ್ಲವೇ ಅಲ್ಲವು. ॥ ೯ ॥ ತಸ್ಯಧನುಷಃ-ಆ ಧನುಸ್ಸಿನ, ವೀರ್ಯಂತು - ಶಕ್ತಿಯನ್ನು, ಜಿಜ್ಞಾಸಂತಃ - ತಿಳಿಯಲಿಷ್ಟವುಳ್ಳ, ಮಹಾಬಲಾಃ - ಮಹಾಬಲಶಾಲಿ ಗಳಾದ, ರಾಜಪುತ್ರಾಃ- ಅರಸು ಮಕ್ಕಳಾದ, ಮಹೀಕ್ಷಿತಃ-ಅರಸರು, ಆರೋಪಯಿತುಂ-ನಾರಿಯನ್ನು ಕಟ್ಟುವದಕ್ಕೆ, ನಶೇಕುಃ - ಸಮರ್ಥರಾಗಲಿಲ್ಲ ॥ ೧೦ ॥ ಹೇನರಶಾರ್ದೂಲ - ಎಲೈ ಪುರುಷ ವ್ಯಾಘ್ರನೆ, ಹೇಕಾಕುತಸ್ಥ - ಎಲೈ ಶ್ರೀರಾಮನೆ, ಮೈಥಿಲಸ್ಯ - ಮಿಥಿಲಾಧಿಪತಿಯಾದ, ಮಹಾತ್ಮನಃ ಮಹಾ ಮನಸ್ಸಿಯಾದ ಜನಕರಾಯನ, ಅದ್ಭುತದರ್ಶನಂ ಆಶ್ಚರ್ಯಕರವಾದ ನೋಟ ಉಳ್ಳ, ಯಜ್ಞಂ - ಯಜ್ಞವನ್ನೂ, ತತ್ರ - ಆ ಯಜ್ಞದಲ್ಲಿ, ತದ್ಧನುಃ-ಆ ಧನುಸ್ಸನ್ನೂ, ದ್ರಕ್ಷ್ಯಸಿ- ನೋಡುವೆ, ॥ ೧೧ ॥ ಹೇನರಶಾರ್ದೂಲ - ಎಲೈ ನರಶ್ರೇಷ್ಠನೆ, ಉತ್ತಮಂ - ಉತ್ತಮವಾದ, ಸುನಾಭಂ - (ಗೋ) ಸಧೀನಾಚೀನವಾದ ಮುಷ್ಟಿಯಿಂದ ಹಿಡಿಯತಕ್ಕ ಮಧ್ಯಸ್ಥಾನವುಳ್ಳ, ತದ್ಧನುಃ - ಆ ಧನುಸ್ಸು, ತೇನಮೈಥಿಲೇನ - ಆ ಜನಕರಾಯನಿಂದ, ಯಜ್ಞಫಲಂ - ಯಜ್ಞಕ್ಕೆ ಫಲ ರೂಪವಾಗಿ, ಸರ್ವದೇವತೈಃ - ಸಮಸ್ತ ದೇವತೆಗಳಿಂದ, ಯಾಚಿತಂ- ಪ್ರಾರ್ಥಿಸಲ್ಪಟ್ಟಿತು. ॥ ೧೨ ॥ ಹೇರಾಘವ - ಎಲೈ ಶ್ರೀರಾಮನೆ, ತಸ್ಯನೃಪತೇಃ-ಆ ಜನಕರಾಜನ, ವೇಶ್ಮನಿ- ಮನೆಯಲ್ಲಿ, ವಿವಿಧೈಃ- ನಾನಾಬಗೆಗಳಾದ, ಗಂಧೈಃ - ಗಂಧಗಳಿಂದಲೂ, ಅಗರುಗಂಧಿಭಿಃ - ಕೃಷ್ಣಾಗರು ಗಂಧವುಳ್ಳ

ಗಂಧರ್ವರೇ ಆಗಲಿ, ದಾನವರೇ ಆಗಲಿ, ರಾಕ್ಷಸರೇ ಆಗಲಿ, ಶಕ್ತರಲ್ಲವು. ಮನುಷ್ಯರಂತೂ ಅತಿ ಪ್ರಯಾಸದಿಂದಲಾದರೂ ಶಕ್ತರಾಗುವದೇ ಇಲ್ಲವು. ಈ ಧನುಸ್ಸಿನ ವೀರ್ಯವನ್ನು ಜಿಜ್ಞಾಸಮಾಡುತ್ತಿರುವ ಮಹಾ ಬಲಿಷ್ಠರಾದ ರಾಜಪುತ್ರರೂ, ಆರೋಪಣ ಮಾಡಲು ಶಕ್ತರಾಗಲಿಲ್ಲ. ॥ ೯-೧೦ ॥ ಎಲೈ ರಘುನಂದನನೆ ! ಇಂತತಿಮಹಿಮಾಸ್ಪದವಾದ ಜನಕರಾಯನ ಧನುಸ್ಸನ್ನು, ಆ ರಾಯನ ಪಟ್ಟಣದಲ್ಲಿ ನೋಡುವಿಯಲ್ಲದೆ, ಅದ್ಭುತ ದರ್ಶ ನವಾದ ಯಜ್ಞಕರ್ಮವನ್ನೂ ನೋಡುವಿ ॥ ೧೧ ॥ ಜನಕರಾಜನು ತಾನು ಮಾಡಿದ ಯಜ್ಞಫಲಕ್ಕೋಸುಗ ಈ ಧನುಸ್ಸನ್ನು ಬೇಡಲು ದೇವತೆಗಳಿದನ್ನು ಅವನಿಗಾಗಿ ದಯಪಾ ಲಿಸಿದರು. (ತಿಲಕ) ಜನಕರಾಯನು ಯಜ್ಞಫಲರೂಪವಾಗಿ ಧನುಸ್ಸನ್ನು ಬೇಡಲು ಪಾರ್ವತೀ ರಮಣನು ಶತ್ರುನಾಶವನ್ನು ಮಾಡಲೋಸುಗ ಈ ಧನುಸ್ಸನ್ನು ಆತನಿಗೆ ದಯ

ಗರುಗಂಧಿಭಿಃ ॥೧೩॥ ಏವಮುಕ್ತ್ವಾ ಮುನಿವರಃ ಪ್ರಸ್ಥಾನಮಕರೋ
ತ್ತದಾ ॥ ಸರ್ಷಿಸಂಘಸ್ಸಕಾಕುತ್ಸ್ಥ ಆಮಂತ್ರ್ಯ ವನದೇವತಾಃ ॥೧೪॥
ಸ್ವಸ್ತಿವೋಸ್ತು ಗಮಿಷ್ಯಾಮಿ ಸಿದ್ಧ ಸ್ಸಿದ್ಧಾಶ್ರಮಾದಹಂ ॥ ಉತ್ತರೇ
ಜಾಹ್ನವೀ ತೀರೇ ಹಿಮವಂತಂ ಶಿಲೋಚ್ಚಯಂ ॥೧೫॥ ಪ್ರದಕ್ಷಿಣಂ
ತತಃ ಕೃತ್ವಾ ಸಿದ್ಧಾಶ್ರಮಮನುತ್ತಮಂ ॥ ಉತ್ತರಾಂದಿಶಮುದ್ದಿಶ್ಯ ಪ್ರಸ್ಥಾತು
ಮುಪಚಕ್ರಮೇ ॥೧೬॥ ತಂ ಪ್ರಯಾಂತಂ ಮುನಿವರಮನ್ವಯಾದನು
ಸಾರಿಣಾಂ॥ ಶಕಟೀ ಶತ ಮಾತ್ರಂತು ಪ್ರಾಯೇಣ ಬ್ರಹ್ಮವಾದಿನಾಂ ॥೧೭॥

---

ಧೂಪೈಶ್ಚ - ಧೂಪಗಳಿಂದಲೂ ಪೂಜಿಸಲ್ಪಟ್ಟ ಧನುಸ್ಸು, ಆಯಾಗಭೂತಂ ಯಾಗಪರಿಯಂತವೂ ಇರುತ್ತದೆ ॥೧೩॥ ತದಾ - ಆಗ, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ಮುನಿವರಃ - ವಿಶ್ವಾಮಿತ್ರನು, ಸರ್ಷಿಸಂಘಃ - ಋಷಿಗಳ ತಂಡಗಳಿಂದೊಡಗೂಡಿ, ಸಕಾಕುತ್ಸ್ಥಃ - ರಾಮಲಕ್ಷ್ಮಣರಿಂದಲೂ ಕೂಡಿ ವನದೇವತಾಃ - ವನಾಭಿಮಾನ ದೇವತೆಗಳನ್ನು, ಆಮಂತ್ರ್ಯ- ಸಮ್ಮತಗೊಳಿಸಿ, ಪ್ರಸ್ಥಾನಂ - ಪಯಣವನ್ನು, ಅಕರೋತ್- ಮಾಡಿದನು. ॥೧೪॥ ವಃ-ನಿಮಗೆ, ಸ್ವಸ್ತಿ - ಶುಭವು, ಅಸ್ತು - ಆಗಲಿ, ಸಿದ್ಧಾಶ್ರಮಾತ್ - ಸಿದ್ಧಾಶ್ರಮದಿಂದ, ಸಿದ್ಧಃ - ಕಾರ್ಯಸಿದ್ಧಿಯುಳ್ಳ, ಅಹಂ - ನಾನು, ಉತ್ತರೇ - ಉತ್ತರದಿಕ್ಕಿನಲ್ಲಿರುವ, ಜಾಹ್ನವೀತೀರೇ - ಗಂಗಾತೀರದಲ್ಲಿ, ಹಿಮವಂತಂ - ಹಿಮವಂತನೆಂಬ, ಶಿಲೋಚ್ಚಯಂ - ಪರ್ವತವನ್ನು ಕುರಿತು, ಗಮಿಷ್ಯಾಮಿ-ಹೋಗುವನು. ॥೧೫॥ ತತಃ - ಬಳಿಕ, ಅನುತ್ತಮಂ - ಸರ್ವೋತ್ತಮವಾದ, ಸಿದ್ಧಾಶ್ರಮಂ- ಸಿದ್ಧಾಶ್ರಮವನ್ನು ಕುರಿತು, ಪ್ರದಕ್ಷಿಣಂ - ಸಮಸ್ಕಾರವನ್ನು, ಕೃತ್ವಾ - ಮಾಡಿ, ಉತ್ತರಾಂದಿಶಂ - ಉತ್ತರದಿಕ್ಕನ್ನು, ಉದ್ದಿಶ್ಯ - ಉದ್ದೇಶಿಸಿ, ಪ್ರಸ್ಥಾತುಂ- ಪ್ರಯಾಣ ಮಾಡಲು, ಉಪಚಕ್ರಮೇ-ಪ್ರಯತ್ನಪಟ್ಟನು. ॥೧೬॥ ಅನುಸಾರಿಣಾಂ - ಉತ್ತರ ದಿಕ್ಕನ್ನು ಕುರಿತು, ಪ್ರಯಾಂತಂ - ಪ್ರಯಾಣಮಾಡುತ್ತಿರುವ, ತಂ ಮುನಿವರಂ - ಆ ಮುನಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಪ್ರಾಯೇಣ-ಬಹುವಾಗಿ,ಬ್ರಹ್ಮವಾದಿನಾಂ-ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರ, ಶಕಟೀಶತಮಾತ್ರಂತು-ನೂರು ಬಂಡಿಗಳ ಸಂಖ್ಯಾಮಾತ್ರವು, ಅನ್ವಯಾತ್-ಅನುಸರಿಸಿ ಹೋದವು. ॥೧೭॥ ಸಿದ್ಧಾಶ್ರಮನಿವಾ

---

ಪಾಲಿಸಿದನು. ॥೧೨॥ ಆತನು ಯಾಗಕಾಲಗಳಲ್ಲಿಯೂ, ಧನುರುತ್ಸವಾದಿಗಳಲ್ಲಿಯೂ, ಧೂಪ ದೀಪಾದಿ ಷೋಡಶೋಪಚಾರಗಳಿಂದ ಆ ಧನುಶ್ರೇಷ್ಠವನ್ನು ಪೂಜಿಸುತ್ತಿರುವನು.'' ಎಂದರು. ॥೧೩॥ ಇಂತು ನುಡಿದು ವಿಶ್ವಾಮಿತ್ರಮುನೀಶ್ವರನು ಋಷಿ ಸಮೂಹದೊಡನೆಯೂ, ರಾಜಕುಮಾರರೊಡನೆಯೂ ಮಿಥಿಲೆಗೆ ಪ್ರಯಾಣವಂ ಬಳೆಯಿಸಿ ವನದೇವತೆಗಳನ್ನು ಕರೆದು "ಓ ವನದೇವತೆಗಳಿರಾ! ನಿಮಗೆ ಮಂಗಳವಾಗಲಿ, ಈ ಸಿದ್ಧಾಶ್ರಮದಿಂದ ಗಂಗೆಯ ಉತ್ತರ ದಿಕ್ಕಿಗೆ ಹೋಗಿ ಹಿಮವತ್ಪರ್ವತವನ್ನು ಪ್ರದಕ್ಷಿಣ ಮಾಡಿ, ಶ್ರೇಷ್ಠವಾದ ಸಿದ್ಧಾಶ್ರಮವನ್ನು ಕುರಿತು ಹೊರಡುವೆನು'' ಎಂದು ಹೇಳಿ ಹೊರಟನು. ಇಂತು ಪ್ರಯಾಣವನ್ನು ಬೆಳಸಿದ ಆ ವಿಶ್ವಾಮಿತ್ರನನ್ನು ಬ್ರಹ್ಮವಾದಿಗಳಾದ ಋಷಿಗಳ ನೂರಾರು ಶಕಟಗಳು ಅನುಸರಿಸಿದವು. ॥ ೧೪-೧೭ ॥ ಸಿದ್ಧಾಶ್ರಮವಾಸಿಗಳಾದ ಮೃಗ ಪಕ್ಷಿಗಳೂ

ಮೃಗಪಕ್ಷಿ ಗಣಾಶ್ಚೈವ ಸಿದ್ಧಾಶ್ರಮ ನಿವಾಸಿನಃ ॥ ಅನುಜಗ್ಮುರ್ಮಹಾತ್ಮಾನಂ ವಿಶ್ವಾಮಿತ್ರಂ ಮಹಾಮುನಿಂ ॥೧೮॥ ನಿವರ್ತಯಾಮಾಸತತಃ ಪಕ್ಷಿಸಂಘಾ ನ್ಮೃಗಾನಪಿ॥ತೇ ಗತ್ವಾ ದೂರಮಧ್ವಾನಂ ಲಂಬಮಾನೇ ದಿವಾಕರೇ ॥ ೧೯ ॥ ವಾಸಂಚಕ್ರುರ್ಮುನಿಗಣಾ ಶ್ಶೋಣಾಕೂಲೇ ಸಮಾಹಿತಾಃ॥ ತೇಽಸ್ತಂಗತೇ ದಿನಕರೇ ಸ್ನಾತ್ವಾ ಹುತಹುತಾಶನಾಃ ॥೨೦॥ ವಿಶ್ವಾಮಿತ್ರಂ ಪುರಸ್ಕೃತ್ಯ ನಿಷೇದುರಮಿತೌಜಸಃ ॥ ರಾಮೋಽಪಿ ಸಹ ಸೌಮಿತ್ರಿ ರ್ಮುನೀಂಸ್ತಾ ನಭಿಪೂಜ್ಯಚ ॥ ೨೧ ॥ ಅಗ್ರತೋನಿಷಸಾದಾಥ ವಿಶ್ವಾಮಿತ್ರಸ್ಯ

---

ನಿವಾಸಿನಃ-ಸಿದ್ಧಾಶ್ರಮದಲ್ಲಿ ವಾಸಮಾಡಿಕೊಂಡಿರುವ, ಮೃಗಪಕ್ಷಿಗಣಾಶ್ಚೈವ - ಮೃಗಪಕ್ಷಿಗಳ ಗುಂಪುಗಳೂ, ಮಹಾತ್ಮಾನಂ - ಮಹಾ ಮನಸ್ವಿಯಾದ, ಮಹಾಮುನಿಂ-ಮಹರ್ಷಿಯಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಅನುಜಗ್ಮುಃ - ಅನುಸರಿಸಿಹೋದವು, ॥೧೮॥ ತತಃ-ಬಳಿಕ, ಪಕ್ಷಿಸಂಘಾನ್-ಪಕ್ಷಿಗಳ ಸಂಘಗಳನ್ನು,ಮೃಗಾನಪಿ- ಮೃಗಗಳನ್ನು,ನಿವರ್ತಯಾಮಾಸ-ಹಿಂತಿರುಗಿಸಿದನು,ತೇಮುನಿಗಣಾ - ಆ ಋಷಿಗಳ ಗುಂಪುಗಳು, ದೂರಮಧ್ವಾನಂ - ಬಹುದೂರವಾದ ಮಾರ್ಗವನ್ನು, ಗತ್ವಾ-ನಡೆದು, ದಿವಾಕರೇ- ಸೂರ್ಯನು, ಲಂಬಮಾನೇತಿ ಲಂಬಮಾನನಾಗುತ್ತಿರಲು, ಸಮಾಹಿತಾಃ-ಸಮಾಧಾನಚಿತ್ತರಾಗಿ, ಶೋಣಾಕೂಲೇ - ಶೋಣಾನದೀತೀರದಲ್ಲಿ,ವಾಸಂ -ನಿವಾಸವನ್ನು ,ಚಕ್ರುಃ-ಮಾಡಿದರು ॥ ೧೯ ॥ ದಿನಕರೇ - ಸೂರ್ಯನು, ಅಸ್ತಂ - ಅಸ್ತಮಯ ಪರ್ವತವನ್ನು, ಗತೇಸತಿ-ಹೊಂದಿದವನಾಗುತ್ತಿರಲು, ಅಮಿತೌಜಸಃ - ಅಪಾರವಾದ ತೇಜಸ್ಸುಳ್ಳ, ತೇ - ಆ ಋಷಿಗಳು, ಸ್ನಾತ್ವಾ - ಸ್ನಾನಮಾಡಿ, ಹುತಹುತಾಶನಾಃ ಹೋಮಮಾಡಲ್ಪಟ್ಟ ಅಗ್ನಿಯುಳ್ಳವರಾಗಿ,ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು , ಪುರಸ್ಕೃತ್ಯ-ಮುಂದುಮಾಡಿಕೊಂಡು, ನಿಷೇದುಃ-ಕುಳಿತುಕೊಂಡರು, ॥೨೦॥ ರಾಮೋಽಪಿ - ಶ್ರೀರಾಮನೂ ಸಹಸೌಮಿತ್ರಿಃ - ಲಕ್ಷ್ಮಣನಿಂದೊಡಗೂಡಿ, ತಾನ್ ಮುನೀನ್-ಆ ಋಷಿಗಳನ್ನು, ಅಭಿಪೂಜ್ಯಚ - ಪೂಜೆಮಾಡಿ, ಅಥ - ಬಳಿಕ, ಧೀಮತಃ - ಮಹಾ ಜ್ಞಾನಿಯಾದ, ವಿಶ್ವಾಮಿತ್ರಸ್ಯ - ವಿಶ್ವಾಮಿತ್ರನ. ಅಗ್ರತಃ - ಮುಂದುಗಡೆ, ನಿಷಸಾದ - ಕುಳಿತುಕೊಂಡರು. ॥೨೧॥ ಅಥ - ಅನಂತರದಲ್ಲಿ, ಮಹಾತೇಜಾಃ - ಮಹಾಪರಾಕ್ರಮಶಾಲಿಯಾದ, ನರಶಾರ್ದೂಲಃ-ಪುರುಷಶ್ರೇಷ್ಠನಾದ, ರಾಮಃ - ಶ್ರೀರಾಮನು, ಮಹಾಮುನಿಂ - ಮಹಾಋಷಿಯಾದ, ವಿಶ್ವಾಮಿತ್ರಂ-

---

ಸಹ ಮಹಾತ್ಮನೂ, ಋಷಿಶ್ರೇಷ್ಠನೂ ಆದ ವಿಶ್ವಾಮಿತ್ರನನ್ನು ಬೆಂಬತ್ತಿದವು. ಆಗಲಾ ಮುನಿಯು ಆ ಮೃಗಪಕ್ಷಿನಿವಹಗಳನ್ನು ಕುರಿತು, “ಎಲೈ! ನೀವು ಈ ನನ್ನ ಸಿದ್ಧಾಶ್ರಮವನು ರಕ್ಷಿಸಿರಿ” ಎಂದು ನುಡಿದು ಹಿಂತಿರುಗಿಸಿದನು. ॥ ೧೮ ॥ ಬಳಿಕ ಋಷಿಗಳಿಂದಲೂ, ರಾಮ ಲಕ್ಷ್ಮಣರಿಂದಲೂ ಬಹುದೂರ ಪ್ರಯಾಣಮಾಡಿದ ವಿಶ್ವಾಮಿತ್ರನು ದಿನಮಣಿಯು (ಸೂರ್ಯ) ಅಂಬರ ಮಧ್ಯವನ್ನಲಂಕರಿಸಲು ಶೋಣಾನದೀ ತೀರದಲ್ಲಿಳಿದು ವಾಸಿಸಿದನು. ಸಂಧ್ಯಾ ಕಾಲವಾಗುತ್ತಲೆ, ಋಷಿಗಳು ಸ್ನಾನವಂಗೈದು ಅಗ್ನಿಹೋತ್ರಾದಿಗಳನ್ನು ನಿರ್ವರ್ತಿಸಿ ವಿಶ್ವಾಮಿತ್ರನನ್ನು ಪುರಸ್ಕರಿಸಿ ಅಲ್ಲಿಯೇ ಕುಳಿತರು ॥ ೧೯-೨೦ ॥ ರಾಮನೂ ಸಹ ಲಕ್ಷ್ಮಣನೊಡಗೂಡಿ ಆ ಋಷಿಗಳೆಲ್ಲರನ್ನೂಗೌರವಿಸಿ ವಿಶ್ವಾಮಿತ್ರನು ಮುಂದುಗಡೆ ಕುಳಿತು

ಧೀಮತಃ॥ ಅಥ ರಾಮೋ ಮಹಾತೇಜಾ ವಿಶ್ವಾಮಿತ್ರಂ ಮಹಾಮುನಿಂ ॥೨೨॥
ಪಪ್ರಚ್ಛ ನರಶಾರ್ದೂಲಃ ಕೌತೂಹಲ ಸಮನ್ವಿತಃ ॥ ಭಗವನ್ ಕೋನ್ವ
ಯಂದೇಶ ಸ್ಸಮೃದ್ಧ ವನಶೋಭಿತಃ ॥೨೩॥ ಶ್ರೋತುಮಿಚ್ಛಾಮಿ ಭದ್ರಂ ತೇ
ವಕ್ತುಮರ್ಹಸಿ ತತ್ವತಃ ॥ ಚೋದಿತೋ ರಾಮವಾಕ್ಯೇನ ಕಥಯಾ
ಮಾಸ ಸುವ್ರತಃ ॥ ತಸ್ಯ ದೇಶಸ್ಯ ನಿಖಿಲಮೃಷಿಮಧ್ಯೇ ಮಹಾತಪಾಃ ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕತ್ರಿಂಶಸ್ಸರ್ಗಃ.



ವಿಶ್ವಾಮಿತ್ರನನ್ನು ಕುರಿತು, ಕೌತೂಹಲಸಮನ್ವಿತಃ - ಉತ್ಕಂಠತೆಯಿಂದ ಕೂಡಿ, ಪಪ್ರಚ್ಛ- ಕೇಳಿದನು. ॥ ೨೨ ॥ ಹೇಭಗವನ್ - ಎಲೈ ಷಡ್ಗುಣೈಶ್ವರ್ಯ ಸಂಪನ್ನನೇ, ತೇ -ನಿನಗೆ, ಭದ್ರಂ-ಶುಭವು ಅಸ್ತು - ಆಗಲಿ, ಸಮೃದ್ಧವನಶೋಭಿತಃ - ಚನ್ನಾಗಿ ವೃದ್ಧಿಹೊಂದಿದ, ಅಯಂದೇಶಃ - ಈ ದೇಶವು ಕೋನು - ಯಾವದು, ತತ್ವತಃ - ಯಥಾರ್ಥವಾಗಿ, ವಕ್ತುಂ - ಹೇಳಲು, ಅರ್ಹಸಿ-ಅರ್ಹನಾಗು, ಶ್ರೋತುಂ - ಕೇಳಲು, ಇಚ್ಛಾಮಿ - ಇಚ್ಛಿಸುತ್ತೇನೆ. ॥ ೨೩ ॥ ರಾಮವಾಕ್ಯೇನ - ಶ್ರೀರಾಮನ ವಚನದಿಂದ, ಚೋದಿತಃ - ಪ್ರೇರಿತನಾದ, ಸುವ್ರತಃ - ಸಮೀಚೀನವಾದ ನಿಯಮವುಳ್ಳ, ಮಹಾತಪಾಃ - ಮಹಾತಪೋ ಶ್ರೇಷ್ಠನಾದ ವಿಶ್ವಾಮಿತ್ರನು, ಋಷಿಮಧ್ಯೇ - ಋಷಿಗಳ ಮಧ್ಯದಲ್ಲಿ, ತಸ್ಯ ದೇಶಸ್ಯ - ಆ ಪ್ರದೇಶದ, ನಿಖಿಲಂ - ಸಕಲ ವೃತ್ತಾಂತವನ್ನೂ, ಕಥಯಾಮಾಸ-ಹೇಳಿದನು.

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕತ್ರಿಂಶಸ್ಸರ್ಗಃ.



ಕುತೂಹಲ ಸಮನ್ವಿತನಾಗಿ ಕುಳಿತು, "ಪೂಜ್ಯನೇ! ಸಮೃದ್ಧವಾದ ವನದಿಂದ ರಾರಾಜಿಸುವ ಈ ದೇಶವಾವುದು ? ಇದರ ವಿಷಯವನ್ನು ಕೇಳಲು ಬಹಳವಾಗಿ ಇಚ್ಛಿಸುವೆನು ನಿನಗೆ ಮಂಗಳವಾಗಲಿ, ವಿಸ್ತಾರವಾಗಿ ನಿರೂಪಿಸು" ಎಂದು ಕೇಳಿದನು. ಆಗಲಾ ತಪಸ್ವಿಯಾದ ವಿಶ್ವಾಮಿತ್ರನು ಆ ದೇಶದ ಯಾವತ್ತೂ ವೃತ್ತಾಂತವನ್ನು ಋಷಿಮಧ್ಯದಲ್ಲಿ ನಿರೂಪಿಸಿದನು.
॥೨೧-೨೪॥

ಇಂತಿದು ಶ್ರೀರಾಮ ಲಕ್ಷ್ಮಣರ ಮಿಥಿಲಾಪುರೀ ಪ್ರಯಾಣ ಕಥನವೆಂಬ
ಮುವತ್ತೊಂದನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ದ್ವಾತ್ರಿಂಶಸ್ಸರ್ಗಃ.



ಬ್ರಹ್ಮಯೋನಿ ರ್ಮಹಾನಾಸೀ ತ್ಕುಶೋನಾಮ ಮಹಾತಪಾಃ ‖ ಅಕ್ಲಿಷ್ಟ ವ್ರತಧರ್ಮಜ್ಞ ಸ್ಸಜ್ಜನ ಪ್ರತಿಪೂಜಕಃ ‖ ೧ ‖ ಸಮಹಾತ್ಮಾ ಕುಲೀನಾಯಾಂ ಯುಕ್ತಾಯಾಂ ಸುಗುಣೋಲ್ಬಣಾನ್ ‖೨‖ ವೈದರ್ಭ್ಯಾಂ ಜನಯಾಮಾಸ ಚತುರ ಸ್ಸದೃಶಾನ್ ಸುತಾನ್ ‖೨‖ ಕುಶಾಂಬಂ ಕುಶನಾಭಂಚ ಆಧೂರ್ತರಜಸಂ ವಸುಂ ‖ ದೀಪ್ತಿಯುಕ್ತಾನ್ ಮಹೋತ್ಸಾಹಾನ್ ಕ್ಷತ್ರಧರ್ಮ ಚಿಕೀರ್ಷಯಾ ‖೩‖ ತಾನುವಾಚ ಕುಶಃಪುತ್ರಾನ್ ಧರ್ಮಿಷ್ಠಾನ್ ಸತ್ಯವಾದಿನಃ ‖ ಕ್ರಿಯತಾಂ ಪಾಲನಂ ಪುತ್ರಾ ಧರ್ಮಂ ಪ್ರಾಪ್ಸ್ಯಥ ಪುಷ್ಕಲಂ ‖೪‖ ಕುಶಸ್ಯ ವಚನಂ ಶ್ರುತ್ವಾ ಚತ್ವಾರೋ ಲೋಕಸಮ್ಮತಾಃ ‖ ನಿವೇಶಂ ಚಕ್ರಿರೇ

---

ಬ್ರಹ್ಮಯೋನಿಃ-ಬ್ರಹ್ಮಪುತ್ರನಾದ, ಮಹಾನ್ - ಜ್ಞಾನೈಶ್ವರ್ಯಾದಿಗಳಿಂದ ದೊಡ್ಡವನಾದ, ಮಹಾತಪಾಃ - ಮಹಾತಪೋವಂತನಾದ, ಅಕ್ಲಿಷ್ಟವ್ರತಧರ್ಮಜ್ಞಃ- ಅಕ್ಲಿಷ್ಟ - ಕ್ಲೇಶಪರಿಹಾರವೆಂಬ, ವ್ರತ-ವ್ರತವುಳ್ಳ, ಧರ್ಮಜ್ಞಃ - ಧರ್ಮಜ್ಞನಾದ, ಸಜ್ಜನ ಪ್ರತಿಪೂಜಕಃ - ಸಜ್ಜನರನ್ನು ಪೂಜಿಮಾಡುವ, ಕುಶೋನಾಮ ಕುಶನೆಂಬ ರಾಜರ್ಷಿಯು, ಆಸೀತ್-ಇದ್ದನು. ‖೧‖ ಮಹಾತ್ಮಾ-ಮಹಾತ್ಮನಾದ, ಸಃ-ಆ ಕುಶನು, ಕುಲೀನಾಯಾಂ-ಸತ್ಕುಲಪ್ರಸೂತಳಾದ, ಯುಕ್ತಾಯಾಂ - ಅನುರೂಪಳಾದ, ವೈದರ್ಭ್ಯಾಂ - ವಿದರ್ಭರಾಯನ ಮಗಳಲ್ಲಿ, ಸುಗುಣೋಲ್ಬಣಾನ್ - ಸದ್ಗುಣಗಳಿಂದ ಅಧಿಕರಾದ, ಸದೃಶಾನ್ - ಸಮಾನರಾದ, ಕುಶಾಂಬಂ - ಕುಶಾಂಬನನ್ನು, ಕುಶನಾಭಂಚ - ಕುಶನಾಭನನ್ನು, ಆಧೂರ್ತ ರಜಸಂ-ಆಧೂರ್ತರಜಸ್ಕನನ್ನು, ವಸುಂ - ವಸು ಎಂಬ, ಚತುರಃ-ನಾಲ್ವರಾದ, ಸುತಾನ್-ಕುವರರನ್ನು, ಜನಯಾಮಾಸ- ಹುಟ್ಟಿಸಿದನು. ‖೨‖ ದೀಪ್ತಿಯುಕ್ತಾನ್-ಪ್ರಕಾಶದಿಂದ ಯುಕ್ತರಾಗ, ಮಹೋತ್ಸಾಹಾನ್- ಮಹಾಸಂತೋಷವುಳ್ಳ, ಧರ್ಮಿಷ್ಠಾನ್ - ಧರ್ಮಿಷ್ಠರಾದ, ಸತ್ಯವಾದಿನಃ-ಸತ್ಯವಾದಿಗಳಾದ, ತಾನ್ ಪುತ್ರಾನ್- ಆ ಮಕ್ಕಳನ್ನು ಕುರಿತು, ಕ್ಷತ್ರಧರ್ಮ ಚಿಕೀರ್ಷಯಾ-ಕ್ಷತ್ರಧರ್ಮವನ್ನು ಮಾಡಲಿಚ್ಛೆಯಿಂದ, ಕುಶಃ ಕುಶನೆಂಬರಾಜರ್ಷಿಯು, ಹೇಪುತ್ರಾಃ-

---

ರಘುಕುಲ ನಂದನ! ಆದರದಿಂದಾಲಿಸು; ಪೂರ್ವದಲ್ಲಿ ಬ್ರಹ್ಮ ಕುಮರನೂ ಮಹಾತಪಸ್ವಿಯೂ, ವೀರ್ಯವಂತನೂ ಆದ ಕುಶನೆಂಬ ಓರ್ವ ನರನಾಥನಿದ್ದನು. ಈತನು ಸಕಲ ಧರ್ಮ ರಹಸ್ಯಗಳನ್ನೂ, ವ್ರತನಿಯಮಗಳನ್ನೂ ಬಲ್ಲವನು, ಶಿಷ್ಟರನ್ನು ಪೂಜಿಸುವವನೂ ಆದ ಈ ಕುಶನು ಸತ್ಕುಲ ಸಂಪನ್ನಳೂ, ಅನುರೂಪಳೂ ಆದ ವಿದರ್ಭರಾಜಕುಮರಿಯಲ್ಲಿ ತನ್ನಂತೆಯೇ ಸದ್ಗುಣ ಸಂಪನ್ನರಾದ ಕುಶಾಂಬ, ಕುಶನಾಭ, ಆಧೂರ್ತರಜಸ್ಸ,ವಸು,ಎಂಬೀ ನಾಲ್ವರು ಕುವರರನ್ನು ಪಡೆದನು. ಬಳಿಕಲಾರಾಜನು ಕ್ಷತ್ರಿಯಧರ್ಮವನ್ನಾಚರಿಸಲು,

ಸರ್ವೇ ಪುರಾಣಾಂ ನೃವರಾಸ್ತದಾ ॥ ೫ ॥ ಕುಶಾಂಬಸ್ತು ಮಹಾತೇಜಾಃ
ಕೌಶಾಂಬೀಂ ಮಕರೋತ್ಪುರೀಂ ॥ ಕುಶನಾಭಸ್ತು ಧರ್ಮಾತ್ಮಾ ಪುರಂ ಚಕ್ರೇ
ಮಹೋದಯಂ ॥೬॥ ಆಧೂರ್ತರಜಸೋ ರಾಮ ಧರ್ಮಾರಣ್ಯಂ ಮಹೀಪತಿಃ॥
ಚಕ್ರೇ ಪುರವರಂ ರಾಜಾ ವಸುಶ್ಚಕ್ರೇ ಗಿರಿವ್ರಜಂ ॥ ೭ ॥ ಏಷಾವಸು
ಮತೀ ರಾಮ ವಸೋಸ್ತಸ್ಯ ಮಹಾತ್ಮನಃ ॥ ಏತೇ ಶೈಲವರಾಃ ಪಂಚ ಪ್ರಕಾ

ಎಲೈ ಮಕ್ಕಳಿರಾ, ಪಾಲನಂ-ಪ್ರಜಾಪಾಲನವು, ಕ್ರಿಯತಾಂ-ಮಾಡಲ್ಪಡಲಿ, ಪುಷ್ಕಲಂ-ಬಹಳವಾದ, ಧರ್ಮಂ-ಧರ್ಮವನ್ನು, ಪ್ರಾಪ್ಸ್ಯಥ ಹೊಂದಿರಿ, ಇತಿ-ಇಂತೆಂದು, ಉವಾಚ ಹೇಳಿದನು ॥ ೪ ॥ ಕುಶಸ್ಯ ರಾಜರ್ಷಿಯಾದ ಕುಶನ, ವಚನಂತು-ಮಾತನ್ನು, ಶ್ರುತ್ವಾ-ಕೇಳಿ, ಲೋಕಸಮ್ಮತಾಃ-ಜನರಿಗೆ ಸಮ್ಮತರಾದ, ಚತ್ವಾರಃ-ನಾಲ್ವರಾದ, ಸರ್ವೇ-ಸಮಸ್ತರಾದ, ನೃವರಾಃ ರಾಜರು, ತದಾ-ಆ ಕಾಲದಲ್ಲಿ, ಪುರಾಣಾಂ-ಪಟ್ಟಣಗಳ, ನಿವೇಶ-ಸನ್ನಿವೇಶವನ್ನು, ಚಕ್ರಿರೇ-ಮಾಡಿದರು ॥ ೫ ॥ ಮಹಾತೇಜಾಃ-ಮಹಾ ಪರಾಕ್ರಮಿಯಾದ, ಕುಶಾಂಬಸ್ತು-ಕುಶಾಂಬನಾದರೆ, ಕೌಶಾಂಬೀಂ-ಕೌಶಾಂಬಿಯೆಂಬ, ಪುರೀಂ-ಪಟ್ಟಣವನ್ನು, ಅಕರೋತ್-ಮಾಡಿದನು, ಧರ್ಮಾತ್ಮಾ-ಧರ್ಮಿಷ್ಠನಾದ, ಕುಶನಾಭಸ್ತು ಕುಶನಾಭನು, ಮಹೋದಯಂ ಮಹೋದಯವೆಂಬ, ಪುರಂ-ಪಟ್ಟಣವನ್ನು, ಚಕ್ರೇ-ಮಾಡಿದನು ॥ ೬ ॥ ಹೇ ರಾಮ-ಎಲೈ ಶ್ರೀರಾಮನೇ, ಆಧೂರ್ತರಜಸಃ-ಆಧೂರ್ತರಜಸ್ಸು ಎಂಬ, ಮಹೀಪತಿಃ-ರಾಜನು, ಧರ್ಮಾರಣ್ಯಂ-ಧರ್ಮಾರಣ್ಯವೆಂಬ, ಪುರವರಂ-ಶ್ರೇಷ್ಠವಾದ ಪಟ್ಟಣವನ್ನು, ಚಕ್ರೇ-ಮಾಡಿದನು, ವಸುಃ-ವಸುವೆಂಬ, ರಾಜಾ-ಅರಸು, ಗಿರಿವ್ರಜಂ-ಗಿರಿವ್ರಜವೆಂಬ ಪಟ್ಟಣವನ್ನು, ಚಕ್ರೇ-ಮಾಡಿದನು ॥ ೭ ॥ ಹೇ ರಾಮ-ಎಲೈ ಶ್ರೀರಾಮನೇ, ಮಹಾತ್ಮನಃ-ಮಹಾ ಪ್ರಭಾವನಾದ, ತಸ್ಯವಸೋಃ-ಆ ವಸುವೆಂಬ ಅರಸಿನ ವಸುಮತೀ-ಭೂಮಿಯು, ಏಷಾ-ಇದು, ಏತೇ-ಈ, ಶೈಲವರಾಃ-ಪರ್ವತ ಶ್ರೇಷ್ಠಗಳಾದ, ಪಂಚ ಐದು ಬೆಟ್ಟಗಳು, ಸಮಂತತಃ-

ತೇಜಸ್ವಿಗಳಾಗಿಯೂ, ಬಹಳವಾದ ಉತ್ಸಾಹದಿಂದ ಕೂಡಿದವರೂ, ಧರ್ಮಮಾರ್ಗಾನುವರ್ತಿಗಳೂ, ಸತ್ಯಸಂಧರೂ ಆದ ಆ ಪುತ್ರಚತುಷ್ಟಯವನ್ನು ಕುರಿತು "ಎಲೈ ಮಕ್ಕಳಿರಾ! ಪ್ರಜಾರಂಜನ ಪೂರ್ವಕವಾದ ಪ್ರಜಾಪಾಲನೆಯನ್ನೆಸಗಿರಿ ಇದರಿಂದ ನಿಮಗೆ ಬಹಳವಾದ ಧರ್ಮವು ದೊರೆವುದು" ಎಂದು ಹೇಳಿದನು. ಇಂತೆಂದ ಬ್ರಹ್ಮಜ್ಞಾನಿಯೂ, ಮಹಾತ್ಮನೂ, ರಾಜರ್ಷಿಯೂ ಆದ ಕುಶನ ಮಾತುಗಳನ್ನು ಕೇಳಿ, ಜನರ ಪ್ರೀತಿಗೆ ಪಾತ್ರರಾದ ಆ ನಾಲ್ವರೂ ನಾಲ್ಕು ಪಟ್ಟಣಗಳನ್ನು ನಿರ್ಮಿಸಿದರು. ಇವರಲ್ಲಿ ಮಹಾ ತೇಜಸ್ವಿಯಾದ ಕುಶಾಂಬನು ಕೌಶಾಂಬಿಯೆಂಬ ಪಟ್ಟಣವನ್ನೂ, ಮಹಾ ಧರ್ಮಿಷ್ಠನಾದ ಕುಶನಾಭನು ಮಹೋದಯವೆಂಬ ಪಟ್ಟಣವನ್ನೂ ಆಧೂರ್ತರಜಸ್ಸುವು ಧರ್ಮಾರಣ್ಯವೆಂಬ ಪುರವನ್ನೂ, ವಸುವು ಗಿರಿವ್ರಜ ಪುರವೆಂಬುದನ್ನೂ ನಿರ್ಮಿಸಿದರು. ॥ ೧-೭ ॥ ಎಲೈ ರಾಮಚಂದ್ರನೇ ! ಈ ಭೂಮಿಯು ಈ ನಾಲ್ವರಲ್ಲಿ ಒಬ್ಬನೂ ಮಹಾತ್ಮನೂ ಆದ ವಸುಮಹಾರಾಜನದು, ಇದರ

ಶಂತೇ ಸಮಂತತಃ ॥ ೮ ॥ ಸುಮಾಗಧೀ ನದೀರಮ್ಯಾ ಮಗಧಾದ್ವಿಶ್ರುತಾ ಯಯೌ ॥ ಪಂಚಾನಾಂ ಶೈಲಮುಖ್ಯಾನಾಂ ಮಧ್ಯೇ ಮಾಲೇವಶೋಭತೇ ॥೯॥ ಸೈಷಾ ಹಿ ಮಾಗಧೀ ರಾಮ ವಸೋಸ್ತಸ್ಯ ಮಹಾತ್ಮನಃ ॥ ಪೂರ್ವಾಭಿಚರಿತಾ ರಾಮ ಸುಕ್ಷೇತ್ರಾ ಸಸ್ಯಮಾಲಿನೀ ॥೧೦॥ ಕುಶನಾಭಸ್ತು ರಾಜರ್ಷಿಃ ಕನ್ಯಾಶತಮನುತ್ತಮಂ ॥ ಜನಯಾಮಾಸ ಧರ್ಮಾತ್ಮಾ ಘೃತಾಚ್ಯಾಂ ರಘುನಂದನ ॥ ೧೧ ॥ ತಾಸ್ತು ಯೌವನ ಶಾಲಿನ್ಯೋ ರೂಪವತ್ಯ ಸ್ಸ್ವಲಂಕೃತಾಃ ॥ ಉದ್ಯಾನ ಭೂಮಿಮಾಗಮ್ಯ ಪ್ರಾವೃಷೀವ ಶತಹ್ರದಾಃ ॥ ೧೨ ॥

---

ಎಲ್ಲೆಡೆಯಲ್ಲಿ, ಪ್ರಕಾಶಂತೆ- ಹೊಳೆಯುತ್ತಿವೆ ॥ ೮ ॥ ಸುಮಾಗಧೀ ಸುಮಾಗಧೀ ಎಂದು, ವಿಶ್ರುತಾ - ಪ್ರಸಿದ್ಧವಾದ, ರಮ್ಯಾ ಮನೋಹರವಾದ, ನದೀ-ನದಿಯು, ಮಗಧಾತ್ - ಮಗಧದೇಶದಿಂದ, ಆಯಯೌ-ಹೊರಟು ಬಂದು, ಪಂಚಾನಾಂ ಐದಾದ, ಶೈಲಮುಖ್ಯಾನಾಂ - ಶ್ರೇಷ್ಠವಾದ ಬೆಟ್ಟಗಳ, ಮಧ್ಯೇ-ಮಧ್ಯದಲ್ಲಿ, ಮಾಲೇವ-ಮಾಲಿಕೆಯಂತೆ, ಶೋಭತೇ - ಹೊಳೆಯುತ್ತಿರುವುದು. ॥ ೯ ॥ ಹೇರಾಮ-ಎಲೈ ಶ್ರೀರಾಮನೆ, ಸೈಷಾಮಾಗಧೀ - ಆ ಮಾಗಧೀನದಿಯು, ಮಹಾತ್ಮನಃ - ಮಹಾಮನಸ್ವಿಯಾದ, ತಸ್ಯವಸೋಃ - ಆ ವಸುವಿಗೆ ಸಂಬಂಧಪಟ್ಟದಾಗಿ, ಪೂರ್ವಾಭಿಚರಿತ- (ತಿ) [ಮ) ಪೂರ್ವವಾಹಿನಿಯಾಗಿರುವದಾಗಿ, (ಗೋ) ಪೂರ್ವಾಭಿಚರಿತಾ - ಪೂರ್ವದೇಶದ ದೆಸೆಯಿಂದ ಪಶ್ಚಿಮವಾಹಿನಿಯಾಗಿ, ಸುಕ್ಷೇತ್ರ - ಒಳ್ಳೇ ಕ್ಷೇತ್ರಗಳುಳ್ಳದು, ಸಸ್ಯಮಾಲಿನೀಹಿ-ಪೈರುಗಳ ಮಾಲಿಕೆಯುಳ್ಳದಷ್ಟೆ ॥೧೦॥ ಹೇ ರಘುನಂದನ-ಎಲೈ ಶ್ರೀರಾಮನ, ಕುಶನಾಭಃ- ಕುಶನಾಭನೆಂಬ, ರಾಜರ್ಷಿಸ್ತು ರಾಜರ್ಷಿಯಾದರೆ, ಧರ್ಮಾತ್ಮಾ-ಧರ್ಮದಲ್ಲೇ ಬುದ್ಧಿಯುಳ್ಳವನಾಗಿ, ಘೃತಾಚ್ಯಾಂ-ಘೃತಾಚೀ ಎಂಬ ಅಪ್ಸರಸ್ಸಿನಲ್ಲಿ, ಅನುತ್ತಮಂ - ಸರ್ವೋತ್ತಮವಾದ, ಕನ್ಯಾಶತಂ-ನೂರು ಹೆಣ್ಣುಮಕ್ಕಳನ್ನು, ಜನಯಾಮಾಸ-ಹುಟ್ಟಿಸಿದನು ॥ ೧೧ ॥ ಯೌವನಶಾಲಿನ್ಯಃ - ಯೌವನಪ್ರಾದುರ್ಭಾವದಿಂದ ಒಪ್ಪುತ್ತಿರುವ, ರೂಪವತ್ಯಃ-ಸೌಂದರ್ಯವತಿಯರಾದ, ಸ್ವಲಂಕೃತಾಃ- ಅಲಂಕಾರಯುಕ್ತರಾದ, ತಾಸ್ತು-ಆ ಹೆಣ್ಣುಮಕ್ಕಳು, ಉದ್ಯಾನಭೂಮಿಂ-ಉದ್ಯಾನವನದ ಪ್ರದೇಶವನ್ನು ಕುರಿತು, ಆಗಮ್ಯ-ಬಂದು, ಪ್ರಾವೃಷಿ - ವರ್ಷಾಕಾಲದಲ್ಲಿ, ಶತಹ್ರದಾ ಇವ-ಮಿಂಚುಗಳಂತೆ, ವರಾಭರಣಭೂಷಿತಾಃ-ಶ್ರೇಷ್ಠಗಳಾದೊಡವೆಗಳಿಂದಲಂಕೃತರಾಗಿ, ಗಾಯಂತ್ಯಃ- ಗಾನಮಾಡುತ್ತ

---

ಸುತ್ತಲೂ ಬಹು ಶ್ರೇಷ್ಠಗಳಾದ ಐದು ಪರ್ವತಗಳು ರಾರಾಜಿಸುತ್ತಿರುವುವು ॥ ೮ ॥ ಮಗಧದೇಶದಲ್ಲಿ ಮಹಾಕೀರ್ತಿಯನ್ನಾಂತು ಮನೋಹರವಾಗಿರುವ ಮಾಗಧೀ ನದಿಯು ಈ ಪರ್ವತಗಳ ಮಧ್ಯದಲ್ಲಿ ಹರಿದು ಅವುಗಳಿಗೆ ಕಂಠಮಾಲೆಯಂತೆ ಅಂದವನ್ನುಂಟುಮಾಡಿ ಪೂರ್ವಸಮುದ್ರವನ್ನು ಕುರಿತು ಹೋಗುವುದು ॥ ೯-೧೦ ॥ ಮಹಾತ್ಮನೂ, ಧರ್ಮಾತ್ಮನೂ, ರಾಜರ್ಷಿಯೂ ಆದ ಕುಶನಾಭನು ಘೃತಾಚಿ ಎಂಬ ತನ್ನ ಸತೀಮಣಿಯಲ್ಲಿ ಬಹು ರೂಪವತಿಯರಾದ ನೂರು ಹೆಣ್ಣುಮಕ್ಕಳನ್ನು ಪಡೆದನು. ಇವರು ರೂಪ, ಲಾವಣ್ಯ, ಸೌಂದರ್ಯಾದಿಗಳಿಂದಲಂಕೃತರಾಗಿ ಮಿಂಚಿನಂತೆ ಹೊಳೆಯುತ್ತ, ಸರ್ವಾಭರಣ ಭೂಷಿತೆಯರಾಗಿ ಉದ್ಯಾನವನ ಸಮಧ್ಯವನ್ನು ನೇರಿ ಕುಣಿಯುತ್ತಲೂ, ಹಾಡುತ್ತಲೂ, ವೀಣಾದಿವಾದ್ಯ

ಗಾಯಂತ್ಯೋ ನೃತ್ಯಮಾನಾಶ್ಚ ವಾದಯಂತ್ಯಶ್ಚ ಸರ್ವಶಃ || ಆಮೋದಂ ಪರಮಂ ಜಗ್ಮು ರ್ವರಾಭರಣ ಭೂಷಿತಾಃ || ೧೩ || ಅಥತಾಶ್ಚಾರು ಸರ್ವಾಂಗ್ಯೋ ರೂಪೇಣಾಽಪ್ರತಿಮಾಭುವಿ || ಉದ್ಯಾನ ಭೂಮಿಮಾಗಮ್ಯ ತಾರಾಇವ ಘನಾಂತರೇ ||೧೪|| ತಾಸ್ಸರ್ವಾ ಗುಣಸಂಪನ್ನಾ ರೂಪಯೌವನ ಸಂಯುತಾಃ|| ದೃಷ್ಟ್ವಾ ಸರ್ವಾತ್ಮಕೋ ವಾಯುರಿದಂ ವಚನಮಬ್ರವೀತ್ ||೧೫|| ಅಹಂ ವಃ ಕಾಮಯೇ ಸರ್ವಾಃ ಭಾರ್ಯಾಮಮ ಭವಿಷ್ಯಥ|| ಮಾನುಷಸ್ತ್ಯಜ್ಯತಾಂ

ನೃತ್ಯಮಾನಾಶ್ಚ-ಕುಣಿಯುತ್ತ, ಸರ್ವಶಃ ಸರ್ವರೂ, ವಾದಯಂತ್ಯಶ್ಚ-ಮೃದಂಗಾದಿ ವಾದ್ಯಗಳನ್ನು ಬಾರಿಸುತ್ತ, ಪರಮಂ-ಒಹಳವಾದ, ಆಮೋದಂ-ಸಂತೋಷವನ್ನು, ಜಗ್ಮುಃ ಹೊಂದಿದರು ||೧೩|| ಅಥ-ಅನಂತರದಲ್ಲಿ, ಚಾರುಸರ್ವಾಂಗ್ಯಃ - ಸುಂದರವಾದ ಅವಯವಗಳುಳ್ಳ, ರೂಪೇಣ - ಸೌಂದರ್ಯದಿಂದ ಭುವಿ - ಭೂಮಿಯಲ್ಲಿ, ಅಪ್ರತಿಮಾ: - ಸಮಾನರಹಿತರಾದ, ತಾಃ - ಆ ತರಳೆಯರು, ಉದ್ಯಾನ ಭೂಮಿಂ ಉದ್ಯಾನಪ್ರದೇಶವನ್ನು ಕುರಿತು, ಆಗಮ್ಯ - ಬಂದು, ಘನಾಂತರೇ - ಮೇಘಮಧ್ಯದಲ್ಲಿ ತಾರಾಇವ - ನಕ್ಷತ್ರಗಳಂತೆ, ಬಭುಃ - ಹೊಳೆಯುತ್ತಿದ್ದರು || ೧೪ || ಸರ್ವಗುಣ ಸಂಪನ್ನಾಃ - ಸೌಂದರ್ಯ ಗಾಂಭೀರ್ಯ ಸೌಶೀಲ್ಯಾದಿಗುಣಗಳಿಂದ ಕೂಡಿರುವ, ರೂಪಯೌವನಸಂಯುತಾಃ - ರೂಪ ಯೌವನ ಇವುಗಳಿಂದ ಕೂಡಿಕೊಂಡಿರುವ, ತಾಃ - ಆ ರಮಣಿಯರನ್ನು, ಸರ್ವಾತ್ಮಕಃ (೧) ಸರ್ವತ್ರಸಂಚಾರಿಯಾದ, ವಾಯುಃ - ವಾಯುವು, ದೃಷ್ಟ್ವಾ - ಕಂಡು, ಇದಂ - ಈ ಮಾತನ್ನು ಅಬ್ರವೀತ್ - ಹೇಳಿದನು || ೧೫ || ಅಹಂ - ನಾನು, ವಃಸರ್ವಾಃ-ನಿಮ್ಮೆಲ್ಲರನ್ನೂ, ಕಾಮಯೇ - ಕಾಮಿಸುವೆನು, ಮಮ-ನನಗೆ.(೨) ಭಾರ್ಯಾಃ-ಹೆಂಡತಿಯರು, ಭವಿಷ್ಯಥ - ಆಗುವಿರಿ, ಮಾನುಷಃ - ಮನುಷ್ಯರಲ್ಲಿ ಹುಟ್ಟಿದ, ಭಾವಃ - ಅನುರಾಗವು, ತ್ಯಜ್ಯತಾಂ - ಬಿಡಲ್ಪಡಲಿ, ದೀರ್ಘಂ-ದೀರ್ಘ

ಗಳನ್ನು ನುಡಿಸುತ್ತಲೂ ನಲಿನಲಿದಾಡುತ್ತಿದ್ದರು || ೧೧-೧೩ || ಇಂತಿರುವ ಸರ್ವಾಂಗ ಸುಂದರಿಯರಾದ ಆ ಲಲನೆಯರು ಈ ಉದ್ಯಾನ ಭೂಮಿಯಲ್ಲಿ, ಗಗನ ಮಂಡಲದಲ್ಲಿ ಥಳಥಳಿಸುತ್ತಿರುವ ತಾರೆಗಳಂತೆ ವಿಧವಿಧವಾಗಿ ಸ್ರೀತಿಸುತ್ತಿರುವವರಾಗಿಯೂ, ಸಮಸ್ತ ಗುಣಗಳಿಂದೊಪ್ಪಿದವರೂ, ಯೌವನವತಿಯರೂ ಆದ ಈ ಕುಶನಾಭ ಸುತೆಯರನ್ನು ನೋಡಿದ ಸರ್ವತ್ರಸಂಚಾರಿಯಾದ ವಾಯುವು ಅವರೆಲ್ಲರನ್ನೂ ಕುರಿತು "ಎಲೌ! ನಾನು ನಿಮ್ಮೆಲ್ಲ ರನ್ನೂ ಕಾಮಿಸುವೆನು. ನೀವು ನನ್ನ ಸತಿಯರಾಗಿರಿ, ನನ್ನನ್ನು ವರಿಸಿ ಈ ಮನುಷ್ಯಭಾವ ವನ್ನು ತೊರೆದು ದೀರ್ಘಾಯುಷ್ಯವನ್ನು ಪಡೆಯಿರಿ ಎಲೌ, ಲಲನಾಮಣಿಯರಾ !

(ಟಿ) (೧) ಸರ್ವಾತ್ಮಕಃ-ಎಂಬೆಡೆಯಲ್ಲಿ, ಸರ್ವತ್ರ ಆತ್ಮಾ ಸ್ವರೂಪಂ ಯಸ್ಯ ಸ ಸರ್ವಾತ್ಮಕಃ ಎಂದು ವಿಗ್ರಹವು ಎಂದರೆ, ಎಲ್ಲೆಡೆಗಳಲ್ಲಿಯೂ ತನ್ನ ಸ್ವರೂಪವುಳ್ಳವನಾವನೋ ಅವನು ಸರ್ವಾತ್ಮಕ ಎಂದರೆ ಸರ್ವತ್ರಸಂಚಾರಿ, "ವಿಭು" ಪದಾರ್ಥವೆಂದರ್ಥ (ಟಿ) (೨) ತಿಲಕ —' ನೀವು ಮನುಷ್ಯರಾದರೂ ನನ್ನ ಹೆಂಡತಿಯರಾಗಿರಿ " ಎಂದು ವಾಯು ದೇವನು ಹೇಳಿದುದು, ಆ ಲಲನೆಯರನ್ನು ವಶಪಡಿಸಿಕೊಳ್ಳಲು ಮಾಡಿದ ಅರ್ಥವಾದವಾಗಿರುವುದು ದೇವತೆಯಾದ ನಾನು ಮನುಷ್ಯರಾದ ನಿಮ್ಮೊಡನೆ ಸಂಬಂಧವನ್ನು ಮಾಡುವುದು ಅನುಚಿತವಲ್ಲವೋ ಸರಿ ಆದರೇ ನಾನು ನಿಮ್ಮನ್ನು ಅಂಗೀ ಕರಿಸಿದೊಡನೆಯೇ ವಿಲಕ್ಷಣ ಶಕ್ತ್ಯನಿರ್ಭಾವದಿಂದ ಸ್ವತಃವಿವ ನಿಮಗೆ ಸಾಮರ್ಥ್ಯವುಂಟಾಗುವುದು, ಎಂದು ಹೇಳಿ ಆ ಸಾಮರ್ಥ್ಯದ ಫಲವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.

ಭಾವೋ ದೀರ್ಘಮಾಯುು ರವಾಪ್ಸ್ಯಥ || ೧೭ || ಚಲಂಹಿ ಯೌವನಂ ನಿತ್ಯಂ ಮಾನುಷೇಷು ವಿಶೇಷತಃ || ಅಕ್ಷಯ್ಯಂ ಯೌವನಂ ಪ್ರಾಪ್ತಾ ಅಮರ್ಯಶ್ಚ ಭವಿಷ್ಯಥ || ೧೭ || ತಸ್ಯ ತದ್ವಚನಂ ಶ್ರುತ್ವಾ ವಾಯೋರಕ್ಲಿಷ್ಟಕರ್ಮಣಃ || ಅಪಹಾಸ್ಯ ತತೋ ವಾಕ್ಯಂ ಕನ್ಯಾಶತಮಥಾಬ್ರವೀತ್ ||೧೮|| ಅಂತಶ್ಚರಸಿ ಭೂತಾನಾಂ ಸರ್ವೇಷಾಂ ತ್ವಂ ಸುರೋತ್ತಮ || ಪ್ರಭಾವಜ್ಞಾಸ್ತೇ ಸರ್ವಾಃ ಕಿಮಸ್ಮಾನವಮನ್ಯಸೇ || ೧೯ || ಕುಶನಾಭ ಸುತಾಸ್ಸರ್ವಾ ಸ್ಸಮರ್ಥಾಸ್ತ್ವಾಂ ಸುರೋತ್ತಮ || ಸ್ಥಾನಾಚ್ಚ್ಯಾವಯಿತುಂ ದೇವ ರಕ್ಷಾಮಸ್ತು ತಪೋವಯಂ ||೨೦|| ಮಾಭೂತ್ಸಕಾಲೋ ದುರ್ಮೇಧಃ ಪಿತರಂ

---

ವಾದ, ಆಯುಃ - ಆಯುಸ್ಸನ್ನು ಅವಾಪ್ಸ್ಯಥ - ಹೊಂದಿರಿ ೧೭ || ಯೌವನಂ - ಯೌವನವು, ಮನುಷ್ಯೇಷು ಮನುಷ್ಯರಲ್ಲಿ, ವಿಶೇಷತಃ- ವಿಶೇಷವಾಗಿ, ನಿತ್ಯಂ - ಸರ್ವಕಾಲದಲ್ಲಿ, ಚಲಂಹಿ-ಧ್ರುವವಲ್ಲವಷ್ಟೆ, ಅಕ್ಷಯಂ - ನಾಶರಹಿತವಾದ, ಯೌವನಂ - ಯೌವನವನ್ನು ಪ್ರಾಪ್ತಾಃ ಹೊಂದಿ, ಅಮರ್ಯಶ್ಚ - ದೇವತಾ ಸ್ತ್ರೀಯರು, ಭವಿಷ್ಯಥ - ಆಗುವಿರಿ || ೧೭ || ಅಕ್ಲಿಷ್ಟಕರ್ಮಣಃ - ಅಪ್ರತಿಹತವ್ಯಾಪಾರವುಳ್ಳ, ತಸ್ಯ ವಾಯೋಃ - ಆ ವಾಯುವಿನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ತತಃ - ಆ ಮಾತುಕೇಳಿದ ಮಾತ್ರದಿಂದಲೆ, ಅಪಹಾಸ್ಯ - ನಕ್ಕು ಅಥ - ಬಳಿಕ, ಕನ್ಯಾಶತಂ - ನೂರು ಜನ ಹೆಣ್ಣುಮಕ್ಕಳೂ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದರು || ೧೮ || ಹೇಸುರೋತ್ತಮ - ಎಲೈ ದೇವತಾಶ್ರೇಷ್ಠನೆ, ತ್ವಂ - ನೀನು, ಸರ್ವೇಷಾಂ - ಸಮಸ್ತಗಳಾದ, ಭೂತಾನಾಂ - ಭೂತಗಳ, ಅಂತಃ - ಒಳಗೆ, ಚರಸಿ - ಸಂಚರಿಸುತ್ತಿರುವೆ, ತೇ - ನಿನ್ನ, ಪ್ರಭಾವಜ್ಞಾಃ - ಪ್ರಭಾವವನ್ನು ತಿಳಿದಿರುವ, ಸರ್ವಾಃ-ಸಮಸ್ತರಾದ, ಅಸ್ಮಾನ್-ನಮ್ಮನ್ನು ಅವಮನ್ಯಸೇಕಿಂ - ಅವಮಾನಮಾಡುತ್ತೀಯೇನು ? || ೧೯ || ಹೇಸುರೋತ್ತಮ - ಎಲೈ ದೇವತಾಶ್ರೇಷ್ಠನೆ, ಸರ್ವಾಃ - ಸಮಸ್ತರಾದ, ಕುಶನಾಭಸುತಾಃ - ಕುಶನಾಭನ ಪುತ್ರಿಯರಾದ, ವಯಂ- ನಾವು, ದೇವಂ - ದೇವತೆಯಾದ, ತ್ವಾಂ - ನಿನ್ನನ್ನು, ಸ್ಥಾನಾತ್ ಸ್ವಸ್ಥಾನದಿಂದ, ಚ್ಯಾವಯಿತುಂ- ಬೀಳಿಸಲು, ಸಮರ್ಥಾಃ - ಸಮರ್ಥರಾಗಿ, ತಪಃ-ತಪಸ್ಸನ್ನು, ರಕ್ಷಾಮಃ-ಮಾಡುತ್ತೇವೆ. || ೨೦ || ಹೇ ದುರ್ಮೇಧಃ-ಎಲೈ ದುರ್ಬುದ್ಧಿಯುಳ್ಳವನೆ, ಸಕಾಲಃ-ಆ ಕೆಳಗೆ ಬೀಳುವ ಕಾಲವು, ಮಾಭೂತ್ -

---

ನಾಮಾನ್ಯವಾಗಿ ಯೌವನವೆಂಬುದೇ ಚಂಚಲವು, ಮಾನವರಿಗಂತೂ ಅದು ಶಾಶ್ವತವೇ ಅಲ್ಲವು; ಆದುದರಿಂದ ನನ್ನನ್ನು ಮದುವೆಯಾಗಿ ಅಚಂಚಲವಾದ ಯೌವನವನ್ನೂ, ದೇವತ್ವವನ್ನೂ ಹೊಂದಿರಿ " ಎಂದನು. || ೧೬-೧೭ || ಮಹಾ ಪರಾಕ್ರಮಿಯಾದ ವಾಯುದೇವನ ಈ ನುಡಿಗಳನ್ನು ಕೇಳಿ ಆ ನೂರುಮಂದಿ ಕನ್ಯೆಯರು ಅಪಹಾಸ್ಯ ಮಾಡಿಕೊಂಡು ಆತನನ್ನು ಕುರಿತು ಹೀಗೆಂದರು, " ಅಯ್ಯಾ, ಸುರಶ್ರೇಷ್ಠನೇ ! ಸಕಲ ಭೂತಗಳಲ್ಲಿಯೂ ನೀನು ಸಂಚರಿಸುವಿ. ನಿನ್ನ ಪ್ರಭಾವವನ್ನ ನಾವೆಲ್ಲರೂ ಅರಿತಿರುವೆವು. ಹೀಗಿದ್ದರೂ ನಮ್ಮನ್ನೇಕೆ ಅಪಮಾನಗೊಳಿಸುವೆ? ನಾವೇನು ನಾಮಾನ್ಯರಲ್ಲ, ಕುಶನಾಭನ ಕುವರಿಯರೇ ನಾವು; ಸಮರ್ಥರಾಗಿಯೇ ಇರುವೆವು. ಇಂತಿರುವ ನಾವು ದೇವತೆಯಾದ ನಿನ್ನನ್ನು

ಸತ್ಯವಾದಿನಂ || ನಾವಮನ್ಯಸ್ವಧರ್ಮೇಣ ಸ್ವಯಂವರ ಮುಪಾಸ್ಮಹೇ ||೨೧||
ಪಿತಾಹಿ ಪ್ರಭುರಸ್ಮಾಕಂ ದೈವತಂ ಪರಮಂ ಹಿ ಸಃ || ಯಸ್ಯನೋ ದಾಸ್ಯತಿ
ಪಿತಾ ಸನೋಭರ್ತಾ ಭವಿಷ್ಯತಿ || ೨೨ || ತಾಸಾಂ ತದ್ವಚನಂ ಶ್ರುತ್ವಾ
ವಾಯುಃ ಪರಮಕೋಪನಃ || ಪ್ರವಿಶ್ಯ ಸರ್ವಗಾತ್ರಾಣಿ ಬಭಂಜ ಭಗವಾನ್
ಪ್ರಭುಃ || ೨೩ || ತಾಃಕನ್ಯಾ ವಾಯುನಾ ಭಗ್ನಾ ವಿವಿಶು ರ್ನೃಪತೇರ್ಗೃಹಂ||
ಪ್ರಾಪತನ್ ಭುವಿ ಸಂಭ್ರಾಂತಾಸ್ಸಲಜ್ಜಾ ಸ್ಸಾಸ್ರಲೋಚನಾಃ ||೨೪|| ಸಚತಾ

---

ಆಗದಿರಲಿ, ಸತ್ಯವಾದಿನಂ - ಸತ್ಯವಾದಿಯು, ಪಿತರಂ - ತಂದೆಯಾದ ಕುಶನಾಭನನ್ನು, ನಾವಮನ್ಯಸ್ವ - ಅವಮಾನಿಸಬೇಡ, ಧರ್ಮೇಣ - ಕ್ಷತ್ರಧರ್ಮದಿಂದ, ಸ್ವಯಂವರಂ- ಸ್ವಯಂವರವನ್ನು, ಉಪಾಸ್ಮಹೇ - ನಿರೀಕ್ಷಣೆ ಮಾಡುತ್ತಿರುವೆವು || ೨೧ || ಹಿ - ಯಾವಕಾರಣ, ಪಿತಾ - ತಂದೆಯು ಅಸ್ಮಾಕಂ - ನಮಗೆ, ಪ್ರಭುಃ - ಸ್ವಾಮಿಯೋ, ಸಃ - ಆತಂದೆಯು, ಪರಮಂ - ಶ್ರೇಷ್ಠವಾದ, ದೈವತಂಹಿ - ದೇವತೆಯಷ್ಟೆ, ಪಿತಾ - ತಂದೆಯಾದ ಕುಶನಾಭನು, ಯಸ್ಯ - ಯಾವನಿಗೆ, ನಃ - ನಮ್ಮನ್ನು, ದಾಸ್ಯತಿ - ಕೊಡುತ್ತಾನೆಯೊ, ಸಃ - ಅವನೆ, ನಃ - ನಮಗೆ, ಭರ್ತಾ - ಗಂಡನು ಭವಿಷ್ಯತಿ - ಆಗುವನು. || ೨೨ || ತಾಸಾಂ - ಆ ಸ್ತ್ರೀಯರ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಪರಮಕೋಪನಃ - ಮಹಾ ಕೋಪಗೊಂಡು, ಪ್ರಭುಃ ಸಮರ್ಥನಾದ, ಭಗವಾನ್ ಪೂಜ್ಯನಾದ, ವಾಯುಃ - ವಾಯುವು, ಪ್ರವಿಶ್ಯ - ಅಂತಃಪ್ರವೇಶಮಾಡಿ, ಸರ್ವಗಾತ್ರಾಣಿ - ಸಮಸ್ತಾವಯವಗಳನ್ನು, ಬಭಂಜ - ಕುಗ್ಗಿಸಿದನು || ೨೩ || ತಾಃಕನ್ಯಾಃ - ಆ ಕನ್ಯೆಯರು, ವಾಯುನಾ - ವಾಯುವಿನಿಂದ, ಭಗ್ನಾಃ - ಮುರಿಯಲ್ಪಟ್ಟವರಾಗಿ, ನೃಪತೇಃ - ಅರಸಾದ ಕುಶನಾಭನ, ಗೃಹಂ - ಮನೆಯನ್ನು, ವಿವಿಶುಃ - ಹೊಕ್ಕು, ಸಲಜ್ಜಾಃ - ಲಜ್ಜಾಯುಕ್ತರಾಗಿ, ಸಾಸ್ರಲೋಚನಾಃ - ಕಣ್ಣೀರಿಂದೊಡಗೂಡಿ, ಸಂಭ್ರಾಂತಾಃ - ವ್ಯಾಕುಲಚಿತ್ತರಾಗಿ, ಭುವಿ - ನೆಲದಲ್ಲಿ, ಪ್ರಾಪತನ್ - ಬಿದ್ದರು. ||೨೪|| ತದಾ - ಆಗ, ನರಾಚಾಚ - ಆ ಅರಸೂ, ದಯಿತಾಃ-ಇಷ್ಟರಾದ ದೀನಾಃ - ಪರಿತಪಿಸುತ್ತಿರುವ, ಪರಮಶೋಭನಾಃ - ಬಹಳ ಶುಭಕರರಾದ, ಭಗ್ನಾಃ - ಮುರಿಯ

---

ಈ ವನದಿಂದ ಆಚೆಗೆ ಕಳುಹಲು ತಪನ್ನಾಚರಿಸುವೆವು ನಮ್ಮ ತಂದೆಯು ಮಹಾ ಸತ್ಯವಂತನು ಆತನು ನಾಮಾನ್ಯನಂಪಣಿಸಿ ನೀನು ಗೌರವಿಸದಿದ್ದರೆ ಆತನೇ ನಿನಗೆ ಮೃತ್ಯುಸ್ವರೂಪನಾದಾನು. ನಾವು ಧರ್ಮಮಾರ್ಗವನ್ನವಲಂಬಿಸಿ ಸ್ವಯಂವರವದ್ಧತಿಯನು ಅನುಸರಿಸುವೆವು ಇದಲ್ಲದೆ ನಮಗೆ ತಂದೆಯೇ ಸ್ವಾಮಿಯು, ದೇವರು; ಸರ್ವವೂ ಆ ತ ನೇ. ಆ ನಮ್ಮ ತಂ ದೆ ಯು ನ ಮ್ಮ ನ್ನಾ ರಿ ಗ ಕೊ ಡು ವ ನೋ, ಅವನೇ ನಮ್ಮ ಪತಿಯು || ೨೨ || ಇಂತು ನುಡಿದ ಆ ತರುಣಿಯರ ನುಡಿಗಳನ್ನು ಣಿಯರ ನುಡಿಗಳನ್ನು ಕೇಳಿದ, ಮಹಾ ಕೋಪಿಷ್ಠನಾದ ವಾಯುವು ಅವರೆಲ್ಲರ ಶರೀರವನ್ನೂ ಸೇರಿ, ಅವರ ಅವಯವಗಳೆಲ್ಲವನ್ನೂ ಕುಗ್ಗಿಸಿದನು. ||೨೩|| ವಾಯು ದೇವನಿಂದ ಭಗ್ನವಾದ ಅವಯವಗಳುಳ್ಳ ಆ ಕುಶನಾಭ ಕುವರಿಯರು,ತಮ್ಮ ತಂದೆಯ ಅರಮನೆಯನ್ನುಹೊಕ್ಕುಲಜ್ಜೆಗೊಂಡವರೂ, ಕಣ್ಣೀರಿಡುತ್ತಿರುವವರೂ ಆಗಿ ಭೂಮಿಯಲ್ಲಿ ಬಿದ್ದು ಮೂರ್ಛಿತರಾದರು. || ೨೪ || ಆಗಲಾ ರಾಜನು ಪ್ರಿಯಕುವರಿಯಾಗಿಯೂ, ಪರಿತಪಿಸುತ್ತಿರುವವರಾಗಿಯೂ,

ದಯಿತಾ ದೀನಾಃ ಕನ್ಯಾಃ ಪರಮ ಶೋಭನಾಃ || ದೃಷ್ಟ್ವಾಭಗ್ನಾ ಸ್ತದಾರಾಜಾ ಸಂಭ್ರಾಂತ ಇದಮಬ್ರವೀತ್ ||೨೫|| ಕಿಮಿದಂ ಕಥ್ಯತಾಂ ಪುತ್ರ್ಯಃ ಕೋಧರ್ಮ ಮವಮನ್ಯತೇ||ಕುಬ್ಜಾಃ ಕೇನ ಕೃತಾಸ್ಸರ್ವಾ ವೇಷ್ಟಂತ್ಯೋ ನಾಭಿಭಾಷಥ || ಏವಂರಾಜಾ ವಿನಿಶ್ವಸ್ಯ ಸಮಾಧಿಂ ಸಂದಧೇ ತತಃ ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾತ್ರಿಂಶಸ್ಸರ್ಗಃ.

---

ಲ್ಪಟ್ಟ, ತಾಃ - ಆ ಕನ್ಯೆಯರನ್ನು, ದೃಷ್ಟ್ವಾ- ಕಂಡು, ಸಂಭ್ರಾಂತಃ - ವ್ಯಾಕುಲಚಿತ್ತನಾಗಿ, ಇದಂ- ಈ ವಚನವನ್ನು, ಅಬ್ರವೀತ್ - ನುಡಿದನು. ||೨೫|| ಹೇಪುತ್ರ್ಯಃ ಎಲೈ ಮಕ್ಕಳಿರಾ, ಇದಂ- ಇದು, ಕಿಂ - ಏನು, ಕಥ್ಯತಾಂ ಹೇಳಲ್ಪಡಲಿ, ಕಃ - ಯಾವನು, ಧರ್ಮಂ - ಧರ್ಮವನ್ನು, ಅವ ಮನ್ಯತೇ - ಅವಮಾನ ಮಾಡುತ್ತಾನೋ, ಕೇನ - ಯಾವನಿಂದ, ಸರ್ವಾಃ - ಸಮಸ್ತರಾದ ನೀವು, ಕುಬ್ಜಾಃ- ಕುಬ್ಜೆಯರಾಗಿ,ಕೃತಾಃ - ಮಾಡಲ್ಪಟ್ಟಿರಿ, ವೇಷ್ಟಂತ್ಯಃ - ಹೊರಳುತ್ತ, ನಾಭಿಭಾಷಥ- ಮಾತುಗಳಾಡಿರಲ್ಲ ! ಏವಂ - ಹೀಗೆ, ರಾಜಾ - ಅರಸಾದ ಕುಶನಾಭನು, ವಿನಿಶ್ವಸ್ಯ-ನಿಟ್ಟುಸು ರುಬಿಟ್ಟು, ತತಃ - ಬಳಿಕ, ಸಮಾಧಿಂ - ಧ್ಯಾನವನ್ನು, ಸಂದಧೇ-ಅನುಸಂಧಾನಮಾಡಿದನು. ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾತ್ರಿಂಶಸ್ಸರ್ಗಃ.

---

ಶುಭಕರರಾಗಿಯೂ, ಭಗ್ನರಾಗಿಯೂ, ಇರುವ ತನ್ನ ಸುತೆಯರನ್ನು ನೋಡಿ ಆಶ್ಚರ್ಯಚಕಿತ ನಾಗಿ, "ಎಲೌ ಕುವರಿಯರಿರಾ ! ಅದಾವನು ಧರ್ಮವನ್ನತಿಕ್ರಮಿಸಿ ಅವಮಾನಗೊಳಿಸಿದನು? ನೀವೆಲ್ಲರೂ ಯಾರಿಂದ ಕುಬ್ಜೆಯಾರಿದಿರಿ. ? ಇದೇನು ನಿಮ್ಮ ಅವಸ್ಥೆಯು ?" ಎಂದು ಕೇಳಲು ಅವರೆಲ್ಲರೂ ದುಃಖದಿಂದ ಹೊರಳಾಡುತ್ತ ಏನನ್ನೂ ಹೇಳಲಿಲ್ಲವು. ಆಗಲಾ ರಾಜನು ದುಃಖದಿಂದ ನಿಶ್ವಾಸವಂ ಬಿಟ್ಟು ಮುಂದೇನು ಹೇಳುವರೋ ಎಂದು ಸಮಾಧಿ ಗತನಾದನು || ೨೫-೬ ||

ಇಂತಿದು ಕುಶನಾಭ ಕಥಾ ಕಥನವೆಂಬ ಮೂವ್ವತ್ತೆರಡನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.

---

ತಸ್ಯ ತದ್ವಚನಂ ಶ್ರುತ್ವಾ ಕುಶನಾಭಸ್ಯ ಧೀಮತಃ || ಶಿರೋಭಿ
ಶ್ಚರಣೌ ಸ್ಪೃಷ್ಟ್ವಾ ಕನ್ಯಾ ಶತಮಭಾಷತ ||೧|| ವಾಯುಸ್ಸರ್ವಾತ್ಮಕೋ
ರಾಜನ್ ಪ್ರಧರ್ಷಯಿತುಮಿಚ್ಛತಿ || ಅಶುಭಂ ಮಾರ್ಗಮಾಸ್ಥಾಯ ನಧರ್ಮಂ
ಪ್ರತ್ಯವೇಕ್ಷತೇ ||೨|| ಪಿತೃಮತ್ಯಸ್ಸ್ಮ ಭದ್ರಂ ತೇ ಸ್ವಚ್ಛಂದೇ ನ ವಯಂ ಸ್ಥಿತಾಃ||
ಪಿತರಂ ನೋ ವೃಣೀಷ್ವತ್ವಂ ಯದಿನೋ ದಾಸ್ಯತೇ ತವ ||೩|| ತೇನ ಪಾಪಾನು
ಬಂಧೇನ ವಚನಂ ನಪ್ರತೀಚ್ಛತಾ || ಏವಂ ಬ್ರುವಂತ್ಯಸ್ಸರ್ವಾಃ ಸ್ಮ ವಾಯುನಾ

ಧೀಮತಃ - ಬುದ್ಧಿಶಾಲಿಯಾದ, ತಸ್ಯಕುಶನಾಭಸ್ಯ - ಆ ಕುಶನಾಭನ, ತದ್ವಚನಂ ಆ ಮಾತನ್ನು, ಶ್ರುತ್ವಾ - ಕೇಳಿ, ಕನ್ಯಾಶತಂ - ಹೆಣ್ಣು ಮಕ್ಕಳ ಶತಕವು, ಶಿರೋಭಿಃ ಶಿರಸ್ಸುಗಳಿಂದ, ಚರಣೌ-ಪಾದಗಳನ್ನು, ಸ್ಪೃಷ್ಟ್ವಾ-ಸ್ಪರ್ಶಮಾಡಿ, ಅಭಾಷತ - ಹೇಳಿತು, ||೧|| ಹೇರಾಜನ್- ಎಲೈ ಅರಸೇ, ಸರ್ವಾತ್ಮಕಃ - ಸರ್ವತ್ರ ಸಂಚಾರ ಶೀಲನಾದ, ವಾಯುಃ ವಾಯುವು, ಅಶುಭಂ ಅಶುಭಕರವಾದ, ಮಾರ್ಗಂ - ಮಾರ್ಗವನ್ನು, ಆಸ್ಥಾಯ-ಹೊಂದಿ, ಧರ್ಮಂ - ಧರ್ಮವನ್ನು, ನಪ್ರತ್ಯವೇಕ್ಷತೇ - ನಿರೀಕ್ಷಣೆ ಮಾಡುವದಿಲ್ಲ, ಪ್ರಧರ್ಷಯಿತುಂ - ತಿರಸ್ಕಾರಮಾಡಲು, ಇಚ್ಛತಿ-ಇಚ್ಛಿಸಿದನು ||೨|| ವಯಂ - ನಾವು, ಪಿತೃಮತ್ಯಸ್ಸ್ಮ - ತಾಯಿತಂದೆಗಳುಳ್ಳವರಾಗಿರುವೆವು, ಸ್ವಚ್ಛಂದೇ-ಸ್ವೇಚ್ಛೆಯಲ್ಲಿ, ನಸ್ಥಿತಾಃ - ಇರುವುದಿಲ್ಲ, ನಃ - ನಮ್ಮ, ಪಿತರಂ-ತಂದೆಯನ್ನು, ತ್ವಂ-ನೀನು, ವೃಣೀಷ್ವ-ಬೇಡು, ತವ - ನಿನಗೆ, ನಃ - ನಮ್ಮನ್ನು, ದಾಸ್ಯತೇಯದಿ - ಕೊಡುವವನೇ ಆದರೆ, ತದಾ - ಆಗ, ತೇ ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ||೩|| ಏವಂ – ಹೀಗೆ, ಬ್ರುವಂತ್ಯಃ - ಹೇಳುತ್ತಿರುವ, ಸರ್ವಾಃ - ಸಮಸ್ತರಾದ ನಾವು, ವಚನಂ - ನಮ್ಮ ಮಾತನ್ನು. ನಪ್ರತೀಚ್ಛತ - ಲಕ್ಷ್ಯಮಾಡದಿರುವ, ಪಾಪಾನುಬಂಧೇನ - ಪಾಪವನ್ನೇ ಅನುಸರಿಸಿದ, ತೇನವಾಯುನಾ-ಆ ವಾಯು

---

ರಘುಪುಂಗವ ! ಇಂತು ನುಡಿದ ಕುಶನಾಭರಾಯನ ನುಡಿಗಳನ್ನು ಕೇಳಿ ಆತನ ನೂರುಮಂದಿ ಪುತ್ರಿಯರೂ ಸಾಷ್ಟಾಂಗ ಪ್ರಣಾಮವಂಗೈದು, "ಎಲೈ ಜನಕನೇ ! ಎಲ್ಲೆಡೆಗಳಲ್ಲಿಯೂ ಸಂಚರಿಸುವ ವಾಯುದೇವನು ಅಮಂಗಳವಾದ ಮಾರ್ಗವನ್ನವಲಂಬಿಸಿ ಅಧರ್ಮವನ್ನು ಕೈಕೊಂಡು ನಮ್ಮನ್ನು ಹಿಂಸಿಸಲಿಚ್ಛಿಸಿದನು. ನಾವಾತನನ್ನು ಕುರಿತು "ಎಲೈ ವಾಯುದೇವನೇ ! ನಿನಗೆ ಮಂಗಳವಾಗಲಿ, ನಾವು ಸ್ವತಂತ್ರರಲ್ಲವು, ತಂದೆ ತಾಯಿಗಳ ಅಧೀನದಲ್ಲಿರುವವರಲ್ಲವೇ? ನಮ್ಮನ್ನು ನಿನಗೆ ಕೊಡುವ ವಿಷಯದಲ್ಲಿ ನಮ್ಮ ತಂದೆಯನ್ನೇ ಕೇಳು, ಆತನೊಪ್ಪಿದರೆ ವರಿಸುವವನಾಗು,' ಎಂದು ಅಡಿಗಡಿಗೂ ಹೇಳುತ್ತಿರುವ

ನಿಹತಾಭೃಶಂ ||೪|| ತಾಸಾಂ ತದ್ವಚನಂ ಶ್ರುತ್ವಾ ರಾಜಾ ಪರಮಧಾರ್ಮಿಕಃ||
ಪ್ರತ್ಯುವಾಚ ಮಹಾತೇಜಾಃ ಕನ್ಯಾಶತಮನುತ್ತಮಂ ||೫|| ಕ್ಷಾಂತಂ ಕ್ಷಮಾ
ವತಾಂ ಪುತ್ರ್ಯಃ ಕರ್ತವ್ಯಂ ಸು ಮಹತ್ಕೃತಂ || ಐಕಮತ್ಯಮುಪಾಗಮ್ಯ
ಕುಲಂ ಚಾವೇಕ್ಷಿತಂ ಮಮ ||೬|| ಅಲಂಕಾರೋಹಿ ನಾರೀಣಾಂ ಕ್ಷಮಾತು
ಪುರುಷಸ್ಯವಾ || ದುಷ್ಕರಂ ತಚ್ಚ ಯತ್ ಕ್ಷಾಂತಂ ತ್ರಿದಶೇಷು ವಿಶೇಷತಃ
|| ೭ || ಯಾದೃಶೀ ವಃ ಕ್ಷಮಾಪುತ್ರ್ಯಸ್ಸರ್ವಾಸಾಮವಿಶೇಷತಃ || ಕ್ಷಮಾ

ವಿನಿಂದ, ಭೃಶಂ - ಬಹಳವಾಗಿ, ನಿಹತಾಸ್ಮ - ಹೊಡೆಯಲ್ಪಟ್ಟವರಾದೆವಷ್ಟೆ, ||೪|| ತಾಸಾಂ- ಆ ಹೆಣ್ಣುಮಕ್ಕಳ, ತದ್ವಚನಂ - ಆ ಮಾತನ್ನು, ಶ್ರುತ್ವಾ-ಕೇಳಿ, ಮಹಾತೇಜಾಃ - ಮಹಾ ಪ್ರಭಾವವಂತನಾದ, ಪರಮಧಾರ್ಮಿಕಃ - ಪರಮ ಧರ್ಮಿಷ್ಠನಾದ, ರಾಜಾ - ಅರಸಾದ ಕುಶನಾಭನು, ಅನುತ್ತಮಂ - ಸರ್ವೋತ್ತಮವಾದ, ಕನ್ಯಾಶತಂ - ಕನ್ಯೆಯರ ಶತಕವನ್ನು ಕುರಿತು, ಪ್ರತ್ಯುವಾಚ- ಹೇಳಿದನು. ||೫|| ಹೇಪುತ್ರ್ಯಃ - ಎಲೈ ಮಕ್ಕಳಿರಾ! ಕ್ಷಮಾವತಾಂ - ಉಪಶಾಂತಿಯುಳ್ಳವರಿಗೆ, ಕರ್ತವ್ಯಂ - ಮಾಡತಕ್ಕ, ಸುಮಹತ್ - ದೊಡ್ಡ ಕ್ಷಾಂತಂ - ಧೈರ್ಯವು, (ಭವತೀಭಿಃ-ನಿಮ್ಮಿಂದ,) ಕೃತಂ-ಮಾಡಲ್ಪಟ್ಟಿತು, ಐಕಮತ್ಯಂ - ಒಂದೇ ಬುದ್ಧಿಯುಳ್ಳದರ ಭಾವವನ್ನು, ಉಪಾಗಮ್ಯ-ಹೊಂದಿ, ಮಮ-ನನ್ನ, ಕುಲಂಚ - ವಂಶವೂ, ಅವೇಕ್ಷಿತಂ ನೋಡಲ್ಪಟ್ಟಿತು ||೬|| (ಗೋ) ಹಿ - ಯಾವ ಕಾರಣ, ನಾರೀಣಾಂ - ಸ್ತ್ರೀಯರಿಗೆ ಆಗಲಿ, ಪುರುಷಸ್ಯವಾ - ಪುರುಷನಿಗೇ ಆಗಲಿ, ಕ್ಷಮಾತು- ಶಾಂತಗುಣವಾದರೆ, ಅಲಂಕಾರಃ - ಭೂಷಣವಾಗಿರುವುದೋ, ಯತ್ಕ್ಷಾಂತಂ - ಯಾವ ಕ್ಷಮಾ ಗುಣವು, ದುಷ್ಕರಂ - ಇತರರಿಗೆ ಮಾಡಲು ಅಶಕ್ಯವೋ, ತಚ್ಚ-ಅದೂಕೂಡ (ಭವತೀಭಿಃ ನಿಮ್ಮಿಂದ,) ಕೃತಂ - ಮಾಡಲ್ಪಟ್ಟಿತು, ಹೇಪುತ್ರ್ಯಃ - ಎಲೈ ಮಕ್ಕಳಿರಾ! ತ್ರಿದಶೇಷು ದೇವತೆಗಳಲ್ಲಿ, ವಿಶೇಷತಃ - ವಿಶೇಷವಾಗಿ, ಸರ್ವಾಸಾಂ - ಸಮಸ್ತರಾದ, ವಃ - ನಿಮಗೆ, ಯಾದೃಶೀ - ಎಂತಹ, ಕ್ಷಮಾ - ಧೈರ್ಯ ಉಂಟಾಯಿತೋ, ತಾದೃಶೀ - ಅಂತಹ ಕ್ಷಮೆಯು, ದುಷ್ಕರಾ - ಮಾಡಲಶಕ್ಯವು, (ಮ) ಕ್ಷಮಾ - ಇತರರು ಮಾಡಿದ ತಪ್ಪನ್ನು ಸಹಿಸುವುದೇ ಕ್ಷಮಾ ಎನ್ನಿಸಿಕೊಳ್ಳುವದು - ತಾದೃಶೀ ಅಂತಹ ಅಪರಾಧಸ್ಸಹನವು (ಭವತೀಭಿಃ - ನಿಮ್ಮಿಂದ) ಕೃತಂ ಮಾಡಲ್ಪಟ್ಟಿತು, ||೭|| ಕ್ಷಮಾ

ನಮ್ಮ ನುಡಿಗಳನ್ನು ಕೇಳದ ವಾಯುವು ನಮ್ಮನ್ನೀ ದೆಸೆಗೆ ತಂದನು," ಎಂದರು || ೧-೪ || ಇಂತು ನುಡಿದ ಆ ಕುವರಿಯರ ಮಾತನ್ನು ಕೇಳಿ ಮಹಾ ತೇಜಸ್ವಿಯೂ, ಧರ್ಮಿಷ್ಠನೂ ಆದ ಕುಶನಾಭನು ಇಂತು ನುಡಿದನು "ಓ ಮಕ್ಕಳಿರಾ! ನಿಮ್ಮ ನುಡಿಗಳು ಶಾಂತಚಿತ್ತವುಳ್ಳ ಮಹಾತ್ಮರಿಗೆ ಸಮ್ಮತವಾದುದು ದೇವತೆಯಾದ ಆ ವಾಯುವು ಪ್ರಾರ್ಥಿಸಿದರೂ, ಐಕಮತ್ಯದಿಂದ ನೀವೆಲ್ಲರೂ ಹುಟ್ಟಿದ ಕುಲವನ್ನು ಗಮನಿಸಿ ಯುಕ್ತವಾದುದನ್ನೇ ಮಾಡಿದಿರಿ. ಕೇಳಿರಾ! ಪ್ರಪಂಚದಲ್ಲಿ ಸ್ತ್ರೀಯರಿಗಾಗಲಿ ಪುರುಷರಿಗಾಗಲಿ ಕ್ಷಮಾಗುಣವೆಂಬುದು ಅಲಂಕಾರ ಪ್ರಾಯವಾದುದು. || ೫-೬ || ಯಾವುದು ಕ್ಷಮೆಯೆಂಬುದೋ ಅದು ಮಾಡಲಸಾಧ್ಯವು. ನೀವು ತೋರಿದ ಕ್ಷಮಾಗುಣವು ಬಹುಕಷ್ಟವಾದುದು; ಅದರಲ್ಲಿಯೂ ರೂಪ, ಯೌವನಾದಿ, ಕಮನೀಯ ಗುಣಗಳನ್ನೊಳಗೊಂಡ ದೇವತೆಗಳಲ್ಲಿ ಕ್ಷಮಾಗುಣವನ್ನು ತೋರಿದುದು ಕಷ್ಟತರವಾದುದೇ ಸರಿ,ಅಂತಹ ಕ್ಷಮೆಯೇ ನಿಮ್ಮಿಂದ ತೋರಲ್ಪಟ್ಟಿತು.||೭||

ದಾನಂ ಕ್ಷಮಾ ಯಜ್ಞಃ ಕ್ಷಮಾ ಸತ್ಯಂ ಹಿ ಪುತ್ರಿಕಾಃ ||೮|| ಕ್ಷಮಾ ಯಶಃ ಕ್ಷಮಾ ಧರ್ಮಃ ಕ್ಷಮಯಾ ವಿಷ್ಠಿತಂ ಜಗತ್|| ವಿಸೃಜ್ಯ ಕನ್ಯಾಃ ಕಾಕುತ್ಸ್ಥ ರಾಜಾ ತ್ರಿದಶ ವಿಕ್ರಮಃ||೯|| ಮಂತ್ರಜ್ಞೋ ಮಂತ್ರಯಾಮಾಸ ಪ್ರದಾನಂ ಸಹ ಮಂತ್ರಿಭಿಃ || ದೇಶಕಾಲೌ ಪ್ರದಾನಸ್ಯ ಸದೃಶೇ ಪ್ರತಿಪಾದನಂ ||೧೦|| ಏತಸ್ಮಿನ್ನೇವಕಾಲೇತು ಚೂಳೀನಾಮ ಮಹಾಮುನಿಃ || ಊರ್ಧ್ವರೇತಾಶ್ಶುಭಾಚಾರೋ ಬ್ರಾಹ್ಮಂ ತಪ ಉಪಾಗಮತ್ || ೧೧ || ತಪ್ಯಂತಂ ತಮೃಷಿಂ ತತ್ರ ಗಂಧರ್ವೀ ಪರ್ಯುಪಾಸತೇ || ಸೋಮದಾ ನಾಮ ಭದ್ರಂತೇ ಊರ್ಮಿಳಾ

---

ಕ್ಷಮೆಯೇ, ದಾನಂ - ದಾನಜನ್ಯಫಲದಾಯಕವಾಗಿರುವುದು, ಕ್ಷಮಾ - ಕ್ಷಮೆಯೇ, ಯಜ್ಞಃ- ಯಜ್ಞರೂಪವಾದದು, ಕ್ಷಮಾಃ- ಕ್ಷಮೆಯೇ, ಸತ್ಯಂಹಿ- ಸತ್ಯರೂಪವಷ್ಟೆ, ಹೇಪುತ್ರಿಕಾಃ ಎಲೈ ಮಕ್ಕಳಿರಾ, ಕ್ಷಮಾ - ಕ್ಷಮಾಗುಣವೇ, ಯಶಃ - ಯಶಸ್ಸಂಪಾದಕವಾದುದು, ಕ್ಷಮಾ - ಕ್ಷಮಾಗುಣವೇ, ಧರ್ಮಃ - ಧರ್ಮಸಂಪಾದಕವಾದುದು, ಜಗತ್ - ಜಗತ್ತು, ಕ್ಷಮಯಾ - ಕ್ಷಮೆಯಿಂದಲೇ, ವಿಷ್ಠಿತಂ- ಪ್ರತಿಷ್ಠಾಪಿತವಾಗಿಧೆ, ||೮|| ಇತ್ಯುಕ್ತ್ವಾ - ಈ ಪ್ರಕಾರವಾಗಿ ಹೇಳಿ, ಹೇಕಾಕುತ್ಸ್ಥ- ಎಲೈ ಕಕುತ್ಸ್ಥ ವಂಶೋತ್ಪನ್ನನೇ! ಮಂತ್ರಜ್ಞಃ - ಆಲೋಚನಪರನಾದ, ತ್ರಿದಶವಿಕ್ರಮಃ - ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳ, ರಾಜಾ - ಅರಸಾದ ಕುಶನಾಭನು, ಕನ್ಯಾಃ - ಆ ಕನ್ಯಕೆಯರನ್ನು, ವಿಸೃಜ್ಯ-ಬಿಟ್ಟು, ಮಂತ್ರಿಭಿಸ್ಸಹ - ಮಂತ್ರಿಗಳೊಡನೆ, ಪ್ರದಾನಂ- ಕನ್ಯಾದಾನವನ್ನು ಕುರಿತು, ಪ್ರದಾನಸ್ಯ - ಕನ್ಯಾದಾನಕ್ಕೆ, ದೇಶಕಾಲೌ - ಉಚಿತವಾದ ಪ್ರದೇಶ, ಮತ್ತು ಸಮಯವನ್ನೂ, ಸದೃಶೇ- ಸಮಾನವಾದ ಪಾತ್ರವಿಶೇಷ, ಈ ಒಗೆಯ, ಪ್ರತಿಪಾದನಂಚ-ದಾನವನ್ನು ಕುರಿತು, ಮಂತ್ರಯಾಮಾಸ-ಆಲೋಚಿಸಿದನು ||೧೦|| ಏತಸ್ಮಿನ್ನ್ಕಾಲಏವತು ಆ ದೇಶಕಲದಲ್ಲಿ, ಮಹಾಮುನಿಃ - ಮಹರ್ಷಿಯಾದ, ಊರ್ಧ್ವರೇತಾಃ - ಅಸ್ಖಲಿತ ಬ್ರಹ್ಮಚಾರಿಯಾದ, ಶುಭಾಚಾರಃ- ಸದಾಚಾರ ಸಂಪನ್ನನಾದ. ಚೂಳೀನಾಮ - ಚೂಳಿಯೆಂದು ಪ್ರಸಿದ್ಧನಾದ ಋಷಿಯು, ಬ್ರಾಹ್ಮಂ ಬ್ರಹ್ಮಸಂಬಂಧವಾದ, ತಪಃ - ತಪಸ್ಸನ್ನು, ಉಪಾಗಮತ್ - ಮಾಡುತ್ತಿದ್ದನು. || ೧೧ || ತಪ್ಯಂತಂ- ತಪಸ್ಸು ಮಾಡುತ್ತಿರುವ, ತಮೃಷಿಂ-ಆ ಚೂಳಿ ಯೆಂಬ ಋಷಿಯನ್ನು ಕುರಿತು, ತತ್ರ - ಆ ತಪಸ್ಸು

---

ಎಲೌ! ಕೇಳಿರಿ, ಕ್ಷಮೆಯೇ ದಾನವೂ, ಯಜ್ಞವೂ, ಆಗಿರುವುದು. ಸತ್ಯವೂ, ಕೀರ್ತಿಯೂ, ಧರ್ಮವೂ ಈ ಕ್ಷಮೆಯೇ; ಲೋಕವಾವರಿಸಲ್ಪಟ್ಟಿರುವುದೂ ಈ ಕ್ಷಮೆಯಿಂದಲೇ," || ೮ || ಹೀಗೆಂದ ದೇವಪರಾಕ್ರಮವುಳ್ಳ ಆ ಕುಶನಾಭನು ಕುವರಿಯರನ್ನು ಬಿಟ್ಟು ಮಂತ್ರಿಗಳೊಡನೆ ಅವರನ್ನು ವಿವಾಹ ಮಾಡಿಕೊಡಲುಚಿತವಾದ ದೇಶಕಾಲಗಳನ್ನು ಕುರಿತು ಮಂತ್ರಾಲೋಚನೆಯನ್ನು ಮಾಡಿದನು. || ೯-೧೦ || ಎಲೈ ರಾಮಚಂದ್ರನೇ! ಇದೇ ಕಾಲದಲ್ಲಿಯೇ ಸದಾಚಾರ ಸಂಪನ್ನನಾಗಿಯೂ, ಊರ್ಧ್ವರೇತಸ್ಕನಾಗಿಯೂ ಇರುವ ಚೂಳಿ ಎಂಬ ಮಹಾ ಮುನಿಯು ಬ್ರಹ್ಮನನ್ನು ಕುರಿತು ತಪವಂಗೈಯುತ್ತಿದ್ದನು ||೧೧|| ಈ ರೀತಿ ತಪವನ್ನಾಚರಿಸುತ್ತಿದ್ದ ಚೂಳಿಯನ್ನು ಊರ್ಮಿಳಾ ಎಂಬ ಗಂಧರ್ವ ಸ್ತ್ರೀಯ ಮಗಳಾದ ಸೋಮದ ಎಂಬವಳು ಸೇವಿಸುತ್ತಿದ್ದಳು. ಹೀಗೆ ಶುಶ್ರೂಷಣ ಪರಾಯಣ

ತನಯಾತದಾ ‖ ೧೨ ‖ ಸಾಚ ತಂ ಪ್ರಣತಾ ಭೂತ್ವಾ ಶುಶ್ರೂಷಣ ಪರಾಯಣಾ‖ ಉವಾಸಕಾಲೇ ಧರ್ಮಿಷ್ಠಾ ತಸ್ಯಾಸ್ತುಷ್ಟೋಽಭವದ್ಗುರುಃ ‖೧೩‖ ಸಚ ತಾಂ ಕಾಲಯೋಗೇನ ಪ್ರೋವಾಚ ರಘುನಂದನ ‖ ಪರಿತುಷ್ಟೋಽಸ್ಮಿ ಭದ್ರಂತೇ ಕಿಂಕರೋಮಿ ತವಪ್ರಿಯಂ ‖ ೧೪ ‖ ಪರಿತುಷ್ಟಂ ಮುನಿಂ ಜ್ಞಾತ್ವಾ ಗಂಧರ್ವೀ ಮಧುರಸ್ವರಾ ‖ ಉವಾಚ ಪರಮ ಪ್ರೀತಾ ವಾಕ್ಯಜ್ಞಾ ವಾಕ್ಯಕೋವಿದಂ ‖೧೫‖ ಲಕ್ಷ್ಮ್ಯಾಸಮುದಿತೋ ಬ್ರಾಹ್ಮ್ಯಾಬ್ರಹ್ಮಭೂತೋ

ಮಾಡತಕ್ಕ ಸ್ಥಳದಲ್ಲಿ, ತದಾ - ಆ ಕಾಲದಲ್ಲಿ ಊರ್ಮಿಳಾತನಯಾ, ಊರ್ಮಿಳಾ - ಊರ್ಮಿಳೆಯೆಂಬ ಗಂಧರ್ವಸ್ತ್ರೀಯು, ತನಯಾ - ಮಗಳಾದ, ಸೋಮದಾನಾ - ಸೋಮದೆಯೆಂದು ಪ್ರಸಿದ್ಧಳಾದ, ಗಂಧರ್ವೀ-ಗಂಧರ್ವ ಕನ್ಯಕೆಯು, ಪರ್ಯುಪಾಸತೇ ಶುಶ್ರೂಷೆ ಮಾಡುತ್ತಿರಲು, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ‖ ೧೨ ‖ ಶುಶ್ರೂಷಣಪರಾಯಣಾ-ಸೇವೆಯಲ್ಲಿ ಆಸಕ್ತಳಾದ, ಧರ್ಮಿಷ್ಠಾ - ಧರ್ಮಿಷ್ಠಳಾದ, ಸಾಚ - ಆ ಸೋಮದೆಯೆಂಬುವಳು, ತಂ-ಆ ಚೂಳೀ ಎಂಬ ಋಷಿಯನ್ನು ಕುರಿತು, ಪ್ರಣತಾ - ನಮಸ್ಕಾರವಮಾಡಿದವಳು, ಭೂತ್ವಾ - ಆಗಿ, ಕಾಲೇ-ಸಮಯದಲ್ಲಿ, ಉವಾಸ - ನಿಂತಳು, ತಸ್ಯಾಃ - ಅವಳಿಗೆ, ಗುರುಃ - ಗುರುವು, ತುಷ್ಟಃ - ಸಂತುಷ್ಟನು, ಅಭವತ್-ಆದನು, ‖೧೩‖ ಹೇರಘುನಂದನ- ಎಲೈ ಶ್ರೀರಾಮನೆ! ಸಚ-ಆ ಚೂಳಿಯೆಂಬವನು, ಕಾಲಯೋಗೇನ-ಪರಿಪಾಕ ಕಾಲಸಂಬಂಧದಿಂದ, ತಾಂ - ಆ ಗಂಧರ್ವ ಸ್ತ್ರೀಯರನ್ನು ಕುರಿತು, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಪರಿತುಷ್ಟಃ-ಸಂತುಷ್ಟನು, ಅಸ್ಮಿ ಆಗಿದ್ದೇನೆ, ತವ-ನಿನಗೆ, ಕಿಂ ಪ್ರಿಯಂ-ಏನು ಇಷ್ಟವನ್ನು, ಕರೋಮಿ-ಮಾಡಲಿ, ಇತಿ ಇಂತೆಂದು, ಪ್ರೋವಾಚ-ಹೇಳಿದನು. ‖೧೪‖ ಪರಿತುಷ್ಟಂ-ಸಂತುಷ್ಟನಾದ, ವಾಕ್ಯಕೋವಿದಂ-ನುಡಿಚತುರನಾದ, ಮುನಿಂ-ಋಷಿಯನ್ನು, ಜ್ಞಾತ್ವಾ-ತಿಳಿದು, ಮಧುರಸ್ವರಾ-ಮಧುರಧ್ವನಿಯುಳ್ಳ, ವಾಕ್ಯಜ್ಞಾ-ಮಾತನಾಡುವದನ್ನು ತಿಳಿದ, ಗಂಧರ್ವೀ-ಗಂಧರ್ವಸ್ತ್ರೀಯು, ಪರಮಪ್ರೀತಾ - ಬಹಳ ಸಂತೋಷಗೊಂಡು, ಉವಾಚ - ಹೇಳಿದಳು. ‖೧೫‖ ಹೇಧಾರ್ಮಿಕ - ಎಲೈ ಧರ್ಮಿಷ್ಠನೆ, ತ್ವಂ - ನೀನು, ಬ್ರಾಹ್ಮ್ಯಾ - (ಗೋ) ವೇದಸಂಬಂಧವಾದ (ಮ) ಬ್ರಹ್ಮಸಂಬಂಧವಾದ, ಲಕ್ಷ್ಮ್ಯಾ - ವೈದಿಕಸಂಪತ್ತಿನಿಂದ, (ಮ) ಬ್ರಹ್ಮತೇಜಸ್ಸಿನಿಂದ, ಸಮುದಿತಃ - ಕೂಡಿದವನು, ಮಹಾತಪಾಃ - ಮಹಾತಪಸ್ಸುಳ್ಳವನಾದುದರಿಂದ, ಬ್ರಹ್ಮಭೂತಃ - ಬ್ರಹ್ಮಸ್ವರೂಪನು,;ಅಸಿ - ಆಗಿರುವೆ, ಬ್ರಾಹ್ಮೇಣ-ಬ್ರಹ್ಮಸ್ವರೂಪವಾದ, ತಪಸಾ- ತಪಸ್ಸಿನಿಂದ, ಯುಕ್ತಂ-

ಳಾದ ಆಕೆಯು ಆ ಮುನಿಯನ್ನು ಸೇವಿಸುತ್ತಿರಲು ಆತನು ಆ ಸೇವೆಗೆ ಸಂತಸಗೊಂಡು ಕಾಲಯೋಗದಿಂದ ಆಕೆಯನ್ನು ಕುರಿತು ಹೇಳಿದನು, "ಎಲೌ! ನಾನು ನಿನ್ನಸೇವೆಯಿಂದ ಸಂತುಷ್ಟನಾದೆನು. ನಿನಗೆ ಮಂಗಳವಾಗಲಿ, ನಿನಗೆ ಪ್ರಿಯವಾದ ಯಾವ ಕೆಲಸವನ್ನು ಮಾಡಬೇಕೋ ಹೇಳು" ‖ ೧೨-೧೪ ‖ ಹೀಗೆನ್ನಲು ಮಧುರ ಸ್ವರವುಳ್ಳ ಆ ಸೋಮದೆಯು ಮುನಿಯು ಸಂತಸಗೊಂಡನೆಂಬುದನ್ನು ತಿಳಿದು ವಾಕ್ಯಕೋವಿದನಾದ ಆ ಮುನಿಯನ್ನು ಕುರಿತು "ಎಲೈ ಧರ್ಮಿಷ್ಠನೇ! ನಿನಗೆ ಮಂಗಳವಾಗಲಿ, ಅಮೋಘವಾದ ಬ್ರಹ್ಮತೇಜಸ್ಸಿನಿಂದ ಕೂಡಿದವನಾಗಿಯೂ, ಬ್ರಹ್ಮನಿಗೆ ಸಮಾನನಾಗಿಯೂ, ನಿನ್ನಂತೆಯೇ ಮಹಾ

ಮಹಾತಪಾಃ॥ ಬ್ರಾಹ್ಮೇಣ ತಪಸಾ ಯುಕ್ತಂ ಪುತ್ರಮಿಚ್ಛಾಮಿ ಧಾರ್ಮಿಕ ॥೧೬॥ ಅಪತಿಶ್ಚಾಸ್ಮಿ ಭದ್ರಂ ತೇ ಭಾರ್ಯಾಚಾಸ್ಮಿ ನಕಸ್ಯಚಿತ್ ॥ ಬ್ರಾಹ್ಮೇಣೋಪಗತಾಯಾಶ್ಚ ದಾತುಮರ್ಹಸಿ ಮೇಸುತಂ ॥೧೭॥ ತಸ್ಯಾಃಪ್ರಸನ್ನೋ ಬ್ರಹ್ಮರ್ಷಿರ್ದದೌ ಪುತ್ರಮನುತ್ತಮಂ ॥ ಬ್ರಹ್ಮದತ್ತ ಇತಿಖ್ಯಾತಂ ಮಾನಸಂ ಚೂಳಿನಸ್ಸುತಂ ॥೧೮॥ ಸರಾಜಾ ಸೌಮದೇಯಸ್ತು ಪುರೀಮಧ್ಯವಸತ್ತದಾ । ಕಾಂಪಿಲ್ಯಾಂ ಪರಯಾಲಕ್ಷ್ಮ್ಯಾ ದೇವರಾಜೋ ಯಥಾದಿವಂ ॥ ೧೯ ॥ ಸಬುದ್ಧಿಂ ಕೃತವಾನ್ರಾಜಾ ಕುಶನಾಭಸ್ಸುಧಾರ್ಮಿಕಃ ॥ ಬ್ರಹ್ಮದತ್ತಾಯ ಕಾಕುತ್ಸ್ಥ ದಾತುಂ ಕನ್ಯಾಶತಂ ತದಾ ॥೨೦॥ ತಮಾಹೂಯ ಮಹಾತೇಜಾ

---

ಕೂಡಿರುವ, ಪುತ್ರಂ - ಮಗನನ್ನು, ಇಚ್ಛಾಮಿ - ಬಯಸುವೆನು ॥೧೬॥ ತೇ - ನಿನಗೆ, ಭದ್ರಂ- ಶುಭವು, ಅಸ್ತು - ಆಗಲಿ, ಅಪತಿಃ - ಪತಿಹೀನಳು, ಅಸ್ಮಿ - ಆಗಿರುವೆನು, ಕಸ್ಯಚಿತ್ - ಯಾರಿಗೂ, ಭಾರ್ಯಾ - ಹೆಂಡತಿಯು, ನಾಸ್ಮಿ - ಆದವಳಲ್ಲ. ಉಪಗತಾಯಾಃ - ಸಮೀಪವರ್ತಿಯಾದ, (ಗೋ) ಶರಣಾಗತಳಾದ, ಮೇ - ನನಗೆ, ಬ್ರಾಹ್ಮೇಣ - ಬ್ರಹ್ಮತೇಜಸ್ಸಿನಿಂದ, ಸುತಂ - ಕುವರನನ್ನು, ದಾತುಂ - ಕೊಡಲು, ಅರ್ಹಸಿ ಯೋಗ್ಯನಾಗು ॥೧೭॥ ತಸ್ಯಾಃ - ಆಸೋಮದೆಗೆ ಪ್ರಸನ್ನಃ - ಪ್ರಸನ್ನನಾದ, ಮಹರ್ಷಿಃ - ಚೂಳಿಯೆಂಬ ಋಷಿಯು, ಚೂಳಿನಃ - ಚೂಳೀಯೆಂಬ ಹೆಸರುಳ್ಳಾತನಿಗೆ, ಮಾನಸಂ - ಮನಸ್ಸಂಕಲ್ಪದಿಂದ ಹುಟ್ಟಿದ, ಸುತಂ-ಕುಮಾರನಾದ, ಬ್ರಹ್ಮದತ್ತಇತಿ - ಬ್ರಹ್ಮದತ್ತನೆಂದು, ಖ್ಯಾತಂ - ಪ್ರಸಿದ್ಧನೂ, ಅನುತ್ತಮಂ-ಶ್ರೇಷ್ಠನೂ ಆದ, ಪುತ್ರಂ- ಮಗನನ್ನು, ದದೌ - ಕೊಟ್ಟನು ॥೧೮॥ ತದಾ - ಆಗ, ಸೌಮದೇಯಃ ಸುಮದಾ ಪುತ್ರನಾದ, ಸರಾಜಾ - ಆ ಅರಸು, ಪರಯಾ - ಶ್ರೇಷ್ಠವಾದ, ಲಕ್ಷ್ಮ್ಯಾ - ಐಶ್ವರ್ಯದಿಂದ, ದೇವರಾಜಃ-ದೇವೇಂದ್ರನು, ದಿವಂ ಯಥಾ - ಸ್ವರ್ಗವನ್ನಂತೆ, ಕಾಂಪಿಲ್ಯಾಂ - ಕಾಂಪಿಲ್ಯವೆಂಬ, ಪುರೀಂ - ಪಟ್ಟಣವನ್ನು, ಅಧ್ಯವಸತ್- ವಾಸಯೋಗ್ಯವನ್ನಾಗಿ ಮಾಡಿಕೊಂಡಿದ್ದನು ॥೧೯॥ ಹೇಕಾಕುತ್ಸ್ಥ - ಎಲೈ ಶ್ರೀರಾಮನೆ! ಸುಧಾರ್ಮಿಕಃ - ಧರ್ಮಿಷ್ಠನಾದ, ಕುಶನಾಭಃ - ಕುಶನಾಭನೆಂಬ, ಸರಾಜಾ ಆ ಅರಸು, ತದಾ - ಆ, ಬ್ರಹ್ಮದತ್ತಾಯ - ಬ್ರಹ್ಮದತ್ತನಿಗೆ, ಕನ್ಯಾಶತಂ - ನೂರುಜನಕನ್ಯಯರನ್ನು, ದಾತುಂ - ಕೊಡಲು, ಬುದ್ಧಿಂ - ನಿಶ್ಚಯವನ್ನು, ಕೃತವಾನ್ - ಮಾಡಿದನು. ॥ ೨೦ ॥ ಮಹಾತೇಜಾಃ-ಮಹಾಪರಾಕ್ರಮ

---

ತಪಸ್ವಿಯಾಗಿಯೂ ಇರುವ ಮಗನನ್ನು ನನಗೆ ದಯಪಾಲಿಸಲು ಅರ್ಹನಾಗಿರುವೆ ನಾನು ಪತಿಯಿಲ್ಲದವಳು, ಆದರೆ ವಿವಾಹಿತಳಲ್ಲ ಆದುದರಿಂದ ವೇದವೇದಾಂಗ ಪಾರಂಗತನಾದ ಮಗನನ್ನನುಗ್ರಹಿಸಬೇಕು” ಎಂದಳು, ॥ ೧೫-೧೭ ॥ ಇಂತೆನಲು ಪ್ರಸನ್ನನಾದ ಆ ಬ್ರಹ್ಮರ್ಷಿಯು ಶ್ರೇಷ್ಠನೂ, ಬ್ರಹ್ಮದತ್ತನೆಂದು ಹೆಸರುಗೊಂಡವನೂ, ಆದ ಕುವರನನ್ನನುಗ್ರಹಿಸಿದನು. ಸೋಮದಾ ಪುತ್ರನಾದ ಆ ಬ್ರಹ್ಮದತ್ತನು ಕಾಂಪಿಲ್ಯವೆಂಬ ಪಟ್ಟಣದಲ್ಲಿ ಅಮರಾವತೀ ಪಟ್ಟಣದಲ್ಲಿನ ದೇವೇಂದ್ರನಂತೆ ಮಹಾ ಸಂಪತ್ತಿನಿಂದ ವಾಸಮಾಡಿಕೊಂಡಿದ್ದನು. ॥ ೧೮-೧೯ ॥ ಧರ್ಮಿಷ್ಠನಾದ ಆ ಕುಶನಾಭನು ಈ ಬ್ರಹ್ಮದತ್ತನಿಗೆ ತನ್ನ ನೂರುಮಂದಿ ಹೆಣ್ಣು ಮಕ್ಕಳನ್ನು ವಿವಾಹಮಾಡಿಕೊಡಲು ಮನದೆರೆದನು.

ಬ್ರಹ್ಮದತ್ತಂ ಮಹೀಪತಿಃ || ದದೌ ಕನ್ಯಾಶತಂ ರಾಜಾ ಸುಪ್ರೀತೇನಾಂತರಾತ್ಮನಾ ||೨೧|| ಯಥಾಕ್ರಮಂ ತತಃ ಪಾಣೀನ್ ಜಗ್ರಾಹ ರಘುನಂದನಃ|| ಬ್ರಹ್ಮದತ್ತೋ ಮಹೀಪಾಲಸ್ತಾಸಾಂ ದೇವಪತಿರ್ಯಥಾ || ೨೨ || ಸ್ಪೃಷ್ಟಮಾತ್ರೇ ತತಃ ಪಾಣೌ ವಿಕುಬ್ಜಾ ವಿಗತ ಜ್ವರಾಃ || ಯುಕ್ತಾಃ ಪರಮಯಾ ಲಕ್ಷ್ಮ್ಯಾ ಬಭುಃ ಕನ್ಯಾಶತಂ ತದಾ || ೨೩ || ಸದೃಷ್ಟ್ವಾ ವಾಯುನಾ ಮುಕ್ತಾಃ ಕುಶನಾಭೋ ಮಹೀಪತಿಃ || ಬಭೂವ ಪರಮಪ್ರೀತೋ ಹರ್ಷಂ ಲೇಭೇ ಪುನಃಪುನಃ || ೨೪ || ಕೃತೋದ್ವಾಹಂತು ರಾಜಾನಂ ಬ್ರಹ್ಮದತ್ತಂ ಮಹೀಪತಿಃ|| ಸ ದಾರಂ ಪ್ರೇಷಯಾಮಾಸ ಸೋಪಾಧ್ಯಾಯ ಗಣಂ ತದಾ||೨೫||

---

ಶಾಲಿಯೂ, ಮಹೀಪತಿಃ - ಪೃಥಿವೀಪತಿಯೂ ಆದ, ರಾಜಾ - ಕುಶನಾಭರಾಜನು. ತಂಬ್ರಹ್ಮದತ್ತಂ- ಆ ಬ್ರಹ್ಮದತ್ತನನ್ನು, ಆಹೂಯ - ಕರೆಯಿಸಿ, ಸುಪ್ರೀತೇನ - ಸಂತೋಷಯುಕ್ತವಾದ, ಅಂತರಾತ್ಮನಾ - ಮನಸ್ಸಿನಿಂದ, ಕನ್ಯಾಶತಂ - ನೂರುಮಂದಿ ಕುವರಿಯರನ್ನು, ದದೌ - ಕೊಟ್ಟನು. ||೨೧|| ಹೇರಘುನಂದನ - ಎಲೈ ಶ್ರೀರಾಮನೆ, ತತಃ - ಬಳಿಕ, ಬ್ರಹ್ಮದತ್ತಃ - ಬ್ರಹ್ಮದತ್ತನೆಂಬ, ಮಹೀಪಾಲಃ - ಅರಸು, ದೇವಪತಿರ್ಯಥಾ - ದೇವೇಂದ್ರನಂತೆ, ತಾಸಾಂ - ಆ ಕುಶನಾಭ ಕುವರಿಯರ, ಪಾಣೀನ್ - ಹಸ್ತಗಳನ್ನು, ಯಥಾಕ್ರಮಂ - ಶಾಸ್ತ್ರೋಕ್ತವಾಗಿ, ಜಗ್ರಾಹ - ಹಿಡಿದನು. ||೨೨|| ತತಃ - ಅನಂತರದಲ್ಲಿ, ಪಾಣೌ - ಹಸ್ತಗಳು, ಸ್ಪೃಷ್ಟಮಾತ್ರೇಸತಿ - ಸ್ಪರ್ಶವಾದೊಡನೆಯು, ತದಾ - ಆಗ, ಶತಂ - ನೂರು ಸಂಖ್ಯೆಯುಳ್ಳ, ಕನ್ಯಾಃ - ಕನ್ಯೆಯರು, ವಿಕುಬ್ಜಾಃ - ಕಳೆದುಹೋದ ಕುಬ್ಜತ್ವವುಳ್ಳವರಾಗಿ, ವಿಗತಜ್ವರಾಃ - ಸಂತಾಪರಹಿತರಾಗಿ, ಪರಮಯಾ - ಬಹಳವಾದ, ಲಕ್ಷ್ಮ್ಯಾ - ತೇಜಸ್ಸಿನಿಂದ, ಯುಕ್ತಾಃ - ಕೂಡಿ, ಬಭುಃ - ಹೊಳೆಯುತ್ತಿದ್ದರು. ||೨೩|| ಮಹೀಪತಿಃ-ಪೃಥ್ವೀಪತಿಯಾದ, ಸಕುಶನಾಭಃ - ಆ ಕುಶನಾಭನು, ವಾಯುನಾ - ವಾಯುವಿನಿಂದ, ಮುಕ್ತಾಃ - ಬಿಡಲ್ಪಟ್ಟ ತನ್ನ ಕುವರಿಯರನ್ನು, ದೃಷ್ಟ್ವಾ - ಕಂಡು, ಪರಮಪ್ರೀತಃ - ಬಹಳ ಸಂತೋಷಗೊಂಡವನು ಬಭೂವ - ಆದನು, ಪುನಃ ಪುನಃ - ಬಾರಿಬಾರಿಗೂ, ಹರ್ಷಂ - ಸಂತೋಷವನ್ನು, ಲೇಭೇ - ಹೊಂದಿದನು. ||೨೪|| ಮಹೀಪತಿಃ-ಕುಶನಾಭರಾಯನು, ತದಾ-ಆಗ, ಕೃತೋದ್ವಾಹಂ-ವಿವಾಹಿತನಾದ, ಬ್ರಹ್ಮದತ್ತಂ - ಬ್ರಹ್ಮದತ್ತನೆಂಬ, ರಾಜಾನಂ - ಅರಸನನ್ನು, ಸದಾರಂ - ಹೆಂಡತಿಯರಿಂದೊಡಗೂಡಿದವನನ್ನಾಗಿಯೂ, ಸೋಪಾಧ್ಯಾಯಗಣಂ - ಗುರುಜನಗಳ ಗುಂಪುಗಳಿಂದೊಡಗೂಡಿದವನನ್ನಾ

---

ಬಳಿಕಲಾ ರಾಜನು ಮಹಾ ತೇಜಸ್ವಿಯಾದ ಆ ಬ್ರಹ್ಮದತ್ತನನ್ನು ಕರೆಯಿಸಿ ಸಂತುಷ್ಟಾಂತರಂಗದಿಂದ ಆ ಕನ್ಯಾಶತಕವನ್ನಾತನಿಗೆ ಕೊಟ್ಟವನಾದನು. || ೨೦-೨೧ || ಆ ಬ್ರಹ್ಮದತ್ತನಾದರೋ ದೇವಪತಿಯಂತೆ ಆ ಕನ್ಯೆಯರ ಕರಗಳನ್ನು ಹಿಡಿದನು. ಇಂತು ಸ್ಪರ್ಶವಾದೊಡನೆಯೇ ಅವರು ವಿಕುಬ್ಜೆಯರೂ, ಸಂತಾಪರಹಿತರೂ, ಮಹಾಕಾಂತಿಯುಕ್ತರೂ ಆಗಿ ಪ್ರಕಾಶಿಸಿದರು. ವಿವಾಹಿತರಾಗಿ ವಾಯುವಿನಿಂದ ವಿಮುಕ್ತರಾದ ತನ್ನ ಕುವರಿಯರನ್ನು ನೋಡಿ ಕುಶನಾಭ ರಾಜನು ಪರಮ ಪ್ರೀತನಾಗಿ ಮರಳಿ ಸಂತೋಷವನ್ನು ಹೊಂದಿದನು. ವಿವಾಹಿತನಾದ ಬ್ರಹ್ಮದತ್ತರಾಜನನ್ನು, ಕುಶನಾಭನು ಹೆಂಡತಿಯರೊಡನೆಯೂ, ಪುರೋ

ಸೋಮದಾಪಿ ಸು ಸಂಹೃಷ್ಟಾ ಪುತ್ರಸ್ಯ ಸದೃಶೀಂ ಕ್ರಿಯಾಂ|| ಯಥಾ ನ್ಯಾಯಂ ಚ ಗಾಂಧರ್ವೀ ಸ್ನುಷಾಸ್ತಾಃ ಪ್ರತ್ಯನಂದತ || ಸ್ಪೃಷ್ಟ್ವಾ ಸ್ಪೃಷ್ಟ್ವಾಚ ತಾಃ ಕನ್ಯಾ ಕುಶನಾಭಂ ಪ್ರಶಸ್ಯಚ|| ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.



ಗಿಯೂ, ಪ್ರೇಷಯಾಮಾಸ - ಕಳುಹಿಸಿಕೊಟ್ಟನು. ||೨೫|| ಸೋಮದಾ - ಸೋಮದೆಯೆಂಬ, ಗಾಂಧರ್ವೀ - ಗಂಧರ್ವಸ್ತ್ರೀಯು, ಪುತ್ರಸ್ಯ - ಮಗನಿಗೆ, ಸದೃಶೀಂ - ಸಮಾನವಾದ, ಕ್ರಿಯಾಂ- ವಿವಾಹಕಾರ್ಯವನ್ನು, ಯಥಾನ್ಯಾಯಂ - ಶಾಸ್ತ್ರಸಮ್ಮತವಾಗಿ, ತಾಸ್ನುಷಾಃ - ಆ ಸೊಸೆಯು ರನ್ನು, (ದೃಷ್ಟ್ವಾ - ಕಂಡು,) ಸುಸಂಹೃಷ್ಟಾ- ಹರ್ಷಯುಕ್ತಳಾಗಿ, ತಾಃಕನ್ಯಾಃ-ಆ ಕನ್ಯೆಕೆಯು ರನ್ನು, ಸ್ಪೃಷ್ಟ್ವಾಸ್ಪೃಷ್ಟ್ವಾ - ಸಂತೋಷದಿಂದ ಸ್ಪರ್ಶಮಾಡಿ, ನೋಡಿ,ಕುಶನಾಭಂಚ ಕುಶನಾಭ ನನ್ನೂ, ಪ್ರಶಸ್ಯ - ಶ್ಲಾಘಿಸಿ, ಪ್ರತ್ಯನಂದತ - ಸಂತೋಷಗೊಂಡಳು. ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.



ಹಿತ ತಂಪಗಳೊಡನೆಯೂ ಕಾಂಪಿಲ್ಯ ನಗರಿಗೆ ಕಳುಹಿದನು. ||೨೨-೨೫|| ಸೋಮದೆಯು ಸದೃಶವಾದ ಮಗನ ವಿವಾಹ ಕ್ರಿಯೆಯನ್ನೂ, ತನ್ನ ಸೊಸೆಯರನ್ನೂ ನೋಡಿ ನೋಡಿ ಕುಶನಾಭ ರಾಜನನ್ನು ಹೊಗಳುತ್ತ ಸಂತಸಪಟ್ಟಳು

ಇಂತಿದು ಬ್ರಹ್ಮದತ್ತ ವೃತ್ತಾಂತವರ್ಣನವೆಂಬ ಮೂವತ್ತು ಮೂರನೆಯ

ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ.

---

ಕೃತೋದ್ವಾಹೇ ಗತೇ ತಸ್ಮಿನ್ ಬ್ರಹ್ಮದತ್ತೇಚ ರಾಘವ॥ ಅಪುತ್ರಃ ಪುತ್ರ ಲಾಭಾಯ ಪೌತ್ರೀಮಿಷ್ಟಿ ಮಕಲ್ಪಯತ್॥೧॥ ಇಷ್ಟ್ಯಾಂತು ವರ್ತಮಾನಾಯಾಂ ಕುಶನಾಭಂ ಮಹೀಪತಿಂ ॥ ಉವಾಚ ಪರಮೋದಾರಃ ಕುಶೋ ಬ್ರಹ್ಮಸುತ ಸ್ತದಾ ॥೨॥ ಪುತ್ರಸ್ತೇ ಸದೃಶಃ ಪುತ್ರ ಭವಿಷ್ಯತಿ ಸು ಧಾರ್ಮಿಕಃ ॥ ಗಾಧಿಂ ಪ್ರಾಪ್ಸ್ಯತಿ ತೇನ ತ್ವಂ ಕೀರ್ತಿಂ ಲೋಕೇಚ ಶಾಶ್ವತೀಂ ॥೩॥ ಏವಮುಕ್ತ್ವಾ ಕುಶೋ ರಾಮ ಕುಶನಾಭಂ ಮಹೀಪತಿಂ ॥ ಜಗಾಮಾಕಾಶಮಾವಿಶ್ಯ ಬ್ರಹ್ಮ ಲೋಕಂ ಸನಾತನಂ ॥೪॥ ಕಸ್ಯಚಿತ್ತ್ವಥಕಾಲಸ್ಯ ಕುಶನಾಭಸ್ಯ ಧೀಮತಃ॥

ಹೇ ರಾಘವ ಎಲೈ ಶ್ರೀರಾಮನೆ, ಕೃತೋದ್ವಾಹೇ - ವಿವಾಹಿತನಾದ, ತಸ್ಮಿನ್ಬ್ರಹ್ಮದತ್ತೇ- ಆ ಬ್ರಹ್ಮದತ್ತನು, ಗತೇಸತಿ - ಹೋಗುತ್ತಿರಲು, ಅಪುತ್ರಃ - ಪುತ್ರರಹಿತನಾದ ಕುಶನಾಭನು, ಪುತ್ರ ಲಾಭಾಯ-ಪುತ್ರಪ್ರಾಪ್ತಿಗೋಸ್ಕರ, ಪೌತ್ರೀಂ - ಪುತ್ರಪ್ರಯೋಜಕವಾದ, ಇಷ್ಟಿಂ-ಪುತ್ರಕಾಮೇಷ್ಟಿ ಯನ್ನು, ಅಕಲ್ಪಯತ್ - ಮಾಡಿದನು. ॥೧॥ ಇಷ್ಟ್ಯಾಂತು- ಪುತ್ರಕಾಮೇಷ್ಟಿಯು, ವರ್ತಮಾ ನಾಯಾಂ - ಪ್ರಾರಂಭವಾಗುತ್ತಿರಲು, ತದಾ – ಆಗ, ಪರಮೋದಾರಃ - ಮಹಾ ಉದಾರವಾದ, ಬ್ರಹ್ಮಸುತಃ-ಬ್ರಹ್ಮಕುಮಾರನಾದ, ಕುಶಃ - ಕುಶಬ್ರಹ್ಮನು, ಕುಶನಾಭಂ ಕುಶನಾಭನೆಂಬ, ಮಹೀ ಪತಿಂ - ರಾಜನನ್ನು ಕುರಿತು, ಉವಾಚ - ಹೇಳಿದನು ॥೨॥ ಹೇಪುತ್ರ- ಎಲೈ ಮಗನೆ, ತೇ- ನಿನಗ, ಸದೃಶಃ - ಸಮಾನವಾದ, ಸುಧಾರ್ಮಿಕಃ - ಬಹಳ ಧರ್ಮಿಷ್ಠನಾದ, ಪುತ್ರಃ-ಕುವರನು, ಭವಿ ಷ್ಯತಿ - ಆಗುವನು, ಗಾಧಿಂ - ಗಾಧಿಎಂಬಪುತ್ರನನ್ನು, ಪ್ರಾಪ್ಸ್ಯತಿ - ಹೊಂದುವೆ, ತೇನ - ಆ ಮಗ ನಿಂದ, ಲೋಕೇ- ಲೋಕದಲ್ಲಿ, ಶಾಶ್ವತೀಂ - ಸ್ಥಿರವಾದ, ಕೀರ್ತಿಂ - ಯಶಸ್ಸನ್ನು, ತ್ವಂ - ನೀನು, ಪ್ರಾಪ್ಸ್ಯಸಿ - ಹೊಂದುವಿ ॥೩॥ ಹೇರಾಮ - ಎಲೈ ಶ್ರೀರಾಮನೆ, ಕುಶಃ - ಕುಶಬ್ರಹ್ಮನು, ಕುಶನಾಭಂ - ಕುಶನಾಭನೆಂಬ, ಮಹೀಪತಿಂ - ಅರಸನ್ನು ಕುರಿತು, ಏವಮುಕ್ತ್ವಾ - ಹೀಗೆಹೇಳಿ, ಆಕಾಶಂ - ಆಕಾಶವನ್ನು, ಆವಿಶ್ಯ - ಪ್ರವೇಶಿಸಿ, ಸನಾತನಂ - ಶಾಶ್ವತವಾದ, ಬ್ರಹ್ಮಲೋಕಂ- ಸತ್ಯಲೋಕವನ್ನುಕುರಿತು, ಜಗಾಮ - ತೆರಳಿದನು. ॥೪॥ ಕಸ್ಯಚಿತ್ಕಾಲಸ್ಯ - ಅಥ - ಕೆಲಕಾಲ

---

ರಘುಕುಲಚಂದ್ರಮ ! ಇಂತು ಬ್ರಹ್ಮದತ್ತನು ಕುಶನಾಭನ ನೂರುಮಂದಿ ಕುವರಿಯರನ್ನು ಮದುವೆಯಾಗಿ, ತನ್ನ ಪಟ್ಟಣವಾದ ಕಾಂಪಿಲ್ಯ ನಗರಿಗೆ ತೆರಳಲು, ಅಪುತ್ರ ವಂತನಾದ ಕುಶನಾಭ ರಾಜನು ಪುತ್ರಲಾಭಕ್ಕೋಸುಗವಾಗಿ ಪುತ್ರಕಾಮೇಷ್ಟಿಯಾಗವನ್ನು ಮಾಡಿದನು. ॥೧॥ ಈ ಯಾಗವು ನಡೆಯುತ್ತಿರಲು ಬಹಳ ಉದಾರನೂ, ಬ್ರಹ್ಮನ ಕುವರನೂ ಆದ ಕುಶಬ್ರಹ್ಮನು, ಕುಶನಾಭನನ್ನು ಕುರಿತು "ಎಲೈ ಮಗನೇ ! ಮಹಾ ಧರ್ಮಿಷ್ಠನಾಗಿಯೂ, ಗಾಧಿ, ಎಂಬ ಹೆಸರುಳ್ಳವನಾಗಿಯೂ ಇರುವ ಮಗನನ್ನು ಪಡೆವೆ.

ಜಜ್ಞೇ ಪರಮಧರ್ಮಿಷ್ಠೋ ಗಾಧಿರಿತ್ಯೇವ ನಾಮತಃ ||೫|| ಸ ಪಿತಾ ಮಮ ಕಾಕುತ್ಸ್ಥ ಗಾಧಿಃ ಪರಮಧಾರ್ಮಿಕಃ || ಕುಶವಂಶ ಪ್ರಸೂತೋಽಸ್ಮಿ ಕೌಶಿಕೋ ರಘುನಂದನ||೬|| ಪೂರ್ವಜಾ ಭಗಿನೀಚಾಪಿ ಮಮ ರಾಘವ ಸುವ್ರತಾ||ನಾಮ್ನಾ ಸತ್ಯವತೀ ನಾಮ ಋಚೀಕೇ ಪ್ರತಿಪಾದಿತಾ ||೭|| ಸಶರೀರಾ ಗತಾ ಸ್ವರ್ಗಂ ಭರ್ತಾರಮನುವರ್ತಿನೀ||ಕೌಶಿಕೀ ಪರಮೋದಾರಾ ಪ್ರವೃತ್ತಾ ಚ ಮಹಾನದೀ||೮|| ದಿವ್ಯಾ ಪುಣ್ಯೋದಕಾ ರಮ್ಯಾ ಹಿಮವಂತಮುಪಾಶ್ರಿತಾ || ಲೋಕಸ್ಯ ಹಿತಕಾಮಾರ್ಥಂ ಪ್ರವೃತ್ತಾ ಭಗಿನೀ ಮಮ ||೯|| ತತೋಽಹಂ ಹಿಮವತ್ಪಾರ್ಶ್ವೇ

ಪಾದಮೇಲೆ, ಧೀಮತಃ ಬುದ್ಧಿವಂತನಾದ, ಕುಶನಾಭಸ್ಯ - ಕುಶನಾಭನಿಗೆ, ಪರಮಧರ್ಮಿಷ್ಠಃ - ಬಹಳಧರ್ಮಿಷ್ಠನಾದ, ನಾಮತಃ - ಹೆಸರಿನಿಂದ, ಗಾಧಿರಿತ್ಯೇವ - ಗಾಧಿಯೆಂಬುವನೇ, ಜಜ್ಞೇ - ಹುಟ್ಟಿದನು ||೫|| ಹೇರಘುನಂದನ - ಎಲೈ ಶ್ರೀರಾಮನೆ, ಹೇಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೆ! ಪರಮಧಾರ್ಮಿಕಃ - ಪರಮಧರ್ಮಿಷ್ಠನಾದ, ಸಗಾಧಿಃ - ಆ ಗಾಧಿರಾಜನು, ಮಮ - ನನಗೆ, ಪಿತಾ - ತಂದೆಯು, ಕುಶವಂಶಪ್ರಸೂತಃ - ಕುಶಬ್ರಹ್ಮನ ವಂಶೋತ್ಪನ್ನನಾದಕಾರಣ, ಕೌಶಿಕಃ - ಕೌಶಿಕನೆಂದು ಪ್ರಸಿದ್ಧನ, ಅಸ್ಮಿ - ಆಗಿರುವೆನು. ||೬|| ಹೇರಾಘವ-ಎಲೈಶ್ರೀರಾಮನೆ! ಸುವ್ರತಾ-ಪತಿವ್ರತೆಯಾದ, ಮಮ - ನನಗೆ, ಪೂರ್ವಜಾ - ಜ್ಯೇಷ್ಠಳಾದ, ನಾಮ್ನಾ - ಹೆಸರಿನಿಂದ, ಸತ್ಯವತೀ ನಾಮ - ಸತ್ಯವತೀ ಎಂದು ಪ್ರಸಿದ್ಧಳಾದ, ಭಗಿನೀ - ಸೋದರಿಯು, ಋಚೀಕೇ - ಋಚೀಕನೆಂಬ ಬ್ರಾಹ್ಮಣನಿಗೆ, ಪ್ರತಿಪಾದಿತಾ - ಕೊಡಲ್ಪಟ್ಟಳು. ||೭|| ಭರ್ತಾರಂ - ಗಂಡನನ್ನು, ಅನುವರ್ತಿನೀ - ಶುಶ್ರೂಷೆಮಾಡಿದವಳಾದ ಕಾರಣ, ಸಶರೀರಾ - ಶರೀರದಿಂದೊಡಗೂಡಿ, ಸ್ವರ್ಗಂ - ಸ್ವರ್ಗಲೋಕವನ್ನು, ಗತಾ - ಹೊಂದಿ, ಪರಮೋದಾರಾ - ಸರ್ವೋತ್ಕೃಷ್ಟಳಾದ, ಕೌಶಿಕೀ - ಕೌಶಿಕೀಯೆಂಬ, ಮಹಾನದೀ - ಮಹಾನದಿಯರೂಪವನಾಗಿ, ಪ್ರವೃತ್ತಾಚ - ಪ್ರವಹಿಸಿರುವಳು ||೮|| ಮಮ-ನನ್ನ, ಭಗಿನೀ - ಅಕ್ಕನು, ಲೋಕಸ್ಯ - ಲೋಕಕ್ಕೆ, ಹಿತಕಾಮಾರ್ಥಂ ಐಹಿಕ ಆಮುಷ್ಮಿಕಗಳ ಹಿತಾರ್ಥವಾಗಿ, ಹಿಮವಂತಂ - ಹಿಮವತ್ಪರ್ವತವನ್ನು, ಉಪಶ್ರಿತಾ - ಆಶ್ರಯಿಸಿ, ರಮ್ಯಾ - ಮನೋಹರವಾದ, ದಿವ್ಯಾ - ದೇವತಾಸಂಬಂಧವಾದ, ಪುಣ್ಯೋದಕಾ - ಪುಣ್ಯಕರವಾದ ಉದಕವುಳ್ಳ ನದೀರೂಪವಾಗಿ, ಪ್ರವೃತ್ತಾ - ಪ್ರವಹಿಸುತ್ತಿರುವಳು. ||೯|| ತತಃ - ಆ ಕಾರಣ, ಹೇರಘುನಂದನ -

ನೀನೀ ಪುತ್ರಲಾಭದಿಂದ ಶಾಶ್ವತವಾದ ಕೀರ್ತಿಯನ್ನು ಹೊಂದುವೆ" ಎಂದೀ ಪ್ರಕಾರವಾಗಿ ನುಡಿದು ಆಕಾಶಮಾರ್ಗದಿಂದ ಸನಾತನವಾದ ಬ್ರಹ್ಮಲೋಕವನ್ನು ಕುರಿತು ಹೊರಟು ಹೋದನು. || ೨-೪ || "ರಾಮಚಂದ್ರ! ಕೆಲ ಕಾಲವಾದಮೇಲೆ ಮಹಾ ಬುದ್ಧಿಶಾಲಿಯಾದ ಕುಶನಾಭನಿಗೆ ಮಹಾ ಧರ್ಮಿಷ್ಠನಾದ ಮಗನುತ್ಪನ್ನನಾದನು. || ೫ || ಎಲೈ ಕಾಕುತ್ಸ್ಥನೇ! ಈ ಗಾಂಧಿರಾಜನೇ ನನ್ನ ತಂದೆಯು, ನಾನು ಕುಶವಂಶ ಪ್ರಸೂತನಾಗಿರುವೆನು. || ೬ || ನನ್ನ ಒಡ ಹುಟ್ಟಿದವಳಾದ ಸತ್ಯವತಿ ಎಂಬಾಕೆಯು ನನ್ನ ಪೂರ್ವಜಳು. ಈಕೆಯು ಋಚೀಕನಿಗೆ ವಿವಾಹಿತವಾಗಿದ್ದಳು. || ೭ || ಈಕೆಯು ಪತಿಯನ್ನನುವರ್ತಿಸಿ ಸಶರೀರಳಾಗಿಯೇ ಸ್ವರ್ಗವನ್ನು ನೇರಿದಳು. ಅದು ಅಲ್ಲದೆ ಕುಶವಂಶದಲ್ಲಿ ಹುಟ್ಟಿದವಳಾದುದರಿಂದ

ವಸಾಮಿ ನಿರತಸ್ಸುಖಂ॥ ಭಗಿನ್ಯಾಂ ಸ್ನೇಹಸಂಯುಕ್ತಃ ಕೌಶಿಕ್ಯಾಂ ರಘುನಂದನ॥ ಸಾ ತು ಸತ್ಯವತೀ ಪುಣ್ಯಾ ಸತ್ಯೇ ಧರ್ಮೇ ಪ್ರತಿಷ್ಠಿತಾ॥ ಪತಿವ್ರತಾ ಮಹಾಭಾಗಾ ಕೌಶಿಕೀ ಸರಿತಾಂ ವರಾ ॥೧೧॥ ಅಹಂ ಹಿ ನಿಯಮಾದ್ರಾಮ ಹಿತ್ವಾ ತಾಂ ಸಮುಪಾಗತಃ॥ ಸಿದ್ಧಾಶ್ರಮಮನುಪ್ರಾಪ್ಯ ಸಿದ್ಧೋಽಸ್ಮಿ ತವ ತೇಜಸಾ ॥೧೨॥ ಏಷಾ ರಾಮ ಮಮೋತ್ಪತ್ತಿ ಸ್ಸ್ವಸ್ಯ ವಂಶಸ್ಯ ಕೀರ್ತಿತಾ॥ ದೇಶಸ್ಯಚ ಮಹಾಬಾಹೋ ಯನ್ಮಾಂ ತ್ವಂ ಪರಿಪೃಚ್ಛಸಿ ॥೧೩॥ ಗತೋಽರ್ಧರಾತ್ರಃ ಕಾಕುತ್ಸ್ಥ

---

ಎಲೈ ಶ್ರೀರಾಮನೇ, ಕೌಶಿಕ್ಯಾಂ - ಕೌಶಿಕೀನದೀರೂಪಳಾದ, ಭಗಿನ್ಯಾಂ - ಅಕ್ಕನಲ್ಲಿ, ಸ್ನೇಹಸಂಯುಕ್ತಃ-ಸ್ನೇಹದಿಂದೊಡಗೂಡಿ, ಅಹಂ - ನಾನು, ಹಿಮವತ್ಪಾರ್ಶ್ವೇ- ಹಿಮವತ್ಪರ್ವತ ಪ್ರಾಂತ್ಯದಲ್ಲಿ, ನಿರತಃ - ಆಸಕ್ತನಾಗಿ, ಸುಖಂ - ಸುಖವಾಗಿ, ವಸಾಮಿ - ಇರುತ್ತೇನೆ. ॥ ೧೦ ॥ ಪತಿವ್ರತಾ - ಪತಿವ್ರತೆಯಾದ, ಮಹಾಭಾಗಾ- ಪುಣ್ಯವತಿಯಾದ, ಸತ್ಯೇ-ಸತ್ಯದಲ್ಲಿಯೂ, ಧರ್ಮೇ - ಧರ್ಮದಲ್ಲಿಯೂ, ಪ್ರತಿಷ್ಠಿತಾ - ಸ್ಥಿರಚಿತ್ತಳಾದ, ಪುಣ್ಯಾ - ಪುಣ್ಯಕರಳಾದ, ಸಾ - ಆಕೆಯು, ಸತ್ಯವತೀ - ಸತ್ಯವತೀ ಎಂದು ಅನ್ವರ್ಥನಾಮವುಳ್ಳವಳಾಗಿ, ಸರಿತಾಂ - ನದಿಗಳಲ್ಲಿ, ವರಾ - ಶ್ರೇಷ್ಠಳಾದ, ಕೌಶಿಕೀ - ಕೌಶಿಕೀನದೀರೂಪಳಾದಳು ॥೧೧॥ ಹೇರಾಮ - ಎಲೈ ಶ್ರೀರಾಮನೆ, ಅಹಂಹಿ-ನಾನಾದರೋ, ನಿಯಮಾತ್-ಯಾಗಮಾಡಬೇಕೆಂಬ ನಿಯಮದಿಂದ, ತಾಂ - ಆ ಕೌಶಿಕೀ ನದಿಯನ್ನು, ಹಿತ್ವಾ - ತೊರೆದು, ಸಮುಪಾಗತಃ - ಬಂದು, ಸಿದ್ಧಾಶ್ರಮಂ - ಸಿದ್ಧಾಶ್ರಮವನ್ನು, ಅನುಪ್ರಾಪ್ಯ - ಹೊಂದಿ, ತವ - ನಿನ್ನ, ತೇಜಸಾ - ಪ್ರಭಾವದಿಂದ, ಸಿದ್ಧಃ-ಕಾರ್ಯಸಿದ್ಧಿಯುಳ್ಳವನು, ಅಸ್ಮಿ - ಆದೆನು. ॥೧೨॥ ಹೇರಾಮ - ಎಲೈಶ್ರೀರಾಮನೆ, ಮಮ- ನನ್ನ, ಸ್ವಸ್ಯ-ಸ್ವಕೀಯವಾದ, ವಂಶಸ್ಯ - ಕುಲದ, ಉತ್ಪತ್ತಿಃ - ಉತ್ಪತ್ತಿಯೂ, ಏಷಾ - ಇದು, ಕೀರ್ತಿತಾ-ಹೇಳಲ್ಪಟ್ಟಿತು, ಹೇ ಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೆ, ಯತ್-ಯಾವುದನ್ನು, ಮಾಂ - ನನ್ನನ್ನು ಕುರಿತು, ಪರಿಪೃಚ್ಛಸಿ - ಕೇಳಿದೆಯೋ, ತಸ್ಯದೇಶಸ್ಯಚ - ಆ ದೇಶದ, ಉತ್ಪತ್ತಿಶ್ಚ - ಉತ್ಪತ್ತಿಯೂ, ಕೀರ್ತಿತಾ - ಹೇಳಲ್ಪಟ್ಟಿತು. ॥ ೧೩ ॥ ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ,

ಕೌಶಿಕಿ ಎಂದು ಪ್ರಸಿದ್ಧಳೂ, ದಿವ್ಯವಾದ ಪುಣ್ಯೋದಕವುಳ್ಳವಳೂ, ಮನೋಹರಳಾಗಿಯೂ, ಆಗಿ ಲೋಕಹಿತಾರ್ಥವಾಗಿ ಹಿಮವತ್ಪರ್ವತವನ್ನು ಆಶ್ರಯಿಸಿದಳು ॥ ೮-೯ ॥ ರಘುನಂದನೆ! ಆ ಬಳಿಕ ಅಕ್ಕನಾದ ಕೌಶಿಕಿಯಲ್ಲಿ ಸ್ನೇಹಯುಕ್ತನಾದ ನಾನು ನದೀರೂಪನಾಗಿ ಪ್ರವಹಿಸುತ್ತಿದ್ದ ಆಕೆಯ ಬಳಿಯಲ್ಲಿ ಹಿಮವತ್ಪ್ರಾಂತ್ಯದಲ್ಲಿ ನಿರತನಾಗಿ ಸುಖದಿಂದ್ದನು.॥೧೦॥ ಆ ಸತ್ಯವತಿಯು ಬಹು ಪುಣ್ಯವತಿಯು. ಸತ್ಯದಲ್ಲಿಯೂ, ಧರ್ಮದಲ್ಲಿಯೂ, ಪ್ರತಿಷ್ಠಿತಳಾದವಳು. ಪತಿವ್ರತೆಯೂ, ಮಹಾಭಾಗ್ಯಶಾಲಿನಿಯೂ ಆದ ಈ ಕೌಶಿಕೀ ನದಿಯು ನದಿಗಳಲ್ಲೆಲ್ಲಾ ಶ್ರೇಷ್ಠವಾದುದು. ॥ ೧೧ ॥ ಎಲೈ ರಾಮನೇ! ನಾನಾದರೋ ಆ ಕೌಶಿಕೀ ನದಿಯನ್ನು ಬಿಟ್ಟು ನನ್ನ ಸಿದ್ಧಾಶ್ರಮವನ್ನು ಹೊಂದಿ ನಿನ್ನ ಪ್ರಭಾವದಿಂದ ಸಿದ್ಧನಾಗಿರುವೆನು. ॥೧೨॥ ರಾಮಾ ಯಾವ ವಿಷಯವಾಗಿ ನೀನು ಕೇಳುತ್ತಿದ್ದೆಯೋ ಅದೇ ನನ್ನ ಜನ್ಮ ವೃತ್ತಾಂತವು. ವಂಶದ ಮತ್ತು ದೇಶದ ಕೀರ್ತಿಯೂ ಅದೇ ಆಗಿರುವುದು ॥ ೧೩ ॥

ಕಥಾಃ ಕಥಯತೋ ಮಮ|| ನಿದ್ರಾಂ ಮಭ್ಯೇಹಿ ಭದ್ರಂ ತೇ ಮಾಭೂದ್ವಿಘ್ನೋಽ ಧ್ವನೀಹನಃ ||೧೪|| ನಿಷ್ಪಂದಾಸ್ತರವಸ್ಸರ್ವೇ ನಿಲೀನಾ ಮೃಗಪಕ್ಷಿಣಃ|| ನೈಶೇನ ತಮಸಾ ವ್ಯಾಪ್ತಾ ದಿಶಶ್ಚ ರಘುನಂದನ||೧೫||ಶನೈರ್ವಿಯುಜ್ಯತೇ ಸಂಧ್ಯಾ ನಭೋ ನೇತ್ರೈರಿವಾವೃತಂ||ನಕ್ಷತ್ರ ತಾರಾಗಹನಂ ಜ್ಯೋತಿರ್ಭಿ ರವಭಾಸ್ಯತೇ||೧೬|| ಉತ್ತಿಷ್ಠತಿಚ ಶೀತಾಂಶು ಶ್ಯಶೀ ಲೋಕ ತಮೋನುದಃ||ಹ್ಲಾದಯರ್ನ್ ಪ್ರಾಣಿನಾಂ ಲೋಕೇ ಮನಾಂಸಿ ಪ್ರಭಯಾವಿಭೋ ||೧೭|| ನೈಶಾನಿ ಸರ್ವಭೂತಾನಿ ಪ್ರಚ ರಂತಿ ತತಸ್ತತಃ|| ಯಕ್ಷ ರಾಕ್ಷಸ ಸಂಘಾಶ್ಚ ರೌದ್ರಾಶ್ಚ ಪಿಶಿತಾಶನಾಃ||೧೮|| ಏವ

---

ಕಥಾಃ - ಇತಿಹಾಸಗಳನ್ನು, ಕಥಯಥಃ - ಹೇಳುತ್ತಿರುವ, ಮಮ - ನನಗೆ, ಅರ್ಧರಾತ್ರಃ - ಅರ್ಧ ರಾತ್ರೋಪಲಕ್ಷಿತಕಾಲವು, ಗತಃ - ಕಳೆದುಹೋಯಿತು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ನಿದ್ರಾಂ - ನಿದ್ದೆಯನ್ನು, ಅಭ್ಯೇಹಿ - ಹೊಂದು, ಇಹ- ಈಗ, ಅಧ್ವನಿ - ಮಾರ್ಗದಲ್ಲಿ, ನಃ - ನಮಗೆ, ವಿಘ್ನಂ - ವಿಘ್ನವು, ಮಾಭೂತ್ - ಆಗದಿರಲಿ. ||೧೪|| ಹೇರಘುನಂದನ - ಎಲೈಶ್ರೀರಾ ಮನೆ, ಸರ್ವೇತರವಃ - ಸಮಸ್ತ ಗಿಡಗಳು, ನಿಷ್ಪಂದಾಃ - ಚಲನರಹಿತಗಳಾಗಿವೆ, ಮೃಗಪಕ್ಷಿಣಃ - ಮೃಗಗಳೂ ಹಕ್ಕಿಗಳೂ, ನಿಲೀನಾಃ - ಔತುಕೊಂಡು, ದಿಶಶ್ಚ-ದಿಕ್ಕುಗಳೂ, ನೈಶೇನ - ರಾತ್ರಿಸಂ ಬಂಧವಾದ, ತಮಸಾ - ಗಾಢಾಂಧಕಾರದಿಂದ, ವ್ಯಾಪ್ತಾಃ - ವ್ಯಾಪಿಸಿಕೊಳ್ಳಲ್ಪಟ್ಟವೆ, ಸಂಧ್ಯಾ - ಸಂಧ್ಯೆಯು, ಶನೈಃ - ಮೆಲ್ಲಮೆಲ್ಲಗೆ, ವಿಯುಜ್ಯತೆ - ಬಿಡಲ್ಪಟ್ಟಿತು, ನಕ್ಷತ್ರತಾರಾಗಹನಂ, ನಕ್ಷತ್ರ - ನಕ್ಷತ್ರಗಳಿಂದಲೂ, ತಾರಾ - ಅಶ್ವಿನ್ಯಾದಿನಕ್ಷತ್ರಗಳಿಂದಲೂ, ಗಹನಂ - ವ್ಯಾಪ್ತವಾದ, ನಭಃ - ಅಂತ ರಿಕ್ಷವು, ಜ್ಯೋತಿಭಿಃ - ಕಾಂತಿಗಳಿಂದ, ನೇತ್ರೈಃ - ನೇತ್ರಗಳಿಂದ, ಆವೃತಮಿವ – ವ್ಯಾಪ್ತ ವಾದಂತೆ, ಅವಭಾಸತೇ - ಹೊಳೆಯುತ್ತಿರುವುದು, ಹೇವಿಭೋ - ಎಲೈ ತತ್ವಾವಧಾರಣ ಸಮರ್ಥನೇ! ಶೀತಾಂಶುಃ – ಶೀತಕಿರಣನಾದ, ಲೋಕತಮೋನುದಃ - ಲೋಕದ ಅಂಧಕಾರವನ್ನು ಹೋಗಲಾಡಿಸುತ್ತಿರುವ, ಶಶೀ-ಚಂದ್ರನು, ಲೋಕೇ-ಲೋಕದಲ್ಲಿ, ಪ್ರಾಣಿನಾಂ- ಪ್ರಾಣಿಗಳ, ಮನಾಂಸಿ - ಮನಗಳನ್ನು, ಪ್ರಭಯಾ - ಕಾಂತಿಯಿಂದ, ಹ್ಲಾದಯರ್ನ್-ಸಂತೋಷಗೊಳಿ ಸುತ್ತ, ಉತ್ತಿಷ್ಠತಿ-ಉದಯಿಸುತ್ತಾನೆ. ನೈಶಾನಿ-(ತಿ) ರಾತ್ರಿಯಲ್ಲಿ ಹುಟ್ಟತಕ್ಕ, (ಗೋ) ರಾತ್ರಿಯ ಕಾಲದಲ್ಲಿ ಪ್ರಾಭವವುಳ್ಳ, ಸರ್ವಭೂತಾನಿ - ಎಲ್ಲ ಭೂತಗಳು, ತತಸ್ತತಃ - ಅಲ್ಲಲ್ಲಿ, ಪ್ರಚರಂತಿ- ಓಡಾಡುತ್ತವೆ, ಯಕ್ಷರಾಕ್ಷಸಸಂಘಾಶ್ಚ- ಯಕ್ಷ ರಾಕ್ಷಸರ ತಂಡಗಳು, ರೌದ್ರಾಃ-ಭಯಂಕರರಾದ, ಪಿಶಿತಾಶನಾಶ್ಚ - ಮಾಂಸಾಶನರೂ, ತತಸ್ತತಃ-ಅಲ್ಲಲ್ಲಿ, ಪ್ರಚರಂತಿ - ಸಂಚರಿಸುತ್ತಾರೆ. ||೧೫-೧೮||

---

ಎಲೈ ರಾಮಚಂದ್ರನೇ ! ನಾನು ಕಥೆಗಳನ್ನು ಹೇಳುತ್ತಿರುವಲ್ಲಿಯೇ ಅರ್ಧರಾತ್ರಿಯಾಯಿತು. ನಿದ್ರೆಯನ್ನು ಹೊಂದುವವನಾಗು. ನಾಳೆ ದಾರಿ ನಡೆವಾಗ ವಿಘ್ನವಾಗದಿರಲಿ, ಇತ್ತ ನೋಡಿ ದೆಯಾ? ವೃಕ್ಷಗಳು ಅಲುಗಾಡದಿರುವವು ; ಮೃಗಪಕ್ಷಿಗಳು ಅವಿತುಕೊಂಡಿರುವುವು; ನಿಶಾ ಚರಗಳಾದ ಭೂತಗಳೂ ಬಹುಭೀಕರಗಳಾಗಿಯೂ, ರಕ್ತಾಶನಗಳಾಗಿಯೂ, ಇರುವ ಯಕ್ಷ ರಾಕ್ಷಸ ಸಂಘಗಳು ಅಲ್ಲಿಂದಿಲ್ಲಿಗೆ ಓಡಾಡುತ್ತಿರುವವು.'' ಎಂದೀ ಪ್ರಕಾರವಾಗಿ

ಮುಕ್ತ್ವಾ ಮಹಾತೇಜಾ ವಿರರಾಮ ಮಹಾಮುನಿಃ|| ಸಾಧು ಸಾಧ್ವಿತಿ ತಂ ಸರ್ವೇ
ಮುನಯೋಽಹ್ಯಭ್ಯಪೂಜಯನ್ || ೧೯ || ಕುಶಿಕಾನಾಮಯಂ ವಂಶೋ ಮಹಾನ್
ಧರ್ಮಪರಸ್ಸದಾ || ಬ್ರಹ್ಮೋಪಮಾ ಮಹಾತ್ಮಾನಃ ಕುಶವಂಶ್ಯಾ ನರೋ
ತ್ತಮಾಃ || ೨೦ || ವಿಶೇಷೇಣ ಭವಾನೇವ ವಿಶ್ವಾಮಿತ್ರೋ ಮಹಾಯಶಃ||
ಕೌಶಿಕೀ ಸರಿತಾಂ ಶ್ರೇಷ್ಠಾ ಕುಲೋದ್ಯೋತಕರೀ ತವ ||೨೧|| ಇತಿ ತೈರ್ಮುನಿ
ಶಾರ್ದೂಲೈಃ ಪ್ರಶಸ್ತಃ ಕುಶಿಕಾತ್ಮಜಃ || ನಿದ್ರಾಮುಪಾಗಮ ಚ್ಛ್ರೀಮಾನಸ್ತಂ

---

ಮಹಾತೇಜಾಃ - ಮಹಾ ಪ್ರಭಾವಸಂತನೂ, ಮಹಾಮುನಿಃ- ಮಹರ್ಷಿಯೂ ಆದ ವಿಶ್ವಾಮಿತ್ರನು,
ಏವಂ - ಹೀಗೆ, ಉಕ್ತ್ವಾ-ಹೇಳಿ, ವಿರರಾಮ-ಸುಮ್ಮನಾದನು. ಸರ್ವೇ-ಸಮಸ್ತರಾದ, ಮುನಯಃ-
ಋಷಿಗಳು, ತಂ - ಆ ವಿಶ್ವಾಮಿತ್ರನನ್ನು, ಸಾಧುಸಾಧ್ವಿತಿ-ಬಹಳ ಚಂದವಾಯಿತೆಂದು, ಅಭ್ಯಪೂಜ
ಯನ್ ಹಿ-ಸ್ತೋತ್ರಮಾಡಿದರಷ್ಟೆ, ||೧೯|| ಕುಶಿಕಾನಾಂ-ಕುಶಿಕವಂಶೋತ್ಪನ್ನರಾದವರ, ಮಹಾನ್-
ದೊಡ್ಡದಾದ, ಅಯಂವಂಶಃ - ಈ ವಂಶವು, ಸದಾ - ನಿರಂತರದಲ್ಲಿಯೂ, ಧರ್ಮಪರಃ - ಧರ್ಮದಲ್ಲೇ
ಆಸಕ್ತಿಯುಳ್ಳ, ಕುಶವಂಶ್ಯಾಃ - ಕುಶವಂಶದಲ್ಲಿ ಹುಟ್ಟಿದ, ನರೋತ್ತಮಾಃ - ನರಶ್ರೇಷ್ಠರು,
ಮಹಾತ್ಮಾನಃ - ಮಹಾನುಭಾವರು, ಬ್ರಹ್ಮೋಪಮಾಃ- ಚತುರ್ಮುಖಬ್ರಹ್ಮನಿಗೆ ಸದೃಶರು, ||೨೦||
ಹೇಮಹಾಯಶಃ - ಮಹಾಕೀರ್ತಿವಂತನೆ, ವಿಶೇಷೇಣ - ವಿಶೇಷವಾಗಿ, ಭವಾನೇವ-ನೀನೆ, ವಿಶ್ವಾ
ಮಿತ್ರಃ - ಪ್ರಪಂಚಕ್ಕೆ ಮಿತ್ರನಾಗಿರುವೆ, ತವ-ನಿನ್ನ, ಕುಲೋದ್ಯೋತಕರೀ-ಕುಲಕ್ಕೆಲ್ಲ ಪ್ರಕಾಶಕರ
ಳಾದ, ಕೌಶಿಕೀ-ಕೌಶಿಕೀನದಿಯು, ಸರಿತಾಂ - ನದಿಗಳೊಳಗೆ, ಶ್ರೇಷ್ಠಾ-ಪ್ರಶಸ್ತಳಾಗಿರುವಳು||೨೧||
ಇತಿ-ಹೀಗೆ,ತೈರ್ಮುನಿಶಾರ್ದೂಲೈಃ-ಆ ಋಷಿಶ್ರೇಷ್ಠರಿಂದ,ಪ್ರಶಸ್ತಃ-ಶ್ಲಾಘಿಸಲ್ಪಟ್ಟ, ಶ್ರೀಮಾನ್-
ಸಂಪದ್ಯುಕ್ತನಾದ, ಕುಶಿಕಾತ್ಮಜಃ - ವಿಶ್ವಾಮಿತ್ರನು, ಅಸ್ತಂ - ಅಸ್ತಮಯ ಪರ್ವತವನ್ನು, ಗತಃ-
ಹೊಂದಿದ, ಅಂಶುಮಾನಿವ - ಸೂರ್ಯನಂತೆ, ನಿದ್ರಾಂ - ನಿದ್ರೆಯನ್ನು, ಉಪಾಗಮತ್ - ಹೊಂದಿ
ದನು. || ೨೨ || ರಾಮೋಽಪಿ - ಶ್ರೀರಾಮನೂ, ಸಹಸೌಮಿತ್ರಿಃ - ಲಕ್ಷ್ಮಣನಿಂದೊಡಗೂಡಿದವ

---

ಹೇಳಿದ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಸುಮ್ಮನಾದನು. || ೧೮-೧೯ || ಆಗಲಾ
ಋಷಿಗಳೆಲ್ಲರೂ “ಎಲೈ ಕುಶಿಕಾತ್ಮಜನೇ ! ಈ ಕುಶವಂಶವು ಬಹು ಧರ್ಮಪರವಾದುದು.
ಈ ವಂಶದಲ್ಲಿ ಹುಟ್ಟಿದ ಪುರುಷರೆಲ್ಲರೂ ಮಹಾತ್ಮರೂ, ಬ್ರಹ್ಮನಿಗೆ ಸಮನಾದವರೂ ಆಗಿ
ರುವರು. || ೨೦ || ಅದರಲ್ಲಿಯೂ ವಿಶ್ವಾಮಿತ್ರನಾದ ನೀನು ಮಹಾ ಕೀರ್ತಿವಂತನು,
ನಿನ್ನ ಅಕ್ಕನೂ, ನದಿಗಳಲ್ಲಿ ಶ್ರೇಷ್ಠವೂ ಆದ, ಕೌಶಿಕೀ ನದಿಯು ನಿನ್ನ ವಂಶದ ಕೀರ್ತಿಯನ್ನು
ಪ್ರಕಾಶಗೊಳಿಸುವುದಾಗಿರುವುದು” ಎಂದು ಗೌರವಿಸಿದರು. || ೨೧ || ಇಂತು ಆ ಋಷಿ
ಗಳಿಂದ ಸ್ತುತನಾದ ಕುಶಿಕಾತ್ಮಜನು ಅಸ್ತಂಗತನಾದ ಸೂರ್ಯನಂತೆ ಬಹುಬೇಗನೆ ನಿದ್ರೆ
ಯನ್ನು ಹೊಂದಿದನು || ೨೨ || ಲಕ್ಷ್ಮಣನಿಂದೊಡಗೂಡಿದ ರಾಮಚಂದ್ರನೂ

ಗತ ಇವಾಂಶುಮಾನ್ ॥ ೨೨ ॥ ರಾಮೋಽಪಿ ಸಹಸೌಮಿತ್ರಿಃ ಕಿಂಚಿದಾಗತ
ವಿಸ್ಮಯಃ ॥ ಪ್ರಶಸ್ಯ ಮುನಿಶಾರ್ದೂಲಂ ನಿದ್ರಾಂ ಸಮುಪಸೇವತೆ ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ

---

ನಾಗಿ, ಕಿಂಚಿತ್ - ಸ್ವಲ್ಪವಾಗಿ, ಆಗತವಿಸ್ಮಯಃ - ಪ್ರಾಪ್ತವಾದ ಆಶ್ಚರ್ಯವುಳ್ಳವನಾಗಿ, ಮುನಿಶಾ ರ್ದೂಲಂ - ವಿಶ್ವಾಮಿತ್ರನನ್ನು, ಪ್ರಶಸ್ಯ - ಪ್ರಶಂಸೆಮಾಡಿ, ನಿದ್ರಾಂ - ನಿದ್ರೆಯನ್ನು, ಸಮುಪಸೇವತೇ - ಚನ್ನಾಗಿ ಹೊಂದಿದನು. ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ

---

ವಿಶ್ವಾಮಿತ್ರನು ಹೇಳಿದ ಕಥೆಯನ್ನು ಕೇಳಿ, ನಸುನಗೆಯಿಂದಾತನನ್ನುಪ್ರಶಂಶಿಸಿ ನಿದ್ರಿ ಸಿದನು. ॥ ೨೩ ॥

ಇಂತಿದು ವಿಶ್ವಾಮಿತ್ರೋಕ್ತ ಸ್ವಕಥಾ ಕಥನ ವರ್ಣನವೆಂಬ ಮೂವತ್ತು
ನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ



**ಉಪಾಸ್ಯ ರಾತ್ರಿಶೇಷಂತು ಶೋಣಾಕೂಲೇ ಮಹರ್ಷಿಭಿಃ||ನಿಶಾಯಾಂ ಸುಪ್ರಭಾತಾಯಾಂ ವಿಶ್ವಾಮಿತ್ರೋಽಭ್ಯಭಾಷತ ||೧|| ಸುಪ್ರಭಾತಾ ನಿಶಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ || ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಗಮನಾಯಾಭಿರೋಚಯ ||೨|| ತಚ್ಛ್ರುತ್ವಾ ವಚನಂ ತಸ್ಯ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಂ||**

---

ವಿಶ್ವಾಮಿತ್ರಃ - ವಿಶ್ವಾಮಿತ್ರನು ಶೋಣಾಕೂಲೇ-ಶೋಣಾನದೀತೀರದಲ್ಲಿ, ಮಹರ್ಷಿಭಿಃ-ಋಷಿಗಳೊಡನೆ, ರಾತ್ರಿಶೇಷಂ - ಮಿಕ್ಕರಾತ್ರಿಯನ್ನು, ಉಪಾಸ್ಯ - (ತಿ) ನಿದ್ರೆಯಿಂದ ಕಳೆದು ನಿಶಾಯಾಂ - ರಾತ್ರಿಯು, ಸುಪ್ರಭಾತಾಯಾಂ - ಬೆಳಗಾಗುತ್ತಿರಲು, ಅಭ್ಯಭಾಷತ - ಮಾತನಾಡಿದನು ||೧|| (೧) ಹೇರಾಮ - ಎಲೈ ಶ್ರೀರಾಮನೆ, ನಿಶಾ - ರಾತ್ರಿಯು, ಸುಪ್ರಭಾತಾ - ಸುಖವಾಗಿ ಬೆಳಗಾದುದಾಯಿತು, ಪೂರ್ವಾಸಂಧ್ಯಾ - ಪ್ರಾತಃಕಾಲಿಕವಾದ ಸಂಧ್ಯಾಕಾಲವು, ಪ್ರವರ್ತತೇ-ಪ್ರವರ್ತಿಸಿತು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಉತ್ತಿಷ್ಠೋತ್ತಿಷ್ಠ - ಏಳು, ಗಮನಾಯ - ಪ್ರಯಾಣ ಮಾಡಲು, ಅಭಿರೋಚಯ - ಸಮ್ಮತಿಸು, ||೨|| ತಸ್ಯ - ಆ ವಿಶ್ವಾಮಿತ್ರನ, ತದ್ವಚನಂ - ಆ ಮಾತನ್ನು, ಶ್ರುತ್ವಾ-ಕೇಳಿ, ಪೌರ್ವಾಹ್ಣಿಕೀಂ - ಪ್ರಾತಃಕಾಲಿಕವಾದ,

---

ಈ ರೀತಿ ವಿಶ್ವಾಮಿತ್ರನು ಶೋಣಾ ನದೀ ತೀರದಲ್ಲಿ ಆ ಋಷಿಗಳೊಡನೆ ರಾತ್ರಿಯನ್ನು ಕಳೆದು, ಸುಖವಾಗಿ ಬೆಳಗಾಗಲು ರಾಮಚಂದ್ರನನ್ನು ಕುರಿತು ಹೀಗೆ ನುಡಿದನು. ||೧|| "ರಾಮ ! ಸುಪ್ರಭಾತವಾಗಿರುವುದು. ಪ್ರಾತಃಕಾಲೀನವಾದ ಸಂಧ್ಯಾಕಾಲವೂ ಸಹ ಸಮೀಪಿಸಿರುವುದು. ಏಳು ! ಏಳು !! ನಿನಗೆ ಮಂಗಳವಾಗಲಿ; ಮುಂದಿನ ಪ್ರಯಾಣಕ್ಕನುವಾಗು." ||೨|| ಇಂತು ನುಡಿದ ವಿಶ್ವಾತ್ರನ ಮಾತನ್ನು ಕೇಳಿದ ಶ್ರೀರಾಮನು

---

ಟಿಪ್ಪಣಿ (೧) ಹಿಂದಿನ ಗ್ರಂಥಕರ್ತರಾದ ಕಟ್ಟೀಭಿರಾಮಶಾಸ್ತ್ರಿಗಳು ಈ ಶ್ಲೋಕಕ್ಕೆ ಅರ್ಥವನ್ನು ಬರೆದಿರುತ್ತಾರೆ. ಇಂತಹ ಶ್ಲೋಕಗಳು ಹಿಂದೆ ಒಂದೆರಡು ಬಂದಿರುತ್ತವೆ. ಅವಕ್ಕೂ ಹೀಗೆಯೇ ಅರ್ಥವನ್ನು ಮಾಡಬಹುದಾಗಿದ್ದಿತು. ಈ ತೆರದ ಅರ್ಥಗಳು ಯಾವ ವ್ಯಾಖ್ಯಾನದಲ್ಲಿಯೂ ಇಲ್ಲ ಆದರೂ ಅರ್ಥಸ್ವಾರಸ್ಯಲೋಭದಿಂದ ಇದನ್ನು ಇಲ್ಲಿ ಕೊಟ್ಟಿರುತ್ತೇನೆ

ಹೇರಾಮ – ಎಲೈ ಸರ್ವಭೂತಾನಂದಕರನಾದ ಶ್ರೀರಾಮನೆ ! ನಿನ್ನ ದರ್ಶನಮಾತ್ರದಿಂದ ನನಗೆ ಈ ರಾತ್ರಿಯು, ಸುಪ್ರಭಾತಾ – ಸುಖದಿಂದಲೇ ಬೆಳಗಾಯಿತು, ಪೂರ್ವಾಸಂಧ್ಯಾ – ಪ್ರಾತಃಕಾಲಿಕವಾದ ಸಂಧ್ಯಾಕಾಲವು, ಪ್ರವರ್ತತೇ – ಪ್ರವರ್ತಿಸಿತು, ಉತ್ತಿಷ್ಠೋತ್ತಿಷ್ಠ – ವಂದಿಮಾಗಧರಿಲ್ಲದ ಈ ಸ್ಥಳದಲ್ಲಿ ನಾನೇ ಪ್ರಬೋಧಕನಾಗಿರುವೆನು ನಿದ್ರೆಯಿಂದ ಎಚ್ಚರಿಕೆಯನ್ನು ಹೊಂದು, ತೇ – ನಿನಗೆ, ಭದ್ರಂ – ಕಲ್ಯಾಣವು, ಅಸ್ತು – ಆಗಲಿ, ಗಮನಾಯ – ಮುಂದಿನಪ್ರಯಾಣಕ್ಕೆ, ಅಭಿರೋಚಯ – ಉದ್ಯುಕ್ತನಾಗು.

ಗಮನಂ ರೋಚಯಾಮಾಸ ವಾಕ್ಯಂಚೇದಮುವಾಚಹ ॥ ೩ ॥ ಅಯಂ ಶೋಣಶ್ಶುಭಜಲೋಽಗಾಧಃ ಪುಳಿನಮಂಡಿತಃ॥ ಕತರೇಣ ಪಥಾ ಬ್ರಹ್ಮನ್ ಸಂತರಿಷ್ಯಾಮಹೇ ವಯಂ ॥ ೪ ॥ ಏವಮುಕ್ತಸ್ತು ರಾಮೇಣ ವಿಶ್ವಾಮಿತ್ರೋಽಬ್ರವೀದಿದಂ ॥ ಏಷಪಂಥಾ ಮಯೋದ್ದಿಷ್ಟೋ ಯೇನ ಯಾಂತಿ ಮಹರ್ಷಯಃ ॥ ೫ ॥ ಏವಮುಕ್ತಾ ಮಹರ್ಷಯೋ ವಿಶ್ವಾಮಿತ್ರೇಣ ಧೀಮತಾ ॥ ಪಶ್ಯಂತಸ್ತೇ ಪ್ರಯಾತಾವೈ ವನಾನಿ ವಿವಿಧಾನಿಚ ॥೬॥ ತೇಗತ್ವಾ ದೂರಮಧ್ವಾನಂ ಗತೇಽರ್ಧದಿವಸೇ ತದಾ॥ ಜಾಹ್ನವೀಂ ಸರಿತಾಂ ಶ್ರೇಷ್ಠಾಂ ದದೃಶುರ್ಮುನಿಸೇವಿತಾಂ॥೭॥

---

ಕ್ರಿಯಾಂ - ಕರ್ಮವನ್ನು, ಕೃತ್ವಾ - ಮಾಡಿ, ಗಮನಂ - ಪ್ರಯಾಣವನ್ನು, ರೋಚಯಾಮಾಸ- ಸಮ್ಮತಿಸಿದನು. ॥ ೩ ॥ ಶುಭಜಲಃ-ಶುಭಕರವಾದ ಜಲವುಳ್ಳ, ಅಯಂಶೋಣಃ - ಈ ಪುರುಷನದವು, ಅಗಾಧಃ - ಬಹು ನಿಮ್ನವಾಗಿರುವುದು, ಪುಳಿನಮಂಡಿತಃ - ಮರಳು ದಿಬ್ಬಗಳಿಂದ ಅಲಂಕೃತವಾಗಿರುವುದು, ಹೇಬ್ರಹ್ಮನ್ - ಎಲೈ ಋಷಿಯೆ, ವಯಂ - ನಾವು, ಕತರೇಣಪಥಾ-ಯಾವ ಮಾರ್ಗದಿಂದ, ಸಂತರಿಷ್ಯಾಮಹೇ - ದಾಟುವೆವು, ಇತಿ - ಇಂತೆಂದು, ವಾಕ್ಯಂಚ - ವಚನವನ್ನು, ಉವಾಚ - ಹೇಳಿದನು, ॥ ೪ ॥ ಏವಂ - ಹೀಗೆ, ರಾಮೇಣ - ಶ್ರೀರಾಮನಿಂದ, ಉಕ್ತಃ - ಹೇಳಲ್ಪಟ್ಟ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನು, ಯೇನ - ಯಾವ ಮಾರ್ಗದಿಂದ, ಮಹರ್ಷಯಃ - ಋಷಿಗಳು, ಯಾಂತಿ-ಹೋಗುತ್ತಾರೋ, ಏಷಪಂಥಾಃ ಇದೇ ಮಾರ್ಗವು, ಮಯಾ-ನನ್ನಿಂದ, ಉದ್ದಿಷ್ಟಃ ಉದ್ದೇಶ ಮಾಡಲ್ಪಟ್ಟಿರುವುದು ಎಂದು, ಇದಂ - ಈ ವಚನವನ್ನು, ಅಬ್ರವೀತ್-ನುಡಿದನು. ॥೫॥ ಏವಂ - ಈಪರಿ, ಧೀಮತಾ - ಬ್ರಹ್ಮಜ್ಞಾನಿಯಾದ, ವಿಶ್ವಾಮಿತ್ರೇಣ- ವಿಶ್ವಾಮಿತ್ರನಿಂದ, ಉಕ್ತಾಃ- ಹೇಳಲ್ಪಟ್ಟ, ತೇ ಮಹರ್ಷಯಃ - ಆ ಮಹರ್ಷಿಗಳು, ವಿವಿಧಾನಿ - ನಾನಾಬಗೆಗಳಾದ, ವನಾನಿ-ವನಗಳನ್ನು, ಪಶ್ಯಂತಃ - ನೋಡುತ್ತ, ಪ್ರಯಾತಾವೈಃ - ಹೊರಟರಷ್ಟೆ, ॥೬॥ ತೇ - ಆ ಋಷಿಗಳು, ದೂರಮಧ್ವಾನಂ - ಬಹುದೂರವಾದ ಮಾರ್ಗದಲ್ಲಿ, ಗತ್ವಾ- ಹೋಗಿ, ಅರ್ಧದಿವಸೇ-ದಿವಸಾರ್ಧವು, ಗತೇಸತಿ - ಕಳೆದುಹೋಗುತ್ತಿರಲು, ಮುನಿಸೇವಿತಾಂ - ಋಷಿಗಳಿಂದ ಸೇವಿಸಲ್ಪಟ್ಟ, ಸರಿತಾಂ- ನದಿಗಳೊಳಗೆ, ಶ್ರೇಷ್ಠಾಂ - ಶ್ರೇಷ್ಠಳಾದ ಜಾಹ್ನವೀಂ - ಗಂಗಾನದಿಯನ್ನು, ದದೃಶುಃ-ಕಂಡರು. ॥೭॥

---

ಪ್ರಾತಸ್ಸಂಧ್ಯಾದಿ ಕರ್ಮಗಳನ್ನಾಚರಿಸಿ ಮುಂಬರಿಯಲಿಚ್ಛಿಸಿ ಹೀಗೆಂದನು. ॥ ೩ ॥ "ಎಲೈ ಬ್ರಾಹ್ಮಣನೇ ! ಈ ಶೋಣಾನದಿಯು ನಿರ್ಮಲೋದಕವುಳ್ಳದೂ, ಅತ್ಯಗಾಧವಾದುದೂ, ಮರಳು ದಿಬ್ಬಗಳಿಂದಲಂಕೃತವಾದುದೂ ಆಗಿರುವುದಲ್ಲವೇ! ಯಾವ ಮಾರ್ಗದಿಂದ ಈ ನದಿಯನ್ನು ದಾಟುವೆವು." ॥ ೪ ॥ ಹೀಗೆ ಹೇಳಲ್ಪಟ್ಟ ವಿಶ್ವಾಮಿತ್ರನು, "ಎಲೈ ರಾಮಚಂದ್ರನೇ ! ಯಾವ ಮಾರ್ಗದಲ್ಲಿ ಈ ಋಷಿಗಳೆಲ್ಲರೂ ಹೋಗುವರೋ ಅಂತಹ ಈ ಮಾರ್ಗದಲ್ಲಿಯೇ ಹೋಗಬೇಕೆಂದು ನನ್ನಿಂದ ಸಂಕಲ್ಪಿತವಾಗಿರುವುದು" ಎಂದನು. ॥ ೫ ॥ ಬುದ್ಧಿವಂತನಾದ ವಿಶ್ವಾಮಿತ್ರನೀರೀತಿ ಹೇಳಲು, ಅವರೆಲ್ಲರೂ ವಿಧ ವಿಧವಾದ ವನಗಳನ್ನು ನೋಡುತ್ತಾ ಮುಂದೆ ಹೊರಟರು. ಇಂತು ಬಹುದೂರ ನಡೆದು ಮಧ್ಯಾಹ್ನದಲ್ಲಿ ಋಷಿಗಳಿಂದ ಸೇವಿಸಲ್ಪಟ್ಟ, ನದಿಗಳಲ್ಲಿ ಶ್ರೇಷ್ಠವಾದ ಗಂಗಾನದಿಯನ್ನು ಕಂಡರು. ॥೭॥

ತಾಂ ದೃಷ್ಟ್ವಾ ಪುಣ್ಯಸಲಿಲಾಂ ಹಂಸ ಸಾರಸ ಸೇವಿತಾಂ || ಬಭೂವುರ್ಮುದಿತಾ ಸ್ಸರ್ವೇ ಮುನಯಸ್ಸಹ ರಾಘವಾಃ||೮|| ತಸ್ಯಾಸ್ತೀರೇ ತತಶ್ಚಕ್ರುಸ್ತ್ವ ಆವಾಸಪರಿಗ್ರಹಂ || ತತಸ್ಸ್ನಾತ್ವಾ ಯಥಾ ನ್ಯಾಯಂ ಸಂತರ್ಪ್ಯ ಪಿತೃದೇವತಾಃ || ೯ || ಹುತ್ವಾಚೈವಾಗ್ನಿಹೋತ್ರಾಣಿ ಪ್ರಾಶ್ಯಚಾಮೃತವದ್ಧವಿಃ || ವಿವಿಶುರ್ಜಾಹ್ನವೀತೀರೇ ಶುಚೌ ಮುದಿತಮಾನಸಾಃ || ೧೦ || ವಿಶ್ವಾಮಿತ್ರಂ ಮಹಾತ್ಮಾನಂ ಪರಿವಾರ್ಯಸಮಂತತಃ|| ಅಥ ತತ್ರ ತದಾ ರಾಮೋ ವಿಶ್ವಾಮಿತ್ರಮಥಾಬ್ರವೀತ್ || || ೧೧ || ಭಗವನ್ ಶ್ರೋತುಮಿಚ್ಛಾಮಿ ಗಂಗಾ ತ್ರಿಪಥಗಾಂ ನದೀಂ || ತ್ರೈಲೋಕ್ಯಂ ಕಥಮಾಕ್ರಮ್ಯ ಗತಾ ನದ ನದೀಪತಿಂ ||೧೨|| ಚೋದಿತೋ ರಾಮ

---

ಸರ್ವೇಮುನಯಃ-ಸಮಸ್ತ ಋಷಿಗಳು, ಸಹರಾಘವಾಃ-ಶ್ರೀರಾಮನಿಂದೊಡಗೂಡಿ, ಪುಣ್ಯಸಲಿಲಾಂ-ಪುಣ್ಯಕರವಾದ ಉದಕವುಳ್ಳ, ಹಂಸಸಾರಸಸೇವಿತಾಂ-ಹಂಸಗಳಿಂದಲೂ, ಪಕ್ಷಿಗಳಿಂದಲೂ,ಸಾರಸಪಕ್ಷಿಗಳಿಂದಲೂ ಸೇವಿಸಲ್ಪಟ್ಟ, ತಾಂ - ಆ ಗಂಗಾ ನದಿಯನ್ನು, ದೃಷ್ಟ್ವಾ - ಕಂಡು, ಮುದಿತಾಃ-ಸಂತೋಷಗೊಂಡವರು, ಬಭೂವುಃ - ಆದರು || ೮ || ತತಃ - ಬಳಿಕ, ತೇ - ಆ ಋಷಿಗಳು, ತಸ್ಯಾಃ-ಆ ಗಂಗಾನದಿಯ, ತೀರೇ-ದಡದಲ್ಲಿ, ಆವಾಸಪರಿಗ್ರಹಂ, ಆವಾಸ-ನಿವಾಸಕ್ಕೆ, ಪರಿಗ್ರಹಂ-ವಸತಿಯನ್ನು, ಚಕ್ರುಃ-ಮಾಡಿದರು, ತತಃ-ಬಳಿಕ, ಯಥಾನ್ಯಾಯಂ-ಶಾಸ್ತ್ರೋಕ್ತವಾಗಿ, ಸ್ನಾತ್ವಾ-ಸ್ನಾನವಮಾಡಿ, ಪಿತೃದೇವತಾಃ ಪಿತೃದೇವತೆಗಳನ್ನು ಕುರಿತು, ಸಂತರ್ಪ್ಯ-ತರ್ಪಣವೂ ಮಾಡಿ, ಅಗ್ನಿಹೋತ್ರಾಣಿಚ - ಅಗ್ನಿಹೋತ್ರಾದಿ ಕರ್ಮಗಳನ್ನು, ಹುತ್ವಾ - ಮಾಡಿ, ಹವಿಃ- ಹವಿರ್ಭಾಗವನ್ನು, ಅಮೃತವತ್ - ಅಮೃತದ ಹಾಗ, ಪ್ರಾಶ್ಯಚ - ಪ್ರಾಶನವನ್ನೂ ಮಾಡಿ, ಶುಚೌ-ಪರಿಶುದ್ಧವಾದ, ಜಾಹ್ನವೀತೀರೇ - ಗಂಗಾತೀರದಲ್ಲಿ, ಮಹಾತ್ಮಾನಂ - ಮಹಾನುಭಾವನಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಸಮಂತತಃ- ಯಲ್ಲೆಡೆಯಲ್ಲಿ, ಪರಿವಾರ್ಯ-ಸುತ್ತಿಕೊಂಡು, ಮುದಿತಮಾನಸಾಃ-ಸಂತೋಷಗೊಂಡ ಮನಸ್ಸುಳ್ಳವನಾಗಿ, ವಿವಿಶುಃ-ಕುಳಿತುಕೊಂಡರು, ||೯-೧೦|| ಅಥ-ಅನಂತರ, ತತ್ರ - ಆ ಗಂಗಾನದೀತೀರದಲ್ಲಿ, ತದಾ - ಆ ಕಾಲದಲ್ಲಿ, ರಾಮಃ - ಶ್ರೀರಾಮನು, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಹೇಭಗವನ್- ಎಲೈ ಪೂಜ್ಯನೆ, ತ್ರಿಪಥಗಾಂ-ಸ್ವರ್ಗ, ಮರ್ತ್ಯ, ಪಾತಾಳ

---

ಪುಣ್ಯೋದಕವುಳ್ಳುದೂ, ಹಂಸ ಕಾರಂಡಾದಿಗಳಿಂದ ಸೇವಿಸಲ್ಪಟ್ಟುದೂ, ಆದ ಗಂಗಾನದಿಯನ್ನು ನೋಡಿ ರಾಮ ಲಕ್ಷ್ಮಣರಿಂದೊಡಗೂಡಿದ ಋಷಿಗಳೆಲ್ಲರೂ ಸಂತಸಪಟ್ಟರು ||೭-೮|| ಆ ಬಳಿಕ ಅವರೆಲ್ಲರೂ ಆ ನದಿಯ ತೀರದಲ್ಲಿ ತಂಗಿ ಸ್ನಾನವಂ ಗೈದು ಶಾಸ್ತ್ರೋಕ್ತವಾಗಿ ಪಿತೃದೇವತೆಗಳಿಗೆ ತರ್ಪಣವನ್ನಿತ್ತು ಅಗ್ನಿಹೋತ್ರಾದಿ ಕರ್ಮಗಳನ್ನಾಚರಿಸಿ ಅಮೃತೋಪಮವಾದ ಯಜ್ಞಶೇಷವನ್ನುಂಡು ಸಂತೋಷ ಸ್ವಾಂತವುಳ್ಳವರಾಗಿಯೂ, ಶುಚಿರ್ಭೂತರಾಗಿಯೂ, ಮಹಾತ್ಮನಾದ ವಿಶ್ವಾಮಿತ್ರನಸುತ್ತಲೂ ಕುಳಿತುಕೊಂಡರು ||೯-೧೦|| ಆಗಲಾ ರಾಮಚಂದ್ರನು ವಿಶ್ವಾಮಿತ್ರನನ್ನು ಕುರಿತು "ಎಲೈ ಪೂಜ್ಯನೇ! ತ್ರಿಪಥ ಗಾಮಿನಿಯಾದ ಈ ಗಂಗಾನದಿಯ ವಿಷಯವನ್ನು ಕೇಳಲಿಚ್ಛಿಸುವೆನು, ಈ ನದಿಯು ಸ್ವರ್ಗ, ಮರ್ತ್ಯ,

ವಾಕ್ಯೇನ ವಿಶ್ವಾಮಿತ್ರೋ ಮಹಾಮುನಿಃ|| ವೃದ್ಧಿಂ ಜನ್ಮಚ ಗಂಗಾಯಾವಕ್ತು ಮೇವೋಪಚಕ್ರಮೇ ||೧೩|| ಶೈಲೇಂದ್ರೋ ಹಿಮವಾನ್ನಾಮ ಧಾತೂನಾಮಾಕರೋಮಹಾನ್ || ತಸ್ಯ ಕನ್ಯಾದ್ವಯಂ ರಾಮ ರೂಪೇಣಾಽಪ್ರತಿಮಂಭುವಿ ||೧೪|| ಯಾ ಮೇರುದುಹಿತಾ ರಾಮ ತಯೋರ್ಮಾತಾ ಸುಮಧ್ಯಮಾ||ನಾಮ್ನಾ ಮನೋರಮಾ ನಾಮ ಪತ್ನೀ ಹಿಮವತಃ ಪ್ರಿಯಾ||೧೫|| ತಸ್ಯಾಂ ಗಂಗೇಯಮಭವಜ್ಜ್ಯೇಷ್ಠಾ ಹಿಮವತಸ್ಸುತಾ||ಉಮಾ ನಾಮ ದ್ವಿತೀಯಾಭೂನ್ನಾಮ್ನಾ ತಸ್ಯೈವ ರಾಘವ ||೧೬|| ಅಥ ಜ್ಯೇಷ್ಠಾಂ ಸುರಾ

---

ಗಳೆಂಬ ಮೂರು ಮಾರ್ಗಗಳನ್ನು ಹೊಂದಿರುವ, ಗಂಗಾನದೀಂ - ಗಂಗಾನದಿಯ ವಿಷಯವನ್ನು, ಶ್ರೋತುಂ - ಕೇಳಲು, ಇಚ್ಛಾಮಿ - ಇಚ್ಛಿಸುತ್ತೇನೆ, ತ್ರೈಲೋಕ್ಯಂ ಲೋಕತ್ರಯವನ್ನು, ಕಥಂ- ಹೇಗೆ, ಆಕ್ರಮ್ಯ - ವ್ಯಾಪಿಸಿ, ನದನದೀಂಪತಿಂ-ನದಗಳಿಗೂ ನದಿಗಳಿಗೂ ಅಧಿಪತಿಯಾದ ಸಮುದ್ರನನ್ನು ಕುರಿತು, ಗತಾಃ - ಹೊಂದಿದಳು, ಇತಿ - ಇಂತೆಂದು, ಅಬ್ರವೀತ್-ನುಡಿದನು. ||೧೧-೧೨|| ರಾಮವಾಕ್ಯೇನ - ಶ್ರೀರಾಮನ ವಚನದಿಂದ, ಚೋದಿತಃ - ಪ್ರೇರಿತನಾಗಿ, ಮಹಾಮುನಿಃ-ಮಹರ್ಷಿಯಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ಗಂಗಾಯಾಃ-ಗಂಗಾನದಿಯ, ಜನ್ಮಚ ಉತ್ಪತ್ತಿಯನ್ನೂ, ವೃದ್ಧಿಂಚ - ವೃದ್ಧಿಯನ್ನೂ, ವಕ್ತುಮೇವ – ಹೇಳುವದಕ್ಕೋಸ್ಕರವೇ, ಉಪಚಕ್ರಮೇ - ಉಪಕ್ರಮಿಸಿದನು ||೧೩|| ಧಾತೂನಾಂ - ಗೈರಿಕಾದಿ ಧಾತುಗಳಿಗೆ, ಆಕರಃ - ಉತ್ಪತ್ತಿಸ್ಥಾನವಾದ, ಮಹಾನ್ - ದೊಡ್ಡದಾದ, ಹಿಮವಾನ್ನಾಮ - ಹಿಮವತ್ಪರ್ವತವೆಂದು ಪ್ರಸಿದ್ಧವಾದ, ಶೈಲೇಂದ್ರಃ- ಪರ್ವತಶ್ರೇಷ್ಠವು, ಅಸ್ತಿ - ಇರುವುದು, ಹೇರಾಮ - ಎಲೈ ಶ್ರೀರಾಮನೆ, ತಸ್ಯ- ಆ ಹಿಮವಂತನಿಗೆ ರೂಪೇಣ - ರೂಪದಿಂದ ಭುವಿ - ನೆಲದಲ್ಲಿ, ಅಪ್ರತಿಮಂ-ಸಮಾನ ರಹಿತವಾದ, ಕನ್ಯಾದ್ವಯಂ- ಇಬ್ಬರು ಕನ್ಯಕೆಯರು, ಆಸೀತ್ ಆದರು. ||೧೪|| ಹೇರಾಮ - ಎಲೈ ಶ್ರೀರಾಮನೆ, ತಯೋಃ- ಆ ಕನ್ಯಕೆಯರಿಬ್ಬರಿಗೂ, ಮಾತಾ - ತಾಯಿಯಾದ, ಸುಮಧ್ಯಮಾ - ಸಮೀಚೀನವಾದ ಮಧ್ಯಪ್ರದೇಶವುಳ್ಳ, ನಾಮ್ನಾ - ಹೆಸರಿನಿಂದ, ಮನೋರಮಾನಾಮ - ಮನೋರಮೆ ಎಂದು ಪ್ರಸಿದ್ಧಳಾಗಿರುವ, ಯಾ - ಯಾವ ಸ್ತ್ರೀಯು, ಮೇರುದುಹಿತಾಃ - ಮೇರುಪರ್ವತದ ಮಗಳೋ, ಸಾ- ಆ ಮನೋರಮೆಯು, ಹಿಮವತಃ - ಹಿಮವಂತನಿಗೆ, ಪತ್ನೀ – ಧರ್ಮಪತ್ನಿಯು, ಆಸೀತ್-ಆದಳು, ||೧೫|| ತಸ್ಯಾಂ- ಆ ಮನೋರಮೆಯಲ್ಲಿ, ಹಿಮವತಃ- ಹಿಮವಂತನಿಗೆ, ಜ್ಯೇಷ್ಠಾ-ಜ್ಯೇಷ್ಠಳೂ,

---

ಪಾತಾಳಗಳೆಂಬ ಮೂರು ಲೋಕಗಳನ್ನೂ ಆಕ್ರಮಿಸಿ, ನದ ನದಿಗಳೊಡೆಯನಾದ ಸಾಗರವನ್ನು ನೇರಿದುದು ಹೇಗೆ" ಎಂದು ಕೇಳಿದನು ||೧೧-೧೨|| ಇಂತು ರಾಮ ವಾಕ್ಯದಿಂದ ಪ್ರೇರಿತನಾದ ವಿಶ್ವಾಮಿತ್ರಮುನಿಯು ಆ ನದಿಯ ಹುಟ್ಟುವಿಕೆಯನ್ನೂ ಜನ್ಮ ಚರಿತ್ರೆಯನ್ನೂ ಹೇಳಲಾರಂಭಿಸಿದನು. ||೧೩|| ಎಲೈ ರಾಘವನೇ ! ಗೈರಿಕಾದಿ ಧಾತುಗಳಿಗೆ ಗಣಿಯಂತಿರುವ ಹಿಮವಂತನೆಂಬ ಶೈಲರಾಜನೊಬ್ಬನಿರುವನು. ಆತನಿಗೆ ಅಸಮಾನ ರೂಪವತಿಯರಾದ ಕುವರಿಯರಿರ್ವರುಂಟು. ||೧೪|| ಇವರ ತಾಯಿಯೂ, ಹಿಮವಂತನ ಪತ್ನಿಯೂ ಆದವಳು ಮೇರು ಪರ್ವತ ರಾಜನ ಮಗಳಾದವಳು ಮನೋರಮೆ ಎಂಬುವಳು. ಈ

ಸ್ಸರ್ವೇ ದೇವತಾರ್ಥ ಚಿಕೀರ್ಷಯಾ ॥ ಶೈಲೇಂದ್ರಂ ವರಯಾಮಾಸುರ್ಗಂಗಾಂ ತ್ರಿಪಥಗಾಂ ನದೀಂ ॥೧೭॥ ದದೌ ಧರ್ಮೇಣ ಹಿಮವಾನ್ ಸ್ತನಯಾಂ ಲೋಕ ಪಾವನೀಂ॥ ಸ್ವಚ್ಛಂದ ಪಥಗಾಂ ಗಂಗಾಂ ತ್ರೈಲೋಕ್ಯ ಹಿತಕಾಮ್ಯಯಾ॥೧೮॥ ಪ್ರತಿಗೃಹ್ಯ ತತೋ ದೇವಾಸ್ತ್ರಿಲೋಕ ಹಿತಕಾರಿಣಃ॥ಗಂಗಾಮಾದಾಯ ತೇಗಚ್ಛನ್ ಕೃತಾರ್ಥೇನಾಂತರಾತ್ಮನಾ ॥ ೧೯ ॥ ಯಾಚಾನ್ಯಾ ಶೈಲದುಹಿತಾ ಕನ್ಯಾಸೀ ದ್ರಘುನಂದನ ॥ ಉಗ್ರಂ ನಾ ವ್ರತಮಾಸ್ಥಾಯ ತಪಸ್ತೇಪೇ ತಪೋಧನಾ॥೨೦॥ ಉಗ್ರೇಣ ತಪಸಾ ಯುಕ್ತಾಂ ದದೌ ಶೈಲವರಸ್ಸುತಾಂ ॥ ರುದ್ರಾಯ

---

ಸುತಾ ಕುವರಿಯೂ ಆದ, ಇಯಂಗಂಗಾ - ಈ ಗಂಗಾನದಿಯು, ಅಭವತ್ - ಆದಳು, ಹೇ ರಾಘವ - ಎಲೈ ಶ್ರೀರಾಮನೆ! ತಸ್ಯೈವ - ಅದೇ ಹಿಮವಂತನಿಗೆ, ನಾಮ್ನಾ-ಹೆಸರಿನಿಂದ, ಉಮಾ ನಾಮ - ಪಾರ್ವತೀ ಎಂದು ಪ್ರಸಿದ್ಧಳಾದ, ದ್ವಿತೀಯಾಃ - ಎರಡನೇ ಮಗಳು, ಅಭವತ್- ಆದಳ, ॥ ೧೬ ॥ ಅಥ - ಬಳಿಕ, ಸರ್ವೇ - ಸಮಸ್ತ, ಸುರಾಃ - ದೇವತೆಗಳು, ಜ್ಯೇಷ್ಠಾಂ-ಜ್ಯೇಷ್ಠ ಪುತ್ರಿಯಾದ, ತ್ರಿಪಥಗಾಂ - ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಮಾರ್ಗಗಳನ್ನು ಹೊಂದಿರುವ, ಗಂಗಾಂನದೀಂ - ಗಂಗಾನದಿಯನ್ನು, ಶೈಲೇಂದ್ರಂ - ಪರ್ವತರಾಜನಾದ ಹಿಮವಂತನ ಕುರಿತು, ವರಯಾಮಾಸುಃ - ಬೇಡಿದರು. ॥೧೭॥ ಹಿಮವಾನ್ - ಹಿಮವಂತನು, ಲೋಕ ಪಾವನೀಂ ಲೋಕವನ್ನು ಪರಿಶುದ್ಧ ಮಾಡುತ್ತಿರುವ, ಧರ್ಮೇಣ - ಸ್ವಸುಕೃತ ವಿಶೇಷದಿಂದ, ತನಯಾಂ - ಮಗಳಾದ, ಸ್ವಚ್ಛಂದಪಥಗಾಂ - ಸ್ವೇಚ್ಛಾಧೀನ ಮಾರ್ಗದಿಂದ ಹೋಗುತ್ತಿರುವ, ಗಂಗಾಂ - ಗಂಗಾನದಿಯನ್ನು, ತ್ರೈಲೋಕ್ಯಹಿತಕಾಮ್ಯಯಾ - ಲೋಕತ್ರಯಕ್ಕೆ ಪ್ರಿಯವನ್ನುಂಟು ಮಾಡಬೇಕೆಂಬ ಇಚ್ಛೆಯಿಂದ, ದದೌ - ಕೊಟ್ಟನು ॥ ೧೮ ॥ ತತಃ - ಬಳಿಕ, ತ್ರಿಲೋಕಹಿತ ಕಾರಿಣಃ - ಮೂರು ಲೋಕಗಳಿಗೂ ಹಿತಕರರಾದ, ತೇದೇವಾಃ - ಆ ದೇವತೆಗಳು, ಗಂಗಾಂ-ಗಂಗಾ ನದಿಯನ್ನು, ಪ್ರತಿಗೃಹ್ಯ - ಪರಿಗ್ರಹಿಸಿ, ಆದಾಯ - ತೆಗದುಕೊಂಡು, ಕೃತಾರ್ಥೇನ-ಕೃತಪ್ರಯೋ ಜನವುಳ್ಳ, ಅಂತರಾತ್ಮನಾ - ಮನಸ್ಸಿನಿಂದ, ಅಗಚ್ಛನ್ - ಹೊರಟರು. ॥ ೧೯ ॥ ಹೇರಘುನಂದನ - ಎಲೈ ಶ್ರೀರಾಮನೆ, ಅನ್ಯಾ - ಮತ್ತೊಬ್ಬಳಾದ, ಶೈಲದುಹಿತಾ-ಪರ್ವತರಾಜನ ಮಗಳಾದ, ಕನ್ಯಾ - ಕನ್ಯಕೆಯು, ಯಾ - ಯಾವಳು, ಆಸೀತ್ - ಆದಳೋ, ಸಾ - ಆ ಕನ್ಯಕೆಯು, ತಪೋ

---

ಮನೋರಮೆಯಲ್ಲಿ ಈ ಗಂಗೆಯು ಜ್ಯೇಷ್ಠಕುವರಿಯಾಗಿ ಜನಿಸಿದಳು. ಎರಡನೆಯವಳು ಉಮಾ ಎಂದು ಪ್ರಸಿದ್ಧಳಾಗಿ ಜನಿಸಿದಳು. ॥೧೫-೧೬॥ ಜ್ಯೇಷ್ಠಳೂ, ತ್ರಿಪಥಗಾಮಿನಿಯೂ, ಆದ ಈ ಗಂಗೆಯನ್ನು ದೇವಕಾರ್ಯವನ್ನು ಮಾಡಲೋಸುಗ ದೇವತೆಗಳು ಹಿಮವಂತನನ್ನು ಬೇಡಿದರು ಮೂರು ಲೋಕಗಳಿಗೂ ಹಿತವನ್ನಿಚ್ಛೈಯುಳ್ಳ ಮಹಾ ಧರ್ಮಿಷ್ಠನೂ, ಸ್ವತಂತ್ರಗಮನವುಳ್ಳವಳೂ, ಲೋಕಪಾವನಿಯೂ, ಆದ ಆ ಗಂಗೆಯನ್ನು ಧರ್ಮದಿಂದ ದೇವತೆಗಳಿಗೆ ಕೊಟ್ಟವನಾದನು. ॥ ೧೭-೧೮ ॥ ಆ ಬಳಿಕ ದೇವತೆಗಳು ಮೂರು ಲೋಕ ಕ್ಕೂ ಹಿತವನ್ನುಂಟುಮಾಡುವರಾಗಿ ಕೃತಕೃತ್ಯವಾದ ಮನಸ್ಸಿನಿಂದ ಆ ನದಿಯನ್ನು ಸ್ವರ್ಗ ಕ್ಕೊಯ್ದರು. ॥ ೧೯ ॥ ರಘುನಂದನ! ಹಿಮವಂತನ ಮತ್ತೊಬ್ಬ ಮಗಳಾದ ಉಮೆಯು ಈಶ್ವರನನ್ನೇ ಮದುವೆಯಾಗಬೇಕೆಂದು ಉಗ್ರವಾದ ವ್ರತವನ್ನು ಕೈಕೊಂಡು ತಪಸ್ಸಂಗೈದಳು.

ಅಪ್ರತಿರೂಪಾಯ ಉಮಾಂ ಲೋಕನಮಸ್ಕೃತಾಂ||೨೧|| ಏತೇ ತೇ ಶೈಲ ರಾಜಸ್ಯಸುತೇ ಲೋಕ ನಮಸ್ಕೃತೇ || ಗಂಗಾಚ ಸರಿತಾಂ ಶ್ರೇಷ್ಠಾ ಉಮಾ ದೇವೀಚ ರಾಘವ || ೨೨ || ಏತತ್ತೇ ಸರ್ವಮಾಖ್ಯಾತಂ ಯಥಾ ತ್ರಿಪಥಗಾನದೀ || ಖಂ ಗತಾ ಪ್ರಥಮಂ ತಾತ ಗತಿಂ ಗತಿಮತಾಂವರ ||೨೩|| ಸೈಷಾ ಸುರನದೀ ರಮ್ಯಾ ಶೈಲೇಂದ್ರಸ್ಯ ಸುತಾ ತದಾ || ಸುರಲೋಕಂ ಸಮಾರೂಢಾ ವಿಪಾಪಾ ಜಲವಾಹಿನೀ ||೨೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ

---

ಧನಾಃ - ತಪಸ್ಸೇ ಧನವಾಗುಳ್ಳವಳಾಗಿ, ಉಗ್ರಂ - ಭಯಂಕರವಾದ, ವ್ರತಂ - ನಿಯಮವನ್ನು, ಆಸ್ಥಾಯ - ಮಾಡಿ, ತಪಃ - ತಪಸ್ಸನ್ನು, ತೇಪೇ - ತಪಿಸಿದಳು. ||೨೦|| ಶೈಲವರಃ-ಪರ್ವತ ರಾಜನಾದ ಹಿಮವಂತನು, ಉಗ್ರೇಣ - ತೀಕ್ಷ್ಣವಾದ, ತಪಸಾ - ತಪಸ್ಸಿನಿಂದ, ಯುಕ್ತಾಂ-ಕೂಡಿರುವ, ಸುತಾಂ - ಕುವರಿಯಾದ, ಲೋಕನಮಸ್ಕೃತಾಂ, ಲೋಕ - ಸಮಸ್ತ ಜನರಿಂದಲೂ, ನಮಸ್ಕೃತಾಂ - ನಮಸ್ಕರಿಸಲ್ಪಟ್ಟ, ಉಮಾಂ - ಪಾರ್ವತಿಯನ್ನು, ಅಪ್ರತಿರೂಪಾಯ - ಸಮಾನವಿಲ್ಲದ ರೂಪವುಳ್ಳ, ರುದ್ರಾಯ - ಪರಮೇಶ್ವರನಿಗೆ, ದದೌ - ಕೊಟ್ಟನು ||೨೧|| ಹೇರಾಘವ-ಎಲೈ ರಘುವಂಶೋತ್ಪನ್ನನಾದ ಶ್ರೀರಾಮನ, ಸರಿತಾಂ - ನದಿಗಳಲ್ಲಿ, ಶ್ರೇಷ್ಠಾ - ಶ್ರೇಷ್ಠಳಾದ, ಗಂಗಾಚ - ಗಂಗಾನದಿಯೂ, ಉಮಾದೇವೀಚ - ಪಾರ್ವತಿದೇವಿಯೂ ಎಂಬ, ತೇ-ಪ್ರಸಿದ್ಧರಾದ, ಲೋಕನಮಸ್ಕೃತೇ - ಸಮಸ್ತ ಜನರಿಂದಲೂ ನಮಸ್ಕರಿಸಲ್ಪಟ್ಟ, ಏತೇ - ಇವರಿಬ್ಬರು, ಶೈಲರಾಜಸ್ಯ - ಪರ್ವತ ರಾಜನಿಗೆ, ಸುತೇ- ಕುವರಿಯರು, ಹೇತಾತ - ಎಲೈ ತಂದೆಯ, ಹೇಗತಿಮತಾಂವರ - ಸುಂದರ ಗಮನವುಳ್ಳವರೊಳಗೆ ಶ್ರೇಷ್ಠನಾದವನೆ! ತ್ರಿಪಥಗಾನದೀ, ತ್ರಿಪಥಗಾ-ಮೂರು ಮಾರ್ಗಗಳುಳ್ಳ, ನದೀ - ಗಂಗಾನದಿಯು, ಪ್ರಥಮಂ-ಮೊದಲು, ಖಂ - ಅಂತರಿಕ್ಷದಲ್ಲಿ, ಗತಿಂ - ಗಮನವನ್ನು, ಗತಾ - ಹೊಂದಿದಳು, ಏತತ್ - ಇದು, ಸರ್ವಂ - ಸಮಸ್ತವು, ತೇ-ನಿನಗೆ, ಆಖ್ಯಾತಂ-ಹೇಳಲ್ಪಟ್ಟಿತು. ||೨೨-೨೩|| ತದಾ-ಆಗ, ಶೈಲೇಂದ್ರಸ್ಯ-ಹಿಮವಂತನ, ಸುತಾ-ಕುವರಿಯಾದ, ರಮ್ಯಾ - ಮನೋಹರಳಾದ, ವಿಪಾಪಾ - ಪಾಪರಹಿತಳಾದ, ಜಲವಾಹಿನೀ - ಜಲದಿಂದ ಪ್ರವಹಿಸುತ್ತಿರುವ, ಸೈಷಾ - ಆ ಗಂಗಾನದಿಯು, ಸುರನದೀ - ದೇವತಾನದಿ ಎಂದು ಹೆಸರುಳ್ಳವಳಾಗಿ, ಸುರಲೋಕಂ - ಸ್ವರ್ಗಲೋಕವನ್ನು, ಸಮಾರೂಢಾ - ಏರಿದಳು. ||೨೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ

---

ಇಂತು ಉಗ್ರವಾದ ತಪೋಯುಕ್ತಳೂ, ಲೋಕವಂದಿತಳೂ, ಆದ ಪಾರ್ವತಿಯನ್ನು ಅನುಕೂಲವರನಾದ ಈಶ್ವರನಿಗೆ ವಿವಾಹಮಾಡಿಕೊಟ್ಟನು. ||೨೧|| ಅಯ್ಯಾ ರಾಮಚಂದ್ರನೇ! ಲೋಕ ನಮಸ್ಕೃತರಾದ ಗಂಗೆ ಮತ್ತು ಪಾರ್ವತಿಯರು ಈ ಗಿರಿಶ್ರೇಷ್ಠನಾದ ಹಿಮವಂತನ ಕುವರಿಯರು ||೨೨|| ಹೀಗೆ ಗಂಗೋತ್ಪತ್ತಿಯೂ, ಪಾರ್ವತಿಯ ಚರಿತ್ರೆಯೂ, ನಿನಗೆ ಹೇಳಲ್ಪಟ್ಟಿತು ಎಲೈ ಬುದ್ಧಿಶಾಲಿಯೇ! ಮೂರು ಲೋಕಗಳನ್ನೂ ಪಾವನಗೊಳಿಸಿದ ಈ ಗಂಗೆಯು ಮೊದಲು ಸ್ವರ್ಗವನ್ನು ಸೇರಿದಳು. ಇಂತು ಸ್ವರ್ಗವಾಂತಳೂ, ಹಿಮವತ್ಕುಮಾರಿಯೂ, ನಿರ್ಮಲೋದಕವುಳ್ಳವಳೂ, ಮನೋಹರಳೂ ಆದ ಆ ಸ್ವರ್ಗನದಿಯೇ ಇಲ್ಲಿ ಕಾಣುವ ಗಂಗಾನದಿಯು. ||೨೩-೨೪||

ಇಂತಿದು ಗಂಗಾನದಿಯ ವೃತ್ತಾಂತವರ್ಣನವೆಂಬ ಮುವತ್ತೈದನೆಯ ಸರ್ಗವು ಸಮಾಪ್ತವಾಯಿತು.

# ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ.



ಉಕ್ತವಾಕ್ಯೇ ಮುನೌ ತಸ್ಮಿನ್ನುಭೌ ರಾಘವಲಕ್ಷ್ಮಣೌ ॥ ಪ್ರತಿನಂದ್ಯ ಕಥಾಂ ವೀರಾವೂಚತುರ್ಮುನಿಪುಂಗವಮ್ ॥ ೧ ॥ ಧರ್ಮಯುಕ್ತಮಿದಂ ಬ್ರಹ್ಮನ್ ಕಥಿತಂ ಪರಮಂ ತ್ವಯಾ ॥ ದುಹಿತುಶ್ಶೈಲರಾಜಸ್ಯ ಜ್ಯೇಷ್ಠಾಯಾ ವಕ್ತುಮರ್ಹಸಿ ॥ ೨ ॥ ವಿಸ್ತರಂ ವಿಸ್ತರಜ್ಞೋಸಿ ದಿವ್ಯಮಾನುಷಸಂಭವಮ್ ॥ ತ್ರೀನ್ಪಥೋ ಹೇತುನಾ ಕೇನ ಪ್ಲಾವಯೇಲ್ಲೋಕ ಪಾವನೀ ॥ ೩ ॥ ಕಥಂ

---

ತಸ್ಮಿನ್ಮುನೌ - ಆ ವಿಶ್ವಾಮಿತ್ರಋಷಿಯು, ಉಕ್ತವಾಕ್ಯೇಸತಿ - ಹೇಳಲ್ಪಟ್ಟ ಮಾತು ಳ್ಳವನಾಗಲು, ವೀರೌ - ಶೂರರಾದ, ರಾಘವಲಕ್ಷ್ಮಣೌ -ರಾಮಲಕ್ಷ್ಮಣರಿಬ್ಬರೂ, ಕಥಾಂ - ಕಥೆ ನನ್ನು ಕುರಿತು, ಪ್ರತಿನಂದ್ಯ - ಸಂತೋಷಿಸಿ, ಮುನಿಪುಂಗವಂ - ಋಷಿಶ್ರೇಷ್ಠನಾದ ವಿಶ್ವಾಮಿತ್ರ ನನ್ನು ಕುರಿತು, ಊಚತುಃ - ಹೇಳಿದರು ॥ ೧ ॥ ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ಧರ್ಮ ಯುಕ್ತಂ - ಧರ್ಮದಿಂದ ಕೂಡಿರುವ, ಪರಮಂ - ಉತ್ಕೃಷ್ಟವಾದ, ಇದಂ - ಈ ಮಹಾತ್ಮ್ಯವು, ತ್ವಯಾ - ನಿನ್ನಿಂದ, ಕಥಿತಂ - ಹೇಳಲ್ಪಟ್ಟಿತು, ವಿಸ್ತರಜ್ಞಃ - ವಿಸ್ತಾರವನ್ನು ತಿಳಿದವನು, ಅಸಿ - ಆಗಿರುವೆ. ಶೈಲರಾಜಸ್ಯ - ಹಿಮವಂತನ, ಜ್ಯೇಷ್ಠಾಯಾಃ ಜ್ಯೇಷ್ಠಳೂ, ದುಹಿತುಃ - ಮಗಳೂ ಆದ ಗಂಗಾನದಿಯ, ದಿವ್ಯಮಾನುಷಸಂಭವಂ - ದೇವಲೋಕದಲ್ಲಿಯೂ ಮನುಷ್ಯ ಲೋಕದಲ್ಲಿಯೂ ಹುಟ್ಟಿದ, ವಿಸ್ತರಂ - ವಿಸ್ತಾರವನ್ನು, ವಕ್ತುಂ -ಹೇಳಲು, ಅರ್ಹಸಿ - ಅರ್ಹನಾಗಿರುವೆ. ॥ ೨ ॥ ಲೊಕಪಾವನೀ - ಲೋಕವನ್ನೆಲ್ಲ ಪರಿಶುದ್ಧಗೊಳಿಸುತ್ತಿರುವ ಗಂಗೆಯು, ಕೇನಹೇತುನಾ - ಯಾವ ಕಾರಣದಿಂದ, ತ್ರೀನ್ಪಥಃ - ಮೂರು ಮಾರ್ಗಗಳನ್ನು, (೧)ಪ್ಲಾವಯೇತ್- ಪರಿಶುದ್ಧಿಮಾಡಿತೋ! ॥೩॥

---

ವಿಶ್ವಾಮಿತ್ರನೀರಿತಿ ಆನಂದಿಸಿ ವೀರರಾದ ರಾಮಲಕ್ಷ್ಮಣರು ಪನ್ನುಹೊಗಳಿ ಮುನಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು "ಎಲೈ ಬ್ರಹ್ಮಜ್ಞಾನಿಯೇ! ಧರ್ಮ ಯುಕ್ತವಾದುದೂ, ಶ್ರೇಷ್ಠವಾದುದೂ, ಆದ ಹಿಮವಂತನ ಕಿರಿಯ ಮಗಳಾದಪಾರ್ವತಿ ಕಥೆ ಯುನಿನ್ನಿಂದ ಹೇಳಲ್ಪಟ್ಟಿತು. ಇನ್ನು ಹಿಮವಂತನ ಜ್ಯೇಷ್ಠಕುವರಿಯಾದ ಗಂಗಾದೇವಿಯ ಚರಿತ್ರೆಯನ್ನು ಹೇಳಲರ್ಹನಾಗು ॥ ೧-೨ ॥ ಸಕಲ ವೃತ್ತಾಂತಗಳನ್ನೂ ವಿಸ್ತಾರವಾಗಿ ತಿಳಿದ ನೀನು ? ಈಕೆಯು ಮೂರು ಲೋಕಗಳನ್ನೂ ಯಾವ ಕಾರಣದಿಂದ ಮೂರು ಮಾರ್ಗ ಗಳಿಂದ ಪಾವನಗೊಳಿಸುತ್ತಿರುವಳು. ॥ ೩ ॥ ನದಿಗಳಲ್ಲಿ ಶ್ರೇಷ್ಠಳಾದ ಈ ಗಂಗೆಯು

---

ಟಿಪ್ಪಣಿ—(೧) ಭಾವಯೇದಿತಿಪಾಠಾಂತರಂ. ಉದ್ಧರೇತ್ ಇತ್ಯರ್ಥಃ, "ಭೂಃ ಸತ್ತಾಯಾಂ ವಾಚಿ' ಇತ್ಯನೇನ.

ಗಂಗಾ ತ್ರಿಪಥಗಾ ವಿಶ್ರುತಾ ಸರಿದುತ್ತಮಾ ॥ ತ್ರಿಷುಲೋಕೇಷು ಧರ್ಮಜ್ಞ ಕರ್ಮಭಿಃ ಕೈಸ್ಸಮನ್ವಿತಾ ॥ ೪ ॥ ತಥಾ ಬ್ರುವತಿ ಕಾಕುತ್ಸ್ಥೇ ವಿಶ್ವಾಮಿತ್ರಸ್ತಪೋಧನಃ ॥ ನಿಖಿಲೇನ ಕಥಾಂ ಸರ್ವಾಮೃಷಿಮಧ್ಯೇನ್ಯವೇದಯತ್ ॥೫॥ ಪುರಾ ರಾಮ ಕೃತೋದ್ವಾಹೋ ನೀಲಕಂಠೋ ಮಹಾತಪಾಃ ॥ ದೃಷ್ಟ್ವಾಚಸ್ಪೃಹಯಾ ದೇವೀಂ ಮೈಥುನಾಯೋಪಚಕ್ರಮೇ ॥ ೬ ॥ ಶಿತಿಕಂಠಸ್ಯ ದೇವಸ್ಯ ದಿವ್ಯ ವರ್ಷಶತಂ ಗತಂ ॥ ನಚಾಪಿ ತನಯೋ ರಾಮ ತಸ್ಯಾಮಾಸೀತ್ಪರಂತಪ ॥ ೭ ॥ ತತೋ ದೇವಾಸ್ಸಮುದ್ವಿಗ್ನಾಃ ಪಿತಾಮಹಪುರೋಗಮಾಃ॥

ಹೇ ಧರ್ಮಜ್ಞ - ಎಲೈ ಧರ್ಮವನ್ನು ತಿಳಿದವನೆ' ಕೈಃಕರ್ಮಭಿಃ - ಯಾವ ಕರ್ಮಗಳಿಂದ, ಸಮನ್ವಿತಾ ಕೂಡಿರುವ, ಸರಿದುತ್ತಮಾ - ನದೀಶ್ರೇಷ್ಠವಾದ, ಗಂಗಾ - ಗಂಗಾನದಿಯು, ತ್ರಿಪಥಗಾ - ತ್ರಿಪಥಗಾ ಎಂದು, ತ್ರಿಷು - ಮೂರಾದ. ಲೋಕೇಷು ಲೋಕಗಳಲ್ಲಿ, ಕಥಂ - ಹೇಗೆ, ವಿಶ್ರುತಾ - ಪ್ರಸಿದ್ಧಳಾದಳು ॥ ೪ ॥ ಕಾಕುತ್ಸ್ಥೇ - ಶ್ರೀರಾಮನು, ತಥಾ - ಹಾಗೆ, ಬ್ರುವತಿಸತಿ - ಕೇಳಲು, ತಪೋಧನಃ - ತಪಸ್ಸೇಧನವಾಗಿವುಳ್ಳ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಋಷಿಮಧ್ಯೇ - ಋಷಿಗಳ ಮಧ್ಯದಲ್ಲಿ, ಸರ್ವಾಂ - ಸಮಸ್ತವಾದ, ಕಥಾಂ - ಕಥೆಯನ್ನು, ನಿಖಿಲೇನ - ಸಮಗ್ರವಾಗಿ, ನ್ಯವೇದಯತ್ ತಿಳಿಸಿದನು. ॥ ೫ ॥ ಹೇರಾಮ - ಎಲೈ ಶ್ರೀರಾಮನೆ, ಪುರಾ - ಪೂರ್ವದಲ್ಲಿ, ಮಹಾತಪಾಃ - ಮಹಾತಪಸ್ವಿಯಾದ, ನೀಲಕಂಠಃ - ಪರಮೇಶ್ವರನು, ಕೃತೋದ್ವಾಹಃ - ಮಾಡಲ್ಪಟ್ಟ ವಿವಾಹವುಳ್ಳವನಾಗಿ, ದೇವೀಂ- ಪಾರ್ವತೀ ದೇವಿಯನ್ನು, ದೃಷ್ಟ್ವಾ - ಕಂಡು, ಸ್ಪೃಹಯಾಚ - ಅಪೇಕ್ಷೆಯಿಂದಲೂ, ಮೈಥುನಾಯ - ಮಿಥುನಕ್ಕೋಸುಗ, ಉಪಚಕ್ರಮೇ - ಆರಂಭಿಸಿದನು. ॥ ೬ ॥ ಶಿತಿಕಂಠಸ್ಯ - ನೀಲಕಂಠನಾದ, ದೇವಸ್ಯ - ಈಶ್ವರನ ಭಾವಾನುಸಾರವಾಗಿ, ದಿವ್ಯಂ - (ಗೋ) ದೇವತಾಸಂಬಂಧವಾದ, (ಮ) ದೇವಮಾನದಿಂದ, ಹುಟ್ಟಿದ ವರ್ಷಶತಂ - ನೂರುವರ್ಷಗಳು, ಗತಂ - ಕಳದು ಹೋದವು, ಹೇರಾಮ - ಎಲೈ ರಾಮನೆ, ಹೇಪರಂತಪ - ಶತ್ರುಸಂಹಾರಕನೆ, ತಸ್ಯಾಂ - ಆ ಪಾರ್ವತಿಯಲ್ಲಿ, ತನಯಶ್ಚಾಪಿ - ಕುಮಾರನೂ, ನಾಸೀತ್ - ಆಗಲಿಲ್ಲ ॥ ೭ ॥ ತತಃ - ಬಳಿಕ, ಪಿತಾಮಹಪುರೋಗಮಾಃ, ಪಿತಾಮಹ - ಬ್ರಹ್ಮನೇ, ಪುರೋಗಮಾಃ- ಮೊದಲಾದ, ದೇವಾಃ - ದೇವತೆಗಳು, ಇಹ - ಈ ಪಾರ್ವತಿಯಲ್ಲಿ, ಯದ್ಭೂತಂ - ಯಾವ ಜಂತುವು, ಉತ್ಪದ್ಯತೇ- ಹುಟು

ಮೂರು ಮಾರ್ಗಗಳುಳ್ಳವಳಾದುದು ಹೇಗೆ ? ಎಲೈ ಧರ್ಮಜ್ಞನೇ ! ಈ ನದಿಯು ಲೋಕತ್ರಯದಲ್ಲಿಯೂ ಯಾವ ಯಾವ ಕರ್ಮದಿಂದೊಡಗೂಡಿರುವುದು" ಎಂದರು. ॥೪-೫॥ ಆ ರಾಜಪುತ್ರರಿಂತು ನುಡಿಯಲು ಆ ಋಷಿಸತ್ತಮನು ಆ ಮುನಿಗಳ ಮಧ್ಯದಲ್ಲಿ ಸಂಪೂರ್ಣವಾದ ಆ ಕಥೆಯನ್ನು ಹೇಳತೊಡಗಿದನು. ॥೬॥ ಎಲೈ ರಘುನಾಥನೇ ! ಪೂರ್ವದಲ್ಲಿ ಶಂಕರನು ಪಾರ್ವತಿಯನ್ನು ಮದುವೆಯಾಗಿ ಆಕೆಯ ರೂಪು ಲಾವಣ್ಯಗಳಿಗೆ ಮನಸೋತು ಆಕೆಯೊಡನೆ ರಮಿಸಲುಪಕ್ರಮಿಸಿದನು. ॥ ೭ ॥ ಹೀಗೆ ದೇವಮಾನದ ನೂರು ವರ್ಷಗಳು ಕಳೆದರೂ ಆ ಪಾರ್ವತಿಯಲ್ಲಿ ಕುವರನೇ ಆಗಲಿಲ್ಲ. ॥ ೮ ॥ ಬಳಿಕ ಉದ್ವೇಗಗೊಂಡ ಬ್ರಹ್ಮನೇ ಮೊದಲಾದ ದೇವತೆಗಳು "ಈ ಪಾರ್ವತೀ ಪ ಮೇಶ್ವರರ ಮಿಥುನದಿಂದುತ್ಪನ್ನ

ಯದಿಹೋತ್ಪದ್ಯತೇ ಭೂತಂ ಕಸ್ತತ್ಪ್ರತಿಸಹಿಷ್ಯತೇ ||೮|| ಅಭಿಗಮ್ಯ ಸುರಾಸ್ಸರ್ವೇ ಪ್ರಣಿಪತ್ಯೇದಮಬ್ರುವನ್ ||೮|| ದೇವ ದೇವ ಮಹಾದೇವ ಲೋಕಸ್ಯಾಸ್ಯ ಹಿತೇರತ || ಸುರಾಣಾಂ ಪ್ರಣಿಪಾತೇನ ಪ್ರಸಾದಂ ಕರ್ತುಮರ್ಹಸಿ ||೯|| ನಲೋಕಾಧಾರ ಇಷ್ಯಂತಿ ತವ ತೇಜಸ್ಸುರೋತ್ತಮ || ಬ್ರಾಹ್ಮೇಣ ತಪಸಾ ಯುಕ್ತೋ ದೇವ್ಯಾಸಹ ತಪಶ್ಚರ || ೧೦ || ತ್ರೈಲೋಕ್ಯ ಹಿತಕಾಮಾರ್ಥಂ ತೇಜಸ್ತೇಜಸಿ ಧಾರಯ ||೧೧|| (೧) (ರಕ್ಷ ಸರ್ವಾನಿಮಾನ್ ಲೋಕಾನ್ನಾಲೋಕಂ ಕರ್ತುಮರ್ಹಸಿ) ದೇವತಾನಾಂ ವಚಶ್ಶ್ರುತ್ವಾ ಸರ್ವ

---

ವದೋ, ತತ್ - ಆ ಜಂತುವನ್ನು, ಕಃ - ಯಾವನು, ಪ್ರತಿಸಹಿಷ್ಯತೇ - ಸಹಿಸುವನು, ಇತಿ - ಇಂತೆಂದು, ಸಮುದ್ವಿಗ್ನಾಃ - ಹೆದರಿಕೆಯುಳ್ಳವರಾದರು. ||೮|| ಸರ್ವೇ - ಸಮಸ್ತರಾದ, ಸುರಾಃ - ದೇವತೆಗಳು, ಅಭಿಗಮ್ಯ - ಬಂದು, ಪ್ರಣಿಪತ್ಯ - ನಮಸ್ಕರಿಸಿ ಇದಂ - ಈ ಮಾತನ್ನು, ಅಬ್ರುವನ್- ನುಡಿದರು, ಹೇದೇವದೇವ- ದೇವನಾಥನೆ, ಹೇಮಹಾದೇವ - ಎಲೈ ಮಹಾದೇವನೆ, ಅಸ್ಯಲೋಕಸ್ಯ- ಈ ಲೋಕದ, ಹಿತೇ - ಹಿತದಲ್ಲಿ, ಹೇರತ - ಆಸಕ್ತನಾದವನೆ, ಸುರಾಣಾಂ - ದೇವತೆಗಳ, ಪ್ರಣಿಪಾತೇನ - ನಮಸ್ಕಾರದಿಂದ, ಪ್ರಸಾದಂ - ಅನುಗ್ರಹವನ್ನು, ಕರ್ತುಂ - ಮಾಡಲು, ಅರ್ಹಸಿ - ಯೋಗ್ಯನಾಗು. ||೯|| ಹೇಸುರೋತ್ತಮ-ಎಲೈ ದೇವತಾಶ್ರೇಷ್ಠನೆ, ತವ-ನಿನ್ನ, ತೇಜಃ-ತೇಜಸ್ಸನ್ನು ಲೋಕಾಃ - ಲೋಕಗಳು, ನಧಾರಯಿಷ್ಯಂತಿ - ಧರಿಸಲಾರವು, ಬ್ರಾಹ್ಮೇಣ - ಬ್ರಹ್ಮಸಂಬಂಧವಾದ, ತಪಸಾ - ತಪಸ್ಸಿನಿಂದ, ಯುಕ್ತಃ - ಕೂಡಿದ, ದೇವ್ಯಾಸಹ - ಪಾರ್ವತೀದೇವಿಯೊಡನೆ, ತಪಃ - ತಪಸ್ಸನ್ನು, ಚರ - ಅನುಷ್ಠಾನಮಾಡು. || ೧೧ || ತ್ರೈಲೋಕ್ಯಹಿತಕಾಮಾರ್ಥಂ, ತ್ರೈಲೋಕ್ಯ ಲೋಕತ್ರಯಕ್ಕೆ, ಹಿತಕಾಮಾರ್ಥಂ - ಹಿತವೆಂಬ ಕೋರಿಕೆಗೆ, ತೇಜಃ- ವೀರ್ಯವನ್ನು, ತೇಜಸಿ - ತೇಜೋಮಯವಾದ ನಿನ್ನ ಶರೀರದಲ್ಲಿಯೇ, ಧಾರಯ - ಧರಿಸು. ||೧೧|| ದೇವತಾನಾಂ - ದೇವತೆಗಳ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವಲೋಕಮಹೇಶ್ವರಃ - ಸರ್ವಲೋಕಗಳಿಗೂ ಮಹೇಶ್ವರನಾದ ಈ ಶಿವನು, ಬಾಢಮಿತಿ - ಹಾಗೆಯೆ ಆಗಲೆಂದು, ಅಬ್ರವೀತ್ -

---

ವಾದ ಭೂತವನ್ನಾರು ತಾನೇ ಸಹಿಸಬಲ್ಲರು "ಎಂದಾಲೋಚಿಸಿ ಈಶ್ವರನಿದ್ದೆಡೆಗೆ ಬಂದು ನಾಷ್ಟಾಂಗ ಪ್ರಣಾಮವಂಗೈದು," ಎಲೈ ಮಹಾದೇವನೇ ! ಸಕಲ ಲೋಕಗಳ ಹಿತದಲ್ಲಿ ನಿರತನಾದವನೇ ! ನಮಸ್ಕಾರವಂ ಗೈಯುತಲಿರುವ ದೇವತೆಗಳನ್ನನುಗ್ರಹಿಸಲು ಅರ್ಹನಾಗು. ||೯-೧೦|| ಎಲೈ ದೇವೋತ್ತಮನೇ ! ನಿನ್ನ ತೇಜಸ್ಸನ್ನು ಲೋಕಗಳು ಧರಿಸಲು ಸಮರ್ಥಗಳಲ್ಲ; ಆದುದರಿಂದ ಬ್ರಹ್ಮ ಸಂಬಂಧವಾದ ತಪಸ್ಸಿನಿಂದ ಈ ದೇವಿಯೊಡಗೂಡಿ ತಪವಂ

---

(೧) ಇದು ಅಧಿಕಪಾಠವೆಂದು ವ್ಯಾಖ್ಯಾನಕಾರರೂ ಇದಕ್ಕೆ ಅರ್ಥವನ್ನು ಬರೆದಿರುವುದಿಲ್ಲ. ತ್ರೈಲೋಕ್ಯಹಿತಕಾಮಾರ್ಥಂ ಎಂಬ ಮೇಲಿನ ಪದದಿಂದಲೇ ಈ ಒಂದು ಪಾದದ ಸಾರವು ಬಂದಿರುತ್ತದೆ ಯಾದುದರಿಂದ ನಾನು ಇದನ್ನು ಬಿಟ್ಟಿರುತ್ತೇನೆ.

ಲೋಕಮಹೇಶ್ವರಃ || ಬಾಢಮಿತ್ಯಬ್ರವೀತ್ಸರ್ವಾನ್ ಪುನಶ್ಚೇದಮುವಾಚಹ||೧೨||
ಧಾರಯಿಷ್ಯಾಮ್ಯಹಂ ತೇಜಸ್ತೇಜಸ್ಯೇವ ಸಹೋಮಯಾ || ತ್ರಿದಶಾಃ ಪೃಥಿ
ವೀಚೈವನಿರ್ವಾಣಮಧಿಗಚ್ಛತು || ೧೩ || ಯದಿದಂ ಕ್ಷುಭಿತಂ ಸ್ಥಾನಾನ್ಮಮ
ತೇಜೋಹ್ಯನುತ್ತಮಂ || ಧಾರಯಿಷ್ಯತಿ ಕಸ್ತನ್ಮೇ ಬ್ರುವಂತು ಸುರಸತ್ತಮಾಃ
||೧೪|| ಏವಮುಕ್ತಾಸ್ಸುರಾಸ್ಸರ್ವೇ ಪ್ರತ್ಯೂಚುರ್ವೃಷಭಧ್ವಜಂ || ಯತ್ತೇಜಃ
ಕ್ಷುಭಿತಂಹ್ಯೇತತ್ತದ್ಧರಾ ಧಾರಯಿಷ್ಯತಿ || ೧೫ || ಏವಮುಕ್ತಸ್ಸುರಪತಿಃ
ಪ್ರಮುಮೋಚ ಮಹೀತಲೇ || ತೇಜಸಾ ಪೃಥಿವೀಯೇನ ವ್ಯಾಪ್ತಾ ಸ ಗಿರಿ
ಕಾನನಾ || ೧೬ || ತತೋದೇವಾಃ ಪುನರಿದಮೂಚುಶ್ಚಾಥ ಹುತಾಶನಂ ||

---

ನುಡಿದನು, ಪುನಶ್ಚ - ಮತ್ತು, ಸರ್ವಾನ್ - ಸಮಸ್ತರನ್ನೂ ಕುರಿತು, ಇದಂ - ಈ ವಕ್ಷ್ಯಮಾಣ ವಚನವನ್ನು, ಉವಾಚಹ - ಹೇಳಿದನು. ||೧೨|| ಅಹಂ-ನಾನು, ಉಮಯಾಸಹ - ಪಾರ್ವತಿಯೊಡನೆ, ತೇಜಸ್ಯೇವ - ತೇಜೋಮಯ ಶರೀರದಲ್ಲಿಯೆ, ತೇಜಃ - ವೀರ್ಯವನ್ನು, ಧಾರಯಿಷ್ಯಾಮಿ-ಧರಿಸುವೆನು, ತ್ರಿದಶಾಃ - ದೇವತೆಗಳೂ, ಪೃಥಿವೀ-ಭೂಮಿಯೂ, ನಿರ್ವಾಣಂ- ಸುಖವನ್ನು ಅಧಿಗಚ್ಛತು-ಹೊಂದಲಿ, ||೧೩|| ಹೇಸುರಸತ್ತಮಾಃ - ಎಲೈ ಸುರಶ್ರೇಷ್ಠರಿರಾ ! ಮಮ - ನನ್ನ, ಅನುತ್ತಮಂ- ಸರ್ವೋತ್ತಮವಾದ, ಯತ್ತೇಜಃ - ಯಾವ ತೇಜಸ್ಸು, ಸ್ಥಾನಾತ್ - ಸ್ವಸ್ಥಾನದ ದೆಸೆಯಿಂದ, ಕ್ಷುಭಿತಂ-ಸ್ಖಲಿತವಾಗಿರುವುದೋ, ತದಿದಂ-ಅದನ್ನು, ಕಃ - ಯಾರು, ಧಾರಯಿಷ್ಯತಿ - ಧರಿಸುತ್ತಾನೆ, ಮೇ-ನನಗೆ, ಬ್ರುವಂತು ಹೇಳಿರಿ, ||೧೪|| ಏವಂ-ಹೀಗೆ, ಉಕ್ತಾಃ- ಹೇಳಲ್ಪಟ್ಟ, ಸರ್ವೇಸುರಾಃ-ಸಮಸ್ತ ದೇವತೆಗಳು, ವೃಷಭಧ್ವಜಂ ಪರಮೇಶ್ವರನನ್ನು ಕುರಿತು, ಯತ್ತೇಜಃ - ಯಾವ ತೇಜಸ್ಸು, ಕ್ಷುಭಿತಂ - ಸ್ಖಲಿತವಾಗಿರುವುದೋ, ತದೇತತ್ ಆ ವೀರ್ಯವನ್ನು, ಧರಾ - ಭೂಮಿಯು, ಧಾರಯಿಷ್ಯತಿ - ಧರಿಸುವಳು, ಇತಿ - ಇಂತೆಂದು, ಪ್ರತ್ಯೂಚುಃ ಹೇಳಿದರು. ||೧೫|| ಏವಂ - ಈಪರಿ, ಉಕ್ತಃ - ಹೇಳಲ್ಪಟ್ಟ, ಸುರಪತಿಃ - ಪರಮೇಶ್ವರನು, ಮಹೀತಲೇ ಭೂಪ್ರದೇಶದಲ್ಲಿ, ಪ್ರಮುಮೋಚ - ಬಿಟ್ಟನು, ಯೇನತೇಜಸಾ - ಯಾವ ತೇಜಸ್ಸಿನಿಂದ, ಸ ಗಿರಿಕಾನನಾ- ಬೆಟ್ಟಗಳಿಂದಲೂ, ಕಾಡುಗಳಿಂದಲೂ ಒಡಗೂಡಿದ, ಪೃಥಿವೀ - ಭೂಮಿಯು, ವ್ಯಾಪ್ತಾ-ವ್ಯಾಪಿಸಲ್ಪಟ್ಟಿತೋ. ||೧೬||

---

ಗ್ಯೈಮುವವನಾಗು ಮೂರು ಲೋಕಗಳ ಹಿತಕ್ಕೋಸುಗ ಮುಂದೆ ಉದ್ಭವಿಸುವ ತೇಜಸ್ಸನ್ನು ಸ್ವತೇಜಸ್ಸಿನಲ್ಲಿಯೇ ಲೀನಮಾಡಿಕೊಳ್ಳುವನಾಗು, ಎಂದು ಪ್ರಾರ್ಥಿಸಿದರು. || ೧೧-೧೨ || ಇಂತು ಪ್ರಾರ್ಥಿಸಿದ ದೇವತೆಗಳ ನುಡಿಗಳನ್ನು ಕೇಳಿ ಮೂರು ಲೋಕದೊಡೆಯನಾದ ಪರಮೇಶ್ವರನು ಹಾಗೆಯೇ ಆಗಲೆಂದು ಹೇಳಿ ಮತ್ತಿಂತೆಂದನು. || ೧೩ || ಎಲೈ ದೇವತೆಗಳಿರಾ ! ಪಾರ್ವತಿಯಿಂದೊಡಗೂಡಿದ ನಾನು ನನ್ನಿಂದುದ್ಭವವಾಗುವ ತೇಜಸ್ಸನ್ನು ಸ್ವಕೀಯವಾದ ತೇಜಸ್ಸಿನಲ್ಲಿಯೇ ಅಡಗಿಸಿಕೊಳ್ಳುವೆನು. ದೇವತೆಗಳೂ, ಈ

ಪ್ರವಿಶ ತ್ವಂ ಮಹಾತೇಜೋ ರೌದ್ರಂ ವಾಯು ಸಮನ್ವಿತಃ ||೧೭|| ತದ
ಗ್ನಿನಾ ಪುನರ್ವ್ಯಾಪ್ತಂ ಸಂಜಾತಃ ಶ್ವೇತಪರ್ವತಃ || ದಿವ್ಯಂ ಶರವಣಂಚೈವ
ಪಾವಕಾದಿತ್ಯಸನ್ನಿಭಂ || ಯತ್ರ ಜಾತೋ ಮಹಾತೇಜಾಃ ಕಾರ್ತಿಕೇಯೋಗ್ನಿ
ಸಂಭವಃ ||೧೮|| ಅಥೋಮಾಂಚ ಶಿವಂಚೈವ ದೇವಾಸ್ಸರ್ಷಿಗಣಾಸ್ತದಾ||
ಪೂಜಯಾಮಾಸುರತ್ಯರ್ಥಂ ಸುಪ್ರೀತಮನಸಸ್ತತಃ || ೧೯ || ಅಥಶೈಲ
ಸುತಾ ರಾಮ ತ್ರಿದಶಾನಿದಮಬ್ರವೀತ್ || (ಅಪ್ರಿಯಸ್ಯಕೃತಸ್ಯಾದ್ಯ ಫಲಂ
ಪ್ರಾಪ್ಸ್ಯಥ ಮೇಸುರಾಃ || ಇತ್ಯುಕ್ತ್ವಾ ಸಲಿಲಂಗೃಹ್ಯ ಪಾರ್ವತೀಭಾಸ್ಕರ-

ತತಃ - ಬಳಿಕ, ದೇವಾಃ ಪುನಃ - ದೇವತೆಗಳಾದರೆ, ಹುತಾಶನಂ - ಯಜ್ಞೇಶ್ವರನನ್ನು ಕುರಿತು, ಹೇಮಹಾತೇಜಃ - ಎಲೈ ಮಹಾತೇಜೋವಂತನಾದ ಅಗ್ನಿಯು, ವಾಯು ಸಮನ್ವಿತಃ - ವಾಯುವಿನಿಂದ ಕೂಡಿ, ತ್ವಂ - ನೀನು, ರೌದ್ರಂ - ರುದ್ರಸಂಬಂಧವಾದ ತೇಜಸ್ಸನ್ನು, ಪ್ರವಿಶೇತಿ - ಗ್ರಹಿಸು ಎಂದು, ಇದಂ - ಈ ಮಾತನ್ನು, ಊಚುಃ - ಹೇಳಿದರು, || ೧೭ || ಅಗ್ನಿನಾಪುನಃ - ಅಗ್ನಿಯಿಂದ, ವ್ಯಾಪ್ತಂ - ವ್ಯಾಪಿಸಲ್ಪಟ್ಟ, ತತ್ - ಆ ವೀರ್ಯವು, ಶ್ವೇತಪರ್ವತಃ- ರಜತಪರ್ವತವಾಗಿ, ಸಂಜಾತಃ - ಬೆಳೆಯಿತು, ಪಾವಕಾದಿತ್ಯಸನ್ನಿಭಂ - ಅಗ್ನಿ ಸೂರ್ಯರ ಪ್ರಕಾಶಕ್ಕೆ ಸಮಾನವಾದ, ದಿವ್ಯಂ - ಮನೋಹರವಾದ, ಶರವಣಂಚೈವ - ಜಂಡು ಹುಲ್ಲು ರೂಪವಾಯಿತು, ಯತ್ರ - ಯಾವ ಹುಲ್ಲುಗಳ ತಂಡದಲ್ಲಿ, ಮಹಾತೇಜಾಃ - ಮಹಾತೇಜೋವಂತನಾದ, ಅಗ್ನಿಸಂಭವಃ - ಅಗ್ನಿಯಲ್ಲಿ ಹುಟ್ಟಿದ, ಕಾರ್ತಿಕೇಯಃ - ಕುಮಾರಸ್ವಾಮಿಯು, ಜಾತಃ-ಹುಟ್ಟಿದನೋ||೧೮|| ಅಥ-ಬಳಿಕ, ದೇವಾಃ ದೇವತೆಗಳು, ಸರ್ಷಿಗಣಾಃ - ಋಷಿಗಣದಿಂದ ಕೂಡಿ, ತದಾ-ಆ ಕಾಲದಲ್ಲಿ, ಸುಪ್ರೀತಮನಸಃ - ಸಂತೋಷಗೊಂಡ ಮನಸ್ಸುಳ್ಳವರಾಗಿ, ತತಃ - ಆ ಪುತ್ರೋತ್ಪತ್ತಿಯಿಂದ, ಶಿವಂಚೈವ ಪರಮೇಶ್ವರನನ್ನೂ, ಉಮಾಂಚ - ಪಾರ್ವತಿಯನ್ನೂ, ಅತ್ಯರ್ಥಂ-ಬಹಳವಾಗಿ, ಪೂಜಯಾಮಾಸುಃ - ಪೂಜೆ ಮಾಡಿದರು || ೧೯ || ಹೇರಾಮ - ಎಲೈ ಶ್ರೀರಾಮನೆ, ಅಥ-ಬಳಿಕ, ಶೈಲಸುತಾ - ಪಾರ್ವತೀದೇವಿಯು, ತ್ರಿದಶಾನ್ - ದೇವತೆಗಳನ್ನು ಕುರಿತು, ಇದಂ- ಈ ಮಾತನ್ನು,

ಲೋಕವೂ ಶಾಂತಿಯನ್ನು ಹೊಂದಲಿ. ಆದ್ದರಿಂದ ದೇವತೆಗಳಿರಾ ! ಉತ್ಕೃಷ್ಟವಾಗಿರುವ ತೇಜಸ್ಸನ್ನಾರು ಧರಿಸುವರು," ಎಂದನು ಇಂತೆನಲು ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರೂ "ಎಲೈ ಸ್ವಾಮಿಯೇ ! ಕ್ಷುಭಿತವಾದ ಆ ತೇಜಸ್ಸನ್ನು ಭೂಮಿಯು ಧರಿಸುವಳು" ಎಂದರು ದೇವೇಂದ್ರನೀರಿತಿ ನುಡಿಯಲು ಆ ಶಂಕರನು ತನ್ನ ತೇಜಸ್ಸನ್ನು ಭೂಮಿಯ ಮೇಲೆ ಬಿಟ್ಟನು. ಇದರಿಂದ ಗಿರಿಕಾನನೋಪೇತವಾದ ಭೂಮಿಯೆಲ್ಲವೂ ಆವರಿಸಲ್ಪಟ್ಟಿತು || ೧೪-೧೬ || ಆ ಬಳಿಕ ದೇವತೆಗಳೆಲ್ಲರೂ ತೇಜಸ್ಸಿನಿಂದ ವ್ಯಾಪ್ತವಾದ ಭೂಮಿಯು ಭಗ್ನವಾಗುವದೆಂದರಿತು ಅಗ್ನಿಯನ್ನು ಕುರಿತು, "ಎಲೈ ಅಗ್ನಿಯೇ ! ವಾಯುದೇವನಿಂದೊಡಗೂಡಿದ ನೀನು ಈ ತೇಜಸ್ಸನ್ನು ಪ್ರವೇಶಿಸು" ಎಂದು ಹೇಳಿದರು ||೧೭|| ಆ ಬಳಿಕ ಅಗ್ನಿಯಿಂದಾತೇಜಸ್ಸು ವ್ಯಾಪ್ತವಾಗಲು ಶ್ವೇತಪರ್ವತವೂ, ಅಗ್ನಿಸೂರ್ಯರಿಗೆ ಸಮಾನವಾದ ಶರವಣವೂ ಉಂಟಾಯಿತು. ಈ ಶರವಣದಲ್ಲಿಯೇ ಅಗ್ನಿ ಸಂಭೂತನಾದ ಕಾರ್ತಿ

ಪ್ರಭಾ) ಸಮನ್ಯುರಶಪತ್ಸರ್ವಾನ್ ಕ್ರೋಧಸಂರಕ್ತಲೋಚನಾ ||೨೦|| ಯಸ್ಮಾನ್ನಿವಾರಿತಾಚೈವ ಸಂಗತಿಃ ಪುತ್ರಕಾಮ್ಯಯಾ || ಅಪತ್ಯಂ ಸ್ವೇಷು ದಾರೇಷು ತಸ್ಮಾನ್ನೋತ್ಪಾದಯಿಷ್ಯಥ ||೨೧|| ಅದ್ಯಪ್ರಭೃತಿ ಯುಷ್ಮಾಕಮಪ್ರಜಾಸ್ಸಂತುಪತ್ನಯಃ|| ಏವಮುಕ್ತ್ವಾ ಸುರಾನ್ ಸರ್ವಾನ್ ಶಶಾಪ ಪೃಥಿವೀಮಪಿ ||೨೨|| ಅವನೇ ನೈಕರೂಪಾ ತ್ವಂ ಬಹುಭಾರ್ಯಾ ಭವಿಷ್ಯಸಿ || ನಚ ಪುತ್ರಕೃತಾಂ ಪ್ರೀತಿಂ ಮತ್ಕ್ರೋಧ ಕಲುಷೀ ಕೃತಾ || ಪ್ರಾಪ್ಸ್ಯಸಿ ತ್ವಂ ಸುದುರ್ಮೇಧೇ ಮಮ ಪುತ್ರ

---

ಅಬ್ರವೀತ್ - ನುಡಿದಳು, (ಭಾಸ್ಕರಪ್ರಭಾ - ಸೂರ್ಯನಂತೆ ಕಾಂತಿಯುಳ್ಳ, ಪಾರ್ವತೀ-ಪಾರ್ವತಿಯು ಹೇಸುರಾಃ - ಎಲೈ ದೇವತೆಗಳಿರಾ ! ಮೇ - ನನಗೆ, ಕೃತಸ್ಯ - ಮಾಡಿದ, ಅಪ್ರಿಯಸ್ಯ - ಅರಿಷ್ಟದ, ಫಲಂ - ಫಲವನ್ನು, ಅದ್ಯ - ಈಗ, ಪ್ರಾಪ್ನುತ - ಹೊಂದುವಿರಿ, ಇತಿ ಹೀಗೆಂದು, ಉಕ್ತ್ವಾ - ಹೇಳಿ, ಸಲಿಲಂ - ನೀರನ್ನು, ಗೃಹ್ಯ ತೆಗೆದುಕೊಂಡು ) ಕ್ರೋಧಸಂರಕ್ತಲೋಚನಾ- ಕೋಪದಿಂದ ಕೆಂಪೂಗೆದ ಕಂಗಳುಳ್ಳವಳಾಗಿ ಸಮನ್ಯುಃ - ಕೋಪದಿಂದ, ಯಸ್ಮಾತ್ - ಯಾವಕಾರಣ, ಪುತ್ರಕಾಮ್ಯಯಾ - ಪುತ್ರೇಚ್ಛೆಯುಳ್ಳ ನನ್ನೊಡನ. ಸಂಗತಿಃ - ಸಂಗಮವು, ನಿವಾರಿತಾ-ತಡೆಮಾಡಲ್ಪಟ್ಟಿತೋ, ತಸ್ಮಾತ್-ಆ ಕಾರಣ, ಸ್ವೇಷು-ಸ್ವಕೀಯರಾದ, ದಾರೆಷು-ಹೆಂಡತಿಯರಲ್ಲಿ, ಅಪತ್ಯಂ-ಸಂತಾನವನ್ನು, ನೋತ್ಪಾದಯಿಷ್ಯಥ ಹುಟ್ಟಿಸಬೇಡಿರಿ, ಇತಿ - ಇಂತೆಂದು, ಸರ್ವಾನ್-ಸಮಸ್ತ ದೇವತೆಗಳನ್ನು ಕುರಿತು, ಅಶಪತ್ - ಶಪಿಸಿದಳು ||೨೧|| ಅದ್ಯಪ್ರಭೃತಿ - ಈ ಮೊದಲು, ಯುಷ್ಮಾಕಂ - ನಿಮ್ಮ, ಪತ್ನಯಃ - ಹೆಂಡತಿಯರು, ಅಪ್ರಜಾಃ - ಮಕ್ಕಳಿಲ್ಲದವರಾಗಿ, ಸಂತು-ಇರಲಿ, ಏವಂ - ಹೀಗೆ, ಸರ್ವಾನ್ - ಸಮಸ್ತ ದೇವತಗಳನ್ನು ಕುರಿತು, ಉಕ್ತ್ವಾ-ಹೇಳಿ, ಪೃಥಿವೀಮಪಿ - ಭೂಮಿಯನ್ನೂ ಕೂಡ, ಶಶಾಪ- ಶಪಿಸಿದಳು ||೨೨|| ಹೇಅವನೇ-ಎಲೈ ಭೂಮಿಯೇ, ತ್ವಂ - ನೀನು, ನೈಕರೂಪಾ-ಅನೇಕ ರೂಪಗಳುಳ್ಳವಳಾಗಿ, ಬಹುಭಾರ್ಯಾ - ಬಹುಜನರಿಂದಯಿಂದ ಭರಿಸತಕ್ಕವಳು, ಭವಿಷ್ಯಸಿ - ಆಗುವಿ, ಇತಿ - ಇಂತೆಂದು, ಶಶಾಪ-ಶಪಿಸಿದಳು. ||೨೩|| ಹೇಸುದುರ್ಮೇಧೇ - ಎಲೈ ದುಷ್ಟಬುದ್ಧಿಯುಳ್ಳವಳೇ, ಮಮ - ನನಗೆ, ಪುತ್ರಂ - ಪುತ್ರನನ್ನು, ಅನಿಚ್ಛತೀ-

---

ಕೇಯು ಸ್ವಾಮಿಯು ಹುಟ್ಟಿದನು. ಎಲೈ ರಾಮಚಂದ್ರನೇ ! ಇದಾದ ಬಳಿಕ ಬಹುವಾಗಿ ಸಂತಸಗೊಂಡ ಮನವುಳ್ಳ ದೇವರ್ಷಿಗಣಗಳು ಪಾರ್ವತೀ ಪರಮೇಶ್ವರರನ್ನು ಪೂಜಿಸಿದರು. ||೧೮-೧೯|| ಆಗಲಾ ಪಾರ್ವತಿಯು ಬಹುಕೋಪದಿಂದ "ಎಲೈ ದೇವತೆಗಳಿರಾ ! ನನ್ನ ವಿಷಯದಲ್ಲಿ ಅಪ್ರಿಯವನ್ನಾಚರಿಸುದದರಿಂದ ತಕ್ಕ ಫಲವನ್ನನುಭವಿಸಿರಿ. ಯಾವ ಕಾರಣದಿಂದ ಪುತ್ರಕಾಮನೆಯುಳ್ಳ ನೀವು ನಮ್ಮಿಬ್ಬರ ಕೂಡುವಿಕೆಯನ್ನು ನಿವಾರಿಸಿದಿರೋ, ಆ ಕಾರಣ ನೀವು ನಿಮ್ಮ ಹೆಂಡತಿಯರಲ್ಲಿ ಪುತ್ರಸಂತಾನವನ್ನು ಪಡಯಬೇಡಿರಿ. ನಿಮ್ಮ ಸತಿಯರೂ ಇಂದಿನಿಂದ ಅಪುತ್ರವಂತೆಯರಾಗಿಯೇ ಇರಲಿ" ಎಂದು ಶಪಿಸಿ ಶಿವರೇತಸ್ಸನ್ನು ಧರಿಸಿದ ಭೂಮಿಯನ್ನು ಶಪಿಸಿದಳದೆಂತೆನೆ. ||೨೦-೨೨|| "ಎಲೈ ಭೂದೇವಿಯೇ ! ನನಗೆ ಮಕ್ಕಳಾಗದಿರಲೆಂದಿಚ್ಛಿಸಿದ ನೀನು ಅನೇಕ ರೂಪಳಾಗಿಯೂ, ಅನೇಕರಿಂದ ಭರಿಸಲು ಯೋಗ್ಯಳಾದವಳಾಗಿಯೂ ಆಗುವಿಯಲ್ಲದೆ, ನನ್ನ ಕೋಪದಿಂದ ಕಾಲುಷ್ಯವನ್ನು ಹೊಂದಿದ

ಮನಿಚ್ಛತೀ ॥ ೨೪ ॥ ತಾನ್ ಸರ್ವಾನ್ ವ್ರೀಡಿತಾನ್ ದೃಷ್ಟ್ವಾ ಸುರಾನ್ ಸುರ ಪತಿಸ್ತದಾ ॥ ಗಮನಾಯೋಪಚಕ್ರಾಮ ದಿಶಂ ವರುಣಪಾಲಿತಾಂ ॥ ೨೫ ॥ ಸ ಗತ್ವಾ ತಪಆತಿಷ್ಠತ್ಪಾರ್ಶ್ವೇ ತಸ್ಯೋತ್ತರೇ ಗಿರೌ ॥ ಹಿಮವತ್ಪ್ರಭವೇ ಶೃಂಗೇ ಸಹದೇವ್ಯಾ ಮಹೇಶ್ವರಃ ॥೨೬॥ ಏಷ ತೇ ವಿಸ್ತರೋ ರಾಮ ಶೈಲ ಪುತ್ರ್ಯಾ ನಿವೇದಿತಃ ॥ ಗಂಗಾಯಾಃ ಪ್ರಭವಂಚೈವ ಶೃಣು ಮೇ ಸಹ ಲಕ್ಷ್ಮಣಃ ॥ ೨೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ

---

ಕೋರದಿರುವ, ತ್ವಂ - ನೀನು, ಮತ್ಕ್ರೋಧಕಲುಷೀಕೃತಾ, ಮತ್-ನನ್ನ, ಕ್ರೋಧ-ಕೋಪದಿಂದ, ಕಲುಷೀಕೃತಾ ವ್ಯಸ್ತವಾದ ಪ್ರಕೃತಿಯುಳ್ಳವಳಾಗಿ, ಪುತ್ರಕೃತಾಂ - ಪುತ್ರರಿಂದ ಮಾಡಲ್ಪಟ್ಟ, ಪ್ರೀತಿಂ-ಸಂತೋಷವನ್ನು, ನಪ್ರಾಪ್ಸ್ಯಸಿ - ಹೊಂದಬೇಡ, ॥ ೨೪ ॥ ತದಾ - ಆಗ, ಸುರಪತಿಃ-ದೇವಾಧಿಪತಿಯಾದ, ಮಹೇಶ್ವರಃ ಈಶ್ವರನು, ವ್ರೀಡಿತಾನ್ ಲಜ್ಜೆಗೊಂಡು, ಸರ್ವಾನ್-ಸಮಸ್ತರಾದ, ತಾನ್ ಸುರಾನ್ - ಆ ದೇವತೆಗಳನ್ನು, ದೃಷ್ಟ್ವಾ - ಕಂಡು, ವರುಣ ಪಾಲಿತಾಂ - ವರುಣನಿಂದ ಪೋಷಿಸಲ್ಪಟ್ಟ, ದಿಶಂ-ದಿಕ್ಕನು ಕುರಿತು, ಗಮನಾಯೋಪಚಕ್ರಾಮ-ಹೊರಟುಹೋದನು ॥೨೫॥ ಸಃ - ಆ ಪರಮೇಶ್ವರನು, ಉತ್ತರೇಗಿರೌ-ಉತ್ತರ ದಿಕ್ಕಿನಲ್ಲಿರುವ, ತಸ್ಯ-ಆ ಬೆಟ್ಟದ, ಪಾರ್ಶ್ವೇ-ಪ್ರಾಂತದಲ್ಲಿ, ಗತ್ವಾ - ಹೋಗಿ, ಹಿಮವತ್ಪ್ರಭವೇ - ಹಿಮವತ್ಪರ್ವತದಿಂದ ಹುಟ್ಟಿದ, ಶೃಂಗೇ-ಶಿಖರದಲ್ಲಿ, ದೇವ್ಯಾಸಹ - ಪಾರ್ವತಿಯೊಡಗೂಡಿ, ತಪಃ - ತಪವನ್ನು. ಅತಿಷ್ಠತಾ-ಅನುಷ್ಠಾನ ಮಾಡಿದನು ॥ ೨೬ ॥ ಹೇರಾಮ - ಎಲೈ ಶ್ರೀರಾಮನೆ, ಶೈಲಪುತ್ರ್ಯಾಃ-ಪಾರ್ವತೀ ದೇವಿಯ, ಏಷವಿಸ್ತರಃ - ಈ ಕಥಾವಿಸ್ತಾರವು ತೇ - ನಿನಗೆ, ನಿವೇದಿತಃ - ತಿಳಿಸಲ್ಪಟ್ಟಿತು, ಮೇ - ನನ್ನಿಂದ, ಸಹಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದವನಾಗಿ, ಗಂಗಾಯಾಃ-ಗಂಗಾನದಿಯ, ಪ್ರಭವಂಚೈವ-ಉತ್ಪತ್ತಿಯನ್ನೂ ಕೂಡ, ಶೃಣು - ಕೇಳು ॥೨೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ



---

ನೀನು ಮಗನಿಂದುಂಟಾಗುವ ಪ್ರೀತಿಯನ್ನು ಹೊಂದುವದಿಲ್ಲವು, ॥ ೨೩-೨೪ ॥ ಉಮಾ ದೇವಿಯು ಈ ರೀತಿ ಶಪಿಸಲು, ದೇವತೆಗಳೆಲ್ಲರೂ ಲಜ್ಜೆಗೊಂಡುದನ್ನು ನೋಡಿದ ದೇವೇಂ ದ್ರನು ವರುಣಪಾಲಿತವಾದ ಪ್ರತೀಚಿಯನ್ನು ಕುರಿತು ಹೊರಟನು, ಪರಮೇಶ್ವರನಾದರೋ, ಹಿಮವತ್ಪರ್ವತದ ಉತ್ತರ ಶಿಖರವನ್ನು ಸೇರಿ ದೇವಿಯೊಡನೆ ತಪವಂಗೈದನು ॥೨೫-೨೬॥ "ಎಲೈ ರಘುರಾಮನೇ ! ಇಂತು ಗಿರಿರಾಜ ಕುಮರಿಯಾದ ಪಾರ್ವತಿಯ ವಿಸ್ತಾರವಾದ ಚರಿ ತ್ರೆಯು ನನ್ನಿಂದರುಹಲ್ಪಟ್ಟಿತು. ಇನ್ನು ಲಕ್ಷ್ಮಣನಿಂದೊಡಗೂಡಿದ ನೀನು ಶೈಲೇಂದ್ರನ ಜ್ಯೇಷ್ಠಪುತ್ರಿಯಾದ ಗಂಗಾ ದೇವಿಯ ಉತ್ಪತ್ತಿಯನ್ನು ಕೇಳುವವನಾಗು" ॥ ೨೭ ॥

ಇಂತಿದು ಪಾರ್ವತೀ ಪ್ರಕೋಪವರ್ಣನವೆಂಬ ಮುಪ್ಪತ್ತೇಳನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ತಪ್ಯಮಾನೇ ತಪೋ ದೇವೇ ದೇವಾಸ್ಸರ್ಷಿಗಣಾಃ ಪುರಾ ॥ ಸೇನಾಪತಿಮ
ಭೀಪ್ಸಂತಃ ಪಿತಾಮಹಮುಪಾಗಮನ್ ॥ ೧ ॥ ತತೋಽಬ್ರುವನ್ ಸುರಾಸ್ಸರ್ವೇ
ಭಗವಂತಂ ಪಿತಾಮಹಂ॥ ಪ್ರಣಿಪತ್ಯ ಶುಭಂ ವಾಕ್ಯಂ ಸೇಂದ್ರಾಸ್ಸಾಗ್ನಿ ಪುರೋ
ಗಮಾಃ ॥೨॥ ಯೋ ನ ಸೇನಾಪತಿರ್ದೇವ ದತ್ತೋ ಭಗವತಾ ಪುರಾ॥ (ಸ ನ
ಜಾತೋಽದ್ಯ ಭಗವನ್ನಸ್ಮದ್ವೈರಿನಿಬರ್ಹಣಃ ॥ ತತ್ಪಿತಾ ಭಗವಾನ್ ಶರ್ವೋ
ಹಿಮವಚ್ಛಿಖರೇಽದ್ಯವೈ ॥) ತಪಃ ಪರಮಮಾಸ್ಥಾಯ ತಪ್ಯತೇಸ್ಮ ಸಹೋ

---

ದೇವೇ - ಪರಮೇಶ್ವರನು, ಪುರಾ - ಪೂರ್ವದಲ್ಲಿ, ತಪಃ-ತಪಸ್ಸನ್ನು. ತಪ್ಯಮಾನೇಸತಿ-ಮಾಡುತ್ತಿರಲು, ಸರ್ಷಿಗಣಾಃ - ಋಷಿ ಸಮೂಹದಿಂದೊಡಗೂಡಿದ, ದೇವಾಃ - ದೇವತೆಗಳು, ಸೇನಾಪತಿಂ - ಸೈನ್ಯಾಧಿಪತಿಯನ್ನು, ಅಭೀಪ್ಸಂತಃ - ಕೋರಿ, ಪಿತಾಮಹಂ - ಬ್ರಹ್ಮದೇವನನ್ನು ಕುರಿತು, ಉಪಾಗಮನ್ - ಬಂದರು. ॥ ೧ ॥ ತತಃ - ಬಳಿಕ, ಸಾಗ್ನಿಪುರೋಗಮಾಃ- ಅಗ್ನಿಯೇ ಮೊದಲಾದ ದಿಕ್ಪಾಲಕರಿಂದೊಡಗೂಡಿದ, ಸೇಂದ್ರಾಃ - ಇಂದ್ರಸಮೇತರಾದ, ಸರ್ವೇ - ಸಮಸ್ತ, ಸುರಾಃ - ದೇವತೆಗಳು, ಭಗವಂತಂ - ಷಡ್ಗುಣೈಶ್ವರ್ಯ ಸಂಪನ್ನನಾದ, ಪಿತಾಮಹಂ ಬ್ರಹ್ಮನನ್ನು ಕುರಿತು, ಪ್ರಣಿಪತ್ಯ-ವಂದಿಸಿ ಅಬ್ರುವನ್-ನುಡಿದರು ॥೨॥ ಹೇದೇವ-ಎಲೈಬ್ರಹ್ಮನೆ,ಪುರಾ-ಪೂರ್ವದಲ್ಲಿ, ಯಃ - ಯಾವ ಪುರುಷನು, ನಃ - ನಮಗೆ, ಸೇನಾಪತಿಃ - ಸೈನ್ಯಾಧಿಪತಿಯಾಗಿ, ಭಗವತಾ- ಪೂಜ್ಯನಾದ ನಿನ್ನಿಂದ, ದತ್ತಃ-ಕೊಡಲ್ಪಟ್ಟನೋ, ಹೇಭಗವನ್ - ಎಲೈ ಪೂಜ್ಯನೆ. ಅಸ್ಮದ್ವೈರಿನಿಬರ್ಹಣಃ- ನಮ್ಮ ಶತ್ರುನಾಶಕನಾದ, ಸಃ - ಆ ಪುರುಷನು, ನಜಾತಃ - ಹುಟ್ಟಲಿಲ್ಲ, ತತ್ಪಿತಾ-ಆತನ ತಂದೆಯಾದ, ಭಗವಾನ್ - ಪೂಜ್ಯನಾದ, ಸಶರ್ವಃ - ಆ ಶಿವನು, ಅದ್ಯವೈ- ಈಗಲೂ, ಹಿಮವಚ್ಛಿಖರೇ- ಹಿಮವತ್ಪರ್ವತ ಶೃಂಗದಲ್ಲಿ, ಉಮಯಾಸಹ - ಪಾರ್ವತಿಯೊಡನೆ, ಪರಮಂ ಬಹಳವಾದ, ತಪಃ-

---

ಎಲೈ, ರಾಮಚಂದ್ರನೇ ! ದೇವದೇವನಾದ ಪಾರ್ವತೀರಮಣನು ತಪವಂಗೈಯುತ್ತಿರಲು ಪೂರ್ವದಲ್ಲಿಯೇ ಸೇನಾಪತಿಯನ್ನು ಬಯಸಿದ ದೇವತೆಗಳೆಲ್ಲರೂ ಪೂಜ್ಯನಾದ ಪಿತಾಮಹನಿದ್ದೆಡೆಗೆ ಬಂದು, " ಎಲೈ ಬ್ರಹ್ಮದೇವನೇ ! ಯಾರು ನಮ್ಮ ಸೇನಾಪತಿಯೋ ಅವನು ಪರಮೇಶ್ವರನಿಂದ ಪೂರ್ವದಲ್ಲಿಯೇ ದಯಪಾಲಿತನಾದನು. ಆದರೆ ನಮ್ಮ ವೈರಿಗಳನ್ನು ಸದೆಬಡಿಯುವ ಆ ಸೇನಾಧಿಪತಿಯು ಇನ್ನೂ ಹುಟ್ಟಲಿಲ್ಲವು. ಆತನ ತಂದೆಯಾದ ರೋ ಉಮೆಯೊಡನೆ ಹಿಮವತ್ಪರ್ವತದ ಶಿಖರದಲ್ಲಿ ತಪವಂಗೈಯುತ್ತಿರುವನು. ಈ ಸೇನಾಧಿಪತಿಪ್ರಾಪ್ತಿ ವಿಷಯದಲ್ಲಿ ಪ್ರಪಂಚದ ಹಿತಕ್ಕೋಸುಗ ಮುಂದೇನು

ಮಯಾ ॥ ೩ ॥ ಯದತ್ರಾನಂತರಂ ಕಾರ್ಯಂ ಲೋಕಾನಾಂ ಹಿತಕಾಮ್ಯಯಾ॥ ಸಂವಿಧತ್ಸ್ವ ವಿಧಾನಜ್ಞ ತ್ವಂ ಹಿ ನಃ ಪರಮಾಗತಿಃ ॥ ೪ ॥ ದೇವತಾನಾಂ ವಚಶ್ಶ್ರುತ್ವಾ ಸರ್ವಲೋಕ ಪಿತಾಮಹಃ ॥ ಸಾಂತ್ವಯನ್ ಮಧುರೈರ್ವಾಕ್ಯೈ ಸ್ತ್ರಿದಶಾನಿದಮಬ್ರವೀತ್ ॥ ೫ ॥ ಶೈಲಪುತ್ರ್ಯಾ ಯದುಕ್ತಂ ತನ್ನಪ್ರಜಾ ಸ್ಸಂತು ಪತ್ನಿಷು ॥ ತಸ್ಯಾ ವಚನಮಕ್ಲಿಷ್ಟಂ ಸತ್ಯಮೇತನ್ನಸಂಶಯಃ ॥ ೬ ॥ ಇಯಮಾಕಾಶಗಾ ಗಂಗಾ ಯಸ್ಯಾಂ ಪುತ್ರಂ ಹುತಾಶನಃ ॥ ಜನಯಿಷ್ಯತಿ ದೇವಾನಾಂ ಸೇನಾಪತಿಮರಿಂದಮಂ ॥ ೭ ॥ ಜ್ಯೇಷ್ಠಾ ಶೈಲೇಂದ್ರ ದುಹಿತಾ ಮಾನಯಿಷ್ಯತಿ ತತ್ಸುತಂ ॥ ಉಮಾಯಾಸ್ತದ್ಬಹುಮತಂ ಭವಿಷ್ಯತಿ ನಸಂ

---

ತಪಸ್ಸನ್ನು, ಆಸ್ಥಾಯ - ಅಂಗೀಕರಿಸಿ, ತಪ್ಯತೇಸ್ಮ-ಅನುಷ್ಠಾನ ಮಾಡಿರುವನಷ್ಟೆ. ॥೩॥ ಅತ್ರ- ಈ ವಿಷಯದಲ್ಲಿ, ಅನಂತರಂ - ಆ ಬಳಿಕ, ಲೋಕಾನಾಂ - ಲೋಕಗಳಿಗೆ, ಹಿತಕಾಮ್ಯಯಾ-ಹಿತವನ್ನುಂಟುಮಾಡಬೇಕೆಂಬಿಚ್ಛೆಯಿಂದ, ಯತ್ - ಯಾವ ಕಾರ್ಯವು, ಕಾರ್ಯಂ-ಮಾಡತಕ್ಕುದೋ, ಹೇವಿಧಾನಜ್ಞ - ಎಲೈ ಕಾರ್ಯಜ್ಞನಾದವನೆ, ತತ್-ಆ ಕಾರ್ಯವನ್ನು, ಸಂವಿಧತ್ಸ್ವ- ಆಲೋಚನೆಮಾಡು, ತ್ವಂ - ನೀನು, ನಃ - ನಮಗೆ, ಪರಮಾ - ಉತ್ಕೃಷ್ಟವಾದ, ಗತಿಃ- ಶರಣ್ಯನಷ್ಟೆ, ॥೪॥ ದೇವತಾನಾಂ - ದೇವತೆಗಳ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವಲೋಕಪಿತಾಮಹಃ - ಸರ್ವಲೋಕಗಳಿಗೂ ಸೃಷ್ಟಿಕರ್ತನಾದ ಬ್ರಹ್ಮನು, ಮಧುರೈಃ - ಇಂಪಾದ, ವಾಕ್ಯೈಃ - ಮಾತುಗಳಿಂದ, ತ್ರಿದಶಾನ್ - ದೇವತೆಗಳನ್ನು, ಸಾಂತ್ವಯನ್ - ಸಮಾಧಾನಗೊಳಿಸುತ್ತ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥೫॥ ಶೈಲಪುತ್ರ್ಯಾ - ಪಾರ್ವತಿಯಿಂದ, (ದೇವಾಃ - ದೇವತೆಗಳು,) ಪತ್ನಿಷು-ಸ್ವಪತ್ನಿಗಳಲ್ಲಿ, ಅಪ್ರಜಾಃ - ಮಕ್ಕಳಿಲ್ಲದವರು, ಸಂತು-ಆಗಲಿ ಎಂಬವಾಗಿ, ಯದುಕ್ತಂ- ಯಾವದು ಹೇಳಲ್ಪಟ್ಟಿತೋ, ತಸ್ಯಾಃ - ಆ ಪಾರ್ವತಿಯ, ಏತದ್ವಚನಂ - ಈ ಮಾತು, ಸತ್ಯಂ-ಸಫಲವು, ಅಕ್ಲಿಷ್ಟಂ - ವ್ಯರ್ಥವಲ್ಲ, ಸಂಶಯಃ- ಸಂಶಯವು, ನ-ಇಲ್ಲ ॥ ೬ ॥ ಯಸ್ಯಾ-ಯಾವ ಗಂಗೆಯಲ್ಲಿ, ಹುತಾಶನಃ - ಅಗ್ನಿಯು, ದೇವಾನಾಂ - ದೇವತೆಗಳಿಗೆ, ಸೇನಾಪತಿಂ ಸೈನ್ಯಾಧಿಪತಿಯಾದ, ಅರಿಂದಮಂ - ಶತೃಸಂಹಾರಕನಾದ, ಯಂಪುತ್ರಂ - ಯಾವ ಮಗನನ್ನು, ಜನಯಿಷ್ಯತಿ-ಹುಟ್ಟಿಸುತ್ತಾನೊ, ಇಯಂ - ಈ, ಜ್ಯೇಷ್ಠಾ - ಜ್ಯೇಷ್ಠಳಾದ, ಶೈಲೇಂದ್ರದುಹಿತಾ - ಹಿಮವಂತನ ಮಗಳಾದ, ಆಕಾಶಗಾ - ಆಕಾಶಗಾಮಿನಿಯಾದ, ಗಂಗಾ-ಗಂಗಾನದಿಯು, ತತ್ಸುತಂ - ಆ ಮಗನನ್ನು, ಮಾನ

---

ಮಾಡಬೇಕೋ ಅದನ್ನು ಆಜ್ಞಾಪಿಸು. ಸಕಲವನ್ನೂ ತಿಳಿದ ನೀನು ನಮಗೆ ಉತ್ತಮನಾದ ಶರಣ್ಯನು " ಎಂದು ಸಾಷ್ಟಾಂಗ ನಮಸ್ಕಾರವಂಗೈದು ಬಿನ್ನವಿಸಿಕೊಂಡರು. ॥ ೧ - ೪ ॥ ಇಂತು ನುಡಿದ ದೇವತೆಗಳ ವಚನವನ್ನು ಕೇಳಿದ ಸಕಲ ಲೋಕಪಿತಾಮಹನಾದ ಬ್ರಹ್ಮದೇವನು, ಮೃದು ಮಧುರವಾದ ವಾಕ್ಯಗಳಿಂದ ಅವರನ್ನು ಸಂತೈಸಿ ಇಂತೆಂದನು. "ಅಯ್ಯಾ ದೇವತೆಗಳಿರಾ! ಉಮೆಯು 'ನಿಮ್ಮ ಪತ್ನಿಯರಲ್ಲಿ ಅಪುತ್ರವಂತರಾಗಿರಿ' ಎಂದು ಶಪಿಸಿದ ಉಕ್ತಿಯು ಸತ್ಯವಾಗುವುದೆಂಬದರಲ್ಲಿ ಸಂಶಯವಿಲ್ಲವು. ಈ ಯಜ್ಞೇಶ್ವರನು ಆಕಾಶಗಾಮಿನಿಯಾದ ಈ ಗಂಗೆಯಲ್ಲಿ ದೇವಸೇನಾಧಿಪತಿಯೂ, ಶತೃಸಂಹಾರಕನೂ, ಆದ

ಶಯಃ ॥ ೮ ॥ ತಚ್ಛ್ರುತ್ವಾ ವಚನಂ ತಸ್ಯ ಕೃತಾರ್ಥಾ ರಘುನಂದನ ॥ ಪ್ರಣಿಪತ್ಯ ಸುರಾಸ್ಸರ್ವೇ ಪಿತಾಮಹಮಪೂಜಯನ್ ॥ ೯ ॥ ತೇ ಗತ್ವಾ ಪರ್ವತಂ ರಾಮ ಕೈಲಾಸಂ ಧಾತುಮಂಡಿತಂ ॥ ಅಗ್ನಿಂ ನಿಯೋಜಯಾಮಾಸುಃ ಪುತ್ರಾರ್ಥಂ ಸರ್ವದೇವತಾಃ ॥ ೧೦ ॥ ದೇವಕಾರ್ಯಮಿದಂ ದೇವ ಸಂವಿಧತ್ಸ್ವ ಹುತಾಶನ ॥ ಶೈಲಪುತ್ರ್ಯಾಂ ಮಹಾತೇಜೋ ಗಂಗಾಯಾಂ ತೇಜ ಉತ್ಸೃಜ ॥ ೧೧ ॥ ದೇವತಾನಾಂ ಪ್ರತಿಜ್ಞಾಯ ಗಂಗಾಮಭ್ಯೇತ್ಯ

ಯಿಷ್ಯತಿ - ಬಹುಮಾನಿಸುತ್ತಾಳೆ, (ಅಥವಾ ಗರ್ಭದಲ್ಲಿ ಧರಿಸುತ್ತಾಳೆ,) ತತ -ಆ ಗರ್ಭಧಾರಣವು, ಉಮಾಯಾಃ - ಪಾರ್ವತಿಗೂ, ಬಹುಮತಂ - ಬಹಳ ಇಷ್ಟವಾದುದು, ಭವಿಷ್ಯತಿ-ಆಗುವದು, ಅತ್ರ-ಈ ಅರ್ಥದಲ್ಲಿ, ಸಂಶಯಃ - ಸಂದೇಹವು, ನ ಇಲ್ಲ ॥೭-೮॥ ಹೇ ರಘುನಂದನ-ಎಲೈ ರಘುನಂದನನೆ, ತಸ್ಯ - ಆ ಚತುರ್ಮುಖಬ್ರಹ್ಮನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸರ್ವೇ ಸಮಸ್ತರಾದ, ಸುರಾಃ - ದೇವತೆಗಳು, ಕೃತಾರ್ಥಾಃ - ಕೃತಪ್ರಯೋಜನರಾಗಿ, ಪಿತಾಮಹಂ-ಬ್ರಹ್ಮನನ್ನು ಪ್ರಣಿಪತ್ಯ - ನಮಸ್ಕರಿಸಿ, ಅಪೂಜಯನ್ - ಶ್ಲಾಘಿಸಿದರು. ॥ ೯ ॥ ಹೇರಾಮ-ಎಲೈ ಶ್ರೀರಾಮನೆ, ತೇಸರ್ವದೇವತಾಃ - ಆ ಸಮಸ್ತ ದೇವತೆಗಳು, ಧಾತುಮಂಡಿತಂ - ಗೈರಿಕಾದಿ ಧಾತುಗಳಿಂದಲಂಕೃತವಾದ, ಕೈಲಾಸಪರ್ವತಂ - ಕೈಲಾಸಪರ್ವತವನ್ನು ಕುರಿತು, ಗತ್ವಾ-ಹೋಗಿ, ಅಗ್ನಿಂ-ಅಗ್ನಿಯನ್ನು, ಪುತ್ರಾರ್ಥಂ - ಪುತ್ರನಿಮಿತ್ತವಾಗಿ, ನಿಯೋಜಯಾಮಾಸುಃ-ಬೇಡಿದರು. ॥೧೦॥ ಹೇದೇವ - ಎಲೈ ಸ್ವಾಮಿಯೆ. ಹೇಹುತಾಶನ - ಎಲೈ ಅಗ್ನಿಯ, ಇದಂದೇವಕಾರ್ಯಂ-ಈ ದೇವತೆಗಳ ಕಾರ್ಯವನ್ನು, ಸಂವಿಧತ್ಸ್ವ - ಆಲೋಚಿಸು, ಹೇಮಹಾತೇಜಃ - ಎಲೈ ಮಹಾತೇಜೋವಂತನೆ, ಶೈಲಪುತ್ರ್ಯಾಂ - ಹಿಮವಂತನ ಮಗಳಾದ, ಗಂಗಾಯಾಂ - ಗಂಗೆಯಲ್ಲಿ, ತೇಜಃ - ವೀರ್ಯವನ್ನು, ಉತ್ಸೃಜ್ಯ - ಬಿಡು, ॥೧೧॥ ದೇವತಾನಾಂ - ದೇವತೆಗಳಿಗಾಗಿ, ಪಾವಕಃ - ಅಗ್ನಿಯು, ಪ್ರತಿಜ್ಞಾಯ - ಹಾಗೆಯೇ ಆಗಲೆಂದು ಪ್ರತಿಜ್ಞೆಯಂಗೈದು, ಗಂಗಾಂ - ಗಂಗಾನದಿಯನ್ನು ಕುರಿತು, ಅಭ್ಯೇತ್ಯ - ಬಂದು, ಹೇದೇವೀ - ಎಲೈ ಗಂಗೆಯೇ, ಗರ್ಭಂ- ಗರ್ಭವನ್ನು, ಧಾರಯ-ಧರಿಸು, ಇದಂ

ಪುತ್ರನನ್ನು ಸೃಜಿಸುವನು ಶೈಲೇಂದ್ರನ ಜ್ಯೇಷ್ಠಕುಮರಿಯಾದ ಈಕೆಯು ಆ ಕುಮಾರನನ್ನು ಬಹುಮಾನಿಸುವಳು. ಈ ಕಾರ್ಯವು ಗಿರಿಜೆಗೂ ಸಮ್ಮತವಾಗುವುದೆಂಬದರಲ್ಲಿ ಸಂಶಯವಿಲ್ಲ.'' ಎಂದನು. ॥ ೫ - ೮ ॥ ಇಂತು ನುಡಿದ ಚತುರ್ಮುಖಬ್ರಹ್ಮನ ನುಡಿಗಳನ್ನು ಕೇಳಿ ದೇವತೆಗಳೆಲ್ಲರೂ ಕೃತಕೃತ್ಯರಾಗಿ ಆತನಿಗೆ ನಮಸ್ಕಾರಪೂರ್ವಕವಾದ ಪೂಜೆಯನ್ನೆಸಗಿದರು. ॥ ೯ ॥ ಎಲೈ ರಾಮಚಂದ್ರನೇ ! ಆ ಬಳಿಕ ದೇವತೆಗಳೆಲ್ಲರೂ ಗೈರಿಕಾದಿ ನಾನಾಧಾತುಗಳಿಂದ ಕಂಗೊಳಿಸುತ್ತಿರುವ ಕೈಲಾಸ ಪರ್ವತವನ್ನು ಸೇರಿ, ಕುಮಾರೋತ್ಪತ್ತಿಗೋಸುಗ ಯಜ್ಞೇಶ್ವರನನ್ನು ನಿಯೋಗಿಸಿ, ಅವನನ್ನು ಕುರಿತಿಂತೆಂದರು. ''ಎಲೈ ಅಗ್ನಿಯೇ ! ಇದು ದೇವತೆಗಳ ಕಾರ್ಯವು; ಆದುದರಿಂದ ನೀನೀ ಕೆಲಸವನ್ನು ಮಾಡು; ಗಿರಿರಾಜ ಕುಮರಿಯಲ್ಲಾದ ಶಿವತೇಜಸ್ಸಿರುವುದೋ ಅದನ್ನು ಗಂಗಾದೇವಿಯಲ್ಲಿ ತ್ಯಜಿಸುವವನಾಗು''. ॥೧೧॥ ಇಂತೆಂದ ದೇವತೆಗಳ ನುಡಿಗಳನ್ನು ಕೇಳಿದ ಅಗ್ನಿಯು ಗಂಗೆಯು

ಪಾವಕಃ || ಗರ್ಭಂ ಧಾರಯ ವೈ ದೇವಿ ದೇವತಾನಾಮಿದಂ ಪ್ರಿಯಂ || ೧೨ || ತಸ್ಯ ತದ್ವಚನಂ ಶೃತ್ವಾ ದಿವ್ಯಂ ರೂಪಮಧಾರಯತ್ || ದೃಷ್ಟ್ವಾ ತನ್ಮಹಿಮಾನಂ ಸ ಸಮಂತಾದವಕೀರ್ಯತ || ೧೩ || ಸಮಂತತಸ್ತದಾ ದೇವೀಮಭ್ಯಷಿಂಚತ ಪಾವಕಃ || ಸರ್ವಸ್ರೋತಾಂಸಿ ಪೂರ್ಣಾನಿ ಗಂಗಾಯಾ ರಘುನಂದನ || ೧೪ || ತಮುವಾಚ ತತೋ ಗಂಗಾ ಸರ್ವದೇವ ಪುರೋಹಿತಂ || ಅಶಕ್ತಾ ಧಾರಣೇದೇವ ತವತೇಜ ಸ್ಸಮುದ್ಧತಂ || ದಹ್ಯಮಾನಾಗ್ನಿನಾ ತೇನ ಸಂಪ್ರವ್ಯಥಿತಚೇತಸಾ || ೧೫ || ಅಥ ಬ್ರವೀದಿದಂ ಗಂಗಾಂ ಸರ್ವದೇವ ಹುತಾಶನಃ || ಇಹ ಹೈಮವತೇ ಪಾದೇ ಗರ್ಭೋಽಯಂ ಸನ್ನಿವೇ

ಈ ಗರ್ಭಧಾರಣವು, ದೇವತಾನಾಂ - ದೇವತೆಗಳಿಗೆ, ಪ್ರಿಯಂ - ಇಷ್ಟವಾದುದು, ಇತಿ-ಇಂತೆಂದು, ಅಬ್ರವೀತ್ - ನುಡಿದನು. || ೧೨ || ತಸ್ಯ - ಆ ಅಗ್ನಿಯ, ತದ್ವಚನಂ - ಆ ಮಾತನ್ನು, ಶೃತ್ವಾ-ಕೇಳಿ, ದಿವ್ಯಂ - ದೇವತಾ ಸಂಬಂಧವಾದ, ರೂಪಂ - ಸ್ತ್ರೀರೂಪವನ್ನು, ಅಧಾರಯತ್ - ಧರಿಸಿದಳು ಸಃ - ಆ ಅಗ್ನಿಯು, ತನ್ಮಹಿಮಾನಂ - (ಗೋ) ಆ ಗಂಗಾನದಿಯ ಸೌಂದರ್ಯಾತಿಶಯವನ್ನು, ದೃಷ್ಟ್ವಾ - ಕಂಡು, ಸಮಂತಾತ್ - ಎಲ್ಲೆಡೆಯಲ್ಲಿಯೂ, ಅವಕೀರ್ಯತ-ಶಿವತೇಜಸ್ಸನ್ನೆರಚಿದನು.||೧೩|| ಹೇ ರಘುನಂದನ - ಎಲೈ ಶ್ರೀರಾಮನೆ, ಪಾವಕ - ಅಗ್ನಿಯು, ತದಾ - ಆಗ, ದೇವೀಂ-ಗಂಗಾನದಿಯನ್ನು, ಸಮಂತತಃ-ಎಲ್ಲೆಡೆಯಲ್ಲಿಯೂ, ಅಭ್ಯಷಿಂಚತ-ವ್ಯಾಪಿಸುವಂತೆ ಮಾಡಿದನು, ಗಂಗಾಯಾಃ-ಗಂಗಾನದಿಯ, ಸರ್ವಸ್ರೋತಾಂಸಿ-ಸಮಸ್ತಪ್ರವಾಹಗಳೂ, ಪೂರ್ಣಾನಿ ತುಂಬಿದವು. || ೧೪ || ತತಃ-ಬಳಿಕ, ಗಂಗಾ - ಗಂಗಾನದಿಯು, ಅಗ್ನಿನಾ-ಅಗ್ನಿತುಲ್ಯವಾದ, ತೇನ-ಆ ಶಿವತೇಜಸ್ಸಿನಿಂದ, ದಹ್ಯಮಾನಾ-ದಹಿಸಲ್ಪಡುತ್ತ, ಸಂಪ್ರವ್ಯಥಿತಚೇತಸಾ - ಬಹಳವಾದ ವ್ಯಥೆಗೊಂಡ ಬುದ್ಧಿಯುಳ್ಳವಳಾಗಿ, ಸರ್ವದೇವಪುರೋಹಿತಂ - ಸಮಸ್ತ ದೇವತಾಗ್ರೇಸರನಾದ, ತಂ - ಆ ಅಗ್ನಿಯು ಕುರಿತು, ಹೇ ದೇವ - ಎಲೈ ಅಗ್ನಿಯೆ, ಸಮುದ್ಧತಂ - ಪ್ರವರ್ಧಮಾನವಾದ, ತವ - ನಿನ್ನ, ತೇಜಃ-ತೇಜಸ್ಸಿನ, ಧಾರಣೇ - ಧರಿಸುವದರಲ್ಲಿ, ಅಶಕ್ತಾ-ಬಲಹೀನಳು, ಅಸ್ಮಿ - ಆಗಿರುವೆನು, ಇತಿ - ಇಂತೆಂದು, ಉವಾಚ - ಹೇಳಿದಳು, || ೧೫ || ಅಥ - ಬಳಿಕ, ಸರ್ವದೇವ ಹುತಾಶನಃ - ಸಮಸ್ತ ದೇವತೆಗಳ ಹವಿರ್ಭಾಗಗಳನ್ನು ವಹಿಸುವ ಅಗ್ನಿಯು, ಗಂಗಾಂ - ಗಂಗಾನದಿಯನ್ನು ಕುರಿತು, ಇಹ - ಇಲ್ಲಿ,

ಬಳಿಕ್ಕೈದಿ, "ಎಲೌ ಗಂಗಾದೇವಿಯೆ ! ಗರ್ಭವನ್ನು ಧರಿಸುವವಳಾಗು ಇದು ದೇವತೆಗಳಿಗೆ ಇಷ್ಟವಾದದು" ಎಂದನು. ಗಂಗಾದೇವಿಯಿಾಮಾತನ್ನು ಕೇಳಿ, ಮನೋಹರವಾದ ರೂಪವನ್ನು ಧರಿಸಿದಳು. ಈ ಮೋಹಜನಕವಾದ ಗಂಗಾದೇವಿಯ ರೂಪವನ್ನು ನೋಡಿ, ಮೋಹಗೊಂಡ ಅಗ್ನಿಯು ಆ ಶಿವತೇಜಸ್ಸನ್ನು ಆಕೆಯ ಸರ್ವಾಂಗಗಳಲ್ಲಿಯೂ ಚೆಲ್ಲಿದನು. ಇದರಿಂದ ಆ ಗಂಗಾನದಿಯ ಪ್ರವಾಹಗಳೆಲ್ಲವೂ ಪೂರ್ಣಗೊಂಡಿತು. ||೧೪|| ಆಗ ಆ ಶಿವತೇಜಸ್ಸಿನಿಂದ ದಹ್ಯಮಾನಳಾದ ಗಂಗೆಯು ದೇವಪುರೋಹಿತನಾದ ಅಗ್ನಿಯನ್ನು ಕುರಿತು, "ಎಲೈ ಸ್ವಾಮಿಯೆ ! ಸಮುದ್ಧತವಾದ ಈ ತೇಜಸ್ಸನ್ನು ಧರಿಸಲು ನಾನು ಸಮರ್ಥಳಾಗಿಲ್ಲವು' ಎಂದಳು. ಇಂತೆನಲು ಅಗ್ನಿಯು "ದೇವೀ ; ಆ ಗರ್ಭವನ್ನು ಈ ಹಿಮವತ್ಪ್ರಾಂತ್ಯ

ಶ್ಯತಾಂ ॥೧೬॥ ಶ್ರುತ್ವಾತ್ವಗ್ನಿವಚೋಗಂಗಾ ತಂ ಗರ್ಭಮತಿಭಾಸ್ವರಂ ॥ ಉತ್ಸಸರ್ಜ ಮಹಾತೇಜಸ್ಸ್ರೋತೋಭ್ಯೋ ಹಿ ತದಾನಘ ॥ ೧೭ ॥ ಯದಸ್ಯಾಂ ನಿರ್ಗತಂ ತಸ್ಮಾತ್ತಪ್ತಜಾಂಬೂನದಪ್ರಭಂ॥ ಕಾಂಚನಂ ಧರಣೀಂ ಪ್ರಾಪ್ತಂ ಹಿರಣ್ಯಮಮಲಂ ಶುಭಂ ॥೧೮॥ ತಾಮ್ರಂ ಕಾರ್ಷ್ಣಾಯಸಂ ಚೈವ ತೈಕ್ಷ್ಣ್ಯಾದೇವಾಭಿಜಾಯತ ॥ ಮಲಂ ತಸ್ಯಾಭವತ್ತತ್ರ ತ್ರಪು ಸೀಸಕಮೇವಚ॥೧೯॥ ತದೇತದ್ಧರಣೀಂ ಪ್ರಾಪ್ಯ ನಾನಾಧಾತುರವರ್ಧತ ॥ ನಿಕ್ಷಿಪ್ತಮಾತ್ರೇ ಗರ್ಭೇತು ತೇಜೋಭಿರಭಿರಂಜಿತಂ ॥೨೦॥ ಸರ್ವಂ ಪರ್ವತ ಸನ್ನದ್ಧಂ

---

ಹೈಮವತೀ - ಹಿಮವತ್ಪರ್ವತ ಸಂಬಂಧವಾದ, ಪಾದೇ-ಪ್ರಾಂತ್ಯದಲ್ಲಿ, ಅಯಂಗರ್ಭಃ-ಈ ಗರ್ಭವು, ಸನ್ನಿವೇಶ್ಯತಾಂ - ಇರಿಸಲ್ಪಡಲಿ, ಇತಿ - ಇಂತೆಂದು, ಇದಂ - ಈ ಮಾತನ್ನು, ಅಬ್ರವೀತ್-ನುಡಿದನು. ॥೧೬॥ ಹೇಅನಘ-ಎಲೈ ಪಾಪರಹಿತನಾದ ಶ್ರೀರಾಮನೆ, ಗಂಗಾ-ಗಂಗಾನದಿಯು, ಅಗ್ನಿವಚಃ-ಅಗ್ನಿಯಮಾತನ್ನು, ಶ್ರುತ್ವಾ-ಕೇಳಿ,ಅತಿಭಾಸ್ವರಂ-ಅತಿಪ್ರಕಾಶಮಾನವಾದ, ತಂಗರ್ಭಂ-ಗರ್ಭಮಾನರೂಪವಾದ, ಮಹಾತೇಜಃ - ಶಿವತೇಜಸ್ಸನ್ನು, ತದಾ - ಆಗ, ಸ್ರೋತೋಭ್ಯಃ - ತರಂಗಗಳಿಂದ, ಉತ್ಸಸರ್ಜಹಿ - ಬಿಟ್ಟಳಷ್ಟೆ, ॥ ೧೭ ॥ ಅಸ್ಯಾಃ - ಈ ಗಂಗಾನದಿಯಿಂದ, ಯತ್ - ಯಾವ ಶಿವತೇಜಸ್ಸು, ನಿರ್ಗತಂ - ಹೊರಟಿತೋ, ತಸ್ಮಾತ್ - ಅದರಿಂದ, ತಪ್ತಜಾಂಬೂನದಪ್ರಭಂ, ತಪ್ತ-ಕಾಯಿಸಲ್ಪಟ್ಟ, ಜಾಂಬೂನದ - ಅಪರಂಜಿಯ, ಪ್ರಭಂ - ಕಾಂತಿಯುಳ್ಳ, ಕಾಂಚನಂ-ಭಂಗಾರವು, ಧರಣೀಂ - ಭೂಮಿಯನ್ನು, ಪ್ರಾಪ್ತಂ - ಹೊಂದಿತು, ಅಮಲಂ- ನಿರ್ಮಲವಾದ, ಶುಭಂ-ಶುಭಕರವಾದ ತೇಜಸ್ಸು, ಹಿರಣ್ಯಂ - ರಜಿತವಾದುದು, ಅಭೂತ್ - ಆಯಿತು. ॥೧೮॥ ತೈಕ್ಷ್ಣ್ಯಾದೇವ - ಅತಿಯಾದ ಶಾಖದಿಂದಲೇ, ತಾಮ್ರಂ - ತಾಮ್ರವು, ಕಾರ್ಷ್ಣಾಯಸಂಚೈವ - ಕಬ್ಬಿಣವೂ, ಅಭಿಜಾಯತ - ಹುಟ್ಟಿತು, ತಸ್ಯ - ಆ ತೇಜಸ್ಸಿನ. ಮಲಂ - ಮಾಲಿನ್ಯವು, ತತ್ರ - ಆ ಪ್ರದೇಶದಲ್ಲಿ, ತ್ರಪು-ಕಂಚೂ, ಸೀಸಕಂ - ತಗರವೂ, ಅಭವತ್ - ಆಯಿತು, ॥೧೯॥ ತದೇತತ್ - ಆ ತೇಜಸ್ಸು, ಧರಣೀಂ - ನೆಲವನ್ನು, ಪ್ರಾಪ್ಯ - ಹೊಂದಿ, ನಾನಾಧಾತುಃ - ನಾನಾಬಗೆಯಾದ ತಾಮ್ರಾದಿ ಧಾತುರೂಪವಾದುವಾಗಿ, ಅವರ್ಧತ-ವೃದ್ಧಿಹೊಂದಿತು. ॥೨೦॥ ಗರ್ಭೇ-ಗರ್ಭವು, ನಿಕ್ಷಿಪ್ತಮಾತ್ರೇ-ನಿವೇಶಿತವಾಗಲು, ತೇಜೋಭಿಃ-ಪ್ರಕಾಶಗಳಿಂದ, ಅಭಿರಂಜಿತಂ-ರಾರಾಜಿಸುತ್ತಿರುವ, ಪರ್ವತಸನ್ನದ್ಧಂ-ಪರ್ವತ

---

ದಲ್ಲಿಯೇ ಇಡುವವಳಾಗು' ಎಂದನು. ಆಗಲಾ ಗಂಗೆಯು ಅಗ್ನಿದೇವನ ಮಾತಿನಂತೆ ಮಹಾಪ್ರಕಾಶಮಾನವಾದ ಆ ಗರ್ಭವನ್ನು ತನ್ನ ಪ್ರವಾಹಗಳಿಂದ ಆ ಹಿಮವತ್ಪರ್ವತದ ತಪಲಿನಲ್ಲಿ ಬಿಟ್ಟವಳಾದಳು. ॥೧೭॥ ಈ ಗಂಗಾನದಿಯಿಂದ ಯಾವ ರುದ್ರಸಂಬಂಧವಾದ ತೇಜಸ್ಸು ಹೊರಟಿತೋ, ಅದರಿಂದ ಬಹು ಪ್ರಕಾಶಮಾನವಾದ ಭಂಗಾರವೂ, ಶುದ್ಧವಾದ ರಜತವೂ ಉಂಟಾದವು. ಆ ತೇಜಸ್ಸಿನ ಔಷ್ಣ್ಯಾತಿಶಯದಿಂದ ತಾಮ್ರ, ಕಬ್ಬಿಣಗಳುತ್ಪನ್ನವಾದವು ಅದರ ಮಾಲಿನ್ಯವೇ ತಗರ ಸೀಸಗಳಾಯಿತು. ಈ ರೀತಿ ಆ ತೇಜಸ್ಸು ಭೂಮಿಯನ್ನು ಸೇರಿ ವಿಧವಿಧ ಧಾತುಗಳಾದವು ॥೨೦॥ ಗಂಗಾದೇವಿಯಿಂದ ಆ ಹಿಮವತ್ಪರ್ವತದ ತಪ್ಪಲಿನಲ್ಲಿ ಗರ್ಭವು ನಿವೇಶಿತವಾಗಲು, ಶಿವತೇಜಸ್ಸಿನಿಂದ ರಾರಾಜಿಸುವ ಪರ್ವತೋಪಮವಾದ

ಸೌವರ್ಣಮಭವದ್ವನಂ ॥ ಜಾತರೂಪಮಿತಿಖ್ಯಾತಂ ತದಾಪ್ರಭೃತಿ ರಾಘವ ॥ ೨೧ ॥ ಸುವರ್ಣಂ ಪುರುಷವ್ಯಾಘ್ರ ಹುತಾಶನಸಮಪ್ರಭಂ ॥ ತೃಣ ವೃಕ್ಷ ಲತಾ ಗುಲ್ಮಂ ಸರ್ವಂ ಭವತಿ ಕಾಂಚನಂ ॥೨೨॥ ತಂ ಕುಮಾರಂ ತತೋ ಜಾತಂ ಸೇಂದ್ರಾಸ್ಸಹ ಮರುದ್ಗಣಾಃ ॥ ಕ್ಷೀರಸಂಭಾವನಾರ್ಥಾಯ ಕೃತ್ತಿಕಾಸ್ಸಮಯೋಜಯನ್ ॥೨೩॥ ತಾಃ ಕ್ಷೀರಂ ಜಾತಮಾತ್ರಸ್ಯ ಕೃತ್ವಾ ಸಮಯಮುತ್ತಮಂ ॥ ದದುಃ ಪುತ್ರೋಽಯಮಸ್ಮಾಕಂ ಸರ್ವಾಸಾಮಿತಿ ನಿಶ್ಚಿತಾಃ ॥೨೪॥ ತತಸ್ತು ದೇವತಾಸ್ಸರ್ವಾಃ ಕಾರ್ತಿಕೇಯ ಇತಿ ಬ್ರುವನ್॥ ಪುತ್ರಸ್ತ್ರೈಲೋಕ್ಯವಿಖ್ಯಾತೋ ಭವಿಷ್ಯತಿ ನ ಸಂಶಯಃ ॥ ೨೫ ॥ ತೇಷಾಂ

---

ದಿಂದೊಡಗೂಡಿದ, ಸರ್ವಂ-ಸಮಸ್ತ, ವನಂ-ಶರವಣವು, ಸೌವರ್ಣಂ-ಸುವರ್ಣವಿಕಾರವಾದುದು, ಅಭವತ್-ಆಯಿತು ॥೨೧॥ ಹೇರಾಘವ-ಎಲೈ ಶ್ರೀರಾಮನೆ, ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೆ, ಹುತಾಶನಸಮಪ್ರಭಂ - ಅಗ್ನಿಗೆ ಸಮಾನವಾದ ತೇಜಸ್ಸುಳ್ಳ, ಸುವರ್ಣಂ-ಸುವರ್ಣವು, ತದಾಪ್ರಭೃತಿ ಆಕಾಲವೊದಲು, ಜಾತರೂಪಮಿತಿ-ಜಾತರೂಪವೆಂದು, ಖ್ಯಾತಂ- ಪ್ರಖ್ಯಾತವಾಯಿತು. ॥೨೨॥ ಸರ್ವಂ-ಸಮಸ್ತ, ತೃಣವೃಕ್ಷಲತಾಗುಲ್ಮಂ-ತೃಣ-ಹುಲ್ಲು, ವೃಕ್ಷ-ಗಿಡಗಳೂ, ಲತಾ-ಬಳ್ಳಿಗಳೂ, ಗುಲ್ಮಂ-ಬೇಲಿಗಳೂ, ಕಾಂಚನಂ-ಭಂಗಾರವಿಕಾರವಾಗಿ, ಭವತಿ-ಆಯಿತಷ್ಟೆ ॥ ೨೨ ॥ ತತಃ-ಬಳಿಕ, ಜಾತಂ-ಹುಟ್ಟಿದ, ತಂಕುಮಾರಂ-ಆ ಶಿಶುವನ್ನು ಕುರಿತು, ಸೇಂದ್ರಾಃ - ಇಂದ್ರನಿಂದಲೂ ಸಹಮರುದ್ಗಣಾಃ-ಮರುದ್ಗಣಗಳಿಂದಲೂ ಒಡಗೂಡಿದ ದೇವತೆಗಳ ಗುಂಪು, ಕ್ಷೀರಸಂಭಾವನಾರ್ಥಾಯ, ಕ್ಷೀರ-ಕ್ಷೀರದಿಂದ, ಸಂಭಾವನಾರ್ಥಾಯ-ವೃದ್ಧಿಕಾರ್ಯಕ್ಕೋಸುಗ, ಏಕಕಾಲದಲ್ಲಿ, ಕೃತ್ತಿಕಾಃ-ಷಟ್ಕೃತ್ತಿಕೆಗಳನ್ನು, ಸಮಯೋಜಯನ್-ನಿಯಮಿಸಿದರು. ॥೨೩॥ ತಾಃ-ಆ ಆರುಜನ ಕೃತ್ತಿಕೆಗಳು, ಅಸ್ಮಾಕಂ-ನಮಗೆ, ಸರ್ವಾಸಾಂ-ಎಲ್ಲರಿಗೂ, ಅಯಂ ಈಕುವರನು, ಪುತ್ರಃ-ಮಗನು, ಇತಿ-ಇಂತೆಂದು, ನಿಶ್ಚಿತಾಃ-ನಿಶ್ಚೈಸಿ, ಉತ್ತಮಂ-ಉತ್ತಮವಾದ, ಸಮಯಂ- ಸಂಕೇತವನ್ನು, ಕೃತ್ವಾ-ಮಾಡಿ, ಜಾತಮಾತ್ರಸ್ಯ-ಆಗತಾನೆ ಹುಟ್ಟಿದ ಹುಡುಗನಿಗೆ, ಕ್ಷೀರಂ-ಹಾಲನ್ನು, ದದುಃ ಕೊಡಲುದ್ಯುಕ್ತರಾದರು॥೨೪॥ ತತಃ-ಬಳಿಕ, ಸರ್ವಾಃ-ಸಮಸ್ತ, ದೇವತಾಸ್ತು-ದೇವತಗಳು, ಪುತ್ರಃ ಈ ಮಗನು, ಕಾರ್ತಿಕೇಯಇತಿ-ಕಾರ್ತಿಕೇಯನೆಂದು, ತ್ರೈಲೋಕ್ಯವಿಖ್ಯಾತಃ-ಮೂರುಲೋಕಗಳಲ್ಲಿಯೂ ಕೀರ್ತಿದಾಯಕನು, ಭವಿಷ್ಯತಿ ಆಗುವನು, ಸಂಶಯಃ-ಸಂಶಯವು, ನ-ಇಲ್ಲ, ಇತಿ-ಇಂತೆಂದು, ಅಬ್ರುವನ್-ಹೇಳಿದರು. ॥೨೫॥ ತೇಷಾಂ-

---

ಆ ಶರವಣವೆಲ್ಲವೂ ಸುವರ್ಣಮಯವಾಯಿತು. ॥ ೨೧ ॥ ಅಂದಿನಿಂದ ಅಗ್ನಿಸದೃಶವಾದ ಭಂಗಾರವು ಜಾತರೂಪವೆಂದು ಹೆಸರುಗೊಂಡಿತು. ಇಷ್ಟೇಯಲ್ಲದೆ ಆ ಶರವಣದಲ್ಲಿದ್ದ ಗಿಡ, ಮರ, ಬಳ್ಳಿಗಳೆಲ್ಲವೂ ಸುವರ್ಣಮಯವಾಯಿತು. ॥೨೨॥ ಆ ಬಳಿಕ ಇಂದ್ರನಿಂದೊಡಗೂಡಿದ ಮರುದ್ಗಣಗಳೆಲ್ಲರೂ ಆ ಶಿಶುವಿಗೆ ಸ್ತನ್ಯಪಾನವಂ ಗೈಸಲು, ಕೃತ್ತಿಕೆಯರೆಂಬ ಆರುಮಂದಿಯನ್ನು ನಿಯೋಗಿಸಿದರು. ಆ ಆರ್ವರೂ ಆ ಶಿಶುವು ತಮ್ಮೆಲ್ಲರಿಗೂ ಕುವರನೆಂದು ಭಾವಿಸಿ ಮೊಲೆಹಾಲನ್ನುಣಿಸಿದರು. ಆಗಲಾದೇವತೆಗಳು " ಈ ಶಿಶುವು ಮೂರು ಲೋಕಗಳಲ್ಲಿಯೂ ಕಾರ್ತಿಕೇಯನೆಂಬ ಹೆಸರಿನಿಂದ ಪ್ರಸಿದ್ಧನಾಗುವನೆಂಬುದರಲ್ಲಿ ಸಂಶಯವಿಲ್ಲವು" ಎಂದರು. ॥ ೨೫ ॥ ದೇವತೆಗಳಾಡಿದ ಈ ಮಾತನ್ನು ಕೇಳಿ ಆ ಕೃತ್ತಿ

ತದ್ವಚನಂ ಶ್ರುತ್ವಾ ಸ್ಕನ್ನಂ ಗರ್ಭಪರಿಸ್ರವೇ|| ಸ್ನಾಪಯನ್ ಪರಯಾ ಲಕ್ಷ್ಮ್ಯಾ ದೀಪ್ಯಮಾನಂ ಯಥಾನಲಂ || ೨೬ || ಸ್ಕಂದ ಇತ್ಯಬ್ರುವನ್ ದೇವಾಃ ಸ್ಕನ್ನಂ ಗರ್ಭ ಪರಿಸ್ರವಾತ್ || ಕಾರ್ತಿಕೇಯಂ ಮಹಾಭಾಗಂ ಕಾಕುತ್ಸ್ಥ ಜ್ವಲನೋಪಮಂ ||೨೭|| ಪ್ರಾದುರ್ಭೂತಂ ತತಃ ಕ್ಷೀರಂ ಕೃತ್ತಿಕಾನಾಮನುತ್ತಮಂ|| ಷಣ್ಣಾಂ ಷಡಾನನೋಭೂತ್ವಾ ಜಗ್ರಾಹ ಸ್ತನಜಂ ಪಯಃ ||೨೮|| ಗೃಹೀತ್ವಾ ಕ್ಷೀರಮೇಕಾಹ್ನಾ ಸುಕುಮಾರ ವಪುಸ್ತದಾ || ಅಜಯತ್ಸ್ವೇನ ವೀರ್ಯೇಣ ದೈತ್ಯ ಸೈನ್ಯ ಗಣಾನ್ ವಿಭುಃ || ೨೯ || ಸುರಸೇನಾಗಣಪತಿಂ ತತಸ್ತಮತುಲ

---

ಆ ದೇವತೆಗಳು, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಗರ್ಭಪರಿಸ್ರವೇ- ಗರ್ಭಸ್ರೋದಕದಲ್ಲಿ. ಸ್ಕನ್ನಂ-ಜಾರಿಬಂದ, ಪರಯಾ ಬಹಳವಾದ, ಲಕ್ಷ್ಮ್ಯಾ-ಕಾಂತಿಯಿಂದ ಕೂಡಿದ, ಅನಲಂಯಥಾ-ಅಗ್ನಿಯಂತೆ, ದೀಪ್ಯಮಾನಂ ಹೊಳೆಯುತ್ತಿರುವ, ತಂ-ಆ ಶಿಶುವನ್ನು, ಸ್ನಾಪಯನ್-ಸ್ನಾನಮಾಡಿಸಿದರು" ೨೬ ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ದೇವಾಃ-ದೇವತೆಗಳು, ಗರ್ಭಪರಿಸ್ರವಾತ್-ಗರ್ಭಸ್ರೋದಕದಿಂದ, ಸ್ಕಂನ್ನಂ ಜಾರಿಬಂದ, ಜ್ವಲನೋಪಮಂ ಅಗ್ನಿಗೆ ಸಮಾನವಾದ, ಮಹಾಭಾಗಂ-ಮಹಾನುಭಾವನಾದ, ಕಾರ್ತಿಕೇಯಂ-ಕೃತ್ತಿಕೆಯರಿಗೆ ಪುತ್ರನಾದ ಆ ಶಿಶುವನ್ನು, ಸ್ಕಂದ ಇತಿ-ಸ್ಕಂದನೆಂದು, ಅಬ್ರುವನ್-ನ ಡಿದರು || ೨೭ || ತತಃ-ಬಳಿಕ, ಷಣ್ಣಾಂ ಆರುಸಂಖ್ಯೆಯುಳ್ಳ, ಕೃತ್ತಿಕಾನಾಂ-ಕೃತ್ತಿಕಯರಿಗೆ, ಅನುತ್ತಮಂ-ಶ್ರೇಷ್ಠವಾದ, ಕ್ಷೀರಂ-ಹಾಲು, ಪ್ರಾದುರ್ಭೂತಂ-ಹುಟ್ಟಿತು, ಷಣ್ಣಾಂ - ಆರುಜನರ, ಸ್ತನಜಂ-ಸ್ತನಗಳಿಂದ ಹುಟ್ಟಿದ, ಪಯಃ - ಕ್ಷೀರವನ್ನು, ಷಡಾನನಃ-ಆರು ಮುಖಗಳುಳ್ಳವನು, ಭೂತ್ವಾ-ಆಗಿ, ಜಗ್ರಾಹ-ಗ್ರಹಿಸಿದನು || ೨೮ || ಕ್ಷೀರಂ-ಕ್ಷೀರವನ್ನು, ಏಕಾಹ್ನಾ-ಒಂದು ಹಗಲಿನಲ್ಲಿ, ಗೃಹೀತ್ವಾ-ಗ್ರಹಿಸಿ, ತದಾ-ಆಗಲೆ, ಸುಕುಮಾರವಪುಃ, ಸುಕುಮಾರ - ಮನೋಹರವಾದ, ವಪುಃ-ಶರೀರವುಳ್ಳವನಾಗಿ, ವಿಭುಃ ಸಾಮರ್ಥ್ಯವಂತನಾಗಿ, ಸ್ವೇನ-ಸ್ವಕೀಯವಾದ, ವೀರ್ಯೇಣ-ಪರಾಕ್ರಮದಿಂದ, ದೈತ್ಯಸೈನ್ಯಗಣಾನ್-ರಕ್ಕಸರ ದಂಡಿನ ತಂಡಗಳನ್ನು, ಅಜಯತ್-ಜಯಿಸಿದನು ||೨೯|| ತತಃ-ಬಳಿಕ, ಅಗ್ನಿ ಪುರೋಗಮಾಃ-ಅಗ್ನಿಯೇ ಮೊದಲಾದ, ಸುರಗಣಾಃ-ದೇವತೆಗಳ ಸಮೂಹಗಳು, ಸಮೇತ್ಯ-ಬಂದು, ಅತುಲದ್ಯುತಿಂ - ಅಸಮಾನ ಪ್ರಕಾಶನಾದ, ತಂ - ಆ ಕುಮಾರಸ್ವಾಮಿ

---

ಕೆಯರು, ಗರ್ಭದಿಂದ ಜನಿಸಿದವನೂ, ಅಗ್ನಿಯಂತೆ ಮಹಾ ತೇಜಸ್ಸಿನಿಂದೊಡಗೂಡಿದವನೂ ಆದ ಆ ಶಿಶುವಿಗೆ ಸ್ನಾನವಂಗೈಸಿದರು. ಬಳಿಕಲಾದೇವತೆಗಳು ಗರ್ಭಸ್ರಾವದಿಂದ ಜನಿಸಿ ಸ್ಕನ್ನನಾಗಿಯೂ, ಅಗ್ನಿಯಂತೆ ಪ್ರಜ್ವಲಿಸುತ್ತಿರುವವನಾಗಿಯೂ ಕೃತ್ತಿಕೆಯರ ಪುತ್ರನಾಗಿಯೂ ಇರುವ ಆ ಶಿಶುವಿಗೆ ಸ್ಕಂದನೆಂದು ಹೆಸರನ್ನಿಟ್ಟರು. || ೨೭ || ಆಗಲಾಕೃತ್ತಿಕೆಯರಿಗೆ ಶ್ರೇಷ್ಠವಾದ ಸ್ತನ್ಯ ವುತ್ಪನ್ನವಾಯಿತು, ಆಗ ಆಶಿಶುವು ಆರು ಮುಖವುಳ್ಳವನಾಗಿ, ಆ ಕೃತ್ತಿಕೆಯರಾರ್ವರಲ್ಲಿಯೂ ಸ್ತನ್ಯಪಾನ ಮಾಡಿದನು. ಹೀಗೆ ಒಂದೇದಿನ ಸ್ತನ್ಯಪಾನಮಾಡಿ ಸುಕುಮಾರದೇಹನಾದ ಆ ಸ್ಕಂದನು, ತನ್ನ ಪರಾಕ್ರಮದಿಂದ ಅಸುರಸೈನ್ಯಗಳ ಸಮೂಹವನ್ನು ಜಯಿಸಿದನು. || ೨೯ || ಆ ಬಳಿಕ ಅಗ್ನಿಯೇ

ಮ್ಯತಿಂ || ಅಭ್ಯಷಿಂಚರ್ಚ ಸುರಗಣಾ ಸ್ಸಮೇತ್ಯಾಗ್ನಿ ಪುರೋಗಮಾಃ ||೩೦||
ಏಷ ತೇ ರಾಮ ಗಂಗಾಯಾ ವಿಸ್ತರೋಭಿಹಿತೋ ಮಯಾ||ಕುಮಾರಸಂಭವ
ಶ್ಚೈವ ಧನ್ಯಃಪುಣ್ಯಸ್ತಥೈವಚ ||೩೧|| ಭಕ್ತಶ್ಚಯಃ ಕಾರ್ತಿಕೇಯೇ ಕಾಕುತ್ಸ್ಥ
ಭುವಿ ಮಾನವಃ || ಆಯುಷ್ಮಾನ್ ಪುತ್ರಪೌತ್ರೈಶ್ಚ ಸ್ಕಂದಸಾಲೋಕ್ಯತಾಂ
ವ್ರಜೇತ್ || ೩೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ಯನ್ನು, ಸುರಸೇನಾಗಣಪತಿಂ - ದೇವಸೈನ್ಯದ ಗುಂಪುಗಳಿಗೆ ಅಧಿಪತಿಯನ್ನಾಗಿ, ಅಭ್ಯಷಿಂಚನ್-ಪಟ್ಟಾಭಿಷೇಕಮಾಡಿದರು, || ೩೦ || ಹೇ ರಾಮ ಎಲೈ ಶ್ರೀರಾಮನೆ, ಗಂಗಾಯಾಃ-ಗಂಗಾನದಿಯ, ಏಷಃ-ಈ, ವಿಸ್ತರಃ-ಕಥಾವಿಸ್ತರವು, ಮಯಾ-ನನ್ನಿಂದ, ಅಭಿಹಿತಃ-ಹೇಳಲ್ಪಟ್ಟಿತು, ತಥೈವ - ಹಾಗೆಯೇ, ಪುಣ್ಯಃ - ಪುಣ್ಯಕರವಾದ, ಧನ್ಯಃ - ಶ್ರೇಯಸ್ಸಂಪಾದಕವಾದ, ಕುಮಾರ ಸಂಭವಶ್ಚೈವ-ಕುಮಾರೋತ್ಪತ್ತಿಯೂ, ಅಭಿಹಿತಃ – ಹೇಳಲ್ಪಟ್ಟಿತು. || ೩೧ || ಹೇ ಕಾಕುತ್ಸ್ಥ - ಎಲೈ ಶ್ರೀ ರಾಮನೆ, ಭುವಿ-ಇಳೆಯಲ್ಲಿ, ಯಃ ಮಾನವಃ-ಯಾವ ಮನುಷ್ಯನು, ಕಾರ್ತಿಕೇಯೇ - ಕುಮಾರಸ್ವಾಮಿಯಲ್ಲಿ, ಭಕ್ತಃ - ಭಕ್ತಿಯುಳ್ಳವನಾಗುವನೋ, ಸಃ – ಆ ಪುರುಷನು, ಪುತ್ರಪೌತ್ರೈಶ್ಚ-ಮಕ್ಕಳು ಮೊಮ್ಮಕ್ಕಳಿಂದೊಡಗೂಡಿ ಆಯುಷ್ಮಾನ್ - ದೀರ್ಘಾಯುಷ್ಮಂತನಾಗಿ, ಸ್ಕಂದಸಾಲೋಕ್ಯತಾಂ, ಸ್ಕಂದ-ಕುಮಾರಸ್ವಾಮಿಯ, ಸಾಲೋಕ್ಯತಾಂ - (ಗೋ) ಸಮಾನ ಲೋಕವಾಸಿತ್ವವನ್ನು (ತಿ) ದೇಹತ್ಯಾಗಾನಂತರ ಕುಮಾರಸಾಧನ ಸಾಲೋಕ್ಯವನ್ನು, ವ್ರಜೇತ್-ಹೊಂದುವನು. || ೩೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ಮೊದಲಾದ ದೇವತೆಗಳೆಲ್ಲರೂ ಅನಮಾನತೇಜಸ್ವಿಯಾದ ಆ ಸ್ಕಂದನನ್ನು ದೇವಸೇನಾಧಿಪತಿಯನ್ನಾಗಿ ಪಟ್ಟಾಭಿಷೇಕವಂ ಗೈದರು. || ೩೦ || ಎಲೈ ರಾಮಚಂದ್ರನೇ ! ಧನ್ಯಕರವೂ ಪುಣ್ಯಕರವೂ ಆದ ಗಂಗಾವೃತ್ತಾಂತವೂ, ಕುಮಾರಸಂಭವವೂ ನನ್ನಿಂದ ಹೇಳಲ್ಪಟ್ಟಿತು. ಈ ಭೂಮಂಡಲದಲ್ಲಿ ಯಾವನು ಕಾರ್ತಿಕೇಯಸ್ವಾಮಿಯಲ್ಲಿ ಭಕ್ತನಾಗಿರುವನೋ, ಅವನು ಇಹದಲ್ಲಿ ಪುತ್ರಪೌತ್ರರಿಂದೊಡಗೂಡಿ ಆಯುಷ್ಮಂತನಾಗಿದ್ದು, ಪರದಲ್ಲಿ ಷಣ್ಮುಖನ ಸಾಲೋಕ್ಯವನ್ನು ಪಡೆಯುತ್ತಾನೆ. || ೩೨ ||

ಇಂತಿದು ಕುಮಾರಜನನ ವೃತ್ತಾಂತವೆಂಬ ಮೂವತ್ತೇಳನೆಯ
ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಅಷ್ಟತ್ರಿಂಶಸ್ಸರ್ಗಃ.

ತಾಂ ತಥಾ ಕೌಶಿಕೋ ರಾಮೇ ನಿವೇದ್ಯ ಕುಶಿಕಾತ್ಮಜಃ ॥ ಪುನರೇವಾಪರಂ ವಾಕ್ಯಂ ಕಾಕುತ್ಸ್ಥಮಿದಮಬ್ರವೀತ್ ॥ ೧ ॥ ಅಯೋಧ್ಯಾಧಿಪತಿಃ ಶೂರಃ ಪೂರ್ವಮಾಸೀನ್ನರಾಧಿಪಃ ॥ ಸಗರೋನಾಮ ಧರ್ಮಾತ್ಮಾ ಪ್ರಜಾಕಾಮಸ್ಸಚಾಪ್ರಜಃ ॥ ೨ ॥ ವೈದರ್ಭದುಹಿತಾ ರಾಮ ಕೇಶಿನೀ ನಾಮ ನಾಮತಃ ॥ ಜ್ಯೇಷ್ಠಾ ಸಗರಪತ್ನೀ ಸಾ ಧರ್ಮಿಷ್ಠಾ ಸತ್ಯವಾದಿನೀ ॥೩॥ ಅರಿಷ್ಟನೇಮಿ ದುಹಿತಾ ರೂಪೇಣಾಪ್ರತಿಮಾಭುವಿ ॥ ದ್ವಿತೀಯಾ ಸಗರಸ್ಯಾಸೀತ್ಪತ್ನೀ ಸುಮತಿ ಸಂಜ್ಞಿತಾ ॥ ೪ ॥ ತಾಭ್ಯಾಂ ಸಹ ತದಾ ರಾಜಾ ಪತ್ನೀಭ್ಯಾಂ

---

ಕುಶಿಕಾತ್ಮಜಃ - ಕುಶಿಕ ವಂಶೋತ್ಪನ್ನನಾದ, ಕೌಶಿಕಃ - ವಿಶ್ವಾಮಿತ್ರನು, ರಾಮೇ ಶ್ರೀರಾಮನಿಗೆ, ತಥಾ - ಆಪರಿ, ತಾಂ - ಆ ಗಂಗೋತ್ಪತ್ತಿಯ ಕಥೆಯನ್ನು, ನಿವೇದ್ಯ - ತಿಳಿಸಿ ಪುನರೇವ - ಮತ್ತು, ಕಾಕುತ್ಸ್ಥಂ - ಶ್ರೀರಾಮನನ್ನು ಕುರಿತು, ಅಪರಂ - ಮತ್ತೊಂದಾದ, ಇದಂ- ಈ ಮುಂದೆ ಹೇಳುವ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು ॥ ೧ ॥ ಪೂರ್ವಂ- ಪೂರ್ವದಲ್ಲಿ, ಅಯೋಧ್ಯಾಧಿಪತಿಃ-ಅಯೋಧ್ಯಾನಗರಕ್ಕೆ ಅಧಿಪತಿಯೂ, ಶೂರಃ ಶೂರನೂ ಆದ, ಸಗರೋನಾಮ - ಸಗರನೆಂದು ಪ್ರಸಿದ್ಧನಾದ, ಧರ್ಮಾತ್ಮಾ - ಧರ್ಮಿಷ್ಠನಾದ, ನರಾಧಿಪತಿಃ - ಅರಸು, ಆಸೀತ್ - ಇದ್ದನು ಅಪ್ರಜಃ - ಮಕ್ಕಳಿಲ್ಲದ, ಸಃ - ಆ ಸಗರನು ಪ್ರಜಾಕಾಮಃ - ಸಂತತಿಕಾಮನಾದವನು, ಆಸೀತ್ - ಆದನು ॥ ೨ ॥ ಹೇರಾಮ - ಎಲೈ ಶ್ರೀರಾಮನೇ, ವೈದರ್ಭದುಹಿತಾ- ವಿದರ್ಭರಾಜ ಕುವರಿಯಾದ, ನಾಮತಃ - ಹೆಸರಿಂದ, ಕೇಶಿನೀನಾಮ - ಕೇಶಿನೀ ಎಂದು ಪ್ರಸಿದ್ಧಳು, ಆಸೀತ್ - ಆದಳು, ಧರ್ಮಿಷ್ಠಾ - ಧರ್ಮಿಷ್ಠಳಾದ, ಸತ್ಯವಾದಿನೀ - ಸತ್ಯವಾಕ್ಯವುಳ್ಳ, ಸಾ ಆ ಕೇಶಿನಿ ಎಂಬುವಳು, ಜ್ಯೇಷ್ಠಾ - ಜ್ಯೇಷ್ಠಳಾದ, ಸಗರಪತ್ನೀ- ಸಗರಚಕ್ರವರ್ತಿಯ ಮಡದಿಯು, ॥ ೩ ॥ ಅರಿಷ್ಟನೇಮಿದುಹಿತಾ, ಅರಿಷ್ಟನೇಮಿ - ಅರಿಷ್ಟನೇಮಿ ಎಂಬ ಕಶ್ಯಪಪುತ್ರನ, ದುಹಿತಾ- ಮಗಳಾದ, ರೂಪೇಣ - ರೂಪದಿಂದ, ಭುವಿ - ಇಳೆಯಲ್ಲಿ, ಅಪ್ರತಿಮಾ - ಸಮಾನರಹಿತಳಾದ, ಸುಮತಿಸಂಜ್ಞಿತಾ – ಸುಮತಿಯೆಂಬ ಹೆಸರುಳ್ಳವಳು, ಸಗರಸ್ಯ - ಸಗರಚಕ್ರವರ್ತಿಗೆ, ದ್ವಿತೀಯಾ- ಎರಡನೆಯವಳಾದ, ಪತ್ನೀ - ಮಡದಿಯು, ಆಸೀತ್ - ಆದಳು ॥ ೪ ॥ ತದಾ - ಆ ಕಾಲದಲ್ಲಿ,

---

ಕುಶಿಕನಂದನನಾದ ಕೌಶಿಕನು, ಕುಮಾರಜನನ ವೃತ್ತಾಂತವನ್ನು ಈ ರೀತಿ ಹೇಳಿ ರಾಮನನ್ನು ಕುರಿತು ಮರಳಿ ಇಂತೆಂದನು, “ ಅಯ್ಯಾ ರಾಮಚಂದ್ರನೆ ! ಹಿಂದೆ ಅಯೋಧ್ಯಾಪಟ್ಟಣದಲ್ಲಿ ಮಹಾ ಧರ್ಮಿಷ್ಠನೂ, ಪುತ್ರಾಪೇಕ್ಷಿಯೂ ಆದ ಸಗರನೆಂಬ ರಾಜನಿದ್ದನು. ಈತನಿಗೆ ಇಬ್ಬರು ಸ್ತ್ರೀಯರಿದ್ದರು ಇವರಲ್ಲಿ ವಿದರ್ಭದೇಶದೊಡೆಯನ ಮಗಳೂ, ಮಹಾ ಧರ್ಮವತಿಯೂ ಆದ ಕೇಶಿನಿಯೆಂಬವಳು ಹಿರಿಯವಳು., ಅರಿಷ್ಟನೇಮಿಕುವರಿಯೂ, ಸೌಂದರ್ಯವತಿಯೂ ಆದ ಸುಮತಿಯೆಂಬವಳು ಕಿರಿಯವಳು. ॥ ೪ ॥ ಈ ಕೇಶಿನೀ

ತಪ್ತ್ವಾನ್ತಪಃ ॥ ಹಿಮವಂತಂ ಸಮಾಸಾದ್ಯ ಭೃಗುಪ್ರಸ್ರವಣೇಗಿರೌ ॥ ೪ ॥ ಅಥ ವರ್ಷಶತೇ ಪೂರ್ಣೇ ತಪಸಾರಾಧಿತೋ ಮುನಿಃ ॥ ಸಗರಾಯ ವರಂ ಪ್ರಾದಾದ್ಭೃಗುಸ್ಸತ್ಯವತಾಂವರಃ ॥ ೬ ॥ ಅಪತ್ಯಲಾಭಸ್ಸುಮಹಾನ್ ಭವಿಷ್ಯತಿ ತವಾನಘ ॥ ಕೀರ್ತಿಂಚಾಪ್ರತಿಮಾಂ ಲೋಕೇ ಪ್ರಾಪ್ಸ್ಯಸೇ ಪುರುಷರ್ಷಭ ॥ ೭ ॥ ಏಕಾ ಜನಯಿತಾ ತಾತ ಪುತ್ರಂ ವಂಶಕರಂ ತವ॥ ಷಷ್ಟಿಂ ಪುತ್ರ ಸಹಸ್ರಾಣಿ ಅಪರಾ ಜನಯಿಷ್ಯತಿ ॥ ೮ ॥ ಭಾಷಮಾಣಂ ಮಹಾತ್ಮಾನಂ ರಾಜಪುತ್ರ್ಯೌ ಪ್ರಸಾದ್ಯ ತಂ ॥ ಊಚತುಃ ಪರಮಪ್ರೀತೇ ಕೃತಾಂ

ರಾಜಾ - ಸಗರರಾಜನು. ತಾಭ್ಯಾಂಪತ್ನೀಭ್ಯಾಂಸಹ-ಆ ಪಡದಿಯರೊಡನೆ, ಹಿಮವಂತಂ ಹಿಮವತ್ಪರ್ವತವನ್ನು, ಸಮಾಸಾದ್ಯ - ಹೊಂದಿ, ಭೃಗುಪ್ರಸ್ರವಣೇ - ಭೃಗುಪ್ರಸ್ರವಣವೆಂಬ, ಗಿರೌ-ಬೆಟ್ಟದಲ್ಲಿ, ತಪಃ - ತಪವನ್ನು, ತಪ್ತವಾನ್ - ತಪಿಸಿದನು ॥ ೪ ॥ ಅಥ - ಬಳಿಕ, ವರ್ಷಶತೇ-ನೂರುವರ್ಷಗಳು, ಪೂರ್ಣೇಸತಿ - ಪೂರ್ತಿಯಾಗುತ್ತಿರಲು, ಸತ್ಯವತಾಂ - ಸತ್ಯವಂತರಲ್ಲಿ, ವರಃ-ಶ್ರೇಷ್ಠನಾದ, ಭೃಗುಃ - ಭೃಗುವೆಂಬ, ಮುನಿಃ - ಋಷಿಯು, ತಪಸಾ - ತಪಸ್ಸಿನಿಂದ, ಆರಾಧಿತಃ-ಪ್ರಾರ್ಥಿಸಲ್ಪಟ್ಟು, ಸಗರಾಯ - ಸಗರ ಚಕ್ರವರ್ತಿಗೆ, ವರಂ - ಇಷ್ಟಾರ್ಥವನ್ನು, ಪ್ರಾದಾತ್-ಕೊಡಲುದ್ಯುಕ್ತನಾದನು. ॥ ೬ ॥ ಹೇಅನಘ - ಎಲೈ ಪಾಪರಹಿತನೆ, ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ತವ - ನಿನಗೆ, ಸುಮಹಾನ್ - ಶ್ರೇಷ್ಠವಾದ, ಅಪತ್ಯಲಾಭಃ - ಪುತ್ರಲಾಭವು, ಭವಿಷ್ಯತಿ-ಆಗುವದು, ಲೋಕೇ - ಲೋಕದಲ್ಲಿ, ಅಪ್ರತಿಮಾಂ - ಸಮಾನವಿಲ್ಲದ, ಕೀರ್ತಿಂಚ-ಯಶಸ್ಸನ್ನು, ಪ್ರಾಪ್ಸ್ಯಸೇ - ಹೊಂದುವಿ, ॥ ೭ ॥ ಹೇತಾತ - ಎಲೈ ತಂದೆಯೆ, ಏಕಾ-ಒಬ್ಬ ಹೆಂಡತಿಯು, ತವ - ನಿನ್ನ, ವಂಶಕರಂ - ವಂಶೋದ್ಧಾರಕನಾದ, ಪುತ್ರಂ - ಕುವರನನ್ನು, ಜನಯಿತಾ-ಹೆರುವಳು, ಅಪರಾ - ಮತ್ತೊಬ್ಬಳು, ಷಷ್ಟಿಂಪುತ್ರಸಹಸ್ರಾಣಿ - ಅರವತ್ತು ಸಾವಿರ ಮಕ್ಕಳನ್ನು, ಜನಯಿಷ್ಯತಿ-ಹೆರುವಳು. ॥ ೮ ॥ ಇತಿ - ಇಂತೆಂದು, ಭಾಷಮಾಣಂ - ಹೇಳುತ್ತಿರುವ, ಮಹಾತ್ಮಾನಂ-ಮಹಾನುಭಾವನಾದ, ತಂ ಆ ಭೃಗುಋಷಿಯನ್ನು, ಪ್ರಸಾದ್ಯ ಪ್ರಸನ್ನನಾಗಿ ಮಾಡಿಕೊಂಡು, ತದಾ-ಆಗ, ರಾಜಪುತ್ರ್ಯೌ - ರಾಜಪುತ್ರಿಯರಾದ ಕೇಶಿನೀ ಸುಮತಿಗಳಿಬ್ಬರೂ, ಪರಮಪ್ರೀತೇ-ಬಹಳ ಸಂತೋಷಗೊಂಡು, ಕೃತಾಂಜಲೀಪುಟೇ, ಕೃತ - ಮಾಡಲ್ಪಟ್ಟ, ಅಂಜಲಿಪುಟೇ - ಅಂಜಲಿಗಳುಳ್ಳವ

ಸುಮತಿಯರಿಂದೊಡಗೂಡಿದ ಸಗರಚಕ್ರವರ್ತಿಯು ಹಿಮವತ್ಪರ್ವತವನ್ನು ಸೇರಿ, ಭೃಗುಪ್ರಸ್ರವಣಗಿರಿಯಲ್ಲಿ ತಪವಂಗೈದನು ಹೀಗೆ ನೂರುವರ್ಷಗಳು ಪೂರ್ಣವಾಗಲು, ತಪಸ್ಸಿನಿಂದಾರಾಧಿತನೂ, ಸತ್ಯವಂತರಲ್ಲಿ ಶ್ರೇಷ್ಠನೂ ಆದ ಭೃಗುಮುನಿಯು, "ಎಲೈ ಸಗರರಾಜನೆ ! ನಿನಗೆ ಶ್ರೇಷ್ಠವಾದ ಪುತ್ರಲಾಭವುಂಟಾಗುವುದು, ಈ ಪುತ್ರಲಾಭದಿಂದ ಅಸಮಾನವಾದ ಕೀರ್ತಿಯನ್ನೂ ಪಡೆಯುವೆ. ನಿನ್ನ ಸತಿಯರಲ್ಲೊಬ್ಬಳು ವಂಶೋದ್ಧಾರಕನಾದ ಕುವರನೊಬ್ಬನನ್ನು ಹೆರುವಳು, ಮತ್ತೊಬ್ಬಳು ಅರುವತ್ತುಸಾವಿರಮಕ್ಕಳನ್ನು ಹೆರುವಳು" ಎಂದನು. ॥ ೮ ॥ ಇಂತು ಮಹಾತ್ಮನಾದ ಭೃಗುಮುನಿಯು ಹೇಳುತ್ತಿರಲು, ಕೇಶಿನೀ ಸುಮತಿಯರು ಆತನನ್ನು ಗೌರವಿಸಿ ಸಂತಸಗೊಂಡು, ಕೈಗಳನ್ನು ಜೋಡಿಸಿ, "ಎಲೈ

ಸೋಮದಾಪಿ ಸು ಸಂಹೃಷ್ಟಾ ಪುತ್ರಸ್ಯ ಸದೃಶೀಂ ಕ್ರಿಯಾಂ|| ಯಥಾ ನ್ಯಾಯಂ ಚ ಗಾಂಧರ್ವೀ ಸ್ನುಷಾಸ್ತಾಃ ಪ್ರತ್ಯನಂದತ || ಸ್ಪೃಷ್ಟ್ವಾ ಸ್ಪೃಷ್ಟ್ವಾಚ ತಾಃ ಕನ್ಯಾ ಕುಶನಾಭಂ ಪ್ರಶಸ್ಯಚ|| ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.



---

ಗಿಯೂ, ಪ್ರೇಷಯಾಮಾಸ - ಕಳುಹಿಸಿಕೊಟ್ಟನು. ||೨೫|| ಸೋಮದಾ - ಸೋಮದೆಯೆಂಬ, ಗಾಂಧರ್ವೀ - ಗಂಧರ್ವಸ್ತ್ರೀಯು. ಪುತ್ರಸ್ಯ - ಮಗನಿಗೆ, ಸದೃಶೀಂ ಸಮಾನವಾದ, ಕ್ರಿಯಾಂ- ವಿವಾಹಕಾರ್ಯವನ್ನು, ಯಥಾನ್ಯಾಯಂ - ಶಾಸ್ತ್ರಸಮ್ಮತವಾಗಿ, ತಾಸ್ನುಷಾಃ - ಆ ಸೊಸೆಯರನ್ನು, (ದೃಷ್ಟ್ವಾ - ಕಂಡು,) ಸುಸಂಹೃಷ್ಟಾ- ಹರ್ಷಯುಕ್ತಳಾಗಿ, ತಾಃಕನ್ಯಾಃ-ಆ ಕನ್ಯೆಕೆಯರನ್ನು, ಸ್ಪೃಷ್ಟ್ವಾಸ್ಪೃಷ್ಟ್ವಾ - ಸಂತೋಷದಿಂದ ಸ್ಪರ್ಶಮಾಡಿ, ನೋಡಿ,ಕುಶನಾಭಂಚ ಕುಶನಾಭನನ್ನೂ, ಪ್ರಶಸ್ಯ - ಶ್ಲಾಘಿಸಿ, ಪ್ರತ್ಯನಂದತ - ಸಂತೋಷಗೊಂಡಳು. ||೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.

---

ಹಿತ ತಂಪಗಳೊಡನೆಯೂ ಕಾಂಪಿಲ್ಯ ನಗರಿಗೆ ಕಳುಹಿದನು. ||೨೨-೨೫|| ಸೋಮದೆಯು ಸದೃಶವಾದ ಮಗನ ವಿವಾಹ ಕ್ರಿಯೆಯನ್ನೂ, ತನ್ನ ಸೊಸೆಯರನ್ನೂ ನೋಡಿ ನೋಡಿ ಕುಶನಾಭ ರಾಜನನ್ನು ಹೊಗಳುತ್ತ ಸಂತಸಪಟ್ಟಳು.

ಇಂತಿದು ಬ್ರಹ್ಮದತ್ತ ವೃತ್ತಾಂತವರ್ಣನವೆಂಬ ಮೂವತ್ತು ಮೂರನೆಯ

ಸರ್ಗವು ಸಮಾಪ್ತವಾದುದು.

---

# ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ.

---

ಕೃತೋದ್ವಾಹೇ ಗತೇ ತಸ್ಮಿನ್ ಬ್ರಹ್ಮದತ್ತೇಚ ರಾಘವ॥ ಅಪುತ್ರಃ ಪುತ್ರ ಲಾಭಾಯ ಪೌತ್ರೀಮಿಷ್ಟಿ ಮಕಲ್ಪಯತ್॥೧॥ ಇಷ್ಟ್ಯಾಂತು ವರ್ತಮಾನಾಯಾಂ ಕುಶನಾಭಂ ಮಹೀಪತಿಂ ॥ ಉವಾಚ ಪರಮೋದಾರಃ ಕುಶೋ ಬ್ರಹ್ಮಸುತ ಸ್ತದಾ ॥೨॥ ಪುತ್ರಸ್ತೇ ಸದೃಶಃ ಪುತ್ರ ಭವಿಷ್ಯತಿ ಸು ಧಾರ್ಮಿಕಃ ॥ ಗಾಧಿಂ ಪ್ರಾಪ್ಸ್ಯತಿ ತೇನ ತ್ವಂ ಕೀರ್ತಿಂ ಲೋಕೇಚ ಶಾಶ್ವತೀಂ ॥೩॥ ಏವಮುಕ್ತ್ವಾ ಕುಶೋ ರಾಮ ಕುಶನಾಭಂ ಮಹೀಪತಿಂ ॥ ಜಗಾಮಾಕಾಶಮಾವಿಶ್ಯ ಬ್ರಹ್ಮ ಲೋಕಂ ಸನಾತನಂ ॥೪॥ ಕಸ್ಯಚಿತ್ತ್ವಥಕಾಲಸ್ಯ ಕುಶನಾಭಸ್ಯ ಧೀಮತಃ॥

ಹೇ ರಾಘವ ಎಲೈ ಶ್ರೀರಾಮನೆ, ಕೃತೋದ್ವಾಹೇ - ವಿವಾಹಿತನಾದ, ತಸ್ಮಿನ್ಬ್ರಹ್ಮದತ್ತೇ- ಆ ಬ್ರಹ್ಮದತ್ತನು, ಗತೇಸತಿ - ಹೋಗುತ್ತಿರಲು, ಅಪುತ್ರಃ - ಪುತ್ರರಹಿತನಾದ ಕುಶನಾಭನು, ಪುತ್ರ ಲಾಭಾಯ-ಪುತ್ರಪ್ರಾಪ್ತಿಗೋಸ್ಕರ, ಪೌತ್ರೀಂ - ಪುತ್ರಪ್ರಯೋಜಕವಾದ, ಇಷ್ಟಿಂ-ಪುತ್ರಕಾಮೇಷ್ಟಿ ಯನ್ನು, ಅಕಲ್ಪಯತ್ - ಮಾಡಿದನು. ॥೧॥ ಇಷ್ಟ್ಯಾಂತು- ಪುತ್ರಕಾಮೇಷ್ಟಿಯು, ವರ್ತಮಾ ನಾಯಾಂ - ಪ್ರಾರಂಭವಾಗುತ್ತಿರಲು, ತದಾ – ಆಗ, ಪರಮೋದಾರಃ - ಮಹಾ ಉದಾರವಾದ, ಬ್ರಹ್ಮಸುತಃ-ಬ್ರಹ್ಮಕುಮಾರನಾದ, ಕುಶಃ - ಕುಶಬ್ರಹ್ಮನು, ಕುಶನಾಭಂ ಕುಶನಾಭನೆಂಬ, ಮಹೀ ಪತಿಂ - ರಾಜನನ್ನು ಕುರಿತು, ಉವಾಚ - ಹೇಳಿದನು ॥೨॥ ಹೇಪುತ್ರ- ಎಲೈ ಮಗನೆ, ತೇ- ನಿನಗೆ, ಸದೃಶಃ - ಸಮಾನವಾದ, ಸುಧಾರ್ಮಿಕಃ - ಬಹಳ ಧರ್ಮಿಷ್ಠನಾದ, ಪುತ್ರಃ-ಕುವರನು, ಭವಿ ಷ್ಯತಿ - ಆಗುವನು, ಗಾಧಿಂ - ಗಾಧಿಎಂಬಪುತ್ರನನ್ನು, ಪ್ರಾಪ್ಸ್ಯತಿ - ಹೊಂದುವೆ, ತೇನ - ಆ ಮಗ ನಿಂದ, ಲೋಕೇ- ಲೋಕದಲ್ಲಿ, ಶಾಶ್ವತೀಂ - ಸ್ಥಿರವಾದ, ಕೀರ್ತಿಂ - ಯಶಸ್ಸನ್ನು, ತ್ವಂ - ನೀನು, ಪ್ರಾಪ್ಸ್ಯಸಿ - ಹೊಂದುವಿ ॥೩॥ ಹೇರಾಮ - ಎಲೈ ಶ್ರೀರಾಮನೆ, ಕುಶಃ - ಕುಶಬ್ರಹ್ಮನು, ಕುಶನಾಭಂ - ಕುಶನಾಭನೆಂಬ, ಮಹೀಪತಿಂ - ಅರಸನನ್ನು ಕುರಿತು, ಏವಮುಕ್ತ್ವಾ - ಹೀಗೆಹೇಳಿ, ಆಕಾಶಂ - ಆಕಾಶವನ್ನು, ಆವಿಶ್ಯ - ಪ್ರವೇಶಿಸಿ, ಸನಾತನಂ - ಶಾಶ್ವತವಾದ, ಬ್ರಹ್ಮಲೋಕಂ- ಸತ್ಯಲೋಕವನ್ನುಕುರಿತು, ಜಗಾಮ - ತೆರಳಿದನು ॥೪॥ ಕಸ್ಯಚಿತ್ಕಾಲಸ್ಯ - ಅಥ - ಕೆಲಕಾಲ

---

ರಘುಕುಲಚಂದ್ರಮ ! ಇಂತು ಬ್ರಹ್ಮದತ್ತನು ಕುಶನಾಭನ ನೂರುಮಂದಿ ಕುವರಿಯರನ್ನು ಮದುವೆಯಾಗಿ, ತನ್ನ ಪಟ್ಟಣವಾದ ಕಾಂಪಿಲ್ಯ ನಗರಿಗೆ ತೆರಳಲು, ಅಪುತ್ರ ವಂತನಾದ ಕುಶನಾಭ ರಾಜನು ಪುತ್ರಲಾಭಕ್ಕೋಸುಗವಾಗಿ ಪುತ್ರಕಾಮೇಷ್ಟಿಯಾಗವನ್ನು ಮಾಡಿದನು. ॥೧॥ ಈ ಯಾಗವು ನಡಿಯುತ್ತಿರಲು ಬಹಳ ಉದಾರನೂ, ಬ್ರಹ್ಮನ ಕುವರನೂ ಆದ ಕುಶಬ್ರಹ್ಮನು, ಕುಶನಾಭನನ್ನು ಕುರಿತು "ಎಲೈ ಮಗನೇ ! ಮಹಾ ಧರ್ಮಿಷ್ಠನಾಗಿಯೂ, ಗಾಧಿ, ಎಂಬ ಹೆಸರುಳ್ಳವನಾಗಿಯೂ ಇರುವ ಮಗನನ್ನು ಪಡೆವೆ.

ಜಜ್ಞೇ ಪರಮಧರ್ಮಿಷ್ಠೋ ಗಾಧಿರಿತ್ಯೇವ ನಾಮತಃ ‖೫‖ ಸ ಪಿತಾ ಮಮ ಕಾಕುತ್ಸ್ಥ ಗಾಧಿಃ ಪರಮಧಾರ್ಮಿಕಃ ‖ ಕುಶವಂಶ ಪ್ರಸೂತೋಽಸ್ಮಿ ಕೌಶಿಕೋ ರಘುನಂದನ‖೬‖ ಪೂರ್ವಜಾ ಭಗಿನೀಚಾಪಿ ಮಮ ರಾಘವ ಸುವ್ರತಾ‖ನಾಮ್ನಾ ಸತ್ಯವತೀ ನಾಮ ಋಚೀಕೇ ಪ್ರತಿಪಾದಿತಾ ‖೭‖ ಸಶರೀರಾ ಗತಾ ಸ್ವರ್ಗಂ ಭರ್ತಾರಮನುವರ್ತಿನೀ‖ಕೌಶಿಕೀ ಪರಮೋದಾರಾ ಪ್ರವೃತ್ತಾ ಚ ಮಹಾನದೀ‖೮‖ ದಿವ್ಯಾ ಪುಣ್ಯೋದಕಾ ರಮ್ಯಾ ಹಿಮವಂತಮುಪಾಶ್ರಿತಾ ‖ ಲೋಕಸ್ಯ ಹಿತಕಾಮಾರ್ಥಂ ಪ್ರವೃತ್ತಾ ಭಗಿನೀ ಮಮ ‖೯‖ ತತೋಽಹಂ ಹಿಮವತ್ಪಾರ್ಶ್ವೇ

ಪಾದಸೇಲ್ತೆ, ಧೀಮತಃ ಬುದ್ಧಿವಂತನಾದ, ಕುಶನಾಭಸ್ಯ - ಕುಶನಾಭನಿಗೆ, ಪರಮಧರ್ಮಿಷ್ಠಃ - ಅಹೀಂಧರ್ಮಿಷ್ಠನಾದ, ನಾಮತಃ - ಹೆಸರಿನಿಂದ, ಗಾಧಿರಿತ್ಯೇವ - ಗಾಧಿಯೆಂಬವನೇ, ಜಜ್ಞೇ ಹುಟ್ಟಿದನು ‖೫‖ ಹೇರಘುನಂದನ - ಎಲೈ ಶ್ರೀರಾಮನೇ, ಹೇಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೇ! ಪರಮಧಾರ್ಮಿಕಃ - ಪರಮಧರ್ಮಿಷ್ಠನಾದ, ಸಗಾಧಿಃ - ಆ ಗಾಧಿರಾಜನು, ಮಮ - ನನಗೆ, ಪಿತಾ - ತಂದೆಯು, ಕುಶವಂಶಪ್ರಸೂತಃ - ಕುಶಬ್ರಹ್ಮನ ವಂಶೋತ್ಪನ್ನನಾದಕಾರಣ, ಕೌಶಿಕಃ - ಕೌಶಿಕನೆಂದು ಪ್ರಸಿದ್ಧನ, ಅಸ್ಮಿ - ಆಗಿರುವೆನು. ‖೬‖ ಹೇರಾಘವ-ಎಲೈಶ್ರೀರಾಮನೇ! ಸುವ್ರತಾ-ಪತಿವ್ರತೆಯಾದ, ಮಮ - ನನಗೆ, ಪೂರ್ವಜಾ - ಜ್ಯೇಷ್ಠಳಾದ, ನಾಮ್ನಾ - ಹೆಸರಿನಿಂದ, ಸತ್ಯವತೀ ನಾಮ - ಸತ್ಯವತೀ ಎಂದು ಪ್ರಸಿದ್ಧಳಾದ, ಭಗಿನೀ - ಸೋದರಿಯು, ಋಚೀಕೇ - ಋಚೀಕನೆಂಬ ಬ್ರಾಹ್ಮಣನಿಗೆ, ಪ್ರತಿಪಾದಿತಾ - ಕೊಡಲ್ಪಟ್ಟಳು. ‖೭‖ ಭರ್ತಾರಂ - ಗಂಡನನ್ನು, ಅನುವರ್ತಿನೀ - ಶುಶ್ರೂಷೆಮಾಡಿದವಳಾದ ಕಾರಣ, ಸಶರೀರಾ - ಶರೀರದಿಂದೊಡಗೂಡಿ, ಸ್ವರ್ಗಂ - ಸ್ವರ್ಗಲೋಕವನ್ನು, ಗತಾ - ಹೊಂದಿ, ಪರಮೋದಾರಾ - ಸರ್ವೋತ್ಕೃಷ್ಟಳಾದ, ಕೌಶಿಕೀ - ಕೌಶಿಕೀಯೆಂಬ, ಮಹಾನದೀ - ಮಹಾನದಿಯರೂಪವಾಗಿ, ಪ್ರವೃತ್ತಾಚ - ಪ್ರವಹಿಸಿರುವಳು ‖೮‖ ಮಮ-ನನ್ನ, ಭಗಿನೀ - ಅಕ್ಕನು, ಲೋಕಸ್ಯ - ಲೋಕಕ್ಕೆ, ಹಿತಕಾಮಾರ್ಥಂ ಐಹಿಕ ಆಮುಷ್ಮಿಕಗಳ ಹಿತಾರ್ಥವಾಗಿ, ಹಿಮವಂತಂ - ಹಿಮವತ್ಪರ್ವತವನ್ನು, ಉಪಾಶ್ರಿತಾ - ಆಶ್ರಯಿಸಿ, ರಮ್ಯಾ - ಮನೋಹರವಾದ, ದಿವ್ಯಾ - ದೇವತಾಸಂಬಂಧವಾದ, ಪುಣ್ಯೋದಕಾ - ಪುಣ್ಯಕರವಾದ ಉದಕವುಳ್ಳ ನದೀರೂಪವಾಗಿ, ಪ್ರವೃತ್ತಾ - ಪ್ರವಹಿಸುತ್ತಿರುವಳು. ‖೯‖ ತತಃ - ಆ ಕಾರಣ, ಹೇರಘುನಂದನ -

ನೀನೇ ಪುತ್ರಲಾಭದಿಂದ ಶಾಶ್ವತವಾದ ಕೀರ್ತಿಯನ್ನು ಹೊಂದುವೆ” ಎಂದೀ ಪ್ರಕಾರವಾಗಿ ನುಡಿದು ಆಕಾಶಮಾರ್ಗದಿಂದ ಸನಾತನವಾದ ಬ್ರಹ್ಮಲೋಕವನ್ನು ಕುರಿತು ಹೊರಟು ಹೋದನು. ‖ ೨-೪ ‖ “ರಾಮಚಂದ್ರ! ಕೆಲ ಕಾಲವಾದಮೇಲೆ ಮಹಾ ಬುದ್ಧಿಶಾಲಿಯಾದ ಕುಶನಾಭನಿಗೆ ಮಹಾ ಧರ್ಮಿಷ್ಠನಾದ ಮಗನುತ್ಪನ್ನನಾದನು. ‖ ೫ ‖ ಎಲೈ ಕಾಕುತ್ಸ್ಥನೇ ! ಈ ಗಾಂಧಿರಾಜನೇ ನನ್ನ ತಂದೆಯು, ನಾನು ಕುಶವಂಶ ಪ್ರಸೂತನಾಗಿರುವೆನು. ‖ ೬ ‖ ನನ್ನ ಒಡ ಹುಟ್ಟಿದವಳಾದ ಸತ್ಯವತಿ ಎಂಬಾಕೆಯು ನನ್ನ ಪೂರ್ವಜಳು. ಈಕೆಯು ಋಚೀಕನಿಗೆ ವಿವಾಹಿತವಾಗಿದ್ದಳು. ‖ ೭ ‖ ಈಕೆಯು ಪತಿಯನ್ನನುವರ್ತಿಸಿ ಸಶರೀರಳಾಗಿಯೇ ಸ್ವರ್ಗವನ್ನು ಸೇರಿದಳು. ಅದು ಅಲ್ಲದೆ ಕುಶವಂಶದಲ್ಲಿ ಹುಟ್ಟಿದವಳಾದುದರಿಂದ

ವಸಾಮಿ ನಿರತಸ್ಸುಖಂ|| ಭಗಿನ್ಯಾಂ ಸ್ನೇಹಸಂಯುಕ್ತಃ ಕೌಶಿಕ್ಯಾಂ ರಘುನಂದನ||
ಸಾ ತು ಸತ್ಯವತೀ ಪುಣ್ಯಾ ಸತ್ಯೇ ಧರ್ಮೇ ಪ್ರತಿಷ್ಠಿತಾ || ಪತಿವ್ರತಾ ಮಹಾಭಾಗಾ
ಕೌಶಿಕೀ ಸರಿತಾಂ ವರಾ ||೧೧|| ಅಹಂ ಹಿ ನಿಯಮಾದ್ರಾಮ ಹಿತ್ವಾ ತಾಂ
ಸಮುಪಾಗತಃ || ಸಿದ್ಧಾಶ್ರಮಮನುಪ್ರಾಪ್ಯ ಸಿದ್ಧೋಽಸ್ಮಿ ತವ ತೇಜಸಾ ||೧೨||
ಏಷಾ ರಾಮ ಮಮೋತ್ಪತ್ತಿಸ್ಸ್ವಸ್ಯ ವಂಶಸ್ಯ ಕೀರ್ತಿತಾ|| ದೇಶಸ್ಯಚ ಮಹಾ
ಬಾಹೋ ಯನ್ಮಾಂ ತ್ವಂ ಪರಿಪೃಚ್ಛಸಿ ||೧೩|| ಗತೋಽರ್ಧರಾತ್ರಃ ಕಾಕುತ್ಸ್ಥ

ಎಲೈ ಶ್ರೀರಾಮನೇ, ಕೌಶಿಕ್ಯಾಂ - ಕೌಶಿಕೀನದೀರೂಪವಾದ, ಭಗಿನ್ಯಾಂ - ಅಕ್ಕನಲ್ಲಿ, ಸ್ನೇಹಸಂಯುಕ್ತಃ-ಸ್ನೇಹದಿಂದೊಡಗೂಡಿ, ಅಹಂ - ನಾನು, ಹಿಮವತ್ಪಾರ್ಶ್ವೇ- ಹಿಮವತ್ಪರ್ವತ ಪ್ರಾಂತ್ಯದಲ್ಲಿ, ನಿರತಃ - ಆಸಕ್ತನಾಗಿ, ಸುಖಂ - ಸುಖವಾಗಿ, ವಸಾಮಿ - ಇರುತ್ತೇನೆ. || ೧೦ || ಪತಿವ್ರತಾ - ಪತಿವ್ರತೆಯಾದ, ಮಹಾಭಾಗಾ- ಪುಣ್ಯವತಿಯಾದ, ಸತ್ಯೇ-ಸತ್ಯದಲ್ಲಿಯೂ, ಧರ್ಮೇ - ಧರ್ಮದಲ್ಲಿಯೂ, ಪ್ರತಿಷ್ಠಿತಾ - ಸ್ಥಿರಚಿತ್ತಳಾದ, ಪುಣ್ಯಾ - ಪುಣ್ಯಕರಳಾದ, ಸಾ - ಆಕೆಯು, ಸತ್ಯವತೀ - ಸತ್ಯವತೀ ಎಂದು ಅನ್ವರ್ಥನಾಮವುಳ್ಳವಳಾಗಿ, ಸರಿತಾಂ - ನದಿಗಳಲ್ಲಿ, ವರಾ - ಶ್ರೇಷ್ಠಳಾದ, ಕೌಶಿಕೀ - ಕೌಶಿಕೀನದೀರೂಪಳಾದಳು. ||೧೧|| ಹೇರಾಮ - ಎಲೈ ಶ್ರೀರಾಮನೇ, ಅಹಂಹಿ-ನಾನಾದರೋ, ನಿಯಮಾತ್-ಯಾಗಮಾಡಬೇಕೆಂಬ ನಿಯಮದಿಂದ, ತಾಂ - ಆ ಕೌಶಿಕೀ ನದಿಯನ್ನು, ಹಿತ್ವಾ - ತೊರೆದು, ಸಮುಪಾಗತಃ - ಬಂದು, ಸಿದ್ಧಾಶ್ರಮಂ - ಸಿದ್ಧಾಶ್ರಮವನ್ನು, ಅನುಪ್ರಾಪ್ಯ - ಹೊಂದಿ, ತವ - ನಿನ್ನ, ತೇಜಸಾ - ಪ್ರಭಾವದಿಂದ, ಸಿದ್ಧಃ-ಕಾರ್ಯಸಿದ್ಧಿಯುಳ್ಳವನು, ಅಸ್ಮಿ - ಆದೆನು ||೧೨|| ಹೇರಾಮ - ಎಲೈಶ್ರೀರಾಮನೆ, ಮಮ- ನನ್ನ, ಸ್ವಸ್ಯ-ಸ್ವಕೀಯವಾದ, ವಂಶಸ್ಯ - ಕುಲದ, ಉತ್ಪತ್ತಿಃ - ಉತ್ಪತ್ತಿಯೂ, ಏಷಾ - ಇದು, ಕೀರ್ತಿತಾ ಹೇಳಲ್ಪಟ್ಟಿತು, ಹೇ ಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೆ, ಯತ್-ಯಾವುದನ್ನು. ಮಾಂ - ನನ್ನನ್ನು ಕುರಿತು, ಪರಿಪೃಚ್ಛಸಿ - ಕೇಳಿದೆಯೋ, ತಸ್ಯದೇಶಸ್ಯಚ - ಆ ದೇಶದ, ಉತ್ಪತ್ತಿಶ್ಚ - ಉತ್ಪತ್ತಿಯೂ, ಕೀರ್ತಿತಾ - ಹೇಳಲ್ಪಟ್ಟಿತು. || ೧೩ || ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ,

ಕೌಶಿಕಿ ಎಂದು ಪ್ರಸಿದ್ಧಳೂ, ದಿವ್ಯವಾದ ಪುಣ್ಯೋದಕವುಳ್ಳವಳೂ, ಮನೋಹರಳಾಗಿಯೂ, ಆಗಿ ಲೋಕಹಿತಾರ್ಥವಾಗಿ ಹಿಮವತ್ಪರ್ವತವನ್ನು ಆಶ್ರಯಿಸಿದಳು || ೮-೯ || ರಘುನಂದನನೆ ! ಆ ಬಳಿಕ ಅಕ್ಕನಾದ ಕೌಶಿಕಿಯಲ್ಲಿ ಸ್ನೇಹಯುಕ್ತನಾದ ನಾನು ನದೀರೂಪವಾಗಿ ಪ್ರವಹಿಸುತ್ತಿದ್ದ ಆಕೆಯ ಬಳಿಯಲ್ಲಿ ಹಿಮವತ್ಪ್ರಾಂತ್ಯದಲ್ಲಿ ನಿರತನಾಗಿ ಸುಖದಿಂದ್ದೆನು.||೧೦|| ಆ ಸತ್ಯವತಿಯು ಬಹು ಪುಣ್ಯವತಿಯು. ಸತ್ಯದಲ್ಲಿಯೂ, ಧರ್ಮದಲ್ಲಿಯೂ, ಪ್ರತಿಷ್ಠಿತಳಾದವಳು. ಪತಿವ್ರತೆಯೂ, ಮಹಾಭಾಗ್ಯಶಾಲಿನಿಯೂ ಆದ ಈ ಕೌಶಿಕೀ ನದಿಯು ನದಿಗಳಲ್ಲೆಲ್ಲಾ ಶ್ರೇಷ್ಠವಾದುದು. || ೧೧ || ಎಲೈ ರಾಮನೇ ! ನಾನಾದರೋ ಆ ಕೌಶಿಕೀ ನದಿಯನ್ನು ಬಿಟ್ಟು ನನ್ನ ಸಿದ್ಧಾಶ್ರಮವನ್ನು ಹೊಂದಿ ನಿನ್ನ ಪ್ರಭಾವದಿಂದ ಸಿದ್ಧನಾಗಿರುವೆನು. ||೧೨|| ರಾಮಾ ಯಾವ ವಿಷಯವಾಗಿ ನೀನು ಕೇಳುತ್ತಿದ್ದೆಯೋ ಅದೇ ನನ್ನ ಜನ್ಮ ವೃತ್ತಾಂತವು. ವಂಶದ ಮತ್ತು ದೇಶದ ಕೀರ್ತಿಯೂ ಅದೇ ಆಗಿರುವುದು || ೧೩ ||

**ಕಥಾಃ ಕಥಯುತೋ ಮಮ॥ ನಿದ್ರಾಂ ಮಭ್ಯೇಹಿ ಭದ್ರಂ ತೇ ಮಾಭೂದ್ವಿಘ್ನೋ ಧ್ವನೀಹನಃ ॥೧೪॥ ನಿಷ್ಪಂದಾಸ್ತರವಸ್ಸರ್ವೇ ನಿಲೀನಾ ಮೃಗಪಕ್ಷಿಣಃ ॥ ನೈಶೇನ ತಮಸಾ ವ್ಯಾಪ್ತಾ ದಿಶಶ್ಚ ರಘುನಂದನ॥೧೫॥ಶನೈರ್ವಿಯುಜ್ಯತೇ ಸಂಧ್ಯಾ ನಭೋ ನೇತ್ರೈರಿವಾವೃತಂ॥ನಕ್ಷತ್ರ ತಾರಾಗಹನಂ ಜ್ಯೋತಿರ್ಭಿ ರವಭಾಸ್ಯತೇ॥೧೬॥ ಉತ್ತಿಷ್ಠತಿಚ ಶೀತಾಂಶು ಶ್ಯಶೀ ಲೋಕ ತಮೋನುದಃ॥ಹ್ಲಾದಯರ್ನ್ ಪ್ರಾಣಿನಾಂ ಲೋಕೇ ಮನಾಂಸಿ ಪ್ರಭಯಾವಿಭೋ ॥೧೭॥ ನೈಶಾನಿ ಸರ್ವಭೂತಾನಿ ಪ್ರಚ ರಂತಿ ತತಸ್ತತಃ॥ ಯಕ್ಷ ರಾಕ್ಷಸ ಸಂಘಾಶ್ಚ ರೌದ್ರಾಶ್ಚ ಪಿಶಿತಾಶನಾಃ॥೧೮॥ ಏವ**

ಕಥಾಃ - ಇತಿಹಾಸಗಳನ್ನು, ಕಥಯಥಃ - ಹೇಳುತ್ತಿರುವ, ಮಮ - ನನಗೆ, ಅರ್ಧರಾತ್ರಃ - ಅರ್ಧರಾತ್ರೋಪಲಕ್ಷಿತಕಾಲವು, ಗತಃ - ಕಳೆದುಹೋಯಿತು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ನಿದ್ರಾಂ - ನಿದ್ದೆಯನ್ನು, ಅಭ್ಯೇಹಿ - ಹೊಂದು, ಇಹ- ಈಗ, ಅಧ್ವನಿ - ಮಾರ್ಗದಲ್ಲಿ, ನಃ - ನಮಗೆ, ವಿಘ್ನಂ - ವಿಘ್ನವು, ಮಾಭೂತ್ - ಆಗದಿರಲಿ. ॥೧೪॥ ಹೇರಘುನಂದನ - ಎಲೈಶ್ರೀರಾಮನೆ, ಸರ್ವೇತರವಃ - ಸಮಸ್ತ ಗಿಡಗಳು, ನಿಷ್ಪಂದಾಃ - ಚಲನರಹಿತಗಳಾಗಿವೆ, ಮೃಗಪಕ್ಷಿಣಃ - ಮೃಗಗಳೂ ಹಕ್ಕಿಗಳೂ, ನಿಲೀನಾಃ - ಔತುಕೊಂಡು, ದಿಶಶ್ಚ-ದಿಕ್ಕುಗಳೂ, ನೈಶೇನ - ರಾತ್ರಿಸಂಬಂಧವಾದ, ತಮಸಾ - ಗಾಢಾಂಧಕಾರದಿಂದ, ವ್ಯಾಪ್ತಾಃ - ವ್ಯಾಪಿಸಿಕೊಳ್ಳಲ್ಪಟ್ಟವೆ, ಸಂಧ್ಯಾ - ಸಂಧ್ಯೆಯು, ಶನೈಃ - ಮೆಲ್ಲಮೆಲ್ಲಗೆ, ವಿಯುಜ್ಯತೆ - ಬಿಡಲ್ಪಟ್ಟಿತು, ನಕ್ಷತ್ರತಾರಾಗಹನಂ, ನಕ್ಷತ್ರ - ನಕ್ಷತ್ರಗಳಿಂದಲೂ, ತಾರಾ - ಅಶ್ವಿನ್ಯಾದಿನಕ್ಷತ್ರಗಳಿಂದಲೂ, ಗಹನಂ - ವ್ಯಾಪ್ತವಾದ, ನಭಃ - ಅಂತರಿಕ್ಷವು, ಜ್ಯೋತಿರ್ಭಿಃ - ಕಾಂತಿಗಳಿಂದ, ನೇತ್ರೈಃ - ನೇತ್ರಗಳಿಂದ, ಆವೃತಮಿವ - ವ್ಯಾಪ್ತವಾದಂತೆ, ಅವಭಾಸತೇ - ಹೊಳೆಯುತ್ತಿರುವುದು, ಹೇವಿಭೋ - ಎಲೈ ತತ್ತ್ವಾವಧಾರಣ ಸಮರ್ಥನೇ! ಶೀತಾಂಶುಃ - ಶೀತಕಿರಣನಾದ, ಲೋಕತಮೋನುದಃ - ಲೋಕದ ಅಂಧಕಾರವನ್ನು ಹೋಗಲಾಡಿಸುತ್ತಿರುವ, ಶಶೀ-ಚಂದ್ರನು, ಲೋಕೇ-ಲೋಕದಲ್ಲಿ, ಪ್ರಾಣಿನಾಂ-ಪ್ರಾಣಿಗಳ, ಮನಾಂಸಿ - ಮನಗಳನ್ನು, ಪ್ರಭಯಾ - ಕಾಂತಿಯಿಂದ, ಹ್ಲಾದಯರ್ನ್-ಸಂತೋಷಗೊಳಿಸುತ್ತ, ಉತ್ತಿಷ್ಠತಿ-ಉದಯಿಸುತ್ತಾನೆ. ನೈಶಾನಿ-(ತಿ) ರಾತ್ರಿಯಲ್ಲಿ ಹುಟ್ಟತಕ್ಕ, (ಗೋ) ರಾತ್ರಿಯ ಕಾಲದಲ್ಲಿ ಪ್ರಾಭವವುಳ್ಳ, ಸರ್ವಭೂತಾನಿ - ಎಲ್ಲ ಭೂತಗಳು, ತತಸ್ತತಃ - ಅಲ್ಲಲ್ಲಿ, ಪ್ರಚರಂತಿ-ಓಡಾಡುತ್ತವೆ, ಯಕ್ಷರಾಕ್ಷಸಸಂಘಾಶ್ಚ- ಯಕ್ಷ ರಾಕ್ಷಸರ ತಂಡಗಳು, ರೌದ್ರಾಃ-ಭಯಂಕರರಾದ, ಪಿಶಿತಾಶನಾಶ್ಚ - ಮಾಂಸಾಶನರೂ, ತತಸ್ತತಃ-ಅಲ್ಲಲ್ಲಿ, ಪ್ರಚರಂತಿ - ಸಂಚರಿಸುತ್ತಾರೆ. ॥೧೫-೧೮॥

ಎಲೈ ರಾಮಚಂದ್ರನೇ ! ನಾನು ಕಥೆಗಳನ್ನು ಹೇಳುತ್ತಿರುವಲ್ಲಿಯೇ ಅರ್ಧರಾತ್ರಿಯಾಯಿತು. ನಿದ್ರೆಯನ್ನು ಹೊಂದುವವನಾಗು. ನಾಳೆ ದಾರಿ ನಡೆವಾಗ ವಿಘ್ನವಾಗದಿರಲಿ, ಇತ್ತ ನೋಡಿದೆಯಾ? ವೃಕ್ಷಗಳು ಅಲುಗಾಡದಿರುವವು ; ಮೃಗಪಕ್ಷಿಗಳು ಅವಿತುಕೊಂಡಿರುವುವು; ನಿಶಾಚರಗಳಾದ ಭೂತಗಳೂ ಬಹುಭೀಕರಗಳಾಗಿಯೂ, ರಕ್ತಾಶನಗಳಾಗಿಯೂ, ಇರುವ ಯಕ್ಷ ರಾಕ್ಷಸ ಸಂಘಗಳು ಅಲ್ಲಿಂದಿಲ್ಲಿಗೆ ಓಡಾಡುತ್ತಿರುವವು.” ಎಂದೀ ಪ್ರಕಾರವಾಗಿ

ಮುಕ್ತ್ವಾ ಮಹಾತೇಜಾ ವಿರರಾಮ ಮಹಾಮುನಿಃ|| ಸಾಧು ಸಾಧ್ವಿತಿ ತಂ ಸರ್ವೇ ಮುನಯೋಹ್ಯಭ್ಯಪೂಜಯರ್ನ್ || ೧೯ || ಕುಶಿಕಾನಾಮಯಂ ವಂಶೋ ಮಹಾನ್ ಧರ್ಮಪರಸ್ಸದಾ || ಬ್ರಹ್ಮೋಪಮಾ ಮಹಾತ್ಮಾನಃ ಕುಶವಂಶ್ಯಾ ನರೋತ್ತಮಾಃ || ೨೦ || ವಿಶೇಷೇಣ ಭವಾನೇವ ವಿಶ್ವಾಮಿತ್ರೋ ಮಹಾಯಶಃ|| ಕೌಶಿಕೀ ಸರಿತಾಂ ಶ್ರೇಷ್ಠಾ ಕುಲೋದ್ಯೋತಕರೀ ತವ ||೨೧|| ಇತಿ ತೈರ್ಮುನಿಶಾರ್ದೂಲೈಃ ಪ್ರಶಸ್ತಃ ಕುಶಿಕಾತ್ಮಜಃ || ನಿದ್ರಾಮುಪಾಗಮ ಚ್ಛ್ರೀಮಾನಸ್ತಂ

---

ಮಹಾತೇಜಾಃ - ಮಹಾ ಪ್ರಭಾವಸಂತನೂ, ಮಹಾಮುನಿಃ- ಮಹರ್ಷಿಯೂ ಆದ ವಿಶ್ವಾಮಿತ್ರನು, ಏವಂ - ಹೀಗೆ, ಉಕ್ತ್ವಾ-ಹೇಳಿ, ವಿರರಾಮ-ಸುಮ್ಮನಾದನು. ಸರ್ವೇ-ಸಮಸ್ತರಾದ, ಮುನಯಃ-ಋಷಿಗಳು, ತಂ - ಆ ವಿಶ್ವಾಮಿತ್ರನನ್ನು, ಸಾಧುಸಾಧ್ವಿತಿ-ಬಹಳ ಚಂದವಾಯಿತೆಂದು, ಅಭ್ಯಪೂಜಯರ್ಹಿ-ಸ್ತೋತ್ರಮಾಡಿದರಷ್ಟೆ, ||೧೯|| ಕುಶಿಕಾನಾಂ-ಕುಶಿಕವಂಶೋತ್ಪನ್ನರಾದವರ, ಮಹಾನ್-ದೊಡ್ಡದಾದ, ಅಯಂವಂಶಃ - ಈ ವಂಶವು, ಸದಾ - ನಿರಂತರದಲ್ಲಿಯೂ, ಧರ್ಮಪರಃ - ಧರ್ಮದಲ್ಲೇ ಆಸಕ್ತಿಯುಳ್ಳ, ಕುಶವಂಶ್ಯಾಃ - ಕುಶವಂಶದಲ್ಲಿ ಹುಟ್ಟಿದ, ನರೋತ್ತಮಾಃ - ನರಶ್ರೇಷ್ಠರು, ಮಹಾತ್ಮಾನಃ - ಮಹಾನುಭಾವರು, ಬ್ರಹ್ಮೋಪಮಾಃ- ಚತುರ್ಮುಖಬ್ರಹ್ಮನಿಗೆ ಸದೃಶರು, ||೨೦|| ಹೇಮಹಾಯಶಃ - ಮಹಾಕೀರ್ತಿವಂತನೆ, ವಿಶೇಷೇಣ - ವಿಶೇಷವಾಗಿ, ಭವಾನೇವ-ನೀನೆ, ವಿಶ್ವಾಮಿತ್ರಃ - ಪ್ರಪಂಚಕ್ಕೆ ಮಿತ್ರನಾಗಿರುವೆ, ತವ-ನಿನ್ನ. ಕುಲೋದ್ಯೋತಕರೀ-ಕುಲಕ್ಕೆಲ್ಲ ಪ್ರಕಾಶಕರಳಾದ, ಕೌಶಿಕೀ-ಕೌಶಿಕೀನದಿಯು, ಸರಿತಾಂ - ನದಿಗಳೊಳಗೆ, ಶ್ರೇಷ್ಠಾ-ಪ್ರಶಸ್ತಳಾಗಿರುವಳು||೨೧|| ಇತಿ-ಹೀಗೆ,ತೈರ್ಮುನಿಶಾರ್ದೂಲೈಃ-ಆ ಋಷಿಶ್ರೇಷ್ಠರಿಂದ,ಪ್ರಶಸ್ತಃ-ಶ್ಲಾಘಿಸಲ್ಪಟ್ಟ, ಶ್ರೀಮಾನ್-ಸಂಪದ್ಯುಕ್ತನಾದ, ಕುಶಿಕಾತ್ಮಜಃ - ವಿಶ್ವಾಮಿತ್ರನು, ಅಸ್ತಂ - ಅಸ್ತಮಯ ಪರ್ವತವನ್ನು. ಗತಃ-ಹೊಂದಿದ, ಅಂಶುಮಾನಿವ - ಸೂರ್ಯನಂತೆ, ನಿದ್ರಾಂ - ನಿದ್ರೆಯನ್ನು, ಉಪಾಗಮತ್ - ಹೊಂದಿದನು. || ೨೨ || ರಾಮೋಽಪಿ - ಶ್ರೀರಾಮನೂ, ಸಹಸೌಮಿತ್ರಿಃ - ಲಕ್ಷ್ಮಣನಿಂದೊಡಗೂಡಿದವ

---

ಹೇಳಿದ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಸುಮ್ಮನಾದನು. || ೧೪-೧೯ || ಆಗಲಾ ಋಷಿಗಳೆಲ್ಲರೂ "ಎಲೈ ಕುಶಿಕಾತ್ಮಜನೇ ! ಈ ಕುಶವಂಶವು ಬಹು ಧರ್ಮಪರವಾದುದು. ಈ ವಂಶದಲ್ಲಿ ಹುಟ್ಟಿದ ಪುರುಷರೆಲ್ಲರೂ ಮಹಾತ್ಮರೂ, ಬ್ರಹ್ಮನಿಗೆ ಸಮನಾದವರೂ ಆಗಿರುವರು. || ೨೦ || ಅದರಲ್ಲಿಯೂ ವಿಶ್ವಾಮಿತ್ರನಾದ ನೀನು ಮಹಾ ಕೀರ್ತಿವಂತನು, ನಿನ್ನ ಅಕ್ಕನೂ, ನದಿಗಳಲ್ಲಿ ಶ್ರೇಷ್ಠವೂ ಆದ, ಕೌಶಿಕೀ ನದಿಯು ನಿನ್ನ ವಂಶದ ಕೀರ್ತಿಯನ್ನು ಪ್ರಕಾಶಗೊಳಿಸುವುದಾಗಿರುವುದು" ಎಂದು ಗೌರವಿಸಿದರು. || ೨೧ || ಇಂತು ಆ ಋಷಿಗಳಿಂದ ಸ್ತುತನಾದ ಕುಶಿಕಾತ್ಮಜನು ಅಸ್ತಂಗತನಾದ ಸೂರ್ಯನಂತೆ ಬಹುಬೇಗನೆ ನಿದ್ರೆಯನ್ನು ಹೊಂದಿದನು || ೨೨ || ಲಕ್ಷ್ಮಣನಿಂದೊಡಗೂಡಿದ ರಾಮಚಂದ್ರನೂ

ಗತ ಇವಾಂಶುಮಾನ್ ॥ ೨೨ ॥ ರಾಮೋಽಪಿ ಸಹಸೌಮಿತ್ರಿಃ ಕಿಂಚಿದಾಗತ
ವಿಸ್ಮಯಃ ॥ ಪ್ರಶಸ್ಯ ಮುನಿಶಾರ್ದೂಲಂ ನಿದ್ರಾಂ ಸಮುಪಸೇವತೇ ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ

---

ನಾಗಿ, ಕಿಂಚಿತ್ - ಸ್ವಲ್ಪವಾಗಿ, ಆಗತವಿಸ್ಮಯಃ - ಪ್ರಾಪ್ತವಾದ ಆಶ್ಚರ್ಯವುಳ್ಳವನಾಗಿ, ಮುನಿಶಾರ್ದೂಲಂ - ವಿಶ್ವಾಮಿತ್ರನನ್ನು, ಪ್ರಶಸ್ಯ - ಪ್ರಶಂಸೆಮಾಡಿ, ನಿದ್ರಾಂ - ನಿದ್ರೆಯನ್ನು, ಸಮುಪಸೇವತೇ - ಚನ್ನಾಗಿ ಹೊಂದಿದನು. ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ತ್ರಿಂಶಸ್ಸರ್ಗಃ

---

ವಿಶ್ವಾಮಿತ್ರನು ಹೇಳಿದ ಕಥೆಯನ್ನು ಕೇಳಿ, ಸಮಂತಗೆಯಿಂದಾತನನ್ನುಪ್ರಶಂಸಿಸಿ ನಿದ್ರಿಸಿದನು. ॥ ೨೩ ॥

ಇಂತಿದು ವಿಶ್ವಾಮಿತ್ರೋಕ್ತ ಸ್ವಕಥಾ ಕಥನ ವರ್ಣನವೆಂಬ ಮೂವತ್ತು
ನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ



ಉಪಾಸ್ಯ ರಾತ್ರಿಶೇಷಂತು ಶೋಣಾಕೂಲೇ ಮಹರ್ಷಿಭಿಃ||ನಿಶಾಯಾಂ ಸುಪ್ರಭಾತಾಯಾಂ ವಿಶ್ವಾಮಿತ್ರೋಽಭ್ಯಭಾಷತ ||೧|| ಸುಪ್ರಭಾತಾ ನಿಶಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ || ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಗಮನಾಯಾಭಿರೋಚಯ ||೨|| ತಚ್ಛ್ರುತ್ವಾ ವಚನಂ ತಸ್ಯ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಂ||

---

ವಿಶ್ವಾಮಿತ್ರಃ - ವಿಶ್ವಾಮಿತ್ರನು ಶೋಣಾಕೂಲೇ-ಶೋಣಾನದೀತೀರದಲ್ಲಿ, ಮಹರ್ಷಿಭಿಃ-ಋಷಿಗಳೊಡನೆ, ರಾತ್ರಿಶೇಷಂ - ಮಿಕ್ಕರಾತ್ರಿಯನ್ನು, ಉಪಾಸ್ಯ - (ತಿ) ನಿದ್ರೆಯಿಂದ ಕಳೆದು ನಿಶಾಯಾಂ - ರಾತ್ರಿಯು, ಸುಪ್ರಭಾತಾಯಾಂ - ಬೆಳಗಾಗುತ್ತಿರಲು, ಅಭ್ಯಭಾಷತ - ಮಾತನಾಡಿದನು ||೧|| (೧) ಹೇರಾಮ - ಎಲೈ ಶ್ರೀರಾಮನೆ, ನಿಶಾ - ರಾತ್ರಿಯು, ಸುಪ್ರಭಾತಾ - ಸುಖವಾಗಿ ಬೆಳಗಾದುದಾಯಿತು, ಪೂರ್ವಾಸಂಧ್ಯಾ -ಪ್ರಾತಃಕಾಲಿಕವಾದ ಸಂಧ್ಯಾಕಾಲವು, ಪ್ರವರ್ತತೇ-ಪ್ರವರ್ತಿಸಿತು, ತೇ - ನಿನಗೆ, ಭದ್ರಂ- ಶುಭವು, ಅಸ್ತು- ಆಗಲಿ, ಉತ್ತಿಷ್ಠೋತ್ತಿಷ್ಠ - ಏಳು, ಗಮನಾಯ - ಪ್ರಯಾಣ ಮಾಡಲು, ಅಭಿರೋಚಯ - ಸಮ್ಮತಿಸು, ||೨|| ತಸ್ಯ - ಆ ವಿಶ್ವಾಮಿತ್ರನ, ತದ್ವಚನಂ - ಆ ಮಾತನ್ನು, ಕೃತ್ವಾ-ಕೇಳಿ, ಪೌರ್ವಾಹ್ಣಿಕೀಂ - ಪ್ರಾತಃಕಾಲಿಕವಾದ,

---

ಈ ರೀತಿ ವಿಶ್ವಾಮಿತ್ರನು ಶೋಣಾ ನದೀ ತೀರದಲ್ಲಿ ಆ ಋಷಿಗಳೊಡನೆ ರಾತ್ರಿಯನ್ನು ಕಳೆದು, ಸುಖವಾಗಿ ಬೆಳಗಾಗಲು ರಾಮಚಂದ್ರನನ್ನು ಕುರಿತು ಹೀಗೆ ನುಡಿದನು. || ೧ || "ರಾಮ ! ಸುಪ್ರಭಾತವಾಗಿರುವುದು. ಪ್ರಾತಃಕಾಲೀನವಾದ ಸಂಧ್ಯಾಕಾಲವೂ ಸಹ ಸಮೀಪಿಸಿರುವುದು. ಏಳು ! ಏಳು !! ನಿನಗೆ ಮಂಗಳವಾಗಲಿ; ಮುಂದಿನ ಪ್ರಯಾಣಕ್ಕನುವಾಗು." || ೨ || ಇಂತು ನುಡಿದ ವಿಶ್ವಾತ್ರನ ಮಾತನ್ನು ಕೇಳಿದ ಶ್ರೀರಾಮನು

---

ಟಿಪ್ಪಣಿ (೧) ಹಿಂದಿನ ಗ್ರಂಥಕರ್ತರಾದ ಕಟ್ಟಿಭೀರಾಮಶಾಸ್ತ್ರಿಗಳು ಈ ಶ್ಲೋಕಕ್ಕೆ ಅರ್ಥವನ್ನು ಒರೆದಿರುತ್ತಾರೆ. ಇಂತಹ ಶ್ಲೋಕಗಳು ಹಿಂದೆ ಒಂದೆರಡು ಬಂದಿರುತ್ತವೆ. ಅವಕ್ಕೂ ಹೀಗೆಯೇ ಅರ್ಥವನ್ನು ಮಾಡಬಹುದಾಗಿದ್ದಿತು. ಈ ತೆರದ ಅರ್ಥಗಳು ಯಾವ ವ್ಯಾಖ್ಯಾನದಲ್ಲಿಯೂ ಇಲ್ಲ ಆದರೂ ಅರ್ಥಸ್ವಾರಸ್ಯಲೋಭದಿಂದ ಇದನ್ನು ಇಲ್ಲಿ ಕೊಟ್ಟಿರುತ್ತೇನೆ

ಹೇರಾಮ – ಎಲೈ ಸರ್ವಭೂತಾನಂದಕರನಾದ ಶ್ರೀರಾಮನೆ ! ನಿನ್ನ ದರ್ಶನಮಾತ್ರದಿಂದ ನನಗೆ ಈ ರಾತ್ರಿಯು, ಸುಪ್ರಭಾತಾ – ಸುಖದಿಂದಲೇ ಬೆಳಗಾಯಿತು, ಪೂರ್ವಾಸಂಧ್ಯಾ – ಪ್ರಾತಃಕಾಲಿಕವಾದ ಸಂಧ್ಯಾಕಾಲವು, ಪ್ರವರ್ತತೇ – ಪ್ರವರ್ತಿಸಿತು, ಉತ್ತಿಷ್ಠೋತ್ತಿಷ್ಠ – ವಂದಿಮಾಗಧರಿಲ್ಲದ ಈ ಸ್ಥಳದಲ್ಲಿ ನಾನೇ ಪ್ರಬೋಧಕನಾಗಿರುವೆನು ನಿದ್ರೆಯಿಂದ ಎಚ್ಚರಿಕೆಯನ್ನು ಹೊಂದು, ತೇ – ನಿನಗೆ, ಭದ್ರಂ – ಕಲ್ಯಾಣವು, ಅಸ್ತು – ಆಗಲಿ, ಗಮನಾಯ – ಮುಂದಿನಪ್ರಯಾಣಕ್ಕೆ, ಅಭಿರೋಚಯ – ಉದ್ಯುಕ್ತನಾಗು.

ಗಮನಂ ರೋಚಯಾಮಾಸ ವಾಕ್ಯಂಚೇದಮುವಾಚಹ || ೩ || ಅಯಂ ಶೋಣಶ್ಶುಭಜಲೋಽಗಾಧಃ ಪುಳಿನಮಂಡಿತಃ|| ಕತರೇಣ ಪಥಾ ಬ್ರಹ್ಮನ್ ಸಂತರಿಷ್ಯಾಮಹೇ ವಯಂ || ೪ || ಏವಮುಕ್ತಸ್ತು ರಾಮೇಣ ವಿಶ್ವಾಮಿತ್ರೋಽಬ್ರವೀದಿದಂ || ಏಷಪಂಥಾ ಮಯೋದ್ದಿಷ್ಟೋ ಯೇನ ಯಾಂತಿ ಮಹರ್ಷಯಃ || ೫ || ಏವಮುಕ್ತಾ ಮಹರ್ಷಯೋ ವಿಶ್ವಾಮಿತ್ರೇಣ ಧೀಮತಾ || ಪಶ್ಯಂತಸ್ತೇ ಪ್ರಯಾತಾವೈ ವನಾನಿ ವಿವಿಧಾನಿಚ ||೬|| ತೇಗತ್ವಾ ದೂರಮಧ್ವಾನಂ ಗತೇಽರ್ಧದಿವಸೇ ತದಾ|| ಜಾಹ್ನವೀಂ ಸರಿತಾಂ ಶ್ರೇಷ್ಠಾಂ ದದೃಶುರ್ಮುನಿಸೇವಿತಾಂ||೭||

---

ಕ್ರಿಯಾಂ - ಕರ್ಮವನ್ನು, ಕೃತ್ವಾ - ಮಾಡಿ, ಗಮನಂ - ಪ್ರಯಾಣವನ್ನು, ರೋಚಯಾಮಾಸ- ಸಮ್ಮತಿಸಿದನು. || ೩ || ಶುಭಜಲಃ-ಶುಭಕರವಾದ ಜಲವುಳ್ಳ, ಅಯಂಶೋಣಃ - ಈ ಪುರುಷನದವು, ಅಗಾಧಃ - ಬಹು ನಿಮ್ನವಾಗಿರುವುದು, ಪುಳಿನಮಂಡಿತಃ - ಮರಳು ದಿಬ್ಬಗಳಿಂದ ಅಲಂಕೃತವಾಗಿರುವುದು, ಹೇಬ್ರಹ್ಮನ್ - ಎಲೈ ಋಷಿಯೆ, ವಯಂ - ನಾವು, ಕತರೇಣಪಥಾ-ಯಾವ ಮಾರ್ಗದಿಂದ, ಸಂತರಿಷ್ಯಾಮಹೇ - ದಾಟುವೆವು, ಇತಿ - ಇಂತೆಂದು, ವಾಕ್ಯಂಚ - ವಚನವನ್ನು, ಉವಾಚ - ಹೇಳಿದನು, || ೪ || ಏವಂ - ಹೀಗೆ, ರಾಮೇಣ - ಶ್ರೀರಾಮನಿಂದ, ಉಕ್ತಃ - ಹೇಳಲ್ಪಟ್ಟ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನು, ಯೇನ - ಯಾವ ಮಾರ್ಗದಿಂದ, ಮಹರ್ಷಯಃ - ಋಷಿಗಳು, ಯಾಂತಿ-ಹೋಗುತ್ತಾರೋ, ಏಷಪಂಥಾಃ ಇದೇ ಮಾರ್ಗವು, ಮಯಾ-ನನ್ನಿಂದ, ಉದ್ದಿಷ್ಟಃ ಉದ್ದೇಶ ಮಾಡಲ್ಪಟ್ಟಿರುವುದು ಎಂದು, ಇದಂ - ಈ ವಚನವನ್ನು ಅಬ್ರವೀತ್-ನುಡಿದನು. ||೫|| ಏವಂ - ಈಪರಿ, ಧೀಮತಾ - ಬ್ರಹ್ಮಜ್ಞಾನಿಯಾದ, ವಿಶ್ವಾಮಿತ್ರೇಣ- ವಿಶ್ವಾಮಿತ್ರನಿಂದ, ಉಕ್ತಾಃ- ಹೇಳಲ್ಪಟ್ಟ, ತೇ ಮಹರ್ಷಯಃ - ಆ ಮಹರ್ಷಿಗಳು, ವಿವಿಧಾನಿ - ನಾನಾಬಗೆಗಳಾದ, ವನಾನಿ-ವನಗಳನ್ನು, ಪಶ್ಯಂತಃ - ನೋಡುತ್ತ, ಪ್ರಯಾತಾವೈ - ಹೊರಟರಷ್ಟೆ, ||೬|| ತೇ - ಆ ಋಷಿಗಳು, ದೂರಮಧ್ವಾನಂ - ಬಹುದೂರವಾದ ಮಾರ್ಗದಲ್ಲಿ, ಗತ್ವಾ- ಹೋಗಿ, ಅರ್ಧದಿವಸೇ-ದಿವಸಾರ್ಧವು, ಗತೇಸತಿ - ಕಳೆದುಹೋಗುತ್ತಿರಲು, ಮುನಿಸೇವಿತಾಂ - ಋಷಿಗಳಿಂದ ಸೇವಿಸಲ್ಪಟ್ಟ, ಸರಿತಾಂ- ನದಿಗಳೊಳಗೆ, ಶ್ರೇಷ್ಠಾಂ - ಶ್ರೇಷ್ಠಳಾದ. ಜಾಹ್ನವೀಂ - ಗಂಗಾನದಿಯನ್ನು, ದದೃಶುಃ-ಕಂಡರು. ||೭||

---

ಪ್ರಾತಸ್ಸಂಧ್ಯಾದಿ ಕರ್ಮಗಳನ್ನಾಚರಿಸಿ ಮುಂಬರಿಯಲಿಚ್ಛಿಸಿ ಹೀಗೆಂದನು. || ೩ || "ಎಲೈ ಬ್ರಾಹ್ಮಣನೇ! ಈ ಶೋಣಾನದಿಯು ನಿರ್ಮಲೋದಕವುಳ್ಳದೂ, ಅತ್ಯಗಾಧವಾದುದೂ, ಮರಳು ದಿಬ್ಬಗಳಿಂದಲಂಕೃತವಾದುದೂ ಆಗಿರುವುದಲ್ಲವೇ! ಯಾವ ಮಾರ್ಗದಿಂದ ಈ ನದಿಯನ್ನು ದಾಟುವೆವು." || ೪ || ಹೀಗೆ ಹೇಳಲ್ಪಟ್ಟ ವಿಶ್ವಾಮಿತ್ರನು, "ಎಲೈ ರಾಮಚಂದ್ರನೇ! ಯಾವ ಮಾರ್ಗದಲ್ಲಿ ಈ ಋಷಿಗಳೆಲ್ಲರೂ ಹೋಗುವರೋ ಅಂತಹ ಈ ಮಾರ್ಗದಲ್ಲಿಯೇ ಹೋಗಬೇಕೆಂದು ನನ್ನಿಂದ ಸಂಕಲ್ಪಿತವಾಗಿರುವುದು" ಎಂದನು. || ೫ || ಬುದ್ಧಿವಂತನಾದ ವಿಶ್ವಾಮಿತ್ರನೀರೀತಿ ಹೇಳಲು, ಅವರೆಲ್ಲರೂ ವಿಧ ವಿಧವಾದ ವನಗಳನ್ನು ನೋಡುತ್ತಾ ಮುಂದೆ ಹೊರಟರು ಇಂತು ಬಹುದೂರ ನಡೆದು ಮಧ್ಯಾಹ್ನದಲ್ಲಿ ಋಷಿಗಳಿಂದ ಸೇವಿಸಲ್ಪಟ್ಟ, ನದಿಗಳಲ್ಲಿ ಶ್ರೇಷ್ಠವಾದ ಗಂಗಾನದಿಯನ್ನು ಕಂಡರು. ||೭||

ತಾಂ ದೃಷ್ಟ್ವಾ ಪುಣ್ಯಸಲಿಲಾಂ ಹಂಸ ಸಾರಸ ಸೇವಿತಾಂ ॥ ಬಭೂವುರ್ಮುದಿತಾ ಸ್ಸರ್ವೇ ಮುನಯಸ್ಸಹ ರಾಘವಾಃ॥೮॥ ತಸ್ಯಾಸ್ತೀರೇ ತತಶ್ಚಕ್ರುಸ್ತ ಆವಾಸಪರಿಗ್ರಹಂ ॥ ತತಸ್ಸ್ನಾತ್ವಾ ಯಥಾ ನ್ಯಾಯಂ ಸಂತರ್ಪ್ಯ ಪಿತೃದೇವತಾಃ ॥ ೯ ॥ ಹುತ್ವಾಚೈವಾಗ್ನಿಹೋತ್ರಾಣಿ ಪ್ರಾಶ್ಯಚಾಮೃತವದ್ಧವಿಃ ॥ ವಿವಿಶುರ್ಜಾಹ್ನವೀ ತೀರೇ ಶುಚೌ ಮುದಿತಮಾನಸಾಃ ॥ ೧೦ ॥ ವಿಶ್ವಾಮಿತ್ರಂ ಮಹಾತ್ಮಾನಂ ಪರಿವಾರ್ಯಸಮಂತತಃ॥ ಅಥ ತತ್ರ ತದಾ ರಾಮೋ ವಿಶ್ವಾಮಿತ್ರಮಥಾಬ್ರವೀತ್ ॥ ॥ ೧೧ ॥ ಭಗವರ್ನ್ ಶ್ರೋತುಮಿಚ್ಛಾಮಿ ಗಂಗಾ ತ್ರಿಪಥಗಾಂ ನದೀಂ ॥ ತ್ರೈಲೋಕ್ಯಂ ಕಥಮಾಕ್ರಮ್ಯ ಗತಾ ನದ ನದೀಪತಿಂ ॥೧೨॥ ಚೋದಿತೋ ರಾಮ

---

ಸರ್ವೇಮುನಯಃ-ಸಮಸ್ತ ಋಷಿಗಳು, ಸಹರಾಘವಾಃ-ಶ್ರೀರಾಮನಿಂದೊಡಗೂಡಿ, ಪುಣ್ಯಸಲಿಲಾಂ-ಪುಣ್ಯಕರವಾದ ಉದಕವುಳ್ಳ, ಹಂಸಸಾರಸಸೇವಿತಾಂ-ಹಂಸಗಳಿಂದಲೂ, ಪಕ್ಷಿಗಳಿಂದಲೂ, ಸಾರಸಪಕ್ಷಿಗಳಿಂದಲೂ ಸೇವಿಸಲ್ಪಟ್ಟ, ತಾಂ - ಆ ಗಂಗಾ ನದಿಯನ್ನು, ದೃಷ್ಟ್ವಾ - ಕಂಡು, ಮುದಿತಾಃ-ಸಂತೋಷಗೊಂಡವರು, ಬಭೂವುಃ - ಆದರು ॥ ೮ ॥ ತತಃ - ಬಳಿಕ, ತೇ - ಆ ಋಷಿಗಳು, ತಸ್ಯಾಃ-ಆ ಗಂಗಾನದಿಯ, ತೀರೇ-ದಡದಲ್ಲಿ, ಆವಾಸಪರಿಗ್ರಹಂ, ಆವಾಸ-ನಿವಾಸಕ್ಕೆ, ಪರಿಗ್ರಹಂ-ವಸತಿಯನ್ನು, ಚಕ್ರುಃ-ಮಾಡಿದರು, ತತಃ-ಬಳಿಕ, ಯಥಾನ್ಯಾಯಂ-ಶಾಸ್ತ್ರೋಕ್ತವಾಗಿ, ಸ್ನಾತ್ವಾ-ಸ್ನಾನಮಾಡಿ, ಪಿತೃದೇವತಾಃ ಪಿತೃದೇವತೆಗಳನ್ನು ಕುರಿತು, ಸಂತರ್ಪ್ಯ-ತರ್ಪಣವೂ ಮಾಡಿ, ಅಗ್ನಿಹೋತ್ರಾಣಿಚ - ಅಗ್ನಿಹೋತ್ರಾದಿ ಕರ್ಮಗಳನ್ನು, ಹುತ್ವಾ - ಮಾಡಿ, ಹವಿಃ- ಹವಿರ್ಭಾಗವನ್ನು, ಅಮೃತವತ್ - ಅಮೃತದ ಹಾಗೆ, ಪ್ರಾಶ್ಯಚ - ಪ್ರಾಶನವನ್ನೂ ಮಾಡಿ, ಶುಚೌ-ಪರಿಶುದ್ಧವಾದ, ಜಾಹ್ನವೀತೀರೇ - ಗಂಗಾತೀರದಲ್ಲಿ, ಮಹಾತ್ಮಾನಂ - ಮಹಾನುಭಾವನಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಸಮಂತತಃ- ಯೆಲ್ಲೆಡೆಯಲ್ಲಿ, ಪರಿವಾರ್ಯ-ಸುತ್ತಿಕೊಂಡು, ಮುದಿತಮಾನಸಾಃ-ಸಂತೋಷಗೊಂಡ ಮನಸ್ಸುಳ್ಳವನಾಗಿ, ವಿವಿಶುಃ-ಕುಳಿತುಕೊಂಡರು, ॥೯-೧೦॥ ಅಥ-ಅನಂತರ, ತತ್ರ - ಆ ಗಂಗಾನದೀತೀರದಲ್ಲಿ, ತದಾ - ಆ ಕಾಲದಲ್ಲಿ, ರಾಮಃ -ಶ್ರೀರಾಮನು, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಹೇಭಗವರ್ನ್- ಎಲೈ ಪೂಜ್ಯನೆ, ತ್ರಿಪಥಗಾಂ-ಸ್ವರ್ಗ, ಮರ್ತ್ಯ, ಪಾತಾಳ

---

ಪುಣ್ಯೋದಕವುಳ್ಳುದೂ, ಹಂಸ ಕಾರಂಡಾದಿಗಳಿಂದ ಸೇವಿಸಲ್ಪಟ್ಟುದೂ, ಆದ ಗಂಗಾನದಿಯನ್ನು ನೋಡಿ ರಾಮ ಲಕ್ಷ್ಮಣರಿಂದೊಡಗೊಡಿದ ಋಷಿಗಳೆಲ್ಲರೂ ಸಂತಸಪಟ್ಟರು ॥೭-೮॥ ಆ ಬಳಿಕ ಅವರೆಲ್ಲರೂ ಆ ನದಿಯ ತೀರದಲ್ಲಿ ತಂಗಿ ಸ್ನಾನವಂ ಗೈದು ಶಾಸ್ತ್ರೋಕ್ತವಾಗಿ ಪಿತೃದೇವತೆಗಳಿಗೆ ತರ್ಪಣವನ್ನಿತ್ತು ಅಗ್ನಿಹೋತ್ರಾದಿ ಕರ್ಮಗಳನ್ನಾಚರಿಸಿ ಅಮೃತೋಪಮವಾದ ಯಜ್ಞಶೇಷವನ್ನುಂಡು ಸಂತೋಷ ಸ್ವಾಂತವುಳ್ಳವರಾಗಿಯೂ, ಶುಚಿರ್ಭೂತರಾಗಿಯೂ, ಮಹಾತ್ಮನಾದ ವಿಶ್ವಾಮಿತ್ರನಸುತ್ತಲೂ ಕುಳಿತುಕೊಂಡರು ॥೯-೧೦॥ ಆಗಲಾ ರಾಮಚಂದ್ರನು ವಿಶ್ವಾಮಿತ್ರನನ್ನು ಕುರಿತು “ಎಲೈ ಪೂಜ್ಯನೇ ! ತ್ರಿಪಥ ಗಾಮಿನಿಯಾದ ಈ ಗಂಗಾನದಿಯ ವಿಷಯವನ್ನು ಕೇಳಲಿಚ್ಛಿಸುವೆನು, ಈ ನದಿಯು ಸ್ವರ್ಗ, ಮರ್ತ್ಯ,

ವಾಕ್ಯೇನ ವಿಶ್ವಾಮಿತ್ರೋ ಮಹಾಮುನಿಃ॥ ವೃದ್ಧಿಂ ಜನ್ಮಚ ಗಂಗಾಯಾವಕ್ತು ಮೇವೋಪಚಕ್ರಮೇ ॥೧೩॥ ಶೈಲೇಂದ್ರೋ ಹಿಮವಾನ್ನಾಮ ಧಾತೂನಾಮಾಕರೋಮಹಾನ್ ॥ ತಸ್ಯ ಕನ್ಯಾದ್ವಯಂ ರಾಮ ರೂಪೇಣಾಽಪ್ರತಿಮಂಭುವಿ ॥೧೪॥ ಯಾ ಮೇರುದುಹಿತಾ ರಾಮ ತಯೋರ್ಮಾತಾ ಸುಮಧ್ಯಮಾ॥ನಾಮ್ನಾ ಮನೋರಮಾ ನಾಮ ಪತ್ನೀ ಹಿಮವತಃ ಪ್ರಿಯಾ॥೧೫॥ ತಸ್ಯಾಂ ಗಂಗೇಯಮಭವಜ್ಜ್ಯೇಷ್ಠಾ ಹಿಮವತಸ್ಸುತಾ॥ಉಮಾ ನಾಮ ದ್ವಿತೀಯಾಭೂನ್ನಾಮ್ನಾ ತಸ್ಯೈವ ರಾಘವ ॥೧೬॥ ಅಥ ಜ್ಯೇಷ್ಠಾಂ ಸುರಾ

ಗಳೆಂಬ ಮೂರು ಮಾರ್ಗಗಳನ್ನು ಹೊಂದಿರುವ, ಗಂಗಾನದೀಂ - ಗಂಗಾನದಿಯ ವಿಷಯವನ್ನು, ಶ್ರೋತುಂ - ಕೇಳಲು, ಇಚ್ಛಾಮಿ - ಇಚ್ಛಿಸುತ್ತೇನೆ, ತ್ರೈಲೋಕ್ಯಂ ಲೋಕತ್ರಯವನ್ನು, ಕಥಂ- ಹೇಗೆ, ಆಕ್ರಮ್ಯ - ವ್ಯಾಪಿಸಿ, ನದನದೀಂಪತಿಂ-ನದಗಳಿಗೂ ನದಿಗಳಿಗೂ ಅಧಿಪತಿಯಾದ ಸಮುದ್ರವನ್ನು ಕುರಿತು, ಗತಾಃ - ಹೊಂದಿದಳು, ಇತಿ - ಇಂತೆಂದು, ಅಬ್ರವೀತ್-ನುಡಿದನು. ॥೧೧-೧೨॥ ರಾಮವಾಕ್ಯೇನ - ಶ್ರೀರಾಮನ ವಚನದಿಂದ, ಚೋದಿತಃ - ಪ್ರೇರಿತನಾಗಿ, ಮಹಾಮುನಿಃ-ಮಹರ್ಷಿಯಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ಗಂಗಾಯಾಃ-ಗಂಗಾನದಿಯ, ಜನ್ಮಚ ಉತ್ಪತ್ತಿಯನ್ನೂ, ವೃದ್ಧಿಂಚ - ವೃದ್ಧಿಯನ್ನು, ವಕ್ತುಮೇವ - ಹೇಳುವದಕ್ಕೋಸ್ಕರವೇ, ಉಪಚಕ್ರಮೇ - ಉಪಕ್ರಮಿಸಿದನು ॥ ೧೩ ॥ ಧಾತೂನಾಂ - ಗೈರಿಕಾದಿ ಧಾತುಗಳಿಗೆ, ಆಕರಃ - ಉತ್ಪತ್ತಿಸ್ಥಾನವಾದ, ಮಹಾನ್ - ದೊಡ್ಡದಾದ, ಹಿಮವಾನ್ನಾಮ - ಹಿಮವತ್ಪರ್ವತವೆಂದು ಪ್ರಸಿದ್ಧವಾದ, ಶೈಲೇಂದ್ರಃ- ಪರ್ವತಶ್ರೇಷ್ಠವು, ಅಸ್ತಿ - ಇರುವುದು, ಹೇರಾಮ - ಎಲೈ ಶ್ರೀರಾಮನೆ, ತಸ್ಯ- ಆ ಹಿಮವಂತನಿಗೆ ರೂಪೇಣ - ರೂಪದಿಂದ ಭುವಿ - ನೆಲದಲ್ಲಿ, ಅಪ್ರತಿಮಂ-ಸಮಾನ ರಹಿತವಾದ, ಕನ್ಯಾದ್ವಯಂ- ಇಬ್ಬರು ಕನ್ಯಕೆಯರು, ಆಸೀತ್ ಆದರು. ॥ ೧೪ ॥ ಹೇರಾಮ - ಎಲೈ ಶ್ರೀರಾಮನೆ, ತಯೋಃ- ಆ ಕನ್ಯಕೆಯರಿಬ್ಬರಿಗೂ, ಮಾತಾ - ತಾಯಿಯಾದ, ಸುಮಧ್ಯಮಾ - ಸಮೀಚೀನವಾದ ಮಧ್ಯಪ್ರದೇಶವುಳ್ಳ, ನಾಮ್ನಾ - ಹೆಸರಿನಿಂದ, ಮನೋರಮಾನಾಮ - ಮನೋರಮೆ ಎಂದು ಪ್ರಸಿದ್ಧಳಾಗಿರುವ, ಯಾ - ಯಾವ ಸ್ತ್ರೀಯು, ಮೇರುದುಹಿತಾಃ - ಮೇರುಪರ್ವತದ ಮಗಳೋ, ಸಾ- ಆ ಮನೋರಮೆಯು, ಹಿಮವತಃ - ಹಿಮವಂತನಿಗೆ, ಪತ್ನೀ – ಧರ್ಮಪತ್ನಿಯು, ಆಸೀತ್-ಆದಳು, ॥ ೧೫ ॥ ತಸ್ಯಾಂ - ಆ ಮನೋರಮೆಯಲ್ಲಿ, ಹಿಮವತಃ- ಹಿಮವಂತನಿಗೆ, ಜ್ಯೇಷ್ಠಾ-ಜ್ಯೇಷ್ಠಳೂ,

ಪಾತಾಳಗಳೆಂಬ ಮೂರು ಲೋಕಗಳನ್ನೂ ಆಕ್ರಮಿಸಿ, ನದ ನದಿಗಳೊಡೆಯನಾದ ಸಾಗರವನ್ನು ಸೇರಿದು ಹೇಗೆ" ಎಂದು ಕೇಳಿದನು. ॥ ೧೧-೧೨ ॥ ಇಂತು ರಾಮ ವಾಕ್ಯದಿಂದ ಪ್ರೇರಿತನಾದ ವಿಶ್ವಾಮಿತ್ರಮುನಿಯು ಆ ನದಿಯ ಹುಟ್ಟುವಿಕೆಯನ್ನೂ ಜನ್ಮ ಚರಿತ್ರೆಯನ್ನೂ ಹೇಳಲಾರಂಭಿಸಿದನು ॥೧೩॥ ಎಲೈ ರಾಘವನೇ! ಗೈರಿಕಾದಿ ಧಾತುಗಳಿಗೆ ಗಣಿಯಂತಿರುವ ಹಿಮವಂತನೆಂಬ ಶೈಲರಾಜನೊಬ್ಬನಿರುವನು. ಆತನಿಗ ಅಸಮಾನ ರೂಪವತಿಯರಾದ ಕುವರಿಯರೀರ್ವರುಂಟು. ॥೧೪॥ ಇವರ ತಾಯಿಯೂ, ಹಿಮವಂತನ ಪತ್ನಿಯೂ ಆದವಳು ಮೇರು ಪರ್ವತ ರಾಜನ ಮಗಳಾದವಳು ಮನೋರಮೆ ಎಂಬುವಳು. ಈ

ಸ್ಸರ್ವೇ ದೇವತಾರ್ಥ ಚಿಕೀರ್ಷಯಾ || ಶೈಲೇಂದ್ರಂ ವರಯಾಮಾಸುರ್ಗಂಗಾಂ ತ್ರಿಪಥಗಾಂ ನದೀಂ ||೧೭|| ದದೌ ಧರ್ಮೇಣ ಹಿಮವಾಂ ಸ್ತನಯಾಂ ಲೋಕ ಪಾವನೀಂ|| ಸ್ವಚ್ಛಂದ ಪಥಗಾಂ ಗಂಗಾಂ ತ್ರೈಲೋಕ್ಯ ಹಿತಕಾಮ್ಯಯಾ||೧೮|| ಪ್ರತಿಗೃಹ್ಯ ತತೋ ದೇವಾಸ್ತ್ರಿಲೋಕ ಹಿತಕಾರಿಣಃ||ಗಂಗಾಮಾದಾಯ ತೇಗಚ್ಛನ್ ಕೃತಾರ್ಥೇನಾಂತರಾತ್ಮನಾ || ೧೯ || ಯಾಚಾನ್ಯಾ ಶೈಲದುಹಿತಾ ಕನ್ಯಾಸೀ ದ್ರಘುನಂದನ || ಉಗ್ರಂ ಸಾ ವ್ರತಮಾಸ್ಥಾಯ ತಪಸ್ತೇಪೇ ತಪೋಧನಾ||೨೦|| ಉಗ್ರೇಣ ತಪಸಾ ಯುಕ್ತಾಂ ದದೌ ಶೈಲವರಸ್ಸುತಾಂ || ರುದ್ರಾಯ

ಸುತಾ ಕುವರಿಯೂ ಆದ, ಇಯಂಗಂಗಾ - ಈ ಗಂಗಾನದಿಯು, ಅಭವತ್ - ಆದಳು, ಹೇ ರಾಘವ - ಎಲೈ ಶ್ರೀರಾಮನೆ! ತಸ್ಯೈವ - ಅದೇ ಹಿಮವಂತನಿಗೆ, ನಾಮ್ನಾ-ಹೆಸರಿನಿಂದ, ಉಮಾ ನಾಮ - ಪಾರ್ವತೀ ಎಂದು ಪ್ರಸಿದ್ಧಳಾದ, ದ್ವಿತೀಯಾ - ಎರಡನೇ ಮಗಳು, ಅಭವತ್- ಆದಳ, ||೧೬|| ಅಥ - ಬಳಿಕ, ಸರ್ವೇ - ಸಮಸ್ತ, ಸುರಾಃ - ದೇವತೆಗಳು, ಜ್ಯೇಷ್ಠಾಂ-ಜ್ಯೇಷ್ಠ ಪುತ್ರಿಯಾದ, ತ್ರಿಪಥಗಾಂ - ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಮಾರ್ಗಗಳನ್ನು ಹೊಂದಿರುವ, ಗಂಗಾಂನದೀಂ - ಗಂಗಾನದಿಯನ್ನು, ಶೈಲೇಂದ್ರಂ - ಪರ್ವತರಾಜನಾದ ಹಿಮವಂತನ ಕುರಿತು, ವರಯಾಮಾಸುಃ - ಬೇಡಿದರು. ||೧೭|| ಹಿಮವಾನ್ - ಹಿಮವಂತನು, ಲೋಕ ಪಾವನೀಂ ಲೋಕವನ್ನು ಪರಿಶುದ್ಧ ಮಾಡುತ್ತಿರುವ, ಧರ್ಮೇಣ - ಸ್ವಸುಕೃತ ವಿಶೇಷದಿಂದ, ತನಯಾಂ - ಮಗಳಾದ, ಸ್ವಚ್ಛಂದಪಥಗಾಂ - ಸ್ವೇಚ್ಛಾಧೀನ ಮಾರ್ಗದಿಂದ ಹೋಗುತ್ತಿರುವ, ಗಂಗಾಂ - ಗಂಗಾನದಿಯನ್ನು, ತ್ರೈಲೋಕ್ಯಹಿತಕಾಮ್ಯಯಾ - ಲೋಕತ್ರಯಕ್ಕೆ ಪ್ರಿಯವನ್ನುಂಟು ಮಾಡಬೇಕೆಂಬ ಇಚ್ಛೆಯಿಂದ, ದದೌ - ಕೊಟ್ಟನು ||೧೮|| ತತಃ - ಬಳಿಕ, ತ್ರಿಲೋಕಹಿತ ಕಾರಿಣಃ - ಮೂರು ಲೋಕಗಳಿಗೂ ಹಿತಕರರಾದ, ತೇದೇವಾಃ - ಆ ದೇವತೆಗಳು, ಗಂಗಾಂ-ಗಂಗಾ ನದಿಯನ್ನು, ಪ್ರತಿಗೃಹ್ಯ - ಪರಿಗ್ರಹಿಸಿ, ಆದಾಯ - ತೆಗದುಕೊಂಡು, ಕೃತಾರ್ಥೇನ-ಕೃತಪ್ರಯೋಜನವುಳ್ಳ, ಅಂತರಾತ್ಮನಾ - ಮನಸ್ಸಿನಿಂದ, ಅಗಚ್ಛನ್ - ಹೊರಟರು. ||೧೯|| ಹೇರಘುನಂದನ - ಎಲೈ ಶ್ರೀರಾಮನೆ, ಅನ್ಯಾ - ಮತ್ತೊಬ್ಬಳಾದ, ಶೈಲದುಹಿತಾ-ಪರ್ವತರಾಜನ ಮಗಳಾದ, ಕನ್ಯಾ - ಕನ್ಯಕೆಯು, ಯಾ - ಯಾವಳು, ಆಸೀತ್ - ಆದಳೋ, ಸಾ - ಆ ಕನ್ಯಕಯು, ತಪೋ

ಮನೋರಮೆಯಲ್ಲಿ ಈ ಗಂಗೆಯು ಜ್ಯೇಷ್ಠ ಕುವರಿಯಾಗಿ ಜನಿಸಿದಳು. ಎರಡನೆಯವಳು ಉಮಾ ಎಂದು ಪ್ರಸಿದ್ಧಳಾಗಿ ಜನಿಸಿದಳು. ||೧೫ ೧೬|| ಜ್ಯೇಷ್ಠಳೂ, ತ್ರಿಪಥಗಾಮಿನಿಯೂ, ಆದ ಈ ಗಂಗೆಯನ್ನು ದೇವಕಾರ್ಯವನ್ನು ಮಾಡಲೋಸುಗ ದೇವತೆಗಳು ಹಿಮವಂತನನ್ನು ಬೇಡಿದರು ಮೂರು ಲೋಕಗಳಿಗೂ ಹಿತವನ್ನಿಚ್ಛೆಯುಳ್ಳ ಮಹಾ ಧರ್ಮಿಷ್ಠನೂ, ಸ್ವತಂತ್ರಗಮನವುಳ್ಳವಳೂ, ಲೋಕಪಾವನಿಯೂ, ಆದ ಆ ಗಂಗೆಯನ್ನು ಧರ್ಮದಿಂದ ದೇವತೆಗಳಿಗೆ ಕೊಟ್ಟವನಾದನು. ||೧೭-೧೮|| ಆ ಬಳಿಕ ದೇವತೆಗಳು ಮೂರು ಲೋಕಕ್ಕೂ ಹಿತವನ್ನುಂಟುಮಾಡುವರಾಗಿ ಕೃತಕೃತ್ಯವಾದ ಮನಸ್ಸಿನಿಂದ ಆ ನದಿಯನ್ನು ಸ್ವರ್ಗಕ್ಕೊಯ್ದರು. ||೧೯|| ರಘುನಂದನ! ಹಿಮವಂತನ ಮತ್ತೊಬ್ಬ ಮಗಳಾದ ಉಮೆಯು ಈಶ್ವರನನ್ನೇ ಮದುವೆಯಾಗಬೇಕೆಂದು ಉಗ್ರವಾದ ವ್ರತವನ್ನು ಕೈಕೊಂಡು ತಪವಾಗೈದಳು.

ಅಪ್ರತಿರೂಪಾಯ ಉಮಾಂ ಲೋಕನಮಸ್ಕೃತಾಂ||೨೧|| ಏತೇ ತೇ ಶೈಲ ರಾಜಸ್ಯಸುತೇ ಲೋಕ ನಮಸ್ಕೃತೇ || ಗಂಗಾಚ ಸರಿತಾಂ ಶ್ರೇಷ್ಠಾ ಉಮಾ ದೇವೀ ಚ ರಾಘವ || ೨೨ || ಏತತ್ತೇ ಸರ್ವಮಾಖ್ಯಾತಂ ಯಥಾ ತ್ರಿಪಥಗಾನದೀ || ಖಂ ಗತಾ ಪ್ರಥಮಂ ತಾತ ಗತಿಂ ಗತಿಮತಾಂವರ ||೨೩|| ಸೈಷಾ ಸುರನದೀ ರಮ್ಯಾ ಶೈಲೇಂದ್ರಸ್ಯ ಸುತಾ ತದಾ || ಸುರಲೋಕಂ ಸಮಾರೂಢಾ ವಿಪಾಪಾ ಜಲವಾಹಿನೀ || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ

ಧನಾಃ - ತಪಸ್ಸೇ ಧನವಾಗುಳ್ಳವಳಾಗಿ, ಉಗ್ರಂ - ಭಯಂಕರವಾದ, ವ್ರತಂ - ನಿಯಮವನ್ನು, ಆಸ್ಥಾಯ - ಮಾಡಿ, ತಪಃ - ತಪಸ್ಸನ್ನು, ತೇಪೇ - ತಪಿಸಿದಳು. || ೨೦ || ಶೈಲವರಃ-ಪರ್ವತ ರಾಜನಾದ ಹಿಮವಂತನು, ಉಗ್ರೇಣ - ತೀಕ್ಷ್ಣವಾದ, ತಪಸಾ - ತಪಸ್ಸಿನಿಂದ, ಯುಕ್ತಾಂ-ಕೂಡಿರುವ, ಸುತಾಂ - ಕುವರಿಯಾದ, ಲೋಕನಮಸ್ಕೃತಾಂ, ಲೋಕ - ಸಮಸ್ತ ಜನರಿಂದಲೂ, ನಮಸ್ಕೃತಾಂ - ನಮಸ್ಕರಿಸಲ್ಪಟ್ಟ, ಉಮಾಂ - ಪಾರ್ವತಿಯನ್ನು, ಅಪ್ರತಿರೂಪಾಯ - ಸಮಾನವಿಲ್ಲದ ರೂಪವುಳ್ಳ, ರುದ್ರಾಯ - ಪರಮೇಶ್ವರನಿಗೆ, ದದೌ - ಕೊಟ್ಟನು || ೨೧ || ಹೇರಾಘವ- ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೆ, ಸರಿತಾಂ - ನದಿಗಳಲ್ಲಿ, ಶ್ರೇಷ್ಠಾ - ಶ್ರೇಷ್ಠಳಾದ, ಗಂಗಾಚ - ಗಂಗಾನದಿಯೂ, ಉಮಾದೇವೀಚ - ಪಾರ್ವತಿದೇವಿಯೂ ಎಂಬ, ತೇ-ಪ್ರಸಿದ್ಧರಾದ, ಲೋಕನಮಸ್ಕೃತೇ - ಸಮಸ್ತ ಜನರಿಂದಲೂ ನಮಸ್ಕರಿಸಲ್ಪಟ್ಟ, ಏತೇ - ಇವರಿಬ್ಬರು, ಶೈಲರಾಜಸ್ಯ - ಪರ್ವತ ರಾಜನಿಗೆ, ಸುತೇ- ಕುವರಿಯರು, ಹೇತಾತ - ಎಲೈ ತಂದೆಯೆ, ಹೇಗತಿಮತಾಂವರ - ಸುಂದರ ಗಮನವುಳ್ಳವರೊಳಗೆ ಶ್ರೇಷ್ಠನಾದವನೆ! ತ್ರಿಪಥಗಾನದೀ, ತ್ರಿಪಥಗಾ_ ಮೂರು ಮಾರ್ಗಗಳುಳ್ಳ, ನದೀ - ಗಂಗಾನದಿಯು. ಪ್ರಥಮಂ-ಮೊದಲು, ಖಂ - ಅಂತರಿಕ್ಷದಲ್ಲಿ, ಗತಿಂ - ಗಮನವನ್ನು, ಗತಾ - ಹೊಂದಿದಳು, ಏತತ್ - ಇದು, ಸರ್ವಂ - ಸಮಸ್ತವು, ತೇ-ನಿನಗೆ, ಆಖ್ಯಾತಂ-ಹೇಳಲ್ಪಟ್ಟಿತು. || ೨೨-೨೩ || ತದಾ-ಆಗ, ಶೈಲೇಂದ್ರಸ್ಯ-ಹಿಮವಂತನ, ಸುತಾ- ಕುವರಿಯಾದ, ರಮ್ಯಾ - ಮನೋಹರಳಾದ, ವಿಪಾಪಾ - ಪಾಪರಹಿತಳಾದ, ಜಲವಾಹಿನೀ - ಜಲದಿಂದ ಪ್ರವಹಿಸುತ್ತಿರುವ, ಸೈಷಾ - ಆ ಗಂಗಾನದಿಯು, ಸುರನದೀ - ದೇವತಾನದಿ ಎಂದು ಹೆಸರುಳ್ಳವಳಾಗಿ, ಸುರಲೋಕಂ - ಸ್ವರ್ಗಲೋಕವನ್ನು, ಸಮಾರೂಢಾ - ಏರಿದಳು. ||೨೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚತ್ರಿಂಶಸ್ಸರ್ಗಃ

ಇಂತು ಉಗ್ರವಾದ ತಪೋಯುಕ್ತಳೂ, ಲೋಕವಂದಿತಳೂ, ಆದ ಪಾರ್ವತಿಯನ್ನು ಅನುಕೂಲವರನಾದ ಈಶ್ವರನಿಗೆ ವಿವಾಹಮಾಡಿಕೊಟ್ಟನು. || ೨೧ || ಅಯ್ಯಾ ರಾಮಚಂದ್ರನೇ! ಲೋಕ ನಮಸ್ಕೃತರಾದ ಗಂಗೆ ಮತ್ತು ಪಾರ್ವತಿಯರು ಈ ಗಿರಿಶ್ರೇಷ್ಠನಾದ ಹಿಮವಂತನ ಕುವರಿಯರು ||೨೨|| ಹೀಗೆ ಗಂಗೋತ್ಪತ್ತಿಯೂ, ಪಾರ್ವತಿಯ ಚರಿತ್ರೆಯೂ, ನಿನಗೆ ಹೇಳಲ್ಪಟ್ಟಿತು. ಎಲೈ ಬುದ್ಧಿಶಾಲಿಯೇ! ಮೂರು ಲೋಕಗಳನ್ನೂ ಪಾವನಗೊಳಿಸಿದ ಈ ಗಂಗೆಯು ಮೊದಲು ಸ್ವರ್ಗವನ್ನು ಸೇರಿದಳು. ಇಂತು ಸ್ವರ್ಗವಾಂತಳೂ, ಹಿಮವತ್ಕುಮಾರಿಯೂ, ನಿರ್ಮಲೋದಕವುಳ್ಳವಳೂ, ಮನೋಹರಳೂ ಆದ ಆ ಸ್ವರ್ಗನದಿಯೇ ಇಲ್ಲಿ ಕಾಣುವ ಗಂಗಾನದಿಯು. ||೨೩-೨೪||

ಇಂತಿದು ಗಂಗಾಪತಿಯ ವೃತ್ತಾಂತವರ್ಣನವೆಂಬ ಮುವತ್ತೈದನೆಯ ಸರ್ಗವು ಸಮಾಪ್ತವಾಯಿತು.

# ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ.



**ಉಕ್ತವಾಕ್ಯೇ ಮುನೌ ತಸ್ಮಿನ್ನುಭೌ ರಾಘವಲಕ್ಷ್ಮಣೌ ॥ ಪ್ರತಿನಂದ್ಯ ಕಥಾಂ ವೀರಾವೂಚತುರ್ಮುನಿಪುಂಗವಮ್ ॥ ೧ ॥ ಧರ್ಮಯುಕ್ತಮಿದಂ ಬ್ರಹ್ಮನ್ ಕಥಿತಂ ಪರಮಂ ತ್ವಯಾ ॥ ದುಹಿತುಶ್ಶೈಲರಾಜಸ್ಯ ಜ್ಯೇಷ್ಠಾಯಾ ವಕ್ತುಮರ್ಹಸಿ ॥ ೨ ॥ ವಿಸ್ತರಂ ವಿಸ್ತರಜ್ಞೋಽಸಿ ದಿವ್ಯಮಾನುಷಸಂಭವಮ್ ॥ ತ್ರೀನ್ಪಥೋ ಹೇತುನಾ ಕೇನ ಪ್ಲಾವಯೇಲ್ಲೋಕಪಾವನೀ ॥ ೩ ॥ ಕಥಂ**

---

ತಸ್ಮಿನ್ಮುನೌ - ಆ ವಿಶ್ವಾಮಿತ್ರಋುಷಿಯು, ಉಕ್ತವಾಕ್ಯೇಸತಿ - ಹೇಳಲ್ಪಟ್ಟ ಮಾತುಳ್ಳವನಾಗಲು, ವೀರೌ - ಶೂರರಾದ, ರಾಘವಲಕ್ಷ್ಮಣೌ - ರಾಮಲಕ್ಷ್ಮಣರಿಬ್ಬರೂ, ಕಥಾಂ - ಕಥೆಯನ್ನು ಕುರಿತು, ಪ್ರತಿನಂದ್ಯ - ಸಂತೋಷಿಸಿ, ಮುನಿಪುಂಗವಂ - ಋುಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಊಚತುಃ - ಹೇಳಿದರು ॥ ೧ ॥ ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ಧರ್ಮಯುಕ್ತಂ - ಧರ್ಮದಿಂದ ಕೂಡಿರುವ, ಪರಮಂ - ಉತ್ಕೃಷ್ಟವಾದ, ಇದಂ - ಈ ಮಹಾತ್ಮ್ಯವು, ತ್ವಯಾ - ನಿನ್ನಿಂದ, ಕಥಿತಂ - ಹೇಳಲ್ಪಟ್ಟಿತು, ವಿಸ್ತರಜ್ಞಃ - ವಿಸ್ತಾರವನ್ನು ತಿಳಿದವನು, ಅಸಿ - ಆಗಿರುವೆ. ಶೈಲರಾಜಸ್ಯ - ಹಿಮವಂತನ, ಜ್ಯೇಷ್ಠಾಯಾಃ ಜ್ಯೇಷ್ಠಳೂ, ದುಹಿತುಃ - ಮಗಳೂ ಆದ ಗಂಗಾನದಿಯ, ದಿವ್ಯಮಾನುಷಸಂಭವಂ - ದೇವಲೋಕದಲ್ಲಿಯೂ ಮನುಷ್ಯಲೋಕದಲ್ಲಿಯೂ ಹುಟ್ಟಿದ, ವಿಸ್ತರಂ - ವಿಸ್ತಾರವನ್ನು, ವಕ್ತುಂ - ಹೇಳಲು, ಅರ್ಹಸಿ - ಅರ್ಹನಾಗಿರುವೆ. ॥ ೨ ॥ ಲೋಕಪಾವನೀ - ಲೋಕವನ್ನೆಲ್ಲ ಪರಿಶುದ್ಧಗೊಳಿಸುತ್ತಿರುವ ಗಂಗೆಯು, ಕೇನಹೇತುನಾ - ಯಾವ ಕಾರಣದಿಂದ, ತ್ರೀನ್‌ಪಥಃ - ಮೂರು ಮಾರ್ಗಗಳನ್ನು, (೧)ಪ್ಲಾವಯೇತ್-ಪರಿಶುದ್ಧಿಮಾಡಿತೋ!॥೩॥

---

ವಿಶ್ವಾಮಿತ್ರನೀರಿತಿ ಆನಂದಿಸಿ ವೀರರಾದ ರಾಮಲಕ್ಷ್ಮಣರು ಪನ್ನುಹೊಗಳಿ ಮುನಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು "ಎಲೈ ಬ್ರಹ್ಮಜ್ಞಾನಿಯೇ! ಧರ್ಮಯುಕ್ತವಾದುದೂ, ಶ್ರೇಷ್ಠವಾದುದೂ, ಆದ ಹಿಮವಂತನ ಕಿರಿಯ ಮಗಳಾದಪಾರ್ವತಿ ಕಥೆಯುನಿನ್ನಿಂದ ಹೇಳಲ್ಪಟ್ಟಿತು. ಇನ್ನು ಹಿಮವಂತನ ಜ್ಯೇಷ್ಠಕುಮರಿಯಾದ ಗಂಗಾದೇವಿಯ ಚರಿತ್ರೆಯನ್ನು ಹೇಳಲರ್ಹನಾಗು ॥ ೧-೨ ॥ ಸಕಲ ವೃತ್ತಾಂತಗಳನ್ನೂ ವಿಸ್ತಾರವಾಗಿ ತಿಳಿದ ನೀನು? ಈಕೆಯು ಮೂರು ಲೋಕಗಳನ್ನೂ ಯಾವ ಕಾರಣದಿಂದ ಮೂರು ಮಾರ್ಗಗಳಿಂದ ಪಾವನಗೊಳಿಸುತ್ತಿರುವಳು. ॥ ೩ ॥ ನದಿಗಳಲ್ಲಿ ಶ್ರೇಷ್ಠಳಾದ ಈ ಗಂಗೆಯು

---

ಟಿಪ್ಪಣಿ—(೧) ಭಾವಯೇದಿತಿಪಾಠಾಂತರಂ. ಉದ್ಧರೇತ್ ಇತ್ಯರ್ಥಃ, "ಭೂಃ ಸತ್ತಾಯಾಂ ಪಾಚಿ"ಇತ್ಯನೇನ.

ಗಂಗಾ ತ್ರಿಪಥಗಾ ವಿಶ್ರುತಾ ಸರಿದುತ್ತಮಾ ॥ ತ್ರಿಷುಲೋಕೇಷು ಧರ್ಮಜ್ಞ
ಕರ್ಮಭಿಃ ಕೈಸ್ಸಮನ್ವಿತಾ ॥ ೪ ॥ ತಥಾ ಬ್ರುವತಿ ಕಾಕುತ್‌ಸ್ಥೇ ವಿಶ್ವಾಮಿತ್ರ
ಸ್ತಪೋಧನಃ ॥ ನಿಖಿಲೇನ ಕಥಾಂ ಸರ್ವಾಮೃಷಿಮಧ್ಯೇನ್ಯವೇದಯತ್ ॥೫॥
ಪುರಾ ರಾಮ ಕೃತೋದ್ವಾಹೋ ನೀಲಕಂಠೋ ಮಹಾತಪಾಃ ॥ ದೃಷ್ಟ್ವಾಚ
ಸ್ಪೃಹಯಾ ದೇವೀಂ ಮೈಥುನಾಯೋಪಚಕ್ರಮೇ ॥ ೬ ॥ ಶಿತಿಕಂಠಸ್ಯ
ದೇವಸ್ಯ ದಿವ್ಯ ವರ್ಷಶತಂ ಗತಂ ॥ ನಚಾಪಿ ತನಯೋ ರಾಮ ತಸ್ಯಾಮಾಸೀ
ತ್ಪರಂತಪ ॥ ೭ ॥ ತತೋ ದೇವಾಸ್ಸಮುದ್ವಿಗ್ನಾಃ ಪಿತಾಮಹಪುರೋಗಮಾಃ॥

---

ಹೇ ಧರ್ಮಜ್ಞ - ಎಲೈ ಧರ್ಮವನ್ನು ತಿಳಿದವನೆ! ಕೈಃಕರ್ಮಭಿಃ - ಯಾವ ಕರ್ಮಗಳಿಂದ, ಸಮನ್ವಿತಾ ಕೂಡಿರುವ, ಸರಿದುತ್ತಮಾ - ನದೀಶ್ರೇಷ್ಠಳಾದ, ಗಂಗಾ - ಗಂಗಾನದಿಯು, ತ್ರಿಪಥಗಾ - ತ್ರಿಪಥಗಾ ಎಂದು, ತ್ರಿಷು - ಮೂರಾದ, ಲೋಕೇಷು ಲೋಕಗಳಲ್ಲಿ, ಕಥಂ - ಹೇಗೆ, ವಿಶ್ರುತಾ - ಪ್ರಸಿದ್ಧಳಾದಳು ॥ ೪ ॥ ಕಾಕುತ್‌ಸ್ಥೇ - ಶ್ರೀರಾಮನು, ತಥಾ - ಹಾಗೆ, ಬ್ರುವತಿಸತಿ - ಕೇಳಲು, ತಪೋಧನಃ - ತಪಸ್ಸೇಧನವಾಗಿವುಳ್ಳ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಋಷಿಮಧ್ಯೇ - ಋಷಿಗಳ ಮಧ್ಯದಲ್ಲಿ, ಸರ್ವಾಂ - ಸಮಸ್ತವಾದ, ಕಥಾಂ - ಕಥೆಯನ್ನು, ನಿಖಿಲೇನ - ಸಮಗ್ರವಾಗಿ, ನ್ಯವೇದಯತ್ ತಿಳಿಸಿದನು. ॥ ೫ ॥ ಹೇರಾಮ - ಎಲೈ ಶ್ರೀರಾಮನೆ, ಪುರಾ - ಪೂರ್ವದಲ್ಲಿ, ಮಹಾತಪಾಃ - ಮಹಾತಪಸ್ವಿಯಾದ, ನೀಲಕಂಠಃ - ಪರಮೇಶ್ವರನು, ಕೃತೋದ್ವಾಹಃ - ಮಾಡಲ್ಪಟ್ಟ ವಿವಾಹವುಳ್ಳವನಾಗಿ, ದೇವೀಂ-ಪಾರ್ವತೀಂ ದೇವಿಯನ್ನು, ದೃಷ್ಟ್ವಾ - ಕಂಡು, ಸ್ಪೃಹಯಾಚ - ಅಪೇಕ್ಷೆಯಿಂದಲೂ, ಮೈಥುನಾಯ - ಮಿಥುನಕ್ಕೋಸುಗ, ಉಪಚಕ್ರಮೇ - ಆರಂಭಿಸಿದನು ॥ ೬ ॥ ಶಿತಿಕಂಠಸ್ಯ - ನೀಲಕಂಠನಾದ, ದೇವಸ್ಯ - ಈಶ್ವರನ ಭಾವಾನುಸಾರವಾಗಿ, ದಿವ್ಯಂ - (ಗೋ) ದೇವತಾಸಂಬಂಧವಾದ, (ಮ) ದೇವಮಾನದಿಂದ, ಹುಟ್ಟಿದ ವರ್ಷಶತಂ - ನೂರುವರ್ಷಗಳು, ಗತಂ - ಕಳದು ಹೋದವು, ಹೇರಾಮ - ಎಲೈ ರಾಮನೆ, ಹೇಪರಂಪರ - ಶತ್ರುಸಂಹಾರಕನೆ, ತಸ್ಯಾಂ - ಆ ಪಾರ್ವತಿಯಲ್ಲಿ, ತನಯಶ್ಚಾಪಿ - ಕುಮಾರನೂ, ನಾಸೀತ್ - ಆಗಲಿಲ್ಲ. ॥ ೭ ॥ ತತಃ - ಬಳಿಕ, ಪಿತಾಮಹಪುರೋಗಮಾಃ, ಪಿತಾಮಹ - ಬ್ರಹ್ಮನೇ, ಪುರೋಗಮಾಃ- ಮೊದಲಾದ, ದೇವಾಃ - ದೇವತೆಗಳು, ಇಹ - ಈ ಪಾರ್ವತಿಯಲ್ಲಿ, ಯದ್ಭೂತಂ - ಯಾವ ಜಂತುವು, ಉತ್ಪದ್ಯತೇ- ಹುಟು

---

ಮೂರು ಮಾರ್ಗಗುಳ್ಳವಳಾದುದು ಹೇಗೆ? ಎಲೈ ಧರ್ಮಜ್ಞನೇ! ಈ ನದಿಯು ಲೋಕತ್ರಯದಲ್ಲಿಯೂ ಯಾವ ಯಾವ ಕರ್ಮದಿಂದೊಡಗೂಡಿರುವುದು" ಎಂದರು. ॥೪-೫॥ ಆ ರಾಜಪುತ್ರರಿಂತು ನುಡಿಯಲು ಆ ಋಷಿಸತ್ತಮನು ಆ ಮುನಿಗಳ ಮಧ್ಯದಲ್ಲಿ ಸಂಪೂರ್ಣವಾದ ಆ ಕಥೆಯನ್ನು ಹೇಳತೊಡಗಿದನು. ॥೬॥ ಎಲೈ ರಘುನಾಥನೇ! ಪೂರ್ವದಲ್ಲಿ ಶಂಕರನು ಪಾರ್ವತಿಯನ್ನು ಮದುವೆಯಾಗಿ ಆಕೆಯ ರೂಪು ಲಾವಣ್ಯಗಳಿಗೆ ಮನಸೋತು ಆಕೆಯೊಡನೆ ರಮಿಸಲುಪಕ್ರಮಿಸಿದನು. ॥ ೭॥ ಹೀಗೆ ದೇವಮಾನದ ನೂರು ವರ್ಷಗಳು ಕಳೆದರೂ ಆ ಪಾರ್ವತಿಯಲ್ಲಿ ಕುವರನೇ ಆಗಲಿಲ್ಲ. ॥ ೮ ॥ ಬಳಿಕ ಉದ್ವೇಗಗೊಂಡ ಬ್ರಹ್ಮನೇ ಮೊದಲಾದ ದೇವತೆಗಳು "ಈ ಪಾರ್ವತೀ ಪ ಮೇಶ್ವರರ ಮಿಥುನದಿಂದುತ್ಪನ್ನ

ಯದಿಹೋತ್ಪದ್ಯತೇ ಭೂತಂ ಕಸ್ತತ್ಪ್ರತಿಸಹಿಷ್ಯತೇ ॥೮॥ ಅಭಿಗಮ್ಯ ಸುರಾಸ್ಸರ್ವೇ ಪ್ರಣಿಪತ್ಯೇದಮಬ್ರುವರ್ ॥೮॥ ದೇವ ದೇವ ಮಹಾದೇವ ಲೋಕಸ್ಯಾಸ್ಯ ಹಿತೇರತ ॥ ಸುರಾಣಾಂ ಪ್ರಣಿಪಾತೇನ ಪ್ರಸಾದಂ ಕರ್ತುಮರ್ಹಸಿ ॥೯॥ ನಲೋಕಾಧಾರ ಇಷ್ಯಂತಿ ತವ ತೇಜಸ್ಸುರೋತ್ತಮ ॥ ಬ್ರಾಹ್ಮೇಣ ತಪಸಾ ಯುಕ್ತೋ ದೇವ್ಯಾಸಹ ತಪಶ್ಚರ ॥ ೧೦ ॥ ತ್ರೈಲೋಕ್ಯ ಹಿತಕಾಮಾರ್ಥಂ ತೇಜಸ್ತೇಜಸಿ ಧಾರಯ ॥ ೧೧ ॥ (೧) (ರಕ್ಷ ಸರ್ವಾನಿಮಾಂ ಲೋಕಾನ್ನಾಲೋಕಂ ಕರ್ತುಮರ್ಹಸಿ) ದೇವತಾನಾಂ ವಚಶ್ಶ್ರುತ್ವಾ ಸರ್ವ

---

ವದೊ, ತತ್ - ಆ ಜಂತುವನ್ನು, ಕಃ - ಯಾವನು, ಪ್ರತಿಸಹಿಷ್ಯತೇ - ಸಹಿಸುವನು, ಇತಿ - ಇಂತೆಂದು, ಸಮುದ್ವಿಗ್ನಾಃ - ಹೆದರಿಕೆಯುಳ್ಳವರಾದರು. ॥೮॥ ಸರ್ವೇ - ಸಮಸ್ತರಾದ, ಸುರಾಃ - ದೇವತೆಗಳು, ಅಭಿಗಮ್ಯ - ಬಂದು, ಪ್ರಣಿಪತ್ಯ - ನಮಸ್ಕರಿಸಿ. ಇದಂ - ಈ ಮಾತನ್ನು, ಅಬ್ರುವರ್- ನುಡಿದರು, ಹೇದೇವದೇವ- ದೇವನಾಥನೆ, ಹೇಮಹಾದೇವ - ಎಲೈ ಮಹಾದೇವನೆ, ಅಸ್ಯಲೋಕಸ್ಯ- ಈ ಲೋಕದ, ಹಿತೇ - ಹಿತದಲ್ಲಿ, ಹೇರತ - ಆಸಕ್ತನಾದವನ, ಸುರಾಣಾಂ - ದೇವತೆಗಳ, ಪ್ರಣಿಪಾತೇನ - ನಮಸ್ಕಾರದಿಂದ, ಪ್ರಸಾದಂ - ಅನುಗ್ರಹವನ್ನು, ಕರ್ತುಂ - ಮಾಡಲು, ಅರ್ಹಸಿ - ಯೋಗ್ಯನಾಗು. ॥೯॥ ಹೇಸುರೋತ್ತಮ-ಎಲೈ ದೇವತಾಶ್ರೇಷ್ಠನೆ, ತವ-ನಿನ್ನ, ತೇಜಃ-ತೇಜಸ್ಸನ್ನು ಲೋಕಾಃ - ಲೋಕಗಳು, ನಧಾರಯಿಷ್ಯಂತಿ - ಧರಿಸಲಾರವು, ಬ್ರಾಹ್ಮೇಣ - ಬ್ರಹ್ಮಸಂಬಂಧವಾದ, ತಪಸಾ - ತಪಸ್ಸಿನಿಂದ, ಯುಕ್ತಃ - ಕೂಡಿದ, ದೇವ್ಯಾಸಹ - ಪಾರ್ವತೀದೇವಿಯೊಡನೆ, ತಪಃ - ತಪಸ್ಸನ್ನು, ಚರ - ಅನುಷ್ಠಾನಮಾಡು. ॥ ೧೧ ॥ ತ್ರೈಲೋಕ್ಯಹಿತಕಾಮಾರ್ಥಂ, ತ್ರೈಲೋಕ್ಯ ಲೋಕತ್ರಯಕ್ಕೆ, ಹಿತಕಾಮಾರ್ಥಂ - ಹಿತವೆಂಬ ಕೋರಿಕೆಗೆ, ತೇಜಃ- ವೀರ್ಯವನ್ನು, ತೇಜಸಿ - ತೇಜೋಮಯವಾದ ನಿನ್ನ ಶರೀರದಲ್ಲಿಯೇ, ಧಾರಯ - ಧರಿಸು. ॥ ೧೧ ॥ ದೇವತಾನಾಂ - ದೇವತೆಗಳ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವ ಲೋಕಮಹೇಶ್ವರಃ - ಸರ್ವಲೋಕಗಳಿಗೂ ಮಹೇಶ್ವರನಾದ ಈ ಶಿವನು, ಬಾಢಮಿತಿ - ಹಾಗೆಯೆ ಆಗಲೆಂದು, ಅಬ್ರವೀತ್ -

---

ವಾದ ಭೂತವನ್ನಾರು ತಾನೇ ಸಹಿಸಬಲ್ಲರು "ಎಂದಾಲೋಚಿಸಿ ಈಶ್ವರನಿದ್ದೆಡಗೆ ಬಂದು ಸಾಷ್ಟಾಂಗ ಪ್ರಣಾಮವಂಗೈದು," ಎಲೈ ಮಹಾದೇವನೇ ! ಸಕಲ ಲೋಕಗಳ ಹಿತದಲ್ಲಿ ನಿರತನಾದವನೇ ! ನಮಸ್ಕಾರವಂ ಗೈಯುತಲಿರುವ ದೇವತೆಗಳನ್ನನುಗ್ರಹಿಸಲು ಅರ್ಹನಾಗು. ॥೯-೧೦॥ ಎಲೈ ದೇವೋತ್ತಮನೇ ! ನಿನ್ನ ತೇಜಸ್ಸನ್ನು ಲೋಕಗಳು ಧರಿಸಲು ಸಮರ್ಥಗಳಲ್ಲ; ಆದುದರಿಂದ ಬ್ರಹ್ಮ ಸಂಬಂಧವಾದ ತಪಸ್ಸಿನಿಂದ ಈ ದೇವಿಯೊಡಗೂಡಿ ತಪವಂ

---

(೧) ಇದು ಅಧಿಕಪಾಠವೆಂದು ವ್ಯಾಖ್ಯಾನಕಾರರೂ ಇದಕ್ಕೆ ಅರ್ಥವನ್ನು ಬರೆದಿರುವುದಿಲ್ಲ ತ್ರೈಲೋಕ್ಯಹಿತಕಾಮಾರ್ಥಂ ಎಂಬ ಮೇಲಿನ ಪದದಿಂದಲೇ ಈ ಒಂದು ಪಾದದ ಸಾರವು ಬಂದಿರುತ್ತದೆ ಯಾದುದರಿಂದ ನಾನು ಇದನ್ನು ಬಿಟ್ಟಿರುತ್ತೇನೆ.

ಲೋಕಮಹೇಶ್ವರಃ || ಬಾಢಮಿತ್ಯಬ್ರವೀತ್ಸರ್ವಾನ್ ಪುನಶ್ಚೇದಮುವಾಚಹ||೧೨||
ಧಾರಯಿಷ್ಯಾಮ್ಯಹಂ ತೇಜಸ್ತೇಜಸ್ಯೇವ ಸಹೋಮಯಾ || ತ್ರಿದಶಾಃ ಪೃಥಿ
ವೀಚೈವನಿರ್ವಾಣಮಧಿಗಚ್ಛತು ||೧೩|| ಯದಿದಂ ಕ್ಷುಭಿತಂ ಸ್ಥಾನಾನ್ಮಮ
ತೇಜೋಹ್ಯನುತ್ತಮಂ || ಧಾರಯಿಷ್ಯತಿ ಕಸ್ತಸ್ಮೇ ಬ್ರುವಂತು ಸುರಸತ್ತಮಾಃ
||೧೪|| ಏವಮುಕ್ತಾಸ್ಸುರಾಸ್ಸರ್ವೇ ಪ್ರತ್ಯೂಚುರ್ವೃಷಭಧ್ವಜಂ || ಯತ್ತೇಜಃ
ಕ್ಷುಭಿತಂಹ್ಯೇತತ್ತದ್ಧರಾ ಧಾರಯಿಷ್ಯತಿ ||೧೫|| ಏವಮುಕ್ತಸ್ಸುರಪತಿಃ
ಪ್ರಮುಮೋಚ ಮಹೀತಲೇ || ತೇಜಸಾ ಪೃಥಿವೀಯೇನ ವ್ಯಾಪ್ತಾ ಸ ಗಿರಿ
ಕಾನನಾ ||೧೬|| ತತೋದೇವಾಃ ಪುನರಿದಮೂಚುಶ್ಚಾಥ ಹುತಾಶನಂ ||

---

ನುಡಿದನು, ಪುನಃ - ಮತ್ತು, ಸರ್ವಾನ್ - ಸಮಸ್ತರನ್ನೂ ಕುರಿತು, ಇದಂ - ಈ ವಕ್ಷ್ಯಮಾಣ ವಚನವನ್ನು, ಉವಾಚಹ - ಹೇಳಿದನು. ||೧೨|| ಅಹಂ-ನಾನು, ಉಮಯಾಸಹ - ಪಾರ್ವತಿಯೊಡನೆ, ತೇಜಸ್ಯೇವ - ತೇಜೋರೂಪ ಶರೀರದಲ್ಲಿಯೇ, ತೇಜಃ - ವೀರ್ಯವನ್ನು, ಧಾರಯಿಷ್ಯಾಮಿ-ಧರಿಸುವೆನು, ತ್ರಿದಶಾಃ - ದೇವತೆಗಳೂ, ಪೃಥಿವೀ-ಭೂಮಿಯೂ, ನಿರ್ವಾಣಂ ಸುಖವನ್ನು ಅಧಿಗಚ್ಛತು-ಹೊಂದಲಿ, ||೧೩|| ಹೇಸುರಸತ್ತಮಾಃ - ಎಲೈ ಸುರಶ್ರೇಷ್ಠರಿರಾ ! ಮಮ - ನನ್ನ, ಅನುತ್ತಮಂ- ಸರ್ವೋತ್ತಮವಾದ, ಯತ್ತೇಜಃ - ಯಾವ ತೇಜಸ್ಸು, ಸ್ಥಾನಾತ್ - ಸ್ವಸ್ಥಾನದ ದೆಸೆಯಿಂದ, ಕ್ಷುಭಿತಂ-ಸ್ಖಲಿತವಾಗಿರುವುದೋ, ತದಿದಂ-ಅದನ್ನು, ಕಃ - ಯಾರು, ಧಾರಯಿಷ್ಯತಿ - ಧರಿಸುತ್ತಾನೆ, ಮೇ-ನನಗೆ, ಬ್ರುವಂತು ಹೇಳಿರಿ, ||೧೪|| ಏವಂ- ಹೀಗೆ, ಉಕ್ತಾಃ- ಹೇಳಲ್ಪಟ್ಟ, ಸರ್ವೇಸುರಾಃ-ಸಮಸ್ತ ದೇವತೆಗಳು, ವೃಷಭಧ್ವಜಂ ಪರಮೇಶ್ವರನನ್ನು ಕುರಿತು, ಯತ್ತೇಜಃ - ಯಾವ ತೇಜಸ್ಸು, ಕ್ಷುಭಿತಂ - ಸ್ಖಲಿತವಾಗಿರುವುದೋ, ತದೇತತ್ ಆ ವೀರ್ಯವನ್ನು, ಧರಾ - ಭೂಮಿಯು, ಧಾರಯಿಷ್ಯತಿ - ಧರಿಸುವಳು, ಇತಿ - ಇಂತೆಂದು, ಪ್ರತ್ಯೂಚುಃ ಹೇಳಿದರು. ||೧೫|| ಏವಂ - ಈಪರಿ, ಉಕ್ತಃ - ಹೇಳಲ್ಪಟ್ಟ, ಸುರಪತಿಃ - ಪರಮೇಶ್ವರನು, ಮಹೀತಲೇ ಭೂಪ್ರದೇಶದಲ್ಲಿ, ಪ್ರಮುಮೋಚ - ಬಿಟ್ಟನು, ಯೇನತೇಜಸಾ - ಯಾವ ತೇಜಸ್ಸಿನಿಂದ, ಸ ಗಿರಿಕಾನನಾ-ಬೆಟ್ಟಗಳಿಂದಲೂ, ಕಾಡುಗಳಿಂದಲೂ ಒಡಗೂಡಿದ, ಪೃಥಿವೀ - ಭೂಮಿಯು, ವ್ಯಾಪ್ತಾ-ವ್ಯಾಪಿಸಲ್ಪಟ್ಟಿತೋ. ||೧೬||

---

ಗ್ಯಮುವವನಾಗು ಮೂರು ಲೋಕಗಳ ಹಿತಕ್ಕೋಸುಗ ಮುಂದೆ ಉದ್ಭವಿಸುವ ತೇಜಸ್ಸನ್ನು ಸ್ವತೇಜಸ್ಸಿನಲ್ಲಿಯೇ ಲೀನಮಾಡಿಕೊಳ್ಳುವನಾಗು, ಎಂದು ಪ್ರಾರ್ಥಿಸಿದರು. || ೧೧-೧೨ || ಇಂತು ಪ್ರಾರ್ಥಿಸಿದ ದೇವತೆಗಳ ನುಡಿಗಳನ್ನು ಕೇಳಿ ಮೂರು ಲೋಕದೊಡೆಯನಾದ ಪರಮೇಶ್ವರನು ಹಾಗೆಯೇ ಆಗಲೆಂದು ಹೇಳಿ ಮತ್ತಿಂತೆಂದನು. || ೧೩ || ಎಲೈ ದೇವತೆಗಳಿರಾ ! ಪಾರ್ವತಿಯಿಂದೊಡಗೂಡಿದ ನಾನು ನನ್ನಿಂದುದ್ಭವವಾಗುವ ತೇಜಸ್ಸನ್ನು ಸ್ವಕೀಯವಾದ ತೇಜಸ್ಸಿನಲ್ಲಿಯೇ ಅಡಗಿಸಿಕೊಳ್ಳುವೆನು. ದೇವತೆಗಳೂ, ಈ

ಪ್ರವಿಶ ತ್ವಂ ಮಹಾತೇಜೋ ರೌದ್ರಂ ವಾಯು ಸಮನ್ವಿತಃ ॥೧೭॥ ತದ
ಗ್ನಿನಾ ಪುನರ್ವ್ಯಾಪ್ತಂ ಸಂಜಾತಃ ಶ್ವೇತಪರ್ವತಃ ॥ ದಿವ್ಯಂ ಶರವಣಂಚೈವ
ಪಾವಕಾದಿತ್ಯಸನ್ನಿಭಂ ॥ ಯತ್ರ ಜಾತೋ ಮಹಾತೇಜಾಃ ಕಾರ್ತಿಕೇಯೋಗ್ನಿ
ಸಂಭವಃ ॥೧೮॥ ಅಥೋಮಾಂಚ ಶಿವಂಚೈವ ದೇವಾಸ್ಸರ್ಷಿಗಣಾಸ್ತದಾ॥
ಪೂಜಯಾಮಾಸುರತ್ಯರ್ಥಂ ಸುಪ್ರೀತಮನಸಸ್ತತಃ ॥ ೧೯ ॥ ಅಥಶೈಲ
ಸುತಾ ರಾಮ ತ್ರಿದಶಾನಿದಮಬ್ರವೀತ್ ॥ (ಅಪ್ರಿಯಸ್ಯಕೃತಸ್ಯಾದ್ಯ ಫಲಂ
ಪ್ರಾಪ್ಸ್ಯಥ ಮೇಸುರಾಃ ॥ ಇತ್ಯುಕ್ತ್ವಾ ಸಲಿಲಂಗೃಹ್ಯ ಪಾರ್ವತೀಭಾಸ್ಕರ-

ತತಃ - ಬಳಿಕ, ದೇವಾಃ ಪುನಃ - ದೇವತೆಗಳಾದರೆ, ಹುತಾಶನಂ - ಯಜ್ಞೇಶ್ವರನನ್ನು ಕುರಿತು, ಹೇಮಹಾತೇಜಃ - ಎಲೈ ಮಹಾತೇಜೋವಂತನಾದ ಅಗ್ನಿಯು, ವಾಯು ಸಮನ್ವಿತಃ - ವಾಯುವಿನಿಂದ ಕೂಡಿ, ತ್ವಂ - ನೀನು, ರೌದ್ರಂ - ರುದ್ರಸಂಬಂಧವಾದ ತೇಜಸ್ಸನ್ನು, ಪ್ರವಿಶೇತಿ - ಗ್ರಹಿಸು ಎಂದು, ಇದಂ - ಈ ಮಾತನ್ನು, ಊಚುಃ - ಹೇಳಿದರು, ॥ ೧೭ ॥ ಅಗ್ನಿನಾಪುನಃ - ಅಗ್ನಿಯಿಂದ, ವ್ಯಾಪ್ತಂ - ವ್ಯಾಪಿಸಲ್ಪಟ್ಟ, ತತ್ - ಆ ವೀರ್ಯವು, ಶ್ವೇತಪರ್ವತಃ- ರಜತಪರ್ವತವಾಗಿ, ಸಂಜಾತಃ - ಬೆಳೆಯಿತು, ಪಾವಕಾದಿತ್ಯಸನ್ನಿಭಂ - ಅಗ್ನಿ ಸೂರ್ಯರ ಪ್ರಕಾಶಕ್ಕೆ ಸಮಾನವಾದ, ದಿವ್ಯಂ - ಮನೋಹರವಾದ, ಶರವಣಂಚೈವ - ಜಂಡು ಹುಲ್ಲು ರೂಪವಾಯಿತು, ಯತ್ರ - ಯಾವ ಹುಲ್ಲುಗಳ ತಂಡದಲ್ಲಿ, ಮಹಾತೇಜಾಃ - ಮಹಾ ತೇಜೋವಂತನಾದ, ಅಗ್ನಿಸಂಭವಃ - ಅಗ್ನಿಯಲ್ಲಿ ಹುಟ್ಟಿದ, ಕಾರ್ತಿಕೇಯಃ - ಕುಮಾರಸ್ವಾಮಿಯು, ಜಾತಃ-ಹುಟ್ಟಿದನೋ॥೧೮॥ ಅಥ-ಬಳಿಕ, ದೇವಾಃ ದೇವತೆಗಳು, ಸರ್ಷಿಗಣಾಃ - ಋಷಿಗಣದಿಂದ ಕೂಡಿ, ತದಾ-ಆ ಕಾಲದಲ್ಲಿ, ಸುಪ್ರೀತಮನಸಃ - ಸಂತೋಷಗೊಂಡ ಮನಸ್ಸುಳ್ಳವರಾಗಿ, ತತಃ - ಆ ಪುತ್ರೋತ್ಪತ್ತಿಯಿಂದ, ಶಿವಂಚೈವ ಪರಮೇಶ್ವರನನ್ನೂ, ಉಮಾಂಚ - ಪಾರ್ವತಿಯನ್ನೂ, ಅತ್ಯರ್ಥಂ-ಬಹಳವಾಗಿ, ಪೂಜಯಾಮಾಸುಃ - ಪೂಜೆ ಮಾಡಿದರು ॥ ೧೯ ॥ ಹೇರಾಮ - ಎಲೈ ಶ್ರೀರಾಮನೆ, ಅಥ-ಬಳಿಕ, ಶೈಲಸುತಾ - ಪಾರ್ವತೀದೇವಿಯು, ತ್ರಿದಶಾನ್ - ದೇವತೆಗಳನ್ನು ಕುರಿತು, ಇದಂ- ಈ ಮಾತನ್ನು,

ಲೋಕವೂ ಶಾಂತಿಯನ್ನು ಹೊಂದಲಿ. ಆದರಲ್ಲೈ ದೇವತೆಗಳಿರಾ ! ಉತ್ಕೃಷ್ಟವಾಗಿರುವ ತೇಜಸ್ಸನ್ನಾರು ಧರಿಸುವರು," ಎಂದನು ಇಂತೆನಲು ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರೂ "ಎಲೈ ಸ್ವಾಮಿಯೇ ! ಕ್ಷುಭಿತವಾದ ಆ ತೇಜಸ್ಸನ್ನು ಭೂಮಿಯು ಧರಿಸುವಳು" ಎಂದರು. ದೇವೇಂದ್ರನೀರೀತಿ ನುಡಿಯಲು ಆ ಶಂಕರನು ತನ್ನ ತೇಜಸ್ಸನ್ನು ಭೂಮಿಯ ಮೇಲೆ ಬಿಟ್ಟನು ಇದರಿಂದ ಗಿರಿಕಾನನೋಪೇತವಾದ ಭೂಮಿಯೆಲ್ಲವೂ ಆವರಿಸಲ್ಪಟ್ಟಿತು ॥ ೧೪-೧೬ ॥ ಆ ಬಳಿಕ ದೇವತೆಗಳೆಲ್ಲರೂ ತೇಜಸ್ಸಿನಿಂದ ವ್ಯಾಪ್ತವಾದ ಭೂಮಿಯು ಭಗ್ನವಾಗುವದೆಂದರಿತು ಅಗ್ನಿಯನ್ನು ಕುರಿತು, "ಎಲೈ ಅಗ್ನಿಯೇ ! ವಾಯುದೇವನಿಂದೊಡಗೂಡಿದ ನೀನು ಈ ತೇಜಸ್ಸನ್ನು ಪ್ರವೇಶಿಸು" ಎಂದು ಹೇಳಿದರು ॥೧೭॥ ಆ ಬಳಿಕ ಅಗ್ನಿಯಿಂದಾತೇಜಸ್ಸು ವ್ಯಾಪ್ತವಾಗಲು ಶ್ವೇತಪರ್ವತವೂ, ಅಗ್ನಿಸೂರ್ಯರಿಗೆ ಸಮಾನವಾದ ಶರವಣವೂ ಉಂಟಾಯಿತು. ಈ ಶರವಣದಲ್ಲಿಯೇ ಅಗ್ನಿ ಸಂಭೂತನಾದ ಕಾರ್ತಿ

ಪ್ರಭಾ) ಸಮನ್ಯುರಶಪತ್ಸರ್ವಾನ್ ಕ್ರೋಧಸಂರಕ್ತಲೋಚನಾ ||೨೦|| ಯಸ್ಮಾ ನ್ನಿವಾರಿತಾಚೈವ ಸಂಗತಿಃ ಪುತ್ರಕಾಮ್ಯಯಾ || ಅಪತ್ಯಂ ಸ್ವೇಷು ದಾರೇಷು ತಸ್ಮಾನ್ನೋತ್ಪಾದಯಿಷ್ಯಥ ||೨೧|| ಅದ್ಯಪ್ರಭೃತಿ ಯುಷ್ಮಾಕಮಪ್ರಜಾ ಸ್ಸಂತುಪತ್ನಯಃ||ಏವಮುಕ್ತ್ವಾ ಸುರಾನ್ ಸರ್ವಾನ್ ಶಶಾಪ ಪೃಥಿವೀಮಪಿ ||೨೨|| ಅವನೇ ನೈಕರೂಪಾ ತ್ವಂ ಬಹುಭಾರ್ಯಾ ಭವಿಷ್ಯಸಿ || ನಚ ಪುತ್ರಕೃತಾಂ ಪ್ರೀತಿಂ ಮತ್ಕ್ರೋಧ ಕಲುಷೀ ಕೃತಾ || ಪ್ರಾಪ್ಸ್ಯಸಿ ತ್ವಂ ಸುದುರ್ಮೇಧೇ ಮಮ ಪುತ್ರ

---

ಅಬ್ರವೀತ್ - ನುಡಿದಳು, (ಭಾಸ್ಕರಪ್ರಭಾ - ಸೂರ್ಯನಂತೆ ಕಾಂತಿಯುಳ್ಳ, ಪಾರ್ವತೀ-ಪಾರ್ವತಿಯು ಹೇಸುರಾಃ - ಎಲೈ ದೇವತೆಗಳಿರಾ ! ಮೇ - ನನಗೆ, ಕೃತಸ್ಯ- ಮಾಡಿದ, ಅಪ್ರಿಯಸ್ಯ - ಅರಿಷ್ಟದ, ಫಲಂ - ಫಲವನ್ನು, ಅದ್ಯ - ಈಗ, ಪ್ರಾಪ್ನುತ - ಹೊಂದುವಿರಿ, ಇತಿ ಹೀಗೆಂದು, ಉಕ್ತ್ವಾ- ಹೇಳಿ, ಸಲಿಲಂ - ನೀರನ್ನು, ಗೃಹ್ಯ ತೆಗೆದುಕೊಂಡು.) ಕ್ರೋಧಸಂರಕ್ತಲೋಚನಾ- ಕೋಪ ದಿಂದ ಕೆಂಪೂಗೆದ ಕಂಗಳುಳ್ಳವಳಾಗಿ ಸಮನ್ಯುಃ - ಕೋಪದಿಂದ, ಯಸ್ಮಾತ್ - ಯಾವ ಕಾರಣ, ಪುತ್ರಕಾಮ್ಯಯಾ - ಪುತ್ರೇಚ್ಛೆಯುಳ್ಳ ನನ್ನೊಡನ, ಸಂಗತಿಃ - ಸಂಗಮವು, ನಿವಾರಿತಾ-ತಡೆಮಾಡ ಲ್ಪಟ್ಟಿತೋ, ತಸ್ಮಾತ್-ಆ ಕಾರಣ, ಸ್ವೇಷು-ಸ್ವಕೀಯರಾದ, ದಾರೇಷು-ಹೆಂಡತಿಯರಲ್ಲಿ, ಅಪತ್ಯಂ- ಸಂತಾನವನ್ನು, ನೋತ್ಪಾದಯಿಷ್ಯಥ ಹುಟ್ಟಿಸಬೇಡಿರಿ, ಇತಿ - ಇಂತೆಂದು, ಸರ್ವಾನ್-ಸಮಸ್ತ ದೇವತೆಗಳನ್ನು ಕುರಿತು, ಅಶಪತ್ - ಶಪಿಸಿದಳು ||೨೧|| ಅದ್ಯಪ್ರಭೃತಿ - ಈ ಮೊದಲು, ಯುಷ್ಮಾಕಂ - ನಿಮ್ಮ, ಪತ್ನಯಃ - ಹೆಂಡತಿಯರು, ಅಪ್ರಜಾಃ - ಮಕ್ಕಳಿಲ್ಲದವರಾಗಿ, ಸಂತು- ಇರಲಿ, ಏವಂ - ಹೀಗೆ, ಸರ್ವಾನ್ - ಸಮಸ್ತ ದೇವತೆಗಳನ್ನು ಕುರಿತು, ಉಕ್ತ್ವಾ-ಹೇಳಿ, ಪೃಥಿವೀ ಮಪಿ - ಭೂಮಿಯನ್ನೂ ಕೂಡ, ಶಶಾಪ- ಶಪಿಸಿದಳು ||೨೨|| ಹೇಅವನೇ-ಎಲೈ ಭೂಮಿಯೇ, ತ್ವಂ - ನೀನು, ನೈಕರೂಪಾ-ಅನೇಕ ರೂಪಗಳುಳ್ಳವಳಾಗಿ, ಬಹುಭಾರ್ಯಾ - ಬಹುಮಂದಿಯಿಂದ ಭರಿ ಸತಕ್ಕವಳು, ಭವಿಷ್ಯಸಿ - ಆಗುವಿ, ಇತಿ - ಇಂತೆಂದು, ಶಶಾಪ-ಶಪಿಸಿದಳು. ||೨೩|| ಹೇಸುದು ರ್ಮೇಧೇ - ಎಲೈ ದುಷ್ಟಬುದ್ಧಿಯುಳ್ಳವಳೇ, ಮಮ - ನನಗೆ, ಪುತ್ರಂ - ಪುತ್ರನನ್ನು, ಅನಿಚ್ಛತೀ-

---

ಕೇಯ ಸ್ವಾಮಿಯು ಹುಟ್ಟಿದನು. ಎಲೈ ರಾಮಚಂದ್ರನೇ ! ಇದಾದ ಬಳಿಕ ಬಹುವಾಗಿ ಸಂತಸಗೊಂಡ ಮನವುಳ್ಳ ದೇವರ್ಷಿಗಣಗಳು ಪಾರ್ವತೀ ಪರಮೇಶ್ವರರನ್ನು ಪೂಜಿಸಿದರು. ||೧೮-೧೯|| ಆಗಲಾ ಪಾರ್ವತಿಯು ಬಹುಕೋಪದಿಂದ "ಎಲೈ ದೇವತೆಗಳಿರಾ ! ನನ್ನ ವಿಷಯದಲ್ಲಿ ಅಪ್ರಿಯವನ್ನಾಚರಿಸಿದುದರಿಂದ ತಕ್ಕ ಫಲವನ್ನನುಭವಿಸಿರಿ. ಯಾವ ಕಾರಣ ದಿಂದ ಪುತ್ರಕಾಮನೆಯುಳ್ಳ ನೀವು ನಮ್ಮಿಬ್ಬರ ಕೂಡುವಿಕೆಯನ್ನು ನಿವಾರಿಸಿದಿರೋ, ಆ ಕಾರಣ ನೀವು ನಿಮ್ಮ ಹೆಂಡತಿಯರಲ್ಲಿ ಪುತ್ರಸಂತಾನವನ್ನು ಪಡಯಬೇಡಿರಿ. ನಿಮ್ಮ ಸತಿಯರೂ ಇಂದಿನಿಂದ ಅಪುತ್ರವಂತರಾಗಿಯೇ ಇರಲಿ" ಎಂದು ಶಪಿಸಿ ಶಿವರೇತಸ್ಸನ್ನು ಧರಿಸಿದ ಭೂಮಿಯನ್ನು ಶಪಿಸಿದಳದೆಂತೆನೆ. ||೨೦-೨೨|| "ಎಲೈ ಭೂದೇವಿಯೇ ! ನನಗೆ ಮಕ್ಕಳಾಗದಿರಲೆಂದಿಚ್ಛಿಸಿದ ನೀನು ಅನೇಕ ರೂಪಳಾಗಿಯೂ, ಅನೇಕರಿಂದ ಭರಿಸಲು ಯೋಗ್ಯಳಾದವಳಾಗಿಯೂ ಆಗುವಿಯಲ್ಲದೆ, ನನ್ನ ಕೋಪದಿಂದ ಕಾಲುಷ್ಯವನ್ನು ಹೊಂದಿದ

ಮನಿಚ್ಛತೀ ॥ ೨೪ ॥ ತಾನ್ ಸರ್ವಾನ್ ವ್ರೀಡಿತಾನ್ ದೃಷ್ಟ್ವಾ ಸುರಾನ್ ಸುರಪತಿಸ್ತದಾ ॥ ಗಮನಾಯೋಪಚಕ್ರಾಮ ದಿಶಂ ವರುಣಪಾಲಿತಾಂ ॥ ೨೫ ॥ ಸ ಗತ್ವಾ ತಪಆತಿಷ್ಠತ್ಪಾರ್ಶ್ವೇ ತಸ್ಯೋತ್ತರೇ ಗಿರೌ ॥ ಹಿಮವತ್ಪ್ರಭವೇ ಶೃಂಗೇ ಸಹದೇವ್ಯಾ ಮಹೇಶ್ವರಃ ॥೨೬॥ ಏಷ ತೇ ವಿಸ್ತರೋ ರಾಮ ಶೈಲಪುತ್ರ್ಯಾ ನಿವೇದಿತಃ ॥ ಗಂಗಾಯಾಃ ಪ್ರಭವಂಚೈವ ಶೃಣು ಮೇ ಸಹ ಲಕ್ಷ್ಮಣಃ ॥ ೨೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ

---

ಕೋರದಿರುವ, ತ್ವಂ - ನೀನು, ಮತ್ಕ್ರೋಧಕಲುಷೀಕೃತಾ, ಮತ್-ನನ್ನ, ಕ್ರೋಧ-ಕೋಪದಿಂದ, ಕಲುಷೀಕೃತಾ ವ್ಯತ್ಯಸ್ತವಾದ ಪ್ರಕೃತಿಯುಳ್ಳವಳಾಗಿ, ಪುತ್ರಕೃತಾಂ - ಪುತ್ರರಿಂದ ಮಾಡಲ್ಪಟ್ಟ, ಪ್ರೀತಿಂ-ಸಂತೋಷವನ್ನು, ನಪ್ರಾಪ್ಸ್ಯಸಿ - ಹೊಂದಬೇಡ, ॥ ೨೪ ॥ ತದಾ - ಆಗ, ಸುರಪತಿಃ-ದೇವಾಧಿಪತಿಯಾದ, ಮಹೇಶ್ವರಃ ಈಶ್ವರನು, ವ್ರೀಡಿತಾನ್ ಲಜ್ಜೆಗೊಂಡು, ಸರ್ವಾನ್-ಸಮಸ್ತರಾದ, ತಾನ್ ಸುರಾನ್ - ಆ ದೇವತೆಗಳನ್ನು, ದೃಷ್ಟ್ವಾ - ಕಂಡು, ವರುಣ ಪಾಲಿತಾಂ - ವರುಣನಿಂದ ಪೋಷಿಸಲ್ಪಟ್ಟ, ದಿಶಂ-ದಿಕ್ಕನು ಕುರಿತು, ಗಮನಾಯೋಪಚಕ್ರಾಮ-ಹೊರಟುಹೋದನು ॥೨೫॥ ಸಃ - ಆ ಪರಮೇಶ್ವರನು, ಉತ್ತರೇಗಿರೌ-ಉತ್ತರ ದಿಕ್ಕಿನಲ್ಲಿರುವ, ತಸ್ಯ-ಆ ಬೆಟ್ಟದ, ಪಾರ್ಶ್ವೇ-ಪ್ರಾಂತದಲ್ಲಿ, ಗತ್ವಾ - ಹೋಗಿ, ಹಿಮವತ್ಪ್ರಭವೇ - ಹಿಮವತ್ಪರ್ವತದಿಂದ ಹುಟ್ಟಿದ, ಶೃಂಗೇ-ಶಿಖರದಲ್ಲಿ, ದೇವ್ಯಾಸಹ - ಪಾರ್ವತಿಯೊಡಗೂಡಿ, ತಪಃ - ತಪವನ್ನು. ಅತಿಷ್ಠತಾ-ಅನುಷ್ಠಾನ ಮಾಡಿದನು. ॥ ೨೬ ॥ ಹೇರಾಮ - ಎಲೈ ಶ್ರೀರಾಮನೆ, ಶೈಲಪುತ್ರ್ಯಾಃ-ಪಾರ್ವತೀ ದೇವಿಯು, ಏಷವಿಸ್ತರಃ - ಈ ಕಥಾವಿಸ್ತಾರವು ತೇ - ನಿನಗೆ, ನಿವೇದಿತಃ - ತಿಳಿಸಲ್ಪಟ್ಟಿತು, ಮೇ - ನನ್ನಿಂದ, ಸಹಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದವನಾಗಿ, ಗಂಗಾಯಾಃ-ಗಂಗಾನದಿಯ, ಪ್ರಭವಂಚೈವ-ಉತ್ಪತ್ತಿಯನ್ನೂ ಕೂಡ, ಶೃಣು - ಕೇಳು ॥೨೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ತ್ರಿಂಶಸ್ಸರ್ಗಃ.

---

ನೀನು ಮಗನಿಂದುಂಟಾಗುವ ಪ್ರೀತಿಯನ್ನು ಹೊಂದುವದಿಲ್ಲವು, ॥ ೨೩-೨೪ ॥ ಉಮಾ ದೇವಿಯು ಈ ರೀತಿ ಶಪಿಸಲು, ದೇವತೆಗಳೆಲ್ಲರೂ ಲಜ್ಜೆಗೊಂಡುದನ್ನು ನೋಡಿದ ದೇವೇಂದ್ರನು ವರುಣಪಾಲಿತವಾದ ಪ್ರತೀಚಿಯನ್ನು ಕುರಿತು ಹೊರಟನು, ಪರಮೇಶ್ವರನಾದರೋ, ಹಿಮವತ್ಪರ್ವತದ ಉತ್ತರ ಶಿಖರವನ್ನು ಸೇರಿ ದೇವಿಯೊಡನೆ ತಪವಂಗೈದನು ॥೨೫-೨೬॥ “ಎಲೈ ರಘುರಾಮನೇ! ಇಂತು ಗಿರಿರಾಜ ಕುವರಿಯಾದ ಪಾರ್ವತಿಯ ವಿಸ್ತಾರವಾದ ಚರಿತ್ರೆಯು ನನ್ನಿಂದರುಹಲ್ಪಟ್ಟಿತು. ಇನ್ನು ಲಕ್ಷ್ಮಣನಿಂದೊಡಗೂಡಿದ ನೀನು ಶೈಲೇಂದ್ರನ ಜ್ಯೇಷ್ಠಪುತ್ರಿಯಾದ ಗಂಗಾ ದೇವಿಯ ಉತ್ಪತ್ತಿಯನ್ನು ಕೇಳುವವನಾಗು” ॥ ೨೭ ॥

ಇಂತಿದು ಪಾರ್ವತೀ ಪ್ರಕೋಪವರ್ಣನವೆಂಬ ಮುವ್ವತ್ತೇಳನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ತಪ್ಯಮಾನೇ ತಪೋ ದೇವೇ ದೇವಾಸ್ಸರ್ಷಿಗಣಾಃ ಪುರಾ ॥ ಸೇನಾಪತಿಮ ಭೀಪ್ಸಂತಃ ಪಿತಾಮಹಮುಪಾಗಮನ್ ॥ ೧ ॥ ತತೋಬ್ರುವನ್ ಸುರಾಸ್ಸರ್ವೇ ಭಗವಂತಂ ಪಿತಾಮಹಂ॥ ಪ್ರಣಿಪತ್ಯ ಶುಭಂ ವಾಕ್ಯಂ ಸೇಂದ್ರಾಸ್ಸಾಗ್ನಿ ಪುರೋ ಗಮಾಃ ॥೨॥ ಯೋ ನ ಸೇನಾಪತಿರ್ದೇವ ದತ್ತೋ ಭಗವತಾ ಪುರಾ॥ (ಸ ನ ಜಾತೋದ್ಯ ಭಗವನ್ನಸ್ಮದ್ವೈರಿನಿಬರ್ಹಣಃ ॥ ತತ್ಪಿತಾ ಭಗವಾನ್ ಶರ್ವೋ ಹಿಮವಚ್ಛಿಖರೇದ್ಯನ್ವೈ ॥) ತಪಃ ಪರಮಮಾಸ್ಥಾಯ ತಪ್ಯತೇಸ್ಮ ಸಹೋ

---

ದೇವೇ - ಪರಮೇಶ್ವರನು, ಪುರಾ - ಪೂರ್ವದಲ್ಲಿ, ತಪಃ-ತಪಸ್ಸನ್ನು, ತಪ್ಯಮಾನೇಸತಿ- ಮಾಡುತ್ತಿರಲು, ಸರ್ಷಿಗಣಾಃ - ಋಷಿ ಸಮೂಹದಿಂದೊಡಗೂಡಿದ, ದೇವಾಃ - ದೇವತೆಗಳು, ಸೇನಾಪತಿಂ - ಸೈನ್ಯಾಧಿಪತಿಯನ್ನು, ಅಭೀಪ್ಸಂತಃ - ಕೋರಿ, ಪಿತಾಮಹಂ - ಬ್ರಹ್ಮದೇವನನ್ನು ಕುರಿತು, ಉಪಾಗಮನ್ - ಬಂದರು. ॥ ೧ ॥ ತತಃ - ಬಳಿಕ, ಸಾಗ್ನಿ ಪುರೋಗಮಾಃ- ಅಗ್ನಿ ಮೇ ಮೊದಲಾದ ದಿಕ್ಪಾಲಕರಿಂದೊಡಗೂಡಿದ, ಸೇಂದ್ರಾಃ - ಇಂದ್ರಸಮೇತರಾದ, ಸರ್ವೇ - ಸಮಸ್ತ, ಸುರಾಃ - ದೇವತೆಗಳು, ಭಗವಂತಂ - ಷಡ್ಗುಣೈಶ್ವರ್ಯ ಸಂಪನ್ನನಾದ, ಪಿತಾಮಹಂ ಬ್ರಹ್ಮನನ್ನು ಕುರಿತು, ಪ್ರಣಿಪತ್ಯ-ವಂದಿಸಿ, ಅಬ್ರುವನ್-ನುಡಿದರು. ॥೨॥ ಹೇದೇವ-ಎಲೈಬ್ರಹ್ಮನೆ,ಪುರಾ-ಪೂರ್ವದಲ್ಲಿ, ಯಃ - ಯಾವ ಪುರುಷನು, ನಃ - ನಮಗೆ, ಸೇನಾಪತಿಃ - ಸೈನ್ಯಾಧಿಪತಿಯಾಗಿ, ಭಗವತಾ- ಪೂಜ್ಯ ನಾದ ನಿನ್ನಿಂದ, ದತ್ತಃ-ಕೊಡಲ್ಪಟ್ಟನೋ, ಹೇಭಗವನ್ - ಎಲೈ ಪೂಜ್ಯನೆ, ಅಸ್ಮದ್ವೈರಿನಿಬರ್ಹಣಃ- ನಮ್ಮ ಶತ್ರುನಾಶಕನಾದ, ಸಃ - ಆ ಪುರುಷನು, ನಜಾತಃ - ಹುಟ್ಟಲಿಲ್ಲ, ತತ್ಪಿತಾ-ಆತನ ತಂದೆ ಯಾದ, ಭಗವಾನ್ - ಪೂಜ್ಯನಾದ, ಶರ್ವಃ - ಆ ಶಿವನು, ಅದ್ಯನ್ವೈ- ಈಗಲೂ, ಹಿಮವಚ್ಛಿಖರೇ- ಹಿಮವತ್ಪರ್ವತ ಶೃಂಗದಲ್ಲಿ, ಉಮಯಾಸಹ - ಪಾರ್ವತಿಯೊಡನೆ, ಪರಮಂ ಬಹಳವಾದ, ತಪಃ-

---

ಎಲೈ, ರಾಮಚಂದ್ರನೇ ! ದೇವದೇವನಾದ ಪಾರ್ವತೀರಮಣನು ತಪವಂ ಗೈಯುತ್ತಿರಲು ಪೂರ್ವದಲ್ಲಿಯೇ ಸೇನಾಪತಿಯನ್ನು ಬಯಸಿದ ದೇವತೆಗಳೆಲ್ಲರೂ ಪೂಜ್ಯ ನಾದ ಪಿತಾಮಹನಿದ್ದೆಡೆಗೆ ಬಂದು, "ಎಲೈ ಬ್ರಹ್ಮದೇವನೇ ! ಯಾರು ನಮ್ಮ ಸೇನಾಪ ತಿಯೋ ಅವನು ಪರಮೇಶ್ವರನಿಂದ ಪೂರ್ವದಲ್ಲಿಯೇ ದಯಪಾಲಿತನಾದನು. ಆದರೆ ನಮ್ಮ ವೈರಿಗಳನ್ನು ಸದೆಬಡಿಯುವ ಆ ಸೇನಾಧಿಪತಿಯು ಇನ್ನೂ ಹುಟ್ಟಲಿಲ್ಲವು. ಆತನ ತಂದೆಯಾದ ಶಿವನು ಉಮೆಯೊಡನೆ ಹಿಮವತ್ಪರ್ವತದ ಶಿಖರದಲ್ಲಿ ತಪವಂಗೈಯುತ್ತಿರು ವನು. ಈ ಸೇನಾಧಿಪತಿಪ್ರಾಪ್ತಿ ವಿಷಯದಲ್ಲಿ ಪ್ರಪಂಚದ ಹಿತಕ್ಕೋಸುಗ ಮುಂದೇನು

ಮಯಾ || ೩ || ಯದತ್ರಾನಂತರಂ ಕಾರ್ಯಂ ಲೋಕಾನಾಂ ಹಿತಕಾಮ್ಯಯಾ||
ಸಂವಿಧತ್ಸ್ವ ವಿಧಾನಜ್ಞ ತ್ವಂ ಹಿ ನಃ ಪರಮಾಗತಿಃ || ೪ || ದೇವತಾನಾಂ
ವಚಶ್ಶ್ರುತ್ವಾ ಸರ್ವಲೋಕ ಪಿತಾಮಹಃ || ಸಾಂತ್ವಯನ್ಮಧುರೈರ್ವಾಕ್ಯೈ
ಸ್ತ್ರಿದಶಾನಿದಮಬ್ರವೀತ್ || ೫ || ಶೈಲಪುತ್ರ್ಯಾ ಯದುಕ್ತಂ ತನ್ನಪ್ರಜಾ
ಸ್ಸಂತು ಪತ್ನಿಷು || ತಸ್ಯಾ ವಚನಮಕ್ಲಿಷ್ಟಂ ಸತ್ಯಮೇತನ್ನಸಂಶಯಃ || ೬ ||
ಇಯಮಾಕಾಶಗಾ ಗಂಗಾ ಯಸ್ಯಾಂ ಪುತ್ರಂ ಹುತಾಶನಃ || ಜನಯಿಷ್ಯತಿ
ದೇವಾನಾಂ ಸೇನಾಪತಿಮರಿಂದಮಂ || ೭ || ಜ್ಯೇಷ್ಠಾ ಶೈಲೇಂದ್ರ ದುಹಿತಾ
ಮಾನಯಿಷ್ಯತಿ ತತ್ಸುತಂ || ಉಮಾಯಾಸ್ತದ್ಬಹುಮತಂ ಭವಿಷ್ಯತಿ ನಸಂ

---

ತಪಸ್ಸನ್ನು, ಆಸ್ಥಾಯ - ಅಂಗೀಕರಿಸಿ, ತಪ್ರತೇಸ್ಮ-ಅನುಷ್ಠಾನ ಮಾಡಿರುವೆವಷ್ಟೆ. ||೩|| ಅತ್ರ-ಈ ವಿಷಯದಲ್ಲಿ, ಅನಂತರಂ - ಆ ಒಳಿಕ, ಲೋಕಾನಾಂ - ಲೋಕಗಳಿಗೆ, ಹಿತಕಾಮ್ಯಯಾ-ಹಿತವನ್ನುಂಟುಮಾಡಬೇಕೆಂಬಿಚ್ಛೆಯಿಂದ, ಯತ್ - ಯಾವ ಕಾರ್ಯವು, ಕಾರ್ಯಂ-ಮಾಡತಕ್ಕದೋ, ಹೇವಿಧಾನಜ್ಞ - ಎಲೈ ಕಾರ್ಯಜ್ಞನಾದವನೆ, ತತ್-ಆ ಕಾರ್ಯವನ್ನು, ಸಂವಿಧತ್ಸ್ವ- ಆಲೋಚನೆಮಾಡು, ತ್ವಂ - ನೀನು, ನಃ - ನಮಗೆ, ಪರಮಾ - ಉತ್ಕೃಷ್ಟವಾದ, ಗತಿಃ- ಶರಣ್ಯನಷ್ಟೆ, ||೪|| ದೇವತಾನಾಂ - ದೇವತೆಗಳ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವಲೋಕಪಿತಾಮಹಃ - ಸರ್ವಲೋಕಗಳಿಗೂ ಸೃಷ್ಟಿಕರ್ತನಾದ ಬ್ರಹ್ಮನು, ಮಧುರೈಃ - ಇಂಪಾದ, ವಾಕ್ಯೈಃ - ಮಾತುಗಳಿಂದ, ತ್ರಿದಶಾನ್ - ದೇವತೆಗಳನ್ನು, ಸಾಂತ್ವಯನ್ - ಸಮಾಧಾನಗೊಳಿಸುತ್ತ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ||೫|| ಶೈಲಪುತ್ರ್ಯಾ - ಪಾರ್ವತಿಯಿಂದ, (ದೇವಾಃ - ದೇವತೆಗಳು,) ಪತ್ನಿಷು-ಸ್ವಪತ್ನಿಗಳಲ್ಲಿ, ಅಪ್ರಜಾಃ - ಮಕ್ಕಳಿಲ್ಲದವರು, ಸಂತು-ಆಗಲಿ ಎಂಬದಾಗಿ, ಯದುಕ್ತಂ-ಯಾವದು ಹೇಳಲ್ಪಟ್ಟಿತೋ, ತಸ್ಯಾಃ - ಆ ಪಾರ್ವತಿಯ, ಏತದ್ವಚನಂ - ಈ ಮಾತು, ಸತ್ಯಂ-ಸಫಲವು, ಅಕ್ಲಿಷ್ಟಂ - ವ್ಯರ್ಥವಲ್ಲ, ಸಂಶಯಃ-ಸಂಶಯವು, ನ-ಇಲ್ಲ || ೬ || ಯಸ್ಯಾ-ಯಾವ ಗಂಗೆಯಲ್ಲಿ, ಹುತಾಶನಃ - ಅಗ್ನಿಯು, ದೇವಾನಾಂ - ದೇವತೆಗಳಿಗೆ, ಸೇನಾಪತಿಂ - ಸೈನ್ಯಾಧಿಪತಿಯಾದ, ಅರಿಂದಮಂ - ಶತೃಸಂಹಾರಕನಾದ, ಯಂಪುತ್ರಂ - ಯಾವ ಮಗನನ್ನು, ಜನಯಿಷ್ಯತಿ-ಹುಟ್ಟಿಸುತ್ತಾನೊ, ಇಯಂ - ಈ, ಜ್ಯೇಷ್ಠಾ - ಜ್ಯೇಷ್ಠಳಾದ, ಶೈಲೇಂದ್ರದುಹಿತಾ - ಹಿಮವಂತನ ಮಗಳಾದ, ಆಕಾಶಗಾ - ಆಕಾಶಗಾಮಿನಿಯಾದ, ಗಂಗಾ-ಗಂಗಾನದಿಯು, ತತ್ಸುತಂ - ಆ ಮಗನನ್ನು, ಮಾನ

---

ಮಾಡಬೇಕೋ ಅದನ್ನು ಆಜ್ಞಾಪಿಸು. ಸಕಲವನ್ನೂ ತಿಳಿದ ನೀನು ನಮಗೆ ಉತ್ತಮನಾದ ಶರಣ್ಯನು" ಎಂದು ಸಾಷ್ಟಾಂಗ ನಮಸ್ಕಾರಮಂಗೈದು ಬಿನ್ನವಿಸಿಕೊಂಡರು. || ೧ - ೪ || ಇಂತು ನುಡಿದ ದೇವತೆಗಳ ವಚನವನ್ನು ಕೇಳಿದ ಸಕಲ ಲೋಕಪಿತಾಮಹನಾದ ಬ್ರಹ್ಮದೇವನು, ಮೃದು ಮಧುರವಾದ ವಾಕ್ಯಗಳಿಂದ ಅವರನ್ನು ಸಂತೈಸಿ ಇಂತೆಂದನು. "ಅಯ್ಯಾ ದೇವತೆಗಳಿರಾ! ಉಮೆಯು 'ನಿಮ್ಮ ಪತ್ನಿಯರಲ್ಲಿ ಅಪುತ್ರವಂತರಾಗಿರಿ' ಎಂದು ಶಪಿಸಿದ ಉಕ್ತಿಯು ಸತ್ಯವಾಗುವುದೆಂಬದರಲ್ಲಿ ಸಂಶಯವಿಲ್ಲವು. ಈ ಯಜ್ಞೇಶ್ವರನು ಆಕಾಶಗಾಮಿನಿಯಾದ ಈ ಗಂಗೆಯಲ್ಲಿ ದೇವಸೇನಾಧಿಪತಿಯೂ, ಶತೃಸಂಹಾರಕನೂ, ಆದ

ಶಯಃ ‖ ೮ ‖ ತಚ್ಛ್ರುತ್ವಾ ವಚನಂ ತಸ್ಯ ಕೃತಾರ್ಥಾ ರಘುನಂದನ ‖ ಪ್ರಣಿಪತ್ಯ ಸುರಾಸ್ಸರ್ವೇ ಪಿತಾಮಹಮಪೂಜಯನ್ ‖ ೯ ‖ ತೇ ಗತ್ವಾ ಪರ್ವತಂ ರಾಮ ಕೈಲಾಸಂ ಧಾತುಮಂಡಿತಂ ‖ ಅಗ್ನಿಂ ನಿಯೋಜಯಾಮಾಸುಃ ಪುತ್ರಾರ್ಥಂ ಸರ್ವದೇವತಾಃ ‖ ೧೦ ‖ ದೇವಕಾರ್ಯಮಿದಂ ದೇವ ಸಂವಿಧತ್ಸ್ವ ಹುತಾಶನ ‖ ಶೈಲಪುತ್ರ್ಯಾಂ ಮಹಾತೇಜೋ ಗಂಗಾಯಾಂ ತೇಜ ಉತ್ಸೃಜ ‖ ೧೧ ‖ ದೇವತಾನಾಂ ಪ್ರತಿಜ್ಞಾಯ ಗಂಗಾಮಭ್ಯೇತ್ಯ

---

ಯಿಷ್ಯತಿ - ಬಹುಮಾನಿಸುತ್ತಾಳೆ, (ಅಥವಾ ಗರ್ಭದಲ್ಲಿ ಧರಿಸುತ್ತಾಳೆ,) ತತ -ಆ ಗರ್ಭಧಾರಣವು, ಉಮಾಯಾಃ - ಪಾರ್ವತಿಗೂ, ಬಹುಮತಂ - ಬಹಳ ಇಷ್ಟವಾದುದು, ಭವಿಷ್ಯತಿ-ಆಗುವದು, ಅತ್ರ- ಈ ಅರ್ಥದಲ್ಲಿ, ಸಂಶಯಃ - ಸಂದೇಹವು, ನ ಇಲ್ಲ ‖೭-೮‖ ಹೇ ರಘುನಂದನ-ಎಲೈ ರಘುನಂದನನೆ, ತಸ್ಯ - ಆ ಚತುರ್ಮುಖಬ್ರಹ್ಮನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸರ್ವೇ ಸಮಸ್ತರಾದ, ಸುರಾಃ - ದೇವತೆಗಳು, ಕೃತಾರ್ಥಾಃ - ಕೃತಪ್ರಯೋಜನರಾಗಿ, ಪಿತಾಮಹಂ- ಬ್ರಹ್ಮನನ್ನು. ಪ್ರಣಿಪತ್ಯ - ನಮಸ್ಕರಿಸಿ ಅಪೂಜಯನ್ - ಶ್ಲಾಘಿಸಿದರು. ‖ ೯ ‖ ಹೇರಾಮ- ಎಲೈ ಶ್ರೀರಾಮನೆ, ತೇಸರ್ವದೇವತಾಃ - ಆ ಸಮಸ್ತ ದೇವತೆಗಳು, ಧಾತುಮಂಡಿತಂ - ಗೈರಿಕಾದಿ ಧಾತುಗಳಿಂದಲಂಕೃತವಾದ, ಕೈಲಾಸಪರ್ವತಂ - ಕೈಲಾಸಪರ್ವತವನ್ನು ಕುರಿತು, ಗತ್ವಾ-ಹೋಗಿ, ಅಗ್ನಿಂ-ಅಗ್ನಿಯನ್ನು, ಪುತ್ರಾರ್ಥಂ - ಪುತ್ರನಿಮಿತ್ತವಾಗಿ, ನಿಯೋಜಯಾಮಾಸುಃ-ಬೇಡಿದರು ‖೧೦‖ ಹೇದೇವ - ಎಲೈ ಸ್ವಾಮಿಯೆ, ಹೇಹುತಾಶನ - ಎಲೈ ಅಗ್ನಿಯ, ಇದಂದೇವಕಾರ್ಯಂ-ಈ ದೇವತೆಗಳ ಕಾರ್ಯವನ್ನು, ಸಂವಿಧತ್ಸ್ವ - ಆಲೋಚಿಸು, ಹೇಮಹಾತೇಜಃ - ಎಲೈ ಮಹಾತೇಜೋವಂತನೆ, ಶೈಲಪುತ್ರ್ಯಾಂ - ಹಿಮವಂತನ ಮಗಳಾದ, ಗಂಗಾಯಾಂ - ಗಂಗೆಯಲ್ಲಿ, ತೇಜಃ - ವೀರ್ಯವನ್ನು, ಉತ್ಸೃಜ - ಬಿಡು, ‖೧೧‖ ದೇವತಾನಾಂ - ದೇವತೆಗಳಿಗಾಗಿ, ಪಾವಕಃ - ಅಗ್ನಿಯು, ಪ್ರತಿಜ್ಞಾಯ - ಹಾಗೆಯೇ ಆಗಲೆಂದು ಪ್ರತಿಜ್ಞೆಯಂ ಗೈದು, ಗಂಗಾಂ - ಗಂಗಾನದಿಯನ್ನು ಕುರಿತು, ಅಭ್ಯೇತ್ಯ - ಬಂದು, ಹೇದೇವೀ - ಎಲೈ ಗಂಗೆಯೇ, ಗರ್ಭಂ- ಗರ್ಭವನ್ನು, ಧಾರಯ-ಧರಿಸು, ಇದಂ

---

ಪುತ್ರನನ್ನು ಸೃಜಿಸುವನು. ಶೈಲೇಂದ್ರನ ಜ್ಯೇಷ್ಠಕುಮಾರಿಯಾದ ಈಕೆಯು ಆ ಕುಮಾರನನ್ನು ಬಹುಮಾನಿಸುವಳು. ಈ ಕಾರ್ಯವು ಗಿರಿಜೆಗೂ ಸಮ್ಮತವಾಗುವುದೆಂಬದರಲ್ಲಿ ಸಂಶಯವಿಲ್ಲ.” ಎಂದನು. ‖ ೫ - ೮ ‖ ಇಂತು ನುಡಿದ ಚತುರ್ಮುಖಬ್ರಹ್ಮನ ನುಡಿಗಳನ್ನು ಕೇಳಿ ದೇವತೆಗಳೆಲ್ಲರೂ ಕೃತಕೃತ್ಯರಾಗಿ ಆತನಿಗೆ ನಮಸ್ಕಾರಪೂರ್ವಕವಾದ ಪೂಜೆಯನ್ನೆಸಗಿದರು. ‖ ೯ ‖ ಎಲೈ ರಾಮಚಂದ್ರನೇ ! ಆ ಬಳಿಕ ದೇವತೆಗಳೆಲ್ಲರೂ ಗೈರಿಕಾದಿ ನಾನಾಧಾತುಗಳಿಂದ ಕಂಗೊಳಿಸುತ್ತಿರುವ ಕೈಲಾಸ ಪರ್ವತವನ್ನು ನೇರಿ, ಕುಮಾರೋತ್ಪತ್ತಿಗೋಸುಗ ಯಜ್ಞೇಶ್ವರನನ್ನು ನಿಯೋಗಿಸಿ, ಅವನನ್ನು ಕುರಿತಿಂತೆಂದರು. “ಎಲೈ ಅಗ್ನಿಯೇ ! ಇದು ದೇವತೆಗಳ ಕಾರ್ಯವು; ಆದುದರಿಂದ ನೀನೀ ಕೆಲಸವನ್ನು ಮಾಡು; ಗಿರಿರಾಜ ಕುಮಾರಿಯಲ್ಲಾವ ಶಿವತೇಜಸ್ಸಿರುವುದೋ ಅದನ್ನು ಗಂಗಾದೇವಿಯಲ್ಲಿ ತ್ಯಜಿಸುವವನಾಗು”. ‖೧೧‖ ಇಂತೆಂದ ದೇವತೆಗಳ ನುಡಿಗಳನ್ನು ಕೇಳಿದ ಅಗ್ನಿಯು ಗಂಗೆಯು

ಪಾವಕಃ ॥ ಗರ್ಭಂ ಧಾರಯ ವೈದೇವಿ ದೇವತಾನಾಮಿದಂ ಪ್ರಿಯಂ ॥ ೧೨ ॥ ತಸ್ಯ ತದ್ವಚನಂ ಶ್ರುತ್ವಾ ದಿವ್ಯಂ ರೂಪಮಧಾರಯತ್ ॥ ದೃಷ್ಟ್ವಾ ತನ್ಮಹಿಮಾನಂ ಸ ಸಮಂತಾದವಕೀರ್ಯತ ॥ ೧೩ ॥ ಸಮಂತತಸ್ತದಾ ದೇವೀ ಮಭ್ಯಷಿಂಚತ ಪಾವಕಃ ॥ ಸರ್ವಸ್ರೋತಾಂಸಿ ಪೂರ್ಣಾನಿ ಗಂಗಾಯಾ ರಘುನಂದನ ॥ ೧೪ ॥ ತಮುವಾಚ ತತೋ ಗಂಗಾ ಸರ್ವದೇವ ಪುರೋಹಿತಂ ॥ ಅಶಕ್ತಾ ಧಾರಣೇದೇವ ತವತೇಜ ಸ್ಸಮುದ್ಧತಂ ॥ ದಹ್ಯಮಾನಾಗ್ನಿನಾ ತೇನ ಸಂಪ್ರವ್ಯಥಿತಚೇತಸಾ ॥ ೧೫ ॥ ಅಥ ಬ್ರವೀದಿದಂ ಗಂಗಾಂ ಸರ್ವದೇವ ಹುತಾಶನಃ ॥ ಇಹ ಹೈಮವತೇ ಪಾದೇ ಗರ್ಭೋಽಯಂ ಸನ್ನಿವೇ

---

ಈ ಗರ್ಭಧಾರಣವು, ದೇವತಾನಾಂ - ದೇವತೆಗಳಿಗೆ, ಪ್ರಿಯಂ - ಇಷ್ಟವಾದುದು, ಇತಿ-ಇಂತೆಂದು, ಅಬ್ರವೀತ್ - ನುಡಿದನು. ॥ ೧೨ ॥ ತಸ್ಯ - ಆ ಅಗ್ನಿಯ, ತದ್ವಚನಂ - ಆ ಮಾತನ್ನು, ಶ್ರುತ್ವಾ- ಕೇಳಿ, ದಿವ್ಯಂ - ದೇವತಾ ಸಂಬಂಧವಾದ, ರೂಪಂ - ಸ್ತ್ರೀರೂಪವನ್ನು, ಅಧಾರಯತ್ - ಧರಿಸಿದಳು. ಸಃ - ಆ ಅಗ್ನಿಯು, ತನ್ಮಹಿಮಾನಂ - (ಗೋ) ಆ ಗಂಗಾನದಿಯ ಸೌಂದರ್ಯಾತಿಶಯವನ್ನು, ದೃಷ್ಟ್ವಾ - ಕಂಡು, ಸಮಂತಾತ್ - ಎಲ್ಲೆಡೆಯಲ್ಲಿಯೂ, ಅವಕೀರ್ಯತ-ಶಿವತೇಜಸ್ಸನ್ನೆರಚಿದನು.॥೧೩॥ ಹೇ ರಘುನಂದನ - ಎಲೈ ಶ್ರೀರಾಮನೆ, ಪಾವಕ - ಅಗ್ನಿಯು, ತದಾ - ಆಗ, ದೇವೀಂ-ಗಂಗಾನದಿಯನ್ನು, ಸಮಂತತಃ-ಎಲ್ಲೆಡೆಯಲ್ಲಿಯೂ, ಅಭ್ಯಷಿಂಚತ-ವ್ಯಾಪಿಸುವಂತೆ ಮಾಡಿದನು, ಗಂಗಾಯಾಃ- ಗಂಗಾನದಿಯ, ಸರ್ವಸ್ರೋತಾಂಸಿ-ಸಮಸ್ತಪ್ರವಾಹಗಳೂ, ಪೂರ್ಣಾನಿ ತುಂಬಿದವು. ॥ ೧೪ ॥ ತತಃ-ಬಳಿಕ, ಗಂಗಾ - ಗಂಗಾನದಿಯು, ಅಗ್ನಿನಾ- ಅಗ್ನಿತುಲ್ಯವಾದ, ತೇನ-ಆ ಶಿವತೇಜಸ್ಸಿನಿಂದ, ದಹ್ಯಮಾನಾ-ದಹಿಸಲ್ಪಡುತ್ತ, ಸಂಪ್ರವ್ಯಥಿತಚೇತಸಾ - ಬಹಳವಾದ ವ್ಯಥೆಗೊಂಡ ಬುದ್ಧಿಯುಳ್ಳವಳಾಗಿ, ಸರ್ವದೇವಪುರೋಹಿತಂ - ಸಮಸ್ತ ದೇವತಾಗ್ರೇಸರನಾದ, ತಂ - ಆ ಅಗ್ನಿಯಂ ಕುರಿತು, ಹೇದೇವ - ಎಲೈ ಅಗ್ನಿಯೆ, ಸಮುದ್ಧತಂ - ಪ್ರವರ್ಧಮಾನವಾದ, ತವ - ನಿನ್ನ, ತೇಜಃ-ತೇಜಸ್ಸಿನ, ಧಾರಣೇ - ಧರಿಸುವದರಲ್ಲಿ, ಅಶಕ್ತಾ-ಬಲಹೀನಳು, ಅಸ್ಮಿ - ಆಗಿರುವೆನು, ಇತಿ - ಇಂತೆಂದು, ಉವಾಚ - ಹೇಳಿದಳು, ॥ ೧೫ ॥ ಅಥ - ಬಳಿಕ, ಸರ್ವದೇವ ಹುತಾಶನಃ - ಸಮಸ್ತ ದೇವತೆಗಳ ಹವಿರ್ಭಾಗಗಳನ್ನು ವಹಿಸುವ ಅಗ್ನಿಯು, ಗಂಗಾಂ - ಗಂಗಾನದಿಯನ್ನು ಕುರಿತು, ಇಹ - ಇಲ್ಲಿ,

---

ಬಳಿಗೈದಿ, "ಎಲೆ ಗಂಗಾದೇವಿಯೆ ! ಗರ್ಭವನ್ನು ಧರಿಸುವವಳಾಗು. ಇದು ದೇವತೆಗಳಿಗೆ ಇಷ್ಟವಾದದು" ಎಂದನು. ಗಂಗಾದೇವಿಯಿಾಮಾತನ್ನು ಕೇಳಿ, ಮನೋಹರವಾದ ರೂಪವನ್ನು ಧರಿಸಿದಳು. ಈ ಮೋಹಜನಕವಾದ ಗಂಗಾದೇವಿಯ ರೂಪವನ್ನು ನೋಡಿ, ಮೋಹಗೊಂಡ ಅಗ್ನಿಯು ಆ ಶಿವತೇಜಸ್ಸನ್ನು ಆಕೆಯ ಸರ್ವಾಂಗಗಳಲ್ಲಿಯೂ ಚೆಲ್ಲಿದನು. ಇದರಿಂದ ಆ ಗಂಗಾನದಿಯ ಪ್ರವಾಹಗಳೆಲ್ಲವೂ ಪೂರ್ಣಗೊಂಡಿತು. ॥೧೪॥ ಆಗ ಆ ಶಿವತೇಜಸ್ಸಿನಿಂದ ದಹ್ಯಮಾನಳಾದ ಗಂಗೆಯು ದೇವಪುರೋಹಿತನಾದ ಅಗ್ನಿಯನ್ನು ಕುರಿತು, "ಎಲೈ ಸ್ವಾಮಿಯೆ ! ಸಮುದ್ಧತವಾದ ಈ ತೇಜಸ್ಸನ್ನು ಧರಿಸಲು ನಾನು ಸಮರ್ಥಳಾಗಿಲ್ಲವು' ಎಂದಳು. ಇಂತೆನಲು ಅಗ್ನಿಯು "ದೇವೀ ; ಆ ಗರ್ಭವನ್ನು ಈ ಹಿಮವತ್ಪ್ರಾಂತ್ಯ

ಶ್ಯತಾಂ ॥೧೬॥ ಶ್ರುತ್ವಾತ್ವಗ್ನಿವಚೋಗಂಗಾ ತಂ ಗರ್ಭಮತಿಭಾಸ್ವರಂ ॥
ಉತ್ಸಸರ್ಜ ಮಹಾತೇಜಸ್ಸ್ರೋತೋಭ್ಯೋ ಹಿ ತದಾನಘ ॥ ೧೭ ॥
ಯದಸ್ಯಾಂ ನಿರ್ಗತಂ ತಸ್ಮಾತ್ತಪ್ತಜಾಂಬೂನದಪ್ರಭಂ॥ ಕಾಂಚನಂ ಧರಣೀಂ
ಪ್ರಾಪ್ತಂ ಹಿರಣ್ಯಮಮಲಂ ಶುಭಂ ॥೧೮॥ ತಾಮ್ರಂ ಕಾಷ್ಣಾರ್ಯಯಸಂ
ಚೈವ ತೈಕ್ಷ್ಣ್ಯಾದೇವಾಭಿಜಾಯತ ॥ ಮಲಂ ತಸ್ಯಾಭವತ್ತತ್ರ ತ್ರಪು ಸೀಸಕ
ಮೇವಚ॥೧೯॥ ತದೇತದ್ಧರಣೀಂ ಪ್ರಾಪ್ಯ ನಾನಾಧಾತುರವರ್ಧತ ॥ ನಿಕ್ಷಿಪ್ತ
ಮಾತ್ರೇ ಗರ್ಭೇತು ತೇಜೋಭಿರಭಿರಂಜಿತಂ ॥೨೦॥ ಸರ್ವಂ ಪರ್ವತ ಸನ್ನದ್ಧಂ

---

ಹೈಮವತೀ - ಹಿಮವತ್ಪರ್ವತ ಸಂಬಂಧವಾದ, ಪಾದೇ-ಪ್ರಾಂತ್ಯದಲ್ಲಿ, ಅಯಂಗರ್ಭಃ-ಈ ಗರ್ಭವು, ಸನ್ನಿವೇಶ್ಯತಾಂ - ಇರಿಸಲ್ಪಡಲಿ, ಇತಿ - ಇಂತೆಂದು, ಇದಂ - ಈ ಮಾತನ್ನು, ಅಬ್ರವೀತ್-ನುಡಿದನು. ॥೧೬॥ ಹೇಅನಘ-ಎಲೈ ಪಾಪರಹಿತನಾದ ಶ್ರೀರಾಮನೇ, ಗಂಗಾ-ಗಂಗಾನದಿಯು, ಅಗ್ನಿವಚಃ-ಅಗ್ನಿಯಮಾತನ್ನು, ಶ್ರುತ್ವಾ-ಕೇಳಿ,ಅತಿಭಾಸ್ವರಂ-ಅತಿಪ್ರಕಾಶಮಾನವಾದ, ತಂಗರ್ಭಂ-ಗರ್ಭಮಾನರೂಪವಾದ, ಮಹಾತೇಜಃ - ಶಿವತೇಜಸ್ಸನ್ನು, ತದಾ - ಆಗ, ಸ್ರೋತೋಭ್ಯಃ - ತರಂಗಗಳಿಂದ, ಉತ್ಸಸರ್ಜಹಿ - ಬಿಟ್ಟಳಷ್ಟೆ, ॥ ೧೭ ॥ ಅಸ್ಯಾಃ - ಈ ಗಂಗಾನದಿಯಿಂದ, ಯತ್ - ಯಾವ ಶಿವತೇಜಸ್ಸು, ನಿರ್ಗತಂ - ಹೊರಟಿತೋ, ತಸ್ಮಾತ್ - ಅದರಿಂದ, ತಪ್ತಜಾಂಬೂನದಪ್ರಭಂ, ತಪ್ತ-ಕಾಯಿಸಲ್ಪಟ್ಟ, ಜಾಂಬೂನದ - ಅಪರಂಜಿಯ, ಪ್ರಭಂ - ಕಾಂತಿಯುಳ್ಳ, ಕಾಂಚನಂ-ಭಂಗಾರವು, ಧರಣೀಂ - ಭೂಮಿಯನ್ನು, ಪ್ರಾಪ್ತಂ - ಹೊಂದಿತು, ಅಮಲಂ- ನಿರ್ಮಲವಾದ, ಶುಭಂ-ಶುಭಕರವಾದ ತೇಜಸ್ಸು, ಹಿರಣ್ಯಂ - ರಜಿತವಾದುದು, ಅಭೂತ್ - ಆಯಿತು. ॥೧೮॥ ತೈಕ್ಷ್ಣ್ಯಾದೇವ - ಅತಿಶಾದ ಶಾಖದಿಂದಲೇ, ತಾಮ್ರಂ - ತಾಮ್ರವು, ಕಾಷ್ಣಾರ್ಯಯಸಂಚೈವ - ಕಬ್ಬಿಣವೂ, ಅಭಿಜಾಯತ - ಹುಟ್ಟಿತು, ತಸ್ಯ - ಆ ತೇಜಸ್ಸಿನ, ಮಲಂ - ಮಾಲಿನ್ಯವು, ತತ್ರ - ಆ ಪ್ರದೇಶದಲ್ಲಿ, ತ್ರಪು-ಕಂಚೂ, ಸೀಸಕಂ - ತಗರವೂ, ಅಭವತ - ಆಯಿತು, ॥೧೯॥ ತದೇತತ್ - ಆ ತೇಜಸ್ಸು, ಧರಣೀಂ - ನೆಲವನ್ನು, ಪ್ರಾಪ್ಯ - ಹೊಂದಿ, ನಾನಾಧಾತುಃ - ನಾನಾಬಗೆಯಾದ ತಾಮ್ರಾದಿ ಧಾತುರೂಪವಾದುದಾಗಿ, ಅವರ್ಧತ-ವೃದ್ಧಿಹೊಂದಿತು. ॥೨೦॥ ಗರ್ಭೇ-ಗರ್ಭವು, ನಿಕ್ಷಿಪ್ತಮಾತ್ರೇ-ನಿವೇಶಿತವಾಗಲು, ತೇಜೋಭಿಃ-ಪ್ರಕಾಶಗಳಿಂದ, ಅಭಿರಂಜಿತಂ-ರಾರಾಜಿಸುತ್ತಿರುವ, ಪರ್ವತಸನ್ನದ್ಧಂ-ಪರ್ವತ

---

ದಲ್ಲಿಯೇ ಇಡುವವಳಾಗು' ಎಂದನು. ಆಗ್ಗಲಾ ಗಂಗೆಯು ಅಗ್ನಿದೇವನ ಮಾತಿನಂತೆ ಮಹಾಪ್ರಕಾಶಮಾನವಾದ ಆ ಗರ್ಭವನ್ನು ತನ್ನ ಪ್ರವಾಹಗಳಿಂದ ಆ ಹಿಮತ್ಪರ್ವತದ ತಪಲಿನಲ್ಲಿ ಬಿಟ್ಟವಳಾದಳು. ॥೧೭॥ ಈ ಗಂಗಾನದಿಯಿಂದ ಯಾವ ರುದ್ರಸಂಬಂಧವಾದ ತೇಜಸ್ಸು ಹೊರಟಿತೋ, ಅದರಿಂದ ಬಹು ಪ್ರಕಾಶಮಾನವಾದ ಭಂಗಾರವೂ, ಶುದ್ಧವಾದ ರಜತವೂ ಉಂಟಾದವು. ಆ ತೇಜಸ್ಸಿನ ಔಷ್ಣ್ಯಾತಿಶಯದಿಂದ ತಾಮ್ರ, ಕಬ್ಬಿಣಗಳುತ್ಪನ್ನವಾದವು. ಅದರ ಮಾಲಿನ್ಯವೇ ತಗರ ಸೀಸಗಳಾಯಿತು. ಈ ರೀತಿ ಆ ತೇಜಸ್ಸು ಭೂಮಿಯನ್ನು ಸೇರಿ ವಿಧವಿಧ ಧಾತುಗಳಾದವು. ॥೨೦॥ ಗಂಗಾದೇವಿಯಿಂದ ಆ ಹಿಮವತ್ಪರ್ವತದ ತಪ್ಪಲಿನಲ್ಲಿ ಗರ್ಭವು ನಿವೇಶಿತವಾಗಲು, ಶಿವತೇಜಸ್ಸಿನಿಂದ ರಾರಾಜಿಸುವ ಪರ್ವತೋಪಮವಾದ

ಸೌವರ್ಣಮಭವದ್ವನಂ ॥ ಜಾತರೂಪಮಿತಿಖ್ಯಾತಂ ತದಾಪ್ರಭೃತಿ ರಾಘವ ॥ ೨೦ ॥ ಸುವರ್ಣಂಪುರುಷವ್ಯಾಘ್ರ ಹುತಾಶನಸಮಪ್ರಭಂ ॥ ತೃಣ ವೃಕ್ಷ ಲತಾ ಗುಲ್ಮಂ ಸರ್ವಂ ಭವತಿ ಕಾಂಚನಂ ॥೨೧॥ ತಂ ಕುಮಾರಂ ತತೋ ಜಾತಂ ಸೇಂದ್ರಾಸ್ಸಹ ಮರುದ್ಗಣಾಃ ॥ ಕ್ಷೀರಸಂಭಾವನಾರ್ಥಾಯ ಕೃತ್ತಿಕಾಸ್ಸಮಯೋಜಯನ್ ॥೨೨॥ ತಾಃ ಕ್ಷೀರಂ ಜಾತಮಾತ್ರಸ್ಯ ಕೃತ್ವಾ ಸಮಯಮುತ್ತಮಂ ॥ ದದುಃ ಪುತ್ರೋಽಯಮಸ್ಮಾಕಂ ಸರ್ವಾಸಾಮಿತಿ ನಿಶ್ಚಿತಾಃ ॥೨೪॥ ತತಸ್ತು ದೇವತಾಸ್ಸರ್ವಾಃ ಕಾರ್ತಿಕೇಯ ಇತಿ ಬ್ರುವನ್॥ ಪುತ್ರಸ್ತ್ರೈಲೋಕ್ಯವಿಖ್ಯಾತೋ ಭವಿಷ್ಯತಿ ನ ಸಂಶಯಃ ॥ ೨೫ ॥ ತೇಷಾಂ

---

ದಿಂದೊಡಗೂಡಿದ, ಸರ್ವಂ-ಸಮಸ್ತ, ವನಂ-ಶರವಣವು, ಸೌವರ್ಣಂ-ಸುವರ್ಣವಿಕಾರವಾದುದು, ಅಭವತ್-ಆಯಿತು. ॥೨೦॥ ಹೇರಾಘವ-ಎಲೈ ಶ್ರೀರಾಮನೆ, ಹೇಪುರುಷವ್ಯಾಘ್ರ-ಎಲೈ ಪುರುಷ ಶ್ರೇಷ್ಠನೆ, ಹುತಾಶನಸಮಪ್ರಭಂ - ಅಗ್ನಿಗೆ ಸಮಾನವಾದ . ತೇಜಸ್ಸುಳ್ಳ, ಸುವರ್ಣಂ-ಸುವರ್ಣವು, ತದಾಪ್ರಭೃತಿ ಆಕಾಲವೊದಲು, ಜಾತರೂಪಮಿತಿ-ಜಾತರೂಪವೆಂದು,ಖ್ಯಾತಂ- ಪ್ರಖ್ಯಾತವಾಯಿತು. ॥೨೧॥ ಸರ್ವಂ-ಸಮಸ್ತ. ತೃಣವೃಕ್ಷಲತಾಗುಲ್ಮಂ-ತೃಣ-ಹುಲ್ಲು,ವೃಕ್ಷ-ಗಿಡಗಳೂ, ಲತಾ-ಬಳ್ಳಿಗಳೂ, ಗುಲ್ಮಂ-ಪೇಲಿಗಳೂ, ಕಾಂಚನಂ-ಭಂಗಾರವಿಕಾರವಾಗಿ, ಭವತಿ-ಆಯಿತಷ್ಟೆ ॥ ೨೨ ॥ ತತಃ-ಬಳಿಕ, ಜಾತಂ-ಹುಟ್ಟಿದ, ತಂಕುಮಾರಂ-ಆ ಶಿಶುವನ್ನು ಕುರಿತು, ಸೇಂದ್ರಾಃ - ಇಂದ್ರನಿಂದಲೂ ಸಹಮರುದ್ಗಣಾಃ-ಮರುದ್ಗಣಗಳಿಂದಲೂ ಒಡಗೂಡಿದ ದೇವತೆಗಳ ಗುಂಪು, ಕ್ಷೀರಸಂಭಾವನಾ ರ್ಥಾಯ,ಕ್ಷೀರ-ಕ್ಷೀರದಿಂದ,ಸಂಭಾವನಾರ್ಥಾಯ-ವೃದ್ಧಿಕಾರ್ಯಕ್ಕೋಸುಗ, ಏಕಕಾಲದಲ್ಲಿ,ಕೃತ್ತಿಕಾಃ-ಷಟ್ಕೃತ್ತಿಕೆಗಳನ್ನು,ಸಮಯೋಜಯನ್-ನಿಯಮಿಸಿದರು.॥೨೩॥ತಾಃ-ಆ ಆರುಜನ ಕೃತ್ತಿಕೆಗಳು,ಅಸ್ಮಾ ಕಂ-ನಮಗೆ,ಸರ್ವಾಸಾಂ-ಎಲ್ಲರಿಗೂ,ಅಯಂ ಈಕುವರನು,ಪುತ್ರಃ-ಮಗನು, ಇತಿ-ಇಂತೆಂದು,ನಿಶ್ಚಿತಾಃ-ನಿಶ್ಚೈಸಿ,ಉತ್ತಮಂ-ಉತ್ತಮವಾದ, ಸಮಯಂ- ಸಂಕೇತವನ್ನು, ಕೃತ್ವಾ-ಮಾಡಿ, ಜಾತಮಾತ್ರಸ್ಯ-ಆಗತಾನೆ ಹುಟ್ಟಿದ ಹುಡುಗನಿಗೆ,ಕ್ಷೀರಂ-ಹಾಲನ್ನು,ದದುಃ ಕೊಡಲುದ್ಯುಕ್ತರಾದರು॥೨೪॥ ತತಃ-ಬಳಿಕ, ಸರ್ವಾಃ-ಸಮಸ್ತ, ದೇವತಾಸ್ತು-ದೇವತೆಗಳು, ಪುತ್ರಃ ಈ ಮಗನು, ಕಾರ್ತಿಕೇಯಇತಿ-ಕಾರ್ತಿಕೇಯ ನೆಂದು, ತ್ರೈಲೋಕ್ಯವಿಖ್ಯಾತಃ-ಮೂರುಲೋಕಗಳಲ್ಲಿಯೂ ಕೀರ್ತಿದಾಯಕನು, ಭವಿಷ್ಯತಿ ಆಗು ವನು, ಸಂಶಯಃ-ಸಂಶಯವು, ನ-ಇಲ್ಲ, ಇತಿ-ಇಂತೆಂದು, ಅಬ್ರುವನ್-ಹೇಳಿದರು. ॥೨೫॥ ತೇಷಾಂ-

---

ಆ ಶರವಣವೆಲ್ಲವೂ ಸುವರ್ಣಮಯವಾಯಿತು. ॥ ೨೦ ॥ ಅಂದಿನಿಂದ ಅಗ್ನಿಸದೃಶವಾದ ಭಂಗಾರವು ಜಾತರೂಪವೆಂದು ಹೆಸರುಗೊಂಡಿತು. ಇಷ್ಟೆಯಲ್ಲದೆ ಆ ಶರವಣ ದಲ್ಲಿದ್ದ ಗಿಡ, ಮರ, ಬಳ್ಳಿಗಳೆಲ್ಲವೂ ಸುವರ್ಣಮಯವಾಯಿತು. ॥೨೨॥ ಆ ಬಳಿಕ ಇಂದ್ರ ನಿಂದೊಡಗೂಡಿದ ಮರುದ್ಗಣಗಳೆಲ್ಲರೂ ಆ ಶಿಶುವಿಗೆ ಸ್ತನ್ಯಪಾನವಂ ಗೈಸಲು, ಕೃತ್ತಿಕೆಯ ರೆಂಬ ಆರುಮಂದಿಯನ್ನು ನಿಯೋಗಿಸಿದರು. ಆ ಆರ್ವರೂ ಆ ಶಿಶುವು ತಮ್ಮೆಲ್ಲರಿಗೂ ಕುವರನೆಂದು ಭಾವಿಸಿ ಮೊಲೆಹಾಲನ್ನುಣಿಸಿದರು. ಆಗಲಾದೇವತೆಗಳು “ ಈ ಶಿಶುವು ಮೂರು ಲೋಕಗಳಲ್ಲಿಯೂ ಕಾರ್ತಿಕೇಯನೆಂಬ ಹೆಸರಿನಿಂದ ಪ್ರಸಿದ್ಧನಾಗುವನೆಂಬುದರಲ್ಲಿ ಸಂಶಯವಿಲ್ಲವು” ಎಂದರು. ॥ ೨೫ ॥ ದೇವತೆಗಳಾಡಿದ ಈ ಮಾತನ್ನು ಕೇಳಿ ಆ ಕೃತ್ತಿ

ತದ್ವಚನಂ ಶ್ರುತ್ವಾ ಸ್ಕನ್ನಂ ಗರ್ಭಪರಿಸ್ರವೇ|| ಸ್ನಾಪಯನ್ ಪರಯಾ ಲಕ್ಷ್ಮ್ಯಾ ದೀಪ್ಯಮಾನಂ ಯಥಾನಲಂ || ೨೬ || ಸ್ಕಂದಇತ್ಯಬ್ರುವನ್ ದೇವಾಃ ಸ್ಕನ್ನಂ ಗರ್ಭ ಪರಿಸ್ರವಾತ್ || ಕಾರ್ತಿಕೇಯಂ ಮಹಾಭಾಗಂ ಕಾಕುತ್ಸ್ಥ ಜ್ವಲನೋಪಮಂ ||೨೭|| ಪ್ರಾದುರ್ಭೂತಂ ತತಃ ಕ್ಷೀರಂ ಕೃತ್ತಿಕಾನಾಮನುತ್ತಮಂ|| ಷಣ್ಣಾಂ ಷಡಾನನೋಭೂತ್ವಾ ಜಗ್ರಾಹ ಸ್ತನಜಂ ಪಯಃ ||೨೮|| ಗೃಹೀತ್ವಾ ಕ್ಷೀರಮೇಕಾಹ್ನಾ ಸುಕುಮಾರ ವಪುಸ್ತದಾ || ಅಜಯತ್ಸ್ವೇನ ವೀರ್ಯೇಣ ದೈತ್ಯ ಸೈನ್ಯ ಗಣಾನ್ ವಿಭುಃ || ೨೯ || ಸುರಸೇನಾಗಣಪತಿಂ ತತಸ್ತಮತುಲ

---

ಆ ದೇವತೆಗಳು, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಗರ್ಭಪರಿಸ್ರವೇ- ಗರ್ಭಸ್ರೋದಕದಲ್ಲಿ, ಸ್ಕನ್ನಂ-ಜಾರಿಬಂದ, ಪರಯಾ ಬಹಳವಾದ, ಲಕ್ಷ್ಮ್ಯಾ-ಕಾಂತಿಯಿಂದ ಕೂಡಿದ, ಅನಲಂಯಥಾ-ಅಗ್ನಿಯಂತೆ, ದೀಪ್ಯಮಾನಂ ಹೊಳೆಯುತ್ತಿರುವ, ತಂ-ಆ ಶಿಶುವನ್ನು, ಸ್ನಾಪಯನ್-ಸ್ನಾನಮಾಡಿಸಿದರು ||೨೬|| ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ದೇವಾಃ-ದೇವತೆಗಳು, ಗರ್ಭಪರಿಸ್ರವಾತ್-ಗರ್ಭಸ್ರೋದಕದಿಂದ, ಸ್ಕನ್ನಂ-ಜಾರಿಬಂದ, ಜ್ವಲನೋಪಮಂ ಅಗ್ನಿಗೆ ಸಮಾನವಾದ, ಮಹಾಭಾಗಂ-ಮಹಾನುಭಾವನಾದ, ಕಾರ್ತಿಕೇಯಂ-ಕೃತ್ತಿಕೆಯರಿಗೆ ಪುತ್ರನಾದ ಆ ಶಿಶುವನ್ನು, ಸ್ಕಂದಇತಿ-ಸ್ಕಂದನೆಂದು, ಅಬ್ರುವನ್-ನುಡಿದರು || ೨೭ || ತತಃ-ಬಳಿಕ, ಷಣ್ಣಾಂ ಆರುಸಂಖ್ಯೆಯುಳ್ಳ, ಕೃತ್ತಿಕಾನಾಂ-ಕೃತ್ತಿಕೆಯರಿಗೆ, ಅನುತ್ತಮಂ-ಶ್ರೇಷ್ಠವಾದ, ಕ್ಷೀರಂ-ಹಾಲು, ಪ್ರಾದುರ್ಭೂತಂ-ಹುಟ್ಟಿತು, ಷಣ್ಣಾಂ - ಆರುಜನರ, ಸ್ತನಜಂ-ಸ್ತನಗಳಿಂದ ಹುಟ್ಟಿದ, ಪಯಃ - ಕ್ಷೀರವನ್ನು, ಷಡಾನನಃ-ಆರು ಮುಖಗಳುಳ್ಳವನು, ಭೂತ್ವಾ-ಆಗಿ, ಜಗ್ರಾಹ-ಗ್ರಹಿಸಿದನು. || ೨೮ || ಕ್ಷೀರಂ-ಕ್ಷೀರವನ್ನು, ಏಕಾಹ್ನಾ-ಒಂದು ಹಗಲಿನಲ್ಲಿ, ಗೃಹೀತ್ವಾ-ಗ್ರಹಿಸಿ, ತದಾ-ಆಗಲೆ, ಸುಕುಮಾರವಪುಃ, ಸುಕುಮಾರ - ಮನೋಹರವಾದ, ವಪುಃ-ಶರೀರವುಳ್ಳವನಾಗಿ, ವಿಭುಃ ಸಾಮರ್ಥ್ಯವಂತನಾಗಿ, ಸ್ವೇನ-ಸ್ವಕೀಯವಾದ, ವೀರ್ಯೇಣ-ಪರಾಕ್ರಮದಿಂದ, ದೈತ್ಯಸೈನ್ಯಗಣಾನ್-ರಕ್ಕಸರ ದಂಡಿನ ತಂಡಗಳನ್ನು, ಅಜಯತ್-ಜಯಿಸಿದನು ||೨೯|| ತತಃ-ಬಳಿಕ, ಅಗ್ನಿಪುರೋಗಮಾಃ-ಅಗ್ನಿಯೇ ಮೊದಲಾದ, ಸುರಗಣಾಃ-ದೇವತೆಗಳ ಸಮೂಹಗಳು, ಸಮೇತ್ಯ-ಬಂದು, ಅತುಲದ್ಯುತಿಂ - ಅಸಮಾನ ಪ್ರಕಾಶನಾದ, ತಂ - ಆ ಕುಮಾರಸ್ವಾಮಿ

---

ಕೆಯರು, ಗರ್ಭದಿಂದ ಜನಿಸಿದವನೂ, ಅಗ್ನಿಯಂತೆ ಮಹಾ ತೇಜಸ್ಸಿನಿಂದೊಡಗೂಡಿದವನೂ ಆದ ಆ ಶಿಶುವಿಗೆ ಸ್ನಾನವಂಗೈಸಿದರು. ಬಳಿಕಲಾದೇವತೆಗಳು ಗರ್ಭಸ್ರಾವದಿಂದ ಜನಿಸಿ ಸ್ಕನ್ನನಾಗಿಯೂ, ಅಗ್ನಿಯಂತೆ ಪ್ರಜ್ವಲಿಸುತ್ತಿರುವವನಾಗಿಯೂ ಕೃತ್ತಿಕೆಯರ ಪುತ್ರನಾಗಿಯೂ ಇರುವ ಆ ಶಿಶುವಿಗೆ ಸ್ಕಂದನೆಂದು ಹೆಸರನ್ನಿಟ್ಟರು. || ೨೭ || ಆಗಲಾಕೃತ್ತಿಕೆಯರಿಗೆ ಶ್ರೇಷ್ಠವಾದ ಸ್ತನ್ಯ ವುತ್ಪನ್ನವಾಯಿತು, ಆಗ ಆಶಿಶುವು ಆರು ಮುಖವುಳ್ಳವನಾಗಿ, ಆ ಕೃತ್ತಿಕೆಯರಾರ್ವರಲ್ಲಿಯೂ ಸ್ತನ್ಯಪಾನ ಮಾಡಿದನು. ಹೀಗೆ ಒಂದೇದಿನ ಸ್ತನ್ಯಪಾನಮಾಡಿ ಸುಕುಮಾರದೇಹನಾದ ಆ ಸ್ಕಂದನು, ತನ್ನ ಪರಾಕ್ರಮದಿಂದ ಅಸುರಸೈನ್ಯಗಳ ಸಮೂಹವನ್ನು ಜಯಿಸಿದನು. || ೨೯ || ಆ ಬಳಿಕ ಅಗ್ನಿಯೇ

ದ್ಯುತಿಂ || ಅಭ್ಯಷಿಂಚಂಸ್ ಸುರಗಣಾ ಸ್ಸಮೇತ್ಯಾಗ್ನಿ ಪುರೋಗಮಾಃ ||೩೦||
ಏಷ ತೇ ರಾಮ ಗಂಗಾಯಾ ವಿಸ್ತರೋಽಭಿಹಿತೋ ಮಯಾ||ಕುಮಾರಸಂಭವ
ಶ್ಚೈವ ಧನ್ಯಃಪುಣ್ಯಸ್ತಥೈವಚ ||೩೧|| ಭಕ್ತಶ್ಚಯಃ ಕಾರ್ತಿಕೇಯೇ ಕಾಕುತ್ಥ್ಸ
ಭುವಿ ಮಾನವಃ || ಆಯುಷ್ಮಾನ್ ಪುತ್ರಪೌತ್ರೈಶ್ಚ ಸ್ಕಂದಸಾಲೋಕ್ಯತಾಂ
ವ್ರಜೇತ್ ||೩೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ಯನ್ನು, ಸುರಸೇನಾಗಣಪತಿಂ - ದೇವಸೈನ್ಯದ ಗುಂಪುಗಳಿಗೆ ಅಧಿಪತಿಯನ್ನಾಗಿ, ಅಭ್ಯಷಿಂಚನ್- ಪಟ್ಟಾಭಿಷೇಕಮಾಡಿದರು, || ೩೦ || ಹೇರಾಮ ಎಲೈ ಶ್ರೀರಾಮನೇ, ಗಂಗಾಯಾಃ-ಗಂಗಾನದಿಯ, ಏಷಃ-ಈ. ವಿಸ್ತರಃ-ಕಥಾವಿಸ್ತರವು, ಮಯಾ-ನನ್ನಿಂದ, ಅಭಿಹಿತಃ-ಹೇಳಲ್ಪಟ್ಟಿತು, ತಥೈವ - ಹಾಗೆ ಯೇ, ಪುಣ್ಯಃ - ಪುಣ್ಯಕರವಾದ, ಧನ್ಯಃ - ಶ್ರೇಯಸ್ಸಂಪಾದಕವಾದ, ಕುಮಾರ ಸಂಭವಶ್ಚೈವ- ಕುಮಾರೋತ್ಪತ್ತಿಯೂ, ಅಭಿಹಿತಃ – ಹೇಳಲ್ಪಟ್ಟಿತು. || ೩೧ || ಹೇಕಾಕುತ್ಸ್ಥ - ಎಲೈ ಶ್ರೀ ರಾಮನೇ, ಭುವಿ-ಇಳೆಯಲ್ಲಿ, ಯಃ ಮಾನವಃ-ಯಾವ ಮನುಷ್ಯನು, ಕಾರ್ತಿಕೇಯೇ - ಕುಮಾರ ಸ್ವಾಮಿಯಲ್ಲಿ, ಭಕ್ತಃ - ಭಕ್ತಿಯುಳ್ಳವನಾಗುವನೋ, ಸಃ - ಆ ಪುರುಷನು, ಪುತ್ರಪೌತ್ರೈಶ್ಚ- ಮಕ್ಕಳು ಮೊಮ್ಮಕ್ಕಳಿಂದೊಡಗೂಡಿ ಆಯುಷ್ಮಾನ್ - ದೀರ್ಘಾಯುಷ್ಮಂತನಾಗಿ, ಸ್ಕಂದಸಾಲೋ ಕ್ಯತಾಂ, ಸ್ಕಂದ-ಕುಮಾರಸ್ವಾಮಿಯ, ಸಾಲೋಕ್ಯತಾಂ - (ಗೋ) ಸಮಾನ ಲೋಕವಾಸಿತ್ವವನ್ನು (ತಿ) ದೇಹತ್ಯಾಗಾನಂತರ ಕುಮಾರಸಾಧನ ಸಾಲೋಕ್ಯವನ್ನು, ವ್ರಜೇತ್-ಹೊಂದುವನು. || ೩೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತ್ರಿಂಶಸ್ಸರ್ಗಃ.

---

ಮೊದಲಾದ ದೇವತೆಗಳೆಲ್ಲರೂ ಅಸಮಾನತೇಜಸ್ವಿಯಾದ ಆ ಸ್ಕಂದನನ್ನು ದೇವಸೇನಾಧಿ ಪತಿಯನ್ನಾಗಿ ಪಟ್ಟಾಭಿಷೇಕವಂ ಗೈದರು. || ೩೦ || ಎಲೈ ರಾಮಚಂದ್ರನೇ ! ಧನ್ಯ ಕರವೂ ಪುಣ್ಯಕರವೂ ಆದ ಗಂಗಾವೃತ್ತಾಂತವೂ, ಕುಮಾರಸಂಭವವೂ ನನ್ನಿಂದ ಹೇಳ ಲ್ಪಟ್ಟಿತು. ಈ ಭೂಮಂಡಲದಲ್ಲಿ ಯಾವನು ಕಾರ್ತಿಕೇಯಸ್ವಾಮಿಯಲ್ಲಿ ಭಕ್ತನಾಗಿರು ವನೋ, ಅವನು ಇಹದಲ್ಲಿ ಪುತ್ರಪೌತ್ರರಿಂದೊಡಗೂಡಿ ಆಯುಷ್ಮಂತನಾಗಿದ್ದು, ಪರದಲ್ಲಿ ಷಣ್ಮುಖನ ಸಾಲೋಕ್ಯವನ್ನು ಪಡೆಯುತ್ತಾನೆ. || ೩೨ ||

ಇಂತಿದು ಕುಮಾರಜನನ ವೃತ್ತಾಂತವೆಂಬ ಮೂವತ್ತೇಳನೆಯ
ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಅಷ್ಟತ್ರಿಂಶಸ್ಸರ್ಗಃ.

ತಾಂ ತಥಾ ಕೌಶಿಕೋ ರಾಮೇ ನಿವೇದ್ಯ ಕುಶಿಕಾತ್ಮಜಃ ॥ ಪುನರೇವಾ ಪರಂ ವಾಕ್ಯಂ ಕಾಕುತ್ಸ್ಥಮಿದಮಬ್ರವೀತ್ ॥ ೧ ॥ ಅಯೋಧ್ಯಾಧಿಪತಿಃ ಶೂರಃ ಪೂರ್ವಮಾಸೀನ್ನರಾಧಿಪಃ ॥ ಸಗರೋನಾಮ ಧರ್ಮಾತ್ಮಾ ಪ್ರಜಾ ಕಾಮಸ್ಸಚಾಪ್ರಜಃ ॥ ೨ ॥ ವೈದರ್ಭದುಹಿತಾ ರಾಮ ಕೇಶಿನೀ ನಾಮ ನಾಮತಃ ॥ ಜ್ಯೇಷ್ಠಾ ಸಗರಪತ್ನೀ ಸಾ ಧರ್ಮಿಷ್ಠಾ ಸತ್ಯವಾದಿನೀ ॥೩॥ ಅರಿಷ್ಟ ನೇಮಿ ದುಹಿತಾ ರೂಪೇಣಾಪ್ರತಿಮಾಭುವಿ ॥ ದ್ವಿತೀಯಾ ಸಗರಸ್ಯಾಸೀತ್ಪತ್ನೀ ಸುಮತಿ ಸಂಜ್ಞಿತಾ ॥ ೪ ॥ ತಾಭ್ಯಾಂ ಸಹ ತದಾ ರಾಜಾ ಪತ್ನೀಭ್ಯಾಂ

---

ಕುಶಿಕಾತ್ಮಜಃ - ಕುಶಿಕ ವಂಶೋತ್ಪನ್ನನಾದ, ಕೌಶಿಕಃ - ವಿಶ್ವಾಮಿತ್ರನು, ರಾಮೇ ಶ್ರೀ ರಾಮನಿಗೆ, ತಥಾ - ಆಪರಿ, ತಾಂ - ಆ ಗಂಗೋತ್ಪತ್ತಿಯ ಕಥೆಯನ್ನು, ನಿವೇದ್ಯ - ತಿಳಿಸಿ ಪುನರೇವ - ಮತ್ತು, ಕಾಕುತ್ಸ್ಥಂ - ಶ್ರೀರಾಮನನ್ನು ಕುರಿತು, ಅಪರಂ- ಮತ್ತೊಂದಾದ, ಇದಂ- ಈ ಮುಂದೆ ಹೇಳುವ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು ॥ ೧ ॥ ಪೂರ್ವಂ- ಪೂರ್ವದಲ್ಲಿ, ಅಯೋಧ್ಯಾಧಿಪತಿಃ-ಅಯೋಧ್ಯಾನಗರಕ್ಕೆ ಅಧಿಪತಿಯೂ, ಶೂರಃ ಶೂರನೂ ಆದ, ಸಗರೋನಾಮ - ಸಗರನೆಂದು ಪ್ರಸಿದ್ಧನಾದ, ಧರ್ಮಾತ್ಮಾ - ಧರ್ಮಿಷ್ಠನಾದ, ನರಾಧಿಪತಿಃ - ಅರಸು, ಆಸೀತ್ - ಇದ್ದನು ಅಪ್ರಜಃ - ಮಕ್ಕಳಿಲ್ಲದ, ಸಃ - ಆ ಸಗರನು ಪ್ರಜಾಕಾಮಃ - ಸಂತತಿಕಾ ಮನಾದವನು, ಆಸೀತ್ - ಆದನು. ॥ ೨ ॥ ಹೇರಾಮ - ಎಲೈ ಶ್ರೀರಾಮನೆ, ವೈದರ್ಭದುಹಿತಾ- ವಿದರ್ಭರಾಜ ಕುವರಿಯಾದ, ನಾಮತಃ - ಹೆಸರಿನಿಂದ, ಕೇಶಿನೀನಾಮ - ಕೇಶಿನೀ ಎಂದು ಪ್ರಸಿದ್ಧಳು, ಆಸೀತ್ - ಆದಳು, ಧರ್ಮಿಷ್ಠಾ - ಧರ್ಮಿಷ್ಠಳಾದ, ಸತ್ಯವಾದಿನೀ - ಸತ್ಯವಾಕ್ಯವುಳ್ಳ, ಸಾ ಆ ಕೇಶಿನಿ ಎಂಬುವಳು, ಜ್ಯೇಷ್ಠಾ - ಜ್ಯೇಷ್ಠಳಾದ, ಸಗರಪತ್ನೀ- ಸಗರಚಕ್ರವರ್ತಿಯ ಮಡದಿಯು, ॥ ೩ ॥ ಅರಿಷ್ಟನೇಮಿದುಹಿತಾ, ಅರಿಷ್ಟನೇಮಿ - ಅರಿಷ್ಟನೇಮಿ ಎಂಬ ಕಶ್ಯಪಪುತ್ರನ, ದುಹಿತಾ- ಮಗಳಾದ, ರೂಪೇಣ - ರೂಪದಿಂದ, ಭುವಿ - ಇಳೆಯಲ್ಲಿ, ಅಪ್ರತಿಮಾ - ಸಮಾನರಹಿತಳಾದ, ಸುಮತಿಸಂಜ್ಞಿತಾ - ಸುಮತಿಯೆಂಬ ಹೆಸರುಳ್ಳವಳು, ಸಗರಸ್ಯ - ಸಗರಚಕ್ರವರ್ತಿಗೆ, ದ್ವಿತೀಯಾ- ಎರಡನೆಯವಳಾದ, ಪತ್ನೀ - ಮಡದಿಯು, ಆಸೀತ್ - ಆದಳು. ॥ ೪ ॥ ತದಾ - ಆ ಕಾಲದಲ್ಲಿ,

---

ಕುಶಿಕನಂದನನಾದ ಕೌಶಿಕನು, ಕುಮಾರಜನನ ವೃತ್ತಾಂತವನ್ನು ಈ ರೀತಿ ಹೇಳಿ ರಾಮನನ್ನುಕುರಿತು ಮರಳಿ ಇಂತೆಂದನು, " ಅಯ್ಯಾ ರಾಮಚಂದ್ರನೆ ! ಹಿಂದೆ ಅಯೋಧ್ಯಾಪಟ್ಟಣದಲ್ಲಿ ಮಹಾ ಧರ್ಮಿಷ್ಠನೂ, ಪುತ್ರಾಪೇಕ್ಷಿಯೂ ಆದ ಸಗರನೆಂಬ ರಾಜನಿದ್ದನು. ಈತನಿಗೆ ಇಬ್ಬರು ಸ್ತ್ರೀಯರಿದ್ದರು. ಇವರಲ್ಲಿ ವಿದರ್ಭದೇಶದೊಡೆಯನ ಮಗಳೂ, ಮಹಾ ಧರ್ಮವತಿಯೂ ಆದ ಕೇಶಿನಿಯೆಂಬವಳು ಹಿರಿಯವಳು., ಅರಿಷ್ಟನೇಮಕುವರಿಯೂ, ಸೌಂದರ್ಯವತಿಯೂ ಆದ ಸುಮತಿಯೆಂಬವಳು ಕಿರಿಯವಳು. ॥ ೪ ॥ ಈ ಕೇಶಿನೀ

ತಪ್ತ್ವಾಂಸ್ತಪಃ || ಹಿಮವಂತಂ ಸಮಾಸಾದ್ಯ ಭೃಗುಪ್ರಸ್ರವಣೇಗಿರೌ || ೫ || ಅಥ ವರ್ಷಶತೇ ಪೂರ್ಣೇ ತಪಸಾರಾಧಿತೋ ಮುನಿಃ || ಸಗರಾಯ ವರಂ ಪ್ರಾದಾದ್ಭೃಗುಸ್ಸತ್ಯವತಾಂವರಃ || ೬ || ಅಪತ್ಯಲಾಭಸ್ಸುಮಹಾನ್ ಭವಿಷ್ಯತಿ ತವಾನಘ || ಕೀರ್ತಿಂಚಾಪ್ರತಿಮಾಂ ಲೋಕೇ ಪ್ರಾಪ್ಸ್ಯಸೇ ಪುರುಷರ್ಷಭ || ೭ || ಏಕಾ ಜನಯಿತಾ ತಾತ ಪುತ್ರಂ ವಂಶಕರಂ ತವ|| ಷಷ್ಟಿಂ ಪುತ್ರ ಸಹಸ್ರಾಣಿ ಅಪರಾ ಜನಯಿಷ್ಯತಿ || ೮ || ಭಾಷಮಾಣಂ ಮಹಾತ್ಮಾನಂ ರಾಜಪುತ್ರ್ಯೌ ಪ್ರಸಾದ್ಯ ತಂ || ಊಚತುಃ ಪರಮಪ್ರೀತೇ ಕೃತಾಂ

---

ರಾಜಾ - ಸಗರರಾಜನು. ತಾಭ್ಯಾಂಪತ್ನೀಭ್ಯಾಂಸಹ-ಆ ಮಡದಿಯರೊಡನೆ, ಹಿಮವಂತಂ-ಹಿಮವತ್ಪರ್ವತವನ್ನು, ಸಮಾಸಾದ್ಯ - ಹೊಂದಿ, ಭೃಗುಪ್ರಸ್ರವಣೇ - ಭೃಗುಪ್ರಸ್ರವಣವೆಂಬ, ಗಿರೌ- ಬೆಟ್ಟದಲ್ಲಿ, ತಪಃ - ತಪವನ್ನು, ತಪ್ತವಾನ್ - ತಪಿಸಿದನು || ೫ || ಅಥ - ಬಳಿಕ, ವರ್ಷಶತೇ- ನೂರುವರ್ಷಗಳು, ಪೂರ್ಣೇಸತಿ - ಪೂರ್ತಿಯಾಗುತ್ತಿರಲು, ಸತ್ಯವತಾಂ - ಸತ್ಯವಂತರಲ್ಲಿ, ವರಃ- ಶ್ರೇಷ್ಠನಾದ, ಭೃಗುಃ - ಭೃಗುವೆಂಬ, ಮುನಿಃ - ಋಷಿಯು, ತಪಸಾ - ತಪಸ್ಸಿನಿಂದ, ಆರಾಧಿತಃ- ಪ್ರಾರ್ಥಿಸಲ್ಪಟ್ಟು, ಸಗರಾಯ - ಸಗರ ಚಕ್ರವರ್ತಿಗೆ, ವರಂ - ಇಷ್ಟಾರ್ಥವನ್ನು, ಪ್ರಾದಾತ್-ಕೊಡಲುದ್ಯುಕ್ತನಾದನು. || ೬ || ಹೇಅನಘ - ಎಲೈ ಪಾಪರಹಿತನೆ, ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ತವ - ನಿನಗೆ, ಸುಮಹಾನ್ - ಶ್ರೇಷ್ಠವಾದ, ಅಪತ್ಯಲಾಭಃ - ಪುತ್ರಲಾಭವು, ಭವಿಷ್ಯತಿ- ಆಗುವದು, ಲೋಕೇ ಲೋಕದಲ್ಲಿ, ಅಪ್ರತಿಮಾಂ - ಸಮಾನವಿಲ್ಲದ, ಕೀರ್ತಿಂಚ-ಯಶಸ್ಸನ್ನು, ಪ್ರಾಪ್ಸ್ಯಸೇ - ಹೊಂದುವಿ, || ೭ || ಹೇತಾತ - ಎಲೈ ತಂದೆಯೆ, ಏಕಾ-ಒಬ್ಬ ಹೆಂಡತಿಯು, ತವ - ನಿನ್ನ, ವಂಶಕರಂ - ವಂಶೋದ್ಧಾರಕನಾದ, ಪುತ್ರಂ - ಕುವರನನ್ನು, ಜನಯಿತಾ-ಹೆರುವಳು, ಅಪರಾ - ಮತ್ತೊರ್ವಳು, ಷಷ್ಟಿಂಪುತ್ರಸಹಸ್ರಾಣಿ - ಅರವತ್ತು ಸಾವಿರ ಮಕ್ಕಳನ್ನು, ಜನಯಿಷ್ಯತಿ- ಹೆರುವಳು. || ೮ || ಇತಿ - ಇಂತೆಂದು, ಭಾಷಮಾಣಂ - ಹೇಳುತ್ತಿರುವ, ಮಹಾತ್ಮಾನಂ- ಮಹಾನುಭಾವನಾದ, ತಂ ಆ ಭೃಗುಋಷಿಯನ್ನು, ಪ್ರಸಾದ್ಯ ಪ್ರಸನ್ನನಾಗಿ ಮಾಡಿಕೊಂಡು, ತದಾ- ಆಗ, ರಾಜಪುತ್ರ್ಯೌ - ರಾಜಪುತ್ರಿಯರಾದ ಕೇಶಿನೀ ಸುಮತಿಗಳೀರ್ವರೂ, ಪರಮಪ್ರೀತೇ-ಬಹಳ ಸಂತೋಷಗೊಂಡು, ಕೃತಾಂಜಲೀಪುಟೇ, ಕೃತ - ಮಾಡಲ್ಪಟ್ಟ, ಅಂಜಲಿಪುಟೇ - ಅಂಜಲಿಗಳುಳ್ಳವ

---

ಸುಮತಿಯರಿಂದೊಡಗೂಡಿದ ಸಗರಚಕ್ರವರ್ತಿಯು ಹಿಮವತ್ಪರ್ವತವನ್ನು ಸೇರಿ, ಭೃಗು ಪ್ರಸ್ರವಣಗಿರಿಯಲ್ಲಿ ತಪವಂಗೈದನು. ಹೀಗೆ ನೂರುವರ್ಷಗಳು ಪೂರ್ಣವಾಗಲು, ತಪಸ್ಸಿನಿಂದಾರಾಧಿತನೂ, ಸತ್ಯವಂತರಲ್ಲಿ ಶ್ರೇಷ್ಠನೂ ಆದ ಭೃಗುಮುನಿಯು, “ಎಲೈ ಸಗರ ರಾಜನೆ ! ನಿನಗೆ ಶ್ರೇಷ್ಠವಾದ ಪುತ್ರಲಾಭವುಂಟಾಗುವುದು, ಈ ಪುತ್ರಲಾಭದಿಂದ ಅಸಮಾನವಾದ ಕೀರ್ತಿಯನ್ನೂ ಪಡೆಯುವೆ. ನಿನ್ನ ಸತಿಯರಲ್ಲೊಬ್ಬಳು ವಂಶೋದ್ಧಾರಕನಾದ ಕುವರನೊಬ್ಬನನ್ನು ಹೆರುವಳು, ಮತ್ತೊಬ್ಬಳು ಅರುವತ್ತುಸಾವಿರಮಕ್ಕಳನ್ನು ಹೆರುವಳು” ಎಂದನು. || ೮ || ಇಂತು ಮಹಾತ್ಮನಾದ ಭೃಗುಮುನಿಯು ಹೇಳುತ್ತಿರಲು, ಕೇಶಿನೀ ಸುಮತಿಯರು ಆತನನ್ನು ಗೌರವಿಸಿ ಸಂತಸಗೊಂಡು, ಕೈಗಳನ್ನು ಜೋಡಿಸಿ, “ಎಲೈ

ಜಲಿಪುಟೇ ತದಾ ॥ ೯ ॥ ಏಕಃ ಕಸ್ಯಾಸ್ಸುತೋ ಬ್ರಹ್ಮನ್ ಕಾಬಹೂನ್ ಜನ
ಯಿಷ್ಯತಿ ॥ ಶ್ರೋತುಮಿಂಚ್ಛಾವಹೇ ಬ್ರಹ್ಮನ್ ಸತ್ಯಮಸ್ತು ವಚಸ್ತವ ॥೧೦॥
ತಯೋಸ್ತದ್ವಚನಂ ಶ್ರುತ್ವಾ ಭೃಗುಃ ಪರಮ ಧಾರ್ಮಿಕಃ ॥ ಉವಾಚ ಪರಮಾಂ
ವಾಣೀಂ ಸ್ವಚ್ಛಂದೋತ್ರ ವಿಧೀಯತಾಂ ॥೧೧॥ ಏಕೋ ವಂಶಕರೋ
ವಾಸ್ತು ಬಹವೋವಾ ಮಹಾಬಲಾಃ ॥ ಕೀರ್ತಿಮಂತೋ ಮಹೋತ್ಸಾಹಾಃ
ಕಾವಾಕಂವರಮಿಚ್ಛತಿ ॥ ೧೨ ॥ ಮುನೇಸ್ತು ವಚನಂ ಶ್ರುತ್ವಾ ಕೇಶಿನೀ
ರಘುನಂದನ ॥ ಪುತ್ರಂ ವಂಶಕರಂ ರಾಮ ಜಗ್ರಾಹ ನೃಪಸನ್ನಿಧೌ ॥೧೩॥

ರಾಗಿ, ಊಚತುಃ – ಹೇಳಿದರು, ॥ ೯ ॥ ಹೇಬ್ರಹ್ಮನ್- ಎಲೈ ಬ್ರಹ್ಮರ್ಷಿಯೆ, ಕಸ್ಯಾಃ-ಯಾವ ಳಿಗೆ, ಏಕಃ - ಒಬ್ಬ, ಪುತ್ರಃ - ಪುತ್ರನು? ಕಾ - ಯಾವಳು, ಬಹೂನ್ - ಬಹು ಮಕ್ಕಳನ್ನು, ಜನ ಯಿಷ್ಯತಿ - ಹೆರುವಳು ? ಹೇಬ್ರಹ್ಮನ್ - ಎಲೈ ಬ್ರಹ್ಮರ್ಷಿಯು, ತವ - ನಿನ್ನ, ವಚಃ - ಮಾತು, ಸತ್ಯಂ - ಸಫಲವು, ಅಸ್ತು - ಆಗಲಿ, ಶ್ರೋತುಂ - ಕೇಳಲು, ಇಚ್ಛಾವಹೇ - ಅಪೇಕ್ಷಿಸುವೆವು. ॥೧೦ ತಯೋಃ - ಆ ಕೇ ಶೀ ಸುಮತಿಗಳ, ತದ್ವಚನಂ - ಆ ಮಾತನ್ನು, ಶೃತ್ವಾ- ಕೇಳಿ, ಪರಮಧಾರ್ಮಿಕಃ- ಬಹು ಧರ್ಮಿಷ್ಠನಾದ, ಭೃಗುಃ - ಭೃಗುಮಹರ್ಷಿಯು, ಪರಮಾಂ - ಉತ್ಕೃಷ್ಟವಾದ, ವಾಣೀಂ- ಮಾತನ್ನು, ಉವಾಚ - ಹೇಳಿದನು, ಅತ್ರ - ಈ ವಿಷಯದಲ್ಲಿ ಸ್ವಚ್ಛಂದಃ - ನಿಮ್ಮ ನಿಮ್ಮ ಇಷ್ಟವು ಏನೆಂಬುದನ್ನು, ವಿಧೀಯತಾಂ - ತಿಳಿಸಲ್ಪಡಲಿ, ॥ ೧೧ ॥ ವಂಶಕರಃ - ವಂಶೋದ್ಧಾರಕನಾದ, ಏಕೋವಾ - ಒಬ್ಬನಾದರೂ ಸರಿಯೆ, ಅಸ್ತು - ಆಗಲಿ. ಮಹಾಬಲಾಃ - ಮಹಾಬಲವಂತರಾದ, ಕೀರ್ತಿಮಂತಃ - ಯಶೋವಂತರಾದ, ಮಹೋತ್ಸಾಹಾಃ - ಮಹಾ ಸಂತೋಷಿಗಳಾದ, ಬಹವ - ಬಹು ಮಂದಿ ಮಕ್ಕಳು, ಸಂ ತು ವಾ - ಆ ಗ ಲೋ ಏ ನು ? ಕಾ ವಾ - ಯಾವಳು, ಕಂವರಂ- ಯಾವ ವರವನ್ನು, ಇಚ್ಛತಿ- ಇಚ್ಛಿಸುತ್ತಾಳೆ, ॥೧೨॥ ಹೇರಘುನಂದನ - ಎಲೈ ರಘುಕುಲೋತ್ಪನ್ನನೆ, ಹೇರಾಮ - ಎಲೈ ಶ್ರೀರಾಮನೆ, ಮುನೇಃ - ಭೃಗುಋಷಿಯ, ವಚನಂತು - ಮಾತನ್ನು, ಶೃತ್ವಾ - ಕೇಳಿ, ನೃಪಸನ್ನಿಧೌ - ಸಗರರಾಜನ ಸನ್ನಿಧಾನದಲ್ಲಿ, ಕೇಶಿನೀ - ಕೇಶಿನೀಎಂಬವಳು, ವಂಶಕರಂ - ವಂಶಾಭಿವೃದ್ಧಿಕರನಾದ, ಪುತ್ರಂ - ಮಗನನ್ನು, ಜಗ್ರಾಹ - ಕೋರಿದಳು. ॥೧೩॥

ಬ್ರಹ್ಮಜ್ಞಾನಿಯೆ ! ನಮ್ಮೀರ್ವರಲ್ಲಿ ಯಾವಳು ಒಬ್ಬಮಗನನ್ನು ಹೆರುವಳು ? ಅರವತ್ತು ಸಾವಿರಮಕ್ಕಳನ್ನಾರು ಪಡೆಯುವರು ? ಇದನ್ನು ಕೇಳಲು ಬಹಳವಾಗಿ ಇಚ್ಛಿಸುವೆವು, ನಿನ್ನ ನುಡಿಯು ಸತ್ಯವಾಗಲಿ " ಎಂದರು. ॥ ೧೦ ॥ ಹೀಗೆಂದ ಕೇಶಿನೀಸುಮತಿಯರ ನುಡಿಗಳನ್ನು ಕೇಳಿ ಪರಮ ಧರ್ಮಿಷ್ಠನಾದ ಭೃಗುಮುನಿಯು ಶ್ರೇಷ್ಠವಾದ ಈ ಮಾತನ್ನು ಹೇಳಿದನು, " ಎಲೌ ! ಈ ವಿಷಯದಲ್ಲಿ ನಿಮ್ಮನಿಮ್ಮ ಅಭಿಪ್ರಾಯವನ್ನು ತಿಳಿಸಿರಿ, ನಿಮ್ಮಲ್ಲಿ ವಂಶೋದ್ಧಾರಕನಾದ ಒಬ್ಬಮಗನನ್ನಾರು ಬಯಸುವರು ? ಮಹಾಉತ್ಸಾಹ ಶಾಲಿಗಳೂ, ಕೀರ್ತಿವಂತರೂ ಆದ ಅನೇಕ ಕುವರರನ್ನಾರು ಬ ಯ ಸು ವ ರು ? ಈ ಎ ರ ಡು ವರ ಗಳಲ್ಲಿ ಯಾರು ಯಾವ ವರವನ್ನಪೇಕ್ಷಿಸುವಿರೋ ಅದನ್ನು ಹೇಳಿರಿ." ॥೧೨॥ ಇಂತೆಂದ ಭೃಗುಮುನಿಯ ಮಾತುಗಳನ್ನು ಕೇಳಿ ಸಗರರಾಯನ ಜ್ಯೇಷ್ಠಪತ್ನಿಯಾದ ಕೇಶಿನಿಯು,

ಷಷ್ಟಿಃ ಪುತ್ರ ಸಹಸ್ರಾಣಿ ಸುವರ್ಣ ಭಗಿನೀ ತದಾ || ಮಹೋತ್ಸಾಹಾನ್ ಕೀರ್ತಿಮತೋ ಜಗ್ರಾಹ ಸುಮತಿಸ್ಸುತಾನ್ ||೧೪|| ಪ್ರದಕ್ಷಿಣಮೃಷಿಂ ಕೃತ್ವಾ ಶಿರಸಾಭಿ ಪ್ರಣಮ್ಯ ಚ || ಜಗಾಮ ಸ್ವಪುರಂ ರಾಜಾ ಸಭಾರ್ಯೋ ರಘುನಂದನ ||೧೫|| ಅಥ ಕಾಲೇ ಗತೇ ತಸ್ಮಿನ್ ಜ್ಯೇಷ್ಠಾ ಪುತ್ರಂ ವ್ಯಜಾಯತ || ಅಸಮಂಜ ಇತಿ ಖ್ಯಾತಂ ಕೇಶಿನೀ ಸಗರಾತ್ಮಜಂ ||೧೬|| ಸುಮತಿಸ್ತು ನರವ್ಯಾಘ್ರ ಗರ್ಭತುಂಬಂ ವ್ಯಜಾಯತ || ಷಷ್ಟಿಃಪುತ್ರ ಸಹಸ್ರಾಣಿ ತುಂಬಭೇದಾದ್ವಿನಿಸ್ಸೃತಾಃ||೧೭||ಘೃತಪೂರ್ಣೇಷು ಕುಂಭೇಷು ಧಾತ್ರ್ಯಸ್ತಾನ್

ಹೇಪುತ್ರ - ಎಲೈ ಸುಪುತ್ರನಾದ ಶ್ರೀರಾಮನೆ, ತದಾ ಆಗ, ಸುಪರ್ಣಭಗಿನೀ - ಗರುಡನತಂಗಿಯಾದ, ಸುಮತಿಃ - ಸುಮತಿಯೆಂಬವಳು, ಷಷ್ಟಿಃಸಹಸ್ರಾಣಿ - ಅರವತ್ತುಸಾವಿರಸಂಖ್ಯೆಯುಳ್ಳ, ಮಹೋತ್ಸಾಹಾನ್ - ಮಹಾಪರಾಕ್ರಮಿಗಳಾದ, ಕೀರ್ತಿಮತಃ - ಯಶಸ್ವಿಗಳಾದ, ಸುತಾನ್ - ಮಕ್ಕಳನ್ನು, ಜಗ್ರಾಹ - ಕೋರಿದಳು. ||೧೪|| ಹೇರಘುನಂದನ - ಎಲೈರಘುಕುಲಾನಂದಕರನೆ, ರಾಜಾ - ಸಗರರಾಜನು, ಸಭಾರ್ಯಾಃ - ಹೆಂಡತಿಯರಿಂದೊಡಗೂಡಿ, ಋಷಿಂ - ಭೃಗುಋಷಿಯನ್ನು ಕುರಿತು, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಶಿರಸಾಚ - ಶಿರಸ್ಸಿನಿಂದಲೂ, ಅಭಿಪ್ರಣಮ್ಯ - ವಂದಿಸಿ, ಸ್ವಪುರಂ - ತನ್ನ ಪಟ್ಟಣವನ್ನು ಕುರಿತು, ಜಗಾಮ - ತೆರಳಿದನು. ||೧೫|| ತಸ್ಮಿನ್ಕಾಲೇ - ಆ ಕಾಲವು, ಗತೇಸತಿ - ಕಳೆಯಲು, ಅಥ - ಬಳಿಕ, ಜ್ಯೇಷ್ಠಾ - ಜ್ಯೇಷ್ಠಳಾದ, ಕೇಶಿನೀ - ಕೇಶಿನೀಎಂಬವಳು, ಸಗರಾತ್ಮಜಂ - ಸಗರನ ಶರೀರೋತ್ಪನ್ನನಾದ, ಅಸಮಂಜಇತಿ ಖ್ಯಾತಂ - ಅ ಮಂಜನೆಂದು ಪ್ರಖ್ಯಾತಿಯನ್ನು ಪಡೆದ, ಪುತ್ರಂ - ಕುಮಾರನನ್ನು, ವ್ಯಜಾಯತ - ಹೆತ್ತಳು. ||೧೬|| ಹೇನರವ್ಯಾಘ್ರ - ಎಲೈ ಪುರುಷಶ್ರೇಷ್ಠನ, ಸುಮತಿಸ್ತು - ಸುಮತಿಯಾದರೆ, ಗರ್ಭತುಂಬಂ - ತುಂಬೀಫಲಾಕಾರವಾದಗರ್ಭಕೋಶವನ್ನು, ವ್ಯಜಾಯತ - ಹೆತ್ತಳು, ಷಷ್ಟಿಃಪುತ್ರಸಹಸ್ರಾಣಿ-ಅರವತ್ತುಸಾವಿರಮಕ್ಕಳು ಆ ಕೋಶವೊಡೆಯುವುದರಿಂದ, ವಿನಿಸ್ಸೃತಾಃ- ಹೊರಟುಬಂದರು. ||೧೭|| ಧಾತ್ರ್ಯಃ - ಉಪಮಾತೃಗಳು, ಘೃತಪೂರ್ಣೇಷು - ತುಪ್ಪದಿಂದ ತುಂಬಿದ, ಕುಂಭೇಷು - ಗಡಿಗೆಗಳಲ್ಲಿ, ತಾನ್ - ಆ ಶಿಶುಗಳನ್ನು, ಸಮವರ್ಧಯನ್ - ವೃದ್ಧಿಗೊ

ಪತಿಯ ಸಮ್ಮುಖದಲ್ಲಿ ವಂಶೋದ್ಧಾರಕನಾದ ಪುತ್ರನನ್ನು ಬೇಡಿದಳು. ಗರುಡನ ತಂಗಿಯೂ, ಸಗರನ ಕಿರಿಯಹೆಂಡತಿಯೂ ಆದ ಸುಮತಿಯು ಮಹಾ ಉತ್ಸಾಹಶಾಲಿಗಳಾಗಿಯೂ, ಕೀರ್ತಿವಂತರಾಗಿಯೂ ಇರುವ ಅರವತ್ತು ಸಾವಿರ ಮಕ್ಕಳನ್ನು ಬೇಡಿಕೊಂಡಳು. ||೧೪|| ಆ ಬಳಿಕ ಸಗರರಾಯನು ಆ ಭೃಗುಮುನಿಗೆ ಪ್ರದಕ್ಷಿಣಪೂರ್ವಕ ನಮಸ್ಕಾರವನ್ನೆಸಗಿ, ಭಾರ್ಯಾ ಸಮೇತನಾಗಿ ತನ್ನ ಪಟ್ಟಣವಾದ ಅಯೋಧ್ಯೆಗೆ ತೆರಳಿದನು. ||೧೫|| ಕೆಲ ಕಾಲವಾದ ಬಳಿಕ ಸಗರನ ಜ್ಯೇಷ್ಠಪತ್ನಿಯಾದ ಕೇಶಿನಿಯು ಅಸಮಂಜನೆಂದು ಹೆಸರುಗೊಂಡ ಕುವರನನ್ನು ಹೆತ್ತಳು. ಕಿರಿಯವಳಾದ ಸುಮತಿಯು ವರ್ತುಲಾಕಾರವಾದ ಗರ್ಭಪಿಂಡವನ್ನು ಹೆತ್ತಳು. ಈ ಗರ್ಭಪಿಂಡವೊಡೆಯಲು ಅರವತ್ತು ಸಾವಿರಮಂದಿ ಕುವರರುಂಟಾದರು. ಉಪಮಾತೃಗಳು ಇವರನ್ನು ಘೃತಕುಂಭದಲ್ಲಿಟ್ಟು ಬೆಳೆಯಿಸಿದರು. ಬಹುಕಾಲದ

ಸಮುವರ್ಧರ್ಯ || ಕಾಲೇನ ಮಹತಾ ಸರ್ವೇ ಯೌವನಂ ಪ್ರತಿಪೇದಿರೇ||೧೮|| ಅಥ ದೀರ್ಘೇಣ ಕಾಲೇನ ರೂಪ ಯೌವನ ಶಾಲಿನಃ || ಷಷ್ಟಿಃ ಪುತ್ರ ಸಹಸ್ರಾಣಿ ಸಗರಸ್ಯಾ ಭವಂಸ್ತದಾ ||೧೯|| ಸಚ ಜ್ಯೇಷ್ಠೋ ನರಶ್ರೇಷ್ಠ ಸಗರಸ್ಯಾತ್ಮ ಸಂಭವಃ|| ಬಾಲಾ ಗೃಹೀತ್ವಾತು ಜಲೇ ಸರಯ್ವಾ ರಘುನಂದನ||೨೦|| ಪ್ರಕ್ಷಿಪ್ಯ ಪ್ರಹಸನ್ನಿತ್ಯಂ ಮಜ್ಜತಸ್ತಾ ಸಮೀಕ್ಷ್ಯವೈ || ಏವಂ ಪಾಪ ಸಮಾಚಾರ ಸ್ಸಜ್ಜನ ಪ್ರತಿಬಾಧಕಃ || ೨೧ || ಪೌರಾಣಾಮಹಿತೇ ಯುಕ್ತಃ ಪುತ್ರೋನಿರ್ವಾಸಿತಃ ಪುರಾತ್ || ತಸ್ಯಪುತ್ರೋಂಶುಮಾನ್ನಾಮ ಅಸಮಂಜಸ್ಯ ವೀರ್ಯವಾ ||೨೨|| ಸಮ್ಮತ ಸ್ಸರ್ವಲೋಕಸ್ಯ ಸರ್ವಸ್ಯಾಪಿ ಪ್ರಿಯಂ

ಳಿಸಿದರು, ಮಹತಾಕಾಲೇನ - ಬಹಳಕಾಲದಿಂದ, ಸರ್ವೇ - ಸಮಸ್ತರೂ, ಯೌವನಂ - ಯೌವನವನ್ನು, ಪ್ರತಿಪೇದಿರೇ - ಹೊಂದಿದರು. || ೧೮ || ಅಥ - ಬಳಿಕ, ದೀರ್ಘೇಣಕಾಲೇನ - ಬಹುದೀರ್ಘಕಾಲದಿಂದ, ಸಗರಸ್ಯ - ಸಗರನ, ಷಷ್ಟಿಃಪುತ್ರಸಹಸ್ರಾಣಿ - ಅರವತ್ತುಸಾವಿರಮಕ್ಕಳೂ, ತದಾ-ಆ ಕಾಲದಲ್ಲಿ, ರೂಪಯೌವನಶಾಲಿನಃ ಸೌಂದರ್ಯದಿಂದಲೂ ಯೌವನದಿಂದಲೂ ಒಪ್ಪುವವರು, ಅಭವನ್-ಆದರು. || ೧೯ || ಹೇನರಶ್ರೇಷ್ಠ - ಎಲೈ ಮನುಷ್ಯಶ್ರೇಷ್ಠನೆ, ಹೇರಘುನಂದನ-ಎಲೈ ರಘುಕುಲಾನಂದಕರನೆ, ಸಗರಸ್ಯ-ಸಗರರಾಜನಿಗೆ,ಜ್ಯೇಷ್ಠಃ-ಜ್ಯೇಷ್ಠನಾದ, ಆತ್ಮಸಂಭವಃ- ಮಗನಾದ, ಸಚ ಆ ಅಸಮಂಜನು, ಬಾಲಾನ್-ಹುಡುಗರನ್ನು, ಗೃಹೀತ್ವಾತು - ಹಿಡಿದುಕೊಂಡು, ಸರಯ್ವಾಃ-ಸರಯೂನದಿಯ, ಜಲೇ-ಉದಕದಲ್ಲಿ, ನಿತ್ಯಂ-ನಿರಂತರವು, ಪ್ರಕ್ಷಿಪ್ಯ - ಹಾಕಿ, ಮಜ್ಜತಃ-ಮುಳುಗುತ್ತಿರುವ, ತಾನ್ - ಆ ಹುಡುಗರನ್ನು, ಸಮೀಕ್ಷ್ಯ - ನೋಡಿ, ಪ್ರಹಸನ್ - ನಗುತ್ತ, ಸ್ಥಿತೋವೈ-ನಿಂತನಷ್ಟೆ, || ೨೦ || ಏವಂ - ಈ ಪರಿ, ಪಾಪಸಮಾಚಾರಃ - ಪಾಪಮಾಡುತ್ತ, ಸಜ್ಜನಪ್ರತಿಬಾಧಕಃ - ಸಜ್ಜನರನ್ನು ಬಾಧೆಗೊಳಿಸುತ್ತಿರುವ, ಪುತ್ರಃ - ಮಗನಾದ ಅಸಮಂಜನು, ಪೌರಾಣಾಂ-ಪಟ್ಟಣಸ್ಥರಿಗೆ, ಅಹಿತೇ - ಅನಿಷ್ಟ ಕಾರ್ಯದಲ್ಲಿ, ಯುಕ್ತಃ - ಉದ್ಯುಕ್ತನಾದುದರಿಂದ, ಪುರಾತ್-ಪಟ್ಟಣದಿಂದ, ನಿರ್ವಾಸಿತಃ - ಹೊರಡಿಸಲ್ಪಟ್ಟವನಾದನು. || ೨೧ || ತಸ್ಯಅಸಮಂಜಸ್ಯ - ಆ ಅಸಮಂಜನಿಗೆ, ಪುತ್ರಃ - ಮಗನಾದ, ಅಂಶುಮಾನ್ನಾಮ - ಅಂಶುಮಂತನೆಂದು ಪ್ರಸಿದ್ಧಿಗೊಂಡ, ವೀರ್ಯವಾನ್ - ಪರಾಕ್ರಮಶಾಲಿಯಾದ, ಸರ್ವಲೋಕಸ್ಯ - ಸರ್ವರಿಗೂ, ಸಮ್ಮತಃ-ಇಷ್ಟನಾದ, ಸರ್ವಸ್ಯಾಪಿ - ಸರ್ವರಿಗೂ, ಪ್ರಿಯಂವದಃ - ಇಷ್ಟವಾದ ಮಾತುಗಳನ್ನ ನುಡಿವವನು, ಅಭವತ್-

ಮೇಲೆ ಈ ಸಗರರಾಯನ ಅರವತ್ತುಸಾವಿರಮಂದಿ ಕುವರರೂ ರೂಪ ಯೌವನಶಾಲಿಗಳಾದರು. || ೧೯ || ಎಲೈ ಕಕುತ್ಸ್ಥವಂಶೋತ್ಪನ್ನನೆ ! ಸಗರರಾಯನ ಜ್ಯೇಷ್ಠಕುವರನಾದ ಅಸಮಂಜನು ಪ್ರತಿದಿವಸವೂ ಹುಡುಗರನ್ನು ಹಿಡಿದುಕೊಂಡು ಸರಯೂ ನದಿಯಲ್ಲಿ ಹಾಕಿ, ಅವರು ಮುಳುಗುತ್ತಿರುವುದನ್ನುನೋಡಿ ನಗುತ್ತಲಿದ್ದನು ಈ ರೀತಿಯಾದ ಪಾಪಕಾರ್ಯವನ್ನು ಮಾಡುವವನಾಗಿಯೂ, ಸತ್ಪುರುಷರಿಗೆ ಬಾಧಕನಾಗಿಯೂ, ಪಟ್ಟಣಿಗರಿಗೆ ಅನಿಷ್ಟನಾದ ಅಸಮಂಜನು ಪಟ್ಟಣದಿಂದ ಹೊರಡಿಸಲ್ಪಟ್ಟನು. || ೨೧ || ಈ ಅಸಮಂಜನಿಗೆ ವೀರ್ಯವಂತನೂ, ಪಟ್ಟಣಿಗರೆಲ್ಲರಿಗೂ ಸಮ್ಮತನಾದವನೂ ಎಲ್ಲರಲ್ಲಿಯೂ ಪ್ರಿಯ

ವದಃ ॥ ೨೨ ॥ ತತಃ ಕಾಲೇನ ಮಹತಾ ಮತಿಸ್ಸಮಭಿಜಾಯತ ॥ ಸಗ
ರಸ್ಯ ನರಶ್ರೇಷ್ಠ ಯಜೇಯಮಿತಿ ನಿಶ್ಚಿತಾ ॥೨೩॥ ಸ ಕೃತ್ವಾ ನಿಶ್ಚಯಂ
ರಾಮ ಸೋಪಾಧ್ಯಾಯ ಗಣಸ್ತದಾ॥ ಯಜ್ಞಕರ್ಮಣಿ ವೇದಜ್ಞೋ ಯಷ್ಟುಂ
ಸಮುಪಚಕ್ರಮೇ ॥ ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟತ್ರಿಂಶಸ್ಸರ್ಗಃ.

---

ಆದನು. ॥ ೨೨ ॥ ತತಃ - ಬಳಿಕ, ಮಹತಾಕಾಲೇನ - ಬಹಳ ಕಾಲಕ್ಕೆ, ಹೇನರಶ್ರೇಷ್ಠ-ಎಲೈ ಪುರುಷಶ್ರೇಷ್ಠನೆ, ಸಗರಸ್ಯ - ಸಗರನಿಗೆ, ಯಜೇಯಮಿತಿ - ಯಜ್ಞಮಾಡುವೆನೆಂದು, ನಿಶ್ಚಿತಾ- ಸಂಕಲ್ಪಿತವಾದ, ಮತಿಃ-ಬುದ್ಧಿಯು, ಸಮಭಿಜಾಯತ-ಹುಟ್ಟಿತು. ॥ ೨೩ ॥ ಹೇರಾಮ - ಎಲೈ ಶ್ರೀರಾಮನೆ, ತದಾ-ಆಗ, ಯಜ್ಞಕರ್ಮಣಿ-ಯಜ್ಞಮಾಡುವದರಲ್ಲಿ, ನಿಶ್ಚಯಂ - ನಿಶ್ಚಯನ್ನು,ಕೃತ್ವಾ- ಮಾಡಿ, ಸೋಪಾಧ್ಯಾಯಗಣಃ-ಪುರೋಹಿತರ ಋತ್ವಿಕ್ಕುಗಳ ಗುಂಪುಗಳಿಂದೊಡಗೂಡಿ, ವೇದಜ್ಞಃ- ವೇದಾರ್ಥಜ್ಞನಾದ, ಸಃ-ಆ ಸಗರಚಕ್ರವರ್ತಿಯು, ಯಷ್ಟುಂ-ಯಜ್ಞಮಾಡಲು, ಸಮುಪಚಕ್ರಮೇ- ಉಪಕ್ರಮಿಸಿದನು. ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟತ್ರಿಂಶಸ್ಸರ್ಗಃ.

---

ಮಾಮುದನ್ನೇ ನುಡಿವವನೂ ಆದ ಅಂಶುಮಂತನೆಂಬ ಕುಮಾರನಿದ್ದನು. ॥೨೨॥ ಎಲೈ ಪುರುಷಶ್ರೇಷ್ಠನಾದ ರಘುರಾಮನೆ! ಆ ಬಳಿಕ ಬಹಳಕಾಲವಾದಮೇಲೆ ಆ ಸಗರರಾಜನಿಗೆ ಯಜ್ಞಮಂ ಗೈಯ್ಯಬೇಕೆಂಬ ಇಚ್ಛೆಯುಂಟಾಯಿತು. ಈ ರೀತಿಯಾಗಿ ನಿಶ್ಚಯಿಸಿದ ವೇದಜ್ಞ ನಾದ ಆ ರಾಯನು ಉಪಾಧ್ಯಾಯ ಗಣಗಳಿಂದೊಡಗೂಡಿದವನಾಗಿ ಯಾಗವನ್ನು ಮಾಡಲು ಪಕ್ರಮಿಸಿದನು ॥೨೩-೨೪॥

ಇಂತಿದು ಸಗರರಾಜವೃತ್ತಾಂತ ಕಥನವೆಂಬ ಮೂವತ್ತೆಂಟನೆಯ ಸರ್ಗವು
ಸಮಾಪ್ತವಾದುದು.

# ಬಾಲಕಾಂಡೇ ಏಕೋನ ಚತ್ವಾರಿಂಶಸ್ಸರ್ಗಃ.

ವಿಶ್ವಾಮಿತ್ರ ವಚಶ್ಶ್ರುತ್ವಾ ಕಥಾಂತೇ ರಘುನಂದನಃ ॥ ಉವಾಚ ಪರಮ ಪ್ರೀತೋ ಮುನಿಂ ದೀಪ್ತಮಿವಾನಲಂ ॥ ೧ ॥ ಶ್ರೋತುಮಿಚ್ಛಾಮಿ ಭದ್ರಂತೇ ವಿಸ್ತರೇಣ ಕಥಾಮಿಮಾಂ ॥ ಪೂರ್ವಕೋ ಮೇ ಕಥಂ ಬ್ರಹ್ಮನ್ ಯಜ್ಞಂವೈ ಸಮುಪಾಹರತ್ ॥ ೨ ॥ ವಿಶ್ವಾಮಿತ್ರಸ್ತು ಕಾಕುತ್ಸ್ಥಮು ವಾಚ ಪ್ರಹಸನ್ನಿವ ॥ ಶ್ರೂಯತಾಂ ವಿಸ್ತರೋ ರಾಮ ಸಗರಸ್ಯ ಮಹಾತ್ಮನಃ ॥ ೩ ॥ ಶಂಕರ ಶ್ವಶುರೋ ನಾಮ ಹಿಮವಾನಚಲೋತ್ತಮಃ ॥

---

ರಘುನಂದನಃ-ಶ್ರೀರಾಮಚಂದ್ರನು, ವಿಶ್ವಾಮಿತ್ರವಚಃ ವಿಶ್ವಾಮಿತ್ರನ ಮಾತನ್ನು, ಶ್ರುತ್ವಾ-ಕೇಳಿ, ಕಥಾಂತೇ-ಯಜ್ಞೋಪಕ್ರಮ ಕಥನಾನಂತರದಲ್ಲಿ, ಪರಮಪ್ರೀತಃ-ಬಹಳ ಸಂತಸಗೊಂಡು, ದೀಪ್ತಂ-ಪ್ರಜ್ವಲಿಸುತ್ತಿರುವ, ಅನಲಮಿವಸ್ಥಿತಂ ಯಜ್ಞಪುರುಷನಂತಿರುವ, ಮುನಿಂ- ವಿಶ್ವಾಮಿತ್ರನನ್ನು ಕುರಿತು, ಉವಾಚ-ಹೇಳಿದನು. ॥ ೧ ॥ ಹೇಬ್ರಹ್ಮನ್-ಎಲೈ ಬ್ರಾಹ್ಮಣನೆ, ತೇ ನಿನಗೆ, ಭದ್ರಂ-ಶುಭವು, ಅಸ್ತು - ಆಗಲಿ, ಇಮಾಂಕಥಾಂ - ಈ ಯಜ್ಞ ಕಥೆಯನ್ನು, ವಿಸ್ತರೇಣ - ವಿಸ್ತಾರವಿಂದ, ಶ್ರೋತುಂ - ಕೇಳಲು, ಇಚ್ಛಾಮಿ - ಬಯಸುವೆನು, ಮೇ - ನನಗೆ, ಪೂರ್ವಕಃ-ಪ್ರಾಚೀನನಾದ ಸಗರ ಚಕ್ರವರ್ತಿಯು, ಯಜ್ಞಂವೈ - ಯಜ್ಞವನ್ನು, ಕಥಂ - ಹೇಗೆ, ಸಮುಪಾಹರತ್ - ಮಾಡಿಸಿದನು ॥ ೨ ॥ ವಿಶ್ವಾಮಿತ್ರಸ್ತು - ವಿಶ್ವಾಮಿತ್ರನೂ, ಪ್ರಹಸನ್ನಿವ-ನಗುತ್ತ, ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ, ಹೇರಾಮ- ಎಲೈ ಶ್ರೀರಾಮನೇ! ಮಹಾತ್ಮನಃ-ಮಹಾನುಭಾವನಾದ, ಸಗರಸ್ಯ - ಸಗರರಾಯನ, ಯಜ್ಞಸ್ಯ - ಯಜ್ಞದ, ವಿಸ್ತರಃ - ವಿಸ್ತಾರವು, ಶ್ರೂಯತಾಂ - ಕೇಳಲ್ಪಡಲಿ, ಇತಿ - ಇಂತೆಂದು, ಉವಾಚ - ಹೇಳಿದನು. ॥ ೩ ॥ ಶಂಕರಶ್ವಶುರಃ - ಪರಮೇಶ್ವರನಿಗೆ ಮಾವನಾದ, ಹಿಮವಾನ್ನಾಮ - ಹಿಮವಂತನೆಂದು ಪ್ರಸಿದ್ಧನಾದ, ಅಚ

---

ರಘುನಂದನನಾದ ಶ್ರೀರಾಮಚಂದ್ರನು ವಿಶ್ವಾಮಿತ್ರನ ನುಡಿಗಳನ್ನುಕೇಳಿ ಸಗರ ಚಕ್ರವರ್ತಿಯ, ಯಾಗಕಥನಾನಂತರದಲ್ಲಿ ಯಜ್ಞೇಶ್ವರನಂತೆ ಪ್ರಕಾಶಮಾನನಾದ ಆ ಮುನಿಯನ್ನು ಕುರಿತು "ಮುನಿಯೇ ! ನಿನಗೆ ಮಂಗಳವಾಗಲಿ, ಎಲೈ ಬ್ರಹ್ಮಜ್ಞಾನಿಯೇ ! ನನ್ನ ಪೂರ್ವಿಕನಾದ ಸಗರ ಚಕ್ರವರ್ತಿಯು ಯಜ್ಞಮಾಡಿದುದು ಹೇಗೆ? ಈ ವಿಷಯವನ್ನು ಕೇಳಲು ಇಚ್ಛಿಸುವೆನು. ಆ ಕಥೆಯನ್ನು ವಿಸ್ತಾರವಾಗಿ ಹೇಳುವವನಾಗು" ಎಂದನು. ಇಂತುನುಡಿದ ಶ್ರೀರಾಮಚಂದ್ರನನ್ನು ಕುರಿತು ವಿಶ್ವಾಮಿತ್ರನು ನಸುನಗುತ್ತಾ "ರಾಮ ! ಸಗರ ಚಕ್ರವರ್ತಿಯ ವೃತ್ತಾಂತವನ್ನು ವಿಸ್ತರಿಸಿ ಹೇಳುವೆನು; ಕೇಳುವವನಾಗು" ಎಂದು ಹೇಳಲುಪಕ್ರಮಿಸಿದನು. ॥ ೧-೩ ॥ ಸಾಕ್ಷಾಚ್ಛಂಕರನಿಗೆ ಮಾವನಾಗಿಯೂ, ಹಿಮವಂತನೆಂಬ ನಾಮಧೇಯವುಳ್ಳವನಾಗಿಯೂ ಇರುವ ಪರ್ವತಶ್ರೇಷ್ಠನು, ವಿಂಧ್ಯಪರ್ವತ

ವಿಂಧ್ಯಪರ್ವತಮಾಸಾದ್ಯ ನಿರೀಕ್ಷೇತೇ ಪರಸ್ಪರಂ ॥ ೪ ॥ ತಯೋರ್ಮಧ್ಯೇ ಪ್ರವೃತ್ತೋಽಭೂದ್ಯಜ್ಞಸ್ಸ ಪುರುಷೋತ್ತಮ ॥ ಸಹಿ ದೇಶೋ ನರವ್ಯಾಘ್ರ ಪ್ರಶಸ್ತೋ ಯಜ್ಞಕರ್ಮಣಿ ॥ ೫ ॥ ತಸ್ಯಾಶ್ವಚರ್ಯಾಂ ಕಾಕುತ್ಥ್ಸ ದೃಢಧನ್ವಾ ಮಹಾರಥಃ ॥ ಅಂಶುಮಾನಕರೋತ್ತಾತ ಸಗರಸ್ಯ ಮತೇ ಸ್ಥಿತಃ ॥೬॥ ತಸ್ಯ ಪರ್ವಣಿ ತಂ ಯಜ್ಞಂ ಯಜಮಾನಸ್ಯ ವಾಸವಃ ॥ ರಾಕ್ಷಸೀಂ ತನುಮಾಸ್ಥಾಯ ಯಜ್ಞೀಯಾಶ್ವಮಪಾಹರತ್ ॥ ೭ ॥ ಹ್ರಿಯಮಾಣೇತು ಕಾಕುತ್ಥ್ಸ ತಸ್ಮಿನ್ನಶ್ವೇ ಮಹಾತ್ಮನಃ ॥ ಉಪಾಧ್ಯಾಯಗಣಾಸ್ಸರ್ವೇ ಯಜ

ಲೋತ್ತಮಃ - ಪರ್ವತ ಶ್ರೇಷ್ಠವು, ವಿಂಧ್ಯಪರ್ವತಂ - ವಿಂಧ್ಯ ಪರ್ವತವನ್ನು, ಆಸಾದ್ಯ - ಹೊಂದಿ, ಪರಸ್ಪರಂ - ಒಬ್ಬರಿಗೊಬ್ಬರು, ನಿರೀಕ್ಷೇತೇ - ನೋಡಿದಂತೆ ಇರುವ ॥ ೪ ॥ ಹೇಪುರುಷೋತ್ತಮ - ಎಲೈ ಪುರುಶ್ರೇಷ್ಠನೆ, ತಯೋಃ - ಆ ಹಿಮವದ್ವಿಂಧ್ಯ ಪರ್ವತಗಳ, ಮಧ್ಯೇ - ಮಧ್ಯಭಾಗವಾದ ಆರ್ಯಾವರ್ತ ದೇಶದಲ್ಲಿ, ಯಜ್ಞಃ - ಅಶ್ವಮೇಧ ಯಜ್ಞವು, ಪ್ರವೃತ್ತಃ-ಪ್ರವರ್ತಿಸಿದುದು, ಅಭೂತ್ - ಆಯಿತು, ಹೇನರವ್ಯಾಘ್ರ - ಎಲೈ ಪುರಷೋತ್ತಮನೆ, ಸದೇಶಃ - ಆ ಆರ್ಯಾವರ್ತ ದೇಶವು, ಯಜ್ಞಕರ್ಮಣಿ - ಯಜ್ಞಕರ್ಮವಿಷಯವಾಗಿ, ಹಿ - ಯಾವ ಕಾರಣ, ಪ್ರಶಸ್ತಃ-ಶ್ರೇಷ್ಠವೋ ॥ ೫ ॥ ಹೇಕಾಕುತ್ಥ್ಸ - ಎಲೈ ಕಕುತ್ಸ್ಥವಂಶೋತ್ಪನ್ನನಾದ, ಹೇತಾತ - ಎಲೈ ವತ್ಸನೇ, ತಸ್ಯಸಗರಸ್ಯ - ಆ ಸಗರ ಚಕ್ರವರ್ತಿಯ, ಮತೇ - ಇಷ್ಟದಲ್ಲಿ, (ಅಥವಾ ಆಜ್ಞೆಯಲ್ಲಿ) ಸ್ಥಿತಃ-ಇರುವ, ದೃಢಧನ್ವಾ - ದೃಢವಾದ ಧನುಸ್ಸುಳ್ಳ, ಮಹಾರಥಃ-ಮಹಾರಥಿಕನಾದ, ಅಂಶುಮಾನ್-ಅಂಶುಮಂತನು, ಅಶ್ವಚರ್ಯಾಂ - ಅಶ್ವಸಂಚಾರಾನುಗಮನವನ್ನು, ಅಕರೋತ್-ಮಾಡಿದನು. ॥೬॥ ತಂಯಜ್ಞಂ ಆ ಯಜ್ಞವನ್ನು, ಯಜಮಾನಸ್ಯ - ಮಾಡುತ್ತಿರುವ, ತಸ್ಯ ಆ ಸಗರ ಚಕ್ರವರ್ತಿಯ, ಯಜ್ಞೀಯಾಶ್ವಂ - ಯಜ್ಞಸಂಬಂಧವಾದ ಕುದುರೆಯನ್ನು, ವಾಸವಃ - ದೇವೇಂದ್ರನು, ರಾಕ್ಷಸೀಂ-ರಕ್ಕಸರ ಸಂಬಂಧವಾದ, ತನುಂ ಶರೀರವನ್ನು, ಆಸ್ಥಾಯ ಧರಿಸಿ, ಪರ್ವಣಿ - ಉಕ್ಥ್ಯವೆಂಬ ಕ್ರತುವಿನ ದಿವಸದಲ್ಲಿ, ಅಪಾಹರತ್ - ಅಪಹರಿಸಿಕೊಂಡು ಹೋದನು. ॥ ೭ ॥ ಹೇಕಾಕುತ್ಥ್ಸ-ಎಲೈ ಶ್ರೀರಾಮನೆ, ಮಹಾತ್ಮನಃ - ಮಹಾತ್ಮನಾದ ಸಗರ ಚಕ್ರವರ್ತಿಯ, ತಸ್ಮಿನ್ನಶ್ವೇತು ಆ

ವನ್ನು ಸಮೀಪಿಸಿ ಔನ್ನತ್ಯಾತಿಶಯದಿಂದ ಒಬ್ಬರನ್ನೊಬ್ಬರು ನಿರೀಕ್ಷಿಸುತ್ತಿರುವವು. ಎಲೈ ಪುರುಷಶ್ರೇಷ್ಠನೇ ! ಈ ಪರ್ವತಗಳ ಮಧ್ಯದಲ್ಲಿಯೇ ಆ ಸಗರರಾಯನೆಸಗಿದ ಯಾಗವು ನಡೆದುದು. ಯಜ್ಞಕರ್ಮಕ್ಕೆ ಆ ಸ್ಥಳವು ಪ್ರಶಸ್ತವಾದುದಷ್ಟೆ. ॥ ೪-೫ ॥ ಈ ಅಶ್ವಮೇಧಯಾಗದಲ್ಲಿ ಮಹಾ ಧನುರ್ಧಾರಿಯೂ, ಮಹಾ ರಥಿಕನೂ, ಸಗರರಾಯನ ಆಜ್ಞಾನುವರ್ತಿಯೂ, ಅಸಮಂಜಸನ ಮಗನೂ ಆದ ಅಂಶುಮಂತನು ಯಾಗವನ್ನು ರಕ್ಷಿಸಿಕೊಂಡಿದ್ದನು ॥೬॥ ಅಯ್ಯಾ, ರಾಮಚಂದ್ರನೇ ! ಹೀಗೆ ಯಾಗವು ನಡೆಯುತ್ತಿರಲು 'ಉಕ್ಥ್ಯ'ವೆಂಬ ದಿನದಲ್ಲಿ ದೇವೇಂದ್ರನು ರಾಕ್ಷಸ ಶರೀರವನ್ನಾಂತು ಆ ಯಜ್ಞಾಶ್ವವನ್ನಪಹರಿಸಿದನು. ಮಹಾತ್ಮನಾದ ಸಗರರಾಯನ ಯಜ್ಞಾಶ್ವವು ಅಪಹರಿಸಲ್ಪಡಲು ಋತ್ವಿಕ್ಕುಗಳೆಲ್ಲರೂ, " ಎಲೈ, ಕಕುತ್ಸ್ಥವಂಶೋತ್ಪನ್ನನಾದ ಸಗರ ರಾಯನೇ ! ಈ 'ಉಕ್ಥ್ಯ' ದಿನದಲ್ಲಿ ಯಜ್ಞಾ

ಮಾನಮಥಾಬ್ರುವನ್ ॥ ೮ ॥ ಅಯಂ ಪರ್ವಣಿ ವೇಗೇನ ಯಜ್ಞೀಯಾಶ್ವೋಪನೀಯತೇ ॥ ಹರ್ತಾರಂ ಜಹಿ ಕಾಕುತ್ಸ್ಥ ಹಯಶ್ಚೈವೋಪನೀಯತಾಂ ॥ ೯ ॥ ಯಜ್ಞಚ್ಛಿದ್ರಂ ಭವತ್ಯೇತತ್ಸರ್ವೇಷಾಮಶಿವಾಯ ನಃ॥ ತತ್ತಥಾ ಕ್ರಿಯತಾಂ ರಾಜನ್ ಯಥಾಽಚ್ಛಿದ್ರಃ ಕ್ರತುರ್ಭವೇತ್ ॥೧೦॥ ಉಪಾಧ್ಯಾಯವಚಶ್ಶ್ರುತ್ವಾ ತಸ್ಮಿನ್ ಸದಸಿ ಪಾರ್ಥಿವಃ ॥ ಷಷ್ಟಿಂಪುತ್ರಸಹಸ್ರಾಣಿ ವಾಕ್ಯಮೇತದುವಾಚಹ ॥೧೧॥ ಗತಿಂ ಪುತ್ರಾ ನಪಶ್ಯಾಮಿ ರಕ್ಷಸಾಂ ಪುರುಷ

---

ಕುದುರೆಯು, ಹ್ರಿಯಮಾಣೇ ಸತಿ - ಅಪಹೃತವಾಗಲು, ಸರ್ವೇ- ಸಮಸ್ತರಾದ, ಉಪಾಧ್ಯಾಯಗಣಾಃ - ಋತ್ವಿಕ್ಕುಗಳ ಸಮುದಾಯಗಳು, ಯಜಮಾನಂ - ಯಜಮಾನನನ್ನು ಕುರಿತು, ಅಥ- ಬಳಿಕ, ಅಬ್ರುವನ್ - ನುಡಿದರು, ॥ ೮ ॥ ಹೇಕಾಕುತ್ಸ್ಥ - ಎಲೈ ಕಕುಸ್ಥವಂಶೋತ್ಪನ್ನನೆ, ಅಯಂ - ಈ, ಯಜ್ಞೀಯಾಶ್ವಃ - ಯಜ್ಞಸಂಬಂಧವಾದ ಅಶ್ವವು, ಪರ್ವಣಿ ಉಕ್ಥ್ಯವೆಂಬ ಕ್ರತು ದಿವಸದಲ್ಲಿ, ವೇಗೇನ-ವೇಗದಿಂದ, ಅಪನೀಯತೇ-ಅಪಹರಿಸಲ್ಪಟ್ಟಿತು, ಹರ್ತಾರಂ-ಅಶ್ವಾಪಹಾರಿಯನ್ನು, ಜಹಿ-ದಂಡನೆಮಾಡು, ಹಯಶ್ಚೈವ-ಅಶ್ವವೂ, ಉಪನೀಯತಾಂ ತರಲ್ಪಡಲಿ ॥೯॥ ಯಜ್ಞಚ್ಛಿದ್ರಂ-ಯಜ್ಞೋಪಘಾತರೂಪವಾದ, ಏತತ್ ಈ ಅಶ್ವಾಪಹರಣವು, ಸರ್ವೇಷಾಂ-ಸಮಸ್ತರಾದ, ನಃ-ನಮ್ಮಗಳಿಗೆ, ಅಶಿವಾಯ-ಅಮಂಗಳಕ್ಕಾಗಿ, ಭವತಿ ಆಗುತ್ತದೆ, ತತ ಆದಕಾರಣ, ಹೇರಾಜನ್-ಎಲೈ ರಾಜನೆ, ಕ್ರತುಃ ಯಜ್ಞವು, ಅಚ್ಛಿದ್ರಃ - ಉಪಘಾತದೋಷರಹಿತವಾದದು, ಯಥಾ- ಹೇಗೆ, ಭವೇತ್-ಆಗುವದೋ, ತಥಾ-ಹಾಗೆ, ಕ್ರಿಯತಾಂ-ಮಾಡಲ್ಪಡಲಿ ॥೧೦॥ ಉಪಾಧ್ಯಾಯವಚಃ-ಋತ್ವಿಕ್ಕುಗಳ ಮಾತನ್ನು, ಶ್ರುತ್ವಾ-ಕೇಳಿ, ತಸ್ಮಿನ್ಸದಸಿ- ಆ ಸಭೆಯಲ್ಲಿ, ಪಾರ್ಥಿವಃ- ಸಗರರಾಜನು, ಷಷ್ಟಿಂಪುತ್ರಸಹಸ್ರಾಣಿ - ಅರವತ್ತು ಸಾವಿರ ಮಕ್ಕಳನ್ನು ಕುರಿತು, ಏತತ್-ಈ ಮುಂದೆ ಹೇಳುವ, ವಾಕ್ಯಂ-ಮಾತನ್ನು, ಉವಾಚಹ ಹೇಳಿದನಷ್ಟೆ ॥ ೧೧ ॥ ಹೇಪುತ್ರಾಃ - ಎಲೈ ಮಕ್ಕಳಿರಾ, ಹೇಪುರುಷರ್ಷಭಾಃ-ಎಲೈ ಪುರುಷಶ್ರೇಷ್ಠರಿರಾ, ರಕ್ಷಸಾಂ-ರಾಕ್ಷಸರ, ಗತಿಂ-ಗಮನವನ್ನು, ನಪಶ್ಯಾಮಿ-ಕಾಣೆನು, ಮಂತ್ರಪೂತೈಃ-ಮಂತ್ರಗಳಿಂದ ಪರಿಶುದ್ಧರಾದ, ಮಹಾಭಾಗೈಃ-ಪುಣ್ಯ

---

ಶ್ವವು ಅಪಹೃತವಾಗುತ್ತಿದೆ, ಕುದುರೆಗಳ್ಳನನ್ನು ಹೊಡೆದು ಅಶ್ವವು ತರಲ್ಪಡಲಿ. ಯಜಮಾನನಿಗೂ, ಋತ್ವಿಕ್ಕುಗಳಾದ ನಮ್ಮೆಲ್ಲರಿಗೂ ಅಮಂಗಳಕರವಾದ ಯಜ್ಞವಿಘ್ನವಿದು. ನಿರ್ವಿಘ್ನವಾಗಿ ಯಜ್ಞವು ನಡೆವಂತೆ ಮಾಡುವವನಾಗು" ಎಂದರು. ॥ ೭ - ೧೦ ॥ ಇಂತು ನುಡಿದ ಉಪಾಧ್ಯಾಯರ ಮಾತುಗಳನ್ನುಕೇಳಿ ಆ ಸಗರರಾಯನು, ಯಜ್ಞಸದಸ್ಸಿನಲ್ಲಿದ್ದ ಅರವತ್ತುಸಾವಿರಮಂದಿ ಮಕ್ಕಳನ್ನು ಕುರಿತು "ಎಲೈ, ಮಕ್ಕಳಿರಾ! ಯಜ್ಞಕರ್ಮಾಸಕ್ತನಾದ ನಾನು ರಾಕ್ಷಸರ ಕಪಟಮಾರ್ಗವನ್ನರಿಯಲಿಲ್ಲವು. ಮಂತ್ರಪೂತರೂ ಮಹಾತ್ಮರೂ ಆದ ಋತ್ವಿಕ್ಕುಗಳಿಂದ ಈ ಯಾಗವು ನಡೆದುದಾಯಿತು ಆದುದರಿಂದ ನೀವೀಗಲೇ ಹೊರಟು ಸಮುದ್ರವೇ ಮಾಲೆಯಾಗುಳ್ಳ ಭೂಮಂಡಲವೆಲ್ಲವನ್ನೂ ಹುಡುಕಿರಿ. ನಿಮಗೆ ಮಂಗಳವಾಗಲಿ. ಒಂದೊಂದು ಯೋಜನ ವಿಸ್ತಾರವನ್ನೂ ಕ್ರಮವಾಗಿ ಹುಡುಕಿರಿ. ಒಂದುವೇಳೆ ಯಜ್ಞಾಶ್ವವು ಭೂತಲದಲ್ಲಿ ದೊರೆಯದಿದ್ದರೆ, ಎದುವರೆವಿಗೂ ಕುದುರೆಯೂ

ಷರ್ಷಭಾಃ || ಮಂತ್ರಪೂತೈರ್ಮಹಾಭಾಗೈ ರಾಸ್ಥಿತೋಹಿ ಮಹಾಕ್ರತುಃ||
೧೨ || ತದ್ಗಚ್ಛತ ವಿಚಿನ್ವಧ್ವಂ ಪುತ್ರಕಾ ಭದ್ರಮಸ್ತು ವಃ || ಸಮುದ್ರಮಾ
ಲಿನೀಂ ಸರ್ವಾಂ ಪೃಥಿವೀಮನುಗಚ್ಛತ || ಏಕೈಕ ಯೋಜನಂ ಪುತ್ರಾ ವಿಸ್ತಾ
ರಮಧಿಗಚ್ಛತ || ೧೩ || ಯಾವತ್ತುರಗ ಸಂದರ್ಶಸ್ತಾವತ್ಖನತ ಮೇದಿನೀಂ ||
ತಂಚೈವ ಹಯಹರ್ತಾರಂ ಮಾರ್ಗಮಾಣಾ ಮಮಾಜ್ಞಯಾ ||೧೪|| ದೀಕ್ಷಿತಃ
ಪೌತ್ರಸಹಿತ ಸ್ಸೋಪಾಧ್ಯಾಯ ಗಣೋಹ್ಯಹಂ || ಇಹ ಸ್ಥಾಸ್ಯಾಮಿ ಭದ್ರಂವೋ
ಯಾವತ್ತುರಗದರ್ಶನಂ || ೧೫ || ಇತ್ಯುಕ್ತಾ ಹೃಷ್ಟಮನಸೋ ರಾಜಪುತ್ರಾ
ಮಹಾಬಲಾಃ || ಜಗ್ಮುರ್ಮಹೀತಲಂ ರಾಮ ಪಿತುರ್ವಚನಯಂತ್ರಿತಾಃ||೧೬||

---

ವಂತರಾದ ಋತ್ವಿಕ್ಕುಗಳಿಂದ, ಮಹಾಕ್ರತುಃ-ಮಹಾಕ್ರತುವು. ಆಸ್ಥಿತೋಹಿ - ಅನುಷ್ಠಾನಮಾಡಲ್ಪ
ಟ್ಟಿದೆ. ||೧೨|| ಹೇಪುತ್ರಕಾಃ - ಎಲೈ ಮಕ್ಕಳಿರಾ, ವಃ-ನಿಮಗೆ, ಭದ್ರಂ - ಶುಭವು, ಅಸ್ತು
ಆಗಲಿ. ತತ್-ಆಕಾರಣದಿಂದ, ಗಚ್ಛತ- ಹೊರಡಿರಿ, ಸಮುದ್ರಮಾಲಿನೀಂ - ಸಮುದ್ರವೇ ಮಾಲಿಕೆ
ಯಾಗುಳ್ಳ, ಸರ್ವಾಂ - ಸಮಸ್ತವಾದ, ಪೃಥಿವೀಂ ಭೂಮಿಯನ್ನು, ವಿಚಿನ್ವಧ್ವಂ-ಹುಡುಕಲು, ಅನುಗ
ಚ್ಛತ – ಅನುಸರಿಸಿ ಹೋಗಿರಿ ||೧೩|| ಹೇಪುತ್ರಾಃ - ಎಲೈ ಮಕ್ಕಳಿರಾ, ಏಕೈಕಯೋಜನಂ-
ಒಂದೊಂದು ಗಾವುದವುಳ್ಳ, ವಿಸ್ತಾರಂ - ವಿಸ್ತಾರವನ್ನು, ಅಧಿಗಚ್ಛತ - ಅನುಸರಿಸಿರಿ, ಮಮ-
ನನ್ನ, ಆಜ್ಞಯಾ ಅಪ್ಪಣೆಯಿಂದ, ತಂಹಯಹರ್ತಾರಂಚೈವ-ಆ ತುರುಗವನ್ನಪಹರಿಸಿಕೊಂಡವನನ್ನೂ,
ಮಾರ್ಗಮಾಣಾಃ-ಹುಡುಕುತ್ತ, ತುರಗಸಂದರ್ಶಃ - ಕುದುರೆಯ ನೋಟವು, ಯಾವತ್-ಯಾವಾಗ
ಆಗುವುದೋ, ತಾವತ್-ಅಷ್ಟುಪರಿಯಂತರ, ಮೇದಿನೀಂ ಭೂಮಿಯನ್ನು, ಖನತ-ಅಗೆಯಿರಿ ||೧೪||
ದೀಕ್ಷಿತಃ-ದೀಕ್ಷಾಬದ್ಧನಾದ, ಅಹಂಹಿ-ನಾನಾದರೋ, ಪೌತ್ರಸಹಿತಃ-ಮೊಮ್ಮಗನಾದ ಅಂಶುಮಂತನಿಂ
ದೊಡಗೂಡಿ, ಸೋಪಾಧ್ಯಾಯಗಣಃ-ಉಪಾಧ್ಯಾಯ ಋತ್ವಿಗ್ಗಣಗಳಿಂದ ಕೂಡಿದವನಾಗಿ, ಯಾವತ್ತು
ರಗದರ್ಶನಂ- ಅಶ್ವದರ್ಶನವಾಗುವವರಿವಿಗೂ, ಇಹ-ಇಲ್ಲಿಯೇ, ಸ್ಥಾಸ್ಯಾಮಿ - ಇರು
ತ್ತೇನೆ. ||೧೫|| ಇತ್ಯುಕ್ತಾಃ-ಹೀಗೆ ಹೇಳಲ್ಪಟ್ಟ, ಮಹಾಬಲಾಃ-ಮಹಾ ಪರಾಕ್ರಮಿಗಳಾದ, ಹೃಷ್ಟ
ಮನಸಃ-ಸಂತುಷ್ಟಮನಗಳುಳ್ಳ, ರಾಜಪುತ್ರಾಃ - ರಾಜಕುವರರು, ಹೇರಾಮ- ಎಲೈ ಶ್ರೀರಾಮನೇ!
ಪಿತುಃ-ತಂದೆಯ, ವಚನಯಂತ್ರಿತಾಃ- ವಚನದಿಂದ ಆಜ್ಞಪ್ತರೂ, ಮಹೀತಲಂ-ಭೂಪ್ರದೇಶವನ್ನು,

---

ಕುದುರೆಗಳ್ಳನೂ ಕಾಣುವದೋ ಅದುವರೆವಿಗೆ ನನ್ನಾಜ್ಞೆಯಿಂದ ಭೂಮಿಯನ್ನ ಗೆಯಿರಿ.
|| ೧೧-೧೪ || ಯಜ್ಞರಕ್ಷಿತನಾದ ನಾನು ಉಪಾಧ್ಯಾಯರಿಂದಲೂ, ಮಮ್ಮಗನಾದ ಅಂಶು
ಮಂತನಿಂದಲೂ ಒಡಗೂಡಿ ತುರಗದರ್ಶನವಾಗುವವರೆಗೂ, ಇಲ್ಲಿಯೇ ಇರುವೆನು.
ನಿಮಗೆ ಮಂಗಳವಾಗಲಿ ” ಎಂದನು. || ೧೫ || ಇಂತೆಂಬ ಸಗರರಾಯನ ಮಾತನ್ನು
ಕೇಳಿ ಮಹಾಬಲಶಾಲಿಗಳಾದ ಆ ಅರವತ್ತು ಸಾವಿರಮಂದಿ ರಾಜಕುವರರೂ ತಂದೆಯ
ಅಜ್ಞಾನುಸಾರ ಯಜ್ಞೀಯಾಶ್ವವನ್ನು ಹುಡುಕಲು ಹೊರಟರು ಎಲೈ, ಪುರುಷಶ್ರೇಷ್ಠನೇ !
ಇಂತುಹೊರಟ ಆ ಸಗರಕುವರರಲ್ಲಿ ಒಬ್ಬೊಬ್ಬರೂ ಒಂದೊಂದು ಯೋಜನವಿಸ್ತಾರದಷ್ಟು

ಯೋಜನಾಯಾಮವಿಸ್ತಾರಮೇಕೈಕೋ ಧರಣೀತಲಂ ॥ ಬಿಭಿದುಃಪುರುಷ ವ್ಯಾಘ್ರ ವಜ್ರಸ್ಪರ್ಶಸಮೈರ್ನಖೈಃ ॥ ೧೭ ॥ ಶೂಲೈರಶನಿಕಲ್ಪೈಶ್ಚ ಹಲೈಶ್ಚಾಪಿ ಸು ದಾರುಣೈಃ ॥ ಭಿದ್ಯಮಾನಾ ವಸುಮತೀ ನನಾದ ರಘುನಂದನ ॥ ೧೮ ॥ ನಾಗಾನಾಂ ವಧ್ಯಮಾನಾನಾಮಸುರಾಣಾಂ ಚ ರಾಘವ ॥ ರಾಕ್ಷಸಾನಾಂಚ ದುರ್ಧರ್ಷಸ್ಸತ್ವಾನಾಂ ನಿನದೋಽಭವತ್ ॥ ೧೯ ॥ ಯೋಜನಾನಾಂ ಸಹಸ್ರಾಣಿ ಷಷ್ಟಿಂತು ರಘುನಂದನ ॥ ಬಭಿದುರ್ಧರಣೀಂ ವೀರಾ ರಸಾತಲಮನುತ್ತಮಂ ॥ ೨೦ ॥ ಏವಂ ಪರ್ವತಸಂಬಾಧಂ ಜಂಬೂದ್ವೀಪಂ

---

ಕುರಿತು, ಜಗ್ಮುಃ ಹೊರಟರು. ॥ ೧೬ ॥ ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೆ, ಏಕೈಕಃ-ಒಬ್ಬೊಬ್ಬನು, ಯೋಜನಾಯಾಮವಿಸ್ತಾರಂ-ಒಂದು ಗಾವುದನೆಲ ದೈರ್ಘ್ಯವೂ (ಅಂದರೆ) ವಿಸ್ತಾರವೂ ಉಳ್ಳ, ಧರಣೀತಲಂ - ಭೂಪ್ರದೇಶವನ್ನು, ವಜ್ರಸ್ಪರ್ಶಸಮೈಃ - ವಜ್ರಾಯುಧಕ್ಕೆ ಸಮಾನ ಸ್ಪರ್ಶವುಳ್ಳ, ನಖೈಃ-ಉಗುರುಗಳಿಂದ, ಬಿಭಿದುಃ-ಭೇದಿಸಿದರು ॥ ೧೭ ॥ ಹೇರಘುನಂದನ - ಎಲೈ ಶ್ರೀರಾಮನೆ, ಅಶನಿಕಲ್ಪೈಃ-ಶಿಡಿಲುಗಳಿಗೆ ಸಮಾನಗಳಾದ, ಶೂಲೈಶ್ಚ ಶೂಲಗಳಿಂದಲೂ, ಸುದಾರುಣೈಃ ಬಹಳ ತೀಕ್ಷ್ಣಗಳಾದ, ಹಲೈಶ್ಚಾಪಿ ನೇಗಿಲುಗಳಿಂದಲೂ, ಭಿದ್ಯಮಾನಾ - ಭೇದಿಸಲ್ಪಡುತ್ತಿರುವ, ವಸುಮತೀ-ಭೂಮಿಯು, ನನಾದ-ಧ್ವನಿಗೊಂಡಿತು. ॥೧೮॥ ಹೆ ರಾಘವ-ಎಲೈ ಶ್ರೀರಾಮನೆ, ವಧ್ಯಮಾನಾನಾಂ-ಕೊಲ್ಲಲ್ಪಡುತ್ತಿರುವ, ನಾಗಾನಾಂ-ಸರ್ಪಗಳ,ಅಸುರಾಣಾಂ-ಅಸುರರ, ರಾಕ್ಷಸಾನಾಂಚ-ರಾಕ್ಷಸರ, ಸತ್ವಾನಾಂಚ-ಇತರ ಜಂತುಗಳ, ನಿನದಃ ಧ್ವನಿಯು, ದುರ್ಧರ್ಷಃ- ಅಸಾಧ್ಯವಾದುದು, ಅಭವತ್ ಆಯಿತು. ॥ ೧೯ ॥ ಹೇರಘುನಂದನ - ಎಲೈ ಶ್ರೀರಾಮನೆ, ವೀರಾಃ-ಶೂರರಾದ ಆ ಸಗರಪುತ್ರರು, ಅನುತ್ತಮಂ - ಸರ್ವೋತ್ತಮವಾದ, ರಸಾತಲಂ - ಪಾತಾಳದಂತೆ, ಧರಣೀಂ ಭೂಮಿಯನ್ನು, ಯೋಜನಾನಾಂ-ಯೋಜನಗಳ, ಷಷ್ಟಿಂಸಹಸ್ರಾಣಿ-ಅರವತ್ತು ಸಾವಿರವನ್ನು, ಬಿಭಿದುಃ - ಭೇದಿಸಿದರು ॥ ೨೦ ॥ ಹೇನರಶಾರ್ದೂಲ ಎಲೈ ಪುರುಷವ್ಯಾಘ್ರನೆ, ಏವಂ-ಈರೀತಿ, ಪರ್ವತಸಂಬಾಧಂ - ಬೆಟ್ಟಗಳಿಂದ ಕೂಡಿರುವ, ಜಂಬೂದ್ವೀಪಂ - ಜಂಬೂದ್ವೀಪವನ್ನು ಖನಂತಃ-ಅಗೆಯುತ್ತಾ, ನೃಪಾತ್ಮಜಾಃ-ರಾಜಕುವರರು,ಸರ್ವತಃ ಯಲ್ಲೆಡೆಯಲ್ಲಿಯೂ, ಪರಿಚಕ್ರಮುಃ-

---

ಭೂಮಿಯನ್ನು ವಜ್ರಸ್ಪರ್ಶಸಮಾನವಾದ ಉಗುರುಗಳಿಂದಲೂ, ಶಿಡಿಲಿಗೆ ಸಮಾನವಾದ ಶೂಲಗಳಿಂದಲೂ, ಅತಿ ದಾರುಣಗಳಾದ ನೇಗಿಲುಗಳಿಂದಲೂ, ಭೇದಿಸಿದರು. ಇಂತು ಭೇದಿಸಲ್ಪಡುತ್ತಿರುವ ಭೂಮಿಯು ಧ್ವನಿಗೊಂಡಿತು. ॥ ೧೭-೧೮ ॥ ಕೊಲ್ಲಲ್ಪಡುತ್ತಲಿರುವ ಸರ್ಪಗಳ, ಅಸುರರ, ಪಾತಾಳವಾಸಿಗಳಾದ ರಾಕ್ಷಸರ, ಮತ್ತು ಇತರ ಪ್ರಾಣಿಗಳ ಹಾಹಾರವವಾಯಿತು. ॥ ೧೯ - ೨೦ ॥ ಎಲೈ, ರಘುನಂದನನೇ ! ಈ ರೀತಿ ಆ ವೀರರಾದ ಅರವತ್ತುಸಾವಿರಮಂದಿ ಸಗರ ಕುವರರೂ ಅರವತ್ತುಸಾವಿರ ಯೋಜನದಷ್ಟು ಭೂಮಿಯನ್ನಗೆದು ಪಾತಾಳವನ್ನಾಗಿ ಮಾಡಿದರು ಅಯ್ಯಾ, ರಘುರಾಮನೇ ! ಈ ರೀತಿ ಆ ಸಗರರಾಜಕುವರರು ಪರ್ವತಗಳಿಂದ ನಿಬಿಡವಾದ ಜಂಬೂದ್ವೀಪವನ್ನಗೆಯುತ್ತಾ ಎಲ್ಲೆಡೆ

ನೃಪಾತ್ಮಜಾಃ || ಖನಂತೋ ನರಶಾರ್ದೂಲ ಸರ್ವತಃ ಪರಿಚಕ್ರಮುಃ ||೨೧||
ತತೋ ದೇವಾಸ್ಸಗಂಧರ್ವಾ ಸ್ಸಾಸುರಾಸ್ಸಹಪನ್ನಗಾಃ|| ಸಂಭ್ರಾಂತಮನಸಸ್ಸರ್ವೇ
ಪಿತಾಮಹಮುಪಾಗಮನ್ || ೨೨ || ತೇ ಪ್ರಸಾದ್ಯ ಮಹಾತ್ಮಾನಂ ವಿಷಣ್ಣ
ವದನಾಸ್ತದಾ || ಊಚುಃ ಪರಮಸಂತ್ರಸ್ತಾಃ ಪಿತಾಮಹಮಿದಂ ವಚಃ ||೨೩||
ಭಗವನ್ ಪೃಥಿವೀ ಸರ್ವಾ ಖನ್ಯತೇ ಸಗರಾತ್ಮಜೈಃ || ಬಹವಶ್ಚ ಮಹಾತ್ಮಾನೋ
ಹನ್ಯಂತೇ ತಲವಾಸಿನಃ || ೨೪ || ಅಯಂ ಯಜ್ಞಹರೋಸ್ಮಾಕ ಮನೇನಾ
ಶ್ವೋಪನೀಯತೇ || ಇತಿ ತೇ ಸರ್ವಭೂತಾನಿ ನಿಘ್ನಂತಿ ಸಗರಾತ್ಮಜಾಃ ||೨೫||
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಚತ್ವಾರಿಂಶಸ್ಸರ್ಗಃ

---

ಸಂಚಾರಮಾಡಿದರು. || ೨೧ || ತತಃ - ಬಳಿಕ, ಸಗಂಧರ್ವಾಃ - ಗಂಧರ್ವರಿಂದಲೂ, ಸಾಸುರಾಃ-ಅಸುರರಿಂದಲೂ, ಸಹಪನ್ನಗಾಃ ಸರ್ಪಗಳಿಂದಲೂ ಒಡಗೂಡಿದ, ಸರ್ವೇ-ಸಮಸ್ತ,ದೇವಾಃ-ದೇವತೆಗಳು, ಸಂಭ್ರಾಂತಮನಸಃ - ಚಕಿ ಚಿತ್ತರಾಗಿ, ಪಿತಾಮಹಂ - ಬ್ರಹ್ಮದೇವನನ್ನು ಕುರಿತು, ಉಪಾಗಮನ್ - ಬಂದರು, ತೇ - ಆ ದೇವತೆಗಳು, ತದಾ - ಆ ಕಾಲದಲ್ಲಿ, ಮಹಾತ್ಮಾನಂ - ಮಹಾತ್ಮನಾದ, ಪಿತಾಮಹಂ - ಬ್ರಹ್ಮದೇವನನ್ನು, ಪ್ರಸಾದ್ಯ - ಸ್ತೋತ್ರಮಾಡಿ, ವಿಷಣ್ಣವದನಾಃ - ಖಿತ್ತಿಗೊಂಡ ಮುಖವುಳ್ಳವರಾಗಿ, ಪರಮಸಂತ್ರಸ್ತಾಃ - ಬಹಳ ಭೀತಿಗೊಂಡು, ಇದಂ - ಈ, ವಚಃ-ಮಾತನ್ನು, ಊಚುಃ - ಹೇಳಿದರು || ೨೩ || ಹೇಭಗವನ್ - ಎಲೈ ಷಡ್ಗುಣೈಶ್ವರ್ಯ ಸಂಪನ್ನನೇ ! ಸರ್ವಾಪೃಥಿವೀ - ಭೂಮಿಯಲ್ಲವೂ, ಸಗರಾತ್ಮಜೈಃ - ಸಗರ ಪುತ್ರರಿಂದ, ಖನ್ಯತೇ - ಅಗಿಯಲ್ಪಡುತ್ತದೆ, ತಲವಾಸಿನಃ - ಪಾತಾಳಲೋಕವಾಸಿಗಳಾಗಿದ್ದ, ಮಹಾತ್ಮಾನಃ - ದೊಡ್ಡವರಾದ, ಬಹವಃ - ಅನೇಕರು, ಹನ್ಯಂತೇ - ಹೊಡೆಯಲ್ಪಡುತ್ತಾರೆ || ೨೪ || ಅಯಂ - ಇವನು, ಅಸ್ಮಾಕಂ - ನಮ್ಮ, ಯಜ್ಞಹರಃ - ಯಜ್ಞಕ್ಕೆ ವಿಘ್ನಕರನು, ಅನೇನ - ಇವನಿಂದ, ಅಶ್ವಃ-ಅಶ್ವವು, ಅಪನೀಯತೆ - ತೆಗೆದುಕೊಂಡು ಹೋಗಲ್ಪಟ್ಟಿತು, ಇತಿ - ಇಂತೆಂದು, ತೇಸಗರಾತ್ಮಜಾಃ ಆ ಸಗರರಾಯನ ಕುವರರು, ಸರ್ವಭೂತಾನಿ - ಸಮಸ್ತ ಭೂತಗಳನ್ನು, ನಿಘ್ನಂತಿ-ಹೊಡೆಯುತ್ತಾರೆ.

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನ ಚತ್ವಾರಿಂಶಸ್ಸರ್ಗಃ,

---

ಗಳಲ್ಲಿಯೂ ಸಂಚರಿಸತೊಡಗಿದರು. || ೨೧ || ಆ ಬಳಿಕ ದೇವ, ಗಂಧರ್ವ, ನಾಗ, ರಾಕ್ಷಸರೇ ಮೊದಲಾದವರೆಲ್ಲರೂ ಭಯಭ್ರಾಂತರಾಗಿ ಚತುರ್ಮುಖನನ್ನು ಸ್ತುತಿಸಿ, ಆತನನ್ನು ಕುರಿತು, “ ಓ ಪೂಜ್ಯನೇ ! ಸಗರಕುವರರಿಂದ ಭೂಮಂಡಲವೆಲ್ಲವೂ ಅಗೆಯಲ್ಪಡುತ್ತಿರುವುದು, ರಸಾತಲವಾಸಿಗಳಾದ ಎಷ್ಟೋ ಮಹಾತ್ಮರು ಹತರಾಗುತ್ತಿರುವರು. ಆ ಸಗರಕುಮಾರರು ‘ ಇದೋ ಇವನು ಯಜ್ಞವನ್ನು ಹಾಳುಮಾಡಿದವನು, ಇವನಿಂದಲೇ ನಮ್ಮ ಯಜ್ಞೀಯಾಶ್ವವು ಅಪಹರಿಸಲ್ಪಟ್ಟುದು ’ ಎಂದುಹೇಳಿ ನಿರಪರಾಧಿಗಳಾದ ಪ್ರಾಣಿಗಳೆಲ್ಲರನ್ನೂ ಕೊಲ್ಲುತ್ತಿರುವರು ” ಎಂದು ನುಡಿದರು. || ೨೨-೨೫ ||

ಇಂತಿದು ಸಗರಕುವರ ಕೃತ ಭೂಖನನ ವೃತ್ತಾಂತವರ್ಣನವೆಂಬ
ಮೂವತ್ತೊಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಚತ್ವಾರಿಂಶಸ್ಸರ್ಗಃ.

---

ದೇವತಾನಾಂ ವಚಶ್ಶ್ರುತ್ವಾ ಭಗವಾನ್ಪ್ರೈ ಪಿತಾಮಹಃ || ಪ್ರತ್ಯುವಾಚ ಸು ಸಂತ್ರಸ್ತಾನ್ ಕೃತಾಂತ ಬಲಮೋಹಿತಾನ್ || ೧ || ಯಸ್ಯೇಯಂ ವಸುಧಾ ಕೃತ್ಸ್ನಾ ವಾಸುದೇವಸ್ಯ ಧೀಮತಃ || ಕಾಪಿಲಂ ರೂಪಮಾಸ್ಥಾಯ ಧಾರ ಯತ್ಯನಿಶಂ ಧರಾಂ ||೨|| ತಸ್ಯಕೋಪಾಗ್ನಿನಾ ದಗ್ಧಾ ಭವಿಷ್ಯಂತಿ ನೃಪಾತ್ಮಜಾಃ|| ಪೃಥಿವ್ಯಾಶ್ಚಾಪಿ ನಿರ್ಭೇದೋ ದೃಷ್ಟ ಏವ ಸನಾತನಃ ||೩|| ಸಗರಸ್ಯಚ ಪುತ್ರಾಣಾಂ ವಿನಾಶೋಽದೀರ್ಘಜೀವಿನಾಂ || ಪಿತಾಮಹ ವಚಃ ಶ್ರುತ್ವಾ

---

ಭಗವಾನ್ - ಪೂಜ್ಯನಾದ, ಪಿತಾಮಹೋಪ್ರೈ - ಬ್ರಹ್ಮನಾದರೆ, ದೇವತಾನಾಂ - ದೇವತೆಗಳ, ವಚಃ – ಮಾತನ್ನು, ಶ್ರುತ್ವಾ - ಕೇಳಿ, ಸುಸಂತ್ರಸ್ತಾನ್ - ಬಹಳ ಹೆದರಿಕೆಯುಳ್ಳ, ಕೃತಾಂತ ಬಲಮೋಹಿತಾನ್, ಕೃತ - ಮಾಡಲ್ಪಟ್ಟ, ಅಂತ – ಜನ ನಾಶವುಳ್ಳ ಸಗರನ ಮಕ್ಕಳ, ಬಲ-ಸಾಮರ್ಥ್ಯದಿಂದ, ಮೋಹಿತಾನ್ - ಮೋಹಿಸಲ್ಪಟ್ಟ ದೇವತೆಗಳನ್ನು ಕುರಿತು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು. || ೧ || ಕೃತ್ಸ್ನಾ - ಸಮಸ್ತವಾದ, ಇಯಂವಸುಧಾ – ಈ ಭೂಮಿಯು, ಧೀಮತಃ- ಬುದ್ಧಿಶಾಲಿಯಾದ, ಯಸ್ಯವಾಸುದೇವಸ್ಯ - ಯಾವ ವಾಸುದೇವನ ಸಂಬಂಧವಾದುದೋ, ಸಃ - ಆ ವಾಸುದೇವನು, ಕಾಪಿಲಂ - ಕಪಿಲಸಂಬಂಧವಾದ, ರೂಪಂ - ರೂಪವನ್ನು, ಆಸ್ಥಾಯ- ಸ್ವೀಕರಿಸಿ, ಧರಾಂ - ಭೂಮಿಯನ್ನು, ಅನಿಶಂ - ನಿರಂತರವು. ಧಾರಯತಿ ಧರಿಸುತ್ತಾನೆ, ತಸ್ಯ – ಆ ಕಪಿಲ ಮುನಿಯ, ಕೋಪಾಗ್ನಿನಾ - ಕ್ರೋಧವೆಂಬ ಅಗ್ನಿಯಿಂದ, ನೃಪಾತ್ಮಜಾಃ - ಅರಸು ಮಕ್ಕಳು, ದಗ್ಧಾಃ – ದಗ್ಧರಾದವರು, ಭವಿಷ್ಯಂತಿ-ಆಗುವರು. ||೨|| ಸನಾತನಃ - ಅನಾದಿಯಾದ, ನಿರ್ಭೇದಃ- ಭೇದನವು, ಪೃಥಿವ್ಯಾಶ್ಚಾಪಿ-ಭೂಮಿಗೂ, ದೃಷ್ಟ ಏವ-ಕಂಡುದೇ ಆಗಿರುವುದು, ಅದೀರ್ಘಜೀವಿನಾಂ- ದೀರ್ಘಾಯುಷ್ಮಂತರಾಗದಿರುವ, ಸಗರಸ್ಯ - ಸಗರನ, ಪುತ್ರಾಣಾಂಚ - ಮಕ್ಕಳಿಗೂ, ವಿನಾಶಃ- ನಾಶವು, ದೃಷ್ಟಃ - ಕಾಣಲ್ಪಟ್ಟಿತು, || ೩ || ಹೇ ಅರಿಂದಮ - ಎಲೈ ಶತೃಸಂಹಾರಕನೇ ! ಪಿತಾ

---

ಈ ಪ್ರಕಾರವಾಗಿ ನುಡಿದ ದೇವತೆಗಳ ಮಾತುಗಳನ್ನು ಕೇಳಿ, ಚತುರ್ಮುಖನು ಮಹಾ ಪರಾಕ್ರಮಿಗಳಾದ ಸಗರಪುತ್ರರಿಂದ ಭಯಗೊಂಡ ಅವರನ್ನು ಕುರಿತು, "ಎಲೈ ! ಹೆದರಬೇಡಿರಿ ; ಈ ಭೂಮಂಡಲವೆಲ್ಲವೂ ಯಾವ ಮಹಾ ಬುದ್ಧಿಶಾಲಿಯಾದ ವಾಸುದೇವನದೋ, ಆತನು ಕಪಿಲರೂಪವನ್ನು ತಾಳಿ ಭೂಮಿಯೆಲ್ಲವನ್ನೂ ಧರಿಸಿರುವನು. ಆತನ ಕೋಪಾಗ್ನಿಯಿಂದ ಆ ಸಗರರಾಯನ ಅರವತ್ತು ಸಾವಿರ ಮಕ್ಕಳು ಸುಟ್ಟುಹೋಗುವರು. ||೧-೨|| ಪ್ರತಿಕಲ್ಪದಲ್ಲಿಯೂ ಭೂಭೇದನವಾಗಬೇಕಾದುದು ತಿಳಿದೇ ಇರುವುದು. ಇದಕ್ಕಾಗಿ ನೀವು ಯೋಚಿಸಬೇಕಾಗಿಲ್ಲವು, ಅಲ್ಪಾಯುಗಳಾದ ಸಗರಪುತ್ರರ ನಾಶವಂತೂ ವೇದ್ಯವಾಗಿಯೇ ಇರುವುದು" ಎಂದನು. || ೩ || ಹೀಗೆಂದ ಪಿತಾಮಹನ ನುಡಿಗಳನ್ನು

ತ್ರಯಸ್ತ್ರಿಂಶದರಿಂದಮ ||೪|| ದೇವಾಃಪರಮಸಂಹೃಷ್ಟಾಃ ಪುನರ್ಜಗ್ಮುರ್ಯಥಾಗತಂ || ಸಗರಸ್ಯ ಚ ಪುತ್ರಾಣಾಂ ಪ್ರಾದುರಾಸೀನ್ಮಹಾತ್ಮನಾಂ ||೫|| ಪೃಥಿವ್ಯಾಂ ಭಿದ್ಯಮಾನಾಯಾಂ ನಿರ್ಘಾತಸಮ ನಿಸ್ವನಃ || ತತೋಭಿತ್ವಾ ಮಹೀಂ ಸರ್ವೇ ಕೃತ್ವಾ ಚಾಪಿ ಪ್ರದಕ್ಷಿಣಂ ||೬|| ಸಹಿತಾಸ್ಸಾಗರಾಸ್ಸರ್ವೇ ಪಿತರಂ ವಾಕ್ಯಮಬ್ರುವನ್ || ಪರಿಕ್ರಾಂತಾ ಮಹೀಸರ್ವಾ ಸತ್ವವಂತಶ್ಚ ಸೂದಿತಾಃ ||೭|| ದೇವ ದಾನವ ರಕ್ಷಾಂಸಿ ಪಿಶಾಚೋರಗಕಿನ್ನರಾಃ || ನಚ ಪಶ್ಯಾಮಹೇಶ್ವಂತಮಶ್ವಹರ್ತಾರಮೇವಚ ||೮|| ಕಿಂಕರಿಷ್ಯಾಮ ಭದ್ರಂತೇ ಬುದ್ಧಿರತ್ರ ವಿಚಾರ್ಯತಾಂ || ತೇಷಾಂ ತದ್ವಚನಂ ಶ್ರುತ್ವಾ ಪುತ್ರಾಣಾಂ

ಮಹದ್ವಚಃ-ಬ್ರಹ್ಮದೇವನ ಮಾತನ್ನು, ತ್ರಯಸ್ತ್ರಿಂಶತ್-ಮುವತ್ತು ಮೂರು ಕೋಟಿ, ದೇವಾಃ-ದೇವತೆಗಳು, ಪರಮಸಂಹೃಷ್ಟಾಃ - ಬಹಳ ಸಂತುಷ್ಟರಾಗಿ, ಯಥಾಗತಂ- ಬಂದಂತೆ, ಪುನರ್ಜಗ್ಮುಃ-ತಿರುಗಿ ಹೊರಟುಹೋದರು. ||೪|| ಮಹಾತ್ಮನಾಂ-ಮಹಾನುಭಾವರಾದ, ಸಗರಸ್ಯಚ-ಸಗರರಾಯನ, ಪುತ್ರಾಣಾಂ - ಮಕ್ಕಳಿಂದ, ಭಿದ್ಯಮಾನಾಯಾಂ - ಭೇದಿಸಲ್ಪಟ್ಟ, ಪೃಥಿವ್ಯಾಂ-ನೆಲದಲ್ಲಿ, ನಿರ್ಘಾತಸಮನಿಸ್ವನಃ, ನಿರ್ಘಾತಸಮ - ಸಿಡಿಲಿನ ಧ್ವನಿಗೆ ಸಮಾನವಾದ, ನಿಸ್ವನಃ - ಧ್ವನಿಯು, ಪ್ರಾದುರಾಸೀತ್ – ಆವಿರ್ಭವಿಸಿತು, ||೫|| ತತಃ - ಬಳಿಕ, ಸರ್ವೇ – ಸಮಸ್ತ, ಸಾಗರಾಃ - ಸಗರನ ಪುತ್ರರು, ಮಹೀಂ - ಭೂಮಿಯನ್ನು, ಭಿತ್ವಾ - ಭೇದಿಸಿ, ಪ್ರದಕ್ಷಿಣಂಚಾಪಿ – ಪ್ರದಕ್ಷಿಣವನ್ನೂ, ಕೃತ್ವಾ - ಮಾಡಿ, ಸರ್ವೇ - ಎಲ್ಲರು, ಸಹಿತಾಃ - ಕೂಡಿ, ಪಿತರಂ-ತಂದೆಯನ್ನು ಕುರಿತು, ಅಬ್ರುವನ್-ನುಡಿದರು. ||೬|| ಸರ್ವಾ - ಸಮಸ್ತವಾದ, ಮಹೀ - ಭೂಮಿಯು, ಪರಿಕ್ರಾಂತಾ - ಸುತ್ತಲ್ಪಟ್ಟಿತು, ಸತ್ವವಂತಃ - ಬಲಿಷ್ಠರಾದ, ದೇವದಾನವರಕ್ಷಾಂಸಿ - ದೇವತೆಗಳೂ, ದಾನವರೂ, ರಾಕ್ಷಸರೂ, ಪಿಶಾಚೋರಗಕಿನ್ನರಾಃ - ಪಿಶಾಚಗಳೂ, ಸರ್ಪಗಳೂ, ಕಿನ್ನರರೂ, ಸೂದಿತಾಃ-ಹೊಡೆಯಲ್ಪಟ್ಟರು, ಅಶ್ವಂಚ - ಕುದುರೆಯನ್ನೂ, ಅಶ್ವಹರ್ತಾರಮೇವಚ-ಕುದುರೆಗಳ್ಳನನ್ನೂ, ನಪಶ್ಯಾಮಹೇ - ಕಾಣಲಿಲ್ಲವು, ಕಿಂಕರಿಷ್ಯಾಮಿ - ಏನು ಮಾಡುವ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಅತ್ರ - ಈ ವಿಷಯದಲ್ಲಿ, ಬುದ್ಧಿ - ಯುಕ್ತಿಯು, ವಿಚಾರ್ಯತಾಂ - ವಿಮರ್ಶಿಸಲ್ಪಡಲಿ. ||೭-೮|| ಹೇರಘುನಂದನ - ಎಲೈ ಶ್ರೀರಾಮನೆ, ರಾಜಸತ್ತಮಃ - ರಾಜಶ್ರೇಷ್ಠನಾದ,

ಕೇಳಿ, ಮುವತ್ತು ಮೂರು ಕೋಟಿ ದೇವತೆಗಳೂ ಬಹಳವಾಗಿ ಸಂತಸಗೊಂಡು ಹಿಂತಿರುಗಿದರು. ||೪|| ಇತ್ತ ಸಗರ ಪುತ್ರರಿಂದ ಭೂಮಿಯು ಭೇದಿಸಲ್ಪಡುತ್ತಿರಲು, ಸಿಡಿಲಿಗೆ ಸಮಾನವಾದ ಧ್ವನಿಯಾಯಿತು. ಬಳಿಕ ಆ ಸಗರ ಕುವರರು ಭೂಮಿಯನ್ನು ಭೇದಿಸಿ, ಪ್ರದಕ್ಷಿಣವನ್ನು ಮಾಡಿ, ತಂದೆಯಾದ ಸಗರರಾಯನಿದ್ದೆಡೆಗೆ ಬಂದು ಆತನನ್ನು ಕುರಿತಿಂತೆಂದರು. ||೬|| "ಎಲೈ, ಜನಕನೇ ! ಇಡೀ ಭೂಮಂಡಲವೇ ಸುತ್ತಲ್ಪಟ್ಟಿತು. ದೇವ, ದಾನವ, ರಾಕ್ಷಸರೂ, ನಾಗ, ಕಿನ್ನರ, ಪಿಶಾಚರೇ ಮೊದಲಾದ ಮಹಾವೀರರೆಲ್ಲರೂ ಘರ್ಷಿಸಲ್ಪಟ್ಟರು. ಇಷ್ಟಾದರೂ ಕುದುರೆಗಳ್ಳನನ್ನೂ, ಕುದುರೆಯನ್ನೂ ನೋಡಲಿಲ್ಲವು. ಈಗೇನು ಮಾಡಬೇಕು ? ಈ ವಿಷಯದಲ್ಲಿ ಯೋಚಿಸುವವನಾಗು. ನಿನಗೆ ಮಂಗಳವಾಗಲಿ" ಎಂದರು. ||೭-೮|| ಎಲೈ, ರಘುಕುಮಾರನೇ ! ಇಂತು

ರಾಜಸತ್ತಮಃ ॥ ೯ ॥ ಸಮನ್ಯುರಬ್ರವೀದ್ವಾಕ್ಯಂ ಸಗರೋ ರಘುನಂದನ ॥ ಭೂಯಃ ಖನತ ಭದ್ರಂವೋ ನಿರ್ಭಿದ್ಯ ವಸುಧಾತಲಂ ॥೧೦॥ ಅಶ್ವಹರ್ತಾರಮಾಸಾದ್ಯ ಕೃತಾರ್ಥಾಶ್ಚ ನಿವರ್ತಥ ॥ ಪಿತುರ್ವಚನಮಾಸಾದ್ಯ ಸಗರಸ್ಯ ಮಹಾತ್ಮನಃ ॥೧೧॥ ಷಷ್ಟಿಃಪುತ್ರಸಹಸ್ರಾಣಿ ರಸಾತಲಮಭಿದ್ರವನ್॥ಖನ್ಯಮಾನೇ ತತಸ್ತಸ್ಮಿನ್ ದದೃಶುಃ ಪರ್ವತೋಪಮಂ ॥ ೧೨ ॥ ದಿಶಾಗಜಂ ವಿರೂಪಾಕ್ಷಂ ಧಾರಯಂತಂ ಮಹೀತಲಂ ॥ ಸಪರ್ವತವನಾಂ ಕೃತ್ಸ್ನಾಂ ಪೃಥಿವೀಂ ರಘುನಂದನ ॥೧೩॥ ಶಿರಸಾ ಧಾರಯಾಮಾಸ ವಿರೂಪಾಕ್ಷೋ ಮಹಾಗಜಃ॥ ಯದಾ ಪರ್ವಣಿ ಕಾಕುತ್ಸ್ಥ ವಿಶ್ರಮಾರ್ಥಂ ಮಹಾಗಜಃ ॥೧೪॥ ಖೇದಾಚ್ಚಾ

ಸಗರಃ - ಸಗರಚಕ್ರವರ್ತಿಯು, ತೇಷಾಂಪುತ್ರಾಣಾಂ – ಆ ಮಕ್ಕಳ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸಮನ್ಯುಃ - ಕೊಪಗೊಂಡು, ವಾಕ್ಯಂ - ಮಾತನ್ನು, ಅಬ್ರವೀತ್-ನುಡಿದನು. ॥೯॥ ವಃ - ನಿಮಗೆ, ಭದ್ರಂ - ಶುಭವು, ಅಸ್ತು - ಆಗಲಿ, ಭೂಯಃ - ಮತ್ತೂ, ವಸುಧಾತಲಂ - ಭೂಮಂಡಲವನ್ನು, ಖನತ - ಅಗೆಯಿರಿ, ನಿರ್ಭಿದ್ಯ - ಭೇದಿಸಿ, ಅಶ್ವಹರ್ತಾರಂ - ಕುದುರೆಗಳ್ಳನನ್ನು, ಆಸಾದ್ಯ- ತಿಳಿದು, ಕೃತಾರ್ಥಾಶ್ಚ - ಕೈಗೂಡಿದ ಕಾರ್ಯವುಳ್ಳವರಾಗಿ, ನಿವರ್ತಧ-ಹಿಂತಿರುಗಿರಿ. ॥ ೧೦ ॥ ಮಹಾತ್ಮನಃ ಮಹಾನುಭಾವನಾದ, ಪಿತುಃ - ತಂದೆಯಾದ, ಸಗರಸ್ಯ-ಸಗರನ, ವಚನಂ - ಆಜ್ಞೆಯನ್ನು, ಆಸಾದ್ಯ - ಕೇಳಿ, ಷಷ್ಟಿಃಪುತ್ರಸಹಸ್ರಾಣಿ ಅರವತ್ತು ಸಾವಿರ ಮಕ್ಕಳು, ರಸಾತಲಂ – ಪಾತಾಳವನ್ನು ಕುರಿತು, ಅಭಿದ್ರವನ್ - ಓಡಿಬಂದರು. ॥ ೧೧ ॥ ತತಃ-ಬಳಿಕ, ಖನ್ಯಮಾನೇ - ಅಗೆಯಲ್ಪಡುತ್ತಿರುವ, ತಸ್ಮಿನ್ - ಆ ಪಾತಾಳದಲ್ಲಿ, ಪರ್ವತೋಪಮಂ-ಪರ್ವತೋಪಮವಾದ, ಮಹೀತಲಂ - ಭೂಪ್ರದೇಶವನ್ನು, ಧಾರಯಂತಂ - ಧರಿಸಿರುವ, ವಿರೂಪಾಕ್ಷಂ - ವಿರೂಪಾಕ್ಷವೆಂಬ, ದಿಶಾಗಜಂ - ದಿಗ್ಗಜವನ್ನು, ದದೃಶುಃ-ಕಂಡರು, ॥ ೧೨ ॥ ಹೇರಘುನಂದನ - ಎಲೈ ರಘುವಂಶೋತ್ಪನ್ನನೆ, ವಿರೂಪಾಕ್ಷಃ - ವಿರೂಪಾಕ್ಷವೆಂಬ, ಮಹಾಗಜಃ-ದೊಡ್ಡ ಆನೆಯು, ಸಪರ್ವತವನಾಂ - ಪರ್ವತಗಳಿಂದಲೂ, ಕಾಡುಗಳಿಂದಲೂ ಕೂಡಿದ, ಕೃತ್ಸ್ನಾಂ-ಸಮಸ್ತ, ಪೃಥಿವೀಂ - ಭೂಮಂಡಲವನ್ನು, ಶಿರಸಾ ತಲೆಯಿಂದ, ಧಾರಯಾಮಾಸ - ಧರಿಸಿರುವುದು, ॥ ೧೩ ॥ ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೆ, ಯದಾ - ಯಾವ,

ನುಡಿದ ಆ ಅರವತ್ತುಸಾವಿರ ಮಕ್ಕಳ ಮಾತುಗಳನ್ನು ಕೇಳಿ ಬಹಳವಾಗಿ ಕೋಪಗೊಂಡಾ ಸಗರನು “ಎಲೈ ! ಇನ್ನೂ ಅಗೆಯಿರಿ, ಭೂತಲವನ್ನೇ ಭೇದಿಸಿರಿ, ಯಜ್ಞಾಶ್ವವನ್ನಪಹರಿಸಿದ ಚೋರನನ್ನೂ, ಅಶ್ವವನ್ನೂ ಹುಡುಕಿ ಹಿಂತಿರುಗಿರಿ ” ಎಂದು ನುಡಿದನು. ॥೯-೧೦ ॥ ಹೀಗೆಂದ ಮಹಾತ್ಮನಾದ ಸಗರಚಕ್ರವರ್ತಿಯು ನುಡಿಯನ್ನು ಶಿರಸಾವಹಿಸಿದ ಸಾಗರರು ರಸಾತಲವನ್ನು ಕುರಿತು ಓಡಿದರು. ಹೀಗೆ ಭೇದಿಸುತ್ತಿರಲು ಪರ್ವತಗಳಿಂದಲೂ, ವನಗಳಿಂದಲೂ ಒಡಗೂಡಿದ ಈ ಭೂಮಂಡಲವೆಲ್ಲವನ್ನೂ ಧರಿಸಿರುವ ವಿರೂಪಾಕ್ಷವೆಂಬ ದಿಗ್ದಂತಿಯನ್ನು ಕಂಡವರಾದರು. ॥ ೧೩ ॥ ಈ ಮಹಾ ಗಜವು ಭೂಭಾರದಿಂದ ಸಂತಪ್ತವಾಗಿ,ವಿಶ್ರಮಿಸಿಕೊಳ್ಳಲು ತಲೆಯನ್ನು ಯಾವಾಗ ಕೊಡಹುವುದೋ,ಅಂದು

ಲಯತೇ ಶೀರ್ಷಂ ಭೂಮಿಕಂಪಸ್ತದಾಭವೇತ್ || ತಂ ತೇ ಪ್ರದಕ್ಷಿಣಂ ಕೃತ್ವಾ ದಿಶಾಪಾಲಂ ಮಹಾಗಜಂ || ೧೫ || ಮಾನಯಂತೋಹಿ ತೇರಾಮ ಜಗ್ಮುರ್ಭಿತ್ವಾ ರಸಾತಲಂ || ತತಃ ಪೂರ್ವಾಂದಿಶಂ ಭಿತ್ವಾ ದಕ್ಷಿಣಾಂ ಬಿಭಿದುಃಪುನಃ || ೧೬ || ದಕ್ಷಿಣಸ್ಯಾಮಪಿ ದಿಶಿ ದದೃಶುಸ್ತೇ ಮಹಾಗಜಂ || ಮಹಾಪದ್ಮಂ ಮಹಾತ್ಮಾನಂ ಸುಮಹತ್ಪರ್ವತೋಪಮಂ ||೧೭|| ಶಿರಸಾ ಧಾರಯಂತಂ ತೇ ವಿಸ್ಮಯಂ ಜಗ್ಮುರುತ್ತಮಂ || ತತಃ ಪ್ರದಕ್ಷಿಣಂ ಕೃತ್ವಾ ಸಗರಸ್ಯ ಮಹಾತ್ಮನಃ ||೧೮|| ಷಷ್ಟಿಃಪುತ್ರ ಸಹಸ್ರಾಣಿ ಪಶ್ಚಿಮಾಂ ಬಿಭಿದುರ್ದಿಶಂ || ಪಶ್ಚಿಮಾಯಾಮಪಿ ದಿಶಿ ಮಹಾಂತಮಚಲೋಪಮಂ || ೧೯ ||

---

ಪರ್ವಣಿ - ಕಾಲದಲ್ಲಿ, ಮಹಾಗಜಃ - ಮಹಾಗಜವು, ಖೇದಾತ್ - ಭೂಧರಣ ವ್ಯಸನದಿಂದ, ವಿಶ್ರಮಾರ್ಥಂ - ಶ್ರಮಪರಿಹಾರಾರ್ಥವಾಗಿ, ಶೀರ್ಷಂ - ಶಿರಸ್ಸನ್ನು, ಚಾಲಯತೇ ಕದಲಿಸುವುದೋ, ತದಾ - ಆಗ, ಭೂಮಿಕಂಪಃ - ಭೂಕಂಪವು, ಭವೇತ್ - ಆಗುವುದು || ೧೪ || ಹೇರಾಮ ಎಲೈ ಶ್ರೀರಾಮನೆ, ತೇ - ಪ್ರಸಿದ್ಧರಾದ, ತೇ - ಆ ಸಗರನ ಮಕ್ಕಳು, ದಿಶಾಪಾಲಂ ದಿಕ್ಪಾಲಕವಾದ, ತಂ ಮಹಾಗಜಂ - ಶ್ರೇಷ್ಠವಾದ ಆ ಗಜಕ್ಕೆ, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಮಾನಯಂತಃ - ಪೂಜೆಮಾಡಿ, ರಸಾತಲಂ - ಪಾತಾಳವನ್ನು, ಭಿತ್ವಾ-ಅಗೆದು, ಜಗ್ಮುರ್ಹಿ - ಹೊರಟರಷ್ಟೆ, || ೧೫ || ತತಃ - ಬಳಿಕ, ತೇ - ಆ ಸಗರಪುತ್ರರು, ಪೂರ್ವಾಂದಿಶಂ-ಪೂರ್ವ ದಿಕ್ಕನ್ನು, ಭಿತ್ವಾ - ಭೇದಿಸಿ, ಪುನಃ - ಮರಳಿ, ದಕ್ಷಿಣಾಂ - ದಕ್ಷಿಣ ದಿಕ್ಕನ್ನು, ಬಿಭಿದುಃ-ಭೇದಿಸಿದರು, ದಕ್ಷಿಣಸ್ಯಾಂದಿಶ್ಯಪಿ - ದಕ್ಷಿಣದಿಕ್ಕಿನಲ್ಲಿಯೂ, ಮಹಾತ್ಮಾನಂ - ಮಹಾಶರೀರವುಳ್ಳ, ಸುಮಹತ್ಪರ್ವತೋಪಮಂ - ಬಹು ದೊಡ್ಡ ಪರ್ವತಕ್ಕೆ ಸಮಾನವಾದ, ಮಹಾಪದ್ಮಂ - ಮಹಾಪದ್ಮವೆಂಬ, ಮಹಾಗಜಂ - ದೊಡ್ಡ ಆನೆಯನ್ನು, ದದೃಶುಃ - ಕಂಡರು, ಶಿರಸಾ - ಶಿರಸ್ಸಿನಿಂದ, ಧಾರಯಂತಂ - ಧರಿಸಿರುವ, ಉತ್ತಮಂ - ಉತ್ತಮವಾದ ಗಜವನ್ನು, ದೃಷ್ಟ್ವಾ - ಕಂಡು, ತೇ - ಆ ಸಗರನ ಮಕ್ಕಳು, ವಿಸ್ಮಯಂ-ಆಶ್ಚರ್ಯವನ್ನು, ಜಗ್ಮುಃ ಹೊಂದಿದರು ||೧೬-೧೭|| ತತಃ ಬಳಿಕ, ಮಹಾತ್ಮನಃ - ಮಹಾತ್ಮನಾದ, ಸಗರಸ್ಯ - ಸಗರನ, ಷಷ್ಟಿಃ ಪುತ್ರಸಹಸ್ರಾಣಿ - ಅರವತ್ತುಸಾವಿರ ಮಕ್ಕಳೂ, ಪ್ರದಕ್ಷಿಣಂ - ಪ್ರದಕ್ಷಿಣ ನಮಸ್ಕಾರವನ್ನೂ, ಕೃತ್ವಾ - ಮಾಡಿ, ಪಶ್ಚಿಮಾಂದಿಶಂ-ಪಶ್ಚಿಮ ದಿಕ್ಕನ್ನು, ಬಿಭಿದುಃ - ಅಗೆದರು. || ೧೮ || ಮಹಾಬಲಾಃ - ಮಹಾಬಲಿಷ್ಠರಾದ, ತೇ-ಆ ಸಗರ ಚಕ್ರವರ್ತಿಯ ಮಕ್ಕಳು, ಪಶ್ಚಿಮಾಯಾಂದಿಶಿ ಪಶ್ಚಿಮ ದಿಕ್ಕಿನಲ್ಲಿಯೂ, ಮಹಾಂತಂ-

---

ಭೂಕಂಪವುಂಟಾಗುವುದು. ಇಂತಹ ವಿರೂಪಾಕ್ಷ ದಿಗ್ಗಜವನ್ನು ನೋಡಿದ ಆ ಸಗರಕುವರರು ಅದಕ್ಕೆ ಪ್ರದಕ್ಷಿಣನಮಸ್ಕಾರಮಾಡಿ, ಗೌರವಿಸಿ ಮುಂಬರಿದು ಪೂರ್ವದಿಕ್ಕಿನಲ್ಲಿ ರಸಾತಲವನ್ನು ಭೇದಿಸಿ, ಮರಳಿ ದಕ್ಷಿಣ ದಿಶಿಯನ್ನಗೆದು ಅಲ್ಲಿಯೂ ಭೂಮಿಯನ್ನು ಹೊತ್ತುಕೊಂಡಿದ್ದ ಪರ್ವತೋಪಮವಾದ ಮಹಾಪದ್ಮವನ್ನು ಕಂಡು ನಮಸ್ಕರಿಸಿ ಪರಮಾಶ್ಚರ್ಯಭರಿತರಾದರು. || ೧೬ || ಬಳಿಕಲಾ ಸಾಗರರು ಪಶ್ಚಿಮ ದಿಕ್ಕನ್ನು ಭೇದಿಸಿ ಅಲ್ಲಿಯೂ ಅಚಲೋಪಮವಾದ ಸೌಮನಸವೆಂಬ ದಿಗ್ಗಜವನ್ನು ಕಂಡು ಪ್ರದಕ್ಷಿಣಪೂರ್ವಕ ನಮ

ದಿಶಾಗಜಂ ಸೌಮನಸಂ ದದೃಶುಸ್ತೇ ಮಹಾಬಲಾಃ || ತಂ ತೇ ಪ್ರದಕ್ಷಿಣಂ ಕೃತ್ವಾ ಪೃಷ್ಟ್ವಾಚಾಪಿ ನಿರಾಮಯಂ ||೨೦|| ಖನಂತಸ್ಸಮುಪಕ್ರಾಂತಾ ದಿಶಂ ಹೈಮವತೀಂ ತತಃ || ಉತ್ತರಸ್ಯಾಂ ರಘುಶ್ರೇಷ್ಠ ದದೃಶುರ್ಹಿಮ ಪಾಂಡರಂ ||೨೧|| ಭದ್ರಂ ಭದ್ರೇಣ ವಪುಷಾ ಧಾರಯಂತಂ ಮಹೀಮಿಮಾಂ|| ಸಮಾಲಭ್ಯ ತತಸ್ಸರ್ವೇ ಕೃತ್ವಾಚೈನಂ ಪ್ರದಕ್ಷಿಣಂ || ೨೨ || ಷಷ್ಟಿಃಪುತ್ರ ಸಹಸ್ರಾಣಿ ಬಿಭಿದುರ್ವಸುಧಾತಲಂ || ತತಃ ಪ್ರಾಗುತ್ತರಾಂ ಗತ್ವಾ ಸಾಗರಾಃ ಪ್ರಥಿತಾಂ ದಿಶಂ ||೨೩|| ರೋಷಾದಭ್ಯಖನರ್ಸರ್ವೇ ಪೃಥಿವೀಂ ಸಗ ರಾತ್ಮಜಾಃ || ತೇತು ಸರ್ವೇ ಮಹಾತ್ಮಾನೋ ಭೀಮವೇಗಾ ಮಹಾ

---

ದೊಡ್ಡದಾದ, ಅಚಲೋಪಮಂ - ಬೆಟ್ಟಕ್ಕೆ ಸಮಾನವಾದ, ಸೌಮನಸಂ - ಸೌಮನಸವೆಂಬ, ದಿಶಾಗಜಂ - ದಿಗ್ಗಜವನ್ನು, ದದೃಶುಃ - ಕಂಡರು, ||೧೯|| ತೇ - ಆ ಸಗರ ರಾಯನ ಮಕ್ಕಳು, ತಂ - ಆ ಗಜಕ್ಕೆ, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ನಿರಾಮಯಂಚಾಪಿ- ಕುಶಲವನ್ನೂ ಕೂಡ, ಪೃಷ್ಟ್ವಾ - ಕೇಳಿ, ತತಃ - ಬಳಿಕ, ಹೈಮವತೀಂ - ಹಿಮವತ್ಪರ್ವತ ಸಂಬಂಧವಾದ, ದಿಶಂ - ದಿಕ್ಕನ್ನು, ಖನಂತಃ ಅಗಿಯುವದಕ್ಕೆ, ಸಮುಪಕ್ರಾಂತಾಃ - ಆರಂಭಿಸಿದರು. ||೨೦|| ಹೇರಘುಶ್ರೇಷ್ಠ-ಎಲೈ ರಘುಶ್ರೇಷ್ಠನೆ, ಉತ್ತರಸ್ಯಾಂ-ಉತ್ತರದಿಕ್ಕಿನಲ್ಲಿ ಭದ್ರೇಣ-ಮಂಗಳಕರವಾದ, ವಪುಷಾ-ಶರೀರದಿಂದ, ಇಮಾಂಮಹೀಂ-ಈ ಭೂಮಿಯನ್ನು, ಧಾರಯಂತಂ- ಧರಿಸಿರುವ, ಹಿಮಪಾಂಡರಂ-ಮಂಜಿನಂತೆ ಬೆಳ್ಳಗಿರುವ, ಭದ್ರಂ-ಭದ್ರಾಖ್ಯವಾದ ಗಜವನ್ನು, ದದೃಶುಃ-ಕಂಡರು, || ೨೧ || ತತಃ-ಬಳಿಕ, ಸರ್ವೇ-ಷಷ್ಟಿಃ ಪುತ್ರಸಹಸ್ರಾಣಿ-ಸಗರನ ಅರವತ್ತುಸಾವಿರ ಮಕ್ಕಳೆಲ್ಲರೂ, ಸಮಾಲಭ್ಯ-ಸ್ಪರ್ಶೆಮಾಡಿ, ಏನಂ ಈ ಗಜವನ್ನು. ಪ್ರದಕ್ಷಿಣಂಚ-ಪ್ರದಕ್ಷಿಣವನ್ನೂ,ಕೃತ್ವಾ ಮಾಡಿ, ವಸುಧಾತಲಂ-ಭೂಪ್ರದೇಶವನ್ನು, ಬಿಭಿದುಃ-ಭೇದಿಸಿದರು. || ೨೨ || ತತಃ-ಬಳಿಕ,ಸಾಗರಾಃ- ಸಾಗರರೆಂಬ ಹೆಸರುಳ್ಳ, ಸರ್ವೇ ಸಗರಾತ್ಮಜಾಃ- ಸಗರಕುವರರೆಲ್ಲರೂ, ಪ್ರಾಗುತ್ತರಾಂ-ಪೂರ್ವೋತ್ತರವಾದ ಈಶಾನ್ಯಭಾಗನೆಂದು, ಪ್ರಥಿತಾಂ - ಪ್ರಸಿದ್ಧವಾದ, ದಿಶಂ - ದಿಕ್ಕನ್ನು ಕುರಿತು, ಗತ್ವಾ- ಹೋಗಿ, ರೋಷಾತ್-ಕೋಪದಿಂದ, ಪೃಥಿವೀಂ-ಭೂಮಿಯನ್ನು, ಅಭ್ಯಖನರ್-ಅಗೆದರು ||೨೩|| ಮಹಾತ್ಮಾನಃ-ಮಹಾನುಭಾವರಾದ, ಮಹಾಬಲಾಃ ಮಹಾಬಲವಂತರಾದ,ತೇಸರ್ವೇ-ಅವರೆಲ್ಲರೂ,

---

ಸ್ಕಾರವಂಗೈದು, ಕುಶಲಪ್ರಶ್ನೆಯನ್ನು ಮಾಡಿ, ಉತ್ತರದಿಶೆಯನ್ನು ಭೇದಿಸಿ, ಅಲ್ಲಿ ಹಿಮದಂತೆ ಶ್ವೇತವರ್ಣವಾಗಿಯೂ, ಮಂಗಳಕರವಾಗಿಯೂ, ಮಂಗಳಕರವಾದ ಶರೀರದಿಂದ ಭೂಮಿಯನ್ನು ಧರಿಸಿರುವದಾಗಿಯೂ ಇರುವ ಭದ್ರವೆಂಬ ದಿಗ್ದಂತಿಯನ್ನು ಕಂಡರು. ಇಂತು ಕಂಡ ಅವರೆಲ್ಲರೂ ಆ ಗಜವನ್ನು ಪ್ರದಕ್ಷಿಣವಂಗೈದು ವಂದಿಸಿ ಮತ್ತೂ ಭೂಮಿಯನ್ನು ಭೇದಿಸಿದರು. ||೧೭-೨೨|| ಅಯ್ಯಾ ರಾಮಚಂದ್ರನೆ! ಆ ಬಳಿಕಲಾ ಸಗರನಂದನರು ಪ್ರಸಿದ್ಧವಾದ ಉತ್ತರ ದಿಶೆಯಲ್ಲಿನ ಭೂಮಿಯನ್ನು ಬಹು ರೋಷದಿಂದ ಅಗೆದು, ಅಲ್ಲಿಯೇ ಸನಾತನನಾಗಿಯೂ, ಕಪಿಲ ರೂಪಧಾರಿಯಾಗಿಯೂ ಇರುವ ಶ್ರೀಮನ್ನಾರಾಯಣ ಮೂರ್ತಿಯನ್ನೂ, ಆತನ ಬಳಿಯಲ್ಲಿಯೇ ಹುಲ್ಲು ಮೇಯುತ್ತಿದ್ದ ಯಜ್ಞೀಯಾಶ್ವ

ಬಲಾಃ ||೨೪|| ದದೃಶುಃ ಕಪಿಲಂ ತತ್ರ ವಾಸುದೇವಂ ಸನಾತನಂ || ಹಯಂಚ ತಸ್ಯದೇವಸ್ಯ ಚರಂತಮವಿದೂರತಃ || ೨೫ || ಪ್ರಹರ್ಷಮತುಲಂ ಪ್ರಾಪ್ತಾ ಸ್ಸರ್ವೇ ತೇ ರಘುನಂದನ || ತೇ ತಂ ಹಯಹರಂ ಜ್ಞಾತ್ವಾ ಕ್ರೋಧಪರ್ಯಾಕುಲೇಕ್ಷಣಾಃ ||೨೬|| ಖನಿತ್ರಲಾಂಗಲಧರಾ ನಾನಾವೃಕ್ಷಶಿಲಾಧರಾಃ|| ಅಭ್ಯಧಾವಂತ ಸಂಕ್ರುದ್ಧಾ ಸ್ತಿಷ್ಠತಿಷ್ಠೇತಿ ಚಾಬ್ರುವನ್ ||೨೭|| ಅಸ್ಮಾಕಂ ತ್ವಂಹಿತುರಗಂ ಯಜ್ಞೀಯಂ ಹೃತವಾನಸಿ || ದುರ್ಮೇಧಸ್ತ್ವಂಹಿ ಸಂಪ್ರಾಪ್ತಾನ್ ವಿದ್ಧಿನ ಸ್ಸಗರಾತ್ಮಜಾನ್ || ೨೮ || ಶ್ರುತ್ವಾತು ವಚನಂ ತೇಷಾಂ ಕಪಿಲೋ ರಘು

---

ಭೀಮವೇಗಾಃ-ಭಯಂಕರವಾದ ವೇಗವುಳ್ಳವರಾಗಿ, ತತ್ರ-ಆ ಪಾತಾಳದಲ್ಲಿ, ಸನಾತನಂ-ಅನಾದಿಸಿದ್ಧನಾದ, ಕಪಿಲಂ-ಕಪಿಲರೂಪಧಾರಿಯಾದ, ವಾಸುದೇವಂ-ಶ್ರೀಮಹಾವಿಷ್ಣುವನ್ನು, ದದೃಶುಃ-ಕಂಡರು. || ೨೪ || ಹೇರಘುನಂದನ-ಎಲೈ ರಘುನಂದನನೆ, ತೇಸರ್ವೇ - ಅವರೆಲ್ಲರೂ, ತಸ್ಯದೇವಸ್ಯ-ಆ ವಾಸುದೇವನ, ಅವಿದೂರತಃ - ಸಮೀಪದಲ್ಲಿ, ( ಮು ) ಚರಂತಂ - ಸಂಚಾರಮಾಡುತ್ತಿರುವ, ಹಯಂಚ-ಕುದುರೆಯನ್ನೂ (ಗೋ)ಯದ್ವಾ ಚರಂತಂ-ಹುಲ್ಲು ಮೇಯುತ್ತಿರುವ,ಹಯಂಚ-ಅಶ್ವವನ್ನೂ, ದೃಷ್ಟ್ವಾ-ಕಂಡು, ಅತುಲಂ ಸಮಾನವಿಲ್ಲದ, ಪ್ರಹರ್ಷಂ-ಸಂತೋಷವನ್ನು, ಪ್ರಾಪ್ತಾ-ಹೊಂದಿದರು. ||೨೫|| ತೇ-ಆ ಸಗರರಾಯನ ಮಕ್ಕಳು, ತಂ-ಆ ಕಪಿಲ ಮಹಾಮುನಿಯನ್ನು, ಹಯಹರಂ-ಕುದುರೆಗಳ್ಳನೆಂದು, ಜ್ಞಾತ್ವಾ-ತಿಳಿದು, ಕ್ರೋಧಪರ್ಯಾಕುಲೇಕ್ಷಣಾಃ- ಕೋಪದಿಂದ ಕೆಂಪೂಗಿವ ಕಣ್ಗಳುಳ್ಳವರಾಗಿ, ಖನಿತ್ರಲಾಂಗಲಧರಾಃ- ಗುದ್ದಲಿಗಳನ್ನೂ ನೇಗಿಲುಗಳನ್ನೂ ಧರಿಸಿ, ನಾನಾವೃಕ್ಷಶಿಲಾಧರಾಃ- ಅನೇಕ ಬಗೆಯ ಗಿಡಗಳನ್ನೂ, ಕಲ್ಲುಗಳನ್ನೂ ಧರಿಸಿ, ಸಂಕ್ರುದ್ಧಾಃ - ಕೋಪಗೊಂಡು, ತಿಷ್ಠತಿಷ್ಠೇತಿಚ-ನಿಲ್ಲುನಿಲ್ಲೆಂದು, ಅಬ್ರುವನ್-ನುಡಿಯುತ್ತ,ಅಭ್ಯಧಾವಂತ-ಓಡಿದರು. ||೨೭|| ಹೇದುರ್ಮೇಧಃ-ಎಲೈ ದುರ್ಬುದ್ಧಿಯುಳ್ಳವನೆ, ತ್ವಂ-ನೀನು, ಅಸ್ಮಾಕಂ-ನಮ್ಮ, ಯಜ್ಞೀಯಂ- ಯಜ್ಞಸಂಬಂಧವಾದ-ತುರಗಂ-ಕುದುರೆಯನ್ನು, ಹೃತವಾನ್-ಅಪಹರಿಸಿದವನು, ಅಸಿ-ಆಗಿರುವೆಯೋ, ತಸ್ಮಾತ್-ಆಕಾರಣ, ಸಂಪ್ರಾಪ್ತಾನ್-ಬಂದಿರುವ,ನಃ-ನಮ್ಮನ್ನು. ಸಗರಾತ್ಮಜಾನ್-ಸಗರಚಕ್ರವರ್ತಿಯ ಪುತ್ರರೆಂದು, ವಿದ್ಧಿ-ತಿಳಿ, ಹೇರಘುನಂದನ-ಎಲೈ ಶ್ರೀರಾಮನೆ, ಕಪಿಲಃ-ಕಪಿಲಋಷಿಯು, ತೇಷಾಂ - ಅವರ, ವಚನಂ--ಮಾತನ್ನು, ಶೃತ್ವಾ-ಕೇಳಿ, ಮಹತಾ-ಬಹಳವಾದ, ರೋಷೇಣ-ಕೋಪದಿಂದ, ಅಪಿಷ್ಟಃ - ವ್ಯಾಪ್ತ

---

ವನ್ನೂ ಕಂಡು ಬಹಳವಾದ ಸಂತಸವಂ ಹೊಂದಿದರು. ||೨೪-೨೫|| ಇಂತು ಕಂಡ ಆ ಸಗರ ರಾಯನ ಅರವತ್ತು ಸಾವಿರ ಮಕ್ಕಳೂ, ಆ ಕುದುರೆಯನ್ನು ಅಪಹರಿಸಿದವನು ಕಪಿಲ ಮಹರ್ಷಿಯೇ ಎಂದು ತಿಳಿದು, ಬಹಳವಾದ ಕೋಪದಿಂದಾವೃತವಾದ ಕಂಗಳುಳ್ಳವರಾಗಿ, ಗುದ್ದಲಿಗಳನ್ನೂ, ನೇಗಿಲುಗಳನ್ನೂ, ಬಹುವಿಧವಾದ ವೃಕ್ಷಗಳನ್ನೂ,ಶಿಲೆಗಳನ್ನೂ ತೆಗೆದುಕೊಂಡು ನಿಲ್ಲುನಿಲ್ಲೆಂದು ಆರ್ಭಟಿಸುತ್ತ ಅವನ ಬಳಿಸಾರಿ ಹೀಗೆಂದರು. ||೨೬-೨೭|| ''ಎಲೈ ದುರ್ಬುದ್ಧಿಯುಳ್ಳವನೆ! ನಮ್ಮ ಯಜ್ಞಾಶ್ವವನ್ನು ಅಪಹರಿಸಿದವನು ನೀನೆ! ನಾವಾರೆಂದು

ನಂದನ || ರೋಷೇಣ ಮಹತಾವಿಷ್ಟೋ ಹುಂಕಾರ ಮಕರೋತ್ತದಾ ||೨೯||
ತತಸ್ತೇನಾಪ್ರಮೇಯೇನ ಕಪಿಲೇನ ಮಹಾತ್ಮನಾ || ಭಸ್ಮರಾಶೀಕೃತಾ ಸ್ಸರ್ವೇ
ಕಾಕುತ್ಥ್ಸ ಸಗರಾತ್ಮಜಾಃ || ೩೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತ್ವಾರಿಂಶಸ್ಸರ್ಗಃ.

---

ನಾಗಿ, ತದಾ-ಆಗ, ಹುಂಕಾರಂ-ಹುಂಕಾರವನ್ನು, ಅಕರೋತ್-ಮಾಡಿದನು. || ೨೯ || ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ತತಃ-ಬಳಿಕ, ಸರ್ವೇ-ಸಮಸ್ತರಾದ, ಸಗರಾತ್ಮಜಾಃ-ಸಗರಚಕ್ರವರ್ತಿಯ ಮಕ್ಕಳು, ಅಪ್ರಮೇಯೇನ - ಅಪಾರವಾದ ಮಾಹಾತ್ಮ್ಯವುಳ್ಳ, ಮಹಾತ್ಮನಾ - ಮಹಾನುಭಾವನಾದ, ತೇನಕಪಿಲೇನ-ಆ ಕಪಿಲ ಮಹಾಮುನಿಯಿಂದ, ಭಸ್ಮರಾಶೀಕೃತಾಃ-ಭಸ್ಮರಾಶಿಯಾಗಿ ಮಾಡಲ್ಪಟ್ಟರು. || ೩೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತ್ವಾರಿಂಶಸ್ಸರ್ಗಃ.

---

ತಿಳಿದಿರುವೆ ! ನಾವು ಸಗರ ಚಕ್ರವರ್ತಿಯ ಕುಮಾರರೆಂದು ತಿಳಿಯುವವನಾಗು" ಎಂದು ಆರ್ಭಟಿಸಿದರು. || ೨೮ || ಇಂತೆನಲಾ ಕಪಿಲ ರೂಪನಾದ ಮಹಾ ವಿಷ್ಣುವು ಮಹಾ ಕೋಪದಿಂದೊಡಗೂಡಿ ಹುಂಕಾರವನ್ನು ಮಾಡಿದನು ರಾಮಚಂದ್ರ ! ಈ ಕಪಿಲಋಷಿಯ ಹುಂಕಾರ ಮಾತ್ರದಿಂದಲೇ ಕಕುಸ್ಥ ವಂಶೋತ್ಪನ್ನನಾದ ಆ ಸಗರನ ಅರವತ್ತು ಸಾವಿರ ಮಂದಿ ಮಕ್ಕಳೂ ಭಸ್ಮವಾಗಿ ಹೋದರು. || ೨೯ ೩೦ ||

ಇಂತಿದು ಸಾಗರರ ಪರಿಣಾಮ ಕಥನವೆಂಬ ನಲವತ್ತನೆಯ ಸರ್ಗವು
ಸ ಮಾ ಪ್ತ ವಾ ದು ದು.

—(***)—

# ಬಾಲಕಾಂಡೇ ಏಕಚತ್ವಾರಿಂಶಸ್ಸರ್ಗಃ.

---

ಪುತ್ರಾಂಶ್ಚಿರಗತಾ‌ಞ್ ಜ್ಞಾತ್ವಾ ಸಗರೋ ರಘುನಂದನ ॥ ನಪ್ತಾರಮಬ್ರವೀ
ದ್ರಾಜಾ ದೀಪ್ಯಮಾನಂ ಸ್ವತೇಜಸಾ ॥ ೧ ॥ ಶೂರಶ್ಚ ಕೃತವಿದ್ಯಶ್ಚ
ಪೂರ್ವೈಸ್ತುಲ್ಯೋಸಿ ತೇಜಸಾ ॥ ಪಿತೄಣಾಂ ಗತಿಮನ್ವಿಚ್ಛ ಯೇನಚಾಶ್ವೋ
ಪವಾಹಿತಃ ॥ ೨ ॥ ಅಂತರ್ಭೌಮಾನಿ ಸತ್ವಾನಿ ವೀರ್ಯವಂತಿ ಮಹಾಂ
ತಿಚ ॥ ತೇಷಾಂ ತ್ವಂ ಪ್ರತಿಘಾತಾರ್ಥಂ ಸಾಸಿಂ ಗೃಹ್ಣೀಷ್ವ ಕಾರ್ಮುಕಂ ॥೩॥
ಅಭಿವಾದ್ಯಾಭಿವಾದ್ಯಾಂಸ್ತ್ವಂ ಹತ್ವಾ ವಿಘ್ನಕರಾನಪಿ ॥ ಸಿದ್ಧಾರ್ಥಸ್ಸನ್ನಿವರ್ತಸ್ವ

---

ಹೇರಘುನಂದನ ಎಲೈರಾಮನೇ, ಸಗರಃ-ಸಗರನೆಂಬ, ರಾಜಾ-ಅರಸು, ಚಿರಗತಾನ್-ಬಹು ಕಾಲವಾದರೂ ಬಾರದೇ ಇರುವ, ಪುತ್ರಾನ್ - ಮಕ್ಕಳನ್ನು, ಜ್ಞಾತ್ವಾ - ತಿಳಿದು, ಸ್ವತೇಜಸಾ-ಸ್ವಪ್ರತಾಪದಿಂದ, ದೀಪ್ಯಮಾನಂ-ಹೊಳೆಯುತ್ತಿರುವ, ನಪ್ತಾರಂ ಮಮ್ಮಗನಾದ ಅಂಶುಮಂತನನ್ನು ಕುರಿತು ಅಬ್ರವೀತ್ ನುಡಿದನು. ॥ ೧ ॥ ತ್ವಂ-ನೀನು, ಶೂರಶ್ಚ-ಶೂರನು, ಕೃತವಿದ್ಯಶ್ಚ-ವಿದ್ಯಾವಂತನೂ, ತೇಜಸಾ-ಪರಾಕ್ರಮದಿಂದ, ಪೂರ್ವೈಃ-ಪೂರ್ವಿಕರೊಡನೆ, ತುಲ್ಯಃ - ಸಮಾನನು, ಅಸಿ-ಆಗಿರುವೆ, ಪಿತೄಣಾಂ-ಚಿಕ್ಕ ತಂದೆಗಳ,ಗತಿಂ-ಮಾರ್ಗವನ್ನು, ಅನ್ವಿಚ್ಛ-ಹುಡುಕು, ಯೇನ-ಯಾವನಿಂದ, ಅಶ್ವಶ್ಚ-ಅಶ್ವವೂ, ಅಪವಾಹಿತಃ- ದೇಶಾಂತರಕ್ಕೆಕೊಂಡು ಹೋಗಲ್ಪಟ್ಟಿತೋ, ತಸ್ಯ-ಅವನ, ಗತಿಂಚ-ಮಾರ್ಗವನ್ನೂ, ಅನ್ವಿಚ್ಛ-ಹುಡುಕು. ॥೨॥ ಅಂತರ್ಭೌಮಾನಿ-ಭೂ ಗರ್ಭದಲ್ಲಿರುವ, ವೀರ್ಯವಂತಿ ಸಾಮರ್ಥ್ಯವುಳ್ಳ, ಸತ್ವಾನಿ-ಜಂತುಗಳು, ಮಹಾಂತಿಚ-ದೊಡ್ಡದಾದುದು, ಯಾನಿ- ಯಾವ ಜಂತುಗಳುಂಟೋ, ತೇಷಾಂ-ಅವುಗಳ, ಪ್ರತಿಘಾತಾರ್ಥಂ- ದಂಡನಿಮಿತ್ತ, ತ್ವಂ-ನೀನು, ಸಾಸಿಂ-ಖಡ್ಗದಿಂದೊಡಗೂಡಿದ, ಕಾರ್ಮುಕಂ ಧನುಸ್ಸನ್ನು, ಗೃಹ್ಣೀಷ್ವ- ತೆಗದುಕೊ ॥ ೩ ॥ ತ್ವಂ-ನೀನು-ಅಭಿವಾದ್ಯಾನ್-ನಮಸ್ಕಾರಾರ್ಹರನ್ನು,ಅಭಿವಾದ್ಯ-ನಮಸ್ಕರಿಸಿ, ವಿಘ್ನಕರಾನಪಿ-ವಿಘ್ನಕಾರಿಗಳನ್ನೂ, ಹತ್ವಾ-ಹೊಡೆದು, ಸಿದ್ಧಾರ್ಥಃ-ಕೃತಕಾರ್ಯನಾಗಿ, ಮಮ - ನನ್ನ, ಯಜ್ಞಸ್ಯ-ಯಜ್ಞದ, ಪಾರಗಃ-

---

ಎಲೈ ರಘುನಂದನನೆ ! ಇತ್ತ ಸಗರ ರಾಯನು ಬಹಳ ದಿನಗಳಾದರೂ ಹಿಂತಿರುಗಿ ಬರದಿರುವ ಪುತ್ರರನ್ನು ತಿಳಿದು, ಸಂತಾಪಗೊಂಡು ಪೌತ್ರನಾದ ಅಂಶುಮಂತನನ್ನು ಕುರಿತು, " ಎಲೈ ಕುಮಾರನೆ ! ನೀನು ಶೂರನೂ, ಜ್ಞಾನಿಯೂ, ನಮ್ಮ ಪೂರ್ವಿಕರಿಗೆ ಸಮಾನವಾದ ತೇಜಸ್ಸುಳ್ಳವನೂ ಆಗಿರುವೆ. ಆದುದರಿಂದ ಪಿತೃಗಳ ಗತಿಯನ್ನು, ಅಶ್ವಾಪಹಾರಕನನ್ನೂ ಹುಡುಕುವವನಾಗು. ॥ ೨ ॥ ಭೂಗರ್ಭದಲ್ಲಿ ಜಂತುಗಳು ಮಹಾ ಭುಜಬಲಶಾಲಿಗಳಾಗಿಯೂ, ದೊಡ್ಡವುಗಳಾಗಿಯೂ ಇರುವವು. ಈ ಉಗ್ರಜಂತುಗಳನ್ನು ವಧಿಸಬೋಸುಗ ನೀನು ಖಡ್ಗದಿಂದೊಡಗೂಡಿದ ಧನುಸ್ಸನ್ನು ಧರಿಸಿ, ಯಜ್ಞಕ್ಕೆ ವಿಘ್ನವನ್ನಾಚರಿಸುವವರನ್ನು ಸದೆಬಡಿದು, ಪೂಜ್ಯರನ್ನು ಪೂಜಿಸಿ, ಯಜ್ಞವನ್ನು ಪೂರ್ಣಗೊಳಿಸಲು

ಮಮುಯಜ್ಞಸ್ಯ ಪಾರಗಃ ॥ ೪ ॥ ಏವಮುಕ್ತೋಂಽಶುಮಾನ್ ಸಮ್ಯಕ್ ಸಗರೇಣ ಮಹಾತ್ಮನಾ॥ಧನುರಾದಾಯ ಖಡ್ಗಂಚ ಜಗಾಮ ಲಘುವಿಕ್ರಮಃ ॥೫॥ ಸ ಖಾತಂ ಪಿತೃಭಿರ್ಮಾರ್ಗಮಂತರ್ಭೌಮಂ ಮಹಾತ್ಮಭಿಃ ॥ ಪ್ರಾಪದ್ಯತ ನರಶ್ರೇಷ್ಠ ತೇನ ರಾಜ್ಞಾಭಿಚೋದಿತಃ ॥ ೬ ॥ ದೈತ್ಯದಾನವರಕ್ಷೋಭಿಃ ಪಿಶಾಚ ಪತಗೋರಗೈಃ ॥ ಪೂಜ್ಯಮಾನಂ ಮಹಾತೇಜಾ ದಿಶಾಗಜಮಪಶ್ಯತ ॥೭॥ ಸ ತಂ ಪ್ರದಕ್ಷಿಣಂ ಕೃತ್ವಾ ಪೃಷ್ಟ್ವಾಚಾಪಿ ನಿರಾಮಯಂ ॥ ಪಿತೄನ್ ಸಪರಿಪಪ್ರಚ್ಛ ವಾಜಿಹರ್ತಾರ ಮೇವಚ ॥ ೮ ॥ ದಿಶಾಗಜಸ್ತು ತಚ್ಛ್ರುತ್ವಾ ಪ್ರತ್ಯಾಹಾಂಶುಮತೋವಚಃ ॥ ಅಸಮಂಜ ಕೃತಾರ್ಥಸ್ತ್ವಂ

---

ಪಾರವನ್ನು ಹೊಂದಿಸುವವನಾಗಿ, ಸನ್ನಿವರ್ತಸ್ವ-ಹಿಂತಿರಗು ॥ ೪ ॥ ಏವಂ-ಹೀಗೆ, ಮಹಾತ್ಮನಾ ಮಹಾತ್ಮನಾದ, ಸಗರೇಣ ಸಗರರಾಯನಿಂದ, ಸಮ್ಯಕ್-ಚನ್ನಾಗಿ, ಉಕ್ತಃ-ಹೇಳಲ್ಪಟ್ಟ, ಲಘುವಿಕ್ರಮಃ-ಮಹಾಪರಾಕ್ರಮನಾದ, ಅಂಶುಮಾನ್-ಅಂಶುಮಂತನು, ಧನುಃ - ಧನುಸ್ಸನ್ನೂ, ಖಡ್ಗಂಚ -ಕತ್ತಿಯನ್ನೂ, ಆದಾಯ - ತೆಗದುಕೊಂಡು, ಜಗಾಮ - ಹೊರಟನು. ॥ ೫ ॥ ಹೇನರಶ್ರೇಷ್ಠ ಎಲೈ ಪುರುಷಶ್ರೇಷ್ಠನೆ, ಸಃ - ಆ ಅಂಶುಮಂತನು, ತೇನರಾಜ್ಞಾ - ಆ ಸಗರರಾಯನಿಂದ, ಅಭಿಚೋದಿತಃ - ಪ್ರೇರಿತನಾಗಿ, ಮಹಾತ್ಮಭಿಃ - ಮಹಾ ಧೈರ್ಯಶಾಲಿಗಳಾದ, ಪಿತೃಭಿಃ - ತಂದೆಗಳಿಂದ, ಖಾತಂ - ಅಗೆಯಲ್ಪಟ್ಟ ಅಂತರ್ಭೌಮಂ - ಭೂಮಿಯ ಬಿಲದಲ್ಲಿ ಕಂಡುಬಂದ; ಮಾರ್ಗಂ - ದಾರಿಯನ್ನು ಪ್ರಾಪದ್ಯತ - ಹೊಂದಿದನು. ॥ ೬ ॥ ಮಹಾತೇಜಾಃ - ಮಹಾಪರಾಕ್ರಮಶಾಲಿಯಾದ ಅಂಶುಮಂತನು,ದೈತ್ಯದಾನವರಕ್ಷೋಭಿಃ-ದೈತ್ಯ,ದಾನವ, ರಾಕ್ಷಸರಿಂದಲೂ, ಪಿಶಾಚಪತಗೋರಗೈಃ - ಪಿಶಾಚ, ಪಕ್ಷಿ, ಸರ್ಪಗಳಿಂದಲೂ, ಪೂಜ್ಯಮಾನಂ- ಪೂಜಿಮಾಡಲ್ಪಟ್ಟ, ದಿಶಾಗಜಂ ದಿಗ್ಗಜವನ್ನು, ಅಪಶ್ಯತ - ಕಂಡನು. ॥ ಸಃ - ಆ ಅಂಶುಮಂತನು, ತಂ - ದಿಗ್ಗಜವನ್ನು ಪ್ರದಕ್ಷಿಣಂ - ಪ್ರದಕ್ಷಿಣವನ್ನು. ಕೃತ್ವಾ - ಮಾಡಿ, ನಿರಾಮಯಂಚಾಪಿ - ಕುಶಲವನ್ನೂ, ಪೃಷ್ಟ್ವಾ - ಕೇಳಿ, ಪಿತೄನ್ - ತಂದೆಗಳ ವಿಷಯವನ್ನು, ಪರಿಪಪ್ರಚ್ಛ - ಕೇಳಿದನು, ವಾಜಿಹರ್ತಾರಮೇವಚ - ಅಶ್ವಾಪಹಾರಿಯನ್ನೂ, ಪರಿಪಪ್ರಚ್ಛ - ಕೇಳಿದನು. ॥ ೮ ॥ ದಿಶಾಗಜಸ್ತು - ದಿಗ್ಗಜವಾದರೆ, ಅಂಶುಮಂತಃ - ಅಂಶುಮಂತನ, ತದ್ವಚಃ - ಆ ಮಾತನ್ನು, ಶ್ರುತ್ವಾ-

---

ಕೃತಕಾರ್ಯನಾಗಿ ಹಿಂತಿರುಗುವವನಾಗು' ಇಂತು ಮಹಾತ್ಮನಾದ ಸಗರರಾಯನಿಂದ ಆಜ್ಞಾಪಿತನಾದ ಅಂಶುಮಂತನು ಬಾಣಬತ್ತಳಿಕೆಯನ್ನೂ, ಖಡ್ಗವನ್ನೂ ಧರಿಸಿ ಹೊರಟು ಪಿತೃಗಳಿಂದ ಕೊಡಲ್ಪಟ್ಟ ಭೂಮಿಯ ಸುರಂಗಮಾರ್ಗವನ್ನು ಹೊಂದಿದನು. ॥೬ ದೈತ್ಯ, ದಾನವ, ಪಿಶಾಚ, ರಾಕ್ಷಸ, ಖಗ, ನಾಗಗಳಿಂದ ಪೂಜಿತನಾದ ದಿಗ್ಗಜವನ್ನು ಕಂಡು, ಅದನ್ನು ಪ್ರದಕ್ಷಿಣ ಪೂರ್ವಕವಾಗಿ ನಮಸ್ಕರಿಸಿ, ಕುಶಲಪ್ರಶ್ನೆಯಂ ಗೈದು, ತನ್ನ ಪಿತೃಗಳ ಮತ್ತು ಅಶ್ವಾಪಹಾರಕನ ವಿಷಯವಾಗಿ ಪ್ರಶ್ನಿಸಿದನು. ॥ ೮ ॥ ಇಂತು ನುಡಿದ ಅಂಶುಮಂತನ ನುಡಿಗಳನ್ನು ಕೇಳಿ, ಆ ದಿಗ್ಗಜವು, ಎಲೈ ಅಂಶುಮಂತನೆ ! ನೀನು ಕೃತಕಾರ್ಯ

ಸಹಾಶ್ವಶ್ಶೀಘ್ರಮೇಷ್ಯಸಿ ‖ ೯ ‖ ತಸ್ಯ ತದ್ವಚನಂ ಶ್ರುತ್ವಾ ಸರ್ವಾನೇವ ದಿಶಾಗಜಾನ್ ‖ ಯಥಾಕ್ರಮಂ ಯಥಾನ್ಯಾಯಂ ಪ್ರಷ್ಟುಂ ಸಮುಪಚಕ್ರಮೇ ‖ ೧೦ ‖ ತೈಶ್ಚ ಸರ್ವೈರ್ದಿಶಾಪಾಲೈರ್ವಾಕ್ಯಜ್ಞೈರ್ವಾಕ್ಯಕೋವಿದೈಃ ‖ ಪೂಜಿತಸ್ಸಹಯಶ್ಚೈವ ಗಂತಾಸೀತ್ಯಭಿಚೋದಿತಃ ‖ ೧೧ ‖ ತೇಷಾಂ ತದ್ವಚನಂ ಶ್ರುತ್ವಾ ಜಗಾಮ ಲಘುವಿಕ್ರಮಃ ‖ ಭಸ್ಮರಾಶೀಕೃತಾ ಯತ್ರ ಪಿತರಸ್ತಸ್ಯ ಸಾಗರಾಃ ‖ ೧೨ ‖ ಸ ದುಃಖವಶಮಾಪನ್ನಸ್ತ್ವಸಮಂಜ ಸುತಸ್ತದಾ ‖ ಚುಕ್ರೋಶ ಪರಮಾರ್ತಸ್ತು ವಧಾತ್ತೇಷಾಂ

---

ಕೇಳಿ, ಹೇಅಸಮಂಜ - ಅಸಮಂಜ ಕುಮಾರನೆ, ತ್ವಂ - ನೀನು, ಕೃತಾರ್ಥಃ - ಕೃತಕಾರ್ಯನಾಗಿ, ಸಹಾಶ್ವಃ - ಅಶ್ವದಿಂದೊಡಗೂಡಿ, ಶೀಘ್ರಮೇವ - ಜಾಗ್ರತೆಯಾಗಿ, ಏಷ್ಯಸಿ- ಬರುವೆ ‖ ೯ ‖ ತಸ್ಯ – ಆ ದಿಗ್ಗಜದ, ತದ್ವಚನಂ - ಆ ಮಾತನ್ನು, ಶ್ರುತ್ವಾ – ಕೇಳಿ, ಸರ್ವಾನ್ - ಸಮಸ್ತ, ದಿಶಾಗಜಾನ್ - ದಿಗ್ಗಜಗಳನ್ನು, ಯಥಾಕ್ರಮಂ - ಕ್ರಮವಾಗಿ, ಯಥಾನ್ಯಾಯಂ - ಶಾಸ್ತ್ರಾನುಸಾರ, ಪ್ರಷ್ಟುಂ - ಪ್ರಶ್ನಿಸಲು, ಸಮುಪಚಕ್ರಮೇ - ಉಪಕ್ರಮಿಸಿದನು. ‖ ೧೦ ‖ ವಾಕ್ಯಜ್ಞೈಃ - ಪರವಾಕ್ಯಾಭಿಪ್ರಾಯವನ್ನು ತಿಳಿದಿರುವ, ವಾಕ್ಯಕೋವಿದೈಃ - ಹೇಳಬೇಕಾದುದನ್ನು ತಿಳಿದಿರುವ, ದಿಶಾಪಾಲೈಃ – ದಿಕ್ಪಾಲಕಗಳಾದ, ಸರ್ವೈಃ - ಸಮಸ್ತ, ತೈಃ – ಆ ದಿಗ್ಗಜಗಳಿಂದ, ಪೂಜಿತಃ- ಪೂಜಿಸಲ್ಪಟ್ಟು, ಸಹಯಶ್ಚೈವ – ಅಶ್ವದಿಂದೊಡಗೂಡಿ, ಗಂತಾಸೀತಿ - ಹೋಗುವೆಯೆಂದು, ಅಭಿಚೋದಿತಃ - ಹೇಳಲ್ಪಟ್ಟನು. ‖ ೧೧ ‖ ತೇಷಾಂ – ಆ ದಿಗ್ಗಜಗಳ, ತದ್ವಚನಂ – ಆ ಮಾತನ್ನು, ಶ್ರುತ್ವಾ - ಕೇಳಿ, ಲಘುವಿಕ್ರಮಃ - ಶೀಘ್ರಗಮನವುಳ್ಳ ಅಂಶುಮಂತನು, ಯತ್ರ – ಯಾವ ಸ್ಥಳದಲ್ಲಿ ತಸ್ಯ - ಅವನ, ಪಿತರಃ - ತಂದೆಗಳಾದ, ಸಾಗರಾಃ - ಸಗರ ಪುತ್ರರು. ಭಸ್ಮರಾಶೀಕೃತಾಃ - ಭಸ್ಮರಾಶಿಯಾಗಿ ಮಾಡಲ್ಪಟ್ಟಿದ್ದರೋ, ತತ್ರ - ಆ ಸ್ಥಳಕ್ಕೆ, ಜಗಾಮ - ತೆರಳಿದನು. ‖೧೨‖ ಸಃ ಅಸಮಂಜಸುತಃ - ಆ ಅಸಮಂಜನ ಕುವರನಾದ ಅಂಶುಮಂತನು, ತದಾ - ಆಗ, ತೇಷಾಂ-ಅವರ, ವಧಾತ್- ಸಂಹಾರದಿಂದ, ಸುದುಃಖಿತಃ - ಬಹಳವಾಗಿ ಖಿತಿಗೊಂಡು, ದುಃಖವಶಂ-ದುಃಖಾಧೀನತೆಯನ್ನು, ಆಪನ್ನಃ - ಹೊಂದಿ, ಪರಮಾರ್ತಸ್ತು - ಬಹಳ ದೈನ್ಯವುಳ್ಳವನಾಗಿ, ಚುಕ್ರೋಶ-ಅತ್ತನು.

---

ನಾಗಿ ಅಶ್ವದೊಡನೆ ಹಿಂತಿರುಗುವೆ, ಎಂದಿತು. ಇಂತೆಂದ ಆ ಗಜದ ಮಾತುಗಳನ್ನು ಕೇಳಿ, ಆ ಅಂಶುಮಂತನು ಎಲ್ಲ ದಿಗ್ಗಜಗಳನ್ನೂ ಯೋಗ್ಯಾನುಸಾರವಾಗಿ ಗೌರವಿಸಿ, ಪಿತೃಗಳ ಮತ್ತು ಯಜ್ಞಾಶ್ವದ ವಿಚಾರವಾಗಿ ಕೇಳಿದನು. ‖ ೧೦ ‖ ಆ ಬಳಿಕ ಮಾತುಗಳನ್ನು ಬಲ್ಲವುಗಳಾಗಿಯೂ, ಮಾತನಾಡುವುದರಲ್ಲಿ ಕುಶಲಗಳಾಗಿಯೂ ಇರುವ ಆ ದಿಗ್ಗಜಗಳಿಂದಲೂ, ಅಶ್ವವನ್ನು ಹೊಂದಿ ಹೋಗುವೆಯೆಂದು ಹೇಳಲ್ಪಟ್ಟು, ಗೌರವಿತನಾದನು. ಈ ದಿಗ್ಗಜಗಳ ನುಡಿಗಳನ್ನು ಕೇಳಿದ ಮಹಾ ಪರಾಕ್ರಮಿಯಾದ ಅಂಶುಮಂತನು ಸಗರ ಚಕ್ರವರ್ತಿಯ ಅರುವತ್ತು ಸಾವಿರ ಮಂದಿ ಕುವರರು ಭಸ್ಮವಾಗಿದ್ದೆಡೆಗೆ ಹೋದನು. ಅಲ್ಲಿಗಿಂತು ಹೋದೊಡನೆಯೇ ಭಸ್ಮಭೂತರಾಗಿದ್ದ ತನ್ನ ಪಿತೃಗಳನ್ನು ನೋಡಿ, ಬಹುವಾದ

ಸುದುಃಖಿತಃ ||೧೩|| ಯಜ್ಞೀಯಂಚ ಹಯಂ ತತ್ರ ಚರಂತಮವಿದೂರತಃ ||
ದದರ್ಶ ಪುರುಷವ್ಯಾಘ್ರೋ ದುಃಖಶೋಕ ಸಮನ್ವಿತಃ ||೧೪|| ಸ ತೇಷಾಂ
ರಾಜಪುತ್ರಾಣಾಂ ಕರ್ತುಕಾಮೋ ಜಲಕ್ರಿಯಾಂ || ಸಲಿಲಾರ್ಥೀ ಮಹಾ
ತೇಜಾ ನಚಾಪಶ್ಯ ಜ್ಜಲಾಶಯಂ||೧೫|| ವಿಸಾರ್ಯ ನಿಪುಣಾಂ ದೃಷ್ಟಿಂ ತತೋ
ಪಶ್ಯತ್ಖಗಾಧಿಪಂ || ಪಿತೄಣಾಂ ಮಾತುಲಂ ರಾಮ ಸುಪರ್ಣಮನಿಲೋ
ಪಮಂ ||೧೬|| ಸಚೈನಮಬ್ರವೀದ್ವಾಕ್ಯಂ ವೈನತೇಯೋ ಮಹಾಬಲಃ ||
ಮಾಶುಚಃ ಪುರುಷವ್ಯಾಘ್ರ ವಧೋಯಂ ಲೋಕಸಮ್ಮತಃ ||೧೭|| ಕಪಿ
ಲೇನಾಪ್ರಮೇಯೇನ ದಗ್ಧಾಹೀಮೇ ಮಹಾಬಲಾಃ || ಸಲಿಲಂ ನಾರ್ಹಸಿ

||೧೩|| ತತ್ರ-ಅಲ್ಲಿ, ಅವಿದೂರತಃ - ಸಮೀಪದಲ್ಲಿ, ಚರಂತಂ - ಸಂಚರಿಸುತ್ತಿರುವ, ಯಜ್ಞೀಯಂ-ಯಜ್ಞದಲ್ಲಿ ಅಭಿಮಂತ್ರಿತವಾದ, ಹಯಂಚ - ಅಶ್ವವನ್ನು, ಪುರುಷವ್ಯಾಘ್ರಃ - ಪುರುಷಶ್ರೇಷ್ಠನಾದ ಅಂಶುಮಂತನು, ದುಃಖಶೋಕಸಮನ್ವಿತಃ-ದುಃಖದಿಂದಲೂ, ವಿಲಾಪದಿಂದಲೂ, ಕೂಡಿ, ದದರ್ಶ – ಕಂಡನು ||೧೪|| ಮಹಾತೇಜಃ - ಮಹಾ ತೇಜೋವಂತನಾದ, ಸಃ - ಆ ಅಂಶುಮಂತನು, ತೇಷಾಂ ರಾಜಪುತ್ರಾಣಾಂ - ಆ ರಾಜಪುತ್ರರಿಗೆ, ಜಲಕ್ರಿಯಾಂ - ತಿಲೋದಕಗಳನ್ನು, ಕರ್ತುಕಾಮಃ - ಮಾಡಲಿಚ್ಛೆಯುಳ್ಳವನಾಗಿ, ಸಲಿಲಾರ್ಥೀ- ಉದಕವನ್ನು ಕೋರುತ್ತ, ಜಲಾಶಯಂ-ಸರೋವರವನ್ನು, ನಾಪಶ್ಯಜ್ಜ - ನೋಡದೆ ಹೋದನು. ||೧೫|| ಹೇರಾಮ – ಎಲೈ ಶ್ರೀರಾಮನ, ತತಃ - ಬಳಿಕ, ನಿಪುಣಾಂ - ಸಮರ್ಥವಾದ, ದೃಷ್ಟಿಂ - ನೇತ್ರವನ್ನು, ವಿಸಾರ್ಯ - ಪ್ರಸರಿಸಿ, ಪಿತೄಣಾಂ - ತಂದೆಗಳಿಗೆ, ಮಾತುಲಂ - ಸೋದರಮಾವನಾದ, ಅನಿಲೋಪಮಂ - ವಾಯುವಿಗೆ ಸಮಾನನು, ಖಗಾಧಿಪಂ - ಪಕ್ಷಿರಾಜನೂ ಆದ, ಸುಪರ್ಣಂ - ಗರುಡನನ್ನು, ಅಪಶ್ಯತ್- ಕಂಡನು. ||೧೬|| ಮಹಾಬಲಃ - ಮಹಾ ಬಲಿಷ್ಠನಾದ, ಸವೈನತೇಯಃ-ಆ ಗರುಡನು, ಏನಂ - ಈ ಅಂಶುಮಂತನನ್ನು ಕುರಿತು, ವಾಕ್ಯಂ - ವಚನವನ್ನು, ಅಬ್ರವೀತ್ - ನುಡಿದನು, ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೆ! ಮಾಶುಚಃ - ದುಃಖಿಸಬೇಡ, ಅಯಂವಧಃ - ಈ ಸಂಹಾರವು, ಲೋಕಸಮ್ಮತಃ-ಲೋಕಕ್ಕೆ ಹಿತಕರವು. ||೧೭|| ಹಿ - ಯಾವ ಕಾರಣ, ಇಮೇ - ಈ ಸಗರಪುತ್ರರು, ಮಹಾಬಲಾಃ - ಮಹಾ ಬಲದಿಂದ ಗರ್ವಿತರಾಗಿ, ಅಪ್ರಮೇಯೇನ - ಅಪಾರ ಮಹಿಮೆಯುಳ್ಳ, ಕಪಿಲೇನ-

ದುಃಖವನ್ನು ಹೊಂದಿ ಘೋರನೆ ಅತ್ತನು ||೧೧-೧೩|| ಹೀಗೆ ದುಃಖಾಕ್ರಾಂತನಾದ ಅಂಶುಮಂತನು ಅಲ್ಲಿಯೇ ಹುಲ್ಲು ಮೇಯುತ್ತಿದ್ದ ತನ್ನ ತಾತನ ಯಜ್ಞೀಯಾಶ್ವವನ್ನು ನೋಡಿದನು, ಆ ಮಹಾ ತೇಜಸ್ವಿಯಾದ ಆ ಅಂಶುಮಂತನು ಭಸ್ಮಭೂತರಾಗಿದ್ದ ಸಗರರಾಯನ ಕುವರರಿಗೆ ತಿಲೋದಕ ಕ್ರಿಯೆಗಳನ್ನು ಮಾಡಲು, ನೀರನ್ನು ಹುಡುಕುವವನಾಗಿ ಜಲವನ್ನು ಕಾಣಲೇ ಇಲ್ಲವು. ||೧೪-೧೫|| ಆಗ ಅಸಮಂಜನು ಚತುರವಾದ ದೃಷ್ಟಿಯನ್ನು ಸುತ್ತಲೂ ಪಸರಿಸಲು, ಸಗರ ಕುವರರ ಮಾವನಾದ ಗರುಡನನ್ನು ನೋಡಿದನು. ಆ ಗರುಡನು ಅಂಶುಮಂತನನ್ನು ಕುರಿತು, "ಎಲೈ ಪುರುಷಶ್ರೇಷ್ಠನೆ! ಪಿತೃಗಳ ಮರಣದಿಂದ ದುಃಖಿಸದಿರು. ಇವರ ವಧೆಯು ಲೋಕಕ್ಕೆ ಹಿತಕರವಾದುದು. ಇವರು ಮಹಾ ತಪಸ್ವಿಯೂ,

ಪ್ರಾಜ್ಞ ದಾತುಮೇಷಾಂ ಹಿ ಲೌಕಿಕಂ ||೧೮|| ಗಂಗಾ ಹಿಮವತೋ ಜ್ಯೇಷ್ಠಾ ದುಹಿತಾ ಪುರುಷರ್ಷಭ || ತಸ್ಯಾಂ ಕುರು ಮಹಾಬಾಹೋ ಪಿತೄಣಾಂ ತು ಜಲಕ್ರಿಯಾಂ || ೧೯ || ಭಸ್ಮರಾಶೀಕೃತಾ ನೇತಾನ್ ಪ್ಲಾವಯೇಲ್ಲೋಕಪಾವನೀ || ತಯಾಕ್ಲಿನ್ನಮಿದಂ ಭಸ್ಮ ಗಂಗಯಾ ಲೋಕಕಾಂತಯಾ ||೨೦|| ಷಷ್ಟಿಂಪುತ್ರಸಹಸ್ರಾಣಿ ಸ್ವರ್ಗಲೋಕಂ ನಯಿಷ್ಯತಿ || ಗಚ್ಛಚಾಶ್ವಂ ಮಹಾಭಾಗ ತಂ ಗೃಹ್ಯಪುರುಷರ್ಷಭ || ೨೧ || ಯಜ್ಞಂ ಪೈತಾಮಹಂ ವೀರ ಸಂವರ್ತಯಿತುಮರ್ಹಸಿ || ಸುಪರ್ಣ

---

ಕಪಿಲಮುನಿಯಿಂದ, ದಗ್ಧಾಃ - ದಹಿಸಲ್ಪಟ್ಟರೋ, ಹೇಪ್ರಾಜ್ಞ - ಎಲೈ ಬುದ್ಧಿಶಾಲಿಯಾದವನೆ, ಏಷಾಂ - ಈ ಕಪಿಲ ಮುನಿಯ ಕೋಪಕ್ಕೆ ಪಾತ್ರರಾದ ಮಹಾ ಪಾತಕಿಗಳಿಗೆ, ಲೌಕಿಕಂ ಲೋಕ ಪ್ರಸಿದ್ಧವಾದ, ಸಲಿಲಂ - ಉದಕವನ್ನು, ದಾತುಂ - ಕೊಡಲು, ನಾರ್ಹಸಿ- ಪಾತ್ರನಾಗದಿರು. ||೧೮|| ಹೇ ಪುರುಷರ್ಷಭ - ಎಲೈ ಪುರುಷಶ್ರೇಷ್ಠನೆ, ಹಿಮವತಃ- ಹಿಮವಂತನ,ಜ್ಯೇಷ್ಠಾದುಹಿತಾ-ಜ್ಯೇಷ್ಠ ಪುತ್ರಿಯಾದ, ಗಂಗಾ - ಗಂಗಾನದಿಯು, ಅಸ್ತಿ ಇರುವುದು, ಹೇಮಹಾಬಾಹೋ - ಎಲೈ ಮಹಾ ಭುಜಬಲಶಾಲಿಯೆ, ತ್ವಂ - ನೀನು, ತಸ್ಯಾಂ - ಆ ಗಂಗೆಯಲ್ಲಿ, ಪಿತೄಣಾಂ - ತಂದೆಗಳಿಗೆ, ಜಲಕ್ರಿಯಾಂತು - ಉದಕ ಕ್ರಿಯೆಗಳನ್ನಾದರೂ, ಕುರು-ಮಾಡು, || ೧೯ || ಲೋಕಪಾವನೀ-ಲೋಕ ವನ್ನು ಪರಿಶುದ್ಧಿ ಮಾಡುತ್ತಿರುವ ಗಂಗೆಯು, ಭಸ್ಮರಾಶೀಕೃತಾನ್ - ಭಸ್ಮರಾಶಿಯನ್ನಾಗಿ ಮಾಡಲ್ಪಟ್ಟಿರುವ, ಏತಾನ್ - ಇವರನ್ನು, ಪ್ಲಾವಯೇತ್ - ಪರಿಶುದ್ಧರನ್ನಾಗಿ ಮಾಡುವದು. || ೨೦ || ಲೋಕಕಾಂತಯಾ - ಲೋಕಕ್ಕೆ ರಮಣೀಯವಾದ, ತಯಾಗಂಗಯಾ - ಆ ಗಂಗಾನದಿಯಿಂದ, ಇದಂಭಸ್ಮ-ಈ ಭಸ್ಮವು, ಕ್ಲಿನ್ನಂಯದಿ - ತೋಯಿಸಲ್ಪಟ್ಟರೆ, ಹೇಪುತ್ರ - ಎಲೈ ಕುವರನೆ, ಷಷ್ಟಿಂ ಸಹಸ್ರಾಣಿ - ಅರವತ್ತು ಸಾವಿರ ಮಂದಿಯನ್ನು, ಸ್ವರ್ಗಲೋಕಂ-ಸ್ವರ್ಗಲೋಕವನ್ನು, ನಯಿಷ್ಯತಿ- ಹೊಂದಿಸುವದು. || ೨೦ || ಹೇ ಮಹಾಭಾಗ - ಎಲೈ ಪುಣ್ಯವಂತನೆ, ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ತಮಶ್ವಂಚ - ಆ ಅಶ್ವವನ್ನು, ಗೃಹ್ಯ - ತೆಗೆದುಕೊಂಡು, ಗಚ್ಛ - ಹೋಗು, ಹೇವೀರ - ಎಲೈ ಶೂರನೆ, ಪೈತಾಮಹಂ - ಪಿತಾಮಹ ಸಂಬಂಧವಾದ, ಯಜ್ಞಂ-ಯಜ್ಞವನ್ನು, ಸಂವರ್ತಯಿತುಂ - ಸಮಾಪ್ತಿ ಹೊಂದಿಸಲು, ಅರ್ಹಸಿ-ಯೋಗ್ಯನಾಗು, || ೨೧ || ಅತಿವೀರ್ಯವಾನ್-

---

ನಾರಾಯಣನ ಅವತಾರ ಸ್ವರೂಪನೂ ಆದ ಕಪಿಲ ಋಷಿಯಿಂದ ದಗ್ಧರಾದರಷ್ಟೆ! ಇಂತಹ ನಿನ್ನೀಪಿತೃಗಳಿಗೆ ಈ ಲೋಕ ಜಲದಿಂದ ತಿಲೋದಕಗಳನ್ನು ಕೊಡದಿರು. ಎಲೈ ಮಹಾ ವೀರನೇ ! ಹಿಮವಂತನ ಜ್ಯೇಷ್ಠಕುವರಿಯಾದ ಗಂಗಾನದಿಯಿರುವುದು. ಈ ನದ್ಯೋದಕದಿಂದ ಇವರಿಗೆ ತಿಲೋದಕಗಳನ್ನು ಮಾಡುವವನಾಗು, ಲೋಕವನ್ನೇ ಪಾವನಗೊಳಿಸುವ ಗಂಗಾನದಿಯು ಭಸ್ಮಸಾತ್ತಾಗಿರುವ ಇವರನ್ನು ಪೂತರನ್ನಾಗಿ ಮಾಡುವಳು. ಈ ರೀತಿ ಈ ಭಸ್ಮವು ಗಂಗೋದಕದಿಂದ ನೆನೆಸಲ್ಪಟ್ಟುದಾದರೆ ಈ ಅರವತ್ತು ಸಾವಿರಮಂದಿ ಸಗರನಂದನರು ಸ್ವರ್ಗವನ್ನೈದುವರು ||೧೭-೨೦|| ಈಗಲೀ ಅಶ್ವವನ್ನು ಕರೆದುಕೊಂಡು ಹೋಗಿ ಪಿತಾಮಹನ ಯಾಗವನ್ನು ಪೂರ್ಣಗೊಳಿಸಲು ಅರ್ಹನಾಗು.'' ಎಂದನು. ಇಂತು

ವಚನಂ ಶ್ರುತ್ವಾ ಸೋಂಶುಮಾನತಿವೀರ್ಯವಾನ್ ||೨೨|| ತ್ವರಿತಂ ಹಯ ಮಾದಾಯ ಪುನರಾಯಾನ್ಮಹಾಯಶಾಃ||ತತೋರಾಜಾನಮಾಸಾದ್ಯ ದೀಕ್ಷಿತಂ ರಘುನಂದನ || ೨೩ || ನ್ಯವೇದಯದ್ಯಥಾವೃತ್ತಂ ಸುಪರ್ಣವಚನಂ ತಥಾ || ತಚ್ಛ್ರುತ್ವಾ ಘೋರಸಂಕಾಶಂ ವಾಕ್ಯಮಂಶುಮತೋನೃಪಃ ||೨೪|| ಯಜ್ಞಂ ನಿವರ್ತಯಾಮಾಸ ಯಥಾಕಲ್ಪಂ ಯಥಾವಿಧಿ || ಸ್ವಪುರಂ ಚಾಗ ಮಚ್ಛ್ರೀಮಾನಿಷ್ಟಯಜ್ಞೋ ಮಹೀಪತಿಃ ||೨೫|| ಗಂಗಾಯಾಶ್ಚಾಗಮೇ ರಾಜಾ ನಿಶ್ಚಯಂ ನಾಧ್ಯಗಚ್ಛತ || ಅಕೃತ್ವಾ ನಿಶ್ಚಯಂ ರಾಜಾ ಕಾಲೇನ

---

ಬಹು ಪರಾಕ್ರಮಶಾಲಿಯೂ, ಮಹಾಯಶಾಃ - ಮಹಾ ಕೀರ್ತಿವಂತನೂ ಆದ, ಸೋಂಶುಮಾನ್- ಆ ಅಂಶುಮಂತನು, ಸುಪರ್ಣವಚನಂ - ಗರುಡನ ಮಾತನ್ನು, ಶ್ರುತ್ವಾ - ಕೇಳಿ, ತ್ವರಿತಂ-ಬೇಗನೆ, ಹಯಂ - ಅಶ್ವವನ್ನು, ಆದಾಯ - ತೆಗೆದುಕೊಂಡು, ಪುನಃ ಮತ್ತು, ಆಯಾತ್ - ಹೊರಟು ಬಂದನು. ||೨೨|| ಹೇ ರಘುನಂದನ - ಎಲೈ ರಘುಕುಲಾನಂದಕರನೆ! ತತಃ-ಬಳಿಕ, ದೀಕ್ಷಿತಂ- ದೀಕ್ಷಾಬದ್ಧನಾದ, ರಾಜಾನಂ - ಸಗರ ರಾಯನನ್ನು, ಆಸಾದ್ಯ - ಹೊಂದಿ, ಯಥಾವೃತ್ತಂ-ನಡೆದ ವೃತ್ತಾಂತವನ್ನೂ, ತಥಾ- ಹಾಗೆಯೆ, ಸುಪರ್ಣವಚನಂ - ಗರುಡನ ಮಾತನ್ನೂ, ನ್ಯವೇದಯತ್- ತಿಳುಹಿದನು. ||೨೩|| ನೃಪಃ - ಸಗರ ರಾಯನು, ಘೋರಸಂಕಾಶಂ - ಕರ್ಣಕಠೋರವಾದ, ಅಂಶುಮಂತಃ-ಅಂಶುಮಂತನ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ಯಜಂ ಅಶ್ವಮೇಧ ಯಜ್ಞವನ್ನು, ಯಥಾಕಲ್ಪಂ - ಕಲ್ಪಾನುಸಾರ, ಯಥಾವಿಧಿ - ಶಾಸ್ತ್ರಾನುಸಾರ. ನಿವರ್ತಯಾ ಮಾಸ - ನೆರವೇರಿಸಿದನು ||೨೪|| ಶ್ರೀಮಾನ್ - ಸಂಪದ್ಯುಕ್ತನಾದ, ಇಷ್ಟಯಜಃ - ಮಾಡಲ್ಪಟ್ಟ ಯಜ್ಞವುಳ್ಳ, ಮಹೀಪತಿಃ - ರಾಜನಾದ, ರಾಜಾ - ಸಗರನು, ಸ್ವಪುರಂಚ - ತನ್ನ ಪಟ್ಟಣವನ್ನು ಕುರಿತು, ಅಗಮತ್ - ಬಂದನು, ಗಂಗಾಯಾಶ್ಚ - ಗಂಗಾ ನದಿಯ, ಆಗಮೇ-ಬರುವಿಕೆಯಲ್ಲಿ, ನಿಶ್ಚಯಂ - ಉಪಾಯವನ್ನು, ನಾಧ್ಯಗಚ್ಛತ-ಹೊಂದಲಿಲ್ಲವು. ||೨೫|| ಮಹಾನ್-ಮಹಾತ್ಮನಾದ, ರಾಜಾ - ಸಗರನು, ಮಹತಾ - ಬಹಳವಾದ, ಕಾಲೇನ - ಕಾಲದಿಂದ, ನಿಶ್ಚಯಂ-ಗಂಗಾ ಗಮನೋ

---

ನುಡಿದ ಗರುಡನ ನುಡಿಗಳನ್ನು ಕೇಳಿ ಅಂಶುಮಂತನು ಅಶ್ವವನ್ನು ಕರೆದುಕೊಂಡು ಹಿಂತಿರುಗಿ ಯಾಗ ದೀಕ್ಷಿತನಾದ ಸಗರರಾಯನ ಬಳಿಸಾರಿ ಪಿತೃಗಳ ವಿಷಯವನ್ನೂ, ಗರುಡನ ನುಡಿಗೆ ಳನ್ನೂ ಯಥಾಕ್ರಮವಾಗಿ ಬಿನ್ನವಿಸಿದನು. ||೨೧-೨೩|| ಈ ರೀತಿ ಹೇಳಿದ ಅಂಶುಮಂತನ ಕರ್ಣಕಠೋರವಾದ ನುಡಿಗಳನ್ನುಕೇಳಿದಸಗರಮಹಾರಾಯನು ಬಹುವಾಗಿ ದುಃಖಗೊಂಡು ಶಾಸ್ತ್ರಾನುಸಾರವಾಗಿ ಅಶ್ವಮೇಧಯಾಗವನ್ನು ಪೂರ್ಣಗೊಳಿಸಿದನು. ಬಳಿಕಲಾ ರಾಜನು ಯಜ್ಞವನ್ನು ಪೂರ್ತಿಗೊಳಿಸಿ ಸ್ವಪುರವನ್ನು ಸೇರಿ ಗಂಗಾನಯನದಲ್ಲಿ ಯಾವ ನಿಶ್ಚಯ ವನ್ನು ಹೊಂದಲಿಲ್ಲವು. ಈ ರೀತಿ ನಿಶ್ಚಯವನ್ನೇ ಮಾಡದೆ ಆಸಗರ ಚಕ್ರವರ್ತಿಯು ಬಹಳ

ಮಹತಾ ಮಹರ್ಗಾ ॥ ತ್ರಿಂಶದ್ವರ್ಷಸಹಸ್ರಾಣಿ ರಾಜಾ ರಾಜ್ಯಮಕಾರ
ಯತ್ ॥ ೨೬ ॥

ಇತ್ಯಾರ್ಷೇ ಶ್ರೀಮದ್ಬಾಲಕಾಂಡೇ ಏಕಚತ್ವಾರಿಂಶಸ್ಸರ್ಗಃ

---

ಪಾಯವನ್ನು, ಅಕೃತ್ವಾ - ಮಾಡದೆ, ತ್ರಿಂಶದ್ವರ್ಷ ಸಹಸ್ರಾಣಿ- ಮೂವತ್ತು ಸಾವಿರ ವರ್ಷಗಳ, ರಾಜ್ಯಂ - ಪ್ರಭುತ್ವವನ್ನು, ಕೃತ್ವಾ-ಮಾಡಿ, ದಿವಂ - ಸ್ವರ್ಗಲೋಕವನ್ನು, ಗತಃ-ಹೊಂದಿದನು. ॥೨೪-೨೬॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಚತ್ವಾರಿಂಶಸ್ಸರ್ಗಃ.

---

ಕಾಲ ಕಳೆಯಲು,ಮೂವತ್ತು ಸಾವಿರ ವರ್ಷಗಳು ರಾಜ್ಯವನ್ನು ಆಳಿ ಸ್ವರ್ಗವನ್ನು ಸೇರಿದನು

ಇಂತಿದು ಸಗರರಾಯನ ಯಾಗಪರಿಸಮಾಪ್ತಿ ಕಥಾ ಕಥನವೆಂಬ
ನಲವತ್ತೊಂದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದ್ವಿಚತ್ವಾರಿಂಶಸ್ಸರ್ಗಃ.

---

ಕಾಲಧರ್ಮಂ ಗತೇ ರಾಮ ಸಗರೇ ಪ್ರಕೃತೀಜನಾಃ ॥ ರಾಜಾನಂ ರೋಚಯಾಮಾಸುರಂಶುಮಂತಂ ಸುಧಾರ್ಮಿಕಂ ॥೧॥ ಸರಾಜಾ ಸುಮಹಾನಾಸೀದಂಶುಮಾನ್ ರಘುನಂದನ ॥ ತಸ್ಯಪುತ್ರೋ ಮಹಾನಾಸೀದ್ದಿಲೀಪ ಇತಿ ವಿಶ್ರುತಃ ॥ ೨ ॥ ತಸ್ಮಿನ್ರಾಜ್ಯಂ ಸಮಾವೇಶ್ಯ ದಿಲೀಪೇ ರಘುನಂದನ ॥ ಹಿಮವಚ್ಛಿಖರೇ ಪುಣ್ಯೇ ತಪಸ್ತೇಪೇ ಸುದಾರುಣಂ ॥ ೩ ॥ ದ್ವಾತ್ರಿಂಶಚ್ಚ ಸಹಸ್ರಾಣಿ ವರ್ಷಾಣಿ ಸುಮಹಾಯಶಾಃ ॥ ತಪೋವನಂ ಗತೋ ರಾಮ ಸ್ವರ್ಗಂಲೇಭೇ ತಪೋಧನಃ ॥ ೪ ॥ ದಿಲೀಪಸ್ತು ಮಹಾತೇಜಾ

---

ಹೇರಾಮ-ಎಲೈ ಶ್ರೀರಾಮನೆ, ಸಗರೇ-ಸಗರಚಕ್ರವರ್ತಿಯು, ಕಾಲಧರ್ಮಂ - ಕಾಲಧರ್ಮವನ್ನು, ಗತೇಸತಿ-ಹೊಂದಲು,(ಅಂದರೆ ವಾರ್ಧಿಕ್ಯವನ್ನು ಹೊಂದಲು) ಪ್ರಕೃತೀಜನಾಃ-ಮಂತ್ರಿಗಳೂ, ಪ್ರಜೆಗಳೂ, ಸುಧಾರ್ಮಿಕಂ - ಮಹಾಧರ್ಮಿಷ್ಠನಾದ, ಅಂಶುಮಂತಂ-ಅಂಶುಮಂತನನ್ನು, ರಾಜಾನಂ-ಅರಸನನ್ನಾಗಿ, ರೋಚಯಾಮಾಸುಃ-ಬಯಸಿದರು, ಹೇರಘುನಂದನ ಎಲೈ ರಘುಕುಲಾನಂದಕರನೆ, ಸುಮಹಾನ್ - ಮಹಾತ್ಮನಾದ, ಸೋಂಶುಮಾನ್-ಆ ಅಂಶುಮಂತನು, ರಾಜಾ - ಅರಸು, ಆಸೀತ್-ಆದನು, ತಸ್ಯ-ಆ ಅಂಶುಮಂತನಿಗೆ, ದಿಲೀಪಇತಿ-ದಿಲೀಪನೆಂದು, ವಿಶ್ರುತಃ-ಪ್ರಸಿದ್ಧನಾದ,ಮಹಾನ್-ಶ್ರೇಷ್ಠನಾದ, ಪುತ್ರಃ-ಕುವರನು, ಆಸೀತ್-ಆದನು. ॥ ೨ ॥ ಹೇರಘುನಂದನ ಎಲೈ ರಘುಕುಲಾನಂದಕರನೆ, ತಸ್ಮಿನ್‌ದಿಲೀಪೇ-ಆ ದಿಲೀಪ ಮಹಾರಾಯನಲ್ಲಿ, ರಾಜ್ಯಂ-ರಾಜ್ಯವನ್ನು, ಸಮಾವೇಶ್ಯ-ಇರಿಸಿ, ಪುಣ್ಯೇ-ಪುಣ್ಯಕರವಾದ, ಹಿಮವಚ್ಛಿಖರೇ - ಹಿಮವತ್ಪರ್ವತದ ಶಿಖರದಲ್ಲಿ, ಸುದಾರುಣಂ-ಬಹು ಭಯಂಕರವಾದ, ತಪಃ-ತಪವನ್ನು, ತೇಪೇ-ತಪವಂಗೈದನು. ॥ ೩ ॥ ಹೇರಾಮ - ಎಲೈ ರಾಮನೆ, ಸುಮಹಾಯಶಾಃ- ಮಹಾಕೀರ್ತಿವಂತನಾದ ಅಂಶುಮಂತನು, ದ್ವಾತ್ರಿಂಶಚ್ಚ-ಮೂವ್ವತ್ತೆರಡು ಸಂಖ್ಯೆಯುಳ್ಳ, ಸಹಸ್ರಾಣಿ-ಸಾವಿರ, ವರ್ಷಾಣಿ-ವರ್ಷಗಳು, ತಪೋವನಂ-ತಪೋವವನನ್ನು, ಗತಃ-ಹೊಂದಿ, ತಪೋಧನಃ-ಋಷಿಯಾಗಿ, ಸ್ವರ್ಗಂ-ಸ್ವರ್ಗವನ್ನು, ಲೇಭೇ-ಹೊಂದಿದನು. ॥೪॥ ಮಹಾ

---

"ರಾಮಚಂದ್ರ ! ಸಗರರಾಯನು, ಪ್ರಕೃತಿ ಧರ್ಮವನ್ನು ಹೊಂದುತ್ತಿರಲು, ಪ್ರಜೆಗಳೆಲ್ಲರೂ ಆತನ ಮೊಮ್ಮಗನಾದ, ಮಹಾ ಧರ್ಮಿಷ್ಠನಾದ, ಅಂಶುಮಂತನನ್ನು ರಾಜನನ್ನಾಗಿ ಬಯಸಿದರು. ಮಹಾತ್ಮನಾದ ಈ ಅಂಶುಮಂತನ ಮಗನೇ ಮಹಾ ವೀರನಾದ ದಿಲೀಪನೆಂಬುವನು. ॥ ೨ ॥ ಮಹಾಕೀರ್ತಿವಂತನಾದ ಈ ಅಂಶುಮಂತನು ಮೂವತ್ತೆರಡು ಸಾವಿರ ವರ್ಷಗಳ ರಾಜ್ಯಭಾರವಂಗೈದು, ಮಗನಾದ ದಿಲೀಪನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು, ಪುಣ್ಯಕರವಾದ ಹಿಮವತ್ಪರ್ವತದ ಶಿಖರದಲ್ಲಿ ದಾರುಣವಾದ ತಪವಂಗೈದು ತಪೋವನವನ್ನು ಹೊಂದಿ ಸ್ವರ್ಗಸ್ಥನಾದನು. ॥ ೪ ॥

ಶ್ರುತ್ವಾ ಪೈತಾಮಹಂ ವಧಂ || ದುಃಖೋಪಹತಯಾ ಬುದ್ಧ್ಯಾ ನಿಶ್ಚಯಂ ನಾಧ್ಯಗಚ್ಛತ || ೫ || ಕಥಂ ಗಂಗಾವತರಣಂ ಕಥಂ ತೇಷಾಂ ಜಲಕ್ರಿಯಾ|| ತಾರಯೇಯಂ ಕಥಂಚೈನಾನಿತಿ ಚಿಂತಾಪರೋಽಭವತ್ || ೬ || ತಸ್ಯ ಚಿಂತಯತೋ ನಿತ್ಯಂ ಧರ್ಮೇಣ ವಿದಿತಾತ್ಮನಃ|| ಪುತ್ರೋ ಭಗೀರಥೋ ನಾಮ ಜಜ್ಞೇ ಪರಮಧಾರ್ಮಿಕಃ || ೭ || ದಿಲೀಪಸ್ತು ಮಹಾತೇಜಾ ಯಜ್ಞೈರ್ಬಹುಭಿರಿಷ್ಟವಾನ್ || ತ್ರಿಂಶದ್ವರ್ಷಸಹಸ್ರಾಣಿ ರಾಜಾ ರಾಜ್ಯಮಕಾರಯತ್ || ೮ || ಅಗತ್ವಾ ನಿಶ್ಚಯಂ ರಾಜಾ ತೇಷಾಮುದ್ಧರಣಂ ಪ್ರತಿ||

---

ತೇಜಾಃ-ಮಹಾತೇಜಸ್ವಿಯಾದ, ದಿಲೀಪಸ್ತು-ದಿಲೀಪನು, ಪೈತಾಮಹಂ ಪಿತಾಮಹಸಂಬಂಧವಾದ, ವಧಂ-ವಧೆಯನ್ನು, ಶ್ರುತ್ವಾ-ಕೇಳಿ, ದುಃಖೋಪಹತಯಾ - ದುಃಖದಿಂದ ಕುಗ್ಗಿದ, ಬುಧ್ಯಾ-ಬುದ್ಧಿಯಿಂದ, ನಿಶ್ಚಯಂ- ಗಂಗಾನಯನೋಪಾಯವನ್ನು, ನಾಧ್ಯಗಚ್ಛತ್ - ಹೊಂದಲಿಲ್ಲವು. || ೫ || ಗಂಗಾ-ಗಂಗಾನದಿಯ, ಅವತರಣಂ-ಭೂಲೋಕಕ್ಕೆ ಇಳಿದು ಬರುವಿಕೆಯು, ಕಥಂ-ಹೇಗೆ, ತೇಷಾಂ-ಆ ಪಿತಾಮಹಾದಿಗಳಿಗೆ, ಜಲಕ್ರಿಯಾ - ಜಲತರ್ಪಣವು, ಕಥಂ- ಹೇಗೆ ಮಾಡತಕ್ಕದು? ಏನಾನ್ - ಇವರನ್ನು, ಕಥಂ - ಹೇಗೆ, ತಾರಯೇಯಂ - ಗತಿಗಾಣಿಸುವೆನು? ಇತಿ-ಇಂತೆಂದು, ಚಿಂತಾಪರಃ-ಚಿಂತಾಕ್ರಾಂತನು, ಅಭವತ್ - ಆದನು || ೬ || ನಿತ್ಯಂ - ನಿರಂತರದಲ್ಲಿಯು, ಚಿಂತಯತಃ - ಆಲೋಚಿಸುತ್ತಿರುವ, ಧರ್ಮೇಣ - ಧರ್ಮದಿಂದ, ವಿದಿತಾತ್ಮನಃ - ತಿಳಿಯಲ್ಪಟ್ಟ ಪರಮಾತ್ಮಜ್ಞಾನವುಳ್ಳ, ತಸ್ಯ - ಆ ದಿಲೀಪರಾಯನಿಗೆ, ಪರಮಧಾರ್ಮಿಕಃ - ಮಹಾ ಧರ್ಮಿಷ್ಠನಾದ, ಭಗೀರಥೋ ನಾಮ - ಭಗೀರಥನೆಂಬ ಹೆಸರುಳ್ಳ, ಪುತ್ರಃ - ಮಗನು, ಜಜ್ಞೇ- ಜನಿಸಿದನು. ||೭|| ಮಹಾತೇಜಾಃ-ಮಹಾ ಪರಾಕ್ರಮಶಾಲಿಯಾದ, ದಿಲೀಪಃ - ದಿಲೀಪನೆಂಬ, ರಾಜಾ - ಅರಸು, ಬಹುಭಿಃ-ಅನೇಕ, ಯಜ್ಞೈಃ - ಯಜ್ಞಗಳಿಂದ, ಇಷ್ಟವಾನ್ - ದೇವತಾತುಷ್ಟಿ ಮಾಡಿದಂಥವನಾಗಿ, ತ್ರಿಂಶದ್ವರ್ಷಸಹಸ್ರಾಣಿ - ಮುವ್ವತ್ತು ಸಾವಿರ ವರ್ಷಗಳು, ರಾಜ್ಯಂ - ರಾಜ್ಯವನ್ನು, ಅಕಾರಯತ್-ಮಾಡಿದನು. || ೮ || ಹೇನರಶಾರ್ದೂಲ - ಎಲೈ ಪುರುಷಶ್ರೇಷ್ಠನೆ, ರಾಜಾ-ದಿಲೀಪ ಮಹಾರಾಯನು,ತೇಷಾಂ-ಆ ಪಿತಾಮಹರ, ಉದ್ಧರಣಂಪ್ರತಿ-ಪಾಪವಿಮೋಚನೆಯನ್ನು ಕುರಿತು, ನಿಶ್ಚಯಂ-ಉಪಾಯವನ್ನು, ಅಗತ್ವಾ - ಹೊಂದದೆ, ವ್ಯಾಧಿನಾ - ಮನೋವ್ಯಧಿಯಿಂದ, ಕಾಲಧರ್ಮಂ - ಮರಣವನ್ನು, ಉಪೇ

---

ಮಹಾತೇಜಸ್ವಿಯಾದ ದಿಲೀಪನಾದರೋ, ಪಿತಾಮಹರ, ವೃತ್ತಿವಿಚಾರವನ್ನರಿತು, ದುಃಖದಿಂದ ಕುಗ್ಗಿದ ಚಿತ್ತವುಳ್ಳವನಾಗಿ ಏನುಮಾಡಬೇಕೆಂಬುದನ್ನೇ ನಿಶ್ಚಯಿಸಲಿಲ್ಲವು || ೫ || "ಗಂಗೆಯು ಪಾತಾಳಲೋಕಕ್ಕೆ ಹೇಗೆ ಬರುವುದು? ನಮ್ಮ ಪಿತಾಮಹರಿಗೆ ತಿಲೋದಕಕ್ರಿಯೆಯು ಹೇಗಾಗುತ್ತದೆ ? ಅವರನ್ನು ಹೇಗೆ ಉದ್ಧಾರಮಾಡಲಿ ?" ಎಂದು ಧರ್ಮದಿಂದ ನಿರಂತರವೂ ಯೋಚಿಸುತ್ತಿದ್ದ ಮಹಾತ್ಮನೂ ಬ್ರಹ್ಮಜ್ಞಾನಿಯೂ ಆದ ಈ ದಿಲೀಪರಾಜನಿಗೆ ಮಹಾಧರ್ಮಿಷ್ಠನಾದ ಭಗೀರಥನೆಂದು ಪ್ರಸಿದ್ಧನಾದ ಮಗನುಂಟಾದನು, ಕೇಳಯ್ಯಾ ! ರಾಮಚಂದ್ರನೇ? ಈ ದಿಲೀಪನು ಅನೇಕ ಯಜ್ಞಗಳನ್ನು ಮಾಡಿ, ಮೂವತ್ತು ಸಾವಿರ ವರ್ಷಗಳ ರಾಜ್ಯಭಾರವನ್ನುಮಾಡಿ, ಪಿತಾಮಹರ ಸಲಿಲಕ್ರಿಯೆಯಲ್ಲಿಯಾವ ನಿಶ್ಚಯ

ವ್ಯಾಧಿನಾ ನರಶಾರ್ದೂಲ ಕಾಲಧರ್ಮಮುಪೇಯಿವಾನ್ ॥೯॥ ಇಂದ್ರ ಲೋಕಂ ಗತೋರಾಜಾ ಸ್ವಾರ್ಜಿತೇನೈವಕರ್ಮಣಾ ॥ ರಾಜ್ಯೇಭಗೀರಥಂ ಪುತ್ರಮಭಿಷಿಚ್ಯ ನರರ್ಷಭಃ ॥೧೦॥ ಭಗೀರಥಸ್ತು ರಾಜರ್ಷಿ ರ್ಧಾರ್ಮಿಕೋ ರಘುನಂದನ ॥ ಅನಪತ್ಯೋ ಮಹಾತೇಜಾಃ ಪ್ರಜಾಕಾಮಃ ಸಚಾಪ್ರಜಃ॥ ೧೧ ॥ ಮಂತ್ರಿಷ್ವಾದಾಯ ತದ್ರಾಜ್ಯಂ ಗಂಗಾವತರಣೇ ರತಃ ॥ ಸತಪೋ ದೀರ್ಘಮಾತಿಷ್ಠದ್ಗೋಕರ್ಣೇ ರಘುನಂದನ ॥೧೨॥ ಊರ್ಧ್ವಬಾಹುಃ ಪಂಚತಪಾ ಮಾಸಾಹಾರೋ ಜಿತೇಂದ್ರಿಯಃ ॥ ತಸ್ಯ ವರ್ಷಸಹಸ್ರಾಣಿ

---

ಯಿವಾನ್ - ಹೊಂದಿದನು. ॥೯॥ ರಾಜಾ - ಅರಸನೂ, ನರರ್ಷಭಃ - ಪುರುಷಶ್ರೇಷ್ಠನೂ ಆದ ದಿಲೀಪನು, ರಾಜ್ಯೇ - ರಾಜ್ಯದಲ್ಲಿ, ಪುತ್ರಂ - ಮಗನಾದ, ಭಗೀರಥಂ - ಭಗೀರಥನನ್ನು, ಅಭಿಷಿಚ್ಯ ಪಟ್ಟಾಭಿಷೇಕವಂಗೈದು, ಸ್ವಾರ್ಜಿತೇನೈವ - ತನ್ನಿಂದಲೇ ಸಂಪಾದಿಸಲ್ಪಟ್ಟ, ಕರ್ಮಣಾ - ಪುಣ್ಯ ಕರ್ಮದಿಂದ, ಇಂದ್ರಲೋಕಂ - ಸ್ವರ್ಗಲೋಕವನ್ನು, ಗತಃ - ಹೊಂದಿದನು. ॥೧೦॥ ಹೇರಘು ನಂದನ - ಎಲೈ ಶ್ರೀರಾಮನೆ, ಧಾರ್ಮಿಕಃ - ಧರ್ಮಿಷ್ಠನಾದ, ಮಹಾತೇಜಾಃ - ಮಹಾ ತೇಜೋವಂತ ನಾದ, ರಾಜರ್ಷಿಃ - ರಾಜರ್ಷಿಯಾದ, ಭಗೀರಥಸ್ತು - ಭಗೀರಥನು, ಅನಪತ್ಯಃ - ಮಕ್ಕಳಿಲ್ಲದವನು, ಆಸೀತ್ - ಆದನು, ಅಪ್ರಜಾಃ - ಮಕ್ಕಳಿಲ್ಲದ, ಸಚ - ಆ ಭಗೀರಥನು, ಪ್ರಜಾಕಾಮಃ - ಮಕ್ಕಳನ್ನು ಒಯಸಿ, ಮಂತ್ರಿಷು - ಮಂತ್ರಿಗಳಲ್ಲಿ, ತದ್ರಾಜ್ಯಂ - ಆ ರಾಜ್ಯವನ್ನು, ಆದಾಯ - ಇರಸಿ, ಗಂಗಾ ವತರಣೇ - ಗಂಗೆಯ ಅವತರಣದಲ್ಲಿ, ರತಃ - ಆಸಕ್ತನಾದನು. ॥ ೧೧ ॥ ಹೇರಘುನಂದನ - ಎಲೈ ರಘುಕುಲೋತ್ತಂಸನೆ, ಸಃ - ಆ ಭಗೀರಥನು, ಗೋಕರ್ಣೇ - ಗೋಕರ್ಣಕ್ಷೇತ್ರದಲ್ಲಿ, ಊರ್ಧ್ವಬಾಹುಃ - ಎತ್ತಲ್ಪಟ್ಟ ಭುಜಗಳುಳ್ಳವನಾಗಿ, ಪಂಚತಪಾಃ - ಪಂಚಾಗ್ನಿ ಮಧ್ಯದಲ್ಲಿ ತಪಸ್ವಿಯಾಗಿ, ಮಾಸಾ ಹಾರಃ - ಮಾಸಕ್ಕೆ ಒಂದು ದಿವಸ ಆಹಾರ ವುಳ್ಳವನಾಗಿ, ಜಿತೇಂದ್ರಿಯಃ - ಜಯಿಸಲ್ಪಟ್ಟ ದಶೇಂ ದ್ರಿಯಗಳುಳ್ಳವನಾಗಿ, ದೀರ್ಘಂ - ಬಹು ಕಾಲ ಮಾಡತಕ್ಕ, ತಪಃ - ತಪಸ್ಸನ್ನು, ಅತಿಷ್ಠತ್ - ಅನು ಷ್ಠಾನ ಮಾಡಿದನು. ॥೧೨॥ ಹೇಮಹಾಬಾಹೋ ಎಲೈ ಭುಜಬಲಪರಾಕ್ರಮಶಾಲಿಯೆ, ಘೋರೇ - ಭಯಂಕರವಾದ, ತಪಸಿ - ತಪಸ್ಸಿನಲ್ಲಿ, ತಿಷ್ಠತಃ - ಇರುವ, ತಸ್ಯ - ಆಭಗೀರಥನಿಗೆ, ವರ್ಷಸಹ

---

ವನ್ನೂ ಹೊಂದವೆ, ಕಾಲಧರ್ಮದಿಂದ ರೋಗಗ್ರಸ್ತನಾದನು. ॥ ೯ ॥ ದಿಲೀಪರಾಯನು ಮಗನಾದ ಭಗೀರಥನಿಗೆ ರಾಜ್ಯಪಟ್ಟಾಭಿಷೇಕವಂಗೈದು ತಾನು ಮಾಡಿದ ಪುಣ್ಯಕರ್ಮದಿಂ ದಲೇ ಇಂದ್ರಲೋಕವನ್ನೈದಿದನು. ಆಗಲಾ ಮಹಾ ಧರ್ಮಾತ್ಮನಾದ ಭಗೀರಥರಾಯ ನಾದರೋ ಮಕ್ಕಳಿಲ್ಲದವನಾಗಿ, ಸಂತಾನವನ್ನು ಪಡೆಯಲೋಸುಗವೂ, ಪ್ರಪಿತಾಮಹರಿಗೆ ತಿಲೋಕದಕಗಳನ್ನೀಯಲು ಗಂಗಾವತರಣವನ್ನು ಮಾಡಿಸಲೋಸುಗವೂ ತಪವಂ ಗೈಯಲು ಮಂತ್ರಿಗಳಲ್ಲಿ ರಾಜ್ಯಭಾರವನ್ನು ವಹಿಸಿ ಗೋಕರ್ಣ ಕ್ಷೇತ್ರವನ್ನು ಸೇರಿ, ಊರ್ಧ್ವಬಾಹು ವಾಗಿ ಪಂಚಾಗ್ನಿಮಧ್ಯಸ್ಥನಾಗಿ ಮಾಸಾಹಾರಿಯಾಗಿಯೂ, ಜಿತೇಂದ್ರಿಯನಾಗಿಯೂ ಮಹ ತ್ತರವಾದ ತಪವಂ ಗೈದನು. ॥೧೨॥ ಎಲೈ ಪುರುಷಶ್ರೇಷ್ಠನೆ! ಹೀಗೆ ಆ ಮಹಾತ್ಮನಾದ ಭಗೀರಥರಾಯನು ಸಾವಿರ ವರ್ಷಗಳ ತಪವಂಗೈದನು. ಈರೀತಿ ತಪವನ್ನಾಚರಿಸಲು

ಘೋರೇತಪಸಿ ತಿಷ್ಠತಃ ||೧೩|| ಅತೀತಾನಿ ಮಹಾಬಾಹೋ ತಸ್ಯರಾಜ್ಞೋ ಮಹಾತ್ಮನಃ || ಸುಪ್ರೀತೋ ಭಗವಾನ್ ಬ್ರಹ್ಮಾ ಪ್ರಜಾನಾಂ ಪತಿರೀಶ್ವರಃ || ೧೪ || ತತಸ್ಸುರಗಣೈಸ್ಸಾರ್ಧಮುಪಾಗಮ್ಯ ಪಿತಾಮಹಃ || ಭಗೀರಥಂ ಮಹಾತ್ಮಾನಂ ತಪ್ಯಮಾನಮಥಾಬ್ರವೀತ್ || ೧೫ || ಭಗೀರಥಮಹಾಭಾಗ ಪ್ರೀತಸ್ತೇಹಂ ಜನೇಶ್ವರ||ತಪಸಾಚ ಸು ತಪ್ತೇನ ವರಂವರಯ ಸುವ್ರತ ||೧೬|| ತಮುವಾಚ ಮಹಾತೇಜಾ ಸ್ಸರ್ವಲೋಕ ಪಿತಾಮಹಂ ||ಭಗೀರಥೋ ಮಹಾಭಾಗಃ ಕೃತಾಂಜಲಿರುಪಸ್ಥಿತಃ ||೧೭|| ಯದಿ ಮೇ ಭಗವನ್ ಪ್ರೀತೋ ಯದ್ಯಸ್ತಿ

---

ಸ್ರಾಣಿ - ಸಹಸ್ರ ವರ್ಷಗಳು, ಅತೀತಾನಿ - ಕಳೆದವು. || ೧೩ || ಮಹಾತ್ಮನಃ-ಮಹಾತ್ಮನಾದ, ತಸ್ಯರಾಜ್ಞಃ-ಆ ಭಗೀರಥನ ತಪಸ್ಸಿಗೆ, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಪ್ರಜಾನಾಂ-ಪ್ರಜೆಗಳಿಗೆ, ಪತಿಃ - ಅಧಿಪತಿಯಾದ, ಈಶ್ವರಃ - ನಿಯಾಮಕನಾದ, ಬ್ರಹ್ಮಾ-ಚತುರ್ಮುಖ ಬ್ರಹ್ಮನು, ಸುಪ್ರೀತಃ - ಸಂತುಷ್ಟನಾದನು. || ೧೪ || ತತಃ-ಸಂತುಷ್ಟನಾದ ಬಳಿಕ, ಪಿತಾಮಹಃ-ಬ್ರಹ್ಮನು, ಸುರಗಣೈಸ್ಸಾರ್ಧಂ-ದೇವತಾ ತಂಡಗಳಿಂದೊಡಗೂಡಿ, ಉಪಾಗಮ್ಯ-ಬಂದು, ತಪ್ಯಮಾನಂ-ತಪವಂಗೈಯುತ್ತಿರುವ, ಮಹಾತ್ಮಾನಂ - ಮಹಾತ್ಮನಾದ, ಭಗೀರಥಂ - ಭಗೀರಥನನ್ನು ಕುರಿತು, ಅಬ್ರವೀತ್ - ನುಡಿದನು. || ೧೫ || ಹೇ ಮಹಾಭಾಗ - ಎಲೈ ಮಹಾ ಪುಣ್ಯಶಾಲಿಯೆ, ಹೇಜನೇಶ್ವರ-ಎಲೈ ರಾಜನಾದ, ಹೇಭಗೀರಥ-ಎಲೈ ಭಗೀರಥನೆ, ಸುತಪ್ತೇನ-ಚನ್ನಾಗಿ ತಪಿಸಲ್ಪಟ್ಟ, ತೇ-ನಿನ್ನ, ತಪಸಾಚ - ತಪಸ್ಸಿನಿಂದ, ಅಹಂ - ನಾನು, ಪ್ರೀತಃ - ಸಂತುಷ್ಟನಾದೆನು, ಹೇಸುವ್ರತ-ಮಹಾ ನಿಯಮವುಳ್ಳವನೆ, ವರಂ - ಇಷ್ಟಾರ್ಥವನ್ನು, ವರಯ - ಬೇಡಿಕೊ. || ೧೬ || ಮಹಾಭಾಗಃ - ಮಹಾ ಭಾಗ್ಯಶಾಲಿಯಾದ, ಮಹಾತೇಜಾಃ - ತಪೋಜನ್ಯದಿಂದ ಮಹಾ ತೇಜಸ್ವಿಯೂ ಆದ, ಭಗೀರಥಃ - ಭಗೀರಥನು, ಸರ್ವಲೋಕಪಿತಾಮಹಂ - ಎಲ್ಲ ಲೋಕಗಳಿಗೂ ಸೃಷ್ಟಿಕರ್ತನಾದ, ತಂ - ಆ ಚತುರ್ಮುಖ ಬ್ರಹ್ಮನನ್ನು, ಉಪಸ್ಥಿತಃ – ಸಮೀಪಿಸಿ, ಕೃತಾಂಜಲಿಃ - ಅಂಜಲಿಬದ್ಧನಾಗಿ, ಉವಾಚ - ಹೇಳಿದನು || ೧೭ || ಹೇಭಗವನ್ - ಎಲೈ ಪೂಜ್ಯನೆ, ತ್ವಂ - ನೀನು, ಮೇ-ನನ್ನಲ್ಲಿ, ಪ್ರೀತೋಯದಿ - ಸಂತುಷ್ಟನಾಗಿದ್ದರೆ, ತಪಸಃ - ತಪಸ್ಸಿಗೆ, ಫಲಂ - ಫಲವು, ಅಸ್ತಿಯದಿ-ಇರುವುದಾದರೆ, ಸಗರಸ್ಯ - ಸಗರ ಚಕ್ರವರ್ತಿಯ, ಆತ್ಮಜಾಃ - ಕುಮಾರರು, ಸರ್ವೇ-ಎಲ್ಲರೂ,

---

ಪ್ರಜೆಗಳೊಡೆಯನಾದ ಬ್ರಹ್ಮನು ಸಂತಸಗೊಂಡು, ದೇವತೆಗಳ ಗುಂಪಿನಿಂದೊಡಗೂಡಿದವನಾಗಿ ಮಹಾತ್ಮನಾದ ಭಗೀರಥನ ಬಳಿಸಾರಿ "ಎಲೈ ಭಾಗ್ಯಶಾಲಿಯಾದ ಭಗೀರಥನೇ ! ನೀನು ಮಾಡಿದ ಮಹತ್ತರವಾದ ತಪಸ್ಸಿನಿಂದ ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳುವವನಾಗು" ಎಂದನು. || ೧೬ || ಆಗಲಾ ಭಾಗ್ಯಶಾಲಿಯಾದ ಭಗೀರಥನು ಕೈಜೋಡಿಸಿ, ಆ ಬ್ರಹ್ಮನನ್ನು ಕುರಿತು, "ಪೂಜ್ಯನೇ ! ನೀನು ಸಂತಸಗೊಂಡವನೇ ಆಗಿದ್ದರೆ, ತಪಸ್ಸಿಗೆ ಫಲವೆಂಬುದಿದ್ದರೆ, ಗಂಗೋದಕದಲ್ಲಿ ನಮ್ಮ ಪ್ರಪಿತಾಮಹರ ಭಸ್ಮವೆಲ್ಲವೂ ನೆನೆದು ಆ ಸಗರ ಕುವರರೆಲ್ಲರೂ ನನ್ನಿಂದ ತಿಲೋದಕಗಳನ್ನು ಪಡೆದು ಸ್ವರ್ಗವನ್ನು ಸೇರುವವರಾಗಲಿ. ಇಕ್ಷ್ವಾಕು ಕುಲದಲ್ಲಿ ಎಂದಿಗೂ ಸಂತತಿಯು ಕೊನೆಗಾಣದಿರಲು ಸಂತತಿಯು ಕೊಡ

ತಪಸಃಫಲಂ || ಸಗರಸ್ಯಾತ್ಮಜಾಸ್ಸರ್ವೇ ಮತ್ತಸ್ಸಲಿಲಮಾಪ್ನುಯುಃ || ೧೮ || ಗಂಗಾಯಾಸ್ಸಲಿಲಕ್ಲಿನ್ನೇ ಭಸ್ಮನ್ಯೇಷಾಂ ಮಹಾತ್ಮನಾಂ | ಸ್ವರ್ಗಂಗಚ್ಛೇಯುರತ್ಯಂತಂ ಸರ್ವೇ ಮೇ ಪ್ರಪಿತಾಮಹಾಃ ||೧೯|| ದೇಯಾಚ ಸಂತತಿ ರ್ದೇವ ನಾವಸೀದೇತ್ಕುಲಂಚನಃ || ಇಕ್ಷ್ವಾಕೂಣಾಂ ಕುಲೇದೇವ ಏಷ ಮೇಸ್ತು ವರಃವರಃ ||೨೦|| ಉಕ್ತವಾಕ್ಯಂ ತು ರಾಜಾನಂ ಸರ್ವಲೋಕ ಪಿತಾಮಹಃ|| ಪ್ರತ್ಯುವಾಚ ಶುಭಾಂ ವಾಣೀಂ ಮಧುರಾಂ ಮಧುರಾಕ್ಷರಾಂ ||೨೧|| ಮನೋರಥೋಮಹಾನೇಷ ಭಗೀರಥಮಹಾರಥ || ಏವಂ ಭವತು ಭದ್ರಂ ತೇ ಇಕ್ಷ್ವಾಕುಕುಲವರ್ಧನ ||೨೨|| ಇಯಂ ಹೈಮವತೀ ಗಂಗಾ ಜ್ಯೇಷ್ಠಾ ಹಿಮವತ

---

ಮತ್ತಃ - ನನ್ನ ದೆಶೆಯಿಂದ, ಸಲಿಲಂ - ಉದಕ ಕ್ರಿಯೆಗಳನ್ನು, ಆಪ್ನುಯುಃ - ಹೊಂದಿದವರಾಗಲಿ, || ೧೮ || ಮಹಾತ್ಮನಾಂ - ಆ ಮಹಾತ್ಮರಾದ, ಏಷಾಂ - ಈ ಸಗರ ಪುತ್ರರ, ಭಸ್ಮನಿ-ಭಸ್ಮವು, ಗಂಗಾಯಾಃ - ಗಂಗಾ ನದಿಯ, ಸಲಿಲಕ್ಲಿನ್ನೇಸತಿ - ನೀರಿನಿಂದ ನೆನೆಯಿಸಲ್ಪಟ್ಟು, ಸರ್ವೇ-ಸಮಸ್ತರಾದ, ಮೇ - ನನ್ನ, ಪ್ರಪಿತಾಮಹಾಃ - ಮುತ್ತಾತಂದರೆಲ್ಲರು, ಅತ್ಯಂತಂ - ಅಕ್ಷಯವಾದ, ಸ್ವರ್ಗಂ - ಸ್ವರ್ಗವನ್ನು, ಗಚ್ಛೇಯುಃ - ಹೊಂದಿದವರಾಗಲಿ, || ೧೯ || ಹೇದೇವ- ಎಲೈಬ್ರಹ್ಮನೆ, ಯಯಾ - ಯಾವ ಸಂತಾನದಿಂದ, ನಃ - ನಮ್ಮ, ಕುಲಂಚ - ವಂಶವು, ನಾವಸೀದೇತ್ - ನಷ್ಟವಾಗದೆ ಇದ್ದೀತೋ, ಸಾ-ಅಂತಹ, ಸಂತತಿಶ್ಚ - ಸಂತಾನವು, ದೇಯಾ - ಕೊಡತಕ್ಕದು, ಹೇದೇವ-ಎಲೈ ಸ್ವಾಮಿಯೆ! ಇಕ್ಷ್ವಾಕೂಣಾಂ - ಇಕ್ಷ್ವಾಕು ವಂಶಸ್ಥರ, ಕುಲೇ- ವಂಶದಲ್ಲಿ, ಜಾತಸ್ಯ-ಹುಟ್ಟಿದ, ಮೇ - ನನಗೆ, ಪರಃ - ಶ್ರೇಷ್ಠವಾದ, ಏಷಃವರಃ-ಈ ವರವು, ಅಸ್ತು-ಅನುಗ್ರಹವಾಗಲಿ. ||೨೦||ಉಕ್ತವಾಕ್ಯಂ-ಹೇಳಲ್ಪಟ್ಟ ಮಾತುಳ್ಳ, ರಾಜಾನಂ-ಭಗೀರಥರಾಯನನ್ನು ಕುರಿತು, ಸರ್ವಲೋಕ ಪಿತಾಮಹಃ - ಸರ್ವಲೋಕ ಸೃಷ್ಟಿಕರ್ತನಾದ ಚತುರ್ಮುಖನು, ಶುಭಾಂ ಶುಭಕರವಾದ, ಮಧುರಾಂ-ಕಿವಿಗಿಂಪಾಗಿರುವ, ಮಧುರಾಕ್ಷರಾಂ - ಮಧುರವಾದ ಅಕ್ಷರಗಳುಳ್ಳ, ವಾಣೀಂ - ವಾಕ್ಯವನ್ನು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು. || ೨೧ || ಹೇಮಹಾರಥ - ಮಹಾ ರಥಿಕನಾದ, ಭಗೀರಥ-ಭಗೀರಥನೆ, ಏಷಮನೋರಥಃ- ಈ ಮನಸ್ಸಂಕಲ್ಪವು, ಮಹಾನ್ - ದೊಡ್ಡದು, ಹೇಇಕ್ಷ್ವಾಕು ಕುಲವರ್ಧನ - ಇಕ್ಷ್ವಾಕು ಕುಲಾಭಿವೃದ್ಧಿಕರನೆ, ಏವಂ - ಹಾಗೆಯೆ, ಭವತು - ಆಗಲಿ, ತೇ-ನಿನಗೆ ಭದ್ರಂ - ಶುಭವು, ಅಸ್ತು - ಆಗಲಿ, || ೨೨ || ಇಯಂಗಂಗಾ - ಈ ಗಂಗೆಯೂ, ಹೈಮವತೀ-ಹಿಮವತ್ಪರ್ವತದಲ್ಲಿ ಹುಟ್ಟಿರುವುದು, ಹಿಮವತಃ-ಹಿಮವತ್ಪರ್ವತಕ್ಕೆ, ಜ್ಯೇಷ್ಠಸುತಾ - ಜ್ಯೇಷ್ಠಪುತ್ರಿ

---

ಲ್ಪಡಲಿ, ಇದೇ ನನಗೆ ಬೇಕಾದ ಶ್ರೇಷ್ಠವರವು" ಎಂದನು, ಇಂತು ನುಡಿದ ಭಗೀರಥನ ಮಾತುಗಳನ್ನು ಕೇಳಿ ಸಕಲ ಲೋಕ ಪಿತಾಮಹನಾದ ಬ್ರಹ್ಮನು ಮೃದುಮಧುರವಾಗಿಯೂ ಮಂಗಳಕರವಾಗಿಯೂ ಇರುವ ಈ ಮಾತನ್ನಾಡಿದನು "ಎಲೈ ಭಗೀರಥನೇ! ನಿನ್ನ ಮನೋರಥವು ಮಹತ್ತರವಾದುದು. ಎಲೈ ಇಕ್ಷ್ವಾಕುಕುಲವರ್ಧನನೇ! ಆದರೂ ನಿನ್ನ ಮನದಂತೆಯೇ ಆಗಲಿ. ನಿನಗೆ ಮಂಗಳವಾಗಲಿ ಕೇಳು. ಈ ಗಂಗೆಯು ಹಿಮವಂತನ ಜ್ಯೇಷ್ಠ ಕುವರಿಯು. ಈನದಿಯ ಪತನವನ್ನು ಧರಿಸಲು ಶಂಕರನು ನಿಯೋಗಿಸಲ್ಪಡಲಿ.

ಸ್ಸುತಾ ||ತಾಂವೈಧಾರಯಿತುಂ ಶಕ್ತೋ ಹರಸ್ತತ್ರ ನಿಯುಜ್ಯತಾಂ || ೨೩ ||
ಗಂಗಾಯಾಃಪತನಂರಾಜನ್ ಪೃಥಿವೀನಸಹಿಷ್ಯತಿ|| ತಾಂವೈ ಧಾರಯಿತುಂ ವೀರ
ನಾನ್ಯಂ ಪಶ್ಯಾಮಿ ಶೂಲಿನಃ || ೨೪ || ತಮೇವಮುಕ್ತ್ವಾ ರಾಜಾನಂ ಗಂಗಾಂ
ಚಾಭಾಷ್ಯ ಲೋಕಕೃತ್|| ಜಗಾಮ ತ್ರಿದಿವಂ ದೇವಸ್ಸಹ ದೇವೈರ್ಮರುದ್ಗಣೈಃ||
||೨೫||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಚತ್ವಾರಿಂಶಸ್ಸರ್ಗಃ.

---

ಯಾಗಿರುವಳು, ತಾಂವೈ-ಆ ಗಂಗಾನದಿಯನ್ನು, ಧಾರಯಿತುಂ-ಧರಿಸಲು, ಹರಃ - ಪರಮೇಶ್ವರನು, ಶಕ್ತಃ - ಸಮರ್ಥನು, ತತ್ರ-ಆ ವಿಷಯದಲ್ಲಿ, ನಿಯುಜ್ಯತಾಂ - ಪ್ರಾರ್ಥಿಸಲ್ಪಡಲಿ, || ೨೩ || ಹೇರಾಜನ್ - ಎಲೈ ಭಗೀರಥನೆ, ಪೃಥಿವೀ-ಭೂಮಿಯು, ಗಂಗಾಯಾಃ-ಗಂಗಾನದಿಯ, ಪತನಂ-ಬೀಳುವಿಕೆಯನ್ನು, ನಸಹಿಷ್ಯತಿ-ಸಹಿಸಲಾರದು, ಹೇವೀರ - ಎಲೈ ವೀರನೆ, ತಾಂವೈ - ಆ ಗಂಗಾನದಿಯನ್ನು, ಧಾರಯಿತುಂ-ಧರಿಸಲು, ಶೂಲಿನಃ - ಪರಮೇಶ್ವರನಿಗಿಂತಲೂ, ಅನ್ಯಂ-ಮತ್ತೊಬ್ಬ ಪುರುಷನನ್ನು, ನಪಶ್ಯಾಮಿ-ಕಾಣೆನು. ||೨೪|| ಲೋಕಕೃತ್ - ಲೋಕ ಸೃಷ್ಟಿಕರ್ತನಾದ, ದೇವಃ-ಬ್ರಹ್ಮನು, ತಂರಾಜಾನಂ - ಆ ಭಗೀರಥರಾಯನನ್ನು ಕುರಿತು, ಏವಂ - ಹೀಗೆ, ಉಕ್ತ್ವಾ ಹೇಳಿ, ಗಂಗಾಚ - ಗಂಗಾನದಿಯನ್ನು ಕುರಿತು, ಅಭಾಷ್ಯ-ಮಾತನಾಡಿ, ಸಹದೇವೈಃ- ದೇವತೆಗಳಿಂದೊಡಗೂಡಿದ, ಮರುದ್ಗಣೈಃ- ಸಪ್ತಮರುತ್ತುಗಳ ಗುಂಪುಗಳೊಡನೆ, ತ್ರಿದಿವಂ ಸ್ವರ್ಗವನ್ನು ಕುರಿತು, ಜಗಾಮ - ತೆರಳಿದನು. || ೨೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಚತ್ವಾರಿಂಶಸ್ಸರ್ಗಃ.



---

ಈ ಭೂಮಿಯು ಗಂಗಾನದಿಯ ಪತನವನ್ನು ಸಹಿಸಲಾರಳು. ಈ ನದಿಯನ್ನು ಧರಿಸಲು, ಶಂಕರನನ್ನುಳಿದು ಮತ್ತಾರೂ ಇಲ್ಲವು.'' ಇಂತು ನುಡಿದ ಬ್ರಹ್ಮನು ಗಂಗೆಯನ್ನು ಕುರಿತು, ''ದೇವಿ ! ಸಮಯವನ್ನರಿತು ಭಗೀರಥರಾಯನ ಮನೋರಥವನ್ನು ಪೂರ್ಣಗೊಳಿಸು.'' ಎಂದು ಹೇಳಿ, ದೇವತಾ ಗಣಗಳಿಂದಲೂ, ಮರುದ್ಗಣಗಳಿಂದಲೂ, ಒಡಗೂಡಿದವನಾಗಿ, ಸ್ವರ್ಗಲೋಕಕ್ಕೆ ಹಿಂತಿರುಗಿದನು. ||೨೫||

ಇಂತಿದು ಭಗೀರಥ ಕೃತ ತಪಃಫಲ ವೃತ್ತಾಂತ ವರ್ಣನವೆಂಬ
ನಲವತ್ತೆರಡನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ತ್ರಿಚತ್ವಾರಿಂಶಸ್ಸರ್ಗಃ.

---

**ದೇವದೇವೇ ಗತೇ ತಸ್ಮಿನ್ ಸೋಽಂಗುಷ್ಠಾಗ್ರ ನಿಪೀಡಿತಾಂ||ಕೃತ್ವಾ ವಸುಮತೀಂ ರಾಮ ಸಂವತ್ಸರಮುಪಾಸತ ||೧|| (ಊರ್ಧ್ವಬಾಹುರ್ನಿರಾಲಂಬೋ ವಾಯುಭಕ್ಷೋಽನಿರಾಶ್ರಯಃ || ಅಚಲಸ್ಥಾಣುವತ್ ಸ್ಥಿತ್ವಾ ರಾತ್ರಿಂ ದಿವಮರಿಂದಮ||) ಅಥ ಸಂವತ್ಸರೇ ಪೂರ್ಣೇ ಸರ್ವಲೋಕ ನಮಸ್ಕೃತಃ|| ಉಮಾಪತಿಃ ಪಶುಪತೀ ರಾಜಾನಮಿದಮಬ್ರವೀತ್ ||೨|| ಪ್ರೀತಸ್ತೇಽಹಂ ನರಶ್ರೇಷ್ಠ ಕರಿಷ್ಯಾಮಿ ತವ**

---

ಹೇರಾಮ - ಎಲೈ ರಾಮನೆ, ದೇವದೇವೆ - ದೇವೋತ್ತಮನಾದ, ಅಸ್ಮಿನ್-ಆ ಬ್ರಹ್ಮದೇವನು, **ಗತೇಸತಿ - ಹೊರಟುಹೋಗಲು,** ಸಃ - ಆ ಭಗೀರಥನು, ವಸುಮತೀಂ - ಭೂಮಿಯನ್ನು, ಅಂಗು **ಷ್ಠಾಗ್ರನಿಪೀಡಿತಾಂ,** ಅಂಗುಷ್ಠಾಗ್ರ - ಹೆಬ್ಬಟ್ಟಿನ ತುದಿಯಿಂದ, ನಿಪೀಡಿತಾಂ - ತುಳಿದುದನ್ನಾಗಿ, **ಕೃತ್ವಾ - ಮಾಡಿ,** ಸಂವತ್ಸರಂ - ಒಂದು ವರುಷ, ಉಪಾಸತ - ಉಪಾಸನೆ ಮಾಡಿದನು || ೧ || **(ಹೇ ಅರಿಂದಮ** - ಎಲೈ ಶತೃಸಂಹಾರಕನೆ, ! ಸಭಗೀರಥಃ - ಆ ಭಗೀರಥನು, ಊರ್ಧ್ವಬಾಹುಃ- **ಎತ್ತಲ್ಪಟ್ಟ ತೋಳುಗಳುಳ್ಳವನಾಗಿಯೂ,** ನಿರಾಲಂಬಃ-ಆಸರೆ ಇಲ್ಲದೆಯೂ, ವಾಯುಭಕ್ಷಃ-ಗಾಳಿಯೇ **ಆಹಾರವನ್ನುಳ್ಳವನಾಗಿಯೂ,** ನಿರಾಶ್ರಯಃ - ಇತರರ ಆಶ್ರಯವಿಲ್ಲದವನಾಗಿಯೂ, ಸ್ಥಾಣುವತ್- **ಕಲ್ಲಿನಂತೆ,** ಅಚಲಃ-ಚಲನೆಯಿಲ್ಲದೆ, ರಾತ್ರಿಂದಿವಂ-ಹಗಲಿರುಳು, ಉಪಾಸತ-ಶಿವನನ್ನು ಪಾಸಿಸಿದನು.) ಸಂವತ್ಸರೇ - ಸಂವತ್ಸರವು, ಪೂರ್ಣೇಸತಿ - ಕಳೆಯಲು, ಅಥ - ಬಳಿಕ, ಸರ್ವಲೋಕನಮಸ್ಕೃತಃ- ಸಮಸ್ತ ಜನರಿಂದಲೂ ನಮಸ್ಕರಿಸಲ್ಪಟ್ಟ. ಪಶುಪತಿಃ - (ಗೋ) ಪಶುಪತಿಯಾದ, (ಮ) ಅಜ್ಞಾನಿಗಳೆಂಬ ನರಪಶುಗಳಿಗೆ ಜ್ಞಾನೋಪದೇಶವನ್ನು ಮಾಡಿ, ಜ್ಞಾನಕ್ಕೆ ದ್ವಾರಪಾಲಕನಾಗಿರುವ, ಉಮಾ **ಪತಿಃ**-(ಮ) ಪಾರ್ವತೀ ಪತಿಯಾದ, (ಗೋ)ಮಾಯಾಪತಿಯಾದ ಈಶ್ವರನು, ರಾಜಾನಂ-ಭಗೀರಥನನ್ನು **ಕುರಿತು,** ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೨ || ಹೇನರಶ್ರೇಷ್ಠ - ಎಲೈ ನರಶ್ರೇಷ್ಠನೆ, ಅಹಂ - ನಾನು, ತೇ- ನಿನಲ್ಲಿ, ಪ್ರೀತಃ - ಸಂತುಷ್ಟನಾಗಿರುವೆನು, ತವ-ನಿನಗೆ, **ಪ್ರಿಯಂ - ಇಷ್ಟವನ್ನು,** ಕರಿಷ್ಯಾಮಿ - ಮಾಡುವೆನು, ಅಹಂ - ನಾನು, ಶೈಲರಾಜಸುತಾಂ-ಹಿಮವ

---

ಅಯ್ಯಾ ರಾಮಚಂದ್ರನೆ ! ನಾಲ್ಮುಗನಿಂತು ಬ್ರಹ್ಮಲೋಕವನ್ನು ಕುರಿತು, ಹೊರಟು ಹೋಗಲು,ಮಹಾತ್ಮನಾದ ಭಗೀರಥ ರಾಯನು, ಊರ್ಧ್ವಬಾಹುವೂ, ವಾಯುಭಕ್ಷಕನೂ, ನಿರಾಲಂಬನೂ, ಅಂಗುಷ್ಠ ಮಾತ್ರದಿಂದ ತುಳಿಯಲ್ಪಟ್ಟ ಭೂಮಿಯುಳ್ಳವನೂ ಆಗಿ, ಒಂದು ಸಂವತ್ಸರ ಕಾಲ ಶಂಕರನನ್ನು ಕುರಿತು ತಪವಂಗೈದನು. ಹೀಗೆ ಒಂದು ವರ್ಷವು ಪೂರ್ಣವಾಗಲು, ಸಕಲ ಲೋಕ ವಂದಿತನಾದ ಪಾರ್ವತೀ ರಮಣನು, ಆ ಭಗೀರಥ ರಾಯನನ್ನು ಕುರಿತು, "ಎಲೈ ಪುರುಷಶ್ರೇಷ್ಠನೆ ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನ್ನ ಇಷ್ಟದಂತೆ ಗಿರಿರಾಜ ಕುವರಿಯಾದ ಗಂಗಾನದಿಯನ್ನು ಶಿರಸ್ಸಿನಿಂದ

ಪ್ರಿಯಂ || ಶಿರಸಾಧಾರಯಿಷ್ಯಾಮಿ ಶೈಲರಾಜ ಸುತಾಮಹಂ || ೩ || ತತೋ ಹೈಮವತೀ ಜ್ಯೇಷ್ಠಾ ಸರ್ವಲೋಕನಮಸ್ಕೃತಾ || ತದಾಸಾತಿಮಹದ್ರೂಪಂ ಕೃತ್ವಾವೇಗಂಚ ದುಸ್ಸಹಂ ||೪|| ಆಕಾಶಾದಪತದ್ರಾಮ ಶಿವೇಶಿವಶಿರಸ್ಯುತ || ಅಚಿಂತಯಚ್ಚ ಸಾ ದೇವೀ ಗಂಗಾ ಪರಮದುರ್ಧರಾ ||೫|| ವಿಶಾಮ್ಯಹಂಹಿ ಪಾತಾಳಂ ಸ್ರೋತಸಾ ಗೃಹ್ಯಶಂಕರಂ || ತಸ್ಯಾವಲೇಪನಂ ಜ್ಞಾತ್ವಾ ಕ್ರುದ್ಧಸ್ತು ಭಗವಾನ್ ಹರಃ||೬||ತಿರೋಭಾವಯಿತುಂ ಬುದ್ಧಿಂ ಚಕ್ರೇತ್ರಿಣಯನಸ್ತದಾ|| ಸಾ ತಸ್ಮಿನ್ ಪತಿತಾ ಪುಣ್ಯಾ ಪುಣ್ಯೇ ರುದ್ರಸ್ಯ ಮೂರ್ಧನಿ ||೭|| ಹಿಮವತ್ಪ್ರತಿ

---

ತ್ಪುತ್ರಿಕೆಯಾದ ಗಂಗೆಯನ್ನು, ಶಿರಸಾ - ಶಿರಸ್ಸಿನಿಂದ, ಧಾರಯಿಷ್ಯಾಮಿ - ಧರಿಸುವೆನು. || ೩ || ಹೇರಾಮ - ಎಲೈ ಶ್ರೀರಾಮನೆ, ತತಃ - ಬಳಿಕ, ಸರ್ವಲೋಕನಮಸ್ಕೃತಾ - ಸರ್ವ ಜನರಿಂದಲೂ, ನಮಸ್ಕರಿಸಲ್ಪಟ್ಟ, ಜ್ಯೇಷ್ಠಾ - ಜ್ಯೇಷ್ಠಳಾದ, ಹೈಮವತೀ - ಹಿಮವತ್ಪುತ್ರಿಯಾದ, ಸಾ-ಆ ಗಂಗೆಯು, ತದಾ - ಆ ಕಾಲದಲ್ಲಿ, ಅತಿಮಹತ್ - ಬಹಳ ದೊಡ್ಡದಾದ, ರೂಪಂ - ಆಕಾರವನ್ನು, ದುಸ್ಸಹಂ - ಸಹಿಸಲಸಾಧ್ಯವಾದ, ವೇಗಂಚ - ವೇಗವನ್ನೂ ಕೂಡ, ಕೃತ್ವಾ - ಹೊಂದಿ, ಶಿವೇ-ಶುಭಕರವಾದ, ಶಿವಶಿರಸಿ - ಈಶ್ವರನ ಮಂಡೆಯಲ್ಲಿ, ಆಕಾಶಾತ್ - ಅಂತರಿಕ್ಷದಿಂದ, ಅಪತತ್-ಬಿದ್ದಳಷ್ಟೆ. || ೪ || ಸಾಗಂಗಾ - ಆ ಗಂಗಾ ರೂಪಳಾದ, ದೇವೀ - ದೇವತೆಯು, ಪರಮದುರ್ಧರಾ - ಧರಿಸಲು ಅತ್ಯಶಕ್ಯಳಾಗಿ, ಶಂಕರಂ - ಪರಮೇಶ್ವರನನ್ನು, ಸ್ರೋತಸಾ-ಪ್ರವಾಹದಿಂದ, ಗೃಹ್ಯ - ಹಿಡಿದುಕೊಂಡು, ಅಹಂ - ನಾನು, ಪಾತಾಳಂ - ಪಾತಾಳ ಲೋಕವನ್ನು, ವಿಶಾಮಿ-ಪ್ರವೇಶಿಸುತ್ತೇನೆ, ಇತಿ - ಇಂತೆಂದು, ಅಚಿಂತಯಚ್ಚ - ಆಲೋಚಿಸಿದಳು. || ೫ || ತಸ್ಯ - ಆ ಗಂಗಾನದಿಯ, ಅವಲೇಪನಂ - ಗರ್ವವನ್ನು, ಜ್ಞಾತ್ವಾ - ತಿಳಿದು, ಕ್ರುದ್ಧಃ - ಕೋಪಿಷ್ಠನಾಗಿ, ಭಗವಾನ್ - ಪೂಜ್ಯನೂ, ತ್ರಿಣಯನಃ - ಮುಕ್ಕಣ್ಣನೂ ಆದ, ಹರಃ-ಪರಮೇಶ್ವರನು, ತದಾ - ಆಗ, ತಿರೋಭಾವಯಿತುಂ - ಅಂತರ್ಧಾನವಂ ಹೊಂದಲೋಸುಗ, ಬುದ್ಧಿಂ- ಬುದ್ಧಿಯನ್ನು ಚಕ್ರೇ - ಮಾಡಿದನು. || ೬ || ಹೇರಾಮ - ಎಲೈ ಶ್ರೀರಾಮನೆ, ಪುಣ್ಯಾ - ಪುಣ್ಯಕರಳಾದ, ಸಾ - ಆ ಗಂಗಾನದಿಯು, ಹಿಮವತ್ಪ್ರತಿಮೇ - ಹಿಮವತ್ಪರ್ವತವೆಂಬ ಬೆಟ್ಟಕ್ಕೆ ಸಮಾನವಾದ ರುದ್ರಸ್ಯ - ಪರಮೇಶ್ವರನ, ತಸ್ಮಿನ್‌ಮೂರ್ಧನಿ - ಆ ಶಿರಸ್ಸಿನಲ್ಲಿ, ಜಟಾಮಂಡಲಗಹ್ವರೇ- ಜಟೆಗಳ

---

ಧಾರಣೆಮಾಡುವೆನು.” ಎಂದನು. || ೩ || ಆ ಬಳಿಕ ಲೋಕವಂದಿತಳಾದ ಗಂಗಾನದಿಯು ಮಹತ್ತರವಾದ ರೂಪವನ್ನೂ, ಮಹಾ ವೇಗವನ್ನೂ ತಾಳಿ, ಮಂಗಳಕರವಾದ ಆ ಶಿವಶಿರಸ್ಸಿನಲ್ಲಿ ಆಕಾಶದಿಂದ ಬಿದ್ದವಳಾದಳಷ್ಟೆ. || ೪ || ಆಗ ಧರಿಸಲು ಅತ್ಯಸಾಧ್ಯಳಾದ ಗಂಗಾದೇವಿಯು “ನಾಸೀಗ ಪ್ರವಾಹಗಳಿಂದ ಶಂಕರನನ್ನು ಮುಳುಗಿಸಿ, ಪಾತಾಳಲೋಕವನ್ನು ಹೊಗುವೆನಲ್ಲವೆ,? ಎಂದು ಯೋಚಿಸಿ ಅಹಂಕಾರವನ್ನು ಹೊಂದಿದಳು. ಗಂಗಾನದಿಯ ಗರ್ವವನ್ನು ತಿಳಿದ, ಪೂಜ್ಯನೂ ಭೂತಭಾವನನೂ ಆದ, ಶಂಕರನು ಕೋಪಗೊಂಡು ಆ ನದಿಯನ್ನು ತನ್ನ ಜಟೆಗಳಲ್ಲಿಯೇ ಅಡಗಿಸಿಕೊಳ್ಳಲು ಮನದೆರದನು.||೫-೬|| ಎಲೈ ರಾಮನೆ ! ಆ ಬಳಿಕ ಪುಣ್ಯವತಿಯಾದ ಆ ಗಂಗೆಯು ಹಿಮವತ್ಪರ್ವತಕ್ಕೆ ಸಮಾನ

ಮೇ ರಾಮ ಜಟಾಮಂಡಲ ಗಹ್ವರೇ||ಸಾ ಕಥಂ ಚಿನ್ಮಹೀಂ ಗಂತುಂ ನಾಶಕ್ನೋ ದ್ಯತ್ನಮಾಸ್ಥಿತಾ ||೮|| ನೈವ ನಿರ್ಗಮನಂ ಲೇಭೇ ಜಟಾಮಂಡಲ ಮೋಹಿತಾ|| ತತ್ರೈವಾಬಂಭ್ರಮದ್ದೇವೀ ಸಂವತ್ಸರಗಣಾನ್ ಬಹೂನ್ || ೯ || ತಾಮಪಶ್ಯನ್ ಪುನಸ್ತತ್ರತಪಃ ಪರಮಮಾಸ್ಥಿತಃ||ಅನೇನ ತೋಷಿತಶ್ಚಾಭೂದತ್ಯರ್ಥಂ ರಘು ನಂದನ || ೧೦ || ವಿಸಸರ್ಜ ತತೋ ಗಂಗಾಂ ಹರೋ ಬಿಂದುಸರಃ ಪ್ರತಿ || ತಸ್ಯಾಂವಿಸೃಜ್ಯಮಾನಾಯಾಂ ಸಪ್ತಸ್ರೋತಾಂಸಿ ಜಜ್ಞಿರೇ ||೧೧|| ಹ್ಲಾದಿನೀ ಪಾವನೀ ಚೈವ ನಳಿನೀ ಚ ತಥಾಪರಾ|| ತಿಸ್ರಃ ಪ್ರಾಚೀಂದಿಶಂ ಜಗ್ಮುರ್ಗಂಗಾ

---

ಸಮೂಹವೆಂಬ ಗುಹೆಯಲ್ಲಿ, ಪತಿತಾ - ಬಿದ್ದಳು. || ೭ || ಸಾ - ಆ ಗಂಗಾನದಿಯು, ಮಹೀಂ- ನೆಲವನ್ನು, ಗಂತುಂ - ಪ್ರವೇಶಿಸಲು, ಯತ್ನಂ - ಪ್ರಯತ್ನವನ್ನು, ಅಸ್ಥಿತಾ - ಹೊಂದಿ. ಕಥಂ ಚಿತ್ - ಅತಿಪ್ರಯಾಸದಿಂದಲೂ, ನಶಕ್ನೋತ್- ಸಮರ್ಥಳಾಗಲಿಲ್ಲವು, ಜಟಾಮಂಡಲಮೋಹಿತಾ- ಜಡೆಗಳ ಗುಂಪುಗಳಿಂದ ಭ್ರಾಂತಳಾಗಿ, ನಿರ್ಗಮನಂ - ಜಡೆಗಳನ್ನುಬಿಟ್ಟು ಈಚೆಗೆ ಬರುವಿಕೆಯನ್ನು, ನೈವಲೇಭೇ-ಹೊಂದದೇನೇ ಹೋದಳು. ||೮|| ದೇವೀ-ಗಂಗಾನದಿಯು, ಬಹೂನ್-ಅನೇಕ, ಸಂವತ್ಸರ ಗಣಾನ್-ಸಂವತ್ಸರಗಳು, ತತ್ರೈವ - ಆ ಜಟಾಮಂಡಲದಲ್ಲಿಯೇ, ಅಬಂಭ್ರಮತ್-ಸುತ್ತಾಡುತ್ತಿದ್ದಳು, ತತ್ರ-ಆಶಿವನ ಶಿರಸ್ಸಿನಲ್ಲಿ, ತಾಂಪುನಃ-ಮರಳಿ ಆ ಗಂಗೆಯನ್ನು,ಅಪಶ್ಯನ್-ನೋಡದೇಇರುವ, ಸಃ - ಆ ಭಗೀರಥನು, ಪರಮಂ - ಬಹಳವಾದ, ತಪಃ - ತಪಸ್ಸನ್ನು, ಅಸ್ಥಿತಃ-ಮಾಡಿದನು. ||೯|| ಹೇರಘುನಂದನ - ಎಲೈ ರಘುಕುಲಾನಂದಕರನೆ, ಅನೇನ - ಈ ತಪಸ್ಸಿನಿಂದ, ಹರಃ-ಈಶ್ವರನು, ಅತ್ಯರ್ಥಂ - ಬಹಳವಾಗಿ, ತೋಷಿತಶ್ಚ - ಸಂತೋಷಿಸಲ್ಪಟ್ಟವನು, ಅಭೂತ್ - ಆದನು, ತತಃ- ಬಳಿಕ, ಗಂಗಾಂ - ಗಂಗಾನದಿಯನ್ನು, ಬಿಂದುಸರಃಪ್ರತಿ - ಬಿಂದು ಸರೋವರವನ್ನು ಕುರಿತು, ವಿಸ ಸರ್ಜ - ಬಿಟ್ಟನು. || ೧೦ || ವಿಸೃಜ್ಯಮಾನಾಯಾಂ- ಬಿಡಲ್ಪಡುತ್ತಿರುವ, ತಸ್ಯಾಂ-ಆ ಗಂಗೆಯಲ್ಲಿ, ಸಪ್ತಸ್ರೋತಾಂಸಿ - ಏಳು ಪ್ರವಾಹಗಳು, ಜಜ್ಞಿರೇ - ಆದವು. || ೧೧ || ಹ್ಲಾದಿನೀ-ಹ್ಲಾದಿನೀ ಎಂತಲೂ, ಪಾವನೀ - ಪಾವನೀ ಎಂತಲೂ, ತಥಾ - ಹಾಗೆ, ಅಪರಾ - ಮತ್ತೊಂದಾದ, ನಳಿನೀಚ- ನಳಿನೀ ಎಂತಲೂ, ಶುಭಾಃ - ಶುಭಕರಗಳಾದ, ಶಿವಜಲಾಃ - ಶುಭಕರವಾದ ಉದಕವುಳ್ಳ,

---

ವಾದ ಶಿರಸ್ಸಿನಲ್ಲಿನ ಜಟಾಮಂಡಲವೆಂಬ ಗುಹೆಯಲ್ಲಿ ಬಿದ್ದವಳಾದಳು. ಇಂತು ಪತಿತ ಳಾದ ಗಂಗಾನದಿಯು ಆ ಶಂಭುವಿನ ಜಟಾಮಂಡಲದಿಂದ ಭ್ರಾಂತಳಾಗಿ, ಪ್ರಯತ್ನದಿಂ ದಲೂ ಹೊರಹೊರಡಲಶಕ್ಯಳಾಗಿ, ಅಲ್ಲಿಯೇ ಬಹಳ ವರ್ಷಗಳ ಕಾಲ ಸುತ್ತಾಡುತ್ತಿದ್ದಳು. ಇಂತಿರುವ ಗಂಗಾನದಿಯು ಅನೇಕ ವರ್ಷಗಳಾದರೂ ಕಾಣಿಸದೇ ಇರುವುದನ್ನು ನೋಡಿದ ಭಗೀರಥ ರಾಯನು ಮರಳಿಯೂ ಶ್ರೇಷ್ಠವಾದ ತಪವಂ ಗೈದನು. ||೯|| ಭಗೀರಥನ ಈ ತಪ ಸ್ಸಿನಿಂದ ಸಂತಸಗೊಂಡು ಶಂಕರನು ಆ ಗಂಗೆಯನ್ನು ಬಿಂದುಸರೋವರದ ಕಡೆಗೆ ಬಿಟ್ಟನು. ಇಂತು ಗಂಗೆಯು ಹರ ಜಟಾಮಂಡಲದಿಂದ ಭ್ರಷ್ಟವಾಗಲು ಅದರಿಂದ ಏಳು ಪ್ರವಾಹ ಗಳುಂಟಾದವು. || ೧೧ || ಈ ಏಳು ಪ್ರವಾಹಗಳಲ್ಲಿ ಹ್ಲಾದಿನೀ, ಪಾವನೀ, ನಳಿನೀ, ಎಂಬ ಮಂಗಳಕರವಾದ ಜಲವುಳ್ಳವುಗಳು ಪೂರ್ವ ದಿಕ್ಕನ್ನು ಕುರಿತು ಹೊರಟವು.

ಶ್ಚಿವಜಲಾಶ್ಯುಭಾಃ ॥ ೧೨ ॥ ಸುಚಕ್ಷುಶ್ಚೈವ ಸೀತಾಚ ಸಿಂಧುಶ್ಚೈವ ಮಹಾ
ನದೀ ॥ ತಿಸ್ರಸ್ತ್ವೇತಾ ದಿಶಂ ಜಗ್ಮುಃ ಪ್ರತೀಚೀಂತು ಶುಭೋದಕಾಃ ॥ ೧೩ ॥
ಸಪ್ತಮೀಚಾನ್ವಗಾತ್ತಾಸಾಂ ಭಗೀರಥ ಮಥೋನೃಪಂ ॥ ಭಗೀರಥೋಪಿ ರಾಜ
ರ್ಷಿರ್ದಿವ್ಯಂ ಸ್ಯಂದನಮಾಸ್ಥಿತಃ॥ಪ್ರಾಯಾದಗ್ರೇ ಮಹಾತೇಜಾ ಗಂಗಾ ತಂ ಚಾ
ಪ್ಯನುವ್ರಜತ್ ॥ ೧೪ ॥ ಗಗನಾಚ್ಛಂಕರಶಿರ ಸ್ತತೋ ಧರಣಿಮಾಶ್ರಿತಾ ॥
ವ್ಯಸರ್ಪತ ಜಲಂ ತತ್ರ ತೀವ್ರಶಬ್ದ ಪುರಸ್ಕೃತಂ ॥ ೧೫ ॥ ಮತ್ಸ್ಯಕಚ್ಛಪ

---

ತಿಸ್ರಃ - ಮೂರಾದ, ಗಂಗಾಃ - ಗಂಗಾನದಿಗಳು, ಪ್ರಾಚೀಂದಿಶಂ - ಪೂರ್ವ ದಿಕ್ಕನ್ನು ಕುರಿತು, ಜಗ್ಮುಃ - ಹೊರಟವು. ॥ ೧೨ ॥ ಸುಚಕ್ಷುಶ್ಚೈವ - ಸುಚಕ್ಷುಸ್ಸು ಎಂತಲೂ, ಸೀತಾಚ-ಸೀತಾ ದೇವಿಯೆಂತಲೂ, ಮಹಾನದೀ - ಮಹಾನದಿಯಾದ, ಸಿಂಧುಶ್ಚೈವ - ಸಿಂಧುವೆಂತಲೂ, ಶುಭೋದಕಾಃ - ಶುಭಕರವಾದ ಉದಕಗಳುಳ್ಳ, ಏತಾಸ್ತಿಸ್ರಃ - ಈ ಮೂರು, ಪ್ರತೀಚೀಂದಿಶಂತು ಪಶ್ಚಿಮ ದಿಕ್ಕನ್ನು ಕುರಿತು, ಜಗ್ಮುಃ - ಹೊರಟವು, ಅಥ - ಅನಂತರದಲ್ಲಿ, ತಾಸಾಂ - ಆ ಸಪ್ತ ಪ್ರವಾಹಗಳಲ್ಲಿ, ಸಪ್ತಮೀಚ - ಏಳನಯವಳಾದ ನದಿಯು, ಭಗೀರಥಂ - ಭಗೀರಥನೆಂಬ, ನೃಪಂ- ರಾಜನನ್ನು, ಅನ್ವಗಾತ್ - ಅನುಸರಿಸಿ ಹೋದಳು ॥ ೧೩ ॥ ಮಹಾತೇಜಾಃ - ಉಗ್ರ ತಪಸ್ಸಿನಿಂ ದುಂಟಾದ, ಅತಿಶಯವಾದ ತೇಜಸ್ಸುಳ್ಳ, ರಾಜರ್ಷಿಃ - ರಾಜರ್ಷಿಯಾದ, ಭಗೀರಥಃ-ಭಗೀರಥನು ದಿವ್ಯಂ - ದೇವತಾ ಸಂಬಂಧವಾದ, ಸ್ಯಂದನಂ - ರಥದಲ್ಲಿ, ಆಸ್ಥಿತಃ - ಕುಳಿತುಕೊಂಡು, ಅಗ್ರೇ- ಮುಂದುಗಡೆ, ಪ್ರಾಯಾತ್ - ಹೊರಟನು, ಗಂಗಾಚಾಪಿ-ಗಂಗಾನದಿಯೂ, ತಂ-ಆ ಭಗೀರಥನನ್ನು, ಅನುವ್ರಜತ್ - ಅನುಸರಿಸಿ ಹೋದಳು. ॥ ೧೪ ॥ ಗಗನಾತ್ - ಅಂತರಿಕ್ಷದಿಂದ, ಶಂಕರಶಿರಃ- ಪರಮೇಶ್ವರನ ಶಿರಸ್ಸನ್ನು, ಆಶ್ರಿತಾ - ಆಶ್ರಯಿಸಿದ, ತತಃ - ಬಳಿಕ, ಧರಣೀಂ-ಭೂಮಿಯನ್ನು, ಆಶ್ರಿತಾ - ಆಶ್ರಯಿಸಿ, ತತ್ರ - ಆ ನೆಲದಲ್ಲಿ, ತೀವ್ರಶಬ್ದಪುರಸ್ಕೃತಂ, ತೀವ್ರ - ವೇಗದಿಂದ, ಹುಟ್ಟಿದ, ಶಬ್ದ-ತರಂಗಗಳ ಘೋಷದಿಂದ, ಪುರಸ್ಕೃತಂ - ಮುಂದು ಮಾಡಲ್ಪಟ್ಟ, ಜಲಂ-ಜಲವು, ವ್ಯಸರ್ಪತ-ಪ್ರವಹಿಸಿತು. ॥ ೧೫ ॥ ತದಾ-ಆಗ, ವಸುಂಧರಾ-ಭೂಮಿಯು, ಮತ್ಸ್ಯಕಚ್ಛಪಸಂ ಘೈಶ್ಚ- ಮೀನುಗಳ, ಆಮೆಗಳ ಗುಂಪುಗಳಿಂದ, ಶಿಂಶುಮಾರಗಣೈಃ - ಶಿಂಶುಮಾರ - ಮೊಸಳೆಗಳ, ಗಣೈಃ-ಸಮುದಾಯಗಳಿಂದಲೂ, ಪತಿತೈಃ-ಬೀಳುತ್ತಿರುವ, ಅನ್ಯೈಃ - ಮತ್ತೆ ಕೆಲವು, ಪತದ್ಭಿಶ್ಚ-

---

ಸುಚಕ್ಷು, ಸೀತಾ, ಮಹಾ ನದಿಯಾದ ಸಿಂಧು ಎಂಬ ಆ ಗಂಗಾನದಿಯು ಮೂರು ಪ್ರವಾಹಗಳು ಪಶ್ಚಿಮ ದಿಕ್ಕನ್ನು ಕುರಿತು ಹೋದುವು. ಗಂಗಾನದಿಯ ಏಳನೆಯ ಪ್ರವಾಹವು ಭಗೀರಥನನ್ನನುಸರಿಸಿತು. ಮಹಾ ತೇಜಸ್ವಿಯಾದ ಭಗೀರಥನೂ ದೇವತಾ ಸಂಬಂಧವಾದ ರಥವನ್ನೇರಿ ಮುಂದೆ ಹೊರಟು ಆ ನದಿಯನ್ನು ಅನುವರ್ತಿಸಿದನು. ॥ ೧೪ ॥ ಗಗನದಿಂದ ಶಂಕರನ ಶಿರಸ್ಸಿನಲ್ಲಿ ಬಿದ್ದು, ಆ ಬಳಿಕ ಭೂಮಿಯನ್ನು ಹೊಂದಿದ ಆ ಗಂಗಾ ಪ್ರವಾಹವು ಅದ್ಭುತವಾದ ಶಬ್ದದಿಂದೊಡಗೂಡಿ ಹರಿಯಲಾರಂಭಿಸಿತು. ಮೀನುಗಳು, ಆಮೆಗಳು, ಮೊಸಳೆಗಳ ಸಮೂಹಗಳೂ, ಪಕ್ಷಿಗಳು, ಇನ್ನೂ ಇತರ ಜೀವರಾಶಿಗಳಿಂದೊಡಗೂಡಿದ ಗಂಗಾ ಪ್ರವಾಹದಿಂದ ವ್ಯಾಪ್ತವಾದ ಭೂಮಿಯು ಕಂಗೊಳಿಸತೊ

ಸಂಘೈಶ್ಚ ಶಿಂಶುಮಾರಗಣೈಸ್ತದಾ || ಪತದ್ಭಿಃ ಪತಿತೈಶ್ಚಾನ್ಯೈರ್ವ್ಯರೋಚತ ವಸುಂಧರಾ ||೧೬|| ತತೋ ದೇವರ್ಷಿಗಂಧರ್ವಾ ಯಕ್ಷಾಸ್ಸಿದ್ಧಗಣಾಸ್ತದಾ|| ವ್ಯಲೋಕಯಂತ ತೇ ತತ್ರ ಗಗನಾದ್ಗಾಂ ಗತಾಂ ತಥಾ||೧೭||ವಿಮಾನೈರ್ನಗರಾಕಾರೈರ್ಹಯೈರ್ಗಜವರೈಸ್ತದಾ||ಪಾರಿಪ್ಲವಗತೈಶ್ಚಾಪಿ ದೇವತಾಸ್ತತ್ರ ವಿಷ್ಠಿತಾಃ|| ೧೮||ತದದ್ಭುತತಮಂ ಲೋಕೇ ಗಂಗಾಪತನ ಮುತ್ತಮಂ||ದಿದೃಕ್ಷವೋದೇವಗಣಾಸ್ಸಮೀಯುರಮಿತೌಜಸಃ ||೧೯|| ಸಂಪತದ್ಭಿಸ್ಸುರಗಣೈಸ್ತೇಷಾಂ ಚಾಭರಣೌಜಸಾ|| ಶತಾದಿತ್ಯಮಿವಾಭಾತಿ ಗಗನಂ ಗತ ತೋಯದಂ||೨೦|| ಶಿಂಶುಮಾ

---

ಪಕ್ಷಿಗಳಿಂದಲೂ, ವ್ಯರೋಚತ-ಹೊಳೆಯುತ್ತಿತ್ತು ||೧೬|| ತತಃ-ಬಳಿಕ, ದೇವರ್ಷಿಗಂಧರ್ವಾಃ-ದೇವತೆಗಳೂ, ಋಷಿಗಳೂ, ಗಂಧರ್ವರೂ, ಯಕ್ಷಾಃ-ಯಕ್ಷರೂ, ತೇ - ಪ್ರಸಿದ್ಧಗಳಾದ, ಸಿದ್ಧಗಣಾಃ-ಸಿದ್ಧರಸಮೂಹಗಳು, ತದಾ-ಆಗ, ತತ್ರ-ಆ ನೆಲದಲ್ಲಿ, ಗಗನಾತ್-ಅಂತರಿಕ್ಷದಿಂದ, ಗಾಂ - ಭೂಮಿಯನ್ನು, ತಥಾ-ಆ ಪ್ರಕಾರವಾಗಿ, ಗತಾಂ-ಹೊಂದುತ್ತಿರುವ, ಗಂಗಾಂ-ಗಂಗೆಯನ್ನು, ವ್ಯಲೋಕಯಂತ - ನೋಡಿದರು. ||೧೭|| ತದಾ - ಆ ಕಾಲದಲ್ಲಿ, ತತ್ರ - ಆ ಗಂಗೆಯು ಬೀಳುವ ಸ್ಥಳದಲ್ಲಿ, ವಿಷ್ಠಿತಾಃ - ನಿಂತಿರುವ, ದೇವತಾಃ - ದೇವತೆಗಳು, ಪಾರಿಪ್ಲವಗತೈಃ - ನೀರಿನ ಸುಳಿಗಳಲ್ಲಿ ತಿರುಗುತ್ತಿರುವ, ನಗರಾಕಾರೈಃ - ಪಟ್ಟಣಗಳಂತೆ ವಿಸ್ತೃತಗಳಾದ, ವಿಮಾನೈಃ - ವಿಮಾನಗಳಿಂದಲೂ, ಹಯೈಃ - ಅಶ್ವಗಳಿಂದಲೂ, ತಥಾ-ಹಾಗೆಯೆ, ಗಜವರೈಃ - ದೊಡ್ಡಾನೆಗಳಿಂದಲೂ.(ಉಪಲಕ್ಷಿತಾಂ - ಕೂಡಿಕೊಂಡಿರುವ, ಗಂಗಾಂ - ಗಂಗಾ ನದಿಯನ್ನು?) ವ್ಯಲೋಕಯಂತ-ನೋಡಿದರು. ||೧೮|| ಅಮಿತೌಜಸಃ - ಅಪಾರ ತೇಜಸ್ವಿಗಳಾದ, ದೇವಗಣಾಃ- ದೇವತೆಗಳ ಗುಂಪು, ಲೋಕೇ-ಭೂಲೋಕದಲ್ಲಿ, ಅದ್ಭುತತಮಂ - ಆಶ್ಚರ್ಯಕರವಾದ, ಉತ್ತಮಂ - ಉತ್ಕೃಷ್ಟವಾದ, ತದ್ಗಂಗಾಪತನಂ- ಆ ಗಂಗಾನದಿಯ ಬೀಳುವಿಕೆಯನ್ನು, ದಿದೃಕ್ಷವಃ-ನೋಡಲಿಚ್ಛೆಯುಳ್ಳವರಾಗಿ, ಸಮೀಯುಃ-ಬಂದರು. ||೧೯|| ಸಂಪತದ್ಭಿಃ - ಬರುತ್ತಿರುವ, ಸುರಗಣೈಃ- ದೇವತೆಗಳ ತಂಡಗಳಿಂದಲೂ, ತೇಷಾಂ - ಆ ದೇವತೆಗಳ, ಆಭರಣೌಜಸಾ - ಒಡವೆಗಳ ತೇಜಸ್ಸಿನಿಂದ, ಗತತೋಯದಂ-ಹೊರಟು ಹೋದ ಮೇಘಗಳುಳ್ಳ, ಗಗನಂ - ಅಂತರಿಕ್ಷವು, ಶತಾದಿತ್ಯಮಿವ - ನೂರು ಸೂರ್ಯರುಳ್ಳ ಹಾಗೆ, ಅಭಾತಿ - ಹೊಳೆಯುತ್ತಿತ್ತು, ||೨೦|| ಆಕಾಶಂ - ಆಕಾಶವು, ತದಾ – ಆ ಕಾಲದಲ್ಲಿ, ಶಿಂಶುಮಾರೋರಗಣೈಃ - ನೀಳುಗಳ ಸರ್ಪಗಳ ಸಮೂಹಗಳಿಂದ, ಚಂಚಲೈಃ - ಕದಲುತ್ತಿರುವ, ಮೀನೈರಪಿ - ಮತ್ಸ್ಯಗಳಿಂದಲೂ, ವಿದ್ಯುಭಿಃ - ಮಿಂಚುಗಳಿಂದ, ವಿಕ್ಷಿಪ್ತಮಿವ - ವ್ಯಾಪ್ತವಾದಂತೆ, ಅಭ

---

ಡಗಿತು.||೧೬|| ಆಗಲಾ ಸ್ಥಳದಲ್ಲಿ ನಿಂತಿರುವ ದೇವಋಷಿಗಳೂ, ಗಂಧರ್ವರೂ, ಯಕ್ಷರೂ, ಸಿದ್ಧರೂ,ನೀರಿನ ಸುಳಿಗಳಲ್ಲಿ ತಿರುಗುತ್ತಿರುವ ನಗರಾಕಾರವಾದ ವಿಮಾನಗಳಿಂದಲೂ,ಕುದುರೆಗಳಿಂದಲೂ, ಗಜಗಳಿಂದಲೂ, ಉಪಲಕ್ಷಿತವಾದ ಆ ಗಂಗಾಪತನವನ್ನು ನೋಡಿದರು. ||೧೭|| ಇಂತು ಪ್ರಪಂಚದಲ್ಲಿ ಅತ್ಯದ್ಭುತವಾದ ಗಂಗಾಪತನವನ್ನು ನೋಡಲಪೇಕ್ಷಿಸಿ ಬಂದ ದೇವತಾ ಸಮೂಹಗಳ ಆಭರಣಗಳ ಕಾಂತಿಯಿಂದ ಆ ಆಕಾಶವನ್ನು ಹೊಂದಿದ ಗಂಗೋದಕವು, ಶತಸೂರ್ಯರಂತೆ ಬೆಳಗುತಲಿದ್ದಿತು. ||೧೯—೨೦|| ಈ ಗಂಗಾಪತನ ಕಾಲದಲ್ಲಿ ಆಕಾಶವು ಮೊಸಳೆಗಳ ಸಮೂಹಗಳಿಂದಲೂ, ಚಂಚಲಗಳಾದ ಮೀನುಗಳಿಂದಲೂ,

ರೋರಗಗಣೈ ರ್ಮೀನೈರಪಿ ಚ ಚಂಚಲೈಃ|| ವಿದ್ಯುದ್ಭಿರಿವ ವಿಕ್ಷಿಪ್ತಮಾಕಾಶ ಮಭವತ್ತದಾ || ೨೧ || ಪಾಂಡರೈಸ್ಸಲಿಲೋತ್ಪೀಡೈಃ ಕೀರ್ಯಮಾಣೈಸ್ಸಹಸ್ರಧಾ || ಶಾರದಾಭ್ರೈರಿವಾಕೀರ್ಣಂ ಗಗನಂ ಹಂಸ ಸಂಪ್ಲವೈಃ || ೨೨ || ಕ್ವಚಿದ್ದ್ರುತತರಂ ಯಾತಿ ಕುಟಿಲಂ ಕ್ವಚಿದಾಯತಂ || ವಿನತಂ ಕ್ವಚಿದುದ್ಭೂತಂ ಕ್ವಚಿದ್ಯಾತಿ ಶನೈಶ್ಶನೈಃ || ೨೩ || ಸಲಿಲೇನೈವ ಸಲಿಲಂ ಕ್ವಚಿದಭ್ಯಾಹತಂ ಪುನಃ || ಮುಹುರೂರ್ಧ್ವಮುಖಂ ಗತ್ವಾ ಪಪಾತ ವಸುಧಾತಲಂ || ೨೪ || ತಚ್ಛಂಕರಶಿರೋಭ್ರಷ್ಟಂ ಭ್ರಷ್ಟಂ ಭೂಮಿತಲೇ ಪುನಃ||ವ್ಯರೋಚತ ತದಾ ತೋಯಂ

---

ವತ್ - ಆಯಿತು. || ೨೧ || ಗಗನಂ - ಅಂತರಿಕ್ಷವು, ಸಹಸ್ರಧಾ – ಸಾವಿರಾರು ಬಗೆಯಾಗಿ, ಕೀರ್ಯಮಾಣೈಃ- (ಗೋ) ಎರಚಲ್ಪಟ್ಟವುಗಳಾದ ಕಾರಣವೆ, ಪಾಂಡರೈಃ - ಬೆಳ್ಳಗಿರುವ, ಸಲಿಲೋತ್ಪೀಡೈಃ-ಉದಕಸಮೂಹಗಳಿಂದ, (ತಿ) ಸಲಿಲೋತ್ಪೀಡೈಃ-ನೀರಿನಲ್ಲಿ ಹುಟ್ಟಿದ ನೊರೆಗಳಿಂದ, ಹಂಸಸಂಪ್ಲವೈಃ-ಹಂಸಪಕ್ಷಿಗಳಿಂದ ವ್ಯಾಪ್ತವಾದ, ಶಾರದಾಭ್ರೈರಿವ-ಶರತ್ಕಾಲದ ಮೇಘಗಳಿಂದಲೋಃ ಪಾದಿಯಲ್ಲಿ, ಆಕೀರ್ಣಂ - ವ್ಯಾಪ್ತವಾದುದಾಯಿತು. || ೨೨ || ಕ್ವಚಿತ್-ಒಂದುಕಡೆ, ಗಂಗಾ-ಗಂಗಾನದಿಯು, ದ್ರುತತರಂ ಅತಿವೇಗವಾದಂತೆ, ಯಾತಿ-ಹೋಗುತ್ತದೆ, ಕ್ವಚಿತ್-ಮತ್ತೊಂದುಕಡೆ, ಕುಟಿಲಂ-ವಕ್ರವಾದಂತೆ, ಯಾತಿ-ಹೋಗುತ್ತದ, ಕ್ವಚಿತ್-ಒಂದಾನೆಂದುಕಡೆ, ಆಯತಂ-ವಿಸ್ತಾರವಾಗಿ, ಯಾತಿ - ಹೋಗುತ್ತದೆ, ಕ್ವಚಿತ್-ಒಂದುಕಡೆ, ವಿನತಂ - ಸಂಕೋಚವುಳ್ಳುದಾಗಿ, ಯಾತಿ-ಹೋಗುತ್ತದೆ, ಕ್ವಚಿತ್-ಒಂದುಕಡೆ, ಊಧ್ಭೂತಂ- ಉರ್ಧ್ವಮುಖವಾಗಿ, ಯಾತಿ - ಹೋಗುತ್ತದೆ, ಕ್ವಚಿತ್-ಒಂದಾನೊಂದು ಕಡೆ, ಶನೈಶ್ಶನೈಃ-ಮೆಲ್ಲಮೆಲ್ಲಗೆ, ಯಾತಿ-ಹೋಗುತ್ತದೆ. ||೨೩|| ಸಲಿಲಂ-ಉದಕವು, ಕ್ವಚಿತ್-ಒಂದುಸ್ಥಳದಲ್ಲಿ, ಸಲಿಲೇನೈವ-ಉದಕದಿಂದಲೆ, ಪುನಃ-ಬಾರಿಬಾರಿಗು, ಅಭ್ಯಾಹತಂ-ಹೊಡೆಯಲ್ಪಟ್ಟಿತು, ಮುಹುಃ - ಬಾರಿಬಾರಿಗೂ, ಊರ್ಧ್ವಮುಖಂ - ಊರ್ಧ್ವಮುಖವನ್ನು ಕುರಿತು, ಗತ್ವಾ-ಹಾರಿ, ವಸುಧಾತಲಂ-ಭೂಮಂಡಲವಂಕುರಿತು, ಪಪಾತ - ಬಿತ್ತು. || ೨೪ || ಶಂಕರಶಿರೋಭ್ರಷ್ಟಂ-ಶಂಕರಶಿರಸ್ಸಿನಲ್ಲಿ ಬಿದ್ದು, ಪುನಃ-ಮತ್ತು, ಭೂಮಿತಲೇ - ಭೂಪ್ರದೇಶದಲ್ಲಿ, ಭ್ರಷ್ಟಂ-ಬೀಳುತ್ತಿರುವ, ನಿರ್ಮಲಂ ಶುದ್ಧವಾದ, ಗತಕಲ್ಮಷಂ-ಹೋದ ಪಾಪವುಳ್ಳ, ತತ್ತೋಯಂ-

---

ಕೂಡಿದುದಾಗಿ ಮಿಂಚುಗಳಿಂದ ವ್ಯಾಪ್ತವಾದಂತೆ ಕಂಗೊಳಿಸುತ್ತಿದ್ದಿತು. || ೨೧ || ಇಷ್ಟೆಯಲ್ಲದೆ ವಿಧವಿಧವಾಗಿ ಎರಚಲ್ಪಟ್ಟಿರುವ ನೊರೆಗಳಿಂದಲೂ, ಹಂಸಗಳ ಗಮನದಿಂದಲೂ, ಒಡಗೂಡಿದ್ದುದರಿಂದ ಆ ಗಂಗಾನದಿಯು ಶರತ್ಕಾಲದ ಮೇಘಗಳಿಂದ ವ್ಯಾಪ್ತವಾಗಿದ್ದಂತೆ ತೋರುತಿದ್ದಿತು. ಆ ಗಂಗಾನದಿಯು ಕೆಲವೆಡೆಗಳಲ್ಲಿ ಬಹು ವೇಗದಿಂದಲೂ, ಕೆಲವೆಡೆಗಳಲ್ಲಿ ವಕ್ರವಕ್ರವಾಗಿಯೂ, ಮತ್ತೆ ಕೆಲವು ಸ್ಥಳಗಳಲ್ಲಿ ವಿಸ್ತಾರವಾಗಿಯೂ, ಇನ್ನು ಕೆಲವೆಡೆಗಳಲ್ಲಿ ಸ್ವಲ್ಪವಾಗಿಯೂ, ಇನ್ನೂ ಕೆಲ ಸ್ಥಳಗಳಲ್ಲಿ ಮೆಲ್ಲಮೆಲ್ಲಗೂ ಪ್ರವಹಿಸುತಿದ್ದಿತು. ಕೆಲ ಸಮಯಗಳಲ್ಲಿ ನೀರಿನಿಂದಲೇ ತಾಡಿತವಾಗಿ ಮೇಲಕ್ಕೆ ಹಾರುತ್ತ ಭೂಮಿಗೆ ಧುಮ್ಮಿಕ್ಕುತ್ತಿದ್ದಿತು. ||೨೨-೨೪|| ಇಂತು ಚಂದ್ರಚೂಡನ ಶಿರಸ್ಸಿನಿಂದ ಭೂಮಿಯಲ್ಲಿ ಬೀಳುತ್ತಿರುವ ಆ ಗಂಗಾನದಿಯ ನಿರ್ಮಲೋದಕವು, ನಿಷ್ಕಲ್ಮಷವಾಗಿ ಕಂಗೊ

ನಿರ್ಮಲಂ ಗತಕಲ್ಮಷಂ ||೨೫|| ತತ್ರ ದೇವರ್ಷಿಗಂಧರ್ವಾ ವಸುಧಾತಲವಾಸಿನಃ| ಭವಾಂಗಪತಿತಂ ತೋಯಂ ಪವಿತ್ರಮಿತಿ ಪಸ್ಪೃಶುಃ ||೨೬|| ಶಾಪಾತ್ಪ್ರಪತಿತಾ ಯೇಚ ಗಗನಾದ್ವಸುಧಾತಲಂ| ಕೃತ್ವಾ ತತ್ರಾಭಿಷೇಕಂ ತೇ ಬಭೂವುರ್ಗತಕಲ್ಮಷಾಃ ||೨೭|| ಧೂತಪಾಪಾಃ ಪುನಸ್ತೇನ ತೋಯೇನಾಥ ಸುಭಾಸ್ವತಾ || ಪುನರಾಕಾಶಮಾವಿಶ್ಯ ಸ್ವಾನ್ ಲೋಕಾನ್ ಪ್ರತಿಪೇದಿರೇ || ೨೮ || ಮುಮುದೇ ಮುದಿತೋ ಲೋಕಸ್ತೇನ ತೋಯೇನ ಭಾಸ್ವತಾ || ಕೃತಾಭಿಷೇಕೋ ಗಂಗಾಯಾಂ ಬಭೂವ ವಿಗತಕ್ಲಮಃ || ೨೯ || ಭಗೀರಥೋಪಿ

---

ಆ ಗಂಗೋದಕವು, ತದಾ-ಆ ಕಾಲದಲ್ಲಿ, ವ್ಯರೋಚತ-ಪ್ರಕಾಶಿಸಿತು. || ೨೫ || ತತ್ರ-ಆ ಗಂಗಾಪತನಪ್ರದೇಶದಲ್ಲಿ, ವಸುಧಾತಲವಾಸಿನಃ - ಭೂಮಂಡಲವಾಸಿಗಳಾದ, ದೇವರ್ಷಿಗಂಧರ್ವಾಃ-ದೇವತೆಗಳೂ, ಋಷಿಗಳೂ, ಗಂಧರ್ವರೂ, ಭವಾಂಗಪತಿತಂ-ಈಶ್ವರನ ಶರೀರದಿಂದಗಳಿತವಾದ, ತೋಯಂ-ಉದಕವನ್ನು, ಪವಿತ್ರಮಿತಿ-ಪವಿತ್ರಕರವೆಂದು, ಪಸ್ಪೃಶುಃ-ಸ್ನಾನಮಾಡಿದರು. ||೨೬|| ಯೇಚ - ಯಾವ ಪುರುಷರು, ಶಾಪಾತ್ - ಶಾಪದಿಂದ, ಗಗನಾತ್ - ಅಂತರಿಕ್ಷದಿಂದ, ವಸುಧಾತಲಂ - ಭೂಮಂಡಲವನ್ನು ಕುರಿತು, ಪ್ರಪತಿತಾಃ - ಬಿದ್ದರೋ, ತೇಪಿ - ಅವರೂ, ತತ್ರ - ಆ ಗಂಗಾ ಜಲದಲ್ಲಿ, ಅಭಿಷೇಕಂ - ಸ್ನಾನವನ್ನು, ಕೃತ್ವಾ - ಮಾಡಿ, ಗತಕಲ್ಮಷಾಃ-ದೋಷರಹಿತರಾಗಿ, ಬಭೂವುಃ - ಆದರು. || ೨೭ || ಅಥ - ಬಳಿಕ, ಸುಭಾಸ್ವತಾ-ಚನ್ನಾಗಿ ಹೊಳೆಯುತ್ತಿರುವ, ತೇನತೋಯೇನ-ಆ ನೀರಿನಿಂದ, ಧೂತಪಾಪಾಃ-ಕೊಡಹಲ್ಪಟ್ಟ ಪಾಪವುಳ್ಳವರಾಗಿ, ಪುನಃ ಮತ್ತು, ಆಕಾಶಂ-ಆಕಾಶವನ್ನು,ಆವಿಶ್ಯ- ಪ್ರವೇಶಿಸಿ, ಸ್ವಾನ್‌ಲೋಕಾನ್-ತಮ್ಮ ತಮ್ಮ ಲೋಕಗಳನ್ನು, ಪ್ರತಿಪೇದಿರೇ-ಹೊಂದಿದರು. || ೨೮ || ಭಾಸ್ವತಾ - ಪ್ರಕಾಶಿಸುತ್ತಿರುವ, ತೇನತೋಯೇನ ಆ ಗಂಗೋದಕದಿಂದ, ಗಂಗಾಯಾಂ - ಗಂಗಾನದಿಯಲ್ಲಿ, ಕೃತಾಭಿಷೇಕಃ - ಮಾಡಲ್ಪಟ್ಟ ಸ್ನಾನಗಳುಳ್ಳ, ಮುದಿತೋ- ಹರ್ಷಗೊಂಡ, ಲೋಕಃ-ಜನವು, ಮುಮುದೇ-ಬಹಳವಾಗಿ ಸಂತೋಷಿಸಿತು ವಿಗತಕ್ಲಮಃ-ಹೋದ ಬಳಲಿಕೆಯುಳ್ಳುದು, ಬಭೂವ-ಆಯಿತು. || ೨೯ || ಮಹಾತೇಜಾಃ ಮಹಾ ತೇಜೋವಂತನಾದ, ರಾಜರ್ಷಿಃ- ರಾಜರ್ಷಿಯಾದ, ಭಗೀರಥೋಪಿ-ಭಗೀರಥನೂ, ದಿವ್ಯಂ-ಮನೋಹರವಾದ, ಸ್ಯಂದನಂ - ರಥವನ್ನು, ಆಸ್ಥಿತಃ-ಹೊಂದಿದವನಾಗಿ, ಅಗ್ರೇ-

---

ಳಿಸುತ್ತಿದ್ದಿತು. || ೨೫ || ಅಯ್ಯಾ ರಾಮಚಂದ್ರನೆ ! ಆ ಗಂಗಾವತರಣ ಪ್ರದೇಶದಲ್ಲಿ ನಿಂತಿರುವ ದೇವ, ಋಷಿ ಗಂಧರ್ವರೆಲ್ಲರೂ ಈಶ್ವರ ಶರೀರದಿಂದ ಭೂಮಿಗೆ ಬಿದ್ದ ಆ ಗಂಗೋದಕವನ್ನು ಸ್ಪರ್ಶಿಸಿ, ಸ್ನಾನವಂ ಗೈದರು || ೨೬ || ಶಾಪವನ್ನು ಹೊಂದಿ ಸ್ಥಾನಭ್ರಷ್ಟರಾಗಿ ಭೂಮಿಯನ್ನು ಹೊಂದಿದ್ದ ದೇವತೆಗಳೆಲ್ಲರೂ ಆ ಗಂಗಾಸ್ನಾನವನ್ನು ಮಾಡಿ ಪಾಪವನ್ನು ಕಳೆದುಕೊಂಡು ಮರಳಿ ತಮ್ಮ ಸ್ಥಾನಗಳನ್ನು ಹೊಂದಿದರು. ಇಷ್ಟೆಯಲ್ಲದೆ ಲೋಕದ ಜನರೆಲ್ಲರೂ, ನಿರ್ಮಲವಾದ ಆ ಗಂಗೆಯಲ್ಲಿ ಸ್ನಾನಮಾಡಿ, ಸಂತಸಗೊಂಡರು. ||೨೭-೨೯|| ಆಗ ರಾಜರ್ಷಿಯಾದ ಭಗೀರಥರಾಯನು ದಿವ್ಯವಾದ ರಥವನ್ನೇರಿ ಮುಂದೆ ಹೊರಡಲು, ಗಂಗಾನದಿಯಾತನ ಹಿಂದುಗಡೆ ಹೊರಟಿತು. ಆ ಸಮಯದಲ್ಲಿ

ರಾಜರ್ಷಿರ್ದಿವ್ಯಂ ಸ್ಯಂದನಮಾಸ್ಥಿತಃ ॥ ಪ್ರಾಯಾದಗ್ರೇ ಮಹಾತೇಜಾಸ್ತಂ ಗಂಗಾ ಪೃಷ್ಠತೋಽನ್ವಗಾತ್ ॥ ೩೦ ॥ ದೇವಾಸ್ಸರ್ಷಿಗಣಾಸ್ಸರ್ವೇ ದೈತ್ಯದಾನವ ರಾಕ್ಷಸಾಃ ॥ ಗಂಧರ್ವ ಯಕ್ಷಪ್ರವರಾ ಸ್ಸಕಿನ್ನರ ಮಹೋರಗಾಃ ॥೩೧॥ ಸರ್ವಾಶ್ಚಾಪ್ಸರಸೋ ರಾಮ ಭಗೀರಥ ರಥಾನುಗಾಂ ॥ ಗಂಗಾಮನ್ವಗಮನ್ ಪ್ರೀತಾಸ್ಸರ್ವೇ ಜಲಚರಾಶ್ಚಯೇ ॥ ೩೨ ॥ ಯತೋ ಭಗೀರಥೋ ರಾಜಾ ತತೋಗಂಗಾ ಯಶಸ್ವಿನೀ ॥ ಜಗಾಮ ಸರಿತಾಂ ಶ್ರೇಷ್ಠಾ ಸರ್ವಪಾಪ ವಿನಾಶಿನೀ ॥ ೩೩ ॥ ತತೋಹಿ ಯಜಮಾನಸ್ಯ ಜಹ್ನೋರದ್ಭುತಕರ್ಮಣಃ ॥ ಗಂಗಾ ಸಂಪ್ಲಾವಯಾಮಾಸ ಯಜ್ಞವಾಟಂ ಮಹಾ

---

ಮುಂದುಗಡೆ, ಪ್ರಾಯಾತ್-ಹೊರಟನು, ತಂ-ಆ ಭಗೀರಥನನ್ನು, ಗಂಗಾ-ಗಂಗಾನದಿಯು, ಪೃಷ್ಠತಃ - ಹಿಂಭಾಗದಲ್ಲಿ, ಅನ್ವಗಾತ್-ಅನುಸರಿಸಿತು. ॥ ೩೦ ॥ ಹೇರಾಮ ಎಲೈ ಶ್ರೀರಾಮನೆ, ಸರ್ವೇ ದೇವಾಃ-ಸಮಸ್ತ ದೇವತೆಗಳು, ಸರ್ಷಿಗಣಾಃ- ಋಷಿಸಮೂಹದಿಂದೊಡಗೂಡಿ, ದೈತ್ಯದಾನವರಾಕ್ಷಸಾಃ-ದೈತ್ಯ,ದಾನವ,ರಾಕ್ಷಸರೆಂಬ ಜಾತಿಭೇದಗಳೂ,ಸಕಿನ್ನರಮಹೋರಗಾಃ-ಕಿನ್ನರರಿಂದಲೂ, ಮಹಾಸರ್ಪಗಳಿಂದಲೂ ಒಡಗೂಡಿ, ಗಂಧರ್ವಯಕ್ಷಪ್ರವರಾಃ - ಗಂಧರ್ವಶ್ರೇಷ್ಠರೂ, ಯಕ್ಷಶ್ರೇಷ್ಠರೂ, ಸರ್ವಾಃ-ಸಮಸ್ತರಾದ, ಅಪ್ಸರಸಶ್ಚ-ಅಪ್ಸರಸ್ತ್ರೀಯರೂ, ಭಗೀರಥ ರಥಾನುಗಾಂ-ಭಗೀರಥರಾಯನ ರಥವನ್ನನುಸರಿಸಿ ಹೋಗುತ್ತಿರುವ, ಗಂಗಾಂ ಭಾಗೀರಥಿಯನ್ನು, ಅನ್ವಗಮನ್-ಅನುಸರಿಸಿಬಂದರು, ಯೇ-ಯಾವ ಜಂತುಗಳು, ಜಲಚರಾಃ-ಜಲದಲ್ಲಿ ಸಂಚಾರಮಾಡುತ್ತಿದ್ದವೊ, ತೇಸರ್ವೇ-ಅವೆಲ್ಲ, ಪ್ರೀತಾಃ-ಸಂತೋಷಗೊಂಡು, ಗಂಗಾಂ-ಗಂಗೆಯನ್ನು, ಅನ್ವಗಮನ್-ಅನುಸರಿಸಿಬಂದವು. ॥೩೧-೩೨॥ ಭಗೀರಥೋರಾಜಾ-ಭಗೀರಥರಾಯನು, ಯತಃ-ಯಾವಕಡೆ, ಜಗಾಮ - ಹೊರಟನೊ, ತತಃ-ಆ ಕಡೆಯಲ್ಲಿ, ಸರ್ವಪಾಪವಿನಾಶಿನೀ-ಸಮಸ್ತಪಾಪಗಳನ್ನು ತೊಳೆಯುತ್ತಿರುವ, ಸರಿತಾಂ ನದಿಗಳೊಳಗೆ, ಶ್ರೇಷ್ಠಾ-ಶ್ರೇಷ್ಠಳಾದ, ಯಶಸ್ವಿನೀ-ಕೀರ್ತಿವಂತಳಾದ ಗಂಗಾನದಿಯು, ಜಗಾಮ-ಹೊರಟಿತು. ॥ ೩೩ ॥ ತತಃ-ಬಳಿಕ, ಯಜಮಾನಸ್ಯ- ಯಜ್ಞಶೀಲನಾದ, ಅದ್ಭುತಕರ್ಮಣಃ-ಆಶ್ಚರ್ಯಕರವಾದ ವ್ಯಾಪಾರವುಳ್ಳ, ಮಹಾತ್ಮನಃ ಮಹಾತ್ಮನಾದ, ಜಹ್ನೋಃ-ಜಹ್ನುಋಷಿಯ, ಯಜ್ಞವಾಟಂ-ಯಜ್ಞಶಾಲೆಯನ್ನು, ಗಂಗಾ-ಭಾಗೀರಥಿಯು, ಸಂಪ್ಲಾವಯಾಮಾಸ- ತೇಲಿಸಿಬಿಟ್ಟಿತು.

---

ದೇವತೆಗಳೂ, ಋಷಿತಂಡಗಳೂ, ದೈತ್ಯರೂ, ದಾನವರೂ, ರಾಕ್ಷಸರೂ, ಗಂಧರ್ವರೂ, ಯಕ್ಷೋತ್ತಮರೂ, ನಾಗರೂ, ಅಪ್ಸರೆಯರೇ ಮೊದಲಾದವರು ಆನಂದಭರಿತರಾಗಿ ಆ ಗಂಗಾನದಿಯನ್ನನುಸರಿಸಿದರು. ಜಲಚರಗಳೂ ಸಂತಸದಿಂದ ಆ ಗಂಗೆಯನ್ನನುಸರಿಸಿದವು. ಪಾಪನಾಶಿನಿಯಾದ ಆ ಗಂಗಾ ನದಿಯಾದರೋ, ಭಗೀರಥರಾಯನೆಲ್ಲಿ ಹೋದರೆ, ಅಲ್ಲಲ್ಲಿ ತೆರಳಿತು. ॥೩೦-೩೩॥ಹೀಗೆ ಭಗೀರಥರಥಾನುಗಳಾದ ಗಂಗೆಯು ಹರಿದುಹೋಗುತ್ತ, ಅದ್ಭುತ ಕಾರ್ಯಗಳನ್ನೆಸಗುವುದರಲ್ಲಿ ಸಮರ್ಥನೂ, ಯಜ್ಞಶೀಲನೂ, ಮಹಾತ್ಮನೂ, ಆದ ಜಹ್ನುಋಷಿಯ ಯಾಗಶಾಲೆಯನ್ನು ಕೊಚ್ಚಿಕೊಂಡು ಹೋದಳು. ರಘುನಂದನ ! ಆಗ ಜಹ್ನುಋಷಿಯು ಗಂಗೆಯ ಈ ವಿಧವಾದ ಅಹಂಕಾರವನ್ನು ನೋಡಿ ಕೋಪಗೊಂಡು,

ತ್ಮನಃ ॥ ೩೪ ॥ ತಸ್ಯಾವಲೇಪನಂ ಜ್ಞಾತ್ವಾ ಕ್ರುದ್ಧೋ ಯಜ್ವಾತು ರಾಘವ ॥ ಅಪಿಬಚ್ಚಜಲಂ ಸರ್ವಂ ಗಂಗಾಯಾಃ ಪರಮಾದ್ಭುತಂ ॥೩೫॥ ತತೋ ದೇವಾಸ್ಸಗಂಧರ್ವಾ ಋಷಯಶ್ಚ ಸುವಿಸ್ಮಿತಾಃ ॥ ಪೂಜಯಂತಿ ಮಹಾತ್ಮಾನಂ ಜಹ್ನುಂ ಪುರುಷಸತ್ತಮಂ ॥೩೬॥ ಗಂಗಾಂಚಾಪಿ ನಯಂತಿಸ್ಮ ದುಹಿತೃತ್ವೇ ಮಹಾತ್ಮನಃ ॥ ತತಸ್ತುಷ್ಟೋ ಮಹಾತೇಜಾಶ್ಶ್ರೋತ್ರಾಭ್ಯಾ ಮಸೃಜತ್ಪುನಃ ॥ ೩೭ ॥ ತಸ್ಮಾಜ್ಜಹ್ನುಸುತಾ ಗಂಗಾ ಪ್ರೋಚ್ಯತೇ ಜಾಹ್ನವೀತಿಚ ॥ ಜಗಾಮಚ ಪುನರ್ಗಂಗಾ ಭಗೀರಥ ರಥಾನುಗಾ ॥ ೩೮ ॥ ಸಾಗರಂ ಚಾಪಿ ಸಂಪ್ರಾಪ್ತಾ ಸಾಸರಿತ್ಪ್ರವರಾ ತದಾ ॥ ರಸಾತಲ ಮುಪಾ

---

ಹೇರಾಘವ - ಎಲೈ ರಾಮನೇ, ಯಜ್ವಾ - ಯಜ್ಞಶೀಲನಾದ ಜಹ್ನುಋಷಿಯು, ತಸ್ಯಾಃ-ಆ ಗಂಗಾ ನದಿಯ, ಅವಲೇಪನಂ - ಗರ್ವವನ್ನು, ಜ್ಞಾತ್ವಾ - ತಿಳಿದು, ಕೃದ್ಧಃ- ಕೋಪಿಷ್ಠನಾಗಿ, ಗಂಗಾಯಾಃ- ಗಂಗಾನದಿಯ, ಸರ್ವಂ – ಸಮಗ್ರವಾದ, ಜಲಂ - ಉದಕವನ್ನು, ಪರಮಾದ್ಭುತಂ-ಅತ್ಯಾಶ್ಚರ್ಯ ವಾದಂತೆ, ಅಪಿಬಚ್ಚ - ಪಾನಮಾಡಿಬಿಟ್ಟನು. ॥ ೩೪-೩೫ ॥ ತತಃ - ಆ ಗಂಗಾಪಾನಾನಂತರದಲ್ಲಿ, ಸಗಂಧರ್ವಾಃ - ಗಂಧರ್ವರಿಂದೊಡಗೂಡಿದ, ದೇವಾಃ - ದೇವತೆಗಳೂ, ಋಷಯಶ್ಚ-ಋಷಿಗಳೂ, ಸುವಿಸ್ಮಿತಾಃ - ಆಶ್ಚರ್ಯಗೊಂಡು, ಪುರುಷಸತ್ತಮಂ - ಪುರುಷಶ್ರೇಷ್ಠನಾದ, ಮಹಾತ್ಮಾನಂ-ಮಹಾ ನುಭಾವನಾದ, ಜಹ್ನುಂ - ಜಹ್ನುಋಷಿಯನ್ನು, ಪೂಜಯಂತಿ - ಸ್ತೋತ್ರಮಾಡಿದರು, ಗಂಗಾಂ ಚಾಪಿ - ಗಂಗಾನದಿಯನ್ನೂ, ಮಹಾತ್ಮನಃ - ಮಹಾನುಭಾವನಾದ ಜಹ್ನುಋಷಿಗೆ, ದುಹಿತೃತ್ವೇ- ಪುತ್ರೀಭಾವದಲ್ಲಿ, ನಯಂತಿಸ್ಮ - ಹೊಂದಿಸಿದರಷ್ಟೆ, ॥ ೩೬-೩೭ ॥ ತತಃ - ಬಳಿಕ, ತುಷ್ಟಃ - ಭಗೀ ರಥನಿಂದ ಸ್ತೋತ್ರಮಾಡಲ್ಪಟ್ಟ, ಮಹಾತೇಜಾಃ - ಮಹಾ ಶಕ್ತಿವಂತನಾದ ಜಹ್ನುಋಷಿಯು, ಶ್ರೋತ್ರಾಭ್ಯಾಂ-ಕಿವಿಗಳಿಂದ, ಪುನಃ ಮತ್ತು, ಅಸೃಜತ್ - ಬಿಟ್ಟನು, ತಸ್ಮಾತ್ - ಆ ನಿಮಿತ್ತ ದಿಂದ, ಗಂಗಾ - ಗಂಗಾನದಿಯು, ಜಹ್ನುಸುತಾ-ಜಹ್ನುಪುತ್ರೀ ಎಂದೂ, ಜಾಹ್ನವೀತಿಚ-ಜಾಹ್ನವೀ ಎಂದೂ, ಪ್ರೋಚ್ಯತೇ - ಹೇಳಲ್ಪಡುತ್ತದ. ॥ ೩೮ ॥ ಪುನಃ - ಮತ್ತು, ಭಗೀರಥರಥಾನುಗಾ- ಭಗೀರಥನ ರಥಾನುಸಾರಿಯಾದ,ಗಂಗಾ - ಗಂಗಾನದಿಯು, ಪುನಃ- ಮತ್ತೆ, ಜಗಾಮ ಹೊರಟಳು, ಸರಿತ್ಪ್ರವರಾ – ನದಿಗಳಲ್ಲಿ ಶ್ರೇಷ್ಠಳಾದ, ಸಾ - ಆ ಗಂಗಾನದಿಯು, ತದಾ - ಆ ಕಾಲದಲ್ಲಿ,

---

ಆ ನದ್ಯೋದಕವೆಲ್ಲವನ್ನೂ ಪಾನಮಾಡಿಬಿಟ್ಟನು.॥೩೪-೩೫॥ಆ ಬಳಿಕ, ದೇವ, ಋಷಿ, ಗಂಧರ್ವ ರೇ ಮೊದಲಾದವರೆಲ್ಲರೂ ಅತ್ಯಾಶ್ಚರ್ಯಗೊಂಡವರಾಗಿ, ಮಹಾತ್ಮನಾದ ಆ ಜಹ್ನು ಋಷಿ ಯನ್ನು ಪೂಜಿಸಿ ; " ಓ ಮಹಾತ್ಮ ! ಈ ಗಂಗೆಯು ನಿನ್ನ ಮಗಳೆಂದು ಬಗೆದು, ಆಕೆಯ ಅಪರಾಧವನ್ನು ಕ್ಷಮಿಸಿ, ಭಗೀರಥ ರಾಯನ ಸಂಕಲ್ಪವನ್ನು ಪೂರ್ಣಗೊಳಿಸು " ಎಂದು ಪ್ರಾರ್ಥಿಸಿದರು. ಆಗಲಾ ಮಹಾ ತೇಜಸ್ವಿಯಾದ ಜಹ್ನುಋಷಿಯು ಭಗೀರಥನಿಂದಲೂ ಪ್ರಾರ್ಥಿತನಾಗಿ ಆ ನದಿಯನ್ನು ಶ್ರೋತ್ರದಿಂದ ಹೊರಗೆ ಬಿಟ್ಟನು. ಇದರಿಂದ ಗಂಗೆಯು ಜಹ್ನುಸುತೆ ಎಂತಲೂ, ಜಾಹ್ನವೀ ಎಂತಲೂ, ಹೆಸರುಗೊಂಡಳು. ॥ ೩೬-೩೮ ॥ ಇದಾದ ಬಳಿಕ ಆ ಗಂಗಾನದಿಯು ಮರಳಿ ಭಗೀರಥನನ್ನನುಸರಿಸಿ ಸಮುದ್ರವನ್ನು ಹೊಂದಿ, ಆತನ

ಗಚ್ಛತ್ಸಿದ್ಧ್ಯರ್ಥಂ ತಸ್ಯಕರ್ಮಣಃ || ೩೯ || ಭಗೀರಥೋಪಿ ರಾಜರ್ಷಿ
ರ್ಗಂಗಾ ಮಾದಾಯ ಯತ್ನತಃ || ಪಿತಾಮಹಾನ್ ಭಸ್ಮಕೃತಾ ನಪಶ್ಯದ್ದೀ
ನಚೇತನಃ ||೪೦|| ಅಥ ತದ್ಭಸ್ಮನಾಂ ರಾಶಿಂ ಗಂಗಾ ಸಲಿಲಮುತ್ತಮಂ ||
ಪ್ಲಾವಯದ್ಧೂತ ಪಾಪಾತ್ಮನಸ್ಸ್ವರ್ಗಂ ಪ್ರಾಪ್ತಾ ರಘೂತ್ತಮ || ೪೧ ||
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ
ತ್ರಿಚತ್ವಾರಿಂಶಸ್ಸರ್ಗಃ

---

ಸಾಗರಂಚಾಪಿ - ಕಡಲನ್ನೂ, ಸಂಪ್ರಾಪ್ತಾ - ಹೊಂದಿ, ತಸ್ಯಕರ್ಮಣಃ - ಆ ಭಗೀರಥನ ಕಾರ್ಯದ, ಸಿದ್ಧ್ಯರ್ಥಂ - ಸಾಫಲ್ಯಕ್ಕೋಸ್ಕರ, ರಸಾತಲಂ - ಪಾತಾಳವನ್ನು ಕುರಿತು, ಉಪಾಗಚ್ಛತ್-ಬಂದಳು. || ೩೯ || ರಾಜರ್ಷಿಃ - ರಾಜರ್ಷಿಯಾದ, ಭಗೀರಥೋಪಿ - ಭಗೀರಥನೂ, ಯತ್ನತಃ - ಬಹಳ ಪ್ರಯತ್ನದಿಂದ, ಗಂಗಾಂ - ಗಂಗಾನದಿಯನ್ನು, ಆದಾಯ - ಕರೆದುಕೊಂಡು, ದೀನಚೇತನಃ-ಖಿನ್ನ ನಾಗಿ, ಭಸ್ಮಕೃತಾನ್ - ಬೂದಿ ಮಾಡಲ್ಪಟ್ಟ, ಪಿತಾಮಹಾನ್- ತಮ್ಮ ತಂದೆಗೆ ತಾತಂದರಾದ ಸಗರ ಪುತ್ರರನ್ನು, ಅಪಶ್ಯತ್ - ನೋಡಿದನು. || ೪೦ || ಹೇರಘೂತ್ತಮ - ಎಲೈ ಶ್ರೀರಾಮನೆ, ಅಥ – ಬಳಿಕ, ಉತ್ತಮಂ - ಉತ್ತಮವಾದ, ತತ್ಗಂಗಾಸಲಿಲಂ - ಆ ಗಂಗೋದಕವು, ಭಸ್ಮನಾಂ- ಭಸ್ಮಗಳ, ರಾಶಿಂ - ರಾಶಿಯನ್ನು, ಪ್ಲಾವಯತ್ - ನೆನಿಸಿತು, ಧೂತಪಾಪಾತ್ಮನಃ - ಕೊಡಹಲ್ಪಟ್ಟ ಪಾಪಗಳುಳ್ಳ, ತೇ - ಆ ಸಗರಪುತ್ರರು, ಸ್ವರ್ಗಂಪ್ರಾಪ್ತಾಃ - ಸ್ವರ್ಗವನ್ನೈದಿದರು. ||೪೧||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಚತ್ವಾರಿಂಶಸ್ಸರ್ಗಃ.

---

ಕಾರ್ಯಸಿದ್ಧಿಗೋಸುಗ ರಸಾತಲವನ್ನು ಕುರಿತು ತೆರಳಿತು. ಅಯ್ಯಾ ರಾಘವನೆ ! ಹೀಗೆ ಭಗೀರಥರಾಯನು ಬಹು ಸಾಹಸವನ್ನು ಮಾಡಿ,ಗಂಗೆಯನ್ನು ತೆಗೆದುಕೊಂಡು ಭಸ್ಮೀಭೂತರಾಗಿದ್ದ ಪಿತಾಮಹರನ್ನು ನೋಡಿ, ದೈನವುಳ್ಳವನಾದನು. ಆ ಭಸ್ಮವು ಗಂಗೋದಕ ದಿಂದ ನೆನೆಯಿಸಲ್ಪಡಲು ಸಗರ ರಾಯನ ಅರವತ್ತು ಸಾವಿರ ಮಂದಿ ಕುವರರೂ ಪಾಪ ರಹಿತರಾಗಿ ಸ್ವರ್ಗವನ್ನು ಹೊಂದಿದರು. ||೩೯-೪೧||

ಇಂತಿದು ಭಗೀರಥನ ಗಂಗಾನಯನ ವೃತ್ತಾಂತ ವರ್ಣನೆಂಬ
ನಲವತ್ತು ಮೂರನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ.



ಸಗತ್ವಾ ಸಾಗರಂ ರಾಜಾ ಗಂಗಯಾಸುಗತಸ್ತದಾ || ಪ್ರವಿವೇಶತಲಂ ಭೂಮೇರ್ಯತ್ರ ತೇ ಭಸ್ಮಸಾತ್ಕೃತಾಃ ||೧|| ಭಸ್ಮನ್ಯಥಾಪ್ಲುತೇ ರಾಮ ಗಂಗಾಯಾ ಸ್ಸಲಿಲೇನವೈ || ಸರ್ವಲೋಕ ಪ್ರಭುರ್ಬ್ರಹ್ಮಾ ರಾಜಾನಮಿದ ಮಬ್ರವೀತ್ ||೨|| ತಾರಿತಾ ನರಶಾರ್ದೂಲ ದಿವಂ ಯಾತಾಶ್ಚ ದೇವ ವತ್ || ಷಷ್ಟಿಃಪುತ್ರ ಸಹಸ್ರಾಣಿ ಸಗರಸ್ಯ ಮಹಾತ್ಮನಃ ||೩|| ಸಾಗ ರಸ್ಯ ಜಲಂ ಲೋಕೇ ಯಾವತ್ ಸ್ಥಾಸ್ಯತಿ ಪಾರ್ಥಿವ || ಸಗರಸ್ಯಾ

---

ಸರಾಜಾ - ಆ ಭಗೀರಥರಾಯನು, ತದಾ - ಆಗ, ಗಂಗಯಾ - ಗಂಗಾ ನದಿಯಿಂದ, ಅನುಗತಃ - ಅನುಸರಿಸಲ್ಪಟ್ಟು, ಸಾಗರಂ - ಕಡಲನ್ನು, ಗತ್ವಾ - ಹೊಂದಿ, ಯತ್ರ-ಯಾವ ಸ್ಥಳ ದಲ್ಲಿ, ತೇ - ಆ ಸಗರ ಪುತ್ರರು, ಭಸ್ಮಸಾತ್ಕೃತಾಃ ಭಸ್ಮವಾಗಿ ಮಾಡಲ್ಪಟ್ಟರೋ, ತತ್ - ಆ. ಭೂಮೇಃ - ಭೂಮಿಯ, ತಲಂ - ಪಾತಾಳವನ್ನು, ಪ್ರವಿವೇಶ - ಹೊಕ್ಕನು, ||೧|| ಅಥ- ಬಳಿಕ, ಹೇರಾಮ - ಎಲೈ ಶ್ರೀರಾಮನೆ, ಭಸ್ಮನಿ - ಭಸ್ಮವು, ಗಂಗಾಯಾಃ-ಗಂಗಾನದಿಯ, ಸಲಿ ಲೇನವೈ-ಉದಕದಿಂದ, ಆಪ್ಲುತೇಸತಿ-ನೆನೆಸಲ್ಪಟ್ಟುದಾಗಲು, ಸರ್ವಲೋಕಪ್ರಭುಃ-ಸಮಸ್ತ ಲೋಕ ಸೃಷ್ಟಿಕರ್ತನಾದ, ಬ್ರಹ್ಮಾ - ಚತುರ್ಮುಖಬ್ರಹ್ಮನು, ರಾಜಾನಂ - ಅರಸನನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್ - ನುಡಿದನು ||೨|| ಹೇನರಶಾರ್ದೂಲ - ಎಲೈ ನರವ್ಯಾಘ್ರನೆ, ಮಹಾ ತ್ಮನಃ - ಮಹಾನುಭಾವನಾದ, ಸಗರಸ್ಯ - ಸಗರಚಕ್ರವರ್ತಿಯ, ಷಷ್ಟಿಃಪುತ್ರಸಹಸ್ರಾಣಿ-ಅರವತ್ತು ಸಾವಿರ ಮಕ್ಕಳೂ, ತ್ವಯಾ-ನಿನ್ನಿಂದ, ತಾರಿತಾಃ - ಉದ್ಧಾರಮಾಡಲ್ಪಟ್ಟು, ದೇವವತ್-ದೇವತೆ ಗಳಂತೆ, ದಿವಂ - ಸ್ವರ್ಗಲೋಕವನ್ನು, ಯಾತಾಃ - ಐದಿದರು, ||೩|| ಹೇ ಪಾರ್ಥಿವ-ಎಲೈ ರಾಜನೆ, ಲೋಕೇ - ಮನುಷ್ಯ ಲೋಕದಲ್ಲಿ, ಸಾಗರಸ್ಯ - ಕಡಲಿನ, ಜಲಂ- ಉದಕವು, ಯಾವತ್- ಎಷ್ಟು ಪರಿಯಂತರ, ಸ್ಥಾಸ್ಯತಿ - ಇರುತ್ತದೋ, ಸಗರಸ್ಯ-ಸಗರ ಚಕ್ರವರ್ತಿಯ, ಆತ್ಮಜಾಃ - ಕುಮ ರರು, ತಾವತ್ - ಅಷ್ಟು ಪರಿಯಂತರ, ದೇವವತ್ - ದೇವತೆಗಳಂತೆ, ಸ್ವರ್ಗೇ - ಸ್ವರ್ಗಲೋಕದಲ್ಲಿ

---

"ಎಲೈ ರಘುಕುಲಾನಂದಕರನೆ ! ಕೇಳು ; ಆಗಲಾ ಭಗೀರಥ ರಾಯನು ಗಂಗೆ ಯಿಂದನುಸೃತನಾಗಿ ಸಮುದ್ರವನ್ನು ಹೊಂದಿ, ಸಗರ ಕುಮರರು ಭಸ್ಮಭೂತರಾಗಿದ್ದ ರಸಾ ತಲವನ್ನು ಸೇರಿ, ಅವರ ಭಸ್ಮವನ್ನು ಆ ನದ್ಯುದಕದಿಂದ ನೆನಿಸಿದನು. ಆಗ ಸರ್ವಲೋಕಕ್ಕೂ ಪ್ರಭುವಾದ ಬ್ರಹ್ಮದೇವನು ಭಗೀರಥನನ್ನು ಕುರಿತು ಹೀಗೆಂದನು. " ಅಯ್ಯಾ ಪುರುಷ ಶ್ರೇಷ್ಠನೆ ! ಮಹಾತ್ಮನಾದ ಸಗರ ಚಕ್ರವರ್ತಿಯ ಅರವತ್ತು ಸಾವಿರ ಕುಮರರು ನಿನ್ನಿಂದ

ತ್ಮಜಾಸ್ತಾವತ್ಸ್ವರ್ಗೇ ಸ್ಥಾಸ್ಯಂತಿ ದೇವವತ್ ॥ ೪ ॥ ಇಯಂಚ ದುಹಿತಾ ಜ್ಯೇಷ್ಠಾ ತವಗಂಗಾ ಭವಿಷ್ಯತಿ ॥ ತ್ವತ್ಕೃತೇನಚ ನಾಮ್ನಾಥ ಲೋಕೇ ಸ್ಥಾಸ್ಯತಿ ವಿಶ್ರುತಾ ॥ ೫ ॥ ಗಂಗಾತ್ರಿಪಥಗಾ ರಾಜನ್ ದಿವ್ಯಾ ಭಾಗೀರಥೀತಿ ಚ ॥ ತ್ರೀನ್‌ಪಥೋ ಭಾವಯಂತೀತಿ ತತಸ್ತ್ರಿಪಥಗಾ ಸ್ಮೃತಾ ॥ ೬ ॥ ಪಿತಾಮಹಾನಾಂ ಸರ್ವೇಷಾಂ ತ್ವಮತ್ರ ಮನುಜಾಧಿಪ ॥ ಕುರುಷ್ವ ಸಲಿಲಂ ರಾಜನ್ ಪ್ರತಿಜ್ಞಾಮಪವರ್ಜಯ ॥ ೭ ॥ ಪೂರ್ವಕೇಣ ಹಿ ತೇ ರಾಜಂಸ್ತೇನಾತಿ ಯಶಸಾ ತದಾ ॥ ಧರ್ಮಿಣಾಂ ಪ್ರವರೇಣಾಪಿ ನೈಷ ಪ್ರಾಪ್ತೋ ಮನೋರಥಃ॥೮॥

---

ಸ್ಥಾಸ್ಯಂತಿ - ಇರುತ್ತಾರೆ. ॥೪॥ ಇಯಂಗಂಗಾಚ - ಈ ಗಂಗಾನದಿಯು, ತವ - ನಿನಗೆ, ಜ್ಯೇಷ್ಠಾ ದುಹಿತಾ - ದೊಡ್ಡ ಮಗಳಾಗಿ, ಭವಿಷ್ಯತಿ - ಆಗುವಳು, ಅಥ - ಬಳಿಕ, ತ್ವತ್ಕೃತೇನ-ನಿನ್ನಿಂದ ಮಾಡಲ್ಪಟ್ಟ, ನಾಮ್ನಾಚ - ಹೆಸರಿನಿಂದಲೂ, ಲೋಕೇ - ಲೋಕದಲ್ಲಿ, ವಿಶ್ರುತಾ - ಪ್ರಸಿದ್ಧಳಾಗಿ, ಸ್ಥಾಸ್ಯತಿ - ಇರುತ್ತಾಳೆ. ॥ ೫ ॥ ಹೇರಾಜನ್ - ಎಲೈ ರಾಜನೆ, ದಿವ್ಯಾ - ಮನೋಹರಳಾದ, ಗಂಗಾ - ಗಂಗಾನದಿಯು, ಭಾಗೀರಥೀತಿ - ಭಾಗೀರಥೀ ಎಂತಲೂ, ತ್ರಿಪಥಗೇತಿ-ತ್ರಿಪಥಗಾ ಎಂತಲೂ, ಭವಿಷ್ಯತಿ - ಆಗುವಳು, ಯತಃ-ಯಾವ ಕಾರಣ, ತ್ರೀನ್‌ಪಥಃ-ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಮಾರ್ಗಗಳನ್ನು, ಭಾವಯಂತೀ - ನೆನಿಸುತ್ತ, ಪ್ರವವೃತೇ - ಪ್ರವಹಿಸಿದಳೋ, ತತಃ - ಆ ಕಾರಣ,ತ್ರಿಪಥಗೇತಿ-ತ್ರಿಪಥಗಾ ಎಂದು,ಸ್ಮೃತಾ-ಹೇಳಲ್ಪಟ್ಟಳು.॥೬॥ಹೇ ಮನುಜಾಧಿಪ ಮನುಷ್ಯಾಧಿಪತಿಯಾದ, ಹೇರಾಜನ್ - ಎಲೈ ಭಗೀರಥ ರಾಜನೆ, ತ್ವಂ - ನೀನು, ಅತ್ರ-ಈ ಗಂಗಾ ಸಾಗರ ಸಂಗಮ ಸ್ಥಳದಲ್ಲಿ, ಸರ್ವೇಷಾಂ - ಸಮಸ್ತರಾದ, ಪಿತಾಮಹಾನಾಂ - ತಾತಂದರಿಗೆ, ಸಲಿಲಂ - ಉತ್ತರ ಕ್ರಿಯೆಗಳನ್ನು, ಕುರುಷ್ವ - ಮಾಡು, ಪ್ರತಿಜ್ಞಾಂ ಶಪಥವನ್ನು, ಅಪವರ್ಜಯ-ಪೂರ್ಣಗೊಳಿಸಿ. ॥ ೭ ॥ ಹೇರಾಜನ್-ಎಲೈ ರಾಜನೆ, ತೇ-ನಿನಗೆ, ಪೂರ್ವಕೇಣ - ಪೂರ್ವೀಕನಾದ, ಅತಿಯಶಸಾ-ಬಹಳ ಯಶೋವಂತನಾದ, ತೇನ-ಆ ಸಗರಚಕ್ರವರ್ತಿಯಿಂದ,ಧರ್ಮಿಣಾಂ-ಧರ್ಮಿಷ್ಠರಲ್ಲಿ, ಪ್ರವರೇಣಾಪಿ-ಶ್ರೇಷ್ಠನಾದವನಾದಾಗ್ಯೂ, ಏಷಃಮನೋರಥಃ-ಈ ಸಂಕಲ್ಪವು, ನಪ್ರಾಪ್ತಃ-ಹೊಂದ

---

ತಾರಿತರಾಗಿ ದೇವತೆಗಳಂತೆ ಸ್ವರ್ಗವನ್ನಾಂತರು ಎಲೈ ಭಗೀರಥ ರಾಯನೆ ! ಎಮುವರೆವಿಗೂ ಸಮುದ್ರದಲ್ಲಿ ಉದಕವಿರುವುದೋ, ಅದುವರೆವಿಗೂ ಈ ಸಗರನಂದನರು ಸ್ವರ್ಗದಲ್ಲಿ ದೇವತೆಗಳಾಗಿಯೇ ಇರುವರು. ಈ ಗಂಗಾನದಿಯು ನಿನಗೆ ಜ್ಯೇಷ್ಠಕುವರಿಯೆಂದು ಲೋಕದಲ್ಲಿ ಪ್ರಸಿದ್ಧಳಾಗುವಳು. ॥ ೧-೫ ॥ ಈ ನದಿಗೆ ಭಾಗೀರಥೀ ಎಂತಲೂ ತ್ರಿಪಥಗಾ ಎಂತಲೂ ಹೆಸರುಂಟಾಗುವುದು. ಈ ನದಿಯು ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಪ್ರವಾಹಗಳುಳ್ಳದಾದುರಿಂದ ತ್ರಿಪಥಗಾ ಎಂದು ಪ್ರಸಿದ್ಧಿಯಾಗುವುದು. ॥ ೬ ॥ ಅಯ್ಯಾ ರಾಜನೇ ! ನೀನು ನಿನ್ನ ಪಿತಾಮಹರಾದ ಇವರೆಲ್ಲರಿಗೂ ಈ ಸ್ಥಳದಲ್ಲಿ ಉತ್ತರಕ್ರಿಯಾದಿಗಳನ್ನು ಮಾಡಿ, ಪ್ರತಿಜ್ಞೆಯನ್ನು ಪೂರ್ಣಗೊಳಿಸುವವನಾಗು. ಕೇಳು, ಈ ಪ್ರತಿಜ್ಞೆಯು ನಿನ್ನ ಪೂರ್ವಿಕನೂ, ಕೀರ್ತಿವಂತನೂ, ಆದ ಸಗರ ರಾಯನಿಂದಲಾಗಲಿ,

ತಸ್ಯೈವಾಂಶುಮತಾ ತಾತ ಲೋಕೇಽಪ್ರತಿಮತೇಜಸಾ || ಗಂಗಾಂ ಪ್ರಾರ್ಥಯತಾ ನೇತುಂ ಪ್ರತಿಜ್ಞಾ ನಾಪವರ್ಜಿತಾ || ೯ || ರಾಜರ್ಷಿಣಾ ಗುಣವತಾ ಮಹರ್ಷಿ ಸಮತೇಜಸಾ || ಮತ್ತುಲ್ಯತಪಸಾಚೈವ ಕ್ಷತ್ರಧರ್ಮಸ್ಥಿತೇನಚ || ೧೦ || ದಿಲೀಪೇನ ಮಹಾಭಾಗ ತವಪಿತ್ರಾತಿತೇಜಸಾ || ಪುನರ್ನಶಂಕಿತಾ ನೇತುಂ ಗಂಗಾಂ ಪ್ರಾರ್ಥಯತಾನಘ ||೧೧|| ಸಾ ತ್ವಯಾ ಸಮತಿಕ್ರಾಂತಾ ಪ್ರತಿಜ್ಞಾ ಪುರುಷರ್ಷಭ || ಪ್ರಾಪ್ತೋಸಿ ಪರಮಂ ಲೋಕೇ ಯಶಃ ಪರಮಸಮ್ಮತಂ ||೧೨|| ಯಚ್ಚ ಗಂಗಾವತರಣಂ ತ್ವಯಾಕೃತಮರಿಂದಮ || ಅನೇನಚ ಭವಾನ್‌ಪ್ರಾಪ್ತೋ ಧರ್ಮಸ್ಯಾಯತನಂ ಮಹತ್||೧೩||

---

ಲ್ಪಡಲಿಲ್ಲ. || ೮ || ಹೇತಾತ - ಎಲೈ ತಂದೆಯೆ, ಹೇ ಅನಘ - ಎಲೈ ನಿರ್ದೋಷಿಯೆ, ತಸ್ಯೈವ-ಹಾಗೆಯೆ, ಲೋಕೇ-ಲೋಕದಲ್ಲಿ, ಅಪ್ರತಿಮತೇಜಸಾ-ಸಮಾನವಿಲ್ಲದ ಪರಾಕ್ರಮವುಳ್ಳ, ಗಂಗಾಂ-ಗಂಗಾನದಿಯನ್ನು, ನೇತುಂ-ಕರೆತರಲು, ಪ್ರಾರ್ಥಯತಾ- ಪ್ರಾರ್ಥನಮಾಡುತ್ತಿರುವ, ರಾಜರ್ಷಿಣಾ-ರಾಜರ್ಷಿಯಾದ, ಗುಣವತಾ-ಗುಣಶಾಲಿಯಾದ, ಮಹರ್ಷಿಸಮತೇಜಸಾ-ಬ್ರಹ್ಮರ್ಷಿಗಳಿಗೆ ಸಮಾನವಾದ ತೇಜಸ್ಸುಳ್ಳ, ಮತ್ತುಲ್ಯತಪಸಾಚೈವ-ನನಗೆ ಸಮಾನವಾದ ತಪವುಳ್ಳ, ಕ್ಷತ್ರಧರ್ಮಸ್ಥಿತೇನಚ-ಕ್ಷತ್ರಧರ್ಮದಲ್ಲಿಯೂ ರಾಜಧರ್ಮದಲ್ಲಿಯೂ ಇರುವ, ಅಂಶುಮತಾ - ಅಂಶುಮಂತನಿಂದಲೂ, ಪ್ರತಿಜ್ಞಾ-ಪ್ರತಿಜ್ಞೆಯು, ನಾಪವರ್ಜಿತಾ-ಪೂರ್ತಿಮಾಡಲ್ಪಡಲಿಲ್ಲ. ||೯-೧೦|| ಹೇಮಹಾಭಾಗ-ಎಲೈ ಪುಣ್ಯಶಾಲಿಯೇ, ಅತಿತೇಜಸಾ- ಮಹಾತೇಜಸ್ವಿಯಾದ, ತವ-ನಿನ್ನ, ಪಿತ್ರಾ - ತಂದೆಯಾದ, ದಿಲೀಪೇನಚ-ದಿಲೀಪಮಹಾರಾಯನಿಂದಲೂ, ಗಂಗಾಂ- ಗಂಗಾನದಿಯನ್ನು , ನೇತುಂ - ಕರತರಲು, ಪ್ರಾರ್ಥಯತಾಪಿ- ಪ್ರಾರ್ಥನೆ ಮಾಡಿದವನಾದರೂ, ಸಾಪುನಃ-ಆ ಗಂಗಾನದಿಯ, ನಶಂಕಿತಾ-ವಿಚಾರಿಸಲ್ಪಡಲಿಲ್ಲ || ೧೧ || ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಸಾಪ್ರತಿಜ್ಞಾ-ಅಂತಹ ಪ್ರತಿಜ್ಞೆಯು, ತ್ವಯಾ ನಿನ್ನಿಂದ, ಸಮತಿಕ್ರಾಂತಾ-ಚನ್ನಾಗಿ ದಾಟಲ್ಪಟ್ಟಿತು, ಲೋಕೇ- ಲೋಕದಲ್ಲಿ, ಪರಮಸಮ್ಮತಂ-ಬಹಳ ಶ್ಲಾಘನೀಯವಾದ, ಪರಮಂ-ಉತ್ಕೃಷ್ಟವಾದ, ಯಶಃ-ಕೀರ್ತಿಯನ್ನು, ಪ್ರಾಪ್ತಃ-ಪಡದವನು, ಅಸಿ-ಅದೆ. || ೧೨ || ಹೇಅರಿಂದಮ- ಎಲೈ ಶತ್ರುಸಂಹಾರಕನೆ, ತ್ವಯಾ-ನಿನ್ನಿಂದ, ಗಂಗಾವತರಣಂ,ಗಂಗಾ-ಗಂಗಾನದಿಯ, ಅವತರಣಂ-ಭೂಲೋಕಕ್ಕೆ ಇಳಿಸುವಿಕೆಯೆಂಬ, ಯಚ್ಚ-ಯಾವಕರ್ಮವು, ಕೃತಂ-ಮಾಡಲ್ಪಟ್ಟಿತೋ, ಅನೇನಚ-ಈ ಕರ್ಮದಿಂದಲೂ, ಭವಾನ್-ನೀನು, ಮಹತ್-ಬಹಳವಾದ,ಧರ್ಮಸ್ಯ-ಧರ್ಮದ,ಆಯತನಂ ಪ್ರತಿಷ್ಠಾಪನವನ್ನು,ಪ್ರಾಪ್ತಃ ಹೊಂದಿದವನಾದೆ

---

ಆವನ ಮಗನೂ, ಸುಪ್ರಸಿದ್ಧನೂ ಆದ, ಅಂಶುಮಂತನಿಂದಲಾಗಲಿ, ರಾಜರ್ಷಿಯೂ, ಮಹಾತೇಜಸ್ವಿಯೂ, ತಪಸ್ವಿಯೂ, ನನಗೆ ಸಮಾನನೂ ನಿಮ್ಮ ತಂದೆಯೂ ಆದ ದಿಲೀಪರಾಯನಿಂದಾಗಲಿ ಪೂರ್ಣಗೊಳಿಸಲಸಾಧ್ಯವಾಗಿದ್ದಿತು ||೭-೧೧|| ಇಂತಹ ಪ್ರತಿಜ್ಞೆಯು ನಿನ್ನಿಂದ ಪೂರ್ಣಗೊಂಡಿತಾದ ಕಾರಣ ಈ ಪ್ರಪಂಚದಲ್ಲಿ ಶ್ಲಾಘ್ಯವಾಗಿಯೂ, ಸರ್ವೋತ್ತಮವಾಗಿಯೂ ಇರುವ ಕೀರ್ತಿಯನ್ನು ಪಡೆದಿರುವೆ. ||೧೨|| ಎಲೈ ಶತ್ರುಸಂಹಾರಕನಾದ ಭಗೀರಥನೆ ! ಗಂಗಾವತರಣವು ನಿನ್ನಿಂದ ಮಾಡಲ್ಪಟ್ಟಿತಾದುದರಿಂದ ಮಹತ್ತರವಾದ ಧರ್ಮ ಪ್ರತಿಷ್ಠಾಪನೆ

೧೩ || ಪ್ಲಾವಯಸ್ವ ತ್ವಮಾತ್ಮಾನಂ ನರೋತ್ತಮ ಸದೋಚಿತೇ || ಸಲಿಲೇ ಪುರುಷವ್ಯಾಘ್ರ ಶುಚಿಃ ಪುಣ್ಯಫಲೋಭವ || ೧೪ || ಪಿತಾಮಹಾನಾಂ ಸರ್ವೇಷಾಂ ಕುರುಷ್ವ ಸಲಿಲಕ್ರಿಯಾಂ||ಸ್ವಸ್ತಿತೇಸ್ತು ಗಮಿಷ್ಯಾಮಿ ಸ್ವಂಲೋಕಂ ಗಮ್ಯತಾಂ ನೃಪ || ೧೫ || ಇತ್ಯೇವಮುಕ್ತ್ವಾ ದೇವೇಶಸ್ಸರ್ವಲೋಕ ಪಿತಾಮಹಃ || ಯಥಾಗತಂ ತಥಾಗಚ್ಛದ್ದೇವಲೋಕಂ ಮಹಾಯಶಾಃ || ೧೬ || ಭಗೀರಥೋಪಿರಾಜರ್ಷಿಃ ಕೃತ್ವಾ ಸಲಿಲಮುತ್ತಮಂ || ಯಥಾಕ್ರಮಂ ಯಥಾನ್ಯಾಯಂ ಸಾಗರಾಣಾಂ ಮಹಾಯಶಾಃ ||೧೭|| ಕೃತೋದಕಶ್ಶುಚೀ ರಾಜಾ ಸ್ವಪುರಂ ಪ್ರವಿವೇಶಹ || ಸಮೃದ್ಧಾರ್ಥೋ ರಘುಶ್ರೇಷ್ಠ ಸ್ವರಾಜ್ಯಂ ಪ್ರಶ

---

|| ೧೩ || ಹೇನರೋತ್ತಮ - ಎಲೈ ಪುರುಷಶ್ರೇಷ್ಠನೆ, ಸದಾ - ನಿರಂತರವೂ, ಉಚಿತೇ-ಯೋಗ್ಯವಾದ, ಸಲಿಲೇ-ಗಂಗೋದಕದಲ್ಲಿ, ಆತ್ಮಾನಂ-ದೇಹವನ್ನು, ಪ್ಲಾವಯಸ್ವ - ಸ್ನಾನಮಾಡಿಸು, ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೆ, ಶುಚಿಃ-ಸ್ನಾನದಿಂದ ಪರಿಶುದ್ಧನಾದ, ತ್ವಂ- ನೀನು, ಪುಣ್ಯಫಲಃ-ಪುಣ್ಯವೇ ಫಲವಾಗಿ ಉಳ್ಳವನು, ಭವ-ಆಗು, ||೧೪|| ಪಿತಾಮಹಾನಾಂ-ಪಿತಾಮಹರಾದ, ಸರ್ವೇಷಾಂ-ಸಮಸ್ತರಿಗೂ, ಸಲಿಲಕ್ರಿಯಾಂ-ತಿಲೋದಕ ಕ್ರಿಯೆಗಳನ್ನು, ಕುರುಷ್ವ - ಮಾಡು, ತೇ-ನಿನಗೆ, ಸ್ವಸ್ತಿ-ಶುಭವು, ಅಸ್ತು - ಆಗಲಿ, ಸ್ವಂಲೋಕಂ- ಸ್ವಕೀಯವಾದ ಸತ್ಯಲೋಕವಂಕುರಿತು, ಗಮಿಷ್ಯಾಮಿ-ಹೋಗುವೆನು, ಹೇನೃಪ-ಎಲೈ ದೊರೆಯೆ, ತ್ವಯಾಪಿ-ನಿನ್ನಿಂದಲೂ, ಸ್ವಪುರಂ- ನಿನ್ನ ಪಟ್ಟಣವಂ ಕುರಿತು, ಗಮ್ಯತಾಂ-ಹೋಗಲ್ಪಡಲಿ. || ೧೫ || ಇತ್ಯೇವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಮಹಾಯಶಾಃ - ಮಹಾಕೀರ್ತಿವಂತನಾದ, ಸರ್ವಲೋಕ ಪಿತಾಮಹಃ -- ಎಲ್ಲ ಲೋಕಗಳ ಸೃಷ್ಟಿಕರ್ತನಾದ, ದೇವೇಶಃ-ದೇವಶ್ರೇಷ್ಠನಾದ ಬ್ರಹ್ಮನು, ಯಥಾಗತಂ ಬಂದಂತೆ,ದೇವಲೋಕಂ-ಬ್ರಹ್ಮಲೋಕವನ್ನು ಕುರಿತು, ತಥಾ-ಹಾಗೆಯೇ, ಅಗಚ್ಛತ್-ಹೊರಟನು. ||೧೬|| ಹೇ ರಘುಶ್ರೇಷ್ಠ-ರಘುಕುಲೋತ್ತಮನೆ, ರಾಜರ್ಷಿಃ - ರಾಜರ್ಷಿಯಾದ, ಭಗೀರಥೋಪಿ- ಭಗೀರಥನೂ, ಸಾಗರಾಣಾಂ-ಸಗರಪುತ್ರರಿಗೆ, ಯಥಾನ್ಯಾಯಂ-ಶಾಸ್ತ್ರಾನುಸಾರವಾಗಿಯೂ, ಯಥಾಕ್ರಮಂ-ಕ್ರಮಾನುಸಾರವಾಗಿಯೂ, ಉತ್ತಮಂ-ಉತ್ಕೃಷ್ಟವಾದ, ಸಲಿಲಂ-ಪೈತೃಕ ಕರ್ಮರೂಪವಾದ ಉದಕ ಕ್ರಿಯೆಯನ್ನು,ಕೃತ್ವಾ-ಮಾಡಿ,ಕೃತೋದಕಃ-ಅನ್ಯರಿಗೂ ಮಾಡಲ್ಪಟ್ಟ ತೀರ್ಥಶ್ರಾದ್ಧಗಳುಳ್ಳವನಾಗಿ, ಶುಚಿಃ-ತಾನೂಪರಿಶುದ್ಧನಾಗಿ,ರಾಜಾ-ಜನರಿಗೆಲ್ಲರಂಜಕನಾದ, ಸ್ವಪುರಂ-ತನ್ನ ಪಟ್ಟಣವನ್ನು,ಪ್ರವಿವೇಶಹ-

---

ಪಡೆದವನಾದೆ. ಯಾವಾಗಲೂ ಪರಿಶುದ್ಧವಾಗಿರುವ ಈ ಗಂಗೋದಕದಲ್ಲಿ ಮಿಂದು ಪುಣ್ಯವನ್ನಾರ್ಜಿಸಿ ನಿನ್ನ ಪಿತಾಮಹರೆಲ್ಲರಿಗೂ ಉತ್ತರಕ್ರಿಯಾದಿಗಳನ್ನು ಮಾಡುವವನಾಗು. ನಿನಗೆ ಮಂಗಳವಾಗಲಿ. ನಾನು ಹೋಗಿಬರುವೆನು. ನೀನೂ ನಿನ್ನ ಪಟ್ಟಣಕ್ಕೆ ತೆರಳುವವನಾಗು. " ಎಂದೀ ಪ್ರಕಾರವಾಗಿ ಹೇಳಿದ ಲೋಕಪಿತಾಮಹನಾದ ಚತುರ್ಮುಖ ಬ್ರಹ್ಮನು ಸ್ವಸ್ಥಾನವಾದ ಬ್ರಹ್ಮಲೋಕವನ್ನು ಕುರಿತು ತೆರಳಿದನು. || ೧೬ || ರಘುಪುಂಗವ ! ರಾಜರ್ಷಿಯಾದ ಭಗೀರಥರಾಯನೂ ಸಹ ಸಗರಕುವರರಿಗೆ ಶಾಸ್ತ್ರೋಕ್ತವಾಗಿ ಉತ್ತರಕ್ರಿಯಾದಿಗಳನ್ನು ಮಾಡಿ, ಮಹಾ ಕೀರ್ತಿವಂತನಾಗಿಯೂ, ಪರಿಶುದ್ಧ

ಶಾಸಹ ||೧೮|| ಪ್ರಮುಮೋದಹ ಲೋಕಸ್ತಂ ನೃಪಮಾಸಾದ್ಯ ರಾಘವ || ನಷ್ಟಶೋಕಸ್ಸಮೃದ್ಧಾರ್ಥೋ ಬಭೂವ ವಿಗತ ಜ್ವರಃ ||೧೯|| ಏಷ ತೇ ರಾಮ ಗಂಗಾಯಾ ವಿಸ್ತರೋಽಭಿಹಿತೋ ಮಯಾ || ಸ್ವಸ್ತಿಪ್ರಾಪ್ನುಹಿ ಭದ್ರಂ ತೇ ಸಂಧ್ಯಾಕಾಲೋಽತಿ ವರ್ತತೇ ||೨೦|| ಧನ್ಯಂ ಯಶಸ್ಯಮಾಯುಷ್ಯಂ ಪುತ್ರ್ಯಂ ಸ್ವರ್ಗ್ಯಮತೀವಚ || ಯಶ್ಶ್ರಾವಯತಿ ವಿಪ್ರೇಷು ಕ್ಷತ್ರಿಯೇಷ್ವಿತರೇಷುಚ|| ಪ್ರೀಯಂತೇ ಪಿತರಸ್ತಸ್ಯ ಪ್ರೀಯಂತೇ ದೈವತಾನಿಚ|| ೨೧ || ಇದಮಾಖ್ಯಾನಮವ್ಯಗ್ರೋ ಗಂಗಾವತರಣಂ ಶುಭಂ || ಯಶ್ಶೃಣೋತಿ

---

ಹೊಕ್ಕನಷ್ಟೆ ಸಮೃದ್ಧಾರ್ಥಃ-ಸಂಪೂರ್ಣವಾದ ಪುರುಷಾರ್ಥವುಳ್ಳವನಾಗಿ, ಸ್ವರಾಜ್ಯಂ-ತನ್ನ ರಾಜ್ಯವನ್ನು, ಪ್ರಶಶಾಸಹ-ಪರಿಪಾಲಸೆಯಂಗೈಯುತ್ತಿದನು. ||೧೭-೧೮|| ಹೇರಾಘವ-ಎಲೈ ಶ್ರೀರಾಮನೆ, ಲೋಕಃ-ಜನವೂ, ತಂನೃಪಂ - ಆ ಅರಸನನ್ನು, ಆಸಾಧ್ಯ - ಹೊಂದಿ, ಪ್ರಮುಮೋದಹ-ಸಂತೋಷಗೊಂಡು, ನಷ್ಟಶೋಕಃ-ಕಳೆದುಹೋದ ಶೋಕವುಳ್ಳ, ಸಮೃದ್ಧಾರ್ಥಃ-ಸಂಪೂರ್ಣವಾದ ಮನೋರಥವುಳ್ಳ, ವಿಗತಜ್ವರಃ,ವಿಗತ – ಕಳೆದುಹೋದ, ಜ್ವರಃ – ಸಂತಾಪವುಳ್ಳುದು, ಬಭೂವ-ಆಯಿತು. ||೧೯|| ಹೇರಾಮ-ಎಲೈ ಶ್ರೀರಾಮನೆ, ತೇ-ನಿನಗೆ, ಮಯಾ-ನನ್ನಿಂದ,ಗಂಗಾಯಾಃ-ಗಂಗಾನದಿಯ, ಏಷವಿಸ್ತರಃ-ಈ ಕಥಾವಿಸ್ತಾರವು, ಅಭಿಹಿತಃ-ಹೇಳಲ್ಪಟ್ಟಿತು, ತೇ-ನಿನಗೆ,ಭದ್ರಂ-ಶುಭವು, ಅಸ್ತು-ಆಗಲಿ, ಸ್ವಸ್ತಿ-ಕ್ಷೇಮವನ್ನು, ಪ್ರಾಪ್ನುಹಿ-ಹೊಂದು, ಸಂಧ್ಯಾಕಾಲಃ ಸಂಧ್ಯಾನುಷ್ಠಾನಕಾಲವು, ಅತಿವರ್ತತೇ-ಅತಿಕ್ರಮಿಸುತ್ತದೆ. ||೨೦|| ಧನ್ಯಂ-ಪುಣ್ಯಕರವಾದ, ಯಶಸ್ಯಂ-ಕೀರ್ತಿಸಂಪಾದಕವಾದ, ಆಯುಷ್ಯಂ-ಆಯುರ್ವೃದ್ಧಿಕರವಾದ, ಪುತ್ರ್ಯಂ-ಪುತ್ರಸಂಪಾದಕವಾದ, ಅತೀವ-ಬಹಳವಾಗಿ, ಸ್ವರ್ಗ್ಯಂ - ಸ್ವರ್ಗಸಂಪಾದಕವಾದ ಈ ಗಂಗಾವತರಣವನ್ನು, ವಿಪ್ರೇಷು-ಬ್ರಾಹ್ಮಣರಲ್ಲಿಯೂ, ಕ್ಷತ್ರಿಯೇಷು-ರಾಜರಲ್ಲಿಯೂ, ಇತರೇಷುಚ - ವೈಶ್ಯಾದಿಗಳಲ್ಲಿಯೂ, ಯಃ-ಯಾವನು, ಶ್ರಾವಯತಿ-ಶ್ರವಣಮಾಡಿಸುವನೂ,ತಸ್ಯ-ಆ ಪುರುಷನ,ಪಿತರಃ-ಪಿತೃಗಳು, ಪ್ರೀಯಂತೇ-ಸಂತುಷ್ಟರಾಗುತ್ತಾರೆ, ದೈವತಾನಿಚ-ದೇವತೆಗಳೂ, ಪ್ರೀಯಂತೇ-ಸಂತುಷ್ಟರಾಗುತ್ತಾರೆ. ||೨೧|| ಅವ್ಯಗ್ರಃ-ಚಪಲಚಿತ್ತನಾಗದ, ಯಃ-ಯಾವ ಪುರುಷನು, ಶುಭಂ-ಶುಭಕರವಾದ, ಗಂಗಾವತರಣಂ-ಗಂಗಾವತರಣಪ್ರತಿಪಾದಕವಾದ, ಇದಮಾಖ್ಯಾನಂ-ಈ ಉಪಾಖ್ಯಾನವನ್ನು, ಶೃಣೋತಿ - ಕೇಳು

---

ನಾಗಿಯೂ ಆಗಿ, ಸ್ವಪುರವಾದ ಅಯೋಧ್ಯೆಯನ್ನು ಪ್ರವೇಶಿಸಿ ಕೃತಕೃತ್ಯನಾಗಿ ರಾಜ್ಯಪರಿಪಾಲನೆ ಮಾಡುತ್ತಿದ್ದನು. ಆಗ ಜನರೆಲ್ಲರೂ ಮಹದಾನಂದ ಭರಿತರಾದರು. ||೧೭-೧೯|| "ಎಲೈ ರಾಮನೆ ! ಇಂತು ಗಂಗಾನದಿಯ ಕಥೆಯು ವಿಸ್ತಾರವಾಗಿ ನನ್ನಿಂದ ಹೇಳಲ್ಪಟ್ಟಿತು. ಸಂಧ್ಯಾಕಾಲವು ಅತಿಕ್ರಮಿಸುವುದು. ನಿನಗೆ ಮಂಗಳವಾಗಲಿ ಪುಣ್ಯಕರವೂ, ಯಶಸ್ಕರವೂ, ಆಯುಸ್ಸನ್ನು ವೃದ್ಧಿಗೊಳಿಸುವುದೂ, ಪುತ್ರಪ್ರದವೂ, ಸ್ವರ್ಗವನ್ನುಂಟುಮಾಡುವುದೂ ಆದ ಈ ಗಂಗಾವತರಣದ ಕಥೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಯಾವ ಪುರುಷನು ಕೇಳುತ್ತಾನೆಯೋ, ಯಾವನು ಶ್ರವಣ ಮಾಡುತ್ತಾನೆಯೋ ಆತನ ಪಿತೃಗಳೆಲ್ಲರೂ ಸಂತೋಷವನ್ನು ಪಡೆಯುತ್ತಾರೆ; ದೇವತೆಗಳು ತೃಪ್ತರಾಗುತ್ತಾರೆ; ಯಾವ ಪುರು

ಚ ಕಾಕುತ್ಸ್ಥ ಸರ್ವಾನ್ ಕಾಮಾನವಾಪ್ನುಯಾತ್ || ಸರ್ವೇ ಪಾಪಾಃ ಪ್ರಣ
ಶ್ಯಂತಿ ಆಯುಃ ಕೀರ್ತಿಶ್ಚ ವರ್ಧತೇ || || ೨೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ

---

ಶ್ಯಾನೋ, ಹೇಕಾಕುತ್ಸ್ಥ - ಎಲೈ ಶ್ರೀರಾಮನೆ, ಸಃ - ಆ ಪುರುಷನು, ಸರ್ವಾನ್-ಸಮಸ್ತಗಳಾದ, ಕಾಮಾನ್ - ಕೋರಿಕೆಗಳನ್ನು, ಅವಾಪ್ನುಯಾತ್ - ಹೊಂದುವನು, ತಸ್ಯ-ಅವನ, ಸರ್ವೇ- ಸಮಸ್ತವಾದ, ಪಾಪಾಃ - ಪಾಪಗಳು, ಪ್ರಣಶ್ಯಂತಿ - ನಷ್ಟವಾಗುತ್ತವೆ, ಆಯುಃ - ಆಯುಸ್ಸು, ಕೀರ್ತಿಶ್ಚ - ಕೀರ್ತಿಯೂ, ವರ್ಧತೇ - ವೃದ್ಧಿಯನ್ನು ಹೊಂದುತ್ತದೆ. ||೨೨-೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ.



---

ಷನು, ದೃಢಮನಸ್ಕನಾಗಿ ಮಂಗಳಕರವಾಗಿರುವ ಗಂಗಾವತರಣದ ಈ ಉಪಾಖ್ಯಾನವನ್ನು ಕೇಳುವನೋ, ಅವನು ಸಮಸ್ತ ಮನೋಭೀಷ್ಟಗಳನ್ನು ಹೊಂದುವನು. ಅವನ ಪಾಪಗಳೆಲ್ಲವೂ ತೊಲಗಿಹೋಗುವುವು ಆಯುಸ್ಸೂ, ಕೀರ್ತಿಯೂ, ವೃದ್ಧಿಯನ್ನೈದುವುದು" ||೨೦-೨೩||

ಇಂತಿದು ಸಗರಕುವರರ ಮುಕ್ತಿಪ್ರಾಪ್ತಿ ವೃತ್ತಾಂತವರ್ಣನವೆಂಬ

ನಲವತ್ತ ನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚಚತ್ವಾರಿಂಶಸ್ಸರ್ಗಃ

---

ವಿಶ್ವಾಮಿತ್ರವಚಶ್ಶ್ರುತ್ವಾ ರಾಘವಸ್ಸಹಲಕ್ಷ್ಮಣಃ || ವಿಸ್ಮಯಂ ಪರಮಂ ಗತ್ವಾ ವಿಶ್ವಾಮಿತ್ರಮಥಾಬ್ರವೀತ್ || ೧ || ಅತ್ಯದ್ಭುತಮಿದಂ ಬ್ರಹ್ಮನ್ ಕಥಿತಂ ಪರಮಂ ತ್ವಯಾ||ಗಂಗಾವತರಣಂ ಪುಣ್ಯಂ ಸಾಗರಸ್ಯಾಪಿ ಪೂರಣಂ|| ೨|| ತಸ್ಯ ಸಾ ಶರ್ವರೀ ಸರ್ವಾ ಸಹಸೌಮಿತ್ರಿಣಾ ತದಾ || ಜಗಾಮ ಚಿಂತಯಾನಸ್ಯ ವಿಶ್ವಾಮಿತ್ರಕಥಾಂ ಶುಭಾಂ || ೩ || ತತಃ ಪ್ರಭಾತೇ ವಿಮಲೇ ವಿಶ್ವಾಮಿತ್ರಂ ಮಹಾಮುನಿಂ || ಉವಾಚ ರಾಘವೋ ವಾಕ್ಯಂ ಕೃತಾಹ್ನಿಕಮರಿಂದಮಃ ||೪|| ಗತಾ ಭಗವತೀ ರಾತ್ರಿಶ್ಶ್ರೋತವ್ಯಂ ಪರಮಂ ಶ್ರುತಂ ||

---

ರಾಘವಃ - ಶ್ರೀರಾಮನು, ಸಹಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿ, ವಿಶ್ವಾಮಿತ್ರವಚಃ- ವಿಶ್ವಾಮಿತ್ರನ ಮಾತನ್ನು, ಶ್ರುತ್ವಾ - ಕೇಳಿ, ಪರಮಂ - ಬಹಳವಾದ, ವಿಸ್ಮಯಂ-ಆಶ್ಚರ್ಯವನ್ನು, ಗತ್ವಾ - ಹೊಂದಿ, ಅಥ-ಬಳಿಕ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ||೧|| ಹೇಬ್ರಹ್ಮನ್- ಎಲೈ ಬ್ರಾಹ್ಮಣನೆ, ತ್ವಯಾ- ನಿನ್ನಿಂದ, ಕಥಿತಂ - ಹೇಳಲ್ಪಟ್ಟ, ಪರಮಂ -ಶ್ರೇಷ್ಠವಾದ, ಗಂಗಾವತರಣಂ - ಗಂಗೆಯು ಇಳಿಯುವಿಕೆಯನ್ನು ಹೇಳುತ್ತಿರುವ, ಸಾಗರಸ್ಯಾಪಿ - ಸಗರ ಪುತ್ರರಿಂದ ನಿರ್ಮಿತವಾದ ಗರ್ತದ, ಪೂರಣಂ - ಗಂಗೋದಕದಿಂದ ಪೂರ್ತಿಮಾಡುವಿಕೆಯು, ಇದಂ - ಇದು, ಅತ್ಯದ್ಭುತಂ - ಆಶ್ಚರ್ಯಕರವಾಗಿದೆಯೆಂದು, ಅಬ್ರವೀತ್- ನುಡಿದನು, || ೨ || ತದಾ - ಆಗ, ಶುಭಾಂ- ಶುಭಕರವಾದ, ವಿಶ್ವಾಮಿತ್ರಕಥಾಂ, ವಿಶ್ವಾಮಿತ್ರ–ವಿಶ್ವಾಮಿತ್ರ ಋಷಿಯಿಂದ ಹೇಳಲ್ಪಟ್ಟ, ಕಥಾಂ- ಗಂಗಾವತರಣದ ಕಥೆಯನ್ನು, ಸೌಮಿತ್ರಿಣಾಸಹ - ಲಕ್ಷ್ಮಣನೊಡನೆ, ಚಿಂತಯಾನಸ್ಯ-ಆಲೋಚಿಸುತ್ತಿರುವ, ತಸ್ಯ-ಆ ಶ್ರೀರಾಮನಿಗೆ, ಸರ್ವಾ - ಸಮಸ್ತವಾದ, ಸಾಶರ್ವರೀ-ಆ ರಾತ್ರಿಯು, ಜಗಾಮ- ಕಳೆಯಿತು. || ೩ || ತತಃ - ಬಳಿಕ, ವಿಮಲೇ - ನಿರ್ಮಲವಾದ, ಪ್ರಭಾತೇ-ಪ್ರಾತಃಕಾಲದಲ್ಲಿ, ಅರಿಂದಮಃ - ಶತ್ರು ಸಂಹಾರಕನಾದ, ರಾಘವಃ - ಶ್ರೀರಾಮನು, ಕೃತಾಹ್ನಿಕಂ - ಮಾಡಲ್ಪಟ್ಟ ಪ್ರಾತಃಕಾಲ ನಿತ್ಯಕರ್ಮವುಳ್ಳ, ಮಹಾಮುನಿಂ-ಮಹರ್ಷಿಯಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ವಾಕ್ಯಂ - ಮಾತನ್ನು, ಉವಾಚ - ಹೇಳಿದನು. || ೪ || ಹೇ ಮಹಾತಪಃ - ಎಲೈ

---

ಈ ಪ್ರಕಾರವಾಗಿ ವಿಶ್ವಾಮಿತ್ರನು ಗಂಗಾವತರಣವನ್ನೂ ಸಗರಕುಮಾರರು ಮುಕ್ತಿಯನ್ನು ಪಡೆದ ವೃತ್ತಾಂತವನ್ನೂ ಹೇಳಿದುದನ್ನು ಕೇಳಿ, ಲಕ್ಷ್ಮಣನೊಡಗೂಡಿದ ರಾಮನು ಬಹಳವಾದ ಆಶ್ಚರ್ಯವನ್ನು ಹೊಂದಿ, ಆತನನ್ನು ಕುರಿತು, "ಓ ಬ್ರಾಹ್ಮಣನೇ ! ನಿನ್ನಿಂದ ಹೇಳಲ್ಪಟ್ಟ ಗಂಗಾವತರಣವೂ, ಸಾಗರ ಪೂರಣವೂ ಅತ್ಯದ್ಭುತವಾಗಿರುವುದು." ಎಂದನು. ಇಂತು ನುಡಿದು ಆ ಕಥೆಯನ್ನೇ ಚಿಂತಿಸುತ್ತಿರುವ ರಾಮ ಲಕ್ಷ್ಮಣರಿಗೆ ಆ ರಾತ್ರಿಯೆಲ್ಲವೂ ಬಲು ಬೇಗನೆ ಕಳೆದು ಹೋಯಿತು. ಆ ಬಳಿಕ ಪ್ರಾತಃಕಾಲವಾಗಲು ರಘುನಂದನನಾದ

ಕ್ಷಣಭೂತೇವ ನೌ ರಾತ್ರಿ ಸ್ಸಂವೃತ್ತೇಯಂ ಮಹಾತಪಃ ||೫|| ಇಮಾಂ ಚಿಂತ
ಯತಸ್ಸರ್ವಾಂ ನಿಖಿಲೇನ ಕಥಾಂ ತವ || ತರಾಮ ಸರಿತಾಂ ಶ್ರೇಷ್ಠಾಂ
ಪುಣ್ಯಾಂ ತ್ರಿಪಥಗಾಂ ನದೀಂ ||೬|| ನೌರೇಷಾಹಿ ಸುಖಾಸ್ತೀರ್ಣಾ ಋಷೀಣಾಂ
ಪುಣ್ಯಕರ್ಮಣಾಂ|| ಭಗವಂತಮಿಹಪ್ರಾಪ್ತಂ ಜ್ಞಾತ್ವಾ ತ್ವರಿತ ಮಾಗತಾ ||೭||
ತಸ್ಯತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ || ಸಂತಾರಂ ಕಾರ
ಯಾಮಾಸ ಸರ್ಷಿಸಂಘ ಸ್ಸರಾಘವಃ ||೮|| ಉತ್ತರಂ ತೀರಮಾಸಾದ್ಯ ಸಂಪೂಜ್ಯ
ರ್ಷಿಗಣಂ ತದಾ|| ಗಂಗಾ ಕೂಲೇ ನಿವಿಷ್ಟಾಸ್ತೇ ವಿಶಾಲಾಂ ದದೃಶುಃಪುರೀಂ||೯||

---

ಮಹಾ ತಪಸ್ವಿಯು, ಭಗವತೀ - ಪೂಜ್ಯಳಾದ, ರಾತ್ರಿಃ - ರಾತ್ರಿಯು, ಗತಾ-ಕಳೆಯಿತು, ಪರಂ-ಶ್ರೇಷ್ಠವಾದ, ಶ್ರೋತವ್ಯಂ - ಕೇಳತಕ್ಕ ಚರಿತ್ರೆಯು, ಶೃತಂ - ಕೇಳ್ಪಟ್ಟಿತು, ತವ- ನಿನ್ನಿಂದ ಹೇಳಲ್ಪಟ್ಟ, ಸರ್ವಾಂ - ಸಮಸ್ತವಾದ, ಇಮಾಂಕಥಾಂ- ಈ ಕಥೆಯನ್ನು, ನಿಖಿಲೇನ-ಮೊದಲಿನಿಂದ ಕೊನೆಯವರೆಪಿಗೂ, ಚಿಂತಯತೋಃ - ಧ್ಯಾನ ಮಾಡುತ್ತಿರುವ, ನೌ - ನಮಗೆ, ಇಯಂರಾತ್ರಿಃ-ಈ ರಾತ್ರಿಯು, ಕ್ಷಣಭೂತೇವ-ಕ್ಷಣಪ್ರಾಯದಂತೆ, ಸಂವೃತ್ತಾ-ಕಳೆದುಹೋಯಿತು. ||೫|| ಪುಣ್ಯಕರ್ಮಣಾಂ-ಪುಣ್ಯಕರವಾದ ವ್ಯಾಪಾರವುಳ್ಳ, ಋಷೀಣಾಂ - ಋಷಿಗಳ ಸಂಬಂಧವಾದ, ಸುಖಾಸ್ತೀರ್ಣಾ-ಸುಖಕರವಾಗಿ ಮಾಡಲ್ಪಟ್ಟ, ಏಷಾನೌಃ-ಈ ನಾವೆಯು, ಭಗವಂತಂ-ಪೂಜ್ಯನಾದ ನಿನ್ನನ್ನು, ಇಹ-ಇಲ್ಲಿಗೆ, ಪ್ರಾಪ್ತಂ - ಬಂದವನನ್ನಾಗಿ,ಜ್ಞಾತ್ವಾ-ತಿಳಿದು,ತ್ವರಿತಂ-ಬೇಗನೆ, ಆಗತಾ-ಬಂದಿರುವುದು,ಅನಯಾ-ಈ ನಾವೆಯಿಂದ, ಪುಣ್ಯಾಂ-ಪುಣ್ಯಕರಳಾದ, ಸರಿತಾಂ-ನದಿಗಳಲ್ಲಿ, ಶ್ರೇಷ್ಠಾಂ-ಶ್ರೇಷ್ಠಳಾದ, ತ್ರಿಪಥಗಾಂ-ತ್ರಿಲೋಕ ಗಾಮಿನಿಯಾದ, ನದೀಂ- ಗಂಗಾನದಿಯನ್ನು, ತರಾಮ-ದಾಟುವ, ||೬-೭|| ಮಹಾತ್ಮನಃ - ಮಹಾನುಭಾವನಾದ, ತಸ್ಯರಾಘವಸ್ಯ - ಆ ರಾಮನ, ತದ್ವಚನಂ- ಆ ಮಾತನ್ನು, ಶೃತ್ವಾ-ಕೇಳಿ, ಸರ್ಷಿಸಂಘಃ - ಋಷಿಗಳ ಗುಂಪುಗಳಿಂದಲೂ ಸ ರಾಘವಃ - ರಾಮಲಕ್ಷ್ಮಣರಿಂದಲೂ ಒಡಗೂಡಿದ ವಿಶ್ವಾಮಿತ್ರನು, (ನಾವಿಕೈಃ - ನಾವೆಯನ್ನು ನಡೆಸುವ ಅಂಬಿಗರಿಂದ,) ಸಂತಾರಂ-ಗಂಗಾವತರಣವನ್ನು, ಕಾರಯಾಮಾಸ - ಮಾಡಿಸಿದನು. || ೮ || ಉತ್ತರಂ – ಉತ್ತರ ದಿಕ್ಕಿನಲ್ಲಿರುವ, ತೀರಂ - ದಡವನ್ನು, ಸಂಪೂಜ್ಯ - ಪೂಜೆಮಾಡಿ, ತದಾ- ಆ ಕಾಲದಲ್ಲಿ, ಗಂಗಾಕೂಲೇ-ಗಂಗಾತೀರದಲ್ಲಿ, ನಿವಿಷ್ಟಾಃ-ಕುಳಿತುಕೊಂಡಿರುವ, ತೇ-ಆ ವಿಶ್ವಾಮಿತ್ರ, ರಾಮ, ಲಕ್ಷ್ಮಣಾದಿಗಳು, ವಿಶಾಲಾಂ - ವಿಶಾಲವೆಂದು ಪ್ರಸಿದ್ಧವಾದ, ಪುರೀಂ - ಪಟ್ಟಣವನ್ನು, ದದೃಶುಃ - ಕಂಡರು. ||೯||

---

ರಾಮಚಂದ್ರನು ವಿಶ್ವಾಮಿತ್ರನನ್ನು ಕುರಿತು, "ಎಲೈ ಮಹಾತಪಸ್ವಿಯಾದ ವಿಶ್ವಾಮಿತ್ರನೇ! ಮುಖ್ಯವಾಗಿ ಕೇಳಬೇಕಾದ, ಶ್ರೇಷ್ಠವಾದ ಚರಿತ್ರೆಯು ಕೇಳಲ್ಪಟ್ಟಿತು. ಈ ಕಥೆಯನ್ನೇ ಚಿಂತಿಸುತ್ತಿರುವ ನಮಗೆ ರಾತ್ರಿಯು ಕ್ಷಣಪ್ರಾಯವಾಗಿ ಕಳೆದು ಹೋಯಿತು. ||೧-೫|| ಪುಣ್ಯಕರವಾದ ಕರ್ಮವುಳ್ಳ ಮಹರ್ಷಿಗಳ ಈ ಹಡುಗು ತಮಗಾಗಿ ಸಿದ್ಧವಾಗಿರುವುದು. ನದಿಗಳಲ್ಲಿ ಶ್ರೇಷ್ಠವಾಗಿಯೂ, ತ್ರಿಪಥಗಾಮಿನಿಯಾಗಿಯೂ, ಪುಣ್ಯಕರವಾಗಿಯೂ ಇರುವ ಈ ಗಂಗಾನದಿಯನ್ನು ದಾಂಟುವ" ಎಂದನು. ಆಗಲಾ ವಿಶ್ವಾಮಿತ್ರನು ಋಷಿಗಳೊಡನೆಯೂ, ರಾಮ ಲಕ್ಷ್ಮಣರಿಂದಲೂ ಒಡಗೂಡಿದವನಾಗಿ ಗಂಗಾನದಿಯನ್ನು ದಾಟಿ ಅದರ

ತತೋ ಮುನಿವರಸ್ತೂರ್ಣಂ ಜಗಾಮ ಸಹ ರಾಘವಃ ॥ ವಿಶಾಲಾಂ ನಗರೀಂ ರಮ್ಯಾಂ ದಿವ್ಯಾಂ ಸ್ವರ್ಗೋಪಮಾಂ ತದಾ ॥ ೧೦ ॥ ಅಥ ರಾಮೋ ಮಹಾಪ್ರಾಜ್ಞೋ ವಿಶ್ವಾಮಿತ್ರಂ ಮಹಾಮುನಿಂ ॥ ಪಪ್ರಚ್ಛ ಪ್ರಾಂಜಲಿರ್ಭೂತ್ವಾ ವಿಶಾಲಾಮುತ್ತಮಾಂ ಪುರೀಂ ॥ ೧೧ ॥ ಕತರೋ ರಾಜವಂಶೋಽಯಂ ವಿಶಾಲಾಯಾಂ ಮಹಾಮುನೇ ॥ ಶ್ರೋತುಮಿಚ್ಛಾಮಿ ಭದ್ರಂ ತೇ ಪರಂ ಕೌತೂಹಲಂ ಹಿ ಮೇ ॥ ೧೨ ॥ ತಸ್ಯ ತದ್ವಚನಂ ಶ್ರುತ್ವಾ ರಾಮಸ್ಯ ಮುನಿಪುಂಗವಃ ॥ ಆಖ್ಯಾತುಂ ತತ್ಸಮಾರೇಭೇ ವಿಶಾಲಸ್ಯ ಪುರಾತನಂ ॥ ೧೩ ॥ ಶ್ರೂಯತಾಂ ರಾಮ ಶಕ್ರಸ್ಯ ಕಥಾಂ ಕಥಯತಃ ಶುಭಾಂ॥

---

ತತಃ - ಬಳಿಕ, ಮುನಿವರಃ - ವಿಶ್ವಾಮಿತ್ರನು, ತೂರ್ಣಂ - ಜಾಗ್ರತೆಯಾಗಿ, ಸಹರಾಘವಃ- ರಾಮಲಕ್ಷ್ಮಣರಿಂದೊಡಗೂಡಿ, ತದಾ - ಆಗ, ಸ್ವರ್ಗೋಪಮಾಂ - ಸ್ವರ್ಗಕ್ಕೆ ಸಮಾನವಾದ, ದಿವ್ಯಾಂ - ದೇವನಿರ್ಮಿತವಾದ, ರಮ್ಯಾಂ-ಮನೋಹರವಾದ, ವಿಶಾಲಾಂನಗರೀಂ- ವಿಶಾಲಾಪಟ್ಟಣವನ್ನು ಕುರಿತು, ಜಗಾಮ - ತೆರಳಿದನು. ॥ ೧೦ ॥ ಅಥ - ಬಳಿಕ, ಮಹಾಪ್ರಾಜ್ಞಃ - ಮಹಾಬುದ್ಧಿಶಾಲಿಯಾದ, ರಾಮಃ - ಶ್ರೀರಾಮನು, ಮಹಾಮುನಿಂ - ಮಹರ್ಷಿಯಾದ, ವಿಶ್ವಾಮಿತ್ರಂ- ವಿಶ್ವಾಮಿತ್ರನನ್ನು ಕುರಿತು, ಪ್ರಾಂಜಲಿಃ - ಅಂಜಲಿಬದ್ಧನು, ಭೂತ್ವಾ - ಆಗಿ, ಉತ್ತಮಾಂ-ಉತ್ಕೃಷ್ಟವಾದ, ವಿಶಾಲಾಂಪುರೀಂ - ವಿಶಾಲಾ ಪಟ್ಟಣವನ್ನು, ಪಪ್ರಚ್ಛ - ಕೇಳಿದನು. ॥ ೧೧ ॥ ಹೇ ಮಹಾಮುನೇ - ಎಲೈ ಮಹರ್ಷಿಯೇ, ವಿಶಾಲಾಯಾಂ - ವಿಶಾಲಾ ಪಟ್ಟಣದಲ್ಲಿ, ಅಯಂ - ಈಗ ಇರುವ, ರಾಜವಂಶಃ - ರಾಜವಂಶಸ್ಥನು, ಕತರಃ - ಯಾವನು, ಶ್ರೋತುಂ-ಕೇಳಲು, ಇಚ್ಛಾಮಿ, ಇಚ್ಛಿಸುತ್ತೇನೆ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಮೇ - ನನಗೆ, ಪರಂ - ಬಹಳವಾದ, ಕೌತೂಹಲಂಹಿ - ಕುತೂಹಲವಷ್ಟೆ, ॥ ೧೨ ॥ ಮುನಿಪುಂಗವಃ - ಋಷಿಶ್ರೇಷ್ಠನಾದ ವಿಶ್ವಾಮಿತ್ರನು, ತಸ್ಯ ರಾಮಸ್ಯ - ಆ ಶ್ರೀರಾಮನ, ತದ್ವಚನಂ - ಆ ಮಾತನ್ನು- ಶ್ರುತ್ವಾ - ಕೇಳಿ, ವಿಶಾಲಸ್ಯ - ವಿಶಾಲರಾಯನ, ತತ್‌ಪುರಾತನಂ - ಆ ಪೂರ್ವ ವೃತ್ತಾಂತವನ್ನು, ಆಖ್ಯಾತುಂ - ಹೇಳಲು, ಉಪಚಕ್ರಮೇ - ಉಪಕ್ರಮಿಸಿದನು. ॥ ೧೩ ॥ ಹೇರಾಮ - ಎಲೈ ಶ್ರೀರಾಮನೇ, ಶುಭಾಂ - ಶುಭಕರವಾದ, ಶಕ್ರಸ್ಯ - ದೇವೇಂದ್ರನ, ಕಥಾಂ - ಕಥೆಯನ್ನು, ಕಥ

---

ಉತ್ತರ ತೀರದಲ್ಲಿರುವ ವಿಶಾಲಾಪಟ್ಟಣವನ್ನು ನೋಡಿದವರಾದರು. ॥೬-೯॥ ಆಗ ರಾಮಸಹಿತನಾದ ವಿಶ್ವಾಮಿತ್ರನು, ಸುಂದರವಾಗಿಯೂ, ಸ್ವರ್ಗಕ್ಕೆ ಸಮಾನವಾಗಿಯೂ ಇರುವ ದೇವತಾ ಸಂಬಂಧವಾದ ಆ ವಿಶಾಲಾಪಟ್ಟಣವನ್ನು ಕುರಿತು ತೆರಳಲು ಶ್ರೀರಾಮಚಂದ್ರನು ಕೈಗಳನ್ನು ಜೋಡಿಸಿ ವಿಶ್ವಾಮಿತ್ರಮುನಿಯನ್ನು ಕುರಿತು, "ಮುನಿಯೆ! ಈ ವಿಶಾಲಾನಗರದಲ್ಲಿರುವ ರಾಜವಂಶವಾವುದು ? ಇದನ್ನು ಕೇಳಲಿಚ್ಛಿಸುವೆನು. ದಯವಿಟ್ಟು ಹೇಳುವವನಾಗು." ಎಂದನು. ಆಗಲಾ ಕೌಶಿಕನು ವಿಶಾಲರಾಜನ ಪೂರ್ವವೃತ್ತಾಂತವನ್ನೆಲ್ಲ ಹೇಳಲುಪಕ್ರಮಿಸಿದನು. ॥೧೦-೧೩॥ "ಎಲೈ ಶ್ರೀರಾಮನೆ! ಈದೇಶದ ವೃತ್ತಾಂತವನ್ನೂ, ಇದಕ್ಕೆ ಸಂಬಂಧಪಟ್ಟ ಇಂದ್ರನ ಕಥೆಯನ್ನೂ ಹೇಳುವೆನು, ಕೇಳುವವನಾಗು. ಪೂರ್ವಕಾಲದಲ್ಲಿ

ಅಸ್ಮಿನ್ ದೇಶೇತು ಯದ್ವೃತ್ತಂ ತದಪಿ ಶೃಣು ರಾಘವ || ೧೪ || ಪೂರ್ವಂ ಕೃತಯುಗೇ ರಾಮ ದಿತೇಃಪುತ್ರಾ ಮಹಾಬಲಾಃ || ಅದಿತೇಶ್ಚ ಮಹಾಭಾಗ ವೀರ್ಯವಂತ ಸ್ಸುಧಾರ್ಮಿಕಾಃ || ೧೫ || ತತಸ್ತೇಷಾಂ ನರಶ್ರೇಷ್ಠ ಬುದ್ಧಿರಾಸೀ ನ್ಮಹಾತ್ಮನಾಂ || ಅಮರಾ ಅಜರಾಶ್ಚೈವ ಕಥಂ ಸ್ಯಾಮ ನಿರಾಮಯಾಃ || ೧೬ || ತೇಷಾಂ ಚಿಂತಯತಾಂ ರಾಮ ಬುದ್ಧಿರಾಸೀನ್ಮಹಾತ್ಮನಾಂ || ಕ್ಷೀರೋದಮಥನಂ ಕೃತ್ವಾ ರಸಂ ಪ್ರಾಪ್ಸ್ಯಾಮ ತತ್ರ ವೈ || ೧೭ || ತತೋ ನಿಶ್ಚಿತ್ಯ ಮಥನಂ ಯೋಕ್ತ್ರಂ ಕೃತ್ವಾ ಚ ವಾಸುಕಿಂ || ಮಂಥಾನಂ ಮಂದರಂ ಕೃತ್ವಾ ಮಮಂಥುರಮಿತೌಜಸಃ ||೧೮|| ಅಥ ವರ್ಷಸಹಸ್ರೇಣ

ಯತಃ - ಹೇಳುತ್ತಿರುವ ನನ್ನಿಂದ, ಶ್ರೂಯತಾಂ - ಕೇಳಲ್ಪಡಲಿ, ಅಸ್ಮಿನ್‌ದೇಶೇತು - ಈ ದೇಶದಲ್ಲಾದರೆ, ಯದ್ವೃತ್ತಂ - ಯಾವದು ನಡೆದಿರುವುದೋ, ತದಪಿ - ಆ ಚರಿತ್ರೆಯನ್ನೂ, ಹೇರಾಘವ-ಎಲೈ ರಘುವಂಶೋತ್ಪನ್ನನೇ, ಶೃಣು - ಕೇಳು, || ೧೪ || ಹೇರಾಮ - ಎಲೈ ಶ್ರೀರಾಮನೇ, ಪೂರ್ವಂ ಕೃತಯುಗೇ-ಪೂರ್ವಕಾಲಿಕವಾದ ಕೃತಯುಗದಲ್ಲಿ, ಮಹಾಬಲಾಃ - ಮಹಾಬಲಿಷ್ಠರಾದ ರಕ್ಕಸರು, ದಿತೇಃ - ದಿತಿದೇವಿಗೆ, ಪುತ್ರಾಃ - ಮಕ್ಕಳು, ಹೇಮಹಾಭಾಗ - ಎಲೈ ಪುಣ್ಯಶಾಲಿಯೇ, ಅದಿತೇಃ- ಅದಿತಿ ದೇವಿಯ, ಪುತ್ರಾಃ - ಮಕ್ಕಳಾದ ದೇವತೆಗಳೂ, ವೀರ್ಯವಂತಃ - ಪರಾಕ್ರಮಶಾಲಿಗಳಾಗಿ, ಸುಧಾರ್ಮಿಕಾಃ - ಬಹಳ ಧರ್ಮಿಷ್ಠರಾಗಿ, ಆಸನ್ - ಇದ್ದರು. || ೧೫ || ಹೇನರಶ್ರೇಷ್ಠ - ಎಲೈ ಪುರುಷ ಶ್ರೇಷ್ಠನೇ, ಮಹಾತ್ಮನಾಂ - ಮಹಾತ್ಮರಾದ. ತೇಷಾಂ - ಆ ದೇವ ರಾಕ್ಷಸರಿಬ್ಬರಿಗೂ, ತತಃ - ಬಳಿಕ, ಅಮರಾಃ - ಸಾವಿಲ್ಲದವರಾಗಿಯೂ, ಅಜರಾಶ್ಚೈವ - ಮುಪ್ಪಿಲ್ಲದವರಾಗಿಯೂ, ನಿರಾಮಯಾಃ - ರೋಗರಹಿತರಾಗಿಯೂ, ಕಥಂಸ್ಯಾಮ - ಹೇಗೆ ತಾನೆ ಆಗುವೆವು, ಇತಿ-ಎಂದು, ಬುದ್ಧಿಃ - ಬುದ್ಧಿಯು, ಆಸೀತ್ - ಉಂಟಾಯಿತು. || ೧೬ || ಹೇರಾಮ - ಎಲೈ ಶ್ರೀರಾಮನೇ, ಇತಿ - ಇಂತು, ಚಿಂತಯತಾಂ - ಆಲೋಚಿಸುತ್ತಿರುವ, ಮಹಾತ್ಮನಾಂ- ಮಹಾತ್ಮರಾದ, ತೇಷಾಂ- ಆ ದೇವರಾಕ್ಷಸರಿಗೆ, ಕ್ಷೀರೋದಮಥನಂ - ಕ್ಷೀರ ಸಮುದ್ರದ ಮಥನವನ್ನು, ಕೃತ್ವಾ - ಮಾಡಿ, ತತ್ರ - ಆ ಕ್ಷೀರಸಮುದ್ರದಲ್ಲಿ, ರಸಂ - ಅಮೃತರಸವನ್ನು, ಪ್ರಾಪ್ಸ್ಯಾಮ - ಹೊಂದುವೆವು, ಇತಿ- ಎಂದು, ಬುದ್ಧಿಃ - ಪ್ರಜ್ಞೆಯು, ಆಸೀತ್ - ಆಯಿತಷ್ಟೆ, ||೧೭|| ತತಃ- ಬಳಿಕ, ಅಮಿತೌಜಸಃ- ಮಹಾ ಬುದ್ಧಿಯುಳ್ಳ ದೇವರಾಕ್ಷಸರಬ್ಬರು, ಮಥನಂ-ಮಥನವನ್ನು, ನಿಶ್ಚಿತ್ಯ-ನಿಶ್ಚಯಿಸಿ, ವಾಸುಕಿಂ ಆದಿಶೇಷನನ್ನು, ಯೋಕ್ತ್ರಂ-ಹಗ್ಗವನ್ನಾಗಿಯೂ, ಮಂದರಂ-ಮಂದರ ಪರ್ವತವನ್ನು, ಮಂಥಾನಂ- ಕಡೆಗೋಲನ್ನಾಗಿಯೂ, ಕೃತ್ವಾ - ಮಾಡಿ, ಮಮಂಥುಃ - ಮಥಿಸಿದರು. || ೧೮ || ಅಥ - ಬಳಿಕ,

ಕೃತಯುಗದಲ್ಲಿ ಕಶ್ಯಪಬ್ರಹ್ಮನ ಹೆಂಡತಿಯಾದ ದಿತಿ ಎಂಬವಳ ಮಕ್ಕಳಾದ ದೈತ್ಯರು ಮಹಾ ಬಲವಂತರಾದರು. ಎಲೈ ಭಾಗ್ಯಶಾಲಿಯೆ ! ಅದಿತಿ ಕುವರರಾದ ದೇವತೆಗಳು ವೀರ್ಯವಂತರೂ, ಧರ್ಮವಂತರೂ ಆಗಿದ್ದರು ||೧೪-೧೫|| ಮಹಾತ್ಮರಾದ ಈ ದೇವದಾನವರು ಕ್ಷೀರ ಸಮುದ್ರವನ್ನು ಮಥನಮಾಡಿ ಅಮೃತ ಪ್ರಾಶನವನ್ನು ಮಾಡಿ ಹುಟ್ಟು ಸಾವುಗಳಿಲ್ಲದವರಾಗಿರಬೇಕೆಂದು ಸಂಕಲ್ಪಿಸಿದರು. ಆ ಬಳಿಕ ವಾಸುಕಿ ಎಂಬ ಸರ್ಪಶ್ರೇಷ್ಠವನ್ನು ರಜ್ಜುವನ್ನಾಗಿಯೂ, ಮಂದರ ಪರ್ವತವನ್ನು ಕಡಗೋಲನ್ನಾಗಿ ಮಾಡಿಕೊಂಡು ಕ್ಷೀರ ಸಮುದ್ರವನ್ನು ಮಥನಮಾಡಿದರು. ||೧೬-೧೮|| ಅನಂತರದಲ್ಲಿ ರಜ್ಜುಭೂತವಾಗಿದ್ದ ವಾಸುಕಿಯೆಂಬ

ಯೋಕ್ತ್ರಸರ್ಪಶಿರಾಂಸಿಚ || ವಮುಂತೋತಿವಿಷಂ ತತ್ರ ದದಂಶುರ್ದಶನೈ ಶ್ಶಿಲಾಃ ||೧೯|| ಉತ್ಪಪಾತಾಗ್ನಿಸಂಕಾಶಂ ಹಾಲಾಹಲ ಮಹಾವಿಷಂ || ತೇನದಗ್ಧಂ ಜಗತ್ಸರ್ವಂ ಸದೇವಾಸುರ ಮಾನುಷಂ ||೨೦|| ಅಥದೇವಾ ಮಹಾದೇವಂ ಶಂಕರಂ ಶರಣಾರ್ಥಿನಃ || ಜಗ್ಮುಃ ಪಶುಪತಿಂ ರುದ್ರಂ ತ್ರಾಹಿ ತ್ರಾಹೀತಿ ತುಷ್ಟುವುಃ ||೨೧|| ಏವಮುಕ್ತಸ್ತತೋ ದೇವೈರ್ದೇವ ದೇವೇ ಶ್ವರಃ ಪ್ರಭುಃ || ಪ್ರಾದುರಾಸೀತ್ತತೋಽತ್ರೈವ ಶಂಖ ಚಕ್ರ ಧರೋಹರಿಃ|| ೨೨ || ಉವಾಚೈನಂ ಸ್ಮಿತಂ ಕೃತ್ವಾ ರುದ್ರಂ ಶೂಲಭೃತಂ ಹರಿಃ || ದೈವತೈ

ವರ್ಷಸಹಸ್ರೇಣ - ಸಹಸ್ರ ವರ್ಷಗಳಿಂದ, ಯೋಕ್ತ್ರಸರ್ಪಶಿರಾಂಸಿಚ, ಯೋಕ್ತ್ರ - ಕಡೆಯುವ ಹಗ್ಗವಾದ, ಸರ್ಪ - ಸರ್ಪದ, ಶಿರಾಂಸಿಚ - ಶಿರಸ್ಸುಗಳೂ, ತತ್ರ - ಆ ಸಮುದ್ರದಲ್ಲಿ, ಅತಿವಿಷಂ- ಬಹಳ ವಿಷವನ್ನು, ವಮುಂತಃ - ಕಕ್ಕುತ್ತ, ದಶನೈಃ - ಹಲ್ಲುಗಳಿಂದ, ಶಿಲಾಃ - ಪಾಷಾಣಗಳನ್ನು, ದದಂಶುಃ - ಕಚ್ಚಿದವು. || ೧೯ || ಅಗ್ನಿಸಂಕಾಶಂ - ಅಗ್ನಿಗೆ ಸಮಾನವಾದ, ಹಾಲಾಹಲಮಹಾ ವಿಷಂ - ಹಾಲಾಹಲವೆಂಬ ದೊಡ್ಡ ವಿಷವು, ಉತ್ಪಪಾತ- ಹುಟ್ಟಿತು, ತೇನ ಆ ವಿಷದಿಂದ, ಸರ್ವಂ- ಸಮಸ್ತವಾದ, ಸದೇವಾಸುರಮಾನುಷಂ - ದೇವ ರಾಕ್ಷಸ ಮನುಷ್ಯರಿಂದೊಗೂಡಿದ, ಜಗತ್- ಲೋಕವು, ದಗ್ಧಂ - ದಹಿಸಲ್ಪಟ್ಟಿತು || ೨೦ || ಅಥ - ಬಳಿಕ, ದೇವಾಃ-ದೇವತೆಗಳು, ಶಂಕರಂ- ಸುಖವನ್ನು ಕೊಡುವ, ಪಶುಪತಿಂ - (ಮ) ಲೋಕದಲ್ಲಿರುವ ನರರೆಂಬ ಪಶುಗಳಿಗೆ ಅಧಿಪತಿಯಾದ, ರುದ್ರಂ - ಶತ್ರುಸಂಹಾರಕನಾದ, ಮಹಾದೇವಂ - ಮಹಾದೇವನನ್ನು, ಶರಣಾರ್ಥಿನಃ- ರಕ್ಷಕನೆಂದು ಬೇಡಿಕೊಂಡು, ಜಗ್ಮುಃ-ಶರಣುಹೊಂದಿದರು,ತ್ರಾಹಿತ್ರಾಹೀತಿ-ರಕ್ಷಿಸು ರಕ್ಷಿಸು ಎಂದು ಸ್ತೋತ್ರಮಾಡಿ ದರು. || ೨೧ || ದೇವೈಃ - ದೇವತೆಗಳಿಂದ, ಏವಂ - ಈ ಪರಿ, ಉಕ್ತಃ - ಹೇಳಲ್ಪಟ್ಟ, ದೇವ ದೇವೇಶ್ವರಃ - ದೇವದೇವೋತ್ತಮನಾದ, ಪ್ರಭುಃ - ಪರಮೇಶ್ವರನು, ತತಃ-ಬಳಿಕ, ಪ್ರಾದುರಾ ಸೀತ್ - ಆವಿರ್ಭವಿಸಿದನು, ತತಃ - ಅನಂತರದಲ್ಲಿ, ಶಂಖಚಕ್ರಧರಃ - ಶಂಖ ಚಕ್ರಗಳನ್ನು ಧರಿಸಿ ರುವ, ಹರಿಃ - ಶ್ರೀ ಮಹಾವಿಷ್ಣುವು, ಅತ್ರೈವ - ಅದೇ ಪ್ರದೇಶದಲ್ಲಿಯೇ, ಪ್ರಾದುರಾಸೀತ್-ಆವಿ ರ್ಭವಿಸಿದನು. || ೨೨ || ಹರಿಃ - ಶ್ರೀ ಮಹಾವಿಷ್ಣುವು, ಶೂಲಭೃತಂ - ಶೂಲಧಾರಿಯಾದ, ಏನಂ ರುದ್ರಂ-ಈ ಪರಮೇಶ್ವರನನ್ನು, ಸ್ಮಿತಂ-ಮುಗುಳುನಗೆಯನ್ನು, ಕೃತ್ವಾ ಮಾಡಿ,ಉವಾಚ-ಹೇಳಿದನು. ಹೇಸುರಶ್ರೇಷ್ಠ - ಎಲೈ ದೇವತಾಶ್ರೇಷ್ಠನೇ, ಯತ್ - ಯಾವ ಕಾರಣ, ಸುರಾಣಾಂ-ದೇವತೆಗಳಲ್ಲಿ,

ಸರ್ಪದ ಹೆಡೆಗಳು ಸಹಸ್ರವರ್ಷಗಳವರೆವಿಗೂ ವಿಷವನ್ನು ಸುರಿಸಿ, ಹಲ್ಲುಗಳಿಂದ ಕಲ್ಲು ಗಳನ್ನು ಕಚ್ಚುತ್ತಿರಲು ಅಗ್ನಿಗೆ ಸಮಾನವಾದ ಹಾಲಾಹಲವೆಂಬ ಮಹಾ ವಿಷವು ಉತ್ಪನ್ನ ವಾಯಿತು. ಈ ಹಾಲಾಹಲ ವಿಷದಿಂದ ದೇವದಾನವರಿಂದೊಡಗೂಡಿದ ಇಡೀ ಜಗತ್ತೇ ದಗ್ಧವಾಯಿತು. ||೧೯-೨೦|| ಆಗ ದೇವತೆಗಳು ಸುಖಂಕರನೂ, ಲೋಕವರ್ತಿಗಳಾದ ನರ ರೆಂಬ ಪಶುಗಳಿಗೆ ಒಡೆಯನಾಗಿಯೂ, ಶತ್ರುನಾಶಕನಾಗಿಯೂ ಮುಕ್ಕಣ್ಣನಾಗಿಯೂ ಇರುವ ಶಂಕರನನ್ನು ರಕ್ಷಕನೆಂದಾಶ್ರಯಿಸಿ "ಕಾಪಾಡು! ಕಾಪಾಡು" ಎಂದು ಸ್ತುತಿಸಿದರು. ಇಂತು ಪ್ರಾರ್ಥಿತನಾದ ಪರಶಿವನು ಅಲ್ಲಿಯೇ ಆವಿರ್ಭವಿಸಿದನು. ಆಗ ಶಂಖ ಚಕ್ರಗದಾಧಾರಿಯಾದ

ಮರ್ಥ್ಯಮಾನೇತು ಯತ್ಪೂರ್ವಂ ಸಮುಪಸ್ಥಿತಂ ||೨೩|| ತತ್ತ್ವದೀಯಂ ಸುರಶ್ರೇಷ್ಠ ಸುರಾಣಾಮಗ್ರಜೋಽಸಿ ಯತ್ || ಅಗ್ರಪೂಜಾಮಿಮಾಂ ಮತ್ವಾ ಗೃಹಾಣೇದಂ ವಿಷಂ ಪ್ರಭೋ || ೨೪ || ಇತ್ಯುಕ್ತ್ವಾಚ ಸುರ ಶ್ರೇಷ್ಠಸ್ತತ್ರೈವಾಂತರಧೀಯತ || ದೇವತಾನಾಂ ಭಯಂದೃಷ್ಟ್ವಾ ಶ್ರುತ್ವಾ ವಾಕ್ಯಂತು ಶಾರ್ಙ್ಗಿಣಃ || ೨೫ || ಹಾಲಾಹಲಂ ವಿಷಂ ಘೋರಂ ಸಜಗ್ರಾಹಾಽಮೃತೋಪಮಂ || ದೇವಾನ್ ವಿಸೃಜ್ಯ ದೇವೇಶೋ ಜಗಾಮ ಭಗವಾನ್ ಹರಃ || ೨೬ || ತತೋ ದೇವಾಸುರಾಸ್ಸರ್ವೇ ಮಮಂಥೂ ರಘುನಂದನ||

---

ಅಗ್ರಜಃ - ಮೊದಲಾದವನು, ಅಸಿ - ಆಗಿರುವೆಯೋ, ತತ್ - ಆಕಾರಣ, ದೈವತೈಃ - ದೇವತೆಗಳಿಂದ, ಮಥ್ಯಮಾನೇ - ಮಥಿಸಲ್ಪಟ್ಟಸಮುದ್ರದಲ್ಲಿ, ಪೂರ್ವಂ - ಮೊದಲು, ಯತ್ - ಯಾವದು, ಸಮುಪಸ್ಥಿತಂ - ಹುಟ್ಟಿತೋ, ತತ್ - ಅದು, ತ್ವದೀಯಂ - ನಿನ್ನದು. || ೨೩ || ಹೇಪ್ರಭೋ - ಎಲೈ ಸ್ವಾಮಿಯೇ, ಇಮಾಂ - ಇದನ್ನು, ಅಗ್ರಪೂಜಾಮಿತಿಮತ್ವಾ - ಅಗ್ರ ಪೂಜೆಯನ್ನಾಗಿ ತಿಳಿದು, ಇದಂ - ಈ ವಿಷವನ್ನು, ಗೃಹಾಣ - ಗ್ರಹಿಸು. || ೨೪ || ಸುರಶ್ರೇಷ್ಠಃ - ದೇವತಾಶ್ರೇಷ್ಠನಾದ ಶ್ರೀ ಮಹಾ ವಿಷ್ಣುವು, ಇತಿ - ಹೀಗೆ, ಉಕ್ತ್ವಾ-ಹೇಳಿ, ತತ್ರೈವ - ಅಲ್ಲಿಯೆ, ಅಂತರಧಾಪತ - ಅಂತರ್ಧಾನವನ್ನು ಹೊಂದಿದನು, ದೇವತಾನಾಂ - ದೇವತೆಗಳ, ಭಯಂ-ಭಯವನ್ನು, ದೃಷ್ಟ್ವಾ - ಕಂಡು, ಶಾರ್ಙ್ಗಿಣಃ - ಮಹಾ ವಿಷ್ಣುವಿನ, ವಾಕ್ಯಂತು - ಮಾತನ್ನೂ, ಶೃತ್ವಾ - ಕೇಳಿ, ಸಃ - ಆ ಪರಮೇಶ್ವರನು, ಘೋರಂ - ಭಯಂಕರವಾದ, ಹಾಲಾಹಲಂ-ಹಾಲಾಹಲವೆಂಬ, ವಿಷಂ - ವಿಷವನ್ನು, ಅಮೃತೋಪಮಂ ಯಥಾ - ಅಮೃತಪ್ರಾಯದಂತೆ, ಜಗ್ರಾಹ-ಗ್ರಹಿಸಿದನು. || ೨೫ || ದೇವೇಶಃ - ದೇವತಾಧಿಪತಿಯಾದ, ಭಗವಾನ್- ಪೂಜ್ಯನಾದ, ಹರಃ - ಪರಮೇಶ್ವರನು, ದೇವಾನ್ - ದೇವತೆಗಳನ್ನು, ವಿಸೃಜ್ಯ - ಬಿಟ್ಟು, ಜಗಾಮ - ತೆರಳಿದನು. ||೨೬||, ಹೇರಘುನಂದನ - ಎಲೈ ರಘು ಶ್ರೇಷ್ಠನೇ, ತತಃ - ಬಳಿಕ, ಸರ್ವೇ - ಸಮಸ್ತರಾದ ದೇವಾಃ - ದೇವತೆಗಳು, ಮಮಂಥುಃ - ಮಥನವಮಾಡಿದರು, ಹೇ ಅನಘ - ಎಲೈ ನಿರ್ದೋಷನಾದ ಶ್ರೀ ರಾಮನೇ, ಅಥ-ಬಳಿಕ, ಮಂಥಾನಃ - ಮಥನದಂಡರೂಪವಾದ, ಪರ್ವತಃ-ಮಂದರಪರ್ವತವು,

---

ಮಹಾವಿಷ್ಣುವು ಅಲ್ಲಿಯೇ ಆವಿರ್ಭವಿಸಿ ಶೂಲಪಾಣಿಯಾದ ಪರಶಿವನನ್ನು ಕುರಿತು,ನಸುನಗೆಗೊಂಡು "ಎಲೈ ದೇವೋತ್ತಮನೆ ! ನೀನು ಈ ದೇವತೆಗಳಿಗೆ ಮುಖ್ಯನಾದವನು. ಆದಕಾರಣ ಸಮುದ್ರ ಮಥನದಲ್ಲಿ ಮೊದಲು ಹುಟ್ಟಿದ ಪದಾರ್ಥವು ನಿನ್ನದಾಗಿರುವುದು. || ೨೩ || ಎಲೈ ಜಗದೇಕನಾಥನೆ ! ಇದನ್ನು ಅಗ್ರಪೂಜೆಯೆಂದರಿತು ಈ ಹಾಲಾಹಲ ವಿಷವನ್ನು ಗ್ರಹಿಸುವವನಾಗು" ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಆಗಲಾ ಪರಮೇಶ್ವರನು, ದೇವತೆಗಳ ಭಯವನ್ನೂ, ವಿಷ್ಣುವಿನ ಮಾತುಗಳನ್ನೂ ತಿಳಿದು, ಅತಿ ಭಯಂಕರವಾದ ಆ ಹಾಲಾಹಲ ವಿಷವನ್ನು ಅಮೃತದಂತೆ ಸ್ವೀಕರಿಸಿ, ದೇವತೆಗಳಿದ್ದ ಸ್ಥಳವನ್ನು ತ್ಯಜಿಸಿ ಹೊರಟು ಹೋದನು. || ೨೬ || ಓ ರಾಮಚಂದ್ರನೆ ! ಆ ಬಳಿಕ ದೇವರಾಕ್ಷಸರೆಲ್ಲರೂ ಕ್ಷೀರಸಮುದ್ರವನ್ನು ಕಡೆಯುತ್ತಿರಲು, ಮಥಿಸುವ ಕಡಗೋಲಾದ

ಪ್ರವಿವೇಶಾಥ ಪಾತಾಳಂ ಮಂಥಾನಃ ಪರ್ವತೋಽನಘ ॥ ೨೭ ॥ ತತೋ ದೇವಾಸ್ಸಗಂಧರ್ವಾ ಸ್ತುಷ್ಟುವುರ್ಮಧುಸೂದನಂ ॥ ತ್ವಂ ಗತಿಸ್ಸರ್ವಭೂತಾನಾಂ ವಿಶೇಷೇಣ ದಿವೌಕಸಾಂ ॥ ೨೮ ॥ ಪಾಲಯಾಸ್ಮಾನ್ ಮಹಾಬಾಹೋ ಗಿರಿ ಮುದ್ಧರ್ತುಮರ್ಹಸಿ ॥ ಇತಿಶ್ರುತ್ವಾಹೃಷೀಕೇಶಃ ಕಾಮಠಂ ರೂಪಮಾಸ್ಥಿತಃ॥ ೨೯॥ ಪರ್ವತಂ ಪೃಷ್ಠತಃ ಕೃತ್ವಾ ಶಿಶ್ಯೇತತ್ರೋದಧೌ ಹರಿಃ ॥ ಪರ್ವತಾಗ್ರಂತು ಲೋಕಾತ್ಮಾ ಹಸ್ತೇನಾಕ್ರಮ್ಯ ಕೇಶವಃ ॥ ೩೦ ॥ ದೇವಾನಾಂ ಮಧ್ಯತ ಸ್ಥಿತ್ವಾ ಮಮಂಥ ಪುರುಷೋತ್ತಮಃ ॥ ಅಥವರ್ಷಸಹಸ್ರೇಣ ಸದಂಡಸ್ಸ

---

ಪಾತಾಳಂ - ಪಾತಾಳವನ್ನು, ಪ್ರವಿವೇಶ - ಹೊಕ್ಕಿತು. ॥೨೭॥ ತತಃ- ಬಳಿಕ, ಸಗಂಧರ್ವಾಃ- ಗಂಧರ್ವರಿಂದೊಡಗೂಡಿದ, ದೇವಾಃ - ದೇವತೆಗಳು, ಮಧುಸೂದನಂ - ಶ್ರೀ ಮಹಾವಿಷ್ಣುವನ್ನು ಕುರಿತು, ಹೇ ಮಹಾಬಾಹೋ - ಎಲೈ ಭುಜಪರಾಕ್ರಮಶಾಲಿಯೇ, ತ್ವಂ - ನೀನು, ಸರ್ವಭೂತಾನಾಂ ಸಮಸ್ತಭೂತಗಳಿಗೆ, ಗತಿಃ-ಗತಿಯು, ವಿಶೇಷೇಣ-ವಿಶೇಷವಾಗಿ,ದಿವೌಕಸಾಂ-ದೇವತೆಗಳಿಗೆ, ಗತಿಃ - ಗಂತವ್ಯಸ್ಥಾನವು, ಅಸ್ಮಾನ್-ನಮ್ಮನ್ನು, ಪಾಲಯ - ಪರಿಪಾಲಿಸು, ಗಿರಿಂ - ಬೆಟ್ಟವನ್ನು, ಉದ್ಧರ್ತುಂ - ಮೇಲಕ್ಕೆತ್ತಲು, ಅರ್ಹಸಿ - ಯೋಗ್ಯನಾಗು, ಇತಿ - ಹೀಗೆ ಹೇಳಿದ ದೇವತೆಗಳ ಮಾತನ್ನು ಶ್ರುತ್ವಾ-ಕೇಳಿ, ಹೃಷೀಕೇಶಃ-ಜಿತೇಂದ್ರಿಯನಾದ, ಹರಿಃ-ಶ್ರೀಮಹಾವಿಷ್ಣುವು, ಕಾಮಠಂ- ಕೂರ್ಮ ಸಂಬಂಧವಾದ, ರೂಪಂ - ರೂಪವನ್ನು, ಆಸ್ಥಿತಃ - ಹೊಂದಿದವನಾಗಿ, ಪರ್ವತಂ-ಮಂದರ ಪರ್ವತವನ್ನು, ಪೃಷ್ಠತಃ - ಬೆನ್ನುಮೇಲೆ, ಕೃತ್ವಾ - ಮಾಡಿ, ತತ್ರೋದಧೌ - ಆ ಸಮುದ್ರದಲ್ಲಿ, ಶಿಶ್ಯೇ - ನಿಂತನು. ॥ ೨೯ ॥ ಲೋಕಾತ್ಮಾ - (ಗೋ) ಲೋಕಾಧಿಷ್ಠಾನ ರೂಪನಾದ, ಪುರುಷೋತ್ತಮಃ-ಪುರುಶ್ರೇಷ್ಠನಾದ, ಕೇಶವಃ- ವಿಷ್ಣುವು, ಪರ್ವತಾಗ್ರಂ-ಪರ್ವತದ ಶಿಖರವನ್ನು ಹಸ್ತೇನ - ಹಸ್ತದಿಂದ, ಆಕ್ರಮ್ಯ - ಹಿಡಿದುಕೊಂಡು, ದೇವಾನಾಂ - ದೇವತೆಗಳ, ಮಧ್ಯತಃ-ಮಧ್ಯ ಪ್ರದೇಶದಲ್ಲಿ, ಸ್ಥಿತ್ವಾ - ನಿಂತು, ಮಮಂಥ - ಮಥಿಸಿದನು. ॥ ೩೦ ॥ ಅಥ - ಬಳಿಕ, ವರ್ಷ ಸಹಸ್ರೇಣ - ಸಹಸ್ರವರ್ಷಗಳಿಂದ, ಸದಂಡಃ - ದಂಡಸಹಿತನಾದ, ಸಕಮಂಡಲುಃ - ಕಮಂಡಲ ದಿಂದೊಡಗೂಡಿದ, ಧನ್ವಂತರಿರ್ನಾಮ - ಧನ್ವಂತರಿ ಎಂದು ಪ್ರಸಿದ್ಧನಾದವನು, ಪೂರ್ವಂ ಮದಲು,

---

ಮಂದರ ಪರ್ವತವು ಮುಳುಗಿ ಪಾತಾಳವನ್ನು ಸೇರಿತು. ಆಗ ಗಂಧರ್ವರೇ ಮೊದಲಾದ ದೇವತೆಗಳು ಮಹಾವಿಷ್ಣುವನ್ನು ಕುರಿತು“ಎಲೈ ಪರಾಕ್ರಮಶಾಲಿಯಾದ ವಿಷ್ಣುವೇ! ಎಲ್ಲ ಭೂತಗಳಿಗೂ ನೀನೆ ಗತಿಯೆನಿಸಿರುವೆ. ದೇವತೆಗಳಾದ ನಮಗೂ ನೀನೆ ಗಮ್ಯಸ್ಥಾನವಾಗಿರುವೆ. ಆದುದರಿಂದ ಈಗ ಮುಳುಗಿರುವ ಈ ಮಂದರವನ್ನು ಉದ್ಧರಿಸಿ ನಮ್ಮನ್ನು ಉದ್ಧಾರ ಮಾಡುವವನಾಗು ,’ ಎಂದು ಪ್ರಾರ್ಥಿಸಿದರು. ಆಗ ಮಹಾವಿಷ್ಣುವು ಆ ದೇವತೆಗಳ ಪ್ರಾರ್ಥನೆಯನ್ನು ಕೇಳಿ, ಕಮಠ ರೂಪವನ್ನು ತಾಳಿ ಪೃಷ್ಠಭಾಗದಿಂದ ಆ ಪರ್ವತವನ್ನು ಉದ್ಧರಿಸಿದುದಲ್ಲದೆ, ದೇವತೆಗಳ ಮಧ್ಯದಲ್ಲಿಯೂ ತಾನೆ ಇದ್ದುಕೊಂಡು ಮಥನ ಮಾಡುತ್ತಲೂ ಇದ್ದನು. ॥ ೩೦ ॥ ಹೀಗೆ ಒಂದು ಸಾವಿರ ವರ್ಷಗಳು ಕಳೆದ ಬಳಿಕ ದಂಡ ಕಮಂಡಲುವಿನಿಂದೊಡಗೂಡಿದವನಾದ ಧನ್ವಂತರಿಯು ಮೊದಲು ಜನಿಸಿದನು. ಆ ಬಳಿಕ

ಕಮಂಡಲುಃ ||೩೧|| ಪೂರ್ವಂಧನ್ವಂತರಿರ್ನಾಮ ಅಪ್ಸರಾಶ್ಚ ಸುವರ್ಚಸಃ ||೩೨||
ಅಪ್ಸುನಿರ್ಮಥನಾದೇವ ತತಸ್ತಸ್ಮಾ ದ್ವರಸ್ತ್ರಿಯಃ || ಉತ್ಪೇತುರ್ಮನುಜಶ್ರೇಷ್ಠ
ತಸ್ಮಾದಪ್ಸರಸೋಽಭವನ್ || ೩೩ || ಷಷ್ಟಿಃಕೋಟ್ಯೋ ಭವಂಸ್ತಾಸಾಮಪ್ಸ
ರಾಣಾಂ ಸುವರ್ಚಸಾಂ || ಅಸಂಖ್ಯೇಯಾಸ್ತು ಕಾಕುಸ್ಥ ಯಾಸ್ತಾಸಾಂ ಪರಿ
ಚಾರಿಕಾಃ || ೩೪ || ನತಾಸ್ಸ್ಮ ಪರಿಗೃಹ್ಣಂತಿ ಸರ್ವೇತೇ ದೇವದಾನವಾಃ ಅಪ್ರತಿ
ಗ್ರಹಣಾತ್ತಾಶ್ಚ ಸರ್ವಾಸ್ಸಾಧಾರಣಾಃ ಸ್ಮೃತಾಃ || ೩೫ || ವರುಣಸ್ಯ ತತಃ
ಕನ್ಯಾ ವಾರುಣೀ ರಘುನಂದನ | ಉತ್ಪಪಾತ ಮಹಾಭಾಗಾ ಮಾರ್ಗಮಾಣಾ

---

ಜಾತಃ - ಹುಟ್ಟಿದನು, ಸುವರ್ಚಸಃ - ಒಳ್ಳೆಯ ತೇಜಸ್ವಿಗಳಾದ, ಅಪ್ಸರಶ್ಚ-ಅಪ್ಸರ ಸ್ತ್ರೀಯರು, ಜಾತಾಃ - ಹುಟ್ಟಿದರು || ೩೧ || ಹೇಮನುಜಶ್ರೇಷ್ಠ - ಎಲೈ ಪುರುಷಶ್ರೇಷ್ಠನೇ, ಅಪ್ಸು-ಉದಕದಲ್ಲಿ, ನಿರ್ಮಥನಾದೇವ - ಮಥನ ಮಾಡುವದರಿಂದಲೇ ರಸಃ-ರಸವು,ಉತ್ಪನ್ನಃ- ಹುಟ್ಟಿತು, ತಸ್ಮಾತ್- ಆ ರಸದಿಂದ, ವರಸ್ತ್ರಿಯಃ - ಶ್ರೇಷ್ಠರಾದ ಸ್ತ್ರೀಯರು, ಯತ್-ಯಾವ ಕಾರಣ, ಉತ್ಪೇತುಃ - ಹುಟ್ಟಿದರೊ, ತಸ್ಮಾತ್ - ಆ ಕಾರಣ, ಅಪ್ಸರಸಃ- ಅಪ್ಸರಸ್ಸುಗಳು ಎಂದು, ಅಭವನ್-ಆದರು. || ೩೨ || ಹೇಕಾಕುತ್ಸ್ಥ - ಎಲೈ ಶ್ರೀರಾಮನನೇ, ಸುವರ್ಚಸಾಂ-ಒಳ್ಳೆಯ ರೂಪವುಳ್ಳ, ತಾಸಾಂಅಪ್ಸರಾಣಾಂ - ಆ ಅಪ್ಸರಸ್ತ್ರೀಯರ, ಷಷ್ಟಿಃಕೋಟಿಃ- ಅರವತ್ತು ಕೋಟಿಗಳು, ಅಭವನ್-ಆದವು, ತಾಸಾಂ - ಆ ಸ್ತ್ರೀಯರಿಗೆ, ಪರಿಚಾರಕಾಃ - ಸೇವಕರು, ಯಾಃ - ಯಾರುಂಟೋ, ತಾಸ್ತು - ಅವರು, ಅಸಂಖ್ಯೇಯಾಃ - ಎಣಿಸಲಸಾಧ್ಯರು, || ೩೩ || ಸರ್ವೇ - ಸಮಸ್ತರಾದ, ತೇದೇವದಾನವಾಃ - ಆ ದೇವರಾಕ್ಷಸರು, ತಾಃ - ಆ ಅಪ್ಸರಸ್ಸುಗಳನ್ನು, ನಪರಿಗೃಹ್ಣಂತಿಸ್ಮ-ಪ್ರತಿಗ್ರಹಿಸಲಿಲ್ಲವಷ್ಟೆ, ಅಪ್ರತಿಗ್ರಹಣಾತ್ - ಪ್ರತಿಗ್ರಹಿಸದಿರುವಿಕೆಯಂಬ, ತಸ್ಮಾತ್-ಆ ಕಾರಣದಿಂದಲೆ ತಾಸ್ಸರ್ವಾಃ- ಅವರೆಲ್ಲರೂ, ಸಾಧಾರಣಾಃ- ಸಾಮಾನ್ಯ ಸ್ತ್ರೀಯರೆಂದು, ಶ್ರುತಾಃ-ಹೇಳಲ್ಪಟ್ಟರು. || ೩೪ || ಹೇರಘುನಂದನ - ಎಲೈ ಶ್ರೀರಾಮನೇ, ತತಃ - ಬಳಿಕ, ಮಹಾಭಾಗಾ-ಮಹಾಪುಣ್ಯಶಾಲಿಯಾದ, ವರುಣಸ್ಯ - ವರುಣನ, ಕನ್ಯಾ - ಕನ್ಯಕೆಯಾದ, ವಾರುಣೀ-ವಾರುಣೀ ಎಂಬುವಳು, ಪರಿಗ್ರಹಂ-ಪರಿಗ್ರಹಣ ಕರ್ಮವನ್ನು, ಮಾರ್ಗಮಾಣಾ-ಹುಡುಕುತ್ತ, ಉತ್ಪಪಾತ ಹುಟ್ಟಿದಳು. ||೩೫|| ಹೇರಾಮ-ಎಲೈ ಶ್ರೀರಾಮನೇ, ದಿತೇಃ-ದಿತೀದೇವಿಯ, ಪುತ್ರಾಃ - ಮಕ್ಕಳಾದ ದೈತ್ಯರು, ವರುಣಾತ್ಮಜಾಂ-ವರುಣನ ಮಗಳಾದ, ತಾಂ-ಆ ವಾರುಣಿಯನ್ನು, ನಜಗ್ರಹುಃ-ಪರಿಗ್ರಹಿಸಲಿಲ್ಲ, ಹೇವೀರ-

---

ಮಹಾ ಕಾಂತಿವತಿಯರಾದ ಅಪ್ಸರೆಯರುಂಟಾದರು. ರಘುನಂದನ ! ಆ ಬಳಿಕ ಸಮುದ್ರವನ್ನು ಇನ್ನೂ ಮಥಿಸುವುದರಿಂದ ರಸವು ಹುಟ್ಟಿತು. ಇದರಿಂದ ಶ್ರೇಷ್ಠರಾದ ಅಂಗನೆಯರುಂಟಾದರು. ಇದಕ್ಕಾಗಿಯೇ ಇವರಿಗೆ ಅಪ್ಸರೆಯರೆಂದು ಹೆಸರು ಬಂದುದು. ಈ ಅಪ್ಸರೆಯರ ಸಂಖ್ಯೆಯು ಅರವತ್ತು ಕೋಟಿಗಳು. ಇವರ ಪರಿಚಾರಿಣಿಯರ ಸಂಖ್ಯೆಯಂತೂ ಹೇಳಲಸದಳವು. ಇಂತು ಜನಿಸಿದ ಅಪ್ಸರಾಂಗನೆಯರನ್ನು ದೇವರಾಕ್ಷಸರು ಪರಿಗ್ರಹಿಸಲಿಲ್ಲವಾದುದರಿಂದ ಅವರು ಸಾಮಾನ್ಯ ಸ್ತ್ರೀಯರಾಗಿಯೇ ಇದ್ದರು. || ೩೪ || ಕೇಳೈಯ್ಯಾ ರಾಮಚಂದ್ರನೆ ! ಆ ಬಳಿಕ ಮಹಾ ಭಾಗ್ಯವತಿಯೂ, ವರುಣನ ಕುವರಿಯೂ

ಪರಿಗ್ರಹಂ || ೩೭ || ದಿತೇಃಪುತ್ರಾ ನತಾಂ ರಾಮ ಜಗೃಹು ರ್ವರುಣಾತ್ಮಜಾಂ| ಅದಿತೇಸ್ತುಸುತಾ ವೀರ ಜಗೃಹುಸ್ತಾ ಮನಿಂದಿತಾಂ || ೩೭ || ಅಸುರಾಸ್ತೇನ ದೈತೇಯಾ ಸ್ಸುರಾಸ್ತೇನಾದಿತೇ ಸ್ಸುತಾಃ || ಹೃಷ್ಟಾಃ ಪ್ರಮುದಿತಾಶ್ಚಾಸ ವಾರುಣೀ ಗ್ರಹಣಾತ್ಸುರಾಃ || ೩೮ || ಉಚ್ಚೈಶ್ರವಾ ಹಯಶ್ರೇಷ್ಠೋ ಮಣಿರತ್ನಂ ಚ ಕೌಸ್ತುಭಂ|| ಉದತಿಷ್ಠನ್ನರಶ್ರೇಷ್ಠ ತಥೈವಾಮೃತಮುತ್ತಮಂ ||೩೯|| ಅಥತಸ್ಯ ಕೃತೇರಾಮ ಮಹಾನಾಸೀತ್ಕುಲಕ್ಷಯಃ | ಅದಿತೇಸ್ತು ತತಃ ಪುತ್ರಾದಿತೇಃಪುತ್ರಾನಸೂದಯನ್ || ೪೦ || ಏಕತೋಭ್ಯಾಗಮನ್ ಸರ್ವೇ

---

ಎಲೈ ಶೂರನೆ,ಅದಿತೇಃ - ಅದಿತಿ ದೇವಿಗೆ, ಸುತಾಃ - ಮಕ್ಕಳಾದ ಆ ದೇವತೆಗಳು, ಅನಿಂದಿತಾಂ - ನಿಂದಿತಳಲ್ಲದ,ತಾಂ-ಆ ವಾರುಣಿಯನ್ನು, ಜಗೃಹುಃ-ಗ್ರಹಿಸಿದರು. ||೩೭|| ತೇನ-ಆ ವಾರುಣೀ ಪರಿಗ್ರಹಣದಿಂದ, ದೈತೇಯಾಃ-ರಾಕ್ಷಸರು, ಅಸುರಾಃ-ಅಸುರರೆಂದು ಹೇಳಲ್ಪಟ್ಟರು, ತೇನ-ಆ ವಾರುಣೀ ಪರಿಗ್ರಹಣದಿಂದಲೆ, ಅದಿತೇಃ- ಅದಿತಿದೇವಿಯ, ಸುತಾಃ- ಮಕ್ಕಳು, ಸುರಾಃ-ದೇವತೆಗಳೆಂದು ಹೇಳಲ್ಪಟ್ಟರು. || ೩೭ || ಸುರಾಃ - ದೇವತೆಗಳು, ವಾರುಣೀಗ್ರಹಣಾತ್ - ವಾರುಣೀ ಪರಿಗ್ರಹದಿಂದ, ಹೃಷ್ಟಾಃ - ಹರ್ಷಯುಕ್ತರಾಗಿ, ಪ್ರಮುದಿತಾಶ್ಚ - ಬಹಳ ಸಂತೋಷಗೊಂಡವರು, ಆಸನ್-ಆದರು, ಉಚ್ಚೈಶ್ರವಾಃ - ಉಚ್ಚೈಶ್ರವಸ್ಸೆಂಬ, ಹಯಶ್ರೇಷ್ಠಃ - ಶ್ರೇಷ್ಠವಾದ ಅಶ್ವವೂ, ಕೌಸ್ತುಭಂ - ಕೌಸ್ತುಭ ಮಾಣಿಕ್ಯವೆಂಬ, ಮಣಿರತ್ನಂಚ - ಶ್ರೇಷ್ಠರತ್ನವೂ, ಉದತಿಷ್ಠತ್ - ಹುಟ್ಟಿತು, ಹೇನರಶ್ರೇಷ್ಠ - ಎಲೈ ಪುರುಷಶ್ರೇಷ್ಠನೇ, ಉತ್ತಮಂ - ಉತ್ತಮವಾದ, ಅಮೃತಂ - ಅಮೃತವು, ತಥೈವ-ಹಾಗೆ, ಉದತಿಷ್ಠತ್ - ಹುಟ್ಟಿತು, || ೩೮ || ಹೇರಾಮ - ಎಲೈ ಶ್ರೀರಾಮನೆ, ಅಥ - ಬಳಿಕ, ತಸ್ಯಕೃತೇ - ಆ ಅಮೃತ ನಿಮಿತ್ತವಾಗಿ, ಮಹಾನ್ - ಬಹಳವಾದ, ಕುಲಕ್ಷಯಃ - ರಾಕ್ಷಸ ಕುಲನಾಶವು, ಆಸೀತ್ - ಆಯಿತು, ತತಃ - ಬಳಿಕ, ಅದಿತೇಃ -ಅದಿತಿ ದೇವಿಗೆ, ಪುತ್ರಾಸ್ತು - ಪುತ್ರರಾದ ದೇವತೆಗಳಾದರೆ, ದಿತೇಃ - ದಿತೀ ದೇವಿಯ, ಪುತ್ರಾನ್- ಮಕ್ಕಳನ್ನು, ಅಸೂದಯನ್ - ಹೊಡೆದರು. || ೩೯ || ಹೇವೀರ - ಎಲೈ ಶ್ರೀರಾಮನೆ, ಸರ್ವೇ - ಸಮಸ್ತರಾದ, ಅಸುರಾಃ - ರಾಕ್ಷಸರು, ರಾಕ್ಷಸೈಸ್ಸಹ - ರಾಕ್ಷಸರಿಂದೊಡಗೂಡಿ, ಏಕತಃ - ಒಟ್ಟುಗೂಡಿ, ಅಭ್ಯಾಗಮನ್ - ಹೊಂದಿದರು, ತ್ರೈಲೋಕ್ಯಮೋಹನಂ - ಮೂರು ಲೋಕಗಳಿಗೆ ಮೋಹಕರವಾದ, ಮಹಾಘೋರಂ - ಬಹು ಭಯಂಕರವಾದ, ಯುದ್ಧಂ - ಕಾಳಗವು, ಆಸೀತ್ - ಆಯಿತು. ಯದಾ - ಯಾವ ಕಾಲದಲ್ಲಿ, ಸರ್ವಂ-

---

ಆದ ವಾರುಣೀ ಎಂಬ ಸ್ತ್ರೀಯು ಪರಿಗ್ರಹಣವನ್ನು ಬಯಸುತ್ತ ಆವಿರ್ಭವಿಸಿದಳು. ಈ ವಾರುಣಿಯನ್ನು ದೈತ್ಯರು ಪರಿಗ್ರಹಿಸಲಿಲ್ಲವು. ಅದಿತಿ ಪುತ್ರರಾದ ದೇವತೆಗಳಾಕೆಯನ್ನು ಪರಿಗ್ರಹಿಸಿದರು. ಇದರಿಂದ ದಿತಿಯ ಕುವರರು, ಅಸುರರೂ, ಅದಿತಿಯ ಮಕ್ಕಳು ಸುರರೂ ಎಂದು ಹೆಸರುಗೊಂಡರು. ದೇವತೆಗಳು ಈ ವಾರುಣಿಯ ಪರಿಗ್ರಹಣದಿಂದ ಪರಮಾನಂದಭರಿತರಾದರು. ||೩೬-೩೭|| ಎಲೈ ರಘುನಂದನನೆ ! ಇದಾದ ಬಳಿಕ ಅಶ್ವಶ್ರೇಷ್ಠವಾದ ಉಚ್ಚೈಶ್ರವಸ್ಸೂ, ಮಣಿಶ್ರೇಷ್ಠವಾದ ಕೌಸ್ತುಭವೂ, ಅಮೃತವೂ ಹುಟ್ಟಿದವು. ಈ ಅಮೃತಕ್ಕೋಸುಗ, ದೇವದಾನವರಿಗೆ ಬಹಳ ವಿವಾದವುಂಟಾಯಿತು. ಆಗ ದೇವತೆಗಳು ದಾನವರನ್ನು

ಹ್ಯಸುರಾ ರಾಕ್ಷಸೈಸ್ಸಹ । ಯುದ್ಧಮಾಸೀನ್ಮಹಾಘೋರಂ ವೀರ ತ್ರೈಲೋಕ್ಯ ಮೋಹನಂ ॥ ೪೧ ॥ ಯದಾ ಕ್ಷಯಂ ಗತಂ ಸರ್ವಂ ತದಾ ವಿಷ್ಣುರ್ಮಹಾಬಲಃ । ಅಮೃತಂ ಸೋಽಹರತ್ತೂರ್ಣಂ ಮಾಯಾಮಾಸ್ಥಾಯ ಮೋಹಿನೀಂ ॥ ೪೨ ॥ ಯೇಗತಾಭಿಮುಖಂ ವಿಷ್ಣುಮಕ್ಷಯಂ ಪುರುಷೋತ್ತಮಂ । ಸಂಪಿಷ್ಟಾಸ್ತೇತದಾ ಯುದ್ಧೇ ವಿಷ್ಣುನಾ ಪ್ರಭವಿಷ್ಣುನಾ ॥ ೪೩ ॥ ಅದಿತೇರಾತ್ಮಜಾ ವೀರಾ ದಿತೇಃಪುತ್ರಾನ್ನಿಜಘ್ನಿರೇ । ತಸ್ಮಿನ್ ಘೋರೇ ಮಹಾಯುದ್ಧೇ ದೈತೇಯಾದಿತ್ಯ ಯೋರ್ಭೃಶಂ ॥ ೪೪ ॥ ನಿಹತ್ಯ ದಿತಿಪುತ್ರಾಂಶ್ಚ ರಾಜ್ಯಂ ಪ್ರಾಪ್ಯ ಪುರಂದರಃ । ಶಶಾಸ ಮುದಿತೋ ಲೋಕಾನ್ ಸರ್ಷಿಸಂಘಾನ್ ಸಚಾರಣಾನ್ ॥ ೪೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಚತ್ವಾರಿಂಶಸ್ಸರ್ಗಃ.

ಸಮಸ್ತವು, ಕ್ಷಯಂ - ನಾಶವನ್ನು, ಗತಂ - ಹೊಂದಿತೊ, ತದಾ - ಆ ಕಾಲದಲ್ಲಿ, ಮಹಾಬಲಃ - ಮಹಾ-ಪರಾಕ್ರಮಶಾಲಿಯಾದ, ಸವಿಷ್ಣುಃ - ಆ ವಿಷ್ಣುವು, ಮೋಹಿನೀಂ - ಮೋಹಿನೀ ರೂಪವಾದ, ಮಾಯಾಂ - ಮಾಯೆಯನ್ನು, ಆಸ್ಥಾಯ - ಹೊಂದಿ, ಅಮೃತಂ - ಅಮೃತವನ್ನು, ತೂರ್ಣಂ ಜಾಗ್ರತೆಯಾಗಿ, ಅಹರತ್ - ಅಪಹರಿಸಿದನು. ॥ ೪೧ ॥ ಯೇ - ಯಾವ ರಾಕ್ಷಸರು, ಅಕ್ಷಯಂ - ನಾಶರಹಿತನಾದ, ಪುರುಷೋತ್ತಮಂ - ಪುರುಷಶ್ರೇಷ್ಠನಾದ, ವಿಷ್ಣುಂ - ಶ್ರೀ ಮಹಾವಿಷ್ಣುವನ್ನು ಕುರಿತು, ಅಭಿಮುಖಂ - ಎದುರಾಗಿ, ಗತಾಃ - ಹೋದರೋ, ತೇ-ಆ ದೈತ್ಯರು, ತದಾ - ಆಗ, ಪ್ರಭುವಿಷ್ಣುನಾ - ವರ್ಧಿಷ್ಣುವಾದ, ವಿಷ್ಣುನಾ - ಶ್ರೀ ಮಹಾವಿಷ್ಣುವಿನಿಂದ, ಯುದ್ಧೇ-ಕಾಳಗದಲ್ಲಿ, ಸಂಪಿಷ್ಟಾಃ - ಚೂರ್ಣಿತರಾದರು. ॥ ೪೨ ॥ ವೀರಾಃ- ಶೂರರಾದ, ಅದಿತೇಃ - ಅದಿತೀದೇವಿಯ, ಆತ್ಮಜಾಃ - ಕುಮಾರರು, ದಿತೇಃ - ದಿತೀದೇವಿಯ, ಪುತ್ರಾನ್ - ಕುವರರನ್ನು, ನಿಜಘ್ನಿರೇ - ಹೊಡೆದರು, ಘೋರೇ - ಭಯಂಕರವಾದ, ದೈತೇಯಾದಿತ್ಯಯೋಃ - ಆ ರಾಕ್ಷಸ ದೇವತೆಗಳ, ತಸ್ಮಿನ್ಮಹಾಯುದ್ಧೇ - ಆ ದೊಡ್ಡ ಕಾಳಗದಲ್ಲಿ, ಪುರಂದರಃ - ದೇವೇಂದ್ರನು, ದಿತಿಪುತ್ರಾಂಶ್ಚ-ದೈತ್ಯರನ್ನು, ನಿಹತ್ಯ - ಹೊಡೆದು, ರಾಜ್ಯಂ - ರಾಜ್ಯವನ್ನು, ಪ್ರಾಪ್ಯ - ಹೊಂದಿ, ಸರ್ಷಿಸಂಘಾನ್ - ಋಷಿಗಳ ಗುಂಪಿನಿಂದಲೂ, ಸಚಾರಣಾನ್ - ಚಾರಣರಿಂದಲೂ ಒಡಗೂಡಿದ, ಲೋಕಾನ್ - ಲೋಕಗಳನ್ನು, ಮುದಿತಃ - ಸಂತೋಷಯುಕ್ತನಾಗಿ, ಶಶಾಸ - ಪರಿಪಾಲಿಸಿದನು ॥ ೪೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಚತ್ವಾರಿಂಶಸ್ಸರ್ಗಃ.

ಹೊಡೆದರು. ಇಂತು ಹೊಡೆಯಲು, ದಾನವರೆಲ್ಲರೂ ಗುಂಪುಗೂಡಿ, ಮೂರು ಲೋಕಗಳೂ ಭ್ರಾಂತಿಗೊಳ್ಳುವಂತೆ ಘೋರವಾದ ಯುದ್ಧವನ್ನು ಮಾಡಿದರು. ॥ ೩೮-೪೧ ॥ ಹೀಗೆ ಎಲ್ಲವೂ ನಾಶವಾಗುತ್ತಿರಲು, ಮಹಾ ಬಲಿಷ್ಠನಾದ ನಾರಾಯಣನು ಮಾಯಾ ರೂಪವನ್ನಾಂತು ಅಮೃತವನ್ನಪಹರಿಸಿದನು. ಆಗ ಆತನನ್ನೆದುರಿಸಿದ ರಕ್ಕಸರೆಲ್ಲರನ್ನೂ ಆ ವಿಷ್ಣುವು ಒಕ್ಕಲಿಕ್ಕಿದನು. ಈ ದೇವದಾನವ ಸಂಗ್ರಾಮದಲ್ಲಿ ಅದಿತಿ ನಂದನರಾದ ದೇವತೆಗಳು ದೈತ್ಯರನ್ನು ಸಂಹರಿಸಿದರು. ಆಗ ದೇವೇಂದ್ರನು ದಾನವರನ್ನು ಸದೆಬಡಿದು ರಾಜ್ಯವನ್ನು ಹೊಂದಿ ಸಂತಸಗೊಂಡು ಋಷಿ ಸಮೂಹಗಳಿಂದಲೂ, ಚಾರಣ ಸಂಘಗಳಿಂದಲೂ ಸಹಿತವಾದ ಸಮಸ್ತ ಲೋಕಗಳನ್ನು ಪಾಲನೆಯಂ ಗೈಯುತ್ತಿದ್ದನು. .... ॥ ೪೨-೪೫ ॥

ಇಂತಿದು ಸಮುದ್ರ ಮಥನ ವೃತ್ತಾಂತ ವರ್ಣನವೆಂಬ ನಲವತ್ತೈದನೆಯ ಸರ್ಗವು ಸಮಾಪ್ತವಾದುದು.

ಹತೇಷು ತೇಷು ಪುತ್ರೇಷು ದಿತಿಃ ಪರಮದುಃಖಿತಾ । ಮಾರೀಚಂ ಕಾಶ್ಯಪಂ ರಾಮ ಭರ್ತಾರಮಿದಮಬ್ರವೀತ್ ॥೧॥ ಹತಪುತ್ರಾಸ್ಮಿ ಭಗವಂಸ್ತವ ಪುತ್ರೈರ್ಮಹಾಬಲೈಃ । ಶಕ್ರಹಂತಾರಮಿಚ್ಛಾಮಿ ಪುತ್ರಂ ದೀರ್ಘ ತಪೋರ್ಜಿತಂ ॥೨॥ ಸಾಹಂ ತಪಃ ಕರಿಷ್ಯಾಮಿ ಗರ್ಭಂಮೇ ದಾತುಮರ್ಹಸಿ । (ಬಲವಂತಂ ಮಹೇಷ್ವಾಸಂ ಸ್ಥಿತಿಜ್ಞಂ ಸಮದರ್ಶಿನಂ) ಈಶ್ವರಂ ಶಕ್ರಹಂತಾರಂ ತ್ವಮನುಜ್ಞಾತುಮರ್ಹಸಿ ॥೩॥ ತಸ್ಯಾಸ್ತದ್ವಚನಂ ಶ್ರುತ್ವಾ ಮಾರೀಚಃ ಕಾಶ್ಯಪಸ್ತದಾ । ಪ್ರತ್ಯು

---

ಹೇರಾಮ - ಎಲೈ ಶ್ರೀರಾಮನೆ, ತೇಷುಪುತ್ರೇಷು - ಆ ಮಕ್ಕಳು, ಹತೇಷ-ಹತರಾಗುತ್ತಿರಲು, ದಿತಿಃ - ದಿತೀದೇವಿಯು, ಪರಮದುಃಖಿತಾ- ಬಹಳವಾಗಿ ವ್ಯಸನಗೊಂಡು, ಮಾರೀಚಂ-ಮರೀಚಿ ಪುತ್ರನಾದ, ಕಾಶ್ಯಪಂ - ಕಶ್ಯಪನೆಂಬ, ಭರ್ತಾರಂ-ತನ್ನ ಗಂಡನನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್ - ನುಡಿದನು. ॥೧॥ ಹೇಭಗವನ್ - ಎಲೈ ಪೂಜ್ಯನೆ, ಮಹಾಬಲೈಃ-ಮಹಾಬಲಿಷ್ಠರಾದ, ತವ - ನಿನ್ನ. ಪುತ್ರೈಃ - ಮಕ್ಕಳಿಂದ, ಹತಪುತ್ರಾ - ಹೊಡೆಯಲ್ಪಟ್ಟ ಮಕ್ಕಳುಳ್ಳವಳು, ಅಸ್ಮಿ - ಆದೆನು, ದೀರ್ಘತಪೋರ್ಜಿತಂ, ದೀರ್ಘ - ದೀರ್ಘವಾದ, ತಪಃ - ತಪಸ್ಸಿನಿಂದ, ಊರ್ಜಿತಂ - ದೃಢನಾದ, ಶಕ್ರಹಂತಾರಂ - ದೇವೇಂದ್ರನಿಗೆ ಮಾರಕನಾದ, ಪುತ್ರಂ - ಮಗನನ್ನು, ಇಚ್ಛಾಮಿ - ಕೋರುವೆನು, ॥೨॥ (೧) ಮೇ-ನನಗೆ, ತ್ವಂ-ನೀನು, ಶಕ್ರಹಂತಾರಂ-ಇಂದ್ರಸಂಹಾರಕನಾದ, ಈಶ್ವರಂ - ಲೋಕತ್ರಯಕ್ಕೂ ಪ್ರಭುವಾದ, ಗರ್ಭಂ - ಪುತ್ರನನ್ನು, ದಾತುಂ - ಕೊಡಲು, ಅರ್ಹಸಿ - ಯೋಗ್ಯನಾಗು, ಸಾಹಂ - ಆ ನಾನು, ತಪಃ - ತಪಸ್ಸನ್ನು, ಕರಿಷ್ಯಾಮಿ - ಮಾಡುವೆನು, ॥೩॥ ತಸ್ಯಾಃ - ಆ ದಿತೀ ದೇವಿಯು, ತದ್ವಚನಂ - ಆ ಮಾತನ್ನು,

---

"ರಘುನಂದನ! ಹೀಗೆ ದಾನವರೆಲ್ಲರೂ ಸಂಗ್ರಾಮದಲ್ಲಿ ಹತರಾಗಲು, ದಿತೀದೇವಿಯು ಅತಿಯಾದ ದುಃಖವನ್ನು ಹೊಂದಿದವಳಾಗಿ ತನ್ನ ಪತಿಯೂ, ಮರೀಚ ಪುತ್ರನೂ, ಆದ ಕಶ್ಯಪಬ್ರಹನನ್ನು ಕುರಿತು "ಪೂಜ್ಯನೇ ! ನಿನ್ನ ಕುವರರಾದ ದೇವತೆಗಳಿಂದ ಹತಪುತ್ರಳಾಗಿ ಹೋದೆನು. ಆದುದರಿಂದ ದೀರ್ಘವಾದ ತಪಸ್ಸಿನಿಂದ ಬಲಿಷ್ಠನಾಗಿಯೂ, ದೇವೇಂದ್ರನನ್ನು ಜಯಿಸುವ ಶಕ್ತಿಯುಳ್ಳವನೂ ಆದ ಮಗನನ್ನು ಬಯಸುವೆನು. ಆದುದರಿಂದ ನೀನು ಇಂದ್ರಸಂಹಾರಕನೂ, ಮೂರು ಲೋಕಗಳಿಗೂ ಪ್ರಭುವೂ ಆದ ಮಗನನ್ನು ಅನುಗ್ರಹಿಸುವವನಾಗು. ಪುತ್ರಾಪೇಕ್ಷೆಯುಳ್ಳ ನಾನು ತಪವಂ ಗೈಯುವೆನು. ಆಣತಿಯನ್ನು ದಯಪಾಲಿಸು." ಎಂದು ಬೇಡಿಕೊಂಡಳು. ॥೩॥

---

ಟಿ॥ (೧) ಈ ಶ್ಲೋಕಕ್ಕೆ ವ್ಯಾಖ್ಯಾನಕಾರರು ಅರ್ಥವನ್ನು ಬರೆದಿರುವುದಿಲ್ಲ.

ವಾಚ ಮಹಾತೇಜಾ ದಿತಿಂ ಪರಮದುಃಖಿತಾಂ ||೪|| ಏವಂಭವತು ಭದ್ರಂತೇ ಶುಚಿರ್ಭವ ತಪೋಧನೇ | ಜನಯಿಷ್ಯಸಿ ಪುತ್ರಂತ್ವಂ ಶಕ್ರಹಂತಾರಮಾಹವೇ ||೫|| ಪೂರ್ಣೇವರ್ಷಸಹಸ್ರೇತು ಶುಚಿರ್ಯದಿ ಭವಿಷ್ಯಸಿ | ಪುತ್ರಂತ್ರೈಲೋಕ್ಯಭರ್ತಾರಂ ಮತ್ತಸ್ತ್ವಂ ಜನಯಿಷ್ಯಸಿ || ೬ || ಏವಮುಕ್ತ್ವಾ ಮಹಾತೇಜಾಃ ಪಾಣಿನಾ ಸಮಮಾರ್ಜತಾಂ | ಸಮಾಲಭ್ಯ ತತಸ್ಸ್ವಸ್ತೀತ್ಯುಕ್ತ್ವಾ ಸ ತಪಸೇ ಯಯೌ || ೭ || ಗತೇ ತಸ್ಮಿನ್ನರಶ್ರೇಷ್ಠ ದಿತಿಃ ಪರಮ ಹರ್ಷಿತಾ | ಶುಕಪ್ಲ

---

ಶ್ರುತ್ವಾ - ಕೇಳಿ, ಮಹಾತೇಜಾಃ - ಮಹಾ ಬ್ರಹ್ಮತೇಜಸ್ವಿಯಾದ, ಮಾರೀಚಃ- ಮರೀಚಿಪುತ್ರನಾದ ಕಾಶ್ಯಪಃ - ಕಶ್ಯಪಋಷಿಯು, ತದಾ - ಆಗ, ಪರಮದುಃಖಿತಾಂ-ಬಹಳ ವ್ಯಸನಗೊಂಡವಳಾದ, ದಿತಿಂ - ದಿತಿಯನ್ನು ಕುರಿತು, ಪ್ರತ್ಯುವಾಚ - ಹೇಳಿದನು. ||೪|| ಹೇತಪೋಧನೇ-ಎಲೈ ತಪವೇ ಧನವಾಗಿ ಉಳ್ಳವಳೆ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಏವಂ - ಹಾಗೆಯೇ, ಭವತು - ಆಗಲಿ, ಶುಚಿಃ - ಪರಿಶುದ್ಧಳಾಗಿ, ಭವ - ಇರು, ತ್ವಂ - ನೀನು, ಆಹವೇ - ಕಾಳಗದಲ್ಲಿ, ಶಕ್ರಹಂತಾರಂ - ದೇವೇಂದ್ರನಿಗೆ ಸಂಹಾರಕನಾದ, ಪುತ್ರಂ - ಮಗನನ್ನು, ಜನಯಿಷ್ಯಸಿ-ಹೆರುವೆ, || ೫ || ವರ್ಷಸಹಸ್ರೇತು - ಸಹಸ್ರ ವರುಷಗಳು, ಪೂರ್ಣೇಸತಿ - ತುಂಬುವ ವರೆವಿಗೂ,ಶುಚಿಃ- ಪರಿಶುದ್ಧಳು, ಭವಿಷ್ಯಸಿಯದಿ-ಆಗಿರುವೆಯಾದರೆ,ತ್ವಂ-ನೀನು,ಮತ್ತಃ-ನನ್ನ ದೆಸೆಯಿಂದ,ತ್ರೈಲೋಕ್ಯ ಭರ್ತಾರಂ, ತ್ರೈಲೋಕ್ಯ - ಮೂರು ಲೋಕಗಳಿಗೂ, ಭರ್ತಾರಂ - ಸಂರಕ್ಷಣ ಕರ್ತನಾದ, ಪುತ್ರಂ- ಮಗನನ್ನು, ಜನಯಿಷ್ಯಸಿ - ಹೆರುವವಳಾಗುವೆ, || ೬ || ಏವಂ - ಹೀಗೆ, ಉಕ್ತ್ವಾ - ಹೇಳಿ, ಮಹಾತೇಜಾಃ - ಮಹಾ ತೇಜಸ್ವಿಯಾದ, ಸಃ - ಆ ಕಾಶ್ಯಪ ಋಷಿಯು, ತಾಂ - ಆ ದಿತಿಯನ್ನು, ಪಾಣಿನಾ - ಹಸ್ತದಿಂದ, ಮಮಾರ್ಜ -'ಸ್ಪರ್ಶಿಸಿದನು, ತತಃ - ಬಳಿಕ, ಸಃ - ಆ ಕಾಶ್ಯಪಋಷಿಯು ಸಮಾಲಭ್ಯ - ಆಲಿಂಗನೆ ಮಾಡಿ, ತತಃ - ಬಳಿಕ, ಸ್ವಸ್ತೀತ್ಯುಕ್ತ್ವಾ - ಕ್ಷೇಮವಾಗಲೆಂದು ಹೇಳಿ, ತಪಸೇ - ತಪಸ್ಸಿಗೋಸುಗ, ಯಯೌ - ತೆರಳಿದನು. (೧) || ೭ || ಹೇನರಶ್ರೇಷ್ಠ - ಎಲೈ ಪುರುಷ ಶ್ರೇಷ್ಠನಾದ ಶ್ರೀರಾಮನೇ, ತಸ್ಮಿನ್ - ಆ ಕಶ್ಯಪಋಷಿಯು, ಗತೇಸತಿ - ತಪಸ್ಸಿಗೆ ಹೋಗಲು,

---

ಇಂತು ನುಡಿದ ದಿತಿಯ ನುಡಿಗಳನ್ನು ಕೇಳಿ, ಬಹಳವಾಗಿ ದುಃಖಿಸುತ್ತಿರುವ ಆಕೆಯನ್ನು ಕುರಿತು " ಎಲೈ, ತಪೋಧನಳೆ ! ಮಗನಾಗುವವರೆವಿಗೂ ಶುಚಿಯಾಗಿರು. ನಿನಗೆ ಮಂಗಳ ವಾಗುವುದಲ್ಲದೆ, ಶತ್ರುಸಂಹಾರಕನಾದ ಪುತ್ರನು ಜನಿಸುವನು. ಒಂದುಸಾವಿರವರ್ಷಗಳ ವರೆವಿಗೂ ನೀನು ಶುಚಿಯಾಗಿದ್ದರೆ, ಮೂರು ಲೋಕಗಳಿಗೂ ಒಡೆಯನಾದ ಮಗನನ್ನು ನನ್ನ ಅನುಗ್ರಹದಿಂದ ಪಡೆಯುವೆ " ಎಂದು ಹೇಳಿ ಕೈಗಳಿಂದಾಕೆಯನ್ನು ಸ್ಪರ್ಶಿಸಿ, ಆಲಿಂಗನವಂ ಗೈದು, ಕ್ಷೇಮವಾಗಲೆಂದು ಹರಸಿ, ತಪವಂ ಗೈಯಲು ತೆರಳಿದನು. || ೭ || ಎಲೈ ಪುರುಷಶ್ರೇಷ್ಠನೆ ! ಇಂತು ಕಾಶ್ಯಪನು ತಪಸ್ಸಿಗೆ ತೆರಳಲು, ದಿತಿಯು ಮಹದಾನಂದ ಭರಿತಳಾಗಿ ಕುಶಪ್ಲವನವೆಂಬ ಕ್ಷೇತ್ರವನ್ನು ಹೊಂದಿ ತಪಸ್ಸು ಮಾಡುತ್ತಿದ್ದಳು. ಈಕೆ

---

ಟಿ|| (೧) ಅತ್ರಮಮಾರ್ಜೇತ್ಯಸ್ಯ-ದುಃಖಂಮಮಾರ್ಜೇತ್ಯರ್ಥಃ. ಈ ಶ್ಲೋಕದಲ್ಲಿ, ಮಮಾರ್ಜ ಎಂಬುವದಕ್ಕೆ, ದುಃಖವನ್ನು ಹೋಗಲಾಡಿಸಿದನೆಂದು ಭಾವವು.

ವನ ಮಾಸಾದ್ಯ ತಪಸ್ತೇಪೇಸುದಾರಣಂ ॥ ೮ ॥ ತಪಸ್ತಸ್ಯಾಂ ಹಿ ಕುರ್ವಂ ತ್ಯಾಂ ಪರಿಚರ್ಯಾಂ ಚಕಾರಹ । ಸಹಸ್ರಾಕ್ಷೋ ನರಶ್ರೇಷ್ಠ ಪರಯಾ ಗುಣಸಂ ಪದಾ ॥ ೯ ॥ ಅಗ್ನಿಂ ಕುಶಾನ್ಕಾಷ್ಠಮಪಃ ಫಲಂ ಮೂಲಂ ತಥೈವಚ। ನ್ಯವೇ ದಯತ್ಸಹಸ್ರಾಕ್ಷೋ ಯಚ್ಚಾನ್ಯದಪಿ ಕಾಂಕ್ಷಿತಂ ॥ ೧೦ ॥ ಗಾತ್ರಸಂವಾಹನೈ ಶ್ಚೈವ ಶ್ರಮಾಪನಯನೈಸ್ತಥಾ । ಶಕ್ರಸ್ಸರ್ವೇಷು ಕಾಲೇಷು ದಿತಿಂ ಪರಿಚ ಚಾರಹ ॥ ೧೧ ॥ ಅಥವರ್ಷಸಹಸ್ರೇತು ದಶೋನೇ ರಘುನಂದನ ॥ ದಿತಿಃ ಪರಮಸಂಪ್ರೀತಾ ಸಹಸ್ರಾಕ್ಷಮಥಾಬ್ರವೀತ್ ॥ ೧೨ ॥ ಯಾಚಿತೇನ ಸುರ

ದಿತಿಃ - ದಿತೀದೇವಿಯು, ಪರಮಹರ್ಷಿತಾ - ಬಹಳ ಸಂತೋಷಗೊಂಡು, ಕುಶಪ್ಲವನಂ - ಕುಶಪ್ಲವನ ವೆಂಬ ಕ್ಷೇತ್ರವನ್ನು, ಅಸಾದ್ಯ - ಹೊಂದಿ, ಸುದಾರುಣಂ - ಬಹಳ ಕ್ರೂರವಾದ, ತಪಃ - ತಪ ಸ್ಸನ್ನು, ತೇಪೇ - ಮಾಡಿದಳು. ॥ ೮ ॥ ಹೇ ನರಶ್ರೇಷ್ಠ - ಎಲೈ ಶ್ರೀರಾಮನೆ, ತಸ್ಯಾಂ - ಆ ದಿತೀದೇವಿಯು, ತಪಃ - ತಪಸ್ಸನ್ನು, ಕುರ್ವಂತ್ಯಾಂ - ಮಾಡುತ್ತಿರಲು, ಸಹಸ್ರಾಕ್ಷಃ-ದೇವೇಂದ್ರನು, ಪರಯಾ - ಉತ್ಕೃಷ್ಟವಾದ, ಗುಣಸಂಪದಾ - ವಿನಯಾದಿ ಗುಣಸಂಪತ್ತಿನಿಂದ, ಪರಿಚರ್ಯಾಂ - ಸೇವಾವೃತ್ತಿಯನ್ನು, ಚಕಾರಹ - ಮಾಡಿದನಷ್ಟೆ. ॥ ೯ ॥ ಸಹಸ್ರಾಕ್ಷಃ-ದೇವೇಂದ್ರನು,ಅಗ್ನಿಂ- ಅಗ್ನಿಯನ್ನು, ಕುಶಾನ್ - ದರ್ಭೆಗಳನ್ನು, ಕಾಷ್ಠಂ - ಇಂಧನಗಳನ್ನೂ, ಅಪಃ - ಉದಕವನ್ನು, ಫಲಂ - ಫಲವನ್ನು, ತಥೈವಚ - ಹಾಗೆಯೇ, ಮೂಲಂ - ಕಂದಮೂಲಗಳನ್ನು, ಅನ್ಯತ್ - ಮತ್ತೊಂದು, ಯಚ್ಚ - ಯಾವದುಂಟೋ, ತದಪಿ - ಅದನ್ನು, ಕಾಂಕ್ಷಿತಂ - ಕೋರಲ್ಪಟ್ಟಂತೆ, ನ್ಯವೇದಯತ್ - ಸಮರ್ಪಿಸಿದನು. ॥ ೧೦ ॥ ಶಕ್ರಃ - ದೇವೇಂದ್ರನು, ಸರ್ವೇಷು - ಸಮಸ್ತ, ಕಾಲೇಷು - ಕಾಲಗಳಲ್ಲಿ, ಗಾತ್ರಸಂವಾಹನೈಶ್ಚೈವ - ಅಂಗಮರ್ದನಗಳಿಂದಲೂ, ತಥಾ-ಹಾಗೆಯೇ, ಶ್ರಮಾಪನಯನೈಃ - ಶ್ರಮಪರಿಹಾರಗಳಿಂದಲೂ, ದಿತಿಂ-ದಿತೀದೇವಿಯನ್ನು, ಪರಿಚಚಾರಹ- ಸೇವೆ ಮಾಡಿದನಷ್ಟೆ. ॥ ೧೧ ॥ ಹೇ ರಘುನಂದನ - ಎಲೈ, ಶ್ರೀರಾಮನೇ, ಅಥ - ಬಳಿಕ, ವರ್ಷಸಹ ಸ್ರೇತು - ಸಹಸ್ರವರುಷವು, ದಶೋನೇಸತಿ - ಹತ್ತು ಕಡಿಮೆಯಾದುದಾಗಲು, ದಿತಿಃ- ದಿತಿದೇವಿಯು ಪರಮಸಂಪ್ರೀತಾ - ಬಹಳ ಸಂತೋಷಗೊಂಡು, ಸಹಸ್ರಾಕ್ಷಂ - ದೇವೇಂದ್ರನನ್ನು ಕುರಿತು, ಅಬ್ರ ವೀತ್ - ನುಡಿದಳು. ॥ ೧೨ ॥ ಹೇ ಸುರಶ್ರೇಷ್ಠ - ಎಲೈ ದೇವತಾಧಿಪತಿಯೇ, ತವ - ನಿನ್ನ,

ಯಿಂತು ತಪವಂ ಗೈಯುತ್ತಿರಲು ದೇವೇಂದ್ರನು ಆಕೆಯ ಇಚ್ಛಾನುಸಾರ, ಅಗ್ನಿ, ಕುಶ, ಸಮಿತ್ತು, ಜಲ, ಫಲ, ಕಂದಮೂಲಗಳೇ ಮೊದಲಾದುವುಗಳನ್ನು ತಂದುಕೊಡುತ್ತ ಸೇವಿ ಸುತ್ತಿದ್ದನು. ಇಷ್ಟೆಯಲ್ಲದೆ ಆಕೆಯ ಆಯಾಸವನ್ನು ಹೋಗಲಾಡಿಸುವ ನಿಮಿತ್ತ, ಕಾಲು ಗಳನ್ನೊತ್ತುತ್ತಲೂ, ಎಲ್ಲಾ ಸಮಯಗಳಲ್ಲಿಯೂ ಆಕೆಯಲ್ಲಿ ಸೇವಾವೃತ್ತಿಯನ್ನು ಮಾಡು ತ್ತಲಿದ್ದನು. ॥ ೧೧ ॥ ರಘುನಂದನ ! ಹೀಗೆ ಹತ್ತುವರ್ಷಗಳನ್ನುಳಿದು ಸಹಸ್ರ ವರ್ಷಗಳು ಪೂರ್ಣವಾದುವು. ಆ ಬಳಿಕ ದಿತೀದೇವಿಯು ಬಹಳವಾದ ಸಂತಸವಂ ಪೊಂದಿ, ಇಂದ್ರನನ್ನು ಕುರಿತು "ದೇವೇಂದ್ರ ! ನನ್ನಿಂದ ಪ್ರಾರ್ಥಿಸಲ್ಪಟ್ಟ ನಿನ್ನ ತಂದೆಯು "ಸಹಸ್ರ ವರ್ಷಗಳು ಕಳೆದು ಹೋದ ಬಳಿಕ ನಿನಗೆ ಕುಮಾರನುಂಟಾಗುವನು" ಎಂದು

ಶ್ರೇಷ್ಠ ತವಪಿತ್ರಾ ಮಹಾತ್ಮನಾ ॥ ವರೋವರ್ಷಸಹಸ್ರಾಂತೇ ದತ್ತೋಮಮ
ಸುತಂಪ್ರತಿ ॥ ೧೩ ॥ ತಪಶ್ಚರಂತ್ಯಾ ವರ್ಷಾಣಿ ದಶ ವೀರ್ಯವತಾಂ ವರ ॥
ಅವಶಿಷ್ಟಾನಿ ಭದ್ರಂ ತೇ ಭ್ರಾತರಂ ದ್ರಕ್ಷ್ಯಸೇ ತತಃ ॥ ೧೪ ॥ ತಮಹಂ
ತ್ವತ್ಕೃತೇ ಪುತ್ರ ಸಮಾಧಾಸ್ಯೇ ಜಯೋತ್ಸುಕಂ ॥ ತ್ರೈಲೋಕ್ಯವಿಜಯಂ
ಪುತ್ರ ಸಹಭೋಕ್ಷ್ಯಸಿ ವಿಜ್ವರಃ ॥೧೫॥ ಏವಮುಕ್ತ್ವಾ ದಿತಿಶ್ಶಕ್ರಂ ಪ್ರಾಪ್ತೇ
ಮಧ್ಯಂ ದಿವಾಕರೇ ॥ ನಿದ್ರಯಾಪಹೃತಾ ದೇವೀ ಪಾದೌ ಕೃತ್ವಾಥ ಶೀರ್ಷತಃ॥
॥೧೬॥ ದೃಷ್ಟ್ವಾ ತಾಮಶುಚಿಂ ಶಕ್ರಃ ಪಾದತಃ ಕೃತ ಮೂರ್ಧಜಾಂ ॥

ಪಿತ್ರಾ - ತಂದೆಯಾದ, ಯಾಚಿತೇನ - ನನ್ನಿಂದ ಪ್ರಾರ್ಥಿಸಲ್ಪಟ್ಟ, ಮಹಾತ್ಮನಾ - ಮಹಾತ್ಮನಾದ ಕಶ್ಯಪಋಷಿಯಿಂದ ಸುತಂಪ್ರತಿ - ಮಗನನ್ನು ಕುರಿತು, ಮಮ - ನನಗೆ, ವರ್ಷಸಹಸ್ರಾಂತೇ- ಸಾವಿರ ವರ್ಷಗಳು ಕಳೆದಮೇಲೆ, ವರಃ - ವರವು, ದತ್ತಃ - ಕೊಡಲ್ಪಟ್ಟಿತು, ॥ ೧೩ ॥ ಹೇವೀರ್ಯವತಾಂವರ - ಎಲೈ ಪರಾಕ್ರಮಿಗಳಲ್ಲಿ ಶ್ರೇಷ್ಠನೆ, ತಪಃ - ತಪವನ್ನು, ಚರಂತ್ಯಾಃ - ಮಾಡುತ್ತಿರುವ ನನಗೆ, ದಶವರ್ಷಾಣಿ - ಹತ್ತು ವರ್ಷಗಳು, ಅವಶಿಷ್ಟಾನಿ - ಉಳಿದಿವೆ, ತೇ-ನಿನಗೆ, ಭದ್ರಂ-ಶುಭವು, ಅಸ್ತು - ಆಗಲಿ, ತತಃ - ಬಳಿಕ, ಭ್ರಾತರಂ - ತಮ್ಮನನ್ನು, ದ್ರಕ್ಷ್ಯಸೇ - ಕಾಣುವೆ. ॥ ೧೪ ॥ ಹೇಪುತ್ರ - ಎಲೈ ಪುತ್ರನೇ, ಅಹಂ - ನಾನು, ಜಯೋತ್ಸುಕಂ - ಜಯದಲ್ಲಿ ಇಚ್ಛೆಯುಳ್ಳ, ತಂ - ಆ ಮಗನನ್ನು, ತ್ವತ್ಕೃತೇ - ನಿನ್ನ ನಿಮಿತ್ತವಾಗಿ, ಸಮಾಧಾಸ್ಯೇ - ಸಮಾಧಾನಗೊಳಿಸುತ್ತೇನೆ, ಹೇ ಪುತ್ರ - ಎಲೈ ಮಗನೇ, ತ್ರೈಲೋಕ್ಯವಿಜಯಂ - ಮೂರು ಲೋಕದ ವಿಜಯ ಕಾರ್ಯವನ್ನು, ವಿಜ್ವರಃ-ವೈರದಿಂದ ಹುಟ್ಟಿದ ಸಂತಾಪವಿಲ್ಲದವನಾಗಿ,ಸಹಭೋಕ್ಷ್ಯಸಿ-ನನ್ನ ಮಗನೊಡಗೂಡಿ ಅನುಭವಿಸುವವನಾಗು. ॥೧೫॥ ಏವಂ - ಈಪರಿ,ಶಕ್ರಂ-ದೇವೇಂದ್ರನನ್ನು ಕುರಿತು, ಉಕ್ತ್ವಾ-ಹೇಳಿ, ದಿವಾಕರೇ - ಸೂರ್ಯನು, ಮಧ್ಯಂ - ಮಧ್ಯಾಹ್ನವನ್ನು, ಪ್ರಾಪ್ತೇಸತಿ - ಹೊಂದಲು, ದಿತಿರ್ದೇವೀ- ದಿತೀದೇವಿಯು, ಅಥ - ಬಳಿಕ, ಶೀರ್ಷತಃ- ಶಿರಸ್ಸನ್ನು ಇಟ್ಟುಕೊಳ್ಳುವ ಸ್ಥಳದಲ್ಲಿ, ಪಾದೌ-ಪಾದಗಳನ್ನು, ಕೃತ್ವಾ - ಮಾಡಿ, ನಿದ್ರಯಾ - ನಿದ್ರೆಯಿಂದ, ಅಪಹೃತಾ - ಆಕ್ರಾಂತಳಾದಳು. ॥೧೬॥ ಶಕ್ರಃ - ದೇವೇಂದ್ರನು, ಪಾದತಃ - ಪಾದಸ್ಥಾನದಲ್ಲಿ, ಕೃತಮೂರ್ಧಜಾಂ - ಮಾಡಲ್ಪಟ್ಟ ಕೂದಲುಗಳುಳ್ಳವಳಾದ ಕಾರಣವೇ, ಅಶುಚಿಂ-ಅಪವಿತ್ರಳಾದ, ತಾಂ- ಆ ದಿತಿದೇವಿಯನ್ನು, ಶಿರಸ್ಥಾನೇ-

ವರವನಿತ್ತನು.” ಎಲೈ ವೀರಶ್ರೇಷ್ಠನೆ ! ತಪವನ್ನಾಚರಿಸುತ್ತಿರುವ ನನಗೆ ಆ ಕಾಲದಲ್ಲಿ ಹತ್ತುವರ್ಷಗಳು ಮಾತ್ರ ಉಳಿದಿರುವುವು. ಅದಾದ ಬಳಿಕ ನೀನು ನಿನ್ನ ಅನುಜನನ್ನು ಕಾಣುವೆ. ನಿನಗೆ ಮಂಗಳವಾಗುವುದು. ॥ ೧೪ ॥ ವತ್ಸ ! ಜಯಾಕಾಂಕ್ಷಿಯಾದ ಆ ಕುಮಾರನನ್ನು ನಿನಗಾಗಿ ನಾನು ಸಮಾಧಾನಗೊಳಿಸುವೆನು. ನೀನೂ ಸಹ ನಿನ್ನ ತಮ್ಮನಿಂದ ಮಾಡಲ್ಪಡುವ ತ್ರೈಲೋಕ್ಯವಿಜಯವನ್ನು ವೈರತ್ವವನ್ನುಳಿದು ಅನುಭವಿಸುವವನಾಗು,” ಎಂದು ನುಡಿದು, ಮಧ್ಯಾಹ್ನಕಾಲದಲ್ಲಿ ನಿದ್ರಾಪರವಶಳಾಗಿ ತಲೆಯನ್ನಿಡುವ ಸ್ಥಳದಲ್ಲಿ ಕಾಲ್ಗಳನ್ನು ನೀಡಿ ನಿದ್ರಿಸುತ್ತಿದ್ದಳು. ॥ ೧೬ ॥ ಇಂತು ಪಾದಸ್ಥಾನದಲ್ಲಿ ಬಿದ್ದ ಕೇಶವುಳ್ಳವಳಾದುದರಿಂದ ಅಪವಿತ್ರಳೆನಿಸಿದ ದಿತೀದೇವಿಯನ್ನು ನೋಡಿ, ಒಳ್ಳೆಯ ಸಮಯ

ಶಿರಸ್ಸ್ಥಾನೇ ಕೃತೌ ಪಾದೌ ಜಹಾಸಚ ಮುಮೋದಚ || ೧೭ || ತಸ್ಯಾ ಶ್ಶರೀರ ವಿವರಂ ವಿವೇಶಚ ಪುರಂದರಃ || ಗರ್ಭಂಚ ಸಪ್ತಧಾ ರಾಮ ಬಿಭೇದ ಪರಮಾತ್ಮವಾನ್ || ೧೮ || ಭಿದ್ಯಮಾನಸ್ತತೋ ಗರ್ಭೋ ವಜ್ರೇಣ ಶತ ಪರ್ವಣಾ || ರುರೋದ ಸುಸ್ವರಂ ರಾಮ ತತೋ ದಿತಿರಬುಧ್ಯತ || ೧೯ || ಮಾರುದೋ ಮಾರುದಶ್ಚೇತಿ ಗರ್ಭಂ ಶಕ್ರೋಭ್ಯಭಾಷತ || ಬಿಭೇದಚ ಮಹಾತೇಜಾ ರುದಂತಮಪಿ ವಾಸವಃ || ೨೦ || ನಹಂತವ್ಯೋ ನಹಂತವ್ಯ ಇತ್ಯೇವಂ ದಿತಿರಬ್ರವೀತ್ || ನಿಷ್ಪಪಾತ ತತಶ್ಶಕ್ರೋ ಮಾತುರ್ವಚನ ಗೌರ ವಾತ್ ||೨೧|| ಪ್ರಾಂಜಲಿರ್ವಜ್ರಸಹಿತೋ ದಿತಿಂ ಶಕ್ರೋಭ್ಯಭಾಷತ।। ಅಶುಚಿ

ಶಿರಸ್ಸು ಇಡುವ ಸ್ಥಳದಲ್ಲಿ, ಕೃತೌ - ಮಾಡಲ್ಪಟ್ಟ, ಪಾದೌ - ಪಾದಗಳನ್ನು, ದೃಷ್ಟ್ವಾ-ಕಂಡು, ಜಹಾಸಚ - ನಕ್ಕನು, ಮುಮೋದಚ -ಅಂತರಂಗದಲ್ಲಿ ಸಂತೋಷಪಟ್ಟನು. || ೧೭ || ಹೇರಾಮ- ಎಲೈ ಶ್ರೀರಾಮನ, ಪುರಂದರಃ - ದೇವೇಂದ್ರನು, ತಸ್ಯಾಃ- ಆ ದಿತಿದೇವಿಯ, ಶರೀರವಿವರಂ-ಶರೀರ ರಂಧ್ರವನ್ನು, ವಿವೇಶಚ - ಹೊಕ್ಕನು, ಗರ್ಭಂಚ - (ಗೋ) ಗರ್ಭಸ್ಥ ಜಂತುವನ್ನು, ಪರಂ-ಅಧಿಕ ವಾಗಿ, ಆತ್ಮವಾನ್ - ಧೈರ್ಯವಂತನಾಗಿ, ಅಥವ, (ಮ) ಪರಂ - ಶ್ರೇಷ್ಠವಾದ, ಪರಂ-ಶತ್ರುವಾದ, ಗರ್ಭಂಚ - ಗರ್ಭವನ್ನೂ, ಸಪ್ತಧಾ - ಏಳು ಬಗೆಯಾಗಿ, ಬಿಭೇದ - ಭೇದಿಸಿದನು. || ೧೮ || ಹೇರಾಮ - ಎಲೈ ಶ್ರೀರಾಮನೇ, ತತಃ - ಬಳಿಕ, ಶತಪರ್ವಣಾ - ನೂರು ಹದಗಳುಳ್ಳ, ವಜ್ರೇಣ- ವಜ್ರಾಯುಧದಿಂದ, ಭಿದ್ಯಮಾನಃ - ಭೇದಿಸಲ್ಪಟ್ಟ, ಗರ್ಭಃ - ಗರ್ಭಸ್ಥನಾದ ಶಿಶುವು, ಸುಸ್ವರಂ- ಒಳ್ಳೆಯ ಸ್ವರವುಳ್ಳಂತೆ, ರುರೋದ - ಅಳುತ್ತಿದ್ದನು, ತತಃ - ಬಳಿಕ, ದಿತಿಃ - ದಿತೀದೇವಿಯು, ಅಬು ಧ್ಯತ - ಎದ್ದಳು ಮಾರುದಃ - ಮಾರುದಶ್ಚೇತಿ ! ಅಳಬೇಡ, ಅಳಬೇಡವೆಂದು, ಶಕ್ರಃ-ದೇವೇಂದ್ರನು, ಗರ್ಭಂ - ಗರ್ಭವನ್ನು ಕುರಿತು, ಅಭ್ಯಭಾಷತ - ಮಾತನಾಡಿದನು, ಮಹಾತೇಜಾಃ - ಮಹಾ ಪರಾ ಕ್ರಮಶಾಲಿಯಾದ, ವಾಸವಃ - ದೇವೇಂದ್ರನು, ರುದಂತಮಪಿ - ಅಳುತ್ತಿದರೂ ಕೂಡ, ತಂ- ಆ ಗರ್ಭವನ್ನು, ಬಿಭೇದಚ -ಭೇದಿಸಿದನು. || ೧೯-೨೦ || ದಿತಿಃ - ದಿತೀದೇವಿಯು, ನಹಂತವ್ಯೋನಹಂ ತವ್ಯ ಇತಿ - ಹೊಡಿಯತಕ್ಕದಲ್ಲ, ಹೊಡಿಯತಕ್ಕದಲ್ಲ, ಏವಂ - ಈ ಪರಿಯಾಗಿ, ಅಬ್ರವೀತ್- ನುಡಿದಳು, ತತಃ - ಬಳಿಕ, ಶಕ್ರಃ - ದೇವೇಂದ್ರನು, ಮಾತುರ್ವಚನಗೌರವಾತ್ - ತಾಯಿಯ ಮಾತಿನಲ್ಲಿ ಗೌರವದ ದೆಶೆಯಿಂದ, ನಿಷ್ಪಪಾತ - ಗರ್ಭದೊಳಗಿನಿಂದ ಹೊರಟು ಬಂದನು. || ೨೧ ||

ವೆಂದರಿತು, ಅಂತಃ ಸಂತೋಷವನ್ನು ಹೊಂದಿದನು; ಆ ಬಳಿಕ ಆ ದಿತೀದೇವಿಯ ಶರೀರ ರಂಧ್ರವನ್ನು ಹೊಕ್ಕು ಬಹುಧೈರ್ಯದಿಂದ ಆ ಗರ್ಭವನ್ನು ಏಳು ಭಾಗಗಳಾಗಿ ತುಂಡು ಗೆಡುಹಿದನು. ರಘುನಂದನ ! ಇಂತು ವಜ್ರಾಯುಧದಿಂದ ಭೇದಿಸಲ್ಪಡುತ್ತಿರುವ ಆ ಗರ್ಭವು ಅಳಲಾರಂಭಿಸಿತು. ಆಗ ದಿತೀದೇವಿಯು ಎಚ್ಚರಗೊಂಡಳು. ಆಗ ದೇವೇಂದ್ರನು ಭೇದಿಸಲ್ಪಟ್ಟ ಆ ಗರ್ಭವನ್ನು ಕುರಿತು, "ಅಳದಿರು ! ಅಳದಿರು" ಎಂದು ಹೇಳುತ್ತಿ ದ್ದರೂ ಅಳುತ್ತಿರುವ ಆ ಗರ್ಭವನ್ನು ಕತ್ತರಿಸಿದನು. || ೨೦ || ಆ ಬಳಿಕ ದಿತಿಯು ಹೊಡಿಯತಕ್ಕದಲ್ಲವೆಂದು ಹೇಳಲು, ತಾಯಿಯೆಂಬ ಗೌರವದಿಂದ ವಜ್ರಸಹಿತನಾಗಿ

ರ್ದೇವಿ ಸುಪ್ತಾಸಿ ಪಾದಯೋಃ ಕೃತಮೂರ್ಧಜಾ || ೨೨ || ತದಂತರಮಹಂ
ಲಬ್ಧ್ವಾ ಶಕ್ರಹಂತಾರಮಾಹವೇ|| ಅಭಿದಂ ಸಪ್ತಧಾ ದೇವೀ ತನ್ಮೇ ತ್ವಂ ಕ್ಷಂತು
ಮರ್ಹಸಿ || ೨೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಚತ್ವಾರಿಂಶಸ್ಸರ್ಗಃ

---

ವಜ್ರಸಹಿತಃ - ವಜ್ರಾಯುಧದಿಂದ ಕೂಡಿದ, ಶಕ್ರಃ - ದೇವೇಂದ್ರನು, ಪ್ರಾಂಜಲಿಃ - ಅಂಜಲಿ ಬದ್ಧನಾಗಿ, ದಿತಿಂ - ದಿತೀ ದೇವಿಯನ್ನು ಕುರಿತು, ಅಭ್ಯಭಾಷತ - ನುಡಿದನು, ಹೇದೇವೀ - ಎಲಾ ತಾಯೇ, ತ್ವಂ - ನೀನು, ಪಾದಯೋಃ - ಪಾದಗಳಲ್ಲಿ, ಕೃತಮೂರ್ಧಜಾ - ಮಾಡಲ್ಪಟ್ಟ ತಲೆಕೂದಲುಗಳುಳ್ಳವಳಾಗಿ, ಸುಪ್ತಾ - ಮಲಗಿದೆಯಾದುದರಿಂದ, ಅಶುಚಿಃ-ಅಪರಿಶುದ್ಧಳು, ಅಸಿ-ಆದೆ ||೨೨||
ಅಹಂ-ನಾನು, ತದನಂತರಂ - ಆ ರಂಧ್ರಾನ್ವೇಷಣವನ್ನು, ಲಬ್ಧ್ವಾ - ಹೊಂದಿ, ಆಹವೇ-ಕಾಳಗದಲ್ಲಿ, ಶಕ್ರಹಂತಾರಂ - ದೇವೇಂದ್ರನನ್ನು ಸಂಹರಿಸುವನನ್ನು, ಸಪ್ತಧಾ - ಏಳುಬಗೆಯಾಗಿ, ಅಭಿದಂ - ಭೇದಿಸಿದೆನು, ಹೇದೇವಿ - ಎಲಾ ತಾಯೆ, ತ್ವಂ - ನೀನು, ಮೇ - ನನ್ನ, ತತ್-ಅಪರಾಧವನ್ನು, ಕ್ಷಂತುಂ - ಕ್ಷಮಿಸಲು, ಅರ್ಹಸಿ - ಯೋಗ್ಯಳಾಗು, ||೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಚತ್ವಾರಿಂಶಸ್ಸರ್ಗಃ.

---

ಹೊರಗೆ ಬಂದು ಅಂಜಲಿಬದ್ಧನಾಗಿ "ದೇವಿ ! ಪಾದಗಳಲ್ಲಿ ಬಿದ್ದಿರುವ ಕೂದಲುಳ್ಳವಳಾಗಿ ನಿದ್ರಿಸುತ್ತಿದ್ದೆಯಾದುದರಿಂದ ಅಪವಿತ್ರಳಾದೆ. ಈ ಸಮಯವನ್ನರಿತು ನಾನು ನನ್ನ ಮಾರಕನಾದ ಈ ಶಿಶುವನ್ನು ಏಳು ಭಾಗಗಳಾಗಿ ಭೇದಿಸಿದೆನು. ಆದುದರಿಂದ ಇದನ್ನು ಕ್ಷಮಿಸುವವಳಾಗು" ಎಂದನು || ೨೩ ||

ಇಂತಿದು ದಿತೀದೇವಿಯ ಗರ್ಭಭೇದನ ವೃತ್ತಾಂತ ವರ್ಣನವೆಂಬ
ನಲವತ್ತಾರನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ.

---

ಸಪ್ತಧಾತು ಕೃತೇಗರ್ಭೇ ದಿತಿಃ ಪರಮದುಃಖಿತಾ || ಸಹಸ್ರಾಕ್ಷಂ ದುರಾಧರ್ಷಂ ವಾಕ್ಯಂ ಸಾನುನಯಾಬ್ರವೀತ್ || ೧ || ಮಮಾಪರಾಧಾ ದ್ಗರ್ಭೋಽಯಂ ಸಪ್ತಧಾ ವಿಫಲೀಕೃತಃ|| ನಾಪರಾಧೋಽಸ್ತಿ ದೇವೇಶ ತವಾತ್ರ ಬಲಸೂದನ || ೨ || ಪ್ರಿಯಂತು ಕರ್ತುಮಿಚ್ಛಾಮಿ ಮಮಗರ್ಭ ವಿಪ ರ್ಯಯೇ || ಮರುತಾಂ ಸಪ್ತಸಪ್ತಾನಾಂ ಸ್ಥಾನಪಾಲಾ ಭವಂತ್ವಿಮೇ || ೩ || ವಾತಸ್ಕಂಧಾ ಇಮೇ ಸಪ್ತ ಚರಂತು ದಿವಿ ಪುತ್ರಕ|| ಮಾರುತಾ ಇತಿ ವಿಖ್ಯಾತಾ

---

ಗರ್ಭೇತು - ಗರ್ಭವು, ಸಪ್ತಧಾ - ಏಳು ಬಗೆಯಾಗಿ, ಕೃತೇಸತಿ - ಮಾಡಲ್ಪಡಲು, ದಿತಿಃ - ದಿತಿದೇವಿಯು, ಪರಮದುಃಖಿತಾ - ಬಹು ದುಃಖಿತಳಾಗಿ, ದುರಾಧರ್ಷಂ - ತಿರಸ್ಕರಿಲಸಾಧ್ಯನಾದ, ಸಹಸ್ರಾಕ್ಷಂ - ದೇವೇಂದ್ರನನ್ನು ಕುರಿತು, ಸಾನುನಯಾ - ನಮ್ರಭಾವದಿಂದೊಡಗೂಡಿ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದಳು. || ೧ || ಹೇದೇವೇಶ - ಎಲೈ ದೇವಶಾಧಿಪತಿಯೇ, ಮಮ - ನನ್ನ, ಅಪರಾಧಾತ್ - ಅಪರಾಧದಿಂದ, ಅಯಂ ಗರ್ಭಃ-ಈ ಗರ್ಭವು, ಸಪ್ತಧಾ - ಏಳು ಬಗೆಯಾಗಿ, ವಿಫಲೀಕೃತಃ - ಭಿನ್ನವಾಗಿ ಮಾಡಲ್ಪಟ್ಟಿತು, ಅತ್ರ- ಈ ವಿಷಯದಲ್ಲಿ, ಹೇಬಲಸೂದನ – ಎಲೈ ಬಲಾಸುರ ಸಂಹಾರಕನೇ, ತವ - ನಿನ್ನ, ಅಪರಾಧಃ- ಅಪರಾಧವು, ನಾಸ್ತಿ - ಇಲ್ಲವು, || ೨ || ಮಮ - ನನ್ನ, ಗರ್ಭವಿಪರ್ಯಯೇ- ಗರ್ಭನಾಶದಲ್ಲಿ, ಪ್ರಿಯಂ - ಇಷ್ಟವನ್ನು, ಕರ್ತುಂ - ಮಾಡಲು, ಇಚ್ಛಾಮಿ – ಕೋರುತ್ತೇನೆ, ಇಮೇ - ಈ, ಸಪ್ತಸಪ್ತಾನಾಂ - ಏಳು ಸಂಖ್ಯೆಯುಳ್ಳ, ಮರುತಾಂ - ವಾತಸ್ಕಂಧಗಳಾದ, ಸ್ಥಾನಪಾಲಾಃ - ಸ್ಥಾನಪಾಲಕರು, ಭವಂತು - ಆಗಲಿ, || ೩ || ಹೇಪುತ್ರಕ - ಎಲೈ ಮಗನೆ, ಇಮೇ- ಈ, ಸಪ್ತ - ಏಳು ಖಂಡಗಳು, ವಾತಸ್ಕಂಧಾಃ - ಸ್ಥಾನಪಾಲಕರಾದ, ಮಾರುತಾಇತಿ – ಸಪ್ತಮರುತ್ತುಗಳೆಂದು, ಪ್ರಖ್ಯಾತಾಃ - ಹೆಸರುಗೊಂಡವರೂ, ದಿವ್ಯರೂಪಾಃ - ದೇವತಾ ಸ್ವರೂಪ

---

ಅಯ್ಯಾ ರಾಮಚಂದ್ರನೆ ! ಹೀಗೆ ಆ ಗರ್ಭವು ಏಳು ಭಾಗಗಳಾಗಿ ಮಾಡಲ್ಪಡಲು, ದಿತೀದೇವಿಯು, ಬಹಳವಾಗಿ ದುಃಖಗೊಂಡು, ತಿರಸ್ಕರಿಸಲಸದಳನಾದ ಇಂದ್ರನನ್ನು ಕುರಿತು " ಎಲೈ ದೇವೇಂದ್ರನೆ ! ನನ್ನ ಅಪರಾಧದಿಂದಲೇ ಈ ಗರ್ಭವು ವ್ಯರ್ಥವಾಗಿ ಏಳುತುಂಡು ಮಾಡಲ್ಪಟ್ಟಿತು. ಈ ವಿಷಯದಲ್ಲಿ ನಿನ್ನ ಅಪರಾಧವೇನೂ ಇಲ್ಲವು. ನನಗೆ ಗರ್ಭವು ಫಲಿಸದೇ ಹೋದರೂ ನಿನಗೆ ಪ್ರಿಯವಾದುದನ್ನು ಮಾಡಲಿಚ್ಛಿಸುವೆನು. ಏಳು ಭಾಗಗಳಾದ ಈ ನನ್ನ ಕುಮಾರರು ಸಪ್ತಸ್ಕಂದಗಳ ಪಾಲಕರಾಗಲಿ. || ೩ || ಎಲೈ ಮಗನೆ ! ಇವರು ಸ್ಥಾನಪಾಲಕರೂ, ಸಪ್ತಮರುತ್ತುಗಳೂ ಎಂದು ಪ್ರಸಿದ್ಧರಾಗಿ, ದೇವತೆ

ದಿವ್ಯರೂಪಾ ಮಮಾತ್ಮಜಾಃ ॥ ೪ ॥ ಬ್ರಹ್ಮಲೋಕಂ ಚರತ್ವೇಕ ಇಂದ್ರ ಲೋಕಂ ತಥಾಪರಃ ॥ ದಿವಿ ವಾಯುರಿತಿಖ್ಯಾತಸ್ತೃತೀಯೋಪಿ ಮಹಾ ಯಶಾಃ ॥ ೫ ॥ ಚತ್ವಾರಸ್ತು ಸುರಶ್ರೇಷ್ಠ ದಿಶೋವೈ ತವ ಶಾಸನಾತ್ ॥ ಸಂಚರಿಷ್ಯಂತು ಭದ್ರಂ ತೇ ದೇವಭೂತಾ ಮಮಾತ್ಮಜಾಃ ॥ ೬ ॥ ತ್ವತ್ಕೃತೇ ನೈವನಾಮ್ನಾಚ ಮಾರುತಾ ಇತಿ ವಿಶ್ರುತಾಃ ॥ ತಸ್ಯಾಸ್ತದ್ವಚನಂ ಶ್ರುತ್ವಾ ಸಹಸ್ರಾಕ್ಷಃ ಪುರಂದರಃ ॥೭॥ ಉವಾಚ ಪ್ರಾಂಜಲಿರ್ವಾಕ್ಯಂ ದಿತಿಂ ಬಲನಿಷೂ ದನಃ ॥ ಸರ್ವಮೇತದ್ಯಥೋಕ್ತಂ ತೇ ಭವಿಷ್ಯತಿ ನಸಂಶಯಃ ॥ ೮ ॥ ವಿಚ

---

ವುಳ್ಳವರೂ ಆಗಿ, ಮಮ - ನನ್ನ, ಆತ್ಮಜಾಃ - ಕುಮಾರರಾಗಿ, ದಿವಿ - ಅಂತರಿಕ್ಷದಲ್ಲಿ, ಚರಂತು- ಸಂಚರಿಸಲಿ, ॥ ೪ ॥ ಏಕಃ - ಒಬ್ಬನು, ಬ್ರಹ್ಮಲೋಕಂ - ಬ್ರಹ್ಮಲೋಕವನ್ನು ಕುರಿತು, ಚರಂತು - ಸಂಚರಿಸಲಿ, ತಥಾ - ಹಾಗೆಯೇ, ಅಪರಃ - ಮತ್ತೊಬ್ಬನು, ಇಂದ್ರಲೋಕಂ-ಇಂದ್ರ ಲೋಕದಲ್ಲಿ, ಚರಂತು - ಸಂಚರಿಸಲಿ, ದಿವಿ - ಸ್ವರ್ಗದಲ್ಲಿ, ವಾಯುರಿತಿ-ವಾಯುವೆಂದು, ಖ್ಯಾತಃ- ಪ್ರಖ್ಯಾತನಾಗಿ, ಮಹಾಯಶಾಃ - ಮಹಾ ಯಶೋವಂತನಾಗಿ, ತೃತೀಯೋಪಿ - ಮೂರನೆಯವ ನೂ, ಚರತು - ಸಂಚರಿಸಲಿ, ॥ ೫ ॥ ಹೇಸುರಶ್ರೇಷ್ಠ - ಎಲೈ ದೇವೇಂದ್ರನೇ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಮಮ - ನನ್ನ, ಆತ್ಮಜಾಃ - ಕುವರರಾದ, ಚತ್ವಾರಸ್ತು- ಮಿಕ್ಕ ನಾಲ್ಕು ಮಂದಿಯೂ, ದೇವಭೂತಾಃ - ದೇವತೆಗಳಾಗಿ, ತವ - ನಿನ್ನ, ಶಾಸನಾತ್-ಆಜ್ಞೆ ಯಿಂದ, ದೇಶೋವೈ - ದಿಕ್ಕುಗಳನ್ನು ಕುರಿತು, ಸಂಚರಿಷ್ಯಂತು - ಸಂಚರಿಸಲಿ, ॥೬॥ ತಸ್ಯಾಃ- ಆ ದಿತೀದೇವಿಯ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಪುರಂದರಃ - ಶತೃಪುರ ದಾಹಕ ನಾದ, ಬಲನಿಷೂದನಃ - ಬಲಾಸುರ ಸಂಹಾರಕನಾದ, ಸಹಸ್ರಾಕ್ಷಃ - ದೇವೇಂದ್ರನು, ದಿತಿಂ-ದಿತಿ ಯನ್ನು ಕುರಿತು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ವಾಕ್ಯಂ - ಮಾತನ್ನು, ಉವಾಚ-ಹೇಳಿದನು, ॥೭॥ ತೇ - ನಿನ್ನಿಂದ, ಯಥಾ - ಯಾವಪ್ರಕಾರ, ಉಕ್ತಂ - ಹೇಳಲ್ಪ ಟ್ಟಿತೋ, ಏತತ್ಸರ್ವಂ - ಇದೆಲ್ಲವೂ, ತಥಾ - ಹಾಗೆಯೆ, ಭವಿಷ್ಯತಿ - ಆಗುವದು. ಸಂಶಯಃ-ಸಂ ಶಯುವು, ನ-ಇಲ್ಲವು, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ತವ - ನಿನ್ನ, ಆತ್ಮಜಾಃ- ಕುವರರು, ದೇವಭೂತಾಃ - ದೇವತೆಗಳಾಗಿ ವಿಚರಿಷ್ಯಂತಿ - ಸಂಚರಿಸುವರು, ॥ ೮ ॥ ಹೇರಾಮ- ಎಲೈ ಶ್ರೀರಾಮನೆ, ಏವಂ-ಹೀಗೆ, ತೌಮಾತಾಪುತ್ರೌ - ಆ ತಾಯಿಮಕ್ಕಳಿಬ್ಬರು, ತಪೋವನೇ-

---

ಗಳ ರೂಪವನ್ನುತಾಳಿ, ಸ್ವರ್ಗಲೋಕದಲ್ಲಿ ಸಂಚರಿಸುವವರಾಗಲಿ. ಇವರಲ್ಲಿ ಒಬ್ಬನು ಬ್ರಹ್ಮ ಲೋಕದಲ್ಲಿ ಸಂಚರಿಸಲಿ. ಮತ್ತೊಬ್ಬನು ಇಂದ್ರಲೋಕದಲ್ಲಿಯೂ, ಮೂರನೆಯವನಾದ ಇನ್ನೊಬ್ಬನು ವಾಯುವೆಂದು ಪ್ರಖ್ಯಾತನಾಗಿ ಗಗನದಲ್ಲಿಯೂ, ಇನ್ನು ಉಳಿದ ನಾಲ್ವರು ನಾಲ್ಕು ದಿಕ್ಕುಗಳಲ್ಲಿಯೂ, ನಿನ್ನ ಆಜ್ಞೆಯಿಂದಲೇ ದೇವತೆಗಳಾಗಿ, ನಿನ್ನಿಂದಲೇ ಮಾರುತ ರೆಂದು ಹೆಸರು ಹೊಂದಲಿ. ನಿನಗೆ ಮಂಗಳವಾಗಲಿ ” ಎಂದಳು. ಇಂತು ನುಡಿದ ತಾಯಿಯ ನುಡಿಗಳನ್ನು ಕೇಳಿದ ಇಂದ್ರನು ಅಂಜಲಿಬದ್ಧನಾಗಿ “ ತಾಯೆ ! ನೀನು ಹೇಳಿದುದೆಲ್ಲವೂ ಅಂತೆಯೇ ಆಗುವುದು. ನಿನಗೆ ಮಂಗಳವಾಗಲಿ. ನಿನ್ನ ಕುವರರು ದೇವತೆಗಳಾಗಿ ಸಂಚರಿ

ರಿಷ್ಯಂತಿ ಭದ್ರಂ ತೇ ದೇವಭೂತಾ ಸ್ತ್ವಾತ್ಮಜಾಃ||ಏವಂ ತೌ ನಿಶ್ಚಯಂ ಕೃತ್ವಾ ಮಾತಾ ಪುತ್ರೌ ತಪೋವನೇ ||೯|| ಜಗ್ಮತುಸ್ತ್ರಿದಿವಂ ರಾಮ ಕೃತಾರ್ಥಾವಿತಿ ನಶ್ಶ್ರುತಂ ||ಏಷದೇಶಸ್ಸಕಾಕುತ್ಸ್ಥ ಮಹೇಂದ್ರಾಧ್ಯುಷಿತಃ ಪುರಾ ||೧೦|| ದಿತಿಂ ಯತ್ರ ತಪಸ್ಸಿದ್ಧಾಮೇವಂ ಪರಿಚಚಾರ ಸಃ || ಇಕ್ಷ್ವಾಕೋಸ್ತು ನರವ್ಯಾಘ್ರ ಪುತ್ರಃ ಪರಮಧಾರ್ಮಿಕಃ ||೧೧|| ಅಲಂಬುಸಾಯಾಮುತ್ಪನ್ನೋ ವಿಶಾಲ ಇತಿವಿಶ್ರುತಃ || ತೇನಚಾಸೀದಿಹಸ್ಥಾನೇ ವಿಶಾಲೇತಿ ಪುರೀ ಕೃತಾ ||೧೨|| ವಿಶಾಲಸ್ಯ ಸುತೋ ರಾಮ ಹೇಮಚಂದ್ರೋ ಮಹಾಬಲಃ || ಸುಚಂದ್ರ ಇತಿ ವಿಖ್ಯಾತೋ ಹೇಮಚಂದ್ರಾದನಂತರಃ ||೧೩|| ಸುಚಂದ್ರತನಯೋರಾಮ

---

ತಪೋವನದಲ್ಲಿ, ನಿಶ್ಚಯಂ - ನಿಶ್ಚಯವನ್ನು, ಕೃತ್ವಾ-ಮಾಡಿಕೊಂಡು, ಕೃತಾರ್ಥೌ - ಕೃತಪ್ರಯೋಜನರಾಗಿ, ತ್ರಿದಿವಂ - ಸ್ವರ್ಗಲೋಕವನ್ನು ಕುರಿತು, ಜಗ್ಮತುಃ - ತೆರಳಿದರು, ಇತಿ - ಇಂತೆಂದು, ನಃ - ನಮ್ಮಿಂದ, ಶ್ರುತಂ - ಕೇಳಲ್ಪಟ್ಟಿತು, ||೯|| ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ, ಯತ್ರ - ಯಾವ ಸ್ಥಳದಲ್ಲಿ, ತಪಸ್ಸಿದ್ಧಾಂ - ತಪೋನಿಷ್ಠಳಾದ, ದಿತಿಂ - ದಿತೀದೇವಿಯನ್ನು ಕುರಿತು, ಸಃ - ಆ ದೇವೇಂದ್ರನು, ಏವಂ - ಹೀಗೆ, ಪರಿಚಚಾರ - ಉಪಚರಿಸಿದನೋ, ಸಏಷಃ - ಆ ಯಿಾ, ದೇಶಃ - ಪ್ರದೇಶವು, ಪುರಾ - ಪೂರ್ವದಲ್ಲಿ, ಮಹೇಂದ್ರಾಧ್ಯುಷಿತಃ-ದೇವೇಂದ್ರನಿಂದ ವಾಸಮಾಡಲ್ಪಟ್ಟದು ||೧೦|| ಹೇನರವ್ಯಾಘ್ರ - ಎಲೈ ಪುರುಷಶ್ರೇಷ್ಠನೇ, ಇಕ್ಷ್ವಾಕೋಸ್ತು - ಇಕ್ಷ್ವಾಕು ರಾಯನಿಗೆ, ಅಲಂಬುಸಾಯಾಂ - ಅಲಂಬುಸಾದೇವಿಯಲ್ಲಿ, ಉತ್ಪನ್ನಃ-ಹುಟ್ಟಿದವನಾದ, ಪರಮಧಾರ್ಮಿಕಃ - ಮಹಾಧರ್ಮಿಷ್ಠನಾದ, ಪುತ್ರಃ - ಮಗನು, ವಿಶಾಲಇತಿ ವಿಶಾಲನೆಂದು, ವಿಶ್ರುತಃ - ಪ್ರಸಿದ್ಧನಾದನು. ||೧೧|| ತೇನಚ-ಆ ವಿಶಾಲನಿಂದಲೇ, ಇಹಸ್ಥಾನೇ-ಈ ಪ್ರದೇಶದಲ್ಲಿ,ವಿಶಾಲೇತಿ-ವಿಶಾಲವೆಂಬ, ಪುರೀ ಪಟ್ಟಣವು,ಕೃತಾ-ಮಾಡಲ್ಪಟ್ಟುದು,ಆಸೀತ್-ಆಯಿತು, ಹೇರಾಮ-ಎಲೈ ಶ್ರೀರಾಮನೇ,ವಿಶಾಲಸ್ಯ-ವಿಶಾಲನಿಗೆ,ಮಹಾಬಲಃ-ಮಹಾಬಲಿಷ್ಠನಾದ,ಸುತಃ-ಕುವರನು,ಹೇಮಚಂದ್ರಃ-ಹೇಮಚಂದ್ರನು.||೧೨|| ಸುಚಂದ್ರ ಇತಿ-ಸುಚಂದ್ರನೆಂದು,ವಿಖ್ಯಾತಃ-ಪ್ರಸಿದ್ಧನಾದವನು, ಹೇಮಚಂದ್ರಾತ್ ಹೇಮಚಂದ್ರನಗಿಂತಲೂ,ಅನಂತರಃ-ಆಮೇಲೆ ಹುಟ್ಟಿದಮಗನು,ಹೇರಾಮ-ಎಲೈ ಶ್ರೀರಾಮನೆ, ಸುಚಂದ್ರತನಯಃ-ಸುಚಂದ್ರನ ಕುವರನು, ಧೂಮ್ರಾಶ್ವಇತಿ-ಧೂಮ್ರಾಶ್ವನೆಂದು, ವಿಶ್ರುತಃ-ಪ್ರಸಿದ್ಧನಾದನು. ||೧೩|| ಧೂಮ್ರಾಶ್ವತನಯಶ್ಚಾಪಿ-ಧೂಮ್ರಾಶ್ವನೆಂಬವನ ಕುಮಾ

---

ಸುವರು " ಎಂದನು. ಎಲೈ, ರಾಮನೆ ! ಹೀಗೆ ಆ ಮಾತಾಪುತ್ರರು ನಿಶ್ಚಯಿಸಿಕೊಂಡು ಕೃತಾರ್ಥರಾಗಿ ಸ್ವರ್ಗವನ್ನು ಸೇರಿದರೆಂದು ನಮ್ಮಿಂದ ಕೇಳಲ್ಪಟ್ಟಿರುವುದು. ||೯|| ಪೂರ್ವದಲ್ಲಿ ಈ ಸ್ಥಳದಲ್ಲಿಯೇ ದೇವೇಂದ್ರನು ವಾಸಮಾಡುತ್ತ ದಿತೀದೇವಿಯನ್ನುಪಚರಿಸುತ್ತಿದ್ದುದು. ಎಲೈ ಪುರುಷಶ್ರೇಷ್ಠನೆ! ಇಕ್ಷ್ವಾಕುರಾಯನಿಗೆ ಬಹು ಧರ್ಮಿಷ್ಟನೂ, ವಿಶಾಲನೆಂದು ಪ್ರಸಿದ್ಧನೂ ಆದ ಕುಮಾರನುಂಟಾದನು. ಆತನಿಂದ ಈ ಸ್ಥಳದಲ್ಲಿ ವಿಶಾಲಾ ಎಂಬ ಪಟ್ಟಣವು ನಿರ್ಮಿತವಾಯಿತು. ವಿಶಾಲರಾಯನಿಗೆ ಮಹಾ ಬಲಿಷ್ಠನಾದ ಹೇಮಚಂದ್ರನು ಹಿರಿಯ ಮಗನು. ಸುಚಂದ್ರನು ಕಿರಿಯವನು. ಕಿರಿಯಮಗನಾದ ಸುಚಂದ್ರನಿಗೆ ಧೂಮ್ರಾಶ್ವನೆಂದು ಹೆಸರುಗೊಂಡ ಕುಮಾರನುಂಟಾದನು. ||೧೩|| ಈ ಧೂಮ್ರಾ

ಧೂಮ್ರಾಶ್ವ ಇತಿವಿಶ್ರುತಃ || ಧೂಮ್ರಾಶ್ವತನಯಶ್ಚಾಪಿ ಸೃಂಜಯಸ್ಸಮಪ
ದ್ಯತ ||೧೪|| ಸೃಂಜಯಸ್ಯ ಸುತಶ್ಶ್ರೀಮಾನ್ ಸಹದೇವಃ ಪ್ರತಾಪವಾನ್ ||
ಕುಶಾಶ್ವಸ್ಸಹದೇವಸ್ಯ ಪುತ್ರಃ ಪರಮಧಾರ್ಮಿಕಃ || ೧೫ || ಕುಶಾಶ್ವಸ್ಯ
ಮಹಾತೇಜಾಃ ಸಂಪ್ರತ್ಯೇಷ ಪುರೀಮಿಮಾಂ || ಸೋಮದತ್ತಸ್ಯ ಪುತ್ರಸ್ತು
ಕಾಕುತ್ಸ್ಥ ಇತಿವಿಶ್ರುತಃ || ೧೬ || ತಸ್ಯಪುತ್ರೋ ಮಹಾತೇಜಾ ಸ್ಸಂಪ್ರ
ತ್ಯೇಷ ಪುರೀಮಿಮಾಂ || ಆವಸತ್ಯಮರ ಪ್ರಖ್ಯ ಸ್ಸುಮತಿರ್ನಾಮದುರ್ಜಯಃ
|| ೧೭ || ಇಕ್ಷ್ವಾಕೋಸ್ತು ಪ್ರಸಾದೇನ ಸರ್ವೇವೈಶಾಲಿಕಾನೃಪಾಃ ||
ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತಸ್ಸುಧಾರ್ಮಿಕಾಃ || ೧೮ ||

---

ರನೂ, ಸೃಂಜಯಃ - ಸೃಂಜಯನೆಂಬವನು, ಸಮಪದ್ಯತ - ಆದನು, ಸೃಂಜಯಸ್ಯ - ಸೃಂಜಯನಿಗೆ, ಶ್ರೀಮಾನ್-ಸಂಪದ್ಯುಕ್ತನಾದ, ಪ್ರತಾಪವನ್-ಪರಾಕ್ರಮಶಾಲಿಯಾದ,ಸಹದೇವಃ - ಸಹದೇವನೆಂಬವನು, ಸುತಃ-ಕುವರನು. || ೧೪ || ಸಹದೇವಸ್ಯ-ಸಹದೇವನಿಗೆ, ಪರಮಧಾರ್ಮಿಕಃ - ಮಹಾಧರ್ಮಿಷ್ಠನಾದ, ಪುತ್ರಃ-ಕುವರನು, ಕುಶಾಶ್ವಃ-ಕುಶಾಶ್ವನೆಂಬವನು, ಮಹಾತೇಜಾಃ- ಮಹಾತೇಜೋವಂತನಾದ, ಪ್ರತಾಪವಾನ್-ಪರಾಕ್ರಮಶಾಲಿಯಾದ,ಸೋಮದತ್ತಃ-ಸೋಮದತ್ತನೆಂಬುವನು,ಕುಶಾಶ್ವಸ್ಯ-ಕುಶಾಶ್ವನಿಗೆ, ಸುತಃ-ಕುಮಾರನು. || ೧೫ || ಸೋಮದತ್ತಸ್ಯ - ಸೋಮದತ್ತನಿಗೆ, ಪುತ್ರಸ್ತು-ಮಗನಾದರೆ, ಕಾಕುತ್ಸ್ಥಃ - ಕಾಕುತ್ಸ್ಥನೆಂದು, ವಿಶ್ರುತಃ - ಪ್ರಸಿದ್ಧನಾದನು. || ೧೬ || ತಸ್ಯ-ಅವನಿಗೆ, ಪುತ್ರಃ-ಮಗನಾದ, ಮಹಾತೇಜಾಃ-ಮಹಾತೇಜೋವಂತನಾದ, ದುರ್ಜಯಃ-ಜಯಿಸಲಸಾಧ್ಯನಾದ, ಅಮರಪ್ರಖ್ಯಃ-ದೇವತಾಪ್ರಖ್ಯಾತನಾದ, ಸುಮತಿರ್ನಾಮ-ಸುಮತಿಯೆಂಬವನು, ಸಂಪ್ರತಿ-ಈಗ, ಇಮಾಂಪುರೀಂ-ಈ ಪಟ್ಟಣದಲ್ಲಿ, ಆವಸತಿ-ಇರುವನು. ||೧೭|| ಇಕ್ಷ್ವಾಕೋಃ-ಇಕ್ಷ್ವಾಕುಮಹಾರಾಯನ, ಪ್ರಸಾದೇನತು-ಅನುಗ್ರಹದಿಂದ, ಸರ್ವೇ-ಸಮಸ್ತ, ವೈಶಾಲಿಕಾಃ-ವಿಶಾಲವಂಶೋತ್ಪನ್ನರಾದ, ನೃಪಾಃ - ಅರಸರು, ದೀರ್ಘಾಯುಷಃ - ದೀರ್ಘಾಯುಷ್ಮಂತರಾಗಿಯೂ, ಮಹಾತ್ಮಾನಃ-ಮಹಾ ಧೈರ್ಯವಂತರಾಗಿಯೂ, ವೀರ್ಯವಂತಃ-ಪರಾಕ್ರಮಶಾಲಿಗಳಾಗಿಯೂ, ಸುಧಾರ್ಮಿಕಾಃ-ಬಹಳ ಧರ್ಮಿಷ್ಠರಾಗಿಯೂ, ಸಂತಿ - ಇರುವರು. ||೧೮|| ಹೇರಾಮ ಎಲೈ ಶ್ರೀರಾಮನೆ,

---

ಶ್ವನ ಮಗನು ಸೃಂಜಯನು. ಇವನಿಗೆ ಸಹದೇವನೆಂಬ ಕುಮಾರನು ಜನಿಸಿದನು. ಈ ಸಹದೇವನಿಗೆ ಮಹಾಧರ್ಮಿಷ್ಠನಾದ ಕುಶಾಶ್ವನೆಂಬ ಮಗನಾದನು. ಇವನಿಗೆ ಸೋಮದತ್ತನೆಂಬವನು ಮಗನು. ಈ ಸೋಮದತ್ತನ ಮಗನೇ ಕಾಕುಸ್ಥನೆಂದು ಪ್ರಸಿದ್ಧನಾದನು. ||೧೬|| ಈತನ ಮಗನೂ, ಮಹಾ ತೇಜೋವಂತನೂ ಆಗ ಸುಮತಿಯೆಂಬ ರಾಜನು, ಗೆಲ್ಲಲಸದಳನಾಗಿಯೂ, ದೇವತುಲ್ಯನಾಗಿಯೂ, ಆಗಿ ಈಗ ಈ ಪಟ್ಟಣದಲ್ಲಿ ವಾಸಿಸುತ್ತಿರುವನು. ||೧೭|| ಇಕ್ಷ್ವಾಕುರಾಯನ ಪ್ರಸಾದದಿಂದ ವಿಶಾಲರಾಯನ ವಂಶೋತ್ಪನ್ನರಾದ ರಾಜರೆಲ್ಲರೂ, ದೀರ್ಘಾಯುಗಳಾಗಿಯೂ, ಮಹಿಮೆಗೊಂಡವರಾಗಿಯೂ, ವೀರ್ಯವಂತರಾಗಿಯೂ ಇರುವ ಎಲೈ, ರಘುನಂದನನೆ ! ಈ ರಾತ್ರಿ ಈ ವಿಶಾಲಾಪಟ್ಟಣದಲ್ಲಿ ಸುಖವಾಗಿದ್ದು, ಪ್ರಾತಃಕಾಲ

ಇಹಾದ್ಯರಜನೀಂ ರಾಮ ಸುಖಂ ವತ್ಸ್ಯಾಮಹೇವಯಂ||ಶ್ವಃ ಪ್ರಭಾತೇ ನರ ಶ್ರೇಷ್ಠ ಜನಕಂ ದ್ರಷ್ಟುಮರ್ಹಸಿ ||೧೯|| ಸುಮತಿಸ್ತು ಮಹಾತೇಜಾ ವಿಶ್ವಾಮಿತ್ರಮುಪಾಗತಂ||ಶ್ರುತ್ವಾ ನರವರಶ್ರೇಷ್ಠಃ ಪ್ರತ್ಯುದ್ಗಚ್ಛನ್ಮಹಾಯಶಾಃ ||೨೦|| ಪೂಜಾಂ ಚ ಪರಮಾಂ ಕೃತ್ವಾ ಸೋಪಾಧ್ಯಾಯ ಸ್ಸಬಾಂಧವಃ || ಪ್ರಾಂಜಲಿಃ ಕುಶಲಂ ಪೃಷ್ಟ್ವಾ ವಿಶ್ವಾಮಿತ್ರಮಥಾಬ್ರವೀತ್ || ೨೧ || ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ವಿಷಯಂ ಮುನಿಃ || ಸಂಪ್ರಾಪ್ತೋ ದರ್ಶನಂ ಚೈವ ನಾಸ್ತಿ ಧನ್ಯತರೋ ಮಯಾ ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ

ಇಹ-ಈ ಪಟ್ಟಣದಲ್ಲಿ, ಅದ್ಯರಜನೀಂ-ಈ ರಾತ್ರಿಯಲ್ಲಿ, ವಯಂ-ನಾವು, ಸುಖಂ-ಸುಖವಾಗಿ, ವತ್ಸ್ಯಾಮಹೇ-ಇರೋಣ, ಹೇನರಶ್ರೇಷ್ಠ-ಎಲೈ ಪುರುಷಶ್ರೇಷ್ಠನೆ, ಶ್ವಃ-ನಾಳಿನ, ಪ್ರಭಾತೇ - ಪ್ರಾತಃಕಾಲದಲ್ಲಿ, ಜನಕಂ - ಜನಕರಾಯನನ್ನು, ದ್ರಷ್ಟುಂ- ನೋಡಲು, ಅರ್ಹಸಿ - ಅರ್ಹನಾಗುವೆ. ||೧೯|| ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ಮಹಾಯಶಾಃ - ಮಹಾಕೀರ್ತಿವಂತನಾದ, ನರವರಶ್ರೇಷ್ಠಃ-ರಾಜಶ್ರೇಷ್ಠನಾದ, ಸುಮತಿಸ್ತು-ಸುಮತಿಯಾದರೆ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಉಪಾಗತಂ-ಬಂದವನನ್ನಾಗಿ, ಶ್ರುತ್ವಾ - ಕೇಳಿ, ಪ್ರತ್ಯುದ್ಗಚ್ಛತ್ - ಎದುರ್ಗೊಂಡನು. || ೨೦ || ಸೋಪಾಧ್ಯಾಯಃ- ಪುರೋಹಿತರಿಂದಲೂ, ಸಬಾಂಧವಃ-ಬಂಧುಗಳಿಂದಲೂ ಒಡಗೂಡಿದ ಆಸುಮತಿಯು, ಪರಮಾಂ-ಬಹಳವಾದ, ಪೂಜಾಂ ಪೂಜೆಯನ್ನು, ಕೃತ್ವಾ-ಮಾಡಿ, ಪ್ರಾಂಜಲಿಃ- ಅಂಜಲಿಬದ್ಧನಾಗಿ, ಕುಶಲಂ ಕ್ಷೇಮವನ್ನು, ಪೃಷ್ಟ್ವಾ-ಕೇಳಿ, ಅಥ-ಬಳಿಕ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಅಬ್ರವೀತ್ ನುಡಿದನು ||೨೧|| ಅಹಂ-ನಾನು, ಧನ್ಯಃ-ಧನ್ಯನು, ಅಸ್ಮಿ-ಆದೆನು, ಅನುಗೃಹೀತಃ- ಅನುಗ್ರಹಿಸಲ್ಪಟ್ಟವನು, ಅಸ್ಮಿ-ಆದೆನು, ಯಸ್ಯ - ಯಾವ ಮೇ-ನನ್ನ, ವಿಷಯಂ-ದೇಶವನ್ನು ಕುರಿತು, ಮುನಿಃ- ವಿಶ್ವಾಮಿತ್ರಋಷಿಯು, ಸಂಪ್ರಾಪ್ತಃ-ಬಂದನೋ,ದರ್ಶನಂಚೈವ-ದರ್ಶನವನ್ನೂ ಕೂಡ, ಸಂಪ್ರಾಪ್ತಃ-ಹೊಂದಿದೆನೋ, ಮಯಾ-ನನ್ನೊಡನೆ, ಸದೃಶಃ-ಸಮಾನನಾದ, ಧನ್ಯತರಃ-ಅತಿಶಯವಾಗಿ ಧನ್ಯನಾದವನು, ನಾಸ್ತಿ-ಇಲ್ಲ. || ೨೨ ||

ಇತ್ಯಾರ್ಷೆ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ.

ವಾಗುತ್ತಲೆ, ಜನಕರಾಯನನ್ನು ನೋಡುವವನಾಗುವೆ, ಎಂದನು. ||೧೯|| ವಿಶ್ವಾಮಿತ್ರನೀರೀತಿ ಹೇಳುತ್ತಿರಲು ವಿಶಾಲಾಪಟ್ಟಣದ ಧೊರೆಯಾದ ಸುಮತಿಯು, ಮುನಿಯ ಆಗಮನವನ್ನು ಕೇಳಿ ಪುರೋಹಿತರಿಂದೊಡಗೂಡಿ, ಆತನನ್ನಿದುರ್ಗೊಂಡು, ಅರ್ಘ್ಯಪಾದ್ಯಾದಿಗಳಿಂದಾತನನ್ನು ಪೂಜಿಸಿ, ಅಂಜಲಿಬದ್ಧನಾಗಿ ಕುಶಲಪ್ರಶ್ನೆಯನ್ನು ಮಾಡಿ, "ಎಲೈ, ವಿಶ್ವಾಮಿತ್ರಮುನಿಯೆ! ನೀನು ನಮ್ಮ ಪಟ್ಟಣಕ್ಕೆ ಬಂದು ದರ್ಶನವನ್ನು ದಯಪಾಲಿಸಿದೆ. ಇದರಿಂದ ನಾನು ಧನ್ಯನೂ ಅನುಗ್ರಹೀತನೂ ಆದೆನು ಆದುದರಿಂದ ನನಗಿಂತಲೂ ಧನ್ಯನಾದವನು ಇಡೀ ಪ್ರಪಂಚದಲ್ಲಿಯೇ ಇಲ್ಲವು" ಎಂದನು. ||೨೨||

ಇಂತಿದು ಸುಮತಿರಾಜ ವೃತ್ತಾಂತಕಥನವೆಂಬ ನಲವತ್ತೇಳನೆಯ ಸರ್ಗವು ಸಮಾಪ್ತವಾದುದು.

## ಬಾಲಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ.

ಪೃಷ್ಟ್ವಾತು ಕುಶಲಂ ತತ್ರ ಪರಸ್ಪರ ಸಮಾಗಮೇ || ಕಥಾಂತೇ ಸುಮತಿ ರ್ವಾಕ್ಯಂ ವ್ಯಾಜಹಾರ ಮಹಾಮುನಿಂ ||೧|| ಇಮೌ ಕುಮಾರೌ ಭದ್ರಂ ತೇ ದೇವತುಲ್ಯ ಪರಾಕ್ರಮೌ || ಗಜಸಿಂಹಗತೀ ವೀರೌ ಶಾರ್ದೂಲ ವೃಷಭೋ ಪಮೌ || ೨ || ಪದ್ಮ ಪತ್ರ ವಿಶಾಲಾಕ್ಷೌ ಖಡ್ಗತೂಣೀ ಧನುರ್ಧರೌ || ಅಶ್ವಿನಾವಿವ ರೂಪೇಣ ಸಮುಪಸ್ಥಿತ ಯೌವನೌ ||೩|| ಯದೃಚ್ಛಯೈವ ಗಾಂ ಪ್ರಾಪ್ತೌ ದೇವಲೋಕಾದಿವಾಮರೌ || ಕಥಂ ಪದ್ಭ್ಯಾಮಿಹ ಪ್ರಾಪ್ತೌ ಕಿಮರ್ಥಂ ಕಸ್ಯವಾ ಮುನೇ || ೪ || ಭೂಷಯಂತಾವಿಮಂದೇಶಂ ಚಂದ್ರ

---

ತತ್ರ-ಆ ಪ್ರದೇಶದಲ್ಲಿ, ಪರಸ್ಪರಸಮಾಗಮೇ - ಅನ್ಯೋನ್ಯಸಂದರ್ಶನವಾದ ಕಾಲದಲ್ಲಿ, ಸುಮತಿಃ-ಸುಮತಿರಾಯನು, ಕುಶಲಂತು- ಕ್ಷೇಮವನ್ನು, ಪೃಷ್ಟ್ವಾ-ಕೇಳಿ, ಕಥಾಂತೇ - ಸಂಭಾಷಣಾನಂತರದಲ್ಲಿ, ಮಹಾಮುನಿಂ-ಮಹರ್ಷಿಯಾದ ವಿಶ್ವಾಮಿತ್ರನನ್ನು ಕುರಿತು, ವಾಕ್ಯಂ-ಮಾತನ್ನು, ವ್ಯಾಜಹಾರ-ಆಡಿದನು. || ೧ || ತೇ-ನಿನಗೆ, ಭದ್ರಂ-ಶುಭವು, ಅಸ್ತು - ಆಗಲಿ, ದೇವತುಲ್ಯ ಪರಾಕ್ರಮೌ- (ಮ) ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರಾಗಿ ತೋರುತ್ತಿರುವ(ಗೋ) ವಿಷ್ಣುವಿಗೆ ಸಮಾನರಾದ,(ತಿ) ಇಂದ್ರನಿಗೆ ಸದೃಶವಾದ ಪರಾಕ್ರಮಿಗಳಾಗಿ ತೋರುತ್ತಿರುವ, ಇಮೌ ಕುಮಾರೌ-ಈ ಬಾಲಕರು, ಗಜಸಿಂಹಗತೀ, ಗಜಸಿಂಹ-ಗಂಭೀರಗಮನದಲ್ಲಿಯೂ, ಶತ್ರುಪರಾಜಯಾರ್ಥವಾಗಿ ಹೋಗುವಕಾಲದಲ್ಲಿಯೂ ಗಜಸಿಂಹಗಳಂತೆ, ಗತೀ-ಗಮನವುಳ್ಳವರು,ವೀರೌ-ವಿಶೇಷವಾಗಿ ಶತ್ರುಗಳನ್ನು ದೀನಧ್ವನಿಯುಳ್ಳವರನ್ನಾಗಿ ಮಾಡುವರು,ಶಾರ್ದೂಲವೃಷಭೋಪಮೌ-ಭಯಂಕರಗಮನದಲ್ಲಿಯೂ, ಸವಿಲಾಸಗಮನದಲ್ಲಿಯೂ,ವ್ಯಾಘ್ರವೃಷಭಗಳಿಗೆ ಸಮಾನರಾದವರು,ಪದ್ಮಪತ್ರವಿಶಾಲಾಕ್ಷೌ, ಪದ್ಮಪತ್ರ - ಕಮಲದರೇಖೆಗಳಂತೆ ನೋಟಕರ ಚಿತ್ತಾಪಹಾರಕವಾದ, ವಿಶಾಲಾಕ್ಷೌ-ವಿಸ್ತಾರವಾದ ನೇತ್ರಗಳುಳ್ಳವರು, ಖಡ್ಗ ತೂಣೀಧನುರ್ಧರೌ-ಕತ್ತಿಗಳನ್ನೂ,ಬತ್ತಳಿಕೆಗಳನ್ನೂ, ಧನುಸ್ಸುಗಳನ್ನೂ,ಒಡಿವೆಗಳಿಗೆ ಸಮಾನವಾದಂತೆ ಧರಿಸಿರುವ, ರೂಪೇಣ-ರೂಪದಿಂದ, ಅಶ್ವಿನಾವಿವಸ್ಥಿತೌ-ಅಶ್ವಿನೀ ದೇವತೆಗಳಂತಿರುವ,ಸಮುಪಸ್ಥಿತಯೌವನೌ-ರೂಪಕ್ಕೆ ಅನುಸಾರವಾದ ಸಂಪ್ರಾಪ್ತ ಯೌವನ

---

ಇಂತು ಸುಮತಿಗೂ ವಿಶ್ವಾಮಿತ್ರನಿಗೂ ಸಮಾಗಮವುಂಟಾಗಲು, ಕಂಥಾಂತ್ಯದಲ್ಲಿ ಸುಮತಿ ರಾಜನು ಮುನಿಪುಂಗವನಾದ ವಿಶ್ವಾಮಿತ್ರನನ್ನು ಕುರಿತು "ಎಲೈ ಮುನಿಶ್ರೇಷ್ಠನೆ! ನಿನಗೆ ಮಂಗಳವಾಗಲಿ; ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರೂ, ಗಜಸಿಂಹಗಳ ನಡಿಗೆಯಂತೆ ಗಂಭೀರವಾದ ನಡಿಗೆಯುಳ್ಳವರೂ, ಶಾರ್ದೂಲ, ವೃಷಭಗಳಂತೆ ಮಹಾವೀರ್ಯವುಳ್ಳವರೂ, ತಾವರೆಯೆಲೆಯಂತೆ ವಿಶಾಲವಾದ ಕಂಗಳುಳ್ಳವರೂ ಧನುರ್ಬಾಣ ಖಡ್ಗಾದಿಗಳನ್ನು ಧರಿಸಿರುವವರೂ, ರೂಪದಲ್ಲಿ ಅಶ್ವಿನೀದೇವತೆಗಳಂತೆ ಮಹೋನ್ನತ ರೂಪಶಾಲಿಗಳೂ, ಒದಗಿ ಬಂದಿರುವ ಯೌವನ ಉಳ್ಳವರೂ, ಆಕಸ್ಮಿಕವಾಗಿ ಭೂಲೋಕಕ್ಕಿಳಿದು ಬಂದಿರುವ ದೇವತೆಗಳಂತಿರುವವರೂ, ಸುಕುಮಾರರೂ ಆದ ಇವರು ಕೇವಲ ಕಾಲ್ನಡಿಗೆಯಿಂದಲೇ ಇಲ್ಲಿಗೆ ಹೇಗೆ ಬಂದರು. ||೧-೪|| ಏತಕ್ಕೋ ಸುಗ, ಯಾರ ಪ್ರಯೋಜನಕ್ಕಾಗಿ ಬಂದಿರುವರು ? ಅಂಬರ ತಲವನ್ನು ಚಂದ್ರಸೂರ್ಯರು ಪ್ರಕಾಶ ಗೊಳಿಸು

ಸೂರ್ಯಾ ವಿವಾಂಬರಂ ॥ ಪರಸ್ಪರಸ್ಯ ಸದೃಶೌ ಪ್ರಮಾಣೇಂಗಿತ ಚೇಷ್ಟಿತೈಃ॥ ೫॥ ಕಿಮರ್ಥಂ ಚ ನರಶ್ರೇಷ್ಠಾ ಸಂಪ್ರಾಪ್ತೌ ದುರ್ಗಮೇ ಪಥಿ ॥ ವರಾಯುಧಧರೌ ವೀರೌ ಶ್ರೋತುಮಿಚ್ಛಾಮಿ ತತ್ತ್ವತಃ ॥೬॥ ತಸ್ಯತದ್ವಚನಂ ಶೃತ್ವಾ ಯಥಾವೃತ್ತಂ ನ್ಯವೇದಯೇತ್ ॥ ಸಿದ್ಧಾಶ್ರಮ ನಿವಾಸಂಚ ರಾಕ್ಷಸಾನಾಂ ವಧಂ ತಥಾ ॥೭॥ ವಿಶ್ವಾಮಿತ್ರವಚ ಶ್ಶೃತ್ವಾ ರಾಜಾ ಪರಮಹರ್ಷಿತಃ ॥ ಅತಿಥೀ ಪರಮೌ ಪ್ರಾಪ್ತೌ ಪುತ್ರೌ ದಶರಥಸ್ಯ ತೌ ॥ ಪೂಜ

ವುಳ್ಳವರು, ಯದೃಚ್ಛಯೈವ - ಸ್ವೇಚ್ಛೆಯಿಂದಲೆ, ಪ್ರಾಪ್ತೌ - ಬಂದಿರುವ, ಅಮರಾವಿವಸ್ಥಿತೌ, ದೇವತೆಗಳಂತಿರುವ ಇವರು, ಕಥಂ - ಹೇಗೆ, ಪದ್ಭ್ಯಾಂ - ಕಾಲ್ನಡಿಗೆಯಿಂದ, ಇಹ-ಈವನದಲ್ಲಿ, ಪ್ರಾಪ್ತೌ - ಬಂದರು? ಹೇಮುನೇ - ಎಲೈ ಋಷಿಯೆ, ಕಿಮರ್ಥಂ - ಏತಕ್ಕೋಸುಗ, ಕಸ್ಯವಾ- ಯಾವನ, ಪುತ್ರೌ - ಮಕ್ಕಳು, ಚಂದ್ರಸೂರ್ಯೌ- ಚಂದ್ರಸೂರ್ಯರು, ಅಂಬರಮಿವ ಆಕಾಶವನ್ನಂತೆ, ಇಮಂದೇಶಂ - ಈ ಪ್ರದೇಶವನ್ನು, ಭೂಷಯಂತೌ - ಅಲಂಕರಿಸುವವರಾಗಿರುವರು, ಪ್ರಮಾಣೇಂಗಿತಚೇಷ್ಟಿತೈಃ, (ಗೋ) ಪ್ರಮಾಣ - ಪುರುಷೌನ್ನತ್ಯದಿಂದಲೂ, ಇಂಗಿತ - ಗಾಂಭೀರ್ಯದಿಂದಲೂ, (ತಿ) ಇಂಗಿತ-ಪರಾಭಿಪ್ರಾಯಜ್ಞತ್ವದಿಂದಲೂ, ಚೇಷ್ಟಿತೈಃ- ಗಮನ ಸಂಭಾಷಣಾದಿ ರೂಪ ಚೇಷ್ಟಾವಿಶೇಷಗಳಿಂದಲೂ, ಪರಸ್ಪರಸ್ಯ - ಒಬ್ಬರಿಗೊಬ್ಬರು, ಸದೃಶೌ- ಸಮಾನರಾಗಿರುವರು, ನರಶ್ರೇಷ್ಠೌ- ಪುರುಷ ಶ್ರೇಷ್ಠರಾದರೂ, ದುರ್ಗಮೇ - ಸಂಚಾರ ಮಾಡಲಸಾಧ್ಯವಾದ, ಪಥಿ - ಮಾರ್ಗದಲ್ಲಿ, ಕಿಮರ್ಥಂ - ಯಾವ ನಿಮಿತ್ತವಾಗಿ, ಸಂಪ್ರಾಪ್ತೌ - ಬಂದರು? ವರಾಯುಧಧರೌ-ಶ್ರೇಷ್ಠಗಳಾದ ಆಯುಧಗಳನ್ನು ಧರಿಸಿರುವ, ವೀರೌ- ಶೂರರಾದ ಇವರ ವಿಷಯವನ್ನು, ತತ್ವತಃ-ಯಥಾರ್ಥದಿಂದ, ಶ್ರೋತುಂ - ಕೇಳಲು, ಇಚ್ಛಾಮಿ - ಅಪೇಕ್ಷಿಸುತ್ತೇನೆ, ॥೬॥ ತಸ್ಯ - ಆ ಸುಮತಿ ರಾಯನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸಿದ್ಧಾಶ್ರಮನಿವಾಸಂಚ - ಸಿದ್ಧಾಶ್ರಮದಲ್ಲಿ ವಾಸವನ್ನೂ, ತಥಾ - ಹಾಗೆಯೇ, ರಾಕ್ಷಸಾನಾಂ - ರಕ್ಕಸರ, ವಧಂ -ಸಂಹಾರವನ್ನೂ, ಯಥಾವೃತ್ತಂ- ನಡದಹಾಗೆಯೇ, ನ್ಯವೇದಯತ್ - ತಿಳಿಸಿದನು ॥೭॥ ರಾಜಾ - ಅರಸು, ವಿಶ್ವಾಮಿತ್ರವಚಃ- ವಿಶ್ವಾಮಿತ್ರನ ಮಾತನ್ನು, ಶ್ರುತ್ವಾ - ಕೇಳಿ, ಪರಮಹರ್ಷಿತಃ - ಬಹಳ ಸಂತೋಷಗೊಂಡು. ಅತಿಥೀ - ಅಭ್ಯಾಗತರಾದ, ಪರಮೌ - ಶ್ರೇಷ್ಠರಾದ, ಸತ್ಕಾರಾರ್ಹೌ - ಪೂಜಾ ಯೋಗ್ಯರಾದ, ಮಹಾಬಲೌ - ಮಹಾಬಲವಂತರಾದ, ಪ್ರಾಪ್ತೌ - ಬಂದಿರುವ, ತೌ - ಆ ಪ್ರಸಿದ್ಧರಾದ, ದಶ

ವಂತೆ ಈ ಸ್ಥಳವನ್ನು ಬೆಳಗುವವರೂ, ಪ್ರಮಾಣ, ಇಂಗಿತ, ಚೇಷ್ಟಾದಿಗಳಿಂದ ಒಬ್ಬರಿಗೊಬ್ಬರು ಸದೃಶರಾಗಿಯೂ, ಇರುವ ಈ ಸುಕುಮಾರರು, ಹೊಗಲಸದಳವಾದ ಈ ಮಾರ್ಗದಲ್ಲೇತಕ್ಕಾಗಿ ಬಂದಿರುವರು ? ಶ್ರೇಷ್ಠವಾದ ಆಯುಧಗಳನ್ನು ಧರಿಸಿರುವ ಈ ಕುಮಾರಾರೆಂಬದನ್ನು ಕೇಳಲು ಬಹಳವಾಗಿ ಇಚ್ಛಿಸುವೆನು" ಎಂದನು. ॥೫-೬॥ ಇಂತು ನುಡಿದ ಸುಮತಿರಾಯನ ವಾಕ್ಯವನ್ನು ಕೇಳಿ ವಿಶ್ವಾಮಿತ್ರನು, ರಾಮಲಕ್ಷ್ಮಣರ ಸಿದ್ಧಾಶ್ರಮ ನಿವಾಸವನ್ನೂ, ರಾಕ್ಷಸರ ಸಂಹಾರವೇ ಮೊದಲಾದುವುಗಳನ್ನು ಯಥಾಕ್ರಮವಾಗಿ ತಿಳಿಸಿದನು. ವಿಶ್ವಾಮಿತ್ರನೀರೀತಿ ನುಡಿಯಲು ಆ ಸುಮತಿರಾಯನು ಮಹತ್ಸಂತೋಷವನಾಂತು, ದಶ

ಯಾಮಾಸ ವಿಧಿವತ್ಸತ್ಕಾರಾರ್ಹೌ ಮಹಾಬಲೌ ‖ ೮ ‖ ತತಃ ಪರಮಂಸ ತ್ಕಾರಂ ಸುಮತೇಃ ಪ್ರಾಪ್ಯ ರಾಘವೌ ‖ ಉಷ್ಯ ತತ್ರ ನಿಶಾಮೇಕಾಂ ಜಗ್ಮತು ರ್ಮಿಥಿಲಾಂ ತತಃ ‖ ೯ ‖ ತಾಂ ದೃಷ್ಟ್ವಾ ಮುನಯಸ್ಸರ್ವೇ ಜನಕಸ್ಯ ಪುರೀಂ ಶುಭಾಂ ‖ ಸಾಧುಸಾಧ್ವಿತಿ ಶಂಸಂತೋ ಮಿಥಿಲಾಂ ಸಮಪೂಜಯನ್ ‖೧೦‖ ಮಿಥಿಲೋಪವನೇ ತತ್ರ ಆಶ್ರಮಂ ದೃಶ್ಯ ರಾಘವಃ ‖ ಪುರಾಣಂ ನಿರ್ಜನಂ ರಮ್ಯಂ ಪಪ್ರಚ್ಛ ಮುನಿಪುಂಗವಂ ‖ ೧೧ ‖ ಶ್ರೀಮದಾಶ್ರಮಸಂಕಾಶಂ ಕಿನ್ನಿದಂ ಮುನಿವರ್ಜಿತಂ ‖ ಶ್ರೋತುಮಿಚ್ಛಾಮಿ ಭಗವನ್ ಕಸ್ಯಾಯಂ ಪೂರ್ವ

---

ರಥಸ್ಯ - ದಶರಥ ರಾಯನ, ಪುತ್ರೌ - ಮಕ್ಕಳನ್ನು, ವಿಧಿವತ್ - ಶಾಸ್ತ್ರೋಕ್ತವಾಗಿ, ಪೂಜಯಾ ಮಾಸ - ಪೂಜೆ ಮಾಡಿದನು. ‖ ೮ ‖ ತತಃ - ಬಳಿಕ, ರಾಘವೌ - ರಾಮ ಲಕ್ಷ್ಮಣರಿಬ್ಬರೂ, ಸುಮತೇಃ - ಸುಮತಿಯಿಂದ, ಪರಮಸತ್ಕಾರಂ - ಉತ್ತಮವಾದ ಪೂಜೆಯನ್ನು, ಪ್ರಾಪ್ಯ-ಹೊಂದಿ, ತತ್ರ - ಆ ವಿಶಾಲಾ ಪಟ್ಟಣದಲ್ಲಿ, ಏಕಾಂನಿಶಾಂ - ಒಂದು ರಾತ್ರಿ, ಉಷ್ಯ - ಇದ್ದು, ತತಃ-ಬಳಿಕ, ಮಿಥಿಲಾಂ - ಮಿಥಿಲಾ ಪಟ್ಟಣವನ್ನು ಕುರಿತು, ಜಗ್ಮತುಃ-ತೆರಳಿದರು. ‖ ೯ ‖ ಸರ್ವೇಮುನಯಃ-ಸಮಸ್ತ ಋಷಿಗಳೂ, ಶುಭಾಂ-ಶುಭಕರವಾದ, ಜನಕಸ್ಯ - ಜನಕರಾಯನ, ತಾಂಪುರೀಂ-ಆ ಮಿಥಿಲಾ ಪಟ್ಟಣವನ್ನು, ಸಾಧುಸಾಧ್ವಿತಿ-ಉತ್ತಮವೆಂದು, ಶಂಸಂತಃ-ಹೇಳುತ್ತ, ಮಿಥಿಲಾಂ- ಮಿಥಿಲಾ ಪಟ್ಟಣವನ್ನು, ಸಮಪೂಜಯನ್ - ಬಹುಮಾನ ಮಾಡಿದರು. ‖೧೦‖ ತತ್ರಮಿಥಿಲೋಪವನೇ- ಆ ಮಿಥಿಲಾ ಪಟ್ಟಣದ ಉದ್ಯಾನವನದಲ್ಲಿ, ರಾಘವಃ - ಶ್ರೀರಾಮನು, ನಿರ್ಜನಂ- ಜನರಹಿತವಾದ, ರಮ್ಯಂ-ಮನೋಹರವಾದ, ಪುರಾಣಂ - ಪುರಾತನವಾದ, ಆಶ್ರಮಂ - ಆಶ್ರಮವನ್ನು, ದೃಶ್ಯ - ಕಂಡು, ಮುನಿಪುಂಗವಂ - ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು, ಪಪ್ರಚ್ಛ - ಕೇಳಿದನು. ‖೧೧‖ ಹೇ ಭಗವನ್ - ಎಲೈ ಪೂಜ್ಯನೇ, ಆಶ್ರಮಸಂಕಾಶಂ - ಆಶ್ರಮದಂತೆ ಪ್ರಕಾಶಮಾನವಾದ, ಶ್ರೀಮತ್-ಸಂಪದ್ಯುಕ್ತವಾದ, ಮುನಿವರ್ಜಿತಂ - ಋಷಿಗಳಿಂದ ಬಿಡಲ್ಪಟ್ಟ, ಇದಂ - ಈ ಸ್ಥಳವು, ಕಿನ್ನು-ಯಾವುದು? ಪೂರ್ವಃ - ಪ್ರಾಚೀನವಾದ, ಅಯಮಾಶ್ರಮಃ - ಈ ಆಶ್ರಮವು, ಕಸ್ಯ - ಯಾರದು ?

---

ಂಥಕುವರರಾಗಿಯೂ, ತನ್ನಡೆಗೆ ಬಂದಿರುವ ಶ್ರೇಷ್ಠರೂ, ಸತ್ಕಾರಾರ್ಹರೂ, ಅತಿಥಿಗಳೂ, ಆದ ಆ ರಾಜಪುತ್ರರನ್ನು ಶಾಸ್ತ್ರೋಕ್ತವಾಗಿ ಪೂಜಿಸಿದವನಾದನು. ಆರಾಮ ಲಕ್ಷ್ಮಣರು ಸುಮತಿರಾಯನ ಪೂಜೆಯನ್ನು ಕೈಕೊಂಡು, ಅಂದಿನರಾತ್ರಿ ಆ ವಿಶಾಲಾಪಟ್ಟಣದಲ್ಲಿಯೇ ಇದ್ದು ಪ್ರಾತಃಕಾಲದಲ್ಲಿ ಮಿಥಿಲೆಗೆ ಹೊರಟವರಾದರು. ‖ ೭ - ೯ ‖ ಆ ಬಳಿಕ ಋಷಿ ಸಮೂಹದಿಂದೊಡಗೂಡಿದ ವಿಶ್ವಾಮಿತ್ರನು ಮಿಥಿಲೆಯ ಬಳಿ ನಾರಿದನು. ಆಗ ಋಷಿಗಳೆಲ್ಲರೂ ಮಂಗಳಕರವಾದ, ಜನಕರಾಯನ ರಾಜಧಾನಿಯಾದ ಮಿಥಿಲಾ ಪಟ್ಟಣದ ಸೊಬಗನ್ನು ನೋಡಿ ಶ್ಲಾಘಿಸಿದರು. ‖ ೧೦ ‖ ಶ್ರೀರಾಮನು ಆ ಮಿಥಿಲೆಯ ಉಪವನದಲ್ಲಿ ಪುರಾತನವೂ, ಜನರಹಿತವೂ, ರಮಣೀಯವೂ ಆಗಿರುವ ಋಷ್ಯಾಶ್ರಮವನ್ನು ಕಂಡು ವಿಶ್ವಾಮಿತ್ರನನ್ನು ಕುರಿತು “ ಎಲೈ ಪೂಜ್ಯನೆ ! ಇದು ಋಷ್ಯಾಶ್ರಮದಂತೆ ತೋರುತಿದ್ದರೂ ಮುನಿಜನವಿವರ್ಜಿತವಾಗಿರುವುದು. ಇದು ಯಾವ ಮಹಾತ್ಮನ ಆಶ್ರಮವು ? ಕೇಳಲಿಚ್ಛಿಸಿ

ಆಶ್ರಮಃ ॥ ೧೨ ॥ ತಚ್ಛ್ರುತ್ವಾ ರಾಘವೇಣೋಕ್ತಂ ವಾಕ್ಯಂ ವಾಕ್ಯವಿಶಾರದಃ ॥ ಪ್ರತ್ಯುವಾಚ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ॥೧೩॥ ಹಂತ ತೇ ಕಥಯಿಷ್ಯಾಮಿ ಶೃಣು ತತ್ತ್ವೇನ ರಾಘವ॥ ಯಸ್ಯೈತದಾಶ್ರಮಪದಂ ಶಪ್ತಂ ಕೋಪಾನ್ಮಹಾತ್ಮನಾ ॥ ೧೪ ॥ ಗೌತಮಸ್ಯ ನರಶ್ರೇಷ್ಠ ಪೂರ್ವಮಾಸೀನ್ಮಹಾತ್ಮನಃ ॥ ಆಶ್ರಮೋ ದಿವ್ಯಸಂಕಾಶ ಸ್ಸುರೈರಪಿ ಸುಪೂಜಿತಃ॥ ೧೫ ॥ ಸಚೇಹ ತಪಆತಿಷ್ಠದಹಲ್ಯಾ ಸಹಿತಃ ಪುರಾ ॥ ವರ್ಷಪೂಗಾನನೇಕಾಂಶ್ಚ ರಾಜಪುತ್ರ ಮಹಾಯಶಃ ॥ ೧೬ ॥ ತಸ್ಯಾಂತರಂ ವಿದಿತ್ವಾಽಥ

ಶ್ರೋತುಂ - ಕೇಳಲು, ಇಚ್ಛಾಮಿ - ಇಚ್ಛಿಸುತ್ತೇನೆ. ॥ ೧೨ ॥ ರಾಘವೇಣ-ಶ್ರೀರಾಮನಿಂದ, ಉಕ್ತಂ - ಹೇಳಲ್ಪಟ್ಟ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ವಾಕ್ಯವಿಶಾರದಃ-ವಾಕ್ಯಾರ್ಥಜ್ಞಾನದಲ್ಲಿ ಪಂಡಿತನಾದ, ಮಹಾತೇಜಾಃ - ಬ್ರಹ್ಮ ತೇಜಸ್ವಿಯಾದ, ಮಹಾಮುನಿಃ-ಬ್ರಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು, ॥ ೧೩ ॥ ಹೇ ರಾಘವ - ಎಲೈ ಶ್ರೀರಾಮನೇ, ತೇ - ನಿನಗೆ, ತತ್ತ್ವೇನ - ಯಥಾರ್ಥವಾಗಿ, ಕಥಯಿಷ್ಯಾಮಿ-ಹೇಳುವೆನು, ಶೃಣು - ಕೇಳು, ಹಂತ - ಹರ್ಷವು, ಏತದಾಶ್ರಮಪದಂ - ಈ ಆಶ್ರಮಸ್ಥಳವು, ಯಸ್ಯ-ಯಾರದೋ, ಮಹಾತ್ಮನಾ - ಮಹಾನುಭಾವನಾದ, ತೇನ - ಆ ಋಷಿಯು, ಕೋಪಾತ್-ಕೋಪದಿಂದ, ಶಪ್ತಂ - ಶಪಿಸಲ್ಪಟ್ಟಿತು, ॥ ೧೪ ॥ ಹೇನರಶ್ರೇಷ್ಠ- ಎಲೈ ಪುರುಷಶ್ರೇಷ್ಠನೇ, ಪೂರ್ವಂ-ಪೂರ್ವದಲ್ಲಿ, ಮಹಾತ್ಮನಃ - ಮಹಾನುಭಾವನಾದ, ಗೌತಮಸ್ಯ - ಗೌತಮ ಋಷಿಯ, ದಿವ್ಯಸಂಕಾಶಃ - ದಿವ್ಯಸ್ಥಳಕ್ಕೆ ಸಮಾನವಾದ, ಸುರೈರಪಿ - ದೇವತೆಗಳಿಂದಲೂ, ಸುಪೂಜಿತಃ - ಚನ್ನಾಗಿ ಶ್ಲಾಘಿಸಲ್ಪಟ್ಟ, ಆಶ್ರಮಃ - ಆಶ್ರಮವು, ಆಸೀತ್ - ಆಯಿತು, ॥ ೧೫ ॥ ಹೇ ರಾಜಪುತ್ರ-ಎಲೈ ರಾಜಕುಮಾರನೆ, ಹೇಮಹಾಯಶಃ - ಎಲೈ ಮಹಾಕೀರ್ತಿವಂತನೇ, ಪುರಾ - ಪೂರ್ವದಲ್ಲಿ, ಸಚ-ಆ ಗೌತಮ ಋಷಿಯೂ, ಅಹಲ್ಯಾಸಹಿತಃ, ಅಹಲ್ಯಾ - ಅಹಲ್ಯಾ ದೇವಿಯೊಡನೆ, ,,ಸಹಿತಃ-ಕೂಡಿ, ಅನೇಕಾನ್-ಅನೇಕಗಳಾದ, ವರ್ಷಪೂಗಾನ್-ವರ್ಷಸಮುದಾಯಗಳಲ್ಲಿ, ತಪಃ-ತಪವನ್ನು,ಆತಿಷ್ಠತ್-ಅನುಷ್ಠಾನ ಮಾಡಿದನು, ॥೧೬॥ ತಸ್ಯ-ಆ ಗೌತಮ ಋಷಿಯ, ಅಂತರಂ-ವಿರಹಿತ ಕಾಲವನ್ನು, ವಿದಿತ್ವಾತು-ತಿಳಿದು, ಶಚೀಪತಿಃ-ಶಚೀಪತಿಯಾದ,ಸಹಸ್ರಾಕ್ಷಃ ದೇವೇಂದ್ರನು, ಮುನಿವೇಷಧರಃ- ಗೌತಮ

ವೆನು. ದಯವಿಟ್ಟು ಹೇಳು." ಎಂದನು. ಆಗಲಾ ವಿಶ್ವಾಮಿತ್ರಮುನಿಯು ಹೀಗೆಂದನು. "ರಘುನಂದನ! ಯಾವ ಮಹಾತ್ಮನಿಂದ ಈ ಆಶ್ರಮವು ಶಪಿಸಲ್ಪಟ್ಟಿತೋ, ಇದು ಯಾರ ಆಶ್ರಮವೋ ಅದನ್ನು ನಿನಗೆ ಯಥಾರ್ಥವಾಗಿ ಹೇಳುವೆನು ಕೇಳು. ॥ ೧೧-೧೪ ॥ ಎಲೈ ಪುರುಷ ಶ್ರೇಷ್ಠನೆ! ಈ ಸ್ಥಳವು ಹಿಂದೆ ಮಹಾ ಮನಸ್ವಿಯಾದ ಗೌತಮ ಋಷಿಯ ಆಶ್ರಮವಾಗಿ, ದಿವ್ಯವಾಗಿ ಹೊಳೆಯುತ್ತಿರುವುದೂ, ದೇವತೆಗಳಿಂದಲೂ ಪೂಜಿತವಾದುದೂ ಆಗಿದ್ದಿತು. ಆಮಹಾನುಭಾವನಾದ ಗೌತಮನು ಅಹಲ್ಯಾಸಹಿತನಾಗಿ ಅನೇಕವರ್ಷಗಳ ಕಾಲ ಈ ಸ್ಥಳದಲ್ಲಿತಪವನ್ನಾಚರಿಸುತ್ತಿದ್ದನು. ॥೧೫-೧೬॥ ಹೀಗಿರಲು ಪುರಂದರನು ಗೌತಮ ಮುನಿಯಿಲ್ಲದಿರುವ ಸಮಯವನ್ನು ತಿಳಿದು,ಗೌತಮನ ವೇಷವನ್ನು ತಾಳಿ ಆತನ ಪತ್ನಿಯಾದ ಅಹಲ್ಯೆ

ಸಹಸ್ರಾಕ್ಷ ಶ್ಯಚೀಪತಿಃ || ಮುನಿವೇಷಧರೋಽಹಲ್ಯಾಮಿದಂ ವಚನಮಬ್ರ
ವೀತ್ || ೧೭ || ಋತುಕಾಲಂ ಪ್ರತೀಕ್ಷಂತೇ ನಾರ್ಥಿನಸ್ಸು ಸಮಾಹಿತೇ ||
ಸಂಗಮಂತ್ವಹಮಿಚ್ಛಾಮಿ ತ್ವಯಾಸಹ ಸುಮಧ್ಯಮೇ || ೧೮ || ಮುನಿ
ವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ || ಮತಿಂ ಚಕಾರ ದುರ್ಮೇಧಾ
ದೇವರಾಜ ಕುತೂಹಲಾತ್ || ೧೯ || ಅಥಾಬ್ರವೀತ್ಸುರಶ್ರೇಷ್ಠಂ ಕೃತಾ
ರ್ಥೇನಾಂತರಾತ್ಮನಾ || ಕೃತಾರ್ಥಾಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ
ಪ್ರಭೋ || ೨೦ || ಆತ್ಮಾನಂ ಮಾಂಚ ದೇವೇಶ ಸರ್ವಥಾ ರಕ್ಷಮಾನದ ||
ಇಂದ್ರಸ್ತು ಪ್ರಹಸನ್ವಾಕ್ಯಮಹಲ್ಯಾಮಿದ ಮಬ್ರವೀತ್ ||೨೧|| ಸುಶ್ರೋಣಿ

---

ಋಷಿಯ ವೇಷವನ್ನು ಧರಿಸಿ, ಅಹಲ್ಯಾಂ-ಅಹಲ್ಯಾದೇವಿಯನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು. || ೧೭ || ಹೇಸುಸಮಾಹಿತೇ-ಎಲೈ ನಿಯಮಪರಳೇ, (ಗೋ) ಬ್ರಹ್ಮದೇವರಿಂದ ಚನ್ನಾಗಿ ನಿರ್ಮಿತಳಾದ ಎಲೈ ಸುಂದರಿಯೇ! ಅರ್ಥಿನಃ- ಸುರತಾರ್ಥಿಗಳು, ಋತುಕಾಲಂ- ಋತುಗಮನಕಾಲವನ್ನು, ನಪ್ರತೀಕ್ಷಂತೆ-ನಿರೀಕ್ಷಿಸುವದಿಲ್ಲ, ಹೇಸುಮಧ್ಯಮೇ- ಎಲೈ ಸುಂದರವಾದ ಮಧ್ಯಪ್ರದೇಶ ಉಳ್ಳವಳೇ, ಅಹಂ-ನಾನು, ತ್ವಯಾಸಹ - ನಿನ್ನೊಡನೆ, ಸಂಗಮಂತು - ಸಂಗವನ್ನು, ಇಚ್ಛಾಮಿ-ಬಯಸುತ್ತೇನೆ. ||೧೮ || ಹೇರಘುನಂದನ - ಎಲೈ ರಘುಕುಲಾನಂದಕರನೇ, ದುರ್ಮೇಧಾ-ದುಷ್ಟಬುದ್ಧಿಯುಳ್ಳ ಅಹಲ್ಯಾದೇವಿಯು,ಸಹಸ್ರಾಕ್ಷಂ ದೇವೇಂದ್ರನನ್ನು, ಮುನಿವೇಷಂ-ಗೌತಮ ಋಷಿಯವೇಷವನ್ನು ಧರಿಸಿರುವನನ್ನಾಗಿ, ವಿಜ್ಞಾಯ - ತಿಳಿದು, ದೇವರಾಜಕುತೂಹಲಾತ್, ದೇವರಾಜ - ದೇವೇಂದ್ರನೆಂಬ, ಕು ತೂ ಹ ಲಾ ತ್ - ಆ ಶೆ ಯಿಂ ದ, ಮ ತಿಂ - ಬು ದ್ಧಿ ಯ ನ್ನು, ಚಕಾರ - ಮಾಡಿದಳು, || ೧೯ || ಅಥ - ಒಳಿಕ, ಸುರಶ್ರೇಷ್ಠಂ - ದೇವತಾ ಶ್ರೇಷ್ಠನಾದ ದೇವೇಂದ್ರನನ್ನು ಕುರಿತು, ಕೃತಾರ್ಥೇನ - ಕೃತಪ್ರಯೋಜನವುಳ್ಳ, ಅಂತರಾತ್ಮನಾ-ಮನಸ್ಸಿನಿಂದ, ಅಬ್ರವೀತ್ - ನುಡಿದಳು, ಹೇಸುರಶ್ರೇಷ್ಠ - ಎಲೈ ಸುರಪತಿಯೇ ! ಕೃತಾರ್ಥಾ - ಕೃತಾರ್ಥಳು, ಅಸ್ಮಿ - ಆದೆನು, ಹೇಪ್ರಭೋ - ಎಲೈ ಸ್ವಾಮಿಯೇ, ಇತಃ - ಇಲ್ಲಿಂದ, ಶೀಘ್ರಂ-ಜಾಗ್ರತೆಯಾಗಿ, ಗಚ್ಛ - ಹೊರಟುಹೋಗು, || ೨೦ || ಹೇದೇವೇಶ - ಎಲೈ ದೇವೇಂದ್ರನೇ, ಹೇಮಾನದ - ಎಲೈ ಮಾನಪ್ರದಾಯಕನೇ, ಸರ್ವದಾ - ಎಲ್ಲಾ ಕಾಲದಲ್ಲಿಯೂ, ಆತ್ಮಾನಂ - ನಿನ್ನನ್ನೂ, ಮಾಂಚ- ನನ್ನನ್ನೂ, ರಕ್ಷ - ಸಂರಕ್ಷಣೆ ಮಾಡು, ಇಂದ್ರಸ್ತು - ಇಂದ್ರನು, ಪ್ರಹಸನ್- ನಗುತ್ತ, ಅಹಲ್ಯಾಂ- ಅಹಲ್ಯಾ ದೇವಿಯನ್ನು ಕುರಿತು, ಇದಂವಾಕ್ಯಂ - ಈ ಮಾತನ್ನು, ಅಬ್ರವೀತ್ - ನುಡಿದನು, ||೨೧||

---

ಯನ್ನು ಕುರಿತು, "ಸುಂದರೀ ! ಸುರತಾರ್ಥಿಗಳು ಋತುಗಮನ ಕಾಲವನ್ನು ನಿರೀಕ್ಷಿಸುವುದಿಲ್ಲವು. ಆದುದರಿಂದ ನಿನ್ನೊಡನೆ ನಾನು ಸಂಗಮವನ್ನು ಬಯಸುವೆನು." ಎಂದನು. ಆಗ ದುಷ್ಟಬುದ್ಧಿಯುಳ್ಳ ಅಹಲ್ಯೆಯು ಮುನಿರೂಪವನ್ನಾಂತ ಅವನನ್ನು ಇಂದ್ರನೆಂದು ತಿಳಿದು, ದೇವೇಂದ್ರನೆಂಬ ಆಸೆಯಿಂದಾತನೊಡನೆ ರತಿಕ್ರೀಡೆಯನ್ನು ಅನುಭವಿಸಿ ಪೂರ್ಣಮನೋರಥಳಾಗಿ, "ಎಲೈ ಸುರಶ್ರೇಷ್ಠನೆ! ನಾನು ಧನ್ಯಳಾದೆನು. ಬೇಗನೆ ತೆರಳು; ಮಾನಸಂರಕ್ಷಕನೆ! ನನ್ನನ್ನೂನಿನ್ನನ್ನೂ ಸದಾ ಕಾಲದಲ್ಲಿಯೂ ರಕ್ಷಿಸಿಕೊಳ್ಳುವವನಾಗು"ಎಂದಳು. ||೧೭-೨೧||

ಪರಿತುಷ್ಟೋಽಸ್ಮಿ ಗಮಿಷ್ಯಾಮಿ ಯಥಾಗತಂ || ಏವಂ ಸಂಗಮ್ಯ ತು ತಯಾ ನಿಶ್ಚಕ್ರಾಮೋಟಜಾತ್ತತಃ || ೨೨ || ಸಸಂಭ್ರಮಾತ್ತ್ವರನ್ ರಾಮ ಶಂಕಿತೋ ಗೌತಮಂ ಪ್ರತಿ || ಗೌತಮಂ ಸಂದದರ್ಶಾಥ ಪ್ರವಿಶಂತಂ ಮಹಾಮುನಿಂ || ೨೩ || ದೇವದಾನವ ದುರ್ಧರ್ಷಂ ತಪೋಬಲ ಸಮನ್ವಿತಂ || ತೀರ್ಥೋದಕ ಪರಿಕ್ಲಿನ್ನಂ ದೀಪ್ಯಮಾನ ಮಿವಾನಲಂ ||೨೪|| ಗೃಹೀತಸಮಿಧಂ ತತ್ರ ಸಕುಶಂ ಮುನಿಪುಂಗವಂ|| ದೃಷ್ಟ್ವಾ ಸುರಪತಿಸ್ತ್ರಸ್ತೋ ವಿವರ್ಣವದನೋಽಭವತ್||೨೫|| ಅಥ ದೃಷ್ಟ್ವಾ ಸಹಸ್ರಾಕ್ಷಂ ಮುನಿವೇಷಧರಂ ಮುನಿಃ || ದುರ್ವೃತ್ತಂ ವೃತ್ತಸಂ

---

ಹೇಸುಶ್ರೋಣೇ – ಎಲೈ ಸುಂದರಾಂಗಿಯೆ, ಪರಿತುಷ್ಟಃ- ಸಂತುಷ್ಟನು, ಅಸ್ಮಿ - ಆದೆನು, ಯಥಾಗತಂ - ಬಂದಂತೆ, ಗಮಿಷ್ಯಾಮಿ - ಹೋಗುವೆನು, || ೨೨ || ಹೇರಾಮ - ಎಲೈ ಶ್ರೀರಾಮನೇ, ಸಃ - ಆ ಇಂದ್ರನು, ಏವಂ - ಇಂತು, ತಯಾತು - ಆಹಲ್ಯಾ ದೇವಿಯೊಡನೆ, ಸಂಗಮ್ಯ- ಸಂಗಮವನ್ನು ಮಾಡಿ, ತತಃ - ಬಳಿಕ, ಗೌತಮಂಪ್ರತಿ - ಗೌತಮ ಋಷಿಯನ್ನು ಕುರಿತು, ಶಂಕಿತಃ- ಭಯಗೊಂಡು, ಸಂಭ್ರಮಾತ್ - ತ್ವರೆಯಿಂದ, ತ್ವರನ್ – ಜಾಗ್ರತೆ ಬೀಳುವಂತಿರುವವನಾಗಿ, ಉಟಜಾತ್ – ಆಶ್ರಮದಿಂದ, ನಿಶ್ಚಕ್ರಾಮ - ಹೊರಟುಬಂದನು ||೨೩|| ಅಥ-ಬಳಿಕ, ದೇವದಾನವದುರ್ಧರ್ಷಂ - ದೇವರಾಕ್ಷಸರಿಂದ ತಿರಸ್ಕರಿಸಲಸಾಧ್ಯರಾದ, ತಪೋಬಲಸಮನ್ವಿತಂ - ತಪಸ್ಸಾಮರ್ಥ್ಯದಿಂದ ಕೂಡಿರುವ, ತೀರ್ಥೋದಕಪರಿಕ್ಲಿನ್ನಂ - ಪವಿತ್ರವಾದ ಉದಕದಿಂದ ಸ್ನಾನಮಾಡಿದ, ಅನಲಮಿವ - ಅಗ್ನಿಯಂತೆ, ದೀಪ್ಯಮಾನಂ - ಹೊಳೆಯುತ್ತಿರುವ, ಗೃಹೀತಸಮಿಧಂ-ಗ್ರಹಿಸಲ್ಪಟ್ಟ ಪಲಾಶ ಸಮಿತ್ತುಗಳುಳ್ಳ, ಸಕುಶಂ - ದರ್ಭೆಗಳಿಂದೊಡಗೂಡಿದ, ಮಹಾ ಮುನಿಂ - ಋಷಿ ಶ್ರೇಷ್ಠನಾದ, ಪ್ರವಿಶಂತಂ - ಪ್ರವೇಶಿಸುತ್ತಿರುವ, ಗೌತಮಂ - ಗೌತಮ ಋಷಿಯನ್ನು, ಸಂದದರ್ಶ - ನೋಡಿದನು, ಸುರಪತಿಃ- ದೇವೇಂದ್ರನು, ತತ್ರ - ಆ ಆಶ್ರಮದಲ್ಲಿ, ಮುನಿಪುಂಗವಂ- ಋಷಿಶ್ರೇಷ್ಠನನ್ನು, ದೃಷ್ಟ್ವಾ - ಕಂಡು, ತ್ರಸ್ತಃ - ಭಯಗೊಂಡು, ವಿವರ್ಣವದನಃ-ಮುಖಗುಂದಿದವನು, ಅಭವತ್ - ಆದನು. || ೨೫ || ಅಥ - ಬಳಿಕ, ವೃತ್ತಸಂಪನ್ನಃ - ಸದಾಚಾರ ಸಂಪನ್ನನಾದ, ಮುನಿಃ – ಗೌತಮ ಋಷಿಯು, ಮುನಿವೇಷಧರಂ - ಮುನಿಯಾದ ತನ್ನ ವೇಷವನ್ನು ಧರಿಸಿ

---

ಇಂತೆನಲಾ ಇಂದ್ರನು ನಸುನಗೆಗೊಂಡು "ಓ ಸುಶ್ರೋಣಿಯೆ! ಸಂತುಷ್ಟನಾದೆನು. ಹೋಗಿ ಬರುವೆನು" ಎಂದು ನುಡಿದು ಗೌತಮ ಮುನಿಗೆ ಹೆದರಿದವನಾಗಿ ಬಹು ಬೇಗನೆ ಆಶ್ರಮದಿಂದ ಹೊರಡುತ್ತಿದ್ದನು. ಆ ಸಮಯದಲ್ಲಿ ದೇವರಾಕ್ಷಸರಿಂದ ತಿರಸ್ಕರಿಸಲಸದಳನೂ, ತಪೋಬಲವುಳ್ಳವನೂ, ಪವಿತ್ರವಾದ ಉದಕದಿಂದ ಮಿಂದವನೂ, ಅಗ್ನಿಯಂತೆ ಕಂಗೊಳಿಸುತ್ತಿರುವವನೂ, ಗ್ರಹಿಸಲ್ಪಟ್ಟ ಸಮಿತ್ತುಗಳುಳ್ಳವನೂ, ಧರ್ಮಿಷ್ಠನೂ, ಆದ ಗೌತಮ ಮುನಿಶ್ರೇಷ್ಠನು ತನ್ನ ಆಶ್ರಮವನ್ನು ಹೊಗುತ್ತಿರುವುದನ್ನು ಕಂಡು ದೇವೇಂದ್ರನು ಹೆದರಿ ಮುಖಗೆಟ್ಟವನಾದನು. || ೨೨-೨೫ || ಆ ಬಳಿಕ ಸದಾಚಾರ ಸಂಪನ್ನನಾದ ಆ ಮುನಿಯು ತನ್ನ ವೇಷವನ್ನು ಧರಿಸಿರುವವನೂ, ದುರ್ವೃತ್ತನೂ ಆದ ಇಂದ್ರನನ್ನು ನೋಡಿ ರೋಷದಿಂದ ಹೀಗೆಂದನು. "ಎಲಾ! ದುರ್ಬುದ್ಧಿಯುಳ್ಳವನೆ! ನನ್ನ ರೂಪವನ್ನಾಂತು ಈ ದುಷ್ಕಾರ್ಯ

ವನ್ಮೋ ರೋಷಾದ್ವಚನಮಬ್ರವೀತ್ ॥ ೨೬ ॥ ಮಮರೂಪಂ ಸಮಾಸ್ಥಾಯ
ಕೃತವಾನಸಿ"ದುರ್ಮತೇ॥ ಅಕರ್ತವ್ಯಮಿದಂ ತಸ್ಮಾದ್ವಿಫಲಸ್ತ್ವಂ ಭವಿಷ್ಯಸಿ॥೨೭॥
ಗೌತಮೇನೈವಮುಕ್ತಸ್ಯ ಸರೋಷೇಣ ಮಹಾತ್ಮನಾ ॥ ಪೇತತುರ್ವೃಷಣೌ
ಭೂಮೌ ಸಹಸ್ರಾಕ್ಷಸ್ಯ ತತ್ಕ್ಷಣಾತ್ ॥ ೨೮ ॥ ತಥಾ ಶಪ್ತ್ವಾ ಸವೈಶಕ್ರ
ಮಹಲ್ಯಾಮಪಿ ಶಪ್ತವಾನ್ ॥ ಇಹವರ್ಷ ಸಹಸ್ರಾಣಿ ಬಹೂನಿತ್ವಂ ನಿವತ್ಸ್ಯಸಿ

ರುವ, ದುರ್ವೃತ್ತಂ - ದುರ್ವ್ಯಾಪಾರಿಯಾದ, ಸಹಸ್ರಾಕ್ಷಂ - ದೇವೇಂದ್ರನನ್ನು, ದೃಷ್ಟ್ವಾ-ಕಂಡು, ರೋಷಾತ್ - ಕೋಪದಿಂದ, ವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೨೬ ॥ ಹೇದುರ್ಮತೇ - ಎಲೋ ದುರ್ಬುದ್ಧಿಯುಳ್ಳವನೇ, ತ್ವಂ - ನೀನು, ಮಮ - ನನ್ನ, ರೂಪಂ-ರೂಪವನ್ನು, ಸಮಾಸ್ಥಾಯ - ಆಶ್ರಯಿಸಿ, ಯಸ್ಮಾತ್ - ಯಾವ ಕಾರಣ, ಅಕರ್ತವ್ಯಂ - ಮಾಡಬಾರದ, ಇದಂ - ಈ ದುಷ್ಕಾರ್ಯವನ್ನು, ಕೃತವಾನ್- ಮಾಡಿದವನು, ಅಸಿ- ಆದೆಯೋ, ತಸ್ಮಾತ್-ಆ ಕಾರಣ, ತ್ವಂ - ನೀನು, ವಿಫಲಃ - ವೃಷಣರಹಿತನು, ಭವಿಷ್ಯಸಿ - ಆಗುವೆ, ॥ ೨೭ ॥ ಸರೋಷೇಣ-ರೋಷದಿಂದೊಡಗೂಡಿದ, ಮಹಾತ್ಮನಾ - ಮಹಾ ಪ್ರತಾಪಸಂಪನ್ನನಾದ, ಗೌತಮೇನ - ಗೌತಮ ಋಷಿಯಿಂದ, ಏವಂ - ಈ ಪರಿಯಾಗಿ, ಉಕ್ತಸ್ಯ - ಹೇಳಲ್ಪಟ್ಟ, ಸಹಸ್ರಾಕ್ಷಸ್ಯ - ದೇವೇಂದ್ರನ, ವೃಷಣೌ - ವೃಷಣಗಳು, ತತ್ಕ್ಷಣಾತ್ - ಆ ಕ್ಷಣದಲ್ಲಿಯೇ, ಭೂಮೌ - ನೆಲದಲ್ಲಿ, ಪೇತತುಃ-ಬಿದ್ದುಹೋದವು. ॥ ೨೮ ॥ ಸವೈ- ಆ ಗೌತಮ ಋಷಿಯು, ಶಕ್ರಂ-ದೇವೇಂದ್ರನನ್ನು, ತಥಾ-ಆ ಪ್ರಕಾರವಾಗಿ, ಶಪ್ತ್ವಾ ಶಪಿಸಿ, ಅಹಲ್ಯಾಮಪಿ-ಅಹಲ್ಯಾದೇವಿಯನ್ನೂ, ಶಪ್ತವಾನ್- ಶಪಿಸಿದನು, ತ್ವಮಪಿ-ನೀನು, ಇಹ-ಈ ಆಶ್ರಮದಲ್ಲಿ, ಬಹೂನಿ-ಅನೇಕಗಳಾದ, ವರ್ಷಸಹಸ್ರಾಣಿ - ಸಹಸ್ರವರ್ಷಗಳು, ವಾಯುಭಕ್ಷಾ-ವಾಯುವೇ ಆಹಾರವುಳ್ಳವಳಾಗಿ, ನಿರಾಹಾರಾ- ಇತರಾಹಾರವಿಲ್ಲದವಳಾಗಿ, ನಿವತ್ಸ್ಯಸಿ- ಇರು, ತಪ್ಯಂತೀ-ತಪಸ್ಸುಮಾಡುತ್ತಿರುವಳಾಗಿ, ಭಸ್ಮಶಾಯಿನೀ- (೧) ಭಸ್ಮದಲ್ಲಿ ಮಲ

ವನ್ನು ಮಾಡಿದೆ. ದೇವೇಂದ್ರನಾದ ನೀನು ಈ ಕಾರ್ಯವನ್ನು ಮಾಡತಕ್ಕುದಲ್ಲವು. ಆದುದರಿಂದ ನೀನು ವೃಷಣರಹಿತನಾಗು." ರಘುನಂದನ ! ಇಂತು ಮಹಾತ್ಮನಾದ ಗೌತಮ ಮುನಿಯಿಂದ ಇಂದ್ರನು ಶಪಿಸಲ್ಪಡಲು, ತಕ್ಷಣದಲ್ಲಿಯೇ ಅವನ ವೃಷಣಗಳು ಬಿದ್ದುಹೋದವು"೨೬॥ ೨೮ ॥ ರಾಮಚಂದ್ರ! ಆ ಮುನಿಯು ದೇವೇಂದ್ರನನ್ನಿರೀತಿ ಶಪಿಸಿ, ದುಷ್ಟೆಯಾದ ಅಹಲ್ಯಾದೇವಿಯನ್ನೂ ನೋಡಿ "ಎಲೌ ! ದುರ್ಬುದ್ಧಿಯುಳ್ಳ ನೀನು, ನಿರಾಹಾರಳೂ ವಾಯುಭಕ್ಷಕಳೂ ಆಗಿ ತಪವಂ ಗೈಯ್ಯುತ್ತ, ಭಸ್ಮಶಾಯಿನಿಯಾಗಿ ಎಲ್ಲ ಪ್ರಾಣಿಗಳಿಗೂ ಅದೃಶ್ಯಳಾಗಿ ಈ ಆಶ್ರಮದಲ್ಲಿ ಸಹಸ್ರಾರುವರ್ಷಗಳವರೆವಿಗೂ ಇರುವವಳಾಗು"ಎಂದು ಶಪಿಸಿ,"ಯಾವಾಗ ದಶರಥ ಕುವರನಾದ ರಾಮನು ಈ ವನವನ್ನು ಹೊಗುವನೋ, ಆಗ ನೀನು ಪರಿಶುದ್ಧಳಾಗಿ

ಟಿ॥(೧) ಪುರಾಣಾದಿಗಳಲ್ಲಿ, ಗೌತಮನು ಅಹಲ್ಯೆಗೆ "ನೀನಿಂದಿನಿಂದ ಕಲ್ಲಾಗು" ಎಂದು ಶಾಪಕೊಟ್ಟಿರುವನೆಂದು ಹೇಳಿದೆ. ಇಲ್ಲಿ "ಭಸ್ಮಶಾಯಿನಿಯಾಗು" ಎಂದು ವಾಲ್ಮೀಕಿಯು ಹೇಳಿರುವನಲ್ಲ! ಎಂದು ವಾಚಕರು ಸಂಶಯಪಡಬಾರದು. ಕಲ್ಲಾಗೆಂದು ಹೇಳಿದುದು ಕಲ್ಪಾಂತರದ ವಿಷಯು. ಇದು ಇಲ್ಲಿ ಸಂಗತವಾಗಿರುವುದು, ಎಂದು ತಿಳಿಯಬೇಕು. (ಇದು ಗೋವಿಂದರಾಜೀಯ ವ್ಯಾಖ್ಯಾನದ ಅಭಿಪ್ರಾಯು.)

||೨೯|| ವಾಯುಭಕ್ಷಾ ನಿರಾಹಾರಾತಪ್ಯಂತೀ ಭಸ್ಮಶಾಯನೀ|| ಅದೃಶ್ಯಾ ಸರ್ವಭೂತಾನಾಮಾಶ್ರಮೇಽಸ್ಮಿನ್ನಿವತ್ಸ್ಯಸಿ||೩೦|| ಯದಾಚೈತದ್ವನಂ ಘೋರಂ ರಾಮೋ ದಶರಥಾತ್ಮಜಃ|| ಆಗಮಿಷ್ಯತಿದುರ್ಧರ್ಷ ಸ್ತದಾಪೂತಾ ಭವಿಷ್ಯಸಿ ||೩೧|| ತಸ್ಯಾತಿಥ್ಯೇನ ದುರ್ವೃತ್ತೇ ಲೋಭ ಮೋಹ ವಿವರ್ಜಿತಾ|| ಮತ್ಸಕಾಶೇ ಮುದಾ ಯುಕ್ತಾ ಸ್ವಂ ವಪುರ್ಧಾರಯಿಷ್ಯಸಿ || ೩೨ || ಏವಮುಕ್ತ್ವಾ ಮಹಾತೇಜಾ ಗೌತಮೋ ದುಷ್ಟಚಾರಿಣೀಂ || ಇಮಮಾಶ್ರಮ ಮುತ್ಸೃಜ್ಯ ಸಿದ್ಧಚಾರಣ ಸೇವಿತೇ|| ಹಿಮವಚ್ಛಿಖರೇ ಪುಣ್ಯೇ ತಪಸ್ತೇಪೇ ಮಹಾತಪಾಃ || ೩೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ.

---

ಗಿದವಳಾಗಿ, ಅಸ್ಮಿನ್ ಆಶ್ರಮೇ-ಈ ಆಶ್ರಮದಲ್ಲಿ, ಸರ್ವಭೂತಾನಾಂ - ಸಮಸ್ತಭೂತಗಳಿಗೂ, ಅದೃಶ್ಯಾ-ಕಾಣಿಸದೆ ಇರುವವಳಾಗಿ, ನಿವತ್ಸ್ಯಸಿ-ಇರುವೆ, ಯದಾಚ ಯಾವಕಾಲದಲ್ಲಿ, ದಶರಥಾತ್ಮಜಃ-ದಶರಥರಾಯನ ಕುವರನಾದ, ದುರ್ಧರ್ಷಃ - ತಿರಸ್ಕರಿಸಲಸದಳನಾದ, ರಾಮಃ-ಶ್ರೀರಾಮನು, ಘೋರಂ – ಭಯಂಕರವಾದ, ಏತದ್ವನಂ - ಈ ವನವನ್ನು ಕುರಿತು, ಆಗಮಿಷ್ಯತಿ - ಬರುವನೋ, ತದಾ - ಆಗ, ಪೂತಾ - ಪರಿಶುದ್ಧಳು, ಭವಿಷ್ಯಸಿ - ಆಗುವೆ, ಇತಿ - ಇಂತೆಂದು, ಶಪ್ತ್ವಾ-ಶಪಿಸಿದವನಾದನು. || ೩೧ || ಹೇದುರ್ವೃತ್ತೇ - ಎಲೌ ದುರ್ವ್ಯಾಪಾರವತಿಯೇ, ತಸ್ಯ - ಆ ಶ್ರೀ ರಾಮನ, ಅತಿಥ್ಯೇನ - ಅತಿಥಿ ಸತ್ಕಾರದಿಂದ, ಲೋಭಮೋಹವಿವರ್ಜಿತಾ - ವಿಷಯಾಸಕ್ತತೆಯಿಂದಲೂ, ಅದರಿಂದುಂಟಾದ ಭ್ರಾಂತಿಯಿಂದಲೂ ವರ್ಜಿತಳಾಗಿ, ಮತ್ಸಕಾಶೇ - ನನ್ನ ಸಮೀಪದಲ್ಲಿ, ಮುದಾ - ಸಂತೋಷದಿಂದ, ಯುಕ್ತಾ - ಕೂಡಿದವನಾಗಿ, ಸ್ವಂವಪುಃ - ನಿನ್ನ ಶರೀರವನ್ನು, ಧಾರಯಿಷ್ಯಸಿ - ಧರಿಸುವೆ. || ೩೨ || ಮಹಾತಪಾಃ - ಮಹಾ ತಪಸ್ವಿಯಾದ, ಮಹಾತೇಜಾಃ-ಬ್ರಹ್ಮತೇಜೋವಂತನಾದ, ಗೌತಮಃ - ಗೌತಮನು, ದುಷ್ಟಚಾರಿಣೀಂ - ದುಷ್ಕಾರ್ಯವನ್ನು ಮಾಡಿದ ಅಹಲ್ಯಾ ದೇವಿಯನ್ನು ಕುರಿತು, ಏವಂ - ಹೀಗೆ, ಉಕ್ತ್ವಾ - ಹೇಳಿ, ಇಮಮಾಶ್ರಮಂ - ಈ ಆಶ್ರಮವನ್ನು, ಉತ್ಸೃಜ್ಯ - ಬಿಟ್ಟು, ಸಿದ್ಧಚಾರಣಸೇವಿತೇ - ಸಿದ್ಧರಿಂದಲೂ, ಚಾರಣರಿಂದಲೂ ಸೇವಿಸಲ್ಪಟ್ಟ, ಪುಣ್ಯೇ - ಪುಣ್ಯಕರವಾದ, ಹಿಮವಚ್ಛಿಖರೇ - ಹಿಮವತ್ಪರ್ವತದ ಶೃಂಗದಲ್ಲಿ, ತಪಃ-ತಪವನ್ನು, ತೇಪೇ - ಆಚರಿಸಿದನು. ||೩೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ.

---

ಆತನಿಗೆ ಅತಿಥಿ ಸತ್ಕಾರವಂಗೈದು,ಲೋಭ,ಮೋಹ ರಹಿತಳಾಗಿ ಮರಳಿ ಶರೀರವನ್ನು ಹೊಂದಿ ನನ್ನೊಡನೆ ಸಂತೋಷದಿಂದಿರು" ಎಂದು ಶಾಪಾವಸಾನವನ್ನೂ ಕರುಣಿಸಿದನು. ಇಂತು ನುಡಿದ ಗೌತಮನು ಈ ಆಶ್ರಮವನ್ನು ತೊರೆದು ಸಿದ್ಧಚಾರಣ ಸೇವಿತವೂ,ಪುಣ್ಯಕರವೂ ಆದ ಹಿಮವತ್ಪರ್ವತ ಶಿಖರದಲ್ಲಿ ತಪವಂ ಗೈಯ್ಯುತ್ತಿದ್ದನು. ||೨೯-೩೩||

ಇಂತಿದು ಅಹಲ್ಯಾ ವೃತ್ತಾಂತ ಕಥನವೆಂಬ
ನಲವತ್ತೆಂಟನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕೋನಪಂಚಾಶಸ್ಸರ್ಗಃ.

ಅಫಲಸ್ತು ತತಶ್ಶಕ್ರೋ ದೇವಾನಗ್ನಿಪುರೋಧಸಃ || ಅಬ್ರವೀ
ತ್ತ್ರಸ್ತವದನಸ್ಸರ್ಷಿಸಂಘಾನ್ ಸಚಾರಣಾನ್ || ೧ || ಕುರ್ವತಾ ತಪಸೋ
ವಿಘ್ನಂ ಗೌತಮಸ್ಯ ಮಹಾತ್ಮನಃ|| ಕ್ರೋಧಮುತ್ಪಾದ್ಯ ಹಿ ಮಯಾ ಸುರಕಾರ್ಯ
ಮಿದಂ ಕೃತಂ || ೨ || ಅಫಲೋಸ್ಮಿ ಕೃತಸ್ತೇನ ಕ್ರೋಧಾತ್ಸಾ ಚ ನಿರಾ
ಕೃತಾ || ಶಾಪಮೋಕ್ಷೇಣ ಮಹತಾ ತಪೋಸ್ಯಾಪಹೃತಂ ಮಯಾ || ೩ ||
ತಸ್ಮಾತ್ಸುರವರಾಸ್ಸರ್ವೇ ಸರ್ಷಿಸಂಘಾಸ್ಸಚಾರಣಾಃ || ಸುರ ಸಾಹ್ಯಕರಂ

---

ತತಃ-ಬಳಿಕ, ಶಕ್ರಸ್ತು-ದೇವೇದ್ರನು, ಅಫಲಃ-ವೃಷಣರಹಿತನಾಗಿ, ತ್ರಸ್ತವದನಃ- ಲೋಕಾಪವಾದ ಭಯದಿಂದ ಮುಖಗೆಟ್ಟವನಾಗಿ, ಅಗ್ನಿಪುರೋಧಸಃ-ಅಗ್ನಿಯೇ ಮೊದಲಾದ, ಸರ್ಷಿಸಂಘಾನ್-ಮುನಿತಂಡಗಳಿಂದೊಡಗೂಡಿದ, ಸಚಾರಣಾನ್- ಚಾರಣ ಸಹಿತರಾದ, ದೇವಾನ್- ದೇವತೆಗಳನ್ನು ಕುರಿತು, ಅಬ್ರವೀತ್-ನುಡಿದನು, || ೧ || ಮಹಾತ್ಮನಃ - ಮಹಾತ್ಮನಾದ, ಗೌತಮಸ್ಯ-ಗೌತಮಋಷಿಯ, ತಪಸಃ-ತಪಸ್ಸಿಗೆ, ವಿಘ್ನಂ - ಅಂತರಾಯವನ್ನು, ಕುರ್ವತಾ - ಮಾಡುತ್ತಿರುವ ಮಯಾ-ನನ್ನಿಂದ, ಕ್ರೋಧಂ - ಕೋಪವನ್ನು, ಉತ್ಪಾದ್ಯ-ಹುಟ್ಟಿಸಿ, ಹಿ-ಯಾವಕಾರಣ, ಇದಂ-ಈ, ಸುರಕಾರ್ಯಂ-ದೇವಕಾರ್ಯವು, ಕೃತಂ-ಮಾಡಲ್ಪಟ್ಟಿತೋ, ತತಃ-ಆಕಾರಣ, ತೇನ - ಆಗೌತಮಋಷಿಯ, ಕ್ರೋಧಾತ್-ಕೋಪದಿಂದ, ಅಫಲಃ- ವೃಷಣರಹಿತನಾಗಿ, ಕೃತಃ - ಮಾಡಲ್ಪಟ್ಟವನು, ಅಸ್ಮಿ-ಆದೆನು, ಸಾಚ- ಆ ಅಹಲ್ಯಾದೇವಿಯು, ನಿರಾಕೃತಾ - ನಿರಾಕರಿಸಲ್ಪಟ್ಟಳು, ಮಯಾ-ನನ್ನಿಂದ,ಮಹತಾ-ದೊಡ್ಡದಾದ,ಶಾಪಮೋಕ್ಷೇಣ-ಶಾಪಕೊಡುವಿಕೆಯಿಂದ,ಅಸ್ಯ-ಈಗೌತಮಋಷಿಯ, ತಪಃ-ತಪಸ್ಸು, ಅಪಹೃತಂ - ಅಪಹರಿಸಲ್ಪಟ್ಟಿತು. ||೨-೩ || ತಸ್ಮಾತ್ - ಆಕಾರಣ, ಸರ್ವೇ-ಸಮಸ್ತರಾದ, ಹೇಸುರವರಾಃ- ಎಲೈ ದೇವತಾಶ್ರೇಷ್ಠರಿರಾ,ಸರ್ಷಿಸಂಘಾಃ-ಋಷಿಸಂಘಗಳಿಂದಲೂ, ಸಚಾರಣಾಃ-ಚಾರಣರಿಂದಲೂ ಒಡಗೂಡಿದ, ಸರ್ವೇ-ನೀವೆಲ್ಲರೂ, ಸುರಸಾಹ್ಯಕರಂ, ಸುರ-ದೇವತೆಗಳಿಗೆ, ಸಾಹ್ಯಕರಂ-ಸಹಾಯಕಾರಿಯಾದ, ಮಾಂ-ನನ್ನನ್ನು, ಸಫಲಂ-ವೃಷಣಸಹಿತನನ್ನಾಗಿ, ಕರ್ತುಂ-

---

"ಎಲೈ ರಾಮಚಂದ್ರನೆ! ಆಬಳಿಕ ವೃಷಣರಹಿತನಾದ ದೇವೇಂದ್ರನು ಅಗ್ನಿಯೇ ಮೊದಲಾದ ದೇವತೆಗಳನ್ನೂ, ಋಷಿಗಳನ್ನೂ, ಚಾರಣರನ್ನೂ ಕುರಿತು " ಮಹಾತ್ಮನಾದ ಗೌತಮ ಮುನಿಪುಂಗವನ ತಪಸ್ಸಿಗೆ ವಿಘ್ನವನ್ನು ಆಚರಿಸಿ, ಆತನಿಗೆ ಕೋಪ ಬರುವಂತೆ ಮಾಡಿ, ದೇವಕಾರ್ಯವನ್ನು ನೆರವೇರಿಸಿದೆನು. ಆದುದರಿಂದ ನಾನು ಅಫಲನಾಗಿ ಮಾಡಲ್ಪಟ್ಟೆನು. ಆತನ ಸತಿಯಾದ ಅಹಲ್ಯೆಯೂ ನಿರಾಕೃತಳಾದಳು. ಮಹತ್ತರವಾದ ಶಾಪವನ್ನು ಕೊಟ್ಟುದರಿಂದ ಆ ಗೌತಮ ಮುನಿಯ ತಪವು ಅಪಹೃತವಾಯಿತು. ||೧-೩|| ಆದುದರಿಂದ ದೇವಸಹಾಯಕನಾದ ನನಗೆ ವೃಷಣಗಳುಂಟಾಗುವಂತೆ ಮಾಡುವವರಾಗಿರಿ"

ಸರ್ವೇ ಸಫಲಂ ಕರ್ತುಮರ್ಹಥ ॥ ೪ ॥ ಶತಕ್ರತೋರ್ವಚಶ್ಶ್ರುತ್ವಾ ದೇವಾ ಸ್ಸಾಗ್ನಿ ಪುರೋಗಮಾಃ ॥ ಪಿತೃದೇವಾನುಪೇತ್ಯಾಹುಸ್ಸಹಸ್ಸರ್ವೈರ್ಮರುದ್ಗಣೈಃ ॥ ೫ ॥ ಅಯಂಮೇಷಸ್ಸವೃಷಣಶ್ಶಕ್ರೋಹ್ಯವೃಷಣಃಕೃತಃ ॥ ಮೇಷಸ್ಯ ವೃಷಣೌ ಗೃಹ್ಯ ಶಕ್ರಾಯಾಶು ಪ್ರಯಚ್ಛಥ ॥ ೬ ॥ ಅಫಲಸ್ತು ಕೃತೋಮೇಷಃ ಪರಾಂತುಷ್ಟಿಂ ಪ್ರದಾಸ್ಯತಿ ॥ ಭವತಾಂ ಹರ್ಷಣಾರ್ಥಾಯ ಯೇಚ ದಾಸ್ಯಂತಿ ಮಾನವಾಃ ॥ ೭ ॥ ಅಗ್ನೇಸ್ತು ವಚನಂ ಶ್ರುತ್ವಾ ಪಿತೃದೇವಾ ಸ್ಸಮಾಗತಾಃ ॥ ಉತ್ಪಾಟ್ಯ ಮೇಷವೃಷಣೌ ಸಹಸ್ರಾಕ್ಷೇ ನ್ಯವೇಶಯನ್ ॥ ೮ ॥ ತದಾಪ್ರಭೃತಿ ಕಾಕುತ್ಸ್ಥ ಪಿತೃದೇವಾ ಸ್ಸಮಾಗತಾಃ ॥

---

ಮಾಡಲು, ಅರ್ಹಥ-ಯೋಗ್ಯರಾಗಿ. ॥೪॥ ಶತಕ್ರತೋಃ-ದೇವೇಂದ್ರನ,ವಚಃ-ಮಾತನ್ನು, ಶೃತ್ವಾ-ಕೇಳಿ, ಸಾಗ್ನಿಪುರೋಗಮಾಃ-ಅಗ್ನಿಯೇ ಮೊದಲಾದವರಿಂದಲೂ, ಸರ್ವೈಃ - ಸಮಸ್ತ, ಮರುದ್ಗಣೈಸ್ಸಹ-ಮರುದ್ಗಣಗಳಿಂದಲೂ ಒಡಗೂಡಿದ, ದೇವಾಃ-ದೇವತೆಗಳು,ಪಿತೃದೇವಾನ್-ಪಿತೃದೇವತೆಗಳನ್ನು ಕುರಿತು, ಉಪೇತ್ಯ-ಬಂದು; ಆಹುಃ-ಹೇಳಿದರು. ॥೫॥ ಶಕ್ರಃ-ದೇವೇಂದ್ರನು, ಹಿ-ಯಾವಕಾರಣ, ಅವೃಷಣಃ-ವೃಷಣಹೀನನಾಗಿ, ಕೃತಃ-ಮಾಡಲ್ಪಟ್ಟನೋ ಅಯಂಮೇಷಃ-ಈಮೆ ಷವು,ಸವೃಷಣಃ-ವೃಷಣಗಳಿಂದೊಡಗೂಡಿದೆಯೋ, ತಸ್ಮಾತ್ - ಆಕಾರಣ, ಮೇಷಸ್ಯ-ಕುರಿಯ, ವೃಷಣೌ-ವೃಷಣಗಳನ್ನು, ಗೃಹ್ಯ-ತೆಗದುಕೊಂಡು ಬಂದು, ಶಕ್ರಾಯ-ದೇವೇಂದ್ರನಿಗೆ, ಆಶು-ಜಾಗ್ರತೆಯಾಗಿ, ಪ್ರಯಚ್ಛಥ-ಕೊಡಿರಿ. ॥ ೬ ॥ ಅಫಲಃ-ವೃಷಣರಹಿತವಾಗಿ,ಕೃತಃ-ಮಾಡಲ್ಪಟ್ಟ,ಮೇಷಸ್ತು-ಕುರಿಯಾದರೆ, ಭವತಾಂ-ನಿಮಗೆ, ಹರ್ಷಣಾರ್ಥಾಯ - ಸಂತೋಷಾರ್ಥವಾಗಿ, ಪರಾಂ - ಬಹಳವಾದ, ತುಷ್ಟಿಂ-ಸಂತೋಷವನ್ನು, ಪ್ರದಾಸ್ಯತಿ-ಕೊಡುವುದು, ಮಾನವಾಃ - ಮನುಷ್ಯರು, ಯೇಚ- ಯಾರೋ,ತೇಚ-ಅವರೂ, ಅವೃಷಣಂ-ವೃಷಣರಹಿತವಾಗಿರುವ, ಮೇಷಂ-ಮೇಷವನ್ನು, ದಾಸ್ಯಂತಿ - ಕೊಡುವರು. ॥೭॥ ಅಗ್ನೇಃ-ಅಗ್ನಿಯ, ವಚನಂತು-ಮಾತನ್ನು, ಶೃತ್ವಾ-ಕೇಳಿ, ಪಿತೃದೇವಾಃ-ಪಿತೃದೇವತೆಗಳು, ಸಮಾಗತಾಃ-ಬಂದು, ಮೇಷವೃಷಣೌ - ಕುರಿಯ ಅಂಡಗಳನ್ನು, ಉತ್ಪಾಟ್ಯ-ಕಿತ್ತು, ಸಹಸ್ರಾಕ್ಷೇ-ದೇವೇಂದ್ರನಲ್ಲಿ, ನ್ಯವೇಶಯನ್-ಇರಿಸಿದರು ॥೮॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ತದಾಪ್ರಭೃತಿ-ಅದುಮೊದಲು, ಪಿತೃದೇವಾಃ ಪಿತೃಗಳೆಂಬದೇವತೆಗಳು, ಸಮಾಗತಾಃ - ಬಂದು, ಅಫಲಾನ್ -

---

ಎಂದನು. ॥೪॥ ಇಂತು ನುಡಿದ ದೇವೇಂದ್ರನ ನುಡಿಗಳನ್ನು ಕೇಳಿ ಅಗ್ನಿಯೇ ಮೊದಲಾದ ದೇವತೆಗಳು, ಪಿತೃದೇವತೆಗಳನ್ನು ಕುರಿತು "ಮಹಾತ್ಮರೆ! ಈ ಕುರಿಯು ಫಲಸಹಿತವಾಗಿರುವುದು. ನಮ್ಮ ಧೊರೆಯಾದ ಇಂದ್ರನಾದರೋ ಅಫಲನಾಗಿರುವನು. ಆದುದರಿಂದ ಈ ಕುರಿಯ ವೃಷಣಗಳನ್ನು ತೆಗೆದು ದೇವೇಂದ್ರನಿಗೆ ಕೊಡಿರಿ. ಇದು ಅಫಲವಾದರೂ ಮಹಾ ಸಂತೋಷವನ್ನುಂಟುಮಾಡುವುದು ಇದಲ್ಲದೆ ಇಂದಿನಿಂದ ಮಾನವರು ಅಫಲವಾದ ಮೇಷವನ್ನೇ ನಿಮ್ಮ ಪ್ರೀತಿಗೋಸುಗ ಕೊಡುವರು ಎಂದರು." ಆಗ ಪಿತೃದೇವತೆಗಳೆಲ್ಲರೂ ಒಟ್ಟುಗೂಡಿ ಮೇಷವೃಷಣಗಳನ್ನು ಕಿತ್ತು ಇಂದ್ರನಿಗೊಪ್ಪಿಸಿದರು. ಎಲೈ ರಾಮಚಂದ್ರನೆ! ಅಂದಿನಿಂದ ಪಿತೃದೇವತೆಗಳು ಅಫಲವಾದ ಮೇಷಗಳನ್ನು ಭುಜಿಸು

ಅಫಲಾನ್ ಭುಂಜತೇ ಮೇಷಾನ್ ಫಲೈಸ್ತೇಷಾಮಯೋಜಯನ್ ||೯|| ಇಂದ್ರಸ್ತು ಮೇಷವೃಷಣ ಸ್ತದಾಪ್ರಭೃತಿರಾಘವ || ಗೌತಮಸ್ಯ ಪ್ರಭಾವೇನ ತಪಸಶ್ಚ ಮಹಾತ್ಮನಃ ||೧೦|| ತದಾಗಚ್ಛ ಮಹಾತೇಜಾ ಆಶ್ರಮಂ ಪುಣ್ಯಕರ್ಮಣಃ|| ತಾರಯೈನಾಂ ಮಹಾಭಾಗಾಮಹಲ್ಯಾಂ ದೇವರೂಪಿಣೀಂ ||೧೧|| ವಿಶ್ವಾಮಿತ್ರವಚಶ್ಶ್ರುತ್ವಾ ರಾಘವಸ್ಸಹಲಕ್ಷ್ಮಣಃ || ವಿಶ್ವಾಮಿತ್ರಂ ಪುರಸ್ಕೃತ್ಯ ತಮಾಶ್ರಮಮಥಾವಿಶತ್ ||೧೨|| ದದರ್ಶಚ ಮಹಾಭಾಗಾಂ ತಪಸಾದ್ಯೋತಿತ ಪ್ರಭಾಂ || ಲೋಕೈರಪಿ ಸಮಾಗಮ್ಯ ದುರ್ನಿರೀಕ್ಷ್ಯಾಂ ಸುರಾಸುರೈಃ ||೧೩|| ಪ್ರಯತ್ನಾ ನ್ನಿರ್ಮಿತಾಂ ಧಾತ್ರಾ ದಿವ್ಯಾಂ ಮಾಯಾಮಯೀಮಿವ || ಸತುಷಾ

---

ಅಂಡರಹಿತಗಳಾದ, ಮೇಷಾನ್-ಕುರಿಗಳನ್ನು, ಭುಂಜತೇ-ಭೋಜನಮಾಡುವರು. ||೯|| ಹೇರಾಘವ-ಎಲೈ ಶ್ರೀರಾಮನ, ತದಾಪ್ರಭೃತಿ-ಅದು ಮೊದಲುಗೊಂಡು, ಮಹಾತ್ಮನಃ - ಮಹಾತ್ಮನಾದ, ಗೌತಮಸ್ಯ- ಗೌತಮಋಷಿಯ, ತಪಸಃ - ತಪಸ್ಸಿನ, ಪ್ರಭಾವೇನ - ಪ್ರಭಾವದಿಂದ, ಇಂದ್ರಸ್ತು-ಇಂದ್ರನೂ, ಮೇಷವೃಷಣಃ - ಮೇಷವೃಷಣಗಳಂತೆ ವೃಷಣಗಳುಳ್ಳವನು, ಅಭವತ್ - ಆದನು. ||೧೦|| ತತ್-ಆಕಾರಣ, ಹೇಮಹಾತೇಜಃ-ಎಲೈ ಬಹುತೇಜಸ್ಸುಳ್ಳವನೇ, ಪುಣ್ಯಕರ್ಮಣಃ-ಪುಣ್ಯಕರವಾದ ವ್ಯಾಪಾರವುಳ್ಳ ಗೌತಮಋಷಿಯ, ಆಶ್ರಮಂ - ಆಶ್ರಮವನ್ನು ಕುರಿತು, ಆಗಚ್ಛ ಒರುವವನಾಗು, ಮಹಾಭಾಗಾಂ- ಮಹಾಪುಣ್ಯಶಾಲಿಯಾದ, ದೇವರೂಪಿಣೀಂ-ದೇವತಾರೂಪದಂತೆ ರೂಪವುಳ್ಳ, ಏನಾಂ-ಈ, ಅಹಲ್ಯಾಂ -ಅಹಲ್ಯಾದೇವಿಯನ್ನು, ತಾರಯ-ಉದ್ಧರಿಸುವವನಾಗು ||೧೧|| ವಿಶ್ವಾಮಿತ್ರವಚಃ-ವಿಶ್ವಾಮಿತ್ರನಮಾತನ್ನು , ಶ್ರುತ್ವಾ-ಕೇಳಿ,ರಾಘವಃ-ಶ್ರೀರಾಮನು, ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಪುರಸ್ಕೃತ್ಯ - ಮುಂದುಮಾಡಿಕೊಂಡು, ಅಥ-ಬಳಿಕ, ತಮಾಶ್ರಮಂ-ಆ ಆಶ್ರಮವನ್ನು, ಆವಿಶತ್-ಹೊಕ್ಕನು. ||೧೨|| ಮಹಾಭಾಗಾಂ-ಮಹಾಪುಣ್ಯವಂತಳಾದ, ತಪಸಾ-ಉಪವಾಸ ವ್ರತಾದಿ ತಪಸ್ಸಿನಿಂದ, ದ್ಯೋತಿತಪ್ರಭಾಂ-ದ್ಯೋತಿತ-ಹೊಳೆಯುತ್ತಿರುವ, ಪ್ರಭಾಂ-ಕಾಂತಿಯುಳ್ಳ, ಲೋಕೈರಪಿ-ಜನರಿಂದಲೂ, ಸುರಾಸುರೈಃ-ದೇವರಾಕ್ಷಸರಿಂದಲೂ, ಸಮಾಗಮ್ಯ-ಬಂದು, ದುರ್ನಿರೀಕ್ಷ್ಯಾಂ-ನೋಡಲು ಅಶಕ್ಯಳಾದ, ಧಾತ್ರಾ-ಬ್ರಹ್ಮದೇವನ, ಪ್ರಯತ್ನಾತ್ - ಪ್ರಯತ್ನದಿಂದ, ನಿರ್ಮಿತಾಂ - ನಿರ್ಮಾಣ ಮಾಡಲ್ಪಟ್ಟ,

---

ವರು. ಇಂದ್ರನು ಈ ರೀತಿ ಗೌತಮಮುನಿಯ ಪ್ರಭಾವದಿಂದ ಮೇಷವೃಷಣನಾದನು. ||೫-೧೦|| "ಎಲೈ ತೇಜಸ್ವಿಯೇ! ಪುಣ್ಯಕರವಾದ ಈ ಗೌತಮಋಷಿಯ ಆಶ್ರಮವನ್ನು ಹೊಕ್ಕು ಮಹಾ ಭಾಗ್ಯವತಿಯೂ, ದೇವತಾ ಸಮಾನವಾದ ರೂಪುಳ್ಳವಳೂ ಆದ ಅಹಲ್ಯೆಯನ್ನುದ್ಧಾರಮಾಡು." ||೧೧|| ವಿಶ್ವಾಮಿತ್ರನೀರೀತಿ ನುಡಿಯಲು ರಾಮನು ಲಕ್ಷ್ಮಣನೊಡಗೂಡಿ ಆ ಆಶ್ರಮವನ್ನು ಹೊಕ್ಕು ಮಹಾಭಾಗ್ಯವಂತಳೂ, ಉಪವಾಸ ವ್ರತಾದಿಗಳಿಂದ ಹೊಳೆವ ಕಾಂತಿಯುಳ್ಳವಳೂ, ಮಾನವರಿಂದಲೂ ಸುರಾಸುರರಿಂದಲೂ ನೋಡಲಸದಳಳೂ, ಬ್ರಹ್ಮದೇವನ ಪ್ರಯತ್ನದಿಂದ ನಿರ್ಮಿತವಾದ ದೇವರೂಪವಾದ ಮಾಯೆಯಂತಿರುವವಳೂ, ಮಂಜಿನಿಂದಾವೃತಳಾದವಳೂ, ಮೇಘಗಳಿಂದೊಡಗೂಡಿದ ಸಂಪೂರ್ಣ ಚಂದ್ರಕಾಂತಿಯಂತಿರು

ರಾವೃತಾಂ ಸಾಭ್ರಾಂ ಪೂರ್ಣಚಂದ್ರ ಪ್ರಭಾಮಿವ ||೧೪|| (ಧೂಮೇನಾಪಿ ಪರೀತಾಂಗೀಂ ದೀಪ್ತಾಮಗ್ನಿ ಶಿಖಾಮಿವ || ) ಮಧ್ಯೇಂಭಸೋ ದುರಾಧರ್ಷಾಂ ದೀಪ್ತಾಂ ಸೂರ್ಯ ಪ್ರಭಾಮಿವ || ಸಾಹಿ ಗೌತಮವಾಕ್ಯೇನ ದುರ್ನಿರೀಕ್ಷ್ಯಾ ಬಭೂವಹ ||೧೫|| ತ್ರಯಾಣಾಮಪಿ ಲೋಕಾನಾಂ ಯಾವದ್ರಾಮಸ್ಯ ದರ್ಶನಂ || ಶಾಪಸ್ಯಾಂತ ಮುಪಾಗಮ್ಯ ತೇಷಾಂ ದರ್ಶನಮಾಗತಾ ||೧೬|| ರಾಘವೌತು ತತಸ್ತಸ್ಯಾಃ ಪಾದೌ ಜಗೃಹತುಸ್ತದಾ || ಸ್ಮರಂತೀ ಗೌತಮ ವಚಃ ಪ್ರತಿಜಗ್ರಾಹ ಸಾಚತೌ ||೧೭|| ಪಾದ್ಯಮರ್ಘ್ಯಂ ತಥಾತಿಥ್ಯಂ

ದಿವ್ಯಾಂ-ದೇವತಾರೂಪವಾದ, ಮಾಯಾಮಯೀಮಿವಸ್ಥಿತಾಂ- ಮಾಯಾಸ್ವರೂಪದಂತಿರುವ, ಸತುಷಾರಾವೃತಾಂ-ಮಂಜಿನಿಂದ ಆವರಿಸಲ್ಪಟ್ಟ, ಸಾಭ್ರಾಂ- ಮೇಘದಿಂದೊಡಗೂಡಿದ, ಪೂರ್ಣಚಂದ್ರಪ್ರಭಾಮಿವ -ಸಂಪೂರ್ಣಚಂದ್ರಕಾಂತಿಯಂತೆ ಕಾಂತಿಯುಳ್ಳ, (೧)( ಧೂಮೇನಾಪಿ - ಹೊಗೆಯಿಂದಲೂ, ಪರೀತಾಂಗೀಂ- ಆವೃತವಾದದೇಹವುಳ್ಳವಳಾಗಿಯೂ, ಅಗ್ನಿಶಿಖಾಮಿವ-ಯಜ್ಞೇಶ್ವರನ ಶಿಖೆಯಂತೆ, ದೀಪ್ತಾಂ - ಪ್ರಕಾಶಿಸುತ್ತಿರುವ,) ಅಂಭಸಃ - ಉದಕದ, ಮಧ್ಯೇ - ಮಧ್ಯದಲ್ಲಿ, ದುರಾಧರ್ಷಾಂ-ತಿರಸ್ಕರಿಸಲಸದಳವಾದ,ಸೂರ್ಯಪ್ರಭಾಮಿವ-ಸೂರ್ಯನ ಪ್ರಭೆಯಂತೆ, ದೀಪ್ತಾಂ ಹೊಳೆಯುತ್ತಿರುವ ಅಹಲ್ಯಾದೇವಿಯನ್ನು, ಸಃ - ಆ ಶ್ರೀರಾಮನು, ದದರ್ಶ - ಕಂಡನು.||೧೩-೧೪|| ಸಾಹಿ-ಆ ಅಹಲ್ಯಾದೇವಿಯಾದರೇ, ಗೌತಮವಾಕ್ಯೇನ ಗೌತಮನಮಾತಿನಿಂದ, ತ್ರಯಾಣಾಮಪಿ-ಮೂರಾದ, ಲೋಕಾನಾಂ-ಸ್ವರ್ಗ,ಮರ್ತ್ಯ,ಪಾತಾಳವಾಸಿಗಳಿಗೆ, ರಾಮಸ್ಯ-ಶ್ರೀರಾಮನ, ಯಾವದ್ದರ್ಶನಂ-ದರ್ಶನ ಪರಿಯಂತವೂ, ದುರ್ನಿರೀಕ್ಷ್ಯಾ-ನಿರೀಕ್ಷಿಸಲಸಾಧ್ಯಳು, ಬಭೂವ - ಆದಳು, ಶಾಪಸ್ಯ-ಶಾಪದ, ಅಂತಂ - ತುದಿಯನ್ನು, ಉಪಾಗಮ್ಯ - ಹೊಂದಿ, ತೇಷಾಂ - ಆ ವಿಶ್ವಾಮಿತ್ರ ರಾಮಲಕ್ಷ್ಮಣರಿಗೆ, ದರ್ಶನಂ - ದರ್ಶನವನ್ನು, ಆಗತಾ - ಹೊಂದಿದವಳಾದಳು ||೧೫-೧೬|| ತತಃ-ಬಳಿಕ, ರಾಘವೌತು - ಶ್ರೀರಾಮಲಕ್ಷ್ಮಣರೂ, ತದಾ - ಆಗ, ತಸ್ಯಾಃ-ಆ ಅಹಲ್ಯಾ ದೇವಿಯ, ಪಾದೌ - ಪಾದಗಳನ್ನು, ಜಗೃಹತುಃ - ಗ್ರಹಿಸಿದರು, ಸಾಚ - ಆ ಅಹಲ್ಯಾದೇವಿಯೂ, ಗೌತಮವಚಃ - ಗೌತಮ ಋಷಿಯ ಮಾತನ್ನು, ಸ್ಮರಂತೀ - ಸ್ಮರಣೆಮಾಡಿ, ತೌ - ರಾಮಲಕ್ಷ್ಮಣರನ್ನು, ಪ್ರತಿಜಗ್ರಾಹ - ಇದಿರ್ಗೊಂಡಳು, ||೧೭|| ಸುಸಮಾಹಿತಾ-ಸಮಾಧಾನ ಚಿತ್ತಳಾಗಿ, ಪಾದ್ಯಂ-

ವವಳೂ, ಜಲಮಧ್ಯದಲ್ಲಿ ರಾರಾಜಿಸುವ ಸೂರ್ಯಪ್ರಭೆಯಂತಿರುವವಳೂ ಆದ ಅಹಲ್ಯಾದೇವಿಯನ್ನು ಕಂಡವನಾದನು. ||೧೪|| ಈ ಗೌತಮ ಸತಿಯು ರಾಮದರ್ಶನವಾಗುವವರೆವಿಗೂ, ಮೂರುಲೋಕಗಳಲ್ಲಿರುವವರಿಗೂ ನೋಡಲಸದಳವಾಗಿದ್ದಳು. ಶಾಪದ ಅಂತ್ಯಕಾಲವನ್ನು ಹೊಂದಿದ ಆಕೆಯು ಶ್ರೀರಘುನಾಥನ ದರ್ಶನವಾದೊಡನೆಯೇ ದೃಗ್ಗೋಚರಳಾದಳು. ಆ ಬಳಿಕ ರಾಮಲಕ್ಷ್ಮಣರು ಆಕೆಯ ಪಾದಗಳಿಗೆ ವಂದನೆಯನ್ನು ಮಾಡಿದರು. ಅಹಲ್ಯೆಯೂ ಸಹ, ಪತಿಯಾದ ಗೌತಮನ ನುಡಿಗಳನ್ನು ಜ್ಞಾಪಿಸಿಕೊಂಡು ಆ ರಾಮಲಕ್ಷ್ಮಣರನ್ನುಪಚರಿಸಿದಳು. ||೧೭|| ಇಂತು ಅಪ್ರಮುಕ್ತಳಾದ ಆ ಗೌತಮಪತ್ನಿಯು ಅರ್ಘ್ಯಪಾದ್ಯಾದಿಗಳಿಂದ

ಟಿಪ್ಪಣಿ. (೧) ಈ ಪಾದಕ್ಕೆ ವ್ಯಾಖ್ಯಾನಕಾರರೂ, ಹಿಂದಿನ ಗ್ರಂಥಕರ್ತರೂ, ಅರ್ಥವನ್ನು ಬರೆಯದಿದ್ದರೂ ನನಗೆ ಇದು ಮುಖ್ಯವಾದುದೆಂದು ತೋರಿದ್ದರಿಂದ ಟೀಕಿಸಿರುತ್ತೇನೆ. ಇದನ್ನು ಬರೆವುದರಿಂದ ಶಾಪಗ್ರಸ್ತಳಾದ ಅಹಲ್ಯೆಯ ವರ್ಣನ ಮತ್ತಷ್ಟು ಚನ್ನದಾಗುವುದು.

ಚಕಾರ ಸು ಸಮಾಹಿತಾ || ಪ್ರತಿಜಗ್ರಾಹ ಕಾಕುತ್ಸ್ಥೋ ವಿಧಿದೃಷ್ಟೇನ ಕರ್ಮಣಾ ||೧೮|| ಪುಷ್ಪವೃಷ್ಟಿ ರ್ಮಹತ್ಯಾಸೀದ್ದೇವದುಂದುಭಿ ನಿಸ್ಸ್ವನೈಃ || ಗಂಧರ್ವಾಪ್ಸರಸಾಂಚಾಪಿ ಮಹಾನಾಸೀತ್ಸಮಾಗಮಃ || ೧೯ || ಸಾಧು ಸಾಧ್ವಿತಿ ದೇವಾಸ್ತಾಮಹಲ್ಯಾಂ ಸಮಪೂಜಯನ್ || ತಪೋಬಲ ವಿಶುದ್ಧಾಂಗೀಂ ಗೌತಮಸ್ಯ ವಶಾನುಗಾಂ || ೨೦ || ಗೌತಮೋಪಿ ಮಹಾತೇಜಾ ಅಹಲ್ಯಾಸಹಿತಸ್ಸುಖೀ || ರಾಮಂ ಸಂಪೂಜ್ಯ ವಿಧಿವತ್ತಪಸ್ತೇಪೇ ಮಹಾತಪಾಃ ||೨೧|| ರಾಮೋಪಿ ಪರಮಾಂ ಪೂಜಾಂ ಗೌತಮಸ್ಯ ಮಹಾಮುನೇಃ || ಸಕಾಶಾದ್ವಿಧಿವತ್ಪ್ರಾಪ್ಯ ಜಗಾಮ ಮಿಥಿಲಾಂತತಃ ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಪಂಚಾಶಸ್ಸರ್ಗಃ.

ಪಾದ್ಯವನ್ನು, ಅರ್ಘ್ಯಂ-ಅರ್ಘ್ಯವನ್ನು, ತಥಾ-ಹಾಗೆಯೇ, ಆತಿಥ್ಯಂ-ಅತಿಥಿ ಸತ್ಕಾರವನ್ನು, ಚಕಾರ-ಮಾಡಿದಳು, ಕಾಕುತ್ಸ್ಥಃ - ಶ್ರೀರಾಮನು, ವಿಧಿದೃಷ್ಟೇನ - ಶಾಸ್ತ್ರದೃಷ್ಟವಾದ, ಕರ್ಮಣಾ-ಕರ್ಮದಿಂದ, ಪ್ರತಿಜಗ್ರಾಹ - ಪ್ರತಿಗ್ರಹಿಸಿದನು, ಮಹತೀ - ಬಹಳವಾದ, ಪುಷ್ಪವೃಷ್ಟಿಃ-ಹುವ್ವಿನ ಮಳೆಯು, ದೇವದುಂದುಭಿನಿಸ್ಸ್ವನೈಸ್ಸಹ - ದೇವತಾ ಭೇರಿಧ್ವನಿಗಳೊಡನೆ, ಆಸೀತ್-ಆಯಿತು, ಗಂಧರ್ವಾಪ್ಸರಸಾಂಚಾಪಿ-ದೇವಗಾಯಕರ,ಮತ್ತುಅಪ್ಸರಸ್ತ್ರೀಯರ, ಮಹಾನ್-ಬಹಳವಾದ,ಸಮಾಗಮಃ - ಗಾನ ನರ್ತನ ರೂಪವಾದ ಬರುವಿಕೆಯು, ಆಸೀತ್ -ಆಯಿತು, ||೧೮-೧೯|| ದೇವಾಃ-ದೇವತೆಗಳು, ತಪೋಬಲವಿಶುದ್ಧಾಂಗೀಂ - ಅನಶನವ್ರತರೂಪ ತಪಸ್ಸಿನ ಬಲದಿಂದ ಪರಿಶುದ್ಧವಾದ ಶರೀರವುಳ್ಳ, ಗೌತಮಸ್ಯ - ಗೌತಮ ಋಷಿಯ, ವಶಾನುಗಾಂ - ಸ್ವಾಧೀನವನ್ನು ಹೊಂದಿರುವ, ತಾಮಹಲ್ಯಾಂ - ಆ ಅಹಲ್ಯಾ ದೇವಿಯನ್ನು, ಸಾಧುಸಾಧ್ವಿತಿ - ಸಾಧುಸಾಧುವೆಂದು, ಸಮಪೂಜಯನ್ - ಪೂಜೆಮಾಡಿದರು. || ೨೦ || ಮಹಾತೇಜಾ - ಮಹಾ ತೇಜಸ್ವಿಯಾದ, ಮಹಾತಪಾಃ-ಮಹಾ ತಪಸ್ವಿಯಾದ, ಗೌತಮೋಪಿ - ಗೌತಮನೂ, ಅಹಲ್ಯಾ ಸಹಿತಃ - ಅಹಲ್ಯಾಸಮೇತನಾಗಿ, ಸುಖೀ - ಸೌಖ್ಯವುಳ್ಳವನಾಗಿ, ರಾಮಂ - ಶ್ರೀರಾಮನನ್ನು, ವಿಧಿವತ್ - ಯಥಾ ಶಾಸ್ತ್ರವಾಗಿ, ಸಂಪೂಜ್ಯ - ಪೂಜೆಮಾಡಿ, ತಪಃ - ತಪಸ್ಸನ್ನು, ತೇಪೇ - ಸಿದನು. || ೨೧ || ರಾಮೋಪಿ - ಆಶ್ರೀರಾಮನೂ ಕೂಡ, ಮಹಾಮುನೇಃ - ಮಹರ್ಷಿಯಾದ, ಗೌತಮಸ್ಯ - ಗೌತಮನ, ಸಕಾಶಾತ್-ಸಮೀಪದಿಂದ, ವಿಧಿವತ್ - ಯಥಾಶಾಸ್ತ್ರವಾಗಿ, ಪರಮಾಂ - ಉತ್ಕೃಷ್ಟವಾದ, ಪೂಜಾಂ-ಪೂಜೆಯನ್ನು, ಪ್ರಾಪ್ಯ - ಹೊಂದಿ, ತತಃ - ಬಳಿಕ, ಮಿಥಿಲಾಂ - ಮಿಥಿಲಾ ಪಟ್ಟಣವನ್ನು ಕುರಿತು, ಜಗಾಮ - ತೆರಳಿದನು, ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಪಂಚಾಶಸ್ಸರ್ಗಃ.

ಅತಿಥ್ಯವನ್ನು ಮಾಡಲು ರಾಮಲಕ್ಷ್ಮಣರು ಅದನ್ನು ವಿಧಿವತ್ತಾಗಿ ಪರಿಗ್ರಹಿಸಿದರು. ಆಗ ಬಹಳವಾದ ಪುಷ್ಪವೃಷ್ಟಿಯಾಯಿತು; ದೇವದುಂದುಭಿಗಳು ಭೋರ್ಗರೆದವು; ಗಂಧರ್ವರ ಮತ್ತು ಅಪ್ಸರೆಯರ ಸಮಾಗಮವುಂಟಾಯಿತು, ದೇವತೆಗಳೆಲ್ಲರೂ ತಪೋಬಲದಿಂದ ಪರಿಶುದ್ಧವಾದ ಅವಯವಗಳುಳ್ಳವಳೂ, ಗೌತಮನ ವಶವರ್ತಿನಿಯಾದವಳೂ ಆದ ಅಹಲ್ಯೆಯನ್ನು "ಸಾಧು ! ಸಾಧು !!" ಎಂದು ಗೌರವಿಸಿದವರಾದರು. ಮಹಾ ಮನಸ್ವಿಯಾದ ಗೌತಮನೂ ಸಹ ಅಹಲ್ಯೆಯಿಂದೊಡಗೂಡಿದವನಾಗಿ ಸುಖವನ್ನು ಹೊಂದಿ ಶ್ರೀರಾಮನನ್ನು ಶಾಸ್ತ್ರವಿಧಿಯಿಂದ ಪೂಜಿಸಿ, ತಪಸ್ಸುಮಾಡಲು ಹೊರಟುಹೋದನು. ಶ್ರೀರಾಮಚಂದ್ರನು ಗೌತಮನ ಶ್ರೇಷ್ಠವಾದ ಸತ್ಕಾರವನ್ನು ಶಾಸ್ತ್ರೋಕ್ತ ರೀತಿಯಿಂದ ಸ್ವೀಕರಿಸಿ ಮಿಥಿಲೆಯನ್ನು ಕುರಿತು ಹೊರಟನು. ||೨೨||

ಇಂತಿದು ಅಹಲ್ಯಾ ಶಾಪವಿಮೋಚನ ವೃತ್ತಾಂತ ವರ್ಣನವೆಂಬ
ನಲವತ್ತೊಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚಾಶಸ್ಸರ್ಗಃ.



ತತಃ ಪ್ರಾಗುತ್ತರಾಂಗತ್ವಾ ರಾಮ ಸ್ಸೌಮಿತ್ರಿಣಾ ಸಹ || ವಿಶ್ವಾಮಿತ್ರಂ ಪುರಸ್ಕೃತ್ಯ ಯಜ್ಞವಾಟ ಮುಪಾಗಮತ್ || ೧ || ರಾಮಸ್ತು ಮುನಿ ಶಾರ್ದೂಲಮುವಾಚ ಸಹಲಕ್ಷ್ಮಣಃ || ಸಾಧ್ವೀ ಯಜ್ಞ ಸಮೃದ್ಧಿರ್ಹಿ ಜನಕಸ್ಯ ಮಹಾತ್ಮನಃ || ೨ || ಬಹೂನೀಹ ಸಹಸ್ರಾಣಿ ನಾನಾದೇಶ ನಿವಾಸಿನಾಂ || ಬ್ರಾಹ್ಮಣಾನಾಂ ಮಹಾಭಾಗ ವೇದಾಧ್ಯಯನ ಶಾಲಿನಾಂ || ೩ || ಋಷಿ ವಾಟಾಶ್ಚ ದೃಶ್ಯಂತೇ ಶಕಟೀಶತಸಂಕುಲಾಃ || ದೇಶೋ ವಿಧೀಯತಾಂ

---

ತತಃ - ಬಳಿಕ, ರಾಮಃ - ಶ್ರೀರಾಮನು, ಸೌಮಿತ್ರಿಣಾಸಹ - ಲಕ್ಷ್ಮಣನೊಡನೆ, ಪ್ರಾಗುತ್ತರಾಂ - ಪೂರ್ವೋತ್ತರ ದಿಕ್ಕುಗಳ ಮಧ್ಯವರ್ತಿಯಾದ ಈಶಾನ್ಯ ದಿಕ್ಕನ್ನು ಕುರಿತು, ಗತ್ವಾ- ಹೋಗಿ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಪುರಸ್ಕೃತ್ಯ - ಮುಂದೆ ಮಾಡಿಕೊಂಡು, ಯಜ್ಞವಾಟಂ - ಯಜ್ಞಶಾಲೆಯನ್ನು ಕುರಿತು, ಉಪಾಗಮತ್ - ಬಂದನು. || ೧ || ರಾಮಸ್ತು- ಶ್ರೀರಾಮನು, ಸಹಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿ, ಮುನಿಶಾರ್ದೂಲಂ - ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಉವಾಚ - ಹೇಳಿದನು, ಹೇಮಹಾಭಾಗ - ಎಲೈ ಪುಣ್ಯಶಾಲಿಯೇ, ಮಹಾತ್ಮನಃ - ಮಹಾನುಭಾವನಾದ, ಜನಕಸ್ಯ - ಜನಕರಾಯನ, ಯಜ್ಞಸಮೃದ್ಧಿಃ - ಯಜ್ಞಸಂಭಾರ ಸಂಪತ್ತಿಯು, ಸಾಧ್ವೀ - ಚನ್ನಾಗಿರುವುದಷ್ಟೆ, ನಾನಾದೇಶನಿವಾಸಿನಾಂ - ಅನೇಕ ದೇಶಗಳಲ್ಲಿ ವಾಸಮಾಡಿಕೊಂಡಿರುವ, ವೇದಾಧ್ಯಯನಶಾಲಿನಾಂ - ವೇದ ಪಠನದಿಂದೊಪ್ಪುತ್ತಿರುವ, ಬ್ರಾಹ್ಮಣಾನಾಂ - ಬ್ರಾಹ್ಮಣರ, ಬಹೂನಿ - ಅನೇಕ, ಸಹಸ್ರಾಣಿ - ಸಹಸ್ರಗಳು, ದೃಶ್ಯಂತೇ - ಕಾಣಲ್ಪಡುತ್ತವಷ್ಟೆ, || ೨-೩ || ಋಷಿವಾಟಾಶ್ಚ - ಋಷಿಗಳ ನಿವಾಸಸ್ಥಾನಗಳೂ, ಶಕಟೀಶತಸಂಕುಲಾಃ- ನೂರಾರು ಭಂಡಿಗಳಿಂದ ತುಂಬಿದವುಗಳಾಗಿ, ದೃಶ್ಯಂತೇ - ಕಾಣಲ್ಪಡುತ್ತವೆ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ವಯಂ - ನಾವು, ಯತ್ರ - ಯಾವ ಸ್ಥಳದಲ್ಲಿ, ವತ್ಸ್ಯಾಮಹೇ- ಇರುವೆವೋ, ತತ್ರ-

---

ಆ ಬಳಿಕ ಲಕ್ಷ್ಮಣನಿಂದೊಡಗೂಡಿದ ರಾಮನು ಈಶಾನ್ಯದಿಕ್ಕನ್ನು ಕುರಿತು ಹೊರಟು, ವಿಶ್ವಾಮಿತ್ರನನ್ನು ಮುಂದಿರಿಸಿಕೊಂಡು ಜನಕರಾಯನ ಯಜ್ಞವಾಟವನ್ನು ಸೇರಿದನು.||೧||ಆಗ ರಾಮನು ವಿಶ್ವಾಮಿತ್ರಮುನಿಯನ್ನು ಕುರಿತು "ಮುನಿಯೆ ! ಮಹಾತ್ಮನಾದ ಜನಕರಾಯನ ಯಾಗ ಸಮೃದ್ಧಿಯು ಸ್ತೋತ್ರಾರ್ಹವಾದುದು.||೨||ಅನೇಕ ದೇಶಗಳಿಂದ ಸಹಸ್ರಾರುಮಂದಿ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರು ಇಲ್ಲಿಗೆ ಬಂದಿರುವರು. ||೩|| ನೂರಾರು ಭಂಡಿಗಳ ಗುಂಪುಗಳಿಂದೊಡಗೂಡಿದ ಋಷಿಗಳ ವಾಸಸ್ಥಾನಗಳೂ ಕಾಣುತಿವೆ.

ಬ್ರೂಹ್ಯರ್ಹ ಯತ್ರವತ್ಸ್ಯಾಮಹೇವಯಂ ॥ ೪ ॥ ರಾಮಸ್ಯ ವಚನಂ ಶ್ರುತ್ವಾ ವಿಶ್ವಾಮಿತ್ರೋ ಮಹಾಮುನಿಃ ॥ ನಿವೇಶಮಕರೋದ್ದೇಶೇ ವಿವಿಕ್ತೇ ಸಲಿಲಾಯುತೇ ॥ ೫ ॥ ವಿಶ್ವಾಮಿತ್ರಮನುಪ್ರಾಪ್ತಂ ಶ್ರುತ್ವಾ ಸ ನೃಪತಿ ಸ್ತದಾ ॥ಶತಾನಂದಂಪುರಸ್ಕೃತ್ಯ ಪುರೋಹಿತಮನಿಂದಿತಂ॥೬॥ಪ್ರತ್ಯುಜ್ಜಗಾಮ ಸಹಸಾ ವಿನಯೇನ ಸಮನ್ವಿತಃ ॥ ಋತ್ವಿಜೋಪಿ ಮಹಾತ್ಮಾನ ಸ್ತ್ವರ್ಘ್ಯ ಮಾದಾಯಸತ್ವರಂ॥೭॥ವಿಶ್ವಾಮಿತ್ರಾಯ ಧರ್ಮೇಣ ದದುರ್ಮಂತ್ರ ಪುರಸ್ಕೃತಂ॥ ಪ್ರತಿಗೃಹ್ಯಚ ತಾಂ ಪೂಜಾಂ ಜನಕಸ್ಯ ಮಹಾತ್ಮನಃ ॥೮॥ಪಪ್ರಚ್ಛ ಕುಶಲಂ

---

ಆ ಸ್ಥಳದಲ್ಲಿ, ದೇಶಃ - ನಿವಾಸಸ್ಥಾನವು, ವಿಧೀಯತಾಂ - ಮಾಡಲ್ಪಡಲಿ, ॥೪॥ ಮಹಾಮುನಿಃ- ಮಹಾ ಋಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ರಾಮಸ್ಯ - ಶ್ರೀರಾಮನ, ವಚನಂ—ಮಾತನ್ನು, ಶ್ರುತ್ವಾ - ಕೇಳಿ, ವಿವಿಕ್ತೇ - ಜನಗಳಿಲ್ಲದಿರುವ, ಸಲಿಲಾಯುತೇ-ಉದಕದಿಂದ ಕೂಡಿರುವ, ದೇಶೇ - ಪ್ರದೇಶದಲ್ಲಿ, ನಿವೇಶಂ - ವಾಸವನ್ನು, ಅಕರೋತ್ - ಮಾಡಿದನು. ॥೫॥ ತದಾ-ಆಗ, ಸನರಪತಿಃ - ಆ ಜನಕರಾಯನು, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು,ಅನುಪ್ರಾಪ್ತಂ-ಬಂರುವನೆಂದು ಶ್ರುತ್ವಾ - ಕೇಳಿ, ಅನಿಂದಿತಂ - ದೋಷರಹಿತನಾದ, ಶತಾನಂದಂ - ಶತಾನಂದನೆಂಬ, ಪುರೋಹಿತಂ- ಪುರೋಹಿತನನ್ನು, ಪುರಸ್ಕೃತ್ಯ - ಮುಂದುಮಾಡಿ,॥೬॥ಸಹಸಾ - ಬೇಗನೆ, ವಿನಯೇನ ವಿನಯದಿಂದ, ಸಮನ್ವಿತಃ - ಕೂಡಿ, ಪ್ರತ್ಯುಜ್ಜಗಾಮ - ಎದುರುಗೊಂಡನು. ಮಹಾತ್ಮಾನಃ - ಮಹಾತ್ಮರಾದ, ಋತ್ವಿಜೋಪಿ - ಋತ್ವಿಕ್ಕುಗಳೂ, ಸತ್ವರಂ-ಜಾಗ್ರತೆಯಾಗಿ, ಅರ್ಘ್ಯಂ-ಪೂಜಾದ್ರವ್ಯವನ್ನು, ಆದಾಯ - ತೆಗೆದುಕೊಂಡು,॥೭॥ವಿಶ್ವಾಮಿತ್ರಾಯ - ವಿಶ್ವಾಮಿತ್ರನಿಗೆ, ಧರ್ಮೇಣ - ಧರ್ಮದಿಂದ, ಮಂತ್ರಪುರಸ್ಕೃತಂ- ಮಂತ್ರೋಚ್ಚಾರಣ ಪೂರ್ವಕವಾಗಿ, ದದುಃ - ಕೊಟ್ಟರು, ಮಹಾತ್ಮನಃ - ಮಹಾ ಮನಸ್ವಿಯಾದ, ಜನಕಸ್ಯ - ಜನಕ ರಾಯನ, ತಾಂಪೂಜಾಂಚ - ಆ ಪೂಜೆಯನ್ನು, ಪ್ರತಿಗೃಹ್ಯ - ಸ್ವೀಕರಿಸಿ, ॥೮॥ ರಾಜ್ಞಃ-ಜನಕರಾಯನಿಗೆ, ಕುಶಲಂ - ಕ್ಷೇಮವನ್ನೂ, ಯಜ್ಞಸ್ಯ-ಯಜ್ಞಕ್ಕೆ

---

ನಾವೆಲ್ಲಿ ವಾಸಮಾಡಬೇಕೋ ಆ ಸ್ಥಳವು ಹೇಳಲ್ಪಡಲಿ” ॥೪॥ ಇಂತು ನುಡಿದ ಶ್ರೀ ರಾಮಚಂದ್ರನ ನುಡಿಗಳನ್ನು ಕೇಳಿದ ವಿಶ್ವಾಮಿತ್ರಮುನಿಯು ಜನಸಂದಣಿಯಿಲ್ಲದಿರುವುದಾಗಿಯೂ, ಜಲಪ್ರದೇಶವಾಗಿಯೂ ಇರುವ ಒಂದು ಸ್ಥಳವನ್ನು ವಾಸಕ್ಕಾಗಿ ಏರ್ಪಡಿಸಿದನು. ಆ ಬಳಿಕ ವಿಶ್ವಾಮಿತ್ರನು ಬಂದಿರುವ ವಿಷಯವನ್ನು ಕೇಳಿದ ಜನಕರಾಯನು, ಪುರೋಹಿತನೂ, ನಿರ್ದೋಷ್ಯನೂ ಆದ ಶತಾನಂದನನ್ನು ಮುಂದಿರಿಸಿಕೊಂಡು, ಜಾಗ್ರತೆಯಿಂದ, ಬಹು ವಿನಯದಿಂದೊಡಗೂಡಿದವನಾಗಿ ಇದುರ್ಗೊಂಡನು. ಆ ಯಾಗಶಾಲೆಯಲ್ಲಿದ್ದ ಋತ್ವಿಜರೆಲ್ಲರೂ ಅರ್ಘ್ಯಪಾದ್ಯಾದಿಗಳನ್ನು ತೆಗೆದುಕೊಂಡು ವಿಶ್ವಾಮಿತ್ರಮುನಿಪುಂಗವನಿಗೆ ಶಾಸ್ತ್ರೋಕ್ತವಾಗಿ ಸಮರ್ಪಿಸಿದವರಾದರು. ॥೫ ೭॥ ಆಗಲಾ ವಿಶ್ವಾಮಿತ್ರನು ಜನಕರಾಯನ ಪೂಜೆಯನ್ನು ಪರಿಗ್ರಹಿಸಿ, ಆತನ ಮತ್ತು ಆತನ ಯಜ್ಞದ ಕ್ಷೇಮ ಸಮಾಚಾರವನ್ನು ಕೇಳಿ, ಉಪಾಧ್ಯಾಯ, ಋತ್ವಿಕ್ಕುಗಳೇ ಮೊದಲಾದವರನ್ನು ಅವರವರ ಯೋಗ್ಯತೆಗನುಸಾರ

ರಾಜ್ಞೋ ಯಜ್ಞಸ್ಯಚ ನಿರಾಮಯಂ ||೮|| ಸತಾಂಶ್ಚಾಪಿ ಮುನೀನ್ದೃಷ್ಟ್ವಾ
ಸೋಪಾಧ್ಯಾಯ ಪುರೋಧಸಃ || ಯಥಾ ನ್ಯಾಯಂ ತತಸ್ಸರ್ವೈ ಸ್ಸಮಾಗಚ್ಛ
ತ್ಪ್ರಹೃಷ್ಟವತ್ ||೯|| ಅಥ ರಾಜಾ ಮುನಿಶ್ರೇಷ್ಠಂ ಕೃತಾಂಜಲಿ ರಭಾ
ಷತ || ಆಸನೇ ಭಗವಾನಾಸ್ತಾಂ ಸಹೈಭಿ ರ್ಮುನಿಪುಂಗವೈಃ ||೧೦|| ಜನ
ಕಸ್ಯ ವಚಶ್ಶ್ರುತ್ವಾ ನಿಷಸಾದ ಮಹಾಮುನಿಃ || ಪುರೋಧಾ ಋತ್ವಿಜ
ಶ್ಚೈವ ರಾಜಾ ಚ ಸಹ ಮಂತ್ರಿಭಿಃ ||೧೧|| ಆಸನೇಷು ಯಥಾ ನ್ಯಾಯ
ಮುಪವಿಷ್ಟಾ ಸಮಂತತಃ || ದೃಷ್ಟ್ವಾ ಸ ನೃಪತಿಸ್ತತ್ರ ವಿಶ್ವಾಮಿತ್ರ ಮಥಾ

---

ನಿರಾಮಯಂ - ಬಾಧೆಯಿಲ್ಲದಿರುವಿಕೆಯನ್ನು, ಪಪ್ರಚ್ಛ - ಕೇಳಿದನು. ||೮|| ಸಃ - ಆ ವಿಶ್ವಾಮಿತ್ರನು, ಸೋಪಾಧ್ಯಾಯ ಪುರೋಧಸಃ - ಉಪಾಧ್ಯಾಯ ಪುರೋಹಿತರಿಂದೊಡಗೂಡಿ, ತಾನ್ ಮುನೀನ್ - ಆ ಋಷಿಗಳನ್ನೂ, ಯಥಾನ್ಯಾಯಂ - ಯೋಗ್ಯತೆಗೆ ತಕ್ಕಂತೆ, ಪೃಷ್ಟ್ವಾ - ಕುಶಲವನ್ನು ಕೇಳಿ, ತತಃ - ಬಳಿಕ, ಸರ್ವೈರಪಿ - ಸಮಸ್ತರಿಂದಲೂ, ಪ್ರಹೃಷ್ಟವತ್ - ಸಂತೋಷಯುಕ್ತನಾದವನಂತೆ, ಸಮಾಗಚ್ಛತ್ - ಕೂಡಿದನು. ||೯| ಅಥ-ಬಳಿಕ, ರಾಜಾ-ಜನಕರಾಯನು, ಮುನಿಶ್ರೇಷ್ಠಂ-ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಕೃತಾಂಜಲಿಃ ಕೈಗಳನ್ನು ಜೋಡಿಸಿಕೊಂಡು, ಭಗವಾನ್ - ಪೂಜ್ಯನಾದ ನೀನು, ಏಭಿರ್ಮುನಿಪುಂಗವೈಸ್ಸಹ - ಈ ಮುನಿಪುಂಗವರೊಡನೆ, ಆಸನೇ-ಪೀಠದಲ್ಲಿ, ಆಸ್ತಾಂ-ಕುಳಿತುಕೊಳ್ಳುವವನಾಗು. ||೧೦|| ಮಹಾಮುನಿಃ ಮಹರ್ಷಿಯಾದ ವಿಶ್ವಾಮಿತ್ರನು, ಜನಕಸ್ಯ-ಜನಕರಾಯನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ನಿಷಸಾದ-ಕುಳಿತುಕೊಂಡನು, ಪುರೋಧಾಃ-ಪುರೋಹಿತನಾದ ಶತಾನಂದನು,ಋತ್ವಿಜಶ್ಚೈವ-ಋತ್ವಿಕ್ಕುಗಳೂ, ರಾಜಾಚ-ಜನಕರಾಯನೂ, ಮಂತ್ರಿಭಿಸ್ಸಹ- ಮಂತ್ರಿಗಳೊಡನೆ, ಆಸನೇಷು-ಪೀಠಗಳಲ್ಲಿ, ನಿಷೇದುಃ-ಕುಳಿತುಕೊಂಡರು, ಅಥ-ಬಳಿಕ, ನೃಪತಿಃ-ಅರಸಾದ, ಸಃ-ಆ ಜನಕನು, ಸಮಂತತಃ-ಯಲ್ಲೆಡೆಯಲ್ಲಿಯೂ,ಉಪವಿಷ್ಟಾನ್-ಕುಳಿತುಕೊಂಡುದನ್ನು,ದೃಷ್ಟ್ವಾ ಕಂಡು,ತತ್ರ-ಆ ಸಭೆಯಲ್ಲಿ, ವಿಶ್ವಾಮಿತ್ರಂ-

---

ವ್ಯಾಗ ಪೂಜಿನಾಡಿಸಿ, ಸಂತುಷ್ಟನಾಗಿ ಅವರೊಡನೆ ಸೇರಿದವನಾದನು. ಆಗ ಜನಕರಾಯನು ಬದ್ಧಾಂಜಲಿ ಪುಟನಾಗಿ ವಿಶ್ವಾಮಿತ್ರಮುನಿಯನ್ನು ಕುರಿತು, "ಪೂಜ್ಯನೆ ! ಋಷಿಗಳಿಂದೊಡಗೂಡಿದ ನೀನು ಈ ಪೀಠದಲ್ಲಿ ಕುಳಿತುಕೊಳ್ಳುವವನಾಗು" ಎಂದನು. ಇಂತು ನುಡಿದ ಜನಕರಾಯನ ನುಡಿಗಳನ್ನು ಕೇಳಿ, ಮಹಾಮುನಿಯಾದ ವಿಶ್ವಾಮಿತ್ರನು ಪೀಠವನ್ನಲಂಕರಿಸಿದನು. ವಿಶ್ವಾಮಿತ್ರನು ಕುಳಿತುಕೊಂಡ ಬಳಿಕ ಪುರೋಹಿತನಾದ ಶತಾನಂದನೂ ರಾಜನೂ, ಮಂತ್ರಿಗಳು ಸಹ ಕುಳಿತುಕೊಂಡವರಾದರು. ||೧೧|| ಆಗಲಾ ಸಭೆಯಲ್ಲಿ ಅವರವರ ಯೋಗ್ಯಾನುಸಾರವಾಗಿ ಪೀಠಗಳನ್ನಲಂಕರಿಸಿರುವ ಮುನಿಗಳನ್ನು ನೋಡಿ, ಜನಕರಾಯನು ವಿಶ್ವಮಿತ್ರನ್ನು ಕುರಿತು ಹೀಗೆಂದನು "ಪೂಜ್ಯನೆ ! ನಿನ್ನದರ್ಶನದಿಂದಲೂ, ದೈವಯೋಗದಿಂದಲೂ ಯಜ್ಞಸಲಕರಣ ಸಮಾಪ್ತಿಯು ಸಂಪೂರ್ಣವಾದುವು. ಇಂದಿಗೆ ಯಜ್ಞಕ್ಕೆ ತಕ್ಕ ಫಲವುಂಟಾಯಿತು. ಮುನಿವರ್ಯನಾದ ವಿಶ್ವಾಮಿತ್ರನೆ! ಋಷಿಸಮೇತನಾದ ನೀನು

ಬ್ರವೀತ್ ||೧೨|| ಅದ್ಯಯಜ್ಞ ಸಮೃದ್ಧಿರ್ಮೇ ಸಫಲಾ ದೈವತೈಃಕೃತಾ || ಅದ್ಯ ಯಜ್ಞಫಲಂ ಪ್ರಾಪ್ತಂ ಭಗವದ್ದರ್ಶನಾನ್ಮಯಾ ||೧೩|| ಧನ್ಯೋ ಸ್ಮ್ಯನುಗೃಹೀತೋಸ್ಮಿ ಯಸ್ಯ ಮೇ ಮುನಿಪುಂಗವ || ಯಜ್ಞೋಪಸದನಂ ಬ್ರಹ್ಮನ್ ಪ್ರಾಪ್ತೋಸಿ ಮುನಿಭಿಸ್ಸಹ ||೧೪|| ದ್ವಾದಶಾಹಂತು ಬ್ರಹ್ಮರ್ಷೇ ಶೇಷ ಮಾಹುರ್ಮನೀಷಿಣಃ|| ತತೋಭಾಗಾರ್ಥಿನೋ ದೇವಾನ್ ದ್ರಷ್ಟುಮರ್ಹಸಿ ಕೌಶಿಕ|| ||೧೫|| ಇತ್ಯುಕ್ತ್ವಾ ಮುನಿಶಾರ್ದೂಲಂ ಪ್ರಹೃಷ್ಟವದನಸ್ತದಾ || ಪುನಸ್ತಂ ಪರಿಪ ಪ್ರಚ್ಛ ಪ್ರಾಂಜಲಿಃ ಪ್ರಣತೋನೃಪಃ ||೧೬|| ಇಮೌ ಕುಮಾರೌ ಭದ್ರಂ ತೇ ದೇವತುಲ್ಯ ಪರಾಕ್ರಮೌ || ಗಜಸಿಂಹಗತೀ ವೀರೌ ಶಾರ್ದೂಲ ವೃಷಭೋ

---

ವಿಶ್ವಾಮಿತ್ರನನ್ನು ಕುರಿತು, ಅಬ್ರವೀತ್ - ನುಡಿದನು. ||೧೨|| ಅದ್ಯ - ಈಗ, ಮೇ- ನನ್ನ, ಯಜ್ಞಸಮೃದ್ಧಿಃ - ಯಜ್ಞಸಾಮಗ್ರಿಗಳ ಸಂಪೂರ್ಣತೆಯು, ದೈವತೈಃ - ದೇವತೆಗಳಿಂದ, ಸಫಲಾ - ಸಫಲವಾಗಿ, ಕೃತಾ – ಮಾಡಲ್ಪಟ್ಟಿತು, ಅದ್ಯ - ಈಗ, ಮಯಾ - ನನ್ನಿಂದ, ಭಗವ ದ್ದರ್ಶನಾತ್- ಪೂಜ್ಯನಾದ ನಿನ್ನ ದರ್ಶನದಿಂದ, ಯಜ್ಞಫಲಂ - ಯಜ್ಞಫಲವು, ಪ್ರಾಪ್ತಂ-ಹೊಂದ ಲ್ಪಟ್ಟಿತು, ||೧೩|| ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೇ, ಯಸ್ಯ - ಯಾವ, ಮೇ-ನನ್ನ, ಯಜ್ಞೋಪಸದನಂ - ಯಜ್ಞಶಾಲೆಯನ್ನು ಕುರಿತು, ಮುನಿಭಿಸ್ಸಹ - ಋಷಿಗಳೊಡನೆ, ಪ್ರಾಪ್ತಃ- ಬಂದವನು, ಅಸಿ - ಆದೆಯೋ, ತೇನ - ಅದರಿಂದ, ಧನ್ಯಃ - ಕೃತಾರ್ಥನು, ಅಸ್ಮಿ - ಆದೆನು, ಅನುಗೃಹೀತಃ - ಅನುಗ್ರಹಿಸಲ್ಪಟ್ಟವನು, ಅಸ್ಮಿ - ಆದೆನು. ||೧೪|| ಹೇಬ್ರಹ್ಮರ್ಷೇ - ಎಲೈ ಬ್ರಹ್ಮರ್ಷಿಯೇ, ಮನೀಷಿಣಃ - ವಿದ್ವಾಂಸರು, ದ್ವಾದಶಾಹಂ - ಹನ್ನೆರಡು ದಿವಸಗಳನ್ನು, ಶೇಷಂ, ಮಿಕ್ಕುದನ್ನಾಗಿ, ಆಹುಃ - ಹೇಳುತ್ತಾರೆ, ಹೇಕೌಶಿಕ - ಎಲೈ ವಿಶ್ವಾಮಿತ್ರನೇ, ತತಃ - ಬಳಿಕ ಭಾಗಾರ್ಥಿನಃ - ಹವಿರ್ಭಾಗಕ್ಕಾಗಿ ಬರುತ್ತಿರುವ, ದೇವಾನ್- ದೇವತೆಗಳನ್ನು, ದ್ರಷ್ಟುಂ-ನೋಡಲು, ಅರ್ಹಸಿ - ಯೋಗ್ಯನಾಗು, ||೧೫|| ತದಾ-ಆಗ, ನೃಪಃ- ಜನಕರಾಯನು, ಮುನಿಶಾರ್ದೂಲಂ- ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಇತ್ಯುಕ್ತ್ವಾ - ಈ ರೀತಿ, ಪ್ರಣತಃ - ನಮಸ್ಕಾರ ಮಾಡಿ, ಪ್ರಹೃಷ್ಟವದನಂ - ಸಂತೋಷಯುಕ್ತವಾದ ಮುಖವುಳ್ಳವನೂ, ಪ್ರಾಂಜಲಿಃ – ಅಂಜಲಿ ಬದ್ಧನೂಆಗಿ, ತಂ - ಆ ವಿಶ್ವಾಮಿತ್ರನನ್ನು ಕುರಿತು, ಪುನಃ - ಮತ್ತು, ಪರಿಪಪ್ರಚ್ಛ ಕೇಳಿದನು||೧೬|| ಹೇಮುನೇ - ಎಲೈ ಋಷಿಯೇ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ದೇವತುಲ್ಯ ಪರಾಕ್ರಮೌ - ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳ, ಗಜಸಿಂಹಗತೀ- ಗಜಸಿಂಹಗಳಂತೆ

---

ನನ್ನ ಯಜ್ಞಶಾಲೆಯನ್ನು ಪ್ರವೇಶಿಸಿದುದರಿಂದ ನಾನು ಧನ್ಯನಾದೆನು ; ಅನುಗೃಹೀತನೂ ಆಗಿರುವೆನು. ಎಲೈ ಬ್ರಹ್ಮರ್ಷಿಯೆ ! ತಿಳಿದವರು ಯಜ್ಞಶೇಷವು ಇನ್ನೂ ಹನ್ನೆರಡು ದಿನಗಳ ವರೆವಿಗೂ ಇರುವುದೆಂದುಹೇಳುತ್ತಾರೆ ಬಳಿಕ ದೇವತೆಗಳು ಹವಿರ್ಭಾಗಗಳನ್ನು ಸ್ವೀಕರಿಸಲು ಬರುತ್ತಾರೆ. ಅದನ್ನು ನೋಡಲರ್ಹನಾಗುವೆ." ಎಂದು ಹೇಳಿ ಹಸನ್ಮುಖನಾಗಿ ಆತನನ್ನು ಕುರಿತು ಮತ್ತಿಂತೆಂದನು. ||೧೫-೧೬|| "ಮುನಿಪುಂಗವನೆ ! ದೇವತೆಗಳಿಗೆ ಸಮನಾದ ಈ ಕುವರರೀರ್ವರೂ, ಗಂಭೀರಗಮನದಿಂದ ಗಜಸಿಂಹಗಳಂತೆ ನಡೆಯುತ್ತಿರುವವರಾಗಿಯೂ,

ಪಮೌ ||೧೭|| ಪದ್ಮಪತ್ರ ವಿಶಾಲಾಕ್ಷೌ ಖಡ್ಗತೂಣೀ ಧನುರ್ಧರೌ||ಅಶ್ವಿನಾ
ವಿವರೂಪೇಣ ಸಮುಪಸ್ಥಿತಯೌವನೌ ||೧೮|| ಯದೃಚ್ಛಯೈವ ಗಾಂ ಪ್ರಾಪ್ತೌ
ದೇವಲೋಕಾದಿವಾಮರೌ || ಕಥಂ ಪದ್ಭ್ಯಾಮಿಹ ಪ್ರಾಪ್ತೌ ಕಿಮರ್ಥಂ
ಕಸ್ಯವಾಮುನೇ ||೧೯|| ವರಾಯುಧಧರೌ ವೀರೌ ಕಸ್ಯಪುತ್ರೌ ಮಹಾಮುನೇ||
ಭೂಷಯಂತಾವಿಮಂದೇಶಂ ಚಂದ್ರಸೂರ್ಯಾವಿವಾಂಬರಂ ||೨೦|| ಪರಸ್ಪರಸ್ಯ
ಸದೃಶೌ ಪ್ರಮಾಣೇಂಗಿತ ಚೇಷ್ಟಿತೈಃ || ಕಾಕಪಕ್ಷಧರೌ ವೀರೌ ಶ್ರೋತುಮ

---

ನಡಿಗೆಯುಳ್ಳ, ವೀರೌ - ಶೂರರಾದ, ಶಾರ್ದೂಲವೃಷಭೋಪಮೌ - ವ್ಯಾಘ್ರ ವೃಷಭಗಳಿಗೆ ಸಮಾನರಾದ, ಪದ್ಮಪತ್ರವಿಶಾಲಾಕ್ಷೌ - ಕಮಲಗಳ ದಳಗಳಂತೆ ವಿಶಾಲವಾದ ನೇತ್ರಗಳುಳ್ಳ ಖಡ್ಗತೂಣೀಧನುರ್ಧರೌ- ಕತ್ತಿಗಳನ್ನೂ ಬತ್ತಳಿಕೆಗಳನ್ನೂ ಬಿಲ್ಲುಗಳನ್ನೂ ಧರಿಸಿರುವ, ರೂಪೇಣ- ಸೌಂದರ್ಯದಿಂದ, ಅಶ್ವಿನಾವಿವ- ಅಶ್ವಿನೀ ದೇವತೆಗಳಂತಿರುವ, ಸಮುಪಸ್ಥಿತಯೌವನೌ-ಪ್ರಾಪ್ತವಾದ ಯೌವನವುಳ್ಳ, ಯದೃಚ್ಛಯೈವ-ಸ್ವೇಚ್ಛೆಯಿಂದಲೇ, ಗಾಂ-ನನ್ನ ರಾಜ್ಯಕ್ಕೆ, ದೇವಲೋಕಾತ್ - ದೇವಲೋಕದಿಂದ, ಪ್ರಾಪ್ತೌ - ಬಂದಿರುವ, ಅಮರಾವಿವಸ್ಥಿತೌ - ದೇವತೆಗಳಂತಿರುವ, ಇಮೌ ಕುಮಾರೌ - ಈ ರಾಜಕುವರರು, ಇಹ - ಇಲ್ಲಿಗೆ ಪದ್ಭ್ಯಾಂ - ಕಾಲ್ನಡಿಗೆಯಿಂದ, ಕಥಂ-ಹೇಗೆ, ಕಿಮರ್ಥಂ - ಏತಕ್ಕಾಗಿ, ಪ್ರಾಪ್ತೌ - ಬಂದರು, ವರಾಯುಧಧರೌ - ಶ್ರೇಷ್ಠವಾದ ಆಯುಧಗಳ ಗಳನ್ನು ಧರಿಸಿರುವ, ವೀರೌ - ಈ ಶೂರರು, ಕಸ್ಯ - ಯಾವ ರಾಜನ, ಪುತ್ರೌ-ಮಕ್ಕಳು, ಹೇ ಮಹಾಮುನೇ – ಎಲೈ ವಿಶ್ವಾಮಿತ್ರನೇ, ಚಂದ್ರಸೂರ್ಯೌ - ಚಂದ್ರಸೂರ್ಯರು, ಅಂಬರಮಿವ-ಅಂತರಿಕ್ಷವನ್ನಂತೆ, ಇಮಂದೇಶಂ - ಈ ಸ್ಥಳವನ್ನು, ಭೂಷಯಂತೌ-ಅಲಂಕರಿಸುತ್ತಿರುವ, ಪ್ರಮಾಣೇಂಗಿತಚೇಷ್ಟಿತೈಃ - ಪ್ರಮಾಣದಿಂದಲೂ, ಭಾವಜ್ಞತೆಯಿಂದಲೂ, ಅಂಗಚೇಷ್ಟೆಗಳಿಂದಲೂ ಸಹ, ಪರಸ್ಪರಸ್ಯ - ಒಬ್ಬರಿಗೊಬ್ಬರು, ಸದೃಶೌ - ಸಮಾನರಾದ, ಕಾಕಪಕ್ಷಧರೌ ಜುಲ್ಪಾ ಕೂದಲುಗಳನ್ನು ಧರಿಸಿರುವ, ವೀರೌ - ಶೂರರಾದ ಇವರ ವಿಷಯವನ್ನು, ತತ್ವತಃ - ಯಥಾರ್ಥವಾಗಿ, ಶ್ರೋತುಂ-

---

ಶತ್ರುಗಳನ್ನು ಜಯಿಸಲು ತೆರಳುವ ಕಾಲದಲ್ಲಿ ಸಿಂಹಗಳಂತೆ ನಡಿಗೆಯುಳ್ಳವರಾಗಿಯೂ, ಭಯಂಕರಗಮನದಲ್ಲಿ ವ್ಯಾಘ್ರಗಳಂತೆ ನಡೆವವರಾಗಿಯೂ, ಎಲ್ಲಸಮಯಗಳಲ್ಲಿಯೂ ವೃಷಭಗಮನವುಳ್ಳವರಾಗಿಯೂ, ವೈರಿಗಳನ್ನು ಕುಗ್ಗಿದ ಕಂಠವುಳ್ಳವರನ್ನಾಗಿ ಮಾಡುತ್ತಿರುವವರಾಗಿಯೂ, ತಾವರೆ ಎಲೆಯಂತೆ ವಿಶಾಲವಾದ ಕಂಗಳುಳ್ಳವರಾಗಿಯೂ,ವೀರರೂ,ಶ್ರೇಷ್ಠವಾದ ಖಡ್ಗವನ್ನೂ, ಬಿಲ್ಲು ಬತ್ತಳಿಕೆಗಳನ್ನೂ ಆಭರಣಗಳಂತೆ ಧರಿಸಿರುವವರಾಗಿಯೂ,ಅಶ್ವಿನೀದೇವತೆಗಳಂತೆ ಅಸದೃಶವಾದ ರೂಪವಂತರಾಗಿಯೂ, ರೂಪಕ್ಕನುಗುಣವಾದ ಯೌವನವುಳ್ಳವರಾಗಿಯೂ, ದೇವಲೋಕದಿಂದ ಅಕಸ್ಮಾತ್ತಾಗಿ ಭೂಲೋಕಕ್ಕೆ ಬಂದಿರುವ ದೇವತೆಗಳಂತೆ ತೋರುತ್ತಿರುವರು. ಶ್ರೇಷ್ಠವಾದ ಆಯುಧಗಳನ್ನು ಧರಿಸಿರುವವರೂ, ಚಂದ್ರ ಸೂರ್ಯರು ಅಂತರಿಕ್ಷವನ್ನು ಪ್ರಕಾಶಗೊಳಿಸುವಂತೆ, ಈ ಸ್ಥಳವನ್ನು ಪ್ರಕಾಶಗೊಳಿಸುವವರಾಗಿಯೂ, ಔನ್ನತ್ಯದಿಂದಲೂ, ಗಾಂಭೀರ್ಯದಿಂದಲೂ, ನಡೆನುಡಿಗಳೇ ಮೊದಲಾದ ಚೇಷ್ಟೆಗಳಿಂದ ಒಬ್ಬರನ್ನೊಬ್ಬರು ಹೋಲುತ್ತಿರುವವರಾಗಿಯೂ, ಕಾಕಪಕ್ಷಧರರೂ, ವೀರರೂ ಆಗಿರುವ

ಮಿಚ್ಛಾಮಿ ತತ್ವತಃ ॥ ೨೧ ॥ ತಸ್ಯ ತದ್ವಚನಂ ಶ್ರುತ್ವಾ ಜನಕಸ್ಯ ಮಹಾತ್ಮನಃ ॥ ನ್ಯವೇದಯನ್ಮಹಾತ್ಮಾನೌ ಪುತ್ರೌ ದಶರಥಸ್ಯ ತೌ ॥೨೨॥ ಸಿದ್ಧಾಶ್ರಮ ನಿವಾಸಂಚ ರಾಕ್ಷಸಾನಾಂ ವಧಂ ತಥಾ ॥ ತಚ್ಚಾಗಮನ ಮವ್ಯಗ್ರಂ ವಿಶಾಲಾಯಾಶ್ಚ ದರ್ಶನಂ॥೨೩॥ಅಹಲ್ಯಾ ದರ್ಶನಂ ಚೈವ ಗೌತಮೇನ ಸಮಾಗಮಂ ॥ಮಹಾಧನುಷಿ ಜಿಜ್ಞಾಸಾಂ ಕರ್ತುಮಾಗಮನಂ ತಥಾ॥೨೪॥ಏತತ್ಸರ್ವಂ ಮಹಾತೇಜಾ ಜನಕಾಯ ಮಹಾತ್ಮನೇ ॥ ನಿವೇದ್ಯ ವಿರರಾಮಾಥ ವಿಶ್ವಾಮಿತ್ರೋ ಮಹಾಮುನಿಃ ॥ ೨೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಾಶಸ್ಸರ್ಗಃ.

---

ಕೇಳಲು, ಇಚ್ಛಾಮಿ - ಅಪೇಕ್ಷಿಸುತ್ತೇನೆ, ॥ ೨೧ ॥ ಮಹಾತ್ಮನಃ - ಮಹಾಮನಸ್ವಿಯಾದ, ತಸ್ಯ ಜನಕಸ್ಯ - ಆ ಜನಕರಾಯನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಮಹಾತ್ಮಾನೌ-ಮಹಾ ಪ್ರಭಾವವಂತರಾದ, ದಶರಥಸ್ಯ - ದಶರಥ ರಾಯನ, ಪುತ್ರೌ - ಮಕ್ಕಳಾದ, ತೌ - ಆ ರಾಮಲಕ್ಷ್ಮಣರನ್ನು, ನ್ಯವೇದಯತ್ - ತಿಳಿಸಿದನು. ॥ ೨೨ ॥ ಸಿದ್ಧಾಶ್ರಮನಿವಾಸಂಚ-ಸಿದ್ಧಾಶ್ರಮದಲ್ಲಿ ವಾಸವನ್ನೂ, ತಥಾ- ಹಾಗೆಯೇ, ರಾಕ್ಷಸಾನಾಂ-ರಾಕ್ಷಸರ, ವಧಂಚ-ಸಂಹಾರವನ್ನೂ, ಅವ್ಯಗ್ರಂ - ಚಪಲಚಿತ್ತವಲ್ಲದಂತೆ, ತದಾಗಮನಂಚ- ಆ ಬರುವಿಕೆಯನ್ನು, ವಿಶಾಲಾಯಾಃ-ವಿಶಾಲಾ ಪಟ್ಟಣದ, ದರ್ಶನಂಚ ದರ್ಶನವನ್ನೂ ,ಅಹಲ್ಯಾ ದರ್ಶನಂಚೈವ-ಅಹಲ್ಯಾ ದೇವಿಯನ್ನು ನೋಡುವಿಕೆಯನ್ನೂ, ಗೌತಮೇನ ಗೌತಮನಿಂದ, ಸಮಾಗಮಂ - ಕೂಡುವಿಕೆಯನ್ನೂ, ಮಹಾಧನುಷಿ-ಶೈವ ಧನುಸ್ಸಿನಲ್ಲಿ, ಜಿಜ್ಞಾಸಾಂಚ - ತಿಳಿದುಕೊಳ್ಳಲಿಚ್ಛೆಯನ್ನೂ, ಕರ್ತುಂ - ಮಾಡಲು, ತಥಾ-ಹಾಗೆಯೇ, ಆಗಮನಂ - ಬರುವಿಕೆಯನ್ನೂ, ಏತತ್ಸರ್ವಂ - ಈ ಸಮಸ್ತವನ್ನೂ, ಮಹಾತೇಜಾಃ - ಮಹಾ ತೇಜಸ್ವಿಯಾದ, ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಮಹಾತ್ಮನೇ - ಮಹಾ ಮನಸ್ವಿಯಾದ, ಜನಕಾಯ - ಜನಕರಾಯನಿಗೆ, ನಿವೇದ್ಯ - ತಿಳಿಸಿ, ಅಥ-ಬಳಿಕ, ವಿರರಾಮ - ಸುಮ್ಮನಾದನು. ॥೨೫॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಾಶಸ್ಸರ್ಗಃ.

---

ಇವರು ಕಾಲ್ನಡಿಗೆಯಿಂದಿಲ್ಲಿಗೇತಕ್ಕೋಸುಗ ಬಂದಿರುವರು? ಇವರು ಯಾರಮಕ್ಕಳು? ಇವರ ವಿಷಯವನ್ನು ಕೇಳಲು ನಾನು ಬಹಳವಾಗಿ ಅಪೇಕ್ಷಿಸುವೆನು.'' ॥೧೭-೨೧॥ ಇಂತು ನುಡಿದ ಜನಕರಾಯನನ್ನು ಕುರಿತು ಮುನಿಶ್ರೇಷ್ಠನಾದ ವಿಶ್ವಾಮಿತ್ರನು ಮಹಾತ್ಮರಾದ ಆ ರಾಮಲಕ್ಷ್ಮಣರು ದಶರಥನ ಮಕ್ಕಳೆಂಬುದನ್ನೂ, ಅವರ ಯಾವತ್ತೂ ವೃತ್ತಾಂತವನ್ನೂ ತಿಳಿಸಿದನು. ಇಷ್ಟೆಯಲ್ಲದೆ ರಾಮಲಕ್ಷ್ಮಣರ ಸಿದ್ಧಾಶ್ರಮ ನಿವಾಸವನ್ನೂ, ಅವರು ವಿಶಾಲಾ ಪಟ್ಟಣಕ್ಕೆ ಬಂದುದನ್ನೂ, ಅಹಲ್ಯಾದೇವಿಯ ದರ್ಶನವನ್ನೂ, ಗೌತಮ ಮುನಿಯ ಸಮಾಗಮನವನ್ನೂ ಅರುಹಿ, ಶೈವ ಧನುಸ್ಸಿನ ವಿಚಾರವನ್ನು ತಿಳಿಯಲೋಸುಗ ಬಂದಿರುವರೆಂಬುದನ್ನು ನುಡಿದು ಸುಮ್ಮನಾದನು. .... ॥ ೨೨-೨೫ ॥

ಇಂತಿದು ರಾಮಲಕ್ಷ್ಮಣರ ಮಿಥಿಲಾಪುರೀಗಮನ ವೃತ್ತಾಂತವರ್ಣನವೆಂಬ ಐವತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕಪಂಚಾಶಸ್ಸರ್ಗಃ.



ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರಸ್ಯ ಧೀಮತಃ || ಹೃಷ್ಟರೋಮಾ ಮಹಾತೇಜಾಶ್ಶತಾನಂದೋ ಮಹಾತಪಾಃ ||೧|| ಗೌತಮಸ್ಯ ಸುತೋ ಜ್ಯೇಷ್ಠ ಸ್ತಪಸಾ ದ್ಯೋತಿತಪ್ರಭಃ || ರಾಮಸಂದರ್ಶನಾದೇವ ಪರಂ ವಿಸ್ಮಯಮಾಗತಃ ||೨|| ಸತೌ ನಿಷಣ್ಣೌ ಸಂಪ್ರೇಕ್ಷ್ಯ ಸುಖಾಸೀನೌ ನೃಪಾತ್ಮಜೌ || ಶತಾನಂದಂ ಮುನಿಶ್ರೇಷ್ಠಂ ವಿಶ್ವಾಮಿತ್ರ ಮಥಾಬ್ರವೀತ್ ||೩|| ಅಪಿತೇ

---

ಧೀಮತಃ - ಬುದ್ಧಿಶಾಲಿಯಾದ, ತಸ್ಯವಿಶ್ವಾಮಿತ್ರಸ್ಯ - ಆ ವಿಶ್ವಾಮಿತ್ರನ, ತದ್ವಚನಂ-ಆ ಮಾತನ್ನು, ಶ್ರುತ್ವಾ - ಕೇಳಿ, ಹೃಷ್ಟರೋಮಾ - ಹರ್ಷದಿಂದ ರೋಮಾಂಚವುಳ್ಳ, ಮಹಾತೇಜಾಃ - ಬಹಳ ತೇಜಸ್ವಿಯಾದ, ಮಹಾತಪಾಃ- ಮಹಾತಪಸ್ಸುಳ್ಳ, ಗೌತಮಸ್ಯ-ಗೌತಮಋಷಿಗೆ, ಜ್ಯೇಷ್ಠಸುತಃ - ದೊಡ್ಡಮಗನಾದ, ತಪಸಾ - ತಪಸ್ಸಿನಿಂದ, ದ್ಯೋತಿತಪ್ರಭಃ - ಹೊಳೆಯುತ್ತಿರುವ ಕಾಂತಿಯುಳ್ಳ, ಶತಾನಂದಃ - ಶತಾನಂದ ಋಷಿಯು, ರಾಮಸಂದರ್ಶನಾದೇವ - ಶ್ರೀರಾಮರ ದರ್ಶನ ಮಾತ್ರದಿಂದಲೇ, ಪರಂ - ಬಹಳವಾದ, ವಿಸ್ಮಯಂ - ಆಶ್ಚರ್ಯವನ್ನು, ಆಗತಃ - ಹೊಂದಿದನು, ||೧-೨|| ಅಥ - ಬಳಿಕ, ಸಶತಾನಂದಃ - ಆ ಶತಾನಂದ ಋಷಿಯು, ನಿಷಣ್ಣೌ - ಕುಳಿತುಕೊಂಡಿರುವ, ಸುಖಾಸೀನೌ -ಸುಖವನ್ನು ಹೊಂದಿರುವ, ತೌನೃಪಾತ್ಮಜೌ-ಆ ರಾಮಲಕ್ಷ್ಮಣರನ್ನು, ಸಂಪ್ರೇಕ್ಷ್ಯ - ಕಂಡು, ಮುನಿಶ್ರೇಷ್ಠಂ - ಋಷಿಶ್ರೇಷ್ಠನಾದ, ವಿಶ್ವಾಮಿತ್ರಂ- ವಿಶ್ವಾಮಿತ್ರನನ್ನು ಕುರಿತು, ಅಬ್ರವೀತ್ - ನುಡಿದನು. ||೩|| ಹೇಮುನಿಶಾರ್ದೂಲ - ಎಲೈ ಋಷಿಶ್ರೇಷ್ಠನೆ,

---

ಇಂತು ನುಡಿದ ಮಹಾ ಮುನಿಯಾದ ವಿಶ್ವಾಮಿತ್ರನ ನುಡಿಗಳನ್ನು ಕೇಳಿ, ಮಹಾತಪಸ್ವಿಯೂ, ಗೌತಮ ಮುನಿಯ ಜ್ಯೇಷ್ಠ ಕುವರನೂ, ತಪಶ್ಶಕ್ತಿಯಿಂದುಂಟಾದ ದೇಹಕಾಂತಿಯುಳ್ಳವನೂ ಆದ ಶತಾನಂದನು ತನ್ನ ತಾಯಿಯ ಶಾಪವೃತ್ತಾಂತವನ್ನೂ, ಆಕೆಯು ಪತಿಯೊಡಗೂಡಿದುದನ್ನೂ ತಿಳಿದು ಮಹದಾನಂದಭರಿತನೂ, ರೋಮಾಂಚವುಳ್ಳವನೂ ಆದನು. ||೧-೨|| ಬಳಿಕಲಾ ಶತಾನಂದ ಮುನಿಯು ಸುಖದಿಂದ ಕುಳ್ಳಿರುವ ದಶರಥ ಕುವರರನ್ನು ನೋಡಿ ವಿಶ್ವಾಮಿತ್ರನನ್ನು ಕುರಿತಿಂತೆಂದನು. "ಓ ಮುನಿಶ್ರೇಷ್ಠ! ಮಹಾ ಕೀರ್ತಿವಂತಳೂ ಬಹು ಕಾಲದಿಂದಲೂ ತಪವನ್ನಾಚರಿಸುತ್ತಲೂ ಇರುವ ನನ್ನ ಜನನಿಯು ಈ ರಾಜಪುತ್ರನಿಗೆ ತೋರಲ್ಪಟ್ಟಳೇನು? ಎಲ್ಲರೂ ಪೂಜಿಸಲು ಯೋಗ್ಯನಾದ ರಾಮನಿಗೆ ನನ್ನ ತಾಯಿಯು ಪೂಜೆ

ಮುನಿಶಾರ್ದೂಲ ಮಮಮಾತಾ ಯಶಸ್ವಿನೀ || ದರ್ಶಿತಾ ರಾಜಪುತ್ರಾಯ ತಪೋದೀರ್ಘ ಮುಪಾಗತಾ || ೪ || ಅಪಿ ರಾಮೇ ಮಹಾತೇಜಾ ಮಮ ಮಾತಾ ಯಶಸ್ವಿನೀ || ವನ್ಯೈರುಪಾಹರತೂ ಜಾಂ ಪೂಜಾರ್ಹೇ ಸರ್ವ ದೇಹಿನಾಂ ||೫ || ಅಪಿ ರಾಮಾಯ ಕಥಿತಂ ಯಥಾವೃತ್ತಂ ಪುರಾತನಂ || ಮಮ ಮಾತುರ್ಮಹಾತೇಜೋ ದೈವೇನ ದುರನುಷ್ಠಿತಂ || ೬ || ಅಪಿ ಕೌಶಿಕ ಭದ್ರಂ ತೇ ಗುರುಣಾ ಮಮ ಸಂಗತಾ || ಮಮ ಮಾತಾ ಮುನಿಶ್ರೇಷ್ಠ ರಾಮ ಸಂದರ್ಶನಾದಿತಃ || ೭ || ಅಪಿ ಮೇ ಗುರುಣಾ ರಾಮಃ ಪೂಜಿತಃ ಕುಶಿಕಾತ್ಮಜ || ಇಹಾಗತೋ ಮಹಾತೇಜಾ ಪೂಜಾಂ ಪ್ರಾಪ್ತೋ ಮಹಾ

---

ತೇ - ನಿನ್ನಿಂದ, ಯಶಸ್ವಿನೀ - ಕೀರ್ತಿವಂತಳಾದ, ದೀರ್ಘಂ - ದೀರ್ಘವಾದ, ತಪಃ - ತಪಸ್ಸನ್ನು, ಉಪಾಗತಾ - ಹೊಂದಿರುವ, ಮಮ - ನನ್ನ, ಮಾತಾ - ತಾಯಿಯಾದ ಅಹಲ್ಯಾದೇವಿಯು, ರಾಜ ಪುತ್ರಾಯ - ಅರಸು ಮಗನಾದ ಶ್ರೀರಾಮನಿಗೆ, ದರ್ಶಿತಾಪಿ - ತೋರಿಸಲ್ಪಟ್ಟಳೋ || ೪ || ಮಹಾತೇಜಾ - ಮಹಾ ತೇಜೋವಂತಳಾದ, ಯಶಸ್ವಿನೀ - ಕೀರ್ತಿವಂತಳಾದ, ಮಮ - ನನ್ನ, ಮಾತಾ - ತಾಯಿಯು, ಸರ್ವದೇಹಿನಾಂ - ಸಮಸ್ತ ದೇಹಧಾರಿಗಳಿಗೂ, ಪೂಜಾರ್ಹೇ-ಪೂಜೆಗೆ ಅರ್ಹನಾದ, ರಾಮೇ-ಶ್ರೀರಾಮನಲ್ಲಿ, ವನ್ಯೈಃ-ವನದಲ್ಲಿ ಹುಟ್ಟಿದಕಂದಮೂಲಾದಿಗಳಿಂದ, ಪೂಜಾಂ- ಅತಿಥಿ ಸತ್ಕಾರವನ್ನು, ಉಪಾಹರದಪಿ- ಸಮರ್ಪಿಸಿದಳೇ || ೫ || ಹೇಮಹಾತೇಜಃ-ಎಲೈ ತೇಜೋ ವಂತನೆ, ಪುರಾತನಂ - ಪೂರ್ವದಲ್ಲಿ ನಡೆದಿರುವ, ಮಮ - ನನ್ನ, ಮಾತುಃ -ತಾಯಿಯ ವಿಷಯದಲ್ಲಿ, ದೈವೇನ - ದೇವೇಂದ್ರನಿಂದಾದ, ದುರನುಷ್ಠಿತಂ - ದುಷ್ಕೃತ್ಯವು, ರಾಮಾಯ - ಶ್ರೀರಾಮನಿಗೆ, ಯಥಾವೃತ್ತಂ - ನಡೆದಹಾಗೆ, ಕಥಮಪಿ - ಹೇಳಲ್ಪಟ್ಟಿತೋ || ೬ || ಹೇಕೌಶಿಕ -ಎಲೈ ವಿಶ್ವಾ ಮಿತ್ರನೆ, ಹೇಮುನಿಶ್ರೇಷ್ಠ - ಎಲೈ ಮುನಿಶ್ರೇಷ್ಠನೇ, ತೇ - ನಿನಗೆ, ಭದ್ರಂ - ಶುಭವು, ಅಸ್ತು- ಆಗಲಿ, ಮಮ - ನನ್ನ, ಮಾತಾ - ತಾಯಿಯು, ರಾಮಸಂದರ್ಶನಾದಿತಃ - ಶ್ರೀರಾಮದರ್ಶನ ಪೂಜ ನಾದಿಗಳಿಂದ, ಮಮ - ನನ್ನ, ಗುರುಣಾ - ತಂದೆಯಾದ ಗೌತಮ ಋಷಿಯೊಡನೆ, ಸಂಗತಾಪಿ- ಕೂಡಿದಳೋ, || ೭ || ಹೇಕುಶಿಕಾತ್ಮಜ - ಎಲೈ ಕುಶಬ್ರಹ್ಮಪುತ್ರನೇ, ಮೇಗುರುಣಾ - ನನ್ನ ತಂದೆಯಾದ ಗೌತಮ ಋಷಿಯಿಂದ, ರಾಮಃ - ಶ್ರೀರಾಮನು, ಪೂಜಿತೋಪಿ-ಪೂಜಿಸಲ್ಪಟ್ಟನೋ, ಮಹಾತೇಜಾಃ - ಮಹಾಪ್ರಭಾವವಂತನಾದ ಶ್ರೀರಾಮನು,ಮಹಾತ್ಮನಃ-ಮಹಾತ್ಮನಾದ ಗೌತಮ ಋಷಿಯಿಂದ,ಪೂಜಾಂ-ಅತಿಥಿಸತ್ಕಾರವನ್ನು, ಪ್ರಾಪ್ತಃ-ಹೊಂದಿ, ಆಗತೋಪಿ-ಬಂದನೇ,(ಮ)ಅಥವಾ-

---

ಯನ್ನರ್ಪಿಸಿದಳೇ? ಋಷಿಪುಂಗವ! ಜನನಿಯ ವಿಷಯದಲ್ಲಿ ದೇವೇಂದ್ರನಾಚರಿಸಿದ ಅಪಚಾ ರವುಶ್ರೀರಾಮಚಂದ್ರನಿಗೆರುಹಲ್ಪಟ್ಟಿತೇ? ಮುನಿಶ್ರೇಷ್ಠನಾದ ವಿಶ್ವಾಮಿತ್ರನೆ! ನಿನಗೆ ಮಂಗಳ ವಾಗಲಿ; ನಮ್ಮ ತಾಯಿಯು ನಮ್ಮ ಜನಕನಾದ ಗೌತಮನೊಡಗೂಡಿದಳಷ್ಟೆ! ಮಹಾತ್ಮ ನಾದ ನನ್ನ ತಂದೆಯಿಂದ ಶ್ರೀರಾಮನು ಅತಿಥಿಸತ್ಕಾರವನ್ನು ಹೊಂದಿ ಇಲ್ಲಿಗೆ ಬಂದಿರುವನೆ! ಎಲೈ ಕೌಶಿಕನೆ! ನನ್ನ ಗುರುವಾದ ಗೌತಮ ಮುನಿಯು, ಇಲ್ಲಿಗೆ ಬಂದಿರುವ ರಾಮಚಂದ್ರ

ತ್ಮನಃ ॥೮॥ ಅಪಿ ಶಾಂತೇನ ಮನಸಾ ಗುರುರ್ಮೇ ಕುಶಿಕಾತ್ಮಜ ॥ ಇಹಾಗತೇನ ರಾಮೇಣ ಪ್ರಯತೇ ನಾಭಿವಾದಿತಃ ॥೯॥ ತಚ್ಛ್ರುತ್ವಾ ವಚನಂ ತಸ್ಯ ವಿಶ್ವಾಮಿತ್ರೋ ಮಹಾಮುನಿಃ॥ ಪ್ರತ್ಯುವಾಚ ಶತಾನಂದೋ ವಾಕ್ಯಜ್ಞಂ ವಾಕ್ಯಕೋವಿದಂ ॥೧೦॥ ನಾತಿಕ್ರಾಂತ ಮುನಿಶ್ರೇಷ್ಠ ಯತ್ಕರ್ತವ್ಯಂ ಕೃತಂ ಮಯಾ॥ ಸಂಗತಾ ಮುನಿನಾ ಪತ್ನೀ ಭಾರ್ಗವೇಣೇವ ರೇಣುಕಾ॥ ತಚ್ಛ್ರುತ್ವಾ ವಚನಂ ತಸ್ಯ ವಿಶ್ವಾಮಿತ್ರಸ್ಯ ಭಾಷಿತಂ॥ ಶತಾನಂದೋ ಮಹಾತೇಜಾ ರಾಮಂ ವಚನಮಬ್ರವೀತ್ ॥೧೨॥ ಸ್ವಾಗತಂ ತೇ ನರಶ್ರೇಷ್ಠ ದಿಷ್ಟ್ಯಾ ಪ್ರಾಪ್ತೋಽಸಿ

ಇಹ-ಈ ಆಶ್ರಮಕ್ಕೆ, ಆಗತಃ-ಬಂದಿರುವ, ಮಹಾತೇಜಾಃ-ಮಹಾತೇಜಸ್ವಿಯಾದ ಗೌತಮಋಷಿಯು, ಮಹಾತ್ಮನಃ - ಮಹಾನುಭಾವನಾದ ಶ್ರೀರಾಮನ ದೆಸೆಯಿಂದ, ಪೂಜಾಂ- ಪತ್ನೀಲಾಭರೂಪವಾದ ಪೂಜೆಯನ್ನು, ಪ್ರಾಪ್ತೋಽಪಿ-ಹೊಂದಿದನೇ ॥೮॥ ಹೇಕುಶಿಕಾತ್ಮಜ-ಎಲೈ ಕುಶಿಕಬ್ರಹ್ಮಪುತ್ರನೇ, ಇಹ-ಈ ನಮ್ಮ ಆಶ್ರಮದಲ್ಲಿ, ಶಾಂತೇನ-(ಮ) ಉಪಶಾಂತವಾದ,(ಗೊ) ಶಮ ದಮಾದಿ ಗುಣೋಪಪನ್ನವಾದ, ಮನಸಾ - ಮನಸ್ಸಿನಿಂದ ಕೂಡಿದ, ಮೇಗುರುಃ- ನನ್ನ ತಂದೆಯು, ಇಹ-ಈ ನಮ್ಮ ಆಶ್ರಮದಲ್ಲಿ, ಆಗತೇನ-ಬಂದಿರುವ, ಪ್ರಯತ್ನೇನ – ಗೌತಮರಿಗೆ ಅಹಲ್ಯಾಪ್ರಾಪ್ತಿಗೋಸುಗ ಪ್ರಯತ್ನವಂತನಾದ, ರಾಮೇಣ-ಶ್ರೀರಾಮನಿಂದ, ಅಭಿವಾದಿತೋಽಪಿ-ನಮಸ್ಕರಿಸಲ್ಪಟ್ಟನೇ. ॥೯॥ ವಾಕ್ಯಜ್ಞಃ-ನುಡಿಜಾಣ್ಮೆಯುಳ್ಳ, ಮಹಾಮುನಿಃ-ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ತಸ್ಯ-ಆಶತಾನಂದನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ವಾಕ್ಯಕೋವಿದಂ. ವಾಕ್ಯಾರ್ಥಜ್ಞನಾದ, ಶತಾನಂದಂ-ಶತಾನಂದನನ್ನು ಕುರಿತು, ಪ್ರತ್ಯುವಾಚ-ಪ್ರತ್ಯುತ್ತರವಿತ್ತನು. ॥೧೦॥ ಹೇ ಮುನಿಶ್ರೇಷ್ಠ-ಎಲೈ ಋಷಿಶ್ರೇಷ್ಠನಾದ ಶತಾನಂದನೇ, ಮಯಾ-ನನ್ನಿಂದ, ನಾತಿಕ್ರಾಂತಂ-ಸಮಯಾತಿಕ್ರಮಣಮಾಡಲ್ಪಡಲಿಲ್ಲ, ಯತ್-ಯಾವದು, ಕರ್ತವ್ಯಂ - ಮಾಡತಕ್ಕದ್ದೋ, ತತ್-ಅದು, ಕೃತಂ-ಮಾಡಲ್ಪಟ್ಟಿತು, ಭಾರ್ಗವೇಣ - ಭೃಗುಪುತ್ರನಾದ ಜಮದಗ್ನಿಋಷಿಯೊಡನೆ, ರೇಣುಕೇವ-ರೇಣುಕಾದೇವಿಯಂತೆ, ಪತ್ನೀ-ಗೌತಮಪತ್ನಿಯಾದ ಅಹಲ್ಯಾದೇವಿಯು, ಮುನಿನಾ- ಗೌತಮಋಷಿಯೊಡನೆ, ಸಂಗತಾ-ಕೂಡಿದಳು. ॥೧೧॥ ಮಹಾತೇಜಾಃ-ಮಹಾತೇಜಸ್ವಿಯಾದ, ಶತಾನಂದಃ ಶತಾನಂದಋಷಿಯು, ಭಾಷಿತಂ-ಹೇಳಲ್ಪಟ್ಟ, ತಸ್ಯವಿಶ್ವಾಮಿತ್ರಸ್ಯ-ಆ ವಿಶ್ವಾಮಿತ್ರನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ರಾಮಂ - ಶ್ರೀರಾಮನನ್ನು ಕುರಿತು, ವಚನಂ-ಮಾತನ್ನು, ಅಬ್ರವೀತ್-ನುಡಿದನು. ॥೧೨॥ ಹೇನರಶ್ರೇಷ್ಠ-ಎಲೈ ಪುರುಷಶ್ರೇಷ್ಠನೇ, ತೇ-ನಿನಗೆ, ಸ್ವಾಗತಂ-

ನಿಂದ ಶಾಂತಮನಃಪೂರ್ವಕ ನಮಸ್ಕರಿಸಲ್ಪಟ್ಟನಷ್ಟೆ?" ಹೀಗೆ ನುಡಿದ ಶತಾನಂದನ ನುಡಿಗಳನ್ನು ಕೇಳಿ ನುಡಿ ಜಾಣ್ಮೆಯುಳ್ಳ ವಿಶ್ವಾಮಿತ್ರನು "ಅಯ್ಯಾ ಮುನಿಶ್ರೇಷ್ಠನೆ! ಕಾಲವು ಮೀರದೆ ಮಾಡಬೇಕಾದ ಕಾರ್ಯವು ನನ್ನಿಂದ ಮಾಡಲ್ಪಟ್ಟಿತು. ಭೃಗುಮುನಿ ಕುಮಾರನಾದ ಜಮದಗ್ನಿಯೊಡನೆ ರೇಣುಕಾದೇವಿಯು ಸೇರಿದಂತೆ, ನಿನ್ನ ತಂದೆಯಾದ ಗೌತಮನೊಡನೆ, ನಿನ್ನ ಜನನಿಯು ಸೇರಿದಳಾವದಳು" ಎಂದನು. ಮಹಾ ತೇಜಸ್ವಿಯಾದ ಶತಾನಂದನು ಕೌಶಿಕನ ನುಡಿಗಳನ್ನು ಕೇಳಿ ರಾಮಚಂದ್ರನನ್ನು ಕುರಿತು ಹೀಗೆಂದನು. ॥೩-೧೨॥

ರಾಘವ ॥ ವಿಶ್ವಾಮಿತ್ರಂ ಪುರಸ್ಕೃತ್ಯ ಮಹರ್ಷಿಮಪರಾಜಿತಂ ॥ ೧೩ ॥ ಅಚಿಂತ್ಯ ಕರ್ಮಾ ತಪಸಾ ಬ್ರಹ್ಮರ್ಷಿರತುಲಪ್ರಭಃ ॥ ವಿಶ್ವಾಮಿತ್ರೋ ಮಹಾ ತೇಜಾ ವೇತ್ತ್ಯೇನಂ ಪರಮಾಂ ಗತಿಂ ॥ ೧೪ ॥ ನಾಸ್ತಿ ಧನ್ಯತರೋ ರಾಮ ತ್ವತ್ತೋನ್ಯೋ ಭುವಿ ಕಶ್ಚನ ॥ ಗೋಪ್ತಾ ಕುಶಿಕ ಪುತ್ರಸ್ತೇ ಯೇನ ತಪ್ತಂ ಮಹತ್ತಪಃ ॥೧೫॥ ಶ್ರೂಯತಾಂ ಚಾಭಿಧಾಸ್ಯಾಮಿ ಕೌಶಿಕಸ್ಯ ಮಹಾತ್ಮನಃ॥ ಯಥಾಬಲಂ ಯಥಾವೃತ್ತಂ ತನ್ಮೇ ನಿಗದತಶ್ಶೃಣು ॥ ೧೬ ॥ ರಾಜಾ

ಸುಖಾಗಮನವೇ,ಹೇರಾಘವ-ಎಲೈರಘುಕುಲದಲ್ಲಿಹುಟ್ಟಿದವನೇ, ಅಪರಾಜಿತಂ-ಯಾರಿಂದಲೂ ಸೋಡದಿರುವ, ಮಹರ್ಷಿಂ-ಬ್ರಹ್ಮರ್ಷಿಯಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಪುರಸ್ಕೃತ್ಯ-ಮುಂದಿರಿಸಿಕೊಂಡು ದಿಷ್ಟ್ಯಾ-ದೈವಾಧೀನದಿಂದ, ಪ್ರಾಪ್ತಃ - ಬಂದವನು, ಅಸಿ-ಆದೆ. ॥ ೧೩ ॥ ಮಹಾತೇಜಾಃ-ಮಹಾ ಪ್ರಭಾವವಂತನಾದ, ತಪಸಾ - ತಪಸ್ಸಿನಿಂದ, ಬ್ರಹ್ಮರ್ಷಿಃ - ಬ್ರಹ್ಮರ್ಷಿತ್ವವನ್ನು ಹೊಂದಿರುವ, ಅತುಲಪ್ರಭಃ-ಸಮಾನವಿಲ್ಲದವಕಾಂತಿಯುಳ್ಳ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಅಚಿಂತ್ಯಕರ್ಮಾ-ಚಿಂತಿಸಲಸಾಧ್ಯವಾದ ಜಗತ್ಸೃಷ್ಟ್ಯಾದಿರೂಪವ್ಯಾಪಾರವುಳ್ಳವನು,ಏನಂ-ಈ ವಿಶ್ವಾಮಿತ್ರನನ್ನು, ಪರಮಾಂ-ಶ್ರೇಷ್ಠವಾದ, ಗತಿಂ-ಸುಖಪ್ರದಾಯಕವಾದ ಗತಿಯನ್ನು ಕೊಡುವವನನ್ನಾಗಿ, ವೇತ್ತಿ-ತಿಳಿದುಕೊಂಡಿರುವೆಯಾ. ॥೧೪॥ ಹೇರಾಮ-ಎಲೈ ಶ್ರೀರಾಮನೇ,ತ್ವತ್ತಃ-ನಿನಗಿಂತಲೂ, ಅನ್ಯಃ-ಬೇರೆ, ಕಶ್ಚನ-ಯಾವನೂ, ಭುವಿ- ಈ ಜಗತ್ತಿನಲ್ಲಿಯೂ, ಧನ್ಯತರಃ-ಅತಿಶಯವಾದ ಧನ್ಯನು, ನಾಸ್ತಿ-ಇಲ್ಲ, ಯೇನ-ಯಾವ ವಿಶ್ವಾಮಿತ್ರನಿಂದ, ಮಹತ್ - ಬಹಳವಾದ, ತಪಃ-ತಪವು, ತಪ್ತಂ-ತಪಿಸಲ್ಪಟ್ಟಿತೋ, ಸಕುಶಿಕಪುತ್ರಃ - ಅಂಥಾ ವಿಶ್ವಾಮಿತ್ರನು, ತೇ- ನಿನಗೆ, ಗೋಪ್ತಾ - ರಕ್ಷಕನಾದನೋ, ॥೧೫॥ ಮಹಾತ್ಮನಃ-ಮಹಾತ್ಮನಾದ, ಕೌಶಿಕಸ್ಯ-ವಿಶ್ವಾಮಿತ್ರನ, ಬಲಂ-ಬಲವು,ಯಥಾ-ಹೇಗೋ, ವೃತ್ತಂ-ಚರಿತ್ರವೂ,ಯಥಾ-ಹೇಗೋ, ತತ್-ಆ ಬಲವನ್ನು ನಿಗದತಃ-ಹೇಳುತ್ತಿರುವ,ಮೇ-ನನ್ನ ಮಾತನ್ನು, ಶೃಣು - ಕೇಳು, ಅಭಿಧಾಸ್ಯಾಮಿ - ಹೇಳುತ್ತೇನೆ, ಶ್ರೂಯತಾಂ - ಕೇಳಲ್ಪಡಲಿ, ಧರ್ಮಾತ್ಮಾ-ಧರ್ಮಿಷ್ಠನಾದ, ಏಷಃ - ಈ ವಿಶ್ವಾಮಿತ್ರನು, ಅರಿಂದಮಃ - ಶತ್ರು ಸಂಹಾರಕನಾಗಿ,

"ರಘುನಂದನ! ನಿನಗೆ ಸುಖಾಗಮನವಷ್ಟೆ! ಎಲೈ ಪುರುಷಶ್ರೇಷ್ಠನೆ! ಯಾರಿಂದಲೂ ಗೆಲ್ಲಲಸದಳನಾದವನೂ, ಬ್ರಹ್ಮರ್ಷಿಯೂ ಆದ ವಿಶ್ವಾಮಿತ್ರನನ್ನು ಪುರಸ್ಕರಿಸಿ ಅದೃಷ್ಟವಶಾತ್ ಇಲ್ಲಿಗೆ ಬಂದಿರುವೆ. ಮಹಾತೇಜಸ್ವಿಯಾದ ವಿಶ್ವಾಮಿತ್ರಮುನಿಯು, ಯೋಚಿಸಲು ಸಹ ಅಸಾಧ್ಯವಾದ ನೂತನ ಸೃಷ್ಟಿಯೇ ಮೊದಲಾದಕಾರ್ಯಗಳುಳ್ಳವನಾಗಿಯೂ, ತಪಸ್ಸಿನಿಂದಲೇ ಬ್ರಹ್ಮರ್ಷಿತ್ವವನ್ನು ಪಡೆದಿರುವವನಾಗಿಯೂ ಇರುವನು ಈತನು ನಿನಗೆ ಪರಮ ಹಿತಕರನೆಂಬುದನ್ನು ತಿಳಿದಿರುವೆಯಷ್ಟೆ? ಅಯ್ಯಾ ರಘುನಂದನನೆ! ಯಾವ ಮಹಾತ್ಮನಿಂದ ಉಗ್ರವಾದ ತಪವು ಆಚರಿಸಲ್ಪಟ್ಟಿತೋ, ಅಂತಹ ಕುಶಿಕ ಕುಮಾರನಿಂದ ರಕ್ಷಿತನಾಗಿರುವ ನಿನಗಿಂತಲೂ ಧನ್ಯನಾದವನು ಜಗತ್ತಿನಲ್ಲಿಯೇ ಇಲ್ಲವು. ॥ ೧೩ ೧೫ ॥ ಈ ಕುಶಿಕನಂದನನ ಬಲವನ್ನೂ, ಚರಿತ್ರೆಯನ್ನೂ ಹೇಳುವೆನು ಕೇಳು; ಧರ್ಮಿಷ್ಠನಾದ ಈತನು ಹಗೆಗಳನ್ನು ನಾಶಗೊಳಿಸಿದ

ಭೂದೇಷ ಧರ್ಮಾತ್ಮಾ ದೀರ್ಘಕಾಲ ಮರಿಂದಮಃ ॥ ಧರ್ಮಜ್ಞಃ ಕೃತವಿದ್ಯಶ್ಚ
ಪ್ರಜಾನಾಂಚ ಹಿತೇರತಃ ॥೧೭॥ ಪ್ರಜಾಪತಿ ಸುತಸ್ತ್ವಾಸೀತ್ಕುಶೋನಾಮ
ಮಹೀಪತಿಃ ॥ ಕುಶಸ್ಯ ಪುತ್ರೋ ಬಲವಾನ್ ಕುಶನಾಭ ಸ್ಸುಧಾರ್ಮಿಕಃ ॥೧೮॥
ಕುಶನಾಭ ಸುತಸ್ತ್ವಾಸೀದ್ಗಾಧಿರಿತ್ಯೇವ ವಿಶ್ರುತಃ ॥ ಗಾಧೇಃ ಪುತ್ರೋ ಮಹಾ
ತೇಜಾ ವಿಶ್ವಾಮಿತ್ರೋ ಮಹಾಮುನಿಃ ॥೧೯॥ ವಿಶ್ವಾಮಿತ್ರೋ ಮಹಾತೇಜಾಃ
ಪಾಲಯಾಮಾಸ ಮೇದಿನೀಂ॥ ಬಹುವರ್ಷ ಸಹಸ್ರಾಣಿ ರಾಜಾ ರಾಜ್ಯ ಮಕಾ
ರಯತ್ ॥೨೦॥ ಕದಾಚಿತ್ತು ಮಹಾತೇಜಾ ಯೋಜಯಿತ್ವಾ ವರೂಥಿನೀಂ॥
ಅಕ್ಷೌಹಿಣೀ ಪರಿವೃತಃ ಪರಿಚಕ್ರಾಮ ಮೇದಿನೀಂ ॥ ನಗರಾಣಿ ಸರಾಷ್ಟ್ರಾಣಿ

---

ಧರ್ಮಜ್ಞಃ - ಧರ್ಮಮರ್ಮವನ್ನು ತಿಳಿದವನಾಗಿ, ಕೃತವಿದ್ಯಶ್ಚ - ಶಿಕ್ಷಿತವಿದ್ಯಾವಂತನಾಗಿ, ಪ್ರಜಾನಾಂಚ-ಪ್ರಜೆಗಳಿಗೂ, ಹಿತೇ-ಹಿತದಲ್ಲಿ, ರತಃ-ಆಸಕ್ತನಾದ, ರಾಜಾ-ಅರಸು, ಅಭೂತ್ - ಆದನು. ॥೧೭॥ ಪ್ರಜಾಪತಿಸುತಃ-ಬ್ರಹ್ಮಪುತ್ರನಾದ, ಕುಶೋನಾಮ-ಕುಶನೆಂದು ಪ್ರಸಿದ್ಧನಾದ, ಮಹೀಪತಿಶ್ಚ-ಅರಸು, ಆಸೀತ್-ಇದ್ದನು, ಕುಶಸ್ಯ-ಕುಶನಿಗೆ, ಪುತ್ರಃ-ಮಗನಾದ,ಬಲವಾನ್-ಬಲವಂತನಾದ, ಕುಶನಾಭ-ಕುಶನಾಭನೆಂಬವನು, ಸುಧಾರ್ಮಿಕಃ- ವಿಶೇಷವಾಗಿ ಧರ್ಮಿಷ್ಠನಾದನು, ಕುಶನಾಭ ಸುತಸ್ತು-ಕುಶನಾಭನಿಗೆ ಕುವರನು, ಗಾಧಿರಿತ್ಯೇವ-ಗಾಧಿಯೆಂಬಂತೆ, ವಿಶ್ರುತಃ- ಪ್ರಸಿದ್ಧನಾದವನು, ಆಸೀತ್-ಆದನು. ॥ ೧೮ ॥ ಗಾಧೇಃ-ಗಾಧಿರಾಯನಿಗೆ, ಪುತ್ರಃ - ಕುವರನಾದ, ಮಹಾತೇಜಾಃ-ಮಹಾಪರಾಕ್ರಮಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಆಸೀತ್-ಆದನು. ॥ ೧೯ ॥ ಮಹಾತೇಜಾಃ-ಮಹಾತೇಜೋವಂತನಾದ, ಮಹಾಮುನಿಃ-ಮಹರ್ಷಿಯಾದ ವಿಶ್ವಾಮಿತ್ರನು, ಮೇದಿನೀಂ-ಭೂಮಿಯನ್ನು, ಪಾಲಯಾಮಾಸ-ಸಂರಕ್ಷಿಸಿದನು. ರಾಜಾ-ಅರಸಾದ ಈ ವಿಶ್ವಾಮಿತ್ರನು, ಬಹುವರ್ಷಸಹಸ್ರಾಣಿ-ಅನೇಕವರ್ಷ ಸಹಸ್ರಗಳು, ರಾಜ್ಯಂ - ರಾಜ್ಯವನ್ನು, ಅಕಾರಯತ್- ಆಳಿದನು, ॥೨೦॥ ಕದಾಚಿತ್-ಒಂದಾನೊಂದು ಕಾಲದಲ್ಲಿ, ಮಹಾತೇಜಾಃ- ಮಹಾ ಪ್ರಭಾವವಂತನಾದ ವಿಶ್ವಾಮಿತ್ರನು, ವರೂಥಿನೀಂ-ಸೈನ್ಯವನ್ನು, ಯೋಜಯಿತ್ವಾ-ಕೂಡಿಸಿ, ಅಕ್ಷೌಹಿಣೀ - ಅಕ್ಷೌಹಿಣೀ ಸಂಖ್ಯೆಯುಳ್ಳದಂಡಿನಿಂದ, ಪರಿವೃತಃ-ಸುತ್ತುವರಿದು, ಮೇದಿನೀಂ-ಭೂಮಿಯಲ್ಲಿ, ಪರಿಚಕ್ರಾಮ-ಯಲ್ಲೆಡೆಯಲ್ಲಿಯೂ ಸಂಚರಿಸಿದನು, ॥೨೧॥ ಹೇರಾಮ-ಎಲೈ ಶ್ರೀರಾಮನೇ, ನಗರಾಣಿ-ಪಟ್ಟಣಗಳನ್ನೂ, ರಾಷ್ಟ್ರಾಣಿ-ದೇಶಗಳನ್ನೂ, ಸರಿತಶ್ಚ-ನದಿಗಳನ್ನೂ, ತಥಾ-ಹಾಗೆಯೇ, ಗಿರೀನ್-ಬೆಟ್ಟಗಳನ್ನು, ಆಪ್ರ

---

ವನೂ, ಧರ್ಮ ಮರ್ಮಗಳನ್ನರಿತವನೂ, ಶಿಕ್ಷಿತವಾದ ಧನುರ್ವಿದ್ಯೆಯುಳ್ಳವನಾಗಿಯೂ, ಪ್ರಜಾಹಿತೈಕಪಕ್ಷಪಾತಿಯೂ ಆದ ರಾಜನಾಗಿದ್ದನು. ॥ ೧೬-೧೭ ॥ ಬ್ರಹ್ಮ ಕುವರನಾದ ಕುಶನೆಂಬೊಬ್ಬ ರಾಜನಿದ್ದನು. ಆತನ ಮಗನಾದ ಕುಶನಾಭನೆಂಬುವನಿಗೆ ಗಾಧಿಯೆಂದು ಹೆಸರುಗೊಂಡ ಕುವರನುಂಟಾದನು. ಆ ಗಾಧಿರಾಯನ ಮಗನೇ ಈ ವಿಶ್ವಾಮಿತ್ರನು. ಮಹಾತೇಜಸ್ವಿಯಾದೀ ವಿಶ್ವಾಮಿತ್ರನು ಅನೇಕ ಸಹಸ್ರ ವರ್ಷಗಳ ಕಾಲ ರಾಜ್ಯವನ್ನಾಳುತ್ತಿದ್ದನು. ॥ ೨೦ ॥ ಒಂದಾನೊಂದು ದಿನ, ಈತನು ತನ್ನ ಸೇನೆಯೆಲ್ಲವನ್ನೂ ಒಟ್ಟುಗೂಡಿಸಿ ಭೂಸಂಚಾರವನ್ನು ಮಾಡುತ್ತ ದೇಶ ಸಹಿತವಾದ,ನಗರಗಳನ್ನೂ, ಗಿರಿ ನದಿಗಳನ್ನೂ, ಆಶ್ರಮ

ಸರಿತಶ್ಚ ತಥಾ ಗಿರೀನ್||ಆಶ್ರಮಾನ್ ಕ್ರಮಶೋ ರಾಮ ವಿಚರನ್ನಾಜಗಾಮಹ ||
೨೨||ವಸಿಷ್ಠಸ್ಯಾಶ್ರಮಪದಂ ನಾನಾವೃಕ್ಷ ಸಮಾಕುಲಂ|| ನಾನಾ ಮೃಗಗಣಾ
ಕೀರ್ಣಂ ದೇವರ್ಷಿಗಣ ಸೇವಿತಂ ||೨೩|| ದೇವದಾನವ ಗಂಧರ್ವೈಃ ಕಿನ್ನರೈರುಪ
ಶೋಭಿತಂ|| ಪ್ರಶಾಂತ ಹರಿಣಾಕೀರ್ಣಂ ದ್ವಿಜಸಂಘನಿಷೇವಿತಂ||೨೪|| ಬ್ರಹ್ಮರ್ಷಿ
ಗಣಸಂಕೀರ್ಣಂ ದೇವರ್ಷಿಗಣ ಸೇವಿತಂ || ತಪಶ್ಚರಣಸಂಸಿದ್ಧೈ ರಗ್ನಿಕಲ್ಪೈ
ರ್ಮಹಾತ್ಮಭಿಃ ||೨೫|| ಅಬ್ಭಕ್ಷೈ ರ್ವಾಯುಭಕ್ಷೈ ಶ್ಚ ಶೀರ್ಣಪರ್ಣಾಶನೈಸ್ತಥಾ||
ಫಲಮೂಲಾ ಶನೈ ರ್ದಾಂತೈ ರ್ಜಿತರೋಷೈ ರ್ಜಿತೇಂದ್ರಿಯೈಃ ||೨೬|| ಋಷಿಭಿರ್ವಾ

---

ನ್-ಋಷ್ಯಾಶ್ರಮಗಳನ್ನು ಕುರಿತು, ಕ್ರಮಶಃ-ಅನುಪೂರ್ವಿಯಾಗಿ, ಸಃ-ವಿಶ್ವಾಮಿತ್ರನು, ವಿಚರನ್-ಸಂಚರಿಸುತ್ತ, ಆಜಗಾಮ- ಬಂದನು. || ೨೨ || ಜಯತಾಂ-ಜಯಶೀಲರಲ್ಲಿ, ಶ್ರೇಷ್ಠಃ-ಶ್ರೇಷ್ಠನಾದ, ಮಹಾಬಲಃ - ಮಹಾಬಲವಂತನಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ನಾನಾವೃಕ್ಷಸಮಾಕುಲಂ-ನಾನಾಬಗೆಗಳಾದ ವೃಕ್ಷಗಳಿಂದ ತುಂಬಿರುವ, ನಾನಾಮೃಗಗಣಾಕೀರ್ಣಂ-ನಾನಾವಿಧಗಳಾದ ಪಕ್ಷಿಗಳ ತಂಡಗಳಿಂದ ವ್ಯಾಪ್ತಗಳಾದ, ಸಿದ್ಧಚಾರಣಸೇವಿತಂ - ಸಿದ್ಧರಿಂದಲೂ, ಚಾರಣರಿಂದಲೂ ಸೇವಿತವಾದ, ದೇವದಾನವಗಂಧರ್ವೈಃ-ದೇವ, ರಾಕ್ಷಸ, ಗಂಧರ್ವರಿಂದಲೂ, ಕಿನ್ನರೈಃ-ಕಿನ್ನರರಿಂದಲೂ, ಉಪಶೋಭಿತಂ-ಕಂಗೊಳಿಸುತ್ತಿರುವ, ಪ್ರಶಾಂತಹರಿಣಾಕೀರ್ಣಂ-ಶಾಂತವಾದ ಹುಲ್ಲೆಗಳಿಂದ ವ್ಯಾಪ್ತವಾದ, ದ್ವಿಜಸಂಘನಿಷೇವಿತಂ- ಪಕ್ಷಿಸಮೂಹಗಳಿಂದ ಸೇವಿಸಲ್ಪಡುತ್ತಿರುವ, ಬ್ರಹ್ಮರ್ಷಿಗಣ ಸಂಕೀರ್ಣಂ-ಬ್ರಹ್ಮರ್ಷಿಗಳ ಸಮುದಾಯಗಳಿಂದ ವ್ಯಾಪ್ತವಾದ, ದೇವರ್ಷಿಗಣಸೇವಿತಂ - ದೇವರ್ಷಿಗಳ ತಂಡಗಳಿಂದ ಸೇವಿಸಲ್ಪಡುತ್ತಿರುವ, ತಪಶ್ಚರಣಸಂಸಿದ್ಧೈಃ - ತಪಶ್ಚರ್ಯೆಯಿಂದ ಸಿದ್ಧಿಯನ್ನು ಪಡೆದಿರುವ, ಅಗ್ನಿಕಲ್ಪೈಃ-ಅಗ್ನಿಗೆಸಮಾನರಾದ, ಮಹಾತ್ಮಭಿಃ-ಮಹಾನುಭಾವರಾದ, ಅಬ್ಭಕ್ಷೈ-ಉದಕಾಹಾರಿಗಳಾದ, ವಾಯುಭಕ್ಷೈಃ-ವಾಯ್ವಾಹಾರಿಗಳಾದ, ತಥಾ-ಹಾಗೆಯೇ, ಶೀರ್ಣಪರ್ಣಾಶನೈಃ-ಜೀರ್ಣವಾದ ಎಲೆಗಳೇ ಆಹಾರವಾಗುಳ್ಳ, ದಾಂತೈ - ಬಹಿರಿಂದ್ರಿಯನಿಗ್ರಹವನ್ನು ಮಾಡಿರುವ, ಜಿತರೋಷೈಃ-ಜಯಿಸಲ್ಪಟ್ಟ ಕ್ರೋಧವುಳ್ಳ, ಜಿತೇಂದ್ರಿಯೈಃ-ಜಯಿಸಲ್ಪಟ್ಟ ಇಂದ್ರಿಯವ್ಯಾಪಾರಗಳುಳ್ಳ, ವಾಲಖಿಲ್ಯೈಃ-ವಾಲಖಿಲ್ಯರೆಂದು ಹೆಸರುಳ್ಳ, ಜಪಹೋಮಪರಾಯಣೈಃ-ಜಪಗಳಲ್ಲಿಯೂ, ಹೋಮಗಳಲ್ಲಿಯೂ ಆಸಕ್ತರಾದ, ಅನ್ಯೈಃ-ಮತ್ತೂಕೆಲವರಾದ, ವೈಖಾನಸೈಶ್ಚೈವ-ವೈಖಾನಸರೂ ಎಂದು ಪ್ರಸಿದ್ಧರಾದ, ಋಷಿಭಿಃ-ಋಷಿಗಳಿಂದ, ಸಮಂತಾತ್-ಎಲ್ಲ ಕಡೆಗಳಲ್ಲಿಯೂ, ಉಪಶೋಭಿತಂ-

---

ಗಳನ್ನೂ ಕುರಿತು ಹೋಗುತ್ತ, ಅನೇಕ ವೃಕ್ಷನಿವಹಗಳಿಂದೊಡಗೂಡಿದುದಾಗಿಯೂ, ಬಗೆಬಗೆಯ ಮೃಗಗಳಿಂದ ಗಂಭೀರವಾಗಿಯೂ, ಸಿದ್ಧ, ಚಾರಣ, ದೇವ, ದಾನವ, ಗಂಧರ್ವರಿಂದುಪಸೇವಿತವಾಗಿಯೂ, ವಾಯುಭಕ್ಷಕರೂ, ಪರ್ಣಾಶನರೂ, ಜಿತೇಂದ್ರಿಯರೂ, ಗೆಲ್ಲಲ್ಪಟ್ಟ ರೋಷವುಳ್ಳವರೂ, ಜಪ ತಪ ಪರಾಯಣರೂ ಆದ ಋಷಿಗಳಿಂದ ತುಂಬಿ ತುಳುಕಾಡುತ್ತಿರು

ಲಖಿಲ್ಯೈಶ್ಚ ಜಪಹೋಮಪರಾಯಣೈಃ॥ ಅನ್ಯೈರ್ವೈಖಾನಸೈಶ್ಚೈವ ಸಮಂತಾ
ದುಪಶೋಭಿತಂ ॥೨೮॥ ವಸಿಷ್ಠಸ್ಯಾಶ್ರಮಪದಂ ಬ್ರಹ್ಮಲೋಕ ಮಿವಾಪರಂ ॥
ದದರ್ಶ ಜಯತಾಂ ಶ್ರೇಷ್ಠೋ ವಿಶ್ವಾಮಿತ್ರೋ ಮಹಾಬಲಃ ॥೨೮॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಪಂಚಾಶಸ್ಸರ್ಗಃ.

---

ಹೊಳೆಯುತ್ತಿರುವ, ವಸಿಷ್ಠಸ್ಯ-ವಸಿಷ್ಠಋಷಿಯ, ಆಶ್ರಮಪದಂ-ಆಶ್ರಮಸ್ಥಾನವನ್ನು ಕುರಿತು, ಆಜಗಾಮ-ಬಂದನು. ॥ ೨೭ ॥ ಅಪರಂ-ಮತ್ತೊಂದಾದ, ಬ್ರಹ್ಮಲೋಕಮಿವ-ಸತ್ಯಲೋಕದಂತಿರುವ, ವಸಿಷ್ಠಸ್ಯ-ವಸಿಷ್ಠಋಷಿಯ, ಆಶ್ರಮಪದಂ-ಆಶ್ರಮಸ್ಥಾನವನ್ನು, ದದರ್ಶ-ಕಂಡನು. ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಪಂಚಾಶಸ್ಸರ್ಗಃ.

---

ವುದಾಗಿಯೂ, ವಾಲಖಿಲ್ಯ, ವೈಖಾನಸರಿಂದಲೂ ರಾರಾಜಿಸುತ್ತಿರುವ, ಮತ್ತೊಂದು ಬ್ರಹ್ಮಲೋಕವೋ ಎಂಬಂತಿರುವ ವಸಿಷ್ಠಮುನಿಯ ಆಶ್ರಮವನ್ನು ಕಂಡವನಾದನು. ॥ ೨೧-೨೮॥

ಇಂತಿದು ವಿಶ್ವಾಮಿತ್ರ ಕಥಾಕಥನವೆಂಬ ಐವತ್ತೊಂದನೆಯ ಸರ್ಗವು

ಸಮಾಪ್ತವಾದುದು.

# ಬಾಲಕಾಂಡೇ ದ್ವಿಪಂಚಾಶಸ್ಸರ್ಗಃ.

ಸದೃಷ್ಟ್ವಾ ಪರಮಪ್ರೀತೋ ವಿಶ್ವಾಮಿತ್ರೋ ಮಹಾಬಲಃ॥ ಪ್ರಣತೋ
ವಿನಯಾದ್ವೀರೋ ವಸಿಷ್ಠಂ ಜಪತಾಂ ವರಂ ॥೧॥ ಸ್ವಾಗತಂ ತವಚೇತ್ಯುಕ್ತೋ
ವಸಿಷ್ಠೇನ ಮಹಾತ್ಮನಾ ॥ ಆಸನಂಚಾಸ್ಯ ಭಗವಾನ್ ವಸಿಷ್ಠೋ ವ್ಯಾದಿದೇ
ಶಹ ॥೨॥ ಉಪವಿಷ್ಟಾಯಚ ತದಾ ವಿಶ್ವಾಮಿತ್ರಾಯ ಧೀಮತೇ ॥
ಯಥಾನ್ಯಾಯಂ ಮುನಿವರಃ ಫಲಮೂಲಾನ್ಯುಪಾಹರತ್ ॥೩॥ ಪ್ರತಿಗೃಹ್ಯತು
ತಾಂ ಪೂಜಾಂ ವಸಿಷ್ಠಾದ್ರಾಜಸತ್ತಮಃ॥ ತಪೋಗ್ನಿಹೋತ್ರ ಶಿಷ್ಯೇಷು ಕುಶಲಂ

---

ವೀರಃ-ಶೂರನೂ, ಮಹಾಬಲಃ-ಮಹಾ ಬಲವಂತನೂ ಆದ, ವಿಶ್ವಾಮಿತ್ರಃ-ವಿಶ್ವಾಮಿತ್ರ
ಋಷಿಯು, ಜಪತಾಂ-ಜಪಮಾಡುವವರಲ್ಲಿ, ವರಂ-ಶ್ರೇಷ್ಠನಾದ, ವಸಿಷ್ಠಂ-ವಸಿಷ್ಠಋಷಿಯನ್ನು,
ದೃಷ್ಟ್ವಾ-ಕಂಡು, ಪರಮಪ್ರೀತಃ - ಬಹಳ ಸಂತೋಷಗೊಂಡು, ವಿನಯಾತ್ - ನಮ್ರಭಾವದಿಂದ,
ಪ್ರಣತಃ-ನಮಸ್ಕರಿಸಿದನು. ॥೧॥ ಮಹಾತ್ಮನಾ-ಮಹಾನುಭಾವನಾದ, ವಸಿಷ್ಠೇನ-ವಸಿಷ್ಠಋಷಿ
ಯಿಂದ, ತವಚ-ನಿನಗೂ, ಕುಶಲಂ ಕುಶಲವೋ, ಇತಿ-ಎಂದು, ಉಕ್ತಃ-ಹೇಳಲ್ಪಟ್ಟನು, ಭಗವಾನ್-
(ಗೊ॥) ಷಡ್ಗುಣೈಶ್ವರ್ಯಸಂಪನ್ನನಾದ, (ತಿ) ಪೂಜ್ಯನಾದ, ವಸಿಷ್ಠಃ-ವಸಿಷ್ಠಋಷಿಯು, ಅಸ್ಯ-ಈ
ವಿಶ್ವಾಮಿತ್ರನಿಗೆ, ಆಸನಂಚ-ಆಸನವನ್ನೂ, ವ್ಯಾದಿದೇಶಹ-ಆಜ್ಞಾಪಿಸಿದನು. ॥೨॥ ಮುನಿವರಃ-
ಮುನಿಶ್ರೇಷ್ಠನಾದ ವಸಿಷ್ಠಋಷಿಯು, ತದಾ-ಆಗ, ಉಪವಿಷ್ಟಾಯ-ಕುಳಿತುಕೊಂಡಿರುವ, ಧೀಮತೇ-
ಬುದ್ಧಿಶಾಲಿಯಾದ, ವಿಶ್ವಾಮಿತ್ರಾಯ- ವಿಶ್ವಾಮಿತ್ರನಿಗೆ, ಯಥಾನ್ಯಾಯಂ - ಯಥಾಶಾಸ್ತ್ರವಾಗಿ,
ಫಲಮೂಲಾನಿ-ಫಲಗಳನ್ನೂ ಕಂದಮೂಲಗಳನ್ನೂ, ಉಪಾಹರತ್-ಸಮರ್ಪಿಸಿದನು. ॥೩॥ ರಾಜ
ಸತ್ತಮಃ-ರಾಜಶ್ರೇಷ್ಠನಾದ ವಿಶ್ವಾಮಿತ್ರನು, ವಸಿಷ್ಠಾತ್ - ವಸಿಷ್ಠಋಷಿಯಿಂದ, ತಾಂಪೂಜಾಂ-
ಆತಿಥ್ಯರೂಪವಾದ ಪೂಜೆಯನ್ನು ; ಪ್ರತಿಗೃಹ್ಯತು - ಪ್ರತಿಗ್ರಹಿಸಿ, ತಪೋಗ್ನಿಹೋತ್ರಶಿಷ್ಯೇಷು-
ತಪಸ್ಸಿನಲ್ಲಿಯೂ, ಅಗ್ನಿಹೋತ್ರದಲ್ಲಿಯೂ ಶಿಷ್ಯರ ವಿಷಯದಲ್ಲಿಯೂ ಸಹಾ, ಕುಶಲಂ-ಕ್ಷೇಮವನ್ನು,

---

ಅನಂತರವಲ್ಲಿ ಮಹಾಬಲಿಷ್ಠನಾದ ವಿಶ್ವಾಮಿತ್ರನು ಮಹಾತಪಸ್ವಿಯೂ, ಶ್ರೇಷ್ಠನೂ ಆದ ವಸಿಷ್ಠಮುನಿಯನ್ನು ಕಂಡು, ಬಹಳವಾದ ಆನಂದವನ್ನು ಹೊಂದಿ ಆತನನ್ನು ನಮಸ್ಕರಿಸಿದನು. ಆಗ ವಸಿಷ್ಠಋಷಿಯು ಆತನನ್ನು ಕುರಿತು "ಎಲೈ ರಾಜನೆ! ನಿನಗೆ ಕ್ಷೇಮವೆ?" ಎಂದು ಕೇಳಿ, ಕುಳಿತುಕೊಳ್ಳಲು ಪೀಠವೊಂದನ್ನು ತೋರಿ, ಆತನು ಕುಳಿತುಕೊಳ್ಳಲು ಫಲಮೂಲಗಳನ್ನು ಸಮರ್ಪಿಸಿದನು. ರಾಜಶ್ರೇಷ್ಠನಾದ ವಿಶ್ವಾಮಿತ್ರನು ವಸಿಷ್ಠಮುನಿಯಿಂದ ಆತಿಥಿಸತ್ಕಾರವನ್ನು ಹೊಂದಿ, ತಪಸ್ಸಿನ ವಿಷಯವಾಗಿಯೂ, ಅಗ್ನಿಹೋತ್ರದ ವಿಷಯವಾಗಿಯೂ, ಶಿಷ್ಯರ ಮತ್ತು ವನಸ್ಪತಿಗಳ ವಿಷಯವಾಗಿಯೂ ಕುಶಲವನ್ನು ಕೇಳಿದನು. ಆಗಲಾ ಮುನಿವರೇಣ್ಯನಾದ ವಸಿಷ್ಠಋಷಿಯು

ಪರ್ಯಪೃಚ್ಛತ ||೪|| ವಿಶ್ವಾಮಿತ್ರೋ ಮಹಾತೇಜಾ ವನಸ್ಪತಿ ಗಣೇತಥಾ ||
ಸರ್ವತ್ರ ಕುಶಲಂ ಚಾಹ ವಸಿಷ್ಠೋ ರಾಜಸತ್ತಮಂ ||೫|| ಸುಖೋಪವಿಷ್ಟಂ
ರಾಜಾನಂ ವಿಶ್ವಾಮಿತ್ರೋ ಮಹಾತಪಾಃ || ಪಪ್ರಚ್ಛ ಜಪತಾಂ ಶ್ರೇಷ್ಠೋ
ವಸಿಷ್ಠೋ ಬ್ರಹ್ಮಣಸ್ಸುತಃ ||೬|| ಕಚ್ಚಿತ್ತೇ ಕುಶಲಂ ರಾಜರ್ ಕಚ್ಚಿದ್ಧರ್ಮೇಣ
ರಂಜಯರ್||ಪ್ರಜಾಃಪಾಲಯಸೇ ವೀರ ರಾಜವೃತ್ತೇನ ಧಾರ್ಮಿಕ ||೭|| ಕಚ್ಚಿತ್ತೇ
ಸಂಭೃತಾ ಭೃತ್ಯಾಃ ಕಚ್ಚಿತ್ತಿಷ್ಠಂತಿ ಶಾಸನೇ ||೮ ಕಚ್ಚಿತ್ತೇ ವಿಜಿತಾಸ್ಸರ್ವೇ ರಿಪವೋ

ಪರ್ಯಪೃಚ್ಛತ-ಕೇಳಿದನು. ||೪|| ಮಹಾತೇಜಾಃ - ಮಹಾಪ್ರಭಾವವಂತನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು,ತಥಾ-ಹಾಗೆಯೇ,(೧)ವನಸ್ಪತಿಗಣೇ-ವೃಕ್ಷಗಳ ಸಮೂಹವಿಷಯದಲ್ಲಿಯೂ, ಕುಶಲಂ-ಕ್ಷೇಮವನ್ನು, ಪರ್ಯಪೃಚ್ಛತ-ಕೇಳಿದನು,ಮಹಾತಪಾಃ-ಮಹಾತಪಸ್ವಿಯಾದ,ವಸಿಷ್ಠಃ-ವಸಿಷ್ಠಋಷಿಯು ಸುಖೋಪವಿಷ್ಟಂ-ಸುಖವಾಗಿ ಕುಳಿತುಕೊಂಡಿರುವ, ರಾಜಸತ್ತಮಂ - ರಾಜಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ಸರ್ವತ್ರ-ಸರ್ವವಿಷಯದಲ್ಲಿಯೂ, ಕುಶಲಂ-ಕ್ಷೇಮವನ್ನು, ಆಹ-ಹೇಳಿದನು.||೫|| ಜಪತಾಂ-ಜಪಿಸುವರೊಳಗೆ, ಶ್ರೇಷ್ಠಃ-ಶ್ರೇಷ್ಠನಾದ, ಬ್ರಹ್ಮಣಃ-ಚತುರ್ಮುಖನಿಗೆ, ಸುತಃ- ಕುವರನಾದ, ವಸಿಷ್ಠಃ-ವಸಿಷ್ಠಋಷಿಯು, ರಾಜಾನಂ-ಅರಸನಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಪಪ್ರಚ್ಛ-ಕುಶಲವನ್ನು ಕೇಳಿದನು. ||೬|| ಹೇರಾಜರ್-ಎಲೈ ಅರಸೇ, ತೇ-ನಿನಗೆ, ಕುಶಲಂಕಚ್ಚಿತ್-ಕುಶಲವೇ, ಹೇಧಾರ್ಮಿಕ-ಎಲೈ ಧರ್ಮಪ್ರಧಾನನೇ, ಹೇವೀರ-ಎಲೈ ಶೂರನೇ,ಧರ್ಮೇಣ-ಸ್ವಧರ್ಮದಿಂದ, ರಂಜಯರ್-ಮನೋರಂಜನೆ ಮಾಡುತ್ತ, ಪ್ರಜಾಃ- ಪ್ರಜೆಗಳನ್ನು, ರಾಜವೃತ್ತೇನ - ಕ್ಷತ್ರಿಯವೃತ್ತಿಯಿಂದ, ಪಾಲಯಸೇ-ಪರಿಪಾಲನೆ ಮಾಡುತ್ತಿರುವೆಯಷ್ಟೆ.||೭| ತೇ-ನಿನ್ನ, ಭೃತ್ಯಾಃ-ಸೇವಕರು ಸಂಭೃತಾಃ-ಚನ್ನಾಗಿಪಾಲಿಸ್ಪಡುವರೇ, ಶಾಸನೇ-ನಿನ್ನ ಆಜ್ಞೆಯಲ್ಲಿ,ತಿಷ್ಠಂತಿ - ಇರುತ್ತಾರೆಯೇ, ಹೇರಿಪುಸೂದನ-ಎಲೈ ಶತ್ರುಸಂಹಾರಕನೇ, ತೇ-ನಿನ್ನಿಂದ, ಸರ್ವೇ-ಸಮಸ್ತ, ರಿಪವಃ-ಶತ್ರುಗಳೂ!

ಎಲ್ಲರೂ ಕ್ಷೇಮವೆಂದು ಹೇಳಿ, ಸುಖೋಪವಿಷ್ಟನಾದ ಕೌಶಿಕನನ್ನು ಕುರಿತು, "ಎಲೈ ನರಪಾಲನೆ! ನಿನಗೆ ಕ್ಷೇಮವೆ? ಧರ್ಮದಿಂದ ಪ್ರಜೆಗಳಿಗೆ ಆನಂದವನ್ನುಂಟು ಮಾಡುತ್ತ,ರಾಜ್ಯಪರಿಪಾಲನೆಯಂ ಗೈಯುತ್ತಿರುವೆಯಷ್ಟೆ? ನಿನ್ನ ಭೃತ್ಯವರ್ಗದವರು ನಿನ್ನ ಆಜ್ಞಾನುವರ್ತಿಗಳಾಗಿರುವರೆ? ಶತ್ರುಗಳೆಲ್ಲರೂ ಜಯಿಸಲ್ಪಟ್ಟಿರುವರಷ್ಟೆ" ಎಂದನು. ಇಂತೆನಲು ಮಹಾತೇಜಸ್ವಿಯಾದ

ಟಿ. (೧) "ವನಸ್ಪತಿ ಗಣೇ ಕುಶಲಂ ಪರ್ಯಪೃಚ್ಛತ ವಿಶ್ವಾಮಿತ್ರಃ" ಎಂಬೆಡೆಯಲ್ಲಿ ವಾಚಕರಿಗೆ "ಗಿಡ ಮರಗಳ ವಿಷಯದಲ್ಲಿಯೂ ಕುಶಲವನ್ನು ಕೇಳುವದುಂಟೆ?" ಎಂಬ ಸಂಶಯವು ಹುಟ್ಟಬಹುದು. ಋಷಿಗಳೆಲ್ಲರೂ ಯಜನಶೀಲರೆಂಬುದು ಲೋಕರೂಢಿ. ಯಜನಕ್ಕೆ ಬೇಕಾದುದು ಅನ್ನ, ತುಪ್ಪ, ಹಾಲು, ಸಮಿತ್ತೇ ಮುಂತಾದುವು ಎಲ್ಲಕ್ಕಿಂತಲೂ ಸಮಿತ್ತು ಬಹು ಮುಖ್ಯವಾದುದು, ಅಲ್ಲದೆ ಋಷಿಗಳ ಸರ್ವಸ್ವವೂ ವನಸ್ಪತಿಗಳೇಆಗಿರುತ್ತದೆ. ಒಟ್ಟಿನಲ್ಲಿ ನಿಸರ್ಗದೇವತೆಯನ್ನಾರಾಧಿಸಿ ಜೀವಿಕೆಯನ್ನು ಕಲ್ಪಿಸಿಕೊಂಡಿರುವರು ಋಷಿಗಳೆಂದು ಹೇಳಬಹುದು. ಆದಿಪುರುಷನ ಯಜ್ಞಕಾಲದಲ್ಲಿ "ಯಜ್ಞಂ ವೈರಕ್ಷಂತು" ಎಂದು ಹೇಳಿರುವದೂ ಈ ತತ್ವದಿಂದಲೇ. ಇದರಿಂದಲೇ ವರ್ಣಾಶ್ರಮಧರ್ಮಗಳು ಹುಟ್ಟಿದ್ದು. ವನಸ್ಪತಿಗಳು ಉದ್ಭಿಜ್ಜ (ಭೂಮಿಯಿಂದ ಹುಟ್ಟತಕ್ಕುವು) ಗಳಾದುದರಿಂದ ಇವು ಚತುರ್ವಿಧ ಭೂತಗಳಲ್ಲಿ ಅಂತರ್ಗತವಾದವು. ಸಕಲ ಭೂತಗಳ ಕ್ಷೇಮ ಚಿಂತನೆಯುಳ್ಳಾತನು ರಾಜನೆಂಬುದನ್ನರುಹಲು ಆದಿಕವಿಯು ಹೀಗೆ ಹೇಳಿರಬಹುದೆಂದು ತೋರುತ್ತದೆ.

ರಿಪುಸೂದನ ॥ ೮ ॥ ಕಚ್ಚಿದ್ಬಲೇಷು ಕೋಶೇಷು ಮಿತ್ರೇಷುಚ ಪರಂತಪ ॥ ಕುಶಲಂ ತೇ ನರವ್ಯಾಘ್ರ ಪುತ್ರಪೌತ್ರೇ ತವಾನಘ ॥೯॥ ಸರ್ವತ್ರ ಕುಶಲಂ ರಾಜಾ ವಸಿಷ್ಠಂ ಪ್ರತ್ಯುದಾಹರತ್ ॥ ವಿಶ್ವಾಮಿತ್ರೋ ಮಹಾತೇಜಾ ವಸಿಷ್ಠಂ ವಿನಯಾನ್ವಿತಃ ॥೧೦॥ ಕೃತ್ವೋಭೌ ಸುಚಿರಂ ಕಾಲಂ ಧರ್ಮಿಷ್ಠೌ ತೌ ಕಥಾಶ್ಶುಭಾಃ ॥ ಮುದಾ ಪರಮಯಾ ಯುಕ್ತೌ ಪ್ರೀಯೇತಾಂ ತೌ ಪರಸ್ಪರಂ ॥ ೧೧ ॥ ತತೋವಸಿಷ್ಠೋ ಭಗವಾನ್ ಕಥಾಂತೇ ರಘುನಂದನ ॥ ವಿಶ್ವಾಮಿತ್ರಮಿದಂ

---

ವಿಜಿತಾಃ-ಜಯಿಸಲ್ಪಟ್ಟರೇ. ॥ ೮ ॥ ಹೇಪರಂತಪ ಎಲೈ ಶತ್ರುಸಂಹಾರಕನೇ, ಬಲೇಷು-ಸೈನ್ಯಗಳಲ್ಲಿಯೂ, ಕೋಶೇಷು-ಬೊಕ್ಕಸಗಳಲ್ಲಿಯೂ, ಮಿತ್ರೇಷುಚ-ಸ್ನೇಹಿತರಲ್ಲಿಯೂ, ಕುಶಲಂ-ಕುಶಲವೋ, ಅನಘ-ನಿರ್ದೋಷನಾದ, ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೆ, ತವ-ನಿನ್ನ, ಪುತ್ರಪೌತ್ರೇ-ಮಕ್ಕಳಲ್ಲಿಯೂ ಮಮ್ಮಕ್ಕಳಲ್ಲಿಯೂ, ಕುಶಲಂಕಚ್ಚಿತ್-ಕುಶಲವೋ. ॥೯॥ ರಾಜಾ-ಅರಸನಾದ ವಿಶ್ವಾಮಿತ್ರನು, ಸರ್ವತ್ರ - ಎಲ್ಲ ವಿಷಯದಲ್ಲಿಯೂ, ಕುಶಲಮಿತಿ - ಕುಶಲವೆಂದು, ವಸಿಷ್ಠಂ- ವಸಿಷ್ಠಋಷಿಯನ್ನು ಕುರಿತು, ಪ್ರತ್ಯುದಾಹರತ್ - ಪ್ರತ್ಯುತ್ತರ ಕೊಟ್ಟನು, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಸರ್ವತ್ರ - ಎಲ್ಲ ವಿಷಯಗಳಲ್ಲಿಯೂ, ಕುಶಲಮಿತಿ-ಕ್ಷೇಮವೇ ಎಂದು, ವಸಿಷ್ಠಂ – ತಪೋಧನನಾದ, (ಮ) ಶ್ರೇಷ್ಠನಾದ, ವಸಿಷ್ಠಂ – ವಸಿಷ್ಠ ಋಷಿಯನ್ನು ಕುರಿತು, ವಿನಯಾನ್ವಿತಃ – ನಮ್ರಭಾವದಿಂದ, ಪ್ರತ್ಯುದಾಹರತ್ - ಪ್ರತ್ಯುತ್ತರ ಕೊಟ್ಟನು ॥೧೦॥ ಧರ್ಮಿಷ್ಠೌ - ಧರ್ಮವಂತರಾದ, ತಾವುಭೌ - ಅವರಿಬ್ಬರು, ಸುಚಿರಂಕಾಲಂ-ಬಹುಕಾಲ, ಶುಭಾಃ-ಶುಭಕರಗಳಾದ, ಕಥಾಃ - ಪ್ರಸ್ತಾಪಗಳನ್ನು, ಕೃತ್ವಾ - ಮಾಡಿ, ಪರಮಯಾ - ಅತಿಯಾದ, ಮುದಾ - ಸಂತೋಷದಿಂದ, ಯುಕ್ತೌ - ಕೂಡಿ, ಪರಸ್ಪರಂ - ಅನ್ಯೋನ್ಯವಾಗಿ, ಪ್ರೀಯೇತಾಂ-ಸಂತಸಪಟ್ಟರು, ॥ ೧೧ ॥ ಹೇರಘುನಂದನ - ಎಲೈ ರಘುರಾಮನೆ, ಭಗವಾನ್-ಪೂಜ್ಯನಾದ, ವಸಿಷ್ಠಃ - ವಸಿಷ್ಠ ಋಷಿಯು, ತತಃ - ಬಳಿಕ, ಕಥಾಂತೇ-ಪ್ರಸ್ತಾಪವು ಮುಗಿದ ನಂತರ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಪ್ರಹಸನ್ನಿವ-ನಸುನಗುತ್ತ, ಇದಂವಾಕ್ಯಂ - ಈ ಮಾತನ್ನು,

---

ಆ ವಿಶ್ವಾಮಿತ್ರನು, ವಿನಯದಿಂದೊಡಗೂಡಿ, ಎಲ್ಲರೂ ಕ್ಷೇಮವಾಗಿರುವರೆಂದುತ್ತರವಿತ್ತನು. ಹೀಗೆ ಆ ವಸಿಷ್ಠ ವಿಶ್ವಾಮಿತ್ರರು ಬಹುಕಾಲ ಪ್ರಸ್ತಾಪಗಳನ್ನು ಮಾಡಿ ಸಂತಸಗೊಂಡಚಿತ್ತವುಳ್ಳವರಾಗಿದ್ದರು. ॥೧-೧೧॥ ಎಲೈ ರಘುಕುಲ ತಿಲಕನೆ! ಆ ಬಳಿಕ ವಸಿಷ್ಠಮುನಿಯು ನಸುನಗೆಯುಳ್ಳವನಾಗಿ ವಿಶ್ವಾಮಿತ್ರನನ್ನು ಕುರಿತು, "ಎಲೈ ಬಲಶಾಲಿಯಾದ ವಿಶ್ವಾಮಿತ್ರನೆ! ನಿನಿಗೆ ನಾನೀಗ ಆತಿಥ್ಯವನ್ನು ಮಾಡಲು ಬಯಸುತ್ತೇನೆ. ನೀನದನ್ನು ಯಥಾಯೋಗ್ಯವಾಗಿ ಸ್ವೀಕರಿಸುವವನಾಗು. ನೀನು ರಾಜನು;ಅತಿಥಿಯಾಗಿ ಬಂದಿರುವೆ;ಅದರಲ್ಲಿಯೂ ಶ್ರೇಷ್ಠನಾಗಿಯೂ, ಪೂಜನೀಯನಾಗಿಯೂ ಇರುವೆ. ನಿನ್ನಂತಹರಿಗೆ ಪ್ರಯತ್ನ ಪೂರ್ವಕವಾಗಿ ಅತಿಥಿ ಸತ್ಕಾರವನ್ನು ಮಾಡಬೇಕು. ಆದುದರಿಂದ ನಿನಗೂ ನಿನ್ನ ಬಲಕ್ಕೂ ನಾನೀಗ ಮಾಡುವ ಆತಿಥ್ಯವನ್ನು ಸ್ವೀಕರಿಸಲೇ ಬೇಕು" ಎಂದು ಹೇಳಿದನು. ವಸಿಷ್ಠ ಋಷಿಯು ಹೀಗೆನ್ನಲು, ಮಹಾ ಬುದ್ಧಿಶಾಲಿಯಾದ ಕೌಶಿಕನು ಆತನನ್ನು ಕುರಿತು "ಎಲೈ

ವಾಕ್ಯಮುವಾಚಪ್ರಹಸನ್ನಿವ || ೧೨ || ಆತಿಥ್ಯಂ ಕರ್ತುಮಿಚ್ಛಾಮಿ ಬಲಸ್ಯಾಸ್ಯ ಮಹಾಬಲ || ತವಚೈವಾಪ್ರಮೇಯಸ್ಯ ಯಥಾರ್ಹಂ ಸಂಪ್ರತೀಚ್ಛ ಮೇ || ೧೩|| ಸತ್ಕ್ರಿಯಾಂ ತು ಭವಾನೇತಾಂ ಪ್ರತೀಚ್ಛತು ಮಯೋದ್ಯತಾಂ || ರಾಜಾತ್ವಮತಿಥಿಶ್ರೇಷ್ಠಃ ಪೂಜನೀಯಃ ಪ್ರಯತ್ನತಃ ||೧೪|| ಏವಮುಕ್ತೋ ವಸಿಷ್ಠೇನ ವಿಶ್ವಾಮಿತ್ರೋ ಮಹಾಮತಿಃ|| ಕೃತಮಿತ್ಯ ಬ್ರವೀದ್ರಾಜಾ ಪ್ರಿಯವಾಕ್ಯೇನ ಮೇ ತ್ವಯಾ ||೧೫|| ಫಲಮೂಲೇನ ಭಗವರ್ನ್ ವಿದ್ಯತೇ ಯತ್ತ್ವಾಶ್ರಮೇ||ಪಾದ್ಯೇ ನಾಚಮನೀಯೇನ ಭಗವದ್ದರ್ಶನೇನಚ ||೧೬|| ಸರ್ವಥಾಚ ಮಹಾಪ್ರಾಜ್ಞ ಪೂಜಾರ್ಹೇಣ ಸುಪೂಜಿತಃ || ಗಮಿಷ್ಯಾಮಿ ನಮಸ್ತೇಸ್ತು, ಮೈತ್ರೇಣೇಕ್ಷಸ್ವ ಚಕ್ಷುಷಾ || ೧೭ || ಏವಂ ಬ್ರುವಂತಂ ರಾಜಾನಂ

ಉವಾಚ ಹೇಳಿದನು. || ೧೨ || ಹೇಮಹಾಬಲ - ಎಲೈ ಮಹಾಬಲವಂತನಾದ ವಿಶ್ವಾಮಿತ್ರನೇ! ಅಸ್ಯಬಲಸ್ಯ- ಈ ನಿನ್ನ ಸೈನ್ಯಕ್ಕೂ, ಅಪ್ರಮೇಯಸ್ಯ - ಮಹಾಪ್ರಭಾವನಾದ, ತವಚೈವ - ನಿನಗೂ, ಯಥಾರ್ಹಂ- ನಿನ್ನ ಯೋಗ್ಯತೆಗೆ ತಕ್ಕಂತೆ, ಅತಿಥ್ಯಂ-ಅತಿಥಿಸತ್ಕಾರವನ್ನು, ಕರ್ತುಂ-ಮಾಡಲು, ಇಚ್ಛಾಮಿ-ಅಪೇಕ್ಷಿಸುತ್ತೇನೆ, ಮೇ-ನನ್ನಿಂದ,ಸಂಪ್ರತೀಚ್ಛ-ಆತಿಥ್ಯವನ್ನು ಸ್ವೀಕರಿಸುವವನಾಗು||೧೩|| ತ್ವಂ-ನೀನು, ರಾಜಾ-ಅರಸು, ಶ್ರೇಷ್ಠಃ- ಶ್ರೇಷ್ಠನಾದ,ಅತಿಥಿಃ - ಆತಿಥ್ಯಾಪೇಕ್ಷಿಯು, ಪ್ರಯತ್ನತಃ- ಪ್ರಯತ್ನದಿಂದ, ಪೂಜನೀಯಃ-ಪೂಜಿಸಡಲ್ಪತಕ್ಕವನು,ಭವಾರ್ನ್-ನೀನು, ಮಯಾ-ನನ್ನಿಂದ,ಉದ್ಯತಾಂ- ಪ್ರಯತ್ನಮಾಡಲ್ಪಟ್ಟ, ತಾಂಸತ್ಕ್ರಿಯಾಂತು- ಈ ಅತಿಥಿ ಸತ್ಕಾರವನ್ನು, ಪ್ರತೀಚ್ಛತು-ಪರಿಗ್ರಹಿಸು. ||೧೪|| ಏವಂ-ಹೀಗೆ, ವಸಿಷ್ಠೇನ - ವಸಿಷ್ಠಋಷಿಯಿಂದ, ಉಕ್ತಃ-ಹೇಳಲ್ಪಟ್ಟ, ಮಹಾಮತಿಃ-ಮಹಾಬುದ್ಧಿಶಾಲಿಯೂ,ರಾಜಾ-ಅರಸೂ ಆದ,ವಿಶ್ವಾಮಿತ್ರಃ-ವಿಶ್ವಾಮಿತ್ರನು, ಮೇ-ನನಗೆ,ತ್ವಯಾ-ನಿನ್ನಿಂದ. ಆಡಲ್ಪಟ್ಟಪ್ರಿಯವಾಕ್ಯೇನ-ಆ ಹಿತವಾಕ್ಯದಿಂದಲೆ,ಕೃತಮಿತಿ-ಆತಿಥ್ಯವುಮಾಡಲ್ಪಟ್ಟಿತೆಂದು,ಅಬ್ರವೀತ್- ನುಡಿದನು. ||೧೫|| ಹೇಮಹಾಪ್ರಾಜ್ಞ - ಎಲೈ ಮಹಾಪ್ರಾಜ್ಞನೇ,ಹೇಭಗವರ್ನ್-ಎಲೈ ಪೂಜ್ಯನೇ-ತವ- ನಿನ್ನ, ಆಶ್ರಮೇ-ಆಶ್ರಮದಲ್ಲಿ, ಯತ್-ಯಾವದು, ವಿದ್ಯತೆ-ದೂರಕುವುದೋ, ತೇನಫಲಮೂಲೇನ-ಆ ಫಲಗಳಿಂದಲೂ, ಕಂದಮೂಲಗಳಿಂದಲೂ, ಪಾದ್ಯೇನ-ಪಾದ್ಯದಿಂದಲೂ, ಆಚಮನೀಯೇನ-ಆಚಮನಾರ್ಥವಾಗಿ ಕೊಡಲ್ಪಟ್ಟ ಉದಕದಿಂದಲೂ,ಭಗವದ್ದರ್ಶನೇನಚ-ಪೂಜ್ಯನಾದ ನಿನ್ನ ದರ್ಶನದಿಂದಲೂ, ಸರ್ವಥಾ-ಎಲ್ಲರೀತಿಗಳಲ್ಲಿಯೂ, ಪೂಜಾರ್ಹೇಣ-ಪೂಜೆಗೆ ಅರ್ಹನಾದ,ತ್ವಯಾ-ನಿನ್ನಿಂದ, ಸುಪೂಜಿತಃ- ಸಮೀಚೀನವಾಗಿ ಪೂಜಿಸಲ್ಪಟ್ಟೆನು. ತೇ-ನಿನಗೆ, ನಮಃ-ನಮಸ್ಕಾರವು,ಅಸ್ತು-ಇರಲಿ, ಗಮಿಷ್ಯಾಮಿ- ಹೊರಡುವೆನು,ಮೈತ್ರೇಣ-ಸ್ನೇಹದಿಂದೊಡಗೂಡಿದ,ಚಕ್ಷುಷಾ-ದೃಷ್ಟಿಯಿಂದ,ವೀಕ್ಷಸ್ವ-ನೋಡು.||೧೭|| ಏವಂ-ಹೀಗೆ,, ಬ್ರುವಂತಂ-ಹೇಳುತ್ತಿರುವ ರಾಜಾನಂ-ವಿಶ್ವಾಮಿತ್ರನನ್ನು ಕುರಿತು, ಪುನರೇವ- ಮತ್ತೂ, ಉದಾರಧೀಃ-ಗಂಭೀರಬುದ್ಧಿಯುಳ್ಳ,ಧರ್ಮಾತ್ಮಾ-ಧರ್ಮಿಷ್ಠನಾದ, ವಸಿಷ್ಠಃ-ವಸಿಷ್ಠಋಷಿಯು,

ಬ್ರಹ್ಮಜ್ಞಾನಿಯೆ ? ನಿನ್ನ ಆಶ್ರಮದಲ್ಲಿರುವ ಫಲಗಳಿಂದಲೂ, ಅರ್ಘ್ಯಪಾದ್ಯಾದಿಗಳಿಂದಲೂ ಮಹಾತ್ಮನಾದ ನಿನ್ನ ಸಂದರ್ಶನದಿಂದಲೂ, ಆತಿಥ್ಯ ಮಾಡಿದಂತೆಯೇ ಆಯಿತು. ನಾನು ಹೊರಡುವೆನು. ನಿನಗೆ ನಮಸ್ಕಾರವು. ಸ್ನೇಹಮಯವಾದ ದೃಷ್ಟಿಯಿಂದ ನೋಡುವವನಾಗು" ಎಂದನು. || ೧೩ || ಆಗ ಮಹಾ ಧರ್ಮಿಷ್ಠನಾದ ವಸಿಷ್ಠಋಷಿಯು ಅಡಿಗಡಿಗೂ

ವಸಿಷ್ಠಃ ಪುನರೇವಹಿ|| ನ್ಯಮಂತ್ರಯತ ಧರ್ಮಾತ್ಮಾ ಪುನಃ ಪುನರುದಾರಧೀಃ|| ೧೮ || ಬಾಢಮಿತ್ಯೇವ ಗಾಧೇಯೋ ವಸಿಷ್ಠಂ ಪ್ರತ್ಯುವಾಚಹ || ಯಥಾಪ್ರಿಯಂ ಭಗವತ ಸ್ತಥಾಸ್ತು ಮುನಿಪುಂಗವ || ೧೯ || ಏವಮುಕ್ತೋ ಮಹಾತೇಜಾ ವಸಿಷ್ಠೋ ಜಪತಾಂ ವರಃ|| ಆಜುಹಾವ ತತಃ ಪ್ರೀತಃ ಕಲ್ಮಾಷೀಂ ಧೂತ ಕಲ್ಮಷಃ || ೨೦ || ಏಹ್ಯೇಹಿ ಶಬಳೇ ಕ್ಷಿಪ್ರಂ ಶೃಣುಚಾಪಿ ವಚೋಮಮ || ಸಬಲಸ್ಯಾಸ್ಯ ರಾಜರ್ಷೇಃ ಕರ್ತುಂ ವ್ಯವಸಿತೋಸ್ಮ್ಯಹಂ ||೨೧|| ಭೋಜನೇನ ಮಹಾರ್ಹೇಣ ಸತ್ಕಾರಂ ಸಂವಿಧತ್ಸ್ವಮೇ || ಯಸ್ಯಯಸ್ಯ ಯಥಾಕಾಮಂ ಷಡ್ರಸೇಷ್ವಭಿಪೂಜಿತಂ || ೨೨ || ತತ್ಸರ್ವಂ ಕಾಮಧುಕ್ ಕ್ಷಿಪ್ರಮಭಿವರ್ಷ

---

ಪುನಃಪುನರೇವ - ಬಾರಿಬಾರಿಗೂ, ನ್ಯಮಂತ್ರಯತ-ಅತಿಥಿ ಸತ್ಕಾರಕ್ಕೋಸುಗ ಕರೆದನು. || ೧೮ || ಹೇ ಮುನಿಪುಂಗವ - ಎಲೈ ಮುನಿಶ್ರೇಷ್ಠನೆ, ಭಗವತಃ-ಪೂಜ್ಯನಾದ ನಿನಗೆ, ಯಥಾಪ್ರಿಯಂ - ಹೇಗೆ ಇಷ್ಟವೋ, ತಥಾ-ಹಾಗೆಯೇ, ಅಸ್ತು-ಆಗಲಿ, ಬಾಢಮಿತ್ಯೇವ-ಅಂಗೀಕಾರವೇ ಸರಿಯೆಂದು, ಗಾಧೇಯಃ-ಗಾಧಿಪುತ್ರನಾದ ವಿಶ್ವಾಮಿತ್ರನು, ವಸಿಷ್ಠಂ - ವಸಿಷ್ಠಋಷಿಯನ್ನು ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು. ಏವಂ-ಈಪರಿ, ಉಕ್ತಃ-ಹೇಳಲ್ಪಟ್ಟ, ಮಹಾತೇಜಾಃ- ಮಹಾಪ್ರಭಾವವಂತನಾದ, ಧೂತಕಲ್ಮಷಃ ಕೊಡಹಲ್ಪಟ್ಟಪಾಪಗಳುಳ್ಳ, ಜಪತಾಂ ತಪಸ್ವಿಗಳಲ್ಲಿ, ವರಃ-ಶ್ರೇಷ್ಠನಾದ, ವಸಿಷ್ಠಃ-ವಸಿಷ್ಠಋಷಿಯು, ತತಃ-ಬಳಿಕ, ಪ್ರೀತಃ- ಸಂತೋಷಗೊಂಡ, ಕಲ್ಮಾಷೀಂ-ಚಿತ್ರವರ್ಣವುಳ್ಳ ಕಾಮಧೇನುವನ್ನು, ಆಜುಹಾವ ಕರೆದನು. || ೨೦ || ಹೇಶಬಳೇ- ಎಲೈ ಕಾಮಧೇನುವೆ, ಕ್ಷಿಪ್ರಂ-ಜಾಗ್ರತೆಯಾಗಿ, ಏಹ್ಯೇಹಿ-ಬಾಬಾ, ಮಮ-ನನ್ನ, ವಚಃ-ಮಾತನ್ನು, ಶೃಣುಚ - ಕೇಳು, ಸಬಲಸ್ಯ-ಸೈನ್ಯಸಮೇತನಾದ, ರಾಜರ್ಷೇಃ-ರಾಜರ್ಷಿಯಾದ, ಅಸ್ಯ - ಈವಿಶ್ವಾಮಿತ್ರನಿಗೆ, ಆತಿಥ್ಯಂ - ಅತಿಥ್ಯವನ್ನು, ಕರ್ತುಂ-ಮಾಡಲು, ಅಹಂ-ನಾನು, ವ್ಯವಸಿತಃ - ಪ್ರಯತ್ನಪಟ್ಟವನು, ಅಸ್ಮಿ-ಆಗಿರುವೆನು, ಮಹಾರ್ಹೇಣ ಶ್ಲಾಘನೀಯವಾದ, ಭೋಜನೇನ - ಭೋಜನದಿಂದ, ಮೇ-ನನ್ನ ನಿಮಿತ್ತ, ಸತ್ಕಾರಂ-ಆತಿಥ್ಯವನ್ನು, ಸಂವಿಧತ್ಸ್ವ-ನಿರ್ಮಾಣಮಾಡು. || ೨೧ || ಯಸ್ಯಯಸ್ಯ-ಯಾವ ಯಾವ ಪುರುಷನಿಗೆ, ಷಡ್ರಸೇಷು- ರಸವರ್ಗಗಳಲ್ಲಿ, ಯಥಾಕಾಮಂ-ಹೇಗೆ ರುಚಿಯೋ, ತಥಾ - ಅಂತೆಯೇ, ಅಭಿಪೂಜಿತಂ-ಶ್ಲಾಘಿಸಲ್ಪಟ್ಟ, ತತ್ಸರ್ವಂ-ಆ ಸಮಸ್ತವನ್ನೂ, ಹೇಕಾಮಧುಕ್- ಎಲೈ ಕಾಮಧೇನುವೇ, ತ್ವಂ-ನೀನು, ಮಮಕೃತೇ-ನನ್ನ ನಿಮಿತ್ತವಾಗಿ, ಕ್ಷಿಪ್ರಂ-ಜಾಗ್ರತೆಯಾಗಿ, ಅಭಿವರ್ಷ - ವರ್ಷಿಸು. ||೨೨|| ಹೇಶಬಳೇ-ಎಲೈ ಕಾಮಧೇನುವೇ. ರಸೇನ -ರಸಾಯನದಿಂದಲೂ, ಅನ್ನೇನ - ಅನ್ನದಿಂದಲೂ

---

ಯಥಾಯೋಗ್ಯವಾಗಿ ಅತಿಥಿಸತ್ಕಾರಕ್ಕೆ ಕರೆಯಲು, ಆತನು "ಹಾಗೆಯೇ ಆಗಲಿ" ಎಂದನು. ಆ ಬಳಿಕ ಮಹಾ ತೇಜೋವಂತನಾದ ವಸಿಷ್ಠನು ಬಹಳವಾಗಿ ಸಂತೋಷಪಟ್ಟು ಚಿತ್ರವರ್ಣವುಳ್ಳ ಕಾಮಧೇನುವನ್ನು ಕರೆದು, "ಎಲೌ ಶಬಳೆಯೆ ! ಬೇಗನೆ ಬರುವವಳಾಗು. ಈಗ ನಾನು ಹೇಳುವುದನ್ನು ಕೇಳು; ಸೈನ್ಯ ಸಮೇತನಾದ ಈ ವಿಶ್ವಾಮಿತ್ರನಿಗೆ ಭೋಜ

ಕೃತೇವಮು || ರಸೇನಾನ್ನೇನ ಪಾನೇನ ಲೇಹ್ಯಚೋಷ್ಯೇಣ ಸಂಯುತಂ ||೨೩||
ಅನ್ನಾನಾಂ ನಿಚಯಂ ಸರ್ವಂ ಸೃಜಸ್ವ ಶಬಳೇತ್ವರ ||೨೩|| ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಪಂಚಾಶಸ್ಸರ್ಗಃ.



ಭಕ್ಷ್ಯಗಳಿಂದಲೂ,ಪಾನೇನ-ಪಾನಕವೇ, ಮೊದಲಾಗುಳ್ಳ ದ್ರವ್ಯದಿಂದಲೂ,ಲೇಹ್ಯಚೋಷ್ಯೇನ-ಲೇಹ್ಯ, ಜೇನುತುಪ್ಪ, ಕೀರುಮೊದಲಾದ ದ್ರವ್ಯದಿಂದಲೂ, ಚೋಷ್ಯೇಣ-ಮೊಸರು- ಮೊದಲಾಗುಳ್ಳ ಅಧರ ಪುಟಗ್ರಾಹ್ಯವಾದ ಪದಾರ್ಥಗಳಿಂದಲೂ, ಸಂಯುತಂ-ಕೂಡಿರುವ,ಅನ್ನಾನಾಂ-ಶಾಲ್ಯಾನ್ನವೇ ಮೊದಲಾದ ಭೋಜ್ಯದ್ರವ್ಯಗಳ, ನಿಚಯಂ-ರಾಶಿಯನ್ನು, ಸರ್ವಂ-ಸಮಗ್ರವಾಗಿ, ಸೃಜಸ್ವ-ನಿರ್ಮಿಸಲು, ತ್ವರ-ಜಾಗ್ರತಿಮಾಡು. ||೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಪಂಚಾಶಸ್ಸರ್ಗಃ.



ನವಂ ಗೈಸಬೇಕೆಂದಿಚ್ಛಿಸಿರುವೆನು. ಆದುದರಿಂದ ಯಾರಾರಿಗೆ ಯಾವಾವ ಪದಾರ್ಥಗಳಲ್ಲಿ ಅಭಿರುಚಿಯೋ, ಅಂತಹ ರಸಗಳಿಂದಲೂ, ಅನ್ನ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಗಳಿಂದಲೂ ಒಡಗೂಡಿದ ಭೋಜನವನ್ನು ಸೃಜಿಸುವವಳಾಗು” ಎಂದನು. || ೨೩ ||

ಇಂತಿದು ವಸಿಷ್ಠಕೃತ ವಿಶ್ವಾಮಿತ್ರನ ಸತ್ಕಾರಾಹ್ವಾನ ಕಥನವೆಂಬ

ಐವತ್ತೆರಡನೆಯ ಸರ್ಗವು ಸಮಾಪ್ತವಾದುದು.



ಏವಮುಕ್ತಾ ವಸಿಷ್ಠೇನ ಶಬಲಾ ಶತ್ರುಸೂದನ ॥ ವಿದಧೇ ಕಾಮಧುಕ್ಕಾಮಾನ್ ಯಸ್ಯಯಸ್ಯ ಯಥೇಪ್ಸಿತಂ ॥ ೧ ॥ ಇಕ್ಷೂನ್ಮಧೂಂ ಸ್ತಥಾಲಾಜಾನ್ ಮೈರೇಯಾಂಶ್ಚ ವರಾಸವಾನ್ ॥ ಪಾನಾನಿಚ ಮಹಾರ್ಹಾಣಿ ಭಕ್ಷ್ಯಾಂಶ್ಚೋಚ್ಚಾವಚಾಂ ಸ್ತಥಾ ॥೨॥ ಉಷ್ಣಾಢ್ಯಸ್ಯೌದನಸ್ಯಾತ್ರ ರಾಶಯಃ ಪರ್ವತೋಪಮಾಃ ॥ ಮೃಷ್ಟಾನ್ನಾನಿಚ ಸೂಪಾಂಶ್ಚ ದಧಿಕುಲ್ಯಾಸ್ತಥೈವಚ ॥೩॥ ನಾನಾ ಸ್ವಾದುರಸಾನಾಂ ಚ ಷಾಡಬಾನಾಂ ತಥೈವಚ ॥ ಭಾಜನಾನಿ ಸುಪೂರ್ಣಾನಿ ಗೌಡಾನಿಚ ಸಹಸ್ರಶಃ ॥೪॥ ಸರ್ವಮಾಸೀತ್ಸು ಸಂತುಷ್ಟಂ ಹೃಷ್ಟಪುಷ್ಟ

---

ಹೇಶತ್ರುಸೂದನ - ಎಲೈ ಶತ್ರು ಸಂಹಾರಕನಾದ ಶ್ರೀರಾಮನೇ, ಏವಂ-ಹೀಗೆ, ವಸಿಷ್ಠೇನ ವಸಿಷ್ಠನಿಂದ, ಉಕ್ತಾ-ಹೇಳಲ್ಪಟ್ಟ, ಶಬಲಾ-ಚಿತ್ರಬಣ್ಣವುಳ್ಳ, ಕಾಮಧುಕ್ - ಕಾಮಧೇನವು, ಯಸ್ಯ-ಯಾವನಿಗೆ, ಯಥಾ-ಯಾವ ಪ್ರಕಾರ, ಈಪ್ಸಿತಂ - ಇಷ್ಟವೋ, ತಥಾ - ಆ ಪ್ರಕಾರ, ಕಾಮಾನ್-ಕೋರಿದ ಪದಾರ್ಥಗಳನ್ನು, ವಿದಧೇ - ನಿರ್ಮಾಣಮಾಡಿದಳು, ॥ ೧ ॥ ಇಕ್ಷೂನ್ - ಕಬ್ಬುಗಳನ್ನು, ಮಧೂನ್ - ಜೇನು ತುಪ್ಪಗಳನ್ನೂ, ತಥಾ - ಹಾಗೆಯೇ, ಲಾಜಾನ್ - ಅರಳುಗಳನ್ನು, ಮೈರೇಯಾಂಶ್ಚ - ಮಿರಾದೇಶದಲ್ಲಿ ಹುಟ್ಟಿದ, ವರಾಸವಾಂಶ್ಚ-ಶ್ರೇಷ್ಠವಾದ ಮದ್ಯವಿಶೇಷಗಳನ್ನೂ, ಮಹಾರ್ಹಾಣಿ - ಶ್ರೇಷ್ಠಗಳಾದ, ಪಾನಾನಿಚ - ಪಾನಕಗಳನ್ನೂ, ತಥಾ - ಹಾಗೆಯೇ, ಉಚ್ಚಾವಚಾನ್-ಅನೇಕ ಬಗೆಗಳಾದ, ಭಕ್ಷ್ಯಾಂಶ್ಚ - ಭಕ್ಷ್ಯಗಳನ್ನೂ, ವಿದಧೇ - ನಿರ್ಮಿಸಿದಳು, ॥ ೨ ॥ ಅತ್ರ -ಈ ವಸಿಷ್ಠಾಶ್ರಮದಲ್ಲಿ, ಉಷ್ಣಾಢ್ಯಸ್ಯ - ಬಿಸಿಬಿಸಿಯಾಗಿರುವ, ಓದನಸ್ಯ - ಅನ್ನದ, ರಾಶಯಃ - ರಾಶಿಗಳು, ಪರ್ವತೋಪಮಾಃ - ಬೆಟ್ಟಕ್ಕೆ ಸಮಾನವಾಗಿ, ಆಸನ್ - ಆದವು, ಮೃಷ್ಟಾನ್ನಾನಿಚ - ಇಷ್ಟವಾದ ಅನ್ನಗಳೂ, ಸೂಪಾಶ್ಚ - ತೊವ್ವೆಗಳೂ, ತಥೈವ - ಹಾಗೆಯೇ, ದಧಿಕುಲ್ಯಾಶ್ಚ-ಮೊಸರಿನ ಸರೋವರಗಳೂ, ಆಸನ್ ಆದವು. ॥ ೩ ॥ ತಥೈವಚ- ಹಾಗೆಯೇ,ನಾನಾಸ್ವಾದುರಸಾನಾಂ-ಅನೇಕ ಬಗೆ ರುಚಿಗಳುಳ್ಳ ಮತ್ತು ಮಾಧುರ್ಯರಸಾದಿಗಳುಳ್ಳ, ಷಾಡಬಾನಾಂ - ಖಂಡಸಕ್ಕರೆ ಜೇನುತುಪ್ಪ ಮೊದಲಾದ ರಸಗಳಿಂದ ಪಾಕವಿಳುಹಿದ ಭಕ್ಷ್ಯವಿಶೇಷಗಳಿಂದ, ಸುಪೂರ್ಣಾನಿ - ತುಂಬಿರುವ, ಗೌಡಾನಿಚ - (ಗೋ) ಗುಡವಿಕಾರಗಳಾದ, ಭಾಜನಾನಿ -(ತಿ) ಬೆಳ್ಳಿಯಪಾತ್ರೆಗಳು, ಸಹಸ್ರಶಃ - ಸಾವಿರಾರು, ಅಭೂವನ್ - ಆದವು, ॥ ೪ ॥ ಹೇರಾಮ - ಎಲೈ ಶ್ರೀರಾಮನೇ,

---

ಕೇಳಯ್ಯಾ ರಾಮಚಂದ್ರನೆ! ವಸಿಷ್ಠ ಋಷಿಯಿಂದೀರೀತಿ ಆಜ್ಞಾಪಿಸಲ್ಪಟ್ಟ ಶಬಳೆ ಎಂಬ ಕಾಮಧೇನುವು ಯಾರಾರಿಗೆ ಯಾವಾವ ಪದಾರ್ಥಗಳಲ್ಲಿ ಆಸಕ್ತಿಯೋ, ಅವೆಲ್ಲವನ್ನೂ ನಿರ್ಮಿಸಿದಳು. ಇಷ್ಟೆಯಲ್ಲದೆ ಆ ಶಬಳೆಯು ಕಬ್ಬು, ಜೇನು, ಮೈರೇಯವೆಂಬ ಸೊಗಸಾದ ಮದ್ಯ, ರುಚಿಕರವಾದ ಪಾಯಸಾದಿಗಳು, ಉತ್ತಮವಾದ ಭಕ್ಷ್ಯಗಳೂ, ಇವೆ ಮೊದಲಾದುವುಗಳನ್ನು ಪರ್ವತೋಪಮವಾಗಿಯೂ, ಬಿಸಿಬಿಸಿಯಾಗಿಯೂ, ಇರುವ ಅನ್ನರಾಶಿಗಳು, ಸೂಪಾನ್ನಗಳು, ಮೊಸರಿನ ಸರೋವರಗಳು, ಇವುಗಳನ್ನೂ ನಾನಾ ರುಚಿಗಳಿಂದೊಪ್ಪುವ ರಸಗಳು, ಸಕ್ಕರೆ, ಜೇನುತುಪ್ಪ, ಮೊದಲಾದವುಗಳಿಂದ ತುಂಬಿರುವ ಬೆಳ್ಳಿಯ ವಿಕಾರವಾದ ಅನೇಕ ಪಾತ್ರೆಗಳನ್ನು ತಕ್ಷಣದಲ್ಲಿಯೇ ಸೃಜಿಸಿದವಳಾದಳು. ॥೪॥

ಜನಾಯುತಂ || ವಿಶ್ವಾಮಿತ್ರಬಲಂ ರಾಮ ವಸಿಷ್ಠೇ ನಾಭಿತರ್ಪಿತಂ ||೫||
ವಿಶ್ವಾಮಿತ್ರೋಽಪಿ ರಾಜರ್ಷಿ ಹೃಷ್ಟಃ ಪುಷ್ಟಸ್ತದಾಭವತ್ || ಸಾಂತಃ ಪುರವರೋ
ರಾಜಾ ಸಬ್ರಾಹ್ಮಣ ಪುರೋಹಿತಃ ||೬|| ಸಾಮಾತ್ಯೋ ಮಂತ್ರಿಸಹಿತ ಸ್ಸಭೃತ್ಯಃ
ಪೂಜಿತಸ್ತದಾ || ಯುಕ್ತಃ ಪರಮಹರ್ಷೇಣ ವಸಿಷ್ಠ ಮಿದಮಬ್ರವೀತ್||೭||
ಪೂಜಿತೋಽಹಂ ತ್ವಯಾಬ್ರಹ್ಮ್ ಪೂಜಾರ್ಹೇಣ ಸುಸತ್ಕೃತಃ || ಶ್ರೂಯತಾ
ಮಭಿಧಾಸ್ಯಾಮಿ ವಾಕ್ಯಂವಾಕ್ಯ ವಿಶಾರದ ||೮|| ಗವಾಂ ಶತಸಹಸ್ರೇಣ ದೀಯ

---

ಹೃಷ್ಟಪುಷ್ಟಜನಾಯುತಂ, ಹೃಷ್ಟ ಸಂತೋಷಗೊಂಡ, ಪುಷ್ಟ - ಅನ್ನ ಸಂತುಷ್ಟಿಯಿಂದ ತೃಪ್ತರಾದ ಜನ - ಜನಗಳಿಂದ, ಆಯುತಂ-ಎಲ್ಲೆಡೆಯಲ್ಲಿ ಕೂಡಿರುವ. ಸರ್ವಂ-ಸಮಸ್ತವಾದ, ವಿಶ್ವಾಮಿತ್ರ ಬಲಂ - ವಿಶ್ವಾಮಿತ್ರನ ಸೈನ್ಯವು, ವಸಿಷ್ಠೇನ - ವಸಿಷ್ಠ ಮಹರ್ಷಿಯಿಂದ, ಅಭಿತರ್ಪಿತಂ-ಚನ್ನಾಗಿ ತೃಪ್ತಿಹೊಂದಿಸಲ್ಪಟ್ಟು,ಸುಸಂತುಷ್ಟಂ-ಚನ್ನಾಗಿ ತೃಪ್ತಿಹೊಂದಿದುದರಿಂದ ಸಂತಸಗೊಂಡುದು,ಆಸೀತ್-ಆಯಿತು. || ೫ || ರಾಜರ್ಷಿಃ- ರಾಜರ್ಷಿಯಾದ, ವಿಶ್ವಾಮಿತ್ರೋಽಪಿ-ವಿಶ್ವಾಮಿತ್ರನೆಂಬ, ರಾಜಾ_ ಅರಸನು, ಸಾಂತಃಪುರವರಃ - ಅಂತಃಪುರಸ್ತ್ರೀಯರೇ ಮೊದಲಾದವರೊಡನೆ, ಸಬ್ರಾಹ್ಮಣ ಪುರೋಹಿತಃ - ಬ್ರಾಹ್ಮಣರಿಂದಲೂ, ಉಪಾಧ್ಯಾಯರಿಂದಲೂ ಒಡಗೂಡಿ, ತದಾ - ಆಗ, ಹೃಷ್ಟಃ- ವಸಿಷ್ಠ ಋಷಿಯ ಆತಿಥ್ಯದಿಂದ ಸಂತುಷ್ಟನಾದವನೂ, ಪುಷ್ಟಃ - ಭೋಜನಾದಿಗಳಿಂದ ಪುಷ್ಟಿಯುಳ್ಳವನೂ, ಅಭವತ್ - ಆದನು, || ೬ || ತದಾ - ಆಗ, ಮಂತ್ರಿಸಹಿತಃ - ಮಂತ್ರಿಗಳಿಂದೊಡಗೂಡಿದ, ಸಾಮಾತ್ಯಃ - ಕರ್ಮಸಹಾಯಕರಿಂದೊಡಗೂಡಿದ, ವಿಶ್ವಾಮಿತ್ರನು, ಪೂಜಿತಃ-ಪೂಜಿಸಲ್ಪಟ್ಟು, ಪರಮಹರ್ಷೇಣ - ಬಹಳ ಸಂತೋಷದಿಂದ, ಯುಕ್ತಃ - ಕೂಡಿ, ವಸಿಷ್ಠಂ - ವಸಿಷ್ಠ ಋಷಿಯನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್-ನುಡಿದನು, ||೭|| ಹೇಬ್ರಹ್ಮನ್-ಎಲೈ ಬ್ರಾಹ್ಮಣನೇ, ಹೇವಾಕ್ಯವಿಶಾರದ - ನುಡಿಜಾಣ್ಮೆಯುಳ್ಳವನೆ, ಪೂಜಾರ್ಹೇಣ- ಪೂಜೆಗೆ ಯೋಗ್ಯನಾದ, ತ್ವಯಾ-ನಿನ್ನಿಂದ, ಅಹಂ - ನಾನು, ಪೂಜಿತಃ - ಪೂಜಿಸಲ್ಪಟ್ಟೆನು, ಸುಸತ್ಕೃತಶ್ಚ - ಚನ್ನಾಗಿ ಸತ್ಕರಿಸಲ್ಪಟ್ಟೆನು, ವಚಃ - ಒಂದು ಮಾತನ್ನು ಅಭಿಧಾಸ್ಯಾಮಿ - ಹೇಳುವೆನು, ಶ್ರೂಯತಾಂ- ಕೇಳಲ್ಪಡಲಿ, || ೮ || ಹೇಭಗವನ್ - ಎಲೈ ಪೂಜ್ಯನೇ, ಗವಾಂ - ಗೋವುಗಳ, ಶತಸಹಸ್ರೇಣ-ನೂರು ಸಹಸ್ರಗ

---

ಆ ಬಳಿಕ ವಿಶ್ವಾಮಿತ್ರನ ಸೇನೆಯುಲ್ಲವೂ, ವಸಿಷ್ಠ ಋಷಿಯಿಂದ ತೃಪ್ತಿಗೊಳಿಸಲ್ಪಟ್ಟು ಸಂತಸಗೊಂಡವರೂ, ಕೊಬ್ಬಿದವರೂ ಆದ ಜನಗಳಿಂದ ವ್ಯಾಪ್ತವಾಯಿತು. ರಾಜರ್ಷಿಯಾದ ವಿಶ್ವಾಮಿತ್ರನೂ ಸಹ, ಅಂತಃಪುರ ಸ್ತ್ರೀಯರಿಂದಲೂ, ಬ್ರಾಹ್ಮಣರಿಂದಲೂ, ಪುರೋಹಿತರಿಂದಲೂ, ಕಾರ್ಯಸಹಾಯಕರಿಂದಲೂ, ಮಂತ್ರಿ, ಭೃತ್ಯ, ಮೊದಲಾದವರಿಂದಲೂ ಒಡಗೂಡಿ ವಸಿಷ್ಠ ಮುನಿಯಿಂದ ತೃಪ್ತಿಗೊಳಿಸಲ್ಪಟ್ಟನು. ಆಗ ಬಹಳವಾಗಿ ಸಂತಸಗೊಂಡ ವಿಶ್ವಾಮಿತ್ರನು ಆ ವಸಿಷ್ಠ ಮುನಿಯನ್ನು ಕುರಿತು, "ಎಲೈ ಬ್ರಾಹ್ಮಣೋತ್ತಮನೆ ! ಪೂಜಾರ್ಹನಾದ ನಿನ್ನಿಂದ ಚೆನ್ನಾಗಿ ಸತ್ಕರಿಸಲ್ಪಟ್ಟಿರುವೆನು. ಆದರೆ ನಾನೊಂದು ಮಾತನ್ನು ಹೇಳುತ್ತೇನೆ ಕೇಳು ; ಒಂದು ಸಹಸ್ರ ಗೋವುಗಳನ್ನು ತೆಗೆದುಕೊಂಡು ಈ ಶಬಳೆಯನ್ನು ನನಗೆ ಕೊಡುವವನಾಗು, || ೮ || ರಾಜನು ರತ್ನಹಾರಿಯಾದವನು. ಈ ಗೋವು ರತ್ನಪ್ರಾ

ತಾಂ ಶಬಳಾ ಮಮ ॥ ರತ್ನಂಹಿ ಭಗವನ್ನೇತ ದ್ರತ್ನಹಾರೀಚ ಪಾರ್ಥಿವಃ ॥೯॥ ತಸ್ಮಾನ್ಮೇ ಶಬಳಾಂ ದೇಹಿ ಮಮೈಷಾ ಧರ್ಮತೋದ್ವಿಜ ॥ ಏವಮುಕ್ತಸ್ತು ಭಗವಾನ್ ವಸಿಷ್ಠೋ ಮುನಿಸತ್ತಮಃ ॥೧೦॥ ವಿಶ್ವಾಮಿತ್ರೇಣ ಧರ್ಮಾತ್ಮಾ ಪ್ರತ್ಯುವಾಚ ಮಹೀಪತಿಂ ॥ ನಾದಂಶತ ಸಹಸ್ರೇಣ ನಾಪಿಕೋಟಿ ಶತೈ ರ್ಗವಾಂ ॥೧೧॥ ರಾಜನ್ ದಾಸ್ಯಾಮಿ ಶಬಳಾಂ ರಾಶಿಭೀ ರಜತಸ್ಯವಾ ॥ ನಪರಿತ್ಯಾಗ ಮರ್ಹೇಯಂ ಮತ್ಸಕಾಶಾದರಿಂದಮ ॥೧೨॥ ಶಾಶ್ವತೀಶಬಳಾ ಮಹ್ಯಂ ಕೀರ್ತಿರಾತ್ಮವತೋ ಯಥಾ॥ಅಸ್ಯಾಂ ಹವ್ಯಂಚ ಕವ್ಯಂಚ ಪ್ರಾಣ

ಳಿಂದ, ಶಬಳಾ - ಕಾಮಧೇನುವು, ಮಮ - ನನಗೆ, ದೀಯತಾಂ ಕೊಡಲ್ಪಡಲಿ, ಹಿ-ಯಾವಕಾರಣ ಏತತ್ - ಈ ಗೋರೂಪವಾದುದು, ರತ್ನಂ - ಶ್ರೇಷ್ಠವೋ, ಪಾರ್ಥಿವಃ - ಅರಸು, ರತ್ನಹಾರೀಚ- ರತ್ನವನ್ನು ಅಪಹರಿಸತಕ್ಕವನೊ, ತಸ್ಮಾತ್ - ಆ ಕಾರಣ, ಹೇದ್ವಿಜ - ಎಲೈ ಬ್ರಾಹ್ಮಣನೇ, ಏಷಾ - ಈ ಗೋವು, ಧರ್ಮತಃ - ನ್ಯಾಯವಾಗಿ, ಮಮ-ನನ್ನದು, ಮೇ-ನನಗೆ, ಶಬಳಾಂ ಕಾಮ ಧೇನುವನ್ನು, ದೇಹಿ - ಕೊಡು, ॥೯॥ ಏವಂ - ಹೀಗೆ, ಉಕ್ತಃ - ಹೇಳಲ್ಪಟ್ಟ, ಭಗವಾನ್- ಪೂಜ್ಯನಾದ, ಮುನಿಸತ್ತಮಃ - ಋಷಿಶ್ರೇಷ್ಠನೂ ಧರ್ಮಾತ್ಮಾ - ಧರ್ಮಿಷ್ಠನೂ ಆದ, ವಸಿಷ್ಠಃ- ವಸಿಷ್ಠಋಷಿಯು, ಮಹೀಪತಿಂ ವಿಶ್ವಾಮಿತ್ರನನ್ನು ಕುರಿತು, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು. ॥೧೦॥ ಹೇರಾಜನ್-ಎಲೈ ರಾಜನೇ-ಅಹಂ-ನಾನು, ಗವಾಂ-ಗೋವುಗಳ, ಶತಸಹಸ್ರೇಣ - ಲಕ್ಷಸಂಖ್ಯೆ ಯಿಂದಲೂ, ನದಾಸ್ಯಾಮಿ ಕೊಡುವದಿಲ್ಲ, ಗವಾಂ-ಗೋವುಗಳ-ಕೊಟಿಶತೈರಪಿ- ನೂರುಕೋಟಿಗಳಿಂ ದಲಾದರೂ, ರಜತಸ್ಯ-ರೂಪಾಯಿಗಳ, ರಾಶಿಭಿರ್ವಾ-ರಾಶಿಗಳಿಂದಲೇ ಆಗಲಿ-ನದಾಸ್ಯಾಮಿ- ಕೊಡ ಲಾರೆನು. ॥೧೧॥ ಹೇ ಅರಿಂದಮ-ಎಲೈ ಶತ್ರುಸಂಹಾರಕನೇ - ಇಯಂ -ಈಗೋವು, ಮತ್ಸಕಾ ಶಾತ್-ನನ್ನ ಸಮೀಪದಿಂದ, ಪರಿತ್ಯಾಗಂ-ಒದರಲು, ನಾಹರ್ಹ-ಅರ್ಹಳಲ್ಲ, ಆತ್ಮವತಃ-ಒಳ್ಳೆಮನ ಸ್ಸುಳ್ಳವನಿಗೆ, ಕೀರ್ತಿರ್ಯಥಾ ಕೀರ್ತಿಯು ಹೇಗೆ ಶಾಶ್ವತವೋ, ಶಬಳಾ-ಈನಂದಿನೀಧೇನುವು-ಮಹ್ಯಂ- ನನಗೆ, ಶಾಶ್ವತೀ-ಹಾಗೆ ಶಾಶ್ವತವಾದುದು-ಅಸ್ಯಾಂ- ಈಗೋವಿನಲ್ಲಿ, ಹವ್ಯಂಚ- ದೇವತೋದ್ದೇಶ್ಯಕ, ಹವಿರ್ಭಾಗವೂ, ಕವ್ಯಂಚ-ಪಿತೃಗಳ ಉದ್ದೇಶ್ಯಕ ಹೋಮದ್ರವ್ಯವೂ,ತಥೈವಚ-ಹಾಗೆಯೆ- ಪ್ರಾಣ

ಯವಾದುದು. ಧರ್ಮವನ್ನು ನೋಡಹೋದರೆ ಇದು ನನ್ನದೇ ಆಗಿರುವುದು. ಆದ್ದ ರಿಂದ ಈ ಶಬಳೆಯನ್ನು ನನಗೆ ಕೊಡುವವನಾಗು.” ಎಂದನು. ಈ ರೀತಿ ವಿಶ್ವಾಮಿತ್ರ ನಿಂದ ಪ್ರಾರ್ಥಿತನೂ, ಋಷಿಶ್ರೇಷ್ಠನೂ ಆದ ವಸಿಷ್ಠಮುನಿಯು ಆ ವಿಶ್ವಾಮಿತ್ರನನ್ನು ಕುರಿ ತು, “ಎಲೈ ರಾಜನೆ ! ಸಹಸ್ರ ಗೋವುಗಳಿಗಾಗಲಿ, ನೂರು ಕೋಟಿ ಗೋವುಗಳಿಗಾಗಲಿ, ಬೆಳ್ಳಿಯ ರಾಶಿಗಳಿಗಾಗಲಿ, ಈ ಶಬಳೆಯನ್ನು ಕೊಡುವುದಿಲ್ಲ. ಎಲೈ ವಿಶ್ವಾಮಿತ್ರನೆ ! ಆತ್ಮ ಜ್ಞಾನಿಗೆ ಕೀರ್ತಿಯು ಹೇಗೆ ಶಾಶ್ವತವೋ, ಹಾಗೆಯೇ ಈ ಶಬಳೆಯು ನನಗೆ ಶಾಶ್ವತವು. ಈಕೆಯು ಪರಿತ್ಯಾಗಕ್ಕೆ ಅರ್ಹಳಾದವಳಲ್ಲವು. ॥೧೨॥ ಹವ್ಯಕವ್ಯಗಳೂ, ಜೀವನವೂ, ಅಗ್ನಿಹೋತ್ರವೂ, ಭೂತಬಲಿಯೂ, ಇಷ್ಟಿಗಳೂ, ಸ್ವಾಹಾಕಾರ ಷಟ್ಕಾರಗಳೂ, ವಿವಿಧ ವಿದ್ಯೆಗಳೇ ಮೊದಲಾದುವೆಲ್ಲ ಈ ಶಬಳೆಯಿಂದಲೇ ನಡೆಯುತ್ತಿರುವುದು. ಈಕೆಯೇ

ಯಾತ್ರಾ ತಥೈವಚ ||೧೩|| ಆಯತ್ತಮಗ್ನಿಹೋತ್ರಂಚ ಬಲಿರ್ಹೋಮ
ಸ್ತಥೈವಚ || ಸ್ವಾಹಾಕಾರ ವಷಟ್ಕಾರೌ ವಿದ್ಯಾಶ್ಚ ವಿವಿಧಾಸ್ತಥಾ ||೧೪||
ಆಯತ್ತಮತ್ರ ರಾಜರ್ಷೇ ಸರ್ವಮೇತನ್ನ ಸಂಶಯಃ || ಸರ್ವಸ್ವಮೇತತ್ಸ
ತ್ಯೇನ ಮಮತುಷ್ಟಿಕರೀ ಸದಾ ||೧೫|| ಕಾರಣೈರ್ಬಹುಭೀರಾಜನ್ನದಾಸ್ಯೇ
ಶಬಲಾಂ ತವ || ವಸಿಷ್ಠೇನೈವಮುಕ್ತಸ್ತು ವಿಶ್ವಾಮಿತ್ರೋಽಬ್ರವೀತ್ತತಃ ||
೧೬|| ಸಂರಬ್ಧತರಮತ್ಯರ್ಥಂ ವಾಕ್ಯಂ ವಾಕ್ಯ ವಿಶಾರದಃ || ಹೈರಣ್ಯ
ಕಕ್ಷ್ಯಾನ್ ಗ್ರೈವೇಯಾನ್ ಸುವರ್ಣಾಂಕುಶಭೂಷಿತಾನ್ ||೧೭|| ದದಾಮಿ

ಯಾತ್ರಾಚ-ಪ್ರಾಣಜೀವನವೂ, ಅಗ್ನಿಹೋತ್ರಂಚ-ನಿತ್ಯಾಗ್ನಿಹೋತ್ರವೂ,ಬಲಿಃ-ಭೂತಬಲಿಯೂ, ತಥೈವ-ಹಾಗೆಯೆ-ಹೋಮಶ್ಚ-ದರ್ಶಪೂರ್ಣಮಾಸ್ಯೇಷ್ಟಿಗಳೂ, ಸ್ವಾಹಾಕಾರವಷಟ್ಕಾರೌ- ದೇವತೋದ್ದೇಶಕಮಂತ್ರಗಳೂ, ತಥಾ-ಹಾಗೆಯೆ, ವಿವಿಧಾಃ-ನಾನಾವಿಧಗಳಾದ, ವಿದ್ಯಾಶ್ಚ-ವೇದವಿದ್ಯಾದಿಗಳೂ ಹೇರಾಜರ್ಷೇ-ಎಲೈ ರಾಜರ್ಷಿಯೇ, ಏತತ್ಸರ್ವಂ-ಈ ಎಲ್ಲವೂ, ಅತ್ರ – ಈಗೋವಿನಲ್ಲಿ, ಆಯತ್ತಂ-ಸಂಮೇಳನವಾಗಿರುವುದೆಂಬುದರಲ್ಲಿ, ಸಂಶಯೋನ-ಸಂಶಯವಿಲ್ಲ.||೧೪|| ಹೇರಾಜನ್ ಎಲೈ ಅರಸನೆ-ಏತತ್-ಇದು, ಮಮ-ನನಗೆ, ಸತ್ಯೇನ-ಸತ್ಯದಿಂದ, ಸರ್ವಸ್ವಂ - ಸಕಲವು–ಸದಾ - ಯಾವಾಗಲೂ ತುಷ್ಟಿಕರೀ-ಸಂತೋಷಕರವಾದುದು, ಬಹುಭಿಃ-ಅನೇಕ, ಕಾರಣೈಃ-ಕಾರಣಗಳಿಂದ, ಶಬಳಾಂ-ನಂದಿನೀಧೇನುವನ್ನು, ತವ-ನಿನಿಗೆ, ನದಾಸ್ಯೇ-ಕೊಡಲಾರೆನು. ||೧೫|| ತತಃ-ಬಳಿಕ, ವಾಕ್ಯವಿಶಾರದಃ-ಮಾತನಾಡುವುದರಲ್ಲಿಯೂ ನಿಪುಣನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ವಸಿಷ್ಠೇನ- ವಸಿಷ್ಠಋಷಿಯಿಂದ,ಏವಂ-ಹೀಗೆ,ಉಕ್ತಃ-ಹೇಳಲ್ಪಟ್ಟ, ಅತ್ಯರ್ಥಂ-ಬಹಳವಾಗಿ,ಸಂರಬ್ಧತರಂ-ಅತ್ಯಾದರದಿಂದ ಕೂಡಿದ ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು. ||೧೬|| ಹೈರಣ್ಯಕಕ್ಷ್ಯಾನ್-ಭಂಗಾರದ, ಕಕ್ಷ್ಯಾನ್-ಘಂಟೆಗಳು ಕಟ್ಟಿರುವ ನಡಕಟ್ಟುಗಳುಳ್ಳ, ಗ್ರೈವೇಯಾನ್-ಕಂಠಾಭರಣಗಳೂ, ಸುವರ್ಣಾಂಕುಶಭೂಷಿ, ತಾನ್-ಸುವರ್ಣ-ಚಿನ್ನದವಿಕಾರವಾದ, ಅಂಕುಶ–ಅಂಕುಶಾಯುಧಗಳಿಂದ, ಭೂಷಿತಾನ್-ಅಲಂಕೃತ್ಯಗಳಾದ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರ, ಕುಂಜರಾನ್-ಆನೆಗಳನ್ನು, ತೇ-ನಿನಗೆ, ಅಹಂ, ನಾನು, ದಾಸ್ಯಾಮಿ-ಕೊಡುವೆನು. ||೧೭|| ಶ್ವೇತಾಶ್ವಾನಾಂ- ಬಿಳಿಯಕುದುರೆಗಳುಳ್ಳ, ಚತುರುಜಾಂ-ನಾಲ್ಕುಕುದುರೆಗಳನ್ನು ಕಟ್ಟಿರುವ,ಹೈರಣ್ಯಾನಾಂ ಚಿನ್ನದ, ರಥಾನಾಂ-ರಥಗಳ, ಕಿಂಕಿಣೀಕವಿಭೂಷಿತಾನ್ – ಕಿರುಗೆಜ್ಜೆಗಳಿಂದ ಅಲಂಕೃತವಾದ, ರಥಾನಾಂ- ರಥಗಳ, ಅಷ್ಟಾಶತಾನಿ – ಎಂಟು

ನನ್ನ ಸರ್ವಸ್ವವಾಗಿರುವುದೆಂಬಲ್ಲಿ ಸಂಶಯುವೇ ಇಲ್ಲ. ಈ ಕಾರಣಗಳಿಂದ ನಿನಗೆ ಈಗೋವನ್ನು ಕೊಡುವದಿಲ್ಲ." ಎಂದನು. || ೧೫ || ವಸಿಷ್ಠಋಷಿಯು ಹೀಗೆನ್ನಲು ನುಡಿಚತುರನಾದ ವಿಶ್ವಾಮಿತ್ರನು, ಬಹಳ ಆತುರವುಳ್ಳವನಾಗಿ ಹೀಗೆ ಹೇಳಿದನು. "ಎಲೈ ವಸಿಷ್ಠಮಹರ್ಷಿಯೆ ! ಭಂಗಾರದ ನಡುಕಟ್ಟುಗಳೂ, ಕಂಠಾಭರಣಗಳೂ, ಭಂಗಾರದ ಅಂಕುಶಗಳು, ಇವುಗಳಿಂದಲಂಕೃತವಾದ ಹದಿನಾಲ್ಕು ಸಾವಿರ ಆನೆಗಳನ್ನೂ, ನಾಲ್ಕು ಶ್ವೇತಾಶ್ವಗಳುಳ್ಳದೂ, ಘಂಟೆಗಳಿಂದಲಂಕೃತವಾದುದೂ ಆದ ಎಂಟು ನೂರು ರಥಗಳನ್ನೂ, ಸಿಂಧುದೇಶದ ಮಹಾ ಬಲಿಷ್ಠವಾದ ಹನ್ನೊಂದು ಸಾವಿರ ಕುದುರೆಗಳನ್ನೂ, ಚಿತ್ರಬಣ್ಣ

ಕುಂಜರಾಂಸ್ತೇಹಂ ಸಹಸ್ರಾಣಿ ಚತುರ್ದಶ ॥ ಹೈರಣ್ಯಾನಾಂ ರಥಾನಾಂ ತೇ ಶ್ವೇತಾಶ್ವಾನಾಂ ಚತುರ್ಯುಜಾಂ ॥ ೧೮ ॥ ದದಾಮಿತೇ ಶತಾನ್ಯಷ್ಟಾ ಕಿಂಕಿಣೀಕ ವಿಭೂಷಿತಾನ್ ॥ ಹಯಾನಾಂ ದೇಶಜಾತಾನಾಂ ಕುಲಜಾನಾಂ ಮಹೌಜಸಾಂ ॥ ೧೯ ॥ ಸಹಸ್ರಮೇಕಂ ದಶಚ ದದಾಮಿ ತವಸುವ್ರತ ॥ ನಾನಾವರ್ಣವಿಭಕ್ತಾನಾಂ ವಯಸ್ಥಾನಾಂ ತಥೈವಚ ॥೨೦॥ ದದಾಮ್ಯೇಕಾಂ ಗವಾಂ ಕೋಟಿಂ ಶಬಳಾ ದೀಯತಾಂ ಮಮ ॥ ಯಾವದಿಚ್ಛಸಿ ರತ್ನಂವಾ ಹಿರಣ್ಯಂವಾ ದ್ವಿಜೋತ್ತಮ ॥ ೨೧ ॥ ತಾವದ್ದದಾಮಿ ತತ್ಸರ್ವಂ ಶಬಳಾ ದೀಯತಾಂ ಮಮ ॥ ಏವಮುಕ್ತಸ್ತು ಭಗವಾನ್ ವಿಶ್ವಾಮಿತ್ರೇಣ ಧೀಮತಾ॥ ೨೨ ॥ ನದಾಸ್ಯಾಮೀತಿ ಶಬಳಾಂ ಪ್ರಾಹ ರಾಜನ್ ಕಥಂಚನ ॥ ಏತದೇವಹಿ

---

ನೂರುಗಳನ್ನು, ತೇ-ಪ್ರಸಿದ್ಧನಾದ, ತೇ-ನಿನಗೆ, ದಾಸ್ಯಾಮಿ ಕೊಡುತ್ತೇನೆ. ॥೧೮॥ ಹೇಸುವ್ರತ-ಎಲೈ ನಿಷ್ಠಾಪರನೇ-ತವ-ನಿನಗೆ, ದೇಶಜಾತಾನಾಂ- ಸಿಂಧುದೇಶದಲ್ಲಿಹುಟ್ಟಿದ, ಕುಲಜಾನಾಂ ಗಂಧರ್ವ ಕುಲೋತ್ಪನ್ನಗಳಾದ, ಮಹೌಜಸಾಂ-ಮಹಾವೀರ್ಯವುಳ್ಳ, ಹಯಾನಾಂ-ಕುದುರೆಗಳ ಏಕಂದಶಚ-ಹನ್ನೊಂದು, ಸಹಸ್ರಾಣಿ-ಸಹಸ್ರಗಳನ್ನು, ದದಾಮಿ-ಕೊಡುವೆನು. ॥ ೧೯ ॥ ನಾನಾವರ್ಣವಿಭಕ್ತಾನಾಂ-ಬಗೆಬಗೆಯ ಬಣ್ಣಗಳಿಂದ, ವಿಭಕ್ತಾನಾಂ-ಪ್ರತ್ಯೇಕಿಸಿರುವ, ತಥೈವ - ಹಾಗೆಯೆ, ವಯಸ್ಥಾನಾಂ ಯೌವನವುಳ್ಳ, ಗವಾಂ-ಗೋವುಗಳ, ಏಕಾಂಕೋಟಿಂ-ಒಂದು ಕೋಟಿಯನ್ನು, ದದಾಮಿ-ಕೊಡುತ್ತೇನೆ - ಮಮ-ನನಗೆ, ಶಬಳಾ-ನಂದಿನೀಧೇನುವು, ದೀಯತಾಂ-ಕೊಡಲ್ಪಡಲಿ, ಹೇದ್ವಿಜೋತ್ತಮ-ಎಲೈ ಬ್ರಾಹ್ಮಣ ಶ್ರೇಷ್ಠನೆ-ರತ್ನಂವಾ - ರತ್ನಗಳನ್ನೇ ಆಗಲಿ-ಹಿರಣ್ಯಂವಾ-ಚಿನ್ನವನ್ನೇ ಆಗಲಿ-ಯಾವತ್ - ಎಷ್ಟು, ಇಚ್ಛಸಿ - ಅಪೇಕ್ಷಿಸುವೆಯೋ, ತಾವತ್ - ಅಷ್ಟುಸಂಖ್ಯೆಯುಳ್ಳ, ತತ್ಸರ್ವಂ - ಅವೆಲ್ಲವನ್ನೂ, ದದಾಮಿ-ಕೊಡುತ್ತೇನೆ, ಮಮ-ನನಗೆ, ಶಬಳಾ - ನಂದಿನೀಧೇನುವು, ದೀಯತಾಂ-ಕೊಡಲ್ಪಡಲಿ. ॥೨೧॥ ಧೀಮತಾ-ಬುದ್ಧಿವಂತನಾದ, ವಿಶ್ವಾಮಿತ್ರೇಣ-ವಿಶ್ವಾಮಿತ್ರನಿಂದ, ಭಗವಾನ್-ಪೂಜ್ಯನಾದ ವಸಿಷ್ಠಋಷಿಯು, ಏವಂ ಈರೀತಿ, ಉಕ್ತಃ - ಹೇಳಲ್ಪಟ್ಟು, ಹೇರಾಜನ್ - ಎಲೈ ಅರಸೆ-ಕಥಂಚನ-ಹೇಗಾದರೂ, ಶಬಳಾಂ-ನಂದನೀಧೇನುವನ್ನು, ನದಾಸ್ಯಾಮಿ-ಕೊಡಲಾರೆನೆಂದು, ಪ್ರಾಹ-ಹೇಳಿದನು. ॥೨೨॥ ಹೇರಾಜನ್-ಎಲೈ ರಾಜನೆ, ಮೇ-ನನಗೆ, ಏತದೇವ-ಇದೇ ರತ್ನಂಹಿ - ರತ್ನವಷ್ಟೆ, ಏತದೇವ ಇದೇ, ಮೇ - ನನಗೆ, ಧನಂ - ಧನವಷ್ಟೆ, ಸರ್ವಸ್ವಂ - ಎಲ್ಲವೂ, ಏತದೇವ-ಇದೇ, ಜೀವಿತಂಹಿ-ಪ್ರಾಣವಷ್ಟೆ, ದರ್ಶಶ್ಚ-ದರ್ಶೇಷ್ಟಿಯೂ, ಪೂರ್ಣಮಾಸಶ್ಚ - ಪೌರ್ಣಮಾಸೇಷ್ಟಿ

---

ವುಳ್ಳುದಾಗಿಯೂ, ಸಮೃದ್ಧಿಯಾಗಿ ಹಾಲನ್ನು ಕರೆಯುವುದಾಗಿಯೂ ಇರುವ ಒಂದುಕೋಟಿ ಗೋವುಗಳನ್ನೂ, ನಿನ್ನ ಇಚ್ಛಾನುಸಾರವಾದ ರತ್ನಗಳನ್ನೂ, ಭಂಗಾರವನ್ನು ಕೊಡುವೆನು. ಈ ಶಬಳೆಯನ್ನು ನನಗೆ ಕೊಡುವವನಾಗು.'' ಇಂತು ನುಡಿದ ವಿಶ್ವಾಮಿತ್ರನ ಮಾತನ್ನು ಕೇಳಿ ವಸಿಷ್ಠ ಮಹಾಮುನಿಯು ''ಎಲೈ ರಾಜನಾದ ಕೌಶಿಕನೇ ! ಏನಾದರೂ ಈ ಗೋವನ್ನು ಕೊಡುವದಿಲ್ಲ. ॥ ೨೨ ॥ ಇದು ನನಗೆ ರತ್ನವೂ, ಧನವೂ, ಸರ್ವಸ್ವವೂ, ಆಗಿರುವುದರಿಂದ ಇದೇ ನನ್ನ ಜೀವಿತವಾಗಿರುವುದು. ಇಷ್ಟೆಯಲ್ಲದೆ ದಶ ಪೌರ್ಣಮಾಸಗಳೇ ಮೊದ

ಮೇರತ್ನಮೇತದೇವಹಿ ಮೇಧನಂ ||೨೩|| ಏತದೇವಹಿ ಸರ್ವಸ್ವಮೇತದೇವಹಿ ಜೀವಿತಂ || ದರ್ಶಶ್ಚ ಪೂರ್ಣಮಾಸಶ್ಚ ಯಜ್ಞಾಶ್ಚೈ ವಾತ್ತದಕ್ಷಿಣಾಃ ||೨೪|| ಏತದೇವಹಿ ಮೇರಾಜನ್ ವಿವಿಧಾಶ್ಚ ಕ್ರಿಯಾಸ್ತಥಾ || ಅದೋಮೂಲಾಃ ಕ್ರಿಯಾಸ್ಸರ್ವಾ ಮಮರಾಜನ್ನಸಂಶಯಃ || ಬಹುನಾ ಕಿಂಪ್ರಲಾಪೇನ ನದಾಸ್ಯೇ ಕಾಮದೋಹಿನೀಂ || ೨೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಪಂಚಾಶಸ್ಸರ್ಗಃ

---

ಯೂ, ಆತ್ತದಕ್ಷಿಣಾಃ-ಹೊಂದಲ್ಪಟ್ಟ, ದಕ್ಷಿಣೆಗಳುಳ್ಳ, ಯಜ್ಞಾಶ್ಚೈವ-ಯಜ್ಞಗಳೂ, ಮೇ-ನನಗೆ, ಏತದೇವ-ಇದೇ, ವಿವಿಧಾಃ-ನಾನಾವಿಧಗಳಾದ,ಕ್ರಿಯಾಶ್ಚ-ಕರ್ಮಗಳೂ,ತಥಾ-ಹಾಗೆಯೆ ಹೇರಾಜನ್-ಎಲೈ ಅರಸೆ, ಮಮ-ನನ್ನ,ಸರ್ವಾಃಕ್ರಿಯಾಃ-ಸಮಸ್ತಕರ್ಮಗಳೂ, ಅದೋಮೂಲಾಃ- ಈ ಕಾಮಧೇನುವೇ ಮೂಲಕಾರಣವೆಂಬುದರಲ್ಲಿ, ನಸಂಶಯಃ-ಸಂಶಯವಿಲ್ಲವು, ಬಹುನಾ-ಬಹಳವಾದ, ಪ್ರಲಾಪೇನ-ವಿಚಾರದಿಂದ, ಕಿಂ-ಪ್ರಯೋಜನವೇನು, ಕಾಮದೋಹಿನೀಂ- ಕಾಮಧೇನುವನ್ನು, ನದಾಸ್ಯೇ-ಕೊಡಲಾರೆನು. || ೨೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಪಂಚಾಶಸ್ಸರ್ಗಃ

---

ಲಾದ ಇಷ್ಟಿಗಳೂ, ಯಜ್ಞಗಳೂ, ವಿವಿಧ ಕರ್ಮಗಳೂ ಇವೇ ಮೊದಲಾದುವೆಲ್ಲ ಈ ಗೋವಿನಿಂದಲೇ ನಡೆಯುತ್ತಿರುವುದು. ಹೆಚ್ಚಾಗಿ ಹೇಳುವುದರಿಂದೇನು? ಕಾಮಧೇನುವಾದ ಈ ಗೋವನ್ನು ಕೊಡತಕ್ಕವುದಿಲ್ಲವೆಂಬ ವಿಷಯದಲ್ಲಿ ಸಂಶಯವಿಲ್ಲ. ||೨೫||

ಇಂತಿದು ವಿಶ್ವಾಮಿತ್ರಕೃತ ಧೇನುಯಾಚನಾ ವಿವರಣವೆಂಬ
ಐವತ್ತಮೂರನೆಯ ಸರ್ಗವು ಸಮಾಪ್ತವಾದುದು.



# ಬಾಲಕಾಂಡೇ ಚತುಃಪಂಚಾಶಸ್ಸರ್ಗಃ.

---

ಕಾಮಧೇನುಂ ವಸಿಷ್ಠೋಽಪಿ ಯದಾನತ್ಯಜತೇ ಮುನಿಃ ॥ ತದಾಸ್ಯ ಶಬಳಾಂ ರಾಮ ವಿಶ್ವಾಮಿತ್ರೋಽನ್ವಕರ್ಷತ ॥೧॥ ನೀಯಮಾನಾತು ಶಬಳಾ ರಾಮ ರಾಜ್ಞಾ ಮಹಾತ್ಮನಾ ॥ ದುಃಖಿತಾ ಚಿಂತಯಾಮಾಸ ರುದಂತೀ ಶೋಕಕರ್ಶಿತಾ ॥೨॥ ಪರಿತ್ಯಕ್ತಾ ವಸಿಷ್ಠೇನ ಕಿಮಹಂ ಸುಮಹಾತ್ಮನಾ ॥ ಯಾಹಂ ರಾಜಭೃತ್ಯೈರ್ದೀನಾ ಹ್ರಿಯೇಯಂ ಭೃಶದುಃಖಿತಾ॥೩॥ ಕಿಂಮಯಾಪಕೃತಂ ತಸ್ಯ ಮಹರ್ಷೇರ್ಭಾವಿತಾತ್ಮನಃ ॥ ಯನ್ಮಾಮ

---

ಹೇರಾಮ ಎಲೈ ಶ್ರೀರಾಮನೆ, ಮುನಿಃ-ಋಷಿಯಾದ, ವಸಿಷ್ಠೋಽಪಿ - ವಸಿಷ್ಠಋಷಿಯು, ಯದಾ-ಯಾವಾಗ, ಕಾಮಧೇನುಂ-ಕಾಮಧೇನುವನ್ನು, ನತ್ಯಜತೇ-ಬಿಡಲಿಲ್ಲವೊ, ತದಾ-ಆಗ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಅಸ್ಯ-ಈ ವಸಿಷ್ಠಋಷಿಯ ಸಂಬಂಧವಾದ, ಶಬಳಾಂ-ನಂದಿನೀಧೇನುವನ್ನು, ಅನ್ವಕರ್ಷತ-ಸೆಳದನು. ॥೧॥ ಹೇರಾಮ-ಎಲೈ ಶ್ರೀರಾಮನೇ, ಮಹಾತ್ಮನಾ-ಮಹಾತ್ಮನಾದ, ರಾಜ್ಞಾ-ಅರಸಿನಿಂದ, ನೀಯಮಾನಾ - ಒಯ್ಯಲ್ಪಡುತ್ತಿರುವ, ಶಬಳಾ - ನಂದಿನೀಧೇನುವು, ದುಃಖಿತಾ - ದುಃಖಿತಳಾಗಿ, ರುದಂತೀ - ಅಳುತ್ತ, ಶೋಕಕರ್ಶಿತಾ - ಮನೋವ್ಯಥೆಯಿಂದ ಕೃಶೀಭಾವವನ್ನು ಹೊಂದಿ, ಚಿಂತಯಾಮಾಸ - ಆಲೋಚಿಸಿದಳು. ॥೨॥ ಅಹಂ-ನಾನು, ಸುಮಹಾತ್ಮನಾ - ಮಹಾತ್ಮನಾದ, ವಸಿಷ್ಠೇನ - ವಸಿಷ್ಠಋಷಿಯಿಂದ, ಪರಿತ್ಯಕ್ತಾಕಿಂ-ತ್ಯಜಿಸಲ್ಪಟ್ಟೆನೇ, ಯಾಹಂ - ಯಾವ ನಾನು, ರಾಜಭೃತ್ಯೈಃ - ರಾಜಭೃತ್ಯರಿಂದ, ದೀನಾ - ದೀನಳಂತೆ, ಭೃಶದುಃಖಿತಾ - ಬಹಳ ದುಃಖಗೊಂಡು, ಹ್ರಿಯೇಯಂ - ಅಪಹರಿಸಲ್ಪಟ್ಟೆನೋ ॥೩॥ ಯತ್-ಯಾವ ಕಾರಣ, ಧಾರ್ಮಿಕಃ - ಧರ್ಮಿಷ್ಠನಾದ ವಸಿಷ್ಠ ಋಷಿಯು, ಇಷ್ಟಾಂ-ಪ್ರೀತಿಪಾತ್ರಳಾದ, ಭಕ್ತಾಂ-ಭಕ್ತಿವಂತಳಾದ, ಅನಾಗಸಂ - ಅಪರಾಧ ರಹಿತಳಾದ, ಮಾಂ - ನನ್ನನ್ನು, ತ್ಯಜತಿ - ಪರಿತ್ಯಾಗ

---

ಎಲೈ ರಘುಪುಂಗವನೆ! ವಸಿಷ್ಠಮುನಿಯು ನಂದಿನೀ ಧೇನುವನ್ನು ಅಗಲಲು ಯಾವಾಗ ಮನದೆರೆಯಲಿಲ್ಲವೊ, ಆಗ ವಿಶ್ವಾಮಿತ್ರನು ಆ ಗೋವನ್ನು ಬಲಾತ್ಕಾರವಾಗಿ ಸೆಳೆದನು. ಇಂತು ಮಹಾ ಬಲಶಾಲಿಯಾದ ವಿಶ್ವಾಮಿತ್ರನಿಂದ ಸೆಳೆದೊಯ್ಯಲ್ಪಡುತ್ತಿರುವ ಆ ಶಬಳೆಯು ಶೋಕಾಕ್ರಾಂತಳಾಗಿ ದುಃಖಿಸುತ್ತ ಹೀಗೆ ಯೋಚಿಸಿದಳು. "ಮಹಾನುಭಾವನಾದ ವಸಿಷ್ಠಋಷಿಯು ನನ್ನನ್ನಗಲಲು, ಕಾರಣವೇನಿರಬಹುದು ? ನಾನುಂ ದುಃಖಾಕ್ರಾಂತಳಾಗಿ ಈ ರಾಜಭಟರಿಂದ ಸೆಳದೊಯ್ಯಲ್ಪಡುತ್ತಿರುವೆನಲ್ಲ! ಆತ್ಮಜ್ಞಾನಿಯಾದ ಆ ವಸಿಷ್ಠ ಮುನಿಪುಂಗವನಿಗೆ ನಾನಾವ ಅಪರಾಧವನ್ನು ಮಾಡಿದೆನು? ಧರ್ಮಿಷ್ಠನಾದ ವಸಿಷ್ಠ ಋಷಿಯು ನಿರಪರಾಧಿನಿಯೂ, ಭಕ್ತಳೂ, ಇಚ್ಛಾನುವರ್ತಿನಿಯೂ ಆದ ನನ್ನನ್ನು ತ್ಯಜಿಸುವವನಲ್ಲ.

ನಾಗಸಾಂ ಭಕ್ತಾಮಿಷ್ಟಾಂ ತ್ಯಜತಿ ಧಾರ್ಮಿಕಃ || ೪ || (ಇತಿಸಾ ಚಿಂತಯಿತ್ವಾತು ವಿನಿಶ್ವಸ್ಯ ಪುನಃಪುನಃ) ನಿರ್ಧೂಯ ತಾಂಸ್ತದಾಭೃತ್ಯಾನ್ ಶತಶಶ್ಶತ್ರುಸೂದನ || ಜಗಾಮಾನಿಲವೇಗೇನ ಪಾದಮೂಲಂ ಮಹಾತ್ಮನಃ || ೫ || ಶಬಳಾ ಸಾ ರುದಂತೀಚ ಕ್ರೋಶಂತೀ ಚೇದಮಬ್ರವೀತ್ || ವಸಿಷ್ಠಸ್ಯಾಗ್ರತಸ್ಥಿತ್ವಾ ಮೇಘದುಂದುಭಿ ನಿಸ್ವನಾ || ೬ || ಭಗವನ್ ಕಿಂಪರಿತ್ಯಕ್ತಾತ್ವಯಾಹಂ ಬ್ರಹ್ಮಣಸ್ಸುತ || ಯಸ್ಮಾದ್ರಾಜಭೃತಾ ಮಾಂಹಿ ನಯಂತೀ ತ್ವತ್ಸಕಾಶತಃ || ೭ || ಏವಮುಕ್ತಸ್ತು ಬ್ರಹ್ಮರ್ಷಿ ರಿದಂವಚನಮಬ್ರವೀತ್ ||

---

ಮಾಡುತ್ತಾನೋ - ಭಾವಿತಾತ್ಮನಃ - ಧ್ಯಾನಯೋಗದಿಂದ ಬ್ರಹ್ಮನಿಷ್ಠನಾದ, ತಸ್ಯಮಹರ್ಷೇಃ- ಆ ವಸಿಷ್ಠ ಋಷಿಗೆ, ಮಯಾ - ನನ್ನಿಂದ, ಕಿಮಪಕೃತಂ - ಏನು ಅಪಕಾರಮಾಡಲ್ಪಟ್ಟಿತು, ಇತಿ - ಇಂತೆಂದು, ಚಿಂತಯಾಮಾಸ - ಆಲೋಚಿಸಿದಳು. || ೪ || ಹೇಶತ್ರುಸೂದನ - ಎಲೈ ಶತ್ರುಸಂಹಾರಕನೇ, ತದಾ-ಆಗ, ಶತಶಃ- ನೂರಾರು ಸಂಖ್ಯೆಯುಳ್ಳ, ತಾನ್ ಭೃತ್ಯಾನ್- ಆ ಭೃತ್ಯರನ್ನು, ನಿರ್ಧೂಯ-ಕೊಡಹಿ, ಅನಿಲವೇಗೇನ-ವಾಯುವೇಗದಿಂದ, ಮಹಾತ್ಮನಃ-ಮಹಾನುಭಾವನಾದ ವಸಿಷ್ಠಋಷಿಯ, ಪಾದ ಮೂಲಂ-ಪಾದಗಳನ್ನು ಕುರಿತು, ಜಗಾಮ-ತೆರಳಿದಳು || ೫ | ಸಾಶಬಳಾ-ಆ ಕಾಮಧೇನುವು, ರುದಂತೀಚ - ರೋದನಮಾಡುತ್ತ, ಕ್ರೋಶಂತೀಚ - ದೀನಧ್ವನಿಯನ್ನು ಮಾಡುತ್ತ, ವಸಿಷ್ಠಸ್ಯ-ವಸಿಷ್ಠಋಷಿಯ, ಅಗ್ರತಃ ಮುಂಗಡೆ, ಸ್ಥಿತ್ವಾ - ನಿಂತು, ಮೇಘದುಂದುಭಿನಿಸ್ವನಾ-ಮೇಘದಂತೆಯೂ ಭೇರೀಧ್ವನಿಯಂತೆಯೂ ಕೂಗುತ್ತ, ಇದಂ-ಈ ವಚನವನ್ನು, ಅಬ್ರವೀತ್-ನುಡಿದಳು ||೬|| ಹೇಭಗವನ್- ಎಲೈ ಪೂಜ್ಯನೇ, ಹೇಬ್ರಹ್ಮಣಸ್ಸುತ-ಎಲೈ ಚತುರ್ಮುಖಬ್ರಹ್ಮನ ಪುತ್ರನೇ, ಅಹಂ ನಾನು, ತ್ವಯಾ-ನಿನ್ನಿಂದ, ಪರಿತ್ಯಕ್ತಾಕಿಂ - ತ್ಯಜಿಸಲ್ಪಟ್ಟನೇ, ಹಿ-ಯಾವ ಕಾರಣ, ರಾಜಭೃತ್ಯಾಃ-ರಾಜಭಟರು, ಮಾಂ-ನನ್ನನ್ನು, ತ್ವತ್ಸಕಾಶತಃ-ನಿನ್ನ ಸಮೀಪದಿಂದ, ಎಳೆದುಕೊಂಡು ಹೋಗುತ್ತಾರೆಯೋ ||೭|| ಏವಂ-ಹೀಗೆ, ಉಕ್ತಃ-ಹೇಳಲ್ಪಟ್ಟ, ಬ್ರಹ್ಮರ್ಷಿಸ್ತು - ವಸಿಷ್ಠಋಷಿಯು, ಇದಂ ವಚನಂ-ಈ ಮಾತನ್ನು, ಅಬ್ರವೀತ್-ನುಡಿದನು, ಹೇಶಬಳೇ- ಎಲೈ ಕಾಮಧೇನುವೇ, ಶೋಕಸಂತಪ್ತಹೃದಯಾಂ-ಶೋಕದಿಂದ ತಪಿಸಲ್ಪಟ್ಟ ಮನಸುಳ್ಳ, ಸ್ವಸಾರಮಿವ- ತಂಗಿಯಂತೆ, ದುಃಖಿತಾಂ-ದುಃಖಿತಳಾದ, ತ್ವಾಂ-ನಿನ್ನನ್ನು, ನತ್ಯಜಾಮಿ - ಬಿಡಲಾರೆನು, ಮೇ-ನನಗೆ,

---

ವಲ್ಲವೆ ? " ಇಂತು ಚಿಂತಿಸಿ ತನ್ನನ್ನು ಸೆಳೆಯುತ್ತಿರುವ ರಾಜಭಟರನ್ನು ಕೊಡಹಿ ವಾಯುವೇಗದಿಂದ ಮಹಾತ್ಮನಾದ ವಸಿಷ್ಠನ ಬಳಿಸಾರಿ ಅಳುತ್ತ, ದೀನಧ್ವನಿಯಿಂದರಚುತ್ತ ಮೇಘದಂತೆ ಘರ್ಜಿಸುತ್ತ, "ಎಲೈ ಬ್ರಹ್ಮಕುವರನೆ ! ಏತಕ್ಕಾಗಿ ನನ್ನನ್ನೊದಲಿದೆ ? ಈರಾಜಭಟರು ನನ್ನನ್ನು ಸೆಳೆಯುತ್ತಿರುವುದೇಕೆ ! " ಎಂದಳು. ಹೀಗೆ ದುಃಖಿತಳಾಗಿ ಸಹೋದರಿಯಂತೆ ಶೋಕಸಂತಪ್ತಳಾಗಿರುವ ಆ ನಂದಿನೀ ಧೇನುವನ್ನು ನೋಡಿದ ಮಹಾತ್ಮನಾದ ವಸಿಷ್ಠ ಋಷಿಯು, "ಓ ಶಬಳೆಯೆ ! ನಿನ್ನನ್ನು ನಾನು ತ್ಯಜಿಸಲಿಲ್ಲವು ; ನೀನು ನನಗೆ ಯಾವ ಅಪಕಾರವನ್ನೂ ಮಾಡಲಿಲ್ಲ. ಮಹಾಪರಾಕ್ರಮಿಯಾದ ಈ ವಿಶ್ವಾ

ಶೋಕಸಂತಪ್ತಹೃದಯಾಂ ಸ್ವಸಾರ ಮಿವ ದುಃಖಿತಾಂ ॥ ೮ ॥ ನತ್ವಾಂ ತ್ಯಜಾಮಿ ಶಬಳೇ ನಾಪಿಮೇಽಪಕೃತಂ ತ್ವಯಾ ॥ ಏಷತ್ವಾಂ ನಯತೇ ರಾಜಾ ಬಲಾನ್ಮತ್ತೋ ಮಹಾಬಲಃ ॥೯॥ ನಹಿತುಲ್ಯಂ ಬಲಂಮಹ್ಯಂ ರಾಜಾತ್ವದ್ಯ ವಿಶೇಷತಃ ॥ ಬಲೀರಾಜಾ ಕ್ಷತ್ರಿಯಶ್ಚ ಪೃಥಿವ್ಯಾಃ ಪತಿರೇವಚ ॥ ೧೦ ॥ ಇಯಮಕ್ಷೌಹಿಣೀ ಪೂರ್ಣಾ ಸವಾಜಿ ರಥಸಂಕುಲಾ॥ಹಸ್ತಿಧ್ವಜ ಸಮಾಕೀರ್ಣಾ ತೇನಾಸೌ ಬಲವತ್ತರಃ ॥ ಏವಮುಕ್ತಾ ವಸಿಷ್ಠೇನ ಪ್ರತ್ಯುವಾಚ ವಿನೀತವತ್ ॥ ವಚನಂ ವಚನಜ್ಞಾಸಾ ಬ್ರಹ್ಮರ್ಷಿಮಮಿತಪ್ರಭಂ ॥ ನಬಲಂ ಕ್ಷತ್ರಿಯಸ್ಯಾ

---

ತ್ವಯಾ-ನಿನ್ನಿಂದ, ನಾಪಕೃತಮಪಿ-ಅಪಕಾರವೂ ಮಾಡಲ್ಪಡಲಿಲ್ಲ. ॥ ೮ ॥ ಕಿಂತು - ಆದರೆ, ರಾಜಾ ಅರಸಾದ ವಿಶ್ವಾಮಿತ್ರನು, ಮತ್ತಃ-ನನಗಿಂತಲೂ, ಮಹಾಬಲಃ- ಮಹಾಬಲಿಷ್ಠನಾದರಿಂದ, ಏಷಃ-ಇವನು, ತ್ವಾಂ-ನಿನ್ನನ್ನು, ಬಲಾತ್- ಬಲಾತ್ಕಾರದಿಂದ,ನಯತೇ- ತೆಗದುಕೊಂಡು ಹೋಗುತ್ತಾನೆ, ಮಹ್ಯಂ-ನನಗೆ, ಬಲಂ-ಸೈನ್ಯವು, ತುಲ್ಯಂ-ಸಮಾನವಾದುದು,ನಹಿ-ಇಲ್ಲವಷ್ಟೆ,ಅದ್ಯತು. ಈಗಲಾದರೆ, ವಿಶೇಷತಃ-ಬಹಳವಾಗಿ, ರಾಜಾ-ಅರಸಾದ ವಿಶ್ವಾಮಿತ್ರನು, ಬಲೀ-ಬಲವಂತನು, ಕ್ಷತ್ರಿಯಶ್ಚ-ಕ್ಷತ್ರಧರ್ಮವುಳ್ಳವನು, ಪೃಥಿವ್ಯಾಃ-ಭೂಮಿಗೆ, ಪತಿರೇವಚ-ಪತಿಯೂ ಆಗಿರುವನು॥೧೦॥ ಸವಾಜಿರಥಸಂಕುಲಾ-ಸವಾಜಿ- ಕುದುರೆಗಳಿಂದೊಡಗೂಡಿದ,ರಥ-ರಥಗಳಿಂದ,ಸಂಕುಲಾ-ವ್ಯಾಪ್ತವಾದ,ಹಸ್ತಿಧ್ವಜಸಮಾಕೀರ್ಣಾ-ಆನೆಗಳಿಂದಲೂ ಧ್ವಜಗಳಿಂದಲೂ ವ್ಯಾಪ್ತವಾದ, ಇಯಂ- ಈ ಪರಿದೃಶ್ಯಮಾನವಾದ, ಅಕ್ಷೌಹಿಣೀ-ಅಕ್ಷೌಹಿಣೀಸೈನ್ಯವೂ, ಪೂರ್ಣಾ-ತುಂಬಿರುವುದು, ತೇನ- ಆ ಕಾರಣ, ಅಸೌ-ಈ ರಾಜನು, ಬಲವತ್ತರಃ-ಅತ್ಯಂತ ಬಲಿಷ್ಠನು ॥೧೧॥ ಏವಂ-ಈ ಪರಿಯಾಗಿ, ವಸಿಷ್ಠೇನ-ವಸಿಷ್ಠಋಷಿಯಿಂದ, ಉಕ್ತಃ-ಹೇಳಲ್ಪಟ್ಟ, ವಚನಜ್ಞಾ- ನುಡಿಚತುರತೆಯುಳ್ಳ, ಸಾ - ಆ ನಂದಿನೀ ಧೇನುವು, ಅಮಿತಪ್ರಭಂ-ಅಪಾರವಾದ ತೇಜವುಳ್ಳ, ಬ್ರಹ್ಮರ್ಷಿಂ-ಬ್ರಹ್ಮರ್ಷಿಯನ್ನು ಕುರಿತು, ವಚನಂ-ಮಾತನ್ನು, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟಳು. ॥೧೨॥ ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ಕ್ಷತ್ರಿಯಸ್ಯ-ಕ್ಷತ್ರಿಯನ, ಬಲಂ - ಬಲವನ್ನು, ನಾಹುಃ-ಹೇಳುವದಿಲ್ಲ, ಬ್ರಾಹ್ಮಣಃ - ಬ್ರಾಹ್ಮಣನು, ಬಲವತ್ತರಃ - ಅತಿಶಯವಾದ ಬಲವುಳ್ಳವನು, ದಿವ್ಯಂ - ದೇವತಾ ಸಂಬಂಧವಾದ, ಬ್ರಹ್ಮಬಲಂ-ಬ್ರಾಹ್ಮಣಬಲವು, ಕ್ಷತ್ರಾತ್-ಕ್ಷತ್ರಿಯಬಲಕ್ಕಿಂತಲೂ, ಬಲವತ್ತರಂ-ಅತಿಶಯವಾದ ಬಲವುಳ್ಳದು,

---

ಮಿತ್ರ ರಾಜನು ನೆಳೆದುಕೊಂಡು ಹೋಗುತ್ತಿರುವನು. ಇವನು ರಾಜನು. ಮಹಾ ಬಲಿಷ್ಠನು; ಅದರಲ್ಲಿಯೂ ಕ್ಷತ್ರಿಯನು ; ಭೂಮಂಡಲಾಧಿಪತಿಯು. ಅಕ್ಷೌಹಿಣೀ ಸೇನೆಯಿಂದೊಡಗೂಡಿ ಮಹಾ ಪರಾಕ್ರಮಿಯಾಗಿರುವನು. ಇವನಿಗೆ ಸರಿಯಾದ ಬಲವು ನನ್ನಲಿಲ್ಲವು. ” ಎಂದನು. ॥೧೧॥ ಇಂತೆನಲಾ ಶಬಳೆಯು ವಸಿಷ್ಠ ಮುನಿಯನ್ನು ಕುರಿತು, “ಎಲೈ ಬ್ರಾಹ್ಮಣನೆ ! ಕ್ಷತ್ರಿಯ ಬಲವನ್ನಾರುತಾನೆ ಲೆಕ್ಕಿಸುವರು ! ಬ್ರಾಹ್ಮಣನೇ ಬಲಶಾಲಿಯು ; ಕ್ಷತ್ರಿಯ ಬಲಕ್ಕಿಂತಲೂ ಬ್ರಹ್ಮಬಲವೇ ಅಧಿಕವಾದುದು. ಆದುದರಿಂದ ನಿನ್ನ ಸಾಮರ್ಥ್ಯವು ಹೆಚ್ಚಿನದೇ ಸರಿ ; ನಿನಗಿಂತಲೂ ಈ ವಿಶ್ವಾಮಿತ್ರನು ಬಲಿಷ್ಠನಲ್ಲ. ನಿನ್ನ ತೇಜಸ್ಸು ಹೊಂದಲಸದಳವಾದುದು. ಬ್ರಹ್ಮಬಲೋಪೇತಳಾದ ನನಗೆ ಅಣತಿಯನ್ನೀಯು

ಹು ರ್ಬ್ರಹ್ಮಣೋ ಬಲವತ್ತರಃ || ಬ್ರಹ್ಮನ್ ಬ್ರಹ್ಮ ಬಲಂ ದಿವ್ಯಂ ಕ್ಷತ್ರಾತ್ತು ಬಲವತ್ತರಂ || ಅಪ್ರಮೇಯಂ ಬಲಂ ತುಭ್ಯಂ ನತ್ವಯಾ ಬಲತ್ತರಃ || ವಿಶ್ವಾಮಿತ್ರೋ ಮಹಾವೀರ್ಯಸ್ತೇಜಸ್ತವ ದುರಾಸದಂ||ನಿಯುಙ್ಕ್ಷ್ವಮಾಂ ಮಹಾಭಾಗ ತ್ವದ್ಬ್ರಹ್ಮ ಬಲಸಂಭೃತಾಂ || ತಸ್ಯ ದರ್ಪಬಲಂಯತ್ತ ನ್ನಾಶಯಾಮಿ ದುರಾತ್ಮನಃ || ೧೫ || ಇತ್ಯುಕ್ತಸ್ತು ತಯಾ ರಾಮ ವಸಿಷ್ಠಸ್ಸುಮಹಾಯಶಾಃ || ಸೃಜಸ್ವೇತಿ ತದೋವಾಚ ಬಲಂ ಪರಬಲಾರುಜಂ ||೧೬|| ತಸ್ಯ ತದ್ವಚನಂ ಶ್ರುತ್ವಾ ಸುರಭಿಸ್ಸಾಸೃಜತ್ತದಾ || ತಸ್ಯಾ ಹುಂಭಾರವೋ ತ್ಸೃಷ್ಟಾಃ ಪಪ್ಲವಾ ಶ್ಯತಶೋ ನೃಪ || ನಾಶಯಂತಿ ಬಲಂ ಸರ್ವಂ ವಿಶ್ವಾಮಿತ್ರಸ್ಯಪಶ್ಯತಃ||

---

ತುಭ್ಯಂ-ನಿನ್ನ ಅಪ್ರಮೇಯಬಲಂ-ಅಪಾರವಾದ ಬಲವು, ಮಹಾವೀರ್ಯಃ-ಮಹಾ ಪರಾಕ್ರಮಶಾಲಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ತ್ವಯಾ-ನಿನಿಗಿಂತಲೂ, ಬಲವತ್ತರಃ-ಅತಿಶಯವಾದ ಬಲವುಳ್ಳವನು, ನ-ಅಲ್ಲ, ತೇಜಃ-ತೇಜಸ್ಸು, ದುರಾಸದಂ-ಹೊಂದಲಸಾಧ್ಯವಾದದು ||೧೪|| ಹೇಮಹಾಭಾಗ-ಎಲೈ ಪುಣ್ಯಶಾಲಿಯೆ, ತದ್ಬ್ರಹ್ಮಬಲಸಂಭೃತಾಂ-ನಿನ್ನ ಸಂಬಂಧವಾದ ಬ್ರಹ್ಮಬಲದಿಂದ ವ್ಯಾಪ್ತಳಾದ, ಮಾಂ-ನನ್ನನ್ನು, ನಿಯುಂಕ್ಷ್ವ-ಆಜ್ಞಾಪಿಸು, ದುರಾತ್ಮನಃ - ದುಷ್ಟಬುದ್ಧಿಯುಳ್ಳ, ತಸ್ಯ-ಆ ವಿಶ್ವಾಮಿತ್ರನ, ದರ್ಪಬಲಂ-ಗರ್ವದಿಂದ ಹುಟ್ಟಿದಬಲವು, ಯತ್ - ಯಾವದುಂಟೊ, ತತ್-ಆದನ್ನು, ನಾಶಯಾಮಿ-ನಾಶಗೊಳಿಸುತ್ತೇನೆ. || ೧೫ || ಹೇರಾಮ ಎಲೈ ಶ್ರೀರಾಮನೆ, ತಯಾ-ಆಕಾಮಧೇನುವಿನಿಂದ, ಉಕ್ತಃ-ಇಂತು ಹೇಳಲ್ಪಟ್ಟ, ಸುಮಹಾಯಶಾಃ - ಮಹಾಕೀರ್ತಿವಂತನಾದ; ವಸಿಷ್ಠಃ-ವಸಿಷ್ಠಋಷಿಯು, ತದಾ-ಆಗ, ಪರಬಲಾರುಜಂ - ಪರಸೈನ್ಯಕ್ಕೆ ಹಿಂಸಾಕರವಾದ, ಬಲಂ-ಸೈನ್ಯವನು, ಸೃಜಸ್ವೇತಿ-ಸೃಷ್ಟಿಮಾಡು ಎಂದು, ಉವಾಚ-ಹೇಳಿದನು. ||೧೬|| ತಸ್ಯಾಃ-ಆ ವಸಿಷ್ಠಋಷಿಯು, ತದ್ವಚನಂ-ಆ ಮಾತನ್ನು ಶ್ರುತ್ವಾ-ಕೇಳಿ, ಸಾಸುರಭಿಃ-ಆ ಕಾಮಧೇನುವು, ತದಾ- ಆಗ, ಅಸೃಜತ್-ಸೃಷ್ಟಿಮಾಡಿದಳು. ||೧೭|| ಹೇನೃಪ- ಎಲೈ ಅರಸನೆ, ತಸ್ಯಾಃ - ಆನಂದಿನೀಧೇನುವಿನ, ಹುಂಭಾರವೋತ್ಸೃಷ್ಟಾಃ-ಹುಂಕಾರಧ್ವನಿಗಳಿಂದ ಹುಟ್ಟಿದ, ಶತಶಃ-ನೂರಾರು ಸಂಖ್ಯೆಯುಳ್ಳ, ಪಪ್ಲವಾಃ-ಪಪ್ಲವರೆಂಬಮ್ಲೇಚ್ಛರು, ವಿಶ್ವಾಮಿತ್ರಸ್ಯ-ವಿಶ್ವಾಮಿತ್ರನು, ಪಶ್ಯತಃ ನೋಡುತ್ತಿರಲು, ಸರ್ವಂ-ಸಮಸ್ತವಾದ, ಬಲಂ-ಸೈನ್ಯವನ್ನು, ನಾಶಯಂತಿ-ನಾಶಗೊಳಿಸಿದರು. ||೧೭|| ತತಃ-ಬಳಿಕ, ರಾಜಾ-ಅರಸಾದ, ಸಕೌಶಿಕಃ-ಆ ವಿಶ್ವಾಮಿತ್ರನು, ಬಲಂ-ಸೈನ್ಯವು, ಭಗ್ನಂ-ನಾಶವಾದುದನ್ನು, ದೃಷ್ಟ್ವಾ-

---

ವವನಾಗು. ದುರಾತ್ಮನಾದ ವಿಶ್ವಾಮಿತ್ರನ ಬಲವೆಲ್ಲವನ್ನೂ ನಾಶಗೊಳಿಸುವೆನು'' ಎಂದಳು. ಆಗ ಮಹಾ ಯಶಸ್ವಿಯಾದ ವಸಿಷ್ಠಋಷಿಯು, ‹‹ಶತ್ರುಬಲವನ್ನು ನಾಶಗೊಳಿಸುವ ಸೇನೆಯನ್ನು ಸೃಜಿಸು'' ಎಂದನು ಹೀಗೆನ್ನಲು ಆ ಗೋವು ಸೇನೆಯನ್ನು ಸೃಜಿಸಿದಳು. ||೧೬|| ಎಲೈ ರಾಮಚಂದ್ರನೆ ! ಆಗಲಾ ನಂದಿನೀಧೇನುವಿನ ಹುಂಭಾರವದಿಂದ ಪಪ್ಲವರೆಂಬ ಮ್ಲೇಚ್ಛರನೇಕರು ಹುಟ್ಟಿ, ವಿಶ್ವಾಮಿತ್ರನು ನೋಡುತ್ತಿದ್ದ ಹಾಗೆಯೇ, ಅವನ ಸೇನೆಯನ್ನು ಧ್ವಂಸಗೊಳಿಸಿದರು. ಆಗಲಾ ಕೌಶಿಕನು ನಾಶವಾದ ತನ್ನ ಸೇನೆಯನ್ನು ನೋಡಿ, ಬಹಳವಾದ ಕೋಪವುಳ್ಳವನೂ, ರೋಷದಿಂದ ತಿರುಗುತ್ತಿರುವ ಕಂಗಳುಳ್ಳವನೂ ಆಗಿ,

॥೧೭॥ ಬಲಂ ಭಗ್ನಂ ತತೋ ದೃಷ್ಟ್ವಾ ರಥೇನಾಕ್ರಮ್ಯ ಕೌಶಿಕಃ ॥ ಸರಾಜಾ ಪರಮ ಕೃದ್ಧೋ ರೋಷವಿಸ್ಫಾರಿತೇಕ್ಷಣಃ ॥ಪಪ್ಲವಾನ್ನಾಶಯಾಮಾಸ ಶಸ್ತ್ರೈ ರುಚ್ಚಾವಚೈರಪಿ ॥೧೮॥ ವಿಶ್ವಾಮಿತ್ರಾರ್ದಿತಾನ್ ದೃಷ್ಟ್ವಾ ಪಪ್ಲವಾಂಚ್ಛತ ಶಸ್ತದಾ ॥ ಭೂಯ ಏವಾ ಸೃಜತ್ಕೋಪಾಚ್ಛಕಾನ್ ಯವನಮಿಶ್ರಿತಾನ್ ॥೨೦॥ ತೈರಾಸೀ ತ್ಸಂವೃತಾ ಭೂಮಿ ಶ್ಯಕೈರ್ಯವನಮಿಶ್ರಿತೈಃ॥ಪ್ರಭಾವವದ್ಭಿ ರ್ಮಹಾ ವೀರ್ಯೈ ಹೇಮಕಿಂಜಲ್ಕ ಸನ್ನಿಭೈಃ॥ದೀರ್ಘಾಸಿ ಪಟ್ಟಿಸಧರೈ ರ್ಹೇಮವರ್ಣಾಂ ಬರಾನ್ವಿತೈಃ ॥ ನಿರ್ದಗ್ಧಂ ತದ್ಬಲಂ ಸರ್ವಂ ಪ್ರದೀಪ್ತೈ ರಿವಪಾವಕೈಃ ॥೨೨॥

---

ನೋಡಿ, ರಥೇನ-ರಥದಿಂದ, ಆಕ್ರಮ್ಯ-ಸಂಚರಿಸಿ-ಪರಮಕೃದ್ಧಃ- ಬಹಳ ಕೋಪಿಷ್ಠನಾಗಿ, ರೋಷವಿಸ್ಫಾರಿತೇಕ್ಷಣಃ-ರೋಷ-ಕೋಪದಿಂದ, ವಿಸ್ಫಾರಿತ- ತಿರುಗಿಸಲ್ಪಟ್ಟ-ಈಕ್ಷಣಃ- ನೇತ್ರಗಳುಳ್ಳವನಾಗಿ, ಉಚ್ಚಾವಚೈಃ-ಅನೇಕವಿಧಗಳಾದ, ಶಸ್ತ್ರೈರಪಿ - ಶಸ್ತ್ರಗಳಿಂದ, ಪಪ್ಲವಾನ್ - ಪಪ್ಲವರನ್ನು, ನಾಶಯಾಮಾಸ-ನಾಶಗೊಳಿಸಿದನು. ॥೧೮॥ ವಿಶ್ವಾಮಿತ್ರಾರ್ದಿತಾನ್ - ವಿಶ್ವಾಮಿತ್ರನಿಂದ ಹೊಡೆಯಲ್ಪಟ್ಟ, ಶತಶಃ - ನೂರಾರು, ಪಪ್ಲವಾನ್ - ಪಪ್ಲವರನ್ನು, ದೃಷ್ಟ್ವಾ - ಕಂಡು, ತದಾ - ಆಗ, ಭೂಯಏವ - ಮತ್ತೂ, ಕೋಪಾತ್-ಕೋಪದಿಂದ, ಯವನಮಿಶ್ರಿತಾನ್ - ತುರುಷ್ಕಮ್ಲೇಚ್ಛರಿಂದ ಕೂಡಿರುವ, ಶಕಾನ್-ಶಕರೆಂಬವರನ್ನು, ಅಸೃಜತ್- ಸೃಜಿಸಿದಳು. ॥೨೦॥ ಪ್ರಭಾವವದ್ಭಿಃ-ಪ್ರಕಾಶವಂತರೂ, ಮಹಾಶೂರೈಃ-ಮಹಾಶೂರರೂ, ಹೇಮಕಿಂಜಲ್ಕಸಂನಿಭೈಃ - ಚಿನ್ನದ ಕೇಸರಗಳಂತೆ ಕಾಂತಿಯುಳ್ಳ, ದೀರ್ಘಾಸಿಪಟ್ಟಿಸಧರೈಃ - ಉದ್ದವಾಗಿರುವ ಕತ್ತಿಗಳನ್ನು, ಪಟ್ಟಾಕತ್ತಿಗಳನ್ನು, ಧರಿಸಿರುವ, ಹೇಮವರ್ಣಾಂಬರಾವೃತೈಃ-ಹೇಮವರ್ಣ-ಚಿನ್ನದ ಬಣ್ಣದ ಪೀತಾಂಬರಗಳಿಂದ, ಆವೃತೈಃ-ಸುತ್ತಲ್ಪಟ್ಟ, ಯವನಮಿಶ್ರಿತೈಃ-ತುರುಷ್ಕಭೇದಗಳಿಂದ ಕೂಡಿರುವ, ತೈಃಶಕೈಃ-ಆ ಶಕರಿಂದ, ಭೂಮಿಃ-ನೆಲವು, ಸಂವೃತಾ-ತುಂಬಿದುದು, ಆಸೀತ್ - ಆಯಿತು. ॥ ೨೧ ॥ ಪಾವಕೈರಿವ - ಬೆಂಕಿಯಂತೆ, ಪ್ರದೀಪ್ತೈಃ - ಬೆಳಗುತ್ತಿರುವ ಶಕಯವನರಿಂದ, ಸರ್ವಂ-ಸಮಸ್ತವಾದ, ತದ್ಬಲಂ-ಆ ವಿಶ್ವಾಮಿತ್ರನ ಸೇನೆಯು, ನಿದಗ್ಧಂ - ಸುಡಲ್ಪಟ್ಟಿತು. ॥ ೨೨ ॥ ತತಃ - ಬಳಿಕ, ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಅಸ್ತ್ರಾಣಿ-ಅಸ್ತ್ರಗಳನ್ನು, ಮುಮೋಚಹ-

---

ರಥಾರೂಢನಾಗಿ, ಆ ಪಪ್ಲವರೆಲ್ಲರನ್ನು ಶಸ್ತ್ರಾಸ್ತ್ರಗಳಿಂದ ನಾಶಗೊಳಿಸಿದನು. ॥ ೧೯ ॥ ಇಂತು ವಿಶ್ವಾಮಿತ್ರನಿಂದ ಸದೆಬಡಿಯಲ್ಪಟ್ಟ ಆ ಪಪ್ಲವರನ್ನು ಕಂಡು, ನಂದಿನಿಯು ಬಹಳವಾದ ಕೋಪವುಳ್ಳವಳಾಗಿ ತುರುಷ್ಕರಿಂದೊಡಗೂಡಿದ ಶಕರೆಂಬ ಮ್ಲೇಚ್ಛಜಾತಿಯ ಯೋಧರನ್ನು ಸೃಜಿಸಿದಳು. ಮಹಾ ಪ್ರಭಾವವಂತರೂ, ವೀರರೂ, ಚಿನ್ನದ ಕಣಗಳಂತೆ ಬೆಳಗುತ್ತಿರುವ ದೇಹಕಾಂತಿಯುಳ್ಳವರೂ, ದೀರ್ಘವಾದ ಕತ್ತಿಗಳನ್ನೂ ಪಟ್ಟಾಕತ್ತಿಗಳನ್ನೂ, ಧರಿಸಿರುವವರೂ, ಸುವರ್ಣಾಂಬರಗಳನ್ನುಟ್ಟವರೂಆದ ಯವನರಿಂದೊಡಗೂಡಿದವರೂ ಆದ ಆ ಶಕರು ಭೂಮಿಯಲ್ಲೆಲ್ಲಾ ವ್ಯಾಪಿಸಿ, ಉರಿಯುತ್ತಿರುವ ಬೆಂಕಿಯಂತೆ ಆ ವಿಶ್ವಾಮಿತ್ರನ

ತತೋಸ್ತ್ರಾಣಿ ಮಹಾತೇಜಾ ವಿಶ್ವಾಮಿತ್ರೋ ಮುಮೋಚಹ || ತೈಸ್ತೈರ್ಯ
ವನಕಾಂಭೋಜಾಃ ಪಪ್ಲವಾಶ್ಚಾಕುಲೀಕೃತಾಃ || || ೨೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಃಪಂಚಾಶಸ್ಸರ್ಗಃ.

---

ಬಿಟ್ಟನಷ್ಟೆ, ತೈಸ್ತೈಃ-ಆಯಾಯ ಅಸ್ತ್ರಗಳಿಂದ, ಯವನಕಾಂಭೋಜಾಃ-ಯವನರು ಕಾಂಭೋಜರು. ಪಪ್ಲವಾಶ್ಚ - ಪಪ್ಲವರೂ, ಆಕುಲೀಕೃತಾಃ-ದುರ್ಬಲರಾಗಿ ಮಾಡಲ್ಪಟ್ಟರು. ||೨೩||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಃಪಂಚಾಶಸ್ಸರ್ಗಃ

---

ಸೇನೆಯಲ್ಲವನ್ನು ಸುಡುತ್ತಿದ್ದರು. ಆ ಬಳಿಕಲಾ ಕೌಶಿಕನು ಅಸ್ತ್ರಗಳನ್ನು ಪ್ರಯೋಗಿಸುತ್ತ, ಆ ಯವನ ಕಾಂಭೋಜ, ಪಪ್ಲವರನ್ನು ವ್ಯಾಕುಲರನ್ನಾಗಿ ಮಾಡಿದನು. || ೨೩ ||

ಇಂತಿದು ಕಾಮಧೇನುವಿನ ಮಹಿಮಾನು ವರ್ಣನವೆಂಬ ಐವತ್ತನಾಲ್ಕನೆಯ
ಸರ್ಗವು ಸಮಾಪ್ತವಾದುದು

# ಬಾಲಕಾಂಡೇ ಪಂಚಪಂಚಾಶಸ್ಸರ್ಗಃ.

---

ತತಸ್ತಾನಾಕುಲಾನ್ ದೃಷ್ಟ್ವಾ ವಿಶ್ವಾಮಿತ್ರಾಸ್ತ್ರ ಮೋಹಿತಾನ್ ॥ ವಸಿಷ್ಠಶ್ಚೋದಯಾಮಾಸ ಕಾಮಧುಕ್ಸೃಜ ಯೋಗತಃ ॥ ೧ ॥ ತಸ್ಯಾ ಹುಂಭಾರವಾಜ್ಜಾತಾಃ ಕಾಂಭೋಜಾ ರವಿಸನ್ನಿಭಾಃ ॥ ಊಧಸಸ್ತ್ವಥ ಸಂಜಾತಾಃ ಪಲ್ಲವಾಶ್ಶಸ್ತ್ರಪಾಣಯಃ ॥ ೨ ॥ ಯೋನಿದೇಶಾಚ್ಚ ಯವನಾ ಶ್ಶಕೃದ್ದೇಶಾಚ್ಛಕಾಸ್ತಥಾ ॥ ರೋಮಕೂಪೇಷು ಚ ಮ್ಲೇಚ್ಛಾ ಹಾರೀತಾಸ್ಸ ಕಿರಾತಕಾಃ ॥ ತೈಸ್ತೈರ್ನಿಷೂದಿತಂ ಸರ್ವಂ ವಿಶ್ವಾಮಿತ್ರಸ್ಯ ತತ್ಕ್ಷಣಾತ್॥ ಸಪದಾತಿ ಗಜಂ ಸಾಶ್ವಂ

---

ತತಃ - ಬಳಿಕ, ವಸಿಷ್ಠಃ - ವಸಿಷ್ಠಋಷಿಯು, ವಿಶ್ವಾಮಿತ್ರಾಸ್ತ್ರಮೋಹಿತಾನ್ ವಿಶ್ವಾಮಿತ್ರನ ಅಸ್ತ್ರದಿಂದ ಮೂರ್ಛೆಯೊಂದಿ, ಆಕುಲಾನ್ - ವ್ಯಾಕುಲರಾದ, ತಾನ್-ಆ ಯವನಕಾಂಭೋಜಾದಿಗಳನ್ನು, ದೃಷ್ಟ್ವಾ - ಕಂಡು, ಹೇಕಾಮಧುಕ್ - ಎಲೈ ಕಾಮಧೇನುವೆ, ಯೋಗತಃ - ಯೋಗಮಹಿಮೆಯಿಂದ, ಸೃಜ-ಸೃಷ್ಟಿಮಾಡು, ಇತಿ - ಇಂತೆಂದು, ಚೋದಯಾಮಾಸ - ಪ್ರೇರಿಸಿದನು. ॥ ೧ ॥ ತಸ್ಯಾಃ-ಆ ಕಾಮಧೇನುವಿನ, ಹುಂಭಾರವಾತ್ - ಹುಂಕಾರ ಧ್ವನಿಯಿಂದ, ರವಿಸನ್ನಿಭಾಃ - ಸೂರ್ಯನಿಗೆ ಸಮಾನರಾದ, ಕಾಂಭೋಜಾಃ - ಕಾಂಭೋಜರು, ಜಾತಾ, - ಹುಟ್ಟಿದರು, ಅಥ- ಬಳಿಕ, ಶಸ್ತ್ರಪಾಣಯಃ - ಶಸ್ತ್ರಗಳೇ ಹಸ್ತಗಳಲ್ಲಿ ಉಳ್ಳ, ಪಲ್ಲವಾಃ - ಪಲ್ಲವರೆಂಬವರು, ಊಧಸಃ - ಕೆಚ್ಚಲಿನಿಂದ, ಸಂಜಾತಾಃ-ಹುಟ್ಟಿದರು, ಯವನಾಃ-ಯವನರೆಂಬ ತುರುಷ್ಕರು, ಯೋನಿದೇಶಾತ್-ಯೋನಿಪ್ರದೇಶದಿಂದಲೂ, ತಥಾ - ಹಾಗೆಯೆ, ಶಕಾಃ - ಶಕರೆಂಬವರು, ಶಕೃದ್ದೇಶಾತ್ - ಗುದಸ್ಥಾನದಿಂದಲೂ, ಜಾತಾಃ-ಹುಟ್ಟಿದರು, ರೋಮಕೂಪೇಷು - ರೋಮರಂಧ್ರಗಳಲ್ಲಿ, ಹಾರೀತಾಃ - ಹಾರೀತರೂ, ಮ್ಲೇಚ್ಛಾಃ - ಮ್ಲೇಚ್ಛರೂ, ಸಕಿರಾತಕಾಃ - ಕಿರಾತರಿಂದೊಡಗೂಡಿ, ಸಂಜಾತಾಃ - ಹುಟ್ಟಿದರು, ಹೇರಘುನಂದನ-ಎಲೈ ಶ್ರೀರಾಮನೆ, ವಿಶ್ವಾಮಿತ್ರಸ್ಯ - ವಿಶ್ವಾಮಿತ್ರನ, ಸಪದಾತಿಗಜಂ- ಕಾಲಾಳುಗಳಿಂದಲೂ ಗಜಗಳಿಂದಲೂ, ಸಾಶ್ವಂ-ಅಶ್ವಗಳಿಂದೊಡಗೂಡಿದ, ಸರ್ವಂ-ಸಮಸ್ತವಾದ ಸೈನ್ಯವು, ತೈಸ್ತೈಃ-ಆಯಾ ಕಾಂಭೋಜಾದಿಗಳಿಂದ, ತತ್ಕ್ಷಣಾತ್-ಆ ಕ್ಷಣದಲ್ಲಿಯೇ,

---

ಎಲೈ ರಘುನಂದನನೆ ! ಆ ಬಳಿಕ ವಸಿಷ್ಠ ಋಷಿಯು ವಿಶ್ವಾಮಿತ್ರನ ಅಸ್ತ್ರಪ್ರಯೋಗದಿಂದ ಕಂಗೆಟ್ಟಿರುವ ಯವನ ಕಾಂಭೋಜ ಪಲ್ಲವರನ್ನು ನೋಡಿ, ಯೋಗಬಲದಿಂದ ಸೇನೆಯನ್ನು ಸೃಜಿಸೆಂದು ನಂದಿನಿಗೆ ಪ್ರೇರಿಸಿದವನಾದನು. ಆಗಲಾ ಗೋವು ಹುಂಕರಿಸಿತು. ಈ ಹುಂಕಾರದಿಂದ ಸೂರ್ಯಸಮಾನರಾದ ಕಾಂಭೋಜರುತ್ಪನ್ನರಾದರು. ಆ ಗೋವಿನ ಕೆಚ್ಚಲಿನಿಂದ ಶಸ್ತ್ರಪಾಣಿಗಳಾದ ಪಲ್ಲವರು ಜನಿಸಿದರು. ಯೋನಿಪ್ರದೇಶದಿಂದ ಯವನರೂ, ಶಕೃತ್ಸ್ಥಳದಿಂದ ಶಕರೂ, ರೋಮಕೂಪಗಳಿಂದ ಮ್ಲೇಚ್ಛರು, ಹಾರೀತ, ಕಿರಾತ

ಸರಥಂ ರಘುನಂದನ ॥ ೫ ॥ ದೃಷ್ಟ್ವಾ ನಿಷೂದಿತಂ ಸೈನ್ಯಂ ವಸಿಷ್ಠೇನ ಮಹಾತ್ಮನಾ ॥ ವಿಶ್ವಾಮಿತ್ರ ಸುತಾನಾಂಚ ಶತಂ ನಾನಾವಿಧಾಯುಧಂ ॥ ಅಭ್ಯಧಾವತ್ಸು ಸಂಕೃದ್ಧಂ ವಸಿಷ್ಠಂ ಜಪತಾಂವರಂ ॥ ೬ ॥ ಹುಂಕಾರೇಣೈವ ತಾನ್ ಸರ್ವಾನ್ ದದಾಹ ಭಗವಾನೃಷಿಃ ॥೭॥ ತೇ ಸಾಶ್ವ ರಥಪಾದಾತಾ ವಸಿಷ್ಠೇನ ಮಹಾತ್ಮನಾ ॥ ಭಸ್ಮೀಕೃತಾ ಮುಹೂರ್ತೇನ ವಿಶಾಮಿತ್ರ ಸುತಾಸ್ತದಾ ॥೮॥ ದೃಷ್ಟ್ವಾ ವಿನಾಶಿತಾನ್ಪುತ್ರಾನ್ಬಲಂಚ ಸುಮಹಾಯಶಾಃ ॥ ಸವ್ರೀಡಶ್ಚಿಂತಯಾ ವಿಷ್ಟೋ ವಿಶ್ವಾಮಿತ್ರೋ ಭವತ್ತದಾ ॥ ೯ ॥ ಸಮುದ್ರ ಇವನಿರ್ವೇಗೋ

ನಿಷೂದಿತಂ - ಸಂಹಾರಮಾಡಲ್ಪಟ್ಟಿತು. ॥ ೫ ॥ ಮಹಾತ್ಮನಾ - ಮಹಾತ್ಮನಾದ, ವಸಿಷ್ಠೇನ - ವಸಿಷ್ಠನಿಂದ, ನಿಷೂದಿತಂ - ಹೊಡೆಯಲ್ಪಟ್ಟ, ಸೈನ್ಯಂ- ದಂಡನ್ನು, ದೃಷ್ಟ್ವಾ-ಕಂಡು, ವಿಶ್ವಾಮಿತ್ರ ಸುತಾನಾಂ - ವಿಶ್ವಾಮಿತ್ರನ ಮಕ್ಕಳ, ಶತಂಚ-ನೂರುಸಂಖ್ಯೆಯೂ, ನಾನಾವಿಧಾಯುಧಂ-ನಾನಾ ಬಗೆಗಳಾದ, ಆಯುಧಗಳನ್ನೊಳಗೊಂಡು, ಸಂಕೃದ್ಧಂ-ಕೋಪಗೊಂಡು, ಜಪತಾಂ-ತಪಸ್ವಿಗಳಲ್ಲಿ, ವರಂ - ಶ್ರೇಷ್ಠನಾದ, ವಸಿಷ್ಠಂ - ವಸಿಷ್ಠಋಷಿಯನ್ನು ಕುರಿತು, ಅಭ್ಯಧಾವತ್ - ಓಡಿಬಂದಿತು, ಭಗವಾನ್-ಪೂಜ್ಯನಾದ, ಋಷಿಃ - ವಸಿಷ್ಠಋಷಿಯು, ಹುಂಕಾರೇಣೈವ- ಹುಂಕಾರದಿಂದಲೆ, ತಾನ್ ಸರ್ವಾನ್ - ಅವರೆಲ್ಲರನ್ನು, ದದಾಹ - ಸುಟ್ಟುಬಿಟ್ಟನು. ॥ ೭ ॥ ಸಾಶ್ವರಥಪಾದಾತಾಃ - ಅಶ್ವಗಳಿಂದಲೂ, ರಥಗಳಿಂದಲೂ, ಕಾಲಾಳುಗಳಿಂದಲೂ ಕೂಡಿದ, ವಿಶ್ವಾಮಿತ್ರಸುತಾಃ - ವಿಶ್ವಾಮಿತ್ರನ ಮಕ್ಕಳು, ತದಾ - ಆಗ, ಮಹಾತ್ಮನಾ - ಮಹಾನುಭಾವನಾದ, ವಸಿಷ್ಠೇನ - ವಸಿಷ್ಠ ಋಷಿಯಿಂದ, ಮುಹೂರ್ತೇನ-ಮುಹೂರ್ತಮಾತ್ರದಲ್ಲಿ, ಭಸ್ಮೀಕೃತಾಃ-ಭಸ್ಮವಾಗಿ ಮಾಡಲ್ಪಟ್ಟರು.॥ ೮ ॥ ತದಾ-ಆ, ಸುಮಹಾಯಶಾಃ - ಮಹಾ ಕೀರ್ತಿವಂತನಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ವಿನಾಶಿತಾನ್ - ನಾಶಗೊಳಿಸಲ್ಪಟ್ಟ, ಪುತ್ರಾನ್ - ಮಕ್ಕಳನ್ನೂ, ಬಲಂಚ-ಸೈನ್ಯವನ್ನೂ, ದೃಷ್ಟ್ವಾ-ಕಂಡು, ಸವ್ರೀಡಃ-ಲಜ್ಜೆಯಿಂದೊಡಗೂಡಿ, ಚಿಂತಯಾ - ಆಲೋಚನೆಯಿಂದ, ಅವಿಷ್ಟಃ - ಆಕ್ರಾಂತ ಚಿತ್ತನು, ಅಭವತ್ - ಆದನು. ॥ ೯ ॥ ನಿರ್ವೇಗಃ - ವೇಗರಹಿತವಾದ, ಸಮುದ್ರಃಇವ - ಕಡಲಿನಂತೆ, ಭಗ್ನದಂಷ್ಟ್ರಃ - ಮುರಿಯಲ್ಪಟ್ಟ ಕೋರೆಹಲ್ಲುಗಳುಳ್ಳ, ಉರಗಇವ - ಸರ್ಪದಂತೆ, ಉಪರಕ್ತಃ - ಗ್ರಹಣವನ್ನು ಹೊಂದಿದ, ಆದಿತ್ಯಇವ-ಸೂರ್ಯನಂತೆ, ಸದ್ಯಃ-ಆಗಲೆ, ನಿಷ್ಪ್ರಭತಾಂ -

ಕರೂ ಹುಟ್ಟಿದರು. ಹೀಗೆ ನಂದಿನೀ ಧೇನುವಿನಿಂದುತ್ಪನ್ನವಾದ ಆ ಸೇನೆಯು ವಿಶ್ವಾಮಿತ್ರ ರಾಯನ ಚತುರಂಗ ಬಲವೆಲ್ಲವನ್ನು ನಾಶಗೊಳಿಸಿತು. ಮಹಾತ್ಮನಾದ ವಸಿಷ್ಠ ಮುನಿಯಿಂದ ನಾಶಗೊಳಿಸಲ್ಪಟ್ಟ ಸೈನ್ಯವನ್ನು ನೋಡಿ, ವಿಶ್ವಾಮಿತ್ರನ ನೂರು ಮಂದಿ ಕುವರರು ಕೋಪದಿಂದೊಡಗೂಡಿ ವಸಿಷ್ಠನನ್ನು ಕುರಿತು ಓಡಿದರು. ಆಗ ಪೂಜ್ಯನಾದ ವಸಿಷ್ಠ ಮುನಿಯು ಅವರೆಲ್ಲರನ್ನು ಹುಂಕಾರ ಮಾತ್ರದಿಂದಲೇ ದಹಿಸಿಬಿಟ್ಟನು. ಆಗಲಾ ವಿಶ್ವಾಮಿತ್ರ ಕುವರರು ರಥ್ಯಶ್ವ ಪದಾತಿಗಳೊಡನೆ ಭಸ್ಮೀಭೂತರಾಗಿ ಹೋದರು. ॥ ೮ ॥ ಅಯ್ಯಾ ರಾಮಚಂದ್ರನೆ ! ಮಹಾ ಕೀರ್ತಿವಂತನಾದ ವಿಶ್ವಾಮಿತ್ರನು ನಾಶ ಹೊಂದಿದ ತನ್ನ ನೂರುಜನ ಮಕ್ಕಳನ್ನೂ, ಸೇನೆಯನ್ನು ನೋಡಿ, ನಾಚಿಕೆಯಿಂದೊಡಗೂಡಿ ಚಿಂತಿ

ಭಗ್ನದಂಷ್ಟ್ರ ಇವೋರಗಃ || ಉಪರಕ್ತ ಇವಾದಿತ್ಯ ಸ್ಸದ್ಯೋ ನಿಷ್ಪ್ರಭತಾಂ ಗತಃ ||೧೦|| ಹತಪುತ್ರ ಬಲೋದೀನೋ ಲೂನಪಕ್ಷ ಇವದ್ವಿಜಃ || ಹತ ದರ್ಪೋ ಮಹೋತ್ಸಾಹೋ ನಿರ್ವೇದಂ ಸಮುಪದ್ಯತ ||೧೧|| ಸಪುತ್ರಮೇಕಂ ರಾಜ್ಯಾಯ ಪಾಲಯೇತಿ ನಿಯುಜ್ಯಚ|| ಪೃಥಿವೀಂ ಕ್ಷತ್ರಧರ್ಮೇಣ ವನಮೇವಾ ನ್ವಪದ್ಯತ || ಸಗತ್ವಾ ಹಿಮವತ್ಪಾರ್ಶ್ವಂ ಕಿನ್ನರೋರಗ ಸೇವಿತಂ || ಮಹಾ ದೇವ ಪ್ರಸಾದಾರ್ಥಂ ತಪಸ್ತೇಪೇ ಮಹಾತಪಾಃ ||೧೩|| ಕೇನಚಿತ್ತ್ವಥ ಕಾಲೇನ ದೇವೇಶೋ ವೃಷಭಧ್ವಜಃ || ದರ್ಶಯಾಮಾಸ ವರದೋ ವಿಶ್ವಾಮಿತ್ರಂ ಮಹಾ ಬಲಂ ||೧೪|| ಕಿಮರ್ಥಂ ತಪ್ಯಸೇರಾಜನ್ ಬ್ರೂಹಿ ಯತ್ತೇ ವಿವಕ್ಷಿತಂ||

---

ತೇಜೋಹೀನತೆಯನ್ನು, ಗತಃ-ಹೊಂದಿದನು ||೧೦|| ಹತಪುತ್ರಬಲಃ-ಮಡಿದುಹೋದಮಕ್ಕಳೂ ಸೈನ್ಯವೂ ಉಳ್ಳವನಾಗಿ, ಲೂನಪಕ್ಷಃ - ಛೇದಿಸಲ್ಪಟ್ಟ, ರೆಕ್ಕೆಗಳುಳ್ಳ, ದ್ವಿಜಇವ-ಪಕ್ಷಿಯಂತೆ, ದೀನಃ- ದೀನನಾದ ವಿಶ್ವಾಮಿತ್ರನು, ಹತದರ್ಪಃ - ನಾಶವೊಂದಿದ ಗರ್ವವುಳ್ಳವನಾಗಿ, ಹತೋತ್ಸಾಹಃ - ಸಂತೋಷರಹಿತನಾಗಿ, ನಿರ್ವೇದಂ- (ಮ) ಚತುರಂಗಬಲದಲ್ಲಿ ವೈರಾಗ್ಯವನ್ನು, (ಗೋ) ದುಃಖವನ್ನು ಸಮುಪದ್ಯತ-ಹೊಂದಿದನು ||೧೧|| ಸಃ ಆ ವಿಶ್ವಾಮಿತ್ರನು, ಏಕಂಪುತ್ರಂ - ಉಳಿದ ಒಬ್ಬ ಮಗ ನನ್ನು, ರಾಜ್ಯಾಯ - ರಾಜ್ಯಭಾರಕ್ಕೋಸುಗ, ಕ್ಷತ್ರಧರ್ಮೇಣ - ರಾಜಧರ್ಮದಿಂದ, ಪೃಥಿವೀಂ- ನೆಲವನ್ನು, ಪಾಲಯೇತಿ - ಸಂರಕ್ಷಣೆ ಮಾಡೆಂದು, ನಿಯುಜ್ಯಚ - ಆಜ್ಞಾ ಪಿಸಿ, ವನಮೇವ - ವನವನ್ನೆ, ಅನ್ವಪದ್ಯತ - ಹೊಂದಿದನು. ||೧೨|| ಮಹಾತಪಾಃ - ಮಹಾ ತಪಸ್ವಿಯಾದ, ಸಃ-ಆ ವಿಶ್ವಾಮಿತ್ರನು, ಕಿನ್ನರೋರಗಸೇವಿತಂ-ಕಿನ್ನರರಿಂದಲೂ, ಸರ್ಪಗ ಳಿಂದಲೂ ಸೇವಿಸಲ್ಪಡುವ, ಹಿಮವತ್ಪಾರ್ಶ್ವಂ- ಹಿಮವತ್ಪರ್ವತದ ಪ್ರದೇಶವನ್ನು, ಗತ್ವಾ-ಹೊಂದಿ, ಮಹಾದೇವಪ್ರಸಾದಾರ್ಥಂ-ಮಹಾ ದೇವನ ಅನುಗ್ರಹಕ್ಕೋಸುಗ, ತಪಃ - ತಪಸ್ಸನ್ನು, ತೇಪೇ- ಮಾಡಿದನು. ||೧೩|| ಅಥ-ಬಳಿಕ, ವೃಷಭಧ್ವಜಃ-ವೃಷಭವಾಹನನಾದ, ವರದಃ- ವರಪ್ರದಾತೃ ನಾದ, ದೇವೇಶಃ - ದೇವೋತ್ತಮನಾದ ಪರಮೇಶ್ವರನು, ಕೇನಚಿತ್ಕಾಲೇನ - ಕೆಲ ಕಾಲದ ಬಳಿಕ, ಮಹಾಬಲಂ-ಮಹಾಬಲಿಷ್ಠನಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು ಕುರಿತು, ಆತ್ಮಾನಂ- ತನ್ನನ್ನು, ದರ್ಶಯಾಮಾಸ-ಸಾಕ್ಷಾತ್ಕಾರ ಮಾಡಿಸಿದನು ||೧೪|| ಹೇರಾಜನ್-ಎಲೈ ಅರಸೆ, ಕಿಮರ್ಥಂ-

---

ಸುತ್ತ, ವೇಗವಿಲ್ಲದ ನಾಗರದಂತೆಯೂ, ಕೋರೆಹಲ್ಲು ಮುರಿದ ಸರ್ಪದಂತೆಯೂ, ಕತ್ತರಿ ಸಲ್ಪಟ್ಟ ರಕ್ಕೆಗಳುಳ್ಳ ಪಕ್ಷಿಯಂತೆಯೂ ದರ್ಪವಡಗಿದವನಾಗಿ, ರಾಹುಪೀಡಿತನಾದ ದಿನ ಮಣಿಯಂತೆ, ನಿಸ್ತೇಜಸ್ಕನೂ, ಉತ್ಸಾಹ ರಹಿತನೂ ಆಗಿ, ಬಹಳವಾದ ದುಃಖವನು ಹೊಂದಿದನು. ಆಗಲಾತನು ಉಳಿದಿದ್ದ ಒಬ್ಬ ಮಗನನ್ನು ರಾಜ್ಯಪರಿಪಾಲನೆಯನು ಮಾಡೆಂದು ನಿಯೋಗಿಸಿ, ಕಿನ್ನರರಿಂದಲೂ, ಪನ್ನಗಗಳಿಂದಲೂ, ಸೇವಿಸಲ್ಪಟ್ಟ ಹಿಮವತ್ಪ್ರಾಂತವನ್ನು ಹೊಂದಿ, ಪರಮೇಶ್ವರನ ಪ್ರಸಾದವನ್ನು ಪಡೆಯಲು, ತಪವಂ ಗೈದನು. ||೧೩|| ಆ ಬಳಿಕ ಕೆಲಕಾಲವಾದಮೇಲೆ ವರದಾತೃವಾದ ಶಂಕರನು ಮಹಾ ಬಲಶಾಲಿಯಾದ ವಿಶ್ವಾ ಮಿತ್ರನಿಗೆ ಪ್ರತ್ಯಕ್ಷನಾಗಿ, “ ಎಲೈ ರಾಜರ್ಷಿಯೆ ? ನನ್ನನ್ನು ಕುರಿತು, ಏತಕ್ಕಾಗಿ ತಪವಂ

ವರದೋಽಸ್ಮಿ ವರೋ ಯಸ್ತೇ ಕಾಂಕ್ಷಿತ ಸ್ಸೋಽಭಿಧೀಯತಾಂ || ೧೫ || ಏವ ಮುಕ್ತಸ್ತು ದೇವೇನ ವಿಶ್ವಾಮಿತ್ರೋ ಮಹಾತಪಾಃ || ಪ್ರಣಿಪತ್ಯ ಮಹಾ ದೇವಮಿದಂ ವಚನಮಬ್ರವೀತ್ ||೧೬|| ಯದಿತುಷ್ಟೋ ಮಹಾದೇವ ಧನು ರ್ವೇದೋ ಮಮಾನಘ || ಸಾಂಗೋಪಾಂಗೋಪನಿಷದ ಸ್ಸರಹಸ್ಯಃ ಪ್ರದೀ ಯತಾಂ ||೧೭|| ಯಾನಿದೇವೇಷು ಚಾಸ್ತ್ರಾಣಿ ದಾನವೇಷು ಮಹರ್ಷಿಷು || ಗಂಧರ್ವ ಯಕ್ಷರಕ್ಷಸ್ಸು ಪ್ರತಿಭಾಂತು ಮಮಾನಘ || ೧೮ || ತವಪ್ರಸಾ ದಾದ್ಭವತು ದೇವದೇವ ಮಮೇಪ್ಸಿತಂ || ಏವಮಸ್ತ್ವಿತಿ ದೇವೇಶೋ ವಾಕ್ಯ

---

ಏತಕ್ಕಾಗಿ, ತಪಸ್ಯೇ-ತಪಸ್ಸುಮಾಡುತ್ತಿರುವೆ, ತೇ-ನಿನಗೆ, ವಿವಕ್ಷಿತಂ-ಉದ್ದಿಶ್ಯವು, ಯತ್-ಯಾವದೋ, ತತ್-ಅದನ್ನು, ಬ್ರೂಹಿ-ಹೇಳು, ಯಃ-ಯಾವ, ವರಃ-ವರವು, ತೇ - ನಿನಗೆ, ಕಾಂಕ್ಷಿತಃ-ಇಷ್ಟವೋ, ಸಃ-ಆ ವರವು, ಅಭಿಧೀಯತಾಂ-ಹೇಳಲ್ಪಡಲಿ, ವರದಃ-ವರವನ್ನು ಕೊಡುವನು,ಅಸ್ಮಿ-ಆಗಿರುವೆನು. ||೧೫|| ಏವಂ ಹೀಗೆ, ದೇವೇನ-ಈಶ್ವರನಿಂದ, ಉಕ್ತಃ-ಹೇಳಲ್ಪಟ್ಟ, ಮಹಾತಪಾಃ-ಮಹಾ ತಪಸ್ವಿಯಾದ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನು, ಮಹಾದೇವಂ - ಪರಮೇಶ್ವರನನ್ನು ಕುರಿತು, ಪ್ರಣಿಪತ್ಯ - ನಮಸ್ಕರಿಸಿ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ||೧೬|| ಹೇ ಮಹಾದೇವ - ಎಲೈ ಪರಮೇಶ್ವರನೆ, ತುಷ್ಟೋಯದಿ - ನನ್ನ ತಪಸ್ಸಿಗೆ ಸಂತುಷ್ಟನಾಗಿರುವೆಯಾದರೆ ಹೇಅನಘ - ಎಲೈ ನಿರ್ದೋಷನ, ಮಮ - ನನಗೆ, ಸಾಂಗೋಪಾಂಗೋನಿಷದಃ-ಅಂಗಗಳಿಂದಲೂ ಉಪಾಂಗಗಳಿಂದಲೂ ಧನುರ್ವೇದದ ಅಗ್ರಭಾಗದಿಂದಲೂ ಕೂಡಿದ, ಸರಹಸ್ಯಃ - ಗುರೂಪದೇಶದಿಂದ ಹೊಂದುವ ಅರ್ಥದಿಂದೊಡಗೂಡಿದ, ಧನುರ್ವೇದಃ - ಧನುರ್ವೇದವು, ಪ್ರದೀಯತಾಂ- ಕೊಡಲ್ಪಡಲಿ. ||೧೭|| ದೇವೇಷು-ದೇವತೆಗಳಲ್ಲಿ, ಅಸ್ತ್ರಾಣಿ - ಅಸ್ತ್ರಗಳು, ಯಾನಿ-ಯಾವವೊ, ದಾನವೇಷು - ರಾಕ್ಷಸರಲ್ಲಿಯೂ, ಮಹರ್ಷಿಷು - ಮಹಾ ಋಷಿಗಳಲ್ಲಿಯೂ, ಗಂಧರ್ವಯಕ್ಷರಕ್ಷಸ್ಸು-ಗಂಧರ್ವ, ಯಕ್ಷ, ರಾಕ್ಷಸ ಜಾತಿ ಭೇದಗಳಲ್ಲಿಯೂ, ಅಸ್ತ್ರಾಣಿ - ಅಸ್ತ್ರಗಳು, ಯಾನಿ-ಯಾವವೊ ತಾನಿ-ಅವು, ಮಮ-ನನಗೆ, ಪ್ರತಿಭಾಂತು - ಪ್ರತಿಫಲಿಸಲಿ || ೧೮ || ಎಲೈ ದೇವದೇವೋತ್ತಮನೆ, ತವ ನಿನ್ನ, ಪ್ರಸಾದಾತ್-ಅನುಗ್ರಹದಿಂದ, ಮಮ-ನನ್ನ, ಈಪ್ಸಿತಂ-ಇಷ್ಟವು, ಭವತು-ಪೂರ್ಣಗೊಳ್ಳಲಿ, ಏವಮಸ್ತ್ವಿತಿ - ಹಾಗೆಯೇ ಆಗಲಿ ಎಂದು, ದೇವೇಶಃ - ದೇವತೆಗಳಿಗೊಡೆಯನಾದ

---

ಗೈಯುತ್ತಿರುವೆ ! ನಿನ್ನ ಆಶಯವೇನು ; ಹೇಳು ? ನಿನಗಿಷ್ಟವಾದ ವರವನ್ನು ಬೇಡು ; ಕೊಡುವೆನು'' ಎಂದನು. ಮಹಾದೇವನು ಹೀಗೆನ್ನಲು, ಮಹಾತಪಸ್ವಿಯಾದ ವಿಶ್ವಾಮಿತ್ರನು ಆತನನ್ನು ನಮಸ್ಕರಿಸಿ ಹೀಗೆಂದನು. || ೧೬ || “ ಎಲೈ ಪರಮೇಶ್ವರನೆ ! ನನ ತಪಸ್ಸಿನಿಂದ ಸಂತೋಷವನ್ನು ಹೊಂದಿರುವೆಯಾದರೆ, ಅಂಗೋಪಾಂಗಸಹಿತವಾದುದೂ, ಗುರೂಪದೇಶದಿಂದುಂಟಾಗುವ ಫಲವುಳ್ಳುದೂ ಆದ ಧನುರ್ವೇದವನ್ನು ದಯಪಾಲಿಸುವವನಾಗು. ಇಷ್ಟೆಯಲ್ಲದೆ, ದೇವದಾನವ, ಗಂಧರ್ವ, ಯಕ್ಷರಲ್ಲಿ ಯಾವಾವ ಅಸ್ತ್ರಗಳುಂಟೋ, ಅವೆಲ್ಲವೂ ನನ್ನ ಸ್ಮೃತಿಪಥಕ್ಕೆ ಬರಲಿ. ಇದೇ ನನ್ನ ಕೋರಿಕೆಯು'' ಇಂತು ವಿಶ್ವಾಮಿತ್ರನು ವರವನ್ನು ಬೇಡಲು, ಆ ಪರಶಿವನು ಹಾಗೆಯೇ ಆಗಲೆಂದು ಹೇಳಿ ಹೊರಟುಹೋದನು.

ಮುಕ್ತ್ವಾ ಗತಸ್ತದಾ ||೧೯|| ಪ್ರಾಪ್ಯಚಾಸ್ತ್ರಾಣಿ ರಾಜರ್ಷಿ ರ್ವಿಶ್ವಾಮಿತ್ರೋ ಮಹಾಬಲಃ || ದರ್ಪೇಣ ಮಹತಾ ಯುಕ್ತೋ ದರ್ಪಪೂರ್ಣೋ ಭವತ್ತದಾ|| ೨೦ || ವಿವರ್ಧಮಾನೋ ವೀರ್ಯೇಣ ಸಮುದ್ರ ಇವಪರ್ವಣಿ || ಹತಮೇವ ತದಾಮೇನೇ ವಸಿಷ್ಠಮೃಷಿ ಸತ್ತಮಂ || ೨೧ || ತತೋ ಗತ್ವಾಶ್ರಮಪದಂ ಮುಮೋಚಾಸ್ತ್ರಾಣಿ ಪಾರ್ಥಿವಃ || ಯೈಸ್ತತ್ತಪೋವನಂ ಸರ್ವಂ ನಿರ್ದಗ್ಧಂ ಚಾಸ್ತ್ರ ತೇಜಸಾ || ೨೨ || ಉದೀರ್ಯಮಾಣಮಸ್ತ್ರಂ ತದ್ವಿಶ್ವಾಮಿತ್ರಸ್ಯ

ಶಂಕರನು, ವಾಕ್ಯಂ - ಮಾತನ್ನು, ಉಕ್ತ್ವಾ - ಹೇಳಿ, ತದಾ- ಆಗ, ಗತಃ ಹೊರಟುಹೋದನು.||೧೯ ಮಹಾಬಲಃ - ಮಹಾ ಬಲಿಷ್ಠನಾದ, ರಾಜರ್ಷಿಃ - ರಾಜರ್ಷಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು ಅಸ್ತ್ರಾಣಿಚ - ಅಸ್ತ್ರಗಳನ್ನೂ, ಪ್ರಾಪ್ಯ - ಹೊಂದಿ, ಮಹತಾ - ಬಹಳವಾದ, ದರ್ಪೇಣ-ಗರ್ವದಿಂದ, ಯುಕ್ತಃ - ಕೂಡಿ, ತದಾ - ಆಗ, ದರ್ಪಪೂರ್ಣಃ (೧) - ದರ್ಪದಿಂದ ಪೂರ್ಣನಾದವನು, ಅಭವತ್ - ಆದನು, || ೨೦ || ಪರ್ವಣಿ - ಪೂರ್ಣಮಾಸ್ಯದಲ್ಲಿ, ಸಮುದ್ರಃಇವ - ಕಡಲಿನಂತೆ, ವೀರ್ಯೇಣ - ಪರಾಕ್ರಮದಿಂದ, ವಿವರ್ಧಮಾನಃ - ವೃದ್ಧಿಹೊಂದುತ್ತ, ತದಾ- ಆಗ, ಋಷಿಸತ್ತಮಂ-ಋಷಿಶ್ರೇಷ್ಠನಾದ, ವಸಿಷ್ಠಂ - ವಸಿಷ್ಠನನ್ನು, ಹತಮೇವ-ಹತನಾದವನನ್ನಾಗಿಯೆ, ಮೇನೇ-ಎಣಿಸಿದನು. || ೨೧ || ತತಃ-ಬಳಿಕ, ಪಾರ್ಥಿವಃ-ಅರಸಾದ ವಿಶ್ವಾಮಿತ್ರನು, ಆಶ್ರಮಪದಂ-ವಸಿಷ್ಠಾಶ್ರಮಪ್ರದೇಶವನ್ನು ಕುರಿತು, ಗತ್ವಾ-ಹೋಗಿ,ಯೈಃ-ಯಾವ ಅಸ್ತ್ರಗಳಿಂದ, ಅಸ್ತ್ರತೇಜಸಾಚ-[ಮ] ಅಸ್ತ್ರಗಳ ತೇಜಸ್ಸಿನಿಂದಲೂ, (ಗೋ) ಸ್ವಕೀಯತೇಜಸ್ಸಿನಿಂದಲೂ, ಸರ್ವಂ-ಸಮಸ್ತವಾದ, ತತ್ತಪೋವನಂ-ಆ ವಸಿಷ್ಠಋಷಿಯ ತಪೋವನವು, ನಿರ್ದಗ್ಧಂ - ದಹಿಸಲ್ಪಟ್ಟಿತೋ, ತಾನ್ಯಸ್ತ್ರಾಣಿ-ಅಂತಹಾ ಅಸ್ತ್ರಗಳನ್ನು, ಮುಮೋಚ-ಬಿಟ್ಟನು. ||೨೨|| ಧೀಮತಃ-ಬುದ್ಧಿವಂತನಾದ, ವಿಶ್ವಾಮಿತ್ರಸ್ಯ-ವಿಶ್ವಾಮಿತ್ರನ, ಉದೀರ್ಯಮಾಣಂ - ಪ್ರಯೋಗಿಸಲ್ಪಟ್ಟ, ತದಸ್ತ್ರಂ - ಆ-

||೧೯|| ಆ ಬಳಿಕ ರಾಜರ್ಷಿಯೂ, ಮಹಾ ಬಲಿಷ್ಠನೂ ಆದ ವಿಶ್ವಾಮಿತ್ರನು ಪರಮೇಶ್ವರನಿಂದ ಕೊಡಲ್ಪಟ್ಟ ಅಸ್ತ್ರಶಸ್ತ್ರಗಳೆಲ್ಲವನ್ನೂ ತೆಗೆದುಕೊಂಡು,ಮಹಾ ಗರ್ವದಿಂದೊಡಗೂಡಿ ಸಂಪೂರ್ಣವಾದ ದರ್ಪವನ್ನು ಪಡೆದವನಾದನು ಪರ್ವಕಾಲದಲ್ಲಿ ಸಮುದ್ರವು ವೃದ್ಧಿಯನ್ನೈದುವಂತೆ, ವೀರ್ಯದಿಂದ ವೃದ್ಧಿಹೊಂದುತ್ತಿರುವ ಆ ವಿಶ್ವಾಮಿತ್ರನು, ಈಶ್ವರನಿಂದ ಅಸ್ತ್ರಶಸ್ತ್ರಗಳನ್ನು ಪಡೆದ ತನ್ನಿಂದ ವಸಿಷ್ಠ ಋಷಿಯು ಜಿತನಾದನೆಂದೇ ತಿಳಿದನು.||೨೧|| ಆ ಬಳಿಕಲಾ ಕೌಶಿಕನು ವಸಿಷ್ಠಾಶ್ರಮಕ್ಕೆ ಹೋಗಿ, ಅಸ್ತ್ರಗಳಿಂದಲೂ, ತನ್ನ ತೇಜಸ್ಸಿನಿಂದಲೂ, ಆ ಆಶ್ರಮವು ಸುಡುವಂತೆ ಮಾಡುತ್ತಿದ್ದನು. ಈ ರೀತಿ ಬಿಡಲ್ಪಡುತ್ತಿರುವ ವಿಶ್ವಾಮಿತ್ರನ ಅಸ್ತ್ರಗಳನ್ನು ನೋಡಿ, ವಸಿಷ್ಠಾಶ್ರಮವಾಸಿಗಳಾದ ಮುನಿಗಳೂ, ವಸಿಷ್ಠ

ಟಿ || (೧) " ದರ್ಪಪೂರ್ಣೋ ಭವತ್ತದಾ " ಎಂದು ಹೇಳಿರುವುದರ ಆಶಯವು ಹೀಗೆ ಕ್ಷತ್ರಿಯನು ವಸ್ತುತಃ ದರ್ಪಯುಕ್ತನಾಗಿಯೇ ಇರುತ್ತಾನೆ. ಇಂತಹ ದರ್ಪವಂತನಾದ ವಿಶ್ವಾಮಿತ್ರನು ಬ್ರಹ್ಮಬಲೋಪೇತನಾದ ವಸಿಷ್ಠನೊಡನೆ ಸೆಣಸಿ ಕುಗ್ಗಿದ ಬಲವುಳ್ಳವನಾದನು ಕ್ಷೀಣವಾದ ಕ್ಷಾತ್ರಬಲದ ಪೂರ್ಣತೆಯನ್ನು ಈಶ್ವರನ ವರಪ್ರಸಾದದಿಂದ ಪಡೆದನು. ಇಲ್ಲಿ ಬಲಪೂರ್ಣತೆಯೆಂದರೆ ಶಸ್ತ್ರಾಸ್ತ್ರಗಳೆಲ್ಲವನ್ನೂ ಒಳಗೊಂಡಿರುವ ಬಲವೆಂದರ್ಥ ಈ ಬಲವು ಬ್ರಹ್ಮಬಲವನ್ನು ಮೀರಿಸುವುದೆಂಬುದನ್ನು ವಿಶ್ವಾಮಿತ್ರನು ತಿಳಿದು ಸಂಪೂರ್ಣವಾದ ಬಲವನ್ನು ಹೊಂದಿದನೆಂದು ಒಟ್ಟು ತಾತ್ಪರ್ಯವು.

ಧೀಮತಃ || ದೃಷ್ಟ್ವಾವಿಪ್ರ ದ್ರುತಾಸ್ಸರ್ವೇ ಮುನಯಶ್ಶತಶೋ ದಿಶಃ ||೨೩||
ವಸಿಷ್ಠಸ್ಯಚ ಯೇಶಿಷ್ಯಾ ಸ್ತಥೈವ ಮೃಗಪಕ್ಷಿಣಃ || ವಿದ್ರವಂತಿ ಭಯಾ
ದ್ಭೀತಾ ನಾನಾ ದಿಗ್ಭ್ಯಸ್ಸಹಸ್ರಶಃ || ೨೪ || ವಸಿಷ್ಠಸ್ಯಾಶ್ರಮಪದಂ ಶೂನ್ಯ
ಮಾಸೀ ನ್ಮಹಾತ್ಮನಃ || ಮುಹೂರ್ತಮಿವ ನಿಶ್ಶಬ್ದಮಾಸೀದಿರಿಣ ಸನ್ನಿಭಂ ||
೨೫ || ವದತೋವೈ ವಸಿಷ್ಠಸ್ಯ ಮಾಭೈರಿತಿ ಮುಹುರ್ಮುಹುಃ || ನಾಶಯಾ
ಮ್ಯದ್ಯ ಗಾಧೇಯಂ ನೀಹಾರಮಿವ ಭಾಸ್ಕರಃ || ೨೬ || ಏವಮುಕ್ತ್ವಾ
ಮಹಾತೇಜಾ ವಸಿಷ್ಠೋ ಜಪತಾಂ ವರಃ || ವಿಶ್ವಾಮಿತ್ರಂ ತದಾವಾಕ್ಯಂ
ಸರೋಷ ಮಿದಮಬ್ರವೀತ್ || ೨೭ || ಆಶ್ರಮಂ ಚಿರಸಂವೃದ್ಧಂ ಯದ್ವಿ

ಅಸ್ತ್ರನ್ನು, ದೃಷ್ಟ್ವಾ-ಕಂಡು, ಶತಶಃ-ನೂರುಸಂಖ್ಯೆಯುಳ್ಳ, ಸರ್ವೇ-ಸಮಸ್ತರಾದ, ಮುನಯಃ ಋಷಿಗಳು, ದಿಶಃ-ದಿಕ್ಕುಗಳನ್ನು ಕುರಿತು ವಿದ್ರುತಾಃ-ಓಡಿಹೋದರು. ||೨೩|| ವಸಿಷ್ಠಸ್ಯ-ವಸಿಷ್ಠಋಷಿಯ, ಯೇ ಯಾರು, ಶಿಷ್ಯಾಃ-ಶಿಷ್ಯರುಂಟೋ, ತೇ-ಅವರು, ತಥೈವ-ಹಾಗೆಯೆ, ಮೃಗಪಕ್ಷಿಣಃ-ಮೃಗಗಳೂ ಪಕ್ಷಿಗಳೂ, ಭಯಾತ್-ವಿಶ್ವಾಮಿತ್ರನಭಯದಿಂದ, ಭೀತಾಃ-ಭಯಗೊಂಡು,ನಾನಾ ದಿಗ್ಭ್ಯಃ-ನಾನಾದಿಕ್ಕುಗಳಿಗೆ, ಸಹಸ್ರಶಃ-ಸಹಸ್ರಮುಖವಾಗಿ, ವಿದ್ರವಂತಿ ಓಡಿಹೋದರು. ||೨೪|| ಮಹಾತ್ಮನಃ-ಮಹಾನುಭಾವನಾದ,ವಸಿಷ್ಠಸ್ಯ-ವಸಿಷ್ಠಋಷಿಯ,ಆಶ್ರಮಪದಂ-ಆಶ್ರಮಸ್ಥಾನವು,ಶೂನ್ಯಂ- ವೃಕ್ಷಗುಲ್ಮಾದಿಗಳಿಂದ ಶೂನ್ಯವಾದದು,ಆಸೀತ್-ಆಯಿತು,ಮುಹೂರ್ತಂ-ಕೆಲಕಾಲ,ನಿಶ್ಶಬ್ದಂ-ಧ್ವನಿಶೂನ್ಯವಾಗಿ, ಇರಿಣಸನ್ನಿಭಂ-ಇರಿಣ-ಊಷರಕ್ಷೇತ್ರಕ್ಕೆ, ಸನ್ನಿಭಂ-ಸಮಾನವಾದುದು, ಆಸೀತ್-ಆಯಿತು. ||೨೫|| ಮುಹುರ್ಮುಹುಃ-ಅಡಿಗಡಿಗೂ, ಅದ್ಯ-ಈಗ, ಗಾಧೇಯಂ - ಗಾಧಿಪುತ್ರನಾದ ವಿಶ್ವಾಮಿತ್ರನನ್ನು, ನೀಹಾರಂ-ಮಂಜನ್ನು ಭಾಸ್ಕರ ಇವ-ಸೂರ್ಯನಂತೆ, ನಾಶಯಾಮೀತಿ-ನಾಶಮಾಡುತ್ತೇನೆಂದು, ವಸಿಷ್ಠಸ್ಯ-ವಸಿಷ್ಠಋಷಿಯು,ಮಾಭೈರಿತಿ-ಗೊಳ್ಳಬೇಡಿರೆಂದು ವದತೋವೈ-ಹೇಳುತ್ತಿದ್ದರೂ ಸರ್ವೇ-ಸಮಸ್ತರೂ,ವಿದ್ರವಂತಿ ಓಡಿಹೋದರು.||೨೬||ಮಹಾತೇಜಾಃ-ಬ್ರಹ್ಮತೇಜಸ್ವಿಯಾದ,ಜಪತಾಂ ಜಪಿಸುವವರಲ್ಲಿ, ವರಃ-ಶ್ರೇಷ್ಠನಾದ, ವಸಿಷ್ಠಃ-ವಸಿಷ್ಠಋಷಿಯು, ಏವಂ-ಹೀಗೆ, ಇದಂವಾಕ್ಯಂ- ಈ ಮಾತನ್ನು, ಅಬ್ರವೀತ್-ನುಡಿದನು. ||೨೭|| ಹೇಮೂಢ-ಎಲೆವೋ ಮೂಢನೇ, ಯತ್ - ಯಾವ

ಮುನಿಯ ಶಿಷ್ಯರೂ ಭಯಗೊಂಡು, ದಶದಿಶೆಗಳಿಗೂ ಓಡಿಹೋದರು. ಆಗಲಾ ವಸಿಷ್ಠ ಋಷಿಯು "ಎಲ್ಲೈ ಹೆದರಬೇಡಿರಿ; ಸೂರ್ಯನು ಹಿಮವನ್ನು ನಾಶಗೊಳಿಸುವಂತೆ ಈಗಲೀ ಗಾಧಿಕುವರನಾದ ವಿಶ್ವಾಮಿತ್ರನನ್ನು ನಾಶಮಾಡುವೆನು" ಎಂದು ಹೇಳಿದನು. ಇಂತು ಹೇಳಿದರೂ ಅವರೆಲ್ಲರೂ ಅಲ್ಲಿನಿಲ್ಲದೆ ಪಲಾಯನ ಸೂಕ್ತಿಯನ್ನು ಪರಿಸಲು, ಆ ವಸಿಷ್ಠ ಮುನಿಯ ಆಶ್ರಮವು ಒಂದು ಮುಹೂರ್ತಕಾಲ,ವೃಕ್ಷಗುಲ್ಮಾದಿ ಶೂನ್ಯವೂ,ನಿಶ್ಶಬ್ದವೂ, ಊಷರಕ್ಷೇತ್ರಕ್ಕೆ ಸಮವಾದುದೂ ಆಯಿತು. || ೨೬ || ಆಗಲಾ ವಸಿಷ್ಠನು ಬಹಳವಾದ ಕೋಪದಿಂದ ಆ ವಿಶ್ವಾಮಿತ್ರನನ್ನು ಕುರಿತು, "ಎಲವೊ ಮೂಢನೆ ! ಬಹುಕಾಲದಿಂದಲೂ ನನ್ನಿಂದ ಪ್ರವರ್ಧಿತವಾದ ಈ ಆಶ್ರಮವನ್ನು ನಾಶಗೊಳಿಸಿರುವೆ. ಆದುದರಿಂದ ದುರ್ವ್ಯಾಪಾರಿಯಾದ

ನಾಶಿತವಾನಸಿ || ದುರಾಚಾರೋಸಿ ತನ್ಮೂಢ ತಸ್ಮಾತ್ತ್ವಂ ನಭವಿಷ್ಯಸಿ || ೨೮ ||
ಇತ್ಯುಕ್ತ್ವಾ ಪರಮಕ್ರುದ್ಧೋ ದಂಡಮುದ್ಯಮ್ಯ ಸತ್ವರಃ || ವಿಧೂಮಮಿವ
ಕಾಲಾಗ್ನಿಂ ಯಮದಂಡಮಿವಾಪರಂ || ೨೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಪಂಚಾಶಸ್ಸರ್ಗಃ.

---

ಕಾರಣ,ಚಿರಸಂವೃದ್ಧಂ-ಬಹುಕಾಲದಿಂದ ಪ್ರವೃದ್ಧಿಯನ್ನು ಪಡದಿರುವ, ಆಶ್ರಮಂ-ಆಶ್ರಮವನ್ನು, ವಿನಾಶಿತವಾನ್-ನಾಶಗೊಳಿಸಿದವನು,ಅಸಿ-ಆದೆಯೋ, ತತ್-ಆ ಕಾರಣ, ದುರಾಚಾರಃ-ದುರ್ವ್ಯಾಪಾರನಡಿಸಿದವನು; ಅಸಿ-ಆದೆ, ತಸ್ಮಾತ್-ಆದುದರಿಂದ,ತ್ವಂ-ನೀನು,ನಭವಿಷ್ಯಸಿ-ಇರಲಾರೆ, ಇತ್ಯುಕ್ತ್ವಾ-ಹೀಗೆ ಹೇಳಿ, ಪರಮಕ್ರುದ್ಧಃ - ಬಹಳ ಕೋಪಿಷ್ಠನಾದ ವಸಿಷ್ಠಋಷಿಯು, ಸತ್ವರಃ - ತ್ವರೆಯಿಂದ ವಿಧೂಮಂ - ಧೂಮರಹಿತವಾದ, ಕಾಲಾಗ್ನಿಮಿವಸ್ಥಿತಂ - ಪ್ರಳಯಾಗ್ನಿಯಂತಿರುವ, ಅಪರಂ - ಮತ್ತೊಂದಾದ, ಯಮದಂಡಮಿವಸ್ಥಿತಂ-ಯಮದಂಡದಂತಿರುವ, ದಂಡಂ-ದಂಡವನ್ನು, ಉದ್ಯಮ್ಯ-ಎತ್ತಿ, ತಸ್ಥೌ-ನಿಂತನು. ||೨೯||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಪಂಚಾಶಸ್ಸರ್ಗಃ.

---

ನೀನಿನ್ನು ಬದುಕಲಾರೆ” ಎಂದು ಹೇಳಿ, ಧೂಮಶೂನ್ಯವಾದ ಪ್ರಳಯಾಗ್ನಿಯಂತೆಯೂ, ಯಮದಂಡಕ್ಕೆ ಸಮಾನವಾಗಿಯೂ ಇರುವ ಬ್ರಹ್ಮದಂಡವನ್ನೆತ್ತಿ ಹಿಡಿದು, ಮಹಾ ಕೋಪದಿಂದ ನಿಂತವನಾದನು. ||೨೯||

ಇಂತಿದು ವಿಶ್ವಾಮಿತ್ರ ಪರಾಕ್ರಮ ವರ್ಣನ ವೃತ್ತಾಂತ ಕಥನವೆಂಬ
ಐವತ್ತೈದನೆಯ ಸರ್ಗವು ಸಮಾಪ್ತವಾದುದು.

**ಏವಮುಕ್ತೋ ವಸಿಷ್ಠೇನ ವಿಶ್ವಾಮಿತ್ರೋ ಮಹಾಬಲಃ || ಆಗ್ನೇಯ ಮಸ್ತ್ರಮುತ್‌ಕ್ಷಿಪ್ಯ ತಿಷ್ಠತಿಷ್ಠೇತಿ ಚಾಬ್ರವೀತ್ ||೧|| ಬ್ರಹ್ಮದಂಡಂ ಸಮು ತ್‌ಕ್ಷಿಪ್ಯ ಕಾಲದಂಡಮಿವಾಪರಂ || ವಸಿಷ್ಠೋ ಭಗವಾನ್ ಕ್ರೋಧಾದಿದಂ ವಚನಮಬ್ರವೀತ್ || ೨ || ಕ್ಷತ್ರಬಂಧೋ ಸ್ಥಿತೋಸ್ಮ್ಯೇಷ ಯದ್ಬಲಂ ತದ್ವಿದರ್ಶಯ || ನಾಶಯಾಮ್ಯದ್ಯ ತೇದರ್ಪಂ ಶಸ್ತ್ರಸ್ಯ ತವಗಾಧಿಜ ||೩|| ಕ್ವಚತೇ ಕ್ಷತ್ರಿಯಬಲಂ ಕ್ವಚಬ್ರಹ್ಮಬಲಂ ಮಹತ್ || ಪಶ್ಯಬ್ರಹ್ಮಬಲಂ ದಿವ್ಯಂ ಮಮ ಕ್ಷತ್ರಿಯಪಾಂಸನ || ೪ || ತಸ್ಯಾಸ್ತ್ರಂ ಗಾಧಿಪುತ್ರಸ್ಯ ಘೋರಮಾ**

---

ಮಹಾಬಲಃ-ಮಹಾಬಲಿಷ್ಠನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ವಸಿಷ್ಠೇನ-ವಸಿಷ್ಠಋಷಿಯಿಂದ, ಏವಮುಕ್ತಃ-ಹೀಗೆ ಹೇಳಲ್ಪಟ್ಟು, ಆಗ್ನೇಯಮಸ್ತ್ರಂ-ಆಗ್ನೇಯಾಸ್ತ್ರವನ್ನು, ಉಧೃತ ಎತ್ತಿ, ತಿಷ್ಠತಿಷ್ಠೇತಿಚ-ನಿಲ್ಲುನಿಲ್ಲೆಂದು, ಅಬ್ರವೀತ್-ನುಡಿದನು. ||೧|| ಭಗವಾನ್-(ಗೋ, ಷಡ್ಗುಣೈಶ್ವರ್ಯಸಂಪನ್ನನಾದ, ವಸಿಷ್ಠಃ-ವಸಿಷ್ಠಋಷಿಯು, ಅಪರಂ-ಮತ್ತೊಂದಾದ, ಕಾಲದಂಡಮಿವ-ಯಮದಂಡದಂತಿರುವ, ಬ್ರಹ್ಮದಂಡಂ-ಬ್ರಹ್ಮದಂಡವನ್ನು, ಸಮುಕ್ಷಿಪ್ಯ-ಮೇಲಕ್ಕೆ ಎತ್ತಿ, ಕ್ರೋಧಾತ್-ಕೋಪದಿಂದ, ಇದಂವಚನಂ-ಈ ಮಾತನ್ನು, ಅಬ್ರವೀತ್-ಹೇಳಿದನು. ||೨|| ಹೇಕ್ಷತ್ರಬಂಧೋ ಎಲೈ ಕ್ಷತ್ರಿಯಾಧಮನೇ, ಏಷಃ-ಈ ನಾನು, ಸ್ಥಿತೋಸ್ಮಿ-ನಿಂತಿರುವೆನು, ಹೇಗಾಧಿಜ-ಎಲೈ ಗಾಧಿಯ ಮಗನೇ, ಬಲಂ - ಬಲವು, ಯತ್ - ಯಾವದೋ, ತತ್ - ಆ ಬಲವನ್ನು, ನಿದರ್ಶಯ-ತೋರಿಸು, ಅದ್ಯ - ಈಗ, ತೇ-ನಿನ್ನ, ದರ್ಪಂ - ದರ್ಪವನ್ನು, ಶಸ್ತ್ರಸ್ಯಚ - ಶಸ್ತ್ರದ, ದರ್ಪಂ-ಗರ್ವವನ್ನು, ನಾಶಯಾಮಿ- ನಾಶಗೊಳಿಸುವೆನು, || ೩ || ಹೇಕ್ಷತ್ರಿಯಪಾಂಸನ-ಎಲೈ ಕ್ಷತ್ರಿಯನೀಚನೇ, ತೇ-ನಿನ್ನ, ಕ್ಷತ್ರಿಯಬಲಂ- ರಾಜಬಲವು, ಕ್ವಚ - ಎಷ್ಟರದು, ಮಹತ್ - ದೊಡ್ಡದಾದ, ಬ್ರಹ್ಮಬಲಂಚ – ಬ್ರಾಹ್ಮಣ ಬಲವೂ, ಕ್ವಚ – ಎಲ್ಲಿ, ದಿವ್ಯಂ - (ಮ) ಮನೋಹರವಾದ, (ತಿ) ದೇವತಾಪ್ರಸಾದ ಜನ್ಯವಾದ, ಮಮ ನನ್ನ, ಬ್ರಹ್ಮಬಲಂ-ಬ್ರಹ್ಮತೇಜೋಬಲವನ್ನು, ಪಶ್ಯ-ನೋಡು. ||೪|| ತಸ್ಯಗಾಧಿಪುತ್ರಸ್ಯ-ಆ ವಿಶ್ವಾಮಿತ್ರನ, ಉದ್ಯತಂ-ಎತ್ತಲ್ಪಟ್ಟ, ಘೋರಂ - ಭಯಂಕರ

---

ವಸಿಷ್ಠ ಮಹಾಮುನಿಯು ಈ ರೀತಿ ನುಡಿಯಲು,ಮಹಾಬಲಿಶಾಲಿಯಾದ ವಿಶ್ವಾಮಿತ್ರನು ಆಗ್ನೇಯಾಸ್ತ್ರವನ್ನು ತೆಗೆದುಕೊಂಡು ನಿಲ್ಲುನಿಲ್ಲೆಂದು ಹೇಳಲು, ಪೂಜ್ಯನಾದ ವಸಿಷ್ಠನು ಸಹ ಎರಡನೆಯ ಕಾಲದಂಡವೊ ಎಂಬಂತಿರುವ ಬ್ರಹ್ಮದಂಡವನ್ನು ತೆಗೆದುಕೊಂಡು ಮಹಾ ಕೋಪವುಳ್ಳವನಾಗಿ "ಎಲೆವೊ ಕ್ಷತ್ರಿಯಾಧಮನಾದ ವಿಶ್ವಾಮಿತ್ರನೇ ! ಇದೋ ನಿಂತಿರುವೆನು. ಬ್ರಹ್ಮದಂಡದ ಮುಂದೆ ಅದಾವ ಮಹತ್ತರವಾದ ಬಲವನ್ನು ತೋರುವೆಯೋ ತೋರು. ಆ ನಿನ್ನ ದರ್ಪವನ್ನೂ, ಶಸ್ತ್ರಾಸ್ತ್ರಗಳ ಬಲವನ್ನೂ ಇದೀಗ ನಾಶಗೊಳಿಸುವೆನು. ಆ ನಿನ್ನ ಕ್ಷತ್ರಿಯ ಬಲವೆಲ್ಲಿ? ಮಹತ್ತರವಾದ ಬ್ರಹ್ಮಬಲವೆಲ್ಲಿ ! ಕ್ಷತ್ರಿಯಾಧಮ? ದೇವತಾ ಸಂಬಂಧವಾದ ಈ ನನ್ನ ಬ್ರಹ್ಮಬಲವನ್ನಾದರೂ ನೋಡು." ಎಂದನು.||೩|| ರಘುನಂದನ! ಆಗ ವಿಶ್ವಾಮಿತ್ರನು ಪ್ರಯೋಗಿಸಿದ ಆಗ್ನೇಯಾಸ್ತ್ರವು, ಬೆಂಕಿಯು ಬೇಗೆಯು

ಗ್ನೇಯ ಮುದ್ಯತಂ || ಬ್ರಹ್ಮದಂಡೇನ ತಚ್ಛಾಂತಮಗ್ನೇರ್ವೇಗ ಇವಾಂಭಸಾ ||೫|| ವಾರುಣಂ ಚೈವ ರೌದ್ರಂಚ ಐಂದ್ರಂ ಪಾಶುಪಸಂ ತಥಾ || ಐಷೀಕಂ ಚಾಪಿ ಚಿಕ್ಷೇಪ ಕುಪಿತೋ ಗಾಧಿನಂದನಃ || ೬ || ಮಾನವಂ ಮೋಹನಂ ಚೈವ ಗಾಂಧರ್ವಂ ಸ್ವಾಪನಂ ತಥಾ || ಜೃಂಭಣಂ ಮಾದನಂ ಚೈವ ಸಂತಾಪನವಿಲಾಪನೇ || ೭ || ಶೋಷಣಂ ದಾರುಣಂ ಚೈವ ವಜ್ರಮಸ್ತ್ರಂ ಸುದುರ್ಜಯಂ || ಬ್ರಹ್ಮಪಾಶಂ ಕಾಲಪಾಶಂ ವಾರುಣಂ ಪಾಶಮೇವಚ || ೮ || ಪೈನಾಕಾಸ್ತ್ರಂಚ ದಯಿತಂ ಶುಷ್ಕಾರ್ದ್ರೇ ಅಶನೀಉಭೇ || ದಂಡಾಸ್ತ್ರಮಥ

---

ವಾದ, ಆಗ್ನೇಯಮಸ್ತ್ರಂ-ಅಗ್ನೇಯಾಸ್ತ್ರವು, ಯತ್ - ಯಾವದೋ, ತತ್ - ಅದು, ಅಂಭಸಾ-ಉದಕದಿಂದ, ಅಗ್ನೇಃ-ಅಗ್ನಿಯ, ವೇಗ ಇವ - ವೇಗದಂತೆ, ಬ್ರಹ್ಮದಂಡೇನ - ಬ್ರಹ್ಮದಂಡದಿಂದ, ಶಾಂತಂ-ನಿಸ್ತೇಜಸ್ಕವು, ಅಭವತ್-ಆಯಿತು. ||೫|| ಗಾಧಿನಂದನಃ - ಗಾಧಿರಾಯನ ಮಗನಾದ ವಿಶ್ವಾಮಿತ್ರನು, ಕುಪಿತಃ- ಕೋಪಿಷ್ಠನಾಗಿ, ವಾರುಣಂಚೈವ - ವಾರುಣಾಸ್ತ್ರವನ್ನು, ರೌದ್ರಂಚ-ರೌದ್ರಾಸ್ತ್ರವನ್ನು, ಐಂದ್ರಂ-ಇಂದ್ರಸಂಬಂಧಿಯಾದ ಅಸ್ತ್ರವನ್ನು, ತಥಾ - ಹಾಗೆಯೇ, ಪಾಶುಪತಂ-ಪಾಶುಪತಾಸ್ತ್ರವನ್ನು, ಐಷೀಕಂಚಾಪಿ-ಐಷೀಕಾಸ್ತ್ರವನ್ನು, ಚಿಕ್ಷೇಪ-ಪ್ರಯೋಗಿಸಿದನು. ||೬|| ಮಾನವಂ-ಮಾನವಾಸ್ತ್ರವನ್ನು, ಮೋಹನಂಚೈವ-ಸಮ್ಮೋಹನಾಸ್ತ್ರವನ್ನು, ಗಾಂಧರ್ವಂ - ಗಾಂಧರ್ವಾಸ್ತ್ರವನ್ನು, ತಥಾ ಹಾಗೆಯೇ, ಪ್ರಸ್ವಾಪನಂ-ಪ್ರಸ್ವಾಪನಾಸ್ತ್ರವನ್ನು, ಜೃಂಭಣಂ-ಜೃಂಭಣಾಸ್ತ್ರವನ್ನು, ಮಾದನಂಚೈವ-ಮದನದೇವತಾಕವಾದ ಅಸ್ತ್ರವನ್ನು, ಸಂತಾಪನವಿಲಾಪನೇ-ಸಂತಾಪನ-ವಿಲಾಪನವೆಂಬ ಅಸ್ತ್ರಗಳನ್ನು, ಶೋಷಣಂ-ಶೋಷಣವೆಂಬ ಅಸ್ತ್ರವನ್ನು,ದಾರುಣಂ-ಭಯಂಕರವಾದ, ಸುದುರ್ಜಯಂ - ಜಯಿಸಲಸಾಧ್ಯವಾದ, ವಜ್ರಂ - ವಜ್ರವೆಂಬ - ಅಸ್ತ್ರಂಚೈವ-ಅಸ್ತ್ರವನ್ನು, ಬ್ರಹ್ಮಪಾಶಂ-ಬ್ರಹ್ಮಪಾಶವನ್ನು, ಕಾಲಪಾಶಂ - ಕಾಲಪಾಶವನ್ನು, ವಾರುಣಂ - ವರುಣ ಸಂಬಂಧಿಯಾದ, ಪಾಶಮೇವಚ - ಪಾಶವನ್ನೂ ದಯಿತಂ-ಶ್ರೇಷ್ಠವಾದ, ಪೈನಾಕಾಸ್ತ್ರಂ-ಪೈನಾಕಾಸ್ತ್ರವನ್ನು, ಶುಷ್ಕಾರ್ದ್ರೇ-ಒಣ್ಕವೂ ಆರ್ದ್ರವೂ ಎಂಬ, ಉಭೇ - ಎರಡು, ಅಶನೀ-ಸಿಡಿಲುಗಳನ್ನು, ದಂಡಾಸ್ತ್ರಂ - ದಂಡಾಸ್ತ್ರವನ್ನು, ಪೈಶಾಚಂ - ಪಿಶಾಚಾಸ್ತ್ರವನ್ನು, ತಥೈವ-ಹಾಗೆಯೇ, ಕ್ರೌಂಚಂ - ಕ್ರೌಂಚವೆಂಬ, ಅಸ್ತ್ರಂ-ಅಸ್ತ್ರವನ್ನು, ಧರ್ಮಚಕ್ರಂ-

---

ನೀರಿನಿಂದ ತಣ್ಣಗಾಗುವಂತೆ, ಶಾಂತವಾಗಿ ಹೋಯಿತು. ಆಗಲಾ ವಿಶ್ವಾಮಿತ್ರನು ಮಹಾ ಕೋಪವನ್ನು ತಾಳಿ, ವಾರುಣಾಸ್ತ್ರ, ರೌದ್ರಾಸ್ತ್ರ, ಇಂದ್ರಸಂಬಂಧವಾದ ಅಸ್ತ್ರ, ಪಾಶುಪತ, ಮಾನವ, ಸಂಮೋಹನ, ಪ್ರಸ್ವಾಪನ, ಜೃಂಭಣ, ಮಾದನ, ಸಂತಾಪನ, ವಿಲಾಪನ, ಶೋಷಣ, ದಾರುಣ, ಭಯಂಕರವೂ, ಜಯಿಸಲಸದಳವೂ ಆದ ವಜ್ರಾಸ್ತ್ರ, ಬ್ರಹ್ಮಪಾಶ, ಕಾಲಪಾಶ, ವರುಣಪಾಶ, ಉತ್ತಮವಾದ ಪೈನಾಕ, ಶುಷ್ಕಾರ್ದ್ರಗಳೆಂಬ ಸಿಡಿಲುಗಳು, ದಂಡಾಸ್ತ್ರ, ಪಿಶಾಚ, ಕ್ರೌಂಚ, ಧರ್ಮಚಕ್ರ, ಕಾಲಚಕ್ರ, ವಿಷ್ಣುಚಕ್ರ, ವಾಯವ್ಯ, ಮಥನ, ಹಯಶಿರಸ್ಸು, ಕಂಕಾಲ, ಮುಸಲ, ವೈದ್ಯಾಧರ,ಕಾಲ, ಮಹಾ ಭಯಂಕರವಾದ ತ್ರಿಶೂಲ, ಕಪಾಲ, ಕಂಕಣ, ಎಂಬಿವೇ ಮೊದಲಾದ ಅಸ್ತ್ರಶಸ್ತ್ರಗಳನ್ನಭಿಮಂತ್ರಿಸಿ,

ಪೈಶಾಚಂ ಕ್ರೌಂಚಮಸ್ತ್ರಂ ತಥೈವಚ ||೯|| ಧರ್ಮಚಕ್ರಂ ಕಾಲಚಕ್ರಂ ವಿಷ್ಣುಚಕ್ರಂ ತಥೈವಚ || ವಾಯವ್ಯಂ ಮಥನಂಚೈವ ಅಸ್ತ್ರಂ ಹಯಶಿರಸ್ತಥಾ ||೧೦|| ಶಕ್ತಿದ್ವಯಂ ಚ ಚಿಕ್ಷೇಪ ಕಂಕಾಳಂ ಮುಸಲಂ ತಥಾ|| ವೈದ್ಯಾಧರಂ ಮಹಾಸ್ತ್ರಂಚ ಕಾಲಾಸ್ತ್ರಮಥ ದಾರುಣಂ ||೧೧|| ತ್ರಿಶೂಲಮಸ್ತ್ರಂ ಘೋರಂಚ ಕಾಪಾಲಮಥ ಕಂಕಣಂ || ಏತಾನ್ಯಸ್ತ್ರಾಣಿ ಚಿಕ್ಷೇಪ ಸರ್ವಾಣಿ ರಘುನಂದನ ||೧೨|| ವಸಿಷ್ಠೇ ಜಪತಾಂಶ್ರೇಷ್ಠೇ ತದದ್ಭುತಮಿವಾಭವತ್ || ತಾನಿಸರ್ವಾಣಿ ದಂಡೇನ ಗ್ರಸತೇ ಬ್ರಹ್ಮಣಸ್ಸುತಃ ||೧೩|| ತೇಷು ಶಾಂತೇಷು ಬ್ರಹ್ಮಾಸ್ತ್ರಂ ಕ್ಷಿಪ್ತವಾನ್ ಗಾಧಿನಂದನಃ || ತದಸ್ತ್ರಮು

ಧರ್ಮಚಕ್ರವನ್ನೂ, ಕಾಲಚಕ್ರಂ-ಕಾಲಚಕ್ರವನ್ನು, ತಥೈವ-ಹಾಗೆಯೆ, ವಿಷ್ಣುಚಕ್ರಂಚ-ವಿಷ್ಣುಚಕ್ರವನ್ನು, ವಾಯವ್ಯಂ-ವಾಯುವ್ಯಾಸ್ತ್ರವನ್ನು, ಮಥನಂಚೈವ-ಮಥನಾಸ್ತ್ರವನ್ನೂ, ತಥಾ-ಹಾಗೆಯೆ, ಹಯಶಿರಃ-ಹಯಶಿರಸ್ಸೆಂಬ, ಅಸ್ತ್ರಂ-ಅಸ್ತ್ರವನ್ನು, ಕಂಕಾಳಂ-ಕಂಕಾಳವೆಂಬ, ತಥಾ-ಹಾಗೆಯೇ, ಮುಸಲಂ-ಮುಸಲವೆಂಬ, ಶಕ್ತಿದ್ವಯಂಚ - ಎರಡು ಶಕ್ತಿಗಳನ್ನು, ವೈದ್ಯಾಧರಂ-ವೈದ್ಯಾಧರಸಂಬಂಧಿಯಾದ, ಮಹಾಸ್ತ್ರಂಚ-ದೊಡ್ಡ ಅಸ್ತ್ರವನ್ನು, ಅಥ-ಬಳಿಕ,ದಾರುಣಂ-ಭಯಂಕರವಾದ, ಕಾಲಾಸ್ತ್ರಂಚ-ಕಾಲಾಸ್ತ್ರವನ್ನು, ತ್ರಿಶೂಲಂ-ಮೂರುಕೊನೆಗಳುಳ್ಳ, ಘೋರಂ-ಭಯಂಕರವಾದ,ಅಸ್ತ್ರಂಚ-ಅಸ್ತ್ರವನ್ನು, ಕಾಪಾಲಂ - ಕಪಾಲವೆಂಬ ಅಸ್ತ್ರವನ್ನು, ಅಥ-ಬಳಿಕ, ಕಂಕಣಂ -ಕಂಕಣವೆಂಬ ಅಸ್ತ್ರವನ್ನು, ಹೇ ರಘುನಂದನ - ಎಲೈ ಶ್ರೀರಾಮನೇ, ಜಪತಾಂ - ತಪಸ್ವಿಗಳಲ್ಲಿ, ಶ್ರೇಷ್ಠೇ - ಶ್ರೇಷ್ಠನಾದ, ವಸಿಷ್ಠೇ - ವಸಿಷ್ಠಋಷಿಯಲ್ಲಿ, ಸರ್ವಾಣಿ - ಸಮಸ್ತವಾದ, ಏತಾನ್ಯಸ್ತ್ರಾಣಿ – ಈ ಅಸ್ತ್ರಗಳನ್ನು, ಚಿಕ್ಷೇಪ - ಪ್ರಯೋಗಿಸಿದನು, ಸರ್ವಾಣಿ-ತಾನಿ – ಆ ಅಸ್ತ್ರಗಳೆಲ್ಲವೂ, ಬ್ರಹ್ಮಣಃ - ಚತುರ್ಮುಖ ಬ್ರಹ್ಮನ, ಸುತಃ - ಕುವರನಾದ ವಸಿಷ್ಠನು, ದ್ದಂಡೇನ - ಬ್ರಹ್ಮದಂಡದಿಂದ, ಗ್ರಸತೇ - ನುಂಗುತ್ತಲಿದ್ದನು, ತತ್ – ಅದು, ಅದ್ಭುತಮಿವ - ಆಶ್ಚರ್ಯದಂತೆ, ಅಭವತ್ - ಆಯಿತು, ||೧೩|| ತೇಷು - ಆ ವಾರುಣಾಸ್ತ್ರವೇ ಮೊದಲಾದ ಅಸ್ತ್ರಗಳು, ಶಾಂತೇಷುಸತ್ಸು - ಶಾಂತಿಯನ್ನು ಹೊಂದಲು, ಗಾಧಿನಂದನಃ - ವಿಶ್ವಾಮಿತ್ರನು, ಬ್ರಹ್ಮಾಸ್ತ್ರಂ - ಬ್ರಹ್ಮಾಸ್ತ್ರವನ್ನು, ಕ್ಷಿಪ್ತವಾನ್ - ಪ್ರಯೋಗಿಸಿದನು, ಉದ್ಯತಂ - ಪ್ರಯೋಗಾರ್ಥವಾಗಿ, ಎತ್ತಲ್ಪಟ್ಟ, ತದಸ್ತ್ರಂ - ಆ ಬ್ರಹ್ಮಾಸ್ತ್ರವನ್ನು, ದೃಷ್ಟ್ವಾ-ಕಂಡು, ದೇವಾಃ - ದೇವತೆಗಳು, ಸಾಗ್ನಿಪುರೋಗಮಾಃ-ಅಗ್ನಿಯೇ-ಮೊದಲಾದವರಿಂದೊಡಗೂಡಿ, ದೇವರ್ಷಯಶ್ಚ - ದೇವಋಷಿಗಳೂ, ಸಮಹೋರಗಾಃ - ಸರ್ಪಸಹಿತರಾದ, ಗಂಧರ್ವಾಶ್ಚ - ಗಂಧರ್ವರೂ, ಸಂಭ್ರಾಂತಾಃ-

ಶ್ರೇಷ್ಠನಾದ ವಸಿಷ್ಠನ ಮೇಲೆ ಪ್ರಯೋಗಿಸಿದನು. ವಿಶ್ವಾಮಿತ್ರನೀರೀತಿಯಾಗಿ ಪ್ರಯೋಗಿಸುತ್ತಿದ್ದ ಅಸ್ತ್ರಶಸ್ತ್ರಗಳೆಲ್ಲವನ್ನೂ, ಬ್ರಹ್ಮಕುವರನಾದ ಆ ವಸಿಷ್ಠ ಮುನಿಯು ಬ್ರಹ್ಮದಂಡದಿಂದ ನುಂಗುತ್ತಿದ್ದನು. ಇದು ಮಹದಾಶ್ಚರ್ಯಕರವಾಗಿದ್ದಿತು. ||೧೩|| ಈ ರೀತಿ ಅಸ್ತ್ರಗಳೆಲ್ಲವೂ ಶಾಂತವಾಗಿ ಹೋಗಲು, ಗಾಧಿನಂದನನಾದ ವಿಶ್ವಾಮಿತ್ರನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲುದ್ಯುಕ್ತನಾಗಿ, ಆ ಅಸ್ತ್ರವನ್ನು ತೆಗೆದುಕೊಂಡು ನಿಂತನು. ವಿಶ್ವಾಮಿತ್ರನ ಈ ಉದ್ಯಮವನ್ನು ಕಂಡು, ಅಗ್ನಿಯೇ ಮೊದಲಾದ ದೇವತೆಗಳೂ, ದೇವರ್ಷಿಗಳೂ,

ದ್ಯತಂ ದೃಷ್ಟ್ವಾ ದೇವಾಸ್ಸಾಗ್ನಿ ಪುರೋಗಮಾಃ ॥೧೪॥ ದೇವರ್ಷಯಶ್ಚ ಸಂಭ್ರಾಂತಾ ಗಂಧರ್ವಾ ಸ್ಸಮಹೋರಗಾಃ ॥ ತ್ರೈಲೋಕ್ಯಮಾಸೀತ್ಸಂತ್ರಸ್ತಂ ಬ್ರಹ್ಮಾಸ್ತ್ರೇ ಸಮುದೀರಿತೇ ॥೧೫॥ ತದಪ್ಯಸ್ತ್ರಂ ಮಹಾಘೋರಂ ಬ್ರಾಹ್ಮಂ ಬ್ರಾಹ್ಮೇನ ತೇಜಸಾ ॥ ವಸಿಷ್ಠೋ ಗ್ರಸತೇ ಸರ್ವಂ ಬ್ರಹ್ಮದಂಡೇನ ರಾಘವ ॥೧೬॥ ಬ್ರಹ್ಮಾಸ್ತ್ರಂ ಗ್ರಸಮಾನಸ್ಯ ವಸಿಷ್ಠಸ್ಯ ಮಹಾತ್ಮನಃ ॥ ತ್ರೈಲೋಕ್ಯ ಮೋಹನಂ ರೌದ್ರಂ ರೂಪಮಾಸೀ ತ್ಸುದಾರುಣಂ ॥೧೭॥ ರೋಮಕೂಪೇಷು ಸರ್ವೇಷು ವಸಿಷ್ಠಸ್ಯ ಮಹಾತ್ಮನಃ ॥ ಮರೀಚ್ಯ ಇವನಿಷ್ಪೇತು ರಗ್ನೇ ರ್ಧೂಮಾಕುಲಾರ್ಚಿಷಃ ॥೧೮॥ ಪ್ರಾಜ್ವಲದ್ಬ್ರಹ್ಮದಂಡಶ್ಚ ವಸಿಷ್ಠಸ್ಯ ಕರೋದ್ಯತಃ ॥ ವಿಧೂಮ ಇವಕಾಲಾಗ್ನಿ ರ್ಯಮದಂಡಇವಾಪರಃ ॥೧೯॥ ತತೋ ಸ್ತುವನ್ಮುನಿಗಣಾ ವಸಿಷ್ಠಂ ಜಪತಾಂವರಂ ॥ ಅಮೋಘಂತೇ ಬಲಂ

---

ಮನೋವ್ಯೆಕಲ್ಯವನ್ನು ಹೊಂದಿದರು. ॥೧೪॥ ಬ್ರಹ್ಮಾಸ್ತ್ರೇ - ಬ್ರಹ್ಮಾಸ್ತ್ರವು, ಸಮುದೀರಿತೇ ಸತಿ ಪ್ರಯೋಗಮಾಡಲ್ಪಟ್ಟದಾಗಲು, ತ್ರೈಲೋಕ್ಯಂ- ಲೋಕತ್ರಯವು, ಸಂತ್ರಸ್ತಂ-ಭಯಗೊಂಡುದು,ಆಸೀತ್-ಆಯಿತು. ॥೧೫॥ ಹೇರಾಘವ-ಎಲೈಶ್ರೀರಾಮನೇ, ವಸಿಷ್ಠಃ-ವಸಿಷ್ಠಋಷಿಯು, ಬ್ರಾಹ್ಮಂ-ಬ್ರಹ್ಮದೇವತಾಕವಾದ, ಮಹಾಘೋರಂ-ಮಹಾಭಯಂಕರವಾದ, ತದಸ್ತ್ರಮಪಿ - ಆ ಅಸ್ತ್ರವನ್ನೂ, ಬ್ರಾಹ್ಮೇಣ-ಬ್ರಹ್ಮಸಂಬಂಧವಾದ, ತೇಜಸಾ-ಬ್ರಹ್ಮತೇಜಸ್ಸಿನಿಂದ, ಉಪಬೃಂಹಿತೇನ-ಕೂಡಿರುವ, ಬ್ರಹ್ಮದಂಡೇನ-ಬ್ರಹ್ಮದಂಡದಿಂದ, ಸರ್ವಂ-ಸಮಗ್ರವಾಗಿ, ಗ್ರಸತೇ-ನುಂಗಿದನು. ॥೧೬॥ ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರವನ್ನು, ಗ್ರಸಮಾನಸ್ಯ-ಭಕ್ಷಿಸುತ್ತಿರುವ, ಮಹಾತ್ಮನಃ-ಮಹಾ ಪ್ರಭಾವವಂತನಾದ, ವಸಿಷ್ಠಸ್ಯ-ವಸಿಷ್ಠನ, ರೂಪಂ-ರೂಪವು, ತ್ರೈಲೋಕ್ಯಮೋಹನಂ - ಲೋಕತ್ರಯವನ್ನು ಭ್ರಾಂತಿಗೊಳ್ಳುವಂತೆ, ಸುದಾರುಣಂ-ಅತಿಕ್ರೂರವಾದ, ರೌದ್ರಂ-ರೌದ್ರಾಕಾರವುಳ್ಳದಾಗಿ, ಆಸೀತ್-ಆಯಿ. ॥೧೭॥ ಮಹಾತ್ಮನಃ-ಮಹಾನುಭಾವನಾದ, ವಸಿಷ್ಠಸ್ಯ - ವಸಿಷ್ಠಋಷಿಯ, ಸರ್ವೇಷು-ಸಮಸ್ತ, ರೋಮಕೂಪೇಷು-ರೋಮರಂಧ್ರಗಳಲ್ಲಿ, ಧೂಮಾಕುಲಾರ್ಚಿಷಃ- ಧೂಮದಿಂದ ವ್ಯಾಪ್ತವಾದ ತೇಜಸ್ಸುಳ್ಳ, ಅಗ್ನೇಃ-ಅಗ್ನಿಯ, ಮರೀಚ್ಯ ಇವ-ಜ್ವಾಲೆಗಳಂತೆ, ಮರೀಚ್ಯಃ - ಜ್ವಾಲೆಗಳು ನಿಷ್ಪೇತುಃ-ಹೊರಟುಬಂದವು. ॥೧೮॥ ವಸಿಷ್ಠಸ್ಯ-ವಸಿಷ್ಠಋಷಿಯ, ಕರೋದ್ಯತಃ - ಕೈಯಿಂದ ಎತ್ತಲ್ಪಟ್ಟ, ಬ್ರಹ್ಮದಂಡಶ್ಚ - ಬ್ರಹ್ಮದಂಡವೂ, ವಿಧೂಮಃ-ಧೂಮರಹಿತವಾದ, ಕಾಲಾಗ್ನಿರಿವ-ಪ್ರಳಯಾಗ್ನಿಯಂತೆ, ಅಪರಃ- ಮತ್ತೊಂದಾದ,ಯಮದಂಡ ಇವ-ಯಮ ದಂಡದಂತೆ, ಪ್ರಾಜ್ವಲತ್-ಉರಿಯುತಿದ್ದಿತು. ॥೧೯॥ ತತಃ ಬಳಿಕ, ಮುನಿಗಣಾಃ-ಋಷಿತಂಡಗಳು, ಜಪತಾಂ-ತಪಸ್ವಿಗಳಲ್ಲಿ, ವರಂ-ಶ್ರೇಷ್ಠನಾದ, ವಸಿಷ್ಠಂ-ವಸಿಷ್ಠಋಷಿಯಂ ಕುರಿತು, ಅಸ್ತುವನ್ - ಸ್ತೋತ್ರಮಾಡಿದರು, ಹೇ

---

ನಾಗಗಂಧರ್ವರೂ, ಭ್ರಾಂತರಾಗಿ ಹೋದರು. ಹೆಚ್ಚೇನು ! ಬ್ರಹ್ಮಾಸ್ತ್ರವು ಬಿಡಲುದ್ಯುಕ್ತವಾಗಿರುವುದನ್ನು ಕಂಡು, ಜಗತ್ರಯವೇ ಭಯಗೊಂಡಿತು. ॥೧೫॥ ಆಗಲಾ ವಸಿಷ್ಠಮುನಿಯು, ಬ್ರಹ್ಮ ಸಂಬಂಧವಾಗಿಯೂ, ಮಹಾ ಭಯಂಕರವಾಗಿಯೂ ಇರುವ ಆ ಬ್ರಹ್ಮಾಸ್ತ್ರವನ್ನೂ ಸಹ, ಬ್ರಹ್ಮತೇಜೋತ್ಪನ್ನವಾದ ಬ್ರಹ್ಮದಂಡದಿಂದ ನುಂಗಿಬಿಟ್ಟನು. ಬ್ರಹ್ಮಾಸ್ತ್ರವನ್ನು ಗ್ರಸನಮಾಡುತ್ತಿರುವ ಮಹಾತ್ಮನಾದ ವಸಿಷ್ಠಋಷಿಯ ರೂಪವು ಮೂರು ಲೋಕಗಳನ್ನೂ ಭ್ರಾಂತಿಗೊಳಿಸುವುದಾಗಿಯೂ, ಮಹಾ ಭಯಂಕರವಾಗಿಯೂ ಇದ್ದಿತು. ಇಷ್ಟೆಯಲ್ಲದೆ ಆ ಮಹಾತ್ಮನ ರೋಮಕೂಪಗಳಿಂದ ಅಗ್ನಿಜ್ವಾಲೆಗಳಂತೆ ಜ್ವಾಲೆಗಳು ಹೊರಹೊರಟವು ॥೧೮॥ ಇದಲ್ಲದೆ ವಸಿಷ್ಠಋಷಿಯ ಕೈಯಲ್ಲಿದ್ದ ಬ್ರಹ್ಮದಂಡವೂ ಹೊಗೆಯಿಂದೊಡಗೂಡಿದ ಕಾಲಾಗ್ನಿಯಂತೆಯೂ, ಯಮದಂಡದಂತೆಯೂ ಹೊಳೆಯುತ್ತಿದ್ದಿತು. ಆ ಸಮಯದಲ್ಲಿ ಋಷಿಗಳೆಲ್ಲರೂ ವಸಿಷ್ಠ ಮಹಾಮುನಿಯ ಬಳಿಸಾರಿ,

ಬ್ರಹ್ಮರ್ಷೇ ತೇಜೋ ಧಾರಯ ತೇಜಸಾ ||೨೦|| ನಿಗೃಹೀತಸ್ತ್ವಯಾ ಬ್ರಹ್ಮರ್ಷೇ ವಿಶ್ವಾಮಿತ್ರೋ ಮಹಾತಪಾಃ || ಪ್ರಸೀದ ಜಪತಾಂ ಶ್ರೇಷ್ಠ ಲೋಕಾಸ್ಸಂತು ಗತವ್ಯಥಾಃ || ೨೧ || ಏವಮುಕ್ತೋ ಮಹಾತೇಜಾಃ ಶಮಂಚಕ್ರೇ ಮಹಾತಪಾಃ || ವಿಶ್ವಾಮಿತ್ರೋಽಪಿ ನಿಕೃತೋ ವಿನಿಶ್ವಸ್ಯೇದಮಬ್ರವೀತ್ || ೨೨ || ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂಬಲಂ || ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿಮೇ||೨೩||ತದೇತತ್ಸಮವೇಕ್ಷ್ಯಾಹಂ ಪ್ರಸನ್ನೇಂದ್ರಿಯ ಮಾನಸಃ||ತಪೋಮಹತ್ಸಮಾಸ್ಥಾಸ್ಯೇ ಯದ್ವೈ ಬ್ರಹ್ಮತ್ವಕಾರಣಂ ||೨೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಪಂಚಾಶಸ್ಸರ್ಗಃ.

ಬ್ರಹ್ಮರ್ಷೇ-ಎಲೈ ಬ್ರಾಹ್ಮಣನೆ, ತೇಬಲಂ-ನಿನ್ನ ಬಲವು, ಅಮೋಘಂ- ಎಂದಿಗೂ ವ್ಯರ್ಥವಾಗದಿರುವದು, ತೇಜಃ-ಬ್ರಹ್ಮಾಸ್ತ್ರತೇಜಸ್ಸನ್ನು, ತೇಜಸಾ- ಮಹಿಮೆಯಿಂದ, ಧಾರಯ-(ಮ) ಧರಿಸು, (ತಿ) ಸಂಹರಿಸು, ಹೇ ಬ್ರಹ್ಮರ್ಷೇ-ಎಲೈ ಬ್ರಾಹ್ಮಣನೆ, ಮಹಾತಪಾಃ-ಮಹಾತಪಸ್ವಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ತ್ವಯಾ-ನಿನ್ನಿಂದ, ನಿಗೃಹೀತಃ-ಜಯಿಸಲ್ಪಟ್ಟನು. ||೨೦|| ಹೇಜಪತಾಂಶ್ರೇಷ್ಠ- ತಪೋಶ್ರೇಷ್ಠನೆ, ಲೋಕಾಃ-ಜನರು, ಗತವ್ಯಥಾಃ - ಶೋಕಹೀನರಾಗಿ, ಸಂತು-ಇರಲಿ, ಏವಂ - ಹೀಗೆ, ಉಕ್ತಃ-ಹೇಳಲ್ಪಟ್ಟ, ಮಹಾತೇಜಾಃ-ಮಹಾತೇಜೋವಂತನಾದ, ಮಹಾತಪಾಃ - ಮಹಾಪತಸ್ವಿಯಾದ, ವಸಿಷ್ಠಋಷಿಯು, ಶಮಂ-ಶಾಂತಿಯನ್ನು, ಚಕ್ರೇ-ಮಾಡಿದನು. ||೨೧|| ವಿಶ್ವಾಮಿತ್ರೋಽಪಿ-ವಿಶ್ವಾಮಿತ್ರನೂ ಕೂಡ, ನಿಕೃತಃ ಪರಾಜಿತನಾಗಿ, ವಿನಿಶ್ವಸ್ಯ - ದೀರ್ಘವಾಗಿ ನಿಟ್ಟುಸುರುಬಿಟ್ಟು, ಇದಂ- ಈ ಮುಂದೆ ಹೇಳತಕ್ಕ ಮಾತನ್ನು, ಅಬ್ರವೀತ್-ನುಡಿದನು. ||೨೨|| ಕ್ಷತ್ರಿಯಬಲಂ-ಕ್ಷತ್ರಿಯಬಲರೂಪವಾದ, ಬಲಂ-ಬಲವು, ಧಿಕ್-ನಿಂದ್ಯವು, ಬ್ರಹ್ಮತೇಜೋಬಲಂ-ಬ್ರಹ್ಮತೇಜೋರೂಪವಾದ ಬಲವು, ಬಲಂ-ಪ್ರಶಸ್ತವು, ಏಕೇನ-ಒಂದಾದ, ಬ್ರಹ್ಮದಂಡೇನ-ಬ್ರಹ್ಮದಂಡದಿಂದ, ಮೇ - ನನ್ನ, ಸರ್ವಾಸ್ತ್ರಾಣಿ-ಸಮಸ್ತಾಸ್ತ್ರಗಳೂ, ಹತಾನಿ - ಹೊಡೆಯಲ್ಪಟ್ಟವು. || ೨೩ || ಅಹಂ-ನಾನು, ತದೇತತ್-ಆ ಈ ಪರಾಜಯವನ್ನು, ಸಮವೇಕ್ಷ್ಯ-ಕಂಡು, ಪ್ರಸನ್ನೇಂದ್ರಿಯಮಾನಸಃ - ಪ್ರಸನ್ನವಾದ ಇಂದ್ರಿಯಗಳೂ ಮನಸ್ಸೂ ಉಳ್ಳವನಾಗಿ, ಯತ್-ಯಾವದು, ಬ್ರಹ್ಮತ್ವಕಾರಣಂ-ಬ್ರಾಹ್ಮಣ್ಯಸಂಪಾದಕವೋ, ತತ್-ಅಂತಹ, ಮಹತ್-ಅದ್ಭುತವಾದ, ತಪಃ - ತಪಸ್ಸನ್ನು, ಸಮಾಸ್ಥಾಸ್ಯೇ-ಅನುಷ್ಠಾನಮಾಡುವೆನು. ||೨೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಪಂಚಾಶಸ್ಸರ್ಗಃ

"ಎಲೈ ಬ್ರಹ್ಮಜ್ಞಾನಿಯೆ ! ನಿನ್ನ ಬಲವು, ಅತ್ಯಮೋಘವಾದುದು. ಬ್ರಹ್ಮಾಸ್ತ್ರದ ತೇಜಸ್ಸನ್ನು ನಿನ್ನ ತೇಜಸ್ಸಿನಿಂದಲೇ ಉಪಸಂಹಾರ ಮಾಡುವವನಾಗು. ಮಹಾ ತಪಸ್ವಿಯಾದ ವಿಶ್ವಾಮಿತ್ರನು ನಿನ್ನಿಂದ ಸೋಲಿಸಲ್ಪಟ್ಟನು. ಎಲೈಮಹಾತಪಸ್ವಿಯೆ ! ಶಾಂತನಾಗು; ಲೋಕಗಳೆಲ್ಲವೂ ವ್ಯಥೆಯಿಲ್ಲದಿರಲಿ" ಎಂದು ಸ್ತುತಿಸಿದರು. ಋಷಿವರೇಣ್ಯರೆಲ್ಲರೂ ಈ ರೀತಿ ಸ್ತುತಿಸಲು ಮಹಾ ತೇಜಸ್ವಿಯಾದ ವಸಿಷ್ಠ ಮುನಿಯು ಕೋಪವನ್ನು ಬಿಟ್ಟು ಶಾಂತನಾದನು. 'ಎಲೈ ರಘುನಂದನನೆ ; ಆಗಲಾ ವಿಶ್ವಾಮಿತ್ರನು ಸೋತು, ನಿಟ್ಟುಸಿರುಗಳನ್ನು ಬಿಡುತ್ತ "ಛಿ ! ಕ್ಷತ್ರಿಯ ಬಲವು ಹೀನವಾದುದು. ಬ್ರಹ್ಮಬಲವೇ ಪ್ರಶಸ್ತವಾದುದು. ಒಂದೇ ಒಂದಾದ ಬ್ರಹ್ಮದಂಡದಿಂದ ನನ್ನ ದಿವ್ಯಾಸ್ತ್ರಗಳೆಲ್ಲವೂ ನಾಶವಾದುವಲ್ಲವೆ ? ಆದುದರಿಂದ ನಾನು ಈ ಕ್ಷತ್ರಿಯ ರೋಷವನ್ನು ತ್ಯಜಿಸಿ ಪ್ರಸನ್ನವಾದ ಇಂದ್ರಿಯಗಳೂ, ಮನಸ್ಸೂ ಉಳ್ಳವನಾಗಿ ಬ್ರಾಹ್ಮಣ್ಯವನ್ನುಂಟುಮಾಡುವ ತಪವನ್ನಾಚರಿಸುವೆನು." ಎಂದನು.

ಇಂತಿದು ವಿಶ್ವಾಮಿತ್ರ ಪರಾಜಯ ಕಥಾಕಥನವೆಂಬ ಐವತ್ತಾರನೆಯ ಸರ್ಗವು ಸ ಮಾ ಪ್ತ ವಾ ದು ದು.

# ಬಾಲಕಾಂಡೇ ಸಪ್ತಪಂಚಾಶಸ್ಸರ್ಗಃ.

ತತಸ್ಸಂತಪ್ತ ಹೃದಯಃ ಸ್ಮರನ್ನಿಗ್ರಹಮಾತ್ಮನಃ॥ ವಿನಿಶ್ವಸ್ಯ ವಿನಿಶ್ವಸ್ಯ ಕೃತ ವೈರೋ ಮಹಾತ್ಮನಾ ॥೧॥ ಸದಕ್ಷಿಣಾಂ ದಿಶಂಗತ್ವಾ ಮಹಿಷ್ಯಾಸಹ ರಾಘವ॥ ತತಾಪ ಪರಮಂ ಘೋರಂ ವಿಶ್ವಾಮಿತ್ರೋ ಮಹತ್ತಪಃ ॥ ೨ ॥ (ಫಲ ಮೂಲಾಶನೋ ದಾಂತಃ ಚಕಾರ ಸುಮಹತ್ತಪಃ) ಅಥಾಸ್ಯ ಜಜ್ಞಿರೇಪುತ್ರಾ ಸ್ಸತ್ಯ ಧರ್ಮಪರಾಯಣಾಃ ॥ ಹವಿಷ್ಯಂದೋ ಮಧುಷ್ಯಂದೋ ದೃಢನೇತ್ರೋ ಮಹಾರಥಃ ॥ ೩ ॥ ಪೂರ್ಣೇ ವರ್ಷಸಹಸ್ರೇತು ಬ್ರಹ್ಮಾಲೋಕಪಿತಾ

---

ಹೇರಾಘವ-ಎಲೈ ಶ್ರೀರಾಮನೆ, ತತಃ-ಬಳಿಕ, ಸಃ-ಆ ವಿಶ್ವಾಮಿತ್ರನು, ಸಂತಪ್ತಹೃದಯಃ-ಬಹಳವಾಗಿ ಖತಿಗೊಂಡ ಹೃದಯವುಳ್ಳವನಾಗಿ, ಆತ್ಮನಃ-ತನ್ನ, ನಿಗ್ರಹಂ - ಪರಾಜಯವನ್ನು, ಸ್ಮರನ್-ಸ್ಮರಿಸಿಕೊಂಡು, ವಿನಿಶ್ವಸ್ಯ ವಿನಿಶ್ವಸ್ಯ-ಬಾರಿಬಾರಿಗೂ ನಿಟ್ಟುಸುರುಬಿಡುತ್ತಾ, ಮಹಾತ್ಮನಾ-ಮಹಾ ಪ್ರಭಾವವಂತನಾದ ವಸಿಷ್ಠನ ಸಂಗಡ, ಕೃತವೈರಃ - ಮಾಡಲ್ಪಟ್ಟ ದ್ವೇಷವುಳ್ಳವನಾಗಿ, ಮಹಿಷ್ಯಾಸಹ - ಹೆಂಡತಿಯೊಡನೆ, ದಕ್ಷಿಣಾಂದಿಶಂ - ದಕ್ಷಿಣದಿಕ್ಕನ್ನು ಕುರಿತು, ಗತ್ವಾ - ಹೋಗಿ, ಪರಮಂ-ಬಹಳವಾದ, ಘೋರಂ-ಭಯಂಕರವಾದ, ಮಹತ್ತಪಃ-ಮಹಾತಪಸ್ಸನ್ನು, ತತಾಪ-ಮಾಡಿದನು.॥೨॥ ಫಲಮುಲಾಶನಃ ಫಲಗಳೂ,ಕಂದಮೂಲಗಳೇ ಆಹಾರವಾಗುಳ್ಳವನಾಗಿಯೂ, ದಾಂತಃ-ಜಿತೇಂದ್ರಿಯನಾಗಿಯೂ, ಸುಮಹತ್-ಬಹಳವಾದ, ತಪಃ ತಪಸ್ಸನ್ನು, ಚಕಾರ-ಮಾಡಿದನು, ಅಥ-ಬಳಿಕ, ಅಸ್ಯ-ಈ ವಿಶ್ವಾಮಿತ್ರನಿಗೆ, ಸತ್ಯಧರ್ಮಪರಾಯಣಾಃ - ಸತ್ಯದಲ್ಲಿಯೂ ಧರ್ಮದಲ್ಲಿಯೂ ಆಸಕ್ತರಾದ, ಹವಿಷ್ಯಂದಃ-ಹವಿಷ್ಯಂದನು, ಮಧುಷ್ಯಂದಃ-ಮಧುಷ್ಯಂದನು, ಮಹಾರಥಃ - ಮಹಾರಥಿಕನಾದ, ದೃಢನೇತ್ರಃ-ದೃಢನೇತ್ರನೆಂಬ, ಪುತ್ರಾಃ-ಮಕ್ಕಳು, ಜಜ್ಞಿರೇ - ಹುಟ್ಟಿದರು. ॥ ೩ ॥ ವರ್ಷಸಹಸ್ರೇತು-ಸಾವಿರ ವರ್ಷಗಳು, ಪೂರ್ಣೇತು - ಸಂಪೂರ್ಣವಾಗಲು, ಲೋಕಪಿತಾಮಹಃ-ಜನಗಳಿಗೆ ತಂದೆಯಾದ, ಬ್ರಹ್ಮಾ ಚತುರ್ಮುಖನು, ತಪೋಧನಂ-ತಪಸ್ಸೇಧನವಾಗುಳ್ಳ, ವಿಶ್ವಾಮಿತ್ರಂ-ವಿಶ್ವಾ

---

" ಕೇಳೆಯ್ಯಾ ರಘುಕುಲೋತ್ಪನ್ನನಾದ ರಾಮಚಂದ್ರನೆ ! ಇಂತು ಮಹಾತ್ಮನಾದ ವಸಿಷ್ಠನೊಡನೆ ಹಗೆತನವನ್ನು ಮಾಡಿದ ವಿಶ್ವಾಮಿತ್ರನು ತನ್ನ ಪರಾಜಯವನ್ನು ಸ್ಮರಿಸಿ, ಸ್ಮರಿಸಿ, ನಿಟ್ಟುಸಿರುಗಳನ್ನು ಬಿಡುತ್ತಾ, ಸತೀಮಣಿಯಿಂದೊಡಗೂಡಿ, ದಕ್ಷಿಣ ದಿಗ್ಭಾಗವನ್ನು ಸೇರಿ, ಕಂದಮೂಲಗಳನ್ನೇ ಆಹಾರವನ್ನಾಗಿ ಮಾಡಿಕೊಂಡು, ಮನವನ್ನು ನಿಗ್ರಹಿಸಿ ಶ್ರೇಷ್ಠವಾಗಿಯೂ, ಘೋರವಾಗಿಯೂ ಇರುವ ತಪವನ್ನಾಚರಿಸಿದನು. ಆ ಬಳಿಕ ಮಹಾತ್ಮನಾದ ಈ ವಿಶ್ವಾಮಿತ್ರನಿಗೆ ಸತ್ಯದಲ್ಲಿಯೂ ಧರ್ಮದಲ್ಲಿಯೂ ನಿರತರಾದ ಹವಿಷ್ಯಂದ, ಮಧುಷ್ಯಂದ, ದೃಢನೇತ್ರರೆಂಬ ಮೂವರು ಮಕ್ಕಳುಂಟಾದರು. ॥ ೩ ॥

ಮಹಃ ॥ ಅಬ್ರವೀನ್ಮಧುರಂ ವಾಕ್ಯಂ ವಿಶ್ವಾಮಿತ್ರಂ ತಪೋಧನಂ ॥ ೪ ॥
ಜಿತಾ ರಾಜರ್ಷಿಲೋಕಾಸ್ತೇ ತಪಸಾ ಕುಶಿಕಾತ್ಮಜ ॥ ಅನೇನ ತಪಸಾತ್ವಾಂತು
ರಾಜರ್ಷಿ ರಿತಿವಿದ್ಮಹೇ ॥ ೫ ॥ ಏವಮುಕ್ತ್ವಾ ಮಹಾತೇಜಾ ಜಗಾಮ
ಸಹದೈವತೈಃ ॥ ತ್ರಿವಿಷ್ಟಪಂ ಬ್ರಹ್ಮಲೋಕಂ ಲೋಕಾನಾಂ ಪರಮೇಶ್ವರಃ
॥ ೬ ॥ ವಿಶ್ವಾಮಿತ್ರೋಪಿ ತಚ್ಛ್ರುತ್ವಾ ಹ್ರಿಯಾ ಕಿಂಚಿದವಾಙ್ಮುಖಃ ॥
ದುಃಖೇನ ಮಹತಾವಿಷ್ಟ ಸ್ಸಮನ್ಯು ರಿದಮಬ್ರವೀತ್ ॥ ೭ ॥ ತಪಶ್ಚ ಸುಮ
ಹತ್ತಪ್ತಂ ರಾಜರ್ಷಿರಿತಿ ಮಾಂವಿದುಃ ॥ ದೇವಾಸ್ಸರ್ಷಿ ಗಣಾಸ್ಸರ್ವೇ ನಾಸ್ತಿ

---

ಮಿತ್ರನನ್ನು ಕುರಿತು, ಮಧುರಂ- ರುಚಿಕರವಾದ, ವಾಕ್ಯಂ-ಮಾತನ್ನು, ಅಬ್ರವೀತ್ - ನುಡಿದನು. ||೪|| ಹೇಕುಶಿಕಾತ್ಮಜ-ಎಲೈವಿಶ್ವಾಮಿತ್ರನೇ, ತೇ-ನಿನ್ನ, ತಪಸಾ-ತಪಸ್ಸಿನಿಂದ, ರಾಜರ್ಷಿಲೋಕಾಃ-ರಾಜರ್ಷಿಗಳಿಂದ ಪ್ರಾಪ್ತವಾದ ಲೋಕಗಳು, ಜಿತಾಃ - ಜಯಿಸಲ್ಪಟ್ಟವು, ಅನೇನ ತಪಸಾ-ಈ ತಪಸ್ಸಿನಿಂದ, ತ್ವಾಂತು ನಿನ್ನನ್ನು, ರಾಜರ್ಷಿರಿತಿ-ರಾಜರ್ಷಿಯೆಂದು, ವಿದ್ಮಹೇ-ತಿಳಿಯುತ್ತೇವೆ ||೫|| ಏವಂ-ಈಪರಿ, ಉಕ್ತ್ವಾ-ಹೇಳಿ, ಲೋಕಾನಾಂ-ಲೋಕಗಳಿಗೆ, ಪರಮೇಶ್ವರಃ-ಪರಮಸ್ವಾಮಿಯಾದ, ಮಹಾತೇಜಾಃ-ಮಹಾ ತೇಜೋವಂತನಾದ ಬ್ರಹ್ಮನು,ದೈವತೈಸ್ಸಹ-ದೇವತೆಗಳೊಡನೆ, ತ್ರಿವಿಷ್ಟಪಂ-ಸ್ವರ್ಗಲೋಕವನ್ನು, ಬ್ರಹ್ಮಲೋಕಂ-ಸತ್ಯಲೋಕವನ್ನು ಕುರಿತು, ಜಗಾಮ-ತೆರಳಿದನು (೧) ||೬|| ವಿಶ್ವಾಮಿತ್ರೋಪಿ-ವಿಶ್ವಾಮಿತ್ರನೂ, ತತ್-ಆ ಬ್ರಹ್ಮವಚನವನ್ನು, ಶ್ರುತ್ವಾ-ಕೇಳಿ, ಹ್ರಿಯಾ-ನಾಚಿಕೆಯಿಂದ, ಕಿಂಚಿತ್-ಕೊಂಚ, ಅವಾಙ್ಮುಖಃ-ತಲೆಬಗ್ಗಿಸಿ, ಮಹತಾ - ಬಹಳವಾದ, ದುಃಖೇನ-ವ್ಯಸನದಿಂದ, ಆವಿಷ್ಟಃ-ಆಕ್ರಾಂತನಾಗಿ, ಸಮನ್ಯುಃ-ಕೋಪದಿಂದೊಡಗೂಡಿ, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು. ||೭|| ಸುಮಹತ್-ಬಹಳವಾದ, ತಪಶ್ಚ- ತಪಸ್ಸೂ, ತಪ್ತಂ- ಮಾಡಲಾಯಿತು, ಸರ್ಷಿಗಣಾಃ-ಋಷಿಗಳ ಗುಂಪುಗಳಿಂದೊಡಗೂಡಿದ, ಸರ್ವೇ-ಸಮಸ್ತ, ದೇವಾಃ - ದೇವತೆಗಳು, ಮಾಂ-ನನ್ನನ್ನು, ರಾಜರ್ಷಿರಿತಿ-ರಾಜರ್ಷಿಯೆಂದು, ವಿದುಃ-ತಿಳಿಯುತ್ತಾರೆ, ತಪಃ-ತಪಸ್ಸಿಗೆ,

---

ಹೀಗೆ ಒಂದು ಸಾವಿರ ವರ್ಷಗಳು ಪೂರ್ಣವಾಗಲು ಲೋಕಪಿತಾಮಹನಾದ ಬ್ರಹ್ಮನು ಈ ವಿಶ್ವಾಮಿತ್ರ ಮುನಿಯನ್ನು ಕುರಿತು, ಮೃದುಮಧುರವಾಗಿ "ಅಯ್ಯಾ ಕುಶಿಕಕುಮಾರನೆ ತಪಸ್ಸಿನಿಂದ ರಾಜರ್ಷಿಲೋಕಗಳೆಲ್ಲವನ್ನೂ ಗೆದ್ದವನಾದೆ. ಅಮೋಘವಾದ ನಿನ್ನೀ ತಪಸ್ಸಿನಿಂದ ನಾವೆಲ್ಲರೂ ನಿನ್ನನ್ನು ರಾಜರ್ಷಿಯೆಂದು ಗಣಿಸುತ್ತೇವೆ," ಎಂದನು. ಇಂತು ನುಡಿದ ಅಷ್ಟೈಶ್ವರ್ಯ ಸಂಪನ್ನನೂ, ಮಹಾ ತೇಜಸ್ವಿಯೂ ಆದ ಬ್ರಹ್ಮನು ದೇವತೆಗಳಿಂದೊಡಗೂಡಿ ತನ್ನ ಲೋಕವನ್ನು ಕುರಿತು ಹೊರಟುಹೋದನು. ಆಗಲಾ ವಿಶ್ವಾಮಿತ್ರನು ಬ್ರಹ್ಮನಾಡಿದ ನುಡಿಗಳನ್ನು ಕೇಳಿ, ಲಜ್ಜೆಯಿಂದ ತಗ್ಗಿದ ಮುಖವುಳ್ಳವನಾಗಿ ಮಹತ್ತರವಾದ ದುಃಖದಿಂದೊಡಗೂಡಿ ಕೋಪದಿಂದೀರೀತಿ ನುಡಿದನು. "ಅಕಟಕಟ ? ಮಹತ್ತರವಾದ

---

ಟಿ ॥ (೧) ಅಂದರೆ ದೇವತೆಗಳು ಸ್ವರ್ಗಲೋಕವನ್ನೂ, ಬ್ರಹ್ಮನು ಸತ್ಯಲೋಕವನ್ನೂ ಹೊಂದಿದರೆಂದು ಭಾವವು.

ಮನ್ಯೇ ತಪಃ ಫಲಂ ॥ ೮ ॥ ಇತಿನಿಶ್ಚಿತ್ಯ ಮನಸಾ ಭೂಯಏವ ಮಹಾ ತಪಾಃ ॥ ಕ್ರೋಧೇನ ಮಹತಾ ವಿಷ್ಟಸ್ತ್ರೈಲೋಕ್ಯಂ ವ್ಯಥಯನ್ನಿವ ॥೯॥ ತಪಶ್ಚಕಾರ ಕಾಕುತ್ಸ್ಥ ಪರಮಂ ಪರಮಾತ್ಮವಾನ್ ॥ ಏತಸ್ಮಿನ್ನೇವ ಕಾಲೇತು ಸತ್ಯವಾದೀ ಜಿತೇಂದ್ರಿಯಃ ॥ ೧೦ ॥ ತ್ರಿಶಂಕುರಿತಿ ವಿಖ್ಯಾತಃ ಇಕ್ಷ್ವಾಕು ಕುಲವರ್ಧನಃ ॥ ತಸ್ಯ ಬುದ್ಧಿಸ್ಸಮುತ್ಪನ್ನಾ ಯಜೇಯಮಿತಿ ರಾಘವ ॥೧೧॥

---

ಫಲಂ-ಫಲವು, ನಾಸ್ತೀತಿ-ಇಲ್ಲವೆಂದು, ಮನ್ಯೇ-ಎಣಿಸಿದೇನೆ. ॥೮॥ ಇತಿ-ಇಂತೆಂದು, ಮನಸಾ-ಮನಸ್ಸಿನಲ್ಲಿ, ನಿಶ್ಚಿತ್ಯ-ನಿಶ್ಚಯಿಸಿ, ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ಮಹತಾ-ಅಧಿಕವಾದ,ಕ್ರೋಧೇನ-ಕೋಪದಿಂದ, ಆವಿಷ್ಟಃ-ಆಕ್ರಮಿಸಲ್ಪಟ್ಟ,ಮಹಾತಪಾಃ-ಮಹಾತಪಸ್ವಿಯಾದ ವಿಶ್ವಾಮಿತ್ರನು, ಭೂಯಏವ-ಮತ್ತೂ, ಪರಮಾತ್ಮವಾನ್ - ಅತಿಶಯವಾದ ಯತ್ನವುಳ್ಳವನಾಗಿ, ತ್ರೈಲೋಕ್ಯಂ-ಲೋಕತ್ರಯವನ್ನು, ವ್ಯಥಯನ್ನಿವ - ದುಃಖಗೊಳಿಸುವಂತೆ, ಪರಮಂ - ಶ್ರೇಷ್ಠವಾದ, ತಪಃ-ತಪಸ್ಸನ್ನು, ಚಕಾರ-ಮಾಡಿದನು. ॥೯॥ ಏತಸ್ಮಿನ್ಕಾಲ ಏವ - ಇದೇ ಕಾಲದಲ್ಲಿಯೇ, ಸತ್ಯವಾದೀ-ಸತ್ಯವಾಕ್ಕುಳ್ಳ, ಜಿತೇಂದ್ರಿಯಃ-ಜಿತೇಂದ್ರಿಯನಾದ, ಇಕ್ಷ್ವಾಕುಕುಲವರ್ಧನಃ-ಇಕ್ಷ್ವಾಕು ವಂಶವನ್ನು ವೃದ್ಧಿಗೊಳಿಸುತ್ತಿರುವ, ತ್ರಿಶಂಕುರಿತಿ-(೧)ತ್ರಿಶಂಕುವೆಂಬ ಅರಸು,ವಿಖ್ಯಾತಃ-ಪ್ರಖ್ಯಾತನಾದನು॥೧೦॥ ಹೇರಾಘವ-ಎಲೈ ಶ್ರೀರಾಮನೆ, ತಸ್ಯ- ಆ ತ್ರಿಶಂಕುರಾಯನಿಗೆ, ಯಜೇಯಂ - ಯಜ್ಞಮಾಡುವೆನು, ಸಶರೀರೇಣ-ಶರೀರದಿಂದೊಡಗೂಡಿ, ದೇವಾನಾಂ-ದೇವತೆಗಳ, ಪರಮಾಂ - ಉತ್ಕೃಷ್ಟವಾದ, ಗತಿಂ-ಸ್ವರ್ಗಲೋಕವನ್ನು, ಗಚ್ಛೇಯಂ-ಹೊಂದುವೆನು,ಇತಿ-ಇಂತೆಂದು,ಬುದ್ಧಿಃ-ಬುದ್ಧಿಯು, ಸಮುತ್ಪನ್ನಾ-ಹುಟ್ಟಿತು. ॥೧೧॥ ಸಃ- ಆ ತ್ರಿಶಂಕುರಾಯನು, ವಸಿಷ್ಠಂ- ವಸಿಷ್ಠಋಷಿಯನ್ನು, ಸಮಾಹೂಯ-

---

ತಪವಂತೂ ಆಚರಿಸಲಾಯಿತು. ಇಷ್ಟಾದರೂ, ಋಷಿಗಣಗಳಿಂದೊಡಗೂಡಿದ ದೇವತೆಗಳೆಲ್ಲರೂ ನನ್ನನ್ನು ರಾಜರ್ಷಿಯೆಂದು ತಿಳಿದವರಾದರು. ಇದರಿಂದ ತಪಸ್ಸಿಗೆ ಸರಿಯಾದ ಫಲವೇ ಇಲ್ಲವೆಂಮ ತಿಳಿಯುತ್ತೇನೆ" ಈ ಪ್ರಕಾರವಾಗಿ ನಿಶ್ಚಯಿಸಿದ ಮಹಾ ತಪಸ್ವಿಯಾದ ವಿಶ್ವಾಮಿತ್ರನು ಅತಿಯಾದ ಕೋಪದಿಂದಾವೃತನಾಗಿ, ತನ್ನ ತಪೋಬಲದಿಂದಲೇ ಮೂರು ಲೋಕಗಳನ್ನೂ ವ್ಯಥೆಗೊಳಿಸುವಂತೆ ಮರಳಿಯೂ ಶ್ರೇಷ್ಠವಾದ ತಪವಂ ಗೈದವನಾದನು ॥ ೧೦ ॥ ಅಯ್ಯಾ ರಾಮಚಂದ್ರನೆ ! ಇದೇ ಕಾಲದಲ್ಲಿ ಸತ್ಯವಂತನೂ, ಇಂದ್ರಿಯಗ್ರಾಮಗಳನ್ನು ಗೆದ್ದವನೂ, ಇಕ್ಷ್ವಾಕು ರಾಯನ ವಂಶಸ್ಥನೂ ಆದ ತ್ರಿಶಂಕುವೆಂಬ ರಾಜ

---

ಟಿ ॥ (೧) "ಇಕ್ಷ್ವಾಕುಕುಲವರ್ಧನಃ ತ್ರಿಶಂಕುರಿತಿವಿಖ್ಯಾತಃ" ಎಂದು ಹೇಳಲ್ಪಟ್ಟಿದೆ. ಆದರೆ ಇಕ್ಷ್ವಾಕು ಕುಲದಲ್ಲಿ ತ್ರಿಶಂಕುವೆಂಬ ರಾಜನಾರೂ ಇರಲಿಲ್ಲ ಆದರೆ ಈ ರಾಯರ ವಂಶದಲ್ಲಿ ಸತ್ಯವ್ರತನೆಂಬ ರಾಜನೊಬ್ಬನಿದ್ದನು. ಇವನು ಅರುಣನೆಂಬುವನ ಮಗನು. ಈ ಸತ್ಯವ್ರತನು ಮಹಾ ಕಾಮಿ. ಸ್ವೇಚ್ಛಾಗಾಮಿಯೂ ಆಗಿದ್ದನು ಇವನು ಬ್ರಾಹ್ಮಣಸ್ತ್ರೀಗಮನ, ಕಾಮಧೇನುವಧ, ತಂದೆಗೆ ಅಹಿತನಾಗಿರುವಿಕೆಯೆಂಬ ಮೂರು ಪಾಪಗಳನ್ನು ಮಾಡಿದನು. ಈತನು, ಕಾಮಧೇನುವನ್ನೊಳಗೊಂಡ ವಸಿಷ್ಠನಿಂದೀರೀತಿ ಶಪಿಸಲ್ಪಟ್ಟನು.

"ಗೋವಧಾದ್ದಾರಹರಣಾತ್ಪಿತಃ ಕ್ರೋಧಾತ್ತಥಾಭೃಶಂ । ತ್ರಿಶಂಕುರಿತಿನಾಮ್ನಾ ವೈಭುವಿಖ್ಯಾತೋ ಭವಿಷ್ಯಸಿ ॥ (೭ನೇ ಸ್ಕಂಧ ೧೧ನೇ ಆಧ್ಯಾಯ ೫೫ನೇ ಶ್ಲೋಕ.)

ಈ ವಿಷಯವು ದೇವೀಭಾಗವತದಲ್ಲಿ ಹೇಳಲ್ಪಟ್ಟಿದೆ.

ಗಚ್ಛೇಯಂ ಸಶರೀರೇಣ ದೇವಾನಾಂ ಪರಮಾಂ ಗತಿಂ || ಸವಸಿಷ್ಠಂ ಸಮಾಹೂಯ ಕಥಯಾಮಾಸ ಚಿಂತಿತಂ ||೧೨|| ಅಶಕ್ಯಮಿತಿ ಚಾಪ್ಯುಕ್ತೋ ವಸಿಷ್ಠೇನ ಮಹಾತ್ಮನಾ || ಪ್ರತ್ಯಾಖ್ಯಾತೋ ವಸಿಷ್ಠೇನ ಸಯಯೌ ದಕ್ಷಿಣಾಂ ದಿಶಂ ||೧೩|| ತತಸ್ತತ್ಕರ್ಮ ಸಿದ್ಧ್ಯರ್ಥಂ ಪುತ್ರಾಂಸ್ತಸ್ಯ ಗತೋನೃಪಃ||

---

ಕರೆದು, ಚಿಂತಿತಂ - ಮನಸಾಭೀಷ್ಟಾರ್ಥವನ್ನು, ಕಥಯಾಮಾಸ ಹೇಳಿದನು, ಮಹಾತ್ಮನಾ- ಮಹಾನುಭಾವನಾದ, ವಸಿಷ್ಠೇನ -ವಸಿಷ್ಠಋಷಿಯಿಂದ, ಅಶಕ್ಯಮಿತಿ (೧) ಅಸಾಧ್ಯವೆಂದು, ಉಕ್ತೋಪಿಚ-ಹೇಳಲ್ಪಟ್ಟನು. ||೧೨|| ವಸಿಷ್ಠೇನ ವಸಿಷ್ಠನಿಂದ, ಪ್ರತ್ಯಾಖ್ಯಾತಃ - ನಿರಾಕೃತನಾದ, ಸನೃಪಃ-ಆ ತ್ರಿಶಂಕುಮಹಾರಾಯನು, ದಕ್ಷಿಣಾಂದಿಶಂ ದಕ್ಷಿಣದಿಕ್ಕನ್ನು ಕುರಿತು, ಯಯೌ-ತೆರಳಿದನು, ತತಃ-ಬಳಿಕ, ತತ್ಕರ್ಮಸಿಧ್ಯರ್ಥಂ-ತಾನು ಉದ್ದೇಶಿಸಿದ್ದ ಸರೀರ ಸ್ವರ್ಗಾರೋಹಣಕಾರ್ಯಸಿದ್ಧಿಗಾಗಿ,ತಸ್ಯ-ಆ ವಸಿಷ್ಠಋಷಿಯ, ಪುತ್ರಾನ್-ಮಕ್ಕಳನ್ನು ಕುರಿತು, ಗತಃ-ಹೋದನು. ||೧೩|| ಯತ್ರ- ಯಾವಸ್ಥಳದಲ್ಲಿ, ದೀರ್ಘತಪಸಃ-ಬಹುಕಾಲದಿಂದ ತಪಸ್ಸುಮಾಡುವ, ವಾಸಿಷ್ಠಾಃ - ವಸಿಷ್ಠರಮಕ್ಕಳು, ತಪಃ-ತಪಸ್ಸನ್ನು, ತೇಪಿರೇ-ಮಾಡುತ್ತಾರೊ, ಸುಮಹಾತೇಜಾಃ - ಮಹಾಪರಾಕ್ರಮಶಾಲಿಯಾದ, ತ್ರಿಶಂಕುಃ-ತ್ರಿಶಂಕುಮಹಾರಾಯನು, ತತ್ರ-ಆ ಸ್ಥಳದಲ್ಲಿ, ತಪ್ಯಮಾನಾನ್ - ತಪಿಸುತ್ತಿರುವ, ಯಶಸ್ವಿನಃ-ಕೀರ್ತಿವಂತರಾದ, ಪರಮಭಾಸ್ವರಂ-ಬಹಳವಾಗಿ ಹೊಳೆಯುತ್ತಿರುವ, ಶತಂ - ನೂರುಸಂಖ್ಯೆ

---

ನೋರ್ವನಿದ್ದನು. ಈತನಿಗೆ "ಯಜ್ಞವಂ ಗೈದು, ದೇವತೆಗಳಿಗೆ ಆವಾಸ ಸ್ಥಾನವಾದ ಸ್ವರ್ಗಲೋಕಕ್ಕೆ ಸಶರೀರದಿಂದಲೇ ಹೋಗಬೇಕು" ಎಂಬ ಬುದ್ಧಿಯುಂಟಾಯಿತು. ||೧೨|| ಆಗಲಾ ತ್ರಿಶಂಕುರಾಯನು ತನ್ನ ಕುಲಪುರೋಹಿತನಾದ ವಸಿಷ್ಠ ಋಷಿಯನ್ನು ಕರೆಯಿಸಿ ತನ್ನ ಅಭಿಪ್ರಾಯವನ್ನು ತಿಳಿಸಿದನು. ಅವಕ್ಕಾಮುನಿಯು, ಸಶರೀರ ಸ್ವರ್ಗಾರೋಹಣ ಫಲವನ್ನೀಯುವ ಯಾಗವು ಅಸಾಧ್ಯವೆಂದು ಹೇಳಿದವನಾದನು. ಈ ರೀತಿ ವಸಿಷ್ಠಮುನಿಯಿಂದ ತಿರಸ್ಕೃತನಾದ ಆ ತ್ರಿಶಂಕುವು ತನ್ನ ಕಾರ್ಯಸಿದ್ಧಿಗೋಸುಗ, ದಕ್ಷಿಣ ದಿಗ್ಭಾಗದಲ್ಲಿ ಮಹತ್ತರವಾದ ತಪವಂ ಗೈಯ್ಯುತ್ತಿರುವ ವಸಿಷ್ಠ ಮುನಿಯ ಕುಮಾರ

---

ಟಿ || (೧) "ಅಶಕ್ಯಮಿತಿಚಾಪ್ಯುಕ್ತಃ" ಎಂದು ವಾಲ್ಮೀಕಿಯು ಹೇಳಿರುವ ವಿಷಯದಲ್ಲಿ ಕೆಲವರು ಹೀಗೆ ಸಂಶಯಪಡಬಹುದು. "ಸತ್ಯವಾದೀ - ಜಿತೇಂದ್ರಿಯಃ - ಈಕ್ಷ್ವಾಕುಲವರ್ಧನಃ" ಎಂಬೀ ಪ್ರಕಾರವಾಗಿ ತ್ರಿಶಂಕು ರಾಜನಿಗೆ ವಿಶೇಷಣಗಳಿರುವುವು ಜಿತೇಂದ್ರಿಯನಾದವನು ಮೂರು ಲೋಕಗಳನ್ನೂ ಗೆಲ್ಲಬಹುದು ಸತ್ಯವಾದಿಯು ಲೋಕಪೂಜ್ಯನೆನಿಸುವನು. ಈ ಎರಡು ಗುಣಗಳೊಂದಿಗೆ ಕುಲವರ್ಧಕತ್ವವೂ ತ್ರಿಶಂಕುವಿಗಿರುವುದು. ಇದೇ ಗುಣಗಳನ್ನೊಡಗೊಂಡಿದ್ದ ನಹುಷಾದಿಗಳು ಸಶರೀರದಿಂದಲೇ ಸ್ವರ್ಗವನ್ನು ಸೇರಿದರೆಂದು ಪುರಾಣಗಳಿಂದ ತಿಳಿದುಬರುವುದು ಶತಾಶ್ವಮೇಧಯಾಗಕರಣದಿಂದ ಇಂದ್ರಪದವಿಯು ದೊರಕುವುದೆಂಬುದನ್ನು ಬೇರೆ ಹೇಳಿರುತ್ತಾರೆ. ಹೀಗಿರುವಲ್ಲಿ ಸಶರೀರದಿಂದಲೇ ಸ್ವರ್ಗವನ್ನು ಬಯಸಿದ ತ್ರಿಶಂಕುವಿಗೆ ವಸಿಷ್ಠ ಮುನಿಯು ಯಾಗವನ್ನೇಕೆ ಮಾಡಿಸಲಿಲ್ಲ ಎಂದರೆ ಇಲ್ಲಿ ಒಂದು ತತ್ವವಿರುವುದು. ಸ್ವಧರ್ಮನಿರತನಾಗಿ, ಅರಿಷಡ್ವರ್ಗಗಳನ್ನು ಗೆದ್ದು, ಶಮದಮಾದಿಗಳನ್ನು ಹೊಂದಿ, ವಿಕಲ್ಪಶೂನ್ಯನಾಗಿಯೂ, ಪ್ರತಿಫಲಾನವೇಕ್ಷಿಯಾಗಿಯೂ ಇರುವ ಮನುಜನು ಮೃತ್ಯುವನ್ನು ಗೆದ್ದು ಸಶರೀರದಿಂದಲೇ ಸ್ವರ್ಗವನ್ನೈದುವನು|| ಈ ರೀತಿ ಸ್ವರ್ಗವನ್ನು ಹೊಂದುವವನು ತಾನು ಸ್ವರ್ಗವನ್ನು ಸೇರಬೇಕೆಂಬ ಬಯಕೆಯನ್ನೇ ಹೊಂದಿರುವುದಿಲ್ಲ. ಇಲ್ಲಿ ತ್ರಿಶಂಕುವಿಗೆ ಸ್ವರ್ಗಾಪೇಕ್ಷೆಯುಂಟಾದುದರಿಂದಲೂ. ಅದನ್ನು ಹೊಂದುವುದಕ್ಕೆ ತಕ್ಕ ಗುಣಗಳನ್ನೊಳಗೊಂಡಿರಲಿಲ್ಲವಾದುದರಿಂದಲೂ ವಸಿಷ್ಠ ಋಷಿಯು ಅಶಕ್ಯವೆಂದು ಹೇಳಿರುತ್ತಾನೆ. ಈ ರೀತಿ ಹೇಳಿದುದು ತ್ರಿಶಂಕುವು ಸತ್ಯವ್ರತನಾಗಿದ್ದ ಕಾಲದಲ್ಲಿ.

ವಾಸಿಷ್ಠಾ ದೀರ್ಘತಪಸ ಸ್ತಪೋ ಯತ್ರಹಿ ತೇಪಿರೇ ॥ ೧೪ ॥ ತ್ರಿಶಂಕು ಸ್ಸುಮಹಾತೇಜಾ ಶ್ಶತಂ ಪರಮ ಭಾಸ್ವರಂ ॥ ವಸಿಷ್ಠಪುತ್ರಾ ನ್ದದೃಶೇ ತಪ್ಯ ಮಾನಾನ್ ಯಶಸ್ವಿನಃ ॥ ೧೫ ॥ ಸೋಭಿಗಮ್ಯ ಮಹಾತ್ಮಾನ ಸ್ಸರ್ವಾನೇವ ಗುರೋಸ್ಸುತಾನ್ ॥ ಅಭಿವಾದ್ಯಾನುಪೂರ್ವ್ಯೇಣ ಹ್ರಿಯಾ ಕಿಂಚಿದವಾಙ್ಮುಖಃ ॥ ೧೬ ॥ ಅಬ್ರವೀ ತ್ಸುಮಹಾಭಾಗಾನ್ ಸರ್ವಾನೇವ ಕೃತಾಂಜಲಿಃ ॥ ಶರಣಂವಃ ಪ್ರಪದ್ಯೇಹಂ ಶರಣ್ಯಾನ್ ಶರಣಾಗತಃ ॥೧೭॥ ಪ್ರತ್ಯಾಖ್ಯಾತೋಸ್ಮಿ ಭದ್ರಂ ವೋ ವಸಿಷ್ಠೇನ ಮಹಾತ್ಮನಾ ॥ ಯಷ್ಟುಕಾಮೋ ಮಹಾಯಜ್ಞಂ ತದನುಜ್ಞಾತು ಮರ್ಹಥ ॥ ೧೮ ॥ ಗುರುಪುತ್ರಾ ನಹಂ ಸರ್ವಾ ನ್ನಮ

---

ಯುಳ್ಳ, ವಸಿಷ್ಠಪುತ್ರಾನ್-ವಸಿಷ್ಠಋಷಿಯಮಕ್ಕಳನ್ನು, ದದೃಶೇ-ಕಂಡನು ॥೧೪॥ ಸಃ ಆ ತ್ರಿಶಂಕುರಾಯನು, ಮಹಾತ್ಮನಃ - ಮಹಾನುಭಾವರಾದ, ಗುರೋಃ - ಗುರುವಾದ ವಸಿಷ್ಠಋಷಿಯ, ಸರ್ವಾನ್-ಸುತಾನ್-ಕುಮಾರರೆಲ್ಲರನ್ನೂ ಕುರಿತು, ಅಭಿಗಮ್ಯ-ಹೋಗಿ, ಅನುಪೂರ್ವ್ಯೇಣ-ಕ್ರಮವಾಗಿ, ಅಭಿವಾದ್ಯ-ನಮಸ್ಕರಿಸಿ, ಹ್ರಿಯಾ-ನಾಚಿಕೆಯಿಂದ, ಅವಾಙ್ಮುಖಃ- ಅಧೋಮುಖನಾಗಿ, ಸುಮಹಾಭಾಗಾನ್ ಪುಣ್ಯಶಾಲಿಗಳಾದ, ಸರ್ವಾನೇವ-ಎಲ್ಲರನ್ನು ಕುರಿತು, ಕೃತಾಂಜಲಿಃ-ಅಂಜಲಿಬದ್ಧನಾಗಿ ಅಬ್ರವೀತ್-ನುಡಿದನು. ॥೧೬॥ ಅಹಂ ನಾನು, ಶರಣಾಗತಃ-ಶರಣಾಗತನಾಗಿ,ಶರಣ್ಯಾನ್-ಶರಣಾಗತಸಂರಕ್ಷಕರಾದ, ವಃ - ನಿಮ್ಮನ್ನು, ಶರಣಂ - ಶರಣವಾಗಿ, ಪ್ರಪದ್ಯೇ - ಹೊಂದಿರುವೆನು, ವಃ - ನಿಮಗೆ,ಭದ್ರಂ - ಶುಭವು, ಅಸ್ತು - ಆಗಲಿ, ಮಹಾತ್ಮನಾ - ಮಹಾನುಭಾವನಾದ, ವಸಿಷ್ಠೇನ - ವಸಿಷ್ಠ ಋಷಿಯಿಂದ, ಪ್ರತ್ಯಾಖ್ಯಾತಃ - ನಿರಾಕೃತನು, - ಅಸ್ಮಿ ಆದೆನು, ॥ ೧೭ ॥ ಮಹಾಯಜ್ಞಂ - ದೊಡ್ಡ ಯಜ್ಞವನ್ನು, ಯಷ್ಟುಕಾಮಃ - ಮಾಡಬೇಕೆಂಬ ಇಚ್ಛೆಯುಳ್ಳವನಾಗಿರುವೆನು, ಸರ್ವಾನ್ - ಸಮಸ್ತರಾದ, ಗುರುಪುತ್ರಾನ್ - ಗುರುಪುತ್ರರಾದ ನಿಮ್ಮನ್ನು, ನಮಸ್ಕೃತ್ಯ-ನಮಸ್ಕರಿಸಿ, ಪ್ರಸಾದಯೇ - ಹೇಳುತ್ತೇನೆ, ತತ್ - ಆ ಕಾರಣ, ಅನುಜ್ಞಾತುಂ-ಆ ಯಜ್ಞ ಕರ್ಮವನ್ನು ಮಾಡಿಸಲು, ಅರ್ಹಥ - ಯೋಗ್ಯರಾಗಿ. ॥ ೧೮ ॥ ಶಿರಸಾ - ಶಿರಸ್ಸಿನಿಂದ, ಪ್ರಣತಃ - ಪ್ರಣಾಮವಂ ಮಾಡಿದವನಾಗಿ, ತಪಸಿ - ತಪಸ್ಸಿನಲ್ಲಿ, ಸ್ಥಿತಾನ್ - ಇರುತ್ತಿರುವ, ಬ್ರಾಹ್ಮಣಾನ್-ಬ್ರಾಹ್ಮಣರನ್ನು ಕುರಿತು, ಯಾಚೇ - ಬೇಡುತ್ತೇನೆ, ತೇಭವಂತಃ - ಅಂತಹ ನೀವು, ಅಹಂ-ನಾನು, ಸಶರೀರಃ - ದೇಹಸಹಿತನಾಗಿ, ಯಥಾ - ಹೇಗೆ, ದೇವಲೋಕಂ - ಸ್ವರ್ಗಲೋಕವನ್ನು, ಅವಾ

---

ರಾದ ನೂರು ಮಂದಿಯನ್ನು ನೋಡಿದನು. ಆಗಲಾ ತ್ರಿಶಂಕುವು ಮಹಾತ್ಮರಾದ ಆ ಗುರುಪುತ್ರರೆಲ್ಲರನ್ನೂ ಕ್ರಮವಾಗಿ ನಮಸ್ಕರಿಸಿ, ಲಜ್ಜೆಯಿಂದ ಕೊಂಚ ತಗ್ಗಿದ ಮುಖವುಳ್ಳವನೂ, ಅಂಜಲಿಬದ್ಧನೂ ಆಗಿ, ಅವರನ್ನು ಕುರಿತು, "ಎಲೈ ಗುರುಪುತ್ರರಿರಾ! ಸಶರೀರವಾಗಿಯೇ ಸ್ವರ್ಗಕ್ಕೆ ತೆರಳುವ ಯಾಗವನ್ನು ಮಾಡಿಸೆಂದು ಬೇಡಿದ ನಾನು ನಿಮ್ಮ ತಂದೆಯೂ, ಮಹಾತ್ಮನೂ ಆದ ವಸಿಷ್ಠ ಮುನೀಶ್ವರನಿಂದ ತಿರಸ್ಕೃತನಾಗಿರುವೆನು. ಆದುದರಿಂದ ನೀವೇ ಗತಿಯೆಂದು, ಶರಣ್ಯರಾದ ನಿಮ್ಮಲ್ಲಿ ಇದೀಗ ನಾನು ಶರಣಾಗತನಾಗಿ ಬಂದಿರುವೆನು. ॥ ೧೮ ॥ ಗುರುಪುತ್ರರೂ, ಬ್ರಹ್ಮಜ್ಞಾನಿಗಳೂ, ಮಹಾ

ಸ್ಕೃತ್ಯ ಪ್ರಸಾದಯೇ ‖ ಶಿರಸಾಪ್ರಣತೋ ಯಾಚೇ ಬ್ರಾಹ್ಮಣಾಂ ಸ್ತಪಸಿ ಸ್ಥಿತಾರ್
‖ ೧೯ ‖ ತೇಮಾಂ ಭವಂತಸ್ಸಿದ್ಧ್ಯರ್ಥಂ ಯಾಜಯಂತು ಸಮಾಹಿತಾಃ ‖ ಸಶರೀರೋ ಯಥಾಹಂಹಿ ದೇವಲೋಕಮ ವಾಪ್ನುಯಾಂ ‖೨೦‖
ಪ್ರತ್ಯಾಖ್ಯಾತೋ ವಸಿಷ್ಠೇನ ಗತಿಮನ್ಯಾಂ ತಪೋಧನಾಃ ‖ ಗುರುಪುತ್ರಾನೃತೇ ಸರ್ವಾನ್ನಾಹಂ ಪಶ್ಯಾಮಿ ಕಾಂಚನ ‖ ೨೧ ‖
ಇಕ್ಷ್ವಾಕೂಣಾಂಹಿ ಸರ್ವೇಷಾಂ ಪುರೋಧಾಃ ಪರಮಾಗತಿಃ ‖ ಪುರೋಧಸಸ್ತು ವಿದ್ವಾಂಸಸ್ತಾರಯಂತಿ ಸದಾನೃಪಾನ್ ‖ ತಸ್ಮಾದನಂತರಂ ಸರ್ವೇ ಭವಂತೋ ದೈವತಂ ಮಮ ‖ ೨೨ ‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಪಂಚಾಶಸ್ಸರ್ಗಃ

---

ಪ್ನುಯಾಂ - ಹೊಂದುವೆನೊ, ತಥಾ - ಹಾಗೆ, ಮಾಂ - ನನ್ನನ್ನು ಕುರಿತು, ಸಿದ್ಧ್ಯರ್ಥಂ-ಸಶರೀರಸ್ವರ್ಗಾರೋಹಣಸಿದ್ಧ್ಯರ್ಥವಾಗಿ, ಯಾಜಯಂತು - ಯಜ್ಞಮಾಡಿಸರಿ,‖ ೧೯ ‖ ಹೇತಪೋಧನಾಃ-ಎಲೈ ಋಷಿಗಳಿರಾ, ವಸಿಷ್ಠೇನ - ವಸಿಷ್ಠ ಋಷಿಯಿಂದ, ಪ್ರತ್ಯಾಖ್ಯಾತಃ-ನಿರಾಕೃತನಾದ,ಸರ್ವಾನ್-ಸಮಸ್ತರಾದ, ಗುರುಪುತ್ರಾನೃತೇ - ಗುರುಪುತ್ರರಾದ ನಿಮ್ಮನ್ನು ಬಿಟ್ಟು, ಅಹಂ - ನಾನು, ಅನ್ಯಾಂ-ಮತ್ತೊಂದು, ಕಾಂಚನಗತಿಂ - ಯಾವ ಗತಿಯನ್ನೂ, ನಪಶ್ಯಾಮಿ - ನೋಡಲಿಲ್ಲ.‖೨೦‖ಹಿ-ಯಾವ ಕಾರಣ, ಸರ್ವೇಷಾಂ - ಸಮಸ್ತರಾದ, ಇಕ್ಷ್ವಾಕೂಣಾಂ - ಇಕ್ಷ್ವಾಕು ವಂಶಸ್ಥರಿಗೆ, ಪುರೋಧಾಃ - ಪುರೋಹಿತನೆ, ಪರಮಾ - ಉತ್ಕೃಷ್ಟವಾದ, ಗತಿಃ-ಗಮ್ಯಸ್ಥಾನವೊ, ವಿದ್ವಾಂಸಃ-ಪಂಡಿತರಾದ, ಪುರೋಹಿತಸ್ತು - ಪುರೋಹಿತರಾದರೆ, ಸದಾ - ಸರ್ವ ಕಾಲದಲ್ಲಿಯೂ, ನೃಪಾನ್-ಅರಸರನ್ನು, ತಾರಯಂತಿ - ಉದ್ಧಾರ ಮಾಡುತ್ತಾರೆ, ತಸ್ಮಾತ್ - ಆದುದರಿಂದ, ಅನಂತರಂ-ವಸಿಷ್ಠರಾದಬಳಿಕ, ಸರ್ವೇ - ಸಮಸ್ತರಾದ, ಭವಂತಃ - ನೀವು, ಮಮ - ನನಿಗೆ, ದೈವತಂ - ದೇವತಾಸ್ವರೂಪರು. ‖೨೨‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಪಂಚಾಶಸ್ಸರ್ಗಃ.

---

ತಪಸ್ವಿಗಳೂ ಆದ ನಿಮ್ಮೆಲ್ಲರಿಗೂ ಸಾಷ್ಟಾಂಗ ಪ್ರಣಾಮವಂ ಗೈದು ಬೇಡಿಕೊಳ್ಳುವೆನು. ಅಂತಹ ನೀವೆಲ್ಲರೂ ಶಾಂತಚಿತ್ತರಾಗಿ ಯಾಗವನ್ನು ಮಾಡಿಸಿ, ಸಶರೀರವಾಗಿಯೇ ಸ್ವರ್ಗಕ್ಕೆ ತೆರಳುವ ಹಾಗೆ ಮಾಡುವವರಾಗಿರಿ. ಎಲೈ ಮುನಿಗಳಿರಾ, ವಸಿಷ್ಠ ಋಷಿಯಿಂದ ತಿರಸ್ಕೃತನಾದ ನನಗೆ, ಗುರುಪುತ್ರರಾದ ನಿಮ್ಮನ್ನು ಬಿಟ್ಟು ಮತ್ತಾವ ಗತಿಯನ್ನೂ ಕಾಣೆನು. ಏಕೆಂದರೆ, ಇಕ್ಷ್ವಾಕು ರಾಯರೆಲ್ಲರಿಗೂ ಪುರೋಹಿತರೇ ಶ್ರೇಷ್ಠನಾದ ಗತಿಯು. ವಿದ್ವಾಂಸರಾದ ಈ ಪುರೋಹಿತರಾದರೋ ಯಾವಾಗಲೂ, ಈ ವಂಶದ ರಾಜರನ್ನು ಜ್ಞಾನೋಪದೇಶದಿಂದಲೂ, ಹಿತೋಪದೇಶದಿಂದಲೂ ಭವಚಕ್ರದಿಂದ ದಾಂಟಿಸುವರಲ್ಲವೆ? ಆದುದರಿಂದ ವಸಿಷ್ಠಮುನಿಯಾದಮೇಲೆ ನೀವೇ ನನಗೆದೇವತಾಸ್ವರೂಪರಾಗಿರುವಿರಿ." ಎಂದುಹೇಳಿದನು. ‖೨೩‖

ಇಂತಿದು ತ್ರಿಶಂಕು ವೃತ್ತಾಂತ ಕಥನನೆಂಬ ಐವತ್ತೇಳನೆಯ ಸರ್ಗವು

ಸಮಾಪ್ತವಾದುದು.

# ಬಾಲಕಾಂಡೇ ಅಷ್ಟಪಂಚಾಶಸ್ಸರ್ಗಃ.

---

ತತಸ್ತ್ರಿಶಂಕೋರ್ವಚನಂ ಶ್ರುತ್ವಾ ಕ್ರೋಧ ಸಮನ್ವಿತಂ ॥ ಋಷಿಪುತ್ರ ಶತಂ ರಾಮ ರಾಜಾನಮಿದ ಮಬ್ರವೀತ್ ॥೧॥ ಪ್ರತ್ಯಾಖ್ಯಾತೋಹಿ ದುರ್ಬುದ್ಧೇ ಗುರುಣಾ ಸತ್ಯವಾದಿನಾ ॥ ತಂಕಥಂ ಸಮತಿಕ್ರಮ್ಯ ಶಾಖಾಂತರ ಮುಪೇಯಿವಾನ್ ॥೨॥ ಇಕ್ಷ್ವಾಕೂಣಾಂ ಹಿ ಸರ್ವೇಷಾಂ ಪುರೋಧಾಃ ಪರಮೋ ಗುರುಃ ॥ ನಚಾತಿಕ್ರಮಿತುಂ ಶಕ್ಯಂ ವಚನಂ ಸತ್ಯವಾದಿನಃ ॥೩॥ ಅಶಕ್ಯಮಿತಿ ಚೋವಾಚ ವಸಿಷ್ಠೋ ಭಗವಾನ್ನೃಷಿಃ ॥ ತಂವಯಂ ವೈಸಮಾ

---

ಹೇರಾಮ - ಎಲೈ ಶ್ರೀರಾಮನೆ, ತತಃ - ಬಳಿಕ, ತ್ರಿಶಂಕೋಃ- ತ್ರಿಶಂಕುರಾಯನ, ವಚನಂ-ಮಾತನ್ನು, ಶ್ರುತ್ವಾ - ಕೇಳಿ, ಕ್ರೋಧಸಮನ್ವಿತಂ - ಕೋಪದಿಂದ ಕೂಡಿರುವ, ಋಷಿಪುತ್ರಶತಂ-ವಸಿಷ್ಠ ಋಷಿಯ ನೂರು ಮಕ್ಕಳ ಗುಂಪು, ರಾಜಾನಂ -ಅರಸನನ್ನು ಕುರಿತು, ಇದಂ_ಈಮಾತನ್ನು ಅಬ್ರವೀತ್ - ಹೇಳಿತು. ॥೧॥ ಹೇ ದುರ್ಬುದ್ಧೇ-ದುರ್ಬುದ್ಧಿಯುಳ್ಳವನೆ, ಸತ್ಯವಾದಿನಾ-ಯಥಾರ್ಥವನ್ನು ಹೇಳುತ್ತಿರುವ,ಗುರುಣಾ-ಗುರುವಾದವಸಿಷ್ಠಋಷಿಯಿಂದ, ಪ್ರತ್ಯಾಖ್ಯಾತಃ-ನಿರಾಕೃತನಾಗಿರುವೆ, ತಂ-ಅಂತಹ ಗುರುವನ್ನು, ಸಮತಿಕ್ರಮ್ಯ-ಅತಿಕ್ರಮಿಸಿ, ಕಥಂ-ಹೇಗೆ, ಶಾಖಾಂತರಂ-ಮತ್ತೊಂದಾಶ್ರಯವನ್ನು, ಉಪೇಯಿವಾನ್ - ಹೊಂದಿದವನಾದೆ. ॥ ೨ ॥ ಹಿ-ಯಾವ ಕಾರಣ್ಯ ಸರ್ವೇಷಾಂ - ಸಮಸ್ತರಾದ, ಇಕ್ಷ್ವಾಕೂಣಾಂ - ಇಕ್ಷ್ವಾಕು ವಂಶದ ರಾಜರಿಗೆ, ಪುರೋಧಾಃ-ಪುರೋಹಿತರಾದ ವಸಿಷ್ಠರೆ, ಪರಮೋಗುರುಃ - ಉತ್ಕೃಷ್ಟವಾದ ಗುರುವೊ, ತಸ್ಯ - ಅಂತಹ, ಸತ್ಯವಾದಿನಃ - ಸತ್ಯವಾದಿಯಾದ ವಸಿಷ್ಠ ಋಷಿಯ, ವಚನಂ - ಮಾತನ್ನು, ಅತಿಕ್ರಮಿತುಂ- ಉಲ್ಲಂಘಿಸಲು, ನಶಕ್ಯಂ - ಸಾಧ್ಯವಾದುದಲ್ಲ, ಭಗವಾನ್ - ಷಡ್ಗುಣೈಶ್ವರ್ಯ ಸಂಪನ್ನನಾದ, ಋಷಿಃ-ಋಷಿಯಾದ, ವಸಿಷ್ಠಃ - ವಸಿಷ್ಠ ಋಷಿಯು, ಅಶಕ್ಯಮಿತಿ - ಅಶಕ್ಯವೂ ಎಂದು, ಉವಾಚ- ಹೇಳಿದನೊ, ತವ - ನಿನ್ನ, ತಂ ಕ್ರತುಂ - ಅಂತಹ ಯಾಗವನ್ನು, ವಯುಂವೈ - ನಾವು, ಸಮಾಹರ್ತುಂ-ಮಾಡಿ

---

ಎಲೈ ರಘುಪುಂಗವನೆ ! ತ್ರಿಶಂಕು ರಾಯನೀರೀತಿ ನುಡಿಯಲು, ವಸಿಷ್ಠ ಮುನಿಯ ನೂರು ಮಂದಿ ಕುವರರೂ ಬಹಳವಾಗಿ ಕೋಪಗೊಂಡು ಅವನನ್ನು ಕುರಿತು, " ಎಲೈ ದುಷ್ಟಬುದ್ಧಿಯೆ ! ಸತ್ಯವಾದಿಯೂ ಗುರುವೂ ಆದ ವಸಿಷ್ಠ ಋಷಿಯಿಂದ ತಿರಸ್ಕೃತನಾಗಿರುವೆಯಷ್ಟೆ ? ಈಗ ಆತನನ್ನು ತ್ಯಜಿಸಿ ಬೇರೊಬ್ಬನನ್ನು ಹೇಗೆತಾನೆ ಆಶ್ರಯಿಸುವೆ ! ॥ ೨ ॥ ಎಲೈ ; ಇಕ್ಷ್ವಾಕು ರಾಜರೆಲ್ಲರಿಗೂ ಪುರೋಹಿತರೇ ಶ್ರೇಷ್ಠರಾದ ಗುರುಗಳಾಗಿರುವರು. ಸತ್ಯವಾದಿಗಳಾದ ಕುಲಗುರುಗಳ ಮಾತನ್ನು ಮೀರಲು ಸಾಧ್ಯವಲ್ಲ. ಪೂಜ್ಯರಾದ ವಸಿಷ್ಠರೇ ಅಸಾಧ್ಯವೆಂದು ಹೇಳಿದ ಯಾಗವನ್ನು ಅವರ ಮಕ್ಕಳಾದ ನಾವು ಹೇಗೆ

ಹರ್ತುಂ ಕ್ರತುಂಶಕ್ತಾಃ ಕಥಂತವ ॥ ೪ ॥ ಬಾಲಿಶಸ್ತ್ವಂ ನರಶ್ರೇಷ್ಠ ಗಮ್ಯತಾಂ ಸ್ವಪುರಂ ಪುನಃ ॥ ಯಾಜನೇ ಭಗವಾಂಚ್ಛಕ್ತ ಸ್ತ್ರೈಲೋಕ್ಯಸ್ಯಾಪಿ ಪಾರ್ಥಿವ ॥ ೫ ॥ ಅವಮಾನಂ ಚ ತತ್ಕರ್ತುಂ ತಸ್ಯ ಶಕ್ಷ್ಯಾಮಹೇ ಕಥಂ ॥ ತೇಷಾಂ ತದ್ವಚನಂ ಶ್ರುತ್ವಾ ಕ್ರೋಧ ಪರ್ಯಾಕುಲಾಕ್ಷರಂ ॥೬॥ ಸರಾಜಾ ಪುನರೇವೈತಾನಿದಂ ವಚನಮಬ್ರವೀತ್ ॥ ಪ್ರತ್ಯಾಖ್ಯಾತೋಸ್ಮಿ ಗುರುಣಾ ಗುರು ಪುತ್ರೈ ಸ್ತಥೈವಚ ॥೭॥ ಅನ್ಯಾಂಗತಿಂ ಗಮಿಷ್ಯಾಮಿ ಸ್ವಸ್ತಿವೋಸ್ತು ತಪೋಧನಾಃ ॥ ಋಷಿಪುತ್ರಾಸ್ತು ತಚ್ಛ್ರುತ್ವಾ ವಾಕ್ಯಂ ಘೋರಾಭಿ ಸಂಹಿತಂ ॥೮॥

---

ಸಲು, ಕಥಂ ಶಕ್ತಾಃ - ಹೇಗೆ ತಾನೆ ಶಕ್ತರಾದೇವು, ॥ ೪ ॥ ಹೇನರಶ್ರೇಷ್ಠ - ಎಲೈ ಮನುಜ ಶ್ರೇಷ್ಠನೆ, ತ್ವಂ - ನೀನು, ಬಾಲಿಶಃ - ಮೂರ್ಖನು, ಪುನಃ - ಮತ್ತು, ಸ್ವಪುರಂ - ನಿನ್ನ ಪಟ್ಟಣ ವನ್ನು ಕುರಿತು, ಗಮ್ಯತಾಂ - ಪ್ರಯಾಣ ಮಾಡಲ್ಪಡಲಿ, ಹೇಪಾರ್ಥಿವ- ಎಲೈ ಅರಸೆ, ಭಗವಾನ್- ಪೂಜ್ಯನಾದ ವಸಿಷ್ಠ ಋಷಿಯು, ತ್ರೈಲೋಕ್ಯಸ್ಯಾಪಿ - ತ್ರಿಲೋಕವರ್ತಿಗಳಾದ ಜನರೆಲ್ಲರಿಗೂ, ಯಾಜನೇ - ಯಜ್ಞಮಾಡಿಸುವಿಕೆಯಲ್ಲಿ, ಶಕ್ತಃ - ಸಮರ್ಥನು, ॥ ೫ ॥ ತತ್ - ಆ ಕಾರಣ, ತಸ್ಯ - ಆ ವಸಿಷ್ಠ ಋಷಿಗೆ, ಅವಮಾನಂ - ತಿರಸ್ಕಾರವನ್ನು, ಕರ್ತುಂ - ಮಾಡಲು, ಕಥಂ ಹೇಗೆ, ಶಕ್ಷ್ಯಾಮಹೇ - ಸಮರ್ಥರಾದೇವು, ತೇಷಾಂ - ಆ ಋಷಿಗಳ, ಕ್ರೋಧಪರ್ಯಾಕುಲಾಕ್ಷರಂ-ಕೋಪ ದಿಂದೊಡಗೂಡಿದ, ಅಕ್ಷರಗಳುಳ್ಳ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಸರಾಜಾ - ಆ ತ್ರಿಶಂಕು ರಾಯನು, ಪುನರೇವ - ಮತ್ತು, ಏತಾನ್- ಈ ಋಷಿಪುತ್ರರನ್ನು ಕುರಿತು, ಇದಂವಚನಂ- ಈ ಮಾತನ್ನು, ಅಬ್ರವೀತ್ - ನುಡಿದನು, ಹೇತಪೋಧನಾಃ - ಎಲೈ ಋಷಿಗಳಿರಾ ! ಗುರುಣಾ- ಪುರೋಹಿತರಾದ ವಸಿಷ್ಠ ಋಷಿಯಿಂದಲೂ, ತಥೈವ - ಹಾಗೆಯೆ, ಗುರುಪುತ್ರೈಶ್ಚ - ಗುರುಪುತ್ರ ರಾದ ನಿಮ್ಮಿಂದಲೂ, ಪ್ರತ್ಯಾಖ್ಯಾತಃ-ನಿರಾಕೃತನು, ಅಸ್ಮಿ-ಆದೆನು, ವಃ-ನಿಮಗೆ, ಸ್ವಸ್ತಿ-ಶುಭವು, ಅಸ್ತು - ಆಗಲಿ, ಅನ್ಯಾಂ - ಮತ್ತೊಂದಾದ, ಗತಿಂ - ಯಾಜಕಾಂತರ ರೂಪವಾದ ಗತಿಯನ್ನು, ಗಮಿಷ್ಯಾಮಿ - ಹೊಂದುವೆನು. ॥ ೭ ॥ ಋಷಿಪುತ್ರಾಸ್ತು - ವಸಿಷ್ಠಋಷಿ ಮಕ್ಕಳು, ಘೋರಾಭಿ ಸಹಿತಂ - ಕ್ರೂರಾಭಿಪ್ರಾಯವುಳ್ಳ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ-ಕೇಳಿ, ಪರಮಸಂಕ್ರುದ್ಧಾ- ಬಹಳವಾಗಿ ಕೋಪಗೊಂಡು, ಚಂಡಾಲತ್ವಂ - ಚಂಡಾಲತ್ವವನ್ನು, ಗಮಿಷ್ಯಸೀತಿ - ಹೊಂದುವೆ ಎಂದು, ಶೇಪುಃ - ಶಪಿಸಿದರು ॥ ೮ ॥ ಏವಂ - ಹೀಗೆ, ಉಕ್ತ್ವಾ ಹೇಳಿ, ಮಹಾತ್ಮಾನಃ-

---

ತಾನೆ ಮಾಡಿಸಲು ಸಾಧ್ಯರಾದೇವು ? ॥ ೪ ॥ ಎಲೈ ನರೋತ್ತಮನೆ ! ನೀನು ಕೇವಲ ಬಾಲಭಾವವುಳ್ಳವನು. ಮರಳಿ ನಿನ್ನ ಪಟ್ಟಣವಾದ ಅಯೋಧ್ಯೆಗೆ ತೆರಳುವವನಾಗು. ಮಹಾತ್ಮರಾದ ವಸಿಷ್ಠರ ಯೋಗ್ಯತೆಯನ್ನು ನೀನೇನು ತಾನೆ ತಿಳಿದಿರುವೆ ? ಅವರು ಮೂರು ಲೋಕಗಳಿಗೂ ಯಾಗ ಮಾಡಿಸಲು ಸಮರ್ಥರಾಗಿರುವರು. ಇಂತಹ ವಸಿಷ್ಠ ಋಷಿಗೆ ನಾವು ಅವಮಾನವನ್ನು ಮಾಡಲು, ಹೇಗೆತಾನೆ ಶಕ್ತರಾದೇವು ? " ಎಂದರು. ವಸಿಷ್ಠ ಕುವರರ ಈ ನುಡಿಗಳನ್ನು ಕೇಳಿದ ತ್ರಿಶಂಕುವು ಮರಳಿಯೂ ಅವರನ್ನು ಕುರಿತು, ಕ್ರೋಧದಿಂದೀರೀತಿ ನುಡಿದನು. "ಎಲೈ ತಪಸ್ವಿಗಳಿರಾ ! ಗುರುವಾದ ವಸಿಷ್ಠನಿಂದಲೂ,

ಶೇಪುಃ ಪರಮಸಂಕ್ರುದ್ಧಾ ಶ್ಚಂಡಾಲತ್ವಂ ಗಮಿಷ್ಯಸಿ || ಏವಮುಕ್ತ್ವಾ ಮಹಾತ್ಮಾನೋ ವಿವಿಶು ಸ್ತೇಸ್ವಮಾಶ್ರಮಂ ||೯|| ಅಥರಾತ್ರ್ಯಾಂ ವ್ಯತೀತಾಯಾಂ ರಾಜಾ ಚಂಡಾಲತಾಂ ಗತಃ || ನೀಲವಸ್ತ್ರಧರೋ ನೀಲಃ ಪರುಷೋ ಧ್ವಸ್ತಮೂರ್ಧಜಃ ||೧೦|| ಚಿತ್ಯ ಮಾಲ್ಯಾನು ಲೇಪಶ್ಚ ಆಯಸಾಭರಣೋಭವತ್ || ತಂದೃಷ್ಟ್ವಾ ಮಂತ್ರಿಣಸ್ಸರ್ವೇ ತ್ಯಜ್ಯ ಚಂಡಾಲ ರೂಪಿಣಂ ||೧೧|| ಪ್ರಾದ್ರವನ್ ಸಹಿತಾ ರಾಮ ಪೌರಾಯೇಸ್ಯಾ ನುಗಾಮಿನಃ || ಏಕೋಹಿ ರಾಜಾ

---

ಮಹಾ ಪ್ರಭಾವವಂತರಾದ, ತೇ - ಆ ವಸಿಷ್ಠ ಋಷಿಯ ಮಕ್ಕಳು, ಸ್ವಂ - ಸ್ವಕೀಯವಾದ, ಆಶ್ರಮಂ - ಆಶ್ರಮವನ್ನು, ವಿವಿಶುಃ - ಹೊಕ್ಕರು, ||೯|| ಅಥ - ಬಳಿಕ, ರಾತ್ರ್ಯಾಂ-ರಾತ್ರಿಕಾಲವು, ವ್ಯತೀತಾಯಾಂ - ಕಳೆಯಲು, ಚಂಡಾಲತಾಂ - ಚಂಡಾಲತ್ವವನ್ನು, ಗತಃ-ಹೊಂದಿ ನೀಲವಸ್ತ್ರಧರಃ - ನೀಲಾಂಬರಧಾರಿಯೂ, ನೀಲಃ - ಕಪ್ಪಾಗಿರುವ, ಪರುಷಃ - ಭಯಂಕರಾಕಾರನಾದ,ಧ್ವಸ್ತಮೂರ್ಧಜಃ-ತುಂಡುತುಂಡಾದತಲೆಗೂದಲುಗಳುಳ್ಳ, ಚಿತ್ರ್ಯಮಾಲ್ಯಾನುಲೇಪಶ್ಚ-ಚಿತಿಗೆಯೋಗ್ಯವಾದ ಪುಷ್ಪಗಳನ್ನೂ, ಗಂಧಗಳನ್ನೂ ಬಳೆದುಕೊಂಡಿರುವ, ರಾಜಾ-ತ್ರಿಶಂಕು ಮಹಾರಾಯನು, ಆಯಸಾಭರಣಃ - ಅಯೋವಿಕಾರವಾದ (ಕಬ್ಬಿಣದ) ಆಭರಣಗಳುಳ್ಳವನು, ಅಭವತ್-ಆದನು. ||೧೦|| ಹೇರಾಮ- ಎಲೈ ಶ್ರೀರಾಮನೆ! ಚಂಡಾಲ ರೂಪಿಣಂ - ಚಾಂಡಾಲ ರೂಪಿಯಾದ, ತಂ-ಆ ತ್ರಿಶಂಕುವನ್ನು, ದೃಷ್ಟ್ವಾ-ಕಂಡು, ಸರ್ವೇ- ಸಮಸ್ತರಾದ, ಮಂತ್ರಿಣಃ - ಮಂತ್ರಿಗಳೂ, ಅಸ್ಯ - ಈ ತ್ರಿಶಂಕು ಮಹಾರಾಜನಿಗೆ, ಅನುಗಾಮಿನಃ ಅನುಸಾರಿಗಳಾದ, ಯೇಪೌರಾಃ-ಯಾವ ಪಟ್ಟಣಸ್ಥರುಂಟೋ, ತೇ - ಅವರೂ, ತೇಮಂತ್ರಿಣಃ - ಆ ಮಂತ್ರಿಗಳೂ, ಸಹಿತಾಃ - ಗುಂಪು ಸೇರಿ, ತ್ಯಜ್ಯ- ಆ ತ್ರಿಶಂಕು ರಾಯನನ್ನು ಪರಿತ್ಯಾಗಮಾಡಿ, ಪ್ರಾದ್ರವನ್-ಓಡಿಹೋದರು. ||೧೧|| ಹೇಕಾಕುತ್ಸ್ಥ - ಎಲೈ ಶ್ರೀರಾಮನೇ, ರಾಜಾ - ಅರಸನಾದ ತ್ರಿಶಂಕುರಾಯನು, ಏಕೋಹಿ ಒಬ್ಬನೇ ಆಗಿ, ಪರಮಾತ್ಮವಾನ್ ಬಹಳ ಪ್ರಯತ್ನವುಳ್ಳವನಾಗಿ, ದಿವಾರಾತ್ರಂ-ಹಗಲು ರಾತ್ರಿಯೂ,

---

ಆತನ ಕುವರರಿಂದಲೂ. ತಿರಸ್ಕೃತನಾದೆನು. ಇನ್ನು ಬೇರೊಬ್ಬರನ್ನು ನನ್ನ ಕಾರ್ಯಸಿದ್ಧಿಗಾಗಿ ಆಶ್ರಯಿಸುವೆನ ನಿಮಗೆ ಮಂಗಳವಾಗಲಿ." ಇಂತು ಕ್ರೂರಾಭಿಪ್ರಾಯವುಳ್ಳ ತ್ರಿಶಂಕುವಿನ ಮಾತನ್ನು ಕೇಳಿ, ಆ ವಸಿಷ್ಠ ಕುವರರು ಅತಿಯಾದ ಕೋಪವನ್ನು ತಾಳಿ, "ಎಲೈ ; ನೀನು ಚಂಡಾಲನಾಗುವೆ" ಎಂದು ಹೇಳಿ ತಮ್ಮಾಶ್ರಮಕ್ಕೆ ಹೊರಟುಹೋದರು. || ೯ || ಆ ಬಳಿಕ ರಾತ್ರಿಯು ಕಳೆದು ಪ್ರಾತಃಕಾಲವಾಗಲು ಆ ತ್ರಿಶಂಕುರಾಯನು ಚಂಡಾಲತ್ವವನ್ನು ಹೊಂದಿದನು. ಆತನುಟ್ಟಿದ್ದ ಪೀತಾಂಬರವು ನೀಲವಸ್ತ್ರವಾಯಿತು. ಆತನು ಧರಿಸಿದ್ದ ಕಂಠಮಾಲೆಯು ಅಸ್ಥಿಮಾಲೆಯಾಯಿತು. ಆತನಲ್ಲಿದ್ದ ರಾಜತೇಜವೇ ನೀಲವರ್ಣವಾಗಿ ಪರಿಣಮಿಸಿತು. ಆ ಮಹಾರಾಯನು ತೊಟ್ಟಿದ್ದ ರತ್ನಾಭರಣಗಳೆಲ್ಲವೂ ಆಯಸಾಭರಣಗಳಾದುವು. ||೧೦|| ಎಲೈ ರಘುರಾಮನೆ ! ಇಂತು ಗುರುಪುತ್ರರ ಶಾಪದಿಂದ ಚಂಡಾಳರೂಪವನ್ನು ಹೊಂದಿದ ತ್ರಿಶಂಕುರಾಜನನ್ನು ನೋಡಿ, ಆತನ ಮಂತ್ರಿಗಳೂ, ಪಟ್ಟಣಿಗರೂ ಭಯಗೊಂಡು ಓಡಿಹೋದರು. ಆ ಬಳಿಕ ಮಹಾ

ಕಾಕುತ್‌ಸ್ಥ ಜಗಾಮ ಪರಮಾತ್ಮವಾನ್ ||೧೨|| ದಹ್ಯಮಾನೋ ದಿವಾ ರಾತ್ರಂ ವಿಶ್ವಾಮಿತ್ರಂ ತಪೋಧನಂ || ವಿಶ್ವಾಮಿತ್ರಸ್ತು ತಂದೃಷ್ಟ್ವಾ ರಾಜಾನಂ ವಿಫಲೀಕೃತಂ ||೧೩|| ಚಂಡಾಲರೂಪಿಣಂ ರಾಮ ಮುನಿಃ ಕಾರುಣ್ಯ ಮಾಗತಃ || ಕಾರುಣ್ಯಾತ್ಸಮಹಾತೇಜಾ ವಾಕ್ಯಂ ಪರಮ ಧಾರ್ಮಿಕಃ ||೧೪|| ಇದಂ ಜಗಾದ ಭದ್ರಂತೇ ರಾಜಾನಂ ಘೋರ ರೂಪಿಣಂ || ಕಿಮಾಗಮನ ಕಾರ್ಯಂತೇ ರಾಜಪುತ್ರ ಮಹಾಬಲ ||೧೫|| ಅಯೋಧ್ಯಾಧಿಪತೇ ವೀರ ಶಾಪಾ ಚ್ಚಂಡಾಳತಾಂ ಗತಃ || ಅಥತದ್ವಾಕ್ಯ ಮಾಜ್ಞಾಯ ರಾಜಾ ಚಂಡಾ

---

ದಹ್ಯಮಾನಃ - ಶಾಪಾಗ್ನಿಯಿಂದ ದಹಿಸಲ್ಪಟ್ಟು, ತಪೋಧನಂ - ತಪಸ್ಸೇ ಧನವಾಗಿ ಉಳ್ಳ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಜಗಾಮ - ತೆರಳಿದನು ||೧೨|| ಹೇರಾಮ - ಎಲೈ ಶ್ರೀರಾಮನೆ, ಮುನಿಃ - ಋಷಿಯಾದ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನಾದರೆ, ವಿಫಲೀಕೃತಂ- ವಸಿಷ್ಠರಿಂದಲೂ, ವಸಿಷ್ಠಪುತ್ರರಿಂದಲೂ ವ್ಯರ್ಥವಾಗಿ ಮಾಡಲ್ಪಟ್ಟ ಸಂಕಲ್ಪವುಳ್ಳ, ಚಂಡಾಲರೂಪಿಣಂ-ಚಂಡಾಲನ ರೂಪದಂತೆ ರೂಪವುಳ್ಳ, ತಂರಾಜಾನಂ-ಆ ತ್ರಿಶಂಕುರಾಯನನ್ನು, ದೃಷ್ಟ್ವಾ-ಕಂಡು, ಕಾರುಣ್ಯಂ- ದಯಾರಸವನ್ನು, ಆಗತಃ-ಹೊಂದಿದನು. ||೧೩|| ಸುಮಹಾತೇಜಾಃ- ಮಹಾತೇಜೋವಂತನಾದ, ಪರಮಧಾರ್ಮಿಕಃ - ಮಹಾ ಧರ್ಮಿಷ್ಠನಾದ ವಿಶ್ವಾಮಿತ್ರನು, ಘೋರರೂಪಿಣಂ-ಭಯಂಕರ ರೂಪವುಳ್ಳ, ರಾಜಾನಂ - ತ್ರಿಶಂಕು ರಾಯನನ್ನು ಕುರಿತು, ಕಾರುಣ್ಯಾತ್-ಕೃಪೆಯಿಂದ, ಇದಂವಾಕ್ಯಂ - ಈ ಮಾತನ್ನು ಜಗಾದ - ನುಡಿದನು, ತೇ - ನಿನಗೆ, ಭದ್ರಂ - ಮಂಗಳವು, ಅಸ್ತು - ಆಗಲಿ, ||೧೪|| ಹೇರಾಜಪುತ್ರ - ಎಲೈ ಅರಸುಮಗನೇ, ಹೇಮಹಾಬಲ - ಎಲೈ ಮಹಾ ಬಲಿಷ್ಠನೇ, ತೇ - ನಿನ್ನ, ಆಗಮನಕಾರ್ಯಂ - ಬಂದ ಕಾರ್ಯವು, ಕಿಂ - ಏನು, ಹೇಅಯೋಧ್ಯಾಧಿಪತೇ - ಎಲೈ ಅಯೋಧ್ಯಾ ಪಟ್ಟಣದ ಅರಸೇ, ಹೇವೀರ - ಎಲೈ ಶೂರನೇ, ಶಾಪಾತ್-ಶಾಪದಿಂದ ಚಂಡಾಲತಾಂ - ಚಂಡಾಲತ್ವವನ್ನು, ಗತಃ - ಹೊಂದಿದವನಾಗಿರುವೆಯಲ್ಲ, ||೧೫|| ಅಥ- ಬಳಿಕ, ವಾಕ್ಯಜ್ಞಃ - ನುಡಿ ಜಾಣ್ಮೆಯುಳ್ಳ, ಚಂಡಾಲತಾಂ - ಚಂಡಾಲತ್ವವನ್ನು, ಗತಃ-ಹೊಂದಿರುವ, ರಾಜಾ - ತ್ರಿಶಂಕು ಮಹಾರಾಯನು, ತದ್ವಾಕ್ಯಂ - ಆ ವಿಶ್ವಾಮಿತ್ರನ ವಚನವನ್ನು,

---

ಪ್ರಯತ್ನಶೀಲನಾದ ಆ ತ್ರಿಶಂಕು ರಾಯನು ಏಕಾಕಿಯಾಗಿ ಗುರುಪುತ್ರರ ಶಾಪದಿಂದ ಅಹರ್ನಿಶವೂ ಸಂತಪ್ತಮಾನಸನಾಗಿ, ಕೊನೆಗೆ ತಪೋಧನನಾದ ವಿಶ್ವಾಮಿತ್ರನ ಬಳಿಗೆ ಬಂದನು. ||೧೨|| ಆಗಲಾ ವಿಶ್ವಾಮಿತ್ರನು ಗುರುಶಾಪಸಂತಪ್ತನೂ. ವಿಫಲ ಮನೋರಥನೂ, ಚಂಡಾಳರೂಪಿಯೂ ಆದ ಆ ತ್ರಿಶಂಕುವನ್ನು ನೋಡಿ ಕರುಣೆಗೊಂಡವನಾದನು. ಬಳಿಕ ಮಹಾತೇಜಸ್ವಿಯಾದ ವಿಶ್ವಾಮಿತ್ರಮುನಿಯು ಚಂಡಾಳ ರೂಪದಿಂದ ಘೋರವಾಗಿ ಕಾಣುತ್ತಿದ್ದ ಆ ತ್ರಿಶಂಕುವನ್ನು ಕುರಿತು "ಎಲೈ ರಾಜನೆ! ನಿನಗೆ ಮಂಗಳವಾಗಲಿ, ಎಲೈ ಮಹಾಬಲಶಾಲಿಯಾದ ಅಯೋಧ್ಯಾಪತಿಯೇ, ವೀರನೆ; ನೀನಿಲ್ಲಿಗೆ ಬಂದಿರುವ ಕಾರಣವೇನು? ಈ ಚಂಡಾಳರೂಪವನ್ನು ಹೊಂದಿದೆಯೇಕೆ?" ಎಂದು ಕೇಳಿದನು. ||೧೫|| ಇಂತು ನುಡಿದ ವಿಶ್ವಾಮಿತ್ರನ ಮಾತುಗಳನ್ನು ಕೇಳಿ ನುಡಿಚತುರನೂ ಚಂಡಾಳ ರೂಪಿಯೂ ಆದ

ಲತಾಂ ಗತಃ ॥ ೧೬ ॥ ಅಬ್ರವೀತ್ಪ್ರಾಂಜಲಿ ರ್ವಾಕ್ಯಂ ವಾಕ್ಯಜ್ಞೋ ವಾಕ್ಯಕೋವಿದಂ ॥ ಪ್ರತ್ಯಾಖ್ಯಾತೋಸ್ಮಿ ಗುರುಣಾ ಗುರುಪುತ್ರೈಸ್ತಥೈವಚ ॥ ೧೭ ॥ ಅನವಾಪ್ಯೈವ ತಂಕಾಮಂ ಮಯಾ ಪ್ರಾಪ್ತೋ ವಿಪರ್ಯಯಃ॥ ಸಶರೀರೋ ದಿವಂ ಯಾಯಾಮಿತಿಮೇ ಸೌಮ್ಯದರ್ಶನ ॥೧೮॥ ಮಯಾ ಚೇಷ್ಟಂ ಕ್ರತುಶತಂ ತಚ್ಚ ನಾವಾಪ್ಯತೇ ಫಲಂ॥ಅನೃತಂನೋಕ್ತ ಪೂರ್ವಂಮೇ ನಚವಕ್ಷ್ಯೇ ಕದಾಚನ ॥ ೧೯ ॥ ಕೃಚ್ಛ್ರೇಷ್ವಪಿ ಗತಸ್ಸೌಮ್ಯ ಕ್ಷತ್ರಧರ್ಮೇಣ ತೇಶಪೇ ॥ ಯಜ್ಞೈ ರ್ಬಹುವಿಧೈರಿಷ್ಟಂ ಪ್ರಜಾಧರ್ಮೇಣ ಪಾಲಿತಾಃ ॥೨೦॥

---

ಅಜ್ಞಾಯ - ತಿಳಿದು, ವಾಕ್ಯಕೋವಿದಂ - ಮಾತುಗಳಲ್ಲಿ ಸಮರ್ಥನಾದ ವಿಶ್ವಾಮಿತ್ರನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧೬ ॥ ಗುರುಣಾ - ಗುರುವಾದ ವಸಿಷ್ಠ ಋಷಿಯಿಂದ, ತಥಾ - ಹಾಗೆಯೇ, ಗುರುಪುತ್ರೈಶ್ಚ - ವಸಿಷ್ಠ ಋಷಿಯ ಮಕ್ಕಳಿಂದಲೂ, ಪ್ರತ್ಯಾಖ್ಯಾತಃ - ನಿರಾಕೃತನು, ಅಸ್ಮಿ - ಆಗಿರುವೆನು, ಮಯಾ - ನನ್ನಿಂದ, ತಂ ಕಾಮಂ - ಸಶರೀರದಿಂದೇ ಸ್ವರ್ಗಾರೋಹಣವನ್ನು ಹೊಂದಬೇಕೆಂಬ ಕೋರಿಕೆಯನ್ನು, ಅನವಾಪ್ಯೈವ- ಹೊಂದದೇನೆ, ವಿಪರ್ಯಯಃ – ವಿಪರೀತ ಪ್ರಯೋಜನವು, ಪ್ರಾಪ್ತಃ- ಹೊಂದಲ್ಪಟ್ಟಿತು. ॥೧೭॥ ಹೇಸೌಮ್ಯ- ಎಲೈ ಸೌಮ್ಯನೇ, ಸಶರೀರಃ - ಶರೀರದಿಂದೊಡಗೂಡಿದ, ದಿವಂ - ಸ್ವರ್ಲೋಕವನ್ನು, ಯಾಯಾಂ ಇತಿ – ಹೊಂದುವೆನೆಂದು, ಮೇ - ನನಗೆ. ದರ್ಶನಂ - ಬುದ್ಧಿಯು, ಮಯಾಚ - ನನ್ನಿಂದಲೂ ಕ್ರತುಶತಂ – ನೂರು ಯಾಗಗಳು, ಇಷ್ಟಂ - ಮಾಡಲ್ಪಟ್ಟಿತು, ತತ್ಫಲಂಚ - ಆ ಕ್ರತುಶತ ಫಲವು, ನಾವಾಪ್ಯತೇ-ಹೊಂದಲ್ಪಡಲಿಲ್ಲಾ. ॥೧೮॥ ಹೇ ಸೌಮ್ಯ-ಎಲೈ ಸೌಮ್ಯನೇ, ಕೃಚ್ಛ್ರೇಷ್ವಪಿ-ಅತಿ ಕಷ್ಟಗಳನ್ನು ಗತೋಪಿ-ಹೊಂದಿದವನಾದರೂ, ಕದಾಚನ-ಯಾವಾಗಲೂ, ಅನೃತಂ - ಸುಳ್ಳನ್ನು, ನಚವಕ್ಷ್ಯೇ-ಹೇಳುವುದಿಲ್ಲ, ಅನೃತಂ--ಅನೃತವು, ಮೇ-ನನ್ನಿಂದ, ನೋಕ್ತಪೂರ್ವಂ-ಹಿಂದೆ ಹೇಳಲ್ಪಡಲಿಲ್ಲ, ತೇ-ನಿನ್ನ ನಿಮಿತ್ತವಾಗಿ, ಕ್ಷತ್ರಧರ್ಮೇಣ-ಕ್ಷತ್ರಧರ್ಮದಿಂದ, ಶಪೇ- ಶಪಥಮಾಡುತ್ತೇನೆ. ॥೧೯॥ ಬಹುವಿಧೈಃ-ಅನೇಕ ಬಗೆಗಳಾದ, ಯಜ್ಞೈಃ-ಯಜ್ಞಗಳಿಂದ, ಇಷ್ಟಂ- ದೇವತಾರಾಧನೆ ಮಾಡುವದಕ್ಕೆ ಉಪಕ್ರಮಿಸಲ್ಪಟ್ಟಿತು, ಪ್ರಜಾಃ-ಪ್ರಜೆಗಳು, ಧರ್ಮೇಣ – ಧರ್ಮದಿಂದ, ಪಾಲಿತಾಃ- ಸಂರಕ್ಷಿಸಲ್ಪಟ್ಟರು, ಮಹಾತ್ಮಾನಃ-ದೊಡ್ಡವರು, ಗುರವಶ್ಚ-ಆಚಾರ್ಯರೂ, ಶೀಲವೃತ್ತೇನ, ಸ್ವಭಾವ ಸದಾಚಾರದಿಂದ, ತೋಷಿತಾಃ-ಸಂತೋಷಿಸಲ್ಪಟ್ಟರು. ॥೨೦॥ ಹೇಮುನಿಪುಂಗವ-ಎಲೈ ಋಷಿಶ್ರೇ

---

ಆ ತ್ರಿಶಂಕುರಾಜನು ಅಂಜಲಿ ಬದ್ಧನಾಗಿ ಆತನನ್ನು ಕುರಿತು "ಎಲೈ ಮುನಿಯೆ ! ಸಶರೀರ ಸ್ವರ್ಗಾರೋಹಣವೆಂಬ ನನ್ನ ಸಂಕಲ್ಪವನ್ನು ಹೊಂದದೆಯೆ, ಗುರುವಾದ ವಸಿಷ್ಠಮಹರ್ಷಿಯಿಂಥಲೂ, ಆತನ ಕುವರರಿಂದಲೂ ತಿರಸ್ಕೃತನಾಗಿ ಈ ಚಂಡಾಳತ್ವವನ್ನು ಹೊಂದಿದವನಾದೆನು. ನಾನು ಶತಯಾಗಗಳನ್ನು ಮಾಡಿದೆನು. ಇದಕ್ಕೆ ಸಶರೀರದಿಂದ ಸ್ವರ್ಗವನ್ನು ಸೇರಬೇಕೆಂದು ಬಯಸಿದ ನನ್ನ ಸಂಕಲ್ಪವು ಹೊಂದಲ್ಪಡಲಿಲ್ಲವು. ಎಲೈ ಸೌಮ್ಯನೇ ! ನಾನು ಯಾವಾಗಲೂ ಸುಳ್ಳನ್ನು ಹೇಳಲಿಲ್ಲ. ॥೧೯॥ ಮುಂದೆ ಹೇಳುವುದೂ ಇಲ್ಲವು. ಇಂತಹ ಆ ಪತದ್ಗತನಾಗಿದ್ದರೂ ಕ್ಷತ್ರಧರ್ಮದಿಂದ ಪ್ರಮಾಣವಾಗಿ ಹೇಳುತ್ತಿರುವೆನು.

ಗುರವಶ್ಚ ಮಹಾತ್ಮಾನ ಶ್ಶೀಲವೃತ್ತೇನ ತೋಷಿತಾಃ ॥ ಧರ್ಮೇ ಪ್ರಯತ ಮಾನಸ್ಯ ಯಜ್ಞಂ ಚಾಹರ್ತು ಮಿಚ್ಛತಃ ॥ ೨೧ ॥ ಪರಿತೋಷಂ ನಗ ಚ್ಛಂತಿ ಗುರವೋ ಮುನಿಪುಂಗವ ॥ ದೈವಮೇವ ಪರಂಮನ್ಯೇ ಪೌರುಷಂತು ನಿರರ್ಥಕಂ ॥ ೨೨ ॥ ದೈವೇನಾಕ್ರಮ್ಯತೇ ಸರ್ವಂ ದೈವಂಹಿ ಪರಮಾ ಗತಿಃ ॥ ತಸ್ಯಮೇ ಪರಮಾರ್ತಸ್ಯ ಪ್ರಸಾದಮ ಭಿಕಾಂಕ್ಷಿತಃ ॥೨೩॥ ಕರ್ತು ಮರ್ಹಸಿ ಭದ್ರಂತೇ ದೈವೋಪಹತ ಕರ್ಮಣಃ॥ನಾನ್ಯಾಂ ಗತಿಂ ಗಮಿಷ್ಯಾಮಿ ನಾನ್ಯಶ್ಶರಣಮಸ್ತಿಮೇ॥ದೈವಂ ಪುರುಷಕಾರೇಣ ನಿವರ್ತಯಿತುಮರ್ಹಸಿ॥೨೪॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಪಂಚಾಶಸ್ಸರ್ಗಃ

ಷ್ಠನಾದ ವಿಶ್ವಾಮಿತ್ರನೇ, ಧರ್ಮೇ- ಧರ್ಮವಿಷಯದಲ್ಲಿ, ಪ್ರಯತಮಾನಸ್ಯ - ಪ್ರಯತ್ನಿಸುತ್ತಿರುವ, ಯಜ್ಞಂಚ - ಯಜ್ಞವನ್ನೂ ಕೂಡ, ಆಹರ್ತುಂ - ಮಾಡಲು, ಇಚ್ಛತಃ - ಇಚ್ಛಿಸುತ್ತಿರುವ ನನಗೆ, ಗುರವಃ - ಪುರೋಹಿತರು, ಪರಿತೋಷಂ - ಸಂತೋಷವನ್ನು, ನಗಚ್ಛಂತಿ - ಹೊಂದಲಿಲ್ಲ. ॥೨೧॥ ದೈವಮೇವ-ಅದೃಷ್ಟವನ್ನೇ, ಪರಂ-ಶ್ರೇಷ್ಠವನ್ನಾಗಿ, ಮನ್ಯೇ-ಎಣಿಸುತ್ತೇನೆ, ಪೌರುಷಂತು, ಪುರುಷಪ್ರಯತ್ನಸಾಧ್ಯವಾಗದ ಈಗಿನ ಕರ್ಮಾನುಷ್ಠಾನವು, ನಿರರ್ಥಕಂ-ವ್ಯರ್ಥವು, ದೈವೇನ-ಅದೃಷ್ಟದಿಂದ, ಸರ್ವಂ-ಸಮಸ್ತವೂ, ಆಕ್ರಮ್ಯ - ಆಕ್ರಮಿಸಲ್ಪಡುತ್ತದೆ, ದೈವಂಹಿ-ಅದೃಷ್ಟವಾದರೆ, ಪರಮಾಗತಿಃ - ಮತ್ತೊಂದನ್ನು ತಿರಸ್ಕರಿಸಿ ಸುಖದುಃಖಾದಿ ಭೋಗಸಾಧಕವಾದುದು. ॥ ೨೨ ॥ ಪರಮಾರ್ತಸ್ಯ-ಬಹಳದೀನನಾದ, ಅಭಿಕಾಂಕ್ಷತಃ- ಅಪೇಕ್ಷಿಸುತ್ತಿರುವ, ದೈವೋಪಹತಕರ್ಮಣಃ - ಅದೃಷ್ಟದಿಂದ ನಾಶವಾದ ಕರ್ಮಫಲಗಳುಳ್ಳ, ತಸ್ಯಮೇ-ಅಂತಹ ನನಗೆ, ಪ್ರಸಾದಂ - ಅನುಗ್ರಹ ವನ್ನು,ಕರ್ತುಂ-ಮಾಡಲು, ಅರ್ಹಸಿ-ಅರ್ಹನಾಗು, ತೇ-ನಿನಗೆ, ಭದ್ರಮಸ್ತು-ಮಂಗಳವಾಗಲಿ.॥೨೩॥ ಅನ್ಯಾಂಗತಿಂ-ಮತ್ತೊಂದು ಆಶ್ರಯವನ್ನು, ನಗಮಿಷ್ಯಾಮಿ-ಹೋಗಲಾರೆನು, ಅನ್ಯಃ - ಮತ್ತೊಬ್ಬ ಪುರುಷನು, ಮೇ-ನನಗೆ, ಶರಣಂ-ರಕ್ಷಕನು, ನಾಸ್ತಿ ಇಲ್ಲ, ದೈವಂ- ಅದೃಷ್ಟವನ್ನು, ಪುರುಷಕಾರೇಣ-ಪುರುಷಪ್ರಯತ್ನದಿಂದ, ನಿವರ್ತಯಿತುಂ-ಹಿಂತಿರುಗಿಸಲು, ಅರ್ಹಸಿ-ಯೋಗ್ಯನಾಗು. ॥೨೪॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಪಂಚಾಶಸ್ಸಗಃ.

ಅನೇಕ ಯಜ್ಞಗಳಿಂದ ದೇವತೆಗಳನ್ನು ತೃಪ್ತಿಗೊಳಿಸಿರುವೆನು. ಧರ್ಮದಿಂದ ಪ್ರಜಾಪಾಲನೆಯಂ ಗೈದಿರುವೆನು. ಮಹಾತ್ಮರಾದ ಕುಲಗುರುಗಳೂ, ವಿನಯಾದಿ ಗುಣಗಳನ್ನೊಳಗೊಂಡ ನನ್ನಿಂದ ಸಂತೋಷಗೊಳಿಸಲ್ಪಟ್ಟಿರುವರು. ಎಲೈ ಮುನಿಶ್ರೇಷ್ಠನೇ ! ಈ ರೀತಿ ಧರ್ಮವನ್ನೇ ಅನುಸರಿಸುತ್ತಿರುವ ನಾನು ಸಶರೀರ ಸ್ವರ್ಗಾರೋಹಣ ಯಾಗವನ್ನು ಮಾಡಬೇಕೆಂದು ಬಯಿಸಿದರೂ, ನಮ್ಮ ಗುರುಗಳು ಸಂತೋಷವನ್ನು ಹೊಂದಲಿಲ್ಲವು ದೈವೇಚ್ಛೆಯೇ ಪ್ರಬಲವಾದುದು. ಪೌರುಷವು ನಿರರ್ಥಕವಾದುದೇ ಸರಿ ಸಕಲವೂ ದೈವದಿಂದಾಕ್ರಮಿಸಲ್ಪಡುವದು. ಆದುದರಿಂದ ದೈವವೊಂದೇ ಶ್ರೇಷ್ಠವಾದ ಗನ್ಯುನ್ನಾನವು. ॥೨೨॥ ಇಂತು ದೈವೋಪಹತ ಸಂಕಲ್ಪನೂ, ಬಹಳವಾಗಿ ದುಃಖಗೊಂಡವನೂ, ನಿನ್ನನ್ನೇ ಶರಣು ಹೊಂದಿರುವವನೂ ಆದ ನನ್ನನ್ನು ರಕ್ಷಿಸುವವನಾಗು. ನಿನ್ನನ್ನು ಬಿಟ್ಟು ಮತ್ತೊಬ್ಬರಲ್ಲಿಗೆ ಹೋಗುವುದೂ ಇಲ್ಲ; ಅಲ್ಲದೆ ನಿನ್ನನ್ನು ಬಿಟ್ಟು ಶರಣ್ಯರಾರೂ ನನಗಿಲ್ಲವು. ಆದುದರಿಂದಲೈ ಮುನಿಯೆ!ದೈವಿಕವಾದಈ ಗತಿಯನ್ನು ಹೊಂದಿರುವ ನನ್ನನ್ನು ನಿನ್ನ ಪ್ರಸಾದರೂಪ ಸಾಮರ್ಥ್ಯದಿಂದ ರಕ್ಷಿಸಬೇಕು ” ಎಂದು ಹೇಳಿದನು. ॥ ೨೪ ॥

ಇಂತಿದು ತ್ರಿಶಂಕುರಾಜನ ಶರಣಾಗತಿ ವರ್ಣನವೆಂಬ ಐವತ್ತೆಂಟನೆಯಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕೋನಷಷ್ಟಿತಮಸ್ಸರ್ಗಃ.

ಉಕ್ತವಾಕ್ಯಂತು ರಾಜಾನಂ ಕೃಪಯಾ ಕುಶಿಕಾತ್ಮಜಃ || ಅಬ್ರವೀನ್ಮಧುರಂ ವಾಕ್ಯಂ ಸಾಕ್ಷಾಚ್ಚಂಡಾಲ ರೂಪಿಣಂ ||೧|| ಐಕ್ಷ್ವಾಕ ಸ್ವಾಗತಂ ವತ್ಸ ಜಾನಾಮಿ ತ್ವಾಂ ಸುಧಾರ್ಮಿಕಂ || ಶರಣಂ ತೇ ಭವಿಷ್ಯಾಮಿ ಮಾಭೈಷೀನ್ನೃಪಪುಂಗವ ||೨|| ಅಹಮಾಮಂತ್ರಯೇ ಸರ್ವಾನ್ ಮಹರ್ಷೀನ್ ಪುಣ್ಯಕರ್ಮಣಃ || ಯಜ್ಞ ಸಾಹ್ಯಕರಾನ್ ರಾಜನ್ ತತೋ ಯಕ್ಷ್ಯಸಿ ನಿರ್ವೃತಃ ||೩||

---

ಕುಶಿಕಾತ್ಮಜಃ-ವಿಶ್ವಾಮಿತ್ರನು, ಉಕ್ತವಾಕ್ಯಂ-ಇಂತು ನುಡಿದ, ಸಾಕ್ಷಾತ್ - ಪ್ರತ್ಯಕ್ಷವಾಗಿ, ಚಂಡಾಲರೂಪಿಣಂ-ಚಂಡಾಲರೂಪದಂತೆ ರೂಪವುಳ್ಳ, ರಾಜಾನಂತು-ತ್ರಿಶಂಕುರಾಯನನ್ನು ಕುರಿತು, ಕೃಪಯಾ-ದಯೆಯಿಂದ, ಮಧುರಂ-ಮನೋಹರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು. ||೧|| ಹೇ ಐಕ್ಷ್ವಾಕ - ಎಲೈ ಇಕ್ಷ್ವಾಕು ವಂಶೋತ್ಪನ್ನನೇ, ಹೇನೃಪಪುಂಗವ-ಎಲೈ ರಾಜಶ್ರೇಷ್ಠನೇ, ಹೇವತ್ಸ-ಎಲೈ ವತ್ಸನೇ, ಸ್ವಾಗತಂ - ಸುಖಾಗಮನವೇ, ತ್ವಾಂ - ನಿನ್ನನ್ನು, ಸುಧಾರ್ಮಿಕಂ-ಒಳ್ಳೆಧರ್ಮವುಳ್ಳವನನ್ನಾಗಿ, ಜಾನಾಮಿ-ತಿಳಿದಿರುವೆನು, ತೇ-ನಿನಗೆ, ಶರಣಂ-ರಕ್ಷಕನು, ಭವಿಷ್ಯಾಮಿ ಆಗುವೆನು, ಮಾಭೈಷೀಃ- ಭಯಗೊಳ್ಳದಿರು. ||೨|| ಹೇರಾಜನ್ - ಎಲೈ ರಾಜನೇ, ಅಹಂ-ನಾನು, ಪುಣ್ಯಕರ್ಮಣಃ ಪುಣ್ಯಕರವಾದ ಕರ್ಮವುಳ್ಳ ನಿನ್ನ,ಯಜ್ಞಸಾಹ್ಯಕರಾನ್-ಯಜ್ಞಕ್ಕೆ ಸಹಾಯವನ್ನು ಮಾಡುವ, ಸರ್ವಾನ್-ಸಮಸ್ತರಾದ, ಮಹರ್ಷೀನ್-ಋಷಿಗಳನ್ನು, ಆಮಂತ್ರಯೇ-ಕರೆಯಿಸುತ್ತೇನೆ, ತತಃ-ಬಳಿಕ, ನಿರ್ವೃತಃ - ಸುಖಿತನಾಗಿ, ಯಕ್ಷ್ಯಸಿ-ಯಾಗ ಮಾಡುವೆ, ||೩|| ತ್ವಯಿ-ನಿನ್ನಲ್ಲಿ, ಗುರುಶಾಪಕೃತಂ-ಗುರುಗಳಾದ ವಸಿಷ್ಠಪುತ್ರರಶಾಪದಿಂದ ಪ್ರಾಪ್ತವಾದ, ಯದಿದಂ-ಯಾವ ಈ, ರೂಪಂ-ರೂಪವು, ವರ್ತತೇ-ಇರುವುದೋ, ಅನೇನ ರೂಪೇಣ ಸಹ-[೧] ಈ

---

ಇಂತು ನುಡಿದ ಚಂಡಾಳರೂಪಿಯಾದ ತ್ರಿಶಂಕುರಾಯನನ್ನು ಕುರಿತು ವಿಶ್ವಾಮಿತ್ರನು ಕರುಣೆಯಿಂದ ಮೃದುಮಧುರವಾದ ಈ ಮಾತನ್ನಾಡಿದನು. “ ಎಲೈ ವತ್ಸನೆ! ನಿನಗೆ ಸುಖಾಗಮನವು. ಇಕ್ಷ್ವಾಕುವಂಶದವನಾದ ನೀನು ಮಹಾ ಧರ್ಮಿಷ್ಠನೆಂಬುದನ್ನು ನಾನು ತಿಳಿದಿರುವೆನು. ಎಲೈ ರಾಜಶ್ರೇಷ್ಠನಾದ ತ್ರಿಶಂಕುವೆ ! ಹೆದರಬೇಡ;ನಾನು ನಿನಗೆ ಶರಣ್ಯನಾಗುವೆನು. ಪುಣ್ಯಕರ್ಮಿಗಳೂ, ಯಜ್ಞಸಹಾಯಕರೂ ಆದ ಮಹರ್ಷಿಗಳೆಲ್ಲರನ್ನೂ ನಿನಗಾಗಿ ಕರೆಯಿಸುವೆನು. ಆ ಬಳಿಕ ನೀನು ಸಂತೋಷದಿಂದ ಯಜ್ಞವಂ

---

ಟಿ|| (೧) “ ಅನೇನ ಸಹರೂಪೇಣ ಸಶರೀರೋ ಗಮಿಷ್ಯಸಿ” ಎಂದು ಹೇಳಿರುವುದರ ಅಭಿಪ್ರಾಯವು ಹೀಗೆ. ತ್ರಿಶಂಕುರಾಯನು ಮಹೋದಯನೇ ಮೊದಲಾದ ಋಷಿಪುಂಗವರಿಂದ ಶಪ್ತನಾಗಿರುವನು ಇವರು ತ್ರಿಶಂಕುವಿಗೆ ಗುರುಗಳೂ ಆಗಿರುವರು. “ ಋಷಿಶಾಪಕೃತರೂಪಸ್ಯ ಬ್ರಹ್ಮಶಾಪಿಆಪಾರ್ಯತ್ವಾತ್ ” ಋಷಿಶಾಪದಿಂದಾದ ರೂಪವು ಬ್ರಹ್ಮನಿಂದಲೂ ಸಹ ಹೋಗಲಾಡಿಸಲಸದಳವಾದುದರಿಂದ “ಅನೇನ ಸಹರೂಪೇಣ” ಎಂದು ಹೇಳಲ್ಪಟ್ಟಿರುವುದು ತ್ರಿಶಂಕುವು ಹುಟ್ಟು ಚಂಡಾಲನಲ್ಲವಾದುದರಿಂದ ಸ್ವರ್ಗಕ್ಕೆ ಅರ್ಹನಾದವನೆಂದೂ, ವಿಶೇಷವಾದ ತಪೋಬಲದಿಂದಲೇ ಅವನನ್ನು ಸ್ವರ್ಗವನ್ನೈದಿಸುವೆನೆಂದೂ ವಿಶ್ವಾಮಿತ್ರನ ಅಭಿಪ್ರಾಯವು ಇದು ಗೋವಿಂದ ರಾಜೀಯ ವ್ಯಾಖ್ಯಾನಾನುಸಾರವಾಗಿ.

ಗುರುಶಾಪಕೃತಂ ರೂಪಂ ಯದಿದಂ ತ್ವಯಿ ವರ್ತತೇ || ಅನೇನ ಸಹರೂಪೇಣ ಸಶರೀರೋ ಗಮಿಷ್ಯಸಿ || ೪ || ಹಸ್ತಪ್ರಾಪ್ತಮಹಂ ಮನ್ಯೇ ಸ್ವರ್ಗಂ ತವ ನರಾಧಿಪ || ಯಸ್ತ್ವಂ ಕೌಶಿಕ ಮಾಗಮ್ಯ ಶರಣ್ಯಂ ಶರಣಾಗತಃ || ೫ || ಏವಮುಕ್ತ್ವಾ ಮಹಾತೇಜಾಃ ಪುತ್ರಾನ್ ಪರಮ ಧಾರ್ಮಿಕಾನ್ || ವ್ಯಾದಿದೇಶ ಮಹಾಪ್ರಾಜ್ಞಾನ್ ಯಜ್ಞ ಸಂಭಾರ ಕಾರಣಾತ್ || ೬ || ಸರ್ವಾನ್ ಶಿಷ್ಯಾನ್ ಸಮಾಹೂಯ ವಾಕ್ಯಮೇತ ದುವಾಚಹ || ಸರ್ವಾ ನೃಷಿಗಣಾನ್ ವತ್ಸಾ ಆನಯಧ್ವಂ ಮಮಾಜ್ಞಯಾ || ೭ || ಸಶಿಷ್ಯ ಸ್ಸುಹೃದಶ್ಚೈವ ಸರ್ತ್ವಿಜ ಸ್ಸಬಹುಶ್ರುತಾನ್ || ಯದನ್ಯೋ ವಚನಂ ಬ್ರೂಯಾ ನ್ಮದ್ವಾಕ್ಯ ಬಲಚೋ

ರೂಪದಿಂದೊಡಗೂಡಿ, ಸಶರೀರಃ-ಶರೀರ ಸಹಿತನಾಗಿ, ಗಮಿಷ್ಯಸಿ-ಹೋಗುವೆ. ||೪|| ಹೇನರಾಧಿಪ-ಎಲೈ ರಾಜನೇ, ಯಃ-ಯಾವ, ತ್ವಂ-ನೀನು, ಶರಣ್ಯಂ-ಶರಣಾಗತರಕ್ಷಕನಾದ, ಕೌಶಿಕಂ - ವಿಶ್ವಾಮಿತ್ರನನ್ನು ಕುರಿತು,ಅಗಮ್ಯ-ಬಂದು, ಶರಣಾಗತಃ-ಶರಣವನ್ನಾಗಿ ಹೊಂದಿದಿಯೋ, ಅಂತಹ ತವ-ನಿನಗೆ,ಸ್ವರ್ಗಂ - ಸ್ವಗವು, ಹಸ್ತಪ್ರಾಪ್ತಂ - ಕರಗತವಾದುದನ್ನಾಗಿ, ಅಹಂ ನಾನು, ಮನ್ಯೇ-ತಿಳಿಯುತ್ತೇನೆ. || ೫ || ಮಹಾತೇಜಾಃ-ಮಹಾತೇಜಸ್ವಿಯಾದ ವಿಶ್ವಾಮಿತ್ರನು, ಏವಂ-ಹೀಗೆ, ಉಕ್ತ್ವಾ-ಹೇಳಿ, ಯಜ್ಞಸಂಭಾರಕಾರಣಾತ್ - ಯಜ್ಞಸಾಮಗ್ರಿ ಸಂಪಾದನ ನಿಮಿತ್ತವಾಗಿ, ಮಹಾಪ್ರಾಜ್ಞಾನ್ - ಮಹಾಬುದ್ಧಿಶಾಲಿಗಳಾದ, ಪರಮಧಾರ್ಮಿಕಾನ್ - ಪರಮಧರ್ಮಿಷ್ಠರಾದ, ಪುತ್ರಾನ್-ಮಕ್ಕಳನ್ನು ಕುರಿತು, ವ್ಯಾದಿದೇಶ-ಆಜ್ಞಾಪಿಸಿದನು. ||೬|| ಸರ್ವಾನ್-ಸಮಸ್ತರಾದ,ಶಿಷ್ಯಾನ್- ಶಿಷ್ಯರನ್ನು, ಸಮಾಹೂಯ-ಕರೆದು, ಏತದ್ವಾಕ್ಯಂ-ಈ ಮಾತನ್ನು, ಉವಾಚಹ-ಹೇಳಿದನಷ್ಟೆ, ಹೇವತ್ಸಾಃ-ಎಲೈ ಬಾಲಕರೆ, ಮಮ-ನನ್ನ, ಆಜ್ಞಯಾ-ಪ್ರೇರಣೆಯಿಂದ, ಸಶಿಷ್ಯಸುಹೃದಶ್ಚೈವ-ಶಿಷ್ಯರಿಂದಲೂ ಸ್ನೇಹಿತರಿಂದಲೂ ಒಡಗೂಡಿದ,ಸರ್ತ್ವಿಜಃ-ಋತ್ವಿಕ್ಕುಗಳಿಂದ ಸಮೇತರಾದ ಸಬಹುಶ್ರುತಾನ್-ಬಹುಶಾಸ್ತ್ರಜ್ಞರಿಂದೊಡಗೂಡಿದ, ಸರ್ವಾನ್- ಸಮಸ್ತರಾದ,ಋಷಿಗಣಾನ್-ಋಷಿ ತಂಡಗಳನ್ನು,ಆನಯಧ್ವಂ-ಕರದುಕೊಂಡುಬನ್ನಿರಿ.||೭||ಮದ್ವಾಕ್ಯಬಲಚೋದಿತಃ-ನನ್ನ ವಾಕ್ಯದಿಂದ ಪ್ರೇರಿತನಾಗಿ,ಅನ್ಯಃ-ಮತ್ತೊಬ್ಬನು, ಯದ್ವಚನಂ-ಯಾವಮಾತನ್ನು, ಬ್ರೂಯಾತ್-ಹೇಳುವನೋ, ಉಕ್ತಂ-ಹೇಳಲ್ಪಟ್ಟ, ಅನಾದೃತಂ-ಉಪೇಕ್ಷಾರೂಪವಾದ, ತತ್ಸರ್ವಂ-ಆ ಸಮಸ್ತವೂ, ಮಮ-ನನಿಗೆ, ಅಖಿಲೇನ-ಯಥಾರ್ಥವಾಗಿ

ಮಾಡುವೆ. ಗುರುಶಾಪನಿಮಿತ್ತ ಚಂಡಾಳರೂಪವನ್ನು ಹೊಂದಿರುವೆಯಾದುದರಿಂದ ಇದೇ ರೂಪದಿಂದಲೇ ಸ್ವರ್ಗವನ್ನು ಸೇರುವೆ. ಅಯ್ಯಾ ; ವಿಶ್ವಾಮಿತ್ರನಾದ ನನ್ನನು ಶರಣ್ಯನೆಂದು ಬಗೆದು ಶರಣಾಗತನಾಗಿ ಹೊಂದಿರುವ ನಿನಗೆ ಸ್ವರ್ಗವು ಕರಗತವಾಯಿತೆಂದೇ ತಿಳಿವವನಾಗು. ” || ೫ || ರಾಮಚಂದ್ರ ! ವಿಶ್ವಾಮಿತ್ರ ಮುನಿಯು ಈ ರೀತಿ ಹೇಳಿ ಮಹಾ ಧರ್ಮಿಷ್ಠರಾದ ತನ್ನ ಕುವರರನ್ನು ಯಜ್ಞಸಲಕರಣೆಯನ್ನಣಿಮಾಡಲು ಆಜ್ಞಾಪಿಸಿದನು. ಆ ಬಳಿಕಲಾ ಕೌಶಿಕನು ತನ್ನ ಶಿಷ್ಯರೆಲ್ಲರನ್ನೂ ಕರೆದು “ ಎಲೈ ವತ್ಸರೆ! ಮಿತ್ರರಿಂದಲೂ, ಋತ್ವಿಜರಿಂದಲೂ, ಅನೇಕ ಶಾಸ್ತ್ರವೇತ್ತರಿಂದಲೂ ಒಡಗೂಡಿದ ಸಮಸ್ತ ಋಷಿಗಳನ್ನು ನನ್ನಾಜ್ಞೆಯಿಂದ ಕರೆತರುವವರಾಗಿರಿ. ಯಾರು ನನ್ನ ಮಾತನ್ನು ಅಲಕ್ಷ್ಯಮಾಡಿ

ದಿತಃ ॥ ೮ ॥ ತತ್ಸರ್ವ ಮಖಿಲೇನೋಕ್ತಂ ಮಮಾಖ್ಯೇಯ ಮನಾದೃತಂ ॥ ತಸ್ಯ ತದ್ವಚನಂ ಶ್ರುತ್ವಾ ದಿಶೋ ಜಗ್ಮು ಸ್ತದಾಜ್ಞಯಾ ॥ ೯ ॥ ಆಜಗ್ಮು ರಥ ದೇಶೇಭ್ಯ ಸ್ಸರ್ವೇಭ್ಯೋ ಬ್ರಹ್ಮವಾದಿನಃ ॥ ತೇತುಶಿಷ್ಯಾ ಸ್ಸಮಾಗಮ್ಯ ಮುನಿಂ ಜ್ವಲಿತ ತೇಜಸಂ ॥ ೧೦ ॥ ಊಚುಶ್ಚ ವಚನಂ ಸರ್ವೇ ಸರ್ವೇಷಾಂ ಬ್ರಹ್ಮವಾದಿನಾಂ ॥ ಶ್ರುತ್ವಾ ತೇ ವಚನಂ ಸರ್ವೇ ಸಮಾಯಾಂತಿ ದ್ವಿಜಾತಯಃ ॥ ೧೧ ॥ ಸರ್ವದೇಶೇಷು ಚಾಗಚ್ಛ ವರ್ಜಯಿತ್ವಾ ಮಹೋದಯಂ ॥ ವಾಸಿಷ್ಠಂ ತಚ್ಛತಂ ಸರ್ವಂ ಕ್ರೋಧ ಪರ್ಯಾಕುಲಾಕ್ಷರಂ ॥೧೨॥ ಯದಾಹ ವಚನಂ ಸರ್ವಂ ಶೃಣುತ್ವಂ ಮುನಿಪುಂಗವ ॥ ಕ್ಷತ್ರಿಯೋ ಯಾಜಕೋ

---

ಆಖ್ಯೇಯಂ-ಹೇಳತಕ್ಕುದು, ॥೮॥ ತಸ್ಯ ಆ ವಿಶ್ವಾಮಿತ್ರನ-ತದ್ವಚನಂ-ಆ ಮಾತನ್ನು, ಶ್ರುತ್ವಾ- ಕೇಳಿ, ತದಾಜ್ಞಯಾ- ಆತನ ಆಜ್ಞೆಯಿಂದ ದಿಶಃ - ದಿಕ್ಕುಗಳನ್ನು ಕುರಿತು, ಶಿಷ್ಯಾಃ - ಶಿಷ್ಯರು, ಜಗ್ಮುಃ- ತೆರಳಿದರು, ಅಥ-ಬಳಿಕ, ಬ್ರಹ್ಮವಾದಿನಃ-ವೇದಾಭ್ಯಾಸತತ್ಪರರಾದ ಋಷಿಗಳು, ಸರ್ವೇಭ್ಯಃ-ಸಮಸ್ತ, ದೇಶೇಭ್ಯಃ-ದೇಶಗಳಿಂದ, ಆಜಗ್ಮು-ಬಂದರು. ॥೯॥ ತೇಶಿಷ್ಯಾಸ್ತು ವಿಶ್ವಾಮಿತ್ರನ ಆ ಶಿಷ್ಯರು, ಸರ್ವೇ-ಸಮಸ್ತರೂ, ಸಮಾಗಮ್ಯ-ಬಂದು, ಬ್ರಹ್ಮವಾದಿನಾಂ-ವೇದಾಧ್ಯಯನ ಸಂಪನ್ನರಾದ,ಸರ್ವೇಷಾಂ-ಸಮಸ್ತಋಷಿಗಳ, ವಚನಂ-ವಚನವನ್ನು, ಜ್ವಲಿತತೇಜಸಂ - ಹೊಳೆಯುತ್ತಿರುವ ತೇಜಸ್ಸುಳ್ಳ, ಮುನಿಂ-ವಿಶ್ವಾಮಿತ್ರನನ್ನು, ಕುರಿತು, ಊಚುಶ್ಚ-ಹೇಳಿದರು. ॥೧೦॥ ತೇ-ನಿನ್ನ, ವಚನಂ- ಮಾತನ್ನು, ಶ್ರುತ್ವಾ - ಕೇಳಿ, ಸರ್ವದೇಶೇಷುಚ - ಸಮಸ್ತ ದೇಶಗಳಲ್ಲಿಯೂ, ಸ್ಥಿತಾಃ - ಇರುವ, ಮಹೋದಯಂ-ಮಹೋದಯನೆಂಬ ವಸಿಷ್ಠಪುತ್ರನನ್ನು,ವರ್ಜಯಿತ್ವಾ-ಬಿಟ್ಟು, ಸರ್ವೇ-ಸಮಸ್ತರಾದ, ದ್ವಿಜಾತಯಃ-ಬ್ರಾಹ್ಮಣರು, ಆಗಚ್ಛ-ಬಂದರು, ಸಮಾಯಾಂತಿಚ-ಬರುತ್ತಲೂ ಇರುವರು॥೧೧॥ ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೆ, ವಾಸಿಷ್ಠಂ - ವಸಿಷ್ಠನ ಮಕ್ಕಳಾದ, ಸರ್ವಂ- ಸಮಸ್ತರಾದ, ತಚ್ಛತಂ ಆ ನೂರುಜನವೂ, ಕ್ರೋಧಪರ್ಯಾಕುಲಾಕ್ಷರಂ-ಕ್ರೋಧದಿಂದ ವ್ಯಾಪ್ತವಾದ ಅಕ್ಷರಗಳುಳ್ಳ, ಯದ್ವಚನಂ-ಯಾವಮಾತನ್ನು, ಅಹ-ಹೇಳಿದರೊ, ತ್ವಂ-ನೀನು, ತತ್ಸರ್ವಂ - ಅವೆಲ್ಲವನ್ನೂ, ಶೃಣು-ಕೇಳು. ॥೧೨॥ ಚಂಡಾಲಸ್ಯ-ಚಂಡಾಲನಾದ, ಯಸ್ಯ-ಯಾವನಿಗೆ, ವಿಶೇಷತಃ- ವಿಶೇಷವಾಗಿ, ಕ್ಷತ್ರಿಯಃ- ಕ್ಷತ್ರಿಯಜಾತೀಯನು, ಯಾಜಕಃ - ಯಜನಮಾಡಿಸತಕ್ಕವನೊ, ತಸ್ಯ- ಅಂತಹಚಂಡಾಲನ, ಹವಿಃ - ಹವಿರ್ಭಾಗವನ್ನು, ಸದಸಿ-ಸಭೆಯಲ್ಲಿ ಸುರರ್ಷಯಃ - ದೇವತೆಗಳೂ

---

ಪ್ರತಿಯಾಗಿ ನುಡಿಯುವರೋ ಅದೆಲ್ಲವನ್ನೂ ಯಥಾರ್ಥವಾಗಿ ನನಗೆ ತಿಳುಹಿಸುವವರಾಗಿರಿ ” ಎಂದು ಹೇಳಿ ಕಳುಹಿಸಿದನು. ॥ ೮ ॥ ವಿಶ್ವಾಮಿತ್ರನ ನುಡಿಗಳನ್ನು ಕೇಳಿ ಆ ಶಿಷ್ಯರೆಲ್ಲರೂ ನಾಲ್ಕು ದಿಕ್ಕುಗಳಿಗೂ ಹೋಗಿ ಅಲ್ಲಿದ್ದ ಬ್ರಹ್ಮಜ್ಞಾನಿಗಳಾದ ಋಷಿಪುಂಗವರನ್ನೂ ಕರೆದುತಂದು ಅಪಾರವಾದ ತೇಜಸ್ಸುಳ್ಳ ವಿಶ್ವಾಮಿತ್ರನನ್ನು ಕುರಿತು, “ ಎಲೈ ಮುನೀಂದ್ರನೆ ! ನಿನ್ನ ಮಾತನ್ನು ಕೇಳಿ ಎಲ್ಲ ದೇಶಗಳ ಬ್ರಾಹ್ಮಣರೂ, ಋಷಿಗಳೂ ಬಂದಿರುವರು. ಮಹೋದಯನೇ ಮೊದಲಾದ ವಸಿಷ್ಠಮುನಿಯ ಪುತ್ರರನ್ನುಳಿದ ಮಿಕ್ಕ ಮಹರ್ಷಿಗಳೆಲ್ಲರೂ ಬರುತ್ತಲೂ ಇರುವರು. ಆ ವಸಿಷ್ಠಕುವರರು ಕೋಪದಿಂದ ಯಾವ ನುಡಿ

ಯಸ್ಯ ಚಂಡಾಲಸ್ಯ ವಿಶೇಷತಃ ||೧೩|| ಕಥಂ ಸದಸಿ ಭೋಕ್ತಾರೋ ಹವಿಸ್ತಸ್ಯ ಸುರರ್ಷಯಃ||ಬ್ರಾಹ್ಮಣಾವಾ ಮಹಾತ್ಮಾನೋ ಭುಕ್ತ್ವಾ ಚಂಡಾಲ ಭೋಜನಂ || ೧೪ || ಕಥಂ ಸ್ವರ್ಗಂ ಗಮಿಷ್ಯಂತಿ ವಿಶ್ವಾಮಿತ್ರೇಣ ಪಾಲಿತಾಃ || ಏತದ್ವಚನ ನೈಷ್ಠುರ್ಯಂ ಮೂಚು ಸ್ಸಂರಕ್ತ ಲೋಚನಾಃ || ೧೫ || ವಾಸಿಷ್ಠಾ ಮುನಿ ಶಾರ್ದೂಲ ಸರ್ವೇತೇ ಸಮಹೋದಯಾಃ || ತೇಷಾಂ ತದ್ವಚನಂ ಶೃತ್ವಾ ಸರ್ವೇಷಾಂ ಮುನಿಪುಂಗವಃ || ೧೬ || ಕ್ರೋಧ ಸಂರಕ್ತ ನಯನಃ ಸರೋಷ ಮಿದಮಬ್ರವೀತ್ || ಯೇದೂಷಯಂ ತ್ಯದುಷ್ಟಂ ಮಾಂ ತಪಉಗ್ರಂ

ದೇವರ್ಷಿಗಳೂ, ಕಥಂ - ಹೇಗೆ, ಭೋಕ್ತಾರಃ-ಭೋಗಿಸುವರು. ||೧೩|| ಮಹಾತ್ಮಾನಃ-ಮಹಾತ್ಮರಾದ, ಬ್ರಾಹ್ಮಣಾವಾ - ಬ್ರಾಹ್ಮಣರುತಾನೆ, ಚಂಡಾಲಭೋಜನಂ - ಚಂಡಾಲಾನ್ನವನ್ನು, ಭುಕ್ತ್ವಾ - ಭೋಜನಮಾಡಿ, ವಿಶ್ವಾಮಿತ್ರೇಣ - ವಿಶ್ವಾಮಿತ್ರನಿಂದ, ಪಾಲಿತಾಃ - ಸಂರಕ್ಷಿತರಾಗಿ, ಸ್ವರ್ಗಂ - ಸ್ವರ್ಗವನ್ನು ಕುರಿತು, ಕಥಂಗಮಿಷ್ಯಂತಿ - ಹೇಗೆ ಹೋಗುವರು. || ೧೪ || ಹೇಮುನಿಶಾರ್ದೂಲ - ಎಲೈ ಋಷಿಶ್ರೇಷ್ಠನೆ, ಏತದ್ವಚನನೈಷ್ಠುರ್ಯಂ - ಈ ಮಾತುಗಳ ಕ್ರೌರ್ಯವನ್ನು ಸಮಹೋದಯಾಃ-ಮಹೋದಯನೆಂಬವನಿಂದೊಡಗೂಡಿದ, ಸರ್ವೇ-ಸಮಸ್ತರಾದ, ತೇವಾಸಿಷ್ಠಾಃ-ಆ ವಸಿಷ್ಠಋಷಿಮಕ್ಕಳು, ಸಂರಕ್ತಲೋಚನಾಃ - ಕೆಂಗಣ್ಣುಳ್ಳುಳ್ಳವರಾಗಿ, ಊಚುಃ-ಹೇಳಿದರು. ||೧೫|| ಮುನಿಪುಂಗವಃ-ಋಷಿಶ್ರೇಷ್ಠನಾದ ವಿಶ್ವಾಮಿತ್ರನು, ಸರ್ವೇಷಾಂ-ಸಮಸ್ತರಾದ, ತೇಷಾಂ-ಆ ಶಿಷ್ಯರ, ತದ್ವಚನಂ-ಆ ಮಾತನ್ನು, ಶೃತ್ವಾ-ಕೇಳಿ, ಕ್ರೋಧಸಂರಕ್ತನಯನಃ - ಕ್ರೋಧದಿಂದ ಕೆಂಗಣ್ಣುಳ್ಳವನಾಗಿ, ಸರೋಷಂ - ರೋಷದಿಂದೊಡಗೂಡಿ, ಇದಂ-ಈ ಮಾತನ್ನು, ಅಬ್ರವೀತ್ - ನುಡಿದನು. || ೧೬ || ದುರಾತ್ಮಾನಃ-ದುಷ್ಟಾತ್ಮರಾದ, ಯೇ-ಯಾವವಸಿಷ್ಠರಮಕ್ಕಳು, ಉಗ್ರಂ - ಭಯಂಕರವಾದ, ತಪಃ - ತಪಸ್ಸಿನಲ್ಲಿ, ಸಮಾಸ್ಥಿತಂ - ಇರುವ, ಅದುಷ್ಟಂ - ದೋಷರಹಿತನಾದ, ಮಾಂ - ನನ್ನನ್ನು, ದೂಷಯಂತಿ - ದೂಷಿಸುತ್ತಾರೊ, ತೇ-ಅವರು, ಭಸ್ಮೀಭೂತಾಃ-

ಗಳೆನ್ನಾಡಿದರೋ ಅದನ್ನು ಹೇಳುವೆವು ; ಆಲಿಸುವವನಾಗು “ ಕ್ಷತ್ರಿಯನು ಯಾಗವನ್ನು ಮಾಡಿಸುವವನು ; ಯಜ್ಞವನ್ನು ಮಾಡುವವನಾದರೋ ಚಂಡಾಲನು. ಕ್ಷತ್ರಿಯರಿಗೆ ಯಾಗವನ್ನು ಮಾಡಿಸುವ ಅಧಿಕಾರವೆಲ್ಲುಂಟು ? ಚಂಡಾಳನಿಗೆ ಯಾಗವನ್ನು ಮಾಡುವುದಕ್ಕೆ ತಾನೆ ಅಧಿಕಾರವೆಲ್ಲಿಯದು ? ಇಂತಹುದರಲ್ಲಿ ಕ್ಷತ್ರಿಯನು ಚಂಡಾಲನಿಗೆ ಮಾಡಿಸುವ ಯಜ್ಞದಲ್ಲಿ ದೇವರ್ಷಿಗಳು ಹವಿರ್ಭಾಗಗಳನ್ನು ಸ್ವೀಕರಿಸುವುದೆಂತು ? ಮಹಾತ್ಮರಾದ ಬ್ರಾಹ್ಮಣರು ಚಂಡಾಳಾನ್ನವನ್ನುಂಡು, ವಿಶ್ವಾಮಿತ್ರನಿಂದ ಪಾಲಿತರಾಗಿ ಸ್ವರ್ಗವನ್ನು ಹೇಗೆ ತಾನೆ ಸೇರಿಯಾರು ? ” ಅಯ್ಯಾ ಮುನಿಪುಂಗವನೆ ! ಕೋಪದಿಂದ ಕೆಂಪೊಗೆದ ಕಂಗಳುಳ್ಳವರಾದ ಮಹೋದಯನೇ ಮೊದಲಾದವರು ಈ ರೀತಿಯಾಗಿ ನಿಷ್ಠುರವಾಕ್ಯಗಳನ್ನಾಡಿದರು ” ಎಂದರು. || ೧೫ || ಅಯ್ಯಾ ರಘುರಾಮನೆ ! ಈ ರೀತಿ ನುಡಿದ ಶಿಷ್ಯರಮಾತುಗಳನ್ನು ಕೇಳಿ ಕೋಪದಿಂದ ಕೆಂಪಾದ ಕಂಗಳುಳ್ಳ ವಿಶ್ವಾಮಿತ್ರಮುನೀಶ್ವರನು ಬಹಳವಾದ ರೋಷದಿಂದೊಡಗೂಡಿ, “ ಎಲೈ ಶಿಷ್ಯರಿರಾ ! ಯಾರು ಶ್ರೇಷ್ಠನಾಗಿಯೂ, ತಪಸ್ಸಿನಿಂದ ಉಗ್ರನಾಗಿಯೂ ಇರುವ ನನ್ನನ್ನು ದೂಷಿಸುತ್ತಾರೆಯೋ ಅಂತಹ ದುರಾತ್ಮರು



ಗಂಗಾ ಭಗೀರಥ




ಪುಟ ೩೬೦ ಗಂಗಾವತರಣ.

ಸಮಾಸ್ಥಿತಂ ||೧೭|| ಭಸ್ಮೀಭೂತಾ ದುರಾತ್ಮಾನೋ ಭವಿಷ್ಯಂತಿ ನಸಂಶಯಃ|| ಅದ್ಯತೇ ಕಾಲಪಾಶೇನ ನೀತಾ ವೈವಸ್ವತ ಕ್ಷಯಂ || ೧೮ || ಸಪ್ತಜಾತಿ ಶತಾನ್ಯೇವ ಮೃತಪಾ ಸ್ಸಂತು ಸರ್ವಶಃ||ಶ್ವಮಾಂಸ ನಿಯತಾಹಾರಾ ಮುಷ್ಟಿಕಾ ನಾಮ ನಿರ್ಘೃಣಾಃ || ೧೯ || ವಿಕೃತಾಶ್ಚ ವಿರೂಪಾಶ್ಚ ಲೋಕಾನನು ಚರಂ ತ್ವಿಮಾ೯ || ಮಹೋದಯಸ್ತು ದುರ್ಬುದ್ಧಿ ರ್ಮಾಮದೂಷ್ಯಂ ಹ್ಯದೂ ಷಯತ್ || ೨೦ || ದೂಷಿತ ಸ್ಸರ್ವಲೋಕೇಷು ನಿಷಾದತ್ವಂ ಗಮಿಷ್ಯತಿ || ಪ್ರಾಣಾತಿಪಾತ ನಿರತೋ ನಿರನುಕ್ರೋಶತಾಂ ಗತಃ ||೨೧|| ದೀರ್ಘಕಾಲಂ ಮಮಕ್ರೋಧಾದ್ದುರ್ಗತಿಂ ವರ್ತಯಿಷ್ಯತಿ || ಏತಾವದುಕ್ತ್ವಾ ವಚನಂ ವಿಶ್ವಾ ಮಿತ್ರೋ ಮಹಾತಪಾಃ||ವಿರರಾಮ ಮಹಾತೇಜಾ ಋಷಿಮಧ್ಯೇಮಹಾಮುನಿಃ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೊನಷಷ್ಟಿತಮಸ್ಸರ್ಗಃ.

---

ಭಸ್ಮೀಭೂತರು, ಭವಿಷ್ಯಂತಿ - ಆಗುವರು, ನಸಂಶಯಃ - ಸಂಶಯವಿಲ್ಲ, || ೧೭ || ಅದ್ಯ - ಈಗ ತೇ-ಆ ವಸಿಷ್ಠರ ಮಕ್ಕಳು, ಕಾಲಪಾಶೇನ - ಯಮಪಾಶದಿಂದ, ವೈವಸ್ವತಕ್ಷಯಂ-ಯಮಾಲಯ ವನ್ನು, ನೀತಾಃ - ಹೊಂದಿಸಲ್ಪಟ್ಟು, ಸಪ್ತಜಾತಿ ಶತಾನ್ಯೇವ - ಏಳುನೂರು ಜನ್ಮಗಳಲ್ಲಿ, ಸರ್ವಶಃ- ಸರ್ವರೂ, ಮೃತಪಾಃ - ಮೃತಶರೀರಭಕ್ಷಕರು, ಸಂತು - ಆಗಲಿ, || ೧೮ || ಶ್ವಮಾಂಸ ನಿಯತಾಹಾರಾಃ - ನಾಯಿಯಮಾಂಸದಿಂದ ಕ್ಲುಪ್ತವಾದ ಆಹಾರವುಳ್ಳ, ನಿರ್ಘೃಣಾಃ ದಯಾಹೀನ ರಾದ, ಮುಷ್ಟಿಕಾನಾಮ-ಮುಷ್ಟಿಕರೆಂದು ಪ್ರಸಿದ್ಧರಾದ, ವಿಕೃತಾಶ್ಚ - ವಿಕಾರ ರೂಪವುಳ್ಳವರಾಗಿ, ವಿರೂಪಾಶ್ಚ - ವಿರುದ್ಧ ಸ್ವಭಾವ ವುಳ್ಳವರಾಗಿ, ಇಮಾ೯ಲೋಕಾ೯ - ಈ ಲೋಕಗಳನ್ನು ಕುರಿತು, ಅನುಚರಂತು - ಸಂಚರಿಸಲಿ, ||೧೯|| ದುರ್ಬುದ್ಧಿಃ - ದುಷ್ಟಬುದ್ಧಿಯುಳ್ಳ, ಮಹೋದಯಸ್ತು- ಮಹೋದಯನಾದರೆ, ಹಿ - ಯಾವಕಾರಣ, ಅದೂಷ್ಯಂ ದೂಷಣೆಗೆ ಅನರ್ಹನಾದ, ಮಾಂ-ನನ್ನನ್ನು, ಅದೂಷಯತ್-ದೂಷಿಸಿದನೊ, ತಸ್ಮಾತ್ - ಆ ಕಾರಣ, ಸರ್ವಲೋಕೇಷು - ಸಮಸ್ತ ಲೋಕಗಳಲ್ಲಿ ಯೂ, ದೂಷಿತಃ - ನಿಂದಿತನಾಗಿ, ನಿಷಾದತ್ವಂ - ವ್ಯಾಧತ್ವವನ್ನು, ಗಮಿಷ್ಯತಿ-ಹೊಂದುವನು. ||೨೦|| ಪ್ರಾಣಾತಿಪಾತನಿರತಃ - ಬಲಾತ್ಕಾರದಿಂದ ಪ್ರಾಣತೆಗೆವುದರಲ್ಲಿ ಆಸಕ್ತನಾಗಿ, ನಿರನುಕ್ರೋಶತಾಂ- ನಿರ್ಘೃಣತ್ವವನ್ನು, ದೀರ್ಘಕಾಲಂ - ಬಹುಕಾಲ, ಗತಃ - ಹೊಂದಿ, ಮಮ ನನ್ನ, ಕ್ರೋಧಾತ್- ಕೋಪದಿಂದ, ದುರ್ಗತಿಂ-ನರಕ ಗತಿಯನ್ನು, ವರ್ತಯಿಷ್ಯತಿ - ಹೊಂದುತ್ತಾನೆ. ||೨೧|| ಮಹಾ ತಪಾಃ - ಮಹಾ ತಪಸ್ವಿಯಾದ, ಮಹಾತೇಜಾಃ - ಅತಿ ತೇಜಸ್ವಿಯಾದ, ಮಹಾಮುನಿಃ-ಮಹರ್ಷಿ ಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಏತಾವದ್ವಚನಂ - ಇಷ್ಟು ಮಾತನ್ನು ಮಾತ್ರ, ಋಷಿ ಮಧ್ಯೇ - ಋಷಿಗಳ ಮಧ್ಯದಲ್ಲಿ, ಉಕ್ತ್ವಾ - ಹೇಳಿ, ವಿರರಾಮ - ಸುಮ್ಮನಾದನು. ||೨೨||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಷಷ್ಟಿತಮಸ್ಸರ್ಗಃ.

---

ಭಸ್ಮೀಭೂತರಾಗುವರೆಂಬುದರಲ್ಲಿ ಸಂಶಯವಿಲ್ಲವು. ||೧೭|| ಇಷ್ಟೆಯಲ್ಲದೆ ಆ ವಸಿಷ್ಠಪುತ್ರರು ಈಗ ಯಮಪಾಶಕ್ಕೆ ಸಿಲುಕಿ, ಯಮಾಲಯವನ್ನು ಹೊಂದಿ, ಏಳುನೂರು ಜನ್ಮಗಳು ಮೃತ ಶರೀರಭಕ್ಷಕರಾಗಿಯೂ, ಶ್ವಮಾಂಸಾಹಾರಿಗಳಾಗಿಯೂ, ನಿರ್ದಯರೂ,ಮುಷ್ಟಿಕರೆಂದು ಪ್ರಸಿ ದ್ಧರೂ. ವಿಕಾರರೂಪುಳ್ಳವರೂ ಆಗಿ ಈ ಲೋಕಗಳಲ್ಲಿ ಸಂಚರಿಸುತ್ತಿರಲಿ.ದುಷ್ಟಬುದ್ಧಿಯುಳ್ಳ ಮಹೋದಯನು, ದೂಷಣಾರ್ಹನಲ್ಲದ ನನ್ನನ್ನು ಅಲ್ಲಿಗಳೆದನಾದುದರಿಂದ ಸರ್ವರಿಂದಲೂ ದೂಷಿತನಾಗಿ, ವ್ಯಾಧಜನ್ಮವಂ ಪಡೆದು, ಪ್ರಾಣಾಪಹಾರಿಯೂ, ದಯಾರಹಿತನೂ, ನನ್ನ ಕ್ರೋಧದಿಂದ ಬಹುಕಾಲ ನರಕದಲ್ಲಿರುವವನೂ ಆಗಲಿ" ಎಂದು ನುಡಿದು ಸುಮ್ಮನಾದನು.||

ಇಂತಿದು ವಿಶ್ವಾಮಿತ್ರಕೃತ ವಸಿಷ್ಠಪುತ್ರಶಾಪಾನುವರ್ಣನವೆಂಬ
ಐವತ್ತೊಂಬತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಷಷ್ಟಿತಮಸ್ಸರ್ಗಃ.

ತಪೋಬಲ ಹತಾನ್ ಕೃತ್ವಾವಾಸಿಷ್ಠಾನ್ ಸಮಹೋದಯಾನ್ || ಋಷಿ
ಮಧ್ಯೇ ಮಹಾತೇಜಾ ವಿಶ್ವಾಮಿತ್ರೋ ಭ್ಯಭಾಷತ || ೧ || ಅಯ ಮಿಕ್ಷ್ವಾ
ಕುದಾಯಾದ ಸ್ತ್ರಿಶಂಕುರಿತಿ ವಿಶ್ರುತಃ || ಧರ್ಮಿಷ್ಠಶ್ಚ ವದಾನ್ಯಶ್ಚ ಮಾಂಚೈವ
ಶರಣಂ ಗತಃ || ೨ || ತೇನಾನೇನ ಶರೀರೇಣ ದೇವಲೋಕ ಜಿಗೀಷಯಾ||
ಯಥಾಯಂ ಸಶರೀರೇಣ ಸ್ವರ್ಗಲೋಕಂ ಗಮಿಷ್ಯತಿ ||೩|| ತಥಾ ಪ್ರವ
ರ್ತ್ಯತಾಂ ಯಜ್ಞೋ ಭವದ್ಭಿಶ್ಚ ಮಯಾಸಹ || ವಿಶ್ವಾಮಿತ್ರ ವಚಶ್ಶ್ರುತ್ವಾ

---

ಮಹಾತೇಜಾಃ - ತಪೋ ಮಹಿಮೆಯಿಂದ ಹುಟ್ಟಿದ ತೇಜಸ್ಸುಳ್ಳ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಸಮಹೋದಯಾನ್ - ಮಹೋದಯನಿಂದೊಡಗೂಡಿದ, ವಾಸಿಷ್ಠಾನ್ - ವಸಿಷ್ಠ ಋಷಿ ಮಕ್ಕಳನ್ನು, ತಪೋಬಲಹತಾನ್ - ತನ್ನ ತಪೋಬಲದಿಂದ ಹೊಡೆಯಲ್ಪಟ್ಟವರನ್ನಾಗಿ, ಕೃತ್ವಾ - ಮಾಡಿ, ಋಷಿಮಧ್ಯೇ - ಋಷಿಗಳ ಮಧ್ಯದಲ್ಲಿ, ಅಭ್ಯಭಾಷತ - ಮಾತನಾಡಿದನು. || ೧ || ಅಯಂ-ಈ ರಾಜನು, ಇಕ್ಷ್ವಾಕುದಾಯಾದಃ-ಇಕ್ಷ್ವಾಕು ಮಹಾರಾಜನ ವಂಶದವನು, ತ್ರಿಶಂಕುರಿತಿ-ತ್ರಿಶಂಕು ರಾಯನೆಂದು, ವಿಶ್ರುತಃ ಪ್ರಖ್ಯಾತನಾಗಿರುವನು, ಧರ್ಮಿಷ್ಠಶ್ಚ - ಧರ್ಮಿಷ್ಠನೂ ಆಗಿಧಾನೆ, ವದಾನ್ಯಶ್ಚ - ದಾತೃವಾಗಿರುವನು, ತೇನಾನೇನಶರೀರೇಣ-ಆ ಈ ಶರೀರದಿಂದಲೆ, ದೇವಲೋಕಜಿಗೀಷಯಾ-ದೇವಲೋಕವನ್ನು ಜಯಿಸಲಿಚ್ಛೆಯಿಂದ, ಮಾಂಚೈವ - ನನ್ನನ್ನೇ, ಶರಣಂ - ರಕ್ಷಕನನ್ನಾಗಿ, ಗತಃ - ಹೊಂದಿದನು || ೨ || ಅಯಂ - ಈ ತ್ರಿಶಂಕು ಮಹಾರಾಯನು, ಯಥಾ - ಹೇಗೆ, ಸ್ವಶರೀರೇಣ - ಸ್ವಶರೀರದೊಡನೆ, ಸ್ವರ್ಗಲೋಕಂ ಸ್ವರ್ಗಲೋಕವನ್ನು, ಗಮಿಷ್ಯತಿ - ಹೊಂದುವನೊ, ತಥಾ - ಹಾಗೆ, ಭವದ್ಭಿಶ್ಚ - ನಿಮ್ಮಿಂದ, ಮಯಾಸಹ - ನನ್ನೊಡಗೂಡಿ, ಯಜ್ಞಃ-ಯಜ್ಞವು ಪ್ರವರ್ತ್ಯತಾಂ - ಪ್ರಯತ್ನ ಮಾಡಲ್ಪಡಲಿ, || ೩ || ವಿಶ್ವಾಮಿತ್ರವಚಃ - ವಿಶ್ವಾಮಿತ್ರನ ಮಾತನ್ನು, ಶ್ರುತ್ವಾ - ಕೇಳಿ, ಸರ್ವಏವ- ಸಮಸ್ತರಾದ, ಧರ್ಮಜ್ಞಾಃ - ಧರ್ಮವನ್ನರಿತವರಾದ, ಮಹರ್ಷಯಃ - ಮಹರ್ಷಿಗಳು, ಸಹಿತಾಃ - ಗುಂಪುಸೇರಿ, ಸಮೇತ್ಯ - ಒಂದು ಧರ್ಮಸಂಹಿತಂ-ಧರ್ಮ

---

ಅಪಾರವಾದ ತೇಜಸ್ಸುಳ್ಳ ವಿಶ್ವಾಮಿತ್ರನು ಮಹೋದಯನಿಂದೊಡಗೂಡಿದ ವಸಿಷ್ಠಮುನಿಕುಮಾರರನ್ನು ತನ್ನ ತಪೋಮಹಿಮೆಯಿಂದ ನಿರ್ಗತಿಕರನ್ನಾಗಿ ಮಾಡಿ ಅಲ್ಲಿ ನೆರೆದಿದ್ದ ಋಷಿಗಳ ಮಧ್ಯೆ ಈ ರೀತಿನುಡಿದನು "ಎಲೈ ಮುನಿಗಳಿರಾ! ಈತನು ಇಕ್ಷ್ವಾಕುವಂಶದವನು; ತ್ರಿಶಂಕುವೆಂದು ಪ್ರಸಿದ್ಧನಾಗಿರುವನು; ಈತನು ಧರ್ಮಿಷ್ಠನೂ ಅನೇಕ ದಾನಧರ್ಮಪರೋಪಕಾರಗಳನ್ನೂ ಮಾಡಿದ್ದಾನೆ. ಇಂತಹ ಈ ತ್ರಿಶಂಕುರಾಜನು ಸಶರೀರಸ್ವರ್ಗಪ್ರಾಪ್ತಿಗೋಸುಗ ನನ್ನನ್ನು ಮರೆಹೊಕ್ಕಿರುವನು. ಆದುದರಿಂದ ನೀವೆಲ್ಲರೂ ನನ್ನೊಡಗೂಡಿ ಈತನು ಶರೀರಸಹಿತವಾಗಿಯೆ ಸ್ವರ್ಗಕ್ಕೆ ತೆರಳುವಂತೆ ಯಾಗವನ್ನು ಮಾಡಿಸಿರಿ" ||೩|| ವಿಶ್ವಾಮಿತ್ರಮುನಿಯೀರೀತಿ ನುಡಿಯಲು ಮಹಾಧರ್ಮಿಷ್ಠರಾದ ಋಷಿಗಳೆಲ್ಲರೂ ಒಟ್ಟುಗೂಡಿ " ಈ ವಿಶ್ವಾಮಿತ್ರಮುನಿಯು ಕುಶಿಕವಂಶೋತ್ಪನ್ನನು; ಮಹಾ ಕೋಪಿಷ್ಠನು. ಈತನು ಹೇಳಿರುವ ಕಾರ್ಯವು

ಸರ್ವಏವ ಮಹರ್ಷಯಃ ॥ ೪ ॥ ಊಚುಸ್ಸಮೇತ್ಯ ಸಹಿತಾ ಧರ್ಮಜ್ಞಾ ಧರ್ಮ ಸಂಹಿತಂ ॥ ಅಯಂ ಕುಶಿಕದಾಯಾದೋ ಮುನಿಃ ಪರಮ ಕೋಪನಃ ॥ ೫ ॥ ಯದಾಹ ವಚನಂ ಸಮ್ಯಗೇತ ತ್ಕಾರ್ಯಂ ನಸಂಶಯಃ ॥ ಅಗ್ನಿ ಕಲ್ಪೋಹಿ ಭಗವಾಞ್ ಶಾಪಂ ದಾಸ್ಯತಿ ರೋಷಿತಃ ॥ ೬ ॥ ತಸ್ಮಾತ್ಪ್ರ ವರ್ತ್ಯತಾಂ ಯಜ್ಞ ಸ್ಸಶರೀರೋ ಯಥಾ ದಿವಂ ॥ ಗಚ್ಛೇ ದಿಕ್ಷ್ವಾಕು ದಾಯಾದೋ ವಿಶ್ವಾಮಿತ್ರಸ್ಯ ತೇಜಸಾ ॥೭॥ ತಥಾಪ್ರವರ್ತ್ಯತಾಂ ಯಜ್ಞ ಸ್ಸರ್ವೇ ಸಮಧಿತಿಷ್ಠತ ॥ ಏವಮುಕ್ತ್ವಾ ಮಹರ್ಷಯ ಶ್ಚಕ್ರುಸ್ತಾಸ್ತಾಃ ಕ್ರಿಯಾ ಸ್ತದಾ ॥ ೮ ॥ ಯಾಜಕಶ್ಚ ಮಹಾತೇಜಾ ವಿಶ್ವಾಮಿತ್ರೋ ಭವತ್ಕ್ರತೌ ॥ ಋತ್ವಿಜ ಶ್ಚಾನುಪೂರ್ವ್ಯೇಣ ಮಂತ್ರವ ನ್ಮಂತ್ರ ಕೋವಿದಾಃ ॥ ೯ ॥ ಚಕ್ರುಃ

ದಿಂದ ಕೂಡಿದ ಮಾತನ್ನು, ಊಚುಃ - ಹೇಳಿದರು, ॥ ೪ ॥ ಅಯಂಮುನಿಃ - ಈ ವಿಶ್ವಾಮಿತ್ರ ಋಷಿಯು, ಕುಶಿಕದಾಯಾದಃ-ಕುಶಿಕ ವಂಶೋತ್ಪನ್ನನು, ಪರಮಕೋಪನಃ - ಬಹಳ ಕೋಪಿಷ್ಠನು, ಯದ್ವಚನಂ - ಯಾವ ಮಾತನ್ನು, ಆಹ - ಹೇಳಿದನೊ, ಏತತ್ - ಆ ಮಾತು, ಸಮ್ಯಕ ಚನ್ನಾಗಿ ಕಾರ್ಯಂ - ಮಾಡತಕ್ಕದು, ಸಂಶಯಃ - ಸಂಶಯವು, ನ - ಇಲ್ಲ. ॥ ೫ ॥ ಹಿ ಯಾವಕಾರಣ, ಅಗ್ನಿಕಲ್ಪಃ - ಅಗ್ನಿಗೆ ಸಮಾನನಾದ, ಭಗವಾನ್ - ಪೂಜ್ಯನಾದ ವಿಶಾಮಿತ್ರನು, ರೋಷಿತಃ-ಸಂಜಾತ ರೋಷವುಳ್ಳವನಾಗಿ, ಶಾಪಂ - ಶಾಪವನ್ನು, ದಾಸ್ಯತಿ - ಕೊಡುತ್ತಾನೆಯೋ, ತಸ್ಮಾತ್-ಆ ಕಾರಣ, ಯಜ್ಞಃ - ಯಜ್ಞವು, ಪ್ರವರ್ತ್ಯತಾಂ - ಆರಂಭಿಸಲ್ಪಡಲಿ, ॥ ೬ ॥ ಇಕ್ಷ್ವಾಕು ದಾಯಾದಃ- ಇಕ್ಷ್ವಾಕು ವಂಶದವನಾದ ತ್ರಿಶಂಕು ರಾಯನು, ವಿಶ್ವಾಮಿತ್ರಸ್ಯ - ವಿಶ್ವಾಮಿತ್ರನ, ತೇಜಸಾ- ಪ್ರಭಾವದಿಂದ, ಸಶರೀರಃ-ಸಶರೀರನಾಗಿ, ಯಥಾ - ಹೇಗೆ, ದಿವಂ-ಸ್ವರ್ಗವನ್ನು ಕುರಿತು, ಗಚ್ಛೇತ್- ಹೊಂದುವನೊ, ತಥಾ - ಹಾಗೆಯೆ, ಯಜ್ಞಃ - ಯಜ್ಞವು, ಪ್ರವರ್ತ್ಯತಾಂ - ನಡೆಯಿಸಲ್ಪಡಲಿ, ಸರ್ವೇ-ಸಮಸ್ತರಾದ ನೀವು, ಸಮಧಿತಿಷ್ಠತ-ಪ್ರಾರಂಭಿಸಿರಿ, ॥ ೭ ॥ ಏವಂ - ಹೀಗೆ, ಉಕ್ತ್ವಾ, ಹೇಳಿ, ಮಹರ್ಷಯಃ - ಮಹರ್ಷಿಗಳು, ತಾಸ್ತಾಃಕ್ರಿಯಾಃ - ಆಯಾಯ ಕರ್ಮಗಳನ್ನು, ಚಕ್ರುಃ- ಮಾಡಿದರು, ಮಹಾತೇಜಾಃ - ಮಹಾ ತೇಜಸ್ವಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಕ್ರತೌ, ಯಜ್ಞದಲ್ಲಿ, ಯಾಜಕಶ್ಚ - ಯಾಜ್ಞ ಕತ್ವವನ್ನು ವಹಿಸಿದವನು, ಅಭವತ್ ಆದನು, ॥೮॥ ಮಂತ್ರ ಕೋವಿದಾಃ - ಮಂತ್ರಜ್ಞರಾದ, ಋತ್ವಿಜಶ್ಚ - ಋತ್ವಿಕ್ಕುಗಳೂ, ಆನುಪೂರ್ವ್ಯೇಣ-ಕ್ರಮದಿಂದ ಮಂತ್ರವತ್ - ಮಂತ್ರವತ್ತಾಗಿ, ಸರ್ವಾಣಿ - ಸಮಸ್ತಗಳಾದ, ಕರ್ಮಾಣಿ - ಕರ್ಮಗಳನ್ನು, ಯಥಾಕಲ್ಪಂ - ಸೂತ್ರಾನುಸಾರವಾಗಿ, ಯಥಾವಿಧಿ-ವಿಧಿಯನ್ನತಿಕ್ರಮಿಸದೆ, ಚಕ್ರುಃ - ಮಾಡಿದರು,

ಅವಶ್ಯಕವಾಗಿ ಮಾಡತಕ್ಕದು. ಪೂಜ್ಯನಾದೀತನು ಅಗ್ನಿಸಮಾನನಾಗಿರುವುದರಿಂದ, ನಾವೀ ಯಾಗವನ್ನು ಮಾಡಿಸದಿದ್ದರೆ ಶಾಪವನ್ನೀಯುವನು. ಆದುದರಿಂದ ಈ ತ್ರಿಶಂಕುವು ಸ್ವರ್ಗವನ್ನು ಹೊಂದುವಂತೆ ಯಾಗವನ್ನು ಮಾಡಿಸಲು ಪ್ರಾರಂಭಿಸುವ. ನೀವೆಲ್ಲರೂ ಸಿದ್ಧರಾಗಿರಿ " ಎಂದರು. ಇಂತು ನುಡಿದ ಆ ಋಷಿಗಳೆಲ್ಲರೂ ಆಯಾಯ ಕ್ರಿಯೆಗಳನ್ನು ಮಾಡಿದವರಾದರು. ಆ ಬಳಿಕ ವಿಶ್ವಾಮಿತ್ರನು ಯಾಜಕನಾದನು;ಮಂತ್ರನೇತೃಗಳಾದ ಋತ್ವಿಕ್ಕುಗಳೆಲ್ಲರೂ ಕ್ರಮವಾಗಿ ಆಯಾಯ ಕರ್ಮಗಳನ್ನು ಸೂತ್ರಕ್ಕೂ, ಶಾಸ್ತ್ರಕ್ಕೂ ಸಮಂಜಸ ವಾಗಿ ಮಾಡಿದರು. ಆಗಲಾ ವಿಶ್ವಾಮಿತ್ರನು ಹವಿರ್ಭಾಗಕ್ಕಾಗಿ ದೇವತೆಗಳನ್ನು ಕರೆದನು ಇಂತು ಆಹೂತರಾದರೂ ದೇವತೆಗಳಾರೂ ಬರಲಿಲ್ಲ. ॥ ೯ ॥ ಆ ಸಮಯದಲ್ಲಿ ವಿಶ್ವಾಮಿ

ಕರ್ಮಾಣಿ ಸರ್ವಾಣಿ ಯಥಾಕಲ್ಪಂ ಯಥಾವಿಧಿ ॥ ತತಃಕಾಲೇನ ಮಹತಾ ವಿಶ್ವಾಮಿತ್ರೋ ಮಹಾತಪಾಃ ॥೧೦॥ ಚಕಾರಾವಾಹನಂ ತತ್ರ ಭಾಗಾರ್ಥಂ ಸರ್ವದೇವತಾಃ ॥ ನಾಭ್ಯಾಗಮ ಸ್ತದಾಹೂತಾ ಭಾಗಾರ್ಥಂ ಸರ್ವದೇವತಾಃ ॥ ೧೧ ॥ ತತಃ ಕ್ರೋಧಸಮಾವಿಷ್ಟೋ ವಿಶಾಮಿತ್ರೋ ಮಹಾಮುನಿಃ ॥ ಸ್ರುವಮುದ್ಯಮ್ಯ ಸಕ್ರೋಧ ಸ್ತ್ರಿಶಂಕು ಮಿದಮಬ್ರವೀತ್ ॥೧೨॥ ಪಶ್ಯಮೇ ತಪಸೋವೀರ್ಯಂ ಸ್ವಾರ್ಜಿತಸ್ಯ ನರೇಶ್ವರ ॥ ಏಷತ್ವಾಂ ನಶರೀರೇಣನಯಾಮಿ ಸ್ವರ್ಗಮೋಜಸಾ ॥ ೧೩ ॥ ದುಷ್ಪ್ರಾಪಂ ನಶರೀರೇಣ ದಿವಂ ಗಚ್ಛ ನರಾಧಿಪ ॥ ಸ್ವಾರ್ಜಿತಂ ಕಿಂಚಿದಪ್ಯಸ್ತಿ ಮಯಾಹಿ ತಪಸಃ ಫಲಂ ॥ ೧೪ ॥ ರಾಜನ್ ಸ್ವತೇಜಸಾ ತಸ್ಯ ಸಶರೀರೋ ದಿವಂವ್ರಜ ॥ ಉಕ್ತವಾಕ್ಯೇಮುನೌ

॥೯॥ ತತಃ-ಅನಂತರದಲ್ಲಿ, ಮಹಾತಪಾಃ-ಮಹಾ ತಪಸ್ವಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ತತ್ರ-ಆ ಯಜ್ಞ ಕರ್ಮದಲ್ಲಿ, ಮಹತಾಕಾಲೇನ - ದೀರ್ಘಕಾಲದಿಂದ, ಭಾಗಾರ್ಥಂ ಹವಿರ್ಭಾಗಾರ್ಥವಾಗಿ, ಸರ್ವದೇವತಾಃ - ಸಮಸ್ತ ದೇವತೆಗಳನ್ನು ಕುರಿತು, ಅವಾಹನಂ - ಆಹ್ವಾನವನ್ನು, ಚಕಾರ - ಮಾಡಿದನು. ॥ ೧೦ ॥ ತದಾ - ಆಗ, ಭಾಗಾರ್ಥಂ - ಹವಿರ್ಭಾಗಾರ್ಥವಾಗಿ, ಅಹೂತಾಃ - ಕರೆಯಲ್ಪಟ್ಟ, ಸರ್ವದೇವತಾಃ - ಸಮಸ್ತ ದೇವತೆಗಳು, ನಾಭ್ಯಾಗಮನ್-ಬಾರದೇ ಹೋದರು. ॥ ೧೧ ॥ ತತಃ - ಬಳಿಕ, ಕ್ರೋಧಸಮಾವಿಷ್ಟಃ - ಕೋಪಾಕ್ರಾಂತನಾದ, ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಸ್ರುವಂ - ಸ್ರುವವೆಂಬ ಹವಿರ್ಭಾಗವನ್ನು ಕೊಡತಕ್ಕ ಪಾತ್ರೆಯನ್ನು, ಉದ್ಯಮ್ಯ - ಎತ್ತಿ, ಸಕ್ರೋಧಃ-ಕ್ರೋಧಸಹಿತನಾಗಿ, ತ್ರಿಶಂಕುಂ-ತ್ರಿಶಂಕುರಾಯನನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು ॥ ೧೨ ॥ ಹೇನರೇಶ್ವರ - ಎಲೈ ಅರಸೆ, ಮೇ - ನನ್ನಿಂದ, ಸ್ವಾರ್ಜಿತಸ್ಯ - ಸಂಪಾದಿಸಲ್ಪಟ್ಟ, ತಪಸಃ-ತಪಸ್ಸಿನ ವೀರ್ಯಂ-ಶಕ್ತಿಯನ್ನು, ಪಶ್ಯ-ನೋಡು, ಏಷಃ-ಈ ತಪೋಬಲರಾರಾಜಿತನಾದ, ಅಹಂ-ನಾನು, ತ್ವಾಂ-ನಿನ್ನನ್ನು, ಸಶರೀರೇಣ-ಶರೀರದೊಡನೆ, ದುಷ್ಪ್ರಾಪಂ-ಹೊಂದಲಸಾಧ್ಯವಾದ, ಸ್ವರ್ಗಂ-ಸ್ವರ್ಗವನ್ನು, ಓಜಸಾ - ಪ್ರಭಾವದಿಂದ, ನಯಾಮಿ - ಹೊಂದಿಸುತ್ತೇನ ॥೧೩॥ ಹೇನರಾಧಿಪ-ಎಲೈ ರಾಜನೆ, ಸಶರೀರೇಣ - ಶರೀರದೊಡನೆ, ದಿವಂ - ಸ್ವರ್ಗವನ್ನು ಕುರಿತು, ಗಚ್ಛ-ಹೋಗು. ॥೧೩॥ ಹೇರಾಜನ್ - ಎಲೈ ರಾಜನೆ, ಹಿ - ಯಾವ ಕಾರಣ, ಮಯಾ - ನನ್ನಿಂದ, ಸ್ವಾರ್ಜಿತಂ-ಚನ್ನಾಗಿ ಸಂಪಾದಿಸಲ್ಪಟ್ಟ, ತಪಸಃ - ತಪಸ್ಸಂಬಂಧವಾದ, ಫಲಮಪಿ - ಫಲವೂ, ಕಿಂಚಿತ್ - ಕೊಂಚವು, ಅಸ್ತಿ - ಇದೆಯೊ, ತಸ್ಯ - ಆ ಫಲದ, ಸ್ವತೇಜಸಾ - ಸ್ವಕೀಯ ಅಸಾಧಾರಣ ಪ್ರಭಾವದಿಂದ, ಸಶರೀರಃ - ಶರೀರ ಸಹಿತನಾಗಿ, ದಿವಂ - ಸ್ವರ್ಗವನ್ನು, ವ್ರಜ-ಹೊಂದು, ॥೧೪॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ತಸ್ಮಿನ್ಮುನೌ - ಆ ವಿಶ್ವಾಮಿತ್ರ ಋಷಿಯು, ಉಕ್ತವಾಕ್ಯೇಸತಿ - ಹೇಳಲ್ಪಟ್ಟ

ತ್ರಮುನಿಯು, ಬಹಳವಾದ ಕೋಪವನ್ನು ತಾಳಿ ಸ್ರುವವನ್ನೆತ್ತಿಕೊಂಡು ತ್ರಿಶಂಕುವನ್ನು ಕುರಿತು, "ಎಲೈರಾಜನೆ! ಸ್ವಾರ್ಜಿತವಾದ ನನ್ನ ತಪೋಬಲವನ್ನು ಪರಿಕಿಸು. ಹೊಂದಲಸದಳವಾದ ಸ್ವರ್ಗವನ್ನು ನಶರೀರವಾಗಿಯೇ ಹೊಂದಿಸುವೆನು; ಹೊರಡು. ನನ್ನಿಂದ ಸಂಪಾದಿತವಾದ ತಪಃಫಲವು ಸ್ವಲ್ಪವಾದರೂ ಇರುವುದು. ಆ ಫಲಪ್ರಭಾವದಿಂದ ನಶರೀರವಾಗಿಯೆ ಸ್ವರ್ಗವನ್ನು ಹೊಂದು" ಎಂದನು. ॥೧೪॥ ಇಂತನಲಾ ತ್ರಿಶಂಕುರಾಯನು ಋಷಿಪುಂಗವ

ತಸ್ಮಿನ್ ಸಶರೀರೋ ನರೇಶ್ವರಃ ||೧೫|| ದಿವಂ ಜಗಾಮ ಕಾಕುತ್ಸ್ಥ ಮುನೀ ನಾಂಪಶ್ಯತಾಂ ತದಾ || ದೇವಲೋಕಗತಂ ದೃಷ್ಟ್ವಾ ತ್ರಿಶಂಕುಂ ಪಾಕಶಾಸನಃ || ೧೬ || ಸಹಸರ್ವೈ ಸ್ಸುರಗಣೈ ರಿದಂ ವಚನಮಬ್ರವೀತ್ || ತ್ರಿಶಂಕೋ ಗಚ್ಛಭೂಯಸ್ತ್ವಂ ನಾಸ್ತಿ ಸ್ವರ್ಗ ಕೃತಾಲಯಃ ||೧೭|| ಗುರುಶಾಪಹತೋ ಮೂಢ ಪತ ಭೂಮಿಮವಾಕ್ಛಿರಾಃ || ಏವಮುಕ್ತೋ ಮಹೇಂದ್ರೇಣ ತಿಶಂಕು ರಪತತ್ಪುನಃ || ೧೮ || ಚುಕ್ರೋಶಮಾನ ಸ್ತ್ರಾಹೀತಿ ವಿಶ್ವಾಮಿತ್ರಂ ತಪೋಧನಂ || ತಚ್ಛ್ರುತ್ವಾ ವಚನಂ ತಸ್ಯ ಕ್ರೋಶಮಾನಸ್ಯ ಕೌಶಿಕಃ || ೧೯ || ರೋಷಮಾಹರಯ ತ್ತೀವ್ರಂತಿಷ್ಠತಿಷ್ಠೇತಿ ಚಾಬ್ರವೀತ್ ||

---

ಮಾತುಗಳುಳ್ಳವನಾಗಲು, ನರೇಶ್ವರಃ - ತ್ರಿಶಂಕುರಾಯನು, ಸಶರೀರಃ - ಶರೀರದೊಡನೆ, ತದಾ - ಆಗ, ಮುನೀನಾಂ - ಋಷಿಗಳು, ಪಶ್ಯತಾಂ - ನೋಡುತ್ತಿರುವ ಹಾಗೆಯೆ, ದಿವಂ - ಸ್ವರ್ಗಲೋಕವನ್ನು ಕುರಿತು, ಜಗಾಮ - ತೆರಳಿದನು, || ೧೫ || ಪಾಕಶಾಸನಃ - ದೇವೇಂದ್ರನು, ದೇವಲೋಕಗತಂ - ಸ್ವರ್ಗಲೋಕವನ್ನು ಹೊಂದಿದ, ತ್ರಿಶಂಕುಂ - ತ್ರಿಶಂಕು ಮಹಾರಾಯನನ್ನು, ದೃಷ್ಟ್ವಾ - ಕಂಡು, ಸರ್ವೈಃ - ಸಮಸ್ತರಾದ, ಸುರಗಣೈಸ್ಸಹ - ದೇವತೆಗಳೊಡನೆ, ಇದಂವಚನಂ- ಈ ಮಾತನ್ನು, ಅಬ್ರವೀತ್ - ನುಡಿದನು. || ೧೬ || ಹೇತ್ರಿಶಂಕೋ- ಎಲೈ ತ್ರಿಶಂಕುವೆ, ತ್ವಂ- ನೀನು, ಭೂಯಃ - ಮತ್ತು, ಗಚ್ಛ - ಹೋಗು, ಸ್ವರ್ಗಕೃತಾಲಯಃ - ಸ್ವರ್ಗದಲ್ಲಿ ಮಾಡಲ್ಪಟ ವಾಸವುಳ್ಳವನು, ನಾಸಿ - ಅಗಬೇಡ, ಹೇಮೂಢ - ಎಲೈ ಮೂಢನೆ, ಗುರುಶಾಪಹತಃ - ಗುರುಗಳಾದ ವಸಿಷ್ಠರಶಾಪದಿಂದ ಹತನಾದ, ತ್ವಂ-ನೀನುಅವಾಕ್ಛಿರಾಃ-ತಲೆಕೆಳಗೆಮಾಡಿದವನಾಗಿ,ಭೂಮಿಂ- ಭೂಮಿಯಲ್ಲಿ, ಪತ - ಬೀಳುವವನಾಗು, || ೧೭ || ಏವಂ - ಈ ಪರಿ, ಮಹೇಂದ್ರೇಣ-ದೇವೇಂದ್ರನಿಂದ, ಉಕ್ತಃ - ಹೇಳಲ್ಪಟ್ಟ, ತ್ರಿಶಂಕುಃ - ತ್ರಿಶಂಕು ಮಹಾರಾಯನು, ತಪೋಧನಂ - ತಪಸ್ಸೇ ಧನವಾಗುಳ್ಳ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ತ್ರಾಹೀತಿ- ಸಂರಕ್ಷಿಸೆಂದು, ಚುಕ್ರೋಶಮಾನಃ - ಕೂಗುತ್ತ, ಪುನಃ - ಮತ್ತು, ಅಪತತ್ - ಬಿದ್ದನು, || ೧೮ || ಕೌಶಿಕಃ - ವಿಶ್ವಾಮಿತ್ರನು, ಕ್ರೋಶಮಾನಸ್ಯ - ಕೂಗುತ್ತಿರುವ, ತಸ್ಯ - ಆ ತ್ರಿಶಂಕು ಮಹಾರಾಯನ, ತದ್ವಚನಂ- ಆ ಮಾತನ್ನು, ಶ್ರುತ್ವಾ - ಕೇಳಿ, ತೀವ್ರಂ - ತೀಕ್ಷ್ಣವಾದ, ರೋಷಂ- ಕೋಪವನ್ನು, ಆಹಾರಯತ್- ಮಾಡಿದನು, ತಿಷ್ಠತಿಷ್ಠ - ಇರುಇರು, ಇತಿ - ಇಂತೆಂದು, ಅಬ್ರವೀಚ್ಚ - ನುಡಿಯಲೂ ನುಡಿದನು. ||೧೯|| ಋಷಿಮಧ್ಯೇ - ಋಷಿಗಳ ಮಧ್ಯದಲ್ಲಿ, ಅಪರಃ - ಮತ್ತೊಬ್ಬನಾದ, ಪ್ರಜಾಪತಿರಿವ

---

ರೆಲ್ಲರೂ ನೋಡುತ್ತಿರುವಂತೆಯೆ ಸ್ವರ್ಗವನ್ನು ಹೊಂದಿದನು. ಬಳಿಕ ತನ್ನಲೋಕವನ್ನುಕುರಿತು ಬಂದ ತ್ರಿಶಂಕುವನ್ನು ನೋಡಿದ ದೇವೇಂದ್ರನು ದೇವತೆಗಳಿಂದೊಡಗೂಡಿ ಅವನನ್ನುಕುರಿತು " ಎಲೈ ತ್ರಿಶಂಕುವೆ! ಗುರುಶಾಪಹತನಾದ ನೀನು ಸ್ವರ್ಗದಲ್ಲಿರಲು ಯೋಗ್ಯನಲ್ಲ. ಆದುದರಿಂದೆಲೈಮೂಢನೆ! ತಲೆಕೆಳಕಾಗಿ ಭೂಮಿಯಲ್ಲಿ ಬೀಳುವವನಾಗು "ಎಂದನು. ಆಗಲಾ ತ್ರಿಶಂಕುರಾಯನು ಅವಾಕ್ಛಿರನಾಗಿ ನೆಲಕ್ಕೆ ಬೀಳುತ್ತ ವಿಶ್ವಾಮಿತ್ರನನ್ನು ಕುರಿತು "ತ್ರಾಹಿ! ತ್ರಾಹಿ" ಎಂದು ಪ್ರಲಪಿಸಿದನು.||೧೮||ಕುಶಿಕನಂದನನಾದ ವಿಶ್ವಾಮಿತ್ರನೀರೋದನಧ್ವನಿಯನ್ನು ಕೇಳಿ, ಮಹತ್ತರವಾದ ಕೋಪವನ್ನುತಾಳಿ "ನಿಲ್ಲುನಿಲ್ಲು" ಎಂದನು ಆ ಬಳಿಕ ಮಹಾತ್ಮನಾದೀ

ಋಷಿಮಧ್ಯೇ ಸತೇಜಸ್ವೀ ಪ್ರಜಾಪತಿ ರಿವಾಪರಃ ॥ ೨೦ ॥ ಸೃಜ ದಕ್ಷಿಣ ಮಾರ್ಗಸ್ಥಾ ಸಪ್ತರ್ಷೀ ಸಪರಾ ಪುನಃ ॥ ನಕ್ಷತ್ರ ಮಾಲಾಮಪರಾ ಮಸೃಜ ತ್ಕ್ರೋಧ ಮೂರ್ಛಿತಃ ॥ ೨೧॥ ದಕ್ಷಿಣಾಂ ದಿಶಮಾಸ್ಥಾಯ ಮುನಿಮಧ್ಯೇ ಮಹಾಯಶಾಃ ॥ ಸೃಷ್ಟ್ವಾ ನಕ್ಷತ್ರವಂಶಂಚ ಕ್ರೋಧೇನ ಕಲುಷೀಕೃತಃ॥೨೨॥ ಅನ್ಯಮಿಂದ್ರಂ ಕರಿಷ್ಯಾಮಿ ಲೋಕೋವಾ ಸ್ಯಾದನಿಂದ್ರಕಃ ॥ ದೈವತಾನ್ಯಪಿ ಸಕ್ರೋಧಾ ತ್ಸ್ರಷ್ಟುಂ ಸಮುಪಚಕ್ರಮೇ ॥ ೨೩ ॥ ತತಃ ಪರಮಸಂಭ್ರಾಂತಾ ಸ್ಸರ್ಷಿಸಂಘಾ ಸ್ಸುರಾಸುರಾಃ ॥ ವಿಶ್ವಾಮಿತ್ರಂ ಮಹಾತ್ಮಾನ ಮೂಚು ಸ್ಸಾನುನಯಂ ವಚಃ ॥ ೨೪ ॥ ಅಯಂ ರಾಜಾ ಮಹಾಭಾಗ

ಬ್ರಹ್ಮನಂತೆ, ತೇಜಸ್ವೀ - ಪ್ರಭಾವವಂತನಾದ, ಸಃ - ಆ ವಿಶ್ವಾಮಿತ್ರ ಋಷಿಯು, ದಕ್ಷಿಣಮಾರ್ಗಸ್ಥಾನ್ - ದಕ್ಷಿಣ ಮಾರ್ಗದಲ್ಲಿರುವ, ಸಪ್ತರ್ಷೀನ್ - ಸಪ್ತ ಋಷಿಗಳನ್ನು, ಪುನಃ-ಮತ್ತು ಅಪರಾನ್-ಕೆಲವರನ್ನು, ಸೃಜನ್ - ಸೃಷ್ಟಿ ಮಾಡಿದವನು, ಅಭೂತ್-ಆದನು. ||೨೦|| ಮುನಿಮಧ್ಯೇ-ಋಷಿಗಳ ಮಧ್ಯದಲ್ಲಿ, ಮಹಾಯಶಾಃ - ಮಹಾ ಕೀರ್ತಿವಂತನಾದ ವಿಶ್ವಾಮಿತ್ರನು, ದಕ್ಷಿಣಾಂದಿಶಂ-ದಿಕ್ಷಿಣ ದಿಕ್ಕನ್ನು, ಆಸ್ಥಾಯ - ಆಸರೆಯಾಗಿ ಮಾಡಿಕೊಂಡು, ಕ್ರೋಧಮೂರ್ಛಿತಃ- ಕ್ರೋಧದಿಂದ ಪ್ರಜ್ಞೆತಪ್ಪಿ, ಅಪರಾಂ - ಮತ್ತುಕೆಲನಾದ, ನಕ್ಷತ್ರಮಾಲಾಂ - ನಕ್ಷತ್ರಗಳ ಪಙ್ಕ್ತಿಯನ್ನು, ಅಸೃಜತ್ - ಸೃಷ್ಟಿ ಮಾಡಿದನು. ॥ ೨೧ ॥ ಕ್ರೋಧೇನ - ಕ್ರೋಧದಿಂದ, ಕಲುಷೀಕೃತಃ-ಕಲುಷ ಚಿತ್ತನಾಗಿ ಮಾಡಲ್ಪಟ್ಟ ವಿಶ್ವಾಮಿತ್ರನು, ನಕ್ಷತ್ರವಂಶಂ ನಕ್ಷತ್ರಗಳ ಪರಂಪರೆಯನ್ನು, ಸೃಷ್ಟ್ವಾ-ನಿರ್ಮಿಸಿ, ಅನ್ಯಂ - ಮತ್ತೊಬ್ಬನಾದ, ಇಂದ್ರಂ - ಇಂದ್ರನನ್ನು, ಕರಿಷ್ಯಾಮಿ - ಸೃಷ್ಟಿಮಾಡುವೆನು, ಲೋಕೋವಾ - ಇಂದ್ರಲೋಕವಾದರೂ, ಅನಿಂದ್ರಕಃ - ಇಂದ್ರರಹಿತವಾದುದು, ಸ್ಯಾತ್ - ಆಗಲಿ, ಇತಿ - ಇಂತೆಂದು, ಪ್ರತಿಜ್ಞಾಯ-ಪ್ರತಿಜ್ಞೆಮಾಡಿ, ಸಃ-ಆ ವಿಶ್ವಾಮಿತ್ರನು, ಕ್ರೋಧಾರ್ತ-ಕೋಪದಿಂದ, ದೈವತಾನ್ಯಪಿ - ದೇವತೆಗಳನ್ನೂ, ಸ್ರಷ್ಟುಂ - ಸೃಷ್ಟಿಮಾಡಲು, ಸಮುಪಚಕ್ರಮೇ-ಆರಂಭಮಾಡಿದನು. ॥ ೨೩ ॥ ತತಃ - ಬಳಿಕ, ಪರಮಸಂಭ್ರಾಂತಾಃ - ಬಹಳ ಗಾಬರಿಬಿದ್ದ, ಸುರಾಸುರಾಃ-ದೇವರಾಕ್ಷಸರು, ಸರ್ಷಿಸಂಘಾಃ-ಋಷಿಗಳ ಗುಂಪುಗಳಿಂದ ಕೂಡಿ, ಮಹಾತ್ಮಾನಂ-ಮಹಾ ಧೈರ್ಯಶಾಲಿಯಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಸಾನುನಯಂ-ಅನುಸರಣೆಯಿಂದೊಡಗೂಡಿದ, ವಚಃ - ಮಾತನ್ನು, ಊಚುಃ - ಹೇಳಿದನು ॥ ೨೪ ॥ ಹೇಮಹಾಭಾಗ-

ಕೌಶಿಕನು ಋಷಿಮಧ್ಯದಲ್ಲಿ ಸಾಕ್ಷಾಚ್ಚತುರ್ಮುಖನಂತಿರುವವನಾಗಿ ದಕ್ಷಿಣದಿಕ್ಕಿನಲ್ಲಿ ನಿಂತು ದಕ್ಷಿಣಮಾರ್ಗಸ್ಥರಾದ ಇತರಸಪ್ತರ್ಷಿಗಳನ್ನೂ, ಮತ್ತೊಂದಾದ ನಕ್ಷತ್ರಪಙ್ಕ್ತಿಯನ್ನೂ, ಅವುಗಳಪರಂಪರೆಗಳನ್ನೂ ಸೃಜಿಸಿ "ಬೇರೊಬ್ಬ ಇಂದ್ರನನ್ನು ಸೃಜಿಸುವೆನು. ಇಲ್ಲವೆ ಲೋಕವಾದರೂ ಅನಿಂದ್ರಕವಾಗಿರಲಿ" ಎಂದು ಪ್ರತಿಜ್ಞೆಮಾಡಿ, ಮರಳಿ ದೇವತೆಗಳನ್ನೂ ಸೃಜಿಸಲು ಉದ್ಯುಕ್ತನಾದನು. ||೨೩|| ಆಗ ಋಷಿಸಮೂಹದಿಂದೊಡಗೂಡಿದ ಸುರಾಸುರರೆಲ್ಲರೂ ಮಹಾಮಹಿಮನಾದ ವಿಶ್ವಾಮಿತ್ರಮುನಿಯನ್ನು ಕುರಿತು ವಿನಯಪುರಸ್ಸರವಾಗಿ "ಎಲೈತಪೋಧನನೆ ! ಈ ತ್ರಿಶಂಕುರಾಯನು ಗುರುಶಾಪಗ್ರಸ್ತನಾದುದರಿಂದ ಸಶರೀರವಾಗಿ ಸ್ವರ್ಗವನ್ನು ಹೊಂದಲು ಅರ್ಹನಾಗುವುದೇ ಇಲ್ಲವು," ಎಂದರು. ಆಗ ವಿಶ್ವಾಮಿತ್ರನು ಅವರನ್ನು ಕುರಿತು "ಎಲೈ

ಗುರುಶಾಪ ಪರಿಕ್ಷತಃ || ಸಶರೀರೋ ದಿವಂ೨ಯಾತುಂ ನಾರ್ಹತ್ಯೇವ ತಪೋ ಧನ || ೨೫ || ತೇಷಾಂ ತದ್ವಚನಂ ಶ್ರುತ್ವಾ ದೇವಾನಾಂ ಮುನಿಪುಂಗವಃ|| ಅಬ್ರವೀ ತ್ಸುಮಹದ್ವಾಕ್ಯಂ ಕೌಶಿಕ ಸ್ಸರ್ವದೇವತಾಃ || ೨೬ || ಸಶರೀರಸ್ಯ ಭದ್ರಂವ ಸ್ತ್ರಿಶಂಕೋರಸ್ಯ ಭೂಪತೇಃ|| ಆರೋಹಣಂ ಪ್ರತಿಜ್ಞಾಯ ನಾನೃತಂ ಕರ್ತುಮುತ್ಸಹೇ || ೨೭ || ಸ್ವರ್ಗೋಽಸ್ತು ಸಶರೀರಸ್ಯ ತ್ರಿಶಂಕೋರಸ್ಯ ಶಾಶ್ವತಃ || ನಕ್ಷತ್ರಾಣಿ ಚ ಸರ್ವಾಣಿ ಮಾಮಕಾನಿ ಧೃವಾಣ್ಯಥ || ೨೮ || ಯಾವಲ್ಲೋಕಾ ಧರಿಷ್ಯಂತಿ ತಿಷ್ಠಂತ್ವೇತಾನಿ ಸರ್ವಶಃ || ಮತ್ಕೃತಾನಿ ಸುರಾಸ್ಸರ್ವೇತದನುಜ್ಞಾತು ಮರ್ಹಥ || ೨೯ || ಏವಮುಕ್ತಾ ಸ್ಸುರಾಸ್ಸರ್ವೇ

---

ಎಲೈ ಮಹಾ ಪುಣ್ಯಶಾಲಿಯೇ, ಹೇತಪೋಧನ -ಎಲೈ ತಪವೇ ಧನವಾಗುಳ್ಳವನೆ, ಅಯಂರಾಜಾ-ಈ ಈ ತ್ರಿಶಂಕು ಮಹಾರಾಯನು, ಗುರುಶಾಪಪರಿಕ್ಷತಃ –ಗುರುಶಾಪದಿಂದ ಚಂಡಾಲತ್ವವನ್ನು ಹೊಂದಿ ರುವನಾದುದರಿಂದ, ಸಶರೀರಃ - ಸಶರೀರನಾಗಿ, ದಿವಂ- ಸ್ವರ್ಗಲೋಕವನ್ನು, ಯಾತುಂ ಹೊಂದಲು ನಾರ್ಹತ್ಯೇವ - ಅರ್ಹನಾಗುವದಿಲ್ಲ || ೨೫ || ಮುನಿಪುಂಗವಃ - ಋಷಿಶ್ರೇಷ್ಠನಾದ, ಕೌಶಿಕಃ- ವಿಶ್ವಾಮಿತ್ರನು, ತೇಷಾಂ ದೇವಾನಾಂ - ಆ ದೇವತೆಗಳ, ತದ್ವಚನಂ- ಆ ಮಾತನ್ನು, ಶ್ರುತ್ವಾ-ಕೇಳಿ, ಸರ್ವದೇವತಾಃ - ಸಮಸ್ತ ದೇವತೆಗಳನ್ನೂ ಕುರಿತು, ಸುಮಹತ್- ಅರ್ಥಗುಂಭಿತವಾದ, ವಾಕ್ಯಂ– ಮಾತನ್ನು, ಅಬ್ರವೀತ್ - ನುಡಿದನು. || ೨೬ || ವಃ - ನಿಮಗೆ, ಭದ್ರಂ - ಶುಭವು, ಅಸ್ತು- ಆಗಲಿ, ಸಶರೀರಸ್ಯ – ಶರೀರದೊಡನಿರುವ, ಅಸ್ಯ - ಈ, ನೃಪತೇಃ - ಅರಸಾದ, ತ್ರಿಶಂಕೋಃ- ತ್ರಿಶಂಕು ರಾಯನಿಗೆ, ಆರೋಹಣಂ - ಸ್ವರ್ಗಾರೋಹಣವನ್ನು, ಪ್ರತಿಜ್ಞಾಯ - ಮಾಡಿಸುವೆನೆಂದು ಪ್ರತಿಜ್ಞೆಮಾಡಿ, ಅನೃತಂ - ಸುಳ್ಳನ್ನಾಗಿ, ಕರ್ತುಂ - ಮಾಡಲು, ನೋತ್ಸಹೇ - ಉದ್ಯುಕ್ತನಾಗಲಾ ರೆನು. || ೨೭ || ಸಶರೀರಸ್ಯ - ಶರೀರದೊಡನಿರುವ, ಅಸ್ಯ ತ್ರಿಶಂಕೋಃ - ಈ ತ್ರಿಶಂಕು ಮಹಾರಾಯನಿಗೆ, ಶಾಶ್ವತಃ - ಶಾಶ್ವತವಾದ, ಸ್ವರ್ಗಃ – ಸ್ವರ್ಗವು, ಅಸ್ತು- ಆಗಲಿ, ಅಥ-ಬಳಿಕ, ಮಾಮಕಾನಿ - ನನ್ನ ಸಂಬಂಧವಾದ, ಸರ್ವಾಣಿ - ಸಮಸ್ತ, ನಕ್ಷತ್ರಾಣಿ - ನಕ್ಷತ್ರಗಳು, ಧೃವಾಣಿ- ಶಾಶ್ವತಗಳಾಗಿ, ಲೋಕಾಃ – ಲೋಕಗಳು, ಯಾವತ್ - ಎಷ್ಟು ಪರ್ಯಂತವು, ಸ್ಥಾಸ್ಯಂತಿ–ಇರು ತ್ತವೋ, ತಾವತ್ – ಅಷ್ಟು ಪರ್ಯಂತವು, ಮತ್ಕೃತಾನಿ - ನನ್ನಿಂದ ಸೃಷ್ಟಿ ಮಾಡಲ್ಪಟ್ಟ, ಏತಾನಿ - ಈ ನಕ್ಷತ್ರಗಳು, ಸರ್ವಶಃ-ಸರ್ವ ಪ್ರಕಾರವಾಗಿ, ತಿಷ್ಠಂತು - ಇರಲಿ, ಸರ್ವೇ - ಸಮಸ್ತರಾದ, ಹೇಸುರಾಃ - ಎಲೈ ದೇವತೆಗಳಿರಾ, ತತ್ - ಅದನ್ನು, ಅನುಜ್ಞಾತುಂ - ಸಮ್ಮತಿಸಲು, ಅರ್ಹಥ-

---

ದೇವತೆಗಳಿರಾ ! ನಿಮಗೆ ಮಂಗಳವಾಗಲಿ. ನಾನು ಈ ತ್ರಿಶಂಕುವಿಗೆ ಸಶರೀರಸ್ವರ್ಗವನ್ನು ದೊರಕಿಸುವೆನೆಂದು ಪ್ರತಿಜ್ಞೆಮಾಡಿ, ಅದನ್ನು ಸುಳ್ಳುಮಾಡಲುದ್ಯುಕ್ತನಾಗಲಾರೆನು. ||೨೭|| ಆದುದರಿಂದ ಶರೀರಸಹಿತನಾದೀರಾಯನಿಗೆ ನಾನು ನಿರ್ಮಿಸಿರುವ ಈ ನೂತನ ಸೃಷ್ಟಿಯೆ ಸ್ವರ್ಗವಾಗಿರಲಿ.ನನ್ನಿಂದ ಸೃಜಿಸಲ್ಪಟ್ಟ ಈ ಯಾವ ನಕ್ಷತ್ರಗಳುಂಟೊ ಇವುಹದಿನಾಲ್ಕು ಲೋ ಕಗಳಿರುವವರೆಗೂ ಶಾಶ್ವತವಾಗಿರಲಿ. ಇದಕ್ಕೆ ನೀವು ಸಮ್ಮತಿಸಿರಿ''ಎಂದನು ವಿಶ್ವಾಮಿತ್ರನೀ ರೀತಿ ನುಡಿಯಲು ದೇವತೆಗಳೆಲ್ಲರೂ ಆತನನ್ನು ಕುರಿತು, " ಮಹರ್ಷಿಯೆ! ನೀನು ನುಡಿದಂ ತೆಯೇ ಆಗಲಿ. ನಿನಗೆ ಮಂಗಳವಾಗಿ ; ಅನೇಕವಾಗಿ ಕಾಣುತ್ತಿರುವ ಈ ನಕ್ಷತ್ರಗಳೆಲ್ಲವೂ

ಪ್ರತ್ಯೂಚು ರ್ಮುನಿಪುಂಗವಂ || ೯ ಏವಂ ಭವತು ಭದ್ರಂತೇ ತಿಷ್ಠಂತ್ವೇತಾನಿ ಸರ್ವಶಃ || ೩೦ || ಗಗನೇ ತಾನ್ಯನೇಕಾನಿ ವೈಶ್ವಾನರಪಥಾದ್ಬಹಿಃ || ನಕ್ಷತ್ರಾಣಿ ಮುನಿಶ್ರೇಷ್ಠ ತೇಷು ಜ್ಯೋತಿಃಷು ಜಾಜ್ವಲನ್ || ೩೧ || ಅವಾಕ್ಛಿರಾಸ್ತ್ರಿಶಂಕುಶ್ಚ ತಿಷ್ಠಂತ್ವ ಮರಸನ್ನಿಭಃ || ಅನುಯಾಸ್ಯಂತಿ ಚೈತಾನಿ ಜ್ಯೋತೀಂಷಿ ನೃಪಸತ್ತಮಂ || ೩೨ || ಕೃತಾರ್ಥಂ ಕೀರ್ತಿಮಂತಂ ಚ ಸ್ವರ್ಗಲೋಕಗತಂ ಯಥಾ || ವಿಶ್ವಾಮಿತ್ರಸ್ತು ಧರ್ಮಾತ್ಮಾ ಸರ್ವದೇವೈ ರಭಿಷ್ಟುತಃ || ೩೩ || ಋಷಿಭಿಶ್ಚ ಮಹಾತೇಜಾ ಬಾಢಮಿತ್ಯಾಹ ದೇವತಾಃ || ತತೋ ದೇವಾ ಮಹಾತ್ಮಾನೋ ಮುನಯಶ್ಚ ತಪೋಧನಾಃ || ಜಗ್ಮುರ್ಯಥಾಗತಂ ಸರ್ವೇ ಯಜ್ಞಸ್ಯಾಂತೇ ನರೋತ್ತಮ || ೩೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಟಿತಮಸ್ಸರ್ಗಃ.

ಯೋಗ್ಯರಾಗಿ, || ೨೯ || ಏವಂ - ಹೀಗೆ, ಉಕ್ತಾಃ - ಹೇಳಲ್ಪಟ್ಟ, ಸರ್ವೇಸುರಾಃ - ಸಮಸ್ತ ದೇವತೆಗಳೂ, ಮುನಿಪುಂಗವಂ - ವಿಶ್ವಾಮಿತ್ರನನ್ನು ಕುರಿತು, ಪ್ರತ್ಯೂಚುಃ - ಪ್ರತ್ಯುತ್ತರಕೊಟ್ಟರು. ತೇ-ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಏವಂ - ಇಂತು, ಸರ್ವಶಃ - ಸಮಸ್ತಂಗಳಾದ, ಏತಾನಿ - ಈ ಪರಿದೃಶ್ಯಮಾನಗಳಾದ, ಅನೇಕಾನಿ - ಅನೇಕಗಳಾದ, ಸರ್ವಶಃ - ಸಮಸ್ತಗಳಾದ, ತಾನಿ - ಪ್ರಸಿದ್ಧಗಳಾದ, ನಕ್ಷತ್ರಾಣಿ - ನಕ್ಷತ್ರಗಳು, ವೈಶ್ವಾನರಪಥಾತ್ - ಜ್ಯೋತಿಶ್ಚಕ್ರದ ಮಾರ್ಗಕ್ಕಿಂತಲೂ, ಬಹಿಃ - ಹೊರಗೆ, ಗಗನೇ - ಅಂತರಿಕ್ಷದಲ್ಲಿ, ತಿಷ್ಠಂತು - ಇರಲಿ, ||೩೦|| ಹೇಮುನಿಶ್ರೇಷ್ಠ - ಎಲೈ ಋಷಿಶ್ರೇಷ್ಠನೇ, ತೇಷುಜ್ಯೋತಿಃಷು - ಆ ನಕ್ಷತ್ರಗಳಲ್ಲಿ, ಜಾಜ್ವಲನ್ - ಹೊಳೆಯುತ್ತ, ಅಮರಸನ್ನಿಭಃ - ದೇವತೆಗಳಿಗೆ ಸಮಾನನಾದ, ತ್ರಿಶಂಕುಃ - ತ್ರಿಶಂಕು ಮಹಾರಾಯನು, ಅವಾಕ್ಛಿರಾಃ - ಕೆಳಗೆ ಮಾಡಲ್ಪಟ್ಟ ಶಿರಸ್ಸುಳ್ಳವನಾಗಿ, ತಿಷ್ಠಂತು - ಇರಲಿ, ಏತಾನಿ-ಈ, ಜ್ಯೋತೀಂಷಿ-ಈ ನಕ್ಷತ್ರಗಳು, ಸ್ವರ್ಗಲೋಕಗತಂಯಥಾ -ಸ್ವರ್ಗಲೋಕವನ್ನು ಹೊಂದಿದವನಂತೆ, ಕೃತಾರ್ಥಂ, ಕೃತಪ್ರಯೋಜನವುಳ್ಳ, ಕೀರ್ತಿಮಂತಂ - ಯಶೋವಂತನಾದ, ನೃಪಸತ್ತಮಂ-ರಾಜಶ್ರೇಷ್ಠನಾದ-ಈ ತ್ರಿಶಂಕು ಮಹಾರಾಯನನ್ನು, ಅನುಯಾಸ್ಯಂತಿ - ಅನುಸರಿಸಿಹೋಗುತ್ತಿರಲಿ, || ೩೨ || ಧರ್ಮಾತ್ಮಾ - ಧರ್ಮಿಷ್ಠನಾದ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನಾದರೆ, ಸರ್ವದೇವೈಃ - ಸಮಸ್ತ ದೇವತೆಗಳಿಂದಲೂ, ಋಷಿಭಿಶ್ಚ - ಋಷಿಗಳಿಂದಲೂ, ಮಹಾತೇಜಾಇತಿ - ಮಹಾ ಪ್ರಭಾವವಂತನೆಂದು, ಅಭಿಷ್ಟುತಃ - ಸ್ತೋತ್ರಮಾಡಲ್ಪಟ್ಟವನಾಗಿ, ದೇವತಾಃ - ದೇವತೆಗಳನ್ನು ಕುರಿತು, ಬಾಢಮಿತಿ - ಅಂಗೀಕಾರವೇ ಸರಿಯೆಂದು, ಆಹ - ಹೇಳಿದನು, || ೩೩ || ಹೇನರೋತ್ತಮ - ಎಲೈ ನರಶ್ರೇಷ್ಠನಾದ ಶ್ರೀರಾಮನೇ, ತತಃ - ಬಳಿಕ, ಮಹಾತ್ಮಾನಃ - ಮಹಾನುಭಾವರಾದ, ಸರ್ವೇ-ಸಮಸ್ತರಾದ, ದೇವಾಃ - ದೇವತೆಗಳು, ತಪೋಧನಾಃ - ತಪಸ್ಸೇ ಧನವಾಗುಳ್ಳ, ಮುನಯಶ್ಚ-ಋಷಿಗಳೂ, ಯಜ್ಞಸ್ಯ - ಯಾಗದ, ಅಂತೇ - ಕೊನೆಯಲ್ಲಿ, ಯಥಾಗತಂ - ಬಂದಂತೆ, ಜಗ್ಮುಃ-ಹೊರಟುಹೋದರು. ||೩೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಟಿತಮಸ್ಸರ್ಗಃ.

ಜ್ಯೋತಿಶ್ಚಕ್ರದ ಹೊರಗಣಾವರಣದಲ್ಲಿ ಹೊಳೆಯುತ್ತಿರಲಿ. ಈ ತ್ರಿಶಂಕುರಾಯನು ಆ ನಕ್ಷತ್ರಮಂಡಲದಲ್ಲಿ ದೇವತುಲ್ಯನಾಗಿ ಪ್ರಕಾಶಿಸುತ್ತ ಅವಾಕ್ಛಿರನಾಗಿಯೇ ನಿಂತಿರಲಿ. ಈ ತಾರೆಗಳೂ ಸ್ವರ್ಗವಾಸಿಯಂತೆ ಕೃತಕೃತ್ಯನೂ, ಮಹಾ ಯಶೋವಂತನೂ ಆದ ಈ ರಾಜಶ್ರೇಷ್ಠನನ್ನನುಸರಿಸಿ ಸಂಚರಿಸಲಿ" ಎಂದರು ||೩೨|| ಆ ಬಳಿಕ ವಿಶ್ವಾಮಿತ್ರಮುನಿಯು ಮಹಾಮಹಿಮನೆಂದು, ದೇವತೆಗಳಿಂದಲೂ, ಋಷಿಗಳಿಂದಲೂ ಸ್ತುತಿಸಲ್ಪಟ್ಟು "ಅಂತೆಯೇಆಗಲಿ" ಎಂದು ನುಡಿದನು. ||೩೩|| ಎಲೈ ನರಶ್ರೇಷ್ಠನಾದ ರಾಮಚಂದ್ರನೇ! ಹೀಗೆ ಆ ಯಾಗವು ಪೂರ್ಣವಾದ ಬಳಿಕ ಮಹಾನುಭಾವರಾದ ದೇವತೆಗಳೂ, ತಪೋನಿಷ್ಠರಾದ ಋಷಿಗಳೂ ಹಿಂತಿರುಗಿ ಹೊರಟುಹೋದರು.

ಇಂತಿದು ವಿಶ್ವಾಮಿತ್ರಪ್ರಭಾವ-ತ್ರಿಶಂಕುರಾಯನ ಸದ್ಗತಿಪ್ರಾಪ್ತಿವರ್ಣನ ಎಂಬ ಅರವತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕಷಷ್ಟಿತಮಸ್ಸರ್ಗಃ.

---

ವಿಶ್ವಾಮಿತ್ರೋ ಮಹಾತ್ಮಾಥ ಪ್ರಸ್ಥಿತಾನ್ ಪ್ರೇಕ್ಷ್ಯ ತಾನೃಷೀನ್ ||
ಅಬ್ರವೀ ನ್ನರಶಾರ್ದೂಲ ಸರ್ವಾಂಸ್ತಾನ್ ವನವಾಸಿನಃ ||೧|| ಮಹಾನ್
ವಿಘ್ನಃ ಪ್ರವೃತ್ತೋಽಯಂ ದಕ್ಷಿಣಾ ಮಾಶ್ರಿತೋದಿಶಂ || ದಿಶಮನ್ಯಾಂ ಪ್ರಪ
ತ್ಸ್ಯಾಮ ಸ್ತತ್ರತಪ್ಸ್ಯಾಮಹೇ ತಪಃ ||೨|| ಪಶ್ಚಿಮಾಯಾಂ ವಿಶಾಲಾಯಾಂ
ಪುಷ್ಕರೇಷು ಮಹಾತ್ಮನಃ || ಸುಖಂ ತಪಶ್ಚರಿಷ್ಯಾಮಃ ಪರಂ ತದ್ಧಿ ತಪೋ
ವನಂ ||೩|| ಏವಮುಕ್ತ್ವಾ ಮಹಾತೇಜಾಃ ಪುಷ್ಕರೇಷು ಮಹಾಮುನಿಃ||
ತಪಉಗ್ರಂ ದುರಾಧರ್ಷಂ ತೇಪೇ ಮೂಲಫಲಾಶನಃ ||೪|| ಏತಸ್ಮಿನ್ನೇವ

---

ಅಥ - ಬಳಿಕ, ಹೇನರಶಾರ್ದೂಲ - ಎಲೈ ಶ್ರೀರಾಮನೇ, ಮಹಾತ್ಮಾ - ಮಹಾ ಧೈರ್ಯ ಶಾಲಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಪ್ರಸ್ಥಿತಾನ್ ಪ್ರಯಾಣ ಮಾಡುತ್ತಿರುವ, ಸರ್ವಾನ್- ನಮಸ್ತರಾದ, ತಾನ್-ಪ್ರಸಿದ್ಧರಾದ, ವನವಾಸಿನಃ- ತಪೋವನದಲ್ಲಿ ವಾಸಮಾಡುತ್ತಿರುವ, ತಾನ್ ಋಷೀನ್-ಆ ಋಷಿಗಳನ್ನು ಕುರಿತು, ಅಬ್ರವೀತ್-ನುಡಿದನು. ||೧|| ಯಃ-ಯಾವ ನಾನು, ದಕ್ಷಿಣಾಂದಿಶಂ-ದಕ್ಷಿಣದಿಕ್ಕನ್ನು, ಆಶ್ರಿತಃ-ಆಶ್ರಯಿಸಿದನೋ, ತಸ್ಯಮೇ-ಅಂತಹ ನನಗೆ, ಮಹಾನ್-ದೊಡ್ಡದಾದ, ಅಯಂವಿಘ್ನಃ ಈ ವಿಘ್ನವು, ಪ್ರವೃತ್ತಃ - ಸಂಭವಿಸಿತು, ಅನ್ಯಾಂದಿಶಂ - ಮತ್ತೊಂದು ದಿಕ್ಕನ್ನು, ಪ್ರಪತ್ಸ್ಯಾಮಃ - ಹೊಂದುವ, ತತ್ರ-ಆ ದಿಕ್ಕಿನಲ್ಲಿ, ತಪಃ-ತಪವನ್ನು, ತಪ್ಸ್ಯಾಮಹೇ ಮಾಡುವ, || ೨ || ಹೇಮಹಾತ್ಮಾನಃ - ಎಲೈ ಮಹಾತ್ಮರಿರಾ, ವಿಶಾಲಾಯಾಂ - ವಿಸ್ತಾರವಾದ, ಪಶ್ಚಿಮಾಯಾಂ - ಪಶ್ಚಮದಿಕ್ಕಿನಲ್ಲಿ, ಪುಷ್ಕರೇಷು - ಪುಷ್ಕರಿಣೀತೀರದಲ್ಲಿ, ಸುಖಂ - ಸುಖವಾಗಿ, ತಪಃ-ತಪಸ್ಸನ್ನು, ಚರಿಷ್ಯಾಮಃ- ಮಾಡುವ, ತತ್-ಆ, ತಪೋವನಂ-ತಪೋವನವು, ಪರಂಹಿ- ಶ್ರೇಷ್ಠವಾದುದಷ್ಟೆ || ೩ || ಏವಂ-ಈ ಪರಿ, ಉಕ್ತ್ವಾ ಹೇಳಿ, ಮಹಾತೇಜಾ- ಮಹಾ ಪ್ರಭಾವವಂತನಾದ, ಮಹಾಮುನಿಃ-ವಿಶ್ವಾಮಿತ್ರನು, ಮೂಲಫಲಾಶನಃ-ಕಂದಮೂಲ ಫಲಗಳನ್ನು ಭಕ್ಷಣೆಮಾಡುತ್ತ, ದುರಾಧರ್ಷಂ-ತಿರಸ್ಕರಿಸಲಸದಳವಾದ, ಉಗ್ರಂ-ಭಯಂಕರವಾದ, ತಪಃ-ತಪವನ್ನು, ಪುಷ್ಕರೇಷು-ಪುಷ್ಕರಕ್ಷೇತ್ರದಲ್ಲಿ, ತೇಪೇ-ತಪಿಸಿದನು. ||೪|| ಏತಸ್ಮಿನ್ನೇವಕಾಲೇತು-ಇದೇ ಕಾಲದಲ್ಲಿಯೇ

---

ಎಲೈ ಪುರುಷಶ್ರೇಷ್ಠನೆ! ಯಥಾರ್ಥವಾಗಿ ಬಂದಿದ್ದ ಋಷಿಗಳೆಲ್ಲರೂ ತೆರಳಿದ ಬಳಿಕ ಮಹಾಧೈರ್ಯಶಾಲಿಯಾದ ವಿಶ್ವಾಮಿತ್ರನು ಆ ವನವಾಸಿಗಳನ್ನು ಕುರಿತು, "ಎಲೈ ವನವಾಸಿಗಳಿರಾ! ಈ ದಕ್ಷಿಣದಿಕ್ಕನ್ನು ಆಶ್ರಯಿಸಿಕೊಂಡಿದ್ದ ನನಗೆ ಮಹತ್ತರವಾದ ವಿಘ್ನವು ಸಂಭವಿಸಿತು. ಆದುದರಿಂದ ನಾನೀಗ ಈ ದಿಕ್ಕನ್ನು ಬಿಟ್ಟು ಪಶ್ಚಿಮದಿಕ್ಕಿಗೆ ಹೋಗಿ ಪುಷ್ಕರಿಣೀತೀರದಲ್ಲಿ ಸುಖವಾಗಿ ತಪವಂಗೈಯ್ಯುವೆನು" ಎಂದನು. ಇಂತು ನುಡಿದಾಕೌಶಿಕನು ಪುಷ್ಕರಿಣೀಕ್ಷೇತ್ರವನ್ನು ಸೇರಿ, ಕಂದಮೂಲಾದಿಗಳನ್ನು ಸೇವಿಸುತ್ತ, ಹೊಂದಲಸದಳವೂ, ಮಹಾಘೋ

ಕಾಲೇತು ಅಯೋಧ್ಯಾಧಿಪತಿರ್ನೃಪಃ || ಅಂಬರೀಷ ಇತಿಖ್ಯಾತೋ ಯಷ್ಟುಂ
ಸಮುಪಚಕ್ರಮೇ || ೫ || ತಸ್ಯವೈ ಯಜಮಾನಸ್ಯ ಪಶುಮಿಂದ್ರೋ ಜಹಾ
ರಹ || ಪ್ರಣಷ್ಟೇತು ಪಶೌವಿಪ್ರೋ ರಾಜಾನ ಮಿದ ಮಬ್ರವೀತ್ || ೬ ||
ಪಶುರದ್ಯ ಹೃತೋ ರಾಜನ್ಪ್ರಣಷ್ಟ ಸ್ತವದುರ್ನಯಾತ್ || ಅರಕ್ಷಿತಾರಂ
ರಾಜಾನಂ ಘ್ನಂತಿ ದೋಷಾ ನರೇಶ್ವರ || ೭ || ಪ್ರಾಯಶ್ಚಿತ್ತಂ ಮಹದೇತ
ನ್ನರಂವಾ ಪುರುಷರ್ಷಭ || ಆನಯಸ್ವ ಪಶುಂ ಶೀಘ್ರಂ ಯಾವತ್ಕರ್ಮ ಪ್ರವ
ರ್ತತೇ || ೮ || ಉಪಾಧ್ಯಾಯ ವಚಶ್ಶ್ರುತ್ವಾ ಸರಾಜಾ ಪುರುಷರ್ಷಭಃ ||

ಅಯೋಧ್ಯಾಧಿಪತಿಃ - ಅಯೋಧ್ಯಾಪಟ್ಟಣಾಧಿಪತಿಯಾದ, ಅಂಬರೀಷ ಇತಿ - ಅಂಬರೀಷನೆಂದು, ಖ್ಯಾತಃ ಪ್ರಖ್ಯಾತನಾದ, ನೃಪಃ-ಅರಸು, ಯಷ್ಟುಂ-ಯಜ್ಞಮಾಡಲು, ಸಮುಪಚಕ್ರಮೇ-ಆರಂಭಿಸಿದನು.||೫||ಯಜಮಾನಸ್ಯ-ಯಜ್ಞ ಮಾಡುತ್ತಿರುವ, ತಸ್ಯ-ಆ ಅಂಬರೀಷನ, ಪಶುಂ-ಯಜ್ಞಪಶುವನ್ನು ಇಂದ್ರಃ ದೇವೇಂದ್ರನು, ಜಹಾರಹ-ಅಪಹರಿಸಿದನಷ್ಟೆ, ಪಶೌ-ಯಜ್ಞಾರ್ಥವಾಗಿ ಅಭಿಮಂತ್ರಿತವಾದ ಪಶುವು, ಪ್ರಣಷ್ಟೇತು-ನಷ್ಟವಾಗಲು, ವಿಪ್ರಃ - ಪುರೋಹಿತನಾದ ಬ್ರಾಹ್ಮಣನು, ರಾಜಾನಂ - ಅರಸಾದ ಅಂಬರೀಷನನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು ||೬|| ಹೇರಾಜನ್, ಎಲೈ ಅರಸೇ, ಅದ್ಯ-ಈಗ, ತವ-ನಿನ್ನ, ದುರ್ನಯಾತ್-ಅಜಾಗರೂಕತೆಯಿಂದ, ಪಶುಃ-ಯಜ್ಞಾರ್ಥವಾದ ಪಶುವು, ಹೃತಃ-ಅಪಹರಿಸಲ್ಪಟ್ಟಿತು, ಪ್ರಣಷ್ಟಃ-ಕಾಣಿಸಲಿಲ್ಲವು, ಹೇ ನರೇಶ್ವರ-ಎಲೈ ಅರಸನೇ, ಅರಕ್ಷಿತಾರಂ- ಪಶುಸಂರಕ್ಷಣೆಮಾಡದಿರುವ, ರಾಜಾನಂ - ಅರಸನನ್ನು, ದೋಷಾಃ – ದೋಷಗಳು, ಘ್ನಂತಿ-ಸಂಹರಿಸುತ್ತವೆ. ||೭|| ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ, ಹಿ - ಯಾವಕಾರಣ, ಏತತ್-ಈ ಪಶುನಾಶನಿಮಿತ್ತ, ಪ್ರಾಯಶ್ಚಿತ್ತಂ-ಪ್ರಾಯಶ್ಚಿತ್ತವು, ಮಹತ್-ದೊಡ್ಡದು, ಯಾವತ್-ಎಷ್ಟುಪರಿಯಂತ, ಕರ್ಮ- ಕರ್ಮವು, ಪ್ರವರ್ತತೇ - ಪ್ರವರ್ತಿಸುವುದೋ, ತಾವತ್ - ಅಷ್ಟರಲ್ಲಿ, ಶೀಘ್ರಂ-ಜಾಗ್ರತೆಯಾಗಿ, ಪಶುಂ-ಅಭಿಮಂತ್ರಿತ ಪಶುವನ್ನು, ಆನಯಸ್ವ-ತೆಗೆದುಕೊಂಡುಬಾ, ನರಂವಾ-ಪಶುಪ್ರತ್ಯಾಮ್ನಾಯವಾಗಿ ನರಪಶುವನ್ನು, ಅನಯಸ್ವ-ತೆಗೆದುಕೊಂಡುಬಾ, ಇತಿ-ಇಂತೆಂದು, ಉವಾಚ ಹೇಳಿದನು ||೮|| ಪುರುಷರ್ಷಭಃ-ಪುರುಷಶ್ರೇಷ್ಠನಾದ, ಸರಾಜಾ-ಆ ಅಂಬರೀಷಮಹಾರಾಯನು, ಉಪಾಧ್ಯಾಯವಚಃ-ಪುರೋಹಿತರ ವಾಕ್ಯವನ್ನು, ಶ್ರುತ್ವಾ-ಕೇಳಿ, ಮಹಾಬುದ್ಧಿಃ ಮಹಾಬುದ್ಧಿವಂತನಾದ ಕಾರಣ, ಸಹಸ್ರಶಃ-ಸಾವಿರಾರು, ಗೋಭಿಃ-ಗೋವುಗಳಿಂದ, ಪಶುಂ-ಪಶುವನ್ನು,

ರವೂ ಆದ ತಪವಂಗೈಯ್ಯುತ್ತಿದ್ದನು. ||೪|| ಇದೇ ಸಮಯದಲ್ಲಿ ಅಯೋಧ್ಯಾಪಟ್ಟಣದೊಡೆಯನಾದ ಅಂಬರೀಷರಾಜನು ಯಾಗಮಾಡಲುಪಕ್ರಮಿಸಲು, ಅಮರಾಧಿಪತಿಯು ಆಯಜಮಾನನ ಯಜ್ಞಪಶುವನ್ನಪಹರಿಸಿದನು ಇಂತು ಪಶುವು ನಷ್ಟವಾಗಲು ಯಾಜಕನು ರಾಜನನ್ನು ಕುರಿತು " ಎಲೈ ರಾಯನೆ! ನಿನ್ನ ದುರ್ನಡತೆಯಿಂದ ಇದೀಗ ಯಜ್ಞಪಶುವು ಅಪಹೃತವಾಯಿತು. ಯಜ್ಞಪಶುವನ್ನು ಸಂರಕ್ಷಿಸದಿರುವ ರಾಜನನ್ನು ದೋಷಗಳು ಹೊಡೆಯುತ್ತವೆ. ||೭|| ಎಲೈ ರಾಜನೆ! ಈ ಪಶುವು ನಷ್ಟವಾದುದಕ್ಕೆ ಪ್ರಾಯಶ್ಚಿತ್ತವು ಮಹತ್ತರವಾಗಿರುವುದು. ಈ ಕರ್ಮವನ್ನು ಪ್ರಾರಂಭಿಸಲುವೊದಲೇ ಅಭಿಮಂತ್ರಿತವಾದ ಪಶುವನ್ನೆಆಗಲಿ,ಅದುದೊರಕ

ಅನ್ವಿಯೇಷ ಮಹಾಬುದ್ಧಿಃ ಪಶುಂ ಗೋಭಿ ಸ್ಸಹಸ್ರಶಃ ॥ ೯ ॥ ದೇಶಾ೯ ಜನಪದಾಂ ಸ್ತಾಂಸ್ತಾ ನ್ನಗರಾಣಿ ವನಾನಿಚ ॥ ಆಶ್ರಮಾಣಿಚಪುಣ್ಯಾನಿ ಮಾರ್ಗಮಾಣೋ ಮಹೀಪತಿಃ ॥ ೧೦ ॥ ಸಪುತ್ರಸಹಿತಂ ತಾತ ಸಭಾರ್ಯಂ ರಘುನಂದನ ॥ ಭೃಗುತುಂಗೇ ಸಹಾಸೀನ ಮೃಚೀಕಂ ಸಂದದರ್ಶಹ ॥೧೧॥ ತಮುವಾಚ ಮಹಾತೇಜಾಃ ಪ್ರಣಮ್ಯಾ ಭಿಪ್ರಸಾದ್ಯಚ ॥ ಬ್ರಹ್ಮರ್ಷಿಂ ತಪಸಾ ದೀಪ್ತಂ ರಾಜರ್ಷಿ ರಮಿತಪ್ರಭಃ ॥ ೧೨ ॥ ಪೃಷ್ಟ್ವಾಸರ್ವತ್ರ ಕುಶಲ ಮೃಚೀಕಂ ತಮಿದಂವಚಃ ॥ ಗವಾಂ ಶತಸಹಸ್ರೇಣ ವಿಕ್ರೀಣೀಷೇ ಸುತಂ ಯದಿ ॥ ೧೩ ॥ ಪಶೋರರ್ಥೇ ಮಹಾಭಾಗ ಕೃತಕೃತ್ಯೋಸ್ಮಿ ಭಾರ್ಗವ ॥

---

ಅನ್ವಿಯೇಷ-ಹುಡುಕಿದನು. ॥೯॥ ಮಹೀಪತಿಃ-ಅಂಬರೀಷರಾಯನು, ತಾಂಸ್ತಾಂದೇಶಾ೯-ಆಯಾ ದೇಶಗಳನ್ನು, ಜನಪದಾ೯-ಜನಸ್ಥಾನಗಳನ್ನು, ನಗರಾಣಿ- ಪಟ್ಟಣಗಳನ್ನು, ವನಾನಿಚ - ಅರಣ್ಯಗ ಳನ್ನು. ಪುಣ್ಯಾನಿ-ಪುಣ್ಯಕರಗಳಾದ, ಆಶ್ರಮಾಣಿ-ಆಶ್ರಮಗಳನ್ನೂ, ಮಾರ್ಗಮಾಣಃ-ಹುಡುಕಿದವ ನಾದನು ॥೧೦॥ ಹೇರಘುನಂದನ-ಎಲೈ ರಘುಶ್ರೇಷ್ಠನೆ, ಹೇತಾತ ಎಲೈ ತಂದೆಯೇ, ಸಃ - ಆ ಅಂಬರೀಷನು, ಭೃಗುತುಂಗೇ ಭೃಗುತುಂಗವೆಂಬ ಬೆಟ್ಟದಲ್ಲಿ, ಪುತ್ರಸಹಿತಂ-ಮಕ್ಕಳಿಂದ ಕೂಡಿರುವ, ಸಭಾರ್ಯಂ-ಹೆಂಡತಿಯಿಂದೂಡಗೂಡಿ, ಸಹಾಸೀನಂ - ಕುಳಿತುಕೊಂಡಿರುವ, ರುಚೀಕಂ - ಋಚೀಕ ನೆಂಬ ಋಷಿಯನ್ನು, ಸಂದದರ್ಶಹ-ನೋಡಿದನು. ॥೧೧॥ ಮಹಾತೇಜಾಃ-ಅಪಾರವಾದ ಕ್ಷಾತ್ರ ತೇಜಸ್ಸುಳ್ಳ, ಅಮಿತಪ್ರಭಃ-ಅಪಾರಕಾಂತಿಯುಳ್ಳ, ರಾಜರ್ಷಿಃ - ರಾಜರ್ಷಿಯಾದ ಅಂಬರೀಷನು, ತಪಸಾ-ತಪಸ್ಸಿನಿಂದ, ದೀಪ್ತಂ-ಹೊಳೆಯುತ್ತಿರುವ, ತಂಬ್ರಹ್ಮರ್ಷಿಂ-ಆ ಬ್ರಹ್ಮರ್ಷಿಯನ್ನು ಕುರಿತು, ಪ್ರಣಮ್ಯ ನಮಸ್ಕರಿಸಿ, ಪ್ರಸಾದ್ಯಚ-ಪ್ರಸನ್ನನಾಗಿ ಮಾಡಿಕೊಂಡು, ಸರ್ವತ್ರ - ಸರ್ವ ವಿಷಯದ ಲ್ಲಿಯೂ, ಕುಶಲಂ-ಕ್ಷೇಮವನ್ನು, ಪೃಷ್ಟ್ವಾ-ಕೇಳಿ, ತಂಋಚೀಕಂ-ಆ ಋಚೀಕನನ್ನು ಕುರಿತು, ಇದಂ ವಚಃ-ಈ ವಕ್ಷ್ಯಮಾಣವಚನವನ್ನು, ಉವಾಚ-ಹೇಳಿದನು. ॥೧೨॥ ಹೇಮಹಾಭಾಗ-ಎಲೈಪುಣ್ಯ ಶಾಲಿಯೇ, ಗವಾಂ-ಗೋವುಗಳ, ಶತಸಹಸ್ರೇಣ-ಲಕ್ಷದಿಂದ, ಪಶೋಃ-ಪಶುವಿನ, ಅರ್ಥೇ - ಪ್ರತ್ಯಾ ಮ್ನಾಯವಾಗಿ, ಸುತಂ-ಕುವರನನ್ನು, ವಿಕ್ರೀಣೀಷೇಯದಿ - ವಿಕ್ರಯಮಾಡಿದವನಾದರೆ, ಹೇಭಾ ರ್ಗವ-ಎಲೈ ಭೃಗುವಂಶೋತ್ಪನ್ನನಾದ ಋಷಿಯೇ, ತದಾ-ಆಗ, ಕೃತಕೃತ್ಯಃ-ಸಫಲವಾದ ಪ್ರಯತ್ನ ವುಳ್ಳವನು, ಅಸ್ಮಿ-ಆಗುವೆ. ॥೧೩॥ ಸರ್ವೇ-ಸಮಸ್ತರಾದ, ದೇಶಾಃ-ದೇಶಗಳು, ಪರಿಸ್ಮೃತಾಃ-ಸಂಚರಿಸ

---

ದಿದ್ದರೆ ಅದರ ಪ್ರತ್ಯಾಮ್ನಾಯವಾಗಿ ನರಪಶುವನ್ನೇಆಗಲಿ ಬೇಗನೆತರಿಸುವವನಾಗು 'ಎಂದನು. ಈ ರೀತಿನುಡಿದ ಯಾಜಕನಮಾತನ್ನು ಕೇಳಿ ಮಹಾ ಬುದ್ಧಿಶಾಲಿಯಾದ ಅಂಬರೀಷನು ಅನೇಕ ಗೋವುಗಳೊಡನೆ ಆ ಪಶುವನ್ನು ಹುಡುಕುತ್ತಿದ್ದನು ॥೯॥ ಎಲೈ ರಘುನಂದನನೆ ! ಇಂತು ಆ ರಾಜನು ದೇಶದೇಶಗಳನ್ನೂ, ಜನಸ್ಥಾನಗಳನ್ನೂ, ಪುರ, ವನ, ಪುಣ್ಯಾಶ್ರಮಗಳನ್ನೂ ಹುಡು ಕುತ್ತ, ಭೃಗುತುಂಗವೆಂಬ ಕ್ಷೇತ್ರಕ್ಕೆ ಬಂದು, ಅಲ್ಲಿ ಕಳತ್ರಸಮೇತನಾಗಿಯೂ, ತಪಸ್ಸಿನಿಂದ ಕಂಗೊಳಿಸುತ್ತಿರುವವನಾಗಿಯೂ ಇರುವ ಋಚೀಕನೆಂಬ ಬ್ರಹ್ಮರ್ಷಿಯನ್ನು ಕಂಡನು. ಆಗ ಲಾತನು ಆ ಋಚೀಕನ ಪಾದಗಳಿಗೆರಗಿ ಸಮಾಧಾನಗೊಳಿಸಿ, ಕುಶಲಪ್ರಶ್ನೆಯನ್ನು ಕೇಳಿ, “ ಎಲೈ ಪುಣ್ಯಶಾಲಿಯೆ! ಪಶುಪ್ರತ್ಯಾಮ್ನವಾಗಿ, ಒಂದು ಲಕ್ಷ ಗೋವುಗಳಿಗೆ ನಿನ್ನ ಕುವರನನು ವಿಕ್ರಯಿಸಿಕೊಟ್ಟರೆ ನಾನು ಕೃತಕೃತ್ಯನಾಗುವೆನು. ॥ ೧೩ ॥ ನಾನು ದೇಶದೇಶಗಳನ್ನೂ

ಸರ್ವೇಪರಿಸೃತಾ ದೇಶಾ ಯಜ್ಞೀಯಂ ನಲಭೇ ಪಶುಂ ||೧೪|| ದಾತು ಮರ್ಹಸಿ ಮೌಲ್ಯೇನ ಸುತಮೇಕ ಮಿತೋಮಮ || ಏವಮುಕ್ತೋ ಮಹಾ ತೇಜಾ ಋಚೀಕ ಸ್ತ್ವಬ್ರವೀದ್ವಚಃ ||೧೫|| ನಾಹಂ ಜ್ಯೇಷ್ಠಂ ನರ ಶ್ರೇಷ್ಠ ವಿಕ್ರೀಣೀಯಾಂ ಕಥಂಚನ || ಋಚೀಕಸ್ಯ ವಚಶ್ಶ್ರುತ್ವಾ ತೇಷಾಂ ಮಾತಾ ಮಹಾತ್ಮನಾಂ ||೧೬|| ಉವಾಚ ನರಶಾರ್ದೂಲ ಮಂಬರೀಷಂ ತಪಸ್ವಿನೀ || ಅವಿಕ್ರೇಯಂ ಸುತಂ ಜ್ಯೇಷ್ಠಂ ಭಗವಾ ನಾಹಭಾರ್ಗವಃ ||೧೭|| ಮಮಾಪಿ ದಯಿತಂ ವಿದ್ಧಿ ಕನಿಷ್ಠಂ ಶುನಕಂ ನೃಪ || ತಸ್ಮಾ ತ್ಕನೀಯಸಂ ಪುತ್ರಂ ನದಾಸ್ಯೇ ತವ ಪಾರ್ಥಿವ ||೧೮|| ಪ್ರಾಯೇಣ ಹಿ ನರಶ್ರೇಷ್ಠ

ಲ್ಪಟ್ಟವು, ಯಜ್ಞೀಯಂ-ಯಜ್ಞಸಂಬಂಧವಾದ, ಪಶುಂ-ಪಶುವನ್ನು, ನಲಭೇ-ಕಾಣೆನು, ಇತಃ-ಈ ಮಕ್ಕಳಲ್ಲಿ, ಏಕಂ-ಒಬ್ಬ, ಸುತಂ-ಮಗನನ್ನು, ಮಮ-ನನಗೆ, ಮೌಲ್ಯೇನ-ವಿಕ್ರಯದ ದ್ರವ್ಯದಿಂದ, ದಾತುಂ-ಕೊಡಲು, ಅರ್ಹಸಿ-ಯೋಗ್ಯನಾಗು. ||೧೪|| ಏವಂ ಈರೀತಿ, ಉಕ್ತಃ-ಹೇಳಲ್ಪಟ್ಟ, ಮಹಾ ತೇಜಾಃ - ಬ್ರಹ್ಮತೇಜಸ್ವಿಯಾದ, ಋಚೀಕಸ್ತು-ಋಚೀಕನು, ಹೇನರಶ್ರೇಷ್ಠ - ಎಲೈ ಪುರುಷಶ್ರೇಷ್ಠನೇ, ಅಹಂ ನಾನು, ಜ್ಯೇಷ್ಠಂ-ಜ್ಯೇಷ್ಠಪುತ್ರನನ್ನು, ಕಥಂಚನ ಹೇಗಾದರೂ, ನವಿಕ್ರೀಣೀಯಾಂ - ವಿಕ್ರಯಮಾಡಲಾರೆನು, ಇತಿ-ಇಂತೆಂದು, ವಚಃ-ಮಾತನ್ನು, ಅಬ್ರವೀತ್-ನುಡಿದನು. ||೧೫|| ಋಚೀಕಸ್ಯ-ಋಚೀಕನ, ವಚಃ-ವಾಕ್ಯನ್ನು, ಶ್ರುತ್ವಾ-ಕೇಳಿ, ತಪಸ್ವಿನೀ-ಋಷಿಪತ್ನಿಯಾದ, ಮಹಾತ್ಮನಾಂ-ಮಹಾತ್ಮರಾದ. ತೇಷಾಂ ಆ ಮಕ್ಕಳಿಗೆ, ಮಾತಾ-ತಾಯಿಯು, ನರಶಾರ್ದೂಲಂ- ಪುರುಷಶ್ರೇಷ್ಠನಾದ ಅಂಬರೀಷಂ-ಅಂಬರೀಷನನ್ನು ಕುರಿತು-, ಉವಾಚ-ಹೇಳಿದಳು ||೧೬|| ಹೇನೃಪ-ಎಲೈ ರಾಜನ, ಭಗವಾನ್-ಪೂಜ್ಯನಾದ, ಭಾರ್ಗವಃ-ಭೃಗುಪುತ್ರನು, ಜ್ಯೇಷ್ಠಂ ಸುತಂ - ದೊಡ್ಡಮಗನನ್ನು, ಅವಿ, ಕ್ರೇಯಂ-ವಿಕ್ರಯಮಾಡತಕ್ಕುದಲ್ಲವೆಂದು,ಆಹ-ಹೇಳಿದನು. ಮಮಾಪಿ-ನನಗೂ, ಕನಿಷ್ಠಂ-ಕನಿಷ್ಠನಾದ, ಶುನಕಂ-ಶುನಕನನ್ನು. ದಯಿತಂ-ಪ್ರಿಯನೆಂದು ವಿದ್ಧಿ ತಿಳಿ, ಹೇಪಾರ್ಥಿವ - ಎಲೈ ಅರಸೆ, ತಸ್ಮಾತ್-ಆ ಕಾರಣ, ಕನೀಯಸಂ-ಕಿರಿಯನಾದ, ಪುತ್ರಂ-ಮಗನನ್ನು, ನದಾಸ್ಯೇ - ಕೊಡಲಾರೆನು. ||೧೭|| ಹೇನರಶ್ರೇಷ್ಠ-ಎಲೈ ರಾಜಶ್ರೇಷ್ಠನೆ, ಜ್ಯೇಷ್ಠಾಃ-ಜ್ಯೇಷ್ಠಪುತ್ರರು, ಪ್ರಾಯೇಣ-ಬಹುವಾಗಿ, ಪಿತೃಷು-ತಂದೆಗಳಿಗೆ, ವಲ್ಲಭಾಃ ಇಷ್ಟರು, ಮಾತೄಣಾಂ-ತಾಯಿಯರಿಗೆ, ಕನೀಯಾಂಸಶ್ಚ-ಕನಿಷ್ಠಪುತ್ರರು, ವಲ್ಲಭಾಃ-ಇಷ್ಟರು, ತಸ್ಮಾತ್-ಆದುದರಿಂದ, ಕನೀಯಸಂ-ಕನಿಷ್ಠನನ್ನು, ರಕ್ಷೇ - ಸಂರಕ್ಷಣೆ ಮಾಡುತ್ತೇನೆ. ||೧೮|| ತಸ್ಮಿನ್ಮುನೌ-ಆ ಋಷಿಯು, ಉಕ್ತವಾಕ್ಯೇನತಿ-ಹೇಳಲ್ಪಟ್ಟ ಮಾತುಳ್ಳ

ಸುತ್ತಿ ಯಜ್ಞಪಶುವನ್ನು ಹುಡುಕಿದರೂ ಅದು ದೊರೆಯಲಿಲ್ಲವು. ಆದುದರಿಂದ ನೀನೀಮೌಲ್ಯವನ್ನು ಸ್ವೀಕರಿಸಿ ಈ ನಿನ್ನ ಮಕ್ಕಳಲ್ಲಿ ಯಾರನ್ನಾದರೂ ಕೊಡುವವನಾಗು " ಎಂದು ಬೇಡಿಕೊಂಡನು. ಆಗಲಾ ಋಚೀಕನು " ಎಲೈ ರಾಜನೆ!ನಾನು ಜ್ಯೇಷ್ಠಪುತ್ರನನ್ನು ಏನಾದರೂ ವಿಕ್ರಯಿಸಲಾರೆನು " ಎಂದನು ಈ ಮಾತನ್ನುಕೇಳಿ ಆ ಬಾಲಕನ ಜನನಿಯು " ಎಲೈ ರಾಯನೆ!ಪೂಜ್ಯನಾದ ಭಾರ್ಗವನು ಜ್ಯೇಷ್ಠಕುವರನನ್ನು ವಿಕ್ರಯಿಸಲಾರೆನೆಂದು ಹೇಳಿದುದು ಸರಿಯಷ್ಟೆ?ನನಗೆ ಕನಿಷ್ಠಪುತ್ರನಾದ ಈ ಶುನಕನು ಬಹಳ ಪ್ರಿಯನು. ಆದುದರಿಂದಈನನ್ನು ನಾನು ವಿಕ್ರಯಿಸುವುದಿಲ್ಲವು ಜ್ಯೇಷ್ಠಪುತ್ರರು ಜನಕನಿಗೆ ಇಷ್ಟರು ಕನಿಷ್ಠಪುತ್ರರು ಜನನಿಗೆ ಪ್ರೀತಿದಾಯಕರು. ಆದುದರಿಂದ ಕಿರಿಯನನ್ನು ನಾನು ಸಂರಕ್ಷಿಸುವೆನು" ಎಂದಳು.||೧೮||

ಜ್ಯೇಷ್ಠಾಃ ಪಿತೃಷು ವಲ್ಲಭಾಃ ॥ ಮಾತೄಣಾಂ ಚ ಕನೀಯಾಂಸಸ್ತಸ್ಮಾದ್ರಕ್ಷೇ ಕನೀಯಸಂ ॥ ೨೦ ॥ ಉಕ್ತವಾಕ್ಯೇಮುನೌ ತಸ್ಮಿನ್ ಮುನಿಪತ್ನ್ಯಾಂ ತಥೈವಚ । ಶುನಶ್ಶೇಫಸ್ಸ್ವಯಂ ರಾಮ ಮಧ್ಯಮೋವಾಕ್ಯಮಬ್ರವೀತ್ ॥ ೨೦ ॥ ಪಿತಾಜ್ಯೇಷ್ಠಮವಿಕ್ರೇಯಂ ಮಾತಾ ಚಾಹ ಕನೀಯಸಂ । ವಿಕ್ರೀತಂ ಮಧ್ಯಮಂ ಮನ್ಯೇ ರಾಜನ್ ಪುತ್ರಂ ನಯಸ್ವ ಮಾಂ ॥ ೩೨ ॥ ಗವಾಂ ಶತಸಹಸ್ರೇಣ ಶುನಶ್ಶೇಪಂ ನರೇಶ್ವರಃ । ಗೃಹೀತ್ವಾ ಪರಮಪ್ರೀತೋಜಗಾಮ ರಘುನಂದನ ॥ ೨೨ ॥ ಅಂಬರೀಷಸ್ತುರಾಜರ್ಷೀ ರಥಮಾರೋಪ್ಯ ಸತ್ವರಃ। ಶುನಶ್ಶೇಫಂ ಮಹಾತೇಜಾ ಜಗಾಮಾಶು ಮಹಾಯಶಾಃ ॥ ॥ ೨೩ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಗ್ವಿಷಷ್ಟಿತಮಸ್ಸರ್ಗಃ.

---

ವನಾಗಲು, ಮುನಿಪತ್ನ್ಯಾಂಚ - ಋಷಿಪತ್ನಿಯೂ, ತಥೈವ - ಹಾಗೆಯೆ, ಉಕ್ತವಾಕ್ಯಾಯಾಂ ಹೇಳಲ್ಪಟ್ಟವಳಾಗಲು, ಹೇರಾಮ-ಎಲೈ ಶ್ರೀರಾಮನೆ, ಮಧ್ಯಮಃ - ಮಧ್ಯಮನಾದ, ಶುನಶ್ಶೇಪಃ-ಶುನಶ್ಶೇಪನು, ಸ್ವಯಂ-ತಾನಾಗಿಯೇ, ವಾಕ್ಯಂ ಮಾತನ್ನು, ಅಬ್ರವೀತ್-ನುಡಿದನು.॥೨೦॥ ಹೇರಾಜನ್-ಎಲೈ ರಾಜನೆ, ಪಿತಾ-ತಂದೆಯು, ಜ್ಯೇಷ್ಠಂ-ಜ್ಯೇಷ್ಠಪುತ್ರನನ್ನು, ಮಾತಾಚ-ತಾಯಿಯೂ ಕನೀಯಸಂಚ-ಕನಿಷ್ಠನನ್ನು, ಅವಿಕ್ರೇಯಂ-ಕ್ರಯಮಾಡುವುದಕ್ಕೆ ಅನರ್ಹರನ್ನಾಗಿ, ಅಹ-ಹೇಳಿದನು, ಮಧ್ಯಮಂ-ಮಧ್ಯಮಪುತ್ರನನ್ನು, ವಿಕ್ರೇಯಂ - ಕ್ರಯಕ್ಕೆ ಅರ್ಹನನ್ನಾಗಿ, ಮನ್ಯೇ-ತಿಳಿಯುತ್ತೇನೆ, ಪುತ್ರಂ-ಮಧ್ಯಮಪುತ್ರನಾದ, ಮಾಂ-ನನ್ನನ್ನು, ನಯಸ್ವ-ಕರದುಕೊಂಡುಹೋಗು. ॥೨೧॥ ಹೇರಘುನಂದನ-ಎಲೈ ಶ್ರೀರಾಮನೆ, ನರೇಶ್ವರಃ ಅರಸನಾದ ಅಂಬರೀಷನು,ಪರಮಪ್ರೀತಃ-ಬಹಳ ಸಂತೋಷಗೊಂಡು, ಗವಾಂ-ಗೋವುಗಳ, ಶತಸಹಸ್ರೇಣ-ಲಕ್ಷದಿಂದ, ಶುನಶ್ಶೇಪಂ - ಶುನಶ್ಶೇಪನನ್ನು, ಗೃಹೀತ್ವಾ-ಕ್ರಯಕ್ಕೆ ತೆಗದುಕೊಂಡು, ಜಗಾಮ-ತೆರಳಿದನು. ॥ ೨೨ ॥ ರಾಜರ್ಷಿಃ-ರಾಜರ್ಷಿಯಾದ, ಮಹಾತೇಜಾಃ ಮಹಾ ತೇಜೋವಂತನಾದ, ಮಹಾಯಶಾಃ - ಮಹಾಕೀರ್ತಿವಂತನಾದ, ಅಂಬರೀಷಸ್ತು- ಅಂಬರೀಷನಾದರೆ, ಸತ್ವರಃ-ಬೇಗನೆ, ಶುನಶ್ಶೇಪಂ-ಶುನಶ್ಶೇಪನನ್ನು, ರಥಂ-ರಥವನ್ನು, ಅರೋಪ್ಯ-ಹತ್ತಿಸಿಕೊಂಡು, ಜಗಾಮ-ಬಂದನು. ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಷಷ್ಟಿತಮಸರ್ಗಃ.

---

ಎಲೈ ರಾಮಚಂದ್ರನೆ! ಆ ಋಚೀಕ ಮುನಿಯೂ ಆತನ ಪತ್ನಿಯೂ ಈ ರೀತಿ ಹೇಳಲು ಶುನಶ್ಶೇಫನೆಂಬ ಅವರ ಮಧ್ಯಮಪುತ್ರನು "ಎಲೈ ರಾಜನೆ! ಜನನಿಯು ಕಿರಿಯನನ್ನೂ, ಜನಕನು ಹಿರಿಯನನ್ನೂ ವಿಕ್ರಯಿಸುವುದಿಲ್ಲವೆಂದು ನುಡಿದರಲ್ಲವೆ. ಆದುದರಿಂದ ವಿಕ್ರೇಯನಾದವನು ಮಧ್ಯಮನೆಂದು ತಿಳಿಯುತ್ತೇನೆ. ನನ್ನನ್ನು ಕ್ರಯಕ್ಕೆ ಪಡೆಯುವವನಾಗು" ಎಂದನು. ಇಂತೆ ನಲಾರಾಜರ್ಷಿಯಾದ ಅಂಬರೀಷನು ಲಕ್ಷಗೋವುಗಳನ್ನು ಕೊಟ್ಟು ಆ ಶುನಶ್ಶೇಫನನ್ನು ಕ್ರಯಕ್ಕೆ ತೆಗೆದುಕೊಂಡು, ಸಂತಸಗೊಂಡು, ಅವನನ್ನು ರಥದಲ್ಲ ಕುಳ್ಳಿರಿಸಿಕೊಂಡು ಬೇಗನೆ ತನ್ನ ಪಟ್ಟಣವನ್ನು ಕುರಿತು ತೆರಳಿದನು. ॥೨೩॥

ಇಂತಿದು ಶುನಶ್ಶೇಫವೃತ್ತಾಂತವರ್ಣನವೆಂಬ
ಅರವತ್ತೊಂದನೆಯಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದ್ವಿಷಷ್ಟಿತಮಸ್ಸರ್ಗಃ

ಶುನಶ್ಶೇಫಂ ನರಶ್ರೇಷ್ಠ ಗೃಹೀತ್ವಾ ತು ಮಹಾಯಶಾಃ । ವ್ಯಶ್ರಾಮ್ಯ ತ್ಪುಷ್ಕರೇ ರಾಜಾ ಮಧ್ಯಾಹ್ನೇ ರಘುನಂದನ ॥ ೧ ॥ ತಸ್ಯ ವಿಶ್ರಮಮಾಣಸ್ಯ ಶುನಶ್ಶೇಫೋ ಮಹಾಯಶಾಃ । ಪುಷ್ಕರ ಕ್ಷೇತ್ರಮಾಗಮ್ಯ ವಿಶ್ವಾಮಿತ್ರಂ ದದ ರ್ಶಹ । ತಪ್ಯಂತ ಮೃಷಿಭಿಸ್ಸಾರ್ಧಂ ಮಾತುಲಂ ಪರಮಾತುರಃ ॥ ವಿವರ್ಣ ವದನೋದೀನ ಸ್ತೃಷ್ಣಯಾ ಚ ಶ್ರಮೇಣಚ ॥ ಪಪಾತಾಂಕೇ ಮುನೇರಾಶು ವಾ ಕ್ಯಂಚೇದ ಮುವಾಚಹ । ನಮೇಽಸ್ತಿ ಮಾತಾ ನಪಿತಾ ಜ್ಞಾತಯೋಬಾಂಧವಾಃ ಕುತಃ । ತ್ರಾತು ಮರ್ಹಸಿ ಮಾಂ ಸೌಮ್ಯ ಧರ್ಮೇಣ ಮುನಿಪುಂಗವ ॥ ೪ ॥ ತ್ರಾತಾ

---

ಹೇನರಶ್ರೇಷ್ಠ-ಎಲೈ ನರಪತಿಯೆ, ಹೇರಘುನಂದನ ಎಲೈ ಶ್ರೀರಾಮನೆ, ಮಹಾಯಶಾಃ - ಮಹಾಯಶೋವಂತನಾದ, ರಾಜಾ-ಅಂಬರೀಷರಾಯನು, ಶುನಶ್ಶೇಫಂ-ಶುನಶ್ಶೇಫನನ್ನು, ಗೃಹೀತ್ವಾತು-ಕರದುಕೊಂಡುಹೋಗುತ್ತ, ಮಧ್ಯಾಹ್ನೇ-ಮಧ್ಯಾಹ್ನ ಕಾಲಲ್ಲಿ, ಪುಷ್ಕರೇಷು-ಪುಷ್ಕರಿಣೀತೀರ ದಲ್ಲಿ, ವ್ಯಶ್ರಾಮ್ಯತ್-ವಿಶ್ರಮಿಸಿಕೊಂಡನು. ॥೧॥ ತಸ್ಯ-ಆ ಅಂಬರೀಷನು, ವಿಶ್ರಮಮಾಣಸ್ಯ ಸತಃ-ವಿಶ್ರಮಿಸಿಕೊಂಡಿರಲು, ಮಹಾಯಶಾಃ ಕೀರ್ತಿವಂತನಾದ, ಶುನಶ್ಶೇಫಃ-ಶುನಶ್ಶೇಫನು, ಪುಷ್ಕರಕ್ಷೇತ್ರಂ- ಪುಷ್ಕರಕ್ಷೇತ್ರವನ್ನು ಕುರಿತು, ಆಗಮ್ಯ-ಬಂದು, ಋಷಿಭಿಸ್ಸಾರ್ಧಂ- ಋಷಿಗಳಿಂದೊಡ ಗೂಡಿ, ತಪ್ಯಂತಂ-ತಪವಂಗೈಯುತ್ತಿರುವ, ಮಾತುಲಂ-ಸೋದರಮಾವನಾದ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ದದರ್ಶಹ-ಕಂಡನು. ॥೨॥ ಪರಮಾತುರಃ-ಬಹುದುಃಖಿಯಾದ, ವಿವರ್ಣವದನಃ - ಕಾಂತಿಹೀನವಾದ, ಮುಖವುಳ್ಳ ಶುನಶ್ಶೇಫನು, ತೃಷ್ಣಯಾಚ-ನೀರಡಿಕೆಯಿಂದಲೂ, ಶ್ರಮೇಣಚ - ಮಾರ್ಗಶ್ರಮದಿಂದಲೂ, ದೀನಃ-ದೈನ್ಯವುಳ್ಳವನಾಗಿ, ಮುನೇಃ-ಋಷಿಯಾದ ವಿಶ್ವಾಮಿತ್ರನ, ಅಂಕೇ-ಸಮೀಪದಲ್ಲಿ, ಆಶು-ಅಜಾಗ್ರತೆಯಾಗಿ, ಪಪಾತ-ಬಿದ್ದನು, ಇದಂವಾಕ್ಯಂಚ-ಈ ಮಾತನ್ನೂ, ಉವಾಚ-ಹೇಳಿದನು. ॥೩॥ ಹೇಸೌಮ್ಯ-ಎಲೈ ಪ್ರಸನ್ನನೆ, ಹೇಮುನಿಪುಂಗವ-ಎಲೈ ಋಷಿಶ್ರೇಷ್ಠನೆ, ಮೇ-ನನಗೆ, ಮಾತಾ-ತಾಯಿಯೂ, ಪಿತಾ-ತಂದೆಯೂ, ನ-ಇಲ್ಲವು, ಜ್ಞಾತಯಃ-ಜ್ಞಾತಿಗಳು, ಬಾಂಧವಾಃ-ಬಂಧುಗಳು ನ-ಇಲ್ಲ, ಕುತಃ-ಇದ್ದರೂ ಇಂತಹನಮಯದಲ್ಲಿ ಸಹಾಯಕರೆಲ್ಲಾಗುವರು, ಮಾಂ - ನನ್ನನ್ನು, ಧರ್ಮೇಣ-ಧರ್ಮದಿಂದ, ತ್ರಾತುಂ-ಸಂರಕ್ಷಣೆಮಾಡಲು, ಅರ್ಹಸಿ-ಯೋಗ್ಯನಾಗು. ॥೪॥ ಹೇಮುನಿಶ್ರೇಷ್ಠ-ಎಲೈ ಋಷಿಶ್ರೇಷ್ಠನೆ, ಹಿ ಯಾವಕಾರಣ, ತ್ವಂ-ನೀನು, ಸರ್ವೇಷಾಂ-ಸಮಸ್ತರಿಗೂ

---

ಎಲೈ ರಘುಕುಲಾನಂದಕರನೆ! ಮಹಾ ಕೀರ್ತಿವಂತನಾದ ಆ ಅಂಬರೀಷರಾಯನು ಶುನಶ್ಶೇಫನನನ್ನು ಕರೆದುಕೊಂಡುಹೋಗುತ್ತಿರಲು ಮಧ್ಯಾಹ್ನ ಸಮಯವಾಗಲು ಪುಷ್ಕರಕ್ಷೇತ್ರದಲ್ಲಿ ವಿಶ್ರಮಿಸಿಕೊಂಡನು ಈತನು ವಿಶ್ರಮಿಸಿಕೊಳ್ಳುತ್ತಿರಲು ಮಹಾ ಯಶಸ್ವಿಯಾದ ಶುನಶ್ಶೇಫನು ಆ ಪುಷ್ಕರಕ್ಷೇತ್ರದಲ್ಲಿ, ಋಷಿಗಳೊಡನ ತಪವಂಗೈಯುತ್ತಿರುವವನೂ, ಸೋದರಮಾವನೂ ಆದ ವಿಶ್ವಾಮಿತ್ರಮುನಿಯನ್ನು ನೋಡಿ, ಬಹಳವಾದ ಆತುರವನ್ನು ಹೊಂದಿ, ದಾಹದಿಂದಲೂ, ಶ್ರಮೆಯಿಂದಲೂ ಕಂಗೆಟ್ಟಮುಖವುಳ್ಳವನಾಗಿ ಆ ವಿಶ್ವಾಮಿತ್ರನ ತೊಡೆಯ ಮೇಲ್ಬಿದ್ದು " ಮುನಿಶ್ರೇಷ್ಠನೆ! ನನಗೆ ತಾಯಿ, ತಂದೆ, ಬಂಧು, ಬಳಗಗಳೆಂಬುವರಾರೂ ಇಲ್ಲ.

ತ್ವಂಹಿ ಮುನಿಶ್ರೇಷ್ಠ ಸರ್ವೇಷಾಂ ತ್ವಂಹಿ ಭಾವನಃ||೫||ರಾಜಾ ಚ ಕೃತಕಾರ್ಯ ಸ್ಸ್ಯಾದಹಂ ದೀರ್ಘಾಯು ರವ್ಯಯಃ । ಸ್ವರ್ಗಲೋಕ ಮುಪಾಶ್ನೀಯಾಂ ತಪಸ್ತಪ್ತ್ವಾ ಹ್ಯನುತ್ತಮಂ ||೬|| ತ್ವಂ ಮೇನಾಥೋಹ್ಯನಾಥಸ್ಯ ಭವ ಭವ್ಯೇನ ಚೇತಸಾ । ಪಿತೇವಪುತ್ರಂ ಧರ್ಮಾತ್ಮಂ ಸ್ತ್ರಾತುಮರ್ಹಸಿ ಕಿಲ್ಬಿಷಾತ್ ||೭|| ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋಮಹಾತಪಾಃ । ಸಾಂತ್ವಯಿತ್ವಾ ಬಹುವಿಧಂ ಪುತ್ರಾ ನಿದಂ ಮುವಾಚಹ || ೮ || ಯತ್ಕೃತೇಪಿತರಃಪುತ್ರಾ ಜನಯಂತಿ ಸುಖಾರ್ಥಿನಃ । ಪರಲೋಕ ಹಿತಾರ್ಥಾಯ ತಸ್ಯ ಕಾಲೋಯ ಮಾಗತಃ ||೯|| ಅಯಂ ಮುನಿಸುತೋ ಬಾಲೋಮತ್ತಶ್ಶರಣ ಮಿಚ್ಛತಿ || ಅಸ್ಯ ಜೀವಿತ ಮಾತ್ರೇಣ ಪ್ರಿಯಂ ಕುರುತ ಪುತ್ರಕಾ ||೧೦||ಸರ್ವೇಸುಕೃತ ಕರ್ಮಾಣ

ತ್ರಾತಾ ಸಂರಕ್ಷಕನೂ, ತ್ವಂ-ನೀನು, ಭಾವನೋಹಿ-ಹಿತಕರನಷ್ಟೆ ? ||೫|| ರಾಜಾಚ-ಅರಸನಾದ ಅಂಬರೀಷನು, ಕೃತಕಾರ್ಯಃ-ಮಾಡಲ್ಪಟ್ಟ ಪ್ರಯೋಜನವುಳ್ಳವನು, ಸ್ಯಾತ್-ಆಗುವನೊ, ಅಹಂ - ನಾನು, ದೀರ್ಘಾಯುಃ ದೀರ್ಘಾಯುಸ್ಸುಳ್ಳವನಾಗಿ, ಅವ್ಯಯಃ-ನಾಶರಹಿತನಾಗಿ, ಅನುತ್ತಮಂ - ಸರ್ವೋತ್ತಮವಾದ, ತಪಃ-ತಪಸ್ಸನ್ನು, ತಪ್ತ್ವಾ-ಮಾಡಿ, ಸ್ವರ್ಗಲೋಕಂ - ಸ್ವರ್ಗಲೋಕವನ್ನು, ಉಪಾಶ್ನೀಯಾಂ-ಹೊಂದುವೆನು ||೬|| ಅನಾಥಸ್ಯ-ನಾಥರಹಿತನಾದ, ಮೇ-ನನಗೆ, ತ್ವಂ-ನೀನು, ಭವ್ಯೇನ ಶುಭಕರವಾದ, ಚೇತಸಾ-ಮನಸ್ಸಿನಿಂದ, ನಾಥೋಭವ ರಕ್ಷಕನಾಗು, ಹೇಧರ್ಮಾತ್ಮನ್-ಎಲೈ ಧರ್ಮಿಷ್ಠನೆ, ಪುತ್ರಂ-ಪುತ್ರನನ್ನು, ಪಿತೇವ-ತಂದೆಯಂತೆ, ಕಿಲ್ಬಿಷಾತ -ಪಾಪದದೆಶೆಯಿಂದ, ತ್ರಾತುಂ-ಸಂರಕ್ಷಣೆಮಾಡಲು, ಅರ್ಹಸಿ-ಯೋಗ್ಯನಾಗು. || ೭ || ತಸ್ಯ-ಆ ಶುನಶ್ಶೇಫನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಮಹಾತಪಾಃ-ಮಹಾ ತಪೋವಂತನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು ಬಹುವಿಧಂ-ಬಹುಬಗೆಯಾಗಿ, ಸಾಂತ್ವಯಿತ್ವಾ-ಸಮಾಧಾನಗೊಳಿಸಿ, ಪುತ್ರಾನ್ - ತನ್ನ ಮಕ್ಕಳನು ಕುರಿತು, ಇದಂ-ಈ ಮಾತನ್ನು, ಉವಾಚಹ-ಹೇಳಿದನು ||೮|| ಪಿತರಃ-ತಂದೆಗಳು, ಶುಭಾರ್ಥಿನಃ ಶುಭವನ್ನು ಬೇಡುತ್ತ, ಯತ್ಕೃತೇ-ಯಾವ, ಪರಲೋಕಹಿತಾರ್ಥಾಯ-ಪಾರಲೌಕಿಕಹಿತಕ್ಕೋಸುಗ, ಪುತ್ರಾನ್-ಮಕ್ಕಳನ್ನು,ಜನಯಂತಿ-ಹುಟ್ಟಿಸುವರೋ, ತಸ್ಯ-ಆ ಪ್ರಯೋಜನಕ್ಕೆ, ಅಯಂಕಾಲಃ-ಈ ಕಾಲವು, ಆಗತಃ-ಒದಗಿಬಂದಿದೆ.||೯||ಬಾಲಃ-ಬಾಲಕನಾದ,ಅಯಂಮುನಿಸುತಃ-ಈಋಷಿಪುತ್ರನು,ಮತ್ತಃ-ನನ್ನಿಂದ,ಶರಣಂ-ರಕ್ಷಣವನ್ನು, ಇಚ್ಛತಿ ಅಪೇಕ್ಷಿಸುತ್ತಾನೆ, ಹೇಪುತ್ರಕಾಃ-ಎಲೈ ಮಕ್ಕಳಿರಾ, ಅಸ್ಯ-ಈ ಋಷಿಪುತ್ರನ, ಜೀವಿತಮಾತ್ರೇಣ-ಬದುಕಿಸುವುದರಿಂದಲೆ, ಪ್ರಿಯಂ-ಇಷ್ಟವನ್ನು, ಕುರುತ-ಮಾಡಿರಿ, ||೧೦|| ಸರ್ವೇ-ಸಮಸ್ತರಾದನೀವು, ಸುಕೃತಕರ್ಮಾಣಃ-ಪುಣ್ಯಕರವಾದ ಕರ್ಮಗಳುಳ್ಳವರು, ಸರ್ವೇ-

ಈ ಸಮಯದಲ್ಲಿ ಆಸರೆಯಾಗದ ಪರಿಷ್ಟು ಪನು ಪ್ರಯೋಜನ?ಎಲೈ ಶಾಂತಮೂರ್ತಿಯೆ!ನೀನು ಎಲ್ಲರಿಗೂ ಸಂರಕ್ಷಕನಾಗಿಯೂ, ಹಿತನಾಗಿಯೂ ಇರುವೆಯಾಪುದರಿಂದ ಧರ್ಮದಿಂದ ನನ್ನನ್ನು ಕಾಪಾಡುವವನಾಗು'ನೀನು ಮನಸ್ಸಿಟ್ಟರೆ ಈ ರಾಜನು ಕೃತಕೃತ್ಯನಾಗುವನು ನಾನೂಸಹ ದೀರ್ಘಯುಷ್ಮಂತನಾಗಿ ತಪವೆಂಗೈದು ಸ್ವರ್ಗವನ್ನು ಹೊಂದುತ್ತೇನೆ. ||೬|| ಎಲೈಧರ್ಮಿಷ್ಠನೆ ! ಅನಾಥನಾದ ನನಗೆ ನೀನೇ ನಾಥನಾಗಿ ತಂದೆಯು ಪುತ್ರನನ್ನು ಸಂರಕ್ಷಿಸುವಂತೆ ನನ್ನನ್ನು ವಿಪತ್ತಿನಿಂದಕಾಪಾಡುವವನಾಗು''ಎಂದನು ಮಹಾ ತಪಸ್ವಿಯಾದ ವಿಶ್ವಾಮಿತ್ರನು ಶುನಶ್ಶೇಫನ ಮಾತುಗಳನ್ನು ಕೇಳಿ ಅನೇಕವಿಧವಾಗಿ ಅವನನ್ನು ಸಮಾಧಾನಗೊಳಿಸಿ ತನ್ನ ಮಕ್ಕಳನ್ನುಕುರಿತು''ಎಲೈ!ಪಿತೃಗಳು ಯಾವ ಪರಲೋಕಪ್ರಯೋಜನಕ್ಕಾಗಿ ಮಕ್ಕಳನ್ನು ಪಡೆಯುತ್ತಾ

ಸ್ಸರ್ವೇ ಧರ್ಮ ಪರಾಯಣಾಃ॥ಪಶುಭೂತಾ ನರೇಂದ್ರಸ್ಯ ತೃಪ್ತಿಮಗ್ನೇಃ ಪ್ರಯಚ್ಛತ ॥ ೧೧ ॥ ಸಾಥವಾಂಶ್ಚ ಶುನಶ್ಶೇಫೋ ಯಜ್ಞಶ್ಚಾ ವಿಘ್ನಿತೋಭವೇತ್ । ದೇವತಾ ಸ್ತರ್ಪಿತಾಶ್ಚಸ್ಯು ರ್ಮಮಚಾಪಿ ಕೃತಂ ವಚಃ ॥ ೧೨ ॥ ಮುನೇಸ್ತು ವಚನಂ ಶ್ರುತ್ವಾ ಮಧುಷ್ಯಂದಾದಯ ಸ್ಸುತಾಃ । ಸಾಭಿಮಾನಂ ನರಶ್ರೇಷ್ಠ ಸಲೀಲ ಮಿದಮಬ್ರುವ‌ನ್ ॥ ೧೩ ॥ ಕಥಮಾತ್ಮ ಸುತಾನ್ ಹಿತ್ವಾತ್ರಾಯಸೇ ನ್ಯಸುತಂ ವಿಭೋ । ಅಕಾರ್ಯಮಿವ ಪಶ್ಯಾಮ ಶ್ವಮಾಂಸ ಮಿವ ಭೋಜನೇ॥೧೪॥ತೇಷಾಂ ತದ್ವಚನಂ ಶ್ರುತ್ವಾ ಪುತ್ರಾಣಾಂ ಮುನಿ ಪುಂಗವಃ। ಕ್ರೋಧ ಸಂರಕ್ತ ನಯನೋ ವ್ಯಾಹರ್ತುಮುಪಚಕ್ರಮೇ ॥ ೧೫ ॥ ನಿಸ್ಸಾಧ್ವಸ ಮಿದಂ ಪ್ರೋಕ್ತಂ ಧರ್ಮಾ

ಸಮಸ್ತರು, ಧರ್ಮಪರಾಯಣಾಃ ಧರ್ಮದಲ್ಲಿ ಆಸಕ್ತರು, ನರೇಂದ್ರಸ್ಯ-ಅಂಬರೀಷರಾಯನ ಯಜ್ಞಕ್ಕೆ, ಪಶುಭೂತಾಃ-ಪಶುಭೂತರಾಗಿ, ಅಗ್ನೇಃ-ಅಗ್ನಿಗೆ, ತೃಪ್ತಿಂ ತೃಪ್ತಿಯನ್ನು, ಪ್ರಯಚ್ಛಧ-ಉಂಟುಮಾಡಿರಿ. ॥ ೧೧ ॥ ಶುನಶ್ಶೇಫಃ-ಶುನಶ್ಶೇಫನು, ಸಾಥವಾಂಶ್ಚ - ರಕ್ಷಣೆಯುಳ್ಳವನು, ಯಜ್ಞಶ್ಚ-ಯಜ್ಞವೂ, ಅವಿಘ್ನಿತಃ ವಿಘ್ನವಿಲ್ಲದ, ಭವೇತ್-ನಡೆವುದು, ದೇವತಾಶ್ಚ-ದೇವತೆಗಳೂ, ತರ್ಪಿತಾಃ - ತೃಪ್ತರು, ಸ್ಯುಃ-ಆಗುವರು, ಮಮ-ನನ್ನ, ವಚಶ್ಚಾಪಿ-ಮಾತೂ, ಕೃತಂ-ಮಾಡಲ್ಪಟ್ಟದು, ಭವೇತ್ - ಆಗಲಿ. ॥೧೨॥ ಮಧುಷ್ಯಂದಾದಯಃ-ಮಧುಷ್ಯಂದನೇ ಮೊದಲಾದ, ಸುತಾಃ-ವಿಶ್ವಾಮಿತ್ರಕುವರರು, ಮುನೇಃ-ಮುನಿಯಾದ ವಿಶ್ವಾಮಿತ್ರನ, ವಚನಂತು-ಮಾತನ್ನು, ಶ್ರುತ್ವಾ-ಕೇಳಿ, ಹೇನರಶ್ರೇಷ್ಠ-ಎಲೈ ಶ್ರೀರಾಮನೆ, ಸಾಭಿಮಾನಂ-ಗರ್ವದೊಡನೆ, ಸಲೀಲಂ-ಹಾಸ್ಯದಿಂದ, ಇದಂ-ಈ ಮಾತನ್ನು, ಅಬ್ರುವನ್-ನುಡಿದರು. ॥೧೩॥ ಹೇವಿಭೋ-ಎಲೈ ಸ್ವಾಮಿಯೆ, ಆತ್ಮಸುತಾನ್-ತನ್ನ ಮಕ್ಕಳನ್ನು, ಹಿತ್ವಾ-ಬಿಟ್ಟು, ಅನ್ಯಸುತಂ-ಮತ್ತೊಬ್ಬನ ಮಗನನ್ನು, ಕಥಂತ್ರಾಯಸೇ-ರಕ್ಷಿಸುವೆ, ಭೋಜನೇ-ಭೋಜನದಲ್ಲಿ, ಶ್ವಮಾಂಸಮಿವ-ನಾಯಿಯ ಮಾಂಸದಂತೆ, ಅಕಾರ್ಯಮಿವ-ಅಕಾರ್ಯವನ್ನಾಗಿ, ಪಶ್ಯಾಮಃ-ಕಾಣುತ್ತೇವೆ. ॥೧೪॥ ಮುನಿಪುಂಗವಃ-ಋಷಿಶ್ರೇಷ್ಠನಾದ ವಿಶ್ವಾಮಿತ್ರನು, ತೇಷಾಂಪುತ್ರಾಣಾಂ - ಆ ಮಕ್ಕಳ, ತದ್ವಚನಂ - ಆ ಮಾತನ್ನು, ಶ್ರುತ್ವಾ-ಕೇಳಿ, ಕ್ರೋಧಸಂರಕ್ತನಯನಃ - ಕೋಪದಿಂದ ಕೆಂಪೊಗೆದ ಕಂಗಳುಳ್ಳವನಾಗಿ, ವ್ಯಾಹರ್ತುಂ-ಮಾತನಾಡಲು, ಉಪಚಕ್ರಮೇ-ಆರಂಭಿಸಿದನು ॥೧೫॥ ಮದ್ವಾಕ್ಯಂ ನನ್ನ ಮಾತನ್ನು, ಅತಿಕ್ರಮ್ಯತು-ಅತಿಕ್ರಮಿಸಿ, ಧರ್ಮಾದಪಿ-ಧರ್ಮದಿಂದ, ವಿಗರ್ಹಿತಂ-

ರಯೋ, ಅಂತಹ ಪ್ರಯೋಜನವಿದೀಗ ಸಂಭವಿಸಿರುವುದು. ಮುನಿಕುವರನಾದೀಬಾಲನು ನನ್ನನ್ನು ಶರಣುಹೊಕ್ಕಿರುವನು. ಈ ಋಷಿಪುತ್ರನನ್ನು ಬದುಕಿಸುವುದರಿಂದ ನನಗೆ ಸಂತೋಷವನ್ನುಂಟುಮಾಡಿರಿ ನೀವೆಲ್ಲರೂ ಪುಣ್ಯವಂತರು ; ಧರ್ಮದಲ್ಲಿಆಸಕರಾದವರು ; ಆದುದರಿಂದ ನೀವೆಲ್ಲರೂ ಅಂಬರೀಷನ ಯಾಗದಲ್ಲಿ ಪಶುಭೂತರಾಗಿ ಅಗ್ನಿಗೆ ತೃಪ್ತಿಯನ್ನುಂಟುಮಾಡಿರಿ. ನೀವೀರೀತಿಮಾಡಿದರೆ ಅನಾಥನಾದ ಈ ಶುನಶ್ಶೇಫನು ನಾಥವಂತನಾಗುವನು;ಯಜ್ಞವು ಅವಿಘ್ನವಾಗಿ ಪೂರ್ಣವಾಗುವುದು,ದೇವತೆಗಳೂ ತೃಪ್ತರಾಗುತ್ತಾರೆ;ನನ್ನ ನಚನವನ್ನು ನೆರವೇರಿಸಿದಂತಾಗುವುದು " ಎಂದನು. ॥೧೨॥ ಇಂತು ನುಡಿದ ವಿಶ್ವಾಮಿತ್ರಮುನಿಯ ಮಾತ್ರುಗಳನ್ನು ಕೇಳಿ ಮಧುಷ್ಯಂದನೇ ಮೊದಲಾದ ಆತನ ಕುವರರೆಲ್ಲರೂ, ಗರ್ವದಿಂದ " ಎಲೈ ಸ್ವಾಮಿಯೇ!ಸ್ವಪುತ್ರರನ್ನು ತೊರೆದು, ಅನ್ಯರ ಕುವರರನ್ನು ಹೇಗೆತಾನೆ ಸಂರಕ್ಷಿಸುವೆ ? ಇದ್ದು ಶ್ವನಮಾಂಸದಂತೆ ಅಕಾರ್ಯವಾದುದು " ಎಂದು ನುಡಿದರು. ವಿಶ್ವಾಮಿತ್ರನೀಮಾತುಗಳನ್ನುಕೇಳಿ ಕೋಪದಿಂದ ಕೆಂಪೊಗೆದ ಕಂಗಳುಳ್ಳವನಾಗಿ " ನನ್ನಮಾತನ್ನಲ್ಲಗಳೆದುಲ್ಲಂಘಿಸಿ,

ದಪಿ ವಿಗರ್ಹಿತಂ || ಅತಿಕ್ರಮ್ಯತು ಮದ್ವಾಕ್ಯಂ ದಾರುಣಂ ರೋಮ ಹರ್ಷಣಂ ||೧೬|| ಶ್ವಮಾಂಸ ಭೋಜಿನಸ್ಸರ್ವೇ ವಾಸಿಷ್ಠಾ ಇವ ಜಾತಿಷು ||ಪೂರ್ಣಂ ವರ್ಷಸಹಸ್ರಂತು ಪೃಥಿವ್ಯಾಮನುವತ್ಸ್ಯಥ ||೧೭|| ಕೃತ್ವಾ ಶಾಪಸಮಾಯುಕ್ತಾನ್ ಪುತ್ರಾನ್ಮುನಿವರಸ್ತಥಾ || ಶುನಶ್ಶೇಫ ಮುವಾಚಾರ್ತಂ ಕೃತ್ವಾ ರಕ್ಷಾಂ ನಿರಾಮಯಾಂ || ೧೮ || ಪವಿತ್ರಪಾಶೈರಾಸಕ್ತೋ ರಕ್ತಮಾಲ್ಯಾನುಲೇಪನಃ || ವೈಷ್ಣವಂ ಯೂಪ ಮಾಸಾದ್ಯ ವಾಗ್ಭಿರಗ್ನಿಮುದಾಹರ || ೧೯ || ಇಮೇತು ಗಾಥೇದ್ವೇದಿವ್ಯೇ ಗಾಯೇಥಾ ಮುನಿಪುತ್ರಕ || ಅಂಬರೀಷಸ್ಯ ಯಜ್ಞೇಸ್ಮಿಂ ಸ್ತತ

---

ನಿಂದಿತವಾದ, ದಾರುಣಂ ಕ್ರೂರವಾದ, ರೋಮಹರ್ಷಣಂ - ರೋಮಾಂಚಕರವಾದ, ಇದಂ - ಈ ಮಾತು, ಯತ್-ಯಾವಕಾರಣ, ನಿಸ್ಸಾಧ್ವಸಂ - ನಿರ್ಭಯವಾಗಿ, ಪ್ರೋಕ್ತಂ- ಹೇಳಲ್ಪಟ್ಟಿತೋ ||೧೬|| ತಸ್ಮಾತ್ - ಆ ಕಾರಣ, ಸರ್ವೇ - ಸಮಸ್ತರೂ, ವಾಸಿಷ್ಠಾ ಇವ - ವಸಿಷ್ಠರ ಮಕ್ಕಳಂತೆ, ಜಾತಿಷು-ಅನೇಕ ಜನ್ಮಗಳಲ್ಲಿ, ಶ್ವಮಾಂಸಭೋಜಿನಃ -ನಾಯಿಮಾಂಸವನ್ನು ತಿನ್ನುತ್ತ, ಪೃಥಿವ್ಯಾಂ- ಭೂಮಿಯಲ್ಲಿ, ಪೂರ್ಣಂ-ಸಮಗ್ರವಾದ, ವರ್ಷಸಹಸ್ರಂತು - ಸಾವಿರವರ್ಷಗಳು, ಅನುವತ್ಸ್ಯಥ- ಜೀವಿಸುವರಾಗಿರಿ. || ೧೭ || ಮುನಿವರಃ - ವಿಶ್ವಾಮಿತ್ರನು, ಪುತ್ರಾನ್ - ಮಕ್ಕಳನ್ನು, ತಥಾ - ಹಾಗೆ, ಶಾಪಸಮಾಯುಕ್ತಾನ್ - ಶಾಪದಿಂದ ಕೂಡಿದವರನ್ನಾಗಿ, ಕೃತ್ವಾ-ಮಾಡಿ, ನಿರಾಮಯಂ- ಬಾಧೆಯಿಂದ, ರಕ್ಷಾಂ - ಸಂರಕ್ಷಣವನ್ನು, ಕೃತ್ವಾ-ಮಾಡಿ, ಆರ್ತಂ-ದೀನನಾದ, ಶುನಶ್ಶೇಫಂ - ಶುನಶ್ಶೇಫನನ್ನು ಕುರಿತು, ಉವಾಚ-ಹೇಳಿದನು. || ೧೮ || ಪವಿತ್ರಪಾಶೈಃ, ಪವಿತ್ರ - ಪವಿತ್ರ ವಾದ, ಪಾಶೈಃ-ಹಗ್ಗಗಳಿಂದ, ಆಸಕ್ತಃ - ಕಟ್ಟಲ್ಪಟ್ಟು, ರಕ್ತಮಾಲ್ಯಾನುಲೇಪನಃ - ಕೆಂಪಾದ ಮಾಲ್ಯಗಳೂ, ಗಂಧಗಳೂ ಉಳ್ಳವನಾಗಿ, ವೈಷ್ಣವಂ - ವಿಷ್ಣುಸಂಬಂಧಿಯಾದ, ಯೂಪಂ-ಯೂಪ ಸ್ತಂಭವನ್ನು, ಆಸಾದ್ಯ - ಹೊಂದಿ, ವಾಗ್ಭಿಃ - ಅಗ್ನಿದೇವತಾಕಗಳಾದ ಋಕ್ಕುಗಳಿಂದ, ಅಗ್ನಿಂ- ಅಗ್ನಿಯನ್ನು, ಉದಾಹರ - ಸ್ತುತಿಮಾಡು || ೧೯ || ಹೇಮುನಿಪುತ್ರಕ - ಎಲೈ ಋಷಿಪುತ್ರನೆ, ಅಂಬರೀಷಸ್ಯ-ಅಂಬರೀಷನ, ಅಸ್ಮಿನ್ ಯಜ್ಞೇ - ಈ ಯಜ್ಞದಲ್ಲಿ, ದಿವ್ಯೇ - ದೇವತಾಸಂಬಂಧಿಗಳಾದ, ದ್ವೇ-ಎರಡಾದ, ಇಮೇಗಾಥೇತು - ಈ ಮಂತ್ರದ್ವಯವನ್ನಾದರೆ, ಗಾಯೇಥಾಃ - ಗಾನಮಾಡು,

---

ಧರ್ಮವಲ್ಲದುದಾಗಿಯೂ, ನಿಂದಿತವಾಗಿಯೂ, ಮಹಾ ದಾರುಣವಾಗಿಯೂ, ರೋಮಾಂಚಕರವಾಗಿಯೂ ಇರುವ ಈ ಮಾತನ್ನು ಆಡಿರುವಿರಾದುದರಿಂದ ನೀವೆಲ್ಲರೂ ವಸಿಷ್ಠಕುವರರಂತೆಯೆ ಶ್ವಾನಮಾಂಸ ಭೋಜನರಾಗಿ ಸಹಸ್ರವರ್ಷಗಳ ವರೆವಿಗೂ ಭೂಲೋಕದಲ್ಲಿ ವಾಸಿಸುವವರಾಗಿರಿ" ಎಂದು ಶಾಪವನ್ನಿತ್ತು ಅತಿಯಾದ ದುಃಖವನ್ನು ಹೊಂದಿ ಶುನಶ್ಶೇಫನನ್ನು ಪಾಲಿಸಿ, ಭಯರಹಿತನನ್ನಾಗಿ ಮಾಡಿ "ಎಲೈ ಬಾಲಕನೆ! ಪರಿಶುದ್ಧಗಳಾದ ಪಾಶಗಳಿಂದ ಬಂಧಿತನಾಗಿಯೂ, ರಕ್ತಪುಷ್ಪಗಳಿಂದಲೂ, ಗಂಧದಿಂದಲೂ ಅಲಂಕೃತನಾಗಿ, ವಿಷ್ಣುಸಂಬಂಧವಾದ ಯೂಪಸ್ತಂಭವನ್ನು ಹೊಂದಿ ಅಗ್ನಿದೇವತಾಕವಾದ ಈ ಋಕ್ಕುಗಳಿಂದ ಯಜ್ಞೇಶ್ವರನನ್ನು ಸ್ತುತಿಸು. || ೧೯ || ಈ ಎರಡು ಗಾಥೆಗಳನ್ನು ಅಂಬರೀಷರಾಯನ ಯಜ್ಞದಲ್ಲಿ ನೀನು ಪುನಶ್ಚರಿಸಿದರೆ ಸಿದ್ಧಿಯುಂಟಾಗುವುದು." ಎಂದು ಹೇಳಿದನು. ಆ ಬಳಿಕ ಶುನಶ್ಶೇಫನು

ಸ್ಸಿದ್ಧಿಮವಾಪ್ಸ್ಯಸಿ ||೨೦|| ಶುನಶ್ಶೇಫೋಗೃಹೀತ್ವಾ ತೇ ದ್ವೇಗಾಥೇ ಸುಸಮಾಹಿತಃ|| ತ್ವರಯಾ ರಾಜಸಿಹ್ಮಂ ತಮಂಬರೀಷ ಮುವಾಚಹ ||೨೧|| ರಾಜ ಸಿಂಹ ಮಹಾಸತ್ವ ಶೀಘ್ರಂ ಗಚ್ಛಾವಮಹೇಸದಃ || ನಿರ್ವರ್ತಯಸ್ವ ರಾಜೇಂದ್ರ ದೀಕ್ಷಾಂ ಚ ಸಮುಪಾವಿಶ ||೨೨|| ತದ್ವಾಕ್ಯಮೃಷಿಪುತ್ರಸ್ಯ ಶ್ರುತ್ವಾ ಹರ್ಷ ಸಮನ್ವಿತಃ || ಜಗಾಮ ನೃಪತಿಶ್ಶೀಘ್ರಂ ಯಜ್ಞವಾಟಮತಂದ್ರಿತಃ || ೨೩ || ಸದಸ್ಯಾನುಮತೇ ರಾಜಾ ಪವಿತ್ರ ಕೃತ ಲಕ್ಷಣಂ||ಪಶುಂ ರಕ್ತಾಂಬರಂ ಕೃತ್ವಾ ಯೂಪೇ ತಂ ಸಮಬಂಧಯತ್ || ೨೪ || ಸಬದ್ಧೋ ವಾಗ್ಭಿರಗ್ರ್ಯಾಭಿ ರಭಿತುಷ್ಟಾವ

---

ತತಃ - ಆ ಮಂತ್ರಪುನಶ್ಚರಣದಿಂದ, ಸಿದ್ಧಿಂ - ಪ್ರಾಣಸಿದ್ಧಿಯನ್ನು, ಅವಾಪ್ಸ್ಯಥ - ಹೊಂದುವೆ. || ೨೦ || ಸುನಶ್ಶೇಪಃ - ಶುನಶ್ಶೇಫನು, ದ್ವೇ - ಎರಡಾದ, ತೇಗಾಥೇ - ಆ ಮಂತ್ರಗಳನ್ನು, ಗೃಹೀತ್ವಾ - ಗ್ರಹಿಸಿ, ಸುಸಮಾಹಿತಃ - ಸಮಾಧಾನಚಿತ್ತನಾಗಿ, ರಾಜಸಿಂಹಂ - ರಾಜಶ್ರೇಷ್ಠನಾದ, ತಂಅಂಬರೀಷಂ - ಆ ಅಂಬರೀಷನನ್ನು, ತ್ವರಯಾ - ತ್ವರೆಯಿಂದ, ಉವಾಚ - ಹೇಳಿದನು. || ೨೧ || ಹೇರಾಜಸಿಹ್ಮ - ಎಲೈ ರಾಜಶ್ರೇಷ್ಠನೆ, ಹೇಮಹಾಸತ್ವ - ಎಲೈ ಮಹಾಸತ್ವಶಾಲಿಯೆ, ಶೀಘ್ರಂ - ಜಾಗ್ರತೆಯಾಗಿ, ಸದಃ - ಯಜ್ಞಸಭೆಯನ್ನು ಕುರಿತು, ಗಚ್ಛಾವಮಹೇ - ಹೋಗುವ, ಹೇರಾಜೇಂದ್ರ - ಎಲೈ ಅಂಬರೀಷರಾಯನೆ, ದೀಕ್ಷಾಂಚ - ದೀಕ್ಷೆಯನ್ನು, ನಿರ್ವರ್ತಯಸ್ವ - ನೆರವೇರಿಸು, ಸಮುಪಾವಿಶ ಪ್ರವೇಶಿಸು. ||೨೨|| ಋಷಿಪುತ್ರಸ್ಯ-ಋಷಿಕುಮಾರನಾದ ಶುನಶ್ಶೇಫನ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ಹರ್ಷಸಮನ್ವಿತಃ-ಸಂತೋಷದಿಂದ ಕೂಡಿದವನಾಗಿ, ನೃಪತಿಃ - ಅಂಬರೀಷರಾಯನು, ಅತಂದ್ರಿತಃ - ಏಕಾಗ್ರಚಿತ್ತನಾಗಿ, ಶೀಘ್ರಂ-ತ್ವರೆಯಾಗಿ, ಯಜ್ಞವಾಟಂ - ಯಜ್ಞಶಾಲೆಯನ್ನು ಕುರಿತು, ಜಗಾಮ - ತೆರಳಿದನು. || ೨೩ || ರಾಜಾ - ಅಂಬರೀಷರಾಯನು, ಸದಸ್ಯಾನುಮತೇ - ಸದಸ್ಯರಿಂದ ಸಮ್ಮತಿಸಲ್ಪಟ್ಟ, ಯೂಪೇ - ಯೂಪಸ್ತಂಭದಲ್ಲಿ, ಪವಿತ್ರಕೃತಲಕ್ಷಣಂ - ದರ್ಭಪವಿತ್ರಗಳಿಂದ ಕೃತಲಾಂಛನವುಳ್ಳ, ರಕ್ತಾಂಬರಂ - ಕೆಂಪುಬಣ್ಣದ ವಸ್ತ್ರವುಳ್ಳ, ತಂಪಶುಂ - ಆ ನರಪಶುವನ್ನು, ಸಮಬಂಧಯತ್ - ಕಟ್ಟಿಹಾಕಿದನು || ೨೪ || ಮುನಿಪುತ್ರಕಃ - ಋಷಿಪುತ್ರನಾದ, ಸಃ - ಆ ಶುನಶ್ಶೇಫನು, ಬದ್ಧಃ-ಕಟ್ಟಲ್ಪಟ್ಟು, ಅಗ್ರ್ಯಾಭಿಃ-ಶ್ರೇಷ್ಠ

---

ಸಮಾಧಾನ ಚಿತ್ತನಾಗಿ ಆ ಮಂತ್ರಗಳನ್ನು ಸ್ವೀಕರಿಸಿ ಬೇಗನ ಅಂಬರೀಷರಾಯನ ಬಳಿಸಾರಿ "ಎಲೈ ಮಹಾ ಬಲನಾದ ರಾಜಶ್ರೇಷ್ಠನೆ! ಜಾಗ್ರತೆಯಾಗಿ ಸಭಗೆ ತೆರಳಿ ಯಜ್ಞದೀಕ್ಷೆಯನ್ನು ನೆರವೇರಿಸುವವನಾಗು" ಎಂದನು. || ೨೨ || ಇಂತು ನುಡಿದ ಋಷಿಕುಮಾರನಾದ ಶುನಶ್ಶೇಪನ ನುಡಿಗಳನ್ನು ಕೇಳಿದ ಆ ಅಂಬರೀಷರಾಯನು ಬಹಳವಾದ ಸಂತಸವಂತಾಳಿ, ಯಜ್ಞಶಾಲೆಯನ್ನು ಸೇರಿ, ಸಭೆಯ ಇಷ್ಟದಂತೆ ದರ್ಭಗಳಿಂದ ಕೃತಲಾಂಛನವುಳ್ಳವನಾಗಿಯೂ, ಕೆಂಪುವಸ್ತ್ರಗಳನ್ನುಟ್ಟಿರುವವನಾಗಿಯೂ ಇರುವ ಆ ಋಚೀಕಮುನಿಕುಮಾರನನ್ನು ಪಶುವನ್ನಾಗಿ ಮಾಡಿ ಯೂಪಸ್ತಂಭದಲ್ಲಿ ಬಂಧಿಸಿದವನಾದನು. ||೨೪|| ಯೂಪಸ್ತಂಭದಲ್ಲಿ ಬಂಧಿತನಾದಾಮುನಿಕುಮರನು ವಿಶ್ವಾಮಿತ್ರನುಪದೇಶಿಸಿದ್ದ ಆ ಮಂತ್ರಗಳಿಂದ ಇಂದ್ರೋಪೇಂದ್ರರೆಂಬ ದೇವತೆಗಳನ್ನು ಸ್ತುತಿಸಲು,ದೇವೇಂದ್ರನು ಆ ರಹಸ್ಯಸ್ತೋ

ವೈ ಸುರಾ || ಇಂದ್ರಮಿಂದ್ರಾನುಜಂ ಚೈವ ಯಥಾವನ್ಮುನಿಪುತ್ರಕಃ || ೨೫ ||
ತತಃ ಪ್ರೀತ ಸ್ಸಹಸ್ರಾಕ್ಷೋ ರಹಸ್ಯ ಸ್ತುತಿ ತರ್ಪಿತಃ || ದೀರ್ಘ ಮಾಯುಸ್ತದಾ
ಪ್ರಾದಾ ಚ್ಛುನಶ್ಶೇಫಾಯ ರಾಘವ || ೨೬ || ಸಚ ರಾಜಾ ನರಶ್ರೇಷ್ಠ ಯಜ್ಞ
ಸ್ಯಚ ಸಮಾಪ್ತವಾನ್ || ಫಲಂ ಬಹುಗುಣಂ ರಾಮ ಸಹಸ್ರಾಕ್ಷ ಪ್ರಸಾದಜಂ ||
೨೭ || ವಿಶ್ವಾಮಿತ್ರೋಪಿ ಧರ್ಮಾತ್ಮಾ ಭೂಯಸ್ತೇಪೇ ಮಹಾತಪಾಃ || ಪುಷ್ಕ
ರೇಷು ನರಶ್ರೇಷ್ಠ ದಶವರ್ಷಶತಾನಿಚ || ೨೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಷಷ್ಟಿತಮಸ್ಸರ್ಗಃ.

ಗಳಾದ, ವಾಗ್ಭಿಃ - ಅಗ್ನ್ಯನುವಾಕ್ಯಗಳಿಂದ, ಇಂದ್ರಂ - ಇಂದ್ರಾನುಜಂಚೈವ- ಇಂದ್ರೋಪೇಂದ್ರ ರೆಂಬ, ಸುರಾ - ದೇವತೆಗಳನ್ನು, ಅಭಿತುಷ್ಟಾವ -ಸ್ತೋತ್ರದಿಂದ ಸಂತಸಗೊಳಿಸಿದನು. || ೨೫ || ಹೇರಾಘವ - ಎಲೈ ಶ್ರೀರಾಮನೆ, ತತಃ - ಬಳಿಕ, ಸಹಸ್ರಾಕ್ಷಃ-ದೇವೇಂದ್ರನು, ಪ್ರೀತಃ-ಸಂತೋ ಷಯುಕ್ತನಾಗಿ, ರಹಸ್ಯಸ್ತುತಿತರ್ಪಿತಃ - ಸಾಧುವಾದ ಸ್ತೋತ್ರದಿಂದ ತೃಪ್ತಿಯನ್ನು ಹೊಂದಿ, ಶುನಶ್ಶೇಫಾಯ - ಶುನಶ್ಶೇಫನಿಗೆ, ತದಾ-ಆಗ, ದೀರ್ಘಂ - ಅಪಾರವಾದ, ಆಯುಃ - ಆಯು ಸ್ಸನ್ನು, ಪ್ರಾದಾತ್ - ಕೊಟ್ಟನು. || ೨೬ || ಹೇನರಶ್ರೇಷ್ಠ - ಎಲೈ ಮನುಜಶ್ರೇಷ್ಠನಾದ, ರಾಮ - ಶ್ರೀರಾಮನೆ, ಸರಾಜಾಚ - ಆ ಅಂಬರೀಷರಾಯನೂ, ಸಹಸ್ರಾಕ್ಷಪ್ರಸಾದಜಂ - ಇಂದ್ರನ ವರಾನುಗ್ರಹದಿಂದ ಹುಟ್ಟಿದ, ಯಜ್ಞಸ್ಯ - ಯಜ್ಞಸಂಬಂಧವಾದ, ಬಹುಗುಣಂ - ಬಹುತರವಾದ, ಫಲಂ - ಫಲವನ್ನು, ಸಮಾಪ್ತವಾನ್-ಹೊಂದಿದನು, || ೨೭ || ಧರ್ಮಾತ್ಮಾ - ಧರ್ಮಿಷ್ಠನಾದ, ಮಹಾತಪಾಃ - ಮಹಾತಪಸ್ವಿಯಾದ, ವಿಶ್ವಾಮಿತ್ರೋಪಿ - ವಿಶ್ವಾಮಿತ್ರನೂ ಕೂಡ, ಹೇನರಶ್ರೇಷ್ಠ - ಎಲೈ ಶ್ರೀರಾಮನೆ, ಭೂಯಃ ಪುನಃ, ತಪಃ - ತಪ ಸ್ಸನ್ನು, ದಶವರ್ಷಶತಾನಿಚ - ಸಾವಿರ ವರ್ಷಗಳು, ಪುಷ್ಕರೇಷು-ಪುಷ್ಕರಕ್ಷೇತ್ರದಲ್ಲಿ, ತೇಪೇ-ತಪ ವಂಗೈದನು. || ೨೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಷಷ್ಟಿತಮಸ್ಸರ್ಗಃ

ತ್ರದಿಂದ ತೃಪ್ತನೂ, ಸಂತುಷ್ಟನೂ ಆಗಿ ಆ ಶುನಶ್ಶೇಫನಿಗೆ ದೀರ್ಘಾಯುಷ್ಯಸನ್ನಿತ್ತನು ||೨೮||ಅಂಬರೀಷರಾಜನೂ ಇಂದ್ರಾನುಗ್ರಹದಿಂದ ತಾನು ಆಚರಿಸಿದ ಯಜ್ಞದ ಫಲವನ್ನು ಹೊಂದಿದನು. ಧರ್ಮಾತ್ಮನಾದ ವಿಶ್ವಮಿತ್ರನಾದರೋ ಮಹಾತಪಸ್ವಿಯಾಗಿ ಆ ಪುಷ್ಕರ ಕ್ಷೇತ್ರದಲ್ಲಿಯೇ ಇನ್ನುಸಹಸ್ರವರ್ಷಗಳವರೆವಿಗೆ ತಪವಂ ಗೈಯ್ಯುತ್ತಿದ್ದನು.

ಇಂತಿದು ಅಂಬರೀಷನ ಯಾಗಸಮಾಪ್ತಿ, ಶುನಶ್ಶೇಫನ ದೀರ್ಘಾಯುಷ್ಯಪ್ರಾಪ್ತಿ ವರ್ಣನ ವೆಂಬ ಅರವತ್ತೆರಡನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ತ್ರಿಷಷ್ಟಿತಮಸ್ಸರ್ಗಃ.

ಪೂರ್ಣೇ ವರ್ಷಸಹಸ್ರೇತು ವ್ರತಸ್ನಾತಂ ಮಹಾಮುನಿಂ || ಅಭ್ಯಾಗಚ್ಛನ್ ಸುರಾಸ್ಸರ್ವೇ ತಪಃ ಫಲ ಚಿಕೀರ್ಷವಃ || ೧ || ಅಬ್ರವೀ ತ್ಸುಮಹಾತೇಜಾ ಬ್ರಹ್ಮಾ ಸುರುಚಿರಂ ವಚಃ || ಋಷಿಸ್ತ್ವಮಸಿ ಭದ್ರಂ ತೇ ಸ್ವಾರ್ಜಿತೈಃ ಕರ್ಮಭಿಶ್ಶುಭೈಃ || ೨ || ತಮೇವ ಮುಕ್ತ್ವಾ ದೇವೇಶ ಸ್ತ್ರಿದಿವಂ ಪುನರಭ್ಯಗಾತ್ || ವಿಶ್ವಾಮಿತ್ರೋ ಮಹಾತೇಜಾ ಭೂಯಸ್ತೇಪೇ ಮಹತ್ತಪಃ ||೩|| ತತಃ ಕಾಲೇನ ಮಹತಾ ಮೇನಕಾ ಪರಮಾಪ್ಸರಾ || ಪುಷ್ಕರೇಷು ನರಶ್ರೇಷ್ಠ

---

ವರ್ಷಸಹಸ್ರೇತು – ಸಾವಿರವರ್ಷಗಳು, ಪೂರ್ಣೇಸತಿ – ಮುಗಿಯಲು, ವ್ರತಸ್ನಾತಂ – ನಿಯಮಾಂತದಲ್ಲಿ ಸ್ನಾನಮಾಡಿದ, ಮಹಾಮುನಿಂ – ವಿಶ್ವಾಮಿತ್ರಮುನಿಯನ್ನು ಕುರಿತು, ಸರ್ವೇ- ಸಮಸ್ತರಾದ, ಸುರಾಃ – ದೇವತೆಗಳು, ತಪಃಫಲಚಿಕೀರ್ಷವಃ – ತಪಸ್ಸಿಗೆ ಫಲವೀಯಲೋಸುಗ, ಅಭ್ಯಾಗಚ್ಛನ್ – ಎದುರುಬಂದರು. || ೧ || ಸುಮಹಾತೇಜಾಃ – ಮಹಾ ತೇಜೋವಂತನಾದ, ಬ್ರಹ್ಮಾ – ಚತುರ್ಮುಖಬ್ರಹ್ಮನು, ತೇ – ನಿನಗೆ, ಭದ್ರಂ – ಶುಭವು, ಅಸ್ತು–ಆಗಲಿ, ತ್ವಂ –ನೀನು, ಸ್ವಾರ್ಜಿತೈಃ – ಸ್ವಸಂಪಾದಿತಗಳಾದ, ಶುಭೈಃ- ಶುಭಕರಗಳಾದ, ಕರ್ಮಭಿಃ-ಕರ್ಮಗಳಿಂದ, ಋಷಿಃ- ಋಷಿಯು, ಅಸಿ – ಇದೆ, ಇತಿ – ಇಂತೆಂದು, ಸುರುಚಿರಂ – ಮನೋಹರವಾದ, ವಚಃ – ವಾಕ್ಯವನ್ನು, ಅಬ್ರವೀತ್ – ನುಡಿದನು || ೨ || ದೇವೇಶಃ – ಬ್ರಹ್ಮದೇವನು, ತಂ – ಆ ವಿಶ್ವಾಮಿತ್ರನನ್ನು ಕುರಿತು, ಏವಮುಕ್ತ್ವಾ – ಹೀಗೆ ಹೇಳಿ, ತ್ರಿದಿವಂ – ಸ್ವರ್ಗಲೋಕವನ್ನು ಕುರಿತು, ಪುನಃ – ಮತ್ತೂ, ಅಭ್ಯಗಾತ್ – ತೆರಳಿದನು, ಮಹಾತೇಜಾಃ – ಮಹಾ ತೇಜೋವಂತನಾದ, ವಿಶ್ವಾಮಿತ್ರಃ- ವಿಶ್ವಾಮಿತ್ರನು, ಭೂಯಃ – ಮತ್ತೂ, ಮಹತ್ – ದೊಡ್ಡದಾದ, ತಪಃ – ತಪಸ್ಸನ್ನು, ತೇಪೇ – ತಪಿಸಿದನು. || ೩ || ಹೇ ನರಶ್ರೇಷ್ಠ – ಎಲೈ ಶ್ರೀರಾಮನೇ, ತತಃ–ಬಳಿಕ, ಮಹತಾಕಾಲೇನ – ಬಹಳ ಕಾಲವಾದ ಮೇಲೆ, ಮೇನಕಾ – ಮೇನಕೆಯೆಂಬ, ಪರಮಾಪ್ಸರಾ – ಶ್ರೇಷ್ಠಳಾದ ಅಪ್ಸರ

---

ಎಲೈ ರಾಮಚಂದ್ರನೆ ! ಹೀಗೆ ಸಾವಿರ ವರ್ಷಗಳು ತಪವನ್ನಾಚರಿಸಿ ನಿಯಮಾಂತ್ಯದಲ್ಲಿ ಸ್ನಾತನಾದ ವಿಶ್ವಾಮಿತ್ರಮಹಾಮುನಿಯ ತಪಸ್ಸಿಗೆ ತಕ್ಕ ಫಲವನ್ನು ಕೊಡಲು ದೇವತೆಗಳೆಲ್ಲರೂ ಬಂದವರಾದರು. ಆಗಲಾ ಚತುರ್ಮುಖ ಬ್ರಹ್ಮನು ವಿಶ್ವಾಮಿತ್ರನನ್ನು ಕುರಿತು "ಎಲೈ ವಿಶ್ವಾಮಿತ್ರನೇ! ಸ್ವಸಂಪಾದಿತವಾದ ನಿನ್ನ ಕರ್ಮಗಳಿಂದ ನೀನು ಋಷಿಯಾಗಿರುವೆ, ನಿನಗೆ ಮಂಗಳವಾಗಲಿ " ಎಂದು ಹೇಳಿ ಮರಳಿ ಸ್ವರ್ಗಕ್ಕೆ ತೆರಳಿದನು. ದೇವತೆಗಳೂ ಅವನನ್ನು ಹಿಂಬಾಲಿಸಿದರು. ಇಷ್ಟಾದರೂ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಮತ್ತೂ ಮಹತ್ತರವಾದ ತಪವನ್ನಾಚರಿಸುತ್ತಿದ್ದನು. ||೩|| ಎಲೈ ಪುರುಷೋತ್ತಮನಾದ ರಾಮನೆ! ಆ ಬಳಿಕ ಒಂದಾನೊಂದು ದಿನ ಮೇನಕೆಯೆಂಬ ಓರ್ವ ಅಪ್ಸರಾಂಗನೆಯು ಪುಷ್ಕರ ಕ್ಷೇತ್ರ

ಸ್ನಾತುಂ ಸಮುಪಚಕ್ರಮೇ ‖ ೪ ‖ ತಾಂ ದದರ್ಶ ಮಹಾತೇಜಾ ಮೇನಕಾಂ ಕುಶಿಕಾತ್ಮಜಃ ‖ ರೂಪೇಣಾಪ್ರತಿಮಾಂ ತತ್ರ ವಿದ್ಯುತಂ ಜಲದೇ ಯಥಾ ‖೫‖ ದೃಷ್ಟ್ವಾ ಕಂದರ್ಪವಶಗೋ ಮುನಿಸ್ತಾಮಿದಮಬ್ರವೀತ್ ‖ ಅಪ್ಸರಸ್ಸ್ವಾಗತಂ ತೇಽಸ್ತು ವಸಚೇಹ ಮಮಾಶ್ರಮೇ ‖ ೬ ‖ ಅನುಗೃಹ್ಣೀಷ್ವ ಭದ್ರಂ ತೇ ಮದನೇನ ಸುಮೋಹಿತಂ ‖ ಇತ್ಯುಕ್ತಾ ಸಾ ವರಾರೋಹಾ ತತ್ರ ವಾಸಮಥಾಕರೋತ್ ‖ ೭ ‖ ತಸ್ಯಾಂ ವಸಂತ್ಯಾಂ ವರ್ಷಾಣಿ ಪಂಚ ಪಂಚಚ ರಾಘವ ‖ ವಿಶ್ವಾಮಿತ್ರಾಶ್ರಮೇ ರಾಮ ಸುಖೇನ ವ್ಯತಿಚಕ್ರಮುಃ ‖ ೮ ‖ ಅಥಕಾಲೇ

---

ಸ್ತ್ರೀಯು, ಪುಷ್ಕರೇಷು - ಪುಷ್ಕರಪ್ರದೇಶದಲ್ಲಿ, ಸ್ನಾತುಂ - ಸ್ನಾನಮಾಡಲು, ಸಮುಪಚಕ್ರಮೇ-ಉಪಕ್ರಮಿಸಿದಳು. ‖ ೪ ‖ ಮಹಾತೇಜಾಃ - ಮಹಾ ತೇಜೋವಂತನಾದ, ಕುಶಿಕಾತ್ಮಜಃ - ವಿಶ್ವಾಮಿತ್ರನು, ತತ್ರ - ಆ ಪುಷ್ಕರಕ್ಷೇತ್ರದಲ್ಲಿ, ರೂಪೇಣ - ಸೌಂದರ್ಯದಿಂದ, ಅಪ್ರತಿಮಾಂ - ಸಮಾನರಹಿತಳಾದ, ಜಲದೇ - ಮೇಘದಲ್ಲಿ, ವಿದ್ಯುತಂಯಥಾ - ಮಿಂಚಿನಂತಿರುವ, ಮೇನಕಾಂ - ಮೇನಕೆಯೆಂಬ, ತಾಂ-ಆ ಅಪ್ಸರಸ್ತ್ರೀಯನ್ನು, ದದರ್ಶ-ಕಂಡನು. ‖ ೫ ‖ ಮುನಿಃ-ವಿಶ್ವಾಮಿತ್ರ ಋಷಿಯು, ತಾಂ - ಆಕೆಯನ್ನು, ದೃಷ್ಟ್ವಾ - ಕಂಡು, ಕಂದರ್ಪವಶಗಃ - ಕಾಮಪರತಂತ್ರನಾಗಿ, ಇದಂ - ಈ ವಚನವನ್ನು, ಅಬ್ರವೀತ್ - ನುಡಿದನು. ‖ ೫ ‖ ಹೇಅಪ್ಸರಃ-ಎಲೈ ಅಪ್ಸರಸ್ತ್ರೀಯೆ! ತೇ-ನಿನಗೆ, ಸ್ವಾಗತಂ - ಸುಖಾಗಮನವು, ಅಸ್ತು-ಆಗಲಿ, ಇಹ-ಇಲ್ಲಿ. ಮಮ-ನನ್ನ, ಆಶ್ರಮೇ-ಆಶ್ರಮದಲ್ಲಿ, ವಸ - ಇರು. ತೇ-ನಿನಗೆ, ಭದ್ರಂ - ಮಂಗಳವು, ಅಸ್ತು-ಆಗಲಿ. ‖ ೬ ‖ ಮದನೇನ - ಕಾಮನಿಂದ, ಸುಮೋಹಿತಂ - ಬಹಳವಾಗಿ ಮೋಹಿತವಾದ, ಮಾಂ - ನನ್ನನ್ನು, ಅನುಗೃಹ್ಣೀಷ್ವ - ಅನುಗ್ರಹಿಸು, ಇತ್ಯುಕ್ತಾ -ಇಂತು ನುಡಿಯಲ್ಪಟ್ಟ, ವರಾರೋಹಾ-ಶ್ರೇಷ್ಠಸ್ತ್ರೀಯಾದ, ಸಾ-ಆ ಮೇನಕೆಯು, ತತ್ರ - ಆ ವಿಶ್ವಾಮಿತ್ರಾಶ್ರಮದಲ್ಲಿ, ಅಥ-ಬಳಿಕ, ವಾಸಂ - ವಾಸವನ್ನು, ಅಕರೋತ್ - ಮಾಡಿದಳು. ‖ ೭ ‖ ಹೇ ರಾಘವ - ಎಲೈ ರಘುವಂಶೋತ್ಪನ್ನನಾದ, ರಾಮ-ಶ್ರೀರಾಮನೇ, ವಿಶ್ವಾಮಿತ್ರಾಶ್ರಮೇ - ವಿಶ್ವಾಮಿತ್ರನ ಆಶ್ರಮದಲ್ಲಿ, ತಸ್ಯಾಂ - ಆ ಮೇನಕಾದೇವಿಯು, ವಸಂತ್ಯಾಂ - ಇರುತ್ತಿರಲು, ಪಂಚಪಂಚ - ಹತ್ತು, ವರ್ಷಾಣಿ-ವರ್ಷಗಳು, ಸುಖೇನ-ಸುಖದಿಂದ, ವ್ಯತಿಚಕ್ರಮುಃ - ಕಳೆದುಹೋದುವು. ‖ ೮ ‖ ಅಥ - ಬಳಿಕ, ತಸ್ಮಿನ್ಕಾಲೇ - ಆ

---

ದಲ್ಲಿ ಸ್ನಾನವಂ ಗೈಯ್ಯುತ್ತಿದ್ದಳು. ಮೇಘಮಧ್ಯದಲ್ಲಿ ರಾರಾಜಿಸುವ ಕಾದಂಬರಿಯಂತೆ ಹೊಳೆಯುತ್ತಿದ್ದ ಅನಮಾನರೂಪವತಿಯಾದ ಆ ಮೇನಕೆಯನ್ನು ಕಂಡು ವಿಶ್ವಾಮಿತ್ರಮುನಿಯು ಕಾಮವಶಾನುವರ್ತಿಯಾಗಿ ಅವಳನ್ನು ಕುರಿತು "ಎಲೌ ಅಪ್ಸರಾಂಗನೆಯೆ ! ನಿನಗೆ ಸುಖಾಗಮನವು ; ನನ್ನಾಶ್ರಮದಲ್ಲಿಯೇ ಇರುವವಳಾಗು, ಮದನ ಮೋಹಿತನಾದ ನನ್ನನ್ನು ಅನುಗ್ರಹಿಸು ; ನಿನಗೆ ಮಂಗಳವುಂಟಾಗುವುದು." ಎಂದನು. ಆಗೆ ಉತ್ತಮಾಂಗನೆಯಾದ ಆ ಮೇನಕೆಯು ಹತ್ತು ವರ್ಷಗಳಕಾಲ ಆ ವಿಶ್ವಾಮಿತ್ರಾಶ್ರಮದಲ್ಲಿಯೇ ಸುಖದಿಂದಿದ್ದಳು ‖ ೮ ‖ ಆ ಬಳಿಕ ಒಂದಾನೊಂದು ದಿನ ಮಹಾ ಮುನಿಯಾದ ಕೌಶಿಕನು

ಗತೇ ತಸ್ಮಿನ್ ವಿಶ್ವಾಮಿತ್ರೋ ಮಹಾಮುನಿಃ || ಸವ್ರೀಳಇವ ಸಂವೃತ್ತ ಶ್ಚಿಂತಾ ಶೋಕ ಪರಾಯಣಃ || ೯ || ಬುದ್ಧಿರ್ಮುನೇ ಸ್ಸಮುತ್ಪನ್ನಾ ಸಾಮರ್ಷಾ ರಘುನಂದನ || ಸರ್ವಂ ಸುರಾಣಾಂ ಕರ್ಮೈತ ತ್ತಪೋಪಹರಣಂ ಮಹತ್||೧೦|| ಅಹೋರಾತ್ರಾಪದೇಶೇನ ಗತಾ ಸ್ಸಂವತ್ಸರಾ ದಶ ||ಕಾಮಮೋಹಾಭಿ ಭೂತಸ್ಯ ವಿಘ್ನೋಽಯಂ ಪ್ರತ್ಯುಪಸ್ಥಿತಃ || ೧೧ || ವಿನಿಶ್ವಸನ್ಮುನಿವರಃ ಪಶ್ಚಾತ್ತಾ ಪೇನ ದುಃಖಿತಃ || ಭೀತಾಮಪ್ಸರಸಂ ದೃಷ್ಟ್ವಾ ವೇಪಂತೀಂ ಪ್ರಾಂಜಲಿಂ ಸ್ಥಿತಾಂ || ೧೨ || ಮೇನಕಾಂ ಮಧುರೈ ರ್ವಾಕ್ಯೈ ರ್ವಿಸೃಜ್ಯ ಕುಶಿಕಾತ್ಮಜಃ || ಉತ್ತರಂ ಪರ್ವತಂ ರಾಮ ವಿಶ್ವಾಮಿತ್ರೋ ಜಗಾಮಹ || ೧೩ || ಸಕೃತ್ವಾ

---

ಕಾಲವು, ಗತೇಸತಿ - ಕಳೆಯಲು, ವಿಶ್ವಾಮಿತ್ರಃ - ವಿಶ್ವಾಮಿತ್ರನೆಂಬ, ಮಹಾಮುನಿಃ - ಮಹಾ ಋಷಿಯು, ಸವ್ರೀಳಇವ - ಲಜ್ಜಾಯುಕ್ತನಂತೆ, ಸಂವೃತ್ತಃ - ಆಗಿ, ಚಿಂತಾಶೋಕಪರಾಯಣಃ - ಆಲೋಚನೆಯಲ್ಲಿಯೂ, ಮನೋವ್ಯಥೆಯಲ್ಲಿಯೂ ಆಸಕ್ತನಾದವನು, ಅಭವತ್ - ಆದನು. || ೯ || ಹೇರಘುನಂದನ - ಎಲೈ ಶ್ರೀರಾಮನೇ, ಮುನೇಃ - ವಿಶ್ವಾಮಿತ್ರನಿಗೆ, ಸಾಮರ್ಷಾ-ಕ್ರೋಧದಿಂದ ಯುಕ್ತವಾದ, ಬುದ್ಧಿಃ - ಬುದ್ಧಿಯು, ಸಮುತ್ಪನ್ನಾ - ಹುಟ್ಟಿತು, ಸರ್ವಂ ಸಮಸ್ತವಾದ, ಮಹತ್- ದೊಡ್ಡದಾದ, ಏತತ್ - ಈ, ತಪೋಹರಣಂ-ತಪಸ್ಸಿಗೆ ನಾಶಕವಾದ, ಕರ್ಮ-ಕರ್ಮವು,ಸುರಾಣಾಂ- ದೇವತೆಗಳದು, ಇತಿ-ಇಂತೆಂದು, ಕಾಮ ಮೋಹಾಭಿಭೂತಸ್ಯ-ಕಾಮಮೋಹಗಳಿಂದ ತಿರಸ್ಕೃತನಾದ ನನಗೆ, ಅಹೋರಾತ್ರಾಪದೇಶೇನ - ಅಹೋರಾತ್ರಗಳೆಂಬ ಕಾರಣದಿಂದ, ದಶ - ಹತ್ತಾದ, ಸಂವತ್ಸರಾಃ - ವರ್ಷಗಳು, ಗತಾಃ - ಕಳೆದುವು, ಅಯಂವಿಘ್ನಃ - ಈ ತಪೋವಿಘ್ನವು, ಪ್ರತ್ಯುಪಸ್ಥಿತಃ- ಪ್ರಾಪ್ತವಾಯಿತು. || ೧೧ || ಮುನಿವರಃ - ಋಷಿಶ್ರೇಷ್ಠನಾದ, ಕುಶಿಕಾತ್ಮಜಃ - ಕುಶಬ್ರಹ್ಮನ ವಂಶಸ್ಥನಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಪಶ್ಚಾತ್ತಾಪೇನ-ಪಶ್ಚಾತ್ತಾಪದಿಂದ, ದುಃಖಿತಃ- ದುಃಖಿತನಾಗಿ, ವಿನಿಶ್ವಸನ್ - ನಿಟ್ಟುಸಿರು ಬಿಟ್ಟು, ಭೀತಾಂ - ಭಯಗೊಂಡು, ವೇಪಂತೀಂ - ನಡುಗುತ್ತಿರುವ, ಪ್ರಾಂಜಲಿಂ - ಅಂಜಲಿಬದ್ಧಳಾಗಿ, ಸ್ಥಿತಾಂ - ನಿಂತಿರುವ ಮೇನಕೆಯೆಂಬ, ಅಪ್ಸರಸಂ- ಅಪ್ಸರಸ್ತ್ರೀಯನ್ನು, ದೃಷ್ಟ್ವಾ - ಕಂಡು, ಮಧುರೈಃ - ಮನೋಹರಗಳಾದ, ವಾಕ್ಯೈಃ - ಮಾತುಗಳಿಂದ, ವಿಸೃಜ್ಯ - ತೊರೆದು, ಹೇರಾಮ - ಎಲೈ ಶ್ರೀರಾಮನೆ, ಉತ್ತರಂಪರ್ವತಂ - ಉತ್ತರಪರ್ವತವನ್ನು ಕುರಿತು, ಜಗಾಮಹ - ತೆರಳಿದನು. || ೧೩ || ಮಹಾಯಶಾಃ - ಮಹಾ ಕೀರ್ತಿವಂತ

---

ತನ್ನ ಕೃತ್ಯವನ್ನು ಚಿಂತಿಸಿ ಲಜ್ಜೆಗೊಂಡನು. ಆಗಲಾತನು “ ಅಹಹ ! ತಪವನ್ನು ನಾಶಗೊಳಿಸಿದ ಈ ಕೃತ್ಯವು ದೇವತೆಗಳಿಂದಾಚರಿಸಲ್ಪಟ್ಟಿತಲ್ಲ ! ಕಾಮಮೋಹಗಳಲ್ಲಿ ಸಿಲುಕಿದ ನನಗೆ ಹತ್ತು ಸಂವತ್ಸರಗಳೆಂಬುದು ಒಂದು ದಿನದಂತೆ ಕಳೆದು ಹೋಯಿತಲ್ಲ. ಅಹಹ ! ಇದೊಂದು ವಿಘ್ನವು ಸಂಭವಿಸಿತೆ !! ” ಎಂದು ಚಿಂತಿಸಿ ಕಡೆಗೆ ಬುದ್ಧಿಯುಂಟಾಗಲು ನಿಟ್ಟುಸಿರುಗಳನ್ನು ಬಿಡುತ್ತ, ಅತಿಯಾದ ದುಃಖವನ್ನು ಹೊಂದಿ, ಭಯದಿಂದ ಗಡಗಡನೆ ನಡುಗುತ್ತ ಕೈಜೋಡಿಸಿಕೊಂಡು ನಿಂತಿರುವ ಆ ಮೇನಕೆಯನ್ನು ನೋಡಿ ಮೃದುವಾಗಿ ಮಾತನಾಡಿ ಆಕೆಯನ್ನುಬಿಟ್ಟು

ನೈಷ್ಠಿಕೀಂ ಬುದ್ಧಿಂ ಜೇತು ಕಾಮೋ ಮಹಾಯಶಾಃ || ಕೌಶಿಕೀ ತೀರಮಾಸಾದ್ಯ
ತಪಸ್ತೇಪೇ ಸುದಾರುಣಂ || ೧೪ || ತಸ್ಯ ವರ್ಷಸಹಸ್ರಂತು ಘೋರಂ ತಪ
ಉಪಾಸತಃ || ಉತ್ತರೇ ಪರ್ವತೇ ರಾಮ ದೇವತಾ ನಾಮಭೂದ್ಭಯಂ ||೧೫||
ಅಮಂತ್ರಯರ್ನ್ ಸಮಾಗಮ್ಯ ಸರ್ವೇ ಸರ್ಷಿಗಣಾಸ್ಸುರಾಃ || ಮಹರ್ಷಿ ಶಬ್ದಂ
ಲಭತಾಂ ಸಾಧ್ವಯಂ ಕುಶಿಕಾತ್ಮಜಃ || ೧೬ || ದೇವತಾನಾಂ ವಚಶ್ಶ್ರುತ್ವಾ
ಸರ್ವಲೋಕ ಪಿತಾಮಹಃ || ಅಬ್ರವೀ ನ್ಮಧುರಂ ವಾಕ್ಯಂ ವಿಶ್ವಾಮಿತ್ರಂ ತಪೋ
ಧನಂ || ೧೭ || ಮಹರ್ಷೇ ಸ್ವಾಗತಂ ವತ್ಸ ತಪಸೋಗ್ರೇಣ ತೋಷಿತಃ ||
ಮಹತ್ವ ಮೃಷಿಮುಖ್ಯತ್ವಂ ದದಾಮಿ ತವ ಕೌಶಿಕ || ೧೮ || ಬ್ರಹ್ಮಣ ಸ್ಸವ

ನಾದ, ಸಃ - ಆ ವಿಶ್ವಾಮಿತ್ರನು, ಜೇತುಕಾಮಃ - ಇಂದ್ರಿಯನಿಗ್ರಹವಂ ಗೈಯಲೋಸುಗ, ನೈಷ್ಠಿಕೀಂ - ನಿಷ್ಠಾಪರೂಾದ, ಬುದ್ಧಿಂ - ಬುದ್ಧಿಯನ್ನು, ಕೃತ್ವಾ - ಮಾಡಿ, ಕೌಶಿಕೀತೀರಂ-ಕೌಶಿಕೀನದಿಯ ತೀರವನ್ನು, ಆಸಾದ್ಯ - ಹೊಂದಿ, ಸುದಾರುಣಂ - ಅತಿಕ್ರೂರವಾದ, ತಪಃ - ತಪಸ್ಸನ್ನು, ತೇಪೇ - ಮಾಡಿದನು. || ೧೪ || ಹೇ ರಾಮ - ಎಲೈ ಶ್ರೀರಾಮನೆ, ಉತ್ತರೇಪರ್ವತೇ- ಉತ್ತರಪರ್ವತದಲ್ಲಿ, ಸಃ - ವಿಶ್ವಾಮಿತ್ರನು, ವರ್ಷಸಹಸ್ರಂತು - ಸಹಸ್ರ ವರ್ಷಗಳು, ಘೋರಂ - ಭಯಂಕರವಾದ, ತಪಃ - ತಪವನ್ನು, ಉಪಾಸತಃ - ಸೇವಿಸುತ್ತಿರಲು, ದೇವತಾನಾಂ - ದೇವತೆಗಳಿಗೆ, ಭಯಂ - ಭಯವು, ಆಭೂತ್ - ಉಂಟಾಯಿತು. || ೧೫ || ಸರ್ಷಿಗಣಾಃ - ಋಷಿತಂಡಗಳಿಂದೊಡಗೂಡಿದ, ಸರ್ವೇಸುರಾಃ - ಸಮಸ್ತದೇವತೆಗಳೂ, ಸಮಾಗಮ್ಯ - ಬಂದು, ಅಯಂಕುಶಿಕಾತ್ಮಜಃ - ಈ ವಿಶ್ವಾಮಿತ್ರನು, ಸಾಧು - ಚನ್ನಾಗಿ, ಮಹರ್ಷಿಶಬ್ದಂ - ಮಹರ್ಷಿಶಬ್ದವನ್ನು, ಲಭತಾಂ - ಹೊಂದಲಿ, ಇತಿ - ಇಂತೆಂದು, ಅಮಂತ್ರಯರ್ನ್-ಆಲೋಚಿಸಿದರು. || ೧೬ || ದೇವತಾನಾಂ - ದೇವತೆಗಳ, ವಚಃ - ವಚನವನ್ನು, ಶ್ರುತ್ವಾ ಕೇಳಿ, ಸರ್ವಲೋಕಪಿತಾಮಹಃ-ಸರ್ವಜನರಿಗೂ ತಂದೆಯಾದ ಬ್ರಹ್ಮನು, ತಪೋಧನಂ-ತಪಸ್ಸೇ ಧನವಾಗುಳ್ಳ ವಿಶ್ವಾಮಿತ್ರನನ್ನು ಕುರಿತು- ಮಧುರಂ - ಮಧುರವಾದ, ವಾಕ್ಯಂ - ಈ ವಚನವನ್ನು, ಅಬ್ರವೀತ್ - ನುಡಿದನು. || ೧೭ || ಹೇ ಮಹರ್ಷೇ - ಎಲೈ ಮಹರ್ಷಿಯೇ, ಹೇ ವತ್ಸ - ಎಲೈ ಬಾಲನೇ, ಸ್ವಾಗತಂ - ಸುಖಾಗಮನವೇ, ಹೇ ಕೌಶಿಕ - ಎಲೈ ವಿಶ್ವಾಮಿತ್ರನೇ! ಉಗ್ರೇಣ - ಭಯಂಕರವಾದ, ತಪಸಾ - ತಪಸ್ಸಿನಿಂದ, ತೋಷಿತಃ - ಸಂತೊಷಿಸಿ, ತವ - ನಿನಗೆ, ಮಹತ್ವಂ - ಮಹತ್ವವನ್ನು, ಋಷಿಮುಖ್ಯತ್ವಂ- ಋಷಿಗಳಲ್ಲಿ ಶ್ರೇಷ್ಠತ್ವವನ್ನು, ದದಾಮಿ - ಕೊಡುತ್ತೇನೆ. || ೧೮ || ತಪೋಧನಃ - ತಪಸ್ಸೇ ಧನ

ಹಿಮವತ್ಪರ್ವತವನ್ನು ಕುರಿತು ಹೊರಟು ಕೌಶಿಕೀನದಿಯ ತೀರದಲ್ಲಿ ಅತಿದಾರುಣವಾದ ತಪಸ್ಸನ್ನು ಮಾಡುತ್ತಿದ್ದನು. || ೧೪ || ಎಲೈ ರಘುನಂದನನೆ! ಈ ರೀತಿ ವಿಶ್ವಾಮಿತ್ರನು ಸಾವಿರ ವರ್ಷಗಳ ಕಾಲ ದಾರುಣವಾದ ತಪವಂಗೈಯ್ಯುತ್ತಿರಲು ದೇವತೆಗಳಿಗೆ ಮಹತ್ತರವಾದ ಭಯವುಂಟಾಯಿತು. ಬಳಿಕ ದೇವತೆಗಳೂ ಋಷಿಗಳೂ ಒಟ್ಟುಗೂಡಿ "ಈ ಕುಶಿಕನಂದನನಾದ ವಿಶ್ವಾಮಿತ್ರನು ಮಹರ್ಷಿಯೆಂದು ಕರೆಯಲ್ಪಡಲು ಯೋಗ್ಯನಾಗಿರುವನು" ಎಂದು ಬ್ರಹ್ಮನೊಡನೆ ಆಲೋಚಿಸಿದರು. ಚತುರ್ಮುಖನಿವರ ಮಾತುಗಳನ್ನು ಕೇಳಿ ತಪಸ್ವಿಯಾದ

ಚಶ್ರುತ್ವಾ ಸರ್ವ ಲೋಕೇಶ್ವರಸ್ಯಹ || ಸವಿಷಣ್ಣೋ ನಸಂತುಷ್ಟೋ ವಿಶ್ವಾಮಿ
ತ್ರಸ್ತಪೋಧನಃ || ೧೯ || ಪ್ರಾಂಜಲಿಃ ಪ್ರಣತೋ ಭೂತ್ವಾ ಸರ್ವಲೋಕ
ಪಿತಾಮಹಂ || ಪ್ರತ್ಯುವಾಚ ತತೋ ವಾಚಂ ವಿಶ್ವಾಮಿತ್ರೋ ಮಹಾಮುನಿಃ ||
೨೦ || ಮಹರ್ಷಿ ಶಬ್ದಮತುಲಂ ಸ್ವಾರ್ಜಿತೈಃ ಕರ್ಮಭಿ ಶ್ಶುಭೈಃ || ಯದಿಮೇ
ಭಗವಾನಾಹ ತತೋಹಂ ವಿಜಿತೇಂದ್ರಿಯಃ || ೨೧ || ತಮುವಾಚ ತತೋ
ಬ್ರಹ್ಮಾ ನತಾವತ್ತ್ವಂ ಜಿತೇಂದ್ರಿಯಃ || ಯತಸ್ವ ಮುನಿಶಾರ್ದೂಲ ಇತ್ಯುಕ್ತ್ವಾ
ತ್ರಿದಿವಂ ಗತಃ || ೨೨ || ವಿಪ್ರಸ್ಥಿತೇಷು ದೇವೇಷು ವಿಶ್ವಾಮಿತ್ರೋ ಮಹಾ

---

ವಾಗುಳ್ಳ, ಸವಿಶ್ವಾಮಿತ್ರಃ - ಆ ವಿಶ್ವಾಮಿತ್ರನು, ಸರ್ವಲೋಕೇಶ್ವರಸ್ಯ - ಸರ್ವರಿಗೂ ಸ್ವಾಮಿಯಾದ, ಬ್ರಹ್ಮಣಃ - ಚತುರ್ಮುಖಬ್ರಹ್ಮನ - ವಚಃ - ಮಾತನ್ನು, ಶೃತ್ವಾ - ಕೇಳಿ, ವಿಷಣ್ಣಃ - ವಿಷಾದವನ್ನು ಹೊಂದಿದವನು, ನ-ಆಗಲಿಲ್ಲ, ಸಂತುಷ್ಟಃ - ಸಂತೋಷಗೊಂಡವನು, ನ-ಆಗಲಿಲ್ಲ || ೧೯ || ತತಃ - ಬಳಿಕ, ಮಹಾಮುನಿಃ - ಮಹರ್ಷಿಯಾದ ವಿಶ್ವಾಮಿತ್ರನು, ಸರ್ವಲೋಕಪಿತಾಮಹಂ - ಸಮಸ್ತಲೋಕಗಳಿಗೂ ಪಿತಾಮಹನಾದ ಬ್ರಹ್ಮದೇವನನ್ನು ಕುರಿತು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಪ್ರಣತಃ ನಮಸ್ಕರಿಸಿದವನು, ಭೂತ್ವಾ - ಆಗಿ, ವಾಚಂ - ವಚನವನ್ನು, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು || ೨೦ || ಭಗವಾನ್ - ಪೂಜ್ಯನಾದ ನೀನು, ಸ್ವಾರ್ಜಿತೈಃ-ನನ್ನಿಂದ ಸಂಪಾದಿಸಲ್ಪಟ್ಟ, ಶುಭೈಃ - ಶುಭಕರವಾದ, ಕರ್ಮಭಿಃ-ಕರ್ಮಗಳಿಂದ, ಮೇ - ನನಗೆ, ಅತುಲಂ - ಸಮಾನವಿಲ್ಲದ, ಮಹರ್ಷಿಶಬ್ದಂ-ಮಹರ್ಷಿಯೆಂಬ ನಾಮವನ್ನು, ಆಹಯದಿ-ಹೇಳಿದ್ದೇ ಆದರೆ, ತತಃ-ಬಳಿಕ, ಅಹಂ - ನಾನು, ವಿಜಿತೇಂದ್ರಿಯಃ - ಜಿತೇಂದ್ರಿಯನು, ಅಸ್ಮಿ - ಆದೆನು. || ೨೧ || ತತಃ - ಬಳಿಕ, ಬ್ರಹ್ಮಾ - ಬ್ರಹ್ಮನು, ತ್ವಂತಾವತ್ - ನೀನಾದರೆ, ಜಿತೇಂದ್ರಿಯಃ - ಜಯಿಸಲ್ಪಟ್ಟ ಇಂದ್ರಿಯಗಳುಳ್ಳವನು, ನ-ಅಲ್ಲವು, ಇತಿ - ಇಂತೆಂದು, ತಂ - ಆ ವಿಶ್ವಾಮಿತ್ರನಂ ಕುರಿತು, ಉವಾಚ - ಹೇಳಿದನು, || ಹೇ ಮುನಿಶಾರ್ದೂಲ - ಎಲೈ ಮುನಿಶ್ರೇಷ್ಠನೇ, ಯತಸ್ವ - ಯತ್ನಿಸು, ಇತಿ - ಇಂತೆಂದು, ಉಕ್ತ್ವಾ - ಹೇಳಿ, ತ್ರಿದಿವಂ - ಸ್ವರ್ಗಲೋಕವನ್ನು ಕುರಿತು, ಗತಃ- ಹೊರಟುಹೋದನು. || ೨೨ || ದೇವೇಷು - ದೇವತೆಗಳು, ವಿಪ್ರಸ್ಥಿತೇಷು-ಹೊರಟುಹೋಗಲು,

---

ಕೌಶಿಕನನ್ನು ಕುರಿತು "ಎಲೈ ಕುಶಿಕಪುತ್ರನೇ! ನಿನ್ನ ಕರ್ಮಗಳಿಂದ ಸಂತುಷ್ಟನಾಗಿರುವೆನು. ನಿನಗಿಂದಿನಿಂದ ಮಹತ್ವವನ್ನೂ ಋಷಿಮುಖ್ಯತ್ವವನ್ನೂ ಕೊಟ್ಟಿರುವೆನು" ಎಂದು ಹೇಳಿದನು. ಬ್ರಹ್ಮನ ನುಡಿಗಳನ್ನು ಕೇಳಿದ ವಿಶ್ವಾಮಿತ್ರನು ವ್ಯಸನವನ್ನಾಗಲಿ ಸಂತಸವನ್ನಾಗಲಿ ಹೊಂದಲಿಲ್ಲವು. || ೧೯ || ಆ ಬಳಿಕ ಕುಶಿಕನಂದನನು, ವಿಧೇಯನೂ ಅಂಜಲಿಬದ್ಧನೂ ಆಗಿ ಬ್ರಹ್ಮದೇವನನ್ನು ಕುರಿತು "ಎಲೈ ಚತುರ್ಮುಖನೆ! ನಾನು ಮಾಡಿರುವ ಈ ಕರ್ಮಗಳಿಂದ ಮಹರ್ಷಿಯೆಂಬ ಹೆಸರನ್ನು ಕೊಟ್ಟರೆ ಜಿತೇಂದ್ರಿಯನಾದೆನಲ್ಲವೆ? " ಎಂದನು; ಇಂತು ನುಡಿಯಲು ಬ್ರಹ್ಮನಾತನನ್ನು ಕುರಿತು ಎಲೈ ಋಷಿಪುಂಗವನೆ ! ನೀನಿಷ್ಟುಮಾತ್ರಕ್ಕೆ ಜಿತೇಂದ್ರಿಯನಾಗಲಿಲ್ಲವು; ಹಾಗಾಗಲು ಪ್ರಯತ್ನಿಸುವವನಾಗು' ಎಂದು ಹೇಳಿ ಸ್ವರ್ಗಕ್ಕೆ ಹೊರಟುಹೋದನು. || ೨೨ || ಎಲೈ ರಘುಪುಂಗವನೆ! ದೇವತೆಗಳೆಲ್ಲರೂ ತೆರಳಲು ಮಹಾ ಮುನಿ

ಮುನಿಃ || ಊರ್ಧ್ವಬಾಹು ರ್ನಿರಾಲಂಬೋ ವಾಯುಭಕ್ಷ ಸ್ತಪಶ್ಚರ್ನ ||೨೩ ||
ಘರ್ಮೇ ಪಂಚತಪಾ ಭೂತ್ವಾ ವರ್ಷಾ ಸ್ವಾಕಾಶ ಸಂಶ್ರಯಃ || ಶಿಶಿರೇ ಸಲಿಲ
ಸ್ಥಾಯೀ ರಾತ್ರ್ಯಹಾನಿ ತಪೋಧನಃ || ೨೪ || ಏವಂ ವರ್ಷಸಹಸ್ರಂ ಹಿ
ತಪೋಘೋರ ಮುಪಾಗಮತ್ || ತಸ್ಮಿನ್ ಸಂತಪ್ಯ ಮಾನೇತು ವಿಶ್ವಾಮಿತ್ರೇ
ಮಹಾಮುನೌ || ೨೫ || ಸಂಭ್ರಮ ಸ್ಸುಮಹಾನಾಸೀತ್ಸುರಾಣಾಂ ವಾಸ
ವಸ್ಯಚ || ರಂಭಾ ಮಪ್ಸರಸಂ ಶಕ್ರ ಸ್ಸಹಸರ್ವೈರ್ಮರುದ್ಗಣೈಃ ||೨೬ || ಉವಾ
ಚಾತ್ಮ ಹಿತಂ ವಾಕ್ಯಮಹಿತಂ ಕೌಶಿಕಸ್ಯ ಚ || ೨೬ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಷಷ್ಟಿತಮಸ್ಸರ್ಗಃ.

---

ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಊರ್ಧ್ವಬಾಹುಃ - ಊರ್ಧ್ವ ಪ್ರಸಾರಿತ ಭುಜಗಳುಳ್ಳವನಾಗಿ, ನಿರಾಲಂಬಃ - ಆಶ್ರಯವಿಲ್ಲದೆ, ವಾಯುಭಕ್ಷಃ - ವಾಯುವೇ ಆಹಾರವುಳ್ಳವನಾಗಿ, ತಪಃ - ತಪಸ್ಸನ್ನು, ಚರನ್ನಾಸೀತ್ - ಮಾಡುತ್ತಿದ್ದನು, || ೨೩ || ಘರ್ಮೇ- ಗ್ರೀಷ್ಮಕಾಲದಲ್ಲಿ, ಪಂಚತಪಾಃ-ಪಂಚಾಗ್ನಿ ಮಧ್ಯದಲ್ಲಿ ತಪವುಳ್ಳವನು, ಭೂತ್ವಾ-ಆಗಿ. ವರ್ಷಾಸು- ವರ್ಷಾಕಾಲಗಳಲ್ಲಿ, ಆಕಾಶಸಂಶ್ರಯಃ - ನಿರಾವರಣ ಪ್ರದೇಶವೇ ಆಶ್ರಯವುಳ್ಳವನಾಗಿ, ಶಿಶಿರೇ - ಶಿಶಿರಋತುವಿನಲ್ಲಿ, ಸಲಿಲಸ್ಥಾಯೀ ನೀರಿನಲ್ಲಿ ನಿಂತವನು, ಭೂತ್ವಾ - ಆಗಿ, ರಾತ್ರ್ಯಹಾನಿ - ಹಗಲು ರಾತ್ರಿಗಳಲ್ಲಿ, ತಪೋಧನಃ - ತಪಸ್ಸೇ ಧನವಾಗುಳ್ಳವನಾಗಿ, ಏವಂ - ಹೀಗೆ, ವರ್ಷಸಹಸ್ರಂ - ಸಹಸ್ರವರ್ಷಗಳು, ಘೋರಂ - ಉಗ್ರವಾದ, ತಪಃ - ತಪವನ್ನು, ಉಪಾಗಮತ್ - ಹೊಂದಿ ದನು. ||೨೪|| ಮಹಾಮುನೌ - ಮಹಾಮುನಿಯಾದ, ತಸ್ಮಿನ್ವಿಶ್ವಾಮಿತ್ರೇ - ಆ ವಿಶ್ವಾಮಿತ್ರನು, ಸಂತಪ್ಯಮಾನೇ- ತಪಮಂಗೈಯುತ್ತಿರಲು, ಸುರಾಣಾಂ - ದೇವತೆಗಳಿಗೂ, ವಾಸವಸ್ಯಚ - ದೇವೇಂದ್ರ ನಿಗೂ, ಸುಮಹಾನ್ - ಬಹಳವಾದ, ಸಂಭ್ರಮಃ - (ಗೋ) ಈತನು ನಮ್ಮ ಸ್ಥಾನವನ್ನು ಸೂರೆಗೊ ಳ್ಳುವನೋ ಎಂಬ ಭಯವು, ಆಸೀತ್ - ಉಂಟಾಯಿತು. ||೨೫|| ಶಕ್ರಃ - ದೇವೇಂದ್ರನು, ಸರ್ವೈಃ - ಸಮಸ್ತರಾದ, ಮರುದ್ಗಣೈಸ್ಸಹ - ದೇವತಾಗಣಗಳೊಡಗೂಡಿ, ರಂಭಾಂ - ರಂಭೆಯೆಂಬ, ಅಪ್ಸ ರಸಂ - ಅಪ್ಸರ ಸ್ತ್ರೀಯನ್ನು ಕುರಿತು, ಆತ್ಮಹಿತಂ - ತನಗೆ ಹಿತಕರವಾದ, ಕೌಶಿಕಸ್ಯಚ - ವಿಶ್ವಾ ಮಿತ್ರನಿಗೆ, ಅಹಿತಂ - ಹಿತವಲ್ಲದ, ವಾಕ್ಯಂ - ವಚನವನ್ನು, ಉವಾಚ - ಹೇಳಿದನು. || ೨೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಷಷ್ಟಿತಮಸ್ಸರ್ಗಃ.

---

ಯಾದ ವಿಶ್ವಾಮಿತ್ರನು ಊರ್ಧ್ವಭಾಗದಲ್ಲಿ ಪಂಚಾಗ್ನಿ ಮಧ್ಯವರ್ತಿಯಾಗಿಯೂ, ಮಳೆಗಾ ಲದಲ್ಲಿ ಆಸರೆಯಿಲ್ಲದೆಡೆಯಲ್ಲಿಯೂ, ಹಿಮಗಾಲದಲ್ಲಿ ಜಲಮಧ್ಯಗತನಾಗಿಯೂ, ಹಗ ಲಿರುಳೂ ತಪವಂಗೈಯ್ಯುತ್ತ ಸಹಸ್ರವರ್ಷಗಳವರೆವಿಗೂ ನಿಯಮವಾಗಿದ್ದನು. || ೨೪ || ವಿಶ್ವಾಮಿತ್ರನೀರೀತಿ ತಪವಂಗೈಯುತ್ತಿರಲು, ದೇವತೆಗಳಿಗೂ, ದೇವೇಂದ್ರನಿಗೂ ಮಹಾ ಭಯವುಂಟಾಯಿತು. || ೨೫ || ಆಬಳಿಕ ದೇವೇಂದ್ರನು ದೇವತಾ ಗಣಗಳಿಂದೊಡಗೂಡಿ ತನಗೆ ಹಿತಕರವಾಗಿಯೂ ವಿಶ್ವಾಮಿತ್ರನ ತಪಸ್ಸಿಗೆ ವಿಘ್ನಕರವಾಗಿಯೂ ಇರುವ ಈ ಮಾತನ್ನಾಡಿದನು. ||೨೬||

ಇಂತಿದು ವಿಶ್ವಾಮಿತ್ರನ ಮಹರ್ಷಿತ್ವ ಪ್ರಾಪ್ತಿ ವಿವರಣ, ತೃತೀಯ ತಪೋವಿಘ್ನ ವಿತರಣವೆಂಬ ಅರವತ್ತ ಮೂರನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಚತುಷ್ಷಷ್ಟಿತಮಸ್ಸರ್ಗಃ.

ಸುರಕಾರ್ಯ ಮಿದಂ ರಂಭೇ ಕರ್ತವ್ಯಂ ಸುಮಹ ತ್ತ್ವಯಾ॥ ಲೋಭನಂ ಕೌಶಿಕಸ್ಯೇಹ ಕಾಮ ಮೋಹ ಸಮನ್ವಿತಂ ॥ ೧ ॥ ತಥೋಕ್ತಾ ಸಾಪ್ಸರಾ ರಾಮ ಸಹಸ್ರಾಕ್ಷೇಣ ಧೀಮತಾ ॥ವ್ರೀಳಿತಾ ಪ್ರಾಂಜಲಿರ್ವಾಕ್ಯಂ ಪ್ರತ್ಯುವಾಚ ಸುರೇಶ್ವರಂ ॥ ೨ ॥ ಅಯಂ ಸುರಪತೇ ಘೋರೋ ವಿಶ್ವಾಮಿತ್ರೋ ಮಹಾಮುನಿಃ ॥ ಘೋರಮುತ್ಸೃಜತೇ ಕ್ರೋಧಂ ಮಯಿದೇವ ನ ಸಂಶಯಃ ॥ ೩ ॥ ತತೋಹಿ ಮೇ ಭಯಂ ದೇವ ಪ್ರಸಾದಂ ಕರ್ತುಮರ್ಹಸಿ ॥ ಏವಮುಕ್ತ ಸ್ತಯಾ

---

ಹೇರಂಭೇ - ಎಲೌ ರಂಭೆಯೇ, ತ್ವಯಾ -ನಿನ್ನಿಂದ, ಇದಂಸುರಕಾರ್ಯಂ - ಈ ದೇವತಾ ಕಾರ್ಯರೂಪವಾದ, ಸುಮಹತ್ - ದೊಡ್ಡದಾದ, ಕಾಮಮೋಹಸಮನ್ವಿತಂ, ಕಾಮ - ಕಾಮದಿಂದ ಹುಟ್ಟಿದ, ಮೋಹ - ಚಿತ್ತವಿಕಾರದಿಂದ, ಸಮನ್ವಿತಂ - ಕೂಡಿದ, ಕೌಶಿಕಸ್ಯ - ವಿಶ್ವಾಮಿತ್ರನ, ಲೋಭನಂ - ವಂಚನೆಯು, ಇಹ - ಈಗಲೇ, ಕರ್ತವ್ಯಂ - ಮಾಡತಕ್ಕದು ॥ ೧ ॥ ಹೇರಾಮ - ಎಲೈ ಶ್ರೀರಾಮನೇ, ಧೀಮತಾ - ಬುದ್ಧಿವಂತನಾದ, ಸಹಸ್ರಾಕ್ಷೇಣ - ದೇವೇಂದ್ರನಿಂದ, ತಥೋಕ್ತಾ - ಆಪರಿ ಹೇಳಲ್ಪಟ್ಟ, ಸಾಅಪ್ಸರಾಃ - ಆ ರಂಭೆಯು, ವ್ರೀಳಿತಾ - ಲಜ್ಜಿತಳಾಗಿ, ಪ್ರಾಂಜಲಿಃ- ಅಂಜಲಿ ಒದ್ದಳಾಗಿ, ಸುರೇಶ್ವರಂ - ದೇವೇಂದ್ರನನ್ನು ಕುರಿತು, ವಾಕ್ಯಂ - ಮಾತನ್ನು, ಪ್ರತ್ಯುವಾಚ - ಪ್ರತ್ಯುತ್ತರವನ್ನು ಹೇಳಿದಳು. ॥ ೨ ॥ ಹೇದೇವ - ಎಲೈ ಸ್ವಾಮಿಯೇ, ಹೇಸುರಪತೇ - ಎಲೈ ದೇವತಾಧಿಪತಿಯೇ, ಮಹಾಮುನಿಃ - ಮಹರ್ಷಿಯಾದ, ಅಯಂವಿಶ್ವಾಮಿತ್ರಃ - ಈ ವಿಶ್ವಾಮಿತ್ರನು, ಘೋರಃ - ಭಯಂಕರನು, ಮಯಿ - ನನ್ನಲ್ಲಿ, ಘೋರಂ - ಭಯಂಕರವಾದ, ಕ್ರೋಧಂ ಕೋಪವನ್ನು, ಉತ್ಸೃಜತೇ - ಬಿಡುವನು, ಸಂಶಯೋನ - ಇದರಲ್ಲಿ ಸಂಶಯವಿಲ್ಲವು, ತತಃ - ಆ ಕೋಪದಿಂದ, ಮೇ - ನನಗೆ, ಭಯಂ - ಭಯವು. ಹೇದೇವ - ಎಲೈ ಸ್ವಾಮಿಯೇ, ಪ್ರಸಾದಂ- ಅನುಗ್ರಹವನ್ನು, ಕರ್ತುಂ - ಮಾಡಲು, ಅರ್ಹಸಿ - ಯೋಗ್ಯನಾಗು. ॥ ೩ ॥ ಹೇ ರಾಮ - ಎಲೈ ಶ್ರೀರಾಮನೇ, ತದಾ - ಆಗ, ಭೀತಯಾ - ಭಯಗೊಂಡ, ತಯಾರಂಭಯಾ – ಆ ರಂಭೆಯಿಂದ ಏವಮುಕ್ತಃ – ಹೀಗೆ ನುಡಿಯಲ್ಪಟ್ಟ, ಸಹಸ್ರಾಕ್ಷಃ - ದೇವೇಂದ್ರನು, ವೇಪಮಾನಾಂ - ನಡುಗುತ್ತಿ

---

“ಎಲೌ ರಂಭೆಯೆ! ಮಹತ್ತರವಾದ ದೇವಕಾರ್ಯವು ನಿನ್ನಿಂದಾಗಬೇಕಾಗಿರುವುದು. ಕಾಮ ಮೋಹಸಮನ್ವಿತಳಾಗಿ ವಿಶ್ವಾಮಿತ್ರಮುನಿಯನ್ನು ವಂಚಿತಕ್ಕದು” ಇಂತು ನುಡಿದ ದೇವೇಂದ್ರನ ಮಾತುಗಳನ್ನು ಕೇಳಿ ಆರಂಭೆಯು ಬಹಳ ಲಜ್ಜೆಗೊಂಡವಳೂ,ಅಂಜಲಿಬದ್ಧಳೂ ಆಗಿ ಆತನನ್ನು ಕುರಿತು “ಎಲೈ ಸುರೇಶ್ವರನೇ ! ವಿಶ್ವಾಮಿತ್ರನು ಮಹಾಕ್ರೂರಿಯು; ಮಹಾಮುನಿಯಾದ ಈತನು ನನ್ನಲ್ಲಿ ಕೋಪಗೊಳ್ಳುವನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ನನಗೆ ಬಹಳ ಭಯವಾಗಿರುವುದು. ಮನ್ನಿಸಬೇಕು.” ಎಂದಳು ॥ ೩ ॥ ಭಯ

ರಾಮು ರಂಭಯಾ ಭೀತಯಾ ತದಾ || ೪ || ತಾಮುವಾಚ ಸಹ ಸ್ರಾಕ್ಷೋ ವೇಪಮಾನಾಂ ಕೃತಾಂಜಲಿಂ|| ಮಾಭೈಷೀ ರಂಭೇ ಭದ್ರಂತೇ ಕುರುಷ್ವ ಮಮ ಶಾಸನಂ || ೫ || ಕೋಕಿಲೋ ಹೃದಯಗ್ರಾಹೀ ಮಾಧವೇ ರುಚಿರ ದ್ರುಮೇ || ಅಹಂ ಕಂದರ್ಪ ಸಹಿತ ಸ್ಸ್ಥಾಸ್ಯಾಮಿ ತವಪಾರ್ಶ್ವತಃ|| ೬ || ತ್ವಂಹಿ ರೂಪಂ ಬಹುಗುಣಂ ಕೃತ್ವಾ ಪರಮ ಭಾಸ್ವರಂ || ತಮೃಷಿಂ ಕೌಶಿಕಂ ರಂಭೇ ಭೇದಯಸ್ವ ತಪಸ್ವಿನಂ || ೭ || ಸಾಶ್ರುತ್ವಾ ವಚನಂ ತಸ್ಯ ಕೃತ್ವಾ ರೂಪಮನುತ್ತಮಂ || ಲೋಭಯಾಮಾಸ ಲಲಿತಾ ವಿಶಾಮಿತ್ರಂ ಶುಚಿಸ್ಮಿತಾ ||೮||

---

ರುವ, ಕೃತಾಂಜಲಿಂ - ಬದ್ಧಾಂಜಲಿ ಪುಟವುಳ್ಳ, ತಾಂ - ಆ ರಂಬೆಯನ್ನು ಕುರಿತು, ಉವಾಚ- ಹೇಳಿದನು, ||೪|| ಹೇ ರಂಭೇ - ಎಲೌ ರಂಭೆಯೇ, ಮಾಭೈಷೀಃ - ಭಯಪಡಬೇಡ, ತೇ - ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ಮಮ - ನನ್ನ, ಶಾಸನಂ-ಆಜ್ಞೆಯನ್ನು, ಕುರುಷ್ವ-ಮಾಡು. ||೫|| ಅಹಂ-ನಾನು, ರುಚಿರದ್ರುಮೇ - ಚಿಗುರುಗಳಿಂದ ಮನೋಹರವಾದ ಗಿಡಗಳುಳ್ಳ, ಮಾಧವೇ- ವಸಂತ ಋತುವಿನಲ್ಲಿ, ಹೃದಯಗ್ರಾಹೀ - ಮನಸ್ಸನ್ನು ಅಪಹರಿಸಿರುವ, ಕೋಕಿಲಃ - ಕೋಕಿಲಸ್ವರೂಪನಾಗಿ, ಕಂದರ್ಪಸಹಿತಃ - ಮನ್ಮಥನೊಡಗೂಡಿ, ತವ - ನಿನ್ನ, ಪಾರ್ಶ್ವತಃ - ಪಾರ್ಶ್ವಭಾಗದಲ್ಲಿ, ಸ್ಥಾಸ್ಯಾಮಿ - ಇರುತ್ತೇನೆ. || ೬ || ಹೇರಂಭೇ-ಎಲೌ ರಂಭೆಯೇ, ತ್ವಂ - ನೀನು, ಬಹುಗುಣಂ - ಸೌಂದರ್ಯಾದಿ ಅನೇಕ ಗುಣಗಳುಳ್ಳ, ಪರಮ ಭಾಸ್ವರಂ-ಚನ್ನಾಗಿ ಹೊಳೆಯುತ್ತಿರುವ, ರೂಪಂ - ಆಕಾರವನ್ನು, ಕೃತ್ವಾ - ಹೊಂದಿ, ತಪಸ್ವಿನಂ - ತಪಸ್ಸನ್ನು ಮಾಡುತ್ತಿರುವ, ಋಷಿಂ - ಋಷಿಯಾದ, ತಂಕೌಶಿಕಂ - ಆ ವಿಶ್ವಾಮಿತ್ರನನ್ನು, ಭೇದಯಸ್ವ - ಚಂಚಲಚಿತ್ತನನ್ನಾಗಿಮಾಡು || ೭ || ಸಾ - ಆ ರಂಭೆಯು, ತಸ್ಯ - ಆ ದೇವೇಂದ್ರನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಅನುತ್ತಮಂ- ಸರ್ವೋತ್ತಮವಾದ, ರೂಪಂ - ರೂಪವನ್ನು, ಕೃತ್ವಾ - ತಾಳಿ, ಲಲಿತಾ - ಮನೋಹರಳಾಗಿ, ಶುಚಿಸ್ಮಿತಾ - ಶುಭ್ರವಾದ ಮಂದಸ್ಮಿತವುಳ್ಳವಳಾಗಿ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಲೋಭಯಾಮಾಸ - ವಂಚಿಸಿದಳು. || ೮ || ವಲ್ಗು - ಮನೋಹರವಾಗಿ, ವ್ಯಾಹ

---

ಗೊಂಡವಳೂ,ನಡಗುತ್ತಿರುವಳೂ, ಆದ ರಂಭೆಯು ಈ ರೀತಿ ನುಡಿಯಲು ದೇವೇಂದ್ರನು ಅಕ್ಕೆಯನ್ನು ಕುರಿತು "ಎಲೌ ರಂಭೆಯೆ! ನಿನಗೆ ಮಂಗಳವಾಗಲಿ, ಹೆದರಬೇಡ. ನನ್ನಾಜ್ಞೆಯನು ನೆರವೇರಿಸುವವಳಾಗು; ನಾನು ವಸಂತಕಾಲದಲ್ಲಿ ಮನೋಹರವಾದ ಕೋಕಿಲೆಯ ರೂಪವನ್ನು ತಾಳಿ ಮದನನೊಡಗೂಡಿ ನಿನ್ನ ಬಳಿಯಲ್ಲಿಯೇ ಇರುತ್ತೇನೆ. ನೀನು ಚಿತ್ತಾಕರ್ಷಕವಾಗಿಯೂ, ಕಣ್ಗೊಪ್ಪಿ ರಂಜಿಸುವ ರೂಪುಳ್ಳವಳಾಗಿಯೂ ಬಹು ವಿಧವಾದ ಶೃಂಗಾರ ಚೇಷ್ಟೆಗಳ್ನು ಮಾಡುವವಳೂ ಆಗಿ, ತಪವಂಗೈಯುತ್ತಿರುವ ವಿಶ್ವಾಮಿತ್ರಮುನಿಯ ಚಿತ್ತವು ಚಾಂಚಲ್ಯವನ್ನು ಹೊಂದುವ ಹಾಗೆ ಮಾಡುವವಳಾಗು." ಎಂದನು. || ೭ || ಮಹೇಂದ್ರನಿಂತು ನುಡಿಯಲು ಸುಂದರಿಯಾದ ರಂಭೆಯು ಅಸಮಾನವಾದ ರೂಪವನ್ನು ತಾಳಿ ವಿಶ್ವಾ

ಕೋಕಿಲಸ್ಯ ತು ಶುಶ್ರಾವ ವಲ್ಗು ವ್ಯಾಹರತ ಸ್ಸ್ವನಂ || ಸಂಪ್ರಹೃಷ್ಟೇನ ಮನಸಾ ತತ ಏನಾ ಮುದೈಕ್ಷತ || ೯ || ಅಥತಸ್ಯಚ ಶಬ್ದೇನ ಗೀತೇನಾಽಪ್ರತಿಮೇನಚ || ದರ್ಶನೇನಚ ರಂಭಾಯಾ ಮುನಿ ಸ್ಸಂದೇಹ ಮಾಗತಃ || ೧೦ || ಸಹಸ್ರಾಕ್ಷಸ್ಯ ತತ್ಕರ್ಮ ವಿಜ್ಞಾಯ ಮುನಿಪುಂಗವಃ || ರಂಭಾಂ ಕ್ರೋಧ ಸಮಾವಿಷ್ಟ ಶ್ಶಶಾಪ ಕುಶಿಕಾತ್ಮಜಃ || ೧೧ || ಯನ್ಮಾಂ ಲೋಭಯಸೇ ರಂಭೇ ಕಾಮಕ್ರೋಧ ಜಯೈಷಿಣಂ || ದಶವರ್ಷ ಸಹಸ್ರಾಣಿ ಶೈಲೀ ಸ್ಥಾಸ್ಯಸಿ ದುರ್ಭಗೇ || ೧೨ || ಬ್ರಾಹ್ಮಣ ಸ್ಸುಮಹಾತೇಜಾ ಸ್ತಪೋಬಲ ಸಮನ್ವಿತಃ ||

---

ರತಃ - ಕೂಗುತ್ತಿರುವ, ಕೋಕಿಲಸ್ಯ - ಕೋಗಿಲೆಯ, ಸ್ವನಂ - ಧ್ವನಿಯನ್ನು, ಸಂಪ್ರಹೃಷ್ಟೇನ - ಹರ್ಷಯುಕ್ತವಾದ, ಮನಸಾ - ಮನಸ್ಸಿನಿಂದ, ಶುಶ್ರಾವ - ಕೇಳಿದನು, ತತಃ - ಒಳಿಕ, ಏನಾಂ - ಈ ರಂಭೆಯನ್ನು, ಉದೈಕ್ಷತ - ಕಂಡನು. ||೯|| ಅಥ - ಅನಂತರದಲ್ಲಿ, ಮುನಿಃ - ವಿಶ್ವಾಮಿತ್ರನು, ತಸ್ಯಾಃ - ಆ ಕೋಗಿಲೆಯ, ಶಬ್ದೇನಚ - ಶಬ್ದದಿಂದಲೂ, ಅಪ್ರತಿಮೇನ - ಅಸದೃಶವಾದ, ಗೀತೇನಚ - ಗಾನದಿಂದಲೂ, ರಂಭಾಯಾಃ - ರಂಭೆಯ, ದರ್ಶನೇನಚ - ನೋಡುವಿಕೆಯಿಂದಲೂ, ಸಂದೇಹಂ - ಸಂಶಯವನ್ನು, ಆಗತಃ - ಹೊಂದಿದನು. ||೧೦|| ಮುನಿಪುಂಗವಃ - ಋಷಿಶ್ರೇಷ್ಠನಾದ, ಕುಶಿಕಾತ್ಮಜಃ - ವಿಶ್ವಾಮಿತ್ರನು, ಸಹಸ್ರಾಕ್ಷಸ್ಯ - ದೇವೇಂದ್ರನ, ತತ್ಕರ್ಮ - ಆ ಕೃತ್ಯವನ್ನು, ವಿಜ್ಞಾಯ - ತಿಳಿದು, ಕ್ರೋಧಸಮಾವಿಷ್ಟಃ - ಕೋಪಾವಿಷ್ಟನಾಗಿ, ರಂಭಾಂ-ರಂಭೆಯನ್ನು, ಶಶಾಪ - ಶಪಿಸಿದನು. || ೧೧ || ಹೇರಂಭೇ - ಎಲೆಗೇ ರಂಭೆ, ಹೇದುರ್ಭಗೇ - ನಿರ್ಭಾಗ್ಯಳೇ, ಯತ್ - ಯಾವ ಕಾರಣ, ಕಾಮಕ್ರೋಧಜಯೈಷಿಣಂ -ಕಾಮಕ್ರೋಧಗಳ ಜಯವನ್ನು ಕೋರುತ್ತಿರುವ, ಮಾಂ - ನನ್ನನ್ನು, ಲೋಭಯಸೇ - ಮೋಸಗೊಳಿಸುವೆಯೋ, ತತಃ - ಆ ಕಾರಣ, ದಶವರ್ಷಸಹಸ್ರಾಣಿ - ಹತ್ತು ಸಾವಿರ ವರುಷಗಳು, ಶೈಲೀ - ಕಲ್ಲಿನ ಪ್ರತಿಮಾ ರೂಪವಾಗಿ, ಸ್ಥಾಸ್ಯಸಿ- ಇರು. || ೧೨ || ಹೇರಂಭೇ - ಎಲೌ ರಂಭೆಯೇ, ಸುಮಹಾತೇಜಾಃ - ಬಹಳ ತೇಜೋವಂತನಾದ, ತಪೋಬಲಸಮನ್ವಿತಃ - ತಪಶ್ಶಕ್ತಿಯಿಂದ ಕೂಡಿರುವ, ಬ್ರಾಹ್ಮಣಃ - ಬ್ರಹ್ಮ ಪುತ್ರನಾದ ವಸಿಷ್ಠಋಷಿಯು, ಮತ್ಕ್ರೋಧಕಲುಷೀಕೃತಾಂ - ನನ್ನ ಕೋಪದಿಂದ ಕೆಡಿಸಲ್ಪಟ್ಟ, ತ್ವಾಂ - ನಿನ್ನನ್ನು,

---

ಮಿತ್ರ ಮುನಿಯನ್ನು ಮೋಸಗೊಳಿಸಿದಳು. ಆಗಲಾ ಕೌಶಿಕನು ಮನೋಹರವಾದ ಕೋಗಿಲೆಯ ಧ್ವನಿಯನ್ನು ಕೇಳಿ ಸಂತಸಗೊಂಡ ಮನವುಳ್ಳವನಾಗಿ, ಆ ರಂಭೆಯನ್ನು ನೋಡಿದವನಾದನು. ಆಗಲಾ ಮುನಿಯು ಮನೋಹರವಾಗಿ ಧ್ವನಿಗೈಯುತ್ತಿರುವ ಕೋಕಿಲೆಯ ನಾದದಿಂದಲೂ, ರಂಭೆಯ ಇಂಪಾದ ಗಾನದಿಂದಲೂ, ಆಕೆಯ ದರ್ಶನದಿಂದಲೂ ಸಂಶಯಗೊಂಡವನಾಗಿ "ಇದೆಲ್ಲವೂ ದೇವೇಂದ್ರನ ಕೃತಕವು" ಎಂಬ ವಿಷಯವನ್ನರಿತು ಮಹಾಕೋಪವನ್ನು ತಾಳಿ ಆ ರಂಭೆಯನ್ನೀರೀತಿ ಶಪಿಸಿದನು. || ೧೧ || "ಎಲೌ ರಂಭೆಯೆ! ಕಾಮಕ್ರೋಧಗಳನ್ನು ಜಯಿಸಲಿಚ್ಛೆಯುಳ್ಳ ನನ್ನನ್ನು ವಂಚಿಸಿರುವೆಯಾದುದರಿಂದ ನೀನು ಹತ್ತು ಸಾವಿರ ವರ್ಷಗಳ ವರೆವಿಗೂ ಶಿಲಾರೂಪವಾಗಿಯೇ ಇರುವವಳಾಗು; ಆ ಬಳಿಕ ತಪೋಬಲಯುತನೂ

ಉದ್ಧರಿಷ್ಯತಿ ರಂಭೇ ತ್ವಾಂ ಮತ್ಕ್ರೋಧ ಕಲುಷೀ ಕೃತಾಂ ||೧೩|| ಏವಮು
ಕ್ತ್ವಾ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ || ಅಶಕ್ನುವನ್ ಧಾರಯಿ
ತುಂ ಕ್ರೋಧಂ ಸಂತಾಪ ಮಾಗತಃ || ೧೪ || ತಸ್ಯ ಶಾಪೇನ ಮಹತಾ ರಂಭಾ
ಶೈಲೀ ತದಾ ಭವತ್ || ವಚಶ್ಶ್ರುತ್ವಾ ತು ಕಂದರ್ಪೋ ಮಹರ್ಷೇಸ್ಸಚನಿರ್ಗ
ತಃ || ೧೫ || ಕೋಪೇನ ಸ ಮಹಾತೇಜಾ ಸ್ತಪೋಪಹರಣೇ ಕೃತೇ || ಇಂದ್ರಿ
ಯೈರಜಿತೈ ರಾಮ ನಲೇಭೇ ಶಾಂತಿ ಮಾತ್ಮನಃ || ೧೬ || ಬಭೂವಾಸ್ಯ ಮನ
ಶ್ಚಿಂತಾ ತಪೋಪಹರಣೇಕೃತೇ || ನೈವ ಕ್ರೋಧಂ ಗಮಿಷ್ಯಾಮಿ ನಚವಕ್ಷ್ಯೇ
ಕಥಂಚನ || ೧೭ || ಅಥವಾ ನೋಚ್ಛ್ವಸಿಷ್ಯಾಮಿ ಸಂವತ್ಸರ ಶತಾನ್ಯಪಿ ||

ಉದ್ಧರಿಷ್ಯತಿ - ಉದ್ಧಾರಮಾಡುತ್ತಾನೆ. || ೧೩ || ಮಹಾ ತೇಜಾಃ ಮಹಾ ಧೈರ್ಯಶಾಲಿಯಾದ, ಮಹಾಮುನಿಃ - ಮಹರ್ಷಿಯಾದ ವಿಶ್ವಾಮಿತ್ರನು, ಏವಮುಕ್ತ್ವಾ - ಹೀಗೆ ಹೇಳಿ, ಕ್ರೋಧಂ- ಕ್ರೋಧವನ್ನು, ಧಾರಯಿತುಂ - ಧರಿಸುವುದಕ್ಕೆ, ಅಶಕ್ನುವನ್ - ಶಕ್ತಿಯಿಲ್ಲದವನಾಗಿ, ಸಂತಾಪಂ- ದುಃಖವನ್ನು, ಆಗತಃ - ಹೊಂದಿದನು, || ೧೪ || ತಸ್ಯ-ಆ ವಿಶ್ವಾಮಿತ್ರನ, ಮಹತಾ - ಕ್ರೂರ ವಾದ, ಶಾಪೇನ - ಶಾಪದಿಂದ, ರಂಭಾ - ರಂಭೆಯು, ತದಾ - ಆಗ, ಶೈಲೀ-ಶಿಲಾಪ್ರತಿಮೆಯು, ಅಭವತ್ - ಆದಳು, ಕದರ್ಪಃ - ಮನ್ಮಥನು, ಮಹರ್ಷೇಃ - ವಿಶ್ವಾಮಿತ್ರನ, ವಚಃ-ಮಾತನ್ನು, ಶ್ರುತ್ವಾ - ಕೇಳಿ, ಸಃ - ಆ ಇಂದ್ರನೂ, ಕಂದರ್ಪಶ್ಚ - ಮನ್ಮಥನೂ, ಕೋಪೇನ ಕೋಪದಿಂದ, ತಪೋಪಹರಣೇ - ತಪಸ್ಸಿನ ಅಪಹಾರವು, ಕೃತೇ - ಮಾಡಲ್ಪಡಲು, ನಿರ್ಗತಃ - ಹೊರಟುಹೋದರು. || ೧೫ || ಹೇ ರಾಮ - ಎಲೈ ರಾಮನೇ, ಮಹಾತೇಜಾಃ - ಮಹಾ ತೇಜೋವಂತನಾದ, ಸಃ - ಆ ವಿಶ್ವಾಮಿತ್ರನು, ಅಜಿತೈಃ - ಜಯಿಸಲ್ಪಡದಿರುವ, ಇಂದ್ರಿಯೈಃ - ಇಂದ್ರಿಯಗಳಿಂದ, ಆತ್ಮನಃ - ಮನಸ್ಸಿನ, ಶಾಂತಿಂ - ಶಾಂತಿಯನ್ನು, ನಲೇಭೇ - ಹೊಂದಲಿಲ್ಲವು. || ೧೬ || ತಪೋಪಹರಣೇ - ತಪಸ್ಸಿನ ಅಪಹಾರವು, ಕೃತೇ-ಮಾಡಲ್ಪಡಲು, ಅಸ್ಯ-ಈ ವಿಶ್ವಾಮಿತ್ರನಿಗೆ, ಮನಶ್ಚಿಂತಾ-ಮನಸ್ಸಿನ ಬೇಗೆಯು, ಬಭೂವ - ಆಯಿತು, ಕ್ರೋಧಂ - ಕೋಪವನ್ನು, ನೈವಗಮಿಷ್ಯಾಮಿ-ಹೊಂದುವುದೇ ಇಲ್ಲವು, ಕಥಂಚನ - ಏನಾದರೂ, ನವಕ್ಷ್ಯೇಚ - ಮಾತನ್ನೂ ಆಡುವುದಿಲ್ಲ, ಅಥವಾ - ಅಲ್ಲಿದಿದ್ದರೆ, ಸಂವತ್ಸರಶತಾನ್ಯಪಿ - ನೂರುವರ್ಷಗಳಾದರೂ, ನೋಚ್ಛ್ವಸಿಷ್ಯಾಮಿ-ನಿಶ್ವಾಸವನ್ನೇ ಬಿಡುವುದಿಲ್ಲ. ಅಹಂ - ನಾನು, ವಿಜಿತೇಂದ್ರಿಯಃ - ಜಿತೇಂದ್ರಿಯನಾಗಿ, ಮೇ - ನನಗೆ, ಯಾವತ್-ಎದುವರೆವಿಗೆ, ತಪಸಾ - ತಪಸ್ಸಿನಿಂದ, ಆರ್ಜಿತಂ - ಸಂಪಾದಿಸಲ್ಪಟ್ಟ, ಬ್ರಾಹ್ಮಣ್ಯಂ-ಬ್ರಾಹ್ಮಣತ್ವವು, ಪ್ರಾಪ್ತಂ-

ಮಹಾ ತೇಜಸ್ವಿಯೂ ಆದ ವಸಿಷ್ಠಮುನೀಶ್ವರನು ನನ್ನ ಕ್ರೋಧದಿಂದ ಶಪ್ತಳಾದ ನಿನ್ನನ್ನುದ್ಧರಿಸುವನು''. ಅಯ್ಯಾ ರಾಮಚಂದ್ರನೆ! ಈರೀತಿ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಕೋಪವನ್ನು ಸಹಿಸಲಾರದೆ ಆ ರಂಭೆಯನ್ನು ಶಪಿಸಿ ಸಂತಾಪವನ್ನು ಹೊಂದಿದನು. || ೧೪ || ವಿಶ್ವಾಮಿತ್ರನ ಮಹತ್ತರವಾದೀ ಶಾಪದಿಂದ ಆ ರಂಭೆಯು ತಕ್ಷಣದಲ್ಲಿಯೇ ಶಿಲಾರೂಪಳಾದಳು. ಆ ಬಳಿಕ ವಿಶ್ವಾಮಿತ್ರಮುನಿಯು ಕೋಪವನ್ನು ತಾಳಿದುದರಿಂದ ತಪೋ ನಾಶವನ್ನು ಹೊಂದಿ ಜಿತೇಂದ್ರಿಯನಾಗದಿರಲು, “ಇನ್ನು ಮೇಲೆ ನಾನು ಕ್ರೋಧವನ್ನೇ ಹೊಂದುವುದೇ

ಅಹಂ ವಿಶೋಷಯಿಷ್ಯಾಮಿ ಹ್ಯಾತ್ಮಾನಂ ವಿಜಿತೇಂದ್ರಿಯಃ ॥ ೧೮ ॥ ತಾವ
ದ್ಯಾವದ್ಧಿ ಮೇ ಪ್ರಾಪ್ತಂ ಬ್ರಾಹ್ಮಣ್ಯಂ ತಪಸಾರ್ಜಿತಂ ॥ ಅನುಚ್ಛ್ವಸನ್ನಭುಂ
ಜಾನಸ್ತಿಷ್ಠೇಯಂ ಶಾಶ್ವತೀಸ್ಸಮಾಃ ॥ ೧೯ ॥ ನಹಿ ಮೇ ತಪ್ಯಮಾನಸ್ಯ
ಕ್ಷಯಂ ಯಾಸ್ಯಂತಿ ಮೂರ್ತಯಃ ॥ ಏವಂ ವರ್ಷಸಹಸ್ರಸ್ಯ ದೀಕ್ಷಾಂ ಸಮುನಿ
ಪುಂಗವಃ ॥ ೨೦ ॥ ಚಕಾರಾಽಪ್ರತಿಮಾಂ ಲೋಕೇ ಪ್ರತಿಜ್ಞಾಂ ರಘುನಂದನ ॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಷ್ಷಷ್ಟಿತಮಸ್ಸರ್ಗಃ.

---

ಪ್ರಾಪ್ತವಾಗುವುದೊ, ತಾವತ್ - ಅದುವರೆವಿಗೂ, ಆತ್ಮಾನಂ - ನನ್ನ ದೇಹವನ್ನು, ವಿಶೋಷಯಿಷ್ಯಾಮಿ - ಕ್ಷಯಗೊಳಿಸುತ್ತೇನೆ, ಅನುಚ್ಛ್ವಸನ್-ಉಚ್ಛ್ವಾಸ ಬಿಡದಿರುವವನಾಗಿ, ಶಾಶ್ವತೀಸ್ಸಮಾಃ-ಬಹು ಸಂವತ್ಸರಗಳು, ಅಭುಂಜಾನಃ - ಭೋಜನ ಮಾಡದೆ, ತಿಷ್ಠೇಯಂ - ಇರುತ್ತೇನೆ. ॥ ೧೮ ॥ ತಪ್ಯಮಾನಸ್ಯ - ತಪವಂಗೈಯುತ್ತಿರುವ, ಮೇ - ನನ್ನ, ಮೂರ್ತಯಃ-ಅಂಗಾಂಗಗಳು, ಕ್ಷಯಂ - ಕೃಶವನ್ನು, ನಯಾಸ್ಯಂತಿಹಿ - ಹೊಂದುವದಿಲ್ಲವಷ್ಟೆ, ಹೇ ರಘುನಂದನ - ಎಲೈ ಶ್ರೀರಾಮನೇ, ಮುನಿಪುಂಗವಃ - ಋಷಿಶ್ರೇಷ್ಠನಾದ, ಸಃ - ಆ ವಿಶ್ವಾಮಿತ್ರನು, ಏವಂ - ಹೀಗೆ ಯೋಚಿಸಿ, ಅಂತೆಯೇ, ವರ್ಷಸಹಸ್ರಸ್ಯ - ಸಹಸ್ರವರ್ಷಗಳ, ದೀಕ್ಷಾಂ - ಮೌನವ್ರತವನ್ನು, ಕೃತ್ವಾ - ಮಾಡಿ, ಲೋಕೇ - ಲೋಕದಲ್ಲಿ, ಅಪ್ರತಿಮಾಂ - ಸಾಮ್ಯವಿಲ್ಲದ, ಪ್ರತಿಜ್ಞಾಂ - ಪ್ರತಿಜ್ಞೆಯನ್ನು, ಚಕಾರ-ಮಾಡಿದನು ॥೨೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಷ್ಷಷ್ಟಿತಮಸ್ಸರ್ಗಃ.

---

ಇಲ್ಲವು. ಏನಾದರೂ ಮಾತನಾಡುವುದಿಲ್ಲ; ಇಲ್ಲದಿದ್ದರೆ, ನೂರು ಸಂವತ್ಸರಗಳಾದರೂ ನಿಟ್ಟುಸಿರನ್ನು ಸಹ ಬಿಡುವುದಿಲ್ಲ; ಇಂದಿನಿಂದ ಇಂದ್ರಿಯ ನಿಗ್ರಹವನ್ನು ಮಾಡಿ ಶರೀರವನ್ನು ದಂಡಿಸಿ, ಎಮವರೆವಿಗೆ ಬ್ರಹ್ಮರ್ಷಿತ್ವವು ಪ್ರಾಪ್ತವಾಗದಿರುವುದೋ, ಅದುವರೆವಿಗೆ ನಿರಾಹಾರನಾಗಿ ತಪವನ್ನು ಮಾಡುತ್ತೇನೆ. ತಪಸ್ಸನ್ನು ಮಾಡುತ್ತಲೇಇರುವ ನನ್ನ ಅವಯವಗಳು ಕ್ಷಯವನ್ನೈದವು" ಎಂದು ಒಂದು ಸಾವಿರ ಸಂವತ್ಸರಗಳ ದೀಕ್ಷೆಯನ್ನು ಕೈಕೊಂಡು ಅಪ್ರತಿಮವಾದ ಪ್ರತಿಜ್ಞೆಯನ್ನು ಮಾಡಿದವನಾದನು. ॥೨೦॥

ಇಂತಿಮ ರಂಭಾ ಶಾಪಪ್ರಾಪ್ತಿ ಮತ್ತು ವಿಶ್ವಾಮಿತ್ರ ಮುನಿಯ ತಪಸ್ಸಿನ ಚತುರ್ಥ
ವಿಘ್ನವಿವರಣವೆಂಬ ಅರವತ್ತ ನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚಷಷ್ಟಿತಮಸ್ಸರ್ಗಃ.



ಅಥ ಹೈಮವತೀಂ ರಾಮ ದಿಶಂ ತ್ಯಕ್ತ್ವಾ ಮಹಾಮುನಿ || ಪೂರ್ವಾಂ ದಿಶಮನುಪ್ರಾಪ್ಯ ತಪಸ್ತೇಪೇ ಸುದಾರುಣಂ || ೧ || ಮೌನಂ ವರ್ಷಸಹಸ್ರಸ್ಯ ಕೃತ್ವಾ ವ್ರತ ಮನುತ್ತಮಂ || ಚಕಾರಾ ಪ್ರತಿಮಂ ರಾಮ ತಪಃ ಪರಮ ದುಷ್ಕರಂ || ೨ || ಪೂರ್ಣೇ ವರ್ಷಸಹಸ್ರೇತು ಕಾಷ್ಠ ಭೂತಂ ಮಹಾಮುನಿಂ || ವಿಘ್ನೈ ರ್ಬಹುಭಿ ರಾಧೂತಂ ಕ್ರೋಧೋ ನಾಂತರ ಮಾವಿಶತ್ || ೩ || ಸಕೃತ್ವಾ ನಿಶ್ಚಯಂ ರಾಮ ತಪ ಆತಿಷ್ಠ ದವ್ಯಯಂ || ತಸ್ಯ ವರ್ಷಸಹಸ್ರಸ್ಯ ವ್ರತೇ ಪೂರ್ಣೇ ಮಹಾವ್ರತಃ || ೪ || ಭೋಕ್ತು ಮಾರಬ್ಧವಾನನ್ನಂ ತಸ್ಮಿನ್ ಕಾಲೇ

---

ಹೇರಾಮ - ಎಲೈ ಶ್ರೀರಾಮನೇ, ಮಹಾಮುನಿಃ - ಮಹರ್ಷಿಯಾದ ವಿಶ್ವಾಮಿತ್ರನು, ಅಥ - ಬಳಿಕ, ಹೈಮವತೀಂ - ಹಿಮವತ್ಪರ್ವತ ಸಂಬಂಧಿಯಾದ, ದಿಶಂ - ದಿಕ್ಕನ್ನು, ತ್ಯಕ್ತ್ವಾ-ಬಿಟ್ಟು, ಪೂರ್ವಾಂದಿಶಂ - ಪೂರ್ವದಿಕ್ಕನ್ನು, ಅನುಪ್ರಾಪ್ಯ - ಹೊಂದಿ, ಸುದಾರುಣಂ - ಬಹು ಕಠಿಣವಾದ, ತಪಃ - ತಪಸ್ಸನ್ನು, ತೇಪೇ - ತಪಿಸಿದನು. || ೧ || ಹೇರಾಮ - ಎಲೈ ಶ್ರೀರಾಮನೇ, ವರ್ಷಸಹಸ್ರಸ್ಯ - ವರ್ಷಸಹಸ್ರಸಂಬಂಧಿಯಾದ, ಅನುತ್ತಮಂ - ಸರ್ವೋತ್ತಮವಾದ, ಮೌನಂ - ಮಾತನಾಡದಿರುವಿಕೆಯ, ವ್ರತಂ - ದೀಕ್ಷೆಯನ್ನು, ಕೃತ್ವಾ - ಮಾಡಿ, ಅಪ್ರತಿಮಂ - ಸಮಾನ ರಹಿತವಾದ, ಪರಮದುಷ್ಕರಂ - ಬಹಳ ಅಸಾಧ್ಯವಾದ, ತಪಃ - ತಪಸ್ಸನ್ನು, ಚಕಾರ - ಮಾಡಿದನು. || ೨ || ವರ್ಷಸಹಸ್ರೇ - ಸಹಸ್ರ ವರ್ಷಗಳು, ಪೂರ್ಣೇಸತಿ - ಸಂಪೂರ್ಣಗವಾಲು, ಕಾಷ್ಠಭೂತಂ - ಕಾಷ್ಠವಾಗುತ್ತಿರುವ, ಮಹಾಮುನಿಂ - ಮಹರ್ಷಿಯಾದ ವಿಶ್ವಾಮಿತ್ರನನ್ನು, ಬಹುಭಿಃ-ಅನೇಕಗಳಾದ, ವಿಘ್ನೈಃ-ವಿಘ್ನಗಳಿಂದ, ಆಧೂತಂ-ಕೊಡಹಲ್ಪಟ್ಟವನಾದರೂ, ಕ್ರೋಧಃ-ಕೋಪವು, ಅಂತರಂ -(ಮ) ಧೀರನಾದ ಕಾರಣ, ನಾವಿಶತ್ - ಹೊಂದಲಿಲ್ಲವು, (ಗೋ) ಕ್ರೋಧಃ-ಕ್ರೋಧವು, ಅಂತರಂ - ಅಂತಃಕರಣವನ್ನು, ನಾವಿಶತ್-ಪ್ರವೇಶಮಾಡಲಿಲ್ಲವು. || ೩ || ಹೇರಾಮ - ಎಲೈ ಶ್ರೀರಾಮನೇ, ಸಃ - ಆ ವಿಶ್ವಾಮಿತ್ರನು, ನಿಶ್ಚಯಂ - ನಿಶ್ಚಯವನ್ನು, ಕೃತ್ವಾ - ಮಾಡಿ, ಅವ್ಯಯಂ - ನಾಶ ರಹಿತವಾದ, ತಪಃ - ತಪಸ್ಸನ್ನು, ಆತಿಷ್ಠತ್ - ಅನುಷ್ಠಾನ ಮಾಡಿದನು, ಹೇ ರಘೂತ್ತಮ - ಎಲೈ ರಘುಶ್ರೇಷ್ಠನೇ, ಮಹಾತ್ಮನಃ - ಮಹಾ ನಿಯಮಪರನಾದ ವಿಶ್ವಾಮಿತ್ರನು,

---

ಎಲೈ ರಾಮಚಂದ್ರನೆ ! ಆ ಬಳಿಕ ಮಹಾ ಮನನ ಶೀಲನಾದ ವಿಶ್ವಾಮಿತ್ರನು ಉತ್ತರ ದಿಕ್ಕನ್ನು ತೊರೆದು ಪೂರ್ವದಿಕ್ಕನ್ನಾಶ್ರಯಿಸಿ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದನು. ಸಾವಿರ ವರ್ಷಗಳ ಮೌನವ್ರತವನ್ನು ಹೊಂದಿ, ಯಾರಿಂದಲೂ ಮಾಡಲಸದಳವಾದ ತಪವಂಗೈಯ್ಯುತ್ತಿದ್ದ ಆ ಮುನೀಶ್ವರನಿಗೆ ವಿಘ್ನಗಳೆಷ್ಟು ಒದಗಿ ಬಂದರೂ ಕೋಪಬಾರದಿ

ರಘೂತ್ತಮ || ಇಂದ್ರೋ ದ್ವಿಜಾತಿ ರ್ಭೂತ್ವಾತಂ ಸಿದ್ಧ ಮನ್ನ ಮಯಾಚತ ||
೫ || ತಸ್ಮೈ ದತ್ವಾ ತಥಾ ಸಿದ್ಧಂ ಸರ್ವಂ ವಿಪ್ರಾಯ ನಿಶ್ಚಿತಃ || ನಿಶ್ಯೇಷಿತೇನ್ನೇ
ಭಗವಾನಭುಕ್ತ್ವೈವ ಮಹಾತಪಾಃ || ೬ || ನಕಿಂಚಿದವದದ್ವಿಪ್ರಂ ಮೌನ
ವ್ರತ ಮುಪಸ್ಥಿತಃ || ಅಥ ವರ್ಷ ಸಹಸ್ರಂ ವೈ ನೋಚ್ಛ್ವಸನ್ಮುನಿಪುಂಗವಃ ||
೭|| ತಸ್ಯಾ ನುಚ್ಛ್ವಸಮಾನಸ್ಯ ಮೂರ್ಧ್ನಿ ಧೂಮೋ ವ್ಯಜಾಯತ|| ತ್ರೈಲೋಕ್ಯಂ
ಯೇನ ಸಂಭ್ರಾಂತ ಮಾದೀಪಿತ ಮಿವಾಭವತ್ || ೮ || ತತೋ ದೇವಾಸ್ಸಗಂ
ಧರ್ವಾಃ ಪನ್ನಗಾಸುರ ರಾಕ್ಷಸಾಃ|| ಮೋಹಿತಾ ಸ್ತೇಜಸಾ ತಸ್ಯ ತಪಸಾ ಮಂದ

ತಸ್ಯ ವರ್ಷಸಹಸ್ರಸ್ಯ - ಆ ಸಹಸ್ರ ವರ್ಷಗಳ, ವ್ರತೇ - ನಿಯಮವು, ಪೂರ್ಣೇ-ಸಂಪೂರ್ಣವಾಗಲು, ತಸ್ಮಿನ್ಕಾಲೇ - ಆ ವ್ರತಪಾರಣ ಕಾಲದಲ್ಲಿ, ಅನ್ನಂ - ಅನ್ನವನ್ನು, ಭೋಕ್ತುಂ-ಭೋಜನಮಾಡಲು, ಆರಬ್ಧವಾನ್ - ಪಾಕಾರಂಭ ಮಾಡಿದನು, ಇಂದ್ರಃ - ದೇವೇಂದ್ರನು, ದ್ವಿಜಾತಿಃ - ಬ್ರಾಹ್ಮಣವೇಷ ಧಾರಿಯು, ಭೂತ್ವಾ - ಆಗಿ, ತಂ - ಆ ವಿಶ್ವಾಮಿತ್ರನನ್ನು ಕುರಿತು, ಸಿದ್ಧಂ-ಪಕ್ವವಾದ, ಅನ್ನಂ - ಅನ್ನವನ್ನು, ಅಯಾಚತ - ಬೇಡಿದನು. || ೫ || ತದಾ - ಆಗ, ನಿಶ್ಚಿತಃ-ನಿಶ್ಶಂಕನಾಗಿ, ತಸ್ಮೈ ವಿಪ್ರಾಯ - ಆ ಬ್ರಾಹ್ಮಣನಿಗೆ, ಸಿದ್ಧಂ - ಪಕ್ವವಾದ, ಸರ್ವಂ-ಸಮಸ್ತವಾದ ಅನ್ನವನ್ನು, ದತ್ವಾ-ಕೊಟ್ಟು, ಅನ್ನೇ - ಅನ್ನವು, ನಿಶ್ಯೇಷಿತೇಸತಿ - ನಿಶ್ಶೇಷವಾಗಲು, ಭಗವಾನ್ - ಪೂಜ್ಯನಾದ, ಮಹಾತಪಾಃ - ಮಹಾ ತಪಸ್ವಿಯಾದ ವಿಶ್ವಾಮಿತ್ರನು, ಅಭುಕ್ತ್ವೈವ - ಭೋಜನಮಾಡದೆಯೇ, ಮೌನವ್ರತಂ - ಮೌನವ್ರತವನ್ನು, ಉಪಸ್ಥಿತಃ - ಹೊಂದಿ, ವಿಪ್ರಂ - ಬ್ರಾಹ್ಮಣನನ್ನು ಕುರಿತು, ಕಿಂಚಿದಪಿ - ಏನನ್ನೂ, ನಾವದತ್ - ನುಡಿಯಲಿಲ್ಲವು, ಅಥ - ಬಳಿಕ, ಮುನಿಪುಂಗವಃ -ವಿಶ್ವಾಮಿತ್ರನು, ವರ್ಷಸಹಸ್ರಂವೈ - ಸಹಸ್ರ ವರ್ಷಗಳು, ನೋಚ್ಛ್ವಸತ್ - ಉಚ್ಛ್ವಾಸವನ್ನು ಮಾಡದೇ ಹೋದನು. || ೭ || ಅನುಚ್ಛ್ವಸಮಾನಸ್ಯ - ನಿಶ್ವಾಸವನ್ನು ಬಿಡದಿರುವ, ತಸ್ಯ - ಆ ವಿಶ್ವಾಮಿತ್ರನ, ಮೂರ್ಧ್ನಿ - ಶಿರಸ್ಸಿನಲ್ಲಿ, ಧೂಮಃ - ಹೊಗೆಯು, ವ್ಯಜಾಯತ - ಹುಟ್ಟಿತು, ಯೇನ - ಯಾವ ಧೂಮದಿಂದ, ತ್ರೈಲೋಕ್ಯಂ - ಲೋಕತ್ರಯವು, ಆದೀಪಿತಮಿವ - ಸುಡುವಂತೆ, ಸಂಭ್ರಾಂತಂ - ಆಶ್ಚರ್ಯಕರವಾದುದು, ಅಭವತ್ - ಆಯಿತೋ || ೮ || ತತಃ - ಅನಂತರದಲ್ಲಿ, ಸಗಂಧರ್ವಾಃ - ಗಂಧರ್ವರಿಂದೊಡಗೂಡಿದ, ದೇವಾಃ - ದೇವತೆಗಳು, ಪನ್ನಗಾಸುರರಾಕ್ಷಸಾಃ - ಸರ್ಪಗಳೂ, ಅಸುರರೂ ಮತ್ತು ರಾಕ್ಷಸರೂ, ತಸ್ಯ - ಆ ವಿಶ್ವಾಮಿತ್ರನ, ತೇಜಸಾ - ಬ್ರಹ್ಮತೇಜ

ದ್ದಿತು. ಹೀಗೆ ಸಹಸ್ರವರ್ಷಗಳು ಕಳೆದು ವ್ರತವು ಪೂರ್ಣವಾಗಲು ಆ ವಿಶ್ವಾಮಿತ್ರಮುನಿಯು ಭುಜಿಸಲಿಚ್ಛಿಸಿ ಪಾಕವನ್ನಣಿಮಾಡಿದನು. ಆಗ ದೇವೇಂದ್ರನು ವಿಪ್ರವೇಷವನ್ನು ತಾಳಿ ಆ ಸಿದ್ಧಾನ್ನವನ್ನು ಬೇಡಲು, ಮಹಾತ್ಮನಾದ ವಿಶ್ವಾಮಿತ್ರನು ಪ್ರತ್ಯುತ್ತರವೀಯದೆ ಸಿದ್ಧವಾಗಿದ್ದ ಆ ಅನ್ನವೆಲ್ಲವನ್ನೂ ಆ ಬ್ರಾಹ್ಮಣರೂಪಿಯಾದ ದೇವೇಂದ್ರನಿಗೆ ಕೊಟ್ಟು, ತಾನು ಭುಂಜಿಸದೆಯೂ, ಮಹಾ ತಪಸ್ವಿಯಾಗಿ ಮೌನವ್ರತಿಯೂ ಆಗಿ, ಉಚ್ಛ್ವಾಸ ನಿಶ್ವಾಸಗಳನ್ನು, ಬಂಧಿಸಿ ಒಂದು ಸಹಸ್ರವರ್ಷಗಳ ಕಾಲ ತಪವಂ ಗೈಯುತ್ತಿದ್ದನು. ||೧-೭|| ಈ ರೀತಿ ಶ್ವಾಸ ಬಂಧನೆಯನ್ನು ಮಾಡಿ ತಪಸ್ಸನ್ನು ಮಾಡುತ್ತಿರಲು, ಆ ಮಹಾತ್ಮನ ಶಿರಸ್ಸಿನಲ್ಲಿ ಹೊಗೆಯು ಹುಟ್ಟಿತು. ಇದರಿಂದ ಮೂರು ಲೋಕಗಳೂ ದಹಿಸಿ ಹೋಗುವಂತೆ ವ್ಯಾಕುಲ

ರಶ್ಮಯಃ ॥ ೯ ॥ ಕಶ್ಮಲೋಪಹತಾ ಸ್ಸರ್ವೇ ಪಿತಾಮಹ ಮಥಾ ಬ್ರುವರ್ ॥ ಬಹುಭಿಃ ಕಾರಣ್ಯೈ ರ್ದೇವ ವಿಶ್ವಾಮಿತ್ರೋ ಮಹಾಮುನಿಃ ॥ ೧೦ ॥ ಲೋಭಿತಃ ಕ್ರೋಧಿತಶ್ಚೈವ ತಪಸಾಚಾಭಿವರ್ಧತೇ ॥ ನಹ್ಯಸ್ಯ ವೃಜಿನಂ ಕಿಂಚಿ ದ್ದೃಶ್ಯತೇ ಸೂಕ್ಷ್ಮಮಪ್ಯಥ ॥ ೧೧ ॥ ನದೀಯತೇ ಯದಿತ್ವಸ್ಯ ಮನಸಾ ಯದಭೀಪ್ಸಿತಂ ॥ ವಿನಾಶಯತಿ ತ್ರೈಲೋಕ್ಯಂ ತಪಸಾ ಸಚರಾಚರಂ ॥ ೧೨ ॥ ವ್ಯಾಕುಲಾಶ್ಚ ದಿಶಸ್ಸರ್ವಾ ನಚಕಿಂಚಿ ತ್ಪ್ರಕಾಶತೇ॥ಸಾಗರಾಃ ಕ್ಷುಭಿತಾ ಸ್ಸರ್ವೇ ವಿಶೀರ್ಯಂತೇಚ ಪರ್ವತಾಃ॥೧೩॥ಪ್ರಕಂಪತೇ ಚ ಪೃಥಿವೀ ವಾಯುರ್ವಾತಿ ಭೃಶಾ

---

ಸ್ಸಿನಿಂದಲೂ, ತಪಸಾಚ - ತಪಸ್ಸಿನಿಂದಲೂ, ಮೋಹಿತಾಃ-ಭ್ರಾಂತರಾಗಿ, (ಗೋ) ತಪೋಗ್ನಿಯಿಂದ ಮೂರ್ಛಿತರಾಗಿ, ಮಂದರಶ್ಮಯಃ – ಕುಗ್ಗಿದ ತೇಜಸ್ಸುಳ್ಳವರಾಗಿ, ಸರ್ವೇ-ಎಲ್ಲರೂ, ಕಶ್ಮಲೋಪಹತಾಃ – [ತಿ-ಮ] ದುಃಖದಿಂದೊಡಗೂಡಿದವರಾಗಿ, ಅಥ - ಬಳಿಕ, ಪಿತಾಮಹಂ - ಬ್ರಹ್ಮನನ್ನು ಕುರಿತು, ಅಬ್ರುವನ್ - ನುಡಿದರು, ಹೇದೇವ - ಎಲೈ ದೇವನೇ, ಮಹಾಮುನಿಃ - ಮಹಾ ಮನಸಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಬಹುಭಿಃ - ಅನೇಕಗಳಾದ, ಕಾರಣ್ಯೈಃ-ಕಾರಣಗಳಿಂದ, ಲೋಭಿತಃ - [ಗೋ] ರಂಭಾದರ್ಶನಾದಿಗಳಿಂದ ಮೋಹಿಸಲ್ಪಟ್ಟು, ಕ್ರೋಧಿತಶ್ಚೈವ- (ಮ) ಕೋಪವುಳ್ಳವನಾಗಿ ಮಾಡಲ್ಪಟ್ಟರೂ, ತಪಸಾಚ - ತಪಸ್ಸಿನಿಂದ, ಅಭಿವರ್ಧತೇ - ವೃದ್ಧಿಹೊಂದುತ್ತಿರುವನು, ಅಥ – ಬಳಿಕ, ಅಸ್ಯ - ಈ ವಿಶ್ವಾಮಿತ್ರನಿಗೆ, ಸೂಕ್ಷ್ಮಮಪಿ–ಸ್ವಲ್ಪವಾದರೂ, ಕಿಂಚಿತ್-ಯಾವದೇ ಆಗಲಿ, ವೃಜಿನಂ - ಪಾಪವು, ನದೃಶ್ಯತೇಹಿ - ಕಾಣುವುದಿಲ್ಲವಷ್ಟೆ. ॥೧೦-೧೧॥ ಅಸ್ಯ-ಈ ವಿಶ್ವಾಮಿತ್ರನಿಗೆ, ಮನಸಾ - ಮನಸ್ಸಿನಿಂದ, ಯತ್ - ಯಾವದು, ಅಭೀಪ್ಸಿತಂ - ಇಷ್ಟವೋ, ತತ್- ಅದು, ನದೀಯತೇಯದಿ-ಕೊಡಲ್ಪಡದೇ ಹೋದರೆ,ಸಚರಾಚರಂ-ಜಂಗಮ ಸ್ಥಾವರಗಳಿಂದೊಡಗೂಡಿದ, ತ್ರೈಲೋಕ್ಯಂ - ಮೂರು ಲೋಕಗಳನ್ನು, ತಪಸಾ - ತಪಸ್ಸಿನಿಂದ, ವಿನಾಶಯತಿ - ನಾಶಗೊಳಿಸುವನು, ॥ ೧೨ ॥ ಸರ್ವಾದಿಶಃ - ಸಮಸ್ತ ದಿಕ್ಕುಗಳೂ, ವ್ಯಾಕುಲಾಃ - ಖತಿಗೊಂಡಿವೆ, ಕಿಂಚಿತ್ - ಯಾವ ಪದಾರ್ಥವೂ, ನಪ್ರಕಾಶತೇಚ-ಬೆಳಗುವುದಿಲ್ಲವು, ಸರ್ವೇ - ಸಮಸ್ತಗಳಾದ, ಸಾಗರಾಃ - ಸಮುದ್ರಗಳೂ, ಕ್ಷುಭಿತಾಃ - ಕ್ಷೋಭಿಸಲ್ಪಟ್ಟಿವೆ, ಪರ್ವತಾಃ- ಬೆಟ್ಟಗಳೂ, ವಿಶೀರ್ಯಂತೇಚ - ಸೀಳಿಹೋಗುತ್ತಿವೆ, ಪೃಥಿವೀ - ಭೂಮಿಯು, ಪ್ರಕಂಪತೇಚ - ನಡುಗುತ್ತಿದೆ, ವಾಯುಃ - ಚಂಡಮಾರುತವು, ಭೃಶಾಕುಲಃ - ಅತಿ ಚಂಚಲವಾಗಿ, ವಾತಿ - ಬೀಸುತ್ತಿರುವುದು, ಹೇಬ್ರಹ್ಮನ್ - ಎಲೈ ಬ್ರಹ್ಮನೇ, ಜನಂ - ಜನವು, ನಾಸ್ತಿಕಃ-ಕರ್ಮಶೂನ್ಯವಾದುದು, ಜಾಯತೇ-ಆಗಿದೆ, ನಪ್ರತಿಜಾನೀಮಃ - ಪ್ರತಿಕ್ರಿಯೆಯನ್ನರಿಯೆವು. ॥ ೧೩ ॥ ತ್ರೈಲೋಕ್ಯಂ - ಲೋಕತ್ರ

---

ವಾದುದಾಯಿತು. ॥ ೮ ॥ ಆ ಬಳಿಕ ದೇವ, ಗಂಧರ್ವ, ನಾಗ, ಅಸುರ, ರಾಕ್ಷಸರು ಮೊದಲಾದವರೆಲ್ಲರೂ ಆ ವಿಶ್ವಾಮಿತ್ರನ ತೇಜಸ್ಸಿನಿಂದಲೂ, ತಪದಿಂದಲೂ ಚಿತ್ತವಿಭ್ರಮವುಳ್ಳವರೂ, ವ್ಯಾಕುಲರೂ ಆಗಿ ಬ್ರಹ್ಮದೇವನನ್ನು ಕುರಿತು "ಎಲೈ ಸ್ವಾಮಿಯೆ! ವಿಶ್ವಾಮಿತ್ರಮುನಿಯು ಎಷ್ಟು ವಿಧವಾದ ವಿಘ್ನಗಳನ್ನು ತಂದೊಡ್ಡಿದರೂ, ಕೋಪಬರುವಂತೆ ಮಾಡಿದರೂ, ತಪಸ್ಸಿನಿಂದ ಮತ್ತೆಷ್ಟು ವೃದ್ಧಿಯನ್ನೈದುತ್ತಿರುವನು. ಇಷ್ಟೆಯಲ್ಲದೆ ಈ ಮುನಿ

ಕುಲಃ || ಬ್ರಹ್ಮನ್ನಪ್ರತಿಜಾನೀಮೋ ನಾಸ್ತಿಕೋ ಜಾಯತೇ ಜನಃ || ೧೪ ||
ಸಂಮೂಢಮಿವ ತ್ರೈಲೋಕ್ಯಂ ಸಂಪ್ರಕ್ಷುಭಿತ ಮಾನಸಂ || ಭಾಸ್ಕರೋ ನಿಷ್ಪ್ರ
ಭಶ್ಚೈವ ಮಹರ್ಷೇಸ್ತಸ್ಯ ತೇಜಸಾ || ೧೫ || ಬುದ್ಧಿಂ ನ ಕುರುತೇ ಯಾವ
ನ್ನಾಶೇದೇವ ಮಹಾಮುನಿಃ || ತಾವತ್ಪ್ರಸಾದ್ಯೋ ಭಗವಾನಗ್ನಿರೂಪೋ
ಮಹಾದ್ಯುತಿಃ ||೧೬|| ಕಾಲಾಗ್ನಿನಾ ಯಥಾಪೂರ್ವಂ ತ್ರೈಲೋಕ್ಯಂ ದಹ್ಯತೇ
ಖಿಲಂ || ದೇವರಾಜ್ಯಂ ಚಿಕೀರ್ಷೇತ ದೀಯತಾ ಮಸ್ಯ ಯನ್ಮತಂ || ೧೭ ||

---

ಯುವು, ಸಂಮೂಢಮಿವ - ಮೋಹಾಕ್ರಾಂತವಾದಂತೆ, ಸಂಪ್ರಕ್ಷುಭಿತಮಾನಸಂ - ಕ್ಷೋಭೆಗೊಳಿಸಲ್ಪಟ್ಟ ಮನಸ್ಸುಳ್ಳದಾಗಿದೆ, ಭಾಸ್ಕರಃ - ಸೂರ್ಯನು, ತಸ್ಯಮಹರ್ಷೇಃ - ಆ ವಿಶ್ವಾಮಿತ್ರನ, ತೇಜಸಾ - ತಪೋಜ್ವಾಲೆಯಿಂದ, ನಿಷ್ಪ್ರಭಶ್ಚೈವ - ಪ್ರಕಾಶ ಶೂನ್ಯನಾಗಿರುವನು, ಹೇದೇವ-ಎಲೈ ಸ್ವಾಮಿಯೇ, ಮಹಾಮುನಿಃ - ವಿಶ್ವಾಮಿತ್ರನು, ನಾಶೇ - ಜನಕ್ಷಯದಲ್ಲಿ, ಯಾವತ್ - ಎಷ್ಟರೊಳಗೆ, ಬುದ್ಧಿಃ - ಬುದ್ಧಿಯನ್ನು, ನಕುರುತೇ - ಮಾಡುವುದಿಲ್ಲವೋ, ತಾವತ್ - ಅಷ್ಟರಲ್ಲಿ, ಅಗ್ನಿರೂಪಃ - ಅಗ್ನಿರೂಪದಂತೆ ರೂಪವಂತನಾದ, ಮಹಾದ್ಯುತಿಃ - ಮಹಾ ಪ್ರಕಾಶವುಳ್ಳ, ಭಗವಾನ್-ಪೂಜ್ಯನಾದ ವಿಶ್ವಾಮಿತ್ರನು, ಪ್ರಸಾದ್ಯಃ - ಪ್ರಸನ್ನನಾಗಿ ಮಾಡಿಕೊಳ್ಳತಕ್ಕವನು. ||೧೪-೧೫|| ಅಖಿಲಂ - ಸಮಸ್ತವಾದ, ತ್ರೈಲೋಕ್ಯಂ - ಲೋಕತ್ರಯವು, ಪೂರ್ವಂ - ಪೂರ್ವಪ್ರಳಯಕಾಲದಲ್ಲಿ, ಕಾಲಾಗ್ನಿನಾ - ಪ್ರಳಯಾಗ್ನಿಯಿಂದ, ಯಥಾ - ಹೇಗೆ, ಅದಹ್ಯತ - ದಹಿಸಲ್ಪಟ್ಟಿತೋ, ತಥಾ - ಹಾಗೆಯೇ, ಅಖಿಲಂ - ಸಮಸ್ತವಾದ ಲೋಕತ್ರಯವು, ದಹ್ಯತೇ - ದಹಿಸಲ್ಪಡುತ್ತದೆ, ದೇವರಾಜ್ಯಂ - ದೇವರಾಜ್ಯವನ್ನು, ಚಿಕೀರ್ಷೇತ - ಕೇಳಿಯಾನು, ಅಸ್ಯ - ಈ ವಿಶ್ವಾಮಿತ್ರನಿಗೆ, ಯತ್ - ಯಾವ ಬ್ರಹ್ಮರ್ಷಿತ್ವವು, ಮತಂ - ಇಷ್ಟವೋ, ತತ್-ಅದು, ದೀಯತಾಂ ಕೊಡಲ್ಪಡಲಿ. ||೧೬-೧೭|| ತತಃ - ಅನಂತರದಲ್ಲಿ, ಪಿತಾಮಹಪುರೋಗವಾಃ - ಬ್ರಹ್ಮನೇ ಮೊದಲಾದ, ಸರ್ವೇ-

---

ಯಲ್ಲಿ ಸ್ವಲ್ಪವಾದರೂ ಪಾಪವಿರುವುದಿಲ್ಲ,ಆದುದರಿಂದೀತನಿಗೆ ಈಗ ಅಭಿಮತವಾದ ವರವನ್ನು ಕೊಡದಿದ್ದಲ್ಲಿ ಚರಾಚರಾತ್ಮಕವಾದ ಈ ಜಗತ್ತನ್ನೇ ನಾಶಗೊಳಿಸುವನು; ದಿಕ್ಕುಗಳೆಲ್ಲವೂ ಕಂಗೆಟ್ಟು ಬೆಳಗುವುದೇ ಇಲ್ಲವು; ಸಮುದ್ರಗಳೆಲ್ಲವೂ ಅಲ್ಲಕಲ್ಲೋಲವಾಗುತ್ತಿರುವುವು; ಪರ್ವತಗಳೆಲ್ಲವೂ ಬಿರಿದು ಹೋಗುತ್ತಿರುವುವು; ಭೂಮಿಯು ಅದರುತ್ತಿರುವುದು; ಗಾಳಿಯು ಬಹು ರಭಸವಾಗಿ ಬೀಸುತ್ತಿರುವುದು; ಇಷ್ಟೆಯಲ್ಲದೆ ಜನರೂ ಕರ್ಮಶೂನ್ಯರಾಗಿರುವರು,ಇದಕ್ಕಾವ ಪ್ರತಿಕ್ರಿಯೆಯನ್ನು ಮಾಡಬೇಕೆಂಬುದನ್ನೇ ತಿಳಿಯದಿರುವೆವು. ಮೂರು ಲೋಕಗಳೂ ಭ್ರಾಂತವಾಗಿ ಹೋಗಿವೆ. ಹೆಚ್ಚೇನು; ಆ ಮಹರ್ಷಿಯ ತೇಜಸ್ಸಿನಿಂದ ಸೂರ್ಯದೇವನೂ ತೇಜೋರಾಹಿತ್ಯವನ್ನು ಹೊಂದಿರುವನು. ಆದುದರಿಂದ ಮಹಾಮುನಿಯಾದ ವಿಶ್ವಾಮಿತ್ರನಿಗೆ ಜನಕ್ಷಯ ಬುದ್ಧಿಯುಂಟಾಗುವುದರೊಳಗಾಗಿ ಆತನನ್ನನುಗ್ರಹಿಸಬೇಕು. ||೯-೧೬|| ಇಲ್ಲದಿದ್ದರೆ ಅಗ್ನಿಸ್ವರೂಪನೂ, ಮಹಾತೇಜಸ್ವಿಯೂ ಆಗಿರುವ ಈ ವಿಶ್ವಾಮಿತ್ರನು ಪ್ರಳಯಕಾಲದಲ್ಲಿ ಕಾಲಾಗ್ನಿಯು ಜಗತ್ರಯವನ್ನೂ ಸುಟ್ಟುಬಿಡುವಂತೆ ಸುಡುವನು. ಆದುದರಿಂದೀ

ತತಸ್ಸುರಗಣಾಸ್ಸರ್ವೇ ಪಿತಾಮಹ ಪುರೋಗಮಾಃ ॥ ವಿಶ್ವಾಮಿತ್ರಂ ಮಹಾತ್ಮಾನಂ ಮಧುರಂ ವಾಕ್ಯ ಮಬ್ರುವನ್ ॥೧೮॥ ಬ್ರಹ್ಮರ್ಷೇ ಸ್ವಾಗತಂ ತೇಸ್ತು ತಪಸಾ ಸ್ಮ ಸುತೋಷಿತಾಃ ॥ ಬ್ರಾಹ್ಮಣ್ಯಂ ತಪಸೋಗ್ರೇಣ ಪ್ರಾಪ್ತವಾನಸಿ ಕೌಶಿಕ ॥ ೧೯ ॥ ದೀರ್ಘಮಾಯುಶ್ಚ ತೇ ಬ್ರಹ್ಮನ್ ದದಾಮಿ ಸಮರುದ್ಗಣಃ॥ ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಗಚ್ಛ ಸೌಮ್ಯ ಯಥಾ ಸುಖಂ ॥ ೨೦ ॥ ಪಿತಾಮಹ ವಚಶ್ಶ್ರುತ್ವಾ ಸರ್ವೇಷಾಂ ಚ ದಿವೌಕಸಾಂ ॥ಶ್ರುತ್ವಾ ಪ್ರಣಾಮಂ ಮುದಿ

---

ಸಮಸ್ತರಾದ, ಸುರಗಣಾಃ - ದೇವತಾ ತಂಡಗಳು, ಮಹಾತ್ಮಾನಂ - ಮಹಾತ್ಮನಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ಮಧುರಂ - ಮನೋಹರವಾದ, ವಾಕ್ಯಂ - ವಚನವನ್ನು, ಅಬ್ರುವನ್-ನುಡಿದರು. ॥ ೧೮ ॥ ಹೇ ಬ್ರಹ್ಮರ್ಷೇ-ಎಲೈ ಬ್ರಹ್ಮರ್ಷಿಯೇ, ತೇ-ನಿನಗೆ, ಸ್ವಾಗತಂ-ಸುಖಾಗಮನವು, ಅಸ್ತು - ಆಗಲಿ, ತಪಸಾ - ತಪಸ್ಸಿನಿಂದ, ಸುತೋಷಿತಾಃಸ್ಮ-ಬಹಳ ಸಂತೋಷಗೊಂಡವರಾದೆವು, ಹೇ ಕೌಶಿಕ - ಎಲೈ ವಿಶ್ವಾಮಿತ್ರನೇ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ! ಉಗ್ರೇಣ - ಕ್ರೂರವಾದ, ತಪಸಾ-ತಪಸ್ಸಿನಿಂದ, ಬ್ರಾಹ್ಮಣ್ಯಂ-ಬ್ರಾಹ್ಮಣ್ಯವನ್ನು, ಪ್ರಾಪ್ತವಾನ್-ಹೊಂದಿದವನು, ಅಸಿ - ಆದೆ, ತೇ - ನಿನಗೆ, ದೀರ್ಘಂ - ದೀರ್ಘವಾದ, ಆಯುಃ ಚ - ಆಯುಸ್ಸನ್ನು, ಸಮರುದ್ಗಣಃ-ದೇವತಾ ಸಮೂಹದಿಂದೊಡಗೂಡಿದ ನಾನು, ದದಾಮಿ-ಕೊಡುತ್ತೇನೆ, ಹೇಸೌಮ್ಯ-ಎಲೈ ಸೌಮ್ಯನೇ, ತೇ - ನಿನಗೆ, ಭದ್ರಂ - ಮಂಗಳವು, ಅಸ್ತು - ಆಗಲಿ, ಸ್ವಸ್ತಿ - ಕ್ಷೇಮವನ್ನು, ಪ್ರಾಪ್ನುಹಿ - ಹೊಂದು, ಯಥಾಸುಖಂ - ಸುಖವಾಗಿ, ಗಚ್ಛ-ಹೋಗು. ॥ ೧೯ ॥ ಸರ್ವೇಷಾಂ-ಸಮಸ್ತರಾದ, ದಿವೌಕಸಾಂಚ - ದೇವತೆಗಳ ವಚನವನ್ನೂ, ಪಿತಾಮಹವಚಶ್ಚ - ಬ್ರಹ್ಮನ ವಾಕ್ಯವನ್ನೂ, ಶ್ರುತ್ವಾ - ಕೇಳಿ, ಮಹಾಮುನಿಃ - ಮಹರ್ಷಿಯಾದ ವಿಶ್ವಾಮಿತ್ರನು, ಮುದಿತಃ-ಸಂತಸ

---

ಗಲೇ ಈತನಿಗಭಿಮತವಾದ ಬ್ರಾಹ್ಮಣ್ಯವನ್ನು ಕೊಡುವುದುಚಿತವು. ಇಲ್ಲದಿದ್ದರೆ ದೇವರಾಜ್ಯವನ್ನು ಅಪೇಕ್ಷಿಸಿಯಾನು." ಎಂದು ಹೇಳಿದರು. ಈ ರೀತಿಯಾಗಿ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಯೋಚಿಸಿ ಮಹಾತ್ಮನಾದ ವಿಶ್ವಾಮಿತ್ರನನ್ನು ಕುರಿತಿಂದರು. "ಓ ಬ್ರಹ್ಮರ್ಷಿಯೆ! ನಿನಗೆ ಕ್ಷೇಮವಾಗಲಿ; ನಿನ್ನ ತಪಸ್ಸಿನಿಂದ ನಾವೆಲ್ಲರೂ ಸಂತುಷ್ಟರಾಗಿರುವೆವು. ಎಲೈ ವಿಶ್ವಾಮಿತ್ರ ಮುನಿಯೇ! ಘೋರವಾದ ತಪಶ್ಚರ್ಯೆಯಿಂದ ಬ್ರಾಹ್ಮಣ್ಯವನ್ನು ಪಡೆದವನಾದೆ: ಅಯ್ಯಾ ಮುನಿಯೆ! ಮರುದ್ಗಣಗಳಿದೊಂಡಗೂಡಿದ ನಾನು ನಿನಗೆ ದೀರ್ಘಾಯುಷ್ಯವನ್ನೂ ಕೊಟ್ಟಿರುವೆನು, ನಿನಗೆ ಮಂಗಳವಾಗಲಿ; ಸುಖವಾಗಿ ತೆರಳುವವನಾಗು" ಇಂತು ನುಡಿದ ದೇವತೆಗಳ ನುಡಿಗಳನ್ನು ಕೇಳಿ ವಿಶ್ವಾಮಿತ್ರನು ಅಂಜಲಿ ಬದ್ಧನಾಗಿ, "ಎಲೈ ದೇವತೆಗಳಿರಾ! ನನಗೀಗ ಬ್ರಾಹ್ಮಣ್ಯವೂ, ದೀರ್ಘಾಯುಷ್ಯವೂ ವುಂಟಾಗಿದ್ದರೆ, ಓಂಕಾರ, ವಷಟ್ಕಾರಗಳೂ, ವೇದಗಳೂ ಸಹ ನನ್ನನ್ನು ವರಿಸಲಿ. ಇಷ್ಟೇಯಲ್ಲದೆ ಅಥರ್ವಣ ವೇದವಿದರೆಲ್ಲರೂ, ಬ್ರಹ್ಮ ಪ್ರತಿಪಾದಕ ವೇದಜ್ಞರಲ್ಲಿಯೂ ಶ್ರೇಷ್ಠನಾದ ವಸಿಷ್ಠ ಋಷಿಯೂ ಸಹ

ತೋ ವ್ಯಾಜಹಾರ ಮಹಾಮುನಿಃ || ೨೧ || ಬ್ರಾಹ್ಮಣ್ಯಂ ಯದಿ ಮೇ ಪ್ರಾಪ್ತಂ ದೀರ್ಘಮಾಯುಸ್ತಥೈವಚ || ಓಂಕಾರಶ್ಚ ವಷಟ್ಕಾರೋ ವೇದಾಶ್ಚ ವರಯಂತು ಮಾಂ ||೨೨|| ಕ್ಷತ್ರ ವೇದವಿದಾಂ ಶ್ರೇಷ್ಠೋ ಬ್ರಹ್ಮವೇದ ವಿದಾಮಪಿ|| ಬ್ರಹ್ಮಪುತ್ರೋ ವಸಿಷ್ಠೋ ಮಾಮೇವಂ ವದತು ದೇವತಾಃ ||೨೩|| ಯದ್ಯಯಂ ಪರಮಃ ಕಾಮಃ ಕೃತ್ವಾಯಾಂತು ಸುರರ್ಷಭಾಃ || ತತಃ ಪ್ರಸಾದಿತೋ ದೇವೈರ್ವಸಿಷ್ಠೋ ಜಪತಾಂ ವರಃ ||೨೪|| ಸಖ್ಯಂ ಚಕಾರ ಬ್ರಹ್ಮರ್ಷಿ ರೇವಮಸ್ತ್ವಿತಿ ಚಾಬ್ರವೀತ್ || ಬ್ರಹ್ಮರ್ಷಿಸ್ತ್ವಂ ನಸಂದೇಹ ಸ್ಸರ್ವಂ ಸಂಪತ್ಸ್ಯತೇ ತವ ||

ಗೊಂಡು, ಪ್ರಣಾಮಂ - ನಮಸ್ಕಾರವನ್ನು, ಕೃತ್ವಾ - ಮಾಡಿ, ವ್ಯಾಜಹಾರ - ನುಡಿದನು. ||೨೧|| ಮೇ - ನನಗೆ, ಬ್ರಾಹ್ಮಣ್ಯಂ - ಬ್ರಾಹ್ಮಣ್ಯವು, ತಥೈವ - ಹಾಗೆಯೇ, ದೀರ್ಘಂ - ದೀರ್ಘವಾದ, ಆಯುಶ್ಚ - ಆಯುಸ್ಸೂ, ಪ್ರಾಪ್ತಂಯದಿ - ಹೊಂದಲು ಬಂದುದೇಆದರೆ, ಓಂಕಾರಶ್ಚ - ಪ್ರಣವವೂ, ವಷಟ್ಕಾರಃ - ವಷಟ್ಕಾರವೂ- ವೇದಾಶ್ಚ - ಚತುರ್ವೇದಗಳೂ, ಮಾಂ - ನನ್ನನ್ನು ವರಯಂತು - ವರಿಸಲಿ. || ೨೨ || ಹೇದೇವತಾಃ - ಎಲೈ ದೇವತೆಗಳಿರಾ,ಕ್ಷತ್ರವೇದವಿದಾಂ-ಅಥರ್ವಣವೇದಜ್ಞರೊಳಗೆ, ಶ್ರೇಷ್ಠಃ - ಶ್ರೇಷ್ಠನೂ, ಬ್ರಹ್ಮವೇದವಿದಾಮಪಿ - ಬ್ರಹ್ಮಪ್ರತಿಪಾದಕವಾದ ವೇದಜ್ಞರಲ್ಲಿಯೂ, ಶ್ರೇಷ್ಠಃ - ಶ್ರೇಷ್ಠನೂ ಆದ, ಬ್ರಹ್ಮಪುತ್ರಃ - ಬ್ರಹ್ಮಕುವರನಾದ, ವಸಿಷ್ಠಃ - ವಸಿಷ್ಠ ಋಷಿಯು, ಮಾಂ - ನನ್ನನ್ನು, ಏವಂ - ಈ ರೀತಿ, ವದತು - ಹೇಳಲಿ, || ೨೩ || ಅಯಂ- ಈ, ಪರಮಃ - ಶ್ರೇಷ್ಠವಾದ, ಕಾಮಃ - ಕೋರಿಕೆಯು, ಕೃತೋಯದಿ - ಮಾಡಲ್ಪಟ್ಟದೇ ಆದರೆ, ಸುರರ್ಷಭಾಃ - ದೇವತಾ ಶ್ರೇಷ್ಠರು, ಯಾಂತು - ಹೊರಟುಹೋಗಲಿ, ತತಃ ಅನಂತರದಲ್ಲಿ, ದೇವೈಃ- ದೇವತೆಗಳಿಂದ, ಪ್ರಸಾದಿತಃ - ಪ್ರಸನ್ನನಾಗಿ ಮಾಡಲ್ಪಟ್ಟ, ಜಪತಾಂ - ಜಪಿಸುವವರಲ್ಲಿ, ವರಃ - ಶ್ರೇಷ್ಠನಾದ, ಬ್ರಹ್ಮರ್ಷಿಃ - ಬ್ರಾಹ್ಮಣ ಋಷಿಯಾದ, ವಸಿಷ್ಠಃ - ವಸಿಷ್ಠ ಋಷಿಯು, ಸಖ್ಯಂ - ವಿಶ್ವಾಮಿತ್ರನೊಡನೆ ಸ್ನೇಹವನ್ನು, ಚಕಾರ - ಮಾಡಿದನು. ಏವಂ ಹಾಗೆಯೇ, ಅಸ್ತ್ವಿತಿಚ - ಆಗಲೆಂದು, ಅಬ್ರವೀತ್ - ನುಡಿದನು, ||೨೪|| ತ್ವಂ - ನೀನು, ಬ್ರಹ್ಮರ್ಷಿಃ - ಬ್ರಹ್ಮಋಷಿಯಾದೆ, ಸಂದೇಹೋನ - ಸಂಶಯವಿಲ್ಲವು, ತವ - ನಿನಗೆ, ಸರ್ವಂ - ಸಕಲವೂ, ಸಂಪತ್ಸ್ಯತೇ- ಪ್ರಾಪ್ತವಾಗುವುದು, ಇತಿ - ಎಂದು, ಉಕ್ತ್ವಾ - ಹೇಳಿ, ಸರ್ವಾಃ - ಸಮಸ್ತರಾದ, ದೇವತಾಶ್ಚಾಪಿ - ದೇವತೆಗಳೂ, ಯಥಾಗತಂ-ಬಂದಂತೆ, ಜಗ್ಮುಃ-ಹೊರಟುಹೋದರು, ||೨೫|| ಹೇ ರಾಮ- ಎಲೈ ಶ್ರೀರಾಮನೆ, ಮಹಾತ್ಮನಾ - ಮಹಾತ್ಮನಾದ, ಅನೇನ - ಈ ವಿಶ್ವಾಮಿತ್ರನಿಂದ, ಏವಂ-ಈ

ಈ ರೀತಿಯೇ ನುಡಿಯುವವನಾಗಲಿ. ಇದೆಲ್ಲವನ್ನು ಅನುಗ್ರಹಿಸಿ ತೆರಳುವವರಾಗಿರಿ" ಎಂದನು. ||೧೭-೨೩|| ಆಗಲಾ ದೇವತೆಗಳೆಲ್ಲರೂ ವಸಿಷ್ಠ ಋಷಿಯನ್ನು ಪ್ರಾರ್ಥಿಸಿ, ಆತನಿಗೂ ವಿಶ್ವಾಮಿತ್ರಮುನಿಗೂ ಸ್ನೇಹವನ್ನುಂಟುಮಾಡಿಸಿದರು. ಆಗೆ ವಸಿಷ್ಠ ಮುನಿಯು "ಅಯ್ಯಾ ವಿಶ್ವಾಮಿತ್ರಮುನಿಯೆ! ನೀನಿಂದಿನಿಂದ ಬ್ರಹ್ಮರ್ಷಿಯಾದೆ" ಎಂದು ಹೇಳಿದನು. ಆ ಬಳಿಕ ದೇವತೆಗಳೂ ಸಹ "ಎಲೈ ವಿಶ್ವಾಮಿತ್ರನೆ! ನೀನುಬ್ರಹ್ಮರ್ಷಿಯೆಂಬುದರಲ್ಲಿ ಸಂಶಯ

೨೫ || ಇತ್ಯುಕ್ತ್ವಾ ದೇವತಾಶ್ಚಾಪಿ ಸರ್ವಾಜಗ್ಮುರ್ಯಥಾ ಗತಂ || (ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಲಬ್ಧ್ವಾ ಬ್ರಾಹ್ಮಣ್ಯ ಮುತ್ತಮಂ ||೨೬|| ಪೂಜಯಾಮಾಸ ಬ್ರಹ್ಮರ್ಷಿಂ ವಸಿಷ್ಠಂ ಜಪತಾಂ ವರಂ || ಕೃತಕಾಮೋ ಮಹೀಂ ಸರ್ವಾಂ ಚಚಾರ ತಪಸಿ ಸ್ಥಿತಃ ||) ಏವಂತ್ವನೇನ ಬ್ರಾಹ್ಮಣ್ಯಂ ಪ್ರಾಪ್ತಂ ರಾಮ ಮಹಾತ್ಮನಾ || ಏಷ ರಾಮ ಮುನಿಶ್ರೇಷ್ಠ ಏಷವಿಗ್ರಹವಾಂ ಸ್ತಪಃ || ಏಷ ಧರ್ಮಪರೋ ನಿತ್ಯಂ ವೀರ್ಯಸ್ಯೇಷ ಪರಾಯಣಂ || ೨೭ || ಏವಮುಕ್ತ್ವಾ ಮಹಾತೇಜಾ ವಿರರಾಮ ದ್ವಿಜೋತ್ತಮಃ || ಶತಾನಂದ ವಚಶ್ಶ್ರುತ್ವಾ ರಾಮಲಕ್ಷ್ಮಣ

ಪ್ರಕಾರ, ಬ್ರಾಹ್ಮಣ್ಯಂತು - ಬ್ರಾಹ್ಮಣ್ಯವು, ಪ್ರಾಪ್ತಂ - ಹೊಂದಲ್ಪಟ್ಟಿತು, ಹೇ ರಾಮ - ಎಲೈ ಶ್ರೀರಾಮನೆ, ಏಷಃ - ಈ ವಿಶ್ವಾಮಿತ್ರನು, ಮುನಿಶ್ರೇಷ್ಠಃ - ಋಷಿಶ್ರೇಷ್ಠನು, ಏಷಃ - ಈತನು, ವಿಗ್ರಹವಾನ್ - ದೇಹಧಾರಿಯಾದ, ತಪಃ - ತಪಸ್ಸ್ವರೂಪನೇ, ಏಷಃ-ಈತನು, ನಿತ್ಯಂಧರ್ಮಪರಃ-ನಿರಂತರವೂ ಧರ್ಮದಲ್ಲಿಯೇ ಆಸಕ್ತನು, ಏಷಃ - ಈತನು, ವೀರ್ಯಸ್ಯ - ಪರಾಕ್ರಮಕ್ಕೆ, ಪರಾಯಣಂ - ಮುಖ್ಯಾಶ್ರಯವು |೨೬-೨೭|| ಮಹಾತೇಜಾಃ-ಮಹಾ ತೇಜೋವಂತನಾದ, ದ್ವಿಜೋತ್ತಮಃ - ಬ್ರಾಹ್ಮಣ ಶ್ರೇಷ್ಠನಾದ ಶತಾನಂದನು, (೧) ಏವಮುಕ್ತ್ವಾ - ಹೀಗೆಹೇಳಿ, ವಿರರಾಮ-ಸುಮ್ಮನಾದನು. ಜನಕಃ - ಜನಕಮಹಾರಾಯನು, ರಾಮಲಕ್ಷ್ಮಣಸನ್ನಿಧೌ - ರಾಮಲಕ್ಷ್ಮಣರ ಸಾನ್ನಿಧ್ಯದಲ್ಲಿ, ಶತಾನಂದವಚಃ - ಶತಾನಂದ ಋಷಿವಾಕ್ಯವನ್ನು, ಶ್ರುತ್ವಾ - ಕೇಳಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಕುಶಿಕಾತ್ಮಜಂ-ವಿಶ್ವಾಮಿತ್ರನನ್ನು ಕುರಿತು, ವಾಕ್ಯಂ-ವಚನವನ್ನು, ಉವಾಚ -

ವಿಲ್ಲವು; ಓಂಕಾರ ವಷಟ್ಕಾರಾದಿ ಸಕಲವೂ ನಿನ್ನನ್ನು ಹೊಂದುವುವು" ಎಂದು ಹೇಳಿ ಬಂದಂತೆಯೇ ಹಿಂತಿರುಗಿದರು. || ೨೪-೨೫ || ಧರ್ಮಿಷ್ಠನಾದ ವಿಶ್ವಾಮಿತ್ರನಾದರೋ ಶ್ರೇಷ್ಠವಾದ ಬ್ರಾಹ್ಮಣ್ಯವನ್ನು ಪಡೆದು, ತಪೋಗರಿಷ್ಠನೂ, ಬ್ರಹ್ಮರ್ಷಿಯೂ ಆದ ವಸಿಷ್ಠಮುನಿಯನ್ನು ಪೂಜಿಸಿದವನಾದನು ಇಂತು ಕೃತಕೃತ್ಯನಾದ ವಿಶ್ವಾಮಿತ್ರಮುನಿಯು ತಪವಂಗೈಯ್ಯುತ್ತ ಭೂಮಂಡಲವೆಲ್ಲವನ್ನೂ ಸಂಚಾರ ಮಾಡತೊಡಗಿದನು. ಎಲೈ ರಾಮಚಂದ್ರನೆ! ಈ ರೀತಿಯಾಗಿ ಮಹಾತ್ಮನಾದ ವಿಶ್ವಾಮಿತ್ರ ಮುನಿಯಿಂದಬ್ರಾಹ್ಮಣ್ಯವು ಹೊಂದಲ್ಪಟ್ಟಿತು. ಇಂತಹ ಮಹಿಮೆಗಳನ್ನೊಳಗೊಂಡ ಈ ವಿಶ್ವಾಮಿತ್ರಮುನಿಯು, ಮುನಿಶ್ರೇಷ್ಠನಾಗಿಯೂ, ರೂಪವಾಂತಿರುವ ತಪದಂತಿರುವವನಾಗಿಯೂ, ಮಹಾ ಧರ್ಮಪರನಾಗಿಯೂ ಇರುವನು." ಈ ರೀತಿ ಜನಕರಾಯನ ಪುರೋಹಿತನಾದ ಶತಾನಂದನು ರಾಮಲಕ್ಷ್ಮಣರ ಮುಂಗಡೆ ವಿಶ್ವಾಮಿತ್ರನ ಕಥೆಯನ್ನು ಹೇಳಿ ಸುಮ್ಮನಾದನು. ಆಗ ಜನಕರಾಯನು ಅಂಜಲಿಬದ್ಧನಾಗಿ

ಟಿ. (೧) ಶತಾನಂದನು ಕೌಶಿಕನ ಪ್ರತಾಪವನ್ನು ವರ್ಣನೆಮಾಡಲು ರಾಮಚಂದ್ರ ಕೃತ ಸ್ವಮಾತೃ ಶಾಪ ವಿಮೋಚನವೇ ಕಾರಣವು. ಆಕೆಯು ಶಾಪನಿವೃತ್ತಿಯನ್ನು ಹೊಂದಲು ವಿಶ್ವಾಮಿತ್ರನೇ ಮೂಲಕಾರಣನೆಂದು ತಿಳಿದ ಶತಾನಂದನು ಆತನನ್ನು ಗುರುವೆಂದೆಣಿಸಿ ಗುರು ವೈಭವವನ್ನು ಬಿತ್ತರಿಸಿದನೆಂದು ತಾತ್ಪರ್ಯ

ಬ್ರಾಹ್ಮಣ್ಯವು ಸುಲಭವಾದುದಲ್ಲ. ಕಾಮಕ್ರೋಧಗಳ ಜಯವನ್ನು ಯಾವಾತನು ಹೊಂದಿರುವನೋ ಅವನೇ ಬ್ರಾಹ್ಮಣೋತ್ತಮನು. ಇವುಗಳನ್ನು ಗೆಲ್ಲುವದು ಬಹಳ ಆಸಾಧ್ಯ "ಬ್ರಹ್ಮವಿದಪಚಾರಸ್ಸರ್ವಾರಂಭನಿರೋಧಕಃ" ಇತ್ಯಾದಿಗಳೆಲ್ಲವೂ ಬ್ರಾಹ್ಮಣ್ಯಕ್ಕೆ ನಿದರ್ಶನಗಳು, ಇವೆಲ್ಲವೂ ವಿಶ್ವಾಮಿತ್ರನ ಪ್ರಬಂಧದಿಂದ ಲಬ್ಧವಾಗುವ ನೀತಿಯು.

ಸನ್ನಿಭೌ ॥ ೨೮ ॥ ಜನಕಃ ಪ್ರಾಂಜಲಿ ರ್ವಾಕ್ಯ ಮುವಾಚ ಕುಶಿಕಾತ್ಮಜಂ ॥ ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ಮುನಿಪುಂಗವ ॥ ೨೯ ॥ ಯಜ್ಞಂ ಕಾಕುತ್ಸ್ಥ ಸಹಿತಃ ಪ್ರಾಪ್ತವಾನಸಿ ಧಾರ್ಮಿಕ।ಪಾಲಿತೋಽಹಂ ತ್ವಯಾ ಬ್ರಹ್ಮನ್ ದರ್ಶನೇನ ಮಹಾಮುನೇ ॥ ೩೦ ॥ ವಿಶ್ವಾಮಿತ್ರ ಮಹಾಭಾಗ ಬ್ರಹ್ಮರ್ಷೀಣಾಂ ವರೋತ್ತಮ ॥ ಗುಣಾ ಬಹುವಿಧಾಃ ಪ್ರಾಪ್ತಾ ಸ್ತವ ಸಂದರ್ಶನಾನ್ಮಯಾ ॥ ವಿಸ್ತರೇಣ ಚ ತೇ ಬ್ರಹ್ಮನ್ ಕೀರ್ತ್ಯಮಾನಂ ಮಹತ್ತಪಃ ॥ ೩೧ ॥ ಶ್ರುತಂ ಮಯಾ ಮಹಾತೇಜೋ ರಾಮೇಣಚ ಮಹಾತ್ಮನಾ ॥ ಸದಸ್ಯೈಃ

---

ಹೇಳಿದನು., ॥೨೮॥ ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೇ, ಹೇಧಾರ್ಮಿಕ-ಎಲೈ ಧರ್ಮಿಷ್ಠನೆ, ಯಸ್ಯಮೇ - ಯಾವ ನನ್ನ, ಯಜ್ಞಂ - ಯಾಗವನ್ನು ಕುರಿತು, ಕಾಕುತ್ಸ್ಥಸಹಿತಃ - ಕಕುತ್ಸ ವಂಶೋತ್ಪನ್ನರಾದ ರಾಮಲಕ್ಷ್ಮಣರಿಂದ ಕೂಡಿ, ಪ್ರಾಪ್ತವಾನ್ - ಬಂದವನು, ಅಸಿ–ಆದೆಯೋ॥ ಸೋಽಹಂ - ಅಂತಹ ನಾನು, ಧನ್ಯಃ - ಕೃತಾರ್ಥನು, ಅಸ್ಮಿ-ಆದೆನು, ಅನುಗೃಹೀತಃ- ಅನುಗ್ರಹಿಸಲ್ಪಟ್ಟವನು, ಅಸ್ಮಿ - ಆದೆನು , ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ಹೇಮಹಾಮುನೇ-ಎಲೈ ಮಹರ್ಷಿಯೇ, ತ್ವಯಾ - ನಿನ್ನ ದರ್ಶನೇನ - ದರ್ಶನದಿಂದ, ಅಹಂ - ನಾನು, ಪಾಲಿತಃ - ಸಂರಕ್ಷಿತನಾದೆನು, ತವ-ನಿನ್ನ, ಸಂದರ್ಶನಾತ್ - ಸಂದರ್ಶನದಿಂದ, ಮಯಾ - ನನ್ನಿಂದ, ಬಹುವಿಧಾಃ - ಬಹುಬಗೆಗಳಾದ, ಗುಣಾಃ - ಗುಣಗಳು, ಪ್ರಾಪ್ತಾಃ-ಹೊಂದಲ್ಪಟ್ಟುವು. ॥ ೩೦ ॥ ಹೇಬ್ರಹ್ಮನ್- ಎಲೈ ಬ್ರಾಹ್ಮಣನೇ, ವಿಸ್ತರೇಣ - ವಿಸ್ತಾರವಾಗಿ, ಕೀರ್ತ್ಯಮಾನಂ - ಶತಾನಂದರಿಂದ ಶ್ಲಾಘಿಸಲ್ಪಟ್ಟ, ಮಹತ್ - ಬಹಳವಾದ, ತಪಃ - ತಪಸ್ಸು, ಮಹಾತೇಜಃ , ಮಹತ್ತರವಾದ ಬ್ರಹ್ಮತೇಜಸ್ಸೂ, ಮಯಾ - ನನ್ನಿಂದಲೂ, ಮಹಾತ್ಮನಾ - ಮಹಾನುಭಾವನಾದ, ರಾಮೇಣಚ-ಶ್ರೀರಾಮನಿಂದಲೂ, ಶ್ರುತಂ - ಕೇಳಲ್ಪಟ್ಟಿತು. ॥ ೩೧ ॥ ಸದಃ - ಸಭೆಯನ್ನು, ಪ್ರಾಪ್ಯ- ಹೊಂದಿ,

---

ಆ ವಿಶ್ವಾಮಿತ್ರಮುನಿಯನ್ನು ಕುರಿತು, "ಮಹರ್ಷಿಯೇ! ಕಾಕುತ್ಸ್ಥ ಸಹಿತನಾಗಿ ನನ್ನ ಯಜ್ಞಶಾಲೆಗ ಬಂದೆಯಾದುದರಿಂದ ನಾನು ಧನ್ಯನಾದೆನು, ಅನುಗ್ರಹಿಸಲ್ಪಟ್ಟೆನು. ಮಹರ್ಷಿಯೇ! ನಿನ್ನ ದರ್ಶನದಿಂದ ನಾನೀಗ ಪೂತನಾದೆನು. ಎಲೈ ಬ್ರಹ್ಮರ್ಷಿಶ್ರೇಷ್ಠನೂ ಮಹಾಭಾಗ್ಯಶಾಲಿಯೂ ಆದ ವಿಶ್ವಾಮಿತ್ರಮುನಿಯೆ! ನಿನ್ನ ಸಂದರ್ಶನದಿಂದ ನಾನು ಅನೇಕ ಗುಣಗಳನ್ನು ಹೊಂದಿದವನಾದೆನು. ॥ ೨೬-೩೦ ॥ ಶತಾನಂದನಿಂದ ಹೊಗಳಲ್ಪಟ್ಟ ವಿಸ್ತಾರವಾದ ನಿನ್ನ ತಪಸ್ಸಿನ ಕಥೆಯನ್ನು, ನಾನೂ ಮಹಾತ್ಮನಾದ ಈ ರಾಮಚಂದ್ರನೂ ಕೇಳಿದವರಾದೆವು, ಈ ಸಭಿಕರೂ ಅಪಾರವಾದ ನಿನ್ನ ಗುಣಗಳನ್ನು ಕೇಳಿದವರಾದರು. ನಿನ್ನ ತಪಸ್ಸು ಅಪ್ರತಿಮವಾದುದು; ನಿನ್ನ ತಪೋಬಲವು ಅನುಪಮವಾದುದು;ನಿನ್ನ ಗುಣಗಳು ಸಮಾನರಹಿತವಾದವು. ಎಲೈ ಮಹಾತ್ಮನೆ ಆಶ್ಚರ್ಯ ಭೂತಗಳಾದ ನಿನ್ನ ಕಥೆಗಳನ್ನೆಷ್ಟು ಕೇಳುತ್ತಿದ್ದರೂ, ಇನ್ನೂ ಕೇಳಬೇಕೆಂಬ ಆಶೆಯಿರುವುದೇ ಹೊರ್ತು ತೃಪ್ತಿಯಾಗಲಿಲ್ಲವು. ಎಲೈ ಮುನಿಶ್ರೇಷ್ಠನೇ!

ನ್ವ್ರಾಪ್ಯಚ ಸದಶ್ಯ್ರತಾಸ್ತೇ ಬಹವೋಗುಣಾಃ ||೩೨|| ಅಪ್ರಮೇಯಂ ತಪಸ್ತುಭ್ಯ ಮಪ್ರಮೇಯಂಚ ತೇ ಬಲಂ || ಅಪ್ರಮೇಯಾ ಗುಣಾಶ್ಚೈವ ನಿತ್ಯಂ ತೇ ಕುಶಿಕಾತ್ಮಜ (ಪಿತಾಮಹಸ್ಯ ಚ ಯಥಾಯಥಾ ಚೈವ ಹ್ಯುಮಾಪತೇಃ) ||೩೩|| ತೃಪ್ತಿ ರಾಶ್ಚರ್ಯ ಭೂತಾನಾಂ ಕಥಾನಾಂ ನಾಸ್ತಿ ಮೇ ವಿಭೋ||ಕರ್ಮಕಾಲೋ ಮುನಿಶ್ರೇಷ್ಠ ಲಂಬತೇ ರವಿಮಂಡಲಂ || ೩೪ || ಶ್ವಃ ಪ್ರಭಾತೇ ಮಹಾತೇಜೋ ದ್ರಷ್ಟುಮರ್ಹಸಿ ಮಾಂ ಪುನಃ||ಸ್ವಾಗತಂ ತಪತಾಂ ಶ್ರೇಷ್ಠ ಮಾಮನುಜ್ಞಾತುಮರ್ಹಸಿ ||೩೫|| ಏವಮುಕ್ತ್ವಾ ಮುನಿವರಃ ಪ್ರಶಸ್ಯ ಪುರುಷರ್ಷಭಂ|| ವಿಸಸರ್ಜಾಶು ಜನಕಂ ಪ್ರೀತಂ ಪ್ರೀತಮನಾಸ್ತದಾ || ೨೬ || ಏವಮುಕ್ತ್ವಾ

---

ಸ್ಥಿತೈಃ - ಇರುತ್ತಿರುವ, ಸದಸ್ಯೈಃ - ಸಭಿಕರಿಂದಲೂ, ತೇ ನಿನ್ನ, ಬಹವಃ-ಅನೇಕಗಳಾದ, ಗುಣಾಃ-ಗುಣಗಳು, ಶ್ರುತಾಃ - ಕೇಳಲ್ಪಟ್ಟವು. || ೩೨ || ತುಭ್ಯಂ-ನಿನ್ನ, ತಪಃ-ತಪವು, ಅಪ್ರಮೇಯಂ - ಅಪಾರವಾದುದು, ತೇ – ನಿನ್ನ, ಗುಣಾಶ್ಚೈವ - ಗುಣಗಳೂ, ನಿತ್ಯಂ - ನಿರಂತರವು, ಅಪ್ರಮೇಯಾಃ - ಅಪರಿಮಿತಗಳು. ||೩೩|| ಹೇವಿಭೋ-ಎಲೈ ತತ್ವಾವಧಾರಣ ಸಮರ್ಥನೇ, ಆಶ್ಚರ್ಯ ಭೂತಾನಾಂ - ಆಶ್ಚರ್ಯಕರಗಳಾದ, ಕಥಾನಾಂ (ಮ)ಕಥೆಗಳ, ಶ್ರವಣೇ ಕೇಳುವದರಲ್ಲಿ, ಮೇ - ನನಗೆ, ತೃಪ್ತಿಃ-ಅಲಂಬುದ್ಧಿಯು, [ಸಾಕೆಂಬಬುದ್ಧಿಯು] ನಾಸ್ತಿ ಇಲ್ಲವು, ಹೇಮುನಿಶ್ರೇಷ್ಠ-ಎಲೈ ಋಷಿಶ್ರೇಷ್ಠನೇ, ಕರ್ಮಕಾಲಃ-ಯಜ್ಞಕರ್ಮಕಾಲವು, ಬಭೂವ ಆಯಿತು, ರವಿಮಂಡಲಂ-ಸೂರ್ಯಮಂಡಲವು, ಲಂಬತೇ-ಲಂಬಾಯಮಾನವಾಗಿರುವುದು, ಹೇಮಹಾತೇಜಃ-ಎಲೈ ಮಹಾತೇಜೋವಂತನೇ, ಶ್ವಃಪ್ರಭಾತೇ-ನಾಳೆ ಪ್ರಾತಃಕಾಲದಲ್ಲಿ,ಮಾಂ-ನನ್ನನ್ನು,ಪುನಃ-ಮತ್ತು,ದ್ರಷ್ಟುಂ-ನೋಡಲು,ಅರ್ಹಸಿ ಅರ್ಹನಾಗುವೆ, ಹೇತಪತಾಂಶ್ರೇಷ್ಠ-ಎಲೈ ತಪೋಶ್ರೇಷ್ಠನೆ! ಸ್ವಾಗತಂ - ಸುಖಾಗಮನವು, ಮಾಂ- ನನ್ನನ್ನು, ಅನುಜ್ಞಾತುಂ-ಆಜ್ಞಾಪಿಸಲು, ಅರ್ಹಸಿ-ಯೋಗ್ಯನಾಗು. || ೩೪೩೫ || ಏವಂ - ಹೀಗೆ, ಉಕ್ತಃ-ಹೇಳಲ್ಪಟ್ಟ, ಮುನಿವರಃ-ಮುನಿಶ್ರೇಷ್ಠನಾದ ವಿಶ್ವಾಮಿತ್ರನು, ತದಾ-ಆಗ, ಪ್ರೀತಮನಾಃ - ಸಂತೋಷಯುಕ್ತನಾದ ಮನಸ್ಸುಳ್ಳವನಾಗಿ, ಪುರುಷರ್ಷಭಂ-ಪುರುಷಶ್ರೇಷ್ಠನಾದ, ಪ್ರೀತಂ-ಸಂತುಷ್ಟನಾದ, ಜನಕಂ-ಜನಕರಾಯನನ್ನು, ಪ್ರಶಸ್ಯ-ಶ್ಲಾಘಿಸಿ, ಆಶು-ಶೀಘ್ರವಾಗಿ, ವಿಸಸರ್ಜ ಬಿಟ್ಟನು. || ೩೬ || ಮಿಥಿಲಾಧಿಪಃ-ಮಿಥಿಲಾಧಿಪತಿಯಾದ, ವೈದೇಹಃ-ಜನಕರಾಯನು, ಏವಂ-ಈ ಪರಿಯಾಗಿ, ಮುನಿಶ್ರೇಷ್ಠಂ-ವಿಶ್ವಾಮಿತ್ರನನ್ನು ಕುರಿತು, ಉಕ್ತ್ವಾ-ಹೇಳಿ, ಸೋಪಾಧ್ಯಾಯಃ-ಉಪಾಧ್ಯಾಯರಿಂದೊಡಗೂಡಿ, ಸಬಾಂಧವಃ-ಬಂಧುಗಳೊಡನೆ, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಆಶು-ಜಾಗ್ರತೆಯಾಗಿ,

---

ಸಾಯಂಕಾಲ ಕರ್ಮಗಳನ್ನು ಮಾಡುವ ಹೊತ್ತಾಯಿತು ಸೂರ್ಯದೇವನು ಮುಳುಗುತ್ತಿರುವನು. ಮಹಾತೇಜಸ್ವಿಯಾದ ನೀನು ನಾಳೆ ಪ್ರಾತಃಕಾಲದಲ್ಲಿ ನನ್ನನ್ನು ನೋಡುವವನಾಗುವಿ, ಎಲೈ ತಪೋಗರಿಷ್ಠನೆ! ನಿನಗೆ ಸುಖಾಗಮನವು ನಾನು ಹೊರಡಲನುಜ್ಞೆಯನ್ನು ಕೊಡುವವನಾಗು.” ಎಂದನು. ಹೀಗೆಂಬ ಜನಕರಾಯನ ನುಡಿಗಳನ್ನು ಕೇಳಿ ಸಂತೋಷಗೊಂಡ ವಿಶ್ವಾಮಿತ್ರನು ಆ ರಾಯನನ್ನು ಶ್ಲಾಘಿಸಿ ಜಾಗ್ರತೆಯಾಗಿ ಕಳುಹಿದವನಾದನು. ಜನಕರಾಯನೂ ಸಹ ಮಹಾತ್ಮನಾದ ವಿಶ್ವಾಮಿತ್ರನಿಗೀರೀತಿ ಹೇಳಿ ಬಂಧುಜನರಿಂದೊಡಗೂಡಿ

ಮುನಿಶ್ರೇಷ್ಠಂ ವೈದೇಹೋ ಮಿಥಿಲಾಧಿಪಃ ॥ ಪ್ರದಕ್ಷಿಣಂ ಚಕಾರಾಶು ಸೋಪಾಧ್ಯಾಯ ಸ್ಸಬಾಂಧವಃ ॥ ೩೭ ॥ ವಿಶ್ವಾಮಿತ್ರೋಪಿ ಧರ್ಮಾತ್ಮಾ ಸಹರಾಮ ಸ್ಸಲಕ್ಷ್ಮಣಃ ॥ ಸ್ವವಾಟಮಭಿಚಕ್ರಾಮ ಪೂಜ್ಯಮಾನೋ ಮಹರ್ಷಿಭಿಃ ॥ ೩೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಷಷ್ಟಿತಮಸ್ಸರ್ಗಃ.

---

ಚಕಾರ - ಮಾಡಿದನು. ॥ ೩೭ ॥ ಧರ್ಮಾತ್ಮಾ-ಧರ್ಮಿಷ್ಠನಾದ, ವಿಶ್ವಾಮಿತ್ರೋಪಿ - ವಿಶ್ವಾಮಿತ್ರನೂ, ಸಹರಾಮಃ ರಾಮನಿಂದಲೂ, ಸಲಕ್ಷ್ಮಣಃ-ಲಕ್ಷ್ಮಣನಿಂದಲೂ ಕೂಡಿದವನಾಗಿ, ಮಹರ್ಷಿಭಿಃ-ಮಹಾ ಋಷಿಗಳಿಂದ, ಪೂಜ್ಯಮಾನಃ - ಶ್ಲಾಘಿಸಲ್ಪಟ್ಟವನಾಗಿ, ಸ್ವವಾಟಂ- ತನ್ನ ವಾಸಸ್ಥಳವನ್ನು ಕುರಿತು, ಅಭಿಚಕ್ರಾಮ - ಹೊರಟುಹೋದನು. ॥೩೮॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಷಷ್ಟಿತಮಸ್ಸರ್ಗಃ.

---

ಆತನನ್ನು ಪ್ರದಕ್ಷಿಣ ಪೂರ್ವಕವಾಗಿ ನಮಸ್ಕರಿಸಿದನು ವಿಶ್ವಾಮಿತ್ರಮುನಿಯೂ ಸಹ ಮಹರ್ಷಿಗಳಿಂದ ನಮಸ್ಕೃತನಾಗಿ ರಾಮ ಲಕ್ಷ್ಮಣರಿಂದೊಡಗೂಡಿ ತನ್ನ ಬಿಡಾರಕ್ಕೆ ತೆರಳಿದವನಾದನು ॥೩೭ ೩೮॥

ಇಂತಿಮ ವಿಶ್ವಾಮಿತ್ರನು ಬ್ರಹ್ಮರ್ಷಿಯಾದ ಕಥಾಕಥನವನ್ನೆಸಗುವ
ಅರವತ್ತೈದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಷಟ್ಷಷ್ಟಿತಮಸ್ಸರ್ಗಃ.



ತತಃ ಪ್ರಭಾತೇ ವಿಮಲೇ ಕೃತಕರ್ಮಾ ನರಾಧಿಪಃ ॥ ವಿಶ್ವಾಮಿತ್ರಂ ಮಹಾತ್ಮಾನ ಮಾಜುಹಾವ ಸ ರಾಘವಂ ॥೧॥ ತಮರ್ಚಯಿತ್ವಾ ಧರ್ಮಾತ್ಮಾ ಶಾಸ್ತ್ರ ದೃಷ್ಟೇನ ಕರ್ಮಣಾ ॥ ರಾಘವೌಚ ಮಹಾತ್ಮಾನೌ ತದಾ ವಾಕ್ಯ ಮುವಾಚಹ ॥ ೨ ॥ ಭಗವನ್ ಸ್ವಾಗತಂ ತೇಽಸ್ತು ಕಿಂಕರೋಮಿ ತವಾನಘ ॥ ಭವಾನಾಜ್ಞಾಪಯತು ಮಾಮಾಜ್ಞಾಪ್ಯೋ ಭವತಾ ಹ್ಯಹಂ ॥ ೩ ॥ ಏವ

---

ತತಃ - ಬಳಿಕ, ಪ್ರಭಾತೇ - ಪ್ರಾತಃ ಕಾಲವು, ವಿಮಲೇಸತಿ - ನಿರ್ಮಲವಾಗುತ್ತಿರಲು, ಕೃತಕರ್ಮಾ - ಮಾಡಲ್ಪಟ್ಟ ನಿತ್ಯಕರ್ಮವುಳ್ಳ, ನರಾಧಿಪಃ - ಜನಕರಾಯನು, ಸರಾಘವಂ-ರಾಮ ಲಕ್ಷ್ಮಣರಿಂದೊಡಗೂಡಿದ, ಮಹಾತ್ಮಾನಂ - ಮಹಾತ್ಮನಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು, ಆಜುಹಾವ - ಕರೆಯಿಸಿದನು. ॥ ೧ ॥ ಧರ್ಮಾತ್ಮಾ - ಧರ್ಮಿಷ್ಠನಾದ ಜನಕರಾಯನು, ಶಾಸ್ತ್ರ ದೃಷ್ಟೇನ - ಶಾಸ್ತ್ರಸಮ್ಮತವಾದ, ಕರ್ಮಣಾ - ಕರ್ಮದಿಂದ, ತಂ - ಆ ವಿಶ್ವಾಮಿತ್ರನನ್ನು, ಅರ್ಚ ಯಿತ್ವಾ - ಪೂಜೆಮಾಡಿ, ಮಹಾತ್ಮಾನೌ - ಮಹಾತ್ಮರಾದ, ರಾಮವೌಚ - ರಾಮಲಕ್ಷ್ಮಣರನ್ನೂ, ಅರ್ಚಯಿತ್ವಾ - ಪೂಜಿಸಿ, ತದಾ - ಆಗ, ವಾಕ್ಯಂ - ವಾಕ್ಯವನ್ನು, ಉವಾಚಹ - ಹೇಳಿದನಷ್ಟೆ- ॥ ೨ ॥ ಹೇಅನಘ - ಎಲೈ ನಿರ್ದುಷ್ಟನೇ, ಹೇಭಗವನ್ - ಎಲೈ ಷಡ್ಗುಣೈಶ್ವರ್ಯಸಂಪನ್ನನೇ, ತೇ- ನಿನಗೆ, ಸ್ವಾಗತಂ - ಸುಖಾಗಮನವು, ಅಸ್ತು - ಆಗಲಿ, ತವ - ನಿನಗೆ, ಕಿಂಕರೋಮಿ - ಏನು- ಮಾಡಲಿ, ಹಿ - ಯಾವ ಕಾರಣ, ಅಹಂ - ನಾನು, ಭವತಾ - ನಿನ್ನಿಂದ, ಆಜ್ಞಾಪ್ಯಃ-ಆಜ್ಞಾಪಿಸ ಲರ್ಹನೋ, ತತಃ - ಆ ಕಾರಣ, ಭವಾನ್ - ನೀನು, ಮಾಂ - ನನ್ನನ್ನು ಆಜ್ಞಾಪಯತು-ಆಜ್ಞಾ ಪಿಸು. ॥ ೩ ॥ ಮಹಾತ್ಮನಾ - ಮಹಾತ್ಮನಾದ, ಜನಕೇನ - ಜನಕರಾಯನಿಂದ, ಏವಮುಕ್ತಃ- ಈಗ ಹೇಳಲ್ಪಟ್ಟ, ಧರ್ಮಾತ್ಮಾ - ಧರ್ಮಿಷ್ಠನಾದ, ವಾಕ್ಯವಿಶಾರದಃ - ವಾಕ್ಯಾರ್ಥಜ್ಞಾನವುಳ್ಳ,

---

ಆ ಬಳಿಕ ಮಾರನೆಯ ದಿನ ಪ್ರಾತಃಕಾಲವಾಗಲು ತಾತ್ಕಾಲಿಕ ಕರ್ಮವನ್ನು ಮಾ ಡಿದ ಜನಕರಾಯನು ಶ್ರೀರಾಮಚಂದ್ರನಿಂದೊಡಗೂಡಿದ ವಿಶ್ವಾಮಿತ್ರನನ್ನು ಕರೆದವನಾದನು. ಇಂತು ಕರೆದಾರಾಯನು ಆ ವಿಶ್ವಾಮಿತ್ರಮುನಿಯನ್ನು ಶಾಸ್ತ್ರೋಕ್ತವಾಗಿ ಪೂಜಿಸಿ, ರಾಮ ಲಕ್ಷ್ಮಣರನ್ನು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ ಹೀಗೆಂದನು. “ಪೂಜ್ಯನೇ ! ನಿನಗೆ ಸುಖಾಗಮನವು ; ನಿನಗಾಗಿ ಯಾವ ಕಾರ್ಯವನ್ನು ಮಾಡಲಿ, ಆಜ್ಞಾಪಿಸುವವನಾಗು ; ನಾನು ನಿನ್ನಿಂದ ಆಜ್ಞಪ್ತನಾಗಬೇಕಾದವನಲ್ಲವೆ ? ” ಇಂತು ನುಡಿಯಲ್ಪಟ್ಟ ಧರ್ಮಿಷ್ಠನೂ ವಾಕ್ಯಕೋವಿದನೂ ಆದ ವಿಶ್ವಾಮಿತ್ರಮುನಿಯು “ ಅಯ್ಯಾ ಜನಕರಾಯನೆ ! ಈ ರಾಮ ಲಕ್ಷ್ಮಣರಿಬ್ಬರೂ ದಶರಥರಾಯನ ಕುವರರು; ಕ್ಷತ್ರಿಯರು; ಲೋಕವಿಖ್ಯಾತರಾದವರು;

ಮುಕ್ತಸ್ಸಧರ್ಮಾತ್ಮಾ ಜನಕೇನ ಮಹಾತ್ಮನಾ || ಪ್ರತ್ಯುವಾಚ ಮುನಿರ್ವೀರಂ ವಾಕ್ಯಂ ವಾಕ್ಯವಿಶಾರದಃ || ४ || ಪುತ್ರೌ ದಶರಥಸ್ಯೇಮೌ ಕ್ಷತ್ರಿಯೌ ಲೋಕವಿಶ್ರುತೌ|| ದ್ರಷ್ಟುಕಾಮೌ ಧನುಶ್ಶ್ರೇಷ್ಠಂ ಯದೇತತ್ತ್ವಯಿ ತಿಷ್ಠತಿ|| ೫ || ಏತದ್ದರ್ಶಯ ಭದ್ರಂ ತೇ ಕೃತಕಾಮೌ ನೃಪಾತ್ಮಜೌ || ದರ್ಶನಾದಸ್ಯ ಧನುಷೋ ಯಥೇಷ್ಟಂ ಪ್ರತಿಯಾಸ್ಯತಃ || ೬ || ಏವಮುಕ್ತಸ್ತು ಜನಕಃ ಪ್ರತ್ಯುವಾಚ ಮಹಾಮುನಿಂ || ಶ್ರೂಯತಾಮಸ್ಯ ಧನುಷೋ ಯದರ್ಥಮಿಹ ತಿಷ್ಠತಿ || ೭ || ದೇವರಾತ ಇತಿ ಖ್ಯಾತೋ ನಿಮೇಃ ಷಷ್ಠೋ ಮಹೀಪತಿಃ || ನ್ಯಾಸೋಽಯಂ ತಸ್ಯ ಭಗವನ್ ಹಸ್ತೇ ದತ್ತೋ ಮಹಾತ್ಮನಾ ||೮|| ದಕ್ಷಯಜ್ಞ

---

ಸಮುನಿಃ - ಆ ವಿಶ್ವಾಮಿತ್ರನು, ವೀರಂ - ಶೂರನಾದ ಜನಕರಾಯನನ್ನು ಕುರಿತು, ವಾಕ್ಯಂ - ವಚನವನ್ನು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು. || ४ || ಲೋಕವಿಶ್ರುತೌ - ಲೋಕಪ್ರಸಿದ್ಧರಾದ, ಕ್ಷತ್ರಿಯೌ - ಕ್ಷತ್ರಿಯ ಜಾತೀಯರಾದ, ಇಮೌ - ಇವರಿಬ್ಬರೂ, ದಶರಥಸ್ಯ - ದಶರಥರಾಯನ, ಪುತ್ರೌ - ಮಕ್ಕಳು, ತ್ವಯಿ - ನಿನ್ನಲ್ಲಿ, ಯುದ್ಧನುಶ್ರೇಷ್ಠಂ - ಯಾವ ಶ್ರೇಷ್ಠವಾದ ಶೈವಧನುಸ್ಸು, ತಿಷ್ಠತಿ - ಇರುವುದೋ, ತದೇತತ್ - ಆ ಈ ಧನುಸ್ಸನ್ನು, ದ್ರಷ್ಟುಕಾಮೌ - ನೋಡಲಿಚ್ಛೆಯುಳ್ಳವರಾಗಿರುವರು. || ೫ || ತೇ - ನಿನಗೆ, ಭದ್ರಂ - ಕಲ್ಯಾಣವು, ಅಸ್ತು-ಆಗಲಿ, ಏತತ್ - ಈ ಧನುಸ್ಸನ್ನು, ದರ್ಶಯ - ತೋರಿಸು, ನೃಪಾತ್ಮಜೌ - ರಾಜಕುವರರಿಬ್ಬರೂ, ಅಸ್ಯಧನುಷಃ - ಈ ಧನುಸ್ಸಿನ, ದರ್ಶನಾತ್ - ನೋಡುವಿಕೆಯಿಂದ, ಕೃತಕಾಮೌ - ಕೃತಪ್ರಯೋಜನರಾಗಿ, ಯಥೇಷ್ಟಂ - ಇಷ್ಟಬಂದಂತೆ, ಪ್ರತಿಯಾಸ್ಯತಃ - ಹೊರಟುಹೋಗುವರು. || ೬ || ಏವಮುಕ್ತಃ - ಹೀಗೆ ನುಡಿಯಲ್ಪಟ್ಟ, ಜನಕಃ - ಜನಕರಾಯನು, ಮಹಾಮುನಿಂ - ವಿಶ್ವಾಮಿತ್ರಮುನಿಯನ್ನು ಕುರಿತು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು, ಇಹ-ಇಲ್ಲಿ ಈ ಧನುಸ್ಸು, ಯದರ್ಥಂ-ಯಾವ ನಿಮಿತ್ತವಾಗಿ, ತಿಷ್ಠತಿ - ಇರುವುದೋ, ಅಸ್ಯಧನುಷಃ - ಈ ಧನುಸ್ಸಿನ, ತತ್ ಆ ಪ್ರಯೋಜನವು, ಶ್ರೂಯತಾಂ - ಕೇಳಲ್ಪಡಲಿ. || ೭ || ದೇವರಾತಇತಿ - ದೇವರಾತನೆಂದು, ಖ್ಯಾತಃ-ಪ್ರಸಿದ್ಧನಾದ, ನಿಮೇಃ - ನಿಮಿಚಕ್ರವರ್ತಿಗೆ, ಷಷ್ಠಃ - ಆರನೆಯವನಾದ, ಮಹೀಪತಿಃ - ರಾಜನು, ಆಸೀತ್ - ಇದ್ದನು, ಹೇಭಗವನ್ - ಎಲೈ ಪೂಜ್ಯನೇ, ತಸ್ಯ - ಆ ದೇವರಾತನ, ಹಸ್ತೇ-ಹಸ್ತದಲ್ಲಿ, ಮಹಾತ್ಮನಾ - ಮಹಾತ್ಮನಾದ ಶಿವನಿಂದ, ನ್ಯಾಸಃ - ನಿಕ್ಷೇಪವಾಗಿ, ಅಯಂ - ಈ ಶೈವಧನುಸ್ಸು,

---

ಇವರು ನಿನ್ನಲ್ಲಿರುವ ಧನುಶ್ಶ್ರೇಷ್ಠವನ್ನು ನೋಡಲಿಚ್ಛಿಸುವರು. ನಿನಗೆ ಮಂಗಳವಾಗಲಿ; ಆ ಧನುಸ್ಸನ್ನು ಇವರಿಗೆ ತೋರುವನಾಗು. ಇವರದನ್ನು ನೋಡಿ ತೃಪ್ತರಾಗಿ ಹಿಂತಿರುಗುವರು." ಎಂದು ಪ್ರತ್ಯುತ್ತರವಿತ್ತನು ||೧-೬|| ಇಂತು ನುಡಿದ ಮಹಾಮುನಿಯಾದ ವಿಶ್ವಾಮಿತ್ರನನ್ನು ಕುರಿತು ಜನಕರಾಯನು ಹೀಗೆಂದನು. "ಮುನಿಯೆ ! ಈ ಧನುಸ್ಸು ಏತಕ್ಕೋಸುಗ ಇಲ್ಲಿರುವುದೆಂಬುದನ್ನು ಹೇಳುತ್ತೇನೆ, ಕೇಳುವವನಾಗು. ನಿಮಿರಾಯನಿಗೆ ಆರನೆಯವನಾದ ದೇವರಾತನೆಂಬ ಪ್ರಸಿದ್ಧನಾದ ರಾಜನೊರ್ವನಿದ್ದನು ಮಹಾದೇವನು ಈ ದೇವರಾತನಲ್ಲಿ ಈ ಧನುಶ್ಶ್ರೇಷ್ಠವನ್ನು ನ್ಯಾಸ (ಅಡುವು)ವಾಗಿ ಕೊಟ್ಟನು.||೭-೮|| ರುದ್ರ

ವಧೇ ಪೂರ್ವಂ ಧನುರಾಯಮ್ಯ ವೀರ್ಯವಾನ್॥ರುದ್ರಸ್ತು ತ್ರಿದಶಾನ್ ರೋಷಾ ತ್ಸಲೀಲಮಿದಮಬ್ರವೀತ್ ॥ ೯ ॥ ಯಸ್ಮಾದ್ಭಾಗಾರ್ಥಿನೋ ಭಾಗಾ ನ್ನಾಕಲ್ಪಯತ ಮೇ ಸುರಾಃ ॥ ವರಾಂಗಾಣಿ ಮಹಾರ್ಹಾಣಿ ಧನುಷಾ ಶಾತ ಯಾಮಿ ವಃ ॥ ೧೦ ॥ ತತೋ ವಿಮನಸಸ್ಸರ್ವೇ ದೇವಾಮ್ವೈ ಮುನಿಪುಂ ಗವ ॥ ಪ್ರಸಾದಯಂತಿ ದೇವೇಶಂ ತೇಷಾಂ ಪ್ರೀತೋ ಭವದ್ಭವಃ ॥ ೧೧ ॥ ಪ್ರೀತಿಯುಕ್ತ ಸ್ಸಸರ್ವೇಷಾಂ ದದೌ ತೇಷಾಂ ಮಹಾತ್ಮನಾಂ ॥ ತದೇತದ್ದೇವ ದೇವಸ್ಯ ಧನೂರತ್ನಂ ಮಹಾತ್ಮನಃ॥೧೨॥ನ್ಯಾಸ ಭೂತಂ ತದಾ ನ್ಯಸ್ತ ಮಸ್ಮಾಕಂ

ದತ್ತಃ - ಕೊಡಲ್ಪಟ್ಟಿತು. ॥ ೮ ॥ ಪೂರ್ವಂ - ಪೂರ್ವಕಾಲದಲ್ಲಿ, ವೀರ್ಯವಾನ್ - ಪರಾಕ್ರಮ ಶಾಲಿಯಾದ, ರುದ್ರಸ್ತು - ಈಶ್ವರನು, ದಕ್ಷಯಜ್ಞವಧೇ - ದಕ್ಷಬ್ರಹ್ಮನ ಯಜ ಧ್ವಂಸದಲ್ಲಿ, ಧನುಃ ಧನುಸ್ಸನ್ನು, ಆಯಮ್ಯ - ಎತ್ತಿಹಿಡಿದು, ರೋಷಾತ್ - ಕೋಪದಿಂದ, ತ್ರಿದಶಾನ್-ದೇವತೆಗಳನ್ನು ಕುರಿತು, ಸಲೀಲಂ - ವಿಲಾಸದಿಂದ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು, ॥ ೯ ॥ ಹೇಸುರಾಃ - ಎಲೈ ದೇವತೆಗಳಿರಾ, ಯಸ್ಮಾತ್ - ಯಾವಕಾರಣ, ಭಾಗಾರ್ಥಿನಃ - ಭಾಗವನ್ನು ಬೇಡುತ್ತಿರುವ, ಮೇ - ನನಗೆ, ಯೂಯಂ - ನೀವು, ಭಾಗಾನ್ - ಭಾಗಗಳನ್ನು, ನಾಕಲ್ಪಯತ - ಕೊಡದೆಹೋದರೋ, ತಸ್ಮಾತ್ - ಆ ಕಾರಣ, ಮಹಾರ್ಹಾಣಿ - ಶ್ರೇಷ್ಠಗಳಾದ, ವಃ - ನಿಮ್ಮ, ವರಾಂಗಾಣಿ - ಶಿರಸ್ಸುಗಳನ್ನು. ಶಾತಯಾಮಿ - ಕತ್ತರಿಸುತ್ತೇನೆ. ॥ ೧೦ ॥ ತತಃ - ಬಳಿಕ, ಹೇಮುನಿಪುಂಗವ - ಎಲೈ ವಿಶ್ವಾಮಿತ್ರನೇ, ವಿಮನಸಃ - ದುಃಖಗೊಂಡ, ಸರ್ವೇದೇವಾಃ ಆ ದೇವ ತೆಗಳೆಲ್ಲರೂ, ದೇವೇಶಂ - ದೇವತೆಗಳೊಡೆಯನಾದ ಪರಮೇಶ್ವರನನ್ನು, ಪ್ರಸಾದಯಂತಿ - ಪ್ರಸನ್ನ ನಾಗಿ ಮಾಡಿಕೊಂಡರು, ತೇಷಾಂ - ಅವರ ಸ್ತುತಿಗೆ, ಭವಃ - ಪರಮೇಶ್ವರನು, ಪ್ರೀತಃ - ಸಂತು ಷ್ಟನು, ಅಭವತ್ - ಆದನು. ॥ ೧೧ ॥ ಪ್ರೀತಿಯುಕ್ತಃ-ವಿಶ್ವಾಸದಿಂದೊಡಗೂಡಿದ ಸ್ತುತಿಗೆ ಸಃ ಆ ಪರಮೇಶ್ವರನು, ಮಹಾತ್ಮನಾಂ-ಮಹಾನುಭಾವರಾದ, ಸರ್ವೇಷಾಂ - ಸಮಸ್ತರಾದ, ತೇಷಾಂ- ಆ ದೇವತೆಗಳಿಗೆ, ದದೌ - ಕೊಟ್ಟನು, ತದೇತತ್ - ಆ ಈ, ಧನೂರತ್ನಂ - ಶ್ರೇಷ್ಠವಾದ ಧನುಸ್ಸು, ಮಹಾತ್ಮನಃ - ಮಹಾ ಪ್ರಭಾವವಂತನಾದ, ದೇವದೇವಸ್ಯ - ಪರಮೇಶ್ವರನದು. ॥ ೧೨ ॥ ಹೇ ವಿಭೋ - ಎಲೈ ತತ್ವಾಧಾರಣ ಸಮರ್ಥನೇ, ತದಾ - ಆಗ, ಅಸ್ಮಾಕಂ - ನಮ್ಮ, ಪೂರ್ವಕೇ - ಪೂರ್ವಿಕನಾದ ದೇವರಾತನಲ್ಲಿ, ನ್ಯಾಸಭೂತಂ - ನಿಕ್ಷೇಪ ಭೂತವಾಗಿ, ನ್ಯಸ್ತಂ - ಇರಿಸಲ್ಪಟ್ಟಿತು,

ಮಹರ್ಷಿಯು, ಹಿಂದೆ ದಕ್ಷಯಜ್ಞಧ್ವಂಸಕಾಲದಲ್ಲಿ ಈ ಧನುಸ್ಸನ್ನು ಸಂಧಾನಮಾಡಿ ದೇವತೆಗಳೆಲ್ಲರನ್ನೂ ಕುರಿತು, "ಎಲೈ ದೇವತೆಗಳಿರಾ! ಯಜ್ಞಭಾಗಾರ್ಥಿಗಳಾದ ನೀವು ನನಗೆ ಭಾಗವನ್ನು ಕಲ್ಪಿಸಲಿಲ್ಲವಾದುದರಿಂದ ಇದೀಗ ಈ ಧನುಸ್ಸಿನಿಂದ ನಿಮ್ಮ ತಲೆಗಳನ್ನು ತರಿಯುತ್ತೇನೆ" ಎಂದನು. ಆಗ ದುಃಖಿತರಾದ ದೇವತೆಗಳೆಲ್ಲರೂ ದೇವೇಶನಾದ ಶಂಕರ ನನ್ನು ಪ್ರಸನ್ನನಾಗಿ ಮಾಡಿಕೊಳ್ಳಲು, ಆತನು ಸಂತಸಗೊಂಡು ಮಹಾತ್ಮರಾದಾ ದೇವತೆಗಳೆಲ್ಲರಿಗೂ ಈ ಧನುಸ್ಸನ್ನು ಕೊಟ್ಟವನಾದನು. ಆ ಶೈವಧನುಸ್ಸನ್ನು ಆ ದೇವತೆಗ ಳೆಲ್ಲರೂ ನಮ್ಮ ಪೂರ್ವಿಕನಾದ ದೇವರಾತನಲ್ಲಿ ನ್ಯಾಸವಾಗಿ ಕೊಟ್ಟವರಾದರು. ॥೯-೧೨॥

ಪೂರ್ವಕೇ ವಿಭೋ ॥ ಅಥ ಮೇ ಕೃಷತಃ ಕ್ಷೇತ್ರಂ ಲಾಂಗಲಾದುತ್ಥಿತಾ ಮಯಾ ॥ ೧೩ ॥ ಕ್ಷೇತ್ರಂ ಶೋಧಯತಾ ಲಬ್ಧಾ ನಾಮ್ನಾ ಸೀತೇತಿ ವಿಶ್ರುತಾ॥ ಭೂತಲಾದುತ್ಥಿತಾ ಸಾತು ವ್ಯವರ್ಧತ ಮಮಾತ್ಮಜಾ ॥೧೪॥ ವೀರ್ಯಶುಲ್ಕೇತಿ ಮೇ ಕನ್ಯಾ ಸ್ಥಾಪಿತೇಯಮಯೋನಿಜಾ ॥ ಭೂತಲಾದುತ್ಥಿತಾಂ ತಾಂತು ವರ್ಧಮಾನಾಂ ಮಮಾತ್ಮಜಾಂ ॥ ೧೫ ॥ ವರಯಾಮಾಸುರಾಗಮ್ಯ ರಾಜಾನೋ ಮುನಿಪುಂಗವ ॥ ತೇಷಾಂ ವರಯತಾಂ ಕನ್ಯಾಂ ಸರ್ವೇಷಾಂ ಪೃಥಿವೀಕ್ಷಿತಾಂ॥ ೧೬ ॥ ವೀರ್ಯಶುಲ್ಕೇತಿ ಭಗವನ್ನದದಾಮಿ ಸುತಾಮಹಂ॥ತತಸ್ಸರ್ವೇ ನೃಪ

---

ಅಥ - ಬಳಿಕ, ಮೇ - ನಾನು, ಕ್ಷೇತ್ರಂ - ಯಜ್ಞಭೂಮಿಯನ್ನು, ಲಾಂಗಲಾತ್ - ನೇಗಲಿಸಿಂದ, ಕೃಷತಃ - ಉಳುತ್ತಿರಲು, ಕ್ಷೇತ್ರಂ - ಯಜ್ಞಭೂಮಿಯುನ್ನು, ಶೋಧಯತಾ - ಶೋಧನೆಮಾಡುತ್ತಿರುವ, ಮಯಾ - ನನ್ನಿಂದ, ಉತ್ಥಿತಾ - ಹುಟ್ಟಿದವಳಾದ ಕಾರಣ, ನಾಮ್ನಾ - ಪಸರಿನಿಂದ, ಸೀತೇತಿ - ಸೀತೆಯೆಂದು, ವಿಶ್ರುತಾ - ಪ್ರಸಿದ್ಧಳಾದ ಕನ್ಯೆಯು, ಲಬ್ಧಾ - ಹೊಂದಲ್ಪಟ್ಟಳು. ॥೧೩॥ ಭೂತಲಾತ್ - ಭೂಪ್ರದೇಶದಿಂದ, ಉತ್ಥಿತಾ - ಹುಟ್ಟಿದ, ಸಾತು - ಆ ಸೀತಾದೇವಿಯು, ಮಮ - ನನಗೆ, ಆತ್ಮಜಾ - ಮಗಳಾಗಿ, ವ್ಯವರ್ಧತ - ನಾನು ಮಾಡಿದ ಪೋಷಣಾದಿಗಳಿಂದ ಬೆಳೆದಳು, ವೀರ್ಯಶುಲ್ಕೇತಿ-(ಗೋ)ಶೈವಧನು ರಾರೋಪಣವೇ ವಿವಾಹಮೂಲ್ಯ ದ್ರವ್ಯವಾಗಿ ಉಳ್ಳವಳೆಂದೂ, ಅಯೋನಿಜಾ - ಅಯೋನಿಜಳಾದ, ಮೇ - ನನ್ನ, ಇಯಂಕನ್ಯಾ - ಈ ಕನ್ಯಕೆಯು, ಸ್ಥಾಪಿತಾ - ಇರಿಸಲ್ಪಟ್ಟಳು. ॥ ೧೪ ॥ ಹೇಮುನಿಪುಂಗವ - ಎಲೈ ವಿಶ್ವಾಮಿತ್ರನೇ, ಭೂತಲಾತ್ - ಭೂಮಿಯಿಂದ, ಉತ್ಥಿತಾಂ - ಹುಟ್ಟಿದ, ವರ್ಧಮಾನಾಂ - ವೃದ್ಧಿಯನ್ನೈದುತ್ತಿರುವ, ಮಮ - ನನ್ನ, ಆತ್ಮಜಾಂ - ಕುವರಿಯಾದ, ತಾಂ - ಆ ಸೀತಾದೇವಿಯನ್ನು, ರಾಜಾನಃ - ರಾಜನು, ಆಗಮ್ಯ - ಬಂದು, ವರಯಾಮಾಸುಃ-ವರಿಸಿದರು. ॥ ೧೫ ॥ ಹೇಭಗವನ್ - ಎಲೈ ಪೂಜ್ಯನೆ, ವರಯತಾಂ-ವರಿಸುತ್ತಿರುವ, ಸರ್ವೇಷಾಂ - ಸಮಸ್ತರಾದ, ತೇಷಾಂಪೃಥಿವೀಕ್ಷಿತಾಂ-ಆ ಅರಸುಗಳಿಗೆ, ಕನ್ಯಾಂ-ಅವಿವಾಹಿತಳಾದ, ಸುತಾಂ - ಕುವರಿಯನ್ನು, ವೀರ್ಯಶುಲ್ಕೇತಿ - ಧನುರಾರೋಪಣವೇ ಮೂಲ್ಯ ದ್ರವ್ಯವಾಗುಳ್ಳವಳೆಂದು, ಉಕ್ತ್ವಾ-ಹೇಳಿ, ಅಹಂ-ನಾನು, ನದದಾಮಿ - ಕೊಡಲಿಲ್ಲವು ॥ ೧೬ ॥ ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೇ, ತತಃ - ಬಳಿಕ, ಸರ್ವೇ-ಸಮಸ್ತರಾದ, ನೃಪತಯಃ-ಅರಸರು, ಸಮೇತ್ಯ - ಗುಂಪುಗೂಡಿ, ತದಾ - ಆಗ - ಮಿಥಿಲಾಂ-ಮಿಥಿಲಾಪಟ್ಟಣವನ್ನು ಕುರಿತು,

---

ಆ ಬಳಿಕ ಯಜ್ಞವನ್ನು ಮಾಡಲಿಚ್ಛಿಸಿ ಕ್ಷೇತ್ರವನ್ನು ಶೋಧಿಸಲು ನೇಗಿಲಿನಿಂದ್ದಾಭೂಮಿಯನ್ನು ಉಳುತ್ತಿರಲು ಸೀತೆಯೆಂದು ವಿಖ್ಯಾತಳಾದ ಕನ್ಯೆಯು ದೊರಕಿದಳು. ಭೂಮಿಯಿಂದ ಹುಟ್ಟಿದ ಆ ಸೀತೆಯು ನನ್ನಮಗಳಾಗಿ ಬೆಳೆದಳು. ಅಯೋನಿಜಳಾದೀಕೆಯನ್ನು ಧನುರಾರೋಪಣವೆಂಬ ವೀರ್ಯಶುಲ್ಕದಿಂದ ವಿವಾಹವನ್ನು ಮಾಡಿ ಕೊಡಬೇಕೆಂದು ಈ ಧನುಸ್ಸು ನನ್ನಿಂದ ಸ್ಥಾಪಿತವಾಗಿರುವುದು. ಈ ರೀತಿ ಭೂಮಿಯಿಂದ ಜನಿಸಿ ನನ್ನ ಕುವರಿಯಾಗಿ ಅಭಿವೃದ್ಧಿಯನ್ನೈದುತ್ತಿರುವ ಆ ಸೀತಾದೇವಿಯನ್ನು ವರಿಸಬೇಕೆಂದು ಅನೇಕ ಮಂದಿ ರಾಜರು ಬಂದಿದ್ದರು. ವೀರ್ಯಶುಲ್ಕಳಾದೀಕನ್ಯೆಯನ್ನು ವರಿಸಲು ಬಂದಿದ್ದ ಆ

ತಯಸ್ಸಮೇತ್ಯ ಮುನಿಪುಂಗವ ||೧೭|| ಮಿಥಿಲಾ ಮಭ್ಯುಪಾಗಮ್ಯ ವೀರ್ಯ ಜಿಜ್ಞಾಸವ ಸ್ತದಾ||ತೇಷಾಂ ಜಿಜ್ಞಾ ಸಮಾನಾನಾಂ ವೀರ್ಯಂ ಧನುರುಪಾಹೃತಂ ||೧೮||ನಶೇಕುರ್ಗ್ರಹಣೇ ತಸ್ಯ ಧನುಷಸ್ತೋಲನೇಽಪಿವಾ|| ತೇಷಾಂ ವೀರ್ಯವ ತಾಂ ವೀರ್ಯ ಮಲ್ಪಂಜ್ಞಾತ್ವಾ ಮಹಾಮುನೇ||೧೯|| ಪ್ರತ್ಯಾಖ್ಯಾತಾ ನೃಪತಯ ಸ್ತನ್ನಿಬೋಧ ತಪೋಧನ || ತತಃ ಪರಮ ಕೋಪೇನ ರಾಜಾನೋ ಮುನಿಪುಂ ಗವ ||೨೦|| ನ್ಯರುಂಧನ್ಮಿಥಿಲಾಂ ಸರ್ವೇ ವೀರ್ಯಸಂದೇಹಮಾಗತಾಃ||ಆತ್ಮಾ ನಮವಧೂತಂ ತೇ ವಿಜ್ಞಾಯ ನೃಪಪುಂಗವ || ೨೧ || ರೋಷೇಣ ಮಹತಾ

ಅಭ್ಯುಪಾಗಮ್ಯ - ಬಂದು, ವೀರ್ಯಜಿಜ್ಞಾಸವಃ - ಧನುರಾರೋಪಣ ಶಕ್ತಿಯನ್ನು ತಿಳಿಯಲಿಚ್ಛೆಯು ಳ್ಳವರಾದರು ||೧೭|| ವೀರ್ಯಂ - ಧನುರಾರೋಪಣ ಶಕ್ತಿಯನ್ನು, ಜಿಜ್ಞಾಸಮಾನಾನಾಂ - ತಿಳಿ ಯಲಿಚ್ಛೆಯುಳ್ಳ, ತೇಷಾಂ - ಆ ಅರಸರಿಗೋಸುಗ, ಧನುಃ - ಶೈವಧನುಸ್ಸು, ಉಪಾಹೃತಂ-ತರಿಸ ಲ್ಪಟ್ಟಿತು, ತೇ - ಅವರು, ತಸ್ಯ ಧನುಷಃ - ಆ ಧನುಸ್ಸಿನ, ಗ್ರಹಣೇ - ಹಿಡಿಯುವಿಕೆಯಲ್ಲಿಯೇ ಆಗಲಿ, ತೋಲನೇಽಪಿವಾ - ಕದಲಿಸುವುದರಲ್ಲಿಯೇ ಆಗಲಿ, ನಶಕ್ನುಃ - ಸಮರ್ಥರಾಗದೇ ಹೋದರು. ||೧೮|| ಹೇಮಹಾಮುನೇ - ಎಲೈ ಮಹರ್ಷಿಯೇ. ಹೇ ತಪೋಧನ - ಎಲೈ ತಪವೇ ಧನವಾಗು ಳ್ಳವನೇ, ವೀರ್ಯವತಾಂ - ಸಾಮರ್ಥ್ಯವಂತರಾದ, ತೇಷಾಂ - ಆ ಅರಸರ, ವೀರ್ಯಂ - ಸಾಮ ರ್ಥ್ಯವನ್ನು, ಅಲ್ಪಂ - ಸ್ವಲ್ಪವನ್ನಾಗಿ, ಜ್ಞಾತ್ವಾ - ತಿಳಿದು, ನೃಪತಯಃ - ಅರಸರು, ಪ್ರತ್ಯಾ ಖ್ಯಾತಾಃ - ನಿರಾಕೃತರಾದರು, ತತ್-ಅದನ್ನು, ನಿಬೋಧ - ತಿಳಿದುಕೋ ||೧೯|| ಹೇಮುನಿ ಪುಂಗವ - ಎಲೈ ಋಷಿಶ್ರೇಷ್ಠನೇ, ತತಃ - ಬಳಿಕ, ವೀರ್ಯಸಂದೇಹಂ - ಸಾಮರ್ಥ್ಯದ ಸಂಶಯ ವನ್ನು, ಆಗತಾಃ - ಹೊಂದಿರುವ, ಸರ್ವೇರಾಜಾನಃ - ಅರಸರೆಲ್ಲರೂ, ಪರಮಕೋಪೇನ - ಬಹಳ ವಾದ ಕೋಪದಿಂದ, ಮಿಥಿಲಾಂ - ಮಿಥಿಲಾಪಟ್ಟಣವನ್ನು, ನ್ಯರುಂಧನ್ - ಮುತ್ತಿದರು. ||೨೦|| ತೇನೃಪಪುಂಗವಾಃ - ಆ ನರಶ್ರೇಷ್ಠರಾದ ರಾಜರು, ಆತ್ಮಾನಂ - ತಮ್ಮನ್ನು, ಅವಧೂತಂ - ತಿರ ಸ್ಕರಿಸಲ್ಪಟ್ಟವರನ್ನಾಗಿ, ವಿಜ್ಞಾಯ - ತಿಳಿದು, ಮಹತಾ-ಬಹಳವಾದ, ರೋಷೇಣ-ಕ್ರೋಧದಿಂದ, ಆವಿಷ್ಟಾಃ - ವ್ಯಾಪ್ತರಾಗಿ, ಮಿಥಿಲಾಂಪುರೀಂ - ಮಿಥಿಲಾಪಟ್ಟಣವನ್ನು, ಪೀಡಯನ್ - ಬಾಧೆಗೊ ಳಿಸಿದರು. ||೨೧|| ಹೇಮುನಿಶ್ರೇಷ್ಠ - ಎಲೈ ವಿಶ್ವಾಮಿತ್ರನೇ, ತತಃ - ಬಳಿಕ- ಸಂವತ್ಸರೇ -

ರಾಜರಿಗಾರಿಗೂ ಕೊಡಲಿಲ್ಲವು ||೧೩-೧೫|| ಆ ಬಳಿಕ ಆ ರಾಯರೆಲ್ಲರೂ ಗುಂಪುಗೂಡಿ ಧನು ರಾರೋಪಣಶಕ್ತಿಯನ್ನು ತಿಳಿಸಲಿಚ್ಛೆಯುಳ್ಳವರಾಗಿ ಮಿಥಿಲಾಪಟ್ಟಣಕ್ಕೆ ಬಂದು ಅಭಿ ಪ್ರಾಯವನ್ನು ತಿಳಿಸಲು ಆ ಧನುಸ್ಸು ತೋರಿಸಲ್ಪಟ್ಟಿತು. ತಮ್ಮ ತಮ್ಮ ವೀರ್ಯಗಳಲ್ಲಿ ಜಿಜ್ಞಾಸೆಯನ್ನು ಮಾಡುತ್ತಿರುವ ಆ ರಾಯರು, ಆ ಕೋದಂಡವನ್ನು ಹಿಡಿವುದಕ್ಕೇ ಆಗಲಿ ಕದಲಿಸುವುದಕ್ಕೆ ಆಗಲಿ ಶಕ್ತರಾಗದೇ ಹೋದರು. ||೧೬-೧೮|| ಎಲೈ ಮುನಿಶ್ರೇಷ್ಠನೆ ! ಆಗ ನಾನು ಆ ರಾಜರ ಪರಾಕ್ರಮವು ಸ್ವಲ್ಪವಾದುದೆಂದು ತಿಳಿದು ಅವರನ್ನು ನಿರಾಕರಿಸಿದೆನು. ಬಳಿಕಲಾರಾಜರೆಲ್ಲರೂ ಗುಂಪುಗೂಡಿ ಮಿಥಿಲೆಗೆ ಮುತ್ತಿಗೆಯನ್ನು ಹಾಕಿ ಒಂದು ವರ್ಷ ಕಾಲ ಬಹಳವಾಗಿ ಪೀಡಿಸುತ್ತಿದ್ದರು. ||೧೯-೨೧|| ಎಲೈ ಮುನಿಪುಂಗವನೆ! ಈ ರೀತಿ ಒಂದು

ವಿಷ್ಟಾಃ ಪೀಡಯನ್ಮಿಥಿಲಾಂ ಪುರೀಂ ॥ ತತಸ್ಸಂವತ್ಸರೇ ಪೂರ್ಣೇ ಕ್ಷಯಂ ಯಾತಾನಿ ಸರ್ವಶಃ॥೨೨॥ಸಾಧನಾನಿ ಮುನಿಶ್ರೇಷ್ಠ ತತೋಽಹಂ ಭೃಶ ದುಃಖಿತಃ॥ ತತೋ ದೇವ ಗಣಾನ್ಸರ್ವಾ ತಪಸಾಹಂ ಪ್ರಸಾದಯಂ ॥ ೨೩ ॥ ದದುಶ್ಚ ಪರಮಪ್ರೀತಾಶ್ಚತುರಂಗಬಲಂ ಸುರಾಃ ॥ ತತೋಭಗ್ನಾ ನೃಪತಯೋ ಹನ್ಯ ಮಾನಾದಿಶೋ ಯಯುಃ ॥೨೪॥ಅವೀರ್ಯಾ ವೀರ್ಯಸಂದಿಗ್ಧಾ ಸ್ಸಾಮಾತ್ಯಾಃ ಪಾಪಕರ್ಮಣಃ ॥ ತದೇತನ್ಮುನಿಶಾರ್ದೂಲ ಧನುಃ ಪರಮ ಭಾಸ್ವರಂ ॥ ೨೫॥ ರಾಮಲಕ್ಷ್ಮಣಯೋಶ್ಚಾಪಿ ದರ್ಶಯಿಷ್ಯಾಮಿ ಸುವ್ರತ ॥ ಯದ್ಯಸ್ಯ ಧನುಷೋ ರಾಮಃ ಕುರ್ಯಾದಾರೋಪಣಂ ಮುನೇ ॥ ೨೬ ॥ ಸುತಾಮಯೋನಿಜಾಂ ಸೀತಾಂ ದದ್ಯಾಂ ದಾಶರಥೇರಹಂ ॥ ೨೭॥ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಷಷ್ಟಿತಮಸ್ಸರ್ಗಃ.

ಸಂವತ್ಸರವು, ಪೂರ್ಣೇ-ಪೂರ್ಣವಾಗಲು, ಕ್ಷಯಂ-ನಾಶವನ್ನು, ಯಾತಾನಿ-ಹೊಂದಿದವು, ತತಃ ಆದುದರಿಂದ, ಅಹಂ-ನಾನು, ಭೃಶದುಃಖಿತಃ-ಬಹಳ ದುಃಖಿತನಾದೆನು, ತತಃ-ಬಳಿಕ, ಅಹಂ-ನಾನು, ತಪಸಾ-ತಪಸ್ಸಿನಿಂದ, ಸರ್ವಾ ದೇವಗಣಾನ್ - ಸಮಸ್ತ ದೇವತಾ ಸಮೂಹಗಳನ್ನು, ಪ್ರಸಾದಯಂ - ಪ್ರಸನ್ನರಾಗಿ ಮಾಡಿಕೊಂಡೆನು, ಪರಮಪ್ರೀತಾಃ - ಬಹಳ ಸಂತೋಷಗೊಂಡ, ಸುರಾಃ - ದೇವತೆಗಳು, ಚತುರಂಗಬಲಂ - ಚತುರಂಗ ಸೈನ್ಯವನ್ನು, ದದುಃ-ಕೊಟ್ಟರು ॥ ೨೩ ॥ ತತಃ - ಬಳಿಕ, ನೃಪತಯಃ - ಅರಸರು, ಹನ್ಯಮಾನಾಃ - ಹೊಡೆಯಲ್ಪಟ್ಟು, ಭಗ್ನಾಃ ಸೈನ್ಯಮುರಿದವರಾಗಿ, ದಿಶಃ - ದಿಕ್ಕುಗಳನ್ನು ಕುರಿತು, ಅವೀರ್ಯಾಃ - ಸಾಮರ್ಥ್ಯರಹಿತರಾಗಿ, ವೀರ್ಯಸಂದಿಗ್ಧಾಃ - ಸಂದಿಗ್ಧ ಸಾಮರ್ಥ್ಯವುಳ್ಳವರಾಗಿ, ಸಾಮಾತ್ಯಾಃ - ಮಂತ್ರಿಗಳೊಡಗೂಡಿದವರಾಗಿ, ಪಾಪಕರ್ಮಾಣಃ - ಪಾಪವ್ಯಾಪಾರಿಗಳಾದ ಅರಸರು, ಯಯುಃ - ಓಡಿಹೋದರು. ॥ ೨೪ ॥ ಹೇಮುನಿಶಾರ್ದೂಲ-ಎಲೈ ಋಷಿಶ್ರೇಷ್ಠನೇ, ಹೇಸುವ್ರತ-ಎಲೈ ನಿಯಮಪರನೇ, ಪರಮಭಾಸ್ವರಂ-ಬಹಳ ಪ್ರಕಾಶಮಾನವಾಗಿರುವ, ತದೇತತ್ - ಆ ಈ, ಧನುಃ - ಧನುಸ್ಸನ್ನು, ರಾಮಲಕ್ಷ್ಮಣಯೋಶ್ಚಾಪಿ - ರಾಮಲಕ್ಷ್ಮಣರಿಗೂ, ದರ್ಶಯಿಷ್ಯಾಮಿ - ತೋರಿಸುವೆನು. ॥ ೨೫ ॥ ಹೇಮುನೇ - ಎಲೈ ವಿಶ್ವಾಮಿತ್ರನೇ, ರಾಮಃ - ಶ್ರೀರಾಮನು, ಅಸ್ಯಧನುಷಃ — ಈ ಧನುಸ್ಸಿನ, ಆರೋಪಣಂ-ಹೆದೆಯೇರಿಸುವಿಕೆಯನ್ನು, ಕುರ್ಯಾದ್ಯದಿ - ಮಾಡಿದರೇ, ಅಹಂ - ನಾನು, ದಾಶರಥೇಃ - ಶ್ರೀರಾಮನಿಗೆ, ಅಯೋನಿಜಾಂ - ಯೊನಿಜಳಲ್ಲದಿರುವ, ಸುತಾಂ - ಕುವರಿಯಾದ, ಸೀತಾಂ - ಸೀತಾದೇವಿಯನ್ನು, ದದ್ಯಾಂ ಕೊಡುತ್ತೇನೆ. ॥ ೨೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಷಷ್ಟಿತಮಸ್ಸರ್ಗಃ .

ಸಂವತ್ಸರವು ಕಳೆಯಲು ದುರ್ಗವೇ ಮೊದಲಾದ ನನ್ನ ಸಾಧನಗಳೆಲ್ಲವೂ ಕ್ಷಯವನ್ನು ಹೊಂದಿದವು. ಆಗ ನಾನು ಬಹಳವಾಗಿ ದುಃಖಗೊಂಡು ತಪಸ್ಸಿನಿಂದ ದೇವತೆಗಳನ್ನು ಪ್ರಸನ್ನರನ್ನಾಗಿ ಮಾಡಿಕೊಂಡೆ. ಬಳಿಕಲಾದೇವತೆಗಳು ನನ್ನ ತಪಸ್ಸಿನಿಂದ ಸಂತುಷ್ಟರಾಗಿ ಚತುರಂಗ ಬಲವನ್ನೇ ನನಗೆ ದಯಪಾಲಿಸಿದವರಾದರು. ॥೨೨-೨೩॥ ಆ ಬಳಿಕ ಪಾಪಿಗಳಾದ ರಾಜರೆಲ್ಲರೂ ಭಗ್ನರಾಗಿ ದಿಕ್ಕು ದಿಕ್ಕುಗಳಿಗೆ ಓಡಿಹೋದರು. ಓ ಮುನಿಶ್ರೇಷ್ಠ ! ಇಂತಹ ಪ್ರಕಾಶಮಾನವಾದ ಈ ಧನುಶ್ಶ್ರೇಷ್ಠವನ್ನು ನರಶ್ರೇಷ್ಠರಾದೀ ರಾಮಲಕ್ಷ್ಮಣರಿಗೆ ತೋರುವೆನು. ಎಲೈ ಮುನಿಯೆ! ಶ್ರೀರಾಮಚಂದ್ರನು ಈ ಧನುಸ್ಸನ್ನು ಆರೋಪಣೆಮಾಡಿದರೆ, ಅಯೋನಿಜಳೂ, ನನ್ನ ಕುವರಿಯೂ ಆದ ಸೀತಾದೇವಿಯನ್ನೀತನಿಗೆ ಕೊಡುವೆನು. ॥೨೪-೨೬॥

ಇಂತಿದು ಶೈವಧನುರ್ವೃತ್ತಾಂತ ಕಥನವೆಂಬ ಅರವತ್ತಾರನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಸಪ್ತಷಷ್ಟಿತಮಸ್ಸರ್ಗಃ.

ಜನಕಸ್ಯ ವಚಶ್ಶ್ರುತ್ವಾ ವಿಶ್ವಾಮಿತ್ರೋ ಮಹಾಮುನಿಃ ||ಧನುರ್ದರ್ಶಯ ರಾಮಾಯ ಇತಿ ಹೋವಾಚ ಪಾರ್ಥಿವಂ||೧||ತತಸ್ಸರಾಜಾ ಜನಕ ಸ್ಸಾಮಂತಾ ನ್ವ್ಯಾದಿದೇಶಹ || ಧನುರಾನೀಯತಾಂ ದಿವ್ಯಂ ಗಂಧಮಾಲ್ಯ ವಿಭೂಷಿತಂ ||೨|| ಜನಕೇನ ಸಮಾದಿಷ್ಟಾ ಸ್ಸಚಿವಾಃ ಪ್ರಾವಿಶನ್ ಪುರೀಂ||ತದ್ಧನುಃ ಪುರತಃ ಕೃತ್ವಾ ನಿರ್ಜಗ್ಮುಃ ಪಾರ್ಥಿವಾಜ್ಞಯಾ || ೩ || ನೃಣಾಂ ಶತಾನಿ ಪಂಚಾಶದ್ವ್ಯಾಯತಾನಾಂ ಮಹಾತ್ಮನಾಂ || ಮಂಜೂಷಾಮಷ್ಟ ಚಕ್ರಾಂತಾಂ ಸಮೂಹುಸ್ತೇ ಕಥಂಚನ || ೪ || ತಾಮಾದಾಯತು ಮಂಜೂಷಾಮಾಯಸೀಂ ಯತ್ರ

---

ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ಜನಕಸ್ಯ - ಜನಕರಾಯನ, ವಚಃ - ವಾಕ್ಯವನ್ನು, ಶ್ರುತ್ವಾ - ಕೇಳಿ, ಧನುಃ - ಧನುಸ್ಸನ್ನು, ರಾಮಾಯ - ಶ್ರೀರಾಮಗೆ, ದರ್ಶಯ-(೧) ತೋರಿಸು, ಇತಿ- ಇಂತೆಂದು, ಪಾರ್ಥಿವಂ - ಜನಕರಾಯನನ್ನು ಕುರಿತು, ಉವಾಚಹ - ಹೇಳಿದನಷ್ಟೆ. || ೧ || ತತಃ - ಬಳಿಕ, ರಾಜಾ - ಅರಸಾದ, ಸಜನಕಃ - ಆ ಜನಕರಾಯನು, ಸಾಮಂತಾನ್ - ಕರ್ಮವನ್ನು ಮಾಡಿಸುವ ಸ್ನೇಹಿತರನ್ನು ಕುರಿತು, ಗಂಧಮಾಲ್ಯವಿಭೂಷಿತಂ - ಗಂಧಪುಷ್ಪಗಳಿಂದ ಅಲಂಕರಿಸಲ್ಪಟ್ಟ, ದಿವ್ಯಂ - ದೇವತಾ ಸಂಬಂಧವಾದ, ಧನುಃ - ಶೈವ ಧನುಸ್ಸು, ಆನೀಯತಾಂ-ತರಲ್ಪಡಲೆಂದು, ವ್ಯಾದಿದೇಶಹ - ಅಜ್ಞಾಪಿಸಿದನು. || ೨ || ಜನಕೇನ- ಜನಕರಾಯನಿಂದ, ಸಮಾದಿಷ್ಟಾಃ - ಆಜ್ಞಾಪಿಸಲ್ಪಟ್ಟ, ಸಚಿವಾಃ - ಮಂತ್ರಿಗಳು, ಪುರೀಂ - ಪಟ್ಟಣವನ್ನು ಕುರಿತು, ಪ್ರಾವಿಶನ್ - ಹೊಕ್ಕರು ಪಾರ್ಥಿವಾಜ್ಞಯಾ - ರಾಜಾಜ್ಞೆಯಿಂದ, ತದ್ಧನುಃ - ಆ ಧನುಸ್ಸನ್ನು, ಪುರತಃ - ಮುಂದುಗಡೆ, ಕೃತ್ವಾ - ಮಾಡಿ, ನಿರ್ಜಗ್ಮುಃ - ಹೊರಟುಬಂದರು. ||೩|| ಮಹಾತ್ಮನಾಂ - ಬಹಳವಾದ ದೇಹತ್ರಾಣವುಳ್ಳ, ವ್ಯಾಯತಾನಾಂ -ಬಹಳ ಉನ್ನತರಾದ, ನೃಣಾಂ- ಮನುಷ್ಯರ, ಪಂಚಾಶಚ್ಛತಾನಿ - ಐದು ಸಹಸ್ರಗಳು, ಅಷ್ಟಚಕ್ರಾಂ - ಎಂಟು ಚಕ್ರಗಳುಳ್ಳ, ತಾಂ ಮಂಜೂಷಾಂ - ಆ ಪೆಟ್ಟಿಗೆಯನ್ನು, ತೇ - ಆ ಐದುಸಾವಿರಮಂದಿ ಜನರು, ಕಥಂಚನ - ಬಹಳ ಪ್ರಯಾಸವಾಗಿ, ಸಮೂಹುಃ - ಹೊತ್ತರು. || ೪ || ನೃಪತಿಮಂತ್ರಿಣಃ - ರಾಜಮಂತ್ರಿಗಳಾದ,

---

ಈ ಪ್ರಕಾರವಾಗಿ ನುಡಿದ ಜನಕರಾಯನ ನುಡಿಗಳನ್ನು ಕೇಳಿ ಮುನಿಪುಂಗವನಾದ ವಿಶ್ವಾಮಿತ್ರನು. ಆತನನ್ನು ಕುರಿತು “ಎಲೈ ರಾಯನೆ! ಆ ಶೈವಧನುಸ್ಸನ್ನು ರಾಮಚಂದ್ರನಿಗೆ ತೋರಿಸುವವನಾಗು” ಎಂದು ಹೇಳಿದನು. ಆಗಲಾ ಜನಕರಾಜನು “ಗಂಧಕುಸುಮಗಳಿಂದಲಂಕೃತವಾದ ಆ ಧನುಸ್ಸನ್ನು ತೆಗೆದುಕೊಂಡು ಬನ್ನಿರಿ” ಎಂದು ತನ್ನ ಬಳಿಯಲ್ಲಿದ್ದ ಮಂತ್ರಿಗಳಿಗೆ ಆಜ್ಞಾಪಿಸಿದನು. ಇಂತು ಜನಕನಿಂದ ಆಜ್ಞಪ್ತರಾದ ಆ ಮಂತ್ರಿಗಳು ಪಟ್ಟಣವನ್ನು ಪ್ರವೇಶಿಸಿ, ದೀರ್ಘದೇಹಿಗಳಾದ ಐದು ಸಾವಿರಮಂದಿ ಕಟ್ಟಾಳುಗಳಿಂದ ಬಹಳ ಪ್ರಯಾಸದಿಂದ ಎಳೆಯಲ್ಪಟ್ಟು, ಎಂಟು ಚಕ್ರಗಳುಳ್ಳದೂ ಆದ ಆ ಶೈವ ಧನುಸ್ಸಿನ ಕಬ್ಬಿಣದ ಪೆಟ್ಟಿಗೆಯನ್ನು ಮುಂದು ಮಾಡಿಕೊಂಡು ಬಂದವರಾದರು. ||೪||

---

ಟಿ (೧) “ರಾಮಾಯ ಧನುರ್ದರ್ಶಯಾ” ಎಂಬ ವಿಶ್ವಾಮಿತ್ರನ ವಾಕ್ಯದಲ್ಲಿ ಅರ್ಥಸ್ವಾರಸ್ಯವುಂಟು. ಹಿಂದಿನ ಸರ್ಗದಲ್ಲಿ ಜನಕರಾಜನು “ಯದ್ಯಸ್ಯಧನುಷೋರಾಮಃ ಸೀತಾಂದದ್ಯಾಂ ” ಎಂದು ಹೇಳಿದಾನೆ. ಇದಕ್ಕೆ ಪ್ರತ್ಯುತ್ತರವಾದ ವಿಶ್ವಾಮಿತ್ರನ ವಾಕ್ಯದಲ್ಲಿ ಆಜ್ಞಾವಾಚಕವಾದ “ದರ್ಶಯ” ಎಂಬಪದದಿಂದ “ಎಲೈ ಜನಕರಾಯನೇ! ಶೈವಧನುಸ್ಸನ್ನು ರಾಮನಿಗೆ ತೋರಿಸು, ಆತನಾಧನುಸ್ಸನ್ನಾರೋಪಣ ಮಾಡಿ ಸೀತಾದೇವಿಯನ್ನು ವರಿಸುತ್ತಾನೆ” ಎಂಬ ಅರ್ಥವು ಭಾಸವಾಗುವುದು.

ತದ್ಧನುಃ || ಸುರೋಪಮಂ ತೇ ಜನಕಮೂಚು ರ್ನೃಪತಿ ಮಂತ್ರಿಣಃ || ೫ ||
ಇದಂ ಧನುರ್ವರಂ ರಾಜನ್ ಪೂಜಿತಂ ಸರ್ವ ರಾಜಭಿಃ || ಮಿಥಿಲಾಧಿಪ ರಾಜೇಂ
ದ್ರ ದರ್ಶಯಸ್ವ ಯದೀಚ್ಛಸಿ || ೬ || ತೇಷಾಂ ನೃಪೋ ವಚಶ್ಶ್ರುತ್ವಾ ಕೃತಾಂ
ಜಲಿ ರಭಾಷತ || ವಿಶ್ವಾಮಿತ್ರಂ ಮಹಾತ್ಮಾನಂ ತಾವುಭೌ ರಾಮಲಕ್ಷ್ಮಣೌ ||
೭ || ಇದಂ ಧನುರ್ವರಂ ಬ್ರಹ್ಮನ್ ಜನಕೈರಭಿಪೂಜಿತಂ || ರಾಜಭಿಶ್ಚ ಮಹಾ
ವೀರ್ಯೈರಶಕ್ತೈಃ ಪೂರಿತಂ ಪುರಾ || ೮ || ನೈತತ್ಸುರಗಣಾಸ್ಸರ್ವೇ
ನಾಸುರಾ ನಚ ರಾಕ್ಷಸಾಃ || ಗಂಧರ್ವ ಯಕ್ಷಪ್ರವರಾ ಸ್ಸಕಿನ್ನರ ಮಹೋ

---

ತೇ - ಆ ಐದುಸಾವಿರ ಜನರು, ಯತ್ರ - ಯಾವ ಪೆಟ್ಟಿಗೆಯಲ್ಲಿ, ತದ್ಧನುಃ - ಆ ಧನುಸ್ಸು, ಅಸ್ತಿ - ಇರುವುದೋ, ಆಯಸೀಂ - ಅಯೋವಿಕಾರವಾದ, ತಾಂಮಂಜೂಷಾಂ-ಆ ಪೆಟ್ಟಿಗೆಯನ್ನು, ಆದಾಯ- ತೆಗೆದುಕೊಂಡು ಬಂದು, ಸುರೋಪಮಂ - ದೇವತಾ ಸಮಾನನಾದ, ಜನಕಂ - ಜನಕರಾಜನನ್ನು ಕುರಿತು, ಊಚುಃ - ಹೇಳಿದರು. || ೫ || ಹೇ ರಾಜನ್ - ಎಲೈ ರಾಜನೇ, ಹೇಮಿಥಿಲಾಧಿಪ ಎಲೈ ಮಿಥಿಲಾಧಿಪತಿಯೇ, ಹೇರಾಜೇಂದ್ರ - ಎಲೈ ರಾಜಶ್ರೇಷ್ಠನೆ, ಸರ್ವರಾಜಭಿಃ - ಸಮಸ್ತ ಅರಸರಿಂದಲೂ, ಪೂಜಿತಂ - ಪೂಜಿಸಲ್ಪಟ್ಟ, ದರ್ಶನೀಯಂ - ನೋಡತಕ್ಕುದಾಗಿ, ಯತ್-ಯಾವ ಧನುಸ್ಸನ್ನು, ಇಚ್ಛಸಿ - ಅಪೇಕ್ಷಿಸಿದಯೋ, ತದಿದಂ - ಅಂತಹ, ಧನುರ್ವರಂ - ಧನುಶ್ಶ್ರೇಷ್ಠವನ್ನು, ದರ್ಶಯಸ್ವ - ತೋರಿಸು. || ೬ || ನೃಪ-- ಜನಕರಾಯನು, ತೇಷಾಂ - ಆ ಮಂತ್ರಿಗಳ, ವಚಃ- ವಾಕ್ಯವನ್ನು, ಶ್ರುತ್ವಾ - ಕೇಳಿ, ಕೃತಾಂಜಲಿಃ - ಅಂಜಲಿಬದ್ಧನಾಗಿ, ಮಹಾತ್ಮಾನಂ - ಮಹಾನುಭಾವನಾದ, ವಿಶ್ವಾಮಿತ್ರಂ - ವಿಶ್ವಾಮಿತ್ರನನ್ನು ಕುರಿತು, ತಾವುಭೌ - ಆ ಇಬ್ಬರಾದ, ರಾಮಲಕ್ಷ್ಮಣೌಚ - ರಾಮಲಕ್ಷ್ಮಣರನ್ನೂ ಕುರಿತು, ಅಭಾಷತ - ನುಡಿದನು. || ೭ || ಹೇಬ್ರಹ್ಮನ್ - ಎಲೈ ಬ್ರಾಹ್ಮಣನೆ, ಮಹಾವೀರ್ಯೈಃ - ಮಹಾ ಸಾಮರ್ಥ್ಯವಂತರಾದ, ಜನಕೈಃ - ಮಜ್ಜನಕರಿಂದಲೂ, ಪುರಾ - ಪೂರ್ವದಲ್ಲಿ, ಪೂರಿತಂ - ಧನುಸ್ಸಿನ ಹೆದೆಯನ್ನು ಕಟ್ಟುವದಕ್ಕೆ, ಅಶಕ್ತೈಃ - ಅಸಮರ್ಥರಾದ, ರಾಜಭಿಶ್ಚ - ಇತರ ಅರಸರಿಂದಲೂ, ಇದಂ ಧನುರ್ವರಂ - ಈ ಧನುಸ್ಸು ಅಭಿ

---

ಆಬಳಿಕ ಮಂತ್ರಿವರೇಣ್ಯರು ದೇವೋಪಮನಾದ ಜನಕರಾಯನನ್ನು ಕುರಿತು "ಎಲೈ ರಾಜನೇ! ಪೂರ್ವದಲ್ಲಿ ಸೀತಾದೇವಿಯನ್ನು ವರಿಸಲು ಬಂದಿದ್ದ ಸಕಲರಾಜರಿಂದಲೂ ಶ್ಲಾಘಿಸಲ್ಪಟ್ಟಿದ್ದ ಯಾವ ಧನುಸ್ಸನ್ನು ತೋರಿಸಬೇಕೆಂದಿಚ್ಛಿಸಿದೆಯೋ ಅಂತಹ ಈ ಶೈವಧನುಸ್ಸನ್ನು ತಂದಿರುವೆವು" ಎಂದರು. ಆಗಲಾ ರಾಯನು ಮಹಾತ್ಮನಾದ ವಿಶ್ವಾಮಿತ್ರನನ್ನೂ ದಶರಥ ರಾಜಕುವರರಾದ ರಾಮಲಕ್ಷ್ಮಣರನ್ನೂ ಕುರಿತು, "ಎಲೈ ಬ್ರಹ್ಮಜ್ಞಾನಿಯೆ! ಈ ಧನುಸ್ಸು ಸೀತಾರ್ಥಿಗಳೂ, ಧನುರಾರೋಪಣಾಶಕ್ತರೂ ಆದ ರಾಜರಿಂದ ಮಹದದ್ಭುತವಾದುದು ಎಂದು ಶ್ಲಾಘಿಸಲ್ಪಟ್ಟುದು. ಈ ಧನುಸ್ಸನ್ನು ಹೆದೆಯೇರಿಸಲು, ದೇವಾಸುರರೂ, ರಾಕ್ಷಸ, ಗಂಧರ್ವ. ಯಕ್ಷರೂ, ಕಿನ್ನರ, ಪನ್ನಗರೂ ಸಮರ್ಥರಾಗಲಾರರೆಂದ ಮೇಲೆ, ಇದನ್ನು

ರಗಾಃ ॥ ೯ ॥ ಕ್ವಗತಿ ರ್ಮಾನುಷಾಣಾಂತು ಧನುಷೋಽಸ್ಯ ಪ್ರಪೂರಣೇ ॥ ಆರೋಪಣೇ ಸಮಾಯೋಗೇ ವೇಪನೇ ತೋಲನೇಽಪಿವಾ ॥೧೦॥ ತದೇತದ್ಧನುಷಾಂ ಶ್ರೇಷ್ಠಮಾನೀತಂ ಮುನಿಪುಂಗವ ॥ ದರ್ಶಯೈತನ್ಮಹಾಭಾಗ ಅನಯೋ ರಾಜಪುತ್ರಯೋಃ ॥ ೧೧ ॥ ವಿಶ್ವಾಮಿತ್ರಸ್ತು ಧರ್ಮಾತ್ಮಾ ಶ್ರುತ್ವಾ ಜನಕ ಭಾಷಿತಂ ॥ ವತ್ಸ ರಾಮ ಧನುಃ ಪಶ್ಯ ಇತಿ ರಾಘವ ಮಬ್ರವೀತ್ ॥ ೧೨ ॥ ಬ್ರಹ್ಮರ್ಷೇ ರ್ವಚನಾದ್ರಾಮೋ ಯತ್ರ ತಿಷ್ಠತಿ ತದ್ಧನುಃ ॥ ಮಂಜೂಷಾಂ ತಾಮ ಪಾವೃತ್ಯ ದೃಷ್ಟ್ವಾ ಧನು ರಥಾಬ್ರವೀತ್ ॥ ೧೩ ॥ ಇದಂ ಧನುರ್ವರಂ ಬ್ರಹ್ಮ

---

ಪೂಜಿತಂ - ಪೂಜಿಸಲ್ಪಟ್ಟಿತು. ॥ ೮ ॥ ಏತತ್ - ಈ ಧನುಸ್ಸನ್ನು, ಪೂರಿತಂ-ಹೆದೆಯಿಂದ ಯೋಜನಮಾಡುವುದಕ್ಕೆ, ಸರ್ವೇ - ಸಮಸ್ತ, ಸುರಗಣಾಃ - ದೇವತಂಡಗಳು, ನಶಕ್ತಾಃ - ಸಮರ್ಥರಲ್ಲವು, ಅಸುರಾಃ - ರಾಕ್ಷಸರೂ, ನ - ಅಲ್ಲವು, ಸಕಿನ್ನರಮಹೋರಗಾಃ - ಕಿನ್ನರರಿಂದಲೂ, ಸರ್ಪಗಳಿಂದಲೂ ಒಡಗೂಡಿದ, ಗಂಧರ್ವಯಕ್ಷಪ್ರವರಾಃ - ಗಂಧರ್ವಯಕ್ಷರೇ ಮೊದಲಾಗುಳ್ಳ, ರಾಕ್ಷಸಾಶ್ಚ - ರಾಕ್ಷಸರೂ, ನ - ಶಕ್ತರಲ್ಲವು, ॥ ೯ ॥ ಮಾನುಷಾಣಾಂತು - ಮನುಷ್ಯರಿಗಾದರೆ, ಅಸ್ಯಧನುಷಃ - ಈ ಶೈವಧನುಸ್ಸಿನ, ಪ್ರಪೂರಣೇ - ಹೆದೆಕಟ್ಟುವಿಕೆಯಲ್ಲಿ, ಆರೋಪಣೇ - ಟಂಕಾರವಿಷಯದಲ್ಲಿಯೂ, ಸಮಾಯೋಗೇ - ಶರಸಂಯೋಜನದಲ್ಲಿಯೂ, ವೇಪನೇ-ಜ್ಯಾಕರ್ಷಣ ಮಾಡುವ ವಿಷಯದಲ್ಲಿಯೂ, ತೋಲನೇಽಪಿವಾ - ಭಾರಪರೀಕ್ಷಾರ್ಥವಾಗಿ ಕದಲಿಸುವವಿಷಯದಲ್ಲಾದರೂ, ಗತಿಃ - ಸಾಮರ್ಥ್ಯವು, ಕ್ವ - ಎಲ್ಲಿಯದು, ॥ ೧೦ ॥ ಹೇಮುನಿಪುಂಗವ - ಎಲೈ ಮುನಿಶ್ರೇಷ್ಠನೇ, ತದೇತತ್ - ಆಈ, ಧನುಷಾಂ - ಧನುಸ್ಸುಗಳೊಳಗೆ, ಶ್ರೇಷ್ಠಂ - ಶ್ರೇಷ್ಠವಾದ ಶೈವಧನುಸ್ಸು, ಆನೀತಂ - ತರಲ್ಪಟ್ಟಿತು, ಹೇಮಹಾಭಾಗ - ಎಲೈ ಪುಣ್ಯವಂತನೇ, ಏತತ್ - ಈ ಧನುಸ್ಸನ್ನು, ಅನಯೋಃ - ರಾಜಪುತ್ರಯೋಃ - ಈ ಅರಸುಮಕ್ಕಳಾದ ರಾಮ ಲಕ್ಷ್ಮಣರಿಗೂ, ದರ್ಶಯ - ತೋರಿಸು. ॥ ೧೧ ॥ ಧರ್ಮಾತ್ಮಾ - ಧರ್ಮಿಷ್ಠನಾದ, ವಿಶ್ವಾಮಿತ್ರಸ್ತು - ವಿಶ್ವಾಮಿತ್ರನಾದರೆ, ಜನಕಭಾಷಿತಂ - ಜನಕರಾಯನ ಮಾತನ್ನು, ಶ್ರುತ್ವಾ-ಕೇಳಿ, ಹೇವತ್ಸ-ಎಲೈ ಬಾಲನೇ, ಹೇರಾಮ-ಎಲೈ ಶ್ರೀರಾಮನೇ, ಧನುಃ - ಧನುಸ್ಸನ್ನು, ಪಶ್ಯ - ನೋಡು, ಇತಿ - ಇಂತೆಂದು, ರಾಘವಂ - ಶ್ರೀರಾಮನನ್ನು ಕುರಿತು, ಅಬ್ರವೀತ್ - ನುಡಿದನು. ॥ ೧೨ ॥ ಬ್ರಹ್ಮರ್ಷೇಃ ಬ್ರಹ್ಮರ್ಷಿಯಾದ

---

ಎತ್ತುವುದಕ್ಕೆ ಆಗಲಿ, ಕದಲಿಸುವುದಕ್ಕೆ ಆಗಲಿ,ಹೆದೆ ಯೇರಿಸುವುದಕ್ಕೇ ಆಗಲಿ ಮಾನವರಿಂದ ಸಾಧ್ಯವಾದೀತೆ? ಅವರಿಗೆ ಅಷ್ಟರ ಶಕ್ತಿಯೆಲ್ಲಿಯದು ! ॥೧೦॥ ಎಲೈ ವಿಶ್ವಾಮಿತ್ರಮುನಿಯೆ! ಇಂತಹ ಪ್ರಭಾವವುಳ್ಳ ಈ ಶೈವಧನುಸ್ಸು ತರಲಾಗಿದೆ. ಇದನ್ನು ಈ ರಾಜಪುತ್ರರಿಗೆ ತೋರಿಸುವವನಾಗು," ಎಂದನು. ಈ ರೀತಿ ನುಡಿದ ಜನಕರಾಜನ ನುಡಿಗಳನ್ನು ಕೇಳಿ, ವಿಶ್ವಾಮಿತ್ರ ಮುನಿಯು, "ವತ್ಸ ರಾಮಚಂದ್ರ; ಈ ಧನುಸ್ಸನ್ನು ನೋಡಿದೆಯಾ !" ಎಂದು ಹೇಳಿದನು. ವಿಶ್ವಾಮಿತ್ರಮುನಿಯೀರೀತಿ ಹೇಳಲು ಶ್ರೀರಾಮನು ಶೈವಧನುಸ್ಸಿದ್ದ ಪೆಟ್ಟಿಗೆಯ ಬಳಿಸಾರಿ ಆ ಧನುಸ್ಸನ್ನು ನೋಡಿ, "ಎಲೈ ಬ್ರಹ್ಮಜ್ಞಾನಿಯೇ! ಈಗ್ಗೆಲೀಶ್ರೇಷ್ಠವಾದ

ಸಂಸ್ಪೃಶಾಮೀಹ ಪಾಣಿನಾ || ಯತ್ನವಾಂಶ್ಚ ಭವಿಷ್ಯಾಮಿ ತೋಲನೇ ಪೂರಣೇಪಿವಾ || ೧೪ || ಬಾಢಮಿತ್ಯೇವತಂ ರಾಜಾ ಮುನಿಶ್ಚ ಸಮಭಾಷತ || ಲೀಲಯಾ ಸ ಧನುರ್ಮಧ್ಯೇ ಜಗ್ರಾಹ ವಚನಾನ್ಮುನೇಃ || ೧೫ || ಪಶ್ಯತಾಂ ನೃಸಹಸ್ರಾಣಾಂ ಬಹೂನಾಂ ರಘುನಂದನಃ || ( ಆರೋಪಯತ್ಸಧರ್ಮಾತ್ಮಾ ಸಲೀಲ ಮಿವ ತದ್ಧನುಃ) ಆರೋಪಯಿತ್ವಾ ಧರ್ಮಾತ್ಮಾ ಪೂರಯಾಮಾಸ ತದ್ಧನುಃ || ೧೬ || ತದ್ಬಭಂಜ ಧನುರ್ಮಧ್ಯೇ ನರಶ್ರೇಷ್ಠೋ ಮಹಾಯಶಾಃ || ತಸ್ಯ

---

ವಿಶ್ವಾಮಿತ್ರನ, ವಚನಾತ್ - ಮಾತಿನಿಂದ, ರಾಮಃ - ಶ್ರೀರಾಮನು, ಯತ್ರ - ಯಾವ ಸ್ಥಳದಲ್ಲಿ, ತದ್ಧನುಃ - ಆ ಧನುಸ್ಸು, ತಿಷ್ಠತಿ - ಇರುವುದೋ, ತಾಂಮಂಜೂಷಾಂ - ಆ ಪೆಟ್ಟಿಗೆಯನ್ನು, ಅಪಾವೃತ್ಯ - ತೆರೆದು, ಧನುಃ - ಧನುಸ್ಸನ್ನು, ದೃಷ್ಟ್ವಾ - ಕಂಡು, ಅಥ - ಬಳಿಕ, ಅಬ್ರವೀತ್ - ನುಡಿದನು. || ೧೩ || ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ಇದಂಧನುರ್ವರಂ - ಈ ಶ್ರೇಷ್ಠವಾದ ಧನುಸ್ಸನ್ನು, ಇಹ - ಈಗ, ಪಾಣಿನಾ - ಹಸ್ತದಿಂದ, ಸಂಸ್ಪೃಶಾಮಿ - ಸ್ಪರ್ಶಮಾಡುತ್ತೇನೆ, ತೋಲನೇ - ಹಸ್ತದಿಂದ ಕದಲಿಸುವ ವಿಷಯದಲ್ಲಿಯೂ, ಪೂರಣೇಪಿವಾ - ಧನುಸ್ಸನ್ನು ಬಗ್ಗಿಸುವ ವಿಷಯದಲ್ಲಿಯೂ, ಯತ್ನವಾಂಶ್ಚ - ಪ್ರಯತ್ನವಂತನು, ಭವಿಷ್ಯಾಮಿ - ಆಗುವೆನು. || ೧೪ || ರಾಜಾ - ಅರಸಾದ ಜನಕರಾಯನು, ಮುನಿಶ್ಚ - ವಿಶ್ವಾಮಿತ್ರಮುನಿಯೂ, ಬಾಢಮಿತ್ಯೇವ - ಹಾಗೆಯೇ ಆಗಲೆಂದು, ತಂ - ಆ ಶ್ರೀರಾಮನನ್ನು ಕುರಿತು, ಸಮಭಾಷತ - ಮಾತನಾಡಿದನು, ಸರಘುನಂದನಃ - ಆ ಶ್ರೀರಾಮನು, ಮುನೇಃ-ವಿಶ್ವಾಮಿತ್ರನ, ವಚನಾತ್-ಮಾತಿನಿಂದ, ಬಹೂನಾಂ-ಅನೇಕರಾದ, ನೃಸಹಸ್ರಾಣಾಂ - ಸಹಸ್ರ ಜನರು, ಪಶ್ಯತಾಂ - ನೋಡುತ್ತಿರಲು, ಲೀಲಯಾ - ಪ್ರಯತ್ನವಿಲ್ಲದೆಯೇ, ಧನುಃ - ಧನುಸ್ಸನ್ನು, ಮಧ್ಯೇ - ಮಧ್ಯಪ್ರದೇಶದಲ್ಲಿ, ಜಗ್ರಾಹ - ಹಿಡಿದುಕೊಂಡನು. || ೧೫ || ಧರ್ಮಾತ್ಮಾ - ಧರ್ಮಿಷ್ಠನಾದ, ಮಹಾಯಶಾಃ - ಮಹಾ ಕೀರ್ತಿವಂತನಾದ, ನರಶ್ರೇಷ್ಠಃ - ಮನುಜಶ್ರೇಷ್ಠನಾದ ಶ್ರೀರಾಮನು, ಆರೋಪಯಿತ್ವಾ-ಹೆದೆಯನ್ನು ಬಿಗಿಸಿ, ತದ್ಧನುಃ - ಆ ಧನುಸ್ಸನ್ನು, ಪೂರಯಾಮಾಸ - ಬಗ್ಗಿಸಿದನು, ತದ್ಧನುಃ - ಆ ಧನುಸ್ಸನ್ನು, ಮಧ್ಯೇ - ಮಧ್ಯಭಾಗದಲ್ಲಿ, ಬಭಂಜ - ಮುರಿದನು || ೧೬ || ತಸ್ಯ - ಆ ಧನುಸ್ಸಿನ, ನಿರ್ಘಾತಸಮಃ ಸ್ವನಃ -ಟಂಕಾರದಿಂದ ಹುಟ್ಟಿದ ಶಬ್ದವು, ದೀರ್ಘತ-ಸೀಳಿಹೋಗುತ್ತಿರುವ, ಪರ್ವತಸ್ಯೇವ-

---

ಧನುಸ್ಸನ್ನು ಕೈಯಿಂದ ಮುಟ್ಟಿ, ಎತ್ತುವುದಕ್ಕೂ ಆರೋಪಣ ಮಾಡುವುದಕ್ಕೂ ಪ್ರಯತ್ನಪಡುತ್ತೇನೆ” ಎಂದನು. ಇಂತೆನಲು ವಿಶ್ವಾಮಿತ್ರನೂ ಜನಕರಾಯನೂ “ಆಗಬಹುದು” ಎಂದು ನುಡಿದರು. ಆಗಲಾ ರಾಮಚಂದ್ರನು ವಿಶ್ವಾಮಿತ್ರನ ವಚನಾನುಸಾರವಾಗಿ, ಆ ಧನುಸ್ಸಿನ ಮಧ್ಯವನ್ನು ಹಿಡಿದು ಬಹು ಸುಲಭವಾಗಿ ಆರೋಪಣ ಮಾಡಿದನು. ಇಂತು ಧನುರಾರೋಪಣೆಯುಂಗೈದು ಕಿವಿವರೆವಿಗೆ ಸೆಳೆದ ನರಶ್ರೇಷ್ಠನಾದ ರಾಮಚಂದ್ರನು ಆ ಧನುಶ್ಶ್ರೇಷ್ಠವನ್ನು ಮಧ್ಯದಲ್ಲಿ ಮುರಿದು ಹಾಕಿದನು. ಆಗಲಾ ಧನುರ್ಭಂಗದ ಶಬ್ದವು ಸಿಡಿಲಿನ ಧ್ವನಿಯಂತೆ ಅದ್ಭುತವಾಯಿತು. ಸೀಳಿ ಹೋಗುತ್ತಿರುವ ಪರ್ವತದಂತೆ ಭೂಕಂಪವು ಸಹ ಆಯಿತು. ವಿಶ್ವಾಮಿತ್ರನನ್ನೂ, ಜನಕರಾಯನನ್ನೂ, ರಾಮ

ಶಬ್ದೋ ಮಹಾನಾಸೀ ನ್ನಿರ್ಘಾತ ಸಮನಿಸ್ವನಃ || ೧೭ || ಭೂಮಿಕಂಪಶ್ಚ ಸು
ಮಹಾನ್ ಪರ್ವತಸ್ಯೇವ ದೀರ್ಯತಃ || ನಿಪೇತುಶ್ಚ ನರಾಸ್ಸರ್ವೇ ತೇನ ಶಬ್ದೇನ
ಮೋಹಿತಾಃ ||೧೮|| ವರ್ಜಯಿತ್ವಾ ಮುನಿವರಂ ರಾಜಾನಂ ತೌಚ ರಾಘವೌ ||
ಪ್ರತ್ಯಾಶ್ವಸ್ತೇ ಜನೇ ತಸ್ಮಿನ್ ರಾಜಾ ವಿಗತ ಸಾಧ್ವಸಃ ||೧೯|| ಉವಾಚ ಪ್ರಾಂಜಲಿ
ರ್ವಾಕ್ಯಂ ವಾಕ್ಯಜ್ಞೋ ಮುನಿಪುಂಗವಂ||ಭಗವನ್ ದೃಷ್ಟ ವೀರ್ಯೋಮೇರಾಮೋ
ದಶರಥಾತ್ಮಜಃ || ೨೦ || ಅತ್ಯದ್ಭುತಮಚಿಂತ್ಯಂಚ ನತರ್ಕಿತಮಿದಂ ಮಯಾ ||

ಪರ್ವತದಂತೆ, ಸುಮಹಾನ್ - ಬಹಳವಾದ, ಭೂಮಿಕಂಪಶ್ಚ - ಭೂಕಂಪವೂ, ಆಸೀತ್ - ಆಯಿತು. || ೧೭ || ತೇನಶಬ್ದೇನ - ಆ ಶಬ್ದದಿಂದ, ಮೋಹಿತಾಃ - ಮೋಹಿಸಲ್ಪಟ್ಟ, ನರಾಃ - ಮನುಷ್ಯರು, ಮುನಿವರಂ - ವಿಶ್ವಾಮಿತ್ರನನ್ನು, ರಾಜಾನಂ - ಜನಕರಾಯನನ್ನು, ತೌರಾಘವೌಚ - ಆ ರಾಮ ಲಕ್ಷ್ಮಣರನ್ನೂ, ವರ್ಜಯಿತ್ವಾ - ಬಿಟ್ಟು, ಸರ್ವೇ - ಸಮಸ್ತರೂ, ನಿಪೇತುಃ - ಮೂರ್ಛಿತರಾಗಿ ಬಿದ್ದರು. || ೧೮ || ತಸ್ಮಿನ್‌ಜನೇ - ಆ ಜನವು, ಪ್ರತ್ಯಾಶ್ವಸ್ತೇಸತಿ - ಸಮಾಧಾನಗೊಳಿಸಲ್ಪಡಲು, ವಿಗತಸಾಧ್ವಸಃ - ಕಳೆದು ಹೋದ ಭಯವುಳ್ಳವನಾಗಿ, ವಾಕ್ಯಜ್ಞಃ - ಶಬ್ದಾರ್ಥಜ್ಞರಾದ, ರಾಜಾ- ಜನಕರಾಯನು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಮುನಿಪುಂಗವಂ - ಋಷಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಕುರಿತು, ವಾಕ್ಯಂ-ಈ ನುಡಿಯನ್ನು, ಉವಾಚ ಹೇಳಿದನು. || ೧೯ || ಹೇಭಗವನ್- ಎಲೈ ಪೂಜ್ಯನೇ, ದಶರಥಾತ್ಮಜಃ - ದಶರಥ - ಪುತ್ರನಾದ, ರಾಮಃ - ಶ್ರೀರಾಮನು, ಮೇ - ನನ್ನಿಂದ, ದೃಷ್ಟವೀರ್ಯಃ - ಕಾಣಲ್ಪಟ್ಟ ಪರಾಕ್ರಮವುಳ್ಳವನಾದನು, ಅತ್ಯದ್ಭುತಂ - ಅತ್ಯಾಶ್ಚರ್ಯಕರವಾದ, ಅಚಿಂತ್ಯಂ - ಆಲೋಚಿಸಲಸದಳವಾದ, ಇದಂ-ಈ ಧನುರಾರೋಪಣವು, ಮಯಾ- ನನ್ನಿಂದ, ನತರ್ಕಿತಂ - ಊಹಿಸಲ್ಪಡಲಿಲ್ಲ. || ೨೦ || (೧) ಮೇ - ನನ್ನ, ಸುತಾ-ಕುವರಿಯಾದ,

ಲಕ್ಷ್ಮಣನರನ್ನೂ ಉಳಿದು ಅಲ್ಲಿ ನೆರದಿದ್ದ ಜನರೆಲ್ಲರೂ ಈ ಧನುರ್ಭಂಗಧ್ವನಿಯಿಂದ ಮೂರ್ಛಿತರಾಗಿ ಬಿದ್ದರು. ಇಂತು ಮೂರ್ಛಿತರಾದ ಜನರೆಲ್ಲರೂ ಆಶ್ವಾಸಿತರಾಗಲು, "ರಾಮನೆಲ್ಲಿ ಅಳಿಯನಾಗುವುದಿಲ್ಲವೊ" ಎಂಬ ಭಯವನ್ನು ಕಳೆದುಕೊಂಡ ಜನಕರಾಯನು, ಅಂಜಲಿ ಬದ್ಧನಾಗಿ, ವಿಶ್ವಾಮಿತ್ರಮುನಿಯನ್ನು ಕುರಿತು, "ಪೂಜ್ಯನೇ ! ದಶರಥನಂದನನಾದ ರಾಮಚಂದ್ರನು ನೋಡಲ್ಪಟ್ಟ ಪರಾಕ್ರಮವುಳ್ಳವನಾದನು. ಈತನ ಪರಾಕ್ರಮವು ಅತ್ಯದ್ಭುತವಾದುದೂ, ಅಚಿಂತ್ಯವಾದುದೂ ಆಗಿರುವುದು. ಬಾಲಕನಾದೀತನ ವೀರ್ಯವಿಷ್ಟರದೆಂದು ನಾನು ತರ್ಕಿಸಿರಲಿಲ್ಲವು. || ೧೯-೨೦ || ಎಲೈ ಮುನಿಪುಂಗವನೆ !

ಟಿ. (೧) "ಮೇಸುತಾ ಸೀತಾದಶರಥಾತ್ಮಜಂ ರಾಮಂ ಭರ್ತಾರಮಾಸಾದ್ಯ ಜನಕಾನಾಂಕುಲೇಕೀರ್ತಿಮಾಹರಿಷ್ಯತಿ" ಎಂಬ ಜನಕರಾಜನ ಮಾತಿನಲ್ಲಿ ಗೋವಿಂದರಾಜೀಯ ವ್ಯಾಖ್ಯಾನಕಾರರು ಲೋಕರೂಢಿಕವಾದ ಅರ್ಥವನ್ನು ಬಹು ಸ್ವಾರಸ್ಯವಾಗಿ ಒಕ್ಕಣಿಸಿರುವರು.

"ಅಸಂತಂಬತಮೇವಿತ್ತಂ ಯಸ್ಯಮೇನಾಸ್ತಿ ಕಿಂಚನ |ಮಿಥಿಲಾಯಾಂ ಪ್ರದೀಪ್ತಾಯಾಂನಮೇಕಿಂಚಿತ್ಪ್ರದಹ್ಯತೇ||" ಎಂಬುದಾಗಿ ತಮ್ಮ ವೈಭವವನ್ನು ಹೇಳಿಕೊಂಡಿರುವ ದಿಗಂತ ವಿಶ್ರಾಂತ ಕೀರ್ತಿಸಂಪನ್ನರಾದ ಜನಕರಾಯರ ಕುಲಕ್ಕೂ ಕೀರ್ತಿಯನ್ನು ತರುತ್ತಾಳೆಂಬುವದು ತಾತ್ಪರ್ಯವು.

'ಆಹರಿಷ್ಯತೀತ್ಯುಕ್ತೇ ಸದ್ಯಃ ಪ್ರಾಪಯಿಷ್ಯತೀತ್ಯರ್ಥಃ" ಈಗಲೇ ಕೀರ್ತಿಯನ್ನು ಹೊಂದಿಸುವಳೆಂದರ್ಥ, ಹೀಗೆ ಹೇಳಿ

ಜನಕಾನಾಂ ಕುಲೇ ಕೀರ್ತಿಮಾಹರಿಷ್ಯತಿ ಮೇ ಸುತಾ ||೨೧|| ಸೀತಾ ಭರ್ತಾರಮಾಸಾದ್ಯ ರಾಮಂ ದಶರಥಾತ್ಮಜಂ ||ಮಮ ಸತ್ಯಾ ಪ್ರತಿಜ್ಞಾ ಚ ವೀರ್ಯಶುಲ್ಕೇತಿ ಕೌಶಿಕ || ೨೨ || ಸೀತಾ ಪ್ರಾಣೈರ್ಬಹುಮತಾ ದೇಯಾ ರಾಮಾಯ ಮೇ ಸುತಾ || ಭವತೋನುಮತೇ ಬ್ರಹ್ಮನ್ ಶೀಘ್ರಂ ಗಚ್ಛಂತು ಮಂತ್ರಿಣಃ || ೨೩ ||

ಸೀತಾ - ಸೀತಾದೇವಿಯು, ದಶರಥಾತ್ಮಜಂ - ದಶರಥಪುತ್ರನಾದ, ರಾಮಂ - ಶ್ರೀರಾಮನನ್ನು, ಭರ್ತಾರಂ - ಗಂಡನನ್ನಾಗಿ, ಆಸಾದ್ಯ - ಹೊಂದಿ, ಜನಕಾನಾಂ - ಜನಕವಂಶಸ್ಥ ರಾಜರ, ಕುಲೇ- ವಂಶದಲ್ಲಿ, ಕೀರ್ತಿಂ - ಯಶಸ್ಸನ್ನು, ಆಹರಿಷ್ಯತಿ - ತರುವಳು. ‖ ೨೧ ‖ ಹೇಕೌಶಿಕ - ಎಲೈ ವಿಶ್ವಾಮಿತ್ರನೇ, ಮಮ - ನನ್ನ, ವೀರ್ಯಶುಲ್ಕೇತಿ - ಧನುರಾರೋಪಣ ಶಕ್ತಿಯೇ ಮೌಲ್ಯದ್ರವ್ಯವಾಗುಳ್ಳವಳೆಂಬ, ಪ್ರತಿಜ್ಞಾ ಚ - ಪ್ರತಿಜ್ಞೆಯೂ, ಸತ್ಯಾ - ಸಫಲವಾಯಿತು, ಪ್ರಾಣೈಃ - ಪ್ರಾಣಗಳಿಗಿಂತಲೂ, ಬಹುಮತಾ - ಬಹು ಇಷ್ಟವಾದ, ಮೇ - ನನಗೆ, ಸುತಾ - ಕುವರಿಯಾದ, ಸೀತಾ - ಸೀತಾದೇವಿಯು, ರಾಮಾಯ - ಶ್ರೀರಾಮನಿಗೆ, ದೇಯಾ - ಕೊಡತಕ್ಕವಳು. ‖ ೨೨ ‖ ಹೇಕೌಶಿಕ - ಎಲೈ ವಿಶ್ವಾಮಿತ್ರನೇ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ಭವತಃ - ನಿನ್ನ, ಅನುಮತೇಸತಿ - ಸಮ್ಮತವಾದರೆ, ತೇ - ನಿನಗೆ, ಭದ್ರಂ - ಕಲ್ಯಾಣವು, ಅಸ್ತು - ಆಗಲಿ, ಮಮ-ನನ್ನ, ಮಂತ್ರಿಣಃ - ಮಂತ್ರಿಗಳು, ತ್ವರಿತಾಃ - ತ್ವರೆಯುಳ್ಳವರಾಗಿ, ರಥೈಃ -ರಥಗಳಿಂದ, ಅಯೋಧ್ಯಾಂ- ಅಯೋಧ್ಯಾಪಟ್ಟಣವನ್ನು ಕುರಿತು, ಶೀಘ್ರಂ - ಜಾಗ್ರತೆಯಾಗಿ, ಗಚ್ಛಂತು - ಹೋಗಲಿ ‖ ೨೩ ‖ ವೀರ್ಯಶುಲ್ಕಾಯಾಃ - ವೀರ್ಯವೇ ಮೂಲದ್ರವ್ಯವಾಗುಳ್ಳ ಸೀತಾದೇವಿಯ, ಪ್ರದಾನಾಂ - ಕನ್ಯಾ

ನನ್ನ ಕುವರಿಯಾದ ಸೀತೆಯು ದಶರಥನಂದನನಾದಶ್ರೀರಾಮಚಂದ್ರನನ್ನು ಪತಿಯನ್ನಾಗಿ ಹೊಂದಿ ಜನಕರಾಯರ ಕುಲಕ್ಕೆ ಕೀರ್ತಿಯನ್ನು ತರುವಳಲ್ಲದೆ, "ವೀರ್ಯಶುಲ್ಕಾ" ಎಂಬ ನನ್ನ ಸತ್ಯಪ್ರತಿಜ್ಞೆಯನ್ನೂ ನೆರವೇರಿಸುತ್ತಾಳೆ. ಪ್ರಾಣಗಳಿಗಿಂತಲೂ ಅಧಿಕಳೂ, ನನ್ನ ಕುವರಿಯೂ ಆದ ಸೀತಾದೇವಿಯು ರಾಮಚಂದ್ರನಿಗೆ ಕೊಡಲರ್ಹಳು. "ಎಲೈ ಬ್ರಹ್ಮಜ್ಞಾನಿಯೇ ! ನಿನ್ನ ಅನುಮತಿಯಿಂದ ನನ್ನ ಮಂತ್ರಿಗಳು ರಥಗಳೊಡನೆ ಬೇಗನೆ ಅಯೋಧ್ಯೆಗೆ ತೆರಳಲಿ, ದಶರಥರಾಯನನ್ನು ವಿನಯವಚನ ರಚನೆಯಿಂದ ಸಂತೈಸಿ ನನ್ನ

ರುವದೇಕೆಂದರೆ, ಮಗನಾದರೆ ಸ್ವಾರ್ಜಿತವಾದ ಕೀರ್ತಿಯನ್ನೇ ಹೊಂದಿಸುತ್ತಾನೆ. ಈ ನನ್ನ ಮಗಳಾದರೋ ನನ್ನ ಕುಲಕ್ಕೂ ಸಂಬಂಧವನ್ನು ಮಾಡಿದ ಕುಲಕ್ಕೂ (ಅಯೋನಿಜಳಾದುದರಿಂದ) ಅಪಾರವಾದ ಕೀರ್ತಿಯನ್ನು ತರುತ್ತಾಳೆ. ಇದಲ್ಲದೆ ಮಗನು ಸ್ವಕುಲಕ್ಕೆ ಮಾತ್ರ ಕೀರ್ತಿಯನ್ನುಂಟುಮಾಡುತ್ತಾನೆ ಕುವರಿಯಾದರೋ "ಕುಲಂತಾರಯತೇ ತಾತ ಸಪ್ತ ಸಪ್ತ ಚ ಸಪ್ತ ಚ" ಎಂಬಂತೆ ಇರ್ಕಡೆಗಳಲ್ಲಿಯೂ ಕೀರ್ತಿಯನ್ನು ತರುತ್ತಾಳೆ. "ಭರಣದಕ್ಷಂ ಭರ್ತಾರಮಾಸಾದ್ಯ" ಎಂಬುದರಿಂದ "ವಿತ್ತಮಿಚ್ಛಂತಿಮಾತರಃ" ಎಂಬ ಹಾಗೆ ತಾಯಿಯು ಒಪ್ಪುವಂತಹ "ಐಶ್ವರ್ಯವಂತನಾದ ಗಂಡನನ್ನು ಹೊಂದಿ" ಎಂದರ್ಥವಾಗುವದು. "ರೂಪವಂತಂ ದಶರಥಾತ್ಮಜಂ" ಎಂಬುವದರಿಂದ (ರೂಪವಂತಂ ಎಂದು ಹೇಳಿರುವದು ಹಿಂದೆ ಚಿತ್ತರಿಸಿರುವ ರಾಮಚಂದ್ರನ ಸ್ವರೂಪವರ್ಣನದಿಂದ) "ಕನ್ಯಾವರಯತೇರೂಪಂ" ಎಂಬುದಕ್ಕೆ ತಕ್ಕಂತೆ "ರೂಪವರಿತನಾದ ಗಂಡನನ್ನು ಹೊಂದಿ" ಎಂದರ್ಥವು. "ಬಾಂಧವಾಃ ಕುಲಮಿಚ್ಛಂತಿ" ಇತ್ಯುಕ್ತರೀತ್ಯಾ "ಸತ್ಕುಲ ಪ್ರಸೂತನಾದ ಪತಿಯನ್ನು ಹೊಂದಿ" ಎಂಬರ್ಥವು ವಾಚಕರಿಂದ ಗ್ರಹಿಸಲ್ಪಡತಕ್ಕುದು.

ಮಮ ಕೌಶಿಕ ಭದ್ರಂ ತೇ ಅಯೋಧ್ಯಾಂ ತ್ವರಿತಾ ರಥೈಃ || ರಾಜಾನಂ ಪ್ರಶ್ರಿತೈಃ ರ್ವಾಕ್ಯೈಃ ರಾನಯಂತು ಪುರಂ ಮಮ ||೨೪|| ಪ್ರದಾನಂ ವೀರ್ಯ ಶುಲ್ಕಾಯಾಃ ಕಥಯಂತು ಚ ಸರ್ವಶಃ||ಮುನಿ ಗುಪ್ತೌಚ ಕಾಕುತ್ ಸ್ಥೌ ಕಥಯಂತು ನೃಪಾಯವೈ || ೨೫ || ಪ್ರೀಣ ಮಾನಂತು ರಾಜಾನ ಮಾನಯಂತು ಸು ಶೀಘ್ರಗಾಃ || ಕೌಶಿಕಶ್ಚ ತಥೇತ್ಯಾಹ ರಾಜಾ ಚಾಭಾಷ್ಯಮಂತ್ರಿಣಃ || ೨೬ || ಅಯೋಧ್ಯಾಂಪ್ರೇಷಯಾಮಾಸ ಧರ್ಮಾತ್ಮಾ ಕೃತ ಶಾಸನಾತ್ || ಯಥಾ ವೃತ್ತಂ ಸಮಾಖ್ಯಾತು ಮಾನೇತುಂಚ ನೃಪಂ ತದಾ ||೨೭||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಷಷ್ಟಿತಮಸ್ಸರ್ಗಃ.

---

ನನ್ನು, ಪ್ರಶ್ರಿತೈಃ - ನಮ್ರಭಾವಯುಕ್ತಗಳಾದ, ವಾಕ್ಯೈಃ – ಮಾತುಗಳಿಂದ, ಮಮ - ನನ್ನ, ಪುರಂ – ಪಟ್ಟಣವನ್ನು ಕುರಿತು, ಆನಯಂತು– ಕರದುಕೊಂಡು ಬರಲಿ. || ೨೪ || ವೀರ್ಯಶುಲ್ಕಾಯಾಃ-ಧನುರಾರೋಪಣವೇ ಕನ್ಯಾಶುಲ್ಕವಾಗುಳ್ಳ ನನ್ನ ಮಗಳ, ಪ್ರದಾನಂ-ಕನ್ಯಾದಾನವೇ ಮೊದಲಾದ, ಸರ್ವಶಃ-ಎಲ್ಲ ವೃತ್ತಾಂತವನ್ನೂ, ನೃಪಾಯವೈ - ದಶರಥರಾಜನಿಗೆ, ಕಥಯಂತು - ಹೇಳಲಿ,ಕಾಕುತ್ಸ್ಥೌ-ಶ್ರೀರಾಮಲಕ್ಷ್ಮಣರಿಬ್ಬರನ್ನೂ,ಮುನಿಗುಪ್ತೌ-ವಿಶ್ವಾಮಿತ್ರರಿಂದ ಸಂರಕ್ಷಿತರಾದವರನ್ನಾಗಿ,ನೃಪಾಯ-ದಶರಥರಾಜನಿಗ ಕಥಯಂತು-ಹೇಳಲಿ.||೨೫|| ಪ್ರೀಣಮಾನಂ-ಸಂತೋಷಿಸುವ, ರಾಜಾನಂ-ದಶರಥರಾಯನನ್ನು, ಸುಶೀಘ್ರಗಾಃ-ಶೀಘ್ರಗಾಮಿಗಳಾದ ನನ್ನ ಮಂತ್ರಿಗಳು,ಆನಯಂತು-ಕರೆದುಕೊಂಡು ಬರಲಿ. ಕೌಶಿಕಶ್ಚ - ವಿಶ್ವಾಮಿತ್ರನೂ, ತಥೇತಿ - ಹಾಗೆಯೇ ಆಗಲೆಂದು, ಆಹ - ಹೇಳಿದನು, ಧರ್ಮಾತ್ಮಾ - ಧರ್ಮಿಷ್ಠನಾದ, ರಾಜಾಚ - ಅರಸೂ ಕೂಡ, ಕೃತಶಾಸನಾತ್ - ಆಜ್ಞಾಬದ್ಧರಾದ, ಮಂತ್ರಿಣಃ - ಮಂತ್ರಿಗಳನ್ನು, ಆಭಾಷ್ಯ - ಕರೆದು, ಯಥಾವೃತ್ತಂ - ನಡೆದ ವೃತ್ತಾಂತವನ್ನು, ಸಮಾಖ್ಯಾತುಂ - ಹೇಳುವುದಕ್ಕೋಸ್ಕರ, ನೃಪಂಚ - ದಶರಥ ರಾಯನನ್ನು, ತದಾ - ಆಗಲೇ, ಆನೇತುಂಚ-ಕರೆದುಕೊಂಡು ಬರುವುದಕ್ಕೋಸ್ಕರವೂ, ಅಯೋಧ್ಯಾಂ-ಅಯೋಧ್ಯಾ ಪಟ್ಟಣವನ್ನು ಕುರಿತು, ಪ್ರೇಷಯಾಮಾಸ - ಕಳುಹಿದನು. || ೨೬-೨೭ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಷಷ್ಟಿತಮಸ್ಸರ್ಗಃ.

---

ಪಟ್ಟಣಕ್ಕೆ ಕರೆತರುವವರಾಗಲಿ, ಧನುರಾರೋಪಣವೇ ಕನ್ಯಾಶುಲ್ಕವಾದ ನನ್ನ ಮಗಳ ಎಲ್ಲ ವೃತ್ತಾಂತವನ್ನೂ ದಶರಥರಾಯನಗರುಹಲಿ. ವಿಶ್ವಾಮಿತ್ರಮುನಿಯ ಸಂರಕ್ಷಣೆಯಲ್ಲಿರುವರಾಮ ಲಕ್ಷ್ಮಣರ ವೃತ್ತಾಂತವನ್ನೂ ಆ ರಾಯನಿಗೆ ತಿಳಿಸಿ,ಇದನ್ನುಕೇಳಿ ಆನಂದಿಸುವ ದಶರಥರಾಜನನ್ನು ಬಹುಬೇಗನೆ ಕರೆದುಕೊಂಡು ಬರಲಿ.” ಎಂದನು. ಜನಕ ಮಹೀಪಾಲನಿಂತು ನುಡಿಯಲು ವಿಶ್ವಾಮಿತ್ರಮುನಿಯು ಹಾಗೆಯೇ ಆಗಲೆಂದು ಹೇಳಿದನು. ಆಗಲಾ ಧರ್ಮಿಷ್ಠನಾದ ಜನಕರಾಯನು ಮಂತ್ರಿಗಳಿಗೀವಿಷಯನ್ನಾಜ್ಞಾಪಿಸಿ, ನಡೆದ ಸಮಾಚಾರವನ್ನು ದಶರಥರಾಜನಿಗೆ ಬಿನ್ನವಿಸುವುದಕ್ಕೂ ಆತನನ್ನು ಕರೆತರುವುದಕ್ಕೂ ಆಜ್ಞಾಪಿಸಿದವನಾದನು.

ಇಂತಿದು ಶ್ರೀರಾಮಚಂದ್ರಕೃತ ಶೈವಧನುರ್ಭಂಗ ಕಥಾ ಕಥನವೆಂಬ

ಅರವತ್ತೇಳನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಅಷ್ಟಷಷ್ಟಿತಮಸ್ಸರ್ಗಃ.

ಜನಕೇನ ಸಮಾದಿಷ್ಟಾ ದೂತಾ ಸ್ತೇ ಕ್ಲಾಂತ ವಾಹನಾಃ || ತ್ರಿರಾತ್ರ ಮುಷಿತಾ ಮಾರ್ಗೇ ತೇ ಯೋಧ್ಯಾಂ ಪ್ರಾವಿಶನ್ ಪುರೀಂ ||೧|| (೧)(ರಾಜ್ಞೋ ಭವನ ಮಾಸಾದ್ಯ ದ್ವಾರಸ್ಥಾನಿದಮಬ್ರುವನ್ || ಶೀಘ್ರಂ ನಿವೇದ್ಯತಾಂ ರಾಜ್ಞೇ ದೂತಾನ್ನೋಜನ ಕಸ್ಯಚ || ಇತ್ಯುಕ್ತಾ ದ್ವಾರ ಪಾಲಾಸ್ತೇ ರಾಘವಾಯ ನ್ಯವೇದಯನ್) ತೇ ರಾಜ ವಚನಾ ದ್ದೂತಾ ರಾಜವೇಶ್ಮ ಪ್ರವೇಶಿತಾಃ || ದದೃಶುರ್ದೇವಸಂಕಾಶಂ ವೃದ್ಧಂ ಧಶರಥಂ ನೃಪಂ ||೨|| ಬದ್ಧಾಂಜಲಿ ಪುಟಾಸ್ಸರ್ವೇ ದೂತಾವಿಗತ ಸಾಧ್ವಸಾಃ || ರಾಜಾನಂ ಪ್ರಯತಾ ವಾಕ್ಯಮ ಬ್ರುವನ್ ಮಧುರಾ

---

ಜನಕೇನ - ಜನಕರಾಜನಿಂದ, ಸಮಾದಿಷ್ಟಾಃ - ಆಜ್ಞಪ್ತರಾದ, ತೇದೂತಾಃ-ಆ ದೂತರು, ಕ್ಲಾಂತವಾಹನಾಃ - ಬಳಲಿದ ವಾಹನಗಳುಳ್ಳವರಾಗಿ, ಮಾರ್ಗೇ-ದಾರಿಯಲ್ಲಿ, ತ್ರಿರಾತ್ರಂ-ಮೂರು ರಾತ್ರಿಗಳಲ್ಲಿ, ಉಷಿತಾಃ - ತಂಗಿದವರಾಗಿ, ತೇ - ಆ ದೂತರು, ಆಯೋಧ್ಯಾಂಪುರೀಂ-ಅಯೋಧ್ಯಾ ಪಟ್ಟಣವನ್ನು, ಪ್ರಾವಿಶನ್ - ಹೊಕ್ಕರು. ||೧|| ತೇದೂತಾಃ - ಆ ದೂತರು, ರಾಜವಚನಾತ್- ರಾಜಾಜ್ಞೆಯಿಂದ, ರಾಜವೇಶ್ಮ-ದಶರಥ ರಾಯನರಮನೆಯನ್ನು, ಪ್ರವೇಶಿತಾಃ-ಪ್ರವೇಶಿಸಿ, ದೇವಸಂಕಾಶಂ - ದೇವತಾಸಮಾನನಾದ, ವೃದ್ಧಂ - ವಯಸ್ಕನಾದ, ದಶರಥಂ - ದಶರಥನೆಂಬ, ನೃಪಂ- ಅರಸನನ್ನು, ದದೃಶುಃ - ಕಂಡರು, ||೨|| ಬದ್ಧಾಂಜಲಿಪುಟಾಃ-ಅಂಜಲಿಬದ್ಧರಾಗಿ, ವಿಗತಸಾಧ್ವಸಾಃ- ಕಳೆದುಹೋದ ಭಯವುಳ್ಳವರಾಗಿ, ಪ್ರಯತಾಃ - ಮೈಮರೆಯದಿರುವ, ಸರ್ವೇದೂತಾಃ- ದೂತರೆಲ್ಲರೂ, ರಾಜಾನಂ - ದಶರಥರಾಯನನ್ನು ಕುರಿತು, ಮಧುರಾಕ್ಷರಂ - ಮನೋಹರಾಕ್ಷರ

---

ಈ ರೀತಿ ಜನಕರಾಯನಿಂದ ಆಜ್ಞಾಪಿತರಾದ ದೂತರು ಆಯಸಗೊಂಡ ವಾಹನಗಳುಳ್ಳವರಾಗಿ ದಾರಿಯಲ್ಲಿ ಮೂರು ರಾತ್ರಿಗಳು ತಂಗಿ ಅಯೋಧ್ಯಾಪಟ್ಟವನ್ನು ಪ್ರವೇಶಿಸಿದರು. ಇಂತು ಪ್ರವೇಶಿಸಿ ದಶರಥರಾಯನರಮನೆಯನ್ನು ಸೇರಿ ಅಲ್ಲಿ ದ್ವಾರಪಾಲಕರನ್ನು ಕುರಿತು "ಎಲೈ! ಜನಕರಾಯನಾಣತಿಯಿಂದಿಲ್ಲಿ ಬಂದಿರುವ ದೂತರಾದ ನಮ್ಮನ್ನು ನಿಮ್ಮೊಡೆಯನಿಗರುಹಿರಿ" ಎಂದು ಹೇಳಿದರು. ಜನಕರಾಯನ ದೂತರಿಂತು ನುಡಿಯಲಾದ್ವಾರಪಾಲಕರೀಸಮಾಚಾರವನ್ನು ದಶರಥರಾಯನಿಗರುಹಿದರು. ಆ ಬಳಿಕ ಆ ರಾಯನನುಮತಿಯಿಂದಅರಮನೆಯನ್ನು ಹೊಕ್ಕ ಆ ದೂತರು,ದೇವೋಪಮನೂ,ವೃದ್ಧನೂ ಆದ ದಶರಥರಾಯ

---

(ಟಿ) (೧) ಈ ಕಂಸದಲ್ಲಿರುವ ಶ್ಲೋಕಕ್ಕೆ ಅರ್ಥವನ್ನು ಬರೆಯಬೇಕಾದ ಅವಶ್ಯಕವಿಲ್ಲ ವ್ಯಾಖ್ಯಾನಕಾರರೂ, ಹಿಂದಿನ ಗ್ರಂಥಕರ್ತರೂ ಇದಕ್ಕೆ ಲಕ್ಷ್ಯಕೊಟ್ಟಿಲ್ಲ. ಇದಕ್ಕೆ ಅರ್ಥ ಬರೆಯದಿದ್ದರೂ ಮುಂದಿನ ಶ್ಲೋಕಕ್ಕೆ ಸಂಬಂಧವೇನೂ ಭಿನ್ನವಾಗುವುದಿಲ್ಲ. ಇದರ ತಾತ್ಪರ್ಯವನ್ನು ಮಾತ್ರ ಕೊಟ್ಟಿರುತ್ತೇವೆ.

ಷ್ಕರಂ ॥ ೩॥ ಮೈಥಿಲೋ ಜನಕೋ ರಾಜಾ ಸಾಗ್ನಿಹೋತ್ರ ಪುರಸ್ಕೃತಂ ॥
ಕುಶಲಂ ಚಾವ್ಯಯಂ ಚೈವ ಸೋಪಾಧ್ಯಾಯ ಪುರೋಹಿತಂ ॥ ೪ ॥ ಮುಹು
ರ್ಮುಹು ರ್ಮಧುರಯಾ ಸ್ನೇಹ ಸಂಯುಕ್ತಯಾ ಗಿರಾ ॥ ಜನಕ ಸ್ತ್ವಾಂ ಮ
ಹಾರಾಜ ಪೃಚ್ಛತೇ ಸ ಪುರಸ್ಸರಂ ॥ ೫ ॥ ಪೃಷ್ಟ್ವಾ ಕುಶಲಮವ್ಯಗ್ರಂ ವೈದೇ
ಹೋ ಮಿಥಿಲಾಧಿಪಃ ॥ ಕೌಶಿಕಾನುಮತೇವಾಕ್ಯಂ ಭವಂತಮಿದಮಬ್ರವೀತ್॥
೬॥ ಪೂರ್ವಂ ಪ್ರತಿಜ್ಞಾ ವಿದಿತಾ ವೀರ್ಯಶುಲ್ಕಾ ಮಮಾತ್ಮಜಾ॥ರಾಜಾನಶ್ಚ
ಕೃತಾಮರ್ಷಾ ನಿರ್ವೀರ್ಯಾ ವಿಮುಖೀ ಕೃತಾಃ ॥೭॥ ಸೇಯಂ ಮಮ ಸುತಾ

---

ಗಳುಳ್ಳ, ವಾಕ್ಯಂ - ವಚನವನ್ನು, ಅಬ್ರುವನ್ - ನುಡಿದರು. ॥ ೩ ॥ ಹೇಮಹಾರಾಜ - ಎಲೈ -ಮಹಾರಾಯನೇ, ಮೈಥಿಲಃ - ಮಿಥಿಲಾಧಿ ಪತಿಯಾದ, ಜನಕೋರಾಜಾ - ಜನಕಮಹಾರಾಜನು ಸಾಗ್ನಿಹೋತ್ರಪುರಸ್ಕೃತಂ - ಅಗ್ನಿಹೋತ್ರಗಳಿಂದೊಡಗೂಡಿದವರಿಂದ ಪುರಸ್ಕೃತನಾದ, ಸೋಪಾಧ್ಯಾಯಪುರೋಹಿತಂ - ಉಪಾಧ್ಯಾಯರಿಂದಲೂ ಪುರೋಹಿತರಿಂದಲೂ ಒಡಗೂಡಿದ, ತ್ವಾಂ - ನಿನ್ನನ್ನು ಕುರಿತು. ಮುಹುರ್ಮುಹುಃ - ಬಾರಿಬಾರಿಗೂ, ಅವ್ಯಯಂ-ನಾಶರಹಿತವಾದ, ಕುಶಲಂಚ-ಕ್ಷೇಮವನ್ನು, ಪೃಚ್ಛತೇ - ಕೇಳುವನು. ॥ ೪ ॥ ಸ್ನೇಹಸಂಯುಕ್ತಯಾ - ಸ್ನೇಹದಿಂದ ಕೂಡಿರುವ, ಮಧುರಯಾ - ಮನೋಹರವಾದ, ಗಿರಾ - ಮಾತಿನಿಂದ, ಸಪುರಸ್ಸರಂ - ಸೇವಕರಿಂದೊಡಗೂಡಿದ, ತ್ವಾಂ - ನಿನ್ನನ್ನು, ಕುಶಲಂ - ಕ್ಷೇಮವನ್ನು, ಪೃಚ್ಛತೇ - ಕೇಳಿದನು. ॥ ೫ ॥ ಮಿಥಿಲಾಧಿಪಃ - ಮಿಥಿಲಾಧಿಪತಿಯಾದ, ವೈದೇಹಃ - ಜನಕರಾಯನು, ಅವ್ಯಗ್ರಂ - ತ್ವರೆಯಿಲ್ಲದಿರುವ, ಕುಶಲಂ - ಕ್ಷೇಮವನ್ನು, ಪೃಷ್ಟ್ವಾ - ಕೇಳಿ, ಕೌಶಿಕಾನುಮತೇ - ವಿಶ್ವಾಮಿತ್ರರನುಮತಿಯಿಂದ, ಭವಂತಂ - ನಿನ್ನನ್ನು ಕುರಿತು, ಇದಂ ವಚನಂ - ಈ ಮಾತನ್ನು, ಅಬ್ರವೀತ್-ನುಡಿದನು. ॥ ೬ ॥ ಮಮ - ನನ್ನ, ಆತ್ಮಜಾ-ಕುವರಿಯಾದ ಸೀತೆಯು, ವೀರ್ಯಶುಲ್ಕೇತಿ-ವೀರ್ಯ, ಶುಲ್ಕಳೆಂದು, ಪೂರ್ವಂ - ಮೊದಲೇ, ಪ್ರತಿಜ್ಞಾ - ನನ್ನಿಂದ ಮಾಡಲ್ಪಟ್ಟಿದ್ದ ಪ್ರತಿಜ್ಞೆಯು- ಭವದ್ಭಿಃ - ನಿಮ್ಮಿಂದ, ವಿದಿತಾ - ತಿಳಿಯಲ್ಪಟ್ಟಿರುವುದಷ್ಟೆ, ರಾಜಾನಶ್ಚ-ಅರಸರೂ, ಕೃತಾಮರ್ಷಾಃ- ಮಾಡಲ್ಪಟ್ಟ ಕೋಪವುಳ್ಳವರಾಗಿ, ನಿರ್ವೀರ್ಯಾಃ ಸಾಮರ್ಥ್ಯವಿಲ್ಲದವರಾಗಿ, ವಿಮುಖೀಕೃತಾಃ - ಪರಾಙ್ಮುಖರಾಗಿ ಮಾಡಲ್ಪಟ್ಟರು. ॥ ೭ ॥ ಹೇ ರಾಜನ್-ಎಲೈ ದಶರಥ ರಾಜನೇ!ಸೇಯಂ-ಅಂತಹ

---

ನನ್ನು ಕಂಡು ಬದ್ಧಾಂಜಲಿಪುಟರಾಗಿ, ಮಾರ್ಗಾಯಾಸವನ್ನು ಕಳೆದುಕೊಂಡು ಆತನನ್ನು ಕುರಿತು ಮೃದುಮಧುರವಾದೀನುಡಿಗಳನ್ನಾಡಿದರು. ॥೧-೩॥ ''ಎಲೈ ದಶರಥಮಹಾರಾಜನೆ! ಮಿಥಿಲಾಧಿಪನಾದ ಜನಕರಾಜನು, ಅಗ್ನಿಹೋತ್ರಪುರಸ್ಸರವಾಗಿಯೂ, ಪುರೋಹಿತಸಹಿತನಾಗಿಯೂ ಇರುವ ನಿನ್ನ ಕ್ಷೇಮವನ್ನಡಿಗಡಿಗೂ ಕೇಳಿ, ವಿಶ್ವಾಮಿತ್ರನನುಮತಿಯಂತೆ ನಿನ್ನನ್ನು ಕುರಿತೀರೀತಿ ಹೇಳಿರುವನು. ''ನನ್ನ ಕುವರಿಯಾದ, ಸೀತಾದೇವಿಯು ಧನುರಾರೋಪಣವೆಂಬ ವೀರ್ಯಶುಲ್ಕದ ಫಲರೂಪಳೆಂದು ಹಿಂದೆಯೇ ನನ್ನಿಂದ ಮಾಡಲ್ಪಟ್ಟಿದ್ದ ಪ್ರತಿಜ್ಞೆಯೂ, ಇದಕ್ಕಾಗಿ ಬಹುಮಂದಿರಾಜರು ಬಂದು ಭಗ್ನಮನೋರಥರಾಗಿ ಕೋಪ

ರಾಜರ್ಷ ವಿಶ್ವಾಮಿತ್ರ ಪುರಸ್ಸರೈಃ॥ ಯದೃಚ್ಛಯಾ ಗತೈ ರ್ವೀರೈರ್ನಿರ್ಜಿತಾ ತವ ಪುತ್ರಕೈಃ ॥ ೮ ॥ ತಚ್ಚ ರಾಜರ್ಷ ಧನುರ್ದಿವ್ಯಂ ಮಧ್ಯೇ ಭಗ್ನಂ ಮಹಾತ್ಮನಾ ॥ ರಾಮೇಣಹಿ ಮಹಾರಾಜ ಮಹತ್ಯಾಂ ಜನ ಸಂಸದಿ ॥ ೯ ॥ ಅಸ್ಮೈ ದೇಯಾ ಮಯಾಸೀತಾ ವೀರ್ಯಶುಲ್ಕಾ ಮಹಾತ್ಮನೇ ॥ ಪ್ರತಿಜ್ಞಾಂ ಕರ್ತುಮಿಚ್ಛಾಮಿ ತದನುಜ್ಞಾತುಮರ್ಹಸಿ ॥ ೧೦ ॥ ಸೋಪಾಧ್ಯಾಯೋ ಮಹಾರಾಜಃ ಪುರೋಹಿತ ಪುರಸ್ಸರಃ ॥ ಶೀಘ್ರಮಾಗಚ್ಛ ಭದ್ರಂತೇ ದ್ರಷ್ಟುಮರ್ಹಸಿ ರಾಘವೌ ॥ ೧೧ ॥ ಪ್ರೀತಿಂಚ ಮಮ ರಾಜೇಂದ್ರ ನಿರ್ವರ್ತಯಿತು ಮರ್ಹಸಿ॥

ಈ, ಮಮಸುತಾ - ನನ್ನ ಮಗಳು, ಯದೃಚ್ಛಯಾ - (ಮ) ದೈವಾಧೀನದಿಂದ, ಆಗತೈಃ - ಬಂದಿರುವ, ವೀರೈಃ - ಶೂರನಾದ, ವಿಶ್ವಾಮಿತ್ರಪುರಸ್ಸರೈಃ - ವಿಶ್ವಾಮಿತ್ರ - ವಿಶ್ವಾಮಿತ್ರನೇ, ಪುರಸ್ಸರೈಃ - ಮೊದಲಾಗುಳ್ಳ, ತವ - ನಿನ್ನ, ಪುತ್ರಕೈಃ - ಮಕ್ಕಳಿಂದ, ನಿರ್ಜಿತಾ - ಜಯಿಸಲ್ಪಟ್ಟಳು. ॥ ೮ ॥ ಹೇರಾಜರ್ಷ - ಎಲೈ ದಶರಥ ರಾಜನೇ, ಹೇಮಹಾರಾಜ - ಎಲೈ ಮಹಾರಾಜನೇ, ದಿವ್ಯಂ-ದೇವತಾಸಂಬಂಧಿಯಾದ, ತಚ್ಚಧನುಃ - (ಗೋ) ಯಾವ ರಾಜನಿಂದಲೂ ಕದಲಿಸುವುದಕ್ಕಾಗದೇ ಹೋದ ಆ ಶೈವಧನುಸ್ಸೂ, ಮಹಾತ್ಮನಾ - ಮಹಾನುಭಾವನಾದ, ರಾಮೇಣ - ಶ್ರೀರಾಮನಿಂದ, ಮಹತ್ಯಾಂ - ದೊಡ್ಡದಾದ, ಜನಸಂಸದಿ - ಸಭೆಯಲ್ಲಿ, ಮಧ್ಯೇ - ಮಧ್ಯಭಾಗದಲ್ಲಿ, ಭಗ್ನಂಹಿ - ಮುರಿಯಲ್ಪಟ್ಟಿತಷ್ಟೆ. ॥ ೯ ॥ ಮಯಾ - ನನ್ನಿಂದ, ವೀರ್ಯಶುಲ್ಕಾ - ವೀರ್ಯಶುಲ್ಕಳಾದ, ಸೀತಾ - ಸೀತಾದೇವಿಯು, ಮಹಾತ್ಮನೇ - ಮಹಾನುಭಾವನಾದ, ಅಸ್ಮೈ - ಈ ಶ್ರೀರಾಮನಿಗೆ, ದೇಯಾ - ಕೊಡತಕ್ಕವಳು, ಪ್ರತಿಜ್ಞಾಂ - ಪ್ರತಿಜ್ಞಾರೂಪವಾದ ಕನ್ಯಾದಾನವನ್ನು, ಕರ್ತುಂ - ಮಾಡಲು, ಇಚ್ಛಾಮಿ - ಇಚ್ಛೆಸುತ್ತೇನೆ, ತತ್ - ಅದನ್ನು, ಅನುಜ್ಞಾತುಂ - ಸಮ್ಮತಿಸಲು, ಅರ್ಹಸಿ - ಯೋಗ್ಯನಾಗು, ಹೇ ಮಹಾರಾಜ-ಎಲೈ ಮಹಾ ರಾಜನೇ, ಸೋಪಾಧ್ಯಾಯಃ-ಉಪಾಧ್ಯಾಯರಿಂದೊಡಗೂಡಿ, ಪುರೋಹಿತಪುರಸ್ಸರಃ ಪುರೋಹಿತರೇ ಮೊದಲಾಗುಳ್ಳವನಾಗಿ, ಶೀಘ್ರಂ - ಜಾಗ್ರತೆಯಾಗಿ, ಆಗಚ್ಛ-ಬರುವವನಾಗು, ತೇ-ನಿನಗೆ, ಭದ್ರಂ-ಕಲ್ಯಾಣವು, ಅಸ್ತು-ಆಗಲಿ, ರಾಘವೌ - ರಾಮಲಕ್ಷ್ಮಣರನ್ನು, ದ್ರಷ್ಟುಂ - ನೋಡಲು, ಅರ್ಹಸಿ - ಯೋಗ್ಯನಾಗು. ॥ ೧೧ ॥

ಗೊಂಡು ವಿಮುಖರಾಮದೂ ತಮಗೆ ತಿಳಿದಿರುವುದಷ್ಟೆ ; ಎಲೈ ಮಹಾರಾಜ! ಇಂತಹ ವೀರ್ಯಶುಲ್ಕಳಾದ ನನ್ನ ಕುಮಾರಿಯು, ದೈವಾಧೀನದಿಂದ ವಿಶ್ವಾಮಿತ್ರಮುನಿಯೊಡನೆ ಇಲ್ಲಿ ಬಂದಿರುವವರೂ, ನಿಮ್ಮ ಕುವರರೂ, ವೀರರೂ ಆದ ರಾಮಲಕ್ಷ್ಮಣರಲ್ಲಿ, ಮಹಾತ್ಮನಾದ ರಾಮನಿಂದ ಜಯಿಸಲ್ಪಟ್ಟಳು ಮಹಾತ್ಮನಾದ ಈ ಶ್ರೀರಾಮಚಂದ್ರನು ಆ ಮಹಾ ಸಭೆಯಲ್ಲಿ ಯಾವ ರಾಜರಿಂದಲೂ ಎತ್ತುವುದಕ್ಕು ಸಹ ಆಗದಿರುವ ಶೈವಧನುಸ್ಸನ್ನು ಮಧ್ಯದಲ್ಲಿ ಮುರಿದವನಾದನು. ಆದುದರಿಂದ ವೀರ್ಯಶುಲ್ಕಳಾದ ನನ್ನ ಕುವರಿಯು ಶ್ರೀರಾಮನಿಗೆ ಸಲ್ಲತಕ್ಕವಳು. ಪ್ರತಿಜ್ಞಾ ರೂಪವಾದೀಕನ್ಯಾದಾನವನ್ನು ಮಾಡಲಿಚ್ಛೆಸುವೆನಾದುದರಿಂದ, ನೀವಿದನ್ನಂಗೀಕರಿಸಿ, ಉಪಾಧ್ಯಾಯ ಪುರೋಹಿತ ಸಹಿತರಾಗಿ, ಬೇಗನೆ ಹೊರಟು ನಿಮ್ಮ ಕುವರರನ್ನು ನೋಡಿ, ನನಗೂ ಆ ಬಾಲಕರೀರ್ವರಿಗೂ ಸಂತೋ

ಪುತ್ರಯೋರುಭಯೋರೇವ ಪ್ರೀತಿಂ (೧) ತ್ವಮಪಿ ಲಪ್ಸ್ಯಸೇ ॥ ೧೨ ॥ ಏವಂ ವಿದೇಹಾಧಿಪತಿರ್ಮಧುರಂ ವಾಕ್ಯಮಬ್ರವೀತ್ ॥ ವಿಶ್ವಾಮಿತ್ರಾಭ್ಯನುಜ್ಞಾತ ಶ್ಶತಾನಂದ ಮತೇಸ್ಥಿತಃ (ಇತ್ಯುಕ್ತ್ವಾ ವಿರತಾ ದೂತಾ ರಾಜಗೌರವ ಶಂಕಿತಾಃ)॥ ೧೩ ॥ ದೂತವಾಕ್ಯಂತು ತಚ್ಛ್ರುತ್ವಾ ರಾಜಾ ಪರಮ ಹರ್ಷಿತಃ ॥ ವಸಿಷ್ಠಂ ವಾಮದೇವಂಚ ಮಂತ್ರಿಣೋನ್ಯಾಂಶ್ಚ ಸೋಽಬ್ರವೀತ್ ॥ ೧೪ ॥ ಗುಪ್ತಃ

---

ಹೇರಾಜೇಂದ್ರ - ಎಲೈ ರಾಜಶ್ರೇಷ್ಠನೇ, ಮಮಚ - ನನಗೂ, ಪ್ರೀತಿಂ - ಸಂತೋಷವನ್ನು, ನಿರ್ವರ್ತಯಿತುಂ - ಉಂಟುಮಾಡಲೋಸುಗ, ಅರ್ಹಸಿ - ಯೋಗ್ಯನಾಗು, ತ್ವಮಪಿ - ನೀನೂ, ಉಭಯೋಃಪುತ್ರಯೋರೇವ ಮಕ್ಕಳೀರ್ವರ ವಿಷಯದಲ್ಲಿಯೂ, (ಗೋ) ಉಭಯೋಃ ಪುತ್ರಯೋಃ - ನನ್ನ ಮಗಳೂ ನಿನ್ನ ಮಗನೂ ಇವರಿಬ್ಬರ ವಿಷಯದಲ್ಲಿಯೂ, ಪ್ರೀತಿಂ - ಸಂತೋಷವನ್ನು, ಲಪ್ಸ್ಯಸೇ- ಹೊಂದುವ ॥ ೧೨ ॥ ವಿದೇಹಾಧಿಪತಿಃ - ಜನಕರಾಯನು, ವಿಶ್ವಾಮಿತ್ರಾಭ್ಯನುಜ್ಞಾತಃ - ವಿಶ್ವಾಮಿತ್ರನಿಂದ ಸಮ್ಮತಿಸಲ್ಪಟ್ಟವನಾಗಿ, ಶತಾನಂದಮತೇ - ಶತಾನಂದ ಋಷಿಯ ಅನುಮತಿಯಿಂದ, ಸ್ಥಿತಃ - ಇರುವವನಾಗಿ, ಏವಂ - ಹೀಗೆ, ಮಧುರಂ - ಮನೋಹರವಾದ, ವಚನಂ- ವಾಕ್ಯವನ್ನು, ಅಬ್ರವೀತ್ - ನುಡಿದನು. ॥ ೧೩ ॥ ಸರಾಜಾ - ಆ ದಶರಥ ರಾಯನು, ತತ್ - ಆ, ದೂತವಾಕ್ಯಂಚ - ದೂತರ ಮಾತನ್ನು, ಶ್ರುತ್ವಾ - ಕೇಳಿ, ಪರಮಹರ್ಷಿತಃ - ಬಹಳ ಸಂತೋಷಗೊಂಡವನಾಗಿ, ವಸಿಷ್ಠಂ - ವಸಿಷ್ಠಋಷಿಯನ್ನೂ, ವಾಮದೇವಂಚ - ವಾಮದೇವ ಋಷಿಯನ್ನೂ, ಸ್ವಾನ್ - ಸ್ವಕೀಯರಾದ, ಮಂತ್ರಿಣಃ - ಮಂತ್ರಿಗಳನ್ನೂ ಕುರಿತು, ಅಬ್ರವೀತ್ - ನುಡಿದನು. ॥ ೧೪ ॥ ಕೌಸಲ್ಯಾನಂದವರ್ಧನಃ - ಕೌಸಲ್ಯಾ ದೇವಿಗೆ ಆನಂದಕರನಾದ, ಅಸೌ - ಈ,

---

ಷವನ್ನುಂಟುಮಾಡುವುದಲ್ಲದೆ, ತಾವು ಪರಮಹರ್ಷಿತರಾಗಬೇಕು.'' ಈ ಪ್ರಕಾರವಾಗಿ ಜನಕರಾಯನಿಂದುಕ್ತನಾದ ಮಧುರವಾಕ್ಯಗಳನ್ನು ನುಡಿದ ಆ ದೂತರು ರಾಜಗೌರವ ಭಯದಿಂದ ಬಹಳವಾಗಿ ಮಾತನಾಡದೆ ಸುಮ್ಮನಾದರು. ॥೪-೧೩॥ ಆಗಲಾದಶರಥರಾಯನು ಆ ದೂತರ ವಾಕ್ಯವನ್ನು ಕೇಳಿ ಬಹಳವಾದ ಹರ್ಷವನ್ನು ಹೊಂದಿ,ವಸಿಷ್ಠಋಷಿಯನ್ನೂ,ವಾಮದೇವಮುನಿಯನ್ನೂ ಕುರಿತು. ''ಕೌಸಲ್ಯಾನಂದದಾಯಕನಾದ ರಾಮಚಂದ್ರನು ಲಕ್ಷ್ಮಣನೊಡಗೂಡಿ, ವಿಶ್ವಾಮಿತ್ರ ಮುನಿಪುಂಗವನಿಂದ ಸಂರಕ್ಷಿತನಾಗಿ ಮಿಥಿಲಾಪುಟ್ಟಣದಲ್ಲಿ

---

ಟಿ. (೧) "ಪ್ರೀತಿಂತ್ವಮಪಿಲಪ್ಸ್ಯಸೇ"-ಶ್ರೀರಾಮ ಕೃತ ಧನುರ್ಭಂಗವನ್ನು ಪ್ರತ್ಯಕ್ಷವಾಗಿ ನೋಡಿದ ಜನಕರಾಜನಾದ ನಾನು ಸಂತೋಷವನ್ನು ಹೊಂದಿರುವೆನು; "ನೀನು ಇದಕ್ಕಿಂತಲೂ ಅತಿಶಯವಾದ ಸೀತಾ ಕಲ್ಯಾಣದ ವೈಭವವನ್ನೂ ಮಕ್ಕಳೀರ್ವರ ನೋಡುವಿಕೆಯಿಂದುಂಟಾದ ಹರ್ಷವನ್ನೂ ಹೊಂದುವವನಾಗು" ಎಂಬರ್ಥವು "ತ್ವಮಪಿ"ಎಂಬ ಪದದಿಂದ ಭಾಸವಾಗುತ್ತದೆ "ಪುತ್ರಯೋರುಭಯೋರೇವ" ಎಂಬೆಡೆಯಲ್ಲಿ "ಪುತ್ರೀಚ ಪುತ್ರಶ್ಚ ತಯೋಃ", ನನ್ನ ಮಗಳೂ ಮುಂದಕ್ಕೆ ನಿನ್ನ ಸೊಸೆಯಾಗುವವಳೂ ಆದ ಸೀತಾದೇವಿಯನ್ನೂ ಮತ್ತು ನಿನ್ನ ಮಗನಾದ ರಾಮಚಂದ್ರನನ್ನೂ ನೋಡುವಿಕೆಯಿಂದುಂಟಾದ ಹರ್ಷವನ್ನು ಪಡೆವನಾಗುವೆ "ಹರ್ಷ" ವೆಂದರೆ ಈರ್ವರ ಕಲ್ಯಾಣ ಮಹೋತ್ಸವದಿಂದುಂಟಾದ "ಸಂತೋಷ" ಎಂಬುದು, ಅಥವಾ "ಲಕ್ಷ್ಮಣ ಊರ್ಮಿಳಾ ದೇವಿಯರ ಕಲ್ಯಾಣದಿಂದ್ಲುಂಟಾದ ಹರ್ಷವೆಂದೂ" ಅರ್ಥವಾಗುವುದು, "ಉಭಯೋರೇವ"ಎಂಬ ಪದದ ಸ್ವಾರಸ್ಯವು ಸಹ ಇದೇ.

ಕುಶಿಕಪುತ್ರೇಣ ಕೌಸಲ್ಯಾನಂದವರ್ಧನಃ||ಲಕ್ಷ್ಮಣೇನ ಸಹಭ್ರಾತ್ರಾ ವಿದೇಹೇಷು
ವಸತ್ಯಸೌ || ೧೫ || ದೃಷ್ಟವೀರ್ಯಸ್ತು ಕಾಕುತ್ಸ್ಥೋ ಜನಕೇನ
ಮಹಾತ್ಮನಾ || ಸಂಪ್ರದಾನಂ ಸುತಾಯಾಸ್ತು ರಾಘವೇ ಕರ್ತುಮಿಚ್ಛತಿ ||
೧೬ || ಯದಿವೋ ರೋಚತೇ ವೃತ್ತಂ ಜನಕಸ್ಯ ಮಹಾತ್ಮನಃ || ಪುರೀಂ
ಗಚ್ಛಾಮಹೇ ಶೀಘ್ರಂ ಮಾಭೂತ್ಕಾಲಸ್ಯ ಪರ್ಯಯಃ || ೧೭ || ಮಂತ್ರಿಣೋ
ಬಾಢಮಿತ್ಯಾಹುಸ್ಸಹಸರ್ವೈರ್ಮಹರ್ಷಿಭಿಃ || ಸುಪ್ರೀತಶ್ಚಾಬ್ರವೀದ್ರಾಜಾ
ಶ್ವೋಯಾತ್ರೇತಿ ಸ ಮಂತ್ರಿಣಃ ||೧೮|| ಮಂತ್ರಿಣಸ್ತಾಂ ನರೇಂದ್ರಸ್ಯ ರಾತ್ರಿಂ

---

ಶ್ರೀರಾಮನು, ಕುಶಿಕಪುತ್ರೇಣ - ವಿಶ್ವಾಮಿತ್ರನಿಂದ, ಗುಪ್ತಃ - ರಕ್ಷಿತನಾಗಿ, ಭ್ರಾತ್ರಾ - ತಮ್ಮ
ನಾದ, ಲಕ್ಷ್ಮಣೇನಸಹ - ಲಕ್ಷ್ಮಣನೊಡನೆ, ವಿದೇಹೇಷು-ವಿದೇಹ ದೇಶದಲ್ಲಿ, ವಸತಿ- ಇರುವನು,
ಕಾಕುತ್ಸ್ಥಸ್ತು - ಶ್ರೀರಾಮನಾದರೆ, ಮಹಾತ್ಮನಾ-ಮಹಾನುಭಾವನಾದ, ಜನಕೇನ-ಜನಕರಾ
ಯನಿಂದ, ದೃಷ್ಟವೀರ್ಯಃ - ಪರೀಕ್ಷಿಸಲ್ಪಟ್ಟ ಪರಾಕ್ರಮವುಳ್ಳವನಾದನು, ರಾಘವೇ - ಶ್ರೀರಾಮ
ನಿಗೆ, ಸೀತಾಯಾಃ - ಸೀತಾದೇವಿಯನ್ನು, ಸಂಪ್ರದಾನಂ - ಕನ್ಯಾದಾನವನ್ನು, ಕರ್ತುಂ - ಮಾಡ
ಲೋಸುಗ, ಇಚ್ಛತಿ - ಅಪೇಕ್ಷಿಸುವನು. || ೧೫ ೧೬ || ವಃ - ನಿಮಗೆ, ಮಹಾತ್ಮನಃ-ಮಹಾತ್ಮ
ನಾದ, ಜನಕಸ್ಯ - ಜನಕರಾಯನ, ವೃತ್ತಂ-ಆಚಾರವ್ಯವಹಾರಗಳು, ರೋಚತೇಯದಿ ಇಷ್ಟವಾದು
ದಾದರೆ, ಪುರೀಂ - ಮಿಥಿಲಾ ಪಟ್ಟಣವನ್ನು ಕುರಿತು, ಶೀಘ್ರಂ- ಜಾಗ್ರತೆಯಾಗಿ, ಗಚ್ಛಾಮಹೇ-
ಹೋಗುವ, ಕಾಲಸ್ಯ - ಕಾಲದ, ಪರ್ಯಯಃ - ಅತಿಕ್ರಮಣವು, ಮಾಭೂತ್-ಆಗದಿರಲಿ. ||೧೭||
ಮಂತ್ರಿಣಃ - ಮಂತ್ರಿಗಳು, ಸರ್ವೈಃ - ಸಮಸ್ತರಾದ, ಮಹರ್ಷಿಭಿಸ್ಸಹ - ವಸಿಷ್ಠಾದಿ ಮಹರ್ಷಿಗ
ಳೊಡನೆ, ಬಾಢಮಿತಿ - ಹಾಗೆಯೆ ಆಗಲೆಂದು, ಆಹುಃ - ಹೇಳಿದರು, ಸರಾಜಾಚ - ಆ ದಶರಥ
ರಾಜನೂ, ಸುಪ್ರೀತಶ್ಚ - ಸಂತೋಷಗೊಂಡವನಾಗಿ, ಶ್ವಃ - ನಾಳೆಯೆ, ಯಾತ್ರೇತಿ - ಪ್ರಯಾಣ
ವೆಂದು, ಮಂತ್ರಿಣಃ - ಮಂತ್ರಿಗಳನ್ನು ಕುರಿತು, ಅಬ್ರವೀತ್-ನುಡಿದನು. || ೧೮ || ಸರ್ವೇತೇ
ಮಂತ್ರಿಣಃ - ಜನಕರಾಯನ ಮಂತ್ರಿಗಳೆಲ್ಲರೂ, ಸರ್ವೈಃ - ಸಮಸ್ತಗಳಾದ, ಗಣೈಃ - ಮಂತ್ರಿ
ಗಣಗಳಿಂದ, ಸಮನ್ವಿತಾಃ - ಕೂಡಿಕೊಂಡಿರುವ, ನರೇಂದ್ರಸ್ಯ - ದಶರಥ ರಾಯನಿಂದ, ಪರಮ

---

ರುವನಂತೆ. ಆ ಪಟ್ಟಣದೊಡೆಯನಾದ ಜನಕ ಭೂಪಾಲನು ರಘುನಂದನನ ಪರಾಕ್ರಮವನ್ನ
ರಿತು ತನ್ನ ಕುಮಾರಿಯನ್ನಾತನಿಗೀಯಲು ಮನಗೊಂಡಿರುವನಂತೆ. ಈ ರಾಯನ ಸಂಬಂಧವು
ಯೋಗ್ಯವೆಂದು ನಿಮಗೆ ರುಚಿಸಿದರೆ ಬೇಗನೆ ವಿದೇಹನಗರಕ್ಕೆ ತೆರಳುವ" ಎಂದನು. ||೧೭||
ದಶರಥರಾಯನೀರೀತಿ ನುಡಿಯಲು ಮಹರ್ಷಿಗಳಿಂದೊಡಗೂಡಿದ ಆತನ ಮಂತ್ರಿಗಳೆಲ್ಲರೂ
ಸಮ್ಮತಿಸಿದವರಾದರು. ಬಳಿಕಲಾರಾಯನು ಪರಮ ಹರ್ಷಿತನಾಗಿ ನಾಳಿನದಿನವೇ ಪ್ರಯಾಣ
ವೆಂದು ಹೇಳಿದನು. ಆಗಲಾರಾತ್ರಿಯಲ್ಲಿ ಜನಕರಾಯನ ಮಂತ್ರಿಗಳೆಲ್ಲರೂ, ಸಕಲ

ಪರಮ ಸತ್ಕೃತಾಃ || ಊಷುಸ್ತೇ ಮುದಿತಾಸ್ಸರ್ವೇ ಗುಣೈಸ್ಸರ್ವೈಸ್ಸಮನ್ವಿತಾಃ || ೧೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಷಷ್ಟಿತಮಸ್ಸರ್ಗಃ.

---

ಸತ್ಕೃತಾಃ - ಬಹಳ ಸನ್ಮಾನಿತರಾಗಿ, ಮುದಿತಾಃ - ಸಂತೋಷಗೊಂಡವರಾಗಿ, ತಾಂರಾತ್ರಿಂ - ಆ ರಾತ್ರಿಯಲ್ಲಿ, ಊಷುಃ - ಇದ್ದರು. || ೧೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಷಷ್ಟಿತಮಸ್ಸರ್ಗಃ.

---

ಸದ್ಗುಣೋಪೇತರಾದ ದಶರಥರಾಯನ ಮಂತ್ರಿಗಳಿಂದ ಸುಸತ್ಕೃತರಾಗಿ ಸುಖದಿಂದದ್ದರು.

ಇಂತಿದು ಜನಕರಾಜಕೃತ ದಶರಥನೃಪಾಹ್ವಾನ ಕದಾಕಥನವೆಂಬ ಅರವತ್ತೆಂಟನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಏಕೋನಸಪ್ತತಿತಮಸ್ಸರ್ಗಃ.



ತತೋ ರಾತ್ರ್ಯಾಂ ವ್ಯತೀತಾಯಾಂ ಸೋಪಾಧ್ಯಾಯಸ್ಸಬಾಂಧವಃ ||
ರಾಜಾ ದಶರಥೋ ಹೃಷ್ಟಸ್ಸುಮಂತ್ರಮಿದಮಬ್ರವೀತ್ || ೧ || ಅದ್ಯ
ಸರ್ವೇ ಧನಾಧ್ಯಕ್ಷಾ ಧನಮಾದಾಯ ಪುಷ್ಕಲಂ || ವ್ರಜಂತ್ವಗ್ರೇ ಸುವಿಹಿತಾ
ನಾನಾ ರತ್ನ ಸಮನ್ವಿತಾಃ || ೨ || ಚತುರಂಗ ಬಲಂಚಾಪಿ ಶೀಘ್ರಂ
ನಿರ್ಯಾತು ಸರ್ವಶಃ || ಮಮಾಜ್ಞಾ ಸಮಕಾಲಂಚ ಯಾನಂಯುಗ್ಯಮನುತ್ತ
ಮಂ || ೩ || ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ ||

---

ತತಃ - ಬಳಿಕ, ರಾತ್ರ್ಯಾಂ-ರಾತ್ರಿಯು, ವ್ಯತೀತಾಯಾಂ-ಕಳೆಯಲು, ಸೋಪಾಧ್ಯಾಯಃ-ಉಪಾಧ್ಯಾಯರಿಂದಲೂ ಸಬಾಂಧವಃ - ಬಂಧುಜನಗಳಿಂದಲೂ ಒಡಗೂಡಿದ, ರಾಜಾ - ಅರಸನಾದ, ದಶರಥಃ - ದಶರಥ ರಾಯನು, ಹೃಷ್ಟಃ - ಸಂತುಷ್ಟನಾಗಿ, ಸುಮಂತ್ರಂ - ಸುಮಂತ್ರನನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೧ || ಅದ್ಯ - ಈಗಲೆ, ಸರ್ವೇ - ಸಮಸ್ತರಾದ, ಧನಾಧ್ಯಕ್ಷಾಃ - ಧನಾಧಿಪತಿಗಳು, ಪುಷ್ಕಲಂ - ಅಪಾರವಾದ, ಧನಂ - ದ್ರವ್ಯವನ್ನು, ಆದಾಯ - ತೆಗೆದುಕೊಂಡು, ಸುವಿಹಿತಾಃ - ವಿವಾಹೋಚಿತ ಕರ್ಮಗಳನ್ನು ವಿಹಿತವಾಗಿ ನೆರವೇರಿಸುತ್ತ, ನಾನಾರತ್ನ ಸಮನ್ವಿತಾಃ - ಅನೇಕರತ್ನಗಳಿಂದೊಡಗೂಡಿ, ಅಗ್ರೇ-ಮುಂದೆ, ವ್ರಜಂತು - ಹೊರಡಲಿ. || ೨ || ಮಮ - ನನ್ನ, ಆಜ್ಞಾಸಮಕಾಲಂ-ಆಜ್ಞೆಯಾದ ತಕ್ಷಣದಲ್ಲಿ, ಅನುತ್ತಮಂ - ಸರ್ವೋತ್ತಮವಾದ, ಯಾನಯುಗ್ಯಂ - ವಾಹನಗಳು, ಚತುರಂಗಂ-ಗಜ, ತುರಗ, ರಥ, ಪದಾತಿಗಳೆಂಬ ಚತುರಂಗಗಳುಳ್ಳ, ಬಲಂಚಾಪಿ - ಸೈನ್ಯವೂ, ಸರ್ವಶಃ - ಸರ್ವಪ್ರಕಾರದಲ್ಲಿಯೂ, ಶೀಘ್ರಂ - ಜಾಗ್ರತಯಾಗಿ ನಿರ್ಯಾತು - ಹೊರಡಲಿ. || ೩ || ವಸಿಷ್ಠಃ - ವಸಿಷ್ಠ ಋಷಿಯೂ, ವಾಮದೇವಶ್ಚ-ವಾಮದೇವ ಋಷಿಯು, ಜಾಬಾಲಿಃ - ಜಾಬಾಲಿ ಋಷಿಯೂ, ಅಥ-ಬಳಿಕ, ಕಾಶ್ಯಪಃ - ಕಾಶ್ಯಪ ಋಷಿಯೂ, ಸುದೀರ್ಘಾಯುಃ - ಬಹಳ ದೀರ್ಘಾಯುವಾದ,

---

ಆ ಬಳಿಕ ಪ್ರಾತಃಕಾಲವಾಗಲು ದಶರಥರಾಯನು ಪುರೋಹಿತನಾದ ವಸಿಷ್ಠನಿಂದಲೂ,ಬಂಧುಗಳಿಂದಲೂ ಒಡಗೂಡಿ ಮಹಾಸಂತೋಷವನ್ನಾಂತು ಮಂತ್ರಿಯಾದಸುಮಂತ್ರನನ್ನು ಕುರಿತು "ಎಲೈ ಸುಮಂತ್ರನೆ ! ಧನಾಧ್ಯಕ್ಷರೆಲ್ಲರೂ ನಾನಾರತ್ನಸಮೇತರಾಗಿ, ಪುಷ್ಕಲವಾದ ಧನವನ್ನು ತೆಗೆದುಕೊಂಡು ಈಗಲೇ ಮುಂಬರಿಯಲಿ. ಚತುರಂಗ ಬಲವೂ,ವಸಿಷ್ಠ, ವಾಮದೇವ, ಜಾಬಾಲಿ,ಕಾಶ್ಯಪ,ಮಾರ್ಕಂಡೇಯ,ಕಾತ್ಯಾಯನರೇ ಮೊದಲಾದ ದ್ವಿಜೋತ್ತಮರೂ ಸಹ ಬೇಗನೆ ತೆರಳಲಿ; ನನ್ನ ರಥವನ್ನು ಸಜ್ಜುಗೊಳಿಸು; ಕಾಲವಿಳಂಬವಾಗದಿರಲಿ;

ಮಾರ್ಕಂಡೇಯಶ್ಚ ದೀರ್ಘಾಯುಃ ಋಷಿಃ ಕಾತ್ಯಾಯನಸ್ತಥಾ ||೪|| ಏತೇ ದ್ವಿಜಾಃ ಪ್ರಯಾಂತ್ವಗ್ರೇ ಸ್ಯಂದನಂ ಯೋಜಯಸ್ವ ಮೇ || ಯಥಾ ಕಾಲಾತ್ಯಯೋ ನಸ್ಯಾದ್ದೂತಾ ಹಿ ತ್ವರಯಂತಿ ಮಾಂ || ೫ || ವಚನಾತ್ತು ನರೇಂದ್ರಸ್ಯ ಸಾ ಸೇನಾ ಚತುರಂಗಿಣೀ || ರಾಜಾನಮೃಷಿಭಿಸ್ಸಾರ್ಧಂ ವ್ರಜಂತಂ ಪೃಷ್ಠತೋಽನ್ವಗಾತ್ || ೬ || ಗತ್ವಾ ಚತುರಹಂ ಮಾರ್ಗಂ ವಿದೇಹಾನಭ್ಯುಪೇಯಿವಾನ್|| ರಾಜಾತು ಜನಕಶ್ಶ್ರೀಮಾನ್ ಶ್ರುತ್ವಾ ಪೂಜಾಮಕಲ್ಪಯತ್ || ೭ || ತತೋ ರಾಜಾನಮಾಸಾದ್ಯ ವೃದ್ಧಂ ದಶರಥಂ ನೃಪಂ || ಜನಕೋ ಮುದಿತೋ ರಾಜಾ ಹರ್ಷಂಚ ಪರಮಂ ಯಯೌ || ೮ || ಉವಾಚ ಚ ನರಶ್ರೇಷ್ಠೋ ನರ

---

ಮಾರ್ಕಂಡೇಯಃ - ಮಾರ್ಕಂಡೇಯನು, ತಥಾ - ಹಾಗೆಯೇ, ಕಾತ್ಯಾಯನಃ-ಕಾತ್ಯಾಯನನೆಂಬ, ಋಷಿಃ - ಋಷಿಯೂ, ಏತೇದ್ವಿಜಾಃ - ಈ ಬ್ರಾಹ್ಮಣರು, ಅಗ್ರೇ-ಮುಂಗಡೆ, ಪ್ರಯಾಂತು ಹೊರಡಲಿ, ಮೇ - ನನ್ನ, ಸ್ಯಂದನಂ - ರಥವನ್ನು, ಯೋಜಯಸ್ವ - ಸಜ್ಜುಗೊಳಿಸು, ಯಥಾ - ಹೇಗೆ, ಕಾಲಾತ್ಯಯಃ - ಕಾಲಾತಿಕ್ರಮಣವು, ನಸ್ಯಾತ್ - ಆಗದಿರುವುದೋಹಾಗೆ,ದೂತಾಃ - ದೂತರು, ಮಾಂ - ನನ್ನನ್ನು, ತ್ವರಯಂತಿಹಿ - ತ್ವರೆಮಾಡುತ್ತಾರೆ. || ೫ || ನರೇಂದ್ರಸ್ಯ - ದಶರಥರಾಯನ, ವಚನಾತ್ - ಮಾತಿನಿಂದ, ಚತುರಂಗಿಣೀ - ನಾಲ್ಕು ಅಂಗಗಳುಳ್ಳ, ಸಾಸೇನಾಚ-ಆ ಸೇನೆಯೂ, ಋಷಿಭಿಸ್ಸಾರ್ಧಂ - ಋಷಿಗಳೊಡನೆ, ವ್ರಜಂತಂ - ಹೋಗುತ್ತಿರುವ, ರಾಜಾನಂ - ದಶರಥ ರಾಯನನ್ನು, ಪೃಷ್ಠತಃ - ಮುಂದುಗಡೆ, ಅನ್ವಗಾತ್ - ಅನುಸರಿಸಿ ಹೋಯಿತು || ೬ || ಚತುರಹಂ- ನಾಲ್ಕುದಿವಸ ನಡಿಯತಕ್ಕ, ಮಾರ್ಗಂ - ಮಾರ್ಗವನ್ನು, ಗತ್ವಾ - ಹೋಗಿ, ವಿದೇಹಾನ್-ಮೈಥಿಲ ದೇಶವನ್ನು, ಅಭ್ಯುಪೇಯಿವಾನ್ - ಹೊಂದಿದನು, ಶ್ರೀಮಾನ್ - ಸಂಪದ್ಯುಕ್ತನಾದ, ಜನಕೋ ರಾಜಾತು - ಜನಕರಾಯನು, ಶ್ರುತ್ವಾ - ಕೇಳಿ, ಪೂಜಾಂ - ಅತಿಥಿ ಪೂಜೆಯನ್ನು, ಅಕಲ್ಪಯತ್ - ಸಿದ್ಧಮಾಡಿದನು. || ೭ || ತತಃ - ಬಳಿಕ, ಜನಕೋರಾಜಾ - ಜನಕರಾಯನು, ವೃದ್ಧಂ-ವೃದ್ಧನಾದ, ನೃಪಂ - ಅರಸಾದ, ದಶರಥಂ ರಾಜಾನಂ - ದಶರಥ ರಾಯನನ್ನು, ಆಸಾದ್ಯ - ಹೊಂದಿ, ಮುದಿತಃ - ಸಂತೋಷಗೊಂಡು, ಪರಮಂ - ಶ್ರೇಷ್ಠವಾದ, ಹರ್ಷಂಚ-ಸಂತೋಷವನ್ನು,ಯಯೌ- ಹೊಂದಿದನು. || ೮ || ನರಶ್ರೇಷ್ಠಃ - ನರರಾಜನಾದ ಜನಕನು, ನರಶ್ರೇಷ್ಠಂ - ಮನುಷ್ಯಾಧಿ

---

ಜನಕರಾಯನ ಈ ದೂತರು ನನ್ನನ್ನು ತ್ವರೆಗೊಳಿಸುತ್ತಿರುವರು" ಎಂದನು. ದಶರಥರಾಜನಿಂತು ನುಡಿದೊಡನೆಯೆ, ಆತನ ಆಣತಿಮಾತ್ರದಿಂದಲೇ ಚತುರಂಗಬಲವು ಸಿದ್ಧವಾಗಿ, ಋಷಿಸಮೇತನಾಗಿ ಮುಂಬರಿಯುತ್ತಿರುವ ತಮ್ಮೊಡೆಯನ್ನನುಸರಿಸಿ ಹೊರಟಿತು. || ೬ || ಆ ಬಳಿಕ ದಶರಥನು ದಾರಿಯಲ್ಲಿ ನಾಲ್ಕು ದಿನಗಳು ತಂಗಿ ವಿದೇಹನಗರವನ್ನು ಹೊಂದಿದವನಾದನು. ಜನಕರಾಯನೀಸಂಗತಿಯನ್ನು ಕೇಳಿ ಪೂಜಾದ್ರವ್ಯಗಳನ್ನು ಸಿದ್ಧಗೊಳಿಸಿ, ಆ ರಾಯನನ್ನಿದಿರ್ಗೊಂಡು ಪರಮ ಸಂತುಷ್ಟನಾಗಿ "ಎಲೈ ಮಹಾರಾಜನೆ! ನಿನಗೆ ಸುಖಾಗಮ

ಶ್ರೇಷ್ಠಂ ಮುದಾನ್ವಿತಃ ॥ ಸ್ವಾಗತಂ ತೇ ಮಹಾರಾಜ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ॥೯॥ ಪುತ್ರಯೋರುಭಯೋಃ ಪ್ರೀತಿಂ ಲಪ್ಸ್ಯಸೇ ವೀರ್ಯ ನಿರ್ಜಿತಾಂ ॥ ದಿಷ್ಟ್ಯಾ ಪ್ರಾಪ್ತೋ ಮಹಾತೇಜಾ ವಸಿಷ್ಠೋ ಭಗವಾನ್ ಋಷಿಃ ॥೧೦॥ ಸಹಸರ್ವೈರ್ದ್ವಿಜಶ್ರೇಷ್ಠೈರ್ದೇವೈರಿವ ಶತಕ್ರತುಃ ॥ ದಿಷ್ಟ್ಯಾ ಮೇ ನಿರ್ಜಿತಾ ವಿಘ್ನಾ ದಿಷ್ಟ್ಯಾ ಮೇ ಪೂಜಿತಂ ಕುಲಂ ॥೧೧॥ ರಾಘವೈಸ್ಸಹಸಂಬಂಧಾದ್ವೀರ್ಯಶ್ರೇಷ್ಠೈ ರ್ಮಹಾತ್ಮಭಿಃ ॥ ಶ್ವಃ ಪ್ರಭಾತೇ ನರೇಂದ್ರೇಂದ್ರ ನಿರ್ವರ್ತಯಿತುಮರ್ಹಸಿ॥ ೧೨ ॥ ಯಜ್ಞಸ್ಯಾಂತೇ ನರಶ್ರೇಷ್ಠ ವಿವಾಹ ಮೃಷಿಸಮ್ಮತಂ ॥

---

ಪತಿಯಾದ ದಶರಥರಾಯನನ್ನು ಕುರಿತು, ಮುದಾನ್ವಿತಃ - ಸಂತೋಷದಿಂದ ಕೂಡಿದವನಾಗಿ, ಉವಾಚ - ಹೇಳಿದನು, ಹೇಮಹಾರಾಜ - ಎಲೈ ಮಹಾರಾಜನೆ!, ತೇ - ನಿನಗೆ, ಸ್ವಾಗತಂ-ಸುಖಾಗಮನವು, ಹೇರಾಘವ - ಎಲೈ ರಘುಕುಲೋತ್ಪನ್ನನೆ! ದಿಷ್ಟ್ಯಾ - ದೈವಾಧೀನದಿಂದ, ಪ್ರಾಪ್ತಃ-ಬಂದವನು, ಅಸಿ - ಆದೆ. ॥ ೯ ॥ ಉಭಯೋಃ - ಇಬ್ಬರಾದ, ಪುತ್ರಯೋಃ-ರಾಮ ಲಕ್ಷ್ಮಣರ, ವೀರ್ಯನಿರ್ಜಿತಾಂ - ಪರಾಕ್ರಮದಿಂದ ಸಂಪಾದಿಸಲ್ಪಟ್ಟ, ಪ್ರೀತಿಂ - ಸಂತೋಷವನ್ನು, ಲಪ್ಸ್ಯಸೇ - ಹೊಂದುವೆ. ॥ ೧೦ ॥ ಮಹಾತೇಜಾಃ - ಮಹಾ ತೇಜೋವಂತನಾದ, ಭಗವಾನ್ - ಪೂಜ್ಯನಾದ, ಋಷಿಃ – ಋಷಿಯಾದ, ವಸಿಷ್ಠಃ - ವಸಿಷ್ಠ ಋಷಿಯು, ದೇವೈಃ - ದೇವತೆಗಳಿಂದ, ಶತಕ್ರತುರಿವ - ದೇವೇಂದ್ರನಂತೆ, ಸರ್ವೈಃ - ಸಮಸ್ತರಾದ, ದ್ವಿಜಶ್ರೇಷ್ಠೈಸ್ಸಹ – ಬ್ರಾಹ್ಮಣ ಶ್ರೇಷ್ಠರಿಂದೊಡಗೂಡಿ, ದಿಷ್ಟ್ಯಾ - ದೈವಾಧೀನದಿಂದ, ಪ್ರಾಪ್ತಃ - ಬಂದನು. ॥ ೧೧ ॥ ಮೇ - ನನಗೆ, ವಿಘ್ನಾಃ - (ಗೋ) ಸೀತಾಕಲ್ಯಾಣ ಪ್ರತಿಬಂಧಕಗಳಾದ ವಿಘ್ನಗಳು, ದಿಷ್ಟ್ಯಾಃ -ಅದೃಷ್ಟವಶದಿಂದ, ನಿರ್ಜಿತಾಃ - ಜಯಿಸಲ್ಪಟ್ಟವು, ದಿಷ್ಟ್ಯಾ - ದೈವಾಧೀನದಿಂದ, ಮೇ-ನನ್ನ, ಕುಲಂ-ವಂಶವು, ವೀರ್ಯಶ್ರೇಷ್ಠೈಃ - ಪರಾಕ್ರಮದಿಂದ ಶ್ರೇಷ್ಠರಾದ, ಮಹಾತ್ಮಭಿಃ - ಮಹಾನು ಭಾವರಾದ, ರಾಘವೈಸ್ಸಹ - ರಘುವಂಶೋತ್ಪನ್ನರೊಡನೆ, ಸಂಬಂಧಾತ್ - ವಿವಾಹದ ಸಂಬಂಧದ ದೆಶೆಯಿಂದ, ಪೂಜಿತಂ - ಪೂಜಿಸಲ್ಪಟ್ಟಿತು, ॥ ೧೧ ॥ ಶ್ವಃ - ನಾಳೆ, ಪ್ರಭಾತೇ - ಪ್ರಾತಃಕಾಲದಲ್ಲಿ, ಯಜ್ಞಸ್ಯ - ಯಜ್ಞವು, ಅಂತೇಸತಿ - ಪೂರ್ತಿಯಾಗಲು, ಹೇನರೇಂದ್ರೇಂದ್ರ-ರಾಜಾಧಿರಾಜನೇ, ಹೇನರಶ್ರೇಷ್ಠ - ಎಲೈ ಮನುಜಶ್ರೇಷ್ಠನೇ, ಋಷಿಸಮ್ಮತಂ-ಋಷಿಗಳಿಗೆ ಇಷ್ಟವಾದ, ವಿವಾಹಂ - ವೈವಾಹಿಕವನ್ನು, ನಿರ್ವರ್ತಯಿತುಂ – ನೆರವೇರಿಸುವದಕ್ಕೆ, ಅರ್ಹಸಿ - ಯೋಗ್ಯನಾಗು, ತಸ್ಯ - ಆ ಜನಕರಾಯನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಋಷಿಮಧ್ಯೇ – ವಸಿಷ್ಠಾದಿ ಋಷಿ

---

ನವು ; ನನ್ನ ಭಾಗ್ಯೋದಯದಿಂದಿಲ್ಲಿಗೆ ಬಂದವನಾದೆ. ವೀರ್ಯ ನಿರ್ಜಿತವಾದ ಪುತ್ರ ಪ್ರೀತಿಯನ್ನು ಹೊಂದುವವನಾಗುವೆ; ದ್ವಿಜವರೇಣ್ಯರಿಂದೊಡಗೂಡಿದ ವಸಿಷ್ಠಮುನಿಯೂ ನನ್ನ ಭಾಗ್ಯೋದಯದಿಂದ, ದೇವತೆಗಳಿಂದೊಡಗೂಡಿದ ಮಹೇಂದ್ರನಂತೆ ಬಂದಿರುವನು. ಮಹಾತ್ಮನಾದ ರಘುಕುಲದರಸರೊಡನೆ ಸಂಬಂಧವುಂಟಾದುದರಿಂದ ಕನ್ಯಾದಾನ ಪ್ರತಿಬಂಧಕಗಳಾದ ವಿಘ್ನಗಳೆಲ್ಲವೂ ಗೆಲ್ಲಲ್ಪಟ್ಟುವು. ನನ್ನ ಕುಲಕ್ಕೆ ಪೂಜ್ಯತೆಯುಂಟಾಯಿತು. ಎಲೈ

ತಸ್ಯ ತದ್ವಚನಂ ಶ್ರುತ್ವಾ ಋಷಿಮಧ್ಯೇ ನರಾಧಿಪಃ ॥ ೧೩ ॥ ವಾಕ್ಯಂ ವಾಕ್ಯ ವಿದಾಂ ಶ್ರೇಷ್ಠಃ ಪ್ರತ್ಯುವಾಚ ಮಹೀಪತಿಂ ॥ ಪ್ರತಿಗ್ರಹೋ ದಾತೃವಶಶ್ಶ್ರುತ ಮೇತನ್ಮಯಾ ಪುರಾ ॥ ೧೪ ॥ ಯಥಾ ವಕ್ಷ್ಯಸಿ ಧರ್ಮಜ್ಞ ತತ್ ಕರಿಷ್ಯಾ ಮಹೇವಯಂ ॥ ಧರ್ಮಿಷ್ಠಂಚ ಯಶಸ್ಯಂಚ ವಚನಂ ಸತ್ಯವಾದಿನಃ ॥ ಶ್ರುತ್ವಾ ವಿದೇಹಾಧಿಪತಿಃ ಪರಂ ವಿಸ್ಮಯಮಾಗತಃ ॥ ೧೫ ॥ ತತ ಸ್ಸರ್ವೇ ಮುನಿಗಣಾಃ ಪರಸ್ಪರ ಸಮಾಗಮೇ । ಹರ್ಷೇಣ ಮಹತಾ ಯುಕ್ತಾ ಸ್ತಾಂನ್ನಿಶಾ ಮವಸನ್ ಸುಖಂ ॥ ೧೬ ॥ ರಾಜಾಚ ರಾಘವೌ ಪುತ್ರೌ ನಿಶಾಮ್ಯ ಪರಿಹರ್ಷಿತಃ॥

---

ಗಳ ಮಧ್ಯದಲ್ಲಿ, ವಾಕ್ಯವಿದಾಂ - ವಾಕ್ಯಾರ್ಥಜ್ಞಾನವಂತರೊಳಗೆ, ಶ್ರೇಷ್ಠಃ-ಉತ್ಕೃಷ್ಟನಾದ, ನರಾಧಿಪಃ - ದಶರಥ ರಾಯನು, ಮಹೀಪತಿಂ-ಜನಕರಾಯನನ್ನು ಕುರಿತು, ವಾಕ್ಯಂ -ವಚನವನ್ನು, ಪ್ರತ್ಯುವಾಚ - ಹೇಳಿದನು. ॥ ೧೩ ॥ ಪ್ರತಿಗ್ರಹಃ - ಪ್ರತಿಗ್ರಹವು, ದಾತೃವಶಃ - ದಾತೃವಿಗೆ ಸ್ವಾಧೀನವೆಂಬ, ಏತತ್ - ಈ ದಾನವು, ಮಯಾ-ನನ್ನಿಂದ, ಪುರಾ - ಪೂರ್ವದಲ್ಲಿ, ಶ್ರುತಂ - ಕೇಳ ಲ್ಪಟ್ಟಿತು, ಹೇಧರ್ಮಜ್ಞ - ಎಲೈ ಧರ್ಮಜ್ಞನೇ, ತ್ವಂ - ನೀನು, ಯಥಾ-ಹೇಗೆ, ವಕ್ಷ್ಯಸಿ-ಹೇಳು ವೆಯೋ, ವಯಂ ನಾವು, ತತ್-ಆ ಕಾರ್ಯವನ್ನು, ತಥಾ-ಹಾಗೆಯೆ, ಕರಿಷ್ಯಾಮಹೇ-ಮಾಡುವೆವು. ॥ ೧೪ ॥ ಧರ್ಮಿಷ್ಠಂ - ಧರ್ಮಪ್ರಧಾನವೂ, ಯಶಸ್ಯಂಚ - ಯಶಸ್ಕರವೂ ಆದ, ಸತ್ಯವಾದಿನಃ- ಸತ್ಯವಾದಿಯಾದ ದಶರಥನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ವಿದೇಹಾಧಿಪತಿಃ - ಜನಕ ರಾಯನು, ಪರಂ - ಬಹಳವಾದ, ವಿಸ್ಮಯಂ - ಆಶ್ಚರ್ಯವನ್ನು, ಆಗತಃ-ಹೊಂದಿದನು. ॥೧೫॥ ತತಃ - ಬಳಿಕ, ಸರ್ವೇ - ಸಮಸ್ತರಾದ, ಮುನಿಗಣಾಃ-ಋಷಿಸಮೂಹಗಳು, ಪರಸ್ಪರಸಮಾಗಮೇ- ಅನ್ಯೋನ್ಯಸಮಾಗಮವುಂಟಾಗಲು, ಮಹತಾ - ಬಹಳವಾದ, ಹರ್ಷೇಣ - ಸಂತೋಷದಿಂದ, ಯುಕ್ತಾಃ - ಕೂಡಿದವರಾಗಿ, ತಾಂನಿಶಾಂ - ಆ ರಾತ್ರಿಯಲ್ಲಿ, ಸುಖಂ - ಸುಖವಾಗಿ, ಅವಸನ್- ಇರುತ್ತಿದ್ದರು. ॥ ೧೬ ॥ ರಾಜಾಚ - ದಶರಥರಾಯನು, ಪುತ್ರೌ - ಮಕ್ಕಳಾದ, ರಾಘವೌ - ರಾಮ ಲಕ್ಷ್ಮಣರನ್ನು, ನಿಶಾಮ್ಯ - ಕಂಡು, ಪರಿಹರ್ಷಿತಃ - ಬಹಳ ಸಂತೋಷಗೊಂಡು, ಪರಮ ಪ್ರೀತಃ-ಬಹಳ ತೃಪ್ತನಾಗಿ, ಜನಕೇನ-ಜನಕರಾಜನಿಂದ, ಸುಪೂಜಿತಃ-ಚನ್ನಾಗಿ ಪೂಜಿಸಲ್ಪಟ್ಟವನಾಗಿ,

---

ನರಶ್ರೇಷ್ಠನೆ! ನಾಳೆ ಪ್ರಾತಃಕಾಲದಲ್ಲಿ ಋಷಿಸಮ್ಮತವಾದ ಯಜ್ಞಾಂತ್ಯದಲ್ಲಿ ಸೀತಾದೇವಿಗೂ ಶ್ರೀರಾಮನಿಗೂ ವಿವಾಹ ಮಾಡಿಸಲರ್ಹನಾಗುವೆ" ಎಂದನು. ॥ ೧೨ ॥ ಇಂತು ನುಡಿದ ಜನಕರಾಯನ ನುಡಿಗಳನ್ನು ಕೇಳಿದ ದಶರಥನು "ಎಲೈ ಧರ್ಮಿಷ್ಠನಾದ ಜನಕರಾಜನೆ ! ತೆಗೆದುಕೊಳ್ಳುವುದೆಂಬುದು ಕೊಡುವವನ ಆಧೀನವೆಂದು ಕೇಳಿರುವೆನು. ಆದುದರಿಂದ ನೀನು ಹೇಳಿದಂತೆಯೇ ಆಗಬಹುದು" ಎಂದನು. ಧರ್ಮಪ್ರಧಾನವೂ, ಕೀರ್ತಿದಾಯಕವೂ ಆದ ದಶರಥರಾಯನ ಈ ಮಾತನ್ನು ಕೇಳಿದ ಜನಕನು ಪರಮಾನಂದಭರಿತನಾದನು. ಋಷಿ ಗಳೆಲ್ಲರೂ ಪರಸ್ಪರ ಸಮಾಗಮನದಿಂದ ಹರ್ಷಿತರಾಗಿ ಸುಖವಾಗಿ ಆ ರಾತ್ರಿಯನ್ನು ಕಳೆದರು. ದಶರಥರಾಯನೂ ಸಹ ತನ್ನ ಕುವರರಾದ ರಾಮಲಕ್ಷ್ಮಣರನ್ನು ಕಂಡು ಪರಮ ಹರ್ಷಿತ

ಉವಾಸ ಪರಮಪ್ರೀತೋ ಜನಕೇನ ಸುಪೂಜಿತಃ || ೧೭ || ಜನಕೋಽಪಿ ಮಹಾತೇಜಾಃ ಕ್ರಿಯಾಂ ಧರ್ಮೇಣ ತತ್ವವಿತ್ || ಯಜ್ಞಸ್ಯ ಚ ಸುತಾಭ್ಯಾಂಚ ಕೃತ್ವಾ ರಾತ್ರಿಮುವಾಸಹ || ೧೮ ||

ಇತಿ ಶ್ರೀಮದ್ಬಾಲಕಾಂಡೆ ಏಕೊನ ಸಪ್ತತಿತಮಸ್ಸರ್ಗಃ.

---

ಉವಾಸ - ಇರುತ್ತಿದ್ದನು. || ೧೭ || ತತ್ವವಿತ್ - ತತ್ವಜ್ಞರಾದ, ಮಹಾತೇಜಾಃ- ಮಹಾತೇಜೋವಂತನಾದ, ಜನಕೋಽಪಿ-ಜನಕರಾಯನೂ, ಧರ್ಮೇಣ-ಶಾಸ್ತ್ರೋಕ್ತಧರ್ಮದಿಂದ,ಯಜ್ಞಸ್ಯ-ಯಜ್ಞದ, ಕ್ರಿಯಾಂ - ಕಾರ್ಯವನ್ನು, ಸುತಾಭ್ಯಾಂ - ಮಕ್ಕಳಾದ ಸೀತಾ, ಊರ್ಮಿಳಾ ಇವರಿಬ್ಬರಿಗೂ, ಕ್ರಿಯಾಂ - ಅಂಕುರಾರ್ಪಣಾದಿ ಕರ್ಮವನ್ನು, ಕೃತ್ವಾ - ಮಾಡಿ, ರಾತ್ರಿಂ - ರಾತ್ರಿಯಲ್ಲಿ, ಉವಾಸಹ - ಇರುತಿದ್ದನಷ್ಟೆ. | ೧೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಸಪ್ತತಿತಮಸ್ಸರ್ಗ ,

---

ನಾಗಿ, ಜನಕರಾಜನಿಂದ ಸತ್ಕರಿಸಲ್ಪಟ್ಟು ಸುಖದಿಂದ್ದನು. ಜನಕ ಮಹೀಪಾಲನೂ, ತನ್ನ ಕುವರಿಯರಾದ ಸೀತೋರ್ಮಿಳಾದೇವಿಯರಿಗೆ ಅಂಕುರಾರ್ಪಣಾದಿ ಕಾರ್ಯಗಳನ್ನು ಮಾಡಿಸಿ ಸುಖವಾಗಿ ಆ ರಾತ್ರಿಯನ್ನು ಕಳೆದನು ||೧೮||

ಇಂತಿದು ದಶರಥನ ಮಿಥಿಲಾಪುರೀ ಪ್ರಯಾಣ ವರ್ಣನವೆಂಬ ಅರವತ್ತೊಂಭತ್ತನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಸಪ್ತತಿತಮಸ್ಸರ್ಗಃ.



ತತಃ ಪ್ರಭಾತೇ ಜನಕಃ ಕೃತಕರ್ಮಾ ಮಹರ್ಷಿಭಿಃ ॥ ಉವಾಚ ವಾಕ್ಯಂ ವಾಕ್ಯಜ್ಞಃ ಶತಾನಂದಂ ಪುರೋಹಿತಂ ॥೧॥ ಭ್ರಾತಾ ಮಮ ಮಹಾತೇಜಾ ಯವೀಯಾನತಿಧಾರ್ಮಿಕಃ ॥ ಕುಶಧ್ವಜ ಇತಿ ಖ್ಯಾತಃ ಪುರೀಮಧ್ಯ ವಸಚ್ಛುಭಾಂ ॥೨॥ ವಾರ್ಯಾಫಲಕ ಪರ್ಯಂತಾಂ ಪಿಬನ್ನಿಕ್ಷುಮತೀಂ ನದೀಂ ॥ ಸಾಂಕಾಶ್ಯಾಂಪುಣ್ಯಸಂಕಾಶಾಂ ವಿಮಾನ ಮಿವ ಪುಷ್ಪಕಂ॥೩॥

---

ತತಃ - ಬಳಿಕ, ಪ್ರಭಾತೇ - ಪ್ರಾತಃಕಾಲದಲ್ಲಿ, ಮಹರ್ಷಿಭಿಃ - ಮಹರ್ಷಿಗಳಿಂದ, ಕೃತಕರ್ಮಾ-ಮಾಡಲ್ಪಟ್ಟ ಪ್ರಾತಃಕಾಲಿಕ ಕರ್ಮವುಳ್ಳವನಾಗಿ, (ಗೋ) ಮಾಡಲ್ಪಟ್ಟ ಸಂಪೂರ್ಣವಾದ ಯಜ್ಞಕರ್ಮವುಳ್ಳವನಾಗಿ, ವಾಕ್ಯಜ್ಞಃ - ನುಡಿಜಾಣ್ಮೆಯುಳ್ಳ, ಜನಕಃ - ಜನಕರಾಯನು, ಪುರೋಹಿತಂ - ಪುರೋಹಿತನಾದ, ಶತಾನಂದಂ - ಶತಾನಂದ ಋಷಿಯನ್ನು ಕುರಿತು, ವಾಕ್ಯಂ - ವಚನವನ್ನು, ಉವಾಚ - ಹೇಳಿದನು ॥೧॥ (೧)ಮಮ - ನನಗೆ, ಯವೀಯಾನ್‌ಭ್ರಾತಾ -ಚಿಕ್ಕ ತಮ್ಮನಾದ, ಮಹಾತೇಜಾಃ - ಮಹಾ ತೇಜಸ್ವಿಯಾದ, ಅತಿಧಾರ್ಮಿಕಃ - ಅತಿ ಧರ್ಮಿಷ್ಠನಾದ, ಕುಶಧ್ವಜಇತಿ - ಕುಶಧ್ವಜನೆಂದು, ಖ್ಯಾತಃ-ಪ್ರಸಿದ್ಧನು, ಶುಭಾಂ-ಶುಭಕರವಾದ, ಸಾಂಕಾಶ್ಯಾಂ-ಸಾಂಕಾಶ್ಯವೆಂಬ, ಪುಣ್ಯಸಂಕಾಶಾಂ- ಪುಣ್ಯದಿಂದ ಕೂಡಿದ, ಪುಣ್ಯಕ್ಕೆ ಫಲವಾದ, ಸ್ವರ್ಗಕ್ಕೆ ಸಮಾನವಾದ, ಪುಷ್ಪಕವಿಮಾನಮಿವಸ್ಥಿತಂ - ಪುಷ್ಪಕವಿಮಾನದಂತಿರುವ, ಪುರೀಂ - ಪಟ್ಟಣವನ್ನು, ವಾರ್ಯಾಫಲಕಪರ್ಯಂತಾಂ - ವಾರ್ಯಾ - ಉದಕಗಳಲ್ಲಿ ಸ್ಥಾಪಿಸಲ್ಪಟ್ಟ, ಫಲಕ - ಶೂಲಾಯುಧಗಳುಳ್ಳ, ಪರ್ಯಂತಾಂ - ಪರ್ಯಂತಪ್ರದೇಶಗಳುಳ್ಳ, ಪುರೀಂ - ಪಟ್ಟಣವನ್ನು, ಇಕ್ಷುಮತೀಂ-ಇಕ್ಷುಮತಿಯೆಂಬ, ನದೀಂ - ನದಿಯನ್ನು - ಪಿಬನ್ - ಪಾನಮಾಡುತ್ತ, ಅಧ್ಯವಸತ್-ವಾಸಮಾಡುತ್ತಾನೆ. ॥೩॥ ಅಹಂ - ನಾನು, ತಂ - ಆ ಕುಶಧ್ವಜನನ್ನು, ದ್ರಷ್ಟುಂ-ನೋಡಲು, ಇಚ್ಛಾಮಿ-

---

ಆ ಬಳಿಕ ಪ್ರಾತಃಕಾಲವಾಗಲು ಜನಕರಾಜನು ಮಹರ್ಷಿಗಳಿಂದೊಡಗೂಡಿ ಪ್ರಾತಸ್ಸಂಧ್ಯೆಯೇ ಮೊದಲಾದ ನಿತ್ಯಕರ್ಮಗಳನ್ನೂ, ಯಜ್ಞಾಂತ್ಯವನ್ನೂ ನೆರವೇರಿಸಿದವನಾಗಿ ಪುರೋಹಿತನಾದ ಶತಾನಂದ ಮುನಿಯನ್ನು ಕುರಿತು, "ಮುನಿಪುಂಗವ! ನನ್ನ ಚಿಕ್ಕ ತಮ್ಮನೂ, ಮಹಾ ಧರ್ಮಿಷ್ಠನೂ ಆದ ಕುಶಧ್ವಜನು ಮಂಗಳಕರವಾಗಿಯೂ, ಪುಣ್ಯಕರವಾಗಿಯೂ ಇರುವ ಸಾಂಕಾಶ್ಯನಗರದಲ್ಲಿ ವಾಸಮಾಡುತ್ತ, ವಾರ್ಯಾಫಲಕಪರ್ಯಂತವಾಗುಳ್ಳ ರಾಜ್ಯವನ್ನಾಳುತ್ತಿರುವನು. ಯಜ್ಞರಕ್ಷಕನಾದಾತನನ್ನು ನೋಡಲಿಚ್ಛಿಸುತ್ತೇನೆ. ಆತನು

---

ಟಿ. (೧) ಶತಾನಂದರನ್ನು ಕುರಿತು ಜನಕರಾಯನು ತನ್ನ ತಮ್ಮನಾದ ಕುಶಧ್ವಜನನ್ನು ಅನೇಕ ವಿಶೇಷಣಗಳಿಂದ ಹೊಗಳಿದುದು ಶತಾನಂದರಿಗೆ ತಿಳಿಸುವದಕ್ಕೋಸ್ಕರವಲ್ಲ ಆತನಿಗೀ ವಿಷಯಗಳು ತಿಳಿದೇ ಇದ್ದವು. ಆದರೆ ಕುಶಧ್ವಜನ ಪ್ರಭಾವವನ್ನರಿಯದ ದಶರಥನೇ ಮುಂತಾದ ಶ್ರೋತೃಗಳ ವಿಜ್ಞಾನಾರ್ಥವಾಗಿ ಆತನೀರೀತಿಬಕ್ಕಣಿಸಿದನೆಂದು ಊಹಿಸಲೇ ಬೇಕು.

ತಮಹಂ ದ್ರಷ್ಟುಮಿಚ್ಛಾಮಿ ಯಜ್ಞಗೋಪ್ತಾ ಸಮೇ ಮತಃ ॥ ಪ್ರೀತಿಂ ಸೋಪಿ ಮಹಾತೇಜಾ ಇಮಾಂ ಭೋಕ್ತಾ ಮಯಾ ಸಹ ॥೪॥ (೧)(ಏವಮು ಕ್ತೇತು ವಚನೇ ಶತಾನಂದಸ್ಯ ಸನ್ನಿಧೌ ॥ ಅಗತಾಃ ಕೇಚಿದವ್ಯಗ್ರಾ ಜನಕಸ್ತಾನ್ ಸಮಾದಿಶತ್) ಶಾಸನಾತ್ತು ನರೇಂದ್ರಸ್ಯ ಪ್ರಯಯುಶ್ಶೀಘ್ರವಾಜಿಭಿಃ ॥ ಸಮಾ ನೇತುಂ ನರವ್ಯಾಘ್ರಂ ವಿಷ್ಣುಮಿಂದ್ರಾಜ್ಞಯಾ ಯಥಾ ॥೫॥ (ಸಾಂಕಾ ಶ್ಯಾಂ ತೇಸಮಾಗತ್ಯ ದದೃಶುಶ್ಚ ಕುಶಧ್ವಜಂ ॥ ನ್ಯವೇದಯ ನ್ಯಥಾವೃತ್ತಂ ಜನ ಕಸ್ಯಚ ಚಿಂತಿತಂ॥ತದ್ವೃತ್ತಂ ನೃಪತಿ ಶ್ರ್ಯುತ್ವಾ ದೂತಶ್ರೇಷ್ಠೈರ್ಮಹಾಬಲೈಃ॥ ಆಜ್ಞಯಾಥ ನರೇಂದ್ರಸ್ಯ ಆಜಗಾಮ ಕುಶಧ್ವಜಃ ॥ ಸದದರ್ಶ ಮಹಾತ್ಮಾನಂ ಜನಕಂ ಧರ್ಮವತ್ಸಲಂ ॥ ೬ ॥ ಸೋಭಿವಾದ್ಯ ಶತಾನಂದಂ ರಾಜಾನಂ

---

ಅವೇಕ್ಷಿಸುತ್ತೇನ, ಸಃ - ಆ ಕುಶಧ್ವಜನು, ಮೇ - ನನ್ನ, ಯಜ್ಞಗೋಪ್ತಾ - ಯಜ್ಞಸಂರಕ್ಷಕನಾಗಿ, ಮತಃ - ಸಮ್ಮತನು, ಮಹಾತೇಜಾಃ-ಮಹಾ ಪರಾಕ್ರಮಶಾಲಿಯಾದ, ಸೋಪಿ-ಆ ಕುಶಧ್ವಜನೂ, ಮಯಾಸಹ - ನನ್ನೊಡನೆ, ಇಮಾಂ - ಈ, ಪ್ರೀತಿಂ - ಸಂತೋಷವನ್ನು- ಭೋಕ್ತಾ - ಅನುಭವಿ ಸುವನು, ನರೇಂದ್ರಸ್ಯ - ಜನಕರಾಯನ, ಶಾಸನಾತ್ - ಆಜ್ಞೆಯಿಂದ, ದೂತಾಃ - ಭಟರು, ಶೀಘ್ರವಾಜಿಭಿಃ - ವೇಗವುಳ್ಳ, ಅಶ್ವಗಳಿಂದ, ಇಂದ್ರಾಜ್ಞಯಾ - ದೇವೇಂದ್ರನ ಆಜ್ಞೆಯಿಂದ, ವಿಷ್ಣುಂಯಥಾ - ಶ್ರೀ ಮಹಾ ವಿಷ್ಣುವಿನಂತೆ, (ಉಪೇಂದ್ರನಂತೆ) ನರವ್ಯಾಘ್ರಂ - ಪುರುಷಶ್ರೇಷ್ಠ ನಾದ ಕುಶಧ್ವಜನನ್ನು, ಸಮಾನೇತುಂ ಕರದುಕೊಂಡು ಬರಲು, ಪ್ರಯಯುಃ - ಹೊರಟರು. ॥೫॥ ಅಥ - ಬಳಿಕ, ಸಕುಶಧ್ವಜಃ - ಆ ಕುಶಧ್ವಜನು, ನರೇಂದ್ರಸ್ಯ - ಜನಕರಾಯನ, ಆಜ್ಞಯಾ - ಆಜ್ಞೆಯಿಂದ, ಆಜಗಾಮ - ಬಂದನು, ಧರ್ಮವತ್ಸಲಂ - ಧರ್ಮಾಭಿಮಾನಿಯಾದ, ಮಹಾತ್ಮಾನಂ - ಮಹಾ ಮನಸ್ವಿಯಾದ, ಜನಕಂ - ಜನಕರಾಯನನ್ನು, ದದರ್ಶ - ಕಂಡನು. ॥ ೬ ॥ ಸಃ - ಆ ಕುಶಧ್ವಜನು, ಶತಾನಂದಂ - ಶತಾನಂದ ಋಷಿಯನ್ನು, ಅಭಿವಾದ್ಯ - ನಮಸ್ಕ ರಿಸಿ, ಧಾರ್ಮಿಕಂ - ಧರ್ಮಿಷ್ಠನಾದ, ರಾಜಾನಂಚಾಪಿ - ಜನಕರಾಯನನ್ನೂ, ಅಭಿವಾದ್ಯ -

---

ಈ ವಿವಾಹ ವಿಜೃಂಭಣೆಯನ್ನು ನೋಡಿ ನನ್ನೊಡನೆ ಆನಂದಿಸತಕ್ಕವನು" ಎಂಬನು ॥೪॥ ಜನಕರಾಯನೀರೀತಿ ಶತಾನಂದರ ಸನ್ನಿಧಿಯಲ್ಲಿ ನುಡಿಯಲು ಸಂಭ್ರಮಯುಕ್ತರಾದ ಕೆಲ ದೂತರು, ಬರಲು, ಆತನವರಿಗೆ, ಕುಶಧ್ವಜರಾಯನನ್ನು ಕರೆತರುವಂತೆ ಅಪ್ಪಣೆಮಾಡಿದನು. ಇಂತು ಆಜ್ಞಪ್ತರಾದ ಆ ದೂತರು, ಆ ರಾಯನ ಆಣತಿಯಂತೆ ಶೀಘ್ರಗಾಮಿಗಳಾದ ಅಶ್ವಗ ಳೊಡನೆ, ಇಂದ್ರಾಜ್ಞೆಯಿಂದ ಉಪೇಂದ್ರನನ್ನು ಕರೆತರಲು ಹೊರಟ ದೂತರಂತೆ ಬೇಗನೆ ಹೊರಟು ಸಕಲ ವೃತ್ತಾಂತವನ್ನೂ ಆ ಕುಶಧ್ವಜರಾಯನಿಗರುಹಿದರು. ಆ ರಾಯನಾದೂ ತರ ನುಡಿಗಳನ್ನು ಕೇಳಿ ಅಣ್ಣನಾಣತಿಯಂತೆ ಮಿಥಿಲಾಪಟ್ಟಣಕ್ಕೆ ಬಂದು ಧರ್ಮವತ್ಸಲನಾದ ಜನಕರಾಯನನ್ನು ಕಂಡವನಾದನು. ॥ ೬ ॥ ಇಂತು ಬಂದ ಆ ಕುಶಧ್ವಜನು ಮೊದಲು ಪುರೋಹಿತರಾದ ಶತಾನಂದರನ್ನು ನಮಸ್ಕರಿಸಿ, ಆ ಬಳಿಕ ಜನಕರಾಜನನ್ನು ವಂದಿಸಿ ರಾಜಾ

---

(೧) ಅಧಿಕ ಪಾಠ.

ಚಾಪಿ ಧಾರ್ಮಿಕಂ || ರಾಜಾರ್ಹಂ ಪರಮಂ ದಿವ್ಯಮಾಸನಂ ಚಾಧ್ಯರೋಹತ ||
೭ || ಉಪವಿಷ್ಟಾ ವುಭೌತೌತು ಭ್ರಾತರಾ ವತಿ ತೇಜಸೌ || ಪ್ರೇಷಯಾಮಾಸ
ತುರ್ವೀರೌ ಮಂತ್ರಿಶ್ರೇಷ್ಠಂ ಸುದಾಮನಂ || ೮ || ಗಚ್ಛ ಮಂತ್ರಿಪತೇಶೀಘ್ರ
ಮೈಕ್ಷ್ವಾಕು ಮಮಿತಪ್ರಭಂ || ಆತ್ಮಜೈ ಸ್ಸಹದುರ್ಧರ್ಷ ಮಾನಯಸ್ವ ಸಮಂ
ತ್ರಿಣಂ || ೯ || ಔಪಕಾರ್ಯಂ ಸಗತ್ವಾತು ರಘೂಣಾಂ ಕುಲವರ್ಧನಂ ||
ದದರ್ಶ ಶಿರಸಾ ಚೈನಮಭಿವಾದ್ಯೇದ ಮಬ್ರವೀತ್ || ೧೦ || ಅಯೋಧ್ಯಾಧಿ
ಪತೇ ವೀರ ವೈದೇಹೋ ಮಿಥಿಲಾಧಿಪಃ || ಸತ್ವಾಂ ದ್ರಷ್ಟುಂ ವ್ಯವಸಿತ ಸ್ಸೋಪಾ

ನಮಸ್ಕರಿಸಿ, ರಾಜಾರ್ಹಂ - ರಾಜರಿಗೆ ಅರ್ಹವಾದ, ಪರಮಂ - ಶ್ರೇಷ್ಠವಾದ, ದಿವ್ಯಂ-ಮನೋಹರವಾದ, ಆಸನಂಚ - ಸಿಂಹಾಸನವನ್ನು, ಅಧ್ಯರೋಹತ - ಏರಿದನು. || ೭ || ಉಪವಿಷ್ಟಾ - ಕುಳಿತುಕೊಂಡಿರುವ, ಭ್ರಾತರೌ - ಅಣ್ಣತಮ್ಮಂದಿರಾದ, ಅತಿತೇಜಸೌ - ಬಹಳ ತೇಜಸ್ವಿಗಳಾದ, ವೀರೌ - ಶೂರರಾದ, ತಾವುಭೌ - ಆ ಜನಕಕುಶಧ್ವಜರಿಬ್ಬರೂ, ಮಂತ್ರಿಶ್ರೇಷ್ಠಂ - ಮಂತ್ರಿಗಳಲ್ಲಿ ಶ್ರೇಷ್ಠರಾದ, ಸುದಾಮನಂ - ಸುದಾಮನೆಂಬವನನ್ನು, ಪ್ರೇಷಯಾಮಾಸತುಃ - ಕಳುಹಿದರು. || ೮ || ಹೇಮಂತ್ರಿಪತೇ - ಎಲೈ ಮಂತ್ರಿಶ್ರೇಷ್ಠನೇ, ಶೀಘ್ರಂ - ಜಾಗ್ರತೆಯಾಗಿ, ಗಚ್ಛ-ಹೋಗು, ಅಮಿತಪ್ರಭಂ - ಅಪಾರ ತೇಜಸ್ಸುಳ್ಳವನೂ, ದುರ್ಧರ್ಷಂ - ಜಯಿಸಲಸಾಧ್ಯನೂ, ಆತ್ಮಜೈಸ್ಸಹ- ಕುವರರೊಡನೆಯೂ, ಸಮಂತ್ರಿಣಂ - ವಸಿಷ್ಠಾದಿ ಮುನಿಗಳಿಂದ ಕೂಡಿದವನೂ ಆದ, ಐಕ್ಷ್ವಾಕುಂ - ಐಕ್ಷ್ವಾಕುವಂಶೋತ್ಪನ್ನನಾದ ದಶರಥರಾಯನನ್ನು, ಆನಯಸ್ವ - ಕರೆದುಕೊಂಡು ಬಾ. || ೯ || ಸಃ - ಆ ಸುದಾಮನೆಂಬ ಮಂತ್ರಿಯು, ಔಪಕಾರ್ಯಂ - ದಶರಥ ರಾಯನರಮನೆಯನ್ನು ಕುರಿತು, ಗತ್ವಾ - ಹೋಗಿ, ರಘೂಣಾಂ - ರಘುವಂಶದವರಿಗೆ, ಕುಲವರ್ಧನಂ - ವಂಶಾಭಿವೃದ್ಧಿಯನ್ನು ಮಾಡಿದ ದಶರಥನನ್ನು, ದದರ್ಶ - ಕಂಡನು, ಶಿರಸಾ - ಸಿರಸ್ಸಿನಿಂದ, ಏನಂ - ಈ ದಶರಥರಾಯನನ್ನು, ಅಭಿವಾದ್ಯ - ವಂದಿಸಿ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು, || ೧೦ || ಹೇಅಯೋಧ್ಯಾಧಿಪತೇ-ಎಲೈ ಅಯೋಧ್ಯಾಪಟ್ಟಣದ ರಾಜನೆ, ಹೇವೀರ - ಎಲೈ ಶೂರನೇ, ಮಿಥಿಲಾ

ರ್ಹವಾದ ಸಿಂಹಾಸನವನ್ನಲಂಕರಿಸಿದನು. ಆ ಬಳಿಕ ಉಚಿತವಾದಾಸನಗಳಲ್ಲಿ ಕುಳಿತುಕೊಂಡ ವೀರರೂ, ಮಹಾತೇಜಸ್ವಿಗಳೂ ಅಣ್ಣತಮ್ಮಂದಿರೂ ಆದ ಆ ಜನಕ ಕುಶಧ್ವಜರು ಮಂತ್ರಿ ಪುಂಗವನಾದ ಸುದಾಮನನ್ನು "ಎಲೈ ಮಂತ್ರಿರಾಜನೆ! ಬೇಗನೆ ಹೊರಡುವವನಾಗು ಮಹಾ ಪ್ರಭಾವಶಾಲಿಯೂ, ರಾಮಲಕ್ಷ್ಮಣಾದಿ ಕುವರರಿಂದಲೂ, ಮಂತ್ರಿಗಳಿಂದಲೂ ಒಡಗೂಡಿದ ಇಕ್ಷ್ವಾಕುಲೋದ್ಭವನಾದ ದಶರದರಾಯನನ್ನು ಕರೆತರುವವನಾಗು," ಎಂದು ಹೇಳಿಕಳುಹಿದರು. || ೯ || ಆಗಲಾ ಸುದಾಮನು ದಶರಥರಾಯನ ಶಿಬಿರಕ್ಕೆ ಬಂದು ರಘುಕುಲತಿಲಕನಾದ ದಶರಥರಾಯನನ್ನು ನೋಡಿ, ಆತನನ್ನು ವಂದಿಸಿ, "ಎಲೈ ವೀರನಾದ ಅಯೋಧ್ಯಾಪಟ್ಟಣದೊಡೆಯನೆ! ನಮ್ಮ ಸ್ವಾಮಿಯೂ, ಮಿಥಿಲಾಧಿಪತಿಯೂ ಆದ ಜನಕರಾಯನು, ಉಪಾಧ್ಯಾಯಪುರೋಹಿತರಿಂದೊಡಗೂಡಿದ ನಿನ್ನನ್ನು ನೋಡಲಪೇಕ್ಷಿಸುತ್ತಾನೆ.

ಧ್ಯಾಯ ಪುರೋಹಿತಂ ||೧೧|| ಮಂತ್ರಿಶ್ರೇಷ್ಠ ವಚಶ್ಶ್ರುತ್ವಾ ರಾಜಾ ಸರ್ಷಿ ಗಣಸ್ತದಾ||ಸಬಂಧುರಗಮತ್ತತ್ರ ಜನಕೋ ಯತ್ರ ವರ್ತತೇ ||೧೨|| ಸರಾಜಾ ಮಂತ್ರಿಸಹಿತ ಸ್ಸೋಪಾಧ್ಯಾಯ ಸ್ಸಬಾಂಧವಃ || ವಾಕ್ಯಂ ವಾಕ್ಯವಿದಾಂ ಶ್ರೇಷ್ಠೋ ವೈದೇಹ ಮಿದ ಮಬ್ರವೀತ್ ||೧೩|| ವಿದಿತಂ ತೇಮಹಾರಾಜ ಇಕ್ಷ್ವಾಕು ಕುಲ ದೈವತಂ || ವಕ್ತಾ ಸರ್ವೇಷು ಕೃತ್ಯೇಷು ವಸಿಷ್ಠೋ ಭಗವಾ ನೃಷಿಃ ||೧೪|| ವಿಶ್ವಾಮಿತ್ರಾ ಭ್ಯನುಜ್ಞಾತ ಸ್ಸಹಸರ್ವೈ ರ್ಮಹರ್ಷಿಭಿಃ || ಏಷ ವಕ್ಷ್ಯತಿ ಧರ್ಮಾತ್ಮಾ ವಸಿಷ್ಠೋ ಮೇಯಥಾ ಕ್ರಮಂ ||೧೫|| ಏವ

ಧಿಪಃ - ಮಿಥಿಲಾಧಿಪತಿಯಾದ, ಸವೈದೇಹಃ-ಆ ಜನಕರಾಯನನ್ನು, ಸೋಪಾಧ್ಯಾಯಪುರೋಹಿತಂ- ಉಪಾಧ್ಯಾಯರಿಂದಲೂ ಪುರೋಹಿತರಿಂದಲೂ ಒಡಗೂಡಿದ, ತ್ವಾಂ - ನಿನ್ನನ್ನು, ದ್ರಷ್ಟುಂ - ನೋಡಲು, ವ್ಯವಸಿತಃ - ಉದ್ಯೋಗಗೊಂಡಿರುವೆನು. ||೧೧|| ಮಂತ್ರಿಶ್ರೇಷ್ಠವಚಃ - ಮಂತ್ರಿ ಶ್ರೇಷ್ಠನಾದ ಸುದಾಮನ ಮಾತನ್ನು, ಶ್ರುತ್ವಾ - ಕೇಳಿ, ರಾಜಾಚ - ದಶರಥರಾಜನೂ, ತದಾ- ಆ ಕ್ಷಣದಲ್ಲಿ, ಸರ್ಷಿಗಣಃ – ಋಷಿಗಳಿಂದೊಡಗೂಡಿ, ಸಬಂಧುಃ - ಬಂಧುಸಮೇತನಾಗಿ, ಜನಕಃ- ಜನಕರಾಯನು, ಯತ್ರ – ಯಾವ ಸ್ಥಳದಲ್ಲಿ, ವರ್ತತೇ - ಇರುವನೊ. ತತ್ರ-ಅಲ್ಲಿಗೆ, ಅಗಮತ್- ಬಂದನು. ||೧೨|| ಮಂತ್ರಿಸಹಿತಃ - ಮಂತ್ರಿಗಳಿಂದ ಕೂಡಿರುವ, ಸೋಪಾಧ್ಯಾಯಃ - ಉಪಾಧ್ಯಾಯರಿಂದೊಡಗೂಡಿದ, ಸಬಾಂಧವಃ - ಬಂಧುಸಮೇತನಾದ, ವಾಕ್ಯವಿದಾಂ - ನುಡಿಚತುರರಲ್ಲಿ, ಶ್ರೇಷ್ಠಃ - ಶ್ರೇಷ್ಠನಾದ, ಸರಾಜಾ - ಆ ದಶರಥರಾಜನು, ವೈದೇಹಂ - ಜನಕರಾಯನನ್ನು, ಕುರಿತು, ಇದಂವಾಕ್ಯಂ - ಈ ಮಾತನ್ನು, ಅಬ್ರವೀತ್ - ನುಡಿದನು. ||೧೩|| ಹೇಮಹಾರಾಜ- ಎಲೈ ಮಹಾರಾಜನೇ, ಇಕ್ಷ್ವಾಕುಕುಲದೈವತಂ - ಇಕ್ಷ್ವಾಕುಮಹಾರಾಜನ ಕುಲಕ್ಕೆ ದೇವತಾಸ್ವರೂಪನಾದ, ಭಗವಾನ್ - ಪೂಜ್ಯನಾದ, ಋಷಿಃ - ಋಷಿಯಾದ, ವಸಿಷ್ಠಃ-ವಸಿಷ್ಠನು, ಸರ್ವೇಷು - ಸಮಸ್ತಗಳಾದ, ಕೃತ್ಯೇಷು - ಕಾರ್ಯಗಳಲ್ಲಿ, ವಕ್ತಾ - ಹೇಳತಕ್ಕವನು, ಇತಿ - ಇಂತೆಂದು, ತೇ - ನಿನಗೆ, ವಿದಿತಂ - ತಿಳಿದಿರುವುದಷ್ಟೆ. ||೧೪|| ವಿಶ್ವಾಮಿತ್ರಾಭ್ಯನುಜ್ಞಾತಃ - ವಿಶ್ವಾಮಿತ್ರನಿಂದ ಸಮ್ಮತಿಸಲ್ಪಟ್ಟ, ಧರ್ಮಾತ್ಮಾ - ಧರ್ಮಿಷ್ಠನಾದ, ಏಷವಸಿಷ್ಠಃ - ಈ ವಸಿಷ್ಠ ಋಷಿಯು, ಸರ್ವೈಃ - ಸಮಸ್ತರಾದ, ಮಹರ್ಷಿಭಿಸ್ಸಹ - ಋಷಿಗಳೊಡನೆ, ಮೇ - ನನ್ನ, ಕುಲಂ-ಕುಲವನ್ನು, ಯಥಾಕ್ರಮಂ - ಕ್ರಮಾನುಸಾರವಾಗಿ, ವಕ್ಷ್ಯತಿ - ಹೇಳುವನು. ||೧೫|| ದಶರಥೇ - ದಶರಥ

ಬಿಜಯಮಾಡಬೇಕು"ಎಂದನು ಮಂತ್ರಿಶ್ರೇಷ್ಠನಾದ ಸುದಾಮನ ನುಡಿಗಳನ್ನು ಕೇಳಿ ದಶರಥ ರಾಜನು ಋಷಿಗಣಗಳಿಂದಲೂ, ಕುಟುಂಬ ಪರಿವಾರ ಸಮೇತನಾಗಿಯೂ ಹೊರಟು ಜನಕ ರಾಯನಿದ್ದೆಡೆಗೆ ಬಂದವನಾದನು. ಆ ಬಳಿಕ ನುಡಿಜಾಣ್ಮೆಯುಳ್ಳವರಲ್ಲಿ ಅತಿಕುಶಲನಾದಾ ದಶರಥನು ಜನಕರಾಯನನ್ನು ಕುರಿತು, "ಎಲೈ ರಾಜನೆ! ಇಕ್ಷ್ವಾಕು ಕುಲದವರಿಗೆ ಪುರೋಹಿತರಾದ ವಸಿಷ್ಠರೇ ದೇವತಾ ಸ್ವರೂಪರೆಂಬುದು ನಿನಗೆ ತಿಳಿದೇ ಇರುವುದು. ವಿಶ್ವಾಮಿತ್ರ ಮುನಿಯಿಂದಲೂ, ಇಲ್ಲಿ ನೆರದಿರುವ ಸಕಲ ಋಷಿಗಳಿಂದಲೂ, ಅನುಜ್ಞಾತರಾದ ಆ ವಸಿಷ್ಠರು ನಮ್ಮ ವಂಶದ ಪವಿತ್ರತೆಯ ವಿಷಯವೆಲ್ಲವನ್ನೂ, ಕ್ರಮವಾಗಿ ಹೇಳುತ್ತಾರೆ" ಎಂದನು. ||

ಮುಕ್ತ್ವಾ ನರಶ್ರೇಷ್ಠೇ ರಾಜ್ಞಾಂ ಮಧ್ಯೇ ಮಹಾತ್ಮನಾಂ || ತೂಷ್ಣೀಂ ಭೂತೇ
ದಶರಥೇ ವಸಿಷ್ಠೋ ಭಗವಾನೃಷಿಃ ||ಉವಾಚ ವಾಕ್ಯಂ ವಾಕ್ಯಜ್ಞೋ ವೈದೇಹಂ
ಸಪುರೋಧಸಂ || ೧೬ || ಅವ್ಯಕ್ತ ಪ್ರಭವೋ ಬ್ರಹ್ಮಾ ಶಾಶ್ವತೋ ನಿತ್ಯ ಅವ್ಯ
ಯಃ || ಅಸ್ಮಾನ್ಮರೀಚಿ ಸ್ಸಂಜಜ್ಞೇ ಮರೀಚೇಃ ಕಾಶ್ಯಪ ಸ್ಸುತಃ || ೧೭ ||
ವಿವಸ್ವಾನ್ ಕಾಶ್ಯಪಾ ಜ್ಜಜ್ಞೇ ಮನುರ್ವೈ ವಸ್ವತ ಸ್ಮೃತಃ || ಮನುಃ ಪ್ರಜಾ
ಪತಿಃ ಪೂರ್ವ ಮಿಕ್ಷ್ವಾಕುಸ್ತುಮನೋಃ ಸ್ಸುತಃ || ೧೮ || ತಮಿಕ್ಷ್ವಾಕು
ಮಯೋಧ್ಯಾಯಾಂ ರಾಜಾನಂ ವಿದ್ಧಿ ಪೂರ್ವಕಂ || ಇಕ್ಷ್ವಾಕೋಸ್ತು ಸುತ
ಶ್ಶ್ರೀಮಾನ್ ಕುಕ್ಷಿರಿತ್ಯೇವ ವಿಶ್ರುತಃ || ೧೯ || ಕುಕ್ಷೇರಥಾತ್ಮಜ ಶ್ಶ್ರೀಮಾನ್

---

ರಾಯನು, ತೂಷ್ಣೀಂಭೂತೇಸತಿ - ಸುಮ್ಮನಾಗಲು ಭಗವಾನ್ - ಷಡ್ಗುಣೈಶ್ವರ್ಯಸಂಪನ್ನನಾದ, ವಸಿಷ್ಠಃ - ವಸಿಷ್ಠಋಷಿಯು, ವಾಕ್ಯಜ್ಞಃ - ವಾಕ್ಯಜ್ಞನಾದ ಕಾರಣ, ಸಪುರೋಧಸಂ - ಪುರೋಹಿತನಿಂತೊಡಗೂಡಿದ, ವೈದೇಹಂ -ಜನಕರಾಯನನ್ನು ಕುರಿತು, ವಾಕ್ಯಂ - ಮಾತನ್ನು, ಉವಾಚ-ಹೇಳಿದನು. || ೧೬ || (೧) ಅವ್ಯಕ್ತಪ್ರಭವಃ(ಗೋ)ಪ್ರತ್ಯಕ್ಷಾದ್ಯಗೋಚರವಾದ ವಸ್ತುವೇ, ಉತ್ಪತ್ತಿಕಾರಣವಾಗುಳ್ಳ (ಮ) ಪ್ರತ್ಯಕ್ಷಾದ್ಯಗೋಚರನಾದ ವಿಷ್ಣುವೇ ಕಾರಣವಾಗುಳ್ಳ, ಶಾಶ್ವತಃ - ಬಹುಕಾಲ ಸ್ಥಾಯಿಯಾಗಿರುವ, ನಿತ್ಯಃ - ಬ್ರಹ್ಮಪ್ರಳಯ ಪರ್ಯಂತಾವಸ್ಥಿತನಾದ, ಅವ್ಯಯಃ-ನಾಶರಹಿತನಾದ, ಬ್ರಹ್ಮಾ - ಚತುರ್ಮುಖನು, ಅಸ್ತಿ - ಇರುವನು, ತಸ್ಮಾತ್ - ಆ ಬ್ರಹ್ಮನಿಂದ, ಮರೀಚಿಃ - ಮರೀಚಿ ಬ್ರಹ್ಮನು, ಸಂಜಜ್ಞೇ - ಆದನು. || ೧೭ || ಮರೀಚೇಃ - ಮರೀಚಿಗೆ, ಕಾಶ್ಯಪಃ - ಕಾಶ್ಯಪನು, ಸುತಃ - ಕುಮಾರನು, ಕಾಶ್ಯಪಾತ್ - ಕಶ್ಯಪಬ್ರಹ್ಮನಿಂದ, ವಿವಸ್ವಾನ್ - ಸೂರ್ಯನು, ಜಜ್ಞೇ - ಹುಟ್ಟಿದನು, ಮನುಃ - ಮನುವು, ಪೂರ್ವಂ - ಮೊದಲು, ಪ್ರಜಾಪತಿಃ - ಅರಸಾಗಿ, ಆಸೀತ್ - ಆದನು, ಇಕ್ಷ್ವಾಕುಸ್ತು - ಇಕ್ಷ್ವಾಕು ಮಹಾರಾಯನು, ಮನೋಃ - ಮನುಚಕ್ರವರ್ತಿಗೆ, ಸುತಃ - ಕುಮಾರನು. || ೧೮ || ತಮಿಕ್ಷ್ವಾಕುಂ - ಆ ಇಕ್ಷ್ವಾಕು ಮಹಾರಾಯನನ್ನು, ಅಯೋಧ್ಯಾಯಾಂ - ಅಯೋಧ್ಯಾಪಟ್ಟಣದಲ್ಲಿ, ಪೂರ್ವಕಂ - ಪ್ರಾಚೀನನಾದ, ರಾಜಾನಂ-ಅರಸನ್ನಾಗಿ, ವಿದ್ಧಿ - ತಿಳಿವವನಾಗಲು, ಇಕ್ಷ್ವಾಕೋಸ್ತು-ಇಕ್ಷ್ವಾಕು ಮಹಾರಾಜನಿಗೆ, ಶ್ರೀಮಾನ್-ಸಂಪದ್ಯುಕ್ತನಾದ, ಕುಕ್ಷಿರಿತ್ಯೇವ - ಕುಕ್ಷಿಯೆಂದು,ವಿಶ್ರುತಃ - ಪ್ರಸಿದ್ಧನಾದ, ಸುತಃ - ಕುವರನು. || ೧೯ || ಅಥ - ಬಳಿಕ, ಶ್ರೀಮಾನ್ - ಸಂಪದ್ಯುಕ್ತನಾದ, ಕುಕ್ಷೇಃ - ಕುಕ್ಷಿಗೆ, ಆತ್ಮಜಃ- ಕುವರ

---

೧೫ || ದಶರಥರಾಯನಿಂತು ನುಡಿದು ಸುಮ್ಮನಾಗಲು, ಪೂಜ್ಯನೂ, ಬ್ರಹ್ಮರ್ಷಿಯೂ ಆದ ವಸಿಷ್ಠಮುನಿಯು ಪುರೋಹಿತ ಸಹಿತನಾದ ಜನಕರಾಜನನ್ನು ಕುರಿತು ಹೀಗೆ ಹೇಳಿದನು. || ೧೬ || "ಎಲೈ ಜನಕರಾಜನೆ! ಕೇಳು; ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅಗೋಚರನಾದ ವಿಷ್ಣುಪುತ್ರನೂ, ಶಾಶ್ವತನೂ, ಅವ್ಯಯನೂ, ನಿತ್ಯನೂ ಆದ ಬ್ರಹ್ಮನಿರುವನಷ್ಟೆ? ಆತನಿಂದ ಮರೀಚಿ ಬ್ರಹ್ಮನುಂಟಾದನು. ಈ ಮರೀಚಿ ಬ್ರಹ್ಮನಿಗೆ ಕಾಶ್ಯಪನೆಂಬ ಕುವರನಾದನು. ವಿವಸ್ವಾನನು ಕಾಶ್ಯಪನ ಕುವರನು. ಈತನ ಮಗನೇ ಮನುವೆಂದು ವಿಖ್ಯಾತನಾದವನು.

---

ಟಿ. (೧) "ಅವ್ಯಕ್ತಂ" ಪ್ರತ್ಯಕ್ಷಾನು ಮಾನಾದಿ ಪ್ರಮಾಣಗಳಿಂದ ಅಗೋಚರನಾದ ಯಾವ ಶ್ರೀಮನ್ನಾರಾಯಣನುಂಟೋ ಆತನೇ "ಪ್ರಭವಃ" ಉತ್ಪತ್ತಿಗೆ ಕಾರಣವಾಗುಳ್ಳವನು ಬ್ರಹ್ಮನೆಂದು ಅರ್ಥವಾಗುವುದು. "ಅವ್ಯಕ್ತಂ" ಎಂದರೆ ಮುಂದೆ ಅಯೋಧ್ಯಾ ಕಾಂಡದಲ್ಲಿ ಸೂಚಿಸುವಂತೆ "ಆಕಾಶ ಪ್ರಭವೋಽಬ್ರಹ್ಮಾ" ಯಾರ ಉತ್ಪತ್ತಿಗೆ ಆಕಾಶವೇ ಕಾರಣವಾದುದೋ ಅವನೇ ಬ್ರಹ್ಮನು. "ಕೋಽಯಮಾಕಾಶಃ" ಇತ್ಯಾಕಾಂಕ್ಷಾಯಾಂ ಉತ್ತರಕಾಂಡೇ ವಕ್ಷ್ಯತಿ. "ಸಂಕ್ಷಿಪ್ಯಹಿಪುರಾಲೋಕಾನ್ಮಾಯಯಾ ಸ್ವಯಮೇವಹಿ" ಮಹಾರ್ಣವೇಶಯಾನೋಽಪ್ಸುಮಾಂತ್ವಂ ಪೂರ್ವಮಜೀಜನಃ || ಪದ್ಮೇದಿವ್ಯಾರ್ಕಸಂಕಾಶೇನಾಭ್ಯಾಮುತ್ಪಾದ್ಯಮಾಮಪಿ || ಪ್ರಾಜಾಪತ್ಯಂತ್ವಯಾಕರ್ಮ ಸರ್ವಂಮಯಿನಿವೇಶಿತಂ || ಇತಿ.

ವಿಕುಕ್ಷಿರುದಪದ್ಯತ ॥ ವಿಕುಕ್ಷೇಸ್ತು ಮಹಾತೇಜಾ ಬಾಣಃ ಪುತ್ರಃ ಪ್ರತಾಪವಾನ್॥ ೨೦॥ ಬಾಣಸ್ಯ ತು ಮಹಾತೇಜಾ ಅನರಣ್ಯಃ ಪ್ರತಾಪವಾನ್ ॥ ಅನರಣ್ಯಾದ್ವೈ ಪೃಥುರ್ಜಜ್ಞೇ ತ್ರಿಶಂಕು ಸ್ತು ಪೃಥೋಸ್ಸುತಃ ॥ ೨೧ ॥ತ್ರಿಶಂಕೋ ರಭವತ್ಪುತ್ರೋ ದುಂದುಮಾರೋ ಮಹಾಯಶಾಃ ॥ ಯುವನಾಶ್ವ ಸುತಸ್ತ್ವಾಸೀನ್ಮಾಂಧಾತಾ ಪೃಥಿವೀಪತಿಃ ॥ ೨೨ ॥ ಮಾಂಧಾತು ಸ್ತು ಸುತಶ್ಶ್ರೀಮಾನ್ ಸುಸಂಧಿ ರುದಪದ್ಯತ ॥ ಸುಸಂಧೇರಪಿ ಪುತ್ರೌದ್ವೌ ಧ್ರುವಸಂಧಿಃ ಪ್ರಸೇನಜಿತ್ ॥ ೨೩ ॥ ಯಶಸ್ವೀ ಧ್ರುವಸಂಧೇ ಸ್ತು ಭರತೋ ನಾಮ ನಾಮತಃ ॥

---

ನಾದ, ವಿಕುಕ್ಷಿಃ - ವಿಕುಕ್ಷಿಯು, ಉಪಪದ್ಯತ - ಹುಟ್ಟಿದನು, ವಿಕುಕ್ಷೇಸ್ತು - ವಿಕುಕ್ಷಿಗಾದರೆ, ಮಹಾತೇಜಾಃ - ಮಹಾ ತೇಜಸ್ವಿಯಾದ, ಪ್ರತಾಪವಾನ್ - ಪರಾಕ್ರಮಶಾಲಿಯಾದ, ಬಾಣಃ - ಬಾಣನೆಂಬವನು, ಪುತ್ರಃ - ಕುವರನು ॥ ೨೦ ॥ ಬಾಣಸ್ಯತು-ಬಾಣನಿಗಾದರೆ, ಮಹಾತೇಜಾಃ-ಮಹಾ ಧೈರ್ಯಶಾಲಿಯಾದ, ಪ್ರತಾಪವಾನ್ - ಪರಾಕ್ರಮವಂತನಾದ, ಅನರಣ್ಯಃ - ಅನರಣ್ಯನೆಂಬವನು, ಅನರಣ್ಯಾತ್ - ಅನರಣ್ಯನಿಂದ, ಪೃಥುಃ - ಪೃಥುರಾಯನು, ಜಜ್ಞೇ - ಹುಟ್ಟಿದನು, ತ್ರಿಶಂಕುಸ್ತು - ತ್ರಿಶಂಕುರಾಯನಾದರೆ, (ಹಿಂದೆಯೇ ತ್ರಿಶಂಕುರಾಯನ ವೃತ್ತಾಂತವನ್ನು ಟಿಪ್ಪಣಿಯಲ್ಲಿ ಬರೆದಿರುತ್ತೇವೆ.) ಪೃಥೋಃ - ಪೃಥುರಾಯನಿಗೆ, ಸುತಃ - ಕುಮಾರನು. ॥ ೨೧ ॥ ತ್ರಿಶಂಕೋಃ-ತ್ರಿಶಂಕುಮಹಾರಾಯನಿಗೆ, ಪುತ್ರಃ - ಮಗನು, ಮಹಾಯಶಾಃ - ಮಹಾ ಯಶೋವಂತನಾದ, ದುಂದುಮಾರಃ - ದುಂದುಮಾರನು, ಅಭವತ್ - ಆದನು, ಯುವನಾಶ್ವಸುತಃ-ದುಂದುಮಾರನೆಂಬ ಹೆಸರುಳ್ಳ ಯುವನಾಶ್ವನಿಗೆ ಕುಮಾರನಾದ, ಮಾಂಧಾತಾ - ಮಾಂಧಾತನೆಂಬ, ಪೃಥಿವೀಪತಿಃ - ಭೂಪತಿಯು, ಆಸೀತ್ - ಆದನು. ॥ ೨೨ ॥ ಮಾಂಧಾತುಸ್ತು- ಮಾಂಧಾತೃವಿಗೆ, ಸುತಃ ಕುವರನಾದ, ಶ್ರೀಮಾನ್ - ಸಂಪದ್ಯುಕ್ತನಾದ, ಸುಸಂಧಿಃ - ಸುಸಂಧಿಯುಂಬವನು, ಉದಪದ್ಯತ-ಹುಟ್ಟಿದನು, ಸುಸಂಧೇರಪಿ - ಸುಸಂಧಿಗೆ, ಧ್ರುವಸಂಧಿಃ – ಧ್ರುವಸಂಧಿಯು, ಪ್ರಸೇನಜಿತ್ - ಪ್ರಸೇನಜಿತ್ತು ಎಂಬ, ದ್ವೌ ಪುತ್ರೌ - ಇಬ್ಬರು ಮಕ್ಕಳು. ॥ ೨೩ ॥ ಧ್ರುವಸಂಧೇಸ್ತು – ಧ್ರುವಸಂಧಿಗಾದರೆ, ಯಶಸ್ವೀ - ಕೀರ್ತಿವಂತನಾದ, ನಾಮತಃ - ಹೆಸರಿನಿಂದ, ಭರತೋನಾಮ – ಭರತನೆಂದು

---

ಈ ಮನುರಾಯನ ಕುವರನೇ ಇಕ್ಷ್ವಾಕುವು ಈ ಇಕ್ಷ್ವಾಕುವಿನ ಮಗನು ಕುಕ್ಷಿಯೆಂದು ವಿಖ್ಯಾತನಾದನು. ಕುಕ್ಷಿಯ ಕುವರನು ವಿಕುಕ್ಷಿಯು; ಪ್ರತಾಪಶಾಲಿಯಾದ ಬಾಣನು ವಿಕುಕ್ಷಿರಾಯನ ಮಗನು. ॥ ೨೦ ॥ ಬಾಣನ ಮಗನು ಮಹಾ ವೀರನಾದ ಅನರಣ್ಯನು ಅನರಣ್ಯನಿಂದ ಪೃಥುವೂ ಪೃಥುವಿನಿಂದ ತ್ರಿಶಂಕುವೂ, ತ್ರಿಶಂಕುವಿನಿಂದ ದುಂದುಮಾರನೂ ಉಂಟಾದರು. ದುಂದುಮಾರನಿಗೆ "ಯುವನಾಶ್ವ"ಎಂಬ ಮತ್ತೊಂದು ಹೆಸರುಂಟು. ಈತನಿಗೆ ಮಾಂಧಾತರಾಯನು ಕುವರನಾದನು. ಈ ಮಾಂಧಾಂತನಿಗೆ ಸುಸಂಧಿಯೆಂಬ ಮಗನಾದನು. ಸುಸಂಧಿರಾಯನಿಗೆ ಧ್ರುವಸಂಧಿ, ಪ್ರಸೇನಜಿತ್ ಎಂದು ಇಬ್ಬರು ಮಕ್ಕಳುಂಟಾದರು. ಕೀರ್ತವಂತನಾದ ಧ್ರುವಸಂಧಿಯಿಂದ ಭರತನೆಂದು ಪ್ರಸಿದ್ಧನಾದ ಕುವರನುಂಟಾದನು. ಈತನಿಂದ ಅಸಿತಿಯೆಂಬವನುಂಟಾದನು. ಈ ಅಸಿತಿಗೆ ಹೈಹಯ, ತಾಲಜಂಘ, ಶಶಿ

ಭರತಾತ್ತು ಮಹಾತೇಜಾ ಅಸಿತೋನಾಮ ಜಾತವಾನ್ ॥ ೨೪ ॥ ಯಸ್ಯೈತೇ ಪ್ರತಿರಾಜಾನ ಉದಪದ್ಯಂತ ಶತ್ರವಃ ॥ ಹೈಹಯಾ ಸ್ತಾಲಜಂಘಾಶ್ಚ ಶೂರಾಶ್ಚ ಶಶಿಬಿಂದವಃ ॥ ೨೫ ॥ ತಾಂಸ್ತು ಸಂಪ್ರತಿ ಯುಧ್ಯನ್ವೈ ಯುದ್ಧೇ ರಾಜಾ ಪ್ರವಾಸಿತಃ ॥ ಹಿಮವಂತ ಮುಪಾಗಮ್ಯ ಭೃಗು ಪ್ರಸ್ರವಣೇ ವಸತ್ ॥ ೨೬ ॥ ಅಸಿತೋಲ್ಪ ಬಲೋರಾಜಾ ಮಂತ್ರಿಭಿ ಸ್ಸಹಿತ ಸ್ತದಾ ॥ ದ್ವೇಚಾಸ್ಯ ಭಾರ್ಯೇ ಗರ್ಭಿಣ್ಯೌ ಬಭೂವತು ರಿತಿಶ್ರುತಂ ॥ ೨೭ ॥ ಏಕಾ ಗರ್ಭವಿನಾಶಾಯ ಸಪತ್ನ್ಯೈ ಸಗರಂ ದದೌ ॥ ತತಶ್ಶೈಲ ವರಂ ರಮ್ಯಂ ಬಭೂವಾ ಭಿರತೋ

---

ಪ್ರಸಿದ್ಧನಾದ, ಭರತಾತ್ತು-ಭರತನಿಂದ, ಮಹಾತೇಜಾಃ-ಮಹಾತೇಜೋವಂತನಾದ, ಅಸಿತೋನಾಮ-ಅಸಿತನೆಂಬವನು, ಜಾತವಾನ್ - ಹುಟ್ಟಿದನು. ॥ ೨೪ ॥ ಯಸ್ಯ - ಯಾವ ಅಸಿತನಿಗೆ, ಏತೇ - ಈ ಪರಿದೃಶ್ಯಮಾನರಾದ, ಹೈಹಯಾಃ - ಹೇಹಯದೇಶಾಧಿಪತಿಗಳೂ, ತಾಲಜಂಘಾಶ್ಚ - ತಾಳಜಂಘರೂ, ಶೂರಾಶ್ಚ - ಶೂರರಾದ, ಶಶಿಬಿಂದವಃ - ಶಶಿಬಿಂದುಗಳೂ ಎಂಬ, ಶತ್ರವಃ - ಶತೃಗಳಾದ, ರಾಜಾನಃ - ಪ್ರತಿಪಕ್ಷರಾದ ಅರಸರು, ಉದಪದ್ಯಂತ - ಹುಟ್ಟಿದರೋ ॥ ೨೫ ॥ ತಾಂಸ್ತು - ಆ ಶತ್ರುಗಳನ್ನು, ಪ್ರತಿಯುಧ್ಯನ್ -ಪ್ರತಿಭಟನಾಗಿ ಯುದ್ಧಮಾಡುತ್ತ, ಯುದ್ಧೇ - ಯುದ್ಧದಲ್ಲಿ, ಸರಾಜಾ - ಆ ಅಸಿತನೆಂಬ ಅರಸು, ಪ್ರವಾಸಿತಃ - ಊರಿಂದ ಹೊರಗೆ ಕಳುಹಲ್ಪಟ್ಟನು. ॥ ೨೫ ॥ ಹಿಮವಂತಂ - ಹಿಮಪತ್ಪರ್ವತವನ್ನು, ಉಪಾಗಮ್ಯ - ಹೊಂದಿ, ಭೃಗುಪ್ರಸ್ರವಣೇ-ಭೃಗುಋಷಿಯ ತಪಸ್ಥಳವಾದ ನದೀತೀರದಲ್ಲಿ, ಅಲ್ಪಬಲಃ - ಅಲ್ಪಬಲವುಳ್ಳ, ಅಸಿತೋರಾಜಾ-ಅಸಿತನೆಂಬ ರಾಯನು, ಮಂತ್ರಿಭಿಃ - ಮಂತ್ರಿಗಳಿಂದ, ಸಹಿತಃ - ಕೂಡಿ, ತದಾ - ಆ ಕಾಲದಲ್ಲಿ, ಅವಸತ್ - ಇದ್ದನು. ॥ ೨೬ ॥ (೧) ಅಸ್ಯ - ಈ ಅಸಿತನಿಗೆ, ದ್ವೇ - ಇಬ್ಬರಾದ, ಭಾರ್ಯೇ - ಹೆಂಡತಿಯರು, ಗರ್ಭಿಣ್ಯೌ-ಗರ್ಭಧಾರಿಗಳು, ಬಭೂವತುಃ - ಆಗಿದ್ದರು, ಇತಿ - ಇಂತೆಂದು, ಶೃತಂ - ಕೇಳಲ್ಪಟ್ಟಿತು, ಏಕಾ-ಒಬ್ಬಳು, ಗರ್ಭವಿನಾಶಾಯ - ಗರ್ಭನಾಶಕ್ಕೋಸುಗ, ಸಪತ್ನ್ಯೈ - ಸವುತಿಗೆ, ಸಗರಂ - ವಿಷಯುಕ್ತವಾದ ಭಕ್ಷ್ಯವನ್ನು, ದದೌ - ಕೊಟ್ಟಳು. ॥ ೨೭ ॥ ತತಃ-ಬಳಿಕ, ಭಾರ್ಗವಚ್ಯವನೋನಾಮ

---

ಬಿಂದು, ಎಂಬ ಶೂರರಾದ ರಾಜರು ಶತ್ರುಗಳಾಗಿದ್ದರು. ಅಸಿತರಾಯನು ಇವರನ್ನೆದುರಿಸಿ ಯುದ್ಧಮಾಡಿ ರಾಜ್ಯಭ್ರಷ್ಟನಾದನು. ಆ ಬಳಿಕ ಅಲ್ಪಬಲಯುಕ್ತನಾದೀ ರಾಯನು ಮಂತ್ರಿಗಳೊಡಗೂಡಿ ಹಿಮವತ್ಪರ್ವತದಲ್ಲಿರುವ ಭೃಗುಪ್ರಸ್ರವಣಕ್ಕೆ ಬಂದವನಾದನು. ಈ ಅಸಿತಿಗೆ ಹೆಂಡತಿಯರಿಬ್ಬರು, ಇವರಿಬ್ಬರೂ ಗರ್ಭಿಣಿಯರಾಗಿದ್ದರೆಂದು ಕೇಳಿರುತ್ತೇನೆ. ಇವರಲ್ಲಿ ಒಬ್ಬಳು ಸವತಿ ಮಾತ್ಸರ್ಯದಿಂದ ಮತ್ತೊಬ್ಬಳಿಗೆ ವಿಷಮಿಶ್ರವಾದ ಭಕ್ಷ್ಯಗಳನ್ನು ಕೊಟ್ಟಳು. ॥ ೨೩ ॥ ಆ ಬಳಿಕ ಭೃಗುವಂಶೀಯನಾದ ಚ್ಯವನನೆಂಬ ಮುನಿಯು ಭೃಗುಪ್ರಸ್ರವಣ ಗಿರಿಯನ್ನು ನೋಡಿ. ತಪೋನ್ಥಾನಕ್ಕರ್ಹವಾಗಿದೆಯೆಂದು ಸಂತೋಷಿಸಿ ಹಿಮವತ್ಪರ್ವತವನ್ನಾಶ್ರಯಿಸಿ ತಪವಂಗೈಯುತ್ತಿದ್ದನು. ಆಗ ಅಸಿತಿಯ ಹೆಂಡತಿಯರಲ್ಲೊಬ್ಬಳಾದ, ಕಾಳಿಂದಿಯೆಂಬ ಹೆಸರುಳ್ಳವಳು ಆ ಚ್ಯವನ ಋಷಿಯಿದ್ದ ಭೃಗುತುಂಗಕ್ಕೆ ಬಂದು ದೇವತಾ ತೇಜಸ್ಸುಳ್ಳ ಚ್ಯವ

---

ಟಿ. (೧) ವಂಶಾನುಕ್ರಮಾಣಿಕೆಯನ್ನೆಲ್ಲಾ ಸೂಕ್ಷ್ಮವಾಗಿ ಹೇಳಿದ ವಸಿಷ್ಠನು ಅಸಿತಿರಾಯನ ವೃತ್ತಾಂತವನ್ನು ಮಾತ್ರ ವಿಶಿದೀಕರಿಸಲು ಅರವತ್ತು ಸಾವಿರಮಂದಿ ಮಕ್ಕಳನ್ನು ಹೆತ್ತು, ಭಗೀರಥನಿಂದ ಸುಪ್ರಸಿದ್ಧನಾದವನೂ ಮಹಾತ್ಮನೂ ಆದ ಸಗರರಾಯನ ಮಹಿಮೆಯನ್ನು ಜನಕರಾಜನಿಗೆ ತಿಳಿಸುವದಕ್ಕೆಂದು ತೋರುತ್ತದೆ

ಮುನಿಃ ॥ ೨೮ ॥ ಭಾರ್ಗವ ಶ್ಚ್ಯವನೋ ನಾಮ ಹಿಮವಂತ ಮುಪಾ ಶ್ರಿತಃ ॥ ತತ್ರೈಕಾ ತು ಮಹಾಭಾಗಾ ಭಾರ್ಗವಂ ದೇವ ವರ್ಚಸಂ ॥ ೨೯ ॥ ವವಂದೇ ಪದ್ಮಪತ್ರಾಕ್ಷೀ ಕಾಂಕ್ಷಂತೀ ಸುತ ಮಾತ್ಮನಃ ॥ ತಮೃಷಿಂ ಸಾಭ್ಯು ಪಾಗಮ್ಯ ಕಾಳಿಂದೀ ಚಾಭ್ಯವಾದಯತ್ ॥೩೦॥ ಸತ ಮಭ್ಯವದ ದ್ವಿಪ್ರಃ ಪುತ್ರೇಪ್ಸುಂ ಪುತ್ರಜನ್ಮನಿ ॥ ತವಕುಕ್ಷೌ ಮಹಾಭಾಗೇ ಸುಪುತ್ರ ಸ್ಸುಮ ಹಾಬಲಃ ॥ ೩೧ ॥ ಮಹಾವೀರ್ಯೋ ಮಹಾತೇಜಾ ಅಚಿರಾ ತ್ಸಂಜನಿ ಷ್ಯತಿ ॥ ಗರೇಣ ಸಹಿತ ಶ್ರೀಮಾನ್ ಮಾಶುಚಃ ಕಮಲೇಕ್ಷಣೇ ॥ ೩೨ ॥ ಚ್ಯವನಂ ತು ನಮಸ್ಕೃತ್ಯ ರಾಜಪುತ್ರೀ ಪತಿವ್ರತಾ ॥ ಪತಿಶೋಕಾತುರಾ ತಸ್ಮಾ

---

ಭಾರ್ಗವಃ - ಭೃಗುವಂಶೋತ್ಪನ್ನನಾದ, ಚ್ಯವನೋನಾಮ – ಚ್ಯವನನೆಂದು ಪ್ರಸಿದ್ಧನಾದ, ಮುನಿಃ- ಋಷಿಯು, ರಮ್ಯಂ - ಮನೋಹರವಾದ, ಹಿಮವಂತಂ - ಹಿಮವಂತನೆಂಬ, ಶೈಲವರಂ - ಪರ್ವತ ಶ್ರೇಷ್ಠವನ್ನು, ಅಭಿರತಸ್ಸನ್ - ಆಸಕ್ತನಾಗಿ, ಉಪಾಶ್ರಿತಃ - ಆಶ್ರಯಿಸಿದನು. ॥ ೨೮ ॥ ತತ್ರ - ಭಾರ್ಯಾದ್ವಯದಲ್ಲಿ, ಮಹಾಭಾಗಾ - ಮಹಾ ಪುಣ್ಯಶಾಲಿಯಾದ, ಪದ್ಮಪತ್ರಾಕ್ಷೀ-ಪದ್ಮಪತ್ರಗಳಿಗೆ ಸಮಾನವಾದ ನೇತ್ರಗಳುಳ್ಳ, ಏಕಾ - ಒಬ್ಬಳು, ಆತ್ಮನಃ - ತನಗೆ, ಸುತಂ - ಕುವರನನ್ನು, ಕಾಂಕ್ಷಂತೀ - ಅಪೇಕ್ಷಿಸಿ, ದೇವವರ್ಚಸಂ - ದೇವತಾ ತೇಜಸ್ಸುಳ್ಳ, ಭಾರ್ಗವಂ-ಚ್ಯವನಋಷಿಯನ್ನು, ವವಂದೇ - ನಮಸ್ಕರಿಸಿದಳು. ॥ ೨೯ ॥ ತಮೃಷಿಂ - ಆ ಋಷಿಯನ್ನು, ಸಾಕಾಳಿಂದೀ ಆಕಾಳಿಂದೀಎಂಬವಳು, ಅಭ್ಯುಪಾಗಮ್ಯ - ಬಂದು, ಅಭ್ಯವಾದಯತ್ - ಅಭಿವಾದನ ಮಾಡಿದಳು. ॥೩೦॥ ಸವಿಪ್ರಃ - ಆ ಚ್ಯವನನೆಂಬ ಬ್ರಹ್ಮರ್ಷಿಯು, ಪುತ್ರೇಪ್ಸುಂ - ಪುತ್ರೇಚ್ಛೆಯುಳ್ಳ, ತಾಂ-ಆ ಕಾಳಿಂದಿಯನ್ನು ಕುರಿತು, ಪುತ್ರಜನ್ಮನಿ - ಪುತ್ರೋತ್ಪತ್ತಿ ವಿಷಯದಲ್ಲಿ, ಅಭ್ಯವದತ್ - ಹೀಗೆ ಹೇಳಿದನು. ॥ ೩೧ ॥ ಹೇಮಹಾಭಾಗ - ಎಲೈ ಪುಣ್ಯಶಾಲಿಯೆ, ತವ - ನಿನ್ನ, ಕುಕ್ಷೌ - ಕುಕ್ಷಿಯಲ್ಲಿ, ಸುಮ ಹಾಬಲಃ - ಮಹಾ ಬಲಿಷ್ಠನಾದ, ಮಹಾ ವೀರ್ಯಃ - ಮಹಾ ಸಾಮರ್ಥ್ಯವಂತನಾದ, ಮಹಾ ತೇಜಾಃ - ಮಹಾ ತೇಜೋವಂತನಾದ, ಶ್ರೀಮಾನ್ - ಸಂಪದ್ಯುಕ್ತನಾದ, ಸುಪುತ್ರಃ - ಸತ್ಪುತ್ರನು, ಗರೇಣ - ವಿಷದಿಂದ, ಸಹಿತಃ - ಕೂಡಿ, ಅಚಿರಾತ್ - ಜಾಗ್ರತೆಯಾಗಿ, ಸಂಜಯಿಷ್ಯತಿ - ಹುಟ್ಟು ತ್ತಾನೆ. ಹೇಕಮಲೇಕ್ಷಣೇ - ಎಲೈ ಕಮಲಾಕ್ಷಿಯೆ-, ಮಾಶುಚಃ - ದುಃಖಿಸದಿರು. ॥ ೩೨ ॥ ಪತಿವ್ರತಾ - ಪತಿವ್ರತೆಯಾದ, ರಾಜಪುತ್ರೀ - ರಾಜಕುವರಿಯಾದ, ದೇವೀ - ಕಾಳಿಂದೀ ದೇವಿಯೂ

---

ನಮುನಿಯನ್ನು, ಪುತ್ರಕಾಂಕ್ಷೆಯಿಂದ ನಮಸ್ಕರಿಸಿ ಶುಶ್ರೂಷೆ ಮಾಡುತ್ತಿದ್ದಳು. ಪುತ್ರಾರ್ಥಿನಿಯಾದೀಕೆಯನ್ನು ನೋಡಿ ಆ ಚ್ಯವನ ಮುನಿಯು, “ಎಲೌ ಮಹಾ ಭಾಗ್ಯವಂತಳೇ! ನಿನ್ನುದರದಲ್ಲಿ ಮಹಾಬಲಶಾಲಿಯೂ ಮಹಾವೀರನೂ, ಅತಿತೇಜಸ್ವಿಯೂ, ವಿಷದಿಂದೊಡಗೂಡಿದವನೂ ಆದ ಕುವರನು ಶೀಘ್ರವಾಗಿಯೇ ಜನಿಸುತ್ತಾನೆ; ದುಃಖಿಸಬೇಡ” ಎಂದು ಹೇಳಿದನು ॥ ೩೨ ॥ ಆ ಬಳಿಕ ಚ್ಯವನ ಋಷಿಯನ್ನು ನಮಸ್ಕರಿಸಿದಾ ಕಾಳಿಂದಿಯು ಪತಿಶೋಕಾತುರಳಾಗಿ ಮಗನನ್ನು ಹೆತ್ತುಬಿಟ್ಟಳು ಸತಿಯಿಂದ ಕೊಡಲ್ಪಟ್ಟ ಗರಳದೊಡನೆಯೇ ಹುಟ್ಟಿದವನಾದುದರಿಂದೀ ಕಾಳಿಂದೀತನಯನಿಗೆ ಸಗರನೆಂದು ಹೆಸರಾಯಿತು. ॥೩೪॥

ತ್ಪುತ್ರಂ ದೇವೀ ವ್ಯಜಾಯತ || ೩೩ || ಸಪತ್ನ್ಯಾತು ಗರಸ್ತಸ್ಯೈ ದತ್ತೋ ಗರ್ಭ ಜಿಘಾಂಸಯಾ|| ಸಹ ತೇನ ಗರೇಣೈವ ಜಾತಸ್ಸಸಗರೋ ಭವತ್ ||೩೪|| ಸಗರಸ್ಯಾಸಮಂಜಸ್ತು ಅಸಮಂಜಾತ್ತಥಾಂಶುಮಾನ್ || ದಿಲೀಪೋಂಶು ಮತಃ ಪುತ್ರೋ ದಿಲೀಪಸ್ಯ ಭಗೀರಥಃ || ೩೫ || ಭಗೀರಥಾ ತ್ಕಕುತ್ಸ್ಥಶ್ಚ ಕಕುತ್ ಸ್ಥಸ್ಯ ರಘುಸ್ಸುತಃ || ರಘೋಸ್ತು ಪುತ್ರಸ್ತೇಜಸ್ವೀ ಪ್ರವೃದ್ಧಃ ಪುರುಷಾದಕಃ || ೩೬ || ಕಲ್ಮಾಷಪಾದೋಹ್ಯಭವತ್ತಸ್ಮಾಜ್ಜಾತಸ್ತು ಶಂಖಣಃ || ಸುದರ್ಶನಶ್ಶಂಖಣಸ್ಯ ಅಗ್ನಿವರ್ಣ ಸ್ಸುದರ್ಶನಾತ್ || ೩೭ || ಶೀಘ್ರಗಸ್ತ್ವಗ್ನಿ ವರ್ಣಸ್ಯ ಶೀಘ್ರಗಸ್ಯ ಮರು ಸ್ಸುತಃ || ಮರೋಃ ಪ್ರಶುಶ್ರುಕ ಸ್ತ್ವಾಸೀ ದಂಬ

---

ಪತಿಶೋಕಾತುರಾ ಪತಿವಿಷಯವಾದ ವ್ಯಸನದಿಂದ ಆರ್ತಳಾಗಿ, ಚ್ಯವನಂತು - ಚ್ಯವನಋಷಿಯನ್ನು, ನಮಸ್ಕೃತ್ವಾ-ನಮಸ್ಕರಿಸಿ, ತಸ್ಮಾತ್-ಆ ಚ್ಯವನಾನುಗ್ರಹದಿಂದ, ಪುತ್ರಂ ಮಗನನ್ನು, ವ್ಯಜಾಯತ-ಪಡೆದಳು. || ೩೩ || ಸಪತ್ನ್ಯಾ-ಸಪತ್ನಿಯಿಂದ, ತಸ್ಯೈ - ಆ ಕಾಳಿಂದೀ ದೇವಿಗೆ, ಗರ್ಭಜಿಘಾಂಸಯಾ-ಗರ್ಭನಾಶನಿಮಿತ್ತವಾಗಿ, ಗರಃ-ವಿಷವು, ದತ್ತಃ-ಕೊಡಲ್ಪಟ್ಟಿತು, ತೇನಗರೇಣೈವಸಹ-ಆ ವಿಷ ದಿಂದೊಡಗೂಡಿ, ಜಾತಃ - ಹುಟ್ಟಿದ, ಸಃ-ಆ ಮಗನು, ಸಗರಃ-ಸಗರನೆಂದು, ಅಭವತ್-ಪ್ರಸಿದ್ಧ ನಾದನು. || ೩೪ || ಸಗರಸ್ಯ - ಸಗರ ಚಕ್ರವರ್ತಿಗೆ, ಅಸಮಂಜಸ್ತು - ಅಸಮಂಜನು, ಜಾತಃ - ಹುಟ್ಟಿದನು, ಅಸಮಂಜಾತ್ - ಅಸಮಂಜನಿಂದ, ತಥಾ - ಹಾಗೆಯೇ, ಅಂಶುಮಾನ್ - ಅಂಶು ಮಂತನೆಂಬವನು, ಅಭವತ್ - ಆದನು, ಅಂಶುಮತಃ - ಅಂಶುಮಂತನಗೆ, ಪುತ್ರಃ - ಕುವರನು, ದಿಲೀಪಃ - ದಿಲೀಪನು, ದಿಲೀಪಸ್ಯ - ದಿಲೀಪರಾಯನಿಗೆ, ಭಗೀರಥಃ - ಭಗೀರಥನು, ಭಗೀರಥಾತ್-ಭಗೀರಥನಿಂದ, ಕಕುತ್ಸ್ಥಃ - ಕುಕುತ್ಸ್ಥಮಹಾರಾಯನು, ಕಕುತ್ಸ್ಥಸ್ಯ-ಕಕುತ್ಸ್ಥನ, ಸುತಃ-ಕುಮಾರನು, ರಘುಃ - ರಘುಮಹಾರಾಯನು. || ೩೫ || ರಘೋಸ್ತು - ರಘುಮಹಾರಾಯನಿಗೆ, ತೇಜಸ್ವೀ - ಪ್ರಕಾಶವಂತನಾದ, ಪ್ರವೃದ್ಧಃ - ವೃದ್ಧಿಹೊಂದಿದ, ಪುರುಷಾದಕಃ - ಪುರುಷಾದನೆಂಬ, ಪುತ್ರಃ - ಮಗನು, ಅಭವತ್ - ಆದನು, ಕಲ್ಮಾಷಪಾದೋಪಿ - ಕಲ್ಮಾಷಪಾದನೆಂಬ ಮತ್ತೊಂದು ಹೆಸರುಳ್ಳವನೂ, ಅಭವತ್ - ಆದನು. || ೩೬ || ತಸ್ಮಾತ್-ಆ ಕಲ್ಮಾಷರಾಯನಿಂದ, ಶಂಖಣಸ್ತು - ಶಂಖಣನೆಂಬವನು, ಜಾತಃ - ಹುಟ್ಟಿದನು, ಶಂಖಣಸ್ಯ - ಶಂಖಣನಿಗೆ, ಸುದರ್ಶನಃ-ಸುದರ್ಶನನು, ಸುದರ್ಶನಾತ್ - ಸುದರ್ಶನಿಂದ, ಅಗ್ನಿವರ್ಣಃ - ಅಗ್ನಿವರ್ಣನು, ಅಗ್ನಿವರ್ಣಸ್ಯ-ಅಗ್ನಿ ವರ್ಣನಿಗೆ, ಶೀಘ್ರಗಃ-ಶೀಘ್ರಗನು, ಶೀಘ್ರಗಸ್ಯ-ಶೀಘ್ರಗನಿಗೆ, ಮರುಃ-ಮರುವೆಂಬ, ಸುತಃ-ಕುಮಾರನು, ಮರೋಃ - ಮರುವಿಗೆ, ಪ್ರಶುಶ್ರುಕಃ - ಪ್ರಶುಶ್ರುಕನು, ಆಸೀತ್-ಆದನು, ಪ್ರಶುಶ್ರುಕಾತ್-

---

ಈ ಸಗರನಿಗೆ ಅಸಮಂಜನೇ ಮಗನು. ಅಸಮಂಜನಿಂದ ಅಂಶುಮಂತನೂ, ಅಂಶುಮಂತನಿಗೆ ದಿಲೀಪನೂ, ದಿಲೀಪರಾಯನಿಗೆ ಭಗೀರಥರಾಯನೂ ಉಂಟಾದರು. ಈ ಭಗೀರಥ ರಾಯನಿಗೆ ಕಕುತ್ಸ್ಥನೂ, ಕಕುತ್ಸ್ಥನಿಗೆ ರಘುವೂ ಉಂಟಾದರು. ರಘುಮಹಾರಾಜನಿಗೆ ಪುರುಷಾದಕನೆಂಬ ಕುವರನಾದನು. ಈತನಿಗೆ ಕಲ್ಮಾಷಪಾದನೂ, ಈ ಕಲ್ಮಾಷಪಾದನಿಗೆ ಶಂಖಣನೂ, ಇವನಿಗೆ ಸುದರ್ಶನನೂ, ಇವನಿಗೆ ಅಗ್ನಿಪರ್ಣನೂ ಉಂಟಾದರು. ||೩೬-೩೭||

ರೀಷಃ ಪ್ರಶುಶ್ರುಕಾತ್ ||೩೮|| ಅಂಬರೀಷಸ್ಯ ಪುತ್ರೋಽಭೂನ್ನಹುಷಃ ಪೃಥಿವೀ ಪತಿಃ ||ನಹುಷಸ್ಯ ಯಯಾತಿಸ್ತು ನಾಭಾಗಸ್ತು ಯಯಾತಿಜಃ||೩೯||ನಾಭಾಗಸ್ಯ ಬಭೂವಾಜೋಽಜಾದ್ದಶರಥೋಽಭವತ್ || ಅಸ್ಮಾದ್ದಶರಥಾಜ್ಜಾತೌ ಭ್ರಾತರೌ ರಾಮಲಕ್ಷ್ಮಣೌ || ೪೦ || ಆದಿವಂಶ ವಿಶುದ್ಧಾನಾಂ ರಾಜ್ಞಾಂ ಪರಮ ಧರ್ಮಿಣಾಂ||ಇಕ್ಷ್ವಾಕು ಕುಲಜಾತಾನಾಂ ವೀರಾಣಾಂ ಸತ್ಯ ವಾದಿನಾಂ ||೪೧|| ರಾಮ ಲಕ್ಷ್ಮಣಯೋರರ್ಥೇ ತ್ವತ್ಸುತೇ ವರಯೇ ನೃಪ || ಸದೃಶಾಭ್ಯಾಂ ನರಶ್ರೇಷ್ಠ ಸದೃಶೇ ದಾತು ಮರ್ಹಸಿ || ೪೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತಿತಮಸ್ಸರ್ಗಃ.

---

ಪ್ರಶುಶ್ರುಕನಿಂದ, ಅಂಬರೀಷಃ - ಅಂಬರೀಷನು, ಅಂಬರೀಷಸ್ಯ-ಅಂಬರೀಷನಿಗೆ, ಪುತ್ರಃ ಮಗನು, ನಹುಷಃ - ನಹುಷನೆಂಬ, ಪೃಥಿವೀಪತಿಃ - ಅರಸು, ಅಭೂತ್ - ಆದನು, ನಹುಷಸ್ಯ - ನಹುಷನಿಗೆ, ಯಯಾತಿಸ್ತು - ಯಯಾತಿರಾಯನು, ಅಭೂತ್ - ಆದನು, ನಾಭಾಗಸ್ತು - ನಾಭಾಗನೆಂಬವನು, ಯಯಾತಿಜಃ - ಯಯಾತಿರಾಯನಿಂದ ಹುಟ್ಟಿದವನು. || ೩೯ || ನಾಭಾಗಸ್ಯ-ನಾಭಾಗನಿಗೆ, ಅಜಃ - ಅಜ ಮಹಾರಾಯನು, ಬಭೂವ - ಆದನು, ಅಜಾತ್-ಅಜಮಹಾರಾಯನಿಂದ,ದಶರಥಃ - ದಶರಥ ರಾಯನು, ಅಭವತ್ - ಆದನು, ದಶರಥಾತ್ - ದಶರಥನಿಂದ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ಜಾತೌ - ಹುಟ್ಟಿದರು. || ೪೦ || ಆದಿವಂಶ ವಿಶುದ್ಧಾನಾಂ, ಆದಿ - ಈಗ ನಾನು ಹೇಳಿದ ವಂಶಾದಿ ಮೊದಲಾಗಿ, ವಂಶವಿಶುದ್ಧಾನಾಂ - ಪ್ರಸಿದ್ಧವಾದ ವಂಶವುಳ್ಳ, ಪರಮಧರ್ಮಿಣಾಂ - ಬಹಳ ಧರ್ಮಿಷ್ಠರಾದ, ಇಕ್ಷ್ವಾಕುಕುಲಜಾತಾನಾಂ - ಇಕ್ಷ್ವಾಕುವಂಶದಲ್ಲಿ ಹುಟ್ಟಿದ, ವೀರಾಣಾಂ - ಶೂರರಾದ, ಸತ್ಯವಾದಿನಾಂ - ಸತ್ಯವಾದಿಗಳಾದ, ರಾಜ್ಞಾಂ - ಅರಸರಲ್ಲಿ, ರಾಮಲಕ್ಷ್ಮಯೋಃ - ರಾಮಲಕ್ಷ್ಮಣರ, ಅರ್ಥೇ-ನಿಮಿತ್ತವಾಗಿ, ಹೇನೃಪ-ಎಲೈ ಜನಕರಾಯನೇ, ತ್ವತ್ಸುತೇ - ನಿನ್ನ ಮಕ್ಕಳಿಬ್ಬರನ್ನು, ವರಯೇ-ವರಿಸುತ್ತೇನೆ, ಹೇನರಶ್ರೇಷ್ಠ-ಎಲೈ ನರರಾಯನೇ. ಸದೃಶಾಭ್ಯಾಂ - ಸಮಾನರಾದ ರಾಮಲಕ್ಷ್ಮಣರಿಗೆ, ಸದೃಶೇ - ಸಮಾನರಾದ ಕನ್ಯೆಯರನ್ನು, ದಾತುಂ - ಕೊಡಲು, ಅರ್ಹಸಿ - ಯೋಗ್ಯನಾಗು || ೪೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತಿತಮಸ್ಸರ್ಗಃ.

---

ಅಗ್ನಿವರ್ಣನಿಗೆ ಶೀಘ್ರಗನೂ, ಇವನಿಗೆ ಮರುವೂ, ಇವನಿಂದ ಪ್ರಶುಶ್ರುಕನೂ, ಈತನಿಗೆ ಅಂಬರೀಷನೂ ಉಂಟಾದರು || ೩೮ || ಅಂಬರೀಷರಾಯನ ಮಗನೇ ನಹುಷರಾಜನು. ಈ ರಾಯನಿಗೆ ಯಯಾತಿಯುಂಟಾದನು. ಯಯಾತಿಯ ಮಗನೇ ನಾಭಾಗನು. ನಾಭಾಗನ ಮಗನು ಅಜನು. ಅಜನ ಮಗನೇ ದಶರಥಭೂಪಾಲನು. ಈತನ ಕುವರರೇ ರಾಮಲಕ್ಷ್ಮಣರು. ||೩೯-೪೦|| ಎಲೈ ರಾಜನೆ! ಆದಿಯಿಂದಲೂ ವಂಶವಿಶುದ್ಧರಾಗಿಯೂ, ಮಹಾ ಧರ್ಮಿಷ್ಠರಾಗಿಯೂ, ಇಕ್ಷ್ವಾಕು ಕುಲಸಂಭವರೂ, ಸತ್ಯವಾದಿಗಳೂ ಆದ ಈ ರಾಮ ಲಕ್ಷ್ಮಣರಿಗೋಸುಗ ನಿನ್ನ ಕುವರಿಯರಾದ ಸೀತೋರ್ಮಿಳಾದೇವಿಯರನ್ನು ವರಿಸುತ್ತೇನೆ. ಎಲೈ ಜನಕರಾಜನೇ ರೂಪ, ಯೌವ್ವನ, ಕುಲ, ವೀರ್ಯಾದಿಸಕಲ ವಿಷಯಗಳಲ್ಲಿಯೂ ಸದೃಶರಾದೀನರಶ್ರೇಷ್ಠರಿಗೆ ನಿನ್ನ ಕುವರಿಯರನ್ನು ಕೊಡುವವನಾಗು. ||೪೨||

ಇಂತಿದು ವಸಿಷ್ಠಮುನಿಕಥಿತ ದಶರಥರಾಜ ವಂಶ ವಿಸ್ತಾರ ವೃಂತ್ತಾಂತ
ಕಥಾ ಕಥನವೆಂಬ ಎಪ್ಪತ್ತನೆಯ ಸರ್ಗವು ಸಮಾಪ್ತವಾದದು.

# ಬಾಲಕಾಂಡೇ ಏಕಸಪ್ತತಿತಮಸ್ಸರ್ಗಃ.



ಏವಂ ಬ್ರುವಾಣಂ ಜನಕಃ ಪ್ರತ್ಯುವಾಚ ಕೃತಾಂಜಲಿಃ || ಶ್ರೋತು ಮರ್ಹಸಿ ಭದ್ರಂ ತೇ ಕುಲಂ ನಃ ಪರಿಕೀರ್ತಿತಂ || ೧ || ಪ್ರದಾನೇಹಿ ಮುನಿ ಶ್ರೇಷ್ಠ ಕುಲಂ ನಿರವಶೇಷತಃ || ವಕ್ತವ್ಯಂ ಕುಲಜಾತೇನ ತನ್ನಿಬೋಧ ಮಹಾ ಮುನೇ || ೨ || ರಾಜಾಭೂತ್ತ್ರಿಷು ಲೋಕೇಷು ವಿಶ್ರುತ ಸ್ಸ್ವೇನ ಕರ್ಮಣಾ || ನಿಮಿಃ ಪರಮಧರ್ಮಾತ್ಮಾ ಸರ್ವ ಸತ್ವವತಾಂ ವರಃ ||೩|| ತಸ್ಯ ಪುತ್ರೋ ಮಿಥಿ ರ್ನಾಮ ಮಿಥಿಲಾ ಯೇನ ನಿರ್ಮಿತಾ || ಪ್ರಥಮೋ ಜನಕೋನಾಮ ಜನಕಾ

---

ಜನಕಃ - ಜನಕರಾಯನು, ಏವಂ - ಹೀಗೆ, ಬ್ರುವಾಣಂ - ಹೇಳುತ್ತಿರುವ ವಸಿಷ್ಠ ಋಷಿ ಯನ್ನು ಕುರಿತು, ಕೃತಾಂಜಲಿಃ - ಅಂಜಲಿಬದ್ಧನಾಗಿ, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು, ತೇ- ನಿನಗೆ, ಭದ್ರಂ - ಕಲ್ಯಾಣವು, ಅಸ್ತು - ಆಗಲಿ, ನಃ - ನಮ್ಮ, ಪರಿಕೀರ್ತಿತಂ - ಕೀರ್ತಿಸಲ್ಪಟ್ಟ, ಕುಲಂ - ವಂಶವನ್ನು, ಶ್ರೋತುಂ - ಕೇಳಲು, ಅರ್ಹಸಿ - ಯೋಗ್ಯನಾಗು. || ೧ || ಹೇಮುನಿ ಶ್ರೇಷ್ಠ - ಎಲೈ ಮುನಿಶ್ರೇಷ್ಠನಾದ ವಸಿಷ್ಠನೇ, ಹೇಮಹಾಮುನೇ-ಎಲೈ ಮಹರ್ಷಿಯೇ, ಪ್ರದಾನೇ- ಕನ್ಯಾದಾನವಿಷಯದಲ್ಲಿ, ಕುಲಜಾತೇನ - ಸತ್ಕುಲದಲ್ಲಿ ಹುಟ್ಟಿದವನಿಂದ, ನಿರ್ವಿಶೇಷತಃ - ವಿಶೇಷ ವಿಲ್ಲದಂತೆ, ಕುಲಂ - ವಂಶವು, ವಕ್ತವ್ಯಂ - ಹೇಳತಕ್ಕದು, ತತ್ ಆ ಕುಲವನ್ನು, ನಿಬೋಧ - ತಿಳಿ. || ೨ || ತ್ರಿಷು - ಮೂರಾದ, ಲೋಕೇಷು - ಲೋಕಗಳಲ್ಲಿ, ಸ್ವೇನ - ಸ್ವಕೀಯವಾದ, ಕರ್ಮಣಾ - ವ್ಯಾಪಾರದಿಂದ, ವಿಶ್ರುತಃ - ಪ್ರಸಿದ್ಧನಾದ, ಪರಮಧರ್ಮಾತ್ಮಾ - ಮಹಾ ಧರ್ಮಿಷ್ಠ ನಾದ, ಸರ್ವಸತ್ವವತಾಂ - ಸಮಸ್ತ ಗುಣಗಳುಳ್ಳವರೇ, ವರಃ - ಶ್ರೇಷ್ಠನಾದ, ನಿಮಿಃ - ನಿಮಿ ಚಕ್ರವರ್ತಿಯೆಂಬ, ರಾಜಾ - ಅರಸು, ಅಭವತ್ - ಆದನು. || ೩ || ತಸ್ಯ-ಆ ನಿಮಿಚಕ್ರವರ್ತಿಗೆ, ಪುತ್ರಃ - ಮಗನು, ಮಿಥಿರ್ನಾಮ - ಮಿಥಿಯೆಂದು ಪ್ರಸಿದ್ಧನಾದವನು, ಯೇನ - ಯಾವ ಮಿಥಿ ಚಕ್ರವರ್ತಿಯಿಂದ, ಮಿಥಿಲಾ - ಮಿಥಿಲಾ ಪಟ್ಟಣವು, ನಿರ್ಮಿತಾ - ನಿರ್ಮಿಸಲ್ಪಟ್ಟಿತೋ, ಸಃ - ಆ,

---

ಈ ಪ್ರಕಾರವಾಗಿ ನುಡಿದು ಸುಮ್ಮನಾದ ಬ್ರಹ್ಮರ್ಷಿಯಾದ ವಸಿಷ್ಠನನ್ನು ಕುರಿತು ಜನಕರಾಯನು ಅಂಜಲಿ ಬದ್ಧನಾಗಿ ಹೀಗೆಂದನು. "ಎಲೈ ಋಷಿಶ್ರೇಷ್ಠನೆ! ಕೀರ್ತಿಯಾಂತ ನಮ್ಮ ವಂಶವೃಕ್ಷವನ್ನು ಕೇಳುವವನಾಗು ; ಕನ್ಯಾದಾನ ಕಾಲದಲ್ಲಿ ಕುಲೋತ್ಪನ್ನನಾದ ದಾತೃವು ಸ್ವವಂಶಾನುಕ್ರಮವನ್ನು ಹೇಳಬೇಕಷ್ಟೆ ; ಅದನ್ನೀಗ ಹೇಳುತ್ತೇನೆ, ಕೇಳುವವ ನಾಗು. ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ, ಸ್ವಕೃತ ಕರ್ಮದಿಂ ದಲೇ ಪ್ರಖ್ಯಾತನೂ, ವೀರಾಗ್ರಣಿಗಳಲ್ಲಿ ಶ್ರೇಷ್ಠನೂ; ಧರ್ಮಿಷ್ಠನೂ ಆದ ನಿಮಿಯೆಂಬ

ದಪ್ಯುದಾವಸುಃ || ೪ || ಉದಾವಸೋಸ್ತು ಧರ್ಮಾತ್ಮಾ ಜಾತೋವೈ ನಂದಿ
ವರ್ಧನಃ || ನಂದಿವರ್ಧನಪುತ್ರಸ್ತು ಸುಕೇತುರ್ನಾಮ ನಾಮತಃ || ೫ ||
ಸುಕೇತೋರಪಿ ಧರ್ಮಾತ್ಮಾ ದೇವರಾತೋ ಮಹಾಬಲಃ || ದೇವರಾತಸ್ಯ
ರಾಜರ್ಷೇಃ ಬೃಹದ್ರಥ ಇತಿಸ್ಮೃತಃ || ೬ || ಬೃಹದ್ರಥಸ್ಯ ಶೂರೋಽಭೂ
ನ್ಮಹಾವೀರಃ ಪ್ರತಾಪವಾನ್ || ಮಹಾವೀರಸ್ಯ ಧೃತಿಮಾನ್ ಸುಧೃತಿಸ್ಸತ್ಯವಿ
ಕ್ರಮಃ || ೭ || ಸುಧೃತೇರಪಿ ಧರ್ಮಾತ್ಮಾ ಧೃಷ್ಟಕೇತುಸ್ಸುಧಾರ್ಮಿಕಃ ||
ಧೃಷ್ಟಕೇತೋಸ್ತು ರಾಜರ್ಷೇರ್ಹರ್ಯಶ್ವ ಇತಿವಿಶ್ರುತಃ || ೮ || ಹರ್ಯಶ್ವ
ಸ್ಯ ಮರುಃ ಪುತ್ರೋ ಮರೋಃ ಪುತ್ರಃ ಪ್ರತೀಂಧಕಃ || ಪ್ರತೀಂಧಕಸ್ಯ ಧರ್ಮಾ
ತ್ಮಾ ರಾಜಾ ಕೀರ್ತಿರಥಸ್ಸುತಃ || ೯ || ಪುತ್ರಃ ಕೀರ್ತಿರಥಸ್ಯಾಪಿ ದೇವಮೀಢ

---

ಮಿಥಿ ಚಕ್ರವರ್ತಿಯು, ಪ್ರಥಮಃ - ಮೊದಲನೆಯವನಾದ, ಜನಕೋನಾಮ - ಜನಕನೆಂದು ಪ್ರಸಿದ್ಧನು, ಜನಕಾದಪಿ - ಜನಕರಾಯನಿಂದ, ಉದಾವಸುಃ - ಉದಾವಸುವೆಂಬವನು. || ೪ || ಉದಾವಸೋಸ್ತು - ಉದಾವಸುವಿನಿಂದ, ಧರ್ಮಾತ್ಮಾ - ಧರ್ಮಿಷ್ಠನಾದ, ನಂದಿವರ್ಧನಃ - ನಂದಿವರ್ಧನನೆಂಬವನು, ಜಾತೋವೈ - ಹುಟ್ಟಿದನಷ್ಟೇ, ನಂದಿವರ್ಧನಪುತ್ರಸ್ತು - ನಂದಿವರ್ಧನನ ಮಗನು, ನಾಮತಃ - ಹೆಸರಿನಿಂದ, ಸುಕೇತುರ್ನಾಮ - ಸುಕೇತುವೆಂದು ಪ್ರಸಿದ್ಧನು || ೫ || ಸುಕೇತೋರಪಿ - ಸುಕೇತುವಿಗೂ ಕೂಡ, ಧರ್ಮಾತ್ಮಾ - ಧರ್ಮಿಷ್ಠನಾದ, ಮಹಾಬಲಃ - ಮಹಾ ಬಲಿಷ್ಠನಾದ, ದೇವರಾತಃ-ದೇವರಾತನು, ರಾಜರ್ಷೇಃ-ರಾಜರ್ಷಿಯಾದ, ದೇವರಾತಸ್ಯ – ದೇವರಾತನಿಗೆ, ಬೃಹದ್ರಥಇತಿ-ಬೃಹದ್ರಥನೆಂದು, ಸ್ಮೃತಃ-ಹೇಳಲ್ಪಟ್ಟ ಕುವರನು ರನು. || ೬ || ಬೃಹದ್ರಥಸ್ಯ - ಬೃಹದ್ರಥನಿಗೆ, ಶೂರಃ - ಶೂರನಾದ, ಪ್ರತಾಪವಾನ್-ಪರಾಕ್ರಮವಂತನಾದ, ಮಹಾವೀರಃ - ಮಹಾವೀರನು, ಅಭೂತ್ - ಆದನು, ಮಹಾವೀರಸ್ಯ - ಮಹಾವೀರನಿಗೆ, ಧೃತಿಮಾನ್ - ಧೈರ್ಯಶಾಲಿಯಾದ, ಸತ್ಯವಿಕ್ರಮಃ - ಸತ್ಯವಾದ ಪರಾಕ್ರಮವುಳ್ಳ, ಸುಧೃತಿಃ - ಸುಧೃತಿಯೆಂಬವನು. || ೭ || ಸುಧೃತೇರಪಿ - ಸುಧೃತಿಗೂ ಕೂಡ, ಧರ್ಮಾತ್ಮಾ - ಧರ್ಮದಮನಸ್ಸುಳ್ಳ, ಸುಧಾರ್ಮಿಕಃ - ಒಳ್ಳೆಯ ಧರ್ಮಿಷ್ಠನಾದ, ಧೃಷ್ಟಕೇತುಃ - ಧೃಷ್ಟಕೇತುವೆಂಬವನು, ರಾಜರ್ಷೇಃ - ರಾಜಋಷಿಯಾದ, ಧೃಷ್ಟಕೇತೋಸ್ತು – ಧೃಷ್ಟಕೇತುವಿಗೆ, ಹರ್ಯಶ್ವಇತಿ - ಹರ್ಯಶ್ವನೆಂಬ ಮಗನು, ವಿಶ್ರುತಃ - ಪ್ರಸಿದ್ಧನು. || ೮ || ಹರ್ಯಶ್ವಸ್ಯ-ಹರ್ಯಶ್ವನಿಗೆ, ಮರುಃ- ಮರುಃ - ಮರುವೆಂಬವನು, ಪುತ್ರಃ - ಮಗನು, ಮರೋಃ - ಮರುವಿಗೆ, ಪುತ್ರಃ - ಮಗನು, ಪ್ರತೀಂಧಕಃ - ಪ್ರತೀಂಧಕನು, ಪ್ರತೀಂಧಕಸ್ಯ - ಪ್ರತೀಂಧಕನಿಗೆ, ಧರ್ಮಾತ್ಮಾ-ಧರ್ಮಿಷ್ಠನಾದ, ಕೀರ್ತಿರಥಃ - ಕೀರ್ತಿರಥನೆಂಬ, ರಾಜಾ - ಅರಸು, ಸುತಃ - ಕುವರನು. || ೯ || ಕೀರ್ತಿರಥ,

---

ಮಹೀಪಾಲನಿದ್ದನು. ಈತನಮಗನೇ ಈ ಮಿಥಿಲಾ ಪಟ್ಟಣವನ್ನು ನಿರ್ಮಿಸಿದ ಮಿಥಿರಾಯನೆಂಬುವನು. ಮಿಥಿರಾಯನಮೊದಲ್ಗೊಂಡು ಆನುಪೂರ್ವಿಯಾದ ನಮ್ಮ ಕುಲದ ರಾಜರೆಲ್ಲರಿಗೂ ಜನಕರೆಂಬ ಹೆಸರುಂಟಾಯಿತು. ಈ ಮಿಥಿರಾಯನಿಗೆ ಉದಾವಸುವು ಕುವರನು. ||೪|| ಈ ಉದಾವಸುಮಹಾರಾಜನಿಗೆ ಮಹಾ ಧರ್ಮಿಷ್ಠನಾದ ನಂದಿವರ್ಧನನು ಮಗನಾಗಿ ಜನಿಸಿದನು. ಸುಕೇತುವು ನಂದಿವರ್ಧನರಾಯನ ಮಗನು ಧರ್ಮಾತ್ಮನಾದ ಸುಕೇತುವಿಗೆ

ಇತಿಸ್ಮೃತಃ || ದೇವಮೀಢಸ್ಯ ವಿಬುಧೋ ವಿಬುಧಸ್ಯ ಮಹೀಧ್ರಕಃ || ೧೦ || ಮಹೀಧ್ರಕಸುತೋ ರಾಜಾ ಕೀರ್ತಿರಾತೋ ಮಹಾಬಲಃ || ಕೀರ್ತಿರಾತಸ್ಯ ರಾಜರ್ಷೇರ್ಮಹಾರೋಮಾ ವ್ಯಜಾಯತ || ೧೧ || ಮಹಾರೋಮ್ಣಸ್ತು ಧರ್ಮಾತ್ಮಾ ಸ್ವರ್ಣರೋಮಾ ವ್ಯಜಾಯತ || ಸ್ವರ್ಣರೋಮ್ಣಸ್ತು ರಾಜರ್ಷೇ ರ್ಹ್ರಸ್ವರೋಮಾ ವ್ಯಜಾಯತ || ೧೨ || ತಸ್ಯ ಪುತ್ರದ್ವಯಂ ಜಜ್ಞೇ ಧರ್ಮಜ್ಞಸ್ಯ ಮಹಾತ್ಮನಃ || ಜ್ಯೇಷ್ಠೋಽಹ ಮನುಜೋ ಭ್ರಾತಾ ಮಮ ವೀರಃ ಕುಶಧ್ವಜಃ || ೧೩ || ಮಾಂತು ಜ್ಯೇಷ್ಠಂ ಪಿತಾ ರಾಜ್ಯೇ ಸೋಽಭಿಷಿಚ್ಯ ನರಾಧಿಪಃ||

---

ಸ್ಯಾಪಿ - ಕೀರ್ತಿರಥನಿಗೂ, ಪುತ್ರಃ - ಮಗನು, ದೇವಮೀಢಇತಿ - ದೇವಮೀಢನೆಂದು, ಸ್ಮೃತಃ - ಹೇಳಲ್ಪಟ್ಟನು, ದೇವಮೀಢಸ್ಯ - ದೇವಮೀಢನಿಗೆ, ವಿಬುಧಃ - ವಿಬುಧನು, ವಿಬುಧಸ್ಯ - ವಿಬುಧನಿಗೆ, ಮಹೀಧ್ರಕಃ - ಮಹೀಧ್ರಕನು. || ೧೦ || ಮಹೀಧ್ರಕಸುತಃ - ಮಹೀಧ್ರಕನ ಕುವರನು, ಮಹಾಬಲಃ - ಮಹಾ ಬಲಿಷ್ಠನಾದ, ಕೀರ್ತಿರಾತಃ - ಕೀರ್ತಿರಾತನೆಂಬ, ರಾಜಾ ಅರಸು, ರಾಜರ್ಷೇಃ - ರಾಜರ್ಷಿಯಾದ, ಕೀರ್ತಿರಾತಸ್ಯ - ಕೀರ್ತಿರಾತರಾಯನಿಗೆ, ಮಹಾರೋಮಾ - ಮಹಾರೋಮನೆಂಬವನು, ವ್ಯಜಾಯತ - ಹುಟ್ಟಿದನು || ೧೧ || ಮಹಾರೋಮ್ಣಸ್ತು ಮಹಾರೋಮನಿಗಾದರೆ, ಧರ್ಮಾತ್ಮಾ - ಧರ್ಮಿಷ್ಠನಾದ ಸ್ವರ್ಣರೋಮಾ - ಸ್ವರ್ಣರೋಮನು, ವ್ಯಜಾಯತ - ಹುಟ್ಟಿದನು, ರಾಜರ್ಷೇಃ - ರಾಜರ್ಷಿಯಾದ, ಸ್ವರ್ಣರೋಮ್ಣಸ್ತು - ಸ್ವರ್ಣರೋಮನಿಗೆ, ಹ್ರಸ್ವರೋಮಾ - ಹ್ರಸ್ವರೋಮನೆಂಬವನು, ವ್ಯಜಾಯತ - ಹುಟ್ಟಿದನು, ಮಹಾತ್ಮನಃ - ಮಹಾತ್ಮನಾದ, ಧರ್ಮಜ್ಞಸ್ಯ - ಧರ್ಮಜ್ಞನಾದ, ತಸ್ಯ - ಆ ಹ್ರಸ್ವರೋಮನಿಗೆ, ಪುತ್ರದ್ವಯಂ - ಇಬ್ಬರು ಮಕ್ಕಳು, ಜಜ್ಞೇ - ಹುಟ್ಟಿದರು, ಜ್ಯೇಷ್ಠಃ - ಜ್ಯೇಷ್ಠನು, ಅಹಂ - ನಾನು, ಮಮ - ನನಗೆ, ವೀರಃ - ಶೂರನಾದ, ಅನುಜಃ - ಕನಿಷ್ಠನಾದ, ಭ್ರಾತಾ- ತಮ್ಮನಾದ, ಕುಶಧ್ವಜಃ-ಕುಶಧ್ವಜನು, || ೧೩ || ಪಿತಾ - ತಂದೆಯಾದ, ನರಾಧಿಪಃ - ಆ ಹ್ರಸ್ವರೋಮರಾಯನು, ರಾಜ್ಯೇ - ರಾಜ್ಯ

---

ದೇವರಾತನು ಕುವರನು ರಾಜರ್ಷಿಯಾದ ದೇವರಾತನಿಗೆ ಬೃಹದ್ರಥರಾಯನೇ ಕುವರನು. ಈ ದೇವರಾತನಿಗೆ ಮಹಾವೀರನೂ, ಪ್ರತಾಪಶಾಲಿಯೂ, ಧೃತಿವಂತನೂ ಆದ ಸುಧೃತಿಯು ಕುವರನಾದನು. ಈತನ ಮಗನೇ ಧೃಷ್ಟಕೇತುವು. ಇವನ ಕುವರನು ಹರ್ಯಶ್ವನು. ಈತನ ಮಗನು ಮರುವೂ, ಇವನಿಂದ ಪ್ರತೀಂಧಕನೂ, ಈತನಿಂದ ಕೀರ್ತಿರಥನೂ,ಇವನಿಂದ ದೇವಮೀಢನೂ, ಈತನಿಗೆ ವಿಬುಧನೂ, ವಿಬುಧನಿಗೆ ಮಹೀಧ್ರಕನೂ ಉಂಟಾದರು.||೧೦|| ಎಲೈ ಮುನಿಯೆ ! ಮಹೀಧ್ರಕನ ಮಗನೇ ಮಹಾಬಲಿಷ್ಠನಾದ ಕೀರ್ತಿರಾತನು. ಈತನಿಗೆ ಮಹಾ ರೋಮನುಂಟಾದನು. ಇವನ ಮಗನು ಸ್ವರ್ಣರೋಮನು, ಈತನ ಕುವರನು ಹ್ರಸ್ವರೋಮನು, ಈತನಿಗೀರ್ವರು ಕುವರರುಂಟಾದರು, ಅವರಲ್ಲಿ ಜ್ಯೇಷ್ಠನಾದವನೇ ನಾನು, ಎರಡನೆಯವನೇ ಈ ಕುಶಧ್ವಜನು .ನಮ್ಮ ಜನಕನಾದ ಹ್ರಸ್ವರೋಮರಾಯನು ಜ್ಯೇಷ್ಠ ಕುವರನಾದ ನನ್ನನ್ನು ಈ ಮಿಥಿಲಾ ನಗರದಲ್ಲಿ ರಾಜ್ಯಾಭಿಷಿಕ್ತನನ್ನಾಗಿ ಮಾಡಿ, ಈ ನನ್ನ

ಕುಶಧ್ವಜಂ ಸಮಾವೇಶ್ಯ ಭಾರಂ ಮಯಿ ವನಂ ಗತಃ ॥ ೧೪ ॥ ವೃದ್ಧೇ ಪಿತರಿ ಸ್ವರ್ಯಾತೇ ಧರ್ಮೇಣ ಧುರಮಾವಹಂ ॥ ಭ್ರಾತರಂ ದೇವ ಸಂಕಾಶಂ ಸ್ನೇಹಾತ್ಪಶ್ಯನ್ ಕುಶಧ್ವಜಂ ॥ ೧೫ ॥ ಕಸ್ಯಚಿತ್ತ್ವಥ ಕಾಲಸ್ಯ ಸಾಂಕಾಶ್ಯಾದಗಮತ್ಪುರಾತ್ ॥ ಸುಧನ್ವಾ ವೀರ್ಯವಾನ್ ರಾಜಾ ಮಿಥಿಲಾ ಮವರೋಧಕಃ ॥ ೧೬ ॥ ಸಚ ಮೇ ಪ್ರೇಷಯಾಮಾಸ ಶೈವಂ ಧನುರನುತ್ತಮಂ ॥ ಸೀತಾ ಕನ್ಯಾಚ ಪದ್ಮಾಕ್ಷೀ ಮಹ್ಯಂ ವೈ ದೀಯತಾಮಿತಿ ॥ ೧೭ ॥ ತಸ್ಯಾಪ್ರದಾನಾ ದ್ಬ್ರಹ್ಮರ್ಷೇ ಯುದ್ಧಮಾಸೀನ್ಮಯಾಸಹ ॥ ಸಹತೋಭಿಮುಖೋ

---

ದಲ್ಲಿ, ಜ್ಯೇಷ್ಠಂ - ಹಿರಿಯನಾದ, ಮಾಂ - ನನ್ನನ್ನು, ಅಭಿಷಿಚ್ಯ - ಅಭಿಷೇಕ ಮಾಡಿ, ಮಯಿ - ನನ್ನಲ್ಲಿ, ಕುಶಧ್ವಜಾ - ಕುಶಧ್ವಜನನ್ನೂ, ಭಾರಂಚ - ರಾಜ್ಯಭಾರವನ್ನೂ, ಸಮಾವೇಶ್ಯ - ಇರಿಸಿ, ವನಂ - ವನವನ್ನು, ಗತಃ - ಹೊಂದಿದನು, ವೃದ್ಧೇ - ವೃದ್ಧನಾದ, ಪಿತರಿ - ತಂದೆಯು, ಸ್ವರ್ಯಾತೇಸತಿ - ಸ್ವರ್ಗಸ್ಥನಾಗಲು, ದೇವಸಂಕಾಶಂ - ದೇವತಾ ಸಮಾನನಾದ, ಭ್ರಾತರಂ-ತಮ್ಮನಾದ, ಕುಶಧ್ವಜಾ - ಕುಶಧ್ವಜನನ್ನು, ಸ್ನೇಹಾತ್ - ಸ್ನೇಹಭಾವದಿಂದ, ಪಶ್ಯನ್-ನೋಡುತ್ತ, ಧರ್ಮೇಣ-ಧರ್ಮದಿಂದ, ಧುರಂ - ರಾಜ್ಯಭಾರವನ್ನು, ಆವಹಂ - ವಹಿಸಿದೆನು. ॥ ೧೫ ॥ ಕಸ್ಯಚಿತ್ಕಾಲಸ್ಯ-ಕೆಲವು ಕಾಲದ, ಅಥ - ಬಳಿಕ, ಸಾಂಕಾಶ್ಯಾತ್ - ಸಾಂಕಾಶ್ಯವೆಂಬ, ಪುರಾತ್ - ಪಟ್ಟಣದಿಂದ, ವೀರ್ಯವಾನ್ - ಸಮರ್ಥನಾದ, ಸುಧನ್ವಾ - ಸುಧನ್ವನೆಂಬ, ರಾಜಾ - ಅರಸು, ಮಿಥಿಲಾಂ - ಮಿಥಿಲಾ ಪಟ್ಟಣವನ್ನು, ಅವರೋಧಕಃ - ತಡೆಮಾಡಿ, ಆಗಮತ್ - ಬಂದನು ॥ ೧೬ ॥ ಸಃ - ಆ ಸುಧನ್ವನೆಂಬವನು, ಶೈವಂ - ಶೈವಸಂಬಂಧವಾದ, ಅನುತ್ತಮಂ - ಸರ್ವೋತ್ತಮವಾದ, ಧನುಃ-ಧನುಸ್ಸು, ಕನ್ಯಾ - ಅವಿವಾಹಿತಳಾದ, ಪದ್ಮಾಕ್ಷೀ - ಕಮಲಾಕ್ಷಿಯಾದ, ಸೀತಾ - ಸೀತಾದೇವಿಯು, ಮಹ್ಯಂವೈ - ನನಗೆ, ದೀಯತಾಮಿತಿ - ಕೊಡಲ್ಪಡಲೆಂದು, ಮೇ-ನನ್ನ ಬಳಿಗೆ, ದೂತಂ-ದೂತನನ್ನು, ಪ್ರೇಷಯಾಮಾಸ - ಕಳುಹಿಸಿಕೊಟ್ಟನು ॥೧೭॥ ಅಪ್ರದಾನಾತ್-ಕೊಡದಿರಲು, ಹೇಬ್ರಹ್ಮರ್ಷೇ-ಎಲೈ ಬ್ರಹ್ಮರ್ಷಿಯೇ, ತಸ್ಯ - ಆ ಸುಧನ್ವನಿಗೆ, ಮಯಾಸಹ - ನನ್ನೊಡನೆ, ಯುದ್ಧಂ - ಯುದ್ಧವು, ಆಸೀತ್ - ಆಯಿತು. ರಣೇ - ಯುದ್ಧದಲ್ಲಿ, ಅಭಿಮುಖಃ - ಇದಿರಾಗಿ ಬಂದ, ಸಸುಧನ್ವಾ - ಆ

---

ತಮ್ಮನಾದ ಕುಶಧ್ವಜರಾಯನ ಪೋಷಣ ಕಾರ್ಯವನ್ನು ನನಗೆ ವಹಿಸಿ ಅರಣ್ಯಕ್ಕೆ ತೆರಳಿದನು. ॥ ೧೪॥ ವೃದ್ಧನಾದ ನಮ್ಮ ಪೂಜ್ಯಪಾದನು ಸ್ವರ್ಗವನ್ನೈದಲು ನಾನು ಪರಂಪರಾಗತವಾದ ಮಿಥಿಲಾಪಟ್ಟಣದ ರಾಜ್ಯಭಾರವನ್ನು ಧರ್ಮದಿಂದ ವಹಿಸಿ, ನನ್ನ ಅನುಜನಾದ ಕುಶಧ್ವಜನನ್ನು ಮಿತ್ರಭಾವದಿಂದೀಕ್ಷಿಸುತ್ತಲಿರುವೆನು. ಆ ಬಳಿಕ ಕೆಲಕಾಲವಾದಮೇಲೆ, ಸಾಂಕಾಶ್ಯ ನಗರದೊಡೆಯನಾದ, ಮಹಾವೀರನಾದ ಸುಧನ್ವನು ಮಿಥಿಲಾಪಟ್ಟಣವನ್ನು ಮುತ್ತಿಗೆ ಹಾಕಿ, ಶೈವಧನುಸ್ಸನ್ನೂ, ಕಮಲೇಕ್ಷಣೆಯಾದ ಸೀತೆಯನ್ನೂ ಕೊಡಬೇಕೆಂದು ಹೇಳಿ ಕಳುಹಿದನು. ॥ ೧೫ ॥ ನಾನಾಕೆಯನ್ನು ತನಿಗೆ ಕೊಡದಿರಲು ನನಗೂ ಆ ಸುಧನ್ವರಾಯನಿಗೂ ಯುದ್ಧವುಂಟಾಯಿತು. ಈ ಯುದ್ಧದಲ್ಲಿ ಸುಧನ್ವರಾಯನು ನನ್ನಿಂದ ಹತನಾದನು. ಎಲೈ ಮುನಿಪುಂಗವನೆ! ಈ ರೀತಿಯಾಗಿ ಆ ಸುಧನ್ವನನ್ನು ಸಂಹರಿಸಿ ನನ್ನ ತಮ್ಮನೂ ವೀರನೂ

ರಾಜಾ ಸುಧನ್ವಾತು ಮಯಾ ರಣೇ || ೧೮ || ನಿಹತ್ಯ ತಂ ಮುನಿಶ್ರೇಷ್ಠ ಸುಧನ್ವಾನಂ ನರಾಧಿಪಂ || ಸಾಂಕಾಶ್ಯೇ ಭ್ರಾತರಂ ವೀರ ಮಭ್ಯಷಿಂಚಂ ಕುಶಧ್ವಜಂ || ೧೯ || ಕನೀಯಾನೇಷ ಮೇ ಭ್ರಾತಾ ಅಹಂ ಜ್ಯೇಷ್ಠೋ ಮಹಾಮುನೇ || ದದಾಮಿ ಪರಮ ಪ್ರೀತೋ ವಧ್ವೌ ತೇ ಮುನಿಪುಂಗವ || ೨೦ || ಸೀತಾಂ ರಾಮಾಯ ಭದ್ರಂ ತೇ ಊರ್ಮಿಳಾಂ ಲಕ್ಷ್ಮಣಾಯಚ || ವೀರ್ಯಶುಲ್ಕಾಂ ಮಮ ಸುತಾಂ ಸೀತಾಂ ಸುರಸುತೋಪಮಾಂ || ೨೧|| ದ್ವಿತೀಯಾಮೂರ್ಮಿಳಾಂ ಚೈವ ತ್ರಿರ್ದದಾಮಿ ನಸಂಶಯಃ||(೧)(ದದಾಮಿ ಪರಮಪ್ರೀತೋ ವಧ್ವೌ ತೇ ರಘುನಂದನ) || ರಾಮಲಕ್ಷ್ಮಣಯೋ ರಾಜನ್ ಗೋದಾನಂ ಕಾರ

ಆ ಸುಧನ್ವನೆಂಬ, ರಾಜಾ - ಅರಸು, ಮಯಾ - ನನ್ನಿಂದ, ಹತಃ ಹೊಡೆಯಲ್ಪಟ್ಟನು. || ೧೮ || ಹೇಮುನಿಶ್ರೇಷ್ಠ - ಎಲೈ ಋಷಿಶ್ರೇಷ್ಠನೇ, ನರಾಧಿಪಂ - ಅರಸಾದ, ತಂಸುಧನ್ವಾನಂ - ಆ ಸುಧನ್ವನನ್ನು, ನಿಹತ್ಯ - ಸಂಹರಿಸಿ, ಸಾಂಕಾಶ್ಯೇ - ಸಾಂಕಾಶ್ಯ ಪಟ್ಟಣದಲ್ಲಿ, ಭ್ರಾತರಂ- ತಮ್ಮನಾದ, ವೀರಂ – ಶೂರನಾದ, ಕುಶಧ್ವಜಂ- ಕುಶಧ್ವಜನನ್ನು ಅಭ್ಯಷಿಂಚಂ-ಪಟ್ಟಾಭಿಷೇಕ ಮಾಡಿದನು. ಹೇಮಹಾಮುನೇ - ಎಲೈ ಋಷಿಶ್ರೇಷ್ಠನೇ, ಏಷಃ - ಈ ಕುಶಧ್ವಜನು, ಮೇ - ನನಗೆ, ಕನೀಯಾನ್ಭ್ರಾತಾ ಕನಿಷ್ಠಭ್ರಾತನು, ಅಹಂ - ನಾನು, ಜ್ಯೇಷ್ಠಃ - ಜ್ಯೇಷ್ಠನು, ಹೇಮುನಿಪುಂಗವ - ಎಲೈ ಋಷಿಶ್ರೇಷ್ಠನೇ, ಪರಮಪ್ರೀತಃ - ಬಹಳ ಸಂತೋಷಗೊಂಡ ನಾನು, ವಧ್ವೌ - ನನ್ನ ಕನ್ಯಕೆಯರಿಬ್ಬರನ್ನು, ತೇ – ನಿನ್ನ ನಿಮಿತ್ತವಾಗಿ, ದದಾಮಿ - ಕೊಡುತ್ತೇನೆ. || ೨೦ || ತೇ - ನಿನಗೆ, ಭದ್ರಂ - ಮಂಗಳವು, ಅಸ್ತು - ಆಗಲಿ, ಸೀತಾಂ - ಸೀತಾದೇವಿಯನ್ನು, ರಾಮಾಯ - ಶ್ರೀರಾಮನಿಗೋಸುಗವೂ, ಊರ್ಮಿಳಾಂ - ಊರ್ಮಿಳಾದೇವಿಯನ್ನು, ಲಕ್ಷ್ಮಣಾಯಚ-ಲಕ್ಷ್ಮಣನಿಗೋಸುಗವೂ, ದದಾಮಿ - ಕೊಡುತ್ತೇನೆ. || ೨೦ || ವೀರ್ಯಶುಲ್ಕಾಂ - ಪರಾಕ್ರಮವೇ ಮೂಲದ್ರವ್ಯವಾಗುಳ್ಳ, ಸುರಸುತೋಪಮಾಂ - ದೇವತಾ ಕನ್ನಿಕೆಗೆ ಸಮಾನಳಾದ, ಮಮ- ನನ್ನ, ಸುತಾಂ - ಕುವರಿ, ಯಾಬ, ಸೀತಾಂ - ಸೀತಾದೇವಿಯನ್ನು, ದ್ವಿತೀಯಾಂ - ಎರಡನೇಯವಳಾದ, ಊರ್ಮಿಳಾಂಚೈವ- ಊರ್ಮಿಳಾದೇವಿಯನ್ನು, ತ್ರಿಃ -ತ್ರಿವಾಚಕನಾಗಿ, (ಅಥವ ತ್ರಿರಾವೃತ್ತಿಯಾಗಿ) ದದಾಮಿ-ಕೊಡುತ್ತೇನೆ, ಸಂಶಯಃ - ಸಂದೇಹವು, ನ - ಇಲ್ಲ. || ೨೧ || ಹೇರಾಜನ್ - ಎಲೈ ದಶರಥರಾಜನೇ, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರಿಬ್ಬರಿಗೂ, ಗೋದಾನಂ - ಗೋದಾನವೆಂಬ ಕರ್ಮವನ್ನು, ಪಿತೃಕಾರ್ಯಂಚ - ನಾಂದೀಶ್ರಾದ್ಧರೂಪವಾದ ಕರ್ಮವನ್ನೂ, ಕಾರಯಸ್ವಹ - ಮಾಡಿಸು, ತೇ -

ಆಗೆ ಕುಶಧ್ವಜನನ್ನು ಸಾಂಕಾಶ್ಯನಗರಸಿಂಹಾಸನದಲ್ಲಿ ಪಟ್ಟಾಭಿಷೇಕವಂಗೈದೆನು. ಕುಶಧ್ವಜರಾಯನು ನನಗಿಂತಲೂ ಕಿರಿಯವನು, ನಾನು ಜ್ಯೇಷ್ಠನು, ಎಲೈ ಮುನಿಪುಂಗವನೆ! ನನ್ನ ಮಗಳೂ, ವೀರ್ಯಶುಲ್ಕಳೂ, ಅಯೋನಿಜಳೂ ಆದ ಸೀತಾದೇವಿಯನ್ನು ಶ್ರೀರಾಮನಿಗೂ, ಎರಡನೆಯವಳೂ ನನ್ನ ಕುವರಿಯೂ ಆದ ಊರ್ಮಿಳೆಯನ್ನು ಲಕ್ಷ್ಮಣನಿಗೋಸುಗವೂ, ನಿನಗೆ ಕಾಯಾವಾಚಾಮನಸಾ ವರಣ ಮಾಡಿಕೊಡುತ್ತೇನೆ ರಾಮಲಕ್ಷ್ಮಣರಿಬ್ಬರಿಗೂ ಗೋದಾನಾದಿ ಕಾರ್ಯಗಳನ್ನೂ, ನಾಂದೀತ್ಯಾದಿಕರ್ಮಗಳನ್ನೂ ಮಾಡಿಸುವವನಾಗು. ಆ ಬಳಿಕ

ಟೀ. (೧) ಅಧಿಕ ಪಾಠ-ಅರ್ಥ ಅನವಶ್ಯಕ.

ಯಸ್ವಹ ॥ ೨೨ ॥ ಪಿತೃಕಾರ್ಯಂಚ ಭದ್ರಂ ತೇ ತತೋ ವೈವಾಹಿಕಂ ಕುರು ॥ ಮಘಾಹ್ಯದ್ಯ ಮಹಾಬಾಹೋ ತೃತೀಯೇ ದಿವಸೇ ಪ್ರಭೋ ॥೨೩॥ ಫಲ್ಗುನ್ಯಾಮುತ್ತರೇ ರಾಜಂಸ್ತಸ್ಮಿನ್ ವೈವಾಹಿಕಂ ಕುರು ॥ ರಾಮಲಕ್ಷ್ಮಣಯೋರಾಜನ್ ದಾನಂ ಕಾರ್ಯಂ ಸುಖೋದಯಂ ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಸಪ್ತತಿತಮಸ್ಸರ್ಗಃ.

---

ನಿನಗೆ, ಭದ್ರಂ - ಶುಭವು, ಅಸ್ತು - ಆಗಲಿ, ತತಃ - ಬಳಿಕ, ವೈವಾಹಿಕಂ - ವಿವಾಹಾಖ್ಯವಾದ ಕರ್ಮವನ್ನು, ಕುರು - ಮಾಡು. ॥ ೨೨ ॥ ಹೇಮಹಾಬಾಹೋ - ಎಲೈ ಮಹಾ ಬಲಶಾಲಿಯೇ, ಅದ್ಯ - ಈಗ, ಮಘಾಹಿ - ಮಖಾನಕ್ಷತ್ರವಷ್ಟೇ, ಹೇಪ್ರಭೋ - ಎಲೈ ಸ್ವಾಮಿಯೇ, ತೃತೀಯೇ ದಿವಸೇ - ಇಂದಿಗೆ ಮೂರು ದಿವಸಗಳಿಗೆ, ಫಲ್ಗುನೀ - ಉತ್ತಮ ಫಲ್ಗುನೀ ನಕ್ಷತ್ರವು, ಹೇರಾಜನ್- ಎಲೈ ಅರಸೇ, ಫಲ್ಗುನ್ಯಾಂ - ಫಲ್ಗುನೀನಾಮಕವಾದ, ತಸ್ಮಿನ್ನುತ್ತರೇ - ಆ ಉತ್ತರಾ ನಕ್ಷತ್ರದಲ್ಲಿ, ವೈವಾಹಿಕಂ - ವಿವಾಹ ಕರ್ಮವನ್ನು, ಕುರು - ಮಾಡು, ಹೇರಾಜನ್ - ಎಲೈ ರಾಯನೇ, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರಿಬ್ಬರಿಗೂ, ಸುಖೋದಯಂ - ಸುಖೋದಯವಾದ, ದಾನಂ - ಗೋ, ಭೂ, ತಿಲಾದಿ ದಾನವು, ಕಾರ್ಯಂ-ಮಾಡತಕ್ಕುದು. ॥ ೨೩-೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಸಪ್ತತಿತಮಸ್ಸರ್ಗಃ.

---

ವೈವಾಹಿಕ ಕಾರ್ಯವನ್ನು ಮಾಡಿಸುವನಾಗು. ॥೨೨॥ ಇಂದು ಮಖಾನಕ್ಷತ್ರವು, ಇಂದಿನ ಮೂರನೆಯ ದಿನಕ್ಕೆ ಫಲ್ಗುನೀಯೆಂಬ ಉತ್ತರಾ ನಕ್ಷತ್ರದಲ್ಲಿ (ಫಲ್ಗುನೀ ನಕ್ಷತ್ರವು ವಧೂವರರಿಗೆ ಮಂಗಳಕರವಾದುದು) ಸುಖ ಸಂದಾಯಕವಾದ ರಾಮ ಲಕ್ಷ್ಮಣರ ವಿವಾಹ ಕಾರ್ಯವನ್ನು ಮಾಡುವವನಾಗು. ॥೨೪॥

ಇಂತಿದು ಜನಕ ಗದಿತ ಸ್ವವಂಶ ವೃತ್ತಾಂತವರ್ಣನವೆಂಬ ಎಪ್ಪತ್ತೊಂದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ದ್ವಿಸಪ್ತತಿತಮಸ್ಸರ್ಗಃ.



ತಮುಕ್ತವಂತಂ ವೈದೇಹಂ ವಿಶ್ವಾಮಿತ್ರೋ ಮಹಾಮುನಿಃ || ಉವಾಚ ವಚನಂ ವೀರಂ ವಸಿಷ್ಠಸಹಿತೋ ನೃಪಂ || ೧ || ಅಚಿಂತ್ಯಾ ನ್ಯಪ್ರಮೇಯಾನಿ ಕುಲಾನಿ ನರಪುಂಗವ || ಇಕ್ಷ್ವಾಕೂಣಾಂ ವಿದೇಹಾನಾಂ ನೈಷಾಂ ತುಲ್ಯೋಸ್ತಿ ಕಶ್ಚನ ||೨|| ಸದೃಶೋ ಧರ್ಮಸಂಬಂಧಸ್ಸದೃಶೋ ರೂಪಸಂಪದಾ || ರಾಮಲಕ್ಷ್ಮಣಯೋ ರಾಜನ್ ಸೀತಾಚೋರ್ಮಿಳಯಾಸಹ || ೩ || ವಕ್ತವ್ಯಂ ಚ ನರ

---

ಉಕ್ತವಂತಂ - ಹೀಗೆ ಹೇಳಿದ ,ವೀರಂ - ಶೂರನಾದ, ತಂವೈದೇಹಂ - ಆ ಜನಕರಾಯನೆಂಬ, ನೃಪಂ - ಅರಸನನ್ನು ಕುರಿತು, ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ವಸಿಷ್ಠಸಹಿತಃ - ವಸಿಷ್ಠರಿಂದೊಡಗೂಡಿದವನಾಗಿ, ವಚನಂ - ಮಾತನ್ನು, ಉವಾಚ - ಹೇಳಿದನು. || ೧ || ಇಕ್ಷ್ವಾಕೂಣಾಂ – ಇಕ್ಷ್ವಾಕುವಂಶಸ್ಥರಾಜರ, ವಿದೇಹಾನಾಂ – ಜನಕರಾಜ ವಂಶಸ್ಥರ, ಕುಲಾನಿ - ವಂಶಗಳು, ಅಚಿಂತ್ಯಾನಿ - ಆಶ್ಚರ್ಯಕರಗಳಾದುವು, ಅಪ್ರಮೇಯಾನಿ-ಅಪರಿಮಿತ ಮಾಹಾತ್ಮ್ಯವುಳ್ಳವುಗಳು, ಏಷಾಂ - ಈ ಇಕ್ಷ್ವಾಕು ವಿದೇಹವಂಶಸ್ಥರಿಗೆ, ತುಲ್ಯಃ - ಸಮಾನನಾದಂತಹವನು, ಕಶ್ಚನ - ಯಾವನೂ, ನಾಸ್ತಿ - ಇಲ್ಲವು. || ೨ || ಹೇರಾಜನ್ - ಎಲೈ ಜನಕರಾಜನೇ! ಧರ್ಮಸಂಬಂಧಃ - ಧರ್ಮದಿಂದ ಈ ಸಂಬಂಧವು, ಸದೃಶಃ – ಸಮಾನವಾದುದು, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರಿಬ್ಬರಿಗೂ, ಸೀತಾಚ – ಸೀತಾದೇವಿಯು, ಊರ್ಮಿಳಾಸಹ - ಊರ್ಮಿಳಾದೇವಿಯರೊಡನೆ, ದೀಯತಇತಿಯತ್ – ಕೊಡಲ್ಪಡುತ್ತದೆಂಬ, ಇದಂ - ಈ ಸಂಬಂಧವು,

---

ಈ ರೀತಿ ನುಡಿದ, ಮಹಾ ವೀರನಾದ ಜನಕರಾಯನನ್ನು ಕುರಿತು, ವಸಿಷ್ಠನಿಂದೊಡಗೂಡಿದ ವಿಶ್ವಾಮಿತ್ರಮುನಿಯು ಆತನನ್ನು ಕುರಿತು "ಎಲೈ ನರಶ್ರೇಷ್ಠನಾದ ಜನಕರಾಯನೆ! ಇಕ್ಷ್ವಾಕುರಾಯರ ವಂಶವೂ, ವಿದೇಹ ರಾಯರ ಕುಲವೂ ಆಶ್ಚರ್ಯಕರವಾದುದಾಗಿಯೂ, ಅಸದೃಶವಾಗಿಯೂ ಇರುವ ಪ್ರಭಾವವುಳ್ಳದು.ಇವುಗಳಿಗೆ ಸಮಾನವಾದ ಕುಲವು ಮತ್ತಾವುದೂ ಇಲ್ಲವು.ಅಯ್ಯಾ ರಾಜನೆ!ರಾಮಲಕ್ಷ್ಮಣರಿಗೆ ನಿನ್ನಕುವರಿಯರಾದ ಸೀತೋರ್ಮಿದೇವಿಯರು ರೂಪು, ಯೌವನಾದಿಗಳಿಂದ ಈಡಾಗಿರುವರಲ್ಲದೆ, ಈ ಸಂಬಂಧವು ಧರ್ಮಪ್ರದವಾಗಿ ಒಂದಕ್ಕೊಂದು ಸಮನಾಗಿರುವುದು. ಆದರೆ ನಾನು ಹೇಳಬೇಕಾದುದು ಸ್ವಲ್ಪ

ಶ್ರೇಷ್ಠ ಶ್ರೂಯತಾಂ ವಚನಂ ಮಮ ‖ ಭ್ರಾತಾ ಯವೀಯಾನ್ ಧರ್ಮಜ್ಞ ಏಷ ರಾಜಾ ಕುಶಧ್ವಜಃ ‖ ೪ ‖ ಅಸ್ಯ ಧರ್ಮಾತ್ಮನೋ ರಾಜನ್ ರೂಪೇಣಾಪ್ರತಿಮಂ ಭುವಿ ‖ ಸುತಾದ್ವಯಂ ನರಶ್ರೇಷ್ಠ ಪತ್ನ್ಯರ್ಥಂ ವರಯಾಮಹೇ ‖ ೫ ‖ ಭರತಸ್ಯ ಕುಮಾರಸ್ಯ ಶತ್ರುಘ್ನಸ್ಯ ಚ ಧೀಮತಃ ‖ ವರಯಾಮ ಸ್ಸುತೇ ರಾಜನ್ ತಯೋರರ್ಥೇ ಮಹಾತ್ಮನೋಃ ‖ ೬ ‖ ಪುತ್ರಾ ದಶರಥಸ್ಯೇಮೇ ರೂಪ ಯೌವನ ಶಾಲಿನಃ ‖ ಲೋಕಪಾಲೋಪಮಾಸ್ಸರ್ವೇ ದೇವತುಲ್ಯ ಪರಾಕ್ರಮಾಃ ‖ ೭ ‖ ಉಭಯೋರಪಿ ರಾಜೇಂದ್ರ ಸಂಬಂಧೇನಾನುಬಧ್ಯತಾಂ ‖

---

ರೂಪಸಂಪದಾ - ರೂಪಸಂಪತ್ತಿನಿಂದಲೂ, ಸದೃಶಃ - ಸಮಾನನಾದುದು. ‖೪‖ ಹೇನರಶ್ರೇಷ್ಠ- ಎಲೈ ನರಪತಿಯೇ, ವಕ್ತವ್ಯಂ - ಹೇಳತಕ್ಕ, ಮಮ - ನನ್ನ, ವಚನಂ-ಮಾತು, ಶ್ರೂಯತಾಂ - ಕೇಳಲ್ಪಡಲಿ, ಧರ್ಮಜ್ಞಃ - ಧರ್ಮವನ್ನು ಬಲ್ಲವನಾದ, ಏಷಃ - ಈ, ಕುಶಧ್ವಜಃ- ಕುಶಧ್ವಜನೆಂಬ, ರಾಜಾ - ಅರಸು, ತವ - ನಿನಗೆ, ಯವೀಯಾನ್ಭ್ರಾತಾ - ಕಿರಿಯತಮ್ಮನಲ್ಲವೆ, ಹೇರಾಜನ್- ಎಲೈ ಜನಕರಾಯನೇ, ಧರ್ಮಾತ್ಮನಃ - ಧರ್ಮಿಷ್ಠನಾದ, ಅಸ್ಯ - ಈ ಕುಶಧ್ವಜ ಸಂಬಂಧಿಗಳಾದ,ಭುವಿ- ಪ್ರಪಂಚದಲ್ಲಿ, ರೂಪೇಣ - ಸೌಂದರ್ಯದಿಂದ, ಅಪ್ರತಿಮಂ - ಸಮಾನವಿಲ್ಲದಿರುವ, ಸುತಾದ್ವಯಂ- ಹೆಣ್ಣುಮಕ್ಕಳಿಬ್ಬರನ್ನು, ಹೇನರಶ್ರೇಷ್ಠ - ಎಲೈ ನರಶ್ರೇಷ್ಠನಾದ ಜನಕನೇ, ಪತ್ನ್ಯರ್ಥಂ- ಪತ್ನೀ ನಿಮಿತ್ತವಾಗಿ, ವರಯಾಮಹೇ - ವರಿಸುತ್ತೇವೆ. ‖ ೫ ‖ ಹೇರಾಜನ್ - ಎಲೈ ಜನಕರಾಯನೇ, ಕುಮಾರಸ್ಯ - ದಶರಥ ಕುವರನಾದ, ಭರತಸ್ಯ - ಭರತನಿಗೂ, ಧೀಮತಃ - ಬುದ್ಧಿವಂತನಾದ, ಶತ್ರುಘ್ನಸ್ಯ - ಶತ್ರುಘ್ನನೂ ಎಂಬ, ಮಹಾತ್ಮನೋಃ - ಮಹಾ ಪ್ರಭಾವಂತರಾದ, ತಯೋಃ - ಅವರಿಬ್ಬರ, ಅರ್ಥೇ - ನಿಮಿತ್ತವಾಗಿ, ಸುತೇ-ನಿನ್ನ ತಮ್ಮನ ಮಕ್ಕಳಿಬ್ಬರನ್ನು, ವರಯಾಮಹೇ- ವರಿಸುತ್ತೇವೆ ‖ ೬ ‖ ದಶರಥಸ್ಯ – ದಶರಥರಾಯನ, ಇಮೇಪುತ್ರಾಃ - ಈ ಮಕ್ಕಳು, ರೂಪ ಯೌವನಶಾಲಿನಃ - ಸೌಂದರ್ಯದಿಂದಲೂ ಯೌವನದಿಂದಲೂ ಒಪ್ಪುತ್ತಿರುವರು, ಸರ್ವೇ-ಸಮಸ್ತರೂ, ಲೋಕಪಾಲೋಪಮಾಃ - ದಿಕ್ಪಾಲಕರಿಗೆ ಸಮಾನರು, ದೇವತುಲ್ಯಪರಾಕ್ರಮಾಃ - ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರು. ‖ ೭ ‖ ಹೇರಾಜೇಂದ್ರ - ಎಲೈ ರಾಜಶ್ರೇಷ್ಠನೇ, ಇಕ್ಷ್ವಾಕೋಃ - ಇಕ್ಷ್ವಾಕುಮಹಾರಾಯನ, ಅವ್ಯಗ್ರಂ - ನಿರ್ದೋಷವಾದ, ಕುಲಂ- ವಂಶವೂ, ಪುಣ್ಯಕರ್ಮಣಃ - ಪುಣ್ಯಕರವಾದ ವ್ಯಾಪಾರವುಳ್ಳ, ಭವತಃ - ನಿನ್ನ, ಕುಲಂ- ಕುಲವೂ ಎಂಬ,

---

ವಿರುವುದು. ಅದನ್ನು ಹೇಳುತ್ತೇನೆ, ಕೇಳು. ನಿನ್ನ ತಮ್ಮನೂ, ಮಹಾಧರ್ಮಿಷ್ಠನೂ ಆದ ಕುಶಧ್ವಜರಾಯನಿಗೆ ಈರ್ವರು ಕುವರಿಯರಿರುವರಲ್ಲ! ಅಪ್ರತಿಮ ಸೌಂದರ್ಯಶಾಲಿನಿಯರಾದ ಆ ಕನ್ಯಾದ್ವಯವನ್ನು ದಶರಥರಾಜ ನಂದನರಾದ ಭರತ ಶತ್ರುಘ್ನರಿಗೋಸುಗ ವರಣ ಮಾಡುತ್ತೇವೆ. ದಶರಥರಾಯನ ಈ ನಾಲ್ವರು ಕುವರರೂ ರೂಪ ಯೌವನಾದಿಗಳಿಂದೊಪ್ಪಿ, ಲೋಕಪಾಲಕರಿಗೆ ಸಮಾನರಾಗಿಯೂ, ಮಹಾಪರಾಕ್ರಮಶಾಲಿಗಳಾಗಿಯೂ ಇರುವರು, ಆದುದರಿಂದೀ ಉಭಯವಂಶಗಳಿಗೆ ಈ ವಿಧವಾದ ಸಂಬಂಧವುಂಟಾದರೆ ಶ್ಲಾಘ್ಯವಾಗಿರು

ಇಕ್ಷ್ವಾಕೋಃ ಕುಲಮವ್ಯಗ್ರಂ ಭವತಃ ಪುಣ್ಯಕರ್ಮಣಃ ॥ ೮ ॥ ವಿಶ್ವಾಮಿತ್ರ ವಚಶ್ಶ್ರುತ್ವಾ ವಸಿಷ್ಠಸ್ಯ ಮತೇತದಾ ॥ ಜನಕಃ ಪ್ರಾಂಜಲಿರ್ವಾಕ್ಯ ಮುವಾಚ ಮುನಿಪುಂಗವೌ ॥೯॥ ಕುಲಂ ಧನ್ಯಮಿದಂ ಮನ್ಯೇ ಯೇಷಾಂ ನೋ ಮುನಿ ಪುಂಗವೌ ॥ ಸದೃಶಂ ಕುಲ ಸಂಬಂಧಂ ಯದಾಜ್ಞಾಪಯಥಸ್ಸ್ವಯಂ ॥೧೦॥ ಏವಂ ಭವತು ಭದ್ರಂ ವಃ ಕುಶಧ್ವಜ ಸುತೇ ಇಮೇ ॥ ಪತ್ನ್ಯೌ ಭಜೇತಾಂ ಸಹಿತೌ ಶತ್ರುಘ್ನ ಭರತಾವುಭೌ ॥೧೧॥ ಏಕಾಹ್ನಾ ರಾಜಪುತ್ರೀಣಾಂ ಚತಸೃಣಾಂ ಮಹಾಮುನೇ ॥ ಪಾಣೀನ್ ಗೃಹ್ಣಂತು ಚತ್ವಾರೋ ರಾಜಪುತ್ರಾ ಮಹಾ

---

ಉಭಯೋಃ - ನಿಮ್ಮಿಬ್ಬರ, ಉಭಯಂ - ಎರಡು ಕುಲವೂ, ಸಂಬಂಧೇನ - ಸಂಬಂಧದಿಂದ, ಅನುಬಧ್ಯತಾಂ - ಕಟ್ಟಲ್ಪಡಲಿ. ॥ ೮ ॥ ತದಾ - ಆಗ, ವಿಶ್ವಾಮಿತ್ರವಚಃ - ವಿಶ್ವಾಮಿತ್ರನ ವಾಕ್ಯವನ್ನು, ಶ್ರುತ್ವಾ - ಕೇಳಿ, ವಸಿಷ್ಠಸ್ಯ - ವಸಿಷ್ಠ ಋಷಿಗೆ, ಮತೇಸತಿ - ಸಮ್ಮತವಾಗಲು, ಜನಕಃ- ಜನಕರಾಯನು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಮುನಿಪುಂಗವೌ - ಋಷಿಶ್ರೇಷ್ಠರಾದ ವಿಶ್ವಾಮಿತ್ರ ವಸಿಷ್ಠರೆಂಬಿಬ್ಬರನ್ನು ಕುರಿತು, ವಾಕ್ಯಂ - ವಚನವನ್ನು, ಉವಾಚ - ಹೇಳಿದನು. ॥ ೯ ॥ ಹೇಮುನಿಪುಂಗವೌ - ಎಲೈ ಋಷಿಶ್ರೇಷ್ಠರುಗಳಿರಾ, ಯೇಷಾಂ - ಯಾವ, ನಃ - ನಮಗೆ, ಕುಲ ಸಂಬಂಧಂ - ಕುಲಗಳಿಗೆ ಸಂಬಂಧವು, ಸದೃಶಂ - ಸಮಾನವನ್ನಾಗಿ, ಸ್ವಯಂ - ತಾವೇ, ಯದಾ - ಯಾವಕಾರಣ, ಆಜ್ಞಾಪಯಥಃ - ಆಜ್ಞಾಪಿಸಿದರೋ, ಇದಂಕುಲಂ - ಈ ಕುಲವನ್ನು, ಧನ್ಯಂ - ಧನ್ಯವನ್ನಾಗಿ, ಮನ್ಯೇ - ಎಣಿಸುತ್ತೇನೆ. ॥ ೧೦ ॥ ವಃ - ನಿಮಗೆ, ಭದ್ರಂ - ಮಂಗಳವು,ಅಸ್ತು- ಆಗಲಿ, ಏವಂ ಭವತು - ಹಾಗೆಯೇ ಆಗಲಿ, ಶತ್ರುಘ್ನಭರತೌ - ಶತ್ರುಘ್ನ ಭರತರೆಂಬ, ಉಭೌ- ಇಬ್ಬರೂ, ಸಹಿತೌ - ಕೂಡಿ, ಇಮೇ - ಈ, ಕುಶಧ್ವಜಸುತೇ - ಕುಶಧ್ವಜನ ಕುವರಿಯರಾದ ಮಾಂಡವೀ ಶೃತಕೀರ್ತಿಗಳನ್ನು, ಪತ್ನ್ಯೌ - ಪತ್ನ್ಯರ್ಥವಾಗಿ, ಭಜೇತಾಂ - ಹೊಂದಲಿ. ॥ ೧೧ ॥ ಹೇಮಹಾಮುನೇ – ಎಲೈ ಮಹರ್ಷಿಯೇ, ಮಹಾಬಲಾಃ - ಮಹಾ ಬಲವಂತರಾದ, ರಾಜಪುತ್ರಾಃ- ರಾಜಪುತ್ರರಾದ, ಚತ್ವಾರಃ – ನಾಲ್ವರೂ, ಏಕಾಹ್ನಾ - ಒಂದೇ ದಿವಸದಲ್ಲಿ, ರಾಜಪುತ್ರೀಣಾಂ -

---

ತ್ತದೆ.'' ಎಂದನು. ॥೮॥ ಹೀಗೆ ವಸಿಷ್ಠಋಷಿಯ ಅಭಿಮತದಂತೆ ನುಡಿದ ವಿಶ್ವಾಮಿತ್ರ ಮುನಿಯ ನುಡಿಗಳನ್ನು ಕೇಳಿದ ಜನಕರಾಯನು, ಅಂಜಲಿಬದ್ಧನಾಗಿ ಆ ವಸಿಷ್ಠ ವಿಶ್ವಾಮಿತ್ರರನ್ನು ಕುರಿತು "ಎಲೈ ಋಷಿಶ್ರೇಷ್ಠರೆ! ನಮ್ಮ ಕುಲಕ್ಕೆ ಸದೃಶವಾದ ಸಂಬಂಧವನ್ನು ತಾವೇ ತಿಳಿದಿರಾದುದರಿಂದ ಇದೀಗೆ ನಮ್ಮ ವಂಶವು ಧನ್ಯವಾದುದಾಯಿತೆಂದೆಣಿಸುತ್ತೇನೆ. ತಮ್ಮಾಜ್ಞೆಯಂತೆಯೆ ನಡೆಯಲು ಸಿದ್ಧನಾಗಿರುವೆನು. ಭರತ ಶತ್ರುಘ್ನರು ನನ್ನ ತಮ್ಮನಾದ ಕುಶಧ್ವಜರಾಯನ ಕುವರಿಯರಾದ ಮಾಂಡವೀ ಶ್ರುತಿಕೀರ್ತಿಯರನ್ನು ಪತ್ನ್ಯರ್ಥವಾಗಿ ವರಿಸುವವರಾಗಲಿ. ॥ ೧೧ ॥ ಎಲೈ ಮಹಾಮುನಿಯೆ! ಮಹಾಬಲಶಾಲಿಗಳಾದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ರಾಜನಂದನರೂ, ರಾಜ ಪುತ್ರಿಯರಾದ ಸೀತೋರ್ಮಿಳಾದಿ ನಾಲ್ಕು ಮಂದಿಯರನ್ನು ಒಂದೇ ದಿನದಲ್ಲಿಯೇ ಪಾಣಿಗ್ರಹಣಮಾಡಲಿ; ಎಲೈ ಬ್ರಹ್ಮರ್ಷಿಯೆ ! ಯಾವ

ಬಲಾಃ ‖ ೧೨ ‖ ಉತ್ತರೇ ದಿವಸೇ ಬ್ರಹ್ಮನ್ ಫಲ್ಗುನೀಭ್ಯಾಂ ಮನೀಷಿಣಃ ‖ ವೈವಾಹಿಕಂ ಪ್ರಶಂಸಂತಿ ಭಗೋ ಯತ್ರ ಪ್ರಜಾಪತಿಃ ‖೧೩‖ ಏವಮುಕ್ತ್ವಾ ವಚಸ್ಸೌಮ್ಯಂ ಪ್ರತ್ಯುತ್ಥಾಯ ಕೃತಾಂಜಲಿಃ ‖ ಉಭೌ ಮುನಿವರೌ ರಾಜಾ ಜನಕೋ ವಾಕ್ಯಮಬ್ರವೀತ್ ‖ ೧೪ ‖ ಪರೋ ಧರ್ಮಃ ಕೃತೋ ಮಹ್ಯಂ ಶಿಷ್ಯೋಽಸ್ಮಿ ಭವತೋಸ್ಸದಾ ‖ ಇಮಾನ್ಯಾಸನ ಮುಖ್ಯಾನಿ ಅಸಾತಾಂ ಮುನಿ

---

ರಾಜಪುತ್ರಿಯರಾದ, ಚತಸ್ರೂಣಾಂ-ನಾಲ್ವರಾದ ಕನ್ಯಕೆಯರ, ಪಾಣೀನ್-ಹಸ್ತಗಳನ್ನು, ಗೃಹ್ಣಂತು-ಗ್ರಹಿಸಲಿ. ‖ ೧೨ ‖ ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ, ಮನೀಷಿಣಃ - ವಿದ್ವಾಂಸರು, ಯತ್ರ-ಯಾವ ನಕ್ಷತ್ರದಲ್ಲಿ, ಪ್ರಜಾಪತಿಃ - ಪ್ರಜಾ ಉತ್ಪತ್ತಿಸ್ಥಾನದಲ್ಲಿ ಲಿಂಗಾಭಿಮಾನದೇವತೆಯಾದ, ಭಗಃ - ಭಗಾಖ್ಯದೇವತೆಯು, ಫಲ್ಗುನೀಭ್ಯಾಂ - ಫಲ್ಗುನೀ ನಾಮಕವಾದ, ತಸ್ಮಿನ್ನುತ್ತರೇದಿವಸೇ - ಆ ಉತ್ತರಾ ನಕ್ಷತ್ರದಲ್ಲಿ, ವೈವಾಹಿಕಂ - ವಿವಾಹ ಕರ್ಮವನ್ನು, ಪ್ರಶಂಸಂತಿ - ಪ್ರಶಸ್ತವೆಂದು ಹೇಳುತ್ತಾರೆ ‖ ೧೩ ‖ ಏವಂ - ಹೀಗೆ, ಜನಕೋರಾಜಾ - ಜನಕರಾಯನು, ಉಭೌ-ಇಬ್ಬರಾದ, ಮುನಿವರೌ - ವಸಿಷ್ಠ ವಿಶ್ವಾಮಿತ್ರರನ್ನು ಕುರಿತು, ಸೌಮ್ಯಂ - ಮೃದುವಾದ, ವಚಃ - ವಾಕ್ಯವನ್ನು, ಉಕ್ತ್ವಾ - ಹೇಳಿ, ಪ್ರತ್ಯುತ್ಥಾಯ - ಮೇಲಕ್ಕೆ ಎದ್ದು, ಕೃತಾಂಜಲಿಃ-ಬದ್ಧಾಂಜಲಿಪುಟನಾಗಿ, ವಾಕ್ಯಂ - ವಚನವನ್ನು, ಅಬ್ರವೀತ್ - ನುಡಿದನು. ‖ ೧೪ ‖ ಪರಃ - ಶ್ರೇಷ್ಠವಾದ, ಧರ್ಮಃ - ಧರ್ಮವು, ಮಹ್ಯಂ - ನನಗೋಸ್ಕರ, ಕೃತಃ - ಮಾಡಲ್ಪಟ್ಟಿತು, ಹೇಮುನಿಪುಂಗವೌ-ಎಲೈಋಷಿಶ್ರೇಷ್ಠರುಗಳಿರಾ, ಭವತೋಃ - ನಿಮಗ, ಸದಾ-ಸರ್ವಕಾಲಗಳಲ್ಲಿಯೂ, ಶಿಷ್ಯಃ-ಶಿಷ್ಯನು, ಅಸ್ಮಿ - ಆಗಿರುವೆನು, ಇಮಾನ್ಯಾಸನಮುಖ್ಯಾನಿ-ಈ ಶ್ರೇಷ್ಠವಾದ ಆಸನಗಳಲ್ಲಿ, ಅಸತಾಂ-ಕುಳಿತು

---

ನಕ್ಷತ್ರದಲ್ಲಿ ಪ್ರಜೋತ್ಪತ್ತಿಸ್ಥಾನ ಭೂತವಾದದೂ, ಲಿಂಗಾಭಿಮಾನಿ ದೇವತೆಯೂ ಆದ ಭಗಾಖ್ಯ ದೇವತೆಯು ಇರುವುದೋ ಅಂತಹ ಉತ್ತರ ಫಲ್ಗುನೀ ನಕ್ಷತ್ರದಲ್ಲಿ ವೈವಾಹಿಕ ಕರ್ಮವನ್ನು ನೆರವೇರಿಸಿದರೆ ಬಹಳ ಪ್ರಶಸ್ತವಾಗಿರುವುದು, ಎಂದು ತಿಳಿದವರು ಹೇಳುವರಷ್ಟೆ, ಅಂದಿನ ದಿನವೇ ವಿವಾಹ ಕರ್ಮವು ನಡೆಯಲಿ" ಎಂದನು. ಇಂತು ನುಡಿದು ಜನಕರಾಯನು ಮೇಲಕ್ಕೆದ್ದು ಕೈಗಳನ್ನು ಜೋಡಿಸಿಕೊಂಡು,ವಸಿಷ್ಠ ವಿಶ್ವಾಮಿತ್ರಮುನಿವರೇಣ್ಯರನ್ನು ಕುರಿತು ಮತ್ತೂ ಹೀಗೆಂದನು. "ಎಲೈ ಮುನಿಪುಂಗವರಿರಾ ! ತಾವಿಬ್ಬರೂ ನನಗೆ ಬಹಳವಾದ ಧರ್ಮವನ್ನುಂಟುಮಾಡಿರುವಿರಿ. ನಾನು ನಿರಂತರವೂ ತಮಗೆ ಶಿಷ್ಯನಾಗಿರುವೆನು ಈ ಪೀಠಗಳನ್ನಲಂಕರಿಸುವವರಾಗಿರಿ. ನನ್ನ ಸಂಬಂಧವಾದ ಈ ಪಟ್ಟಣದಲ್ಲಿ ದಶರಥರಾಯನು ಹೇಗೆ ಸ್ವಾಮಿತ್ವವನ್ನುಂಟಾಗಿರುವನೋ,ಹಾಗೆ ನಾನೂ ಸಹ ಈತನ ರಾಜಧಾನಿಯಾದ ಅಯೋಧ್ಯಾ ಪಟ್ಟಣದಲ್ಲಿ ಸ್ವಾತಂತ್ರ್ಯವುಳ್ಳವನಾಗಿರುವೆನು ನಮ್ಮಿಬ್ಬರಿಗೂ ಹೀಗೆ ವ್ಯತ್ಯಾಸವಿಲ್ಲದಿರುವುದು. ಈ ವಿಷಯದಲ್ಲಿ ಸ್ವಲ್ಪ ಮಾತ್ರವೂ ಸಂಶಯವಿಲ್ಲವು. ಆದುದರಿಂದ ಯಾವ ಯಾವ ಕರ್ಮಗಳು ಹೇಗೆ ಹೇಗೆ ನಡೆಯಿಸಬೇಕೋ ಹಾಗೆಲ್ಲ ತಾವೇ ಯೋಚಿಸಿ ಮಾಡಿಸುವವರಾಗಿರಿ." ಎಂದು ವಿನಯಪುರಸ್ಸರವಾಗಿ ಹೇಳಿದವನಾದನು. ಆಗ ಸಂತುಷ್ಟಾಂತರಂಗವುಳ್ಳ ದಶರಥರಾಯನು ಜನಕರಾಯನಿಗೀರೀತಿ ಹೇಳಿದನು. ‖ ೧೩ ‖ ಮಿಥಿಲಾಪುರಿಗೆ ಅಧಿಪತಿ

ಪುಂಗವೌ || ೧೫ || ಯಥಾ ದಶರಥಸ್ಯೇಯಂ ತಥಾಯೋಧ್ಯಾ ಪುರೀ ಮಮ || ಪ್ರಭುತ್ವೇ ನಾಸ್ತಿ ಸಂದೇಹೋ ಯಥಾರ್ಹಂ ಕರ್ತುಮರ್ಹಥ || ೧೬ || ತಥಾ ಬ್ರುವತಿ ವೈದೇಹೇ ಜನಕೇ ರಘುನಂದನಃ || ರಾಜಾ ದಶರಥೋ ಹೃಷ್ಟಃ ಪ್ರತ್ಯುವಾಚ ಮಹೀಪತಿಂ || ೧೭ || ಯುವಾಮಸಂಖ್ಯೇಯಗುಣೌ ಭ್ರಾತರೌ ಮಿಥಿಲೇಶ್ವರೌ || ಋಷಯೋ ರಾಜಸಂಘಾಶ್ಚ ಭವದ್ಭ್ಯಾಮಭಿಪೂಜಿತಾಃ || ೧೮ || ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಗಮಿಷ್ಯಾಮಿ ಸ್ವಮಾಲಯಂ || ಶ್ರಾದ್ಧಕರ್ಮಾಣಿ ಸರ್ವಾಣಿ ವಿಧಾಸ್ಯಾಮೀತಿ ಚಾಬ್ರವೀತ್||೧೯||ತಮಾಪೃಷ್ಟ್ವಾ ನರಪತಿಂ ರಾಜಾ ದಶರಥಸ್ತದಾ || ಮುನೀಂದ್ರೌ ತೌ ಪುರಸ್ಕೃತ್ಯ ಜಗಾಮಾಶು

ಕೊಳ್ಳಿರಿ. || ೧೪ || ಇಯಂ - ಈ ಪಟ್ಟಣವು, ದಶರಥಸ್ಯ - ದಶರಥರಾಯನಿಗೆ, ಯಥಾ-ಹೇಗೊ, ಪ್ರಭುತ್ವೇ - ಸ್ವಾಮಿತ್ವವಿಷಯದಲ್ಲಿ, ಮಮ - ನನಿಗೂ, ಅಯೋಧ್ಯಾಪುರೀ-ಅಯೋಧ್ಯಾಪಟ್ಟಣವೂ, ತಥಾ - ಹಾಗೆಯೇ, ಸಂದೇಹಃ - ಸಂಶಯವು, ನಾಸ್ತಿ - ಇಲ್ಲವು, ಯಥಾರ್ಹಂ - ಯಥಾಯೋಗ್ಯವಾಗಿ, ಕರ್ತುಂ - ಮಾಡಲು, ಅರ್ಹಥ - ಯೋಗ್ಯರಾಗಿರಿ. || ೧೫ || ವೈದೇಹೇ - ವಿದೇಹಾಧಿಪತಿಯಾದ, ಜನಕೇ - ಜನಕರಾಯನು, ತಥಾ - ಆ ಪ್ರಕಾರವಾಗಿ, ಬ್ರುವತಿಸತಿ - ಹೇಳಲು, ದಶರಥೋರಾಜಾ - ದಶರಥ ಮಹಾರಾಯನು, ಹೃಷ್ಟಃ - ಸಂತುಷ್ಟನಾಗಿ, ಮಹೀಪತಿಂ - ಜನಕರಾಯನನ್ನು ಕುರಿತು, ಪ್ರತ್ಯುವಾಚ - ಪ್ರತ್ಯುತ್ತರವಿತ್ತನು. || ೧೬ || ಯುವಾಂ - ನೀವು, ಅಸಂಖ್ಯೇಯಗುಣೌ - ಸಂಖ್ಯಾತೀತಗಳಾದ ಗುಣಗಳುಳ್ಳವರು, ಭ್ರಾತರೌ - ಅಣ್ಣತಮ್ಮಂದಿರಿಬ್ಬರೂ, ಮಿಥಿಲೇಶ್ವರೌ - ಮಿಥಿಲಾ ಪಟ್ಟಣಕ್ಕೆ ಅಧಿಪತಿಗಳು, ಋಷಯಃ - ಋಷಿಗಳೂ, ರಾಜಸಂಘಾಶ್ಚ - ರಾಜತಂಡಗಳೂ ಕೂಡ, ಭವದ್ಭ್ಯಾಂ - ನಿಮ್ಮಿಂದ, ಅಭಿಪೂಜಿತಾಃ - ಪೂಜಿಸಲ್ಪಟ್ಟಿರುವರು, ತೇ - ನಿನಗೆ, ಭದ್ರಂ - ಮಂಗಳವು, ಅಸ್ತು - ಆಗಲಿ, ಸ್ವಸ್ತಿ - ಕ್ಷೇಮವನ್ನು, ಪ್ರಾಪ್ನುಹಿ - ಹೊಂದು. || ೧೭ || ಸ್ವಂ - ಸ್ವಕೀಯವಾದ, ಆಲಯಂ - ಸ್ಥಾನವನ್ನು ಕುರಿತು, ಗಮಿಷ್ಯಾಮಿ-ಹೋಗುವೆನು, ಸರ್ವಾಣಿ - ಸಮಸ್ತಗಳಾದ, ಶ್ರಾದ್ಧಕರ್ಮಾಣಿ-ನಾಂದೀಶ್ರಾದ್ಧಾದಿ ಕರ್ಮಗಳನ್ನು, ವಿಧಾಸ್ಯಾಮಿ-ಮಾಡಿಸುತ್ತೇನೆ, ಇತಿಚ - ಈ ಪ್ರಕಾರವಾಗಿ, ಅಬ್ರವೀತ್ - ನುಡಿದನು || ೧೮ || ತಂನರಪತಿಂ- ಆ ಜನಕರಾಯನನ್ನು, ಪೃಷ್ಟ್ವಾ - ಕೇಳಿ, ರಾಜಾ - ಅರಸಾದ, ದಶರಥಃ - ದಶರಥರಾಯನು, ತದಾ - ಆಗ, ಮಹಾಯಶಾಃ - ಮಹಾ ಕೀರ್ತಿವಂತನಾಗಿ, ತೌಮುನೀಂದ್ರೌ - ಆ ಋಷಿಶ್ರೇಷ್ಠ

---

ಗಳಾದ ತಾವಿಬ್ಬರೂ ಅಪರಿಮಿತಗಳಾದ ಸದ್ಗುಣಭರಿತರಾಗಿರುವಿರಿ. ತಮ್ಮಿಂದ ಋಷಿಗಳೂ, ರಾಜಸಮೂಹದವರೂ ಬಹು ಚನ್ನಾಗಿ ಪೂಜಿಸಲ್ಪಟ್ಟವರಾದರು. ನಿಮಗೆ ಮಂಗಳವುಂಟಾಗಲಿ. ನಿಮಗೆ ಕ್ಷೇಮವುಂಟಾಗಲಿ, ನಾನೀಗ ನನ್ನ ಬಿಡಾರಕ್ಕೆ ತೆರಳಿ, ನಾಂದೀಶ್ರಾದ್ಧಾದಿ ಕರ್ಮಗಳನ್ನು ನೆರವೇರಿಸಿ ಮರಳಿ ಬರುತ್ತೇನೆ.'' ಈರೀತಿ ನುಡಿದ ದಶರಥರಾಜನು ವಸಿಷ್ಠಾದಿ ಋಷಿಗಳನ್ನು ಮುಂದಿರಿಸಿಕೊಂಡು ತನ್ನ ಬಿಡಾರವನ್ನು ಕುರಿತು ತೆರಳಿದವನಾದನು. ||೨೦||

ಮಹಾಯಶಾಃ ॥ ೨೦ ॥ ಸಗತ್ವಾ ನಿಲಯಂ ರಾಜಾ ಶ್ರಾದ್ಧಂ ಕೃತ್ವಾ ವಿಧಾನತಃ ॥ ಪ್ರಭಾತ ಕಾಲ್ಯಮುತ್ಥಾಯ ಚಕ್ರೇ ಗೌದಾನ ಮುತ್ತಮಂ ॥ ೨೧ ॥ ಗವಾಂ ಶತಸಹಸ್ರಾಣಿ ಬ್ರಾಹ್ಮಣೇಭ್ಯೋ ನರಾಧಿಪಃ ॥ ಏಕೈಕಶೋ ದದೌ ರಾಜಾ ಪುತ್ರಾನುದ್ದಿಶ್ಯ ಧರ್ಮತಃ ॥ ೨೨ ॥ ಸುವರ್ಣ ಶೃಂಗಾ ಸ್ಸಂಪನ್ನಾ ಸ್ಸವತ್ಸಾಃ ಕಾಂಸ್ಯ ದೋಹನಾಃ ॥ ಗವಾಂ ಶತಸಹಸ್ರಾಣಿ ಚತ್ವಾರಿ ಪುರುಷರ್ಷಭಃ ॥ ೨೩ ॥ ವಿತ್ತ ಮನ್ಯಚ್ಚ ಸುಬಹು ದ್ವಿಜೇಭ್ಯೋ ರಘುನಂದನಃ ॥ ದದೌ ಗೋದಾನ ಮುದ್ದಿಶ್ಯ ಪುತ್ರಾಣಾಂ ಪುತ್ರವತ್ಸಲಃ ॥ ೨೪ ॥ ಸ ಸುತೈಃ ಕೃತ

ರಾದ ವಸಿಷ್ಠ ವಿಶ್ವಾಮಿತ್ರರನ್ನು, ಪುರಸ್ಕೃತ್ಯ - ಮುಂದಿರಿಸಿಕೊಂಡು, ಆಶು - ಜಾಗ್ರತೆಯಾಗಿ, ಜಗಾಮ - ಹೊರಟಿನು. ॥ ೨೦ ॥ ಸರಾಜಾ - ಆ ದಶರಥ ಮಹಾರಾಯನು, ನಿಲಯಂ - ಸ್ಥಾನಭೂತವಾದ ಮನೆಯನ್ನು ಕುರಿತು, ಗತ್ವಾ - ಹೋಗಿ, ವಿಧಾನತಃ - ವಿಧಾನಪುರಸ್ಸರವಾಗಿ, ಶ್ರಾದ್ಧಂ - ನಾಂದೀಶ್ರಾದ್ಧವನ್ನು, ಕೃತ್ವಾ - ಮಾಡಿ, ಪ್ರಭಾತಕಾಲ್ಯಂ - ಪ್ರಾತಃಕಾಲದಲ್ಲಿ, ಉತ್ಥಾಯ - ಎದ್ದು, ಉತ್ತಮಂ - ಉತ್ತಮವಾದ, ಗೋದಾನಂ ಗೋದಾನಿಕಾಖ್ಯ ಕರ್ಮವನ್ನು, ಚಕ್ರೇ - ಮಾಡಿದನು. ॥ ೨೧ ॥ ನರಾಧಿಪಃ - ಅರಸಾದ, ರಾಜಾಜ - ದಶರಥ ರಾಯನು, ಪುತ್ರಾನ್ - ಪುತ್ರರನ್ನು, ಉದ್ದಿಶ್ಯ-ಉದ್ದೇಶಮಾಡಿ, ಧರ್ಮತಃ-ಧರ್ಮದಿಂದ, ಏಕೈಕಶಃ ಒಬ್ಬೊಬ್ಬರಿಗೂ, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೋಸ್ಕರ, ಗವಾಂ-ಗೋವುಗಳ, ಶತಸಹಸ್ರಾಣಿ-ಲಕ್ಷಗಳನ್ನು, ದದೌ - ಕೊಟ್ಟನು. ॥ ೨೨ ॥ ಸುವರ್ಣಶೃಂಗಾಃ - ಚಿನ್ನದಂತಿರುವ ಶೃಂಗಗಳುಳ್ಳ, ಸಂಪನ್ನಾಃ - ಕ್ಷೀರದಿಂದ ಸಮೃದ್ಧಗಳಾದ, ಸವತ್ಸಾಃ - ಕರುಗಳಿಂದ ಯುಕ್ತವಾದ, ಕಾಂಸ್ಯದೋಹನಾಃ- ಕಾಂಚನವಿಕಾರವಾದ ಪಾತ್ರೆಗಳುಳ್ಳ, ಗವಾಂ - ಗೋವುಗಳ, ಚತ್ವಾರಿ - ನಾಲ್ಕಾದ, ಶತಸಹಸ್ರಾಣಿ - ಲಕ್ಷಗಳನ್ನು, ಪುರುಷರ್ಷಭಃ-ಪುರುಷಶ್ರೇಷ್ಠನಾನ ದಶರಥ ರಾಯನು, ದದೌ - ದಾನವಾಗಿ ಕೊಟ್ಟನು. ॥೨೩॥ ರಘುನಂದನಃ-ರಘುವಂಶದರಾಯರಿಗೆ ಆನಂದಕರನಾದ ದಶರಥರಾಯನು, ಪುತ್ರವತ್ಸಲಃ - ಪುತ್ರರಲ್ಲಿ ವಾತ್ಸಲ್ಯವುಳ್ಳವನಾಗಿ, ಪುತ್ರಾಣಾಂ - ಮಕ್ಕಳ, ಗೋದಾನಂ - ಗೌದಾನಿಕ ಕರ್ಮವನ್ನು, ಉದ್ದಿಶ್ಯ – ಉದ್ದೇಶಮಾಡಿ, ದ್ವಿಜೇಭ್ಯಃ - ಬ್ರಾಹ್ಮಣರಿಗೆ, ಅನ್ಯತ್ - ಮತ್ತು ಕೆಲವಾದ, ಸಬುಹು - ಪುಷ್ಕಲವಾದ, ವಿತ್ತಂ - ದ್ರವ್ಯವನ್ನು, ದದೌ- ಕೊಟ್ಟನು. ॥ ೨೪ ॥ ಕೃತ

ಈ ಬಳಿಕ ಬಿಡಾರವನ್ನು ಸೇರಿದ ದಶರಥರಾಯನು ಶಾಸ್ತ್ರೋಕ್ತವಿಧಿಯಿಂದ ನಾಂದೀಶ್ರಾದ್ಧಾದಿಗಳನ್ನು ಮಾಡಿ, ಪ್ರಾತಾಃಕಾಲದೊಳಗೆದ್ದು ಗೋದಾನ ಕರ್ಮವನ್ನು ನೆರವೇರಿಸಿದನು. ನರನಾಥನಾದ ದಶರಥರಾಯನು ಒಬ್ಬೊಬ್ಬ ಪುತ್ರನನ್ನೂ ಉದ್ದೇಶಿಸಿ ಒಂದೊಂದು ಲಕ್ಷ ಗೋವುಗಳ ಪ್ರಕಾರ ನಾಲ್ಕು ಮಂದಿ ಮಕ್ಕಳಿಗೋಸುಗ ನಾಲ್ಕು ಲಕ್ಷ ಗೋವುಗಳನ್ನೂ, ಪುಷ್ಕಳವಾದ ದ್ರವ್ಯವನ್ನೂ ಸಹ ಬ್ರಾಹ್ಮಣರಿಗೆ ಧರ್ಮವಾಗಿ ಕೊಟ್ಟವನಾದನು. ॥ ೨೨ ॥ ಪುತ್ರವತ್ಸಲನಾದಾರಾಯನು, ಕುಮಾರರ ಗೌದಾನಿಕ ಕರ್ಮವನ್ನುದ್ದೇಶಿಸಿ ಕೊಟ್ಟ ಆ ನಾಲ್ಕು ಲಕ್ಷ ಗೋವುಗಳು, ಭಂಗಾರದ ಕೊಂಬುಗಳುಳ್ಳವುಗಳಾಗಿಯೂ, ಕ್ಷೀರಸಮೃದ್ಧಗಳಾಗಿಯೂ, ಕರುಗಳೊಡಗೂಡಿದವುಗಳಾಗಿಯೂ ಇದ್ದವು. ॥ ೨೪ ॥ ಆಗ ಸಾಂಗ

ಗೌದಾನ್ಯೈ ರ್ವೃತಸ್ತು ನೃಪತಿಸ್ತದಾ ||
ಪ್ರಜಾಪತಿಃ || ೨೫ ||

ಇತ್ಯಾರ್ಷೇ ಶ್ರೀಮದ್ರಾಮಾಯ

ಗೋದಾನ್ಯೈಃ - ಮಾಡಲ್ಪಟ್ಟ,
ತನಾದ, ಸನೃಪತಿಸ್ತು - ಆ ದಶ
ವರುಣ, ಕುಬೇರಾಖ್ಯರಾದ ಲೋ
ಪ್ರಜಾಪತಿರಿವ - ಬ್ರಹ್ಮನಂತೆ,

ಇತ್ಯಾರ್ಷೇ ಶ್ರೀಮದ

ವಾಗಿ ನೆರವೇರಿಸಿದ ಗೌದಾ
ಷ್ಕಿತನಾದಾದಶರಥನು ಲೆ
ವೃತನಾದ ನಾಕ್ಷಿಚ್ಚತುಃ

ಇಂತಿದು

ಪತಿಃ || ತದರ್ಥ ಮುಪಯಾತೋಽಹಮಯೋಧ್ಯಾಂ ರಘುನಂದನ || ೪ || ಶ್ರುತ್ವಾತ್ವಹಮಯೋಧ್ಯಾಯಾಂ ವಿವಾಹಾರ್ಥಂ ತವಾತ್ಮಜಾನ್ || ಮಿಥಿಲಾ ಮುಪಯಾತಾಂಸ್ತು ತ್ವಯಾಸಹ ಮಹೀಪತೇ || ೫ || ತ್ವರಯಾಭ್ಯುಪ ಯಾತೋಽಹಂ ದ್ರಷ್ಟು ಕಾಮಸ್ಸ್ವಸುಸ್ಸುತಂ || ಅಥ ರಾಜಾ ದಶರಥಃ ಪ್ರಿಯಾ ತಿಥಿಮುಪಸ್ಥಿತಂ || ೬ || ದೃಷ್ಟ್ವಾ ಪರಮಸತ್ಕಾರೈಃ ಪೂಜಾರ್ಹಂ ಸಮ ಪೂಜಯತ್ || ತತಸ್ತಾಮುಷಿತೋ ರಾತ್ರಿಂ ಸಹಪುತ್ರೈರ್ಮಹಾತ್ಮಭಿಃ || ೭|| ಪ್ರಭಾತೇ ಪುನರುತ್ಥಾಯ ಕೃತ್ವಾ ಕರ್ಮಾಣಿಕರ್ಮವಿತ್ || ಋಷೀಂಸ್ತದಾ

---

ನಾದ ಭರತನನ್ನು, ದ್ರಷ್ಟುಕಾಮಃ - ನೋಡಲಿಚ್ಛೆಯುಳ್ಳವನಾಗಿ, ತದರ್ಥಂ - ಆ ಭರತ ನನಿಮಿತ್ತ ವಾಗಿ, ಅಹಂ - ನಾನು, ಅಯೋಧ್ಯಾಂ - ಅಯೋಧ್ಯಾ ಪಟ್ಟಣವನ್ನು ಕುರಿತು, ಉಪಯಾತಃ-ಬಂದ ವನಾದೆನು. || ೪ || ಅಹಂತು - ನಾನಾದರೆ, ಅಯೋಧ್ಯಾಯಾಂ - ಅಯೋಧ್ಯಾ ಪಟ್ಟಣದಲ್ಲಿ, ವಿವಾಹಾರ್ಥಂ - ವಿವಾಹ ನಿಮಿತ್ತವಾಗಿ, ತ್ವಯಾಸಹ - ನಿನ್ನೊಡನೆ, ಮಿಥಿಲಾಂ - ಮಿಥಿಲಾಪಟ್ಟಣ ವನ್ನು ಕುರಿತು, ಉಪಯಾತಾನ್ - ಹೊರಟು ಬಂದವರನ್ನಾಗಿ, ತವ - ನಿನ್ನ, ಆತ್ಮಜಾನ್ - ಕುವರ ರನ್ನು, ಶ್ರುತ್ವಾ - ಕೇಳಿ, ಹೇಮಹೀಪತೇ - ಎಲೈ ರಾಜನೆ, ಅಹಂ - ನಾನು, ಸ್ವಸುಃ-ತಂಗಿಯಾದ, ಕೈಕೇಯಿಯ, ಸುತಂ - ಮಗನಾದ ಭರತನನ್ನು, ದ್ರಷ್ಟುಕಾಮಃ - ನೋಡಲಿಚ್ಛೆಯುಳ್ಳವನಾಗಿ, ತ್ವರಯಾ - ಜಾಗ್ರತೆಯಾಗಿ, ಅಭ್ಯುಪಯಾತಃ-ಬಂದೆನು. || ೫ || ಅಥ - ಬಳಿಕ, ರಾಜಾ ಅರಸ ನಾದ, ದಶರಥಃ - ದಶರಥರಾಯನು, ಉಪಸ್ಥಿತಂ - ಬಂದ, ಪೂಜಾರ್ಹಂ - ಪೂಜೆಗೆ ಅರ್ಹನಾದ, ಪ್ರಿಯಾತಿಥಿಂ- ಇಷ್ಟನಾದ ಯುಧಾಜಿತುವನ್ನು, ದೃಷ್ಟ್ವಾ-ಕಂಡು, ಪರಮಸತ್ಕಾರೈಃ- ಶ್ರೇಷ್ಠವಾದ ಅತಿಥಿಸತ್ಕಾರಗಳಿಂದ, ಸಮಪೂಜಯತ್ - ಪೂಜಿಸಿದನು. || ೬ || ತತಃ - ಬಳಿಕ, ಮಹಾತ್ಮಭಿಃ- ಮಹಾತ್ಮರಾದ, ಪುತ್ರೈಸ್ಸಹ - ಮಕ್ಕಳೊಡನೆ, ತಾಂರಾತ್ರಿಂ - ಆ ರಾತ್ರಿಯಲ್ಲಿ, ಉಷಿತಃ ಇದ್ದನು, ಪ್ರಭಾತೇ - ಪ್ರಾತಃಕಾಲವಾಗಲು, ಕರ್ಮವಿತ್ - ಕರ್ಮವೇತ್ತೃವಾದ ದಶರಥರಾಯನು, ಪುನಃ -

---

ಕ್ಷೈಸಿದನು. ಆದಕ್ಕಾಗಿ ನಾನು ಅಯೋಧ್ಯಾಪಟ್ಟಣಕ್ಕೆ ಬಂದವನಾದೆನು. ಅಲ್ಲಿ ನೀನು ಮಕ್ಕಳ ವಿವಾಹಾರ್ಥವಾಗಿ ಮಿಥಿಲಾನಗರಕ್ಕೆ ಹೊರಟಿರುವೆಯೆಂಬ ವರ್ತಮಾನವನ್ನು ಕೇಳಿ ಭರತನನ್ನು ನೋಡಲೋಸುಗ ಬಹ ಬೇಗನೆ ಈ ಮಿಥಿಲಾಪಟ್ಟಣಕ್ಕೆ ಬಂದೆನು.'' ಎಂದನು. ಇಂತು ನುಡಿವ ಪ್ರಿಯನೂ, ಅಧಿತಿಯೂ ಆದ ಯುಧಾಜಿತುವನ್ನು ದಶರಥ ಭೂಪಾಲನು ಶ್ರೇಷ್ಠವಾದ ಅಧಿತಿಸಾತ್ಕಾರಗಳಿಂದ ಪೂಜಿಸಿದವನಾದನು. ||೧-೬|| ಆ ಬಳಿಕ ಅಂದಿನರಾತ್ರಿ ದಶರಥನು ಕುವರರೊಂದಿಗೆ ನಿದ್ರಿಸಿದವನಾಗಿ, ಪ್ರಾತಃಕಾಲದೊಳಗೆದ್ದು, ತಾತ್ಕಾಲಿಕ ಕರ್ಮಗಳನ್ನಾಚರಿಸಿದವನಾಗಿ, ವಸಿಷ್ಠವಾಮದೇವಾದಿ ಋಷಿವರೇಣ್ಯರನ್ನು ಮುಂದಿರಿಸಿಕೊಂಡು ಜನಕರಾಯನ ಯಜನಶಾಲೆಗೆ ಬಂದವನಾದನು. ಶ್ರೀರಾಮಚಂದ್ರನೂ ಸಹ ವಿಜಯಾಖ್ಯವಾದ ಶುಭಮುಹೂರ್ತದಲ್ಲಿ,ಸರ್ವಾಭರಣಭೂಷಿತನಾಗಿ, ಲಕ್ಷ್ಮಣಾದಿ

ಪುರಸ್ಕೃತ್ಯ ಯಜ್ಞವಾಟಮುಪಾಗಮತ್ ||೮|| ಯುಕ್ತೇ ಮುಹೂರ್ತೇ ವಿಜಯೇ ಸರ್ವಾಭರಣ ಭೂಷಿತೈಃ || ಭ್ರಾತೃಭಿಸ್ಸಹಿತೋ ರಾಮಃ ಕೃತ ಕೌತುಕ ಮಂಗಳಃ ||೯|| ವಸಿಷ್ಠಂ ಪುರತಃ ಕೃತ್ವಾ ಮಹರ್ಷೀನಪರಾನಪಿ || (ಪಿತು ಸ್ಸಮೀಪ ಮಾಶ್ರಿತ್ಯ ತಸ್ಥೌ ಭ್ರಾತೃಭಿರಾವೃತಃ) ವಸಿಷ್ಠೋ ಭಗವಾನೇತ್ಯ ವೈದೇಹ ಮಿದಮಬ್ರವೀತ್ ||೧೦|| ರಾಜಾ ದಶರಥೋ ರಾಜನ್ ಕೃತ ಕೌತುಕ ಮಂಗಳೈಃ || ಪುತ್ರೈ ರ್ನರವರಶ್ರೇಷ್ಠ ದಾತಾರ ಮಭಿಕಾಂಕ್ಷತೇ ||೧೧|| ದಾತೃ ಪ್ರತಿಗ್ರಹೀತೃಭ್ಯಾಂ ಸರ್ವಾರ್ಥಾಃ ಪ್ರಭವಂತಿಹಿ || ಸ್ವಧರ್ಮಂ ಪ್ರತಿ

ಮತ್ತು, ಉತ್ಥಾಯ - ಎಚ್ಚರಗೊಂಡು, ಕರ್ಮಾಣಿ - ಪ್ರಾತಃಕಾಲಿಕ ಕರ್ಮಗಳನ್ನು, ಕೃತ್ವಾ - ಮಾಡಿ, ತದಾ – ಆಗ, ಋಷೀನ್ - ಋಷಿಗಳನ್ನು, ಪುರಸ್ಕೃತ್ಯ - ಮುಂದಿರಿಸಿಕೊಂಡು, ಯಜ್ಞವಾಟಂ – ಯಜ್ಞಶಾಲೆಯ ಸಮೀಪವನ್ನು ಕುರಿತು, ಉಪಾಗಮತ್ - ಬಂದವನಾದನು. ||೮|| ಯುಕ್ತೇ – ಶುಭನಕ್ಷತ್ರಾದಿ ಯುಕ್ತವಾದ. ವಿಜಯೇ – ಜಯಕರವಾದ, ಮುಹೂರ್ತೇ-ಮುಹೂರ್ತದಲ್ಲಿ, ಸರ್ವಾಭರಣಭೂಷಿತೈಃ – ಸಮಸ್ತಾಭರಣಗಳಿಂದ ಅಲಂಕೃತನಾದ, ಭ್ರಾತೃಭಿಃ – ತಮ್ಮಂದಿರಿಂದ, ಸಹಿತಃ – ಕೂಡಿರುವ, ರಾಮಃ- ಶ್ರೀರಾಮನು, ವಸಿಷ್ಠಂ-ವಸಿಷ್ಠ ಋಷಿಯನ್ನು, ಅಪರಾನ್- ಮತ್ತೆ ಕೆಲರಾದ, ಮಹರ್ಷೀನಪಿ - ಋಷಿಗಳನ್ನೂ, ಪುರತಃಕೃತ್ವಾ – ಮುಂದಿರಿಸಿಕೊಂಡು, ಕೃತಕೌತುಕಮಂಗಳಃ-ವಿವಾಹ ದೀಕ್ಷಾರ್ಥವಾಗಿ ಮಾಡಲ್ಪಟ್ಟ ಕಂಕಣಬಂಧನವುಳ್ಳವನು, ಅಭವತ್- ಆದನು. ||೯|| ಭಗವಾನ್ - ಪೂಜ್ಯನಾದ, ವಸಿಷ್ಠಃ - ವಸಿಷ್ಠ ಋಷಿಯು, ಏತ್ಯ - ಬಂದು, ವೈದೇಹಂ - ಜನಕರಾಯನನ್ನು ಕುರಿತು, ಇದಂ - ಈ ಮಾತನ್ನು ಅಬ್ರವೀತ್ - ನುಡಿದನು. ||೧೦|| ಹೇನರಶ್ರೇಷ್ಠ - ಎಲೈ ಮನುಷ್ಯೋತ್ತಮನಾದ ಜನಕರಾಯನೇ, ಹೇರಾಜನ್ - ಎಲೈ ಅರಸೇ ರಾಜಾ - ಅರಸಾದ, ದಶರಥಃ - ದಶರಥರಾಯನು, ಕೃತಕೌತುಕಮಂಗಳೈಃ - ಪ್ರತಿಸರಬಂಧನಾಖ್ಯ ಕರ್ಮವುಳ್ಳ, ಪುತ್ರೈಃ –ಪುತ್ರರಿಂದೊಡಗೂಡಿ, ದಾತಾರಂ - ಕನ್ಯಾದಾತೃವನ್ನು, ಅಭಿಕಾಂಕ್ಷತೇ - ನಿರೀಕ್ಷಣೆ ಮಾಡುತ್ತಾನೆ. ||೧೧|| ದಾತೃಪ್ರತಿಗ್ರಹೀತೃಭ್ಯಾಂ - ದಾತೃಪ್ರತಿಗ್ರಹೀತೃಗಳಿಂದ, ಸರ್ವಾರ್ಥಾಃ – ಸಮಸ್ತವಾದ ಪ್ರತಿಗ್ರಹಾದಿಗಳು, ಪ್ರಭವಂತಿಹಿ - ಹುಟ್ಟುತ್ತವಷ್ಟೆ, ಉತ್ತಮಂ -

ಅನುಜರಿಂದೊಡಗೂಡಿ, ವಸಿಷ್ಠನನ್ನೂ, ಇತರ ಮುನಿಪುಂಗವರನ್ನೂ ಮುಂದಿರಿಸಿಕೊಂಡು ಯಜ್ಞಶಾಲೆಗೆ ಬಂದವನಾದನು ಆಗ ಪೂಜ್ಯನಾದ ವಸಿಷ್ಠಮುನಿಯು ಜನಕರಾಯನ ಬಳಿಗೈದಿ ಹೀಗೆಂದನು ||೭-೧೧||"ಎಲೈ ಪುರುಷ ಶ್ರೇಷ್ಠನಾದ ಜನಕಮಹೀಪಾಲನೆ! ರಾಜನಾದ ದಶರಥನು ಪ್ರತಿಸರ ಬಂಧನಾಖ್ಯಕರ್ಮವನ್ನು ಗೈದ ರಾಮ ಲಕ್ಷ್ಮಣಾದಿ ಕುವರರಿಂದೊಡಗೂಡಿದವನಾಗಿ,ಕನ್ಯಾದಾತೃವಾದ ನಿನ್ನನ್ನು ಇದಿರುನೋಡುತ್ತಿರುವನು. ಎಲೈ ರಾಜನೆ! ದಾತೃ ಪ್ರತಿಗ್ರಹೀತೃಗಳಿಬ್ಬರೂ ಸೇರಿದರಲ್ಲವೆ ದಾನಪ್ರತಿಗ್ರಹಾದಿಗಳೆಲ್ಲವೂ ನಡೆಯುತ್ತವೆ. ಆದುದರಿಂದ ನೀನೀಗ ಸೀತಾಕಲ್ಯಾಣ ಮಹೋತ್ಸವವನ್ನು ನೆರವೇರಿಸಿ, ನಿನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸುವವನಾಗು." ಈ ರೀತಿಯಾಗಿ ಮಹಾತ್ಮನಾದ ವಸಿಷ್ಠಋಷಿಯಿಂದ ಹೇಳಲ್ಪಟ್ಟ,ಮಹಾ ಉದಾರಿಯೂ ಶ್ರೇಷ್ಠನಾದ ಧರ್ಮಗಳನ್ನರಿತವನೂ ಆದ ಜನಕರಾಯನು

ಪದ್ಯಸ್ವ ಕೃತ್ವಾ ವೈವಾಹ್ಯಮುತ್ತಮಂ || ೧೨ || ಇತ್ಯುಕ್ತಃ ಪರಮೋ ದಾರೋ
ವಸಿಷ್ಠೇನ ಮಹಾತ್ಮನಾ || ಪ್ರತ್ಯುವಾಚ ಮಹಾತೇಜಾ ವಾಕ್ಯಂ ಪರಮ ಧರ್ಮ
ವಿತ್ ||೧೩|| ಕಸ್ಸ್ಥಿತಃ ಪ್ರತಿಹಾರೋ ಮೇ ಕಸ್ಯಾಜ್ಞಾ ಸಂಪ್ರತೀಕ್ಷ್ಯತೇ ||
ಸ್ವಗೃಹೇ ಕೋವಿಚಾರೋಸ್ತಿ ಯಥಾರಾಜ್ಯಮಿದಂತವ ||೧೪|| ಕೃತ ಕೌತುಕ
ಸರ್ವಸ್ವಾ ವೇದಿಮೂಲಮುಪಾಗತಾಃ || ಮಮಕನ್ಯಾ ಮುನಿಶ್ರೇಷ್ಠ ದೀಪ್ತಾ
ವಹ್ನೇರಿವಾರ್ಚಿಷಃ || ೧೫ || ಸಜ್ಜೋಹಂ ತ್ವತ್ಪ್ರತೀಕ್ಷೋಸ್ಮಿ ವೇದ್ಯಾಮಸ್ಯಾಂ
ಪ್ರತಿಷ್ಠಿತಃ || ಅವಿಘ್ನಂ ಕುರು ತಾಂ ರಾಜಾ ಕಿಮರ್ಥಮವಲಂಬತೇ || ೧೬ ||

---

ಉತ್ತಮವಾದ, ವೈವಾಹ್ಯಂ - ವಿವಾಹವನ್ನು, ಕೃತ್ವಾ - ಮಾಡಿ, ಸ್ವಧರ್ಮಂ-ಸ್ವಪ್ರತಿಜ್ಞೆಯನ್ನು, ಪ್ರತಿಪದ್ಯಸ್ವ - ಹೊಂದುನವನಾಗು. || ೧೨ || ಮಹಾತ್ಮನಾ - ಮಹಾತ್ಮನಾದ, ವಸಿಷ್ಠೇನ - ವಸಿಷ್ಠ ಋಷಿಯಿಂದ, ಇತಿ - ಈ ರೀತಿ, ಉಕ್ತಃ - ಹೇಳಲ್ಪಟ್ಟ, ಪರಮೋದಾರಃ - ಮಹಾ ದಾತನಾದ, ಮಹಾತೇಜಾಃ - ಮಹಾ ತೇಜಸ್ವಿಯಾದ, ಪರಮಧರ್ಮವಿತ್-ಬಹು ಧರ್ಮಜ್ಞನಾದ ಜನಕ ರಾಯನು, ವಾಕ್ಯಂ - ವಚನವನ್ನು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು. || ೧೩ || ಮೇ - ನನಗೆ, ಪ್ರತೀಹಾರಃ - ದ್ವಾರಪಾಲಕನು, ಕಃ - ಯಾವನು, ಸ್ಥಿತಃ - ಇರುತ್ತಾನೆ, ಕಸ್ಯ-ಯಾವನ, ಆಜ್ಞಾ - ಆಜ್ಞಾವಚನವು, ಸಂಪ್ರತೀಕ್ಷ್ಯತೇ - ನಿರೀಕ್ಷಿಸಲ್ಪಡುತ್ತದೆ, ಸ್ವಗೃಹೇ - ಸ್ವಕೀಯವಾದ ಮನೆಯಲ್ಲಿ, ವಿಚಾರಃ - ವಿಮರ್ಶವು, ಕಃ - ಯಾವದು, ಅಸ್ತಿ - ಇರುವುದು, ತವ - ನಿನ್ನ, ರಾಜ್ಯಂ-ರಾಜ್ಯವು, ಯಥಾ-ಹೇಗೆಯೊ, ಇದಂ - ಈ ರಾಜ್ಯವೂ, ತಥಾ-ಹಾಗೆಯೇ, ತವ - ನಿನ್ನದಾಗಿರುವುದು. || ೧೪ || ಹೇಮುನಿಶ್ರೇಷ್ಠ - ಎಲೈ ಋಷಿಶ್ರೇಷ್ಠನೇ, ಕೃತಕೌತುಕಸರ್ವಸ್ವಾಃ - ಮಾಡಲ್ಪಟ್ಟ ವಿವಾಹೋಪಯುಕ್ತ ಮಂಗಳಾಚಾರವುಳ್ಳ, ಮಮ - ನನ್ನ, ಕನ್ಯಾಃ - ಕನ್ನಿಕೆಯರು, ದೀಪ್ತಾಃ - ಪ್ರಜ್ವಲಿಸುತ್ತಿರುವ, ವಹ್ನೇಃ - ಅಗ್ನಿಯ, ಅರ್ಚಿಷಇವ - ಜ್ವಾಲೆಗಳಂತೆ, ವೇದಿಮೂಲಂ, ವೇದಿ- ವಿವಾಹವೇದಿಕೆಯ, ಮೂಲಂ-ಮೂಲಪ್ರದೇಶವನ್ನು ಕುರಿತು, ಉಪಾಗತಾಃ-ಬಂದಿರುವರು || ೧೫ || ಸಜ್ಜಃ - ಸನ್ನದ್ಧನಾದ, ಅಹಂ - ನಾನು, ತ್ವತ್ಪ್ರತೀಕ್ಷಃ - ನಿನ್ನನ್ನು ನಿರೀಕ್ಷಣೆಮಾಡುತ್ತ, ಅಸ್ಯಾಂವೇದ್ಯಾಂ - ಈ ವಿವಾಹ ವೇದಿಕೆಯಲ್ಲಿ, ಪ್ರತಿಷ್ಠಿತಃ-ಕುಳಿತುಕೊಂಡಿರುವೆನು, ಅಸ್ಮಿ - ಆಗಿರುವೆನು, ರಾಜಾ - ದಶರಥರಾಯನು, ಅವಿಘ್ನಂ - ನಿರ್ವಿಘ್ನವಾಗಿ, ಕುರುತಾಂ - ಮಾಡಲಿ, ಕಿಮರ್ಥಂ - ಯಾವ ನಿಮಿತ್ತವಾಗಿ, ಅವಲಂಬತೇ - ಸಾವಕಾಶ ಮಾಡುತ್ತಾನೆ. || ೧೬ ||

---

ಆತನನ್ನು ಕುರಿತು, "ಯಾವ ಪ್ರತೀಹಾರಿಯು ನಿಂತಿರುವನು. ಯಾರ ಆಣತಿಯು ನಿರೀಕ್ಷಿಸಲ್ಪಡುತ್ತದೆ. ಸ್ವಗೃಹದಲ್ಲಿ ವಿಚಾರಿಸುವುದು ತಾನೇ ಏನಿರುವುದು. ನಿನ್ನ ರಾಜ್ಯವಾದ ಅಯೋಧ್ಯಾ ಪಟ್ಟಣದಂತೆಯೇ ಸ್ವಾತಂತ್ರ್ಯವುಳ್ಳ ಈ ನನ್ನ ರಾಜ್ಯದಲ್ಲಿ ಹೇಳಬೇಕಾದುದೇನಿರುವುದು. ಎಲೈ ಮುನಿವರೇಣ್ಯನೆ ! ನನ್ನ ಕುವರಿಯರೀರ್ವರೂ ಕೃತಕೌತುಕಮಂಗಳರಾಗಿ, ವೇದಿಯ ಬಳಿಸಾರಿ, ಅಗ್ನಿಜ್ವಾಲೆಗಳಂತೆ ಪ್ರಕಾಶಿಸುತ್ತಿರುವರು. ವಿವಾಹ ವೇದಿಕೆಯ ಬಳಿಯಲ್ಲಿಯೇ ಇರುವ ನಾನು ನಿನಗಾಗಿ ನಿರೀಕ್ಷಿಸುತ್ತಿರುವೆನು, ದಶರಥರಾಯನು ಏತಕ್ಕಾಗಿ ವಿಳಂಬಿಸುತ್ತಿರುವನು, ವಿವಾಹ ಕರ್ಮವನ್ನು ಅವಿಘ್ನವಾಗಿ ನೆರವೇರಿಸುವವನಾಗು" ಎಂದನು,

ತದ್ವಾಕ್ಯಂ ಜನಕೇನೋಕ್ತಂ ಶ್ರುತ್ವಾ ದಶರಥ ಸ್ತದಾ || ತತೋ ರಾಜಾ
ವಿದೇಹಾನಾಂ ವಸಿಷ್ಠಮಿದಮಬ್ರವೀತ್ || ೧೭ || ಕಾರಯಸ್ವ ಋಷೇ
ಸರ್ವಮೃಷಿಭಿಸ್ಸಹಧಾರ್ಮಿಕ || ರಾಮಸ್ಯ ಲೋಕ ರಾಮಸ್ಯ ಕ್ರಿಯಾಂ ವೈವಾ
ಹಿಕೀಂ ವಿಭೋ ||೧೮|| ತಥೇತ್ಯುಕ್ತ್ವಾ ತು ಜನಕಂ ವಸಿಷ್ಠೋ ಭಗವಾನೃಷಿಃ ||
ವಿಶ್ವಾಮಿತ್ರಂ ಪುರಸ್ಕೃತ್ಯ ಶತಾನಂದಂಚ ಧಾರ್ಮಿಕಂ ||೧೯|| ಪ್ರಪಾಮಧ್ಯೇತು
ವಿಧಿವದ್ವೇದಿಂ ಕೃತ್ವಾ ಮಹಾತಪಾಃ|| ಅಲಂಚಕಾರ ತಾಂ ವೇದಿಂ ಗಂಧಪುಷ್ಪೈ
ಸ್ಸಮಂತತಃ || ೨೦ || ಸುವರ್ಣ ಪಾಲಿಕಾಭಿಶ್ಚ ಛಿದ್ರಕುಂಭೈಶ್ಚ ಸಾಂಕುರೈಃ ||

---

ಜನಕೇನ - ಜನಕರಾಯನಿಂದ, ಉಕ್ತಂ - ಹೇಳಲ್ಪಟ್ಟ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ದಶರಥಃ - ದಶರಥರಾಯನು, ತದಾ - ಆ ಕ್ಷಣವೇ, ಸುತಾನ್ - ಕುಮಾರರನ್ನು, ಸರ್ವಾನ್ - ಸಮಸ್ತರಾದ, ಋಷಿಗಣಾನಪಿ - ಋಷಿಗಳ ಗುಂಪುಗಳನ್ನು, ಪ್ರವೇಶಯಾಮಾಸ - ದ್ವಾರಪ್ರದೇಶವನ್ನು ಮಾಡಿಸಿದನು. || ೧೭ || ತತಃ - ಬಳಿಕ, ವಿದೇಹಾನಾಂ - ವಿದೇಹದೇಶಗಳಿಗೆ, ರಾಜಾ - ಅರಸಾದ ಜನಕರಾಯನು, ವಸಿಷ್ಠಂ - ವಸಿಷ್ಠ ಋಷಿಯನ್ನು ಕುರಿತು, ಇದಂ - ಈ ವಕ್ಷ್ಯಮಾಣವಚನವನ್ನು, ಅಬ್ರವೀತ್ - ನುಡಿದನು, ಹೇಧಾರ್ಮಿಕ - ಎಲೈ ಧರ್ಮಜ್ಞನಾದ, ಹೇಋಷೇ - ಎಲೈ ವಸಿಷ್ಠಋಷಿಯೇ, ಹೇವಿಭೋ - ಎಲೈ ತತ್ವಾಧಾರಣಸಮರ್ಥನೇ, ಹೇಧಾರ್ಮಿಕ - ಎಲೈ ಧರ್ಮಿಷ್ಠನೇ, ಲೋಕರಾಮಸ್ಯ - ಲೋಕಕ್ಕೆಲ್ಲಾ ಅಭಿರಾಮನಾದ, ರಾಮಸ್ಯ - ಶ್ರೀರಾಮನಿಗೆ, ವೈವಾಹಿಕೀಂ - ವಿವಾಹ ರೂಪವಾದ, ಕ್ರಿಯಾಂ - ಕರ್ಮವನ್ನು, ಋಷಿಭಿಸ್ಸಹ - ಋಷಿಗಳಿಂದೊಡಗೂಡಿ, ಸರ್ವಂ - ಸಮಸ್ತವನ್ನು, ಕಾರಯಸ್ವ - ಮಾಡಿಸು, ಮಹಾತಪಾಃ-ಮಹಾ ತಪಸ್ವಿಯೂ, ಭಗವಾನ್-ಪೂಜ್ಯನೂ, ಋಷಿಃ - ಋಷಿಯೂ ಆದ, ವಸಿಷ್ಠಃ - ವಸಿಷ್ಠನು, ಜನಂ - ಜನಕಕರಾಯನನ್ನು ಕುರಿತು, ತಥೇತಿ - ಹಾಗೆಯೆ ಆಗಲೆಂದು, ಉಕ್ತ್ವಾತು - ಹೇಳಿ, ವಿಶ್ವಾಮಿತ್ರಂ-ವಿಶ್ವಾಮಿತ್ರನನ್ನು, ಧಾರ್ಮಿಕಂ - ಧರ್ಮಜ್ಞನಾದ, ಶತಾನಂದಂಚ - ಶತಾನಂದನನ್ನೂ, ಪುರಸ್ಕೃತ್ಯ - ಮುಂದಿರಿಸಿಕೊಂಡು, ಪ್ರಪಾಮಧ್ಯೇ - (ತಿ) ಯಜ್ಞಶಾಲೆಯ ಮಧ್ಯದಲ್ಲಿ, [ಗೋ] ಪ್ರಪಾಮಧ್ಯೆ - ವಿವಾಹ ಮಂಟಪದ ಮಧ್ಯದಲ್ಲಿ, ವಿಧಿವತ್ - ಯಥಾ ಶಾಸ್ತ್ರವಾಗಿ, ವೇದಿಂ - ವೇದಿಕೆಯನ್ನು, ಕೃತ್ವಾ -

---

||೧೧-೧೭|| ಜನಕರಾಯನೀರೀತಿನುಡಿಯಲು ದಶರಥರಾಯನು, ಕುವರರಾದ ರಾಮಲಕ್ಷ್ಮಣರನ್ನೂ, ಋಷಿಗಳನ್ನೂ ವಿವಾಹ ಮಂಟಪದೊಳಕ್ಕೆ ಪ್ರವೇಶಮಾಡಿಸಿದನು. ಆಗಲಾ ವಿದೇಹಾಧಿಪತಿಯಾದ ಜನಕರಾಯನು ವಸಿಷ್ಠಋಷಿಯನ್ನು ಕುರಿತು, "ಎಲೈ ಬ್ರಹ್ಮರ್ಷಿಯೇ! ಮುನಿವರೇಣ್ಯರಿಂದೊಡಗೂಡಿದ ನೀನು ಶ್ರೀರಾಮಚಂದ್ರನ ವೈವಾಹಿಕ ಕ್ರಿಯೆಯನ್ನು ನೆರವೇರಿಸುವವನಾಗು" ಎಂದನು. ಜನಕರಾಜನೀರೀತಿ ನುಡಿಯಲು ವಸಿಷ್ಠಮುನಿಯು ಹಾಗೆಯೇ ಆಗಲೆಂದು ಹೇಳಿ, ವಿಶ್ವಾಮಿತ್ರನನ್ನೂ, ಮಹಾಧರ್ಮಿಷ್ಠನಾದ ಶತಾನಂದ ಮುನಿಯನ್ನೂ, ಮುಂದಿರಿಸಿಕೊಂಡು ವಿವಾಹ ಮಂಟಪದ ಮಧ್ಯದಲ್ಲಿ ವೇದಿಕೆಯನ್ನು ಮಾಡಿ, ಗಂಧ ಪುಷ್ಪಾದಿಗಳಿಂದಲೂ, ಭಂಗಾರದ ಪಾಲಿಕೆಗಳಿಂದಲೂ, ಅಂಕುರಗಳಿಂದೊಡಗೂಡಿದ ಛಿದ್ರಕುಂಭಗಳಿಂದಲೂ, ಮಾಳಿಕೆಗಳಿಂದ ತುಂಬಿದ ಶರಾವಪಾತ್ರಗಳಿಂದಲೂ,

ಅಂಕುರಾಢ್ಯೈ ಶ್ಶರಾವೈಶ್ಚ ಧೂಪಪಾತ್ರೈ ಸ್ಸಧೂಪಕೈಃ ॥ ೨೧ ॥ ಶಂಖ
ಪಾತ್ರೈ ಸ್ಸ್ರುವೈಸ್ಸ್ರುಗ್ಭಿಃ ಪಾತ್ರೈ ರರ್ಘ್ಯಾಭಿ ಪೂರಿತೈಃ ॥ ಲಾಜಪೂರ್ಣೈಶ್ಚ
ಪಾತ್ರೀಭಿರಕ್ಷತೈರಭಿಸಂಸ್ಕೃತೈಃ ॥ ೨೨ ॥ ದರ್ಭೈಸ್ಸಮೈಸ್ಸಮಾಸ್ತೀ
ರ್ಯ ವಿಧಿವನ್ಮಂತ್ರ ಪೂರ್ವಕಂ ॥ ಅಗ್ನಿಮಾಧಾಯ ವೇದ್ಯಾಂತು ವಿಧಿ
ಮಂತ್ರ ಪುರಸ್ಕೃತಂ ॥೨೩॥ ಜುಹಾವಾಗ್ನೌ ಮಹಾತೇಜಾ ವಸಿಷ್ಠೋ ಭಗವಾ
ನೃಷಿಃ ॥ ತತಸ್ಸೀತಾಂ ಸಮಾನೀಯ ಸರ್ವಾಭರಣ ಭೂಷಿತಾಂ ॥೨೪॥
ಸಮಕ್ಷಮಗ್ನೇ ಸ್ಸಂಸ್ಥಾಪ್ಯ ರಾಘವಾಭಿಮುಖೇ ತದಾ ॥ ಅಬ್ರವೀ ಜ್ಜನಕೋ
ರಾಜಾ ಕೌಸಲ್ಯಾನಂದವರ್ಧನಂ ॥೨೫॥

ಮಾಡಿ, ಗಂಧಪುಷ್ಪೈಃ - ಗಂಧಪುಷ್ಪಗಳಿಂದ, ಸಮಂತತಃ - ಎಲ್ಲೆಡೆಗಳಲ್ಲಿಯೂ, ಸುವರ್ಣಪಾ
ಲಿಕಾಭಿಶ್ಚ - ಸುವರ್ಣನಿರ್ಮಿತಗಳಾದ ಪಾಲಿಕೆಗಳಿಂದಲೂ, ಸಾಂಕುರೈಃ - ಅಂಕುರಗಳಿಂದೊಡಗೂ
ಡಿದ ಛಿದ್ರಕಲಶಂಗಳಿಂದಲೂ, ಅಂಕುರಾಢ್ಯೈಃ - ಅಂಕುರಗಳಿಂದ ಪೂರ್ಣಗಳಾದ, ಶರಾವೈಶ್ಚ -
ಮುಚ್ಚಳಗಳಿಂದಲೂ, ಸಧೂಪಕೈಃ - ಧೂಪಗಳಿಂದೊಡಗೂಡಿದ, ಧೂಪಪಾತ್ರೈಶ್ಚ - ಊದು
ದಾನಿಗಳಿಂದಲೂ, ಶಂಖಪಾತ್ರೈಃ - ಶಂಖಾಕಾರವಾದ ಪಾತ್ರೆಗಳಿಂದಲೂ, ಸ್ರುವೈಃ - ಸ್ರುವಗ
ಳಿಂದಲೂ, ಸ್ರುಗ್ಭಿಃ - ದರ್ವಿಗಳಿಂದಲೂ, ಅರ್ಘ್ಯಾಭಿಪೂರಿತೈಃ - ಪೂಜಾದ್ರವ್ಯಗಳಿಂದ ಪೂರಿತವಾದ,
ಪಾತ್ರೈಃ - ಪಾತ್ರೆಗಳಿಂದಲೂ, ಲಾಜಪೂರ್ಣೈಶ್ಚ - ಅರಳುಗಳಿಂದಲೂ ತುಂಬಿರುವ, ಪಾತ್ರೀಭಿಃ-
ಪಾತ್ರೆಗಳಿಂದಲೂ, ಅಭಿಸಂಸ್ಕೃತೈಃ - ಹರಿದ್ರಾಕುಂಕುಮಾದಿಗಳಿಂದ ಮಿಶ್ರಣ ಮಾಡಿದ, ಅಕ್ಷತೈಃ-
ಅಕ್ಷತಗಳಿಂದಲೂ, ತಾಂವೇದಿಂ - ಆವಿವಾಹವೇದಿಕೆಯನ್ನು, ಅಲಂಚಕಾರ - ಅಲಂಕರಿಸಿದರು. ॥೨೨॥
ಮಹಾತೇಜಾ - ಬಹಳ ತೇಜೋವಂತನಾದ, ಭಗವಾನ್ - ಪೂಜ್ಯನಾದ, ವಸಿಷ್ಠಃಋಷಿಃ - ವಸಿಷ್ಠ
ಋಷಿಯು, ಸಮೈಃ - ಸಮಾನಗಳಾದ, ದರ್ಭೈಃ - ದರ್ಭೆಗಳಿಂದ, ಮಂತ್ರಪೂರ್ವಕಂ - ಮಂತ್ರೋ
ಚ್ಚಾರಣ ಪುರಸ್ಸರವಾಗಿ, ವೇದ್ಯಾಂತು - ವಿವಾಹವೇದಿಕೆಯಲ್ಲಿ, ಸಮಾಸ್ತೀರ್ಯ - ಹಾಸಿ,
ವಿಧಿಮಂತ್ರಪುರಸ್ಕೃತಂ, ವಿಧಿಮಂತ್ರ - ವಿಧಾಯಕವಾದ ಮಂತ್ರಗಳಿಂದ, ಪುರಸ್ಕೃತಂ-ಮುಂದಿ
ರಿಸಲ್ಪಟ್ಟ, ಅಗ್ನಿಂ - ಅಗ್ನಿಯನ್ನು, ಆಧಾಯ - ಇರಿಸಿ, ಅಗ್ನೌ - ಅಗ್ನಿಯಲ್ಲಿ, ಜುಹಾವ -
ಹೋಮಮಾಡಿದನು. ॥ ೨೪ ॥ ತತಃ - ಬಳಿಕ, ಜನಕಃ - ಜನಕನೆಂಬ, ರಾಜಾ - ರಾಜನು,
ಸರ್ವಾಭರಣಭೂಷಿತಾಂ - ಸರ್ವಾಭರಣಗಳಿಂದ ಅಲಂಕೃತಳಾದ, ಸೀತಾಂ - ಸೀತಾದೇವಿ
ಯನ್ನು, ಸಮಾನೀಯ - ಕರದುಕೊಂಡು ಬಂದು, ಅಗ್ನೇಃ - ಅಗ್ನಿಗೆ, ಸಮಕ್ಷಂ - ಇದುರಾಗಿ,
ರಾಘವಾಭಿಮುಖೇ - ಶ್ರೀರಾಮನಿಗೆ ಅಭಿಮುಖನಾಗಿ, ಸಂಸ್ಥಾಪ್ಯ - ನಿಲ್ಲಿಸಿ, ತದಾ - ಆಗ, ಕೌಸ
ಲ್ಯಾನಂದವರ್ಧನಂ = ಕೌಸಲ್ಯಾದೇವಿಗೆ ಆನಂದವನ್ನುಂಟುಮಾಡುವ ಶ್ರೀರಾಮನನ್ನು ಕುರಿತು,
ಅಬ್ರವೀತ್ - ನುಡಿದನು. ॥ ೨೫ ॥ ತದಾ - ಆ ಕಾಲದಲ್ಲಿ, ದೇವಾನಾಂ - ದೇವತೆಗಳೂ,

ಊದುಕಡ್ಡಿಗಳಿಂದಲೂ, ಧೂಮಪಾತ್ರಗಳಿಂದಲೂ, ಶಂಖಪಾತ್ರೆಗಳಿಂದಲೂ, ಸ್ರುಕ್ ಸ್ರುವಾ
ದಿಗಳಿಂದಲೂ, ಅರ್ಘ್ಯಪಾತ್ರೆಗಳಿಂದಲೂ, ಲಾಜಸಮೃದ್ಧವಾದ ಪಾತ್ರೆಗಳಿಂದಲೂ,
ಕಾರ್ಯಾಂತರೋಪಯುಕ್ತವಾದ ತಟ್ಟೆ ಅರ್ಘ್ಯಪಾತ್ರಾದಿಗಳಿಂದಲೂ,ಹರಿದ್ರಾಕುಂಕುಮಾದಿ
ಗಳಿಂದಭಿರಂಜಿತವಾದ ಅಕ್ಷತೆಗಳಿಂದಲೂ ಆ ವೇದಿಕೆಯನ್ನಲಂಕರಿಸಿ, ಮಂತ್ರವ
ತ್ತಾಗಿ ದರ್ಭೆಗಳನ್ನು ಹಾಸಿ, ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ, ಮಂತ್ರಪುರಸ್ಸರವಾಗಿ,
ಆ ಅಗ್ನಿಯಲ್ಲಿ ಹೋಮವನ್ನು ಮಾಡಿದವನಾದನು. ॥೧೭-೨೪॥ ಆ ಬಳಿಕ ಜನಕರಾಯನು,
ಸರ್ವಾಭರಣ ಭೂಷಿತಳಾದ ಸೀತಾದೇವಿಯನ್ನು ಕರೆದುಕೊಂಡು, ಅಗ್ನಿಸಮಕ್ಷಮದಲ್ಲಿ
ಶ್ರೀರಾಮಚಂದ್ರನಿಗಭಿಮುಖವಾಗಿ ನಿಲ್ಲಿಸಿ, ಕೌಸಲ್ಯಾನಂದವರ್ಧಕನಾದ ಶ್ರೀರಾಮನನ್ನು

|| ಶ್ರೀ ಶ್ರುಭಂಭೂಯಾತ್ ||

# ಸೀತಾಕಲ್ಯಾಣಘಟ್ಟಃ

---

**ಇಯಂ ಸೀತಾ ಮಮ ಸುತಾ ಸಹ ಧರ್ಮ ಚರೀತವ ||**
**ಪ್ರತೀಚ್ಛಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ||೨೬||**
**ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ ||**
**ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಮಂತ್ರಪೂತಂ ಜಲಂತದಾ ||೨೭||**

## ಗೋವಿಂದರಾಜೀಯವ್ಯಾಖ್ಯಾನ

ಇಯಂ - ಎಂದಿಗೂ ಕುಂದದಿರುವ ಸೌಂದರ್ಯ, ಸೌಕುಮಾರ್ಯಾದಿಗಳಿಂದೊಡಗೂಡಿದ **ಈಕೆಯು,** ಸೀತಾ - (೧) ಲಾಂಗಲಮಾರ್ಗದಿಂದ **ಹುಟ್ಟಿದವಳಾದುದರಿಂದ** ಸೀತೆಯು, **(ಅಥವ) ಯಾವಳು** ವಿಶ್ವಾಮಿತ್ರಾಶ್ರಮದಿಂದ ಪ್ರಯಾಣಮಾಡಿದ ಮೊದಲು, ಧನುರ್ಭಂಗದವರೆವಿಗೂ **ನೋಡಬೇಕೆಂಬ** ಕುತೂಹಲಕ್ಕೆ ಪಾತ್ರಳಾಗಿದ್ದಳೋ ಅವಳೇ ಈ ಸೀತೆಯು, ಮಮಸುತಾ-ಆಚಾರವೇ ಪ್ರಧಾನವಾಗುಳ್ಳ ಜನಕರಾಯರ ಕುಲದಲ್ಲಿ ಹುಟ್ಟಿದ ನನ್ನ ಮಗಳು (ಅಥವ), ನಿನಗೋಸುಗವಾಗಿ **ಕೊಡಲು** ಅನೇಕ ವ್ರತೋಪವಾಸಾದಿಗಳನ್ನು ಮಾಡಿದ ಜನಕನಾದ ನನ್ನ ಮಗಳು, ತವ-ನಿನಗೆ, ಸಹಧರ್ಮಚರೀ – (೨) ನಿನ್ನೊಡನೆ ಸಮಾನವಾದ ಧರ್ಮವನ್ನು ಮಾಡುವ, (ಅಥವ) **ನೀನು** ಮಾಡುವ ಪ್ರತಿಕರ್ಮವನ್ನೂ ಈಕೆಯೊಡನ ಮಾಡಬೇಕಾಗಿರುವುದರಿಂದ, ಏನಾಂ - ಈಕೆ**ಯನ್ನು,** (೩)ಪ್ರತೀಚ್ಛ - ಅಂಗೀಕರಿಸು, (೪)ಭದ್ರಂತೇ – ನಿನಗೆ ಮಂಗಳವಾಗಲಿ, **ಪಾಣಿನಾ** - ನಿನ್ನ **ಕೈಯಿಂದ, ಪಾಣಿಂ** – ಸೀತಾದೇವಿಯ ಕೈಯನ್ನು, ಗೃಹ್ಣೀಷ್ವ - ಗ್ರಹಿಸುವವನಾಗು, (ಈಕೆಯು) (೫) **ಪತಿವ್ರತಾ** ಪತಿಯಲ್ಲಿಯೇ ನಿರಂತರವೂ ನಿಯಮ ನಿಷ್ಠಾಪರಳಾದವಳೂ, ಮಹಾಭಾಗಾ-**ಮಹಾಪುಣ್ಯಶಾಲಿನಿಯೂ,** ಸದಾ - ನಿರಂತರವೂ, ಛಾಯೇವ - ನೆರಳಿನಂತೆ, ಅನುಗತಾ – ನಿನ್ನನ್ನೇ ಅನು

---

ಟಿ. (೧) ಸೀತಾದರ್ಶನ ಕಾಲದಲ್ಲಿ ಮಿಂಚಿನಂತೆ ಪ್ರಕಾಶವಾದುದರಿಂದ, ಆಕೆಯ ಅವಯವ ಚಕಚಕ ಭಾವದಿಂದ, ಅವಯವ ದರ್ಶನದಲ್ಲಿ ತ್ವರೆಗೊಳ್ಳಬೇಡ. ಈಕೇಯೇ ಸಿತೇಯು. ನಿರಂತರವೂ ಭಾವನಾತಿಶಯದಿಂದ ಶ್ರೀರಾಮಮೂರ್ತಿಗೆ ಎತ್ತೆತ್ತಲೂ ಸೀತೆಯೇ ಕಾಣುತ್ತಿದ್ದುದರಿಂದ, ಜನಕರಾಯನು ಆತನ ಎದುರಿನಲ್ಲಿಯೇ ನಿಂತಿದ್ದ ತನ್ನ ಮಗಳನ್ನು ಈಕೆಯೇ ಸೀತೆಯು ಎಂದು ಹೇಳಿದನು ವಿಷ್ಣುವಾದ ನೀನು ನಿನ್ನನ್ನು ಮನುಷ್ಯನೆಂದು ತಿಳಿದಿರುವೆಯಲ್ಲವೆ; ಈಕೆಯೂ ಸಹ ಅನಾದಿ ಲಕ್ಷ್ಮಿಯಾದರೂ ಮನುಷ್ಯ ಸ್ತ್ರೀಯಾಗಿ ಹುಟ್ಟಿರುವಳು, "ರಾಘವತ್ವೇಭವೇತ್ಸೀತಾ" ಎಂಬುದು ಸೂಚಿತವಾಯಿತು. ಈಕೆಯೇ ಸೀತೆಯು. (ಇವೆಲ್ಲವೂ ಗೋವಿಂದರಾಜೀಯ ವ್ಯಾಖ್ಯಾನಕಾರನ ವಿಶೇಷಾರ್ಥಗಳು)—

(೨) ಇಬ್ಬರೂ ಕೂಡಿ ಧರ್ಮಾಚರಣೆಯನ್ನು ಮಾಡುವಾಗ ಸಹಾಯ ಭೂತಳಾದವಳು.

(೩) "ಎಷ್ಟು ಗುಣಶಾಲಿನಿಯಾದರೂ ನಿನ್ನ ಅನುಮತಿಯಿಲ್ಲದೆ ಪರಿಗ್ರಹಿಸುವುದಿಲ್ಲ" ಎಂದು ರಾಮಚಂದ್ರನು ಹೇಳಿಯಾನೆಂದು ಬಗೆದು "ಪ್ರತೀಚ್ಛ" ಎಂದು ಜನಕನು ಹೇಳಿದನು,

(೪) "ಸೀತಾದೇವಿಯು ತನಗೆ ಅನನ್ಯಳಾದುದರಿಂದ ಸ್ವತಸ್ಸಿದ್ಧಳು, ಈಕೆಯನ್ನು ಕೊಡಲು ನೀನಾರು?" ಎಂದು ಶ್ರೀರಾಮನು ಕೋಪಮಾಡಿಯಾನೆಂಬ ಭಯದಿಂದ "ಭದ್ರಂತೇ – ನಿನಗೆ ಮಂಗಳವಾಗಲಿ" ಎಂದು ಹೇಳಿದನು. ಅಥವ, ನಿರತಿಶಯ ಕನ್ಯಾಲಕ್ಷಣ ಲಕ್ಷಿತಳಾದೀ ಸೀತಾ ಪಾಣಿಗ್ರಹಣದಿಂದ ನಿನಗೆ ಅನೇಕ ಶುಭಗಳುಂಟಾಗುತ್ತವೆ ಎಂದು ಭಾವವು.

(ಗೋ ವಿ) ಅನುಕೂಲವಾದ ಸುಂದರ ಪುರುಷನಿಗೆ, ಅನುಕೂಲ ಸುಂದರ ಸ್ತ್ರೀಯ ಘಟನಾ ವಿಷಯದಲ್ಲಿ ದೃಷ್ಟಿದೋಷ ಪರಿಹಾರಾರ್ಥವಾಗಿ ಪ್ರಾರ್ಥನೆಯೂ ಸೂಚಿತವಾಯಿತು.

ಟಿ. (೫) "ಆರ್ತಾರ್ತೇ ಮುದಿತೇ ಹೃಷ್ಟಾ ಪ್ರೋಷಿತೇ ಮಲಿನಾಕೃಶಾ || ಮೃತೇಮ್ರಿಯೇತ ಯಾ ನಾರೀ ಸಾ ಸ್ತ್ರೀ ಜ್ಞೇಯಾ ಪತಿವ್ರತಾ" ಎಂಬುದು ಪತಿವ್ರತಾ ಲಕ್ಷಣ.

# ಸೀತಾ ಕಲ್ಯಾಣವು



ಇಯಂ ಸೀತಾ ಮಮ ಸುತಾ ಸಹ ಧರ್ಮಚರೀ ತವ
ಪ್ರತೀಚ್ಛ ಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ।

ಪರಿಸುವಳು, ಭವತು - ಆಗಲಿ, ಇತಿ - ಹೀಗೆ, ಉಕ್ತ್ವಾ - ಹೇಳಿ, ತದಾ - ಆಗ, ರಾಜಾ - ಜನಕ ರಾಯನು, ಮಂತ್ರಪೂತಂ - ಮಂತ್ರದಿಂದ ಪರಿಶುದ್ಧವಾದ, ಜಲಂ - ಉದಕವನ್ನು, ಪ್ರಾಕ್ಷಿಪತ್- ಶ್ರೀರಾಮನ ಹಸ್ತದಲ್ಲಿ ಬಿಟ್ಟವನಾದನು. ॥ ೨೬-೨೭ ॥

ತನಿಶ್ಲೋಕೀ

ಇಯಂ - ನಿರತಿಶಯರೂಪಸಂಪತ್ತಿಯುಳ್ಳ ಈಕೆಯು, ಸೀತಾ- ಲಾಂಗಲ ಮಾರ್ಗದಿಂದ ಜನಿಸಿದವಳಾದುದರಿಂದ ಜನ್ಮ ಪರಿಶುದ್ಧಿಯುಳ್ಳ ಸೀತೆಯು, ಮಮಸುತಾ - ಮಹಾ ಕರ್ಮಿಠರನಾದ ನನ್ನ ಮನೆಯಲ್ಲಿ ವಾಸಿಸಿದಳಾದುದರಿಂದ ಆವಾಸಪರಿಶುದ್ಧಿಯುಳ್ಳ ನನ್ನ ಮಗಳು, ತವ - ಸೌಂದ ರ್ಯಾದಿ ಗುಣಗಳಿಂದೊಡಗೂಡಿದ ರಾಮಚಂದ್ರನಾದ ನಿನಗೆ, ಸಹಧರ್ಮಚರೀ - ಯಾವಾಗಲೂ, ನಿನ್ನೊಡನೆಯೇ ಧರ್ಮಗಳನ್ನಾಚರಿಸುವಳು, ಏನಾಂ-ಇಕೆಯನ್ನು, (೧) ಪ್ರತೀಚ್ಛ-ಪರಿಗ್ರಹಿಸು, ತೇ- ನಿನಗೆ, ಭದ್ರಂ - ಮಂಗಳವಾಗಲಿ, ಪಾಣಿನಾ - ಸ್ವಹಸ್ತದಿಂದ. ಪಾಣಿಂ - ಸೀತಾದೇವಿಯ ಕರವನ್ನು, ಗೃಹ್ಣೀಷ್ವ - ಹಿಡಿವವನಾಗು. ॥ ೨೬-೨೭ ॥

ರಾಮಾನುಜಾಚಾರ್ಯರ ಟೀಕೆ

ಇಯಂ - ರೂಪೌದಾರ್ಯ ಗುಣಾದಿಗಳಿಂದ ನಾನೇ ಶ್ರೇಷ್ಠನೆಂದು ತಿಳಿಯಬೇಡ, ಈ ನಿನ್ನ ಮುಂದಿರುವವಳನ್ನಾದರೂ ನೋಡು, ಸೀತಾ - ತುಲ್ಯಶೀಲವಯೋವೃತ್ತ್ಯಾದಿಗಳಿಂದ ನಿನಗೆ ಸಮಾ ನಳಾಗಿರುವುದೂ ಅಲ್ಲದೆ, ಲಾಂಗಲ ಪದ್ಧತಿಯಿಂದುತ್ಪನ್ನಳಾಗಿ ನಿನಗಿಂತಲೂ ಅತಿಶಯವಾದ ಅಯೋ ನಿಜತ್ವಗುಣವನ್ನೊಡಗೂಡಿರುವ ಸೀತೆಯು, ಮಮಸುತಾ - ಜನಕರಾಯರ ಕುಲಕ್ಕೆ ಕೀರ್ತಿ ಯನ್ನು [ಜನಕಾನಾಂ ಕುಲೇ ಕೀರ್ತಿಮಾಹರಿಷ್ಯತಿ ಮೇ ಸುತಾ ಎಂದು ಹೇಳಿರುವುದರಿಂದ] ತರುವ ನನ್ನ ಮಗಳು, ತವ - ನಿನಗೆ, ಸಹಧರ್ಮಚರೀ-ನೀನು ಮಾಡುವ ಧರ್ಮಗಳನ್ನು ಪ್ರೇರಿಸುವವಳು ಏನಾಂ - ನಿನಗಾಗಿ ಬಂದಿರುವ ಈಕೆಯನ್ನು, ಪ್ರತೀಚ್ಛ - ಆದರದಿಂದ ಪರಿಗ್ರಹಿಸುವವನಾಗು, ಭದ್ರಂತೇ - ನಿನಗೆ ಮಂಗಳವಾಗಲಿ, ಪಾಣಿನಾ - ನಿನ್ನ ಕರದಿಂದ, ಪಾಣಿಂ - ಸೀತಾದೇವಿಯ ಕರವನ್ನು, ಗೃಹ್ಣೀಷ್ವ, ಹಿಡಿದು ಅಶಿಥಿಲ ಕಂಕಣಳನ್ನಾಗಿ ಮಾಡು. ॥ ೨೬-೨೭ ॥

---

(೧) ಸಜಾತೀಯ ಪುರುಷನಿಗೆ ಸಜಾತೀಯಳಾದ ಸ್ತ್ರೀಯೊಡನೆ ವಿವಾಹ ಕಾಲದಲ್ಲಿ ಪಾಣಿಗ್ರಹಣವನ್ನೇ ಮಾಡ ಬೇಕೆಂಬ ನಿಯಮವು ಸೂಚಿತವಾಯಿತು.

> ಪಾಣಿಗ್ರಹಣ ಸಂಸ್ಕಾರಃ ಸವರ್ಣಾಸು ಪ್ರದೃಶ್ಯತೇ ।ಅಸವರ್ಣಾ ಸ್ವಯಂಜ್ಞೇಯೋ ವಿಧಿರುದ್ವಾಹಕರ್ಮಣಿ॥
> ಶರಃ ಕ್ಷತ್ರಿಯ ಯಾಗ್ರಾಹ್ಯಃ ಪ್ರತೋದೋ ವೈಶ್ಯ ಕನ್ಯಯಾ। ನಾಸೋದಶಾ ಶೂದ್ರಯಾತು ವರ್ಣೋತ್ಕೃ
> ಷ್ಟಸ್ಯವೇದನೇ ॥ (ಮನುಸ್ಮೃತಿ)

ಅರ್ಥ—ಸಜಾತೀಯ ವಧೂ ವರರಿಗೆ ಪಾಣಿಗ್ರಹಣವು, ಅಸವರ್ಣಕ್ಷತ್ರಿಯ ಸ್ತ್ರೀಗೆ ಶರಗ್ರಹಣವು; ವೈಶ್ಯಸ್ತ್ರೀಗೆ ಪ್ರತೋದ ಗ್ರಹಣವು; ಶೂದ್ರಸ್ತ್ರೀಗೆ ಸೆರಗಿನ ತುದಿಭಾಗದ ಗ್ರಹಣವು; ಎಂದು ಹೇಳಿದೆಯಾದುದರಿಂದ ಕ್ಷತ್ರಿಯೋತ್ತಮ ನಾದ ನೀನು ಕ್ಷತ್ರಿಯ ಶ್ರೇಷ್ಠಳಾದ ಈ ಸೀತಾದೇವಿಯ ಪಾಣಿಗ್ರಹಣವನ್ನು ಮಾಡುವವನಾಗು ಎಂದು ಭಾವವು.

"ಸೀತಾದೇವಿಯ ಹಸ್ತವನ್ನು ಪರಿಗ್ರಹಿಸು" ಎಂದು ಹೇಳಿದದುರಿಂದ ನಿಮ್ಮಿಬ್ಬರಿಗೂ ರಾಗಾತಿಶಯದಿಂದ ಪ್ರಣಯ ದೆಶೆಯಲ್ಲಿ ಏನಾದರೂ ಅಪರಾಧವು ಸನ್ನಿಹಿತವಾದರೆ ಆಗ ಪಾದಗ್ರಹಣ ಮಾಡಬೇಕಾಗಬಹುದು, ಈಗ ವಿಶ್ವಾಸ ದಿಂದ ಕರಗ್ರಹಣ ಮಾಡುವವನಾಗು ಎಂಬಭಿಪ್ರಾಯವು ತೋರುತ್ತದೆ.

ಸಾಧುಸಾಧ್ವಿತಿದೇವಾನಾಮೃಷೀಣಾಂವದತಾಂ ತದಾ ||ದೇವದುಂದುಭಿ ನಿರ್ಘೋ-
ಷಃ ಪುಷ್ಪವರ್ಷೋ ಮಹಾನಭೂತ್||೨೮||ಏವಂ ದತ್ವಾತದಾಸೀತಾಂಮಂತ್ರೋ

ಋಷೀಣಾಂ - ಋಷಿಗಳೂ, ಸಾಧುಸಾಧ್ವಿತಿ - ಚನ್ನಾಗಿದೆ ಚನ್ನಾಗಿದೆಯೆಂದು, ವದತಾಂಸತಾಂ-ಹೇಳುತ್ತಿರಲು, (ತಿ) ಸಾಧುಸಾಧ್ವಿತಿ - ಒಳ್ಳೆಯದು ಒಳ್ಳೆಯದೆಂದು, ವದತಾಂ-ಹೇಳುತ್ತಿರುವ, ದೇವಾನಾಂ - ದೇವತೆಗಳ, ಋಷೀಣಾಂ - ಋಷಿಗಳ, ಶಬ್ದಃ - ಶಬ್ದವು, ಆಸೀತ್ - ಆಯಿತು, ದೇವದುಂದುಭಿನಿರ್ಘೋಷಃ - ದೇವತೆಗಳ ಭೇರೀಧ್ವನಿಯು, ಅಭೂತ್- ಆಯಿರು. ಮಹಾನ್-ಬಹಳ ವಾದ, ಪುಷ್ಪವರ್ಷಃ - ಪುಷ್ಪವೃಷ್ಟಿಯು, ಅಭೂತ್ - ಆಯಿತು. || ೨೮ || ಏವಂ - ಹೀಗೆ

ಕುರಿತಿಂತೆಂದನು. ||೨೫|| "ಎಲೈ ರಘುನಂದನನೆ! ನಿನ್ನ ಮುಂಗಡೆ ಕಾಣುತ್ತಿರುವ ಈಕೆಯೇ ಸೀತಾದೇವಿಯು, ನನ್ನ ಕುವರಿಯು; ನಿನಗೆ ಸಹಧರ್ಮಚಾರಿಣಿಯಾಗಿರುವಳು; ಈಕೆಯನ್ನು ಪರಿಗ್ರಹಿಸು, ನಿನ್ನ ಕರದಿಂದೀಕೆಯ ಕರವಂ ಪಿಡಿವವನಾಗು ನಿನಗೆ ಮಂಗಳವಾಗಲಿ; ನಿನ್ನನ್ನು

ಮಹೇಶ್ವರತೀರ್ಥೀಯ

ಇಯಂ - ನಿನ್ನ ಭುಜವೀರ್ಯದಿಂದ ನಿರ್ಜಿತಳಾಗಿ ನಿನ್ನ ಮುಂಗಡೆ ನಿಂತಿರುವ ಈಕೆಯು, ಸೀತಾ - ಲಾಂಗಲ ಮಾರ್ಗದಿಂದ ಹುಟ್ಟಿದ ಅಯೋನಿಜಳಾದ ಸೀತೆಯು, ಮಮಸುತಾ - ಆಚಾರ ಶೀಲನಾದ ನನ್ನ ಮಗಳು, ತವ - ನಿನಗೆ, ಸಹಧರ್ಮಚರೀ - ಯಾವ ಯಾವ ಕರ್ಮವನ್ನು ನೀನು ಮಾಡಬೇಕೋ ಅವೆಲ್ಲವನ್ನೂ ಈಕೆಯೊಡನೆಯೇ ಮಾಡಬೇಕಾಗಿರುವ ಸಮಾನ ಧರ್ಮವುಳ್ಳವಳು, ಏನಾಂ - ಈ ಮೇಲೆ ಬಿತ್ತರಿಸಿದ ಲಕ್ಷಣಲಕ್ಷಿತಳಾದೀಕೆಯನ್ನು, ಪ್ರತೀಚ್ಛ - ಅಂಗೀಕರಿಸು, ತೇ - ನಿನಗೆ, ಭದ್ರಂ - ಮಂಗಳವಾಗಲಿ, ಪಾಣಿನಾ - ನಿನ್ನ ಕರದಿಂದ, ಪಾಣಿಂ - ಸೀತಾದೇವಿಯ ಕರವನ್ನು, ಗೃಹ್ಣೀಷ್ವ - ಮಂತ್ರಪೂರ್ವಕವಾಗಿ ಗ್ರಹಿಸುವವನಾಗು. || ೨೬ ||

ತಿಲಕವ್ಯಾಖ್ಯಾನದಲ್ಲಿ ಹೆಚ್ಚು ವಿಷಯಗಳಿಲ್ಲ.

ಕೆಲವರು ಈ ಶ್ಲೋಕಕ್ಕೆ ಹೀಗೆ ಅರ್ಥ ಮಾಡುತ್ತಾರೆ.

ಇಯಂ . ಈಕೆಯು, ಸೀತಾ - ನೇಗಲು ಹಾಕಿದ ಭೂಮಿಯಲ್ಲಿ ಹುಟ್ಟಿದವಳು, ಆದುದರಿಂದ ಈಕೆಯು ಭೂಮಿಯಂತೆ ಕ್ಷಮಾದಿ ಗುಣವಂತಳು, ಅಥವ ಇಯಂ - ಈಕೆಯು, ಸೀತಾ- ಭೂಪುತ್ರಿಯಾದ್ದರಿಂದ ಅಯೋನಿಜ ಯಾದವಳು, ಮಮಸುತಾ-ನನಗೆ ಪುತ್ರಿಯಾದವಳಾದ ಕಾರಣ ರಾಜಕುಮಾರಿಯೆಂದು ಪ್ರಸಿದ್ಧಳಾದವಳು, ಧರ್ಮಾಚರಣ ವಿಷಯದಲ್ಲಿ ನಿನಗೆ ಸರ್ವಾಂಶಗಳಲ್ಲಿ ಅನುಕೂಲಳು, ಏನಾಂ - ಈ ಸೀತಾದೇವಿಯನ್ನು ವ್ರತೋಪವಾಸಾದಿಗಳಿಂದ ಉತ್ಪನ್ನಳಾದ ಕಾರಣ ನನಗೆ ಹೇಗೆ ಪ್ರೇಮಾಸ್ಪದಳೋ ಹಾಗೆ ನಿನಗೂ ಪ್ರೇಮಾಸ್ಪದಳಾಗಿಥಾಳೆ,ಆದುದರಿಂದ,ಏನಾಂಪ್ರತೀಚ್ಛ- ಈ ಸೀತಾದೇವಿಯನ್ನು ನೋಡು, (ಅಂದರೆ-ಆದರಣೆಯಿಂದ ನೋಡು) ಭದ್ರಂತೆ - ಈಕೆಯಿಂದ ಮುಂದೆ ನಿನಗೆ ಬಹಳ ಶುಭಾತಿಶಯಗಳು ಉಂಟಾಗುವುವು, ನಿನ್ನ ಹಸ್ತದಿಂದ ಈಕೆಯ ಹಸ್ತವನ್ನು ಪರಿಗ್ರಹಣ ಮಾಡೆಂದು ಹೇಳಿದ್ದರಿಂದ, ನಾನು ವ್ರತೋಪವಾಸಾದಿಗಳನ್ನು ಮಾಡಿದುದಿಂದಿಗೆ ಸಫಲವಾಯಿತು, ನಿನಗೂ ಭೋಗಾತಿಶಯಕ್ಕೆ ಅರ್ಹಳಾಗಿಥಾಳೆ, ಎಂಬ ತಾತ್ಪರ್ಯವು. || ೨೬ ||

ದಕ ಪುರಸ್ಕೃತಾಂ || ಅಬ್ರವೀ ಜ್ಜನಕೋ ರಾಜಾ. ಹರ್ಷೇಣಾ ಭಿಪರಿಪ್ಲುತಃ ||೨೯ || ಲಕ್ಷ್ಮಣಾಗಚ್ಛ ಭದ್ರಂ ತೇ ಊರ್ಮಿಳಾಮುದ್ಯತಾಂ ಮಯಾ||ಪ್ರತೀಚ್ಛ ಪಾಣಿಂ ಗೃಹ್ಣೀಷ್ವ ಮಾಭೂತ್ಕಾಲಸ್ಯ ಪರ್ಯಯಃ || ೩೦ || ತಮೇವ ಮುಕ್ತ್ವಾ ಜನಕೋ ಭರತಂ ಚಾಭ್ಯಭಾಷತ || ಗೃಹಾಣ ಪಾಣಿಂ ಮಾಂ

ಮಂತ್ರೋದಕಪುರಸ್ಕೃತಾಂ, ಮಂತ್ರೋದಕ - ಕನ್ಯಾದಾನ ಮಂತ್ರದಿಂದ ಪೂತವಾದ ಉದಕ ಪೂರ್ವಕವಾಗಿ, ಪುರಸ್ಕೃತಾಂ - ಮುಂದಿರಿಸಲ್ಪಟ್ಟ, ಸೀತಾಂ - ಸೀತಾದೇವಿಯನ್ನು, ದತ್ವಾ - ಕೊಟ್ಟು, ಜನಕೋರಾಜಾ - ಜನಕ ಮಹಾರಾಯನು, ಹರ್ಷೇಣಾಭಿಪರಿಪ್ಲುತಃ - ಆನಂದಬಾಷ್ಪ ಗಳಿಂದ ತೋಯಿಸಲ್ಪಟ್ಟವನಾಗಿ, ಅಬ್ರವೀತ್ - ನುಡಿದನು. || ೨೯ || ಹೇಲಕ್ಷ್ಮಣ - (೧) ಎಲೈ ಲಕ್ಷ್ಮಣಸ್ವಾಮಿಯೆ! ಆಗಚ್ಛ - ಬಾ, ತೇ - ನಿನಗೆ, ಭದ್ರಂ - ಮಂಗಳವು, ಅಸ್ತು - ಆಗಲಿ, ಕಾಲಸ್ಯ ಕಾಲದ, ಪರ್ಯಯಃ - ಅತಿಕ್ರಮಣವು, ಮಾಭೂತ್ - ಆಗದಿರಲಿ, ಮಯಾ ನನ್ನಿಂದ, ಉದ್ಯತಾಂ - ಎತ್ತಿಕೊಳ್ಳಲ್ಪಟ್ಟ, ಊರ್ಮಿಳಾಂ - ಊರ್ಮಿಳಾದೇವಿಯನ್ನು, ಪ್ರತೀಚ್ಛ - ಸ್ವೀಕರಿಸು, ಪಾಣಿಂ - ಹಸ್ತವನ್ನು, ಗೃಹ್ಣೀಷ್ವ - ಪರಿಗ್ರಹಿಸು. || ೩೦ || ತಂ - ಆ ಲಕ್ಷ್ಮಣಸ್ವಾಮಿಯನ್ನು ಕುರಿತು, ಏವಂ - ಈ ರೀತಿ, ಉಕ್ತ್ವಾ - ಹೇಳಿ, ಜನಕಃ - ಜನಕರಾಯನು, ಭರತಂಚ- ಭರತನನ್ನೂ ಕುರಿತು, ಹೇರಘುನಂದನ-ಎಲೈ ರಘುವಂಶದ ರಾಯರಿಗೆ ಆನಂದಕರನೇ, ಪಾಣಿನಾ- ಹಸ್ತದಿಂದ, ಮಾಂಡವ್ಯಾಃ - ಮಾಂಡವೀದೇವಿಯ, ಪಾಣಿಂ - ಹಸ್ತವನ್ನು, ಗೃಹ್ಣೀಷ್ವ-ಗ್ರಹಿಸು, ಇತಿ - ಇಂತೆಂದು, ಅಭ್ಯಭಾಷತ-ಮಾತನಾಡಿದನು. || ೩೧ || ಧರ್ಮಾತ್ಮಾ - ಧರ್ಮಿಷ್ಠನಾದ, ಜನಕೇಶ್ವರಃ - ಜನಕದೇಶಾಧೀಶ್ವರನು, ಶತ್ರುಘ್ನಂಚಾಪಿ - ಶತೃಘ್ನನನ್ನೂ ಕುರಿತು, ಹೇಮಹಾ

ಮದುವೆಯಾದೀಸೀತಾದೇವಿಯು ಮಹಾಪತಿವ್ರತೆಯಾಗಿಯೂ, ಮಹಾ ಪುಣ್ಯವತಿ ಯಾಗಿಯೂ, ಛಾಯೆಯಂತೆ ಸದಾಕಾಲದಲ್ಲಿಯೂ,ನಿನ್ನನೇ ಹಿಂಬಾಲಿಸುವವಳಾಗಿಯೂ "ಇರುತ್ತಾಳೆ." ಎಂಬೀ ಪ್ರಕಾರವಾಗಿ ನುಡಿದ ಜನಕರಾಯನು ಮಂತ್ರೋದಕಪುರಸ್ಸರವಾಗಿ ರಘುನಂದನನ ಕೈಯಲ್ಲಿ ಕನ್ಯಾದಾನವಂ ಗೈದನು. ಆ ಸಮಯದಲ್ಲಿ ದೇವತೆಗಳೂ,ಋಷಿಗಳೂ ಜಯಜಯ ಘೋಷವನ್ನು ಮಾಡುತಿದ್ದರು. || ೨೭-೨೮ || ಈರೀತಿ ಸೀತಾದೇವಿಯನ್ನು ಮಂತ್ರೋದಕಪುರಸ್ಸರವಾಗಿ ಶ್ರೀರಾಮಚಂದ್ರನಿಗೆ ಕನ್ಯಾದಾನಮಾಡಿ ಪರಮಹರ್ಷಿತನಾದ ಜನಕರಾಯನು ಲಕ್ಷ್ಮಣನನ್ನು ಕುರಿತು "ಬಾರೈ ಲಕ್ಷ್ಮಣನೆ! ನಿನಗೆ ಮಂಗಳವಾಗಲಿ; ಕಾಲವಿಳಂಬವಾಗದಿರಲಿ; ನನ್ನ ಎರಡನೆಯ ಮಗಳಾದ ಊರ್ಮಿಳೆಯ ಕರವನ್ನು ಪಿಡಿವ ವನಾಗು ಎಂದು" ನುಡಿದು, ಭರತನನ್ನು ಕರೆದು, "ಎಲೈ ಭರತನೇ! ಮಾಂಡವೀದೇವಿಯ

ಟಿ. (೧) "ಲಕ್ಷ್ಮಣಾಗಚ್ಛ" ಎಂದು ಭರತನಿಗಿಂತ ಮೊದಲೇ ಲಕ್ಷ್ಮಣನನ್ನು ಕಲ್ಯಾಣಕ್ಕಾಗಿ ಧರ್ಮಜ್ಞನಾದ ಜನಕರಾಯನ್ನು ಕರೆಯಬಹುದೇ? ಎಂದು ವಾಚಕರು ಶಂಕಿಸಬಾರದು. ಇವರಿಬ್ಬರಿಗೂ ಭಿನ್ನೋದರತ್ವವಿರುವುದರಿಂದ ದೋಷವೇನೂ ಅಲ್ಲ.

ಪಿತೃವ್ಯಪುತ್ರೇಸಾಪತ್ನೇ ಪರನಾರೀ ಸುತೇಪಿವಾ | ವಿವಾಹ ದಾನ ಯಜ್ಞಾದೌ ಪರಿವೇದೋ ನದೂಷಣಂ ||
ಎಂದು ಹೇಳಲಾಗಿದೆ. (ಗೋ+ಮ)

ಡವ್ಯಾಃ ಪಾಣಿನಾ ರಘುನಂದನ||೩೦|| ಶತ್ರುಘ್ನಂ ಚಾಪಿ ಧರ್ಮಾತ್ಮಾ ಅಬ್ರವೀ ಜ್ಜನಕೇಶ್ವರಃ || ಶ್ರುತಕೀರ್ತ್ಯಾ ಮಹಾಬಾಹೋ ಪಾಣಿಂ ಗೃಹ್ಣೀಷ್ವಪಾಣಿನಾ ||೩೨|| ಸರ್ವೇ ಭವಂತ ಸ್ಸೌಮ್ಯಾಶ್ಚ ಸರ್ವೇ ಸುಚರಿತ ವ್ರತಾಃ || ಪತ್ನೀಭಿ ಸ್ಸಂತು ಕಾಕುತ್ಸ್ಥಾಮಾಭೂ ತ್ಕಾಲಸ್ಯ ಪರ್ಯಯಃ || ೩೩ || ಜನಕಸ್ಯ ವಚಶ್ಶ್ರುತ್ವಾ ಪಾಣೀನ್ ಪಾಣಿಭಿರಸ್ಪೃಶನ್ || ಚತ್ವಾರಸ್ತೇ ಚತಸೃಣಾಂ

---

ಬಾಹೋ - ಎಲೈ ಮಹಾ ಭುಜಪರಾಕ್ರಮಶಾಲಿಯೇ, ಪಾಣಿನಾ - ಹಸ್ತದಿಂದ, ಶ್ರುತಕೀರ್ತ್ಯಾಃ- ಶ್ರುತಕೀರ್ತಿಯ, ಪಾಣಿಂ - ಹಸ್ತವನ್ನು, ಗೃಹ್ಣೀಷ್ವ - ಪರಿಗ್ರಹಿಸು, ಇತಿ - ಇಂತೆಂದು, ಅಬ್ರವೀತ್ -- ನುಡಿದನು || ೩೨ || (೧) ಹೇಕಾಕುತ್ಸ್ಥಾಃ - ಎಲೈ ಕಕುಸ್ಥ ವಂಶೋತ್ಪನ್ನರಿರಾ, ಭವಂತಃ - ನೀವು, ಸರ್ವೇ - ಯಲ್ಲರೂ, ಸೌಮ್ಯಾಶ್ಚ - ಪ್ರಸನ್ನರು, ಸರ್ವೇ-ಸಮಸ್ತರೂ, ಸುಚರಿತ ವ್ರತಾಃ - ಚನ್ನಾಗಿ ಅನುಷ್ಠಾನ ಮಾಡಲ್ಪಟ್ಟ ಬ್ರಹ್ಮಚರ್ಯ ವ್ರತವುಳ್ಳವರು, ಕಾಲಸ್ಯ - ಕಾಲದ, ಪರ್ಯಯಃ - ಅತಿಕ್ರಮಣವು, ಮಾಭೂತ್-ಆಗದಿರಲಿ, ಪತ್ನೀಭಿಃ-ಧರ್ಮಪತ್ನೀಗಳಿಂದ, ಯುಕ್ತಾಃ- ಕೂಡಿದವರು, ಸ್ಸಂತು-ಆಗಲಿ. ||೩೩||,ಜನಕಸ್ಯ-ಜನಕರಾಯನ, ವಚಃ ವಚನವನ್ನು, ಶ್ರುತ್ವಾ-ಕೇಳಿ, ತೇಚತ್ವಾರಃ - ಆ ರಾಮ ಲಕ್ಷ್ಮಣ ಭರತ ಶತ್ರುಘ್ನರು ನಾಲ್ವರೂ, ವಸಿಷ್ಠಸ್ಯ - ವಸಿಷ್ಠ ಋಷಿಯ, ಮತೇ - ಅನುಮತಿಯಲ್ಲಿ, ಸ್ಥಿತಾಃ - ಇರುತಿರರಾಗಿ, ಪಾಣಿಭಿಃ - ಹಸ್ತಗಳಿಂದ, ಚತಸೃಣಾಂ- ಸೀತೋರ್ಮಿಳಾ ಮಾಂಡವೀ ಶ್ರುತಕೀರ್ತಿಯರೆಂಬ ನಾಲ್ವರ, ಪಾಣೀನ್-ಹಸ್ತಗಳನ್ನು, ಅಸ್ಪೃಶನ್- ಸ್ಪರ್ಶಮಾಡಿದರು. || ೩೪ || ರಘುಸತ್ತಮಾಃ - ರಘುವಂಶೋತ್ಪನ್ನರಲ್ಲಿ ಶ್ರೇಷ್ಠರಾದ, ಮಹಾ

---

ಪಾಣಿಗ್ರಹಣಮಂಗೈಯ್ಯುವವನಾಗು," ಎಂದು ಹೇಳಿ ತನ್ನ ತಮ್ಮನಾದ ಕುಶಧ್ವಜರಾಯನ ಮಗಳಾದ ಮಾಂಡವಿಯನ್ನು ಭರತನಿಗೆ ವಿವಾಹಮಾಡಿಕೊಟ್ಟು, ಶತ್ರುಘ್ನನನ್ನು ಕರೆದು, "ಎಲೈ ಮಹಾ ಬಾಹು ಬಲಶಾಲಿಯಾದ ಶತ್ರುಘ್ನನೆ ! ನನ್ನ ತಮ್ಮನಾದ ಕುಶಧ್ವಜರಾಯನ ದ್ವಿತೀಯ ಕುವರಿಯಾದ ಶ್ರುತಕೀರ್ತಿದೇವಿಯ ಪಾಣಿಗ್ರಹಣವನ್ನು ಮಾಡುವವನಾಗು" ಎಂದು ಹೇಳಿದನು. ||೨೯-೩೨|| ಇಂತು ನುಡಿದ ಜನಕ ಮಹೀಪಾಲನು ರಾಮಲಕ್ಷ್ಮಣಾದಿ ದಶರಥರಾಜನಂದನರನ್ನು ಕುರಿತು ಮತ್ತೂ ಹೀಗೆಂದನು."ಎಲೈ ಕಕುತ್ಸ್ಥವಂಶೋತ್ಪನ್ನರಾದ ರಾಜಕುವರರಿರಾ! ನೀವು ನಾಲ್ವರೂ ಸೌಜನ್ಯ,ದಾಕ್ಷಿಣ್ಯ,ಸಚ್ಚರಿತ್ರಾದಿ ಗುಣಗಳಿಂದ ಸಂಪನ್ನ ರಾದವರು,ಕಾಲವಿಳಂಬವಾಗದಿರಲಿ· ನೀವು ನಿಮ್ಮ ನಿಮ್ಮ ಭಾರ್ಯೆಯರನ್ನು ಧರ್ಮದಿಂದ

---

ಟಿ. (೧) ಇಲ್ಲಿ ಉದಕ ಪ್ರದಾನವು ಅರ್ಥಸಿದ್ಧವು ಜನಕರಾಯನು ಜ್ಯೇಷ್ಠನಾದುದರಿಂದ ಮಾಂಡವೀ ಶ್ರುತ ಕೀರ್ತಿಯರ ಪಾಣಿಗ್ರಹಣವನ್ನು ಮಾಡಿರೆಂದು ಭರತ ಶತ್ರುಘ್ನರಿಗೆ ಅಪ್ಪಣೆ ಮಾಡಿದನು ಉಳಿದ ಉದಕ ಪ್ರದಾನಾದಿ ಕಾರ್ಯವನ್ನು ಕುಶಧ್ವಜರಾಯನೇ ಮಾಡಿದನೆಂದು ಅಭಿಪ್ರಾಯವು. ಇದೇ ವಿಷಯದಲ್ಲಿ ಯಾಜ್ಞವಲ್ಕ್ಯರು ಹೀಗೆ ಹೇಳುತ್ತಾರೆ,

ಪಿತಾ ಪಿತಾಮಹೋ ಭ್ರಾತಾ ಸಕುಲ್ಯೋ ಜನನೀತಥಾ ||
ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃಪರಃ ||

ವಸಿಷ್ಠಸ್ಯ ಮತೇಸ್ಥಿತಾಃ ||೩೪|| ಅಗ್ನಿಂ ಪ್ರದಕ್ಷಿಣೀಕೃತ್ಯ ವೇದಿಂ ರಾಜಾನಮೇವ ಚ|| ಋಷೀಂಶ್ಚೈವ ಮಹಾತ್ಮಾನಸ್ಸಭಾರ್ಯಾ ರಘುಸತ್ತಮಾಃ||೩೫||ಯಥೋಕ್ತೇನ ತದಾ ಚಕ್ರುರ್ವಿವಾಹಂ ವಿಧಿಪೂರ್ವಕಂ || ಕಾಕುತ್ಸ್ಥೈಶ್ಚಗೃಹೀತೇಷು ಲಲಿತೇಷು ಚ ಪಾಣಿಷು ||೩೬ || ಪುಷ್ಪವೃಷ್ಟಿರ್ಮಹತ್ಯಾಸೀ ದಂತರಿಕ್ಷಾತ್ಸುಭಾಸ್ವರಾ || ದಿವ್ಯದುಂದುಭಿ ನಿರ್ಘೋಷೈರ್ಗೀತವಾದಿತ್ರ ನಿಸ್ವನೈಃ ||೩೭||

ತ್ಮಾನಃ - ಮಹಾನುಭಾವರಾದ ನಾಲ್ವರು, ಸಭಾರ್ಯಾಸ್ಸಂತಃ - ಹೆಂಡತಿಯರಿಂದೊಡಗೂಡಿದವರಾಗಿ, ಅಗ್ನಿಂ - (೧) ಅಗ್ನಿಯನ್ನು, ವೇದಿಂಚ - ವಿವಾಹ ವೇದಿಕೆಯನ್ನು, ರಾಜಾನಮೇವಚ-ಜನಕರಾಯನನ್ನೂ ಋಷೀಂಶ್ಚೈವ - ಋಷಿಗಳನ್ನೂ, ಪ್ರದಕ್ಷಿಣೀಕೃತ್ಯ - ಪ್ರದಕ್ಷಿಣ ಮಾಡಿ, ಯಥೋಕ್ತೇನ - ಶಾಸ್ತ್ರೋಕ್ತ ಪ್ರಕಾರದಿಂದ, ತದಾ - ಆಗ, ವಿಧಿಪೂರ್ವಕಂ - ವಿಧಾನಪುರಸ್ಸರವಾಗಿ, ವಿವಾಹಂ - ವಿವಾಹವನ್ನು, (೨) ಚಕ್ರುಃ - ಮಾಡಿದರು || ೩೬ || ಮಹತೀ- ದೊಡ್ಡದಾದ, ಸುಭಾಸ್ವರಾ - ಬಹಳ ಪ್ರಕಾಶವುಳ್ಳ, ಪುಷ್ಪವೃಷ್ಟಿಶ್ಚ - ಪುಷ್ಪವೃಷ್ಟಿಯೂ, ದಿವ್ಯದುಂದುಭಿನಿರ್ಘೋಷೈಃ - ದೇವತಾ ಸಂಬಂಧಿಯಾದ ಭೇರೀಧ್ವನಿಗಳಿಂದಲೂ, ಗೀತವಾದಿತ್ರನಿಸ್ವನೈಃ - ಗಾನಧ್ವನಿಗಳಿಂದಲೂ, ವಾದ್ಯಧ್ವನಿಗಳಿಂದಲೂ, ಅಭವತ್ - ಆಯಿತು, ರಘುಮುಖ್ಯಾನಾಂ - ರಘುವಂಶೋತ್ಪನ್ನರಲ್ಲಿ ಶ್ರೇಷ್ಠರಾದ ಈ ನಾಲ್ವರ, ವಿವಾಹೇ - ಕಲ್ಯಾಣೋತ್ಸವದಲ್ಲಿ, ಅಪ್ಸರಸ್ಸಂಘಾಃ ಅಪ್ಸರಸ್ತ್ರೀಯರ ಗುಂಪುಗಳು, ನನೃತುಃ - ನರ್ತನ ಮಾಡಿದರು. ಗಂಧರ್ವಾಶ್ಚ - ಗಂಧರ್ವರೂ, ಕಲಂ - ಮಧುರವಾಗಿ, ಜಗುಃ - ಗಾನಮಾಡಿದರು. ತತ್ - ಅದು, ಅದ್ಭುತಂ - ಆಶ್ಚರ್ಯವಾಗಿ, ಅದೃಶ್ಯತ - ಕಾಣಲ್ಪಟ್ಟಿತು, ಈದೃಶೇ-ಇಂತಹ, ತೂರ್ಯೋದ್ಘುಷ್ಟನಿನಾದಿತೇ,-ತೂರ್ಯ-

ಪರಿಪಾಲಿಸುವವರಾಗಿರಿ' ಇಂತು ನುಡಿದ ಜನಕರಾಯನ ಮಾತುಗಳನ್ನು ಕೇಳಿ ಶ್ರೀರಾಮಲಕ್ಷ್ಮಣಾದಿ ನಾಲ್ವರು ರಾಜನಂದನರೂ ವಸಿಷ್ಠಮಹರ್ಷಿಯಾಣತಿಯಂತೆ, ತಮ್ಮ ತಮ್ಮ ಭಾರ್ಯೆಯರ ಕರಗಳನ್ನು ಹಿಡಿದವರಾಗಿ, ಹೋಮಾಗ್ನಿಯನ್ನು ಪ್ರದಕ್ಷಿಣಮಾಡಿ, ಜನಕರಾಯನಿಗೂ, ವಸಿಷ್ಠ, ವಿಶ್ವಾಮಿತ್ರ, ಶತಾನಂದಾದಿ ಋಷಿವರೇಣ್ಯರಿಗೂ ಪ್ರದಕ್ಷಿಣಪೂರ್ವ ನಮಸ್ಕಾರಗಳನ್ನು ಮಾಡಿ, ಶಾಸ್ತ್ರೋಕ್ತವಿಧಿಯಿಂದ ವಿವಾಹ ಹೋಮವನ್ನು ಸಮಾಪ್ತಿಗೊಳಿಸಿ, ತಮ್ಮ ತಮ್ಮ ಸ್ತ್ರೀಯರೊಡಗೂಡಿ, ಅವರ ಕರಗಳನ್ನು ಪಿಡಿದವರಾದರು. ಆ ಸಮಯದಲ್ಲಿ ಅಂತರಿಕ್ಷದಿಂದ ಬಹಳವಾದ ಹೂಮಳೆಯು ಸುರಿಯಿತು, ದೇವತಾ ಸಂಬಂಧವಾದ ಗೀತವಾದಿತ್ರಾದಿ ವಾದ್ಯಧ್ವನಿಗಳಾದುವು. ಅಪ್ಸರೆಯರು ನರ್ತನಮಾಡಿದರು. ಗಂಧರ್ವರು ಗಾನ ಮಾಡಿದರು. ಇಂತಾಗಲು, ಆ ರಘುಶ್ರೇಷ್ಠರ ವೈವಾಹಿಕ ವೈಭವವು

ಟಿ. (೧) ವಸಿಷ್ಠಮಹರ್ಷಿಯು ಒಂದೇ ವೇದಿಕೆಯಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಹೋಮ ಮಾಡಿದನಾದುದರಿಂದ ರಾಮ ಲಕ್ಷ್ಮಣಾದಿ ನಾಲ್ವರೂ ತಮ್ಮ ಪತ್ನಿಯರಿಂದೊಡಗೂಡಿದವರಾಗಿ ಅದೇ ವೇದಿಕೆಯನ್ನೇ ಪ್ರದಕ್ಷಿಣಮಾಡಿದರೆಂಬ ಅರ್ಥವು ಬೋಧ್ಯವಾಗಬೇಕು. (ಗೋವಿಂದರಾಜೀಯ)

(೨) ರಾಮ ಲಕ್ಷ್ಮಣಾದಿ ನಾಲ್ವರೂ ಪ್ರತ್ಯೇಕ ಪ್ರತ್ಯೇಕವಾಗಿ ಪಾಣಿಗ್ರಹಣ ಹೋಮಮಾಡಿದರೆಂದು ಭಾವವು.

ನನೃತು ಶ್ಚಾಪ್ಸರ ಸ್ಸಂಘಾಃ ಗಂಧರ್ವಾಶ್ಚ ಜಗುಃ ಕಲಂ || ವಿವಾಹೇರಘು
ಮುಖ್ಯಾನಾಂ ತದದ್ಭುತ ಮದೃಶ್ಯತ || ೩೮ || ಈದೃಶೇ ವರ್ತಮಾನೇತು ತೂ
ರ್ಯೋದ್ಘುಷ್ಟ ನಿನಾದಿತೇ || ತ್ರಿರಗ್ನಿಂ ತೇ ಪರಿಕ್ರಮ್ಯ ಊಹುರ್ಭಾರ್ಯಾಂ
ಮಹೌಜಸಃ || ೩೯ || ಅಥೋಪಕಾರ್ಯಾಂ ಜಗ್ಮುಸ್ತೇ ಸಭಾರ್ಯಾ ರಘುನಂ
ದನಾಃ || ರಾಜಾಪ್ಯನುಯಯೌ ಪಶ್ಯನ್ ಸರ್ಷಿಸಂಘಸ್ಸಬಾಂಧವಃ || ೪೦ ||
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಸಪ್ತತಿತಮಸ್ಸರ್ಗಃ.

---

ನೃತ್ಯಗೀತವಾದ್ಯಗಳ, ಘುದ್ಘುಷ್ಟ - ಉದ್ಘೋಷಣೆಯಿಂದ, ನಿನಾದಿತೇ - ಪ್ರತಿಧ್ವನಿಸಲು, ವರ್ತಮಾ
ನೇಸತಿ - ನಡೆಯುತ್ತಿರಲು, ತೇಮಹೌಜಸಃ - ಮಹಾ ತೇಜಸ್ವಿಗಳಾದ ಆ ನಾಲ್ವರೂ, ತ್ರಿಃ - ತ್ರಿರಾ
ವೃತ್ತಿಯಾಗಿ, ಅಗ್ನಿಂ - ಅಗ್ನಿಯನ್ನು, ಪರಿಕ್ರಮ್ಯ ಪ್ರದಕ್ಷಿಣಮಾಡಿ, [ಭಾರ್ಯಾಇತಿಪಾಠಾಂತರಂ]
ಭಾರ್ಯಾಂ - ಪತ್ನಿಯರನ್ನು, ಊಹುಃ - ವಿವಾಹ ಮಾಡಿಕೊಂಡರು || ೩೯ || ಅಥ - ಬಳಿಕ,
ರಘುನಂದನಾಃ - ರಘುವಂಶದ ರಾಜರಿಗೆ ಆನಂದಕರರಾದ, ತೇ - ಆ ರಾಮ ಲಕ್ಷ್ಮಣ ಭರತ
ಶತ್ರುಘ್ನರು, ಸಭಾರ್ಯಾಃ - ಹೆಂಡತಿಯರಿಂದೊಡಗೂಡಿ, ಉಪಕಾರ್ಯಾಂ - ಪ್ರಾಸಾದವನ್ನು
ಕುರಿತು, ಜಗ್ಮುಃ - ತೆರಳಿದರು, ರಾಜಾಪಿ - ದಶರಥ ರಾಯನೂ, ಪಶ್ಯನ್ - ನೋಡುತ್ತ, ಸರ್ಷಿ
ಸಂಘಃ - ಋಷಿತಂಡಗಳಿಂದೊಡಗೂಡಿ, ಸಬಾಂಧವಃ - ಬಂಧುಸಮೇತನಾಗಿ, ಅನುಯಯೌ - ಅವ
ರನ್ನು ಅನುಸರಿಸಿದನು. || ೪೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಸಪ್ತತಿತಮಸ್ಸರ್ಗಃ.

---

ಅದ್ಭುತವೆನಿಸಿತು. ಈರೀತಿ ಗೀತವಾದಿತ್ರಾದಿಗಳ ಮಂಗಳನಾದವಾಗುತ್ತಿರಲು, ರಾಮ ಲಕ್ಷ್ಮಣಾದಿ ನಾಲ್ವರು ರಾಜಪುತ್ರರೂ, ತಮ್ಮ ತಮ್ಮ ಸ್ತ್ರೀಯರನ್ನು ವಿವಾಹ ಮಾಡಿ ಕೊಂಡು, ಯಜ್ಞೇಶ್ವರನನ್ನು ಮೂರುಸಲ ಪ್ರದಕ್ಷಿಣಮಾಡಿ ತಮ್ಮ ತಮ್ಮ ಅರಮನೆಗಳಿಗೆ ತೆರಳಿದರು. ಆಗ ದಶರಥರಾಯನು ಸಹ ಋಷಿಗಣಗಳಿಂದಲೂ, ಬಂಧುಗಳಿಂದಲೂ ಒಡಗೂಡಿ ಪತ್ನೀಸಮೇತರಾಗಿ ತೆರಳುತ್ತಿರುವ ರಾಮಲಕ್ಷ್ಮಣಾದಿ ಕುವರರನ್ನು ಹಿಂಬಾಲಿಸಿ ದವನಾದನು. ||೨೨-೪೦||

ಇಂತಿದು ಸೀತಾಕಲ್ಯಾಣ ವೃತ್ತಾಂತ ಕಥಾ ವಿಸ್ತರಣವೆಂಬ ಎಪ್ಪತ್ತಮೂರನೆಯ
ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಚತುಸ್ಸಪ್ತತಿತಮಸ್ಸರ್ಗಃ.

---

ಅಥರಾತ್ರ್ಯಾಂ ವ್ಯತೀತಾಯಾಂ ವಿಶ್ವಾಮಿತ್ರೋ ಮಹಾಮುನಿಃ ॥ ಆಪೃಷ್ಟ್ವಾತೌಚ ರಾಜಾನೌ ಜಗಾಮೋತ್ತರಪರ್ವತಂ॥(ಆಶೀರ್ಭಿಃ ಪೂರಯಿತ್ವಾ ಚ ಕುಮಾರಾಂಶ್ಚ ಸರಾಘವಾನ್) ॥೧॥ ವಿಶ್ವಾಮಿತ್ರೇ ಗತೇ ರಾಜಾ ವೈದೇಹಂ ಮಿಥಿಲಾಧಿಪಂ ॥ ಆಪೃಷ್ಟ್ವಾಥ ಜಗಾಮಾಶು ರಾಜಾ ದಶರಥಃ ಪುರೀಂ ॥೨॥ ಅಥರಾಜಾ ವಿದೇಹಾನಾಂ ದದೌ ಕನ್ಯಾಧನಂ ಬಹು ॥ ಗವಾಂ ಶತಸಹಸ್ರಾಣಿ ಬಹೂನಿ ಮಿಥಿಲೇಶ್ವರಃ ॥ ೩ ॥ ಕಂಬಳಾನಾಂಚ ಮುಖ್ಯಾನಾಂ ಕ್ಷೌಮ

---

ಅಥ - ಬಳಿಕ, ರಾತ್ರ್ಯಾಂ - ರಾತ್ರಿಯು, ವ್ಯತೀತಾಯಾಂ - ಕಳದು ಹೋಗಲು, ಮಹಾಮುನಿಃ - ಮಹರ್ಷಿಯಾದ, ವಿಶ್ವಾಮಿತ್ರಃ - ವಿಶ್ವಾಮಿತ್ರನು, ತೌಚರಾಜಾನೌ - ಆ ದಶರಥಜನಕರೆಂಬ ರಾಜರಿಬ್ಬರನ್ನು ಕುರಿತು, ಆಪೃಷ್ಟ್ವಾ - ಅನುಜ್ಞೆ ಕೇಳಿ, ಉತ್ತರಪರ್ವತಂ - ಉತ್ತರಪರ್ವತವನ್ನು ಕುರಿತು, ಜಗಾಮ - ತೆರಳಿದನು. ॥ ೧ ॥ ಅಥ-ಅನಂತರದಲ್ಲಿ, ದಶರಥಃ-ದಶರಥರಾಯನು, ವಿಶ್ವಾಮಿತ್ರೇ - ವಿಶ್ವಾಮಿತ್ರನು, ಗತೇಸತಿ - ತಪೋನಿಮಿತ್ತವಾಗಿ ಹೊರಟುಹೋಗಲು, ಮಿಥಿಲಾಧಿಪಂ - ಮಿಥಿಲಾ ಪಟ್ಟಣಕ್ಕೆ ಅಧಿಪತಿಯಾದ, ವೈದೇಹಂ-ಜನಕರಾಯನನ್ನು, ಆಪೃಷ್ಟ್ವಾ-ಕೇಳಿ, ಪುರೀಂ - ಪಟ್ಟಣವನ್ನು ಕುರಿತು, ಆಶು- ಜಾಗ್ರತೆಯಾಗಿ, ಜಗಾಮ - ತೆರಳಿದನು. ॥ ೨ ॥ ನರಾಧಿಪಃ - ಜನಕರಾಯನು, ಗಚ್ಛಂತಂ - ಪಯಣಹೋಗುತ್ತಿರುವ, ತಂರಾಜಾನಂತು - ಆ ದಶರಥನನ್ನು, ಅನ್ವಗಚ್ಛತ್ - ಅನುಸರಿಸಿ ತೆರಳಿದನು, ಅಥ - ಅನಂತರ, ವಿದೇಹಾನಾಂ - ವಿದೇಹದೇಶಗಳಿಗೆ, ರಾಜಾ - ಅರಸಾದ ಜನಕರಾಯನು, ಬಹು - ಬಹಳವಾದ, ಕನ್ಯಾಧನಂ - ಸ್ತ್ರೀಧನವನ್ನು, ದದೌ - ಕೊಟ್ಟನು. ॥ ೩ ॥ ಮಿಥಿಲೇಶ್ವರಃ - ಮಿಥಿಲಾಧಿಪತಿಯಾದ ಜನಕರಾಯನು, ಗವಾಂ - ಗೋವುಗಳ, ಬಹೂನಿ - ಅನೇಕಗಳಾದ, ಶತಸಹಸ್ರಾಣಿ-ಲಕ್ಷಗಳನ್ನೂ, ಮುಖ್ಯಾನಾಂ-

---

ಆ ಬಳಿಕ ಪ್ರಾತಃಕಾಲವಾಗಲು ಋಷಿಪುಂಗವನಾದ ವಿಶ್ವಾಮಿತ್ರನು ಜನಕ ಮತ್ತು ದಶರದರಾಯರನ್ನು ಕೇಳಿ ತನ್ನ ನಿವಾಸಸ್ಥಾನವಾದ ಹಿಮವತ್ಪರ್ವತವನ್ನು ಕುರಿತು ತೆರಳಿದನು. ಇಂತು ದಶರಥರಾಜನಂದನರನ್ನು ಆಶೀರ್ವದಿಸಿ, ವಿಶ್ವಾಮಿತ್ರಮುನೀಂದ್ರನು ಸ್ವತಪೋಸ್ಥಾನಕ್ಕೆ ತೆರಳಲು, ದಶರಥರಾಯನು ಮಿಥಿಲೇಶ್ವರನಾದ ಜನಕರಾಯನನ್ನು ಅನುಮತಿಯನ್ನು ಪಡೆದು ಅಯೋಧ್ಯಾಪಟ್ಟಣಕ್ಕೆ ಹೊರಟವನಾದನು. ಆಗಲಾ ಜನಕರಾಯನಾರಾಯನನ್ನನುಸರಿಸಿ ಹೊರಟವನಾದನು.ಆ ಸಮಯದಲ್ಲಿ ವಿದೇಹ ದೇಶಾಧೀಶನಾದ ಜನಕಭೂಪಾಲನು ತನ್ನ ಅಳಿಯಂದಿರಿಗೋಸುಗ ಬಹಳವಾದ ಕನ್ಯಾಧನವನ್ನು,ಲಕ್ಷಸಂಖ್ಯಾಕ

ಕೋಟ್ಯಂಬರಾಣಿಚ || ಹಸ್ತ್ಯಶ್ವ ರಥಪಾದಾತಂ ದಿವ್ಯರೂಪಂ ಸ್ವಲಂ ಕೃತಂ || ೪ || ದದೌ ಕನ್ಯಾಪಿತಾ ತಾಸಾಂ ದಾಸೀ ದಾಸಮನುತ್ತಮಂ || ಹಿರಣ್ಯಸ್ಯ ಸುವರ್ಣಸ್ಯ ಮುಕ್ತಾನಾಂ ವಿದ್ರುಮಸ್ಯಚ || ೫ || ದದೌ ಪರಮಸಂ ಹೃಷ್ಟಃ ಕನ್ಯಾಧನ ಮನುತ್ತಮಂ || ದತ್ವಾ ಬಹುಧನಂ ರಾಜಾ ಸಮನುಜ್ಞಾಪ್ಯ ಪಾರ್ಥಿವಂ || ೬ || ಪ್ರವಿವೇಶ ಸ್ವನಿಲಯಂ ಮಿಥಿಲಾಂ ಮಿಥಿಲೇಶ್ವರಃ || ರಾಜಾ ಪ್ಯಯೋಧ್ಯಾಧಿಪತಿ ಸ್ಸಹಪುತ್ರೈ ರ್ಮಹಾತ್ಮಭಿಃ || ೭ || ಋಷೀನ್ ಸರ್ವಾನ್ ಪುರಸ್ಕೃತ್ಯ ಜಗಾಮ ಸಬಲಾನುಗಃ || ಗಚ್ಛಂತಂ ತಂ ನರವ್ಯಾಘ್ರಂ ಸರ್ಷಿ

---

ಶ್ರೇಷ್ಠಗಳಾದ, ಕಂಬಳಾನಾಂ - ಕಂಬಳಿಗಳ, ಶತಸಹಸ್ರಾಣಿ - ಲಕ್ಷಗಳನ್ನೂ, ಕ್ಷೌಮಕೋಟ್ಯಂಬರಾಣಿಚ - ಕೋಟಿ ಸಂಖ್ಯಾಕವಾದ ಪಟ್ಟು ಮತ್ತು ಸಾಧಾರಣ ವಸ್ತ್ರಗಳನ್ನೂ, ದದೌ-ಕೊಟ್ಟನು. ||೪||ಕನ್ಯಾಪಿತಾ-ಸೀತೆಯೇ ಮೊದಲಾದಹೆಣ್ಣುಮಕ್ಕಳಿಗೆ ತಂದೆಯಾದ ಜನಕರಾಯನು, ದಿವ್ಯರೂಪಂ-ಮನೋಹರ ರೂಪವುಳ್ಳ, ಸ್ವಲಂಕೃತಂ-ಅಲಂಕರಿಸಲ್ಪಟ್ಟ, ಹಸ್ತ್ಯಶ್ವರಥಪಾದಾತಂ-ಆನೆ, ಕುದುರೆ, ರಥ, ಕಾಲಾಳುಗಳೆಂಬ ಬಲಗಳನ್ನೂ, ಅನುತ್ತಮಂ-ಸರ್ವೋತ್ತಮವಾದ, ದಾಸೀದಾಸಂ ನೂರುಜನ ದಾಸದಾಸಿಯರನ್ನೂ, ತಾಸಾಂ-ಆ ಕನ್ಯೆಯರಿಗೆ, ದದೌ ಕೊಟ್ಟವನಾದನು. ||೫|| ಹಿರಣ್ಯಸ್ಯ-ಚಿನ್ನದ, ಕೋಟಿಂ-ಕೋಟಿಯನ್ನೂ, ಸುವರ್ಣಸ್ಯ ಸಮಿಾಚೀನವಾದ ಬಣ್ಣವುಳ್ಳ ಬೆಳ್ಳೀನಾಣ್ಯದ, ಕೋಟಿಂ-ಕೋಟಿಯನ್ನು, ಮುಕ್ತಾನಾಂ-ಮುತ್ತುಗಳ, ವಿದ್ರುಮಸ್ಯಚ ಹವಳಗಳ, ಕೋಟಿಂ-ಕೋಟಿಯುನ್ನೂ, ಅನುತ್ತಮಂ - ಸರ್ವೋತ್ತಮವಾದ, ಕನ್ಯಾಧನಂ - ಸ್ತ್ರೀಧನವನ್ನೂ, ಪರಮಸಂಹೃಷ್ಟಃ - ಬಹಳ ಸಂತೋಷಗೊಂಡವನಾಗಿ, ದದೌ - ಕೊಟ್ಟನು || ೬ || ಮಿಥಿಲೇಶ್ವರಃ - ಮಿಥಿಲಾಧಿ ಪತಿಯಾದ, ರಾಜಾ - ಜನಕರಾಯನು, ಬಹುಧನಂ - ಬಹಳವಾದ ದ್ರವ್ಯವನ್ನು, ದತ್ವಾ-ಕೊಟ್ಟು, ಪಾರ್ಥಿವಂ - ದಶರಥ ರಾಯನನ್ನು, ಸಮನುಜ್ಞಾಪ್ಯ - ಅನುಜ್ಞೆಯನ್ನು ಕೇಳಿ, ಸ್ವನಿಲಯಂ-ತನಗೆ ಆವಾಸಸ್ಥಾನವಾದ, ಮಿಥಿಲಾಂ - ಮಿಥಿಲಾ ಪಟ್ಟಣವನ್ನು, ಪ್ರವಿವೇಶ - ಹೊಕ್ಕನು. || ೭ || ಅಯೋಧ್ಯಾಧಿಪತಿಃ - ಅಯೋಧ್ಯಾ ಪಟ್ಟಣಕ್ಕೆ ಒಡೆಯನಾದ, ರಾಜಾಪಿ - ದಶರಥರಾಯನೂ, ಸಬಲಾನುಗಃ - ಸೈನ್ಯದಿಂದಲೂ ಸೇವಕರಿಂದಲೂ ಒಡಗೂಡಿ, ಮಹಾತ್ಮಭಿಃ - ಮಹಾ ಧೈರ್ಯಶಾಲಿಗಳಾದ, ಪುತ್ರೈಸ್ಸಹ - ಮಕ್ಕಳೊಡನೆ, ಸರ್ವಾನ್ - ಸಮಸ್ತರಾದ, ಋಷೀನ್ - ವಸಿಷ್ಠಾದಿ ಋಷಿಗಳನ್ನು, ಪುರಸ್ಕೃತ್ಯ - ಮುಂದರಿಸಿಕೊಂಡು, ಜಗಾಮ - ತೆರಳಿದನು. || ೮ || ಸರ್ಷಿ

---

ವಾದ ಗೋಧನವನ್ನೂ,ಕೋಟ್ಯಾಂತರ ದಿವ್ಯಾಂಬರಗಳನ್ನೂ. ಕಂಬಳಿಗಳನ್ನೂ, ಮನೋಹರವಾದ ರೂಪುಳ್ಳುದಾಗಿಯೂ, ಸರ್ವಾಲಂಕಾರಭೂಷಿತವಾಗಿಯೂ ಇರುವ, ಆನೆ, ಕುದುರೆ, ರಥ, ಕಾಲಾಳುಗಳಿಂದಭಿರಂಜಿತವಾದ ಚತುರಂಗ ಬಲವನ್ನೂ, ದಾಸ, ದಾಸೀಜನರನ್ನೂ, ಬೆಳ್ಳಿ, ಭಂಗಾರದ ಕೋಟ್ಯಾರು ನಾಣ್ಯಗಳನ್ನೂ, ಮುಕ್ತಾಫಲಗಳನ್ನೂ, ಅಪಾರವಾದ ಧನವನ್ನೂ ಕೊಟ್ಟು ದಶರಥರಾಯನನ್ನನುಮೋದಿಸಿ ತನ್ನ ಪಟ್ಟಣಕ್ಕೆ ಹಿಂದಿರುಗಿದವನಾದನು. ||೧-೭|| ದಶರಥರಾಯನೂ ಸಹ,ತನ್ನ ಮಕ್ಕಳಿಂದೊಡಗೂಡಿದವನಾಗಿ, ಋಷಿಗಳನ್ನು ಮುಂದ

ಸಂಘಂ ಸರಾಘವಂ ‖ ೮ ‖ ಘೋರಾಃ ಸ್ಮ ಪಕ್ಷಿಣೋ ವಾಚೋ ವ್ಯಾಹರಂತಿ ತತಸ್ತತಃ ‖ ಭೌಮಾಶ್ಚೈವ ಮೃಗಾ ಸ್ಸರ್ವೇ ಗಚ್ಛಂತಿಸ್ಮ ಪ್ರದಕ್ಷಿಣಂ ‖೯‖ ತಾಙ್ದೃಷ್ಟ್ವಾ ರಾಜಶಾರ್ದೂಲೋ ವಸಿಷ್ಠಂ ಪರ್ಯಪೃಚ್ಛತ ‖ ಅಸೌಮ್ಯಾಃ ಪಕ್ಷಿಣೋ ಘೋರಾ ಮೃಗಾಶ್ಚಾಪಿ ಪ್ರದಕ್ಷಿಣಾಃ ‖ ೧೦ ‖ ಕಿಮಿದಂ ಹೃದಯೋತ್ಕಂಪಿ ಮನೋ ಮಮ ವಿಷೀದತಿ ‖ ರಾಜ್ಞೋ ದಶರಥಸ್ಯೈತಚ್ಛ್ರುತ್ವಾ ವಾಕ್ಯಂ ಮಹಾನೃಷಿಃ ‖ ೧೧ ‖ ಉವಾಚ ಮಧುರಾಂ ವಾಣೀಂ ಶ್ರೂಯತಾ ಮಸ್ಯ ಯತ್ಫಲಂ ‖ ಉಪಸ್ಥಿತಂ ಭಯಂ ಘೋರಂ ದಿವ್ಯಂ ಪಕ್ಷಿಮುಖಾ

---

ಸಂಘಂ - ಋಷಿಗಳ ಗುಂಪುಗಳಿಂದಲೂ, ಸರಾಘವಂ-ಶ್ರೀರಾಮನಿಂದೊಡಗೂಡಿಯೂ, ಗಚ್ಛಂತಂ-ಹೋಗುತಿರುವ, ನರವ್ಯಾಘ್ರಂ - ಪುರುಷಶ್ರೇಷ್ಠನಾದ, ತಂ - ಆ ದಶರಥ ರಾಯನನ್ನು ಕುರಿತು, ಘೋರಾಃ - ಭಯಂಕರಗಳಾದ, ಪಕ್ಷಿಣಃ - ಹಕ್ಕಿಗಳು, ತತಸ್ತತಃ - ಅಲ್ಲಲ್ಲಿ, ವ್ಯಾಹರಂತಿಸ್ಮ - ಅರಚುತಿದ್ದುವಷ್ಟೆ. ‖ ೯ ‖ ಭೌಮಾಶ್ಚ -ಭೂಮಿಯಲ್ಲಿರುವ, ಸರ್ವೇ-ಸಮಸ್ತಗಳಾದ,ಮೃಗಾಃ-ಮೃಗಗಳು, ಪ್ರದಕ್ಷಿಣಂ - ಸವ್ಯವಾಗಿ, ಗಚ್ಛಂತಿಸ್ಮ - ತೆರಳಿದವಷ್ಟೆ, ರಾಜಶಾರ್ದೂಲಃ - ರಾಜಶ್ರೇಷ್ಠನಾದ ದಶರಥ ರಾಯನು, ತಾನ್ - ಆ ಪಕ್ಷಿಗಳನ್ನು, ದೃಷ್ಟ್ವಾ - ಕಂಡು, ವಸಿಷ್ಠಂ - ವಸಿಷ್ಠ ಋಷಿಯನ್ನು, ಪರ್ಯಪೃಚ್ಛತ - ಕೇಳಿದನು. ‖ ೧೦ ‖ ಅಸೌಮ್ಯಾಃ - ಪ್ರಸನ್ನಗಳಲ್ಲದಿರುವ, ಪಕ್ಷಿಣಃ - ಹಕ್ಕಿಗಳು, ಘೋರಾಃ - ಕ್ರೂರಗಳಾದ, ಮೃಗಾಶ್ಚಾಪಿ - ಮೃಗಗಳೂ, ಪ್ರದಕ್ಷಿಣಾಃ - ಪ್ರದಕ್ಷಿಣಾಕಾರವಾಗಿ ಬಂದು, ಹೃದಯೋತ್ಕಂಪಿ-ಹೃದಯವನ್ನು ನಡುಗಿಸುತ್ತಿರುವ, ಇದಂ - ಇದು, ಕಿಂ - ಏನು, ಮಮ - ನನ್ನ, ಮನಃ - ಮನಸ್ಸು, ವ್ಯಷೀದತಿ - ವ್ಯಸನಗೊಂಡಿತು. ‖ ೧೧ ‖ ದಶರಥಸ್ಯರಾಜ್ಞಃ - ದಶರಥ ರಾಜನ, ಏತದ್ವಾಕ್ಯಂ - ಈ ಮಾತನ್ನು, ಶ್ರುತ್ವಾ - ಕೇಳಿ, ಮಹಾನ್ - ಶ್ರೇಷ್ಠನಾದ, ಋಷಿಃ - ವಸಿಷ್ಠ ಋಷಿಯು, ಅಸ್ಯ - ಶುಭಾಶುಭರೂಪವಾದ ಈ ನಿಮಿತ್ತಕ್ಕೆ, ಯತ್ - ಯಾವದು, ಫಲಂ - ಫಲವೋ, ತತ್ - ಅದು, ಶ್ರೂಯತಾಂ - ಕೇಳಲ್ಪಡಲಿ, ಇತಿ - ಇಂತೆಂದು, ಮಧುರಾಂ - ಮನೋಹರವಾದ, ವಾಣೀಂ - ವಾಕ್ಯವನ್ನು, ಉವಾಚ - ಹೇಳಿದನು. ‖ ೧೨ ‖ ಪಕ್ಷಿಮುಖಾತ್ - ಪಕ್ಷಿಮುಖದಿಂದ, ಚ್ಯುತಂ-

---

ರಿಸಿಕೊಂಡು ಸೈನ್ಯಸಮೇತನಾಗಿ ಹೊರಟನು. ಈರೀತಿ ದಶರಥರಾಯನು ರಾಮಲಕ್ಷ್ಮಣಾದಿಗಳಿಂದಲೂ, ಋಷಿಗಣಳಿಂದಲೂ ಒಡಗೂಡಿ ಮುಂಬರಿಯುತ್ತಿರಲು, ಅಲ್ಲಲ್ಲಿ ಪಕ್ಷಿಗಳು ಕಠೋರವಾದ ಧ್ವನಿಯನ್ನು ಮಾಡುತ್ತಿದ್ದವು. ಭೂಮಿಯಲ್ಲಿ ಕ್ರೂರಮೃಗಗಳು ಆ ರಾಯನ ಪರಿವಾರದವರೆಲ್ಲರಿಗೂ ಪ್ರದಕ್ಷಿಣಾಕಾರವಾಗಿ ಹೋಗುತ್ತಿದ್ದುವು. ಈ ರೀತಿಯಾದ ಶುಭಾಶುಭ ಶಕುನಗಳನ್ನು ನೋಡಿ, ರಾಜಶ್ರೇಷ್ಠನಾದ ದಶರಥರಾಯನು ವಸಿಷ್ಠಮುನಿಯನ್ನು ಕುರಿತು, "ಮುನಿಪುಂಗವ! ಪಕ್ಷಿಗಳಾದರೋ ಘೋರವಾಗಿ ಅರಚುತ್ತ ಅಪಶಕುನವನ್ನು ಸೂಚಿಸುತ್ತಿರುವುವು. ಈ ಕ್ರೂರಮೃಗಗಳಾದರೋ ಪ್ರದಕ್ಷಿಣಾಕಾರವಾಗಿ ಹೋಗುತ್ತ ಶುಭಶಕುನವನ್ನು ತೋರುತ್ತಿರುವುದು. ಎದೆನಡುಗಿಸುವ ಈ ಶುಭಾಶುಭ ಶಕುನಗಳ ಫಲವೇ

ಚ್ಛ್ರುತಂ ||೧೨|| ಮೃಗಾಃ ಪ್ರಶಮಯಂತ್ಯೇತೇ ಸಂತಾಪಸ್ತ್ಯಜ್ಯತಾಮಯಂ || ತೇಷಾಂ ಸಂವದತಾಂ ತತ್ರ ವಾಯುಃ ಪ್ರಾದುರ್ಬಭೂವಹ || ೧೩ || ಕಂಪಯನ್ ಪೃಥಿವೀಂ ಸರ್ವಾಂ ಪಾತಯಂಶ್ಚ ದ್ರುಮಾನ್ ಶುಭಾನ್ || ತಮಸಾ ಸಂವೃತಸ್ಸೂರ್ಯಸ್ಸರ್ವಾನಪ್ರಬಭುರ್ದಿಶಃ ||೧೪|| ಭಸ್ಮನಾಚಾವೃತಂ ಸರ್ವಂ ಸಂಮೂಢಮಿವ ತದ್ಬಲಂ || ವಸಿಷ್ಠಶ್ಚರ್ಷಯಶ್ಚಾನ್ಯೇ ರಾಜಾಚ ಸಸುತಸ್ತದಾ ||೧೫|| ಸಸಂಜ್ಞಾ ಇವ ತತ್ರಾಸನ್ ಸರ್ವಮನ್ಯದ್ವಿಚೇತನಂ || ತಸ್ಮಿಂಸ್ತಮಸಿ ಘೋರೇತು ಭಸ್ಮಚ್ಛನ್ನೇವ ಸಾಚಮೂಃ || ೧೬ || ದದರ್ಶ ಭೀಮ

---

ಸೂಚಿತವಾದ, ಉಪಸ್ಥಿತಂ - ಪ್ರಾಪ್ತವಾದ, ಘೋರಂ - ಭಯಂಕರವಾದ, ದಿವ್ಯಂ - ದೇವತಾಸಂಬಂಧವಾದ, ಭಯಂ - ಭಯವನ್ನು, ಏತೇಮೃಗಾಃ - ಈ ಮೃಗಗಳು, ಪ್ರಶಮಯಂತಿ - ಶಾಂತಗೊಳಿಸುತ್ತವೆ, ಅಯಂಸಂತಾಪಃ - ಈ ಸಂತಾಪವು, ತ್ಯಜ್ಯತಾಂ - ಬಿಡಲ್ಪಡಲಿ. ||೧೨|| ತತ್ರ- ಆ ಮಾರ್ಗದಲ್ಲಿ, ತೇಷಾಂ - ಆ ವಸಿಷ್ಠ ದಶರಥ ರಾಜಾದಿಗಳು, ಸಂವದತಾಂ - ಸಂವಾದ ಮಾಡುತ್ತಿರಲು, ವಾಯುಃ - ವಾಯುವು, ಸರ್ವಾಂ - ಸಮಸ್ತವಾದ, ಪೃಥಿವೀಂ-ನೆಲವನ್ನು, ಕಂಪಯನ್- ಕಂಪಿಸುತ್ತ, ಶುಭಾನ್ - ಶುಭಕರವಾದ, ದ್ರುಮಾನ್ - ಗಿಡಗಳನ್ನು, ಪಾತಯನ್ - ಬೀಳಿಸುತ್ತ, ಪ್ರಾದುರ್ಭಭೂವಹ ಆವಿರ್ಭವಿಸಿತು ||೧೩|| ಸೂರ್ಯಃ - ಸೂರ್ಯನು, ತಮಸಾ-ಅಂಧಕಾರದಿಂದ, ಸಂವೃತಃ - ಆಚ್ಛಾದಿತನಾದನು, ಸರ್ವಾಃ - ಸಮಸ್ತಗಳಾದ, ದಿಶಃ - ದಿಕ್ಕುಗಳು, ನಪ್ರಬಭುಃ - ಪ್ರಕಾಶಿಸಲಿಲ್ಲವು, ಭಸ್ಮನಾಚ - ಬೂದಿಯಿಂದಲೂ, ಆವೃತಂ - ಮುಚ್ಚಲ್ಪಟ್ಟ, ಸರ್ವಂ - ಸಮಸ್ತವಾದ, ತದ್ಬಲಂ - ಆ ಬಲವು, ಸಮ್ಮೂಢಮಿವ - ಇತಿಕರ್ತವ್ಯತಾ ಮೌಢ್ಯವುಳ್ಳದ್ದಾಗಿ, ಬಭೂವ - ಆಯಿತು. ||೧೪|| ವಸಿಷ್ಠಶ್ಚ - ವಸಿಷ್ಠ ಋಷಿಯೂ, ಅನ್ಯೇ-ಮತ್ತೆ ಕೆಲವರಾದ, ಋಷಯಶ್ಚ - ಋಷಿಗಳೂ, ಸಸುತಃ - ಕುವರರಿಂದೊಡಗೂಡಿದ, ರಾಜಾಚ - ದಶರಥರಾಯನೂ, ತದಾ - ಆಗ, ಸಸಂಜ್ಞಾ ಇವ - ಪ್ರಜ್ಞೆಯಿಂದ ಕೂಡಿದವರಂತೆ, ತತ್ರ-ಅಲ್ಲಿ, ಆಸನ್ - ಇದ್ದರು, ಅನ್ಯತ್ - ಇತರ, ಸರ್ವಂ - ಸಮಸ್ತಸೈನ್ಯವೂ, ವಿಚೇತನಂ - ಪ್ರಜ್ಞಾಶೂನ್ಯವಾದುದು, ಅಭವತ್ - ಆಯಿತು. ||೧೫|| ಘೋರ - ಭಯಂಕರವಾದ, ತಸ್ಮಿನ್ತಮಸಿ - ಆ ಗಾಢಾಂಧಕಾರದಲ್ಲಿ, ಭಸ್ಮಚ್ಛನ್ನೇವ - ಬೂದಿಯಿಂದ ಮುಚ್ಚಲ್ಪಟ್ಟಂತಿರುವ, ಸಾಚಮೂಃ - ಆ ಸೈನ್ಯವು, ಭೀಮಸಂಕಾಶಂ - ಯಮನಿಗೆ ಸಮಾನನಾದ, ಜಟಾಮಂಡಲಧಾರಿಣಂ-ಜಟೆಗಳ ಗುಂಪು

---

ನಿರಬಹುದೆಂದು ನನ್ನ ಮನಸ್ಸು ಕಾತುರಗೊಂಡಿರುವುದು" ಎಂದನು.||೮-೧೧||ಇಂತು ನುಡಿದ ದಶರಥರಾಜನ ನುಡಿಗಳನ್ನು ಕೇಳಿದ ವಸಿಷ್ಠಋಷಿಯಾತನನ್ನು ಕುರಿತು, "ಎಲೈ ರಾಯನೆ! ಇದರ ಫಲವನ್ನು ಹೇಳುತ್ತೇನೆ ಕೇಳು, ಅಂತರಿಕ್ಷದಲ್ಲಿ ಸಂಚರಿಸುವ ಪಕ್ಷಿಗಳ ಘೋರಾರಾವದಿಂದ ಭಯವು ಸನ್ನಿಹಿತವಾಗುವುದು. ಆದರೆ ಪ್ರದಕ್ಷಿಣಾಕಾರವಾಗಿ ಸಂಚರಿಸುತ್ತಿರುವ ಈ ಮೃಗಗಳು ಆ ಭಯವನ್ನು ಹೋಗಲಾಡಿಸುತ್ತವೆ, ಹೆದರಬೇಡ," ಎಂದು ಮೃದುಮಧುರವಾಗಿ ನುಡಿದನು. ಹೀಗೆ ದಶರಥರಾಜನೂ, ವಸಿಷ್ಠಮಹರ್ಷಿಯೂ ಮಾತನಾಡುತ್ತಿರಲು ಚಂಡಮಾರುತವೆದ್ದು, ಭೂಮಿಯನ್ನು ನಡುಗಿಸುತ್ತಲೂ, ಫಲಭರಿತವಾದ ವೃಕ್ಷಗಳನ್ನು

ಕಾಶಂ ಜಟಾಮಂಡಲ ಧಾರಿಣಂ ॥ ಭಾರ್ಗವಂ ಜಾಮದಗ್ನ್ಯಂ ತಂರಾಜ ರಾಜ ವಿಮರ್ದಿನಂ ॥೧೭॥ ಕೈಲಾಸಮಿವ ದುರ್ಧರ್ಷಂ ಕಾಲಾಗ್ನಿಮಿವ ದುಸ್ಸಹಂ ॥ ಜ್ವಲಂತಮಿವತೇಜೋಭಿರ್ದುರ್ನಿರೀಕ್ಷ್ಯಂ ಪೃಥಗ್ಜನೈಃ ॥ ೧೮ ॥ ಸ್ಕಂಧೇ ಚಾಸಜ್ಯ ಪರಶುಂ ಧನುರ್ವಿದ್ಯುದ್ಗಣೋಪಮಂ ॥ ಪ್ರಗೃಹ್ಯ ಶರಮುಖ್ಯಂಚ ತ್ರಿಪುರಘ್ನಂ ಯಥಾಶಿವಂ ॥ ೧೯ ॥ ತಂದೃಷ್ಟ್ವಾ ಭೀಮಸಂಕಾಶಂ ಜ್ವಲಂತಮಿವ ಪಾವಕಂ ॥ ವಸಿಷ್ಠಪ್ರಮುಖಾ ವಿಪ್ರಾ ಜಪಹೋಮ ಪರಾಯಣಾಃ ॥ ೨೦ ॥ ಸಂಗತಾ ಮುನಯಸ್ಸರ್ವೇ ಸಂಜಜಲ್ಪು ರಥೋಮಿಥಃ॥

---

ಗಳನ್ನು ಧರಿಸಿರುವ, ಕೈಲಾಸಮಿವ - ಕೈಲಾಸದಂತೆ, ದುರ್ಧರ್ಷಂ - ತಿರಸ್ಕರಿಸಲಸಾಧ್ಯವಾದ, ಕಾಲಾಗ್ನಿಮಿವ - ಪ್ರಳಯಾಗ್ನಿಯಂತೆ, ದುಸ್ಸಹಂ - ಸಹಿಸಲಸಾಧ್ಯನಾದ, ತೇಜೋಭಿಃ – ತೇಜಸ್ಸುಗಳಿಂದ, ಜ್ವಲಂತಮಿವ - ಪ್ರಜ್ವಲಿಸುತ್ತಿರುವವನಂತಿರುವ, ಪೃಥಗ್ಜನೈಃ - ಪಾಮರಜನರಿಂದ, ದುರ್ನಿರೀಕ್ಷ್ಯಂ - ನೋಡಲುಸದಳನಾದ, ಸ್ಕಂಧೇಚ - ಹೆಗಲಿನಲ್ಲಿ, ಪರಶುಂ-ಗಂಡಕೊಡಲಿಯನ್ನೂ, ವಿದ್ಯುದ್ಗಣೋಪಮಂ - ಮಿಂಚುಗಳ ಗುಂಪಿಗೆ ಸಮಾನವಾದ, ಧನುಶ್ಚ - ಧನುಸ್ಸನ್ನೂ, ಆಸಜ್ಯ-ಇರಿಸಿಕೊಂಡು, ಶರಮುಖ್ಯಂಚ - ಶ್ರೇಷ್ಠವಾದ ಬಾಣವನ್ನೂ, ಪ್ರಗೃಹ್ಯ- ಕೈಯ್ಯಲ್ಲಿ ಹಿಡಿದು, ತ್ರಿಪುರಘ್ನಂ - ತ್ರಿಪುರಾಸುರ ಸಂಹಾರಕನಾದ, ಶಿವಂಯಥಾ - ಈಶ್ವರನಂತಿರುವ, ರಾಜರಾಜವಿಮರ್ದಿನಃ - ರಾಜಾಧಿರಾಜಸಂಹಾರಕನಾದ, ಜಾಮದಗ್ನ್ಯಂ - ಜಮದಗ್ನಿ ಋಷಿಯ ಕುವರನಾದ ಭಾರ್ಗವಂ - ಭೃಗುವಂಶೋತ್ಪನ್ನನಾದ, ತಂ - ಆ ಪ್ರಸಿದ್ಧನಾದ ಪರಶುರಾಮನನ್ನು, ದದರ್ಶ - ಕಂಡನು. ॥ ೧೭-೧೯ ॥ ಭೀಮಸಂಕಾಶಂ- ಅತಿಭಯಂಕರನಾದ, ಜ್ವಲಂತಂ ಪ್ರಜ್ವಲಿಸುವ, ಪಾವಕಮಿವ - ಅಗ್ನಿಯಂತಿರುವ, ತಂ - ಆ ಪರಶುರಾಮನನ್ನು, ದೃಷ್ಟ್ವಾ-ಕಂಡು, ವಸಿಷ್ಠಪ್ರಮುಖಾಃ-ವಸಿಷ್ಠರೇಮೊದಲಾದ, ಜಪಹೋಮಪರಾಯಣಾಃ – ಜಪದಲ್ಲಿಯೂ ಹೋಮದಲ್ಲಿಯೂ ಆಸಕ್ತರಾದ, ವಿಪ್ರಾಃಸರ್ವೇ - ಬ್ರಾಹ್ಮಣರೆಲ್ಲರೂ, ಮುನಯಃ - ಋಷಿಗಳೂ, ಸಂಗತಾಃ- ಕೂಡಿ, ಅಥ-ಅನಂತರದಲ್ಲಿ, ಮಿಥಃ - ಅನ್ಯೋನ್ಯವಾಗಿ, ಸಂಜಜಲ್ಪುಃ - ಮಾತನಾಡಿಕೊಂಡರು.

---

ಭೂಮಿಗ ಕೆಡಹುತ್ತಲೂ ಬೀಳತೊಡಗಿತು, ಸೂರ್ಯದೇವನು ಕತ್ತಲೆಯಿಂದಾವೃತನಾದನು. ದಿಕ್ಕುಗಳು ಪ್ರಕಾಶಿಸದೆ ತಮಸ್ಸಿನಿಂದಾವೃತವಾದುವು. ದಶರಥರಾಯನ ಸೈನ್ಯವೆಲ್ಲವೂ ಧೂಳಿನಿಂದಾವೃತವಾಗಿ ಭ್ರಾಂತವಾಗಿ ಹೋಯಿತು. ವಸಿಷ್ಠಋಷಿಯೂ, ಇತರ ಮುನಿವರೇಣ್ಯರೂ, ರಾಮಲಕ್ಷ್ಮಣರಿಂದೊಡಗೂಡಿದ ದಶರಥರಾಯನೂ ಸಂಜ್ಞಾಭರಿತರಾಗಿಯೇ ಇದ್ದರು. ಉಳಿದವರೆಲ್ಲರೂ ಪ್ರಜ್ಞೆತಪ್ಪಿದವರಾದರು. ॥ ೧೧ ೧೬ ॥ ಹೀಗೆ ಎಲ್ಲೆಲ್ಲಿಯೂ ಕತ್ತಲೆಯು ತುಂಬಿಕೊಂಡು, ಸೈನ್ಯವೆಲ್ಲವೂ ಧೂಳಿನಿಂದಾವೃತವಾದುದಾಗಲು, ದಶರಥರಾಯನು ಮಹಾಪರಾಕ್ರಮಶಾಲಿಯೂ, ಜಟಾಮಂಡಲ ಧಾರಿಯೂ, ಕೈಲಾಸ ಪರ್ವತದಂತೆ ಎದುರಿಸಲುಸದಳನೂ, ಪ್ರಳಯಾಗ್ನಿಯಂತೆ ಸಹಿಸಲಸಾಧ್ಯನಾದವನೂ, ತೇಜೋರಾಶಿಗಳಿಂದ ಪ್ರಜ್ವಲಿಸುತ್ತ ಸಾಮಾನ್ಯಜನರಿಗೆ ದುರ್ನಿರೀಕ್ಷ್ಯನಾಗಿಯೂ,ಹೆಗಲಿನಲ್ಲಿ ಕೊಡಲಿಯನ್ನು ಧರಿಸಿದವನೂ, ಮಿಂಚುಬಳ್ಳಿ ಸಮೂಹದಂತಿರುವ ಧನುಸ್ಸನ್ನೆ ಪಿಡಿದವನೂ

ಕಚ್ಚಿತ್ಪಿತೃವಧಾಮರ್ಷೀ ಕ್ಷತ್ರಂ ನೋತ್ಸಾದಯಿಷ್ಯತಿ ||೨೦|| ಪೂರ್ವಂ ಕ್ಷತ್ರವಧಂ ಕೃತ್ವಾ ಗತಮನ್ಯುರ್ಗತಜ್ವರಃ || ಕ್ಷತ್ರಸ್ಯೋತ್ಸಾದನಂ ಭೂಯೋ ನಖಲ್ವಸ್ಯ ಚಿಕೀರ್ಷಿತಂ ||೨೨|| ಏವಮುಕ್ತ್ವಾರ್ಘ್ಯಮಾದಾಯ ಭಾರ್ಗವಂ ಭೀಮದರ್ಶನಂ|| ಋಷಯೋ ರಾಮರಾಮೇತಿ ವಚೋ ಮಧುರಮಬ್ರುವನ್ ||೨೩|| ಪ್ರತಿಗೃಹ್ಯ ತು ತಾಂಪೂಜಾ ಮೃಷಿದತ್ತಾಂ ಪ್ರತಾಪವಾನ್ || ರಾಮಂ ದಾಶರಥಿಂ ರಾಮೋ ಜಾಮದಗ್ನ್ಯೋಽಭ್ಯಭಾಷತ || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ಸಪ್ತತಿತಮಸ್ಸರ್ಗಃ

---

ಪಿತೃವಧಾಮರ್ಷೀ - ತಂದೆಯ ಸಂಹಾರದಿಂದ ಕೋಪಿಷ್ಠನಾಗಿ, ಕ್ಷತ್ರಂ - ರಾಜರನ್ನು, ನೋತ್ಸಾದಯಿಷ್ಯತಿಕಚ್ಚಿತ್'-ಮೂಲೋತ್ಪಾಟನಮಾಡಲಿಲ್ಲವೇ,||೨೦-೨೧|| ಪೂರ್ವಂ-ಮೊದಲು, ಕ್ಷತ್ರವಧಂ-ರಾಜಸಂಹಾರವನ್ನು, ಕೃತ್ವಾ - ಮಾಡಿ, ಗತಮನ್ಯುಃ - ಗತಕೋಪನಾಗಿ, ಗತಜ್ವರಃ - ಸಂತಾಪವಿಲ್ಲದವನಾದನು. ಕ್ಷತ್ರಸ್ಯ - ಕ್ಷತ್ರಿಯರ, ಉತ್ಸಾದನಂ - ಮೂಲೋತ್ಪಾಟನವು, ಅಸ್ಯ - ಈ ಪರಶುರಾಮನಿಗೆ, ಭೂಯಃ - ಮತ್ತು, ಚಿಕೀರ್ಷಿತಂ- ಮಾಡುವದಕ್ಕೆ ಇಚ್ಛಾವಿಷಯವಾದುದು, ನ-ಅಲ್ಲವು, || ೨೨ || ಏವಂ - ಹೀಗೆ, ಉಕ್ತ್ವಾ - ಹೇಳಿ, ಅರ್ಘ್ಯಂ - ಪೂಜಾದ್ರವ್ಯವನ್ನು, ಆದಾಯ - ತೆಗದುಕೊಂಡು, ಋಷಯಃ - ಋಷಿಗಳು, ಭೀಮದರ್ಶನಂ - ಕ್ರೂರದೃಷ್ಟಿಯುಳ್ಳ, ಭಾರ್ಗವಂ - ಪರಶುರಾಮನನ್ನು ಕುರಿತು, ರಾಮರಾಮೇತಿ - ರಾಮರಾಮಯೆಂದು, ಮಧುರಂ - ಮನೋಹರವಾದ, ವಚಃ - ವಾಕ್ಯವನ್ನು, ಅಬ್ರುವನ್ - ನುಡಿದರು. || ೨೩ || ಪ್ರತಾಪವಾನ್-ಪರಾಕ್ರಮಶಾಲಿಯಾದ, ಜಾಮದಗ್ನ್ಯಃ - ಜಮದಗ್ನಿ ಋಷಿಯ ಕುಮಾರನಾದ, ರಾಮಃ - ಪರಶುರಾಮನು, ಋಷಿದತ್ತಾಂ - ಋಷಿಗಳಿಂದ ಕೊಡಲ್ಪಟ್ಟ, ತಾಂಪೂಜಾಂ - ಆ ಸತ್ಕಾರವನ್ನು, ಪ್ರತಿಗೃಹ್ಯತು - ಪರಿಗ್ರಹಿಸಿ, ದಾಶರಥಿಂ - ದಶರಥ ಕುವರನಾದ, ರಾಮಂ - ಶ್ರೀರಾಮನನ್ನು ಕುರಿತು, ಅಭ್ಯಭಾಷತ - ಮಾತನಾಡಿದನು. || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ಸಪ್ತತಿತಮಸ್ಸರ್ಗಃ

---

ತ್ರಿಪುರಾರಿಯಾದ ಪರಶಿವನಂತಿರುವವನೂ, ರಾಜಾಧಿರಾಜರನ್ನು ಮರ್ದನಂಗೈದವನೂ ಆದ ಪರಶುರಾಮನನ್ನು ಕಂಡವನಾದನು. || ೧೭-೧೯ || ಇಂತು ಅತ್ಯಂತ ಪರಾಕ್ರಮಶಾಲಿಯೂ ಅಗ್ನಿಯಂತೆ ಪ್ರಜ್ವಲಿಸುತ್ತಿರುವವನೂ ಆದ ಪರಶುರಾಮನನ್ನು ಕಂಡು, ವಸಿಷ್ಠನೇ ಮೊದಲಾದ ಋಷಿಪುಂಗವರೆಲ್ಲರೂ "ಹಿಂದೆ ಕಾರ್ತವೀರ್ಯಾರ್ಜುನನು ಈತನ ತಂದೆಯಾದ ಜಮದಗ್ನಿಯನ್ನು ಸಂಹರಿಸಲು, ಆ ರೋಷದಿಂದ ಕ್ಷತ್ರಿಯ ವಧೆಯಂಗೈದು ಶಾಂತವಾದ ಕೋಪವುಳ್ಳವನೂ, ಕಳೆದುಹೊದ ಸಂತಾಪವುಳ್ಳವನೂ ಆದ ಈ ಪರಶುರಾಮನೂ ಮತ್ತೂ ಕ್ಷತ್ರವಧೆಯನ್ನು ಮಾಡಲಾರನಷ್ಟೆ" ಎಂದು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡು, ಅರ್ಘ್ಯಪಾದ್ಯಾದಿಗಳಿಂದೊಡಗೂಡಿ ಭೀಮ ದರ್ಶನನಾದ ಆ ಪರಶುರಾಮನ ಬಳಿ ಸಾರಿ "ರಾಮ ರಾಮ" ಎಂಬ ಮೃದುಮಧುರವಾದ ನುಡಿಗಳನ್ನಾಡಿದರು. || ೨೦-೨೩ || ಮಹಾಪ್ರತಾಪವಂತನಾದ ಪರಶುರಾಮನು, ಋಷಿದತ್ತವಾದ ಅರ್ಘ್ಯಾದಿಗಳನ್ನು ಸ್ವೀಕರಿಸಿದವನಾಗಿ, ಶ್ರೀರಾಮಮೂರ್ತಿಯನ್ನು ಕುರಿತು ಹೀಗೆ ನುಡಿದನು. ||೨೪||

ಇಂತಿದು ಪರಶುರಾಮಾಗಮನ ವೃತ್ತಾಂತ ವರ್ಣನವೆಂಬ
ಎಪ್ಪತ್ತನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಪಂಚಸಪ್ತತಿತಮಸ್ಸರ್ಗಃ.

---

ರಾಮ ದಾಶರಥೇ ರಾಮ ವೀರ್ಯಂ ತೇ ಶ್ರೂಯತೇಽದ್ಭುತಂ || ಧನು
ಷೋ ಭೇದನಂಚೈವ ನಿಖಿಲೇನ ಮಯಾಶ್ರುತಂ ||೧|| ತದದ್ಭುತ ಮಚಿಂ
ತ್ಯಂಚ ಭೇದನಂ ಧನುಷಸ್ತ್ವಯಾ || ತಚ್ಛ್ರುತ್ವಾ ಹಮನುಪ್ರಾಪ್ತೋ ಧನು
ರ್ಗೃಹ್ಯಾಪರಂ ಶುಭಂ ||೨|| ತದಿದಂ ಘೋರಸಂಕಾಶಂ ಜಾಮದಗ್ನ್ಯಂ
ಮಹದ್ಧನುಃ || ಪೂರಯಸ್ವ ಶರೇಣೈವ ಸ್ವಬಲಂ ದರ್ಶಯಸ್ವಚ ||೩|| ತದ
ಹಂ ತೇ ಬಲಂ ದೃಷ್ಟ್ವಾ ಧನುಷೋಽಸ್ಯ ಪ್ರಪೂರಣೇ || ದ್ವಂದ್ವಯುದ್ಧಂ ಪ್ರದಾ

---

ಹೇರಾಮ - ಎಲೈ ಶ್ರೀರಾಮನೇ, ಹೇದಾಶರಥೇಃ - ಎಲೈ ದಶರಥನ ಮಗನೇ, ತೇ-ನಿನ್ನ, ವೀರ್ಯಂ - ಪರಾಕ್ರಮವು, ಅದ್ಭುತಂ - ಆಶ್ಚರ್ಯಕರವಾಗಿ, ಶ್ರೂಯತೇ - ಕೇಳಲ್ಪಡುತ್ತದೆ, ಧನುಷಃ - ಧನುಸ್ಸಿನ, ಭೇದನಂಚೈವ - ಭಂಗವೂ ಕೂಡ, ನಿಖಿಲೇನ - ಯಾವತ್ತು, ಮಯಾ - ನನ್ನಿಂದ, ಶ್ರುತಂ - ಕೇಳಲ್ಪಟ್ಟಿತು. ||೧|| ಅದ್ಭುತಂ - ಆಶ್ಚರ್ಯಕರವಾದ, ಧನುಷಃಭೇದನಂ- ಧನುಸ್ಸಿನ ಭಂಗವು, ತ್ವಯಾ - ನಿನ್ನಿಂದ, ಅಚಿಂತ್ಯಂಚ - ಚಿಂತಿಸಲಸಾಧ್ಯವಾಗಿರುವುದು, ತತ್ - ಆ ಧನುರ್ಭಂಗವನ್ನು, ಶ್ರುತ್ವಾ - ಕೇಳಿ, ಅಹಂ - ನಾನು, ಅಪರಂ - ಮತ್ತೊಂದಾದ, (ಯದ್ವಾ ಅಪರಂ-ಶ್ರೇಷ್ಠವಾದ,) ಶುಭಂ - ಶುಭಕರವಾದ, ಧನುಃ - ಧನುಸ್ಸನ್ನು, ಗೃಹ್ಯ-ತೆಗೆದುಕೊಂಡು, ಅನುಪ್ರಾಪ್ತಃ - ಬಂದಿರುವೆನು. ||೨|| ತದಿದಂ - ಆಈ, ಘೋರಸಂಕಾಶಂ - ಅತಿ ಕ್ರೂರವಾದ, ಜಾಮದಗ್ನ್ಯಂ - ಜಮದಗ್ನಿ ಪುತ್ರಸಂಬಂಧವಾದ, ಮಹತ್ - ದೊಡ್ಡದಾದ, ಧನುಃ-ಧನುಸ್ಸನ್ನು, ಶರೇಣೈವ - ಬಾಣದಿಂದಲೇ, ಪೂರಯಸ್ವ - ಆರೋಪಣೆಮಾಡು, ಸ್ವಬಲಂ - ನಿನ್ನ ಬಲವನ್ನು, ದರ್ಶಯಸ್ವಚ - ತೋರಿಸು. ||೩|| ಹೇರಾಘವ - ಎಲೈ ಶ್ರೀರಾಮನೇ, ಅಹಂ-ನಾನು, ಅಸ್ಯಧನುಷಃ - ಈ ವೈಷ್ಣವ ಧನುಸ್ಸಿನ, ಪ್ರಪೂರಣೇ- ಬಗ್ಗಿಸಿ ಶರಸಂಧಾನ ಮಾಡುವುದರಲ್ಲಿ, ತೇ-

---

“ಎಲೈ ದಶರಥರಾಜನಂದನನಾದ ರಾಮಚಂದ್ರನೆ! ನಿನ್ನ ವೀರ್ಯವು ಅತ್ಯದ್ಭುತವಾಗಿ ಕೇಳಲ್ಪಡುತ್ತದೆ. ಶೈವಧನುರ್ಭೇದನವೇ ಮೊದಲಾದ ಸಕಲ ವೃತ್ತಾಂತವೂ ನನ್ನಿಂದ ಕೇಳಲ್ಪಟ್ಟಿತು. ಇಂತು ಅದ್ಭುತವಾಗಿಯೂ, ಅಚಿಂತ್ಯವಾಗಿಯೂ ಇರುವ ಶೈವಧನುರ್ಭಂಗ ವೃತ್ತಾಂತವನ್ನು ದೇವತೆಗಳ ಮುಖದಿಂದ ಕೇಳಿದ ನಾನು ಮಹಾಮಂಗಳಕರವಾದ ಈವೈಷ್ಣವ ಧನುಸ್ಸನ್ನುತೆಗೆದುಕೊಂಡು ಬಂದಿರುವೆನು. ಆದುದರಿಂದೆಲೈ ರಾಮನೆ! ಘೋರವಾಗಿಯೂ ಜಮದಗ್ನಿಮುನಿ ಸಂಬಂಧವಾದುದಾಗಿಯೂ ಇರುವ, ಈ ವೈಷ್ಣವಧನುಸ್ಸನ್ನು ಬಾಣದಿಂದಲೇ

ಸ್ಯಾಮಿ ವೀರ್ಯಶ್ಲಾಘ್ಯಸ್ಯ ರಾಘವ ॥ ೪ ॥ ತಸ್ಯ ತದ್ವಚನಂ ಶ್ರುತ್ವಾ ರಾಜಾ ದಶರಥ ಸ್ತದಾ ॥ ವಿಷಣ್ಣವದನೋ ದೀನಃ ಪ್ರಾಂಜಲಿರ್ವಾಕ್ಯ ಮಬ್ರವೀತ್ ॥ ೫ ॥ ಕ್ಷತ್ರರೋಷಾತ್ಪ್ರಶಾಂತಸ್ತ್ವಂ ಬ್ರಾಹ್ಮಣಶ್ಚ ಮಹಾಯಶಾಃ ॥ ಬಾಲಾನಾಂ ಮಮಪುತ್ರಾಣಾಮಭಯಂ ದಾತು ಮರ್ಹಸಿ ॥ ೬ ॥

ನಿನ್ನ, ಬಲಂ - ಬಲವನ್ನು, ದೃಷ್ಟ್ವಾ - ಕಂಡು, ತದಾ - ಆಗ, ವೀರ್ಯಶ್ಲಾಘ್ಯಸ್ಯ - ಪರಾಕ್ರಮದಿಂದ ಶ್ಲಾಘನೀಯನಾದ, ತವ - ನಿನಗೆ, ದ್ವಂದ್ವಯುದ್ಧಂ - ಬಾಹುಯುದ್ಧವನ್ನು, ಪ್ರದಾಸ್ಯಾಮಿ- ಕೊಡುವೆನು. ॥ ೪ ॥ ತಸ್ಯ - ಆ ಪರಶುರಾಮನ, ತದ್ವಚನಂ - ಆ ಮಾತನ್ನು, ಶ್ರುತ್ವಾ-ಕೇಳಿ, ದಶರಥೋರಾಜಾ - ದಶರಥ ಮಹಾರಾಯನು, ತದಾ- ಆಗ, ವಿಷಣ್ಣವದನಃ-ವ್ಯಸನದಿಂದ ತಗ್ಗಿದ ಮುಖವುಳ್ಳವನಾಗಿ, ದೀನಃ - ದೈನ್ಯವುಳ್ಳವನಾಗಿ, ಪ್ರಾಂಜಲಿಃ - ಅಂಜಲಿಬದ್ಧನಾಗಿ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೫ ॥ ಕ್ಷತ್ರರೋಷಾತ್ - ಕ್ಷತ್ರಿಯರಲ್ಲಿ ಕ್ರೋಧದಿಂದ, ಪ್ರಶಾಂತಃ - ಉಪಶಮನವನ್ನು ಹೊಂದಿದ, ತ್ವಂ - ನೀನು, ಬ್ರಾಹ್ಮಣಶ್ಚ - ಬ್ರಾಹ್ಮಣನೂ ಮಹಾಯಶಾಃ - ಮಹಾ ಕೀರ್ತಿವಂತನೂ, ಅಸಿ - ಆಗಿರುವೆ, ಬಾಲಾನಾಂ - ಬಾಲಕರಾದ, ಮಮ-ನನ್ನ, ಪುತ್ರಾಣಾಂ-ಮಕ್ಕಳಿಗೆ, (೧)ಅಭಯಂ - ಅಭಯವನ್ನು, ದಾತುಂ - ಕೊಡಲು, ಅರ್ಹಸಿ-ಯೋಗ್ಯನಾಗು. ॥ ೬ ॥ ಸ್ವಾಧ್ಯಾಯವ್ರತಶಾಲಿನಾಂ, ಸ್ವಾಧ್ಯಾಯ- ವೇದಾಧ್ಯಯನವೆಂಬ ವ್ರತದಿಂದ

ಆರೋಪಣಮಾಡಿ ನಿನ್ನ ಪರಾಕ್ರಮವನ್ನು ತೋರುವವನಾಗು. ಎಲೈ ರಘುರಾಮನೇ ! ವೈಷ್ಣವಧನುಸ್ಸನ್ನು ಪೂರಣಮಾಡುವಾಗ ನಿನ್ನ ಬಲವನ್ನು ನೋಡಿ, ವೀರ್ಯಶ್ಲಾಘ್ಯನಾದ ನಿನಗೆ, ದ್ವಂದ್ವಯುದ್ಧವನ್ನೀಯುವೆನು.” ಎಂದನು. ಇಂತು ನುಡಿದ ವೀರಾಧಿವೀರನಾದ ಪರಶುರಾಮನ ನುಡಿಗಳನ್ನು ಕೇಳಿ, ದಶರಥರಾಯನು ತಗ್ಗಿದ ಮುಖವುಳ್ಳವನಾಗಿ, ದೈನ್ಯದಿಂದ ಕೈಗಳನ್ನು ಜೋಡಿಸಿಕೊಂಡು, ಆತನನ್ನು ಕುರಿತು, “ಎಲೈ ಪರಶುರಾಮನೆ! ನೀನು ಕ್ಷತ್ರರೋಷದಿಂದ ಶಾಂತನಾಗಿರುವೆ; ಮಹಾ ಕೀರ್ತಿವಂತನಾದ ಬ್ರಾಹ್ಮಣನೂ ಆಗಿರುವೆ. ಇಂತಹ ಮಹಾನುಭಾವನಾದ ನೀನು ಕೇವಲ ಬಾಲಕರಾದ ನನ್ನ ಕುವರರಿಗೆ ಅಭಯವನ್ನೀಯಲು ಯೋಗ್ಯನಾಗು. ವೇದಾಧ್ಯಯನ ಸಂಪನ್ನರಾದ ಭೃಗುಋಷಿಗಳ ವಂಶದಲ್ಲಿ ಹುಟ್ಟಿ, ಇಂದ್ರನ ಮುಂಗಡೆಯಲ್ಲಿ ಶಸ್ತ್ರವನ್ನು ಕೆಳಗಿಟ್ಟು, ಧರ್ಮಿಷ್ಠನಾಗಿ, ಕಾಶ್ಯಪಋಷಿಗೆ ಭೂಮಿ

ಟಿ. (೧) ದಶರಥರಾಯನು ದೈನ್ಯದಿಂದ ಪರಶುರಾಮನನ್ನು ಕುರಿತು ಅಭಯದಾನವನ್ನು ಕೇಳಿದುದರ ಅಭಿಪ್ರಾಯವು ಹೀಗೆ —

ರಾಮಚಂದ್ರನು ತಾಟಕಾದಿ ರಾಕ್ಷಸ ವಧೆಯನ್ನು ಗೈದು ಶೈವಧನುರ್ಭಂಗವನ್ನು ಮಾಡಿ ಅಪ್ರತಿಮವಾದ ತನ್ನ ಪರಾಕ್ರಮವನ್ನು ತೋರಿದ್ದರೂ ಕ್ಷತ್ರ ಗರ್ವವಿಪಾಟನೈಕ ಧುರೀಣನಾದ ಭಾರ್ಗವ ರಾಮನೊಡನೆ ಸೆಣಸುವುದು ಇವೆಲ್ಲಕ್ಕಿಂತಲೂ ಅತಿಶಯವಾದುದೆಂದು ತಿಳಿದು, ಅಪಾರವಾದ ಪುತ್ರವಾತ್ಸಲ್ಯದಿಂದ ರಾಮಚಂದ್ರನ ಮುಂದಣ ಕಾರ್ಯಸಾಧನೆಗೋಸುಗ ಮಂಗಳಾಚರಣೆಯನ್ನು ಮಾಡಿದನು. ಇಷ್ಟೆಯಲ್ಲದೆ ಭಾರ್ಗರಾಮನಿಂದ ಲೋಕಾಭಿರಾಮನಾದ ಶ್ರೀರಾಮನು ಸೋತು ಹೋದಾನೆಂಬ ಭಯದಿಂದ ದಶರಥನು ಆತನನ್ನು ಅಂಗಲಾಚಿ ಬೇಡಿಕೊಳ್ಳಲಿಲ್ಲ.

ಭಾರ್ಗವಾಣಾಂ ಕುಲೇಜಾತಸ್ಸ್ವಾಧ್ಯಾಯ ವ್ರತಶಾಲಿನಾಂ ॥ ಸಹಸ್ರಾಕ್ಷೇ ಪ್ರತಿಜ್ಞಾಯ ಶಸ್ತ್ರಂ ನಿಕ್ಷಿಪ್ತವಾನಸಿ ॥೭॥ ಸತ್ವಂ ಧರ್ಮಪರೋ ಭೂತ್ವಾ ಕಾಶ್ಯಪಾಯ ವಸುಂಧರಾಂ ॥ ದತ್ವಾ ವನ ಮುಪಾಗಮ್ಯ ಮಹೇಂದ್ರ ಕೃತಕೇತನಃ ॥ ೮ ॥ ಮಮ ಸರ್ವವಿನಾಶಾಯ ಸಂಪ್ರಾಪ್ತ ಸ್ತ್ವಂ ಮಹಾಮುನೇ ॥ ನಚೈಕಸ್ಮಿನ್ ಹತೇ ರಾಮೇ ಸರ್ವೇ ಜೀವಾಮಹೇ ವಯಂ ॥ ೯ ॥ ಬ್ರುವತ್ಯೇವಂ ದಶರಥೇ ಜಾಮದಗ್ನ್ಯಃ ಪ್ರತಾಪವಾನ್॥ ಅನಾದೃತ್ಯೈವ ತದ್ವಾಕ್ಯಂ ರಾಮಮೇವಾಭ್ಯ ಭಾಷತ ॥ ೧೦ ॥ ಇಮೇ ದ್ವೇ ಧನುಷೀ ಶ್ರೇಷ್ಠೇ ದಿವ್ಯೇ ಲೋಕಾಭಿ

ಒಪ್ಪುತ್ತಿರುವ, ಭಾರ್ಗವಾಣಾಂ - ಭೃಗುವಂಶೋತ್ಪನ್ನ ಋಷಿಗಳ, ಕುಲೇ - ವಂಶದಲ್ಲಿ, ಜಾತಃ - ಹುಟ್ಟಿದವನು, ಅಸಿ - ಆಗಿರುವೆ, ಸಹಸ್ರಾಕ್ಷೇ - ದೇವೇಂದ್ರನ ಸನ್ನಿಧಾನದಲ್ಲಿ, ಪ್ರತಿಜ್ಞಾಯ - ಪ್ರತಿಜ್ಞೆ ಮಾಡಿ, ಶಸ್ತ್ರಂ - ಶಸ್ತ್ರವನ್ನು, ನಿಕ್ಷಿಪ್ತವಾನ್ - ಬಿಟ್ಟವನೂ ಆಗಿರುವೆ. ॥ ೭ ॥ ಸತ್ವಂ- ಅಂತಹನೀನು, ಧರ್ಮಪರಃ - ಧರ್ಮದಲ್ಲಿಯೇ ಆಸಕ್ತನು, ಭೂತ್ವಾ - ಆಗಿ, ಕಾಶ್ಯಪಾಯ - ಕಾಶ್ಯಪಋಷಿಗೆ, ವಸುಂಧರಾಂ - ಭೂಮಿಯನ್ನು, ದತ್ವಾ - ಕೊಟ್ಟು, ವನಂ - ವನವನ್ನು, ಉಪಾಗಮ್ಯ - ಹೊಂದಿ, ಮಹೇಂದ್ರಕೃತಕೇತನಃ - ಮಹೇಂದ್ರವೆಂಬ ಬೆಟ್ಟದಲ್ಲಿ ಮಾಡಲ್ಪಟ್ಟ ವಾಸವುಳ್ಳವನಾದೆ. ಹೇಮಹಾಮುನೇ - ಎಲೈ ಮಹರ್ಷಿಯೇ, ಮಮ - ನನ್ನ, ಸರ್ವವಿನಾಶಾಯ - ಸರ್ವಸ್ವವನ್ನೂ ನಾಶಮಾಡಲು, ತ್ವಂ - ನೀನು, ಸಂಪ್ರಾಪ್ತಃ - ಬಂದಿರುವೆ, ರಾಮೇ- ಶ್ರೀರಾಮನು, ಏಕಸ್ಮಿನ್ - ಒಬ್ಬನು, ಹತೇಸತಿ - ಜಯಿಸಲ್ಪಟ್ಟವನಾಗಲು, ಸರ್ವೇವಯಂ- ನಾವೆಲ್ಲರೂ, ನಜೀವಾಮಹೇ- ಬದುಕಲಾರೆವು. ॥ ೮-೯ ॥ ದಶರಥೇ-ದಶರಥರಾಯನು, ಏವಂ- ಹೀಗೆ, ಬ್ರುವತಿ - ಹೇಳುತ್ತಿರಲು, ಪ್ರತಾಪವಾನ್ - ಪರಾಕ್ರಮಶಾಲಿಯಾದ, ಜಾಮದಗ್ನ್ಯಃ, ಜಮದಗ್ನಿಋಷಿಯ ಪುತ್ರನಾದ ಪರಶುರಾಮನು, ತದ್ವಾಕ್ಯಂ - ಆ ದಶರಥ ರಾಯನ ಮಾತನ್ನು ಅನಾದೃತ್ಯೈವ - ಲಕ್ಷ್ಯಕ್ಕೆ ತಾರದೆ, ರಾಮಮೇವ - ಶ್ರೀರಾಮನನ್ನೇ ಕುರಿತು, ಅಭ್ಯಭಾಷತ - ಮಾತನಾಡಿದನು. ॥ ೧೦ ॥ ಇಮೇ - ಈ, ದ್ವೇ - ಎರಡಾದ, ಧನುಷೀ - ಶೈವವೈಷ್ಣವಗಳೆಂಬ

...ಯನ್ನು ದಾನಮಾಡಿ ವನವನ್ನು ಸೇರಿ, ಮಹೇಂದ್ರಪರ್ವತದಲ್ಲಿ ವಾಸಿಸುತ್ತ, ಈಗ ನನಗೆ ...ರ್ವನಾಶವನ್ನುಂಟುಮಾಡಲೋಸುಗ ಬಂದವನಾಗಿರುವೆ. ಎಲೈ ಪರಶುರಾಮನೇ! ರಾಮ... ...ಒಬ್ಬನು ಹತನಾದರೆ, ನಾವೆಲ್ಲರೂ ಜೀವಿಸಲಾರೆವೆಂಬುದನ್ನು ತಿಳಿದವನಾಗು" ಎಂದನು. ॥ ೧-೯ ॥ ದಶರಥರಾಯನೀರೀತಿ ನುಡಿಯುತ್ತಿದ್ದರೂ, ಅದನ್ನು ಲಕ್ಷ್ಯಕ್ಕೆ ತಾರದೆಯೇ, ಆ ಪರಶುರಾಮನು ರಘುರಾಮನನ್ನೇ ಕುರಿತು ಮಾತನಾಡತೊಡಗಿದನು. "ಎಲೈ ರಾಮಚಂದ್ರನೆ! ನೀನು ಮುರಿದು ಹಾಕಿದ ಶೈವಧನುಸ್ಸೂ, ಈ ವೈಷ್ಣವಧನುಸ್ಸೂ ಶ್ರೇಷ್ಠವಾದುವೂ, ದೇವತಾ ಸಂಬಂಧವಾದುವುಗಳೂ, ಲೋಕವಿಖ್ಯಾತವಾದುವುಗಳೂ, ದೃಢವಾದವುಗಳೂ, ಮಹಾ ಬಲಿಷ್ಠವಾದವುಗಳೂ ಆಗಿ ವಿಶ್ವಕರ್ಮನಿಂದ ಮಾಡಲ್ಪಟ್ಟುವು. ಈ ರೀತಿ ನಿರ್ಮಿತವಾದ ಈ ಎರಡು ಧನುಸ್ಸುಗಳಲ್ಲಿ ತ್ರಿಪುರಘ್ನವಾದ ಒಂದು ಧನುಸ್ಸು,

ವಿಶ್ರುತೇ ‖ ದೃಢೇ ಬಲವತೀ ಮುಖ್ಯೇ ಸುಕೃತೇ ವಿಶ್ವಕರ್ಮಣಾ ‖ ೧೧ ‖
ಅತಿಸೃಷ್ಟಂ ಸುರೈರೇಕಂ ತ್ರ್ಯಂಬಕಾಯ ಯುಯುತ್ಸವೇ ‖ ತ್ರಿಪುರಘ್ನಂ ನರ
ಶ್ರೇಷ್ಠ ಭಗ್ನಂ ಕಾಕುತ್ಸ್ಥ ಯತ್ತ್ವಯಾ ‖(೧)(ಇದಂ ದ್ವಿತೀಯಂ ದುರ್ಧರ್ಷಂ
ವಿಷ್ಣೋರ್ದತ್ತಂ ಸುರೋತ್ತಮೈಃ) ‖ ೧೨ ‖ ತದಿದಂ ವೈಷ್ಣವಂ ರಾಮ
ಧನುಃ ಪರಮ ಭಾಸ್ವರಂ ‖ ಸಮಾನಸಾರಂ ಕಾಕುತ್ಸ್ಥ ರೌದ್ರೇಣ ಧನುಷಾ
ತ್ವಿದಂ ‖೧೩‖ (೨)ತದಾತು ದೇವತಾ ಸ್ಸರ್ವಾಃ ಪೃಚ್ಛಂತಿಸ್ಮ ಪಿತಾಮಹಂ ‖

---

ಧನುಸ್ಸುಗಳು, ಶ್ರೇಷ್ಠೇ - ಶ್ರೇಷ್ಠವಾದುವು, ದಿವ್ಯೇ - ದೇವತಾ ಸಂಬಂಧಗಳು, ಲೋಕಾಭಿವಿಶ್ರುತೇ - ಲೋಕಗಳಲ್ಲಿ ಪ್ರಖ್ಯಾತಗಳಾದುವು, ದೃಢೇ - ದೃಢಗಳಾದುವು, ಬಲವತೀ - ಬಲವುಳ್ಳವುಗಳು, ಮುಖ್ಯೇ - ಧನುಸ್ಸುಗಳಲ್ಲಿ ಮುಖ್ಯವಾದುವು, ವಿಶ್ವಕರ್ಮಣಾ - ವಿಶ್ವಕರ್ಮನಿಂದ, ಸುಕೃತೇ - ಬಹು ಚನ್ನಾಗಿ ನಿರ್ಮಿಸಲ್ಪಟ್ಟುವು ‖ ೧೧ ‖ ಹೇನರಶ್ರೇಷ್ಠ - ಎಲೈ ನರಶ್ರೇಷ್ಠನೆ! ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ!, ಯತ್ - ಯಾವ ಧನುಸ್ಸು, ಭಗ್ನಂ-ಮುರಿಯಲ್ಪಟ್ಟಿತೊ, ತತ್ - ಅಂತಹ, ತ್ರಿಪುರಘ್ನಂ - ತ್ರಿಪುರಾಸುರನನ್ನು ಹೊಡದ, ಏಕಂ - ಒಂದಾದ ಧನುಸ್ಸು, ಯುಯುತ್ಸವೇ - ಯುದ್ಧೇಚ್ಛೆಯುಳ್ಳ, ತ್ರ್ಯಂಬಕಾಯ - ಪರಮೇಶ್ವರನಿಗೆ, ಸುರೈಃ - ದೇವತೆಗಳಿಂದ, ಅತಿಸೃಷ್ಟಂ - ಕೊಡಲ್ಪಟ್ಟಿತು. ‖ ೧೨ ‖ ಹೇರಾಮ- ಎಲೈ ರಾಮನೇ, ತದಿದಂ-ಅಂತಹ ಈ, ವೈಷ್ಣವಂ - ವಿಷ್ಣು ಸಂಬಂಧವಾದ, ಧನುಃ - ಧನುಸ್ಸು, ಪರಮಭಾಸ್ವರಂ - ಬಹಳ ಹೊಳೆಯುತಿರುವದು, ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ! ಇದಂ-ಈ ವೈಷ್ಣವ ಧನುಸ್ಸು, ರೌದ್ರೇಣ - ಶಿವಸಂಬಂಧವಾದ, ಧನುಷಾ - ಧನುಸ್ಸಿನೊಡನೆ, ಸಮಾನಸಾರಂ - ಸಮಾನವಾದ ಬಲವುಳ್ಳದ್ದು. ‖ ೧೩ ‖ ತದಾತು - ಆ ಕಾಲದಲ್ಲಿ, ಸರ್ವಾಃ - ಸಮಸ್ತರಾದ, ದೇವತಾಃ - ದೇವತೆಗಳು, ಶಿತಿಕಂಠಸ್ಯ - ಶಿವನಿಗೂ, ವಿಷ್ಣೋಶ್ಚ - ವಿಷ್ಣುವಿಗೂ, ಬಲಾಬಲನಿರೀ

---

ಈಶ್ವರನಿಗೋಸುಗ ದೇವತೆಗಳಿಂದ ಕೊಡಲಾಯಿತು. ಅದೇ ನಿನ್ನಿಂದ ಭಗ್ನವಾದುದು. ಎರಡನೆಯದಾದ ಈ ಧನುಸ್ಸು ವಿಷ್ಣುವಿಗೋಸುಗ ದೇವತೆಗಳಿಂದ ಕೊಡಲ್ಪಟ್ಟಿತು. ಆದುದರಿಂದೆಲೈ ಶ್ರೀರಾಮನೆ! ಮಹಾ ಪ್ರಕಾಶಮಾನವಾದ ಈ ವೈಷ್ಣವ ಧನುಸ್ಸು ಶೈವ ಧನುಸ್ಸಿಗೆ ಸಮಾನಸಾರವನ್ನೊಳಗೊಂಡುದಾಗಿರುವುದು. ಆ ಬಳಿಕ ದೇವತೆಗಳೆಲ್ಲರೂ, ಹರಿ ಹರರ, ಬಲಾಬಲಗಳ ವಿಷಯವಾಗಿ ಬ್ರಹ್ಮನನ್ನು ಪ್ರಶ್ನಿಸುತ್ತಿದ್ದರು. ಸತ್ಯವಂತ

---

ಟಿ. (೧) ಅಧಿಕ ಪಾಠ.

ಟಿ. (೨) ಈ ಶ್ಲೋಕದಲ್ಲಿ ಗೋವಿಂದರಾಜೀಯ ಮತ್ತು ಮಹೇಶ್ವರತೀರ್ಥೀಯ ವ್ಯಾಖ್ಯಾನಗಳು ಬೇರೆ ಬೇರೆಯಾಗಿರುತ್ತವೆ. ಗೋವಿಂದರಾಜೀಯ ಕಾರರು "ಸಮಾನ ಬಲವುಳ್ಳ ಈ ವೈಷ್ಣವ ಧನುಸ್ಸನ್ನು ಪರೀಕ್ಷಿಸುವುದೇನು? ಎಂದು ರಾಮನು ಶಂಕಿಸಿಯಾನೆಂದು ತಿಳಿದು ಶೈವಧನುಸ್ಸಿನ ದುರ್ಬಲತೆಯನ್ನು ವರ್ಣಿಸಲು ಪ್ರಸ್ತಾವಾಂತರವನ್ನು ಹೇಳುತ್ತಾನೆ" ಎಂದು ಬರೆದಿರುವರು.ಮಹೇಶ್ವರ ತೀರ್ಥೀಯದಲ್ಲಿ"ಶೈವ ಧನುರ್ಭೇದನ ಪೂರ್ವದಲ್ಲಿ ಈ ಎರಡು ಧನುಸ್ಸುಗಳೂ ಸಮಾನ ಬಲವುಳ್ಳವುಗಳಾಗಿದ್ದವು. ಈಗ ಈ ವೈಷ್ಣವ ಧನುಸ್ಸು ಅದಕ್ಕಿಂತಲೂ ಬಲವುಳ್ಳದು ಎಂದು ಹೇಳಲು ವಕ್ಕಣಿಸಿದ ನುಡಿ ಇದು" ಎಂದು ಬರೆದಿರುತ್ತಾರೆ.

ಶಿತಿಕಂಠಸ್ಯ ವಿಷ್ಣೋಶ್ಚ ಬಲಾಬಲ ನಿರೀಕ್ಷಯಾ ॥೧೪॥ (೧) ಅಭಿಪ್ರಾಯಂತು ವಿಜ್ಞಾಯ ದೇವತಾನಾಂ ಪಿತಾಮಹಃ ॥ ವಿರೋಧಂ ಜನಯಾಮಾಸ ತಯೋಸ್ಸತ್ಯವತಾಂ ವರಃ ॥ ೧೫ ॥ ವಿರೋಧೇಚ ಮಹದ್ಯುದ್ಧಮಭವ ದ್ರೋಮಹರ್ಷಣಂ ॥ ಶಿತಿಕಂಠಸ್ಯ ವಿಷ್ಣೋಶ್ಚ ಪರಸ್ಪರ ಜಿಗೀಷುಣೋಃ ॥೧೬॥ ತದಾತು ಜೃಂಭಿತಂ ಶೈವಂ ಧನುರ್ಭೀಮ ಪರಾಕ್ರಮಂ ॥ ಹುಂಕಾರೇಣ ಮಹಾ

---

ಕ್ಷಯಾ - ಪ್ರಾಬಲ್ಯದೌರ್ಬಲ್ಯಗಳನ್ನು ನೋಡಬೇಕೆಂಬ ಇಚ್ಛೆಯಿಂದ, ಪಿತಾಮಹಂ - ಬ್ರಹ್ಮದೇವನನ್ನು ಕುರಿತು, ಪೃಚ್ಛಂತಿಸ್ಮ - ಕೇಳಿದರಷ್ಟೆ. ॥ ೧೪ ॥ ಸತ್ಯವತಾಂ - ಸತ್ಯವಂತರಲ್ಲಿ, ವರಃ - ಶ್ರೇಷ್ಠನಾದ, ಪಿತಾಮಹಃ - ಬ್ರಹ್ಮನು, ದೇವತಾನಾಂ - ದೇವತೆಗಳ, ಅಭಿಪ್ರಾಯಂ - ಭಾವವನ್ನು, ವಿಜ್ಞಾಯ - ತಿಳಿದು, ತಯೋಃ - ಆ ಶಿವ ವಿಷ್ಣುಗಳಿಗೆ, ವಿರೋಧಂ- ವೈರವನ್ನು, ಜನಯಾಮಾಸ - ಹುಟ್ಟಿಸಿದನು. ॥ ೧೫ ॥ ವಿರೋಧೇಚ-ವಿರೋಧವು ಹುಟ್ಟಲು, ಪರಸ್ಪರಜಿಗೀಷುಣೋಃ ಅನ್ಯೋನ್ಯವಾಗಿ ಜಯಿಸಲಿಚ್ಛೆಯುಳ್ಳ, ಶಿತಿಕಂಠಸ್ಯ - ಈಶ್ವರನಿಗೂ, ವಿಷ್ಣೋಶ್ಚ - ವಿಷ್ಣುವಿಗೂ, ಮಹತ್ - ದೊಡ್ಡದಾದ, ರೋಮಹರ್ಷಣಂ - ರೋಮಾಂಚಕರವಾದ, ಯುದ್ಧಂ - ಕಾಳಗವು, ಅಭವತ್ - ಆಯಿತು. ॥ ೧೬ ॥ ತದಾತು - ಆ ಕಾಲದಲ್ಲಿ, ಭೀಮಪರಾಕ್ರಮಂ - ಉಗ್ರವಾದ ಪರಾಕ್ರಮವುಳ್ಳ, ಶೈವಂ - ಶಿವಸಂಬಂಧಿಯಾದ, ಧನುಃ - ಧನುಸ್ಸು, ಜೃಂಭಿತಂ - ವಿಷ್ಣುಪರಾಕ್ರಮದಿಂದ ಸ್ತಬ್ಧವಾಗಿ ಮಾಡಲ್ಪಟ್ಟಿತು, ಅಥ - ಒಳಿಕ, ತ್ರಿಲೋಚನಃ - ತ್ರಿನೇತ್ರನಾದ,

---

ರಲ್ಲಿ ಶ್ರೇಷ್ಠನಾದ ಪಿತಾಮಹನು ದೇವತೆಗಳ ಅಭಿಪ್ರಾಯವನ್ನು ತಿಳಿದು ಆ ಶಿವ ವಿಷ್ಣುಗಳಲ್ಲಿ ಒಬ್ಬರಿಗೊಬ್ಬರಿಗೆ ವಿರೋಧವನ್ನುಂಟುಮಾಡಿದನು. ಹೀಗೆ ಇವರಿಬ್ಬರಿಗೂ ವಿರೋಧವುಂಟಾಗಲು, ಪರಸ್ಪರವಾಗಿ ಗೆಲ್ಲಬೇಕೆಂಬ ಅಪೇಕ್ಷೆಯುಳ್ಳ ವಿಷ್ಣುವಿಗೂ, ಶಿವನಿಗೂ ರೋಮಾಂಚಕರವಾದ ಮಹಾ ಯುದ್ಧವುಂಟಾಯಿತು. ಎಲೈ ರಾಮಚಂದ್ರನೇ! ಈ ಯುದ್ಧದಲ್ಲಿ ರುದ್ರಮೂರ್ತಿಯ ಧನುಸ್ಸು ಜಡೀಕೃತವಾಯಿತು. ವಿಷ್ಣುವಿನ ಹುಂಕಾರ ಮಾತ್ರದಿಂದಲೇ ಮುಕ್ಕಣ್ಣನಾದ ಮಹಾದೇವನು ಸ್ತಂಭಿತನಾದನು. ಆ ಸಮಯದಲ್ಲಿ ಋಷಿಗಣಗಳಿಂದಲೂ,

---

ಟಿ. (೧) "ಪೂರ್ವದಲ್ಲಿ ವರಾಹಾದಿ ರೂಪಗಳನ್ನು ತಾಳಿ ಭೂಮಿಯ ಉದ್ಧರಣವೇ ಮುಂತಾದ ಅದ್ಭುತ ಕಾರ್ಯಗಳನ್ನೆಸಗಿದ ವಿಷ್ಣುವಿನ ಪರಾಕ್ರಮವು ನಮ್ಮಿಂದ ಕೇಳಲ್ಪಟ್ಟಿತು, ಈಗಲಾದರೋ ಅಂತಹ ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡು ತ್ರಿಪುರ ಹನನವನ್ನು ಮಾಡಿದವನಾದುದರಿಂದ ಈಶ್ವರನೇ ಬಲಾಧಿಕನೆಂದು ತಿಳಿದು ಬರುತ್ತದೆ" ಎಂಬ ದೇವತೆಗಳ ಅಭಿಪ್ರಾಯವನ್ನು ತಿಳಿದು ಬ್ರಹ್ಮನು ಹರಿಹರರಲ್ಲಿ ವೈಮನಸ್ಯವನ್ನುಂಟುಮಾಡಿದನು. ವೈಮನಸ್ಯವನ್ನುಂಟುಮಾಡಿದ ರೀತಿ ಹೇಗೆಂದರೆ—ಬ್ರಹ್ಮನು ವಿಷ್ಣುವಿನ ಬಳಿಗೆ ಹೋಗಿ "ನಾನು ಧನುರಾರೋಪಣ ಕಾರ್ಯದಲ್ಲಿ ಬಹು ಶ್ರೇಷ್ಠನು, ಬಲಾಧಿಕನು, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡೆನು ನನ್ನ ಪರಾಕ್ರಮಕ್ಕೆಣೆಯುಂಟೇ" ಎಂಬೀ ಪ್ರಕಾರವಾಗಿ ಶಂಕರನು ಹೇಳಿದನೆಂದೂ, ಶಂಕರನ ಬಳಿಗೈದಿ "ಶರಾಗ್ರದಲ್ಲಿ ನಾನು ಇದ್ದುದರಿಂದ ತ್ರಿಪುರಹನನವು ನನ್ನಿಂದಲೇ ಆಯಿತು, ನನ್ನ ಪರಾಕ್ರಮಕ್ಕೆಣೆಯುಂಟೇ" ಎಂದು ವಿಷ್ಣುವು ಹೇಳಿದನೆಂದು ಬಿತ್ತರಿಸಿ ವೈಮನಸ್ಯವನ್ನುಂಟು ಮಾಡಿದನು. (ಇದು ಗೋವಿಂದರಾಜೀಯ ವ್ಯಾಖ್ಯಾನ ಸಾರವು.)

ದೇವ ಸ್ತಂಭಿತೋಥ ತ್ರಿಲೋಚನಃ || ೧೭ || ದೇವೈಸ್ತದಾ ಸಮಾಗಮ್ಯ ಸರ್ಷಿಸಂಘೈ ಸ್ಸಚಾರಣೈಃ || ಯಾಚಿತೌ ಪ್ರಶಮಂ ತತ್ರ ಜಗ್ಮತುಸ್ತೌ ಸುರೋತ್ತಮೌ ||೧೮|| ಜೃಂಭಿತಂ ತದ್ಧನು ರ್ದೃಷ್ಟ್ವಾ ಶೈವಂ ವಿಷ್ಣು ಪರಾಕ್ರಮೈಃ|| ಅಧಿಕಂ ಮೇನಿರೇ ವಿಷ್ಣುಂ ದೇವಾ ಸ್ಸರ್ಷಿಗಣಾಸ್ತದಾ || ೧೯ || ಧನೂ ರುದ್ರಸ್ತು ಸಂಕ್ರುದ್ಧೋ ವಿದೇಹೇಷು ಮಹಾಯಶಾಃ||ದೇವರಾತಸ್ಯ ರಾಜರ್ಷೇ

---

ಮಹಾದೇವಃ – ಪರಮೇಶ್ವರನೂ, ಹುಂಕಾರೇಣ – ಹುಂಕಾರಶಬ್ದದಿಂದ, ಸ್ತಂಭಿತಃ – ಸ್ತಂಭಿಸಲ್ಪಟ್ಟನು. || ೧೭ || ತದಾ – ಆಗ, ಸರ್ಷಿಸಂಘೈಃ - ಋಷಿತಂಡಗಳಿಂದೊಡಗೂಡಿದ, ಸಚಾರಣೈಃ – ಚಾರಣಸಮೇತರಾದ, ದೇವೈಃ – ದೇವತೆಗಳಿಂದ, ಸಮಾಗಮ್ಯ – ಬಂದು, ಸುರೋತ್ತಮೌ – ದೇವತಾಶ್ರೇಷ್ಠರಾದ, ತೌ – ಆ ಶಿವವಿಷ್ಣುಗಳಿಬ್ಬರೂ, ಯಾಚಿತೌ – ಪ್ರಾರ್ಥಿಸಲ್ಪಟ್ಟು, ತತ್ರ – ಅಲ್ಲಿ, ಪ್ರಶಮಂ – ಯುದ್ಧೋಪಶಮವನ್ನು, ಜಗ್ಮತುಃ – ಹೊಂದಿದರು. || ೧೮ || ವಿಷ್ಣುಪರಾಕ್ರಮೈಃ – ಶ್ರೀ ಮಹಾ ವಿಷ್ಣುವಿನ ಪರಾಕ್ರಮದಿಂದ, ಜೃಂಭಿತಂ – ಸ್ತಂಭಿಸಲ್ಪಟ್ಟ, ಶೈವಂ – ಶಿವಸಂಬಂಧವಾದ, ತದ್ಧನುಃ – ಆ ಧನುಸ್ಸನ್ನು, ದೃಷ್ಟ್ವಾ – ಕಂಡು, ತದಾ-ಆಗ, ಸರ್ಷಿಗಣಾಃ - ಋಷಿಗುಂಪುಗಳಿಂದೊಡಗೂಡಿದ, ದೇವಾಃ – ದೇವತೆಗಳು, ವಿಷ್ಣುಂ – ವಿಷ್ಣುವನ್ನು, ಅಧಿಕಂ – ಹೆಚ್ಚಾದವನನ್ನಾಗಿ, ಮೇನಿರೇ – ಎಣಿಸಿದರು. || ೧೯ | ಸಂಕ್ರುದ್ಧಃ ಕೋಪಿಷ್ಠನಾದ, ಮಹಾಯಶಾಃ – ಮಹಾ ಕೀರ್ತಿವಂತನಾದ ರುದ್ರಸ್ತು – ಈಶ್ವರನಾದರೆ, ಸಸಾಯಕಂ – ಬಾಣದಿಂದೊಡಗೂಡಿದ, ಧನುಃ - ಶೈವಧನುಸ್ಸನ್ನು, ವಿದೇಹೇಷು – ವಿದೇಹದೇಶಗಳಲ್ಲಿ, ರಾಜರ್ಷೇಃ – ರಾಜರ್ಷಿ

---

ಚಾರಣರಿಂದಲೂ ಒಡಗೂಡಿದ ದೇವತೆಗಳಾರ್ಥನೆಕ್ಕೆ ಒಂದು ಯುದ್ಧೋಪಶಮನಕ್ಕಾಗಿ ಆ ಶಿವವಿಷ್ಣುಗಳನ್ನು ಬೇಡಿದವರಾಗಲು ಸುರಶ್ರೇಷ್ಠರಾದಾಹರಿಹರರು ತಮ್ಮತಮ್ಮ ಸ್ಥಾನಗಳನ್ನು ಕುರಿತು ತೆರಳಿದವರಾದರು. || ೧೭-೧೮ || ಆ ಬಳಿಕ ವಿಷ್ಣುವಿನ ಪರಾಕ್ರಮದಿಂದ ಶೈವಧನುಸ್ಸು ಜಡೀಕೃತವಾದುದನ್ನು ನೋಡಿದ ದೇವತೆಗಳೆಲ್ಲರೂ ಋಷಿಗಣಗಳಿಂದೊಡ

---

ಮಹೇಶ್ವರತೀರ್ಥರು ಏನೋ ಒಂದು ಕಾರಣದಿಂದ ವೈಷಮ್ಯವನ್ನುಂಟು ಮಾಡಿದನೆಂದು ಬರೆದಿರುತ್ತಾರೆ, ಆದರೆ ನಮ್ಮ ಅಭಿಪ್ರಾಯವನ್ನು ಸ್ವಲ್ಪ ಹೇಳಬೇಕಾಗಿರುತ್ತೆ ಪುರಾಣಾಂತರದಲ್ಲಿ ಹೀಗೆ ಹೇಳಿದ್ದರೂ ಹೇಳಿರಬಹುದು. ಕಾಲತತ್ವವನ್ನನುಸರಿಸಿ ವಿಮರ್ಶೆಮಾಡಿದರೆ ಇವೆಲ್ಲವೂ ಅರ್ಥವಾದವೆನಿಸುತ್ತವೆ, ಪ್ರಪಂಚಕ್ಕೆಲ್ಲ ದೇವರೊಬ್ಬನೇ, ಆತನು ಕೇಶವನೋ, ಶಿವನೋ, ಅವುಗಳನ್ನು ಪುಷ್ಟೀಕರಿಸುವುದು ಆಯಾಯಾ ಮತಾವಲಂಬಿಗಳ ಕಾರ್ಯವಾಗಿರುತ್ತದೆಂದ ಮೇಲೆ ಆದಿಕಾವ್ಯವಾದ ಈ ರಾಮಾಯಣ ಗ್ರಂಥದಲ್ಲಿ ಹೀಗೆ ಹೇಳಿರುವರಲ್ಲ! ಎಂದು ವಾಚಕರು ಸಂಶಯಪಟ್ಟಾರು; ಇದಕ್ಕೊಂದು ಮಾತನ್ನು ಹೇಳಿಮುಗಿಸುತ್ತೇನೆ.

ಸಾಕ್ಷಾನ್ನಾರಾಯಣಾಂಶ ಸಂಭೂತನಾದ ರಾಮಚಂದ್ರನ ಪ್ರಭಾವ ವರ್ಣನವೇ ಒಂದು ಕಾರಣ; ಶೈವಧನುಸ್ಸಿಗಿಂತಲೂ ವೈಷ್ಣವ ಧನುಸ್ಸಿನ ಪ್ರಭಾವವೇ ಅಧಿಕವೆಂದು ಹೇಳುವುದು ಮತ್ತೊಂದು ಕಾರಣ, "ಶೈವಧನುಸ್ಸು ಪೂರ್ವದಿಂದಲೂ ಜನಕರಾಯರ ಮನೆತನದಲ್ಲಿ ಪೂಜಾರ್ಹವಾಗಿದ್ದಿತೇ ಹೊರ್ತು ಆರೋಪಣ ಕಾರ್ಯಕ್ಕೆ ಆಸಕ್ತವಾಗಿರಲಿಲ್ಲ, ಈ ಧನುಸ್ಸಾದರೋ ನಮ್ಮಿಂದುಪಯೋಗಿಸಲ್ಪಡುತ್ತಿದ್ದಿತು ಆದುದರಿಂದ ಇದರ ಬಲವೇ ಅಧಿಕ" ಎಂಬ ಭಾರ್ಗವ ರಾಮನ ಭಾವವನ್ನು ಸೂಚಿಸುದವಕ್ಕಾಗಿ ಹೀಗೆ ಹೇಳಿರಬಹುದೆಂದು ತೋರುತ್ತದೆ.

(೧) ದ್ದದೌ ಹಸ್ತೇಸ ನಾಯಕಂ ‖ ೨೦ ‖ ಇದಂಚ ವೈಷ್ಣವಂ ರಾಮ ಧನುಃ ಪರಪುರಂಜಯಂ ‖ ಋಚಿಕೇ ಭಾರ್ಗವೇ ಪ್ರಾದಾದ್ವಿಷ್ಣುಸ್ಸನ್ನ್ಯಾಸ ಮುತ್ತಮಂ ‖ ೨೧ ‖ ಋಚೀಕಸ್ತು ಮಹಾತೇಜಾಃ ಪುತ್ರಸ್ಯಾಪ್ರತಿಕರ್ಮ ಣಃ ‖ ಪಿತುರ್ಮಮ ದದೌ ದಿವ್ಯಂ ಜಮದಗ್ನೇರ್ಮಹಾತ್ಮನಃ ‖ ೨೨ ‖ ನ್ಯಸ್ತಶಸ್ತ್ರೇ ಪಿತರಿ ಮೇ ತಪೋಬಲ ಸಮನ್ವಿತೇ ‖ ಅರ್ಜುನೋ ವಿದಧೇ

---

ಯಾದ, ದೇವರಾತಸ್ಯ - ದೇವರಾತನ, ಹಸ್ತೇ - ಕೈಯ್ಯಲ್ಲಿ, ದದೌ - ಕೊಟ್ಟನು. ‖ ೨೦ ‖ ಹೇರಾಮ - ಎಲೈ ಶ್ರೀರಾಮನೇ! ಇದಂಪರಪುರಂಜಯಂ - ಶತ್ರುಪಟ್ಟಣಗಳನ್ನು ಜಯಿಸುವ ಈ, ದಿವ್ಯಂ - ಮನೋಹರವಾದ, ವೈಷ್ಣವಂಧನುಃ - ವೈಷ್ಣವಧನುಸ್ಸನ್ನು, ಸವಿಷ್ಣುಃ - ಆ ವಿಷ್ಣುವು, ಭಾರ್ಗವೇ - ಭೃಗುವಂಶೋತ್ಪನ್ನನಾದ, ಋಚೀಕೇ - ಋಚೀಕನೆಂಬ ಋಷಿಯಲ್ಲಿ, ಉತ್ತಮಂ - ಉತ್ತಮವಾದ, ನ್ಯಾಸಂ - ನಿಕ್ಷೇಪರೂಪವನ್ನಾಗಿ, ಪ್ರಾದಾತ್ - ಕೊಟ್ಟನು. ‖ ೨೧ ‖ ಮಹಾತೇಜಾಃ - ಬ್ರಹ್ಮತೇಜಸ್ವಿಯಾದ, ಋಚೀಕಸ್ತು - ಋಚೀಕ ಋಷಿಯು, ಅಪ್ರತಿಕರ್ಮಣಃ-ಮಹಾ ಪರಾಕ್ರಮಿಯಾದ, ಪುತ್ರಸ್ಯ - ಮಗನಾದ, ಮಹಾತ್ಮನಃ - ಮಹಾ ಧೈರ್ಯಶಾಲಿಯಾದ, ಮಮ-ನನ್ನ, ಪಿತುಃ - ತಂದೆಯಾದ, ಜಮದಗ್ನೇಃ - ಜಮದಗ್ನಿ ಋಷಿಗೆ, ದದೌ - ಕೊಟ್ಟನು ‖ ೨೨ ‖ ತಪೋಬಲಸಮನ್ವಿತೇ - ತಪೋಬಲಸಮೇತನಾದ, ನ್ಯಸ್ತಶಸ್ತ್ರೇ - ನಿಕ್ಷಿಪ್ತವಾದ ಧನುಸ್ಸುಳ್ಳ, ಮೇ -

---

ಗೂಡಿ ವಿಷ್ಣುವೇ ಅಧಿಕನೆಂದೆಣಿಸಿದವರಾದರು. ರುದ್ರನಾದರೋ ಈ ತೆರನಾದ ದೇವತೆಗಳ ಕಾರ್ಯದಿಂದ ಕೋಪಗೊಂಡವನಾಗಿ ವಿದೇಹದೇಶದೊಡೆಯನಾದ ದೇವರಾತನಿಗಾಧನುಸ್ಸನ್ನು ಕೊಟ್ಟವನಾದನು. ಎಲೈ ರಘುರಾಮನೇ! ಪರಪುರಂಜಯವಾದೀ ವೈಷ್ಣವ ಧನುಸ್ಸಾದರೋ, ಭೃಗುವಂಶೋತ್ಪನ್ನನಾದ ಋಚೀಕನಿಗೆ ವಿಷ್ಣುವು ನ್ಯಾಸವಾಗಿ ಕೊಟ್ಟವನಾದನು. ಮಹಾತೇಜಸ್ವಿಯಾದ ಋಚೀಕ ಮುನಿಯು ಆ ಧನುಸ್ಸನ್ನು ತನ್ನ ಮಗನೂ, ಮಹಾ ಬಲಶಾಲಿಯೂ, ನನ್ನ ತಂದೆಯೂ ಆದ ಜಮದಗ್ನಿಮುನಿಗೆ ಕೊಟ್ಟನು. ನಮ್ಮ ತಂದೆಯಾದ ಜಮದಗ್ನಿಯು ಶಸ್ತ್ರಸನ್ಯಾಸವಂಗೈದು, ತಪೋಬಲಸಮನ್ವಿತನಾಗಿರಲು

---

ಟಿ (೧) ಈ ಕಾಂಡದ ೬೬ನೇ ಸರ್ಗದಲ್ಲಿ ಪರಮೇಶ್ವರನು ಈ ಧನುರ್ದಂಡವನ್ನು ದೇವತೆಗಳಿಗೆ ಕೊಟ್ಟನೆಂಬುದಾಗಿಯೂ ೩೧ನೇ ಸರ್ಗದಲ್ಲಿ ದೇವತೆಗಳು ಜನಕರಾಜನಿಗಿತ್ತರೆಂಬುದಾಗಿಯೂ, ಈ ಶ್ಲೋಕದಲ್ಲಿ ಮುಕ್ಕಣ್ಣನು ದೇವರಾತನಿಗೆ ಕೊಟ್ಟನೆಂಬದಾಗಿಯೂ ಹೇಳಿರುವದಲ್ಲದೆ, ಮುಂದೆ ಅರಣ್ಯಕಾಂಡದಲ್ಲಿ ವರುಣನು ಜನಕರಾಜನಿಗಿತ್ತನೆಂಬುದಾಗಿ ಸೀತಾದೇವಿಯು ಅನಸೂಯಾದೇವಿಗೆ ಹೇಳಿದಂತೆಯೂ ಈ ಗ್ರಂಥದಲ್ಲಿರುವದು ಸರಿಯಷ್ಟೆ. ಇದು ಪೂರ್ವೋತ್ತರ ಸಂದರ್ಭ ವಿರೋಧವಾಗಿರುವದಲ್ಲಾ ಅಂದರೆ ಇಲ್ಲಿ ಹೀಗೆ ತಿಳಿಯತಕ್ಕುದು. ಪೂರ್ವಕಾಲದಲ್ಲಿ ದೇವತೆಗಳು ತ್ರಿಪುರ ಸಂಹಾರಾರ್ಥವಾಗಿ ವಿಶ್ವಕರ್ಮ ಬ್ರಹ್ಮನಿಂದ ನಿರ್ಮಿಸಲ್ಪಟ್ಟ ಧನುಶ್ರೇಷ್ಠವನ್ನು ಮಹಾದೇವನಿಗೆ ಕೊಟ್ಟವರಾದರು. ಆ ಬಳಿಕ ದಕ್ಷಯಜ್ಞದಲ್ಲಿ ಶಿವ ಕೇಶವರೀರ್ವರಿಗೆ ವಿರೋಧವುಂಟಾಗಿ ಆ ಧನುರ್ದಂಡವು ಜಡೀಕೃತವಾಗಲು ಮಹಾದೇವನು ದೇವತೆಗಳಿಂದ ಪ್ರಾರ್ಥಿತನಾಗಿ ದೇವರಾತನೆಂಬ ರಾಜನಿಗೆ ಕೊಟ್ಟವನಾದನು, ಅದು ಮೊದಲ್ಗೊಂಡು ಆ ಕೋದಂಡವು ಮಿಥಿಲಾಪುರದಲ್ಲಿದ್ದಿತು ಆ ಧನುರ್ದಂಡವನ್ನು ದೇವತೆಗಳು ವರುಣನ ಮುಖಾಂತರ ಜನಕರಾಜನಿಗೆ ಕೊಡಿಸಿದರೆಂದು ಊಹಿಸತಕ್ಕುದು.

ನ್ಮೃತ್ಯುಂ ಪ್ರಾಕೃತಾಂ ಬುದ್ಧಿಮಾಸ್ಥಿತಃ ||೨೩|| ವಧಮಪ್ರತಿರೂಪಂತು ಪಿತುಃ ಶ್ರುತ್ವಾ ಸುದಾರುಣಂ || ಕ್ಷತ್ರಮುತ್ಸಾದಯಂ ರೋಷಾಜ್ಜಾತಂ ಜಾತ ಮನೇಕಶಃ || ೨೪ || ಪೃಥಿವೀಂ ಚಾಖಿಲಾಂ ಪ್ರಾಪ್ಯ ಕಾಶ್ಯಪಾಯ ಮಹಾತ್ಮನೇ || ಯಜ್ಞಸ್ಯಾಂತೇ ತದಾ ರಾಮ ದಕ್ಷಿಣಾಂ ಪುಣ್ಯಕರ್ಮಣೇ || ೨೫ || ದತ್ತ್ವಾ ಮಹೇಂದ್ರ ನಿಲಯಸ್ತಪೋಬಲ ಸಮನ್ವಿತಃ ||(೧) ಸ್ಥಿತೋಸ್ಮಿ ತಸ್ಮಿಂಸ್ತಪ್ಯನ್ಸೈ ಸುಸುಖಂ ಸುರಸೇವಿತೇ || ಅದ್ಯತೂತ್ತಮವೀರ್ಯೇಣ ತ್ವಯಾ ರಾಮ ಮಹಾಬಲ || ) ಶ್ರುತವಾನ್ ಧನುಷೋಭೇದಂ ವಿಸ್ಮಿತಾನಾಂ ನಭಸ್ಥಲೇ || ಭಾಷತಾಂ ದೇವಸಂಘಾನಾಂ ತತೋಹಂ ದ್ರುತಮಾಗತಃ || ೨೬ || ತದಿದಂ

ನ್ನು, ಪಿತರಿ - ತಂದೆಯಲ್ಲಿ, ಅರ್ಜುನಃ - ಕಾರ್ತವೀರ್ಯಾರ್ಜುನನು, ಪ್ರಾಕೃತಾಂ - ತಾಮಸ ಪ್ರಕೃತಿಯಿಂದ ಬದ್ಧವಾದ, ಬುದ್ಧಿಂ-ಪಾಮರಬುದ್ಧಿಯನ್ನು, ಆಸ್ಥಿತಃ-ಹೊಂದಿದವನಾಗಿ, ಮೃತ್ಯುಂ-ಮರಣವನ್ನು, ವಿದಧೇ-ಉಂಟುಮಾಡಿದನು. ||೨೩|| ಅಪ್ರತಿರೂಪಂ-ಸಮಾನವಿಲ್ಲದ, ಸುದಾರುಣಂ-ಅತಿ ಕ್ರೂರವಾದ, ಪಿತುಃ - ತಂದೆಯ, ವಧಂ - ನಾಶವನ್ನು, ಶ್ರುತ್ವಾತು - ಕೇಳಿ, ರೋಷಾತ್-ಕೋಪದಿಂದ, ಅನೇಕಶಃ - ಇಪ್ಪತ್ತೊಂದು ಸಲ, ಜಾತಂಜಾತಂ - ಹುಟ್ಟಿಹುಟ್ಟುತಿರುವ, ಕ್ಷತ್ರಂ - ರಾಜನನ್ನು, ಉತ್ಸಾದಯನ್ - ಮೂಲೋತ್ಪಾಟನ ಮಾಡಿ, ಅಖಿಲಾಂ - ಸಮಸ್ತವಾದ, ಪೃಥಿವೀಂಚ - ಭೂಮಂಡಲವನ್ನು, ಪ್ರಾಪ್ಯ - ಹೊಂದಿ, ಹೇರಾಮ - ಎಲೈ ಶ್ರೀರಾಮನೇ! ತದಾ - ಆಗ, ಯಜ್ಞಸ್ಯ - ಯಜ್ಞದ, ಅಂತೇ- ಕೊನೆಯಲ್ಲಿ, ಮಹಾತ್ಮನೇ - ಮಾಹಾತ್ಮ್ಯವಂತನಾದ, ಪುಣ್ಯಕರ್ಮಣೇ - ಪುಣ್ಯವ್ಯಾಪಾರಿಯಾದ, ಕಾಶ್ಯಪಾಯ - ಕಾಶ್ಯಪ ಋಷಿಗೆ, ದಕ್ಷಿಣಾಂ - ದಕ್ಷಿಣಾರೂಪವನ್ನಾಗಿ, ದತ್ವಾ - ಕೊಟ್ಟು, ಮಹೇಂದ್ರನಿಲಯಃ - ಮಹೇಂದ್ರ ಪರ್ವತವೇ ಆವಾಸಸ್ಥಾನವುಳ್ಳವನಾಗಿ, ತಪೋಬಲಸಮನ್ವಿತಃ - ತಪಶ್ಶಕ್ತಿಯಿಂದ ಕೂಡಿದ, ಅಹಂ - ನಾನು, ನಭಸ್ಥಲೇ-ಅಂತರಿಕ್ಷದಲ್ಲಿ, ವಿಸ್ಮಿತಾನಾಂ - ಆಶ್ಚರ್ಯಗೊಂಡು, ಬಾಷತಾಂ - ಮಾತನಾಡಿಕೊಳ್ಳುತ್ತಿರುವ ದೇವಸಂಘಾನಾಂ - ದೇವಸಮೂಹಗಳ, ಧನುಷೋಭೇದಂ - ನಿನ್ನಿಂದ ಮಾಡಲ್ಪಟ್ಟ ಶೈವಧನುರ್ಭೇದನ ವೃತ್ತಾಂತವನ್ನು, ಶ್ರುತವಾನ್ - ಕೇಳಿದವನಾಗಿ, ತತಃ - ಬಳಿಕ, ದ್ರುತಂ - ಶೀಘ್ರವಾಗಿ, ಆಗತಃ - ಬಂದೆನು. || ೨೬ || ಹೇರಾಮ-ಎಲೈ ಶ್ರೀರಾಮನೇ! ತದಿದಂವೈಷ್ಣವಂ-ಅಂತಹ ಈ ವಿಷ್ಣುಧನುಸ್ಸು, ಮಹತ್ - ದೊಡ್ಡದು, ಪಿತೃಪೈತಾಮಹಂ-ಪಿತೃಪಿತಾಮಹಾದಿಗಳಿಂದ ಸಂಪಾದಿಸಲ್ಪಟ್ಟದೂ ಆಗಿರುವುದರಿಂದ,ಕ್ಷತ್ರಧರ್ಮಂ-ರಾಜಧರ್ಮವನ್ನು,ಪುರಸ್ಕೃತ್ಯ-ಆಶ್ರಯಿಸಿ,ಉತ್ತ

---

ಆತನಲ್ಲಿ ಹೀನಬುದ್ಧಿಯುಳ್ಳವನಾಗಿ ಆತನನ್ನು ಕೊಂದವನಾದನು. || ೧೯-೨೩ || ಆಗ ನಾನು ಅಪ್ರತಿರೂಪವಾದುದೂ, ಘೋರವಾದುದೂ ಆದ ನಮ್ಮ ತಂದೆಯ ಕೊಲೆಯನ್ನು ಕೇಳಿ, ರೋಷದಿಂದ ಆಗಾಗ್ಗೆ ಉದಯಿಸುತ್ತಿದ್ದ ಕ್ಷತ್ರಿಯರೆಲ್ಲರನ್ನು ಇಪ್ಪತ್ತೊಂದು ಸಲ ಸಂಹರಿಸಿದೆನು. ಆ ಬಳಿಕ ಭೂಮಂಡಲವೆಲ್ಲವನ್ನು ನಿಷ್ಕಂಟಕವಾಗಿ ಹೊಂದಿ ಯಾಗವನ್ನು

---

(೧) ಅಧಿಕ ಪಾಠ.

ವೈಷ್ಣವಂ ರಾಮ ಪಿತೃಪೈತಾಮಹಂ ಮಹತ್ ॥ ಕ್ಷತ್ರಧರ್ಮಂ ಪುರಸ್ಕೃತ್ಯ ಗೃಹ್ಣೀಷ್ವ ಧನುರುತ್ತಮಂ ॥ ೨೭ ॥ ಯೋಜಯಸ್ವ ಧನುಶ್ಶ್ರೇಷ್ಠೇ ಶರಂ ಪರ ಪುರಂಜಯಂ ॥ ಯದಿಶಕ್ನೋಷಿ ಕಾಕುತ್ಸ್ಥ ದ್ವಂದ್ವಂ ದಾಸ್ಯಾಮಿ ತೇ ತತಃ ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಸಪ್ತತಿತಮಸ್ಸರ್ಗಃ.

---

ಮಂ - ಉತ್ಕೃಷ್ಟವಾದ, ಧನುಃ - ಈ ವೈಷ್ಣವಧನುಸ್ಸನ್ನು, ಗೃಹ್ಣೀಷ್ವ - ಪರಿಗ್ರಹಿಸು. ॥ ೨೭ ॥ ಹೇಕಾಕುತ್ಸ್ಥ - ಎಲೈ ಶ್ರೀರಾಮನೆ! ಧನುಶ್ಶ್ರೇಷ್ಠೇ - ಶ್ರೇಷ್ಠವಾದ ಧನುಸ್ಸಿನಲ್ಲಿ, ಪರಪುರಂಜಯಂ - ಶತ್ರುಗಳ ಪಟ್ಟಣವನ್ನು ಜಯಿಸುವ, ಶರಂ-ಬಾಣವನ್ನು, ಯೋಜಯಸ್ವ-ಸಂಧಾನಮಾಡು, ಶಕ್ನೋಷಿಯದಿ - ಶರಸಂಧಾನ ಮಾಡುವದರಲ್ಲಿ ಸಮರ್ಥನಾದರೆ, ತತಃ - ಬಳಿಕ, ತೇ - ನಿನಗೆ, ದ್ವಂದ್ವಂ- ದ್ವಂದ್ವ ಯುದ್ಧವನ್ನು, ದಾಸ್ಯಾಮಿ - ಕೊಡುತ್ತೇನೆ.

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಸಪ್ತತಿತಮಸ್ಸರ್ಗಃ.

---

ಮಾಡಿ, ಆಯಾಗಾಂತ್ಯದಲ್ಲಿ ದಕ್ಷಿಣಾ ರೂಪವಾಗಿ ಕಾಶ್ಯಪಮುನಿಗೆ ನಾನು ಆರ್ಜಿಸಿದ ಭೂಮಿಯೆಲ್ಲವನ್ನೂ ಕೊಟ್ಟು, ಮಹೇಂದ್ರ ಪರ್ವತದಲ್ಲಿ ಕೃತನಿಕೇತನನಾಗಿ ತಪೋಬಲ ಸಮನ್ವಿತನಾಗಿರುತ್ತ ನಿನ್ನಿಂದ ಮಾಡಲ್ಪಟ್ಟ, ಅದ್ಭುತವಾದ ಶೈವಧನುರ್ಭೇದವನ್ನು ಕೇಳಿ ಇಲ್ಲಿಗೆ ಬಂದವನಾದೆನು. ॥ ೨೪-೨೬ ॥ ಎಲೈ ಶ್ರೀರಾಮನೆ! ನನ್ನಪಿತೃ ಪಿತಾ ಮಹಾದಿಗಳಿಂದ ಬಂದುದಾಗಿಯೂ, ಮಹತ್ತರವಾಗಿಯೂ ಇರುವ ಈ ವೈಷ್ಣವ ಧನುಸ್ಸನ್ನು ತೆಗೆದುಕೊಂಡು ಕ್ಷತ್ರಧರ್ಮವನ್ನು ತಾಳಿ ಹೆದೆಯನ್ನೇರಿಸುವವನಾಗು. ಆ ಬಳಿಕ ನಿನಗ ದ್ವಂದ್ವಯುದ್ಧವನ್ನೀಯುವೆನು. ॥ ೨೭-೨೮ ॥

ಇಂತಿದು ವೈಷ್ಣವ ಧನುರ್ವೃತ್ತಾಂತ ಕಥಾಕಥನವೆಂಬ
ಎಪ್ಪತ್ತೈದನೆಯ ಸರ್ಗವು ಸಮಾಪ್ತವಾದುದು.

# ಬಾಲಕಾಂಡೇ ಷಟ್ಸಪ್ತತಿತಮಸ್ಸರ್ಗಃ.

---

ಶ್ರುತ್ವಾ ತಜ್ಜಾಮದಗ್ನ್ಯಸ್ಯ ವಾಕ್ಯಂ ದಾಶರಥಿಸ್ತದಾ ॥ ಗೌರವಾ
ದ್ಯಂತ್ರಿತಕಥಃ ಪಿತೂ ರಾಮಮಥಾಬ್ರವೀತ್ ॥ ೧ ॥ ಶ್ರುತವಾನಸ್ಮಿ ಯ
ತ್ಕರ್ಮ ಕೃತವಾನಸಿ ಭಾರ್ಗವ ॥ ಅನುರುಂಧ್ಯಾಮಹೇ ಬ್ರಹ್ಮನ್ ಪಿತುರಾನೃಣ್ಯ
ಮಾಸ್ಥಿತಃ ॥ ೨ ॥ ವೀರ್ಯಹೀನಮಿವಾಶಕ್ತಂ ಕ್ಷತ್ರಧರ್ಮೇಣ ಭಾರ್ಗವ ॥
ಅವಜಾನಾಸಿ ಮೇ ತೇಜಃ ಪಶ್ಯ ಮೇಽದ್ಯ ಪರಾಕ್ರಮಂ ॥ ೩ ॥ ಇತ್ಯುಕ್ತ್ವಾ

---

ದಾಶರಥಿಃ - ದಶರಥ ಪುತ್ರನಾದ ಶ್ರೀರಾಮನು, ಜಾಮದಗ್ನ್ಯಸ್ಯ - ಜಮದಗ್ನಿ ಕುವರ
ನಾದ ಪರಶುರಾಮನ, ತದ್ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ಪಿತುಃ - ತಂದೆಯ, ಗೌರ
ವಾತ್ - ಸಾಮಿಪ್ಯದಿಂದ ಹುಟ್ಟಿದ ಗೌರವಜ್ಞಾನದಿಂದ, ಯಂತ್ರಿತಕಥಃ-ನಿಯಮಿಸಲ್ಪಟ್ಟ ಮಾತು
ಳ್ಳವನಾಗಿ, ಅಥ - ಬಳಿಕ, ರಾಮಂ - ದಶರಥರಾಮನನ್ನು ಕುರಿತು, ಅಬ್ರವೀತ್ - ನುಡಿದನು.
॥ ೧ ॥ ಹೇಭಾರ್ಗವ - ಎಲೈ ಭೃಗುವಂಶೋತ್ಪನ್ನನಾದ, ಹೇಬ್ರಹ್ಮನ್ - ಎಲೈ ಬ್ರಾಹ್ಮಣನೇ,
ಪಿತುಃ - ತಂದೆಯ, ಆನೃಣ್ಯಂ-ಋಣವಿಮೋಚನವನ್ನು, ಆಸ್ಥಿತಃ-ಆಶ್ರಯಿಸಿದವನಾಗಿ, ಯತ್ಕರ್ಮ-
ಯಾವ ಕ್ಷತ್ರಿಯ ವಧಾದಿ ರೂಪವಾದ ಕರ್ಮವನ್ನು, ಕೃತವಾನ್ -ಮಾಡಿದವನು, ಅಸಿ-ಆದೆಯೋ,
(ತತ್ - ಆ ಕರ್ಮವನ್ನು,) ಶ್ರುತವಾನ್ - ಕೇಳಿದವನು, ಅಸ್ಮಿ - ಆದೆನು, ಅನುರುಂಧ್ಯಾಮಹೇ -
ಅಂಗೀಕಾರ ಮಾಡಿರುವೆನು. ॥ ೨ ॥ ಹೇಭಾರ್ಗವ - ಎಲೈ ಪರಶುರಾಮನೇ, ಕ್ಷತ್ರಧರ್ಮೇಣ -
ಕ್ಷತ್ರಿಯಧರ್ಮದಿಂದ, ಮಾಂ - ನನ್ನನ್ನು, ವೀರ್ಯಹೀನಂ - ಬಲಹೀನನಾದ, ಅಶಕ್ತಮಿವ-ಅಸಮ
ರ್ಥನಂತೆ, ಅವಜಾನಾಸಿ - ಅವಮಾನಮಾಡುವೆಯೋ, ಅದ್ಯ - ಈಗ, ಮೇ - ನನ್ನ, ಪರಾ
ಕ್ರಮಂ - ಶೌರ್ಯವನ್ನು, ಪಶ್ಯ-ನೋಡು ॥ ೩ ॥ ರಾಘವಃ - ಶ್ರೀರಾಮನು, ಇತ್ಯುಕ್ತ್ವಾ-
ಹೀಗೆ ಹೇಳಿ, ಕೃದ್ಧಃ - ಕೋಪಿಷ್ಠನಾಗಿ, ಲಘುಪರಾಕ್ರಮಃ - ಲಾಘವದಿಂದ ಶತ್ರುಗಳ ಸಾಮರ್ಥ್ಯ

---

ಜಮದಗ್ನಿ ಋಷಿಕುವರನಾದ ಪರಶುರಾಮನ ಮಾತುಗಳನ್ನು ಕೇಳಿ, ಶ್ರೀರಾಮನು ತಂದೆಯು ಸಮೀಪದಲ್ಲಿರುವನೆಂಬ ಗೌರವದಿಂದ ಹೆಚ್ಚಾಗಿ ಮಾತನಾಡದೆ ಆ ಭಾರ್ಗವರಾಮನನ್ನು ಕುರಿತು ಮಿತವಾಗಿಂತೆಂದನು. "ಎಲೈ ಪರಶುರಾಮನೆ! ವೀರನಾದ ಯಾವನೇ ಆಗಲಿ ವೈರೋಪಶಾಂತಿಯ ಮಾಡಲೇ ಬೇಕಾಗಿರುವುದರಾದ, ನೀನು ಮಹಾ ವೀರಾಗ್ರಣಿಯಾದ ಪಿತೃ ಋಣ ವಿಮೋಚನಕ್ಕಾಗಿ ಇಪ್ಪತ್ತೊಂದಾವರ್ತಿ ಹುಟ್ಟಿ ಹುಟ್ಟಿದ ಕ್ಷತ್ರಿಯರ ವಧೆ ಮಾಡಿದುದನ್ನು ಅನುಮೋದಿಸುತ್ತೇನೆ. ಆದರೆಲೈ ಭಾರ್ಗವನೆ! ನನ್ನನ್ನು ಪರಾಕ್ರಮ ವಿಹೀನನಾಗಿಯೂ, ಕ್ಷತ್ರಧರ್ಮವನ್ನವಲಂಬಿಸಿ ಯುದ್ಧಾದಿಗಳನ್ನು ಮಾಡುವ ವಿಷಯದಲ್ಲಿ ಶಕ್ತಿ

ರಾಘವಃ ಕ್ರುದ್ಧೋ ಭಾರ್ಗವಸ್ಯ ಶರಾಸನಂ ॥ ಶರಂಚ ಪ್ರತಿಜಗ್ರಾಹ ಹಸ್ತಾ
ಲ್ಲಘುಪರಾಕ್ರಮಃ ॥ ೪ ॥ ಆರೋಪ್ಯ ಸ ಧನೂ ರಾಮಶ್ಶರಂ ಸಜ್ಯಂ ಚಕಾ
ರಹ ॥ ಜಾಮದಗ್ನ್ಯಂ ತತೋ ರಾಮಂ ರಾಮಃ ಕ್ರುದ್ಧೋ ಬ್ರವೀದ್ವಚಃ ॥೫॥
ಬ್ರಾಹ್ಮಣೋಸೀತಿ ಪೂಜ್ಯೋ ಮೇ ವಿಶ್ವಾಮಿತ್ರಕೃತೇ ನಚ ॥ ತಸ್ಮಾಚ್ಛಕ್ತೋನ
ತೇ ರಾಮ ಮೋಕ್ತುಂ ಪ್ರಾಣಹರಂ ಶರಂ ॥ ೬ ॥ ಇಮಾಂ ವಾದಗತಿಂ
ರಾಮ ತಪೋಬಲ ಸಮಾರ್ಜಿತಾನ್ ॥ ಲೋಕಾನಪ್ರತಿಮಾನ್ವಾ ತೇ ಹನಿಷ್ಯಾ
ಮಿ ಯದಿಚ್ಛಸಿ ॥ ೭ ॥ ನಹ್ಯಯಂ ವೈಷ್ಣವೋ ದಿವ್ಯಶ್ಶರಃ ಪರ ಪುರಂ

---

ಪಕ್ಷಳಿಸುವವನಾಗಿ, ಭಾರ್ಗವಸ್ಯ - ಪರಶುರಾಮನ, ಹಸ್ತಾತ್ - ಕೈಯ್ಯಿಂದ, ಶರಾಸನಂ - ಧನುಸ್ಸನ್ನೂ, ಶರಂಚ - ಬಾಣವನ್ನೂ, ಪ್ರತಿಜಗ್ರಾಹ - ಸೆಳೆದುಕೊಂಡನು, ॥ ೪ ॥ ಸರಾಮಃ- ಆ ಶ್ರೀರಾಮನು, ಧನುಃ - ಧನುಸ್ಸನ್ನು, ಆರೋಪ್ಯ - ಹೆದೆಯೇರಿಸಿ, ಶರಂ - ಬಾಣವನ್ನು, ಸಜ್ಜಂ- ಬಾಣಾರೋಪಣಮಾಡಲಣಿಯನ್ನಾಗಿ, ಚಕಾರಹ - ಮಾಡಿದನಷ್ಟೆ, ತತಃ-ಬಳಿಕ, ರಾಮಃ-ಶ್ರೀರಾಮನು, ಕೃದ್ಧಃ - ಕೋಪಿಷ್ಠನಾಗಿ, ಜಾಮದಗ್ನ್ಯಂ - ಜಮದಗ್ನಿಪುತ್ರನಾದ, ರಾಮಂ - ಪರಶುರಾಮನನ್ನು ಕುರಿತು, ವಚಃ - ಮಾತನ್ನು, ಅಬ್ರವೀತ್ - ನುಡಿದನು ॥ ೫ ॥ ಹೇರಾಮ - ಎಲೈ ಪರಶುರಾಮನೇ, ತ್ವಂ - ನೀನು, ಬ್ರಾಹ್ಮಣಃ - ಬ್ರಾಹ್ಮಣನು, ಅಸಿ - ಆಗಿರುವೆ, ಇತಿ- ಈ ಕಾರಣದಿಂದಲೂ, ವಿಶ್ವಾಮಿತ್ರವಚಃ- ನನ್ನ ಗುರುವಾದ ವಿಶ್ವಾಮಿತ್ರಮುನಿಯ ಸಂಬಂಧದಿಂದಲೂ, ಮೇ - ನನಗೆ, ಪೂಜ್ಯಃ - ಪೂಜ್ಯನು, ಅಸಿ - ಆಗಿರುವೆ, ತಸ್ಮಾತ್ - ಆ ಕಾರಣ, ತೇ - ನಿನಗೆ, ಪ್ರಾಣಹರಂ - ಪ್ರಾಣಾಪಹಾರಕವಾದ, ಶರಂ - ಬಾಣವನ್ನು, ಮೋಕ್ತುಂ - ಬಿಡಲೋಸುಗ, ನಶಕ್ತಃ - ಅಸಮರ್ಥನಾಗಿರುವೆನು. ॥ ೬ ॥ ಹೇರಾಮ - ಎಲೈ ಪರಶುರಾಮನೇ, ಇಮಾಂ-ಈ, ಪಾದಗತಿಂ - ಪಾದಗಳ ಗಮನ ಶಕ್ತಿಯನ್ನು, ತೇ - ನಿನ್ನ, ತಪೋಬಲಸಮಾರ್ಜಿತಾನ್ - ತಪಶ್ಶಕ್ತಿಯಿಂದ ಸಂಪಾದಿತವಾದ, ಅಪ್ರತಿಮಾನ್ - ಸಮಾನರಹಿತಗಳಾದ, ಲೋಕಾನಾಂ-ಪರಲೋಕಗಳನ್ನಾದರೂ, ಯತ್ - ಯಾವದನ್ನು, ಇಚ್ಛಸಿ - ಅಪೇಕ್ಷಿಸುವೆಯೋ, ತತ್- ಅದನ್ನು, ಹನಿಷ್ಯಾಮಿ- ಸಂಹರಿಸುತ್ತೇನೆ. ॥ ೭ ॥ ಹಿ - ಯಾವ ಕಾರಣ, ದಿವ್ಯಃ - ದೇವತಾ ಸಂಬಂಧವಾದ, ಪರಪು

---

ಯಿಲ್ಲದವನೆಂದೂ ತಿಳಿದವನಾಗಿ ಅವಮಾನಗೊಳಿಸಿದೆಯಲ್ಲವೆ! ಇದೀಗ ನನ್ನ ಪರಾಕ್ರಮವನ್ನಾದರೂ ನೋಡುವವನಾಗು. ” ಇಂತು ನುಡಿದ ಮಹಾ ಪರಾಕ್ರಮಶಾಲಿಯಾದ ರಾಮಚಂದ್ರನು ಕೃದ್ಧನಾಗಿ, ಆ ಭಾರ್ಗವರಾಮನ ಹಸ್ತದಿಂದ ಶರವನ್ನೂ ಶರಾಸನವನ್ನೂ ಸೆಳೆದುಕೊಂಡನು.॥೧-೪॥ ಈ ಪ್ರಕಾರವಾಗಿ ಶರಶರಾಸನವನ್ನು ತೆಗೆದುಕೊಂಡ ಶ್ರೀರಾಮನು ಧನುರಾರೋಪಣೆಯನ್ನು ಮಾಡಿ, ಬಾಣಪ್ರಯೋಗವಂ ಗೈಯಲು ಸಿದ್ಧಮಾಡಿಕೊಂಡು, ಕೋಪದಿಂದಾಪರಶುರಾಮನನ್ನು ಕುರಿತು ಹೀಗೆಂದನು. ॥ ೫ ॥ “ ಎಲೈ ಪರಶುರಾಮನೆ! ನೀನು ಬ್ರಾಹ್ಮಣನಾಗಿರುವುದರಿಂದಲೂ, ವಿಶ್ವಾಮಿತ್ರಮುನಿಯ ಸಂಬಂಧಿಯಾದುದರಿಂದಲೂ ನನಗೆ ಪೂಜ್ಯನಾಗಿರುವೆಯಾದುದರಿಂದ ನಿನ್ನ ಪ್ರಾಣಹಾರಕವಾದ

ಜಯಃ || ಮೋಘಃ ಪತತಿ ವೀರ್ಯೇಣ ಬಲದರ್ಪ ವಿನಾಶನಃ || ೮ || ವರಾಯುಧ ಧರಂ ರಾಮಂ ದ್ರಷ್ಟುಂ ಸರ್ಷಿಗಣಾಸ್ಸುರಾಃ || ಪಿತಾಮಹಂ ಪುರಸ್ಕೃತ್ಯ ಸಮೇತಾಸ್ತತ್ರ ಸಂಘಶಃ || ೯ || ಗಂಧರ್ವಾಪ್ಸರಸಶ್ಚೈವ ಸಿದ್ಧ ಚಾರಣ ಕಿನ್ನರಾಃ || ಯಕ್ಷರಾಕ್ಷಸ ನಾಗಾಶ್ಚ ತದ್ದ್ರಷ್ಟುಂ ಮಹದದ್ಭುತಂ || ೧೦ || ಜಡೀಕೃತೇ ತದಾಲೋಕೇ ರಾಮೇ ವರಧನುರ್ಧರೇ || ನಿರ್ವೀರ್ಯೋ

---

ರಂಜಯಃ - ಶತ್ರುಪಟ್ಟಣಗಳನ್ನು ಜಯಿಸುವ, ವೈಷ್ಣವಃ - ವಿಷ್ಣುಸಂಬಂಧವಾದ, ಪರದುರ್ಗವಿನಾಶನಃ - ಶತ್ರುಗಳ ಗರ್ವವನ್ನು ನಾಶಗೊಳಿಸುವ, ಅಯಂಶರಃ - ಈ ಬಾಣವು, ವೀರ್ಯೇಣ-ಸಾಮರ್ಥ್ಯದಿಂದ, ಮೋಘಃ - ವ್ಯರ್ಥವಾಗಿ, ನಪತತಿ - ಬೀಳುವುದಿಲ್ಲವೋ, ತತ್ - ಆ ಕಾರಣ, ಯದಿಚ್ಛಸಿ - ಯಾವದನ್ನು ತೋರುವೆಯೋ ಅದನ್ನು, ಹನಿಷ್ಯಾಮಿ-ಹೊಡೆಯುವೆನು,||೮||ವರಾಯುಧಧರಂ-ಶ್ರೇಷ್ಠವಾದ ಆಯುಧಗಳಾದ ಧನುರ್ಬಾಣಗಳನ್ನು ಧರಿಸಿರುವ, ರಾಮಂ - ಶ್ರೀರಾಮನನ್ನು, ದ್ರಷ್ಟುಂ - ನೋಡಲೋಸುಗ, ಸರ್ಷಿಗಣಾಃ - ಋಷಿತಂಡಗಳಿಂದೊಡಗೂಡಿದ, ದೇವಾಃ - ದೇವತೆಗಳು, ಪಿತಾಮಹಂ-ಬ್ರಹ್ಮದೇವರನ್ನು, ಪುರಸ್ಕೃತ್ಯ-ಮುಂದುಮಾಡಿಕೊಂಡು, ತತ್ರ-ಆ ಮಾರ್ಗದಲ್ಲಿ- ಸಂಘಶಃ - ಗುಂಪುಗಳಾಗಿ, ಸಮೇತಾಃ - ಕೂಡಿದರು ||೯|| ಗಂಧರ್ವಾಪ್ಸರಸಶ್ಚೈವ-ಗಂಧರ್ವರೂ ಅಪ್ಸರಸ್ತ್ರೀಯರೂ, ಸಿದ್ಧಚಾರಣಕಿನ್ನರಾಃ - ಸಿದ್ಧರೂ, ಚಾರಣರೂ, ಕಿನ್ನರರೂ, ಯಕ್ಷರಾಕ್ಷಸನಾಗಾಶ್ಚ - ಯಕ್ಷರೂ, ರಾಕ್ಷಸರೂ, ಸರ್ಪಗಳೂ, ಅದ್ಭುತಂ-ಆಶ್ಚರ್ಯಕರವಾದ,ಮಹತ್- ದೊಡ್ಡದಾದ, ತತ್ - ಆ, ಕರ್ಮಜ- ಪರಶುರಾಮ ತಿರಸ್ಕರ ರೂಪವಾದ ಕಾರ್ಯವನ್ನೂ,ದ್ರಷ್ಟುಂ ನೋಡಲು, ಸಮೇತಾಃ - ಗುಂಪುಗೂಡಿದರು. ||೧೦|| ತದಾ - ಆಗ, ಲೋಕೇ - ಜನವು, ಜಡೀಕೃತೇಸತಿ - ಸ್ತಂಭೀಕೃತವಾದುದಾಗಲು, ರಾಮೇ- ಶ್ರೀರಾಮನು, ಪರಮಧನುರ್ಧರೇ-ಶ್ರೇಷ್ಠ

---

ಬಾಣವನ್ನು ಪ್ರಯೋಗಿಸಲು ಸಮರ್ಥನಾಗಲಾರೆನು, ಆದುದರಿಂದ ಇಚ್ಛಾಮಾತ್ರದಿಂದಲೇ ಬೇಕಾದಕಡೆಗೆ ಹೋಗುವ ಶಕ್ತಿಯುಳ್ಳ ಈ ನಿನ್ನ ಪಾದಗತಿಯನ್ನೋ, ನಿನ್ನ ತಪೋಬಲದಿಂದ ಸಂಪಾದಿತವಾದ ಲೋಕಗಳನ್ನೋ, ಇವೆರಡರಲ್ಲಿ ಯಾವುದನ್ನು ಅಪೇಕ್ಷಿಸುವೆಯೋ ಅದನ್ನು ಸಂಹರಿಸುತ್ತೇನೆ. ಎಲೈ ಪರಶುರಾಮನೆ! ಶತ್ರುಪುರಸಂಹಾರಕವು ಪರಾಕ್ರಮದಿಂದಲೇ; ಪರಾಕ್ರಮವನ್ನೂ ದರ್ಪವನ್ನೂ ನಾಶಗೊಳಿಸುವ ಈ ವೈಷ್ಣವ ಧನುಸ್ಸು ಲಕ್ಷ್ಯವನ್ನು ಹೊಡಿಯದೆ ವ್ಯರ್ಥವಾಗಲಾರದು.” || ೮ || ರಾಮಚಂದ್ರ ನೀರೀತಿ ನುಡಿಯುತಿರಲು, ಶ್ರೇಷ್ಠವಾದ ವೈಷ್ಣವ ಧನುಸ್ಸನ್ನು ಪಿಡಿದಿರುವ ಆ ರಾಮಚಂದ್ರನನ್ನು ನೋಡಲು, ಋಷಿಗಣಗಳಿಂದೊಡಗೂಡಿದ ದೇವತೆಗಳೆಲ್ಲರೂ, ನಾಲ್ಮೊಗನನ್ನು ಮುಂದಿರಿಸಿಕೊಂಡು ಆ ಸ್ಥಳಕ್ಕೆ ಬಂದವರಾದರು. ಗಂಧರ್ವರೂ, ಅಪ್ಸರರೂ, ಸಿದ್ಧರೂ, ಚಾರಣರೂ, ಕಿನ್ನರರೂ, ಯಕ್ಷರಾಕ್ಷಸ ಪನ್ನಗರೂ ಸಹ ಈ ಮಹದದ್ಭುತ ಕಾರ್ಯವನ್ನು ನೋಡಲೋಸುಗ ಅಲ್ಲಿ ಬಂದವರಾದರು. || ೯-೧೦ || ಆಗ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ರಾಮಚಂದ್ರನಿಂದ ಜನಗಳೆಲ್ಲರೂ ಸ್ತಬ್ಧರಾಗಲು, ಪರಶುರಾಮನು ವೀರ್ಯ

ಜಾಮದಗ್ನ್ಯೋ ಸೌ ರಾಮೋ ರಾಮಮುದೈಕ್ಷತ॥ ೧೧ ॥ (೧) ತೇಜೋಭಿಹತ ವೀರ್ಯತ್ವಾಜ್ಜಾಮದಗ್ನ್ಯೋ ಜಡೀಕೃತಃ ॥ರಾಮಂ ಕಮಲಪತ್ರಾಕ್ಷಂ ಮಂದಂ ಮಂದಮುವಾಚಹ ॥ ೧೨ ॥ ಕಾಶ್ಯಪಾಯ ಮಯಾ ದತ್ತಾ ಯದಾ ಪೂರ್ವಂ ವಸುಂಧರಾ ॥ ವಿಷಯೇ ಮೇ ನವಸ್ತವ್ಯಮಿತಿ ಮಾಂ ಕಾಶ್ಯಪೋಽಬ್ರವೀತ್ ॥ ೧೩ ॥ ಸೋಽಹಂ ಗುರುವಚಃ ಕುರ್ವನ್ ಪೃಥಿವ್ಯಾಂ ನವಸೇನಿಶಾಂ ॥ ಇತಿ ಪ್ರತಿಜ್ಞಾ ಕಾಕುತ್‍ಸ್ಥ ಕೃತಾಭೂಃ ಕಾಶ್ಯಪಸ್ಯಹಿ ॥೧೪॥ ತದಿಮಾಂ ತ್ವಂ ಗತಿಂ

---

ವಾದ ಧನುಸ್ಸನ್ನು ಧರಿಸಲು, ಜಾಮದಗ್ನ್ಯಃ - ಜಮದಗ್ನಿ ಪುತ್ರನಾದ, ಅಸೌರಾಮಃ-ಈ ಪರಶುರಾಮನು, ನಿರ್ವೀರ್ಯಃ - ಸಾಮರ್ಥ್ಯವಿಲ್ಲದವನಾಗಿ, ರಾಮಂ - ಶ್ರೀರಾಮನನ್ನು, ಉದೈಕ್ಷತ - ಕಂಡನು. ॥ ೧೧ ॥ ಜಾಮದಗ್ನ್ಯಃ - ಜಮದಗ್ನಿ ಪುತ್ರನಾದ ಪರಶುರಾಮನು, ತೇಜೋಭಿಹತ ವೀರ್ಯತ್ವಾತ್ - ರಾಮತೇಜಸ್ಸಿನಿಂದ ಸಂಹೃತವಾದ ವೀರ್ಯವುಳ್ಳವನಾಗಿ. ಜಡೀಕೃತಃ-ಸ್ತಬ್ಧನಾಗಿ ಮಾಡಲ್ಪಟ್ಟು, ಕಮಲಪತ್ರಾಕ್ಷಂ - ಕಮಲದಳೆಗಳಿಗೆ ಸಮನಾದ ನೇತ್ರಗಳುಳ್ಳ, ರಾಮಂ - ಶ್ರೀರಾಮನನ್ನು ಕುರಿತು, ಮಂದಂ ಮಂದಂ - ಮೆಲ್ಲಮೆಲ್ಲಗೆ, ಉವಾಚ - ಹೇಳಿದನು. ॥ ೧೨ ॥ ಪೂರ್ವಂ - ಪೂರ್ವದಲ್ಲಿ, ಕಾಶ್ಯಪಾಯ - ಕಶ್ಯಪಋುಷಿಗೋಸ್ಕರ, ಮಯಾ-ನನ್ನಿಂದ, ವಸುಂಧರಾ- ಭೂಮಿಯು, ಯದಾ - ಯಾವಾಗ, ದತ್ತಾ - ಕೊಡಲ್ಪಟ್ಟಿತೋ, ತದಾ - ಆಗ, ಮೇ - ನನ್ನ, ವಿಷಯೇ - ದೇಶದಲ್ಲಿ ನವಸ್ತವ್ಯಮಿತಿ - ಇರಕೂಡದೆಂದು, ಕಾಶ್ಯಪಃ - ಕಶ್ಯಪಬ್ರಹ್ಮನು, ಮಾಂ- ನನ್ನನ್ನು ಕುರಿತು, ಅಬ್ರವೀತ್ - ನುಡಿದನು. ॥ ೧೩ ॥ ಸೋಹಂ-ಅಂತಹ ನಾನು, ಗುರುವಚಃ- ಗುರುವಾದ ಕಶ್ಯಪಋುಷಿಯ ಮಾತನ್ನು, ಕುರ್ವನ್ - ನಡಿಸುತ್ತ, ಪೃಥಿವ್ಯಾಂ - ನೆಲದಲ್ಲಿ, ಅನಿಶಂ - ನಿರಂತರದಲ್ಲಿಯೂ, ನವಸೇ - ಇರುವದಿಲ್ಲವು, ಹೇಕಾಕುತ್‍ಸ್ಥ - ಎಲೈ ಶ್ರೀರಾಮನೇ! ಪ್ರತಿಜ್ಞಾ - ಪ್ರತಿಜ್ಞೆಯು, ಕೃತಾ - ಮಾಡಲ್ಪಟ್ಟಿತು, ಭೂಃ - ಭೂಮಿಯು, ಕಾಶ್ಯಪಸ್ಯ- ಕಶ್ಯಪಋುಷಿಸಂಬಂಧವಾಗಿ, ಕೃತಾಹಿ - ಮಾಡಲ್ಪಟ್ಟಿತಷ್ಟೆ. ॥ ೧೪ ॥ ಹೇವೀರ - ಎಲೈ ಶೂರನೇ! ಹೇರಾಘವ -

---

ಹೀನನಾಗಿ ರಘುರಾಮನನ್ನು ನೋಡಿದವನಾದನು. ಶ್ರೀರಾಮತೇಜದಿಂದ ಸಂಹೃತವಾದ ವೀರ್ಯವುಳ್ಳವನಾಗಲು ಜಮದಗ್ನಿ ಕುಮಾರನಾದ ಪರಶುರಾಮನು ಜಡೀಕೃತನಾಗಿ ತಾವರೆಯಂತೆ ಕಂಗಳುಳ್ಳ ರಾಮಮೂರ್ತಿಯನ್ನು ಕುರಿತು ಮೆಲ್ಲ ಮೆಲ್ಲನೆ ಹೇಳತೊಡಗಿದನು. "ಎಲೈ ಶ್ರೀರಾಮನೆ! ಹಿಂದೆ ನಾನು ಭೂಮಂಡಲವೆಲ್ಲವನ್ನೂ

---

ಟಿ. (೧) ಪರಶುರಾಮನಲ್ಲಿದ್ದ ವೈಷ್ಣವ ತೇಜಸ್ಸು ಶ್ರೀರಾಮಚಂದ್ರನಲ್ಲಿ ಸೇರಲು ಆ ಭಾರ್ಗವ ರಾಮನ ಪೌರುಷವು ಸ್ತಬ್ಧವಾಗಿ ಹೋಯಿತು. ಇದಕ್ಕೆ ಪುರಾಣಾಂತರ ಪ್ರಮಾಣವೂ ಇದೆ.

"ತತಃಪರಶುರಾಮಸ್ಯ ದೇಹಾನ್ನಿರ್ಗತ್ಯವೈಷ್ಣವಂ ॥ ಪಶ್ಯತಾಂ ಸರ್ವದೇವಾನಾಂ ತೇಜೋ ರಾಮಮುಪಾವಿಶತ್"

(ನಾರಸಿಂಹ)

ಆ ಬಳಿಕ ಪರಶುರಾಮನ ದೇಹದಿಂದ ವೈಷ್ಣವ ತೇಜಸ್ಸು ಹೊರಹೊರಟು ಸಕಲದೇವತೆಗಳು ನೋಡುತಿರಲು ಶ್ರೀರಾಮ ಮೂರ್ತಿಯ ದೇಹದಲ್ಲಿ ಸಂಕ್ರಾಂತವಾಯಿತು. (ಇದು ಮಹೇಶ್ವರತೀರ್ಥೀಯ ಮತ್ತು ಗೋವಿಂದರಾಜೀಯ ವ್ಯಾಖ್ಯಾನಕಾರರ ಅಭಿಪ್ರಾಯ.)

ವೀರಂ ಹಂತುಂ ನಾರ್ಹಸಿ ರಾಘವ ॥ ಮನೋಜವಂ ಗಮಿಷ್ಯಾಮಿ ಮಹೇಂದ್ರಂ ಪರ್ವತೋತ್ತಮಂ ॥೧೫॥ ಲೋಕಾಸ್ತ್ವಪ್ರತಿಮಾ ರಾಮ ನಿರ್ಜಿತಾಸ್ತಪಸಾ ಮಯಾ ॥ ಜಹಿ ತಾನ್ ಶರಮುಖ್ಯೇನ ಮಾಭೂತ್ಕಾಲಸ್ಯ ಪರ್ಯಯಃ॥ ೧೬ ॥ (೧)ಅಕ್ಷಯ್ಯಂ ಮಧುಹಂತಾರಂ ಜಾನಾಮಿ ತ್ವಾಂ ಸುರೇಶ್ವರಂ ॥ ಧನುಷೋಽಸ್ಯ ಪರಾಮರ್ಶಾತ್ಸ್ವಸ್ತಿ ತೇಽಸ್ತು ಪರಂತಪ ॥ ೧೭ ॥ ಏತೇ ಸುರಗಣಾಸ್ಸರ್ವೇ ನಿರೀಕ್ಷಂತೇ ಸಮಾಗತಾಃ ॥ ತ್ವಾಮಪ್ರತಿಮಕರ್ಮಾಣಮಪ್ರತಿ

---

ಎಲೈ ಶ್ರೀರಾಮನೇ! ತತ್ - ಆ ಕಾರಣ ತ್ವಂ - ನೀನು, ಇಮಾಂಗತಿಂ - ಈ ಪಾದಗಮನವನ್ನು ಹಂತುಂ - ಸಂಹರಿಸಬೋಸುಗ, ನಾರ್ಹಸಿ - ಯೋಗ್ಯನಾಗದಿರು, ಮನೋಜವಂ - ಮನಸ್ಸಿನ ವೇಗವುಳ್ಳವನಾಗಿ, ಪರ್ವತೋತ್ತಮಂ - ಪರ್ವತಶ್ರೇಷ್ಠವಾದ, ಮಹೇಂದ್ರಂ - ಮಹೇಂದ್ರಪರ್ವತವನ್ನು ಕುರಿತು, ಗಮಿಷ್ಯಾಮಿ - ಹೋಗುವೆನು. ॥೧೫॥ ಹೇರಾಮ-ಎಲೈ ಶ್ರೀರಾಮನೇ! ಮಯಾ-ನನ್ನಿಂದ, ಅಪ್ರತಿಮಾಃ - ಸಾಮ್ಯರಹಿತವಾದ, ಲೋಕಾಃ - ಲೋಕಗಳು, ತಪಸಾ - ತಪದಿಂದ, ನಿರ್ಜಿತಾಃ - ಜಯಿಸಲ್ಪಟ್ಟವು, ತಾನ್ - ಆ ಪರಲೋಕಗಳನ್ನು, ಶರಮುಖ್ಯೇನ - ಶ್ರೇಷ್ಠವಾದ ಬಾಣದಿಂದ, ಜಹಿ - ಜಯಿಸುವವನಾಗು, ಕಾಲಸ್ಯ-ಕಾಲದ, ಪರ್ಯಯಃ-ವಿಲಂಬವು, ಮಾಭೂತ್- ಆಗದಿರಲಿ, ॥೧೬॥ ಹೇಪರಂತಪ - ಎಲೈ ಶತ್ರುಸಂಹಾರಕನೇ! ಅಸ್ಯಧನುಷಃ - ಈ ಧನುಸ್ಸಿನ, ಪರಾಮರ್ಶಾತ್- ವಿಮರ್ಶೆಯಿಂದ, ತ್ವಾಂ-ನಿನ್ನನ್ನು, ಅಕ್ಷಯ್ಯಂ-ನಾಶರಹಿತನಾದ, ಮಧುಹಂತಾರಂ-ಮಧ್ವಾಸುರ ಸಂಹಾರಕನಾದ, ಸುರೇಶ್ವರಂ - ದೇವದೇವೋತ್ತಮನಾದ ಶ್ರೀ ಮಹಾ ವಿಷ್ಣುವನ್ನಾಗಿ, ಜಾನಾಮಿ - ತಿಳಿಯುತ್ತೇನೆ, ತೇ - ನಿನಗೆ, ಸ್ವಸ್ತಿ - ಶುಭವು, ಅಸ್ತು-ಆಗಲಿ. ॥೧೭॥

---

ಕಾಶ್ಯಪಮುನಿಗೆ ವಾಸಮಾಡಲಾಮುನಿಯು ನಾನಾತನ ದೇಶದಲ್ಲಿರಕೂಡದೆಂದು ಹೇಳಿದನು. ಈ ರೀತಿ ಕಾಶ್ಯಪಮುನಿಯಿಂದುಕ್ತನಾದ ನಾನು ಗುರುವಾಕ್ಯವನ್ನು ನೆರವೇರಿಸುವವನಾಗಿ ರಾತ್ರಿಯವೇಳೆಯಲ್ಲಿ ಭೂಮಿಯಲ್ಲಿರುವುದಿಲ್ಲವು. ಈ ರೀತಿ ಪ್ರತಿಜ್ಞೆ ಮಾಡಲಾಯಿತು, ಕಾಶ್ಯಪಮುನಿಗೆ ಭೂಮಿಯೂ ಕೊಡಲಾಯಿತು. ॥೧೧ ೧೪॥ ಆದುದರಿಂದೆಲೈ ವೀರನಾದ ರಘುರಾಮನೇ! ಇಚ್ಛಾಶಕ್ತಿಯಿಂದಲೇ ಬೇಕಾದ ಕಡೆಗೆ ಹೋಗತಕ್ಕ ಶಕ್ತಿಯುಳ್ಳ

---

ಟಿ (೧) "ಅಕ್ಷಯ್ಯಂ ಮಧುಹಂತಾರಂ ಸುರೇಶ್ವರಂ ತ್ವಾಂ ಜಾನಾಮಿ" ಎಂಬ ಭಾರ್ಗವರಾಮನ ವಚನದಲ್ಲಿ ಅರ್ಥಸ್ವಾರಸ್ಯವು ಹೀಗೆ:—

"ಅಕ್ಷಯ್ಯಂ" ಎಂಬ ಪದದಿಂದ "ತದಾಹುರೇಕೋಹವೈನಾರಾಯಣ ಆಸೀನ್ನ ಬ್ರಹ್ಮಾ ನೇಶಾನೋ ನಾಪೋ ನಾಗ್ನೀಷೋಮೌ ನೇಮೇದ್ಯಾವಾ ಪೃಥಿವೀ ನನಕ್ಷತ್ರಾಣಿ ನಸೂರ್ಯೋ ನಚಂದ್ರಮಾಸ್ಸಏಕಾಕೀನಸ್ಸರಮೇತ"ಎಂಬ ಮಹೋಪನಿಷದ್ವಾಕ್ಯಾನುಸಾರವಾಗಿ ಶಾಶ್ವತನಾಗಿರುವವನೂ, ಸುರೇಶ್ವರನೂ ಆದ ಶ್ರೀಮನ್ನಾರಾಯಣನೆಂದು ನಿನ್ನನ್ನು ತಿಳಿಯುತ್ತೇನೆ. ಇಷ್ಟೆಯಲ್ಲದೆ "ಉತಾಮೃತತ್ವಸ್ಯೇಶಾನಃ" ಎಂಬ ಶ್ರುತ್ಯನುಸಾರವಾಗಿಯೂ "ಬ್ರಹ್ಮೈವತ್ವಂ ತ್ವಾಂ ಮಧುಹಂತಾರಂ ಶ್ರೀಮನ್ನಾರಾಯಣಮಿತಿ ಜಾನಾಮಿ ಅಸ್ಯವೈಷ್ಣವಸ್ಯಧನುಷಃ ಇತರ ದುರ್ಧಾರೋಽಪಸ್ಯಪರಾಮರ್ಶಾತ್" ಎಂಬ ಅರ್ಥವೂ ಆಗುತ್ತದೆ.

ದ್ವಂದ್ವ ಮಾಹವೇ ॥ ೧೮ ॥ ನಚೇಯಂ ಮಮ ಕಾಕುತ್‌ಸ್ಥ ವ್ರೀಳಾಭವಿತು
ಮರ್ಹತಿ ॥ ತ್ವಯಾ ತ್ರೈಲೋಕ್ಯ ನಾಥೇನ ಯದಹಂ ವಿಮುಖೀ ಕೃತಃ ॥೧೯॥
ಶರಮಪ್ರತಿಮಂ ರಾಮ ಮೋಕ್ತುಮರ್ಹಸಿ ಸುವ್ರತ ॥ ಶರಮೋಕ್ಷೇ ಗಮಿ
ಷ್ಯಾಮಿ ಮಹೇಂದ್ರಂ ಪರ್ವತೋತ್ತಮಂ ॥ ೨೦ ॥ ತಥಾ ಬ್ರುವತಿ ರಾಮೇತು
ಜಾಮದಗ್ನ್ಯೇ ಪ್ರತಾಪವಾನ್ ॥ ರಾಮೋ ದಾಶರಥಿ ಶ್ಶ್ರೀಮಾಂ ಶ್ಚಿಕ್ಷೇಪ
ಶರಮುತ್ತಮಂ ॥ ೨೧॥ ಸಹತಾನ್ ದೃಶ್ಯ ರಾಮೇಣ ನ್ವಾನ್ ಲೋಕಾಂ ಸ್ತಪಸಾ

ಸರ್ವೇ - ಸಮಸ್ತರಾದ, ಏತೇಸುರಗಣಾಃ - ಈ ದೇವತಂಡಗಳು, ಸಮಾಗತಾಃ - ಬಂದು, ಆಹವೇ - ಯುದ್ಧದಲ್ಲಿ, ಅಪ್ರತಿಕರ್ಮಾಣಂ - ಅನದೃಶವಾದ ವ್ಯಾಪಾರವುಳ್ಳ, ಅಪ್ರತಿದ್ವಂದ್ವಂ - ಸರಿಯಿಲ್ಲದಿರುವ, ತ್ವಾಂ-ನಿನ್ನನ್ನು, ಪಿರೀಕ್ಷಂತೇ-ನೋಡುತ್ತಿರುವವು. ॥ ೧೮ ॥ ಹೇಕಾಕುತ್ಸ್ಥ - ಎಲೈ ಕಕುತ್ಸ್ಥವಂಶೋತ್ಪನ್ನನೇ, ಯತ್ - ಯಾವ ಕಾರಣ, ಅಹಂ - ನಾನು, ತ್ರೈಲೋಕ್ಯ ನಾಥೇನ- ಲೋಕತ್ರಯಾಧೀಶ್ವರನಾದ, ತ್ವಯಾ-ನಿನ್ನಿಂದ, ವಿಮುಖೀಕೃತಃ - ತಿರಸ್ಕರಿಸಲ್ಪಟ್ಟೆನೋ, ಇಯಂ - ಈ ತಿರಸ್ಕಾರದಿಂದುಂಟಾದ, ವ್ರೀಳಾ - ನಾಚಿಕೆಯು, ಮಮ - ನನಗೆ, ಭವಿತುಂ-ಆಗಲು, ನಾರ್ಹತಿ - ಯೋಗ್ಯವಾಗಲಾರದು. ॥ ೧೯ ॥ ಹೇಸುವ್ರತ-ಎಲೈ ಒಳ್ಳೆಯ ನಿಯಮವುಳ್ಳವನೇ! ಹೇರಾಮ - ಎಲೈ ಶ್ರೀರಾಮನೇ, ಅಪ್ರತಿಮಂ - ಅಸದೃಶವಾದ, ಶರಂ-ಬಾಣವನ್ನು, ಮೋಕ್ತುಂ-ಬಿಡಲೋಸುಗ, ಅರ್ಹಸಿ - ಯೋಗ್ಯನಾಗು, ಶರಮೋಕ್ಷೇಸತಿ- ಬಾಣವು ಬಿಡಿಸಲ್ಪಡಲು, ಪರ್ವತೋತ್ತಮಂ - ಬೆಟ್ಟಗಳಲ್ಲಿ ಉತ್ತಮನಾದ, ಮಹೇಂದ್ರಂ - ಮಹೇಂದ್ರಾದ್ರಿಯನ್ನು, ಗಮಿಷ್ಯಾಮಿ - ಹೊಂದುವೆನು. ॥ ೨೦ ॥ ಜಾಮದಗ್ನ್ಯೇ - ಜಮದಗ್ನಿಪುತ್ರನಾದ, ರಾಮೇ - ಪರಶುರಾಮನು, ತಥಾ - ಆ ಪ್ರಕಾರವಾಗಿ, ಬ್ರುವತಿಸತಿ - ಹೇಳಲು, ದಾಶರಥಿಃ - ದಶರಥ ಪುತ್ರನಾದ, ಪ್ರತಾಪವಾನ್ - ಪರಾಕ್ರಮಶಾಲಿಯಾದ, ಶ್ರೀಮಾನ್ - ಸಂಪದ್ಯುಕ್ತನಾದ, ರಾಮಃ - ಶ್ರೀರಾಮನು, ಉತ್ತಮಂ - ಶ್ರೇಷ್ಠವಾದ, ಶರಂ-ಬಾಣವನ್ನು, ಚಿಕ್ಷೇಪ-ಎಸೆದನು ॥ ೨೧ ॥ ಜಾಮದಗ್ನ್ಯಃ-

ಈ ನನ್ನ ಪಾದಗಮನವನ್ನು ಸಂಹರಿಸಲರ್ಹನಾಗಬೇಡ ಮನೋವೇಗದಿಂದಲೇ ಪರ್ವತ ಶ್ರೇಷ್ಠವಾದ ಮಹೇಂದ್ರ ಪರ್ವತವನ್ನುಕುರಿತು ಹೊರಟು ಹೋಗುತ್ತೇನೆ. ಎಲೈ ಶ್ರೀರಾಮನೆ! ತಪೋಬಲದಿಂದಲೇ ನನ್ನಿಂದ ಸಂಪಾದಿತವಾದುದೂ, ಅನಾಮಾನವಾದವುಗಳೂ ಆದ ಪುಣ್ಯ ಲೋಕಗಳನ್ನು ಶ್ರೇಷ್ಠವಾದ ಈ ವೈಷ್ಣವಧನುಸ್ಸಿನಿಂದ ಜಯಿಸುವವನಾಗು. ಕಾಲವಿಳಂಬ ವನ್ನು ಮಾಡಬೇಡ. ॥ ೧೫-೧೭ ॥ ಎಲೈ ರಘುರಾಮನೇ! ಯಾರಿಂದಲೂ ಆರೋಪಣ ಮಾಡಲಸದಳವಾದ ಈ ವೈಷ್ಣವಧನುರಾರೋಪಣ ಮಾಡುವ ನಿನ್ನನ್ನು ಶಾಶ್ವತನೂ, ಮಧು ರಾಕ್ಷಸ ಮರ್ದಕನೂ, ಸುರೇಶ್ವನೂ ಆದ ಮಹಾ ವಿಷ್ಣುವೆಂದು ತಿಳಿಯುತ್ತೇನೆ. ಎಲೈ ಮಹಾತೇಜಸ್ವಿಯೇ! ನಿನಗೆ ಮಂಗಳವುಂಟಾಗಲಿ, ಸಮಸ್ತರಾದ ದೇವತೆಗಳೂ ಋಷಿ ಗಳೂ, ಬ್ರಹ್ಮದೇವನೂ ಮೊದಲಾದವರೆಲ್ಲರೂ ಯುದ್ಧರಂಗದಲ್ಲಿ ಅಪ್ರತಿಮ ವೀರನೂ, ಅದ್ಭುತಕಾರ್ಯಕಲಾಪವುಳ್ಳವನೂ ಆದ ನಿನ್ನನ್ನು ನಿರೀಕ್ಷಿಸುತ್ತಿರುವರು. ನಾನು ಮೂರು ಲೋಕಕ್ಕೂ ಒಡೆಯನಾದ ನಿನ್ನಿಂದ ಪರಾಜಿತನಾದುದು ಸಾಕಾಗಿರುವುದು. ಅಂತಹ ನನ್ನನ್ನು ಇವರೆಲ್ಲರ ಮುಂದೆ ಲಜ್ಜಿತನನ್ನಾಗಿ ಮಾಡಲರ್ಹನಾಗಬೇಡ. ಅಪ್ರತಿಮವಾದ ವೈಷ್ಣವ ಶರವನ್ನು ಬಿಡುವವನಾಗು ನಿನ್ನಿಂದ ಬಿಡಲ್ಪಟ್ಟ ಬಾಣವನ್ನು ನೋಡಿದ ನಾನು ಪರ್ವತೋತ್ತಮವಾದ ಮಹೇಂದ್ರಗಿರಿಯನ್ನು ಕುರಿತು ಹೊರಡುತ್ತೇನೆ. ॥ ೧೮-೨೦ ॥

ರ್ಜಿತಾನ್ ॥ಜಾಮದಗ್ನ್ಯೋ ಜಗಾಮಾಶು ಮಹೇಂದ್ರಂ ಪರ್ವತೋತ್ತಮಂ ॥
೨೨ ॥ ತತೋ ವಿತಿಮಿರಾಸ್ಸರ್ವಾ ದಿಶಶ್ಚೋಪದಿಶಸ್ತಥಾ ॥ ಸುರಾಸ್ಸರ್ಷಿ
ಗಣಾ ರಾಮಂ ಪ್ರಶಶಂಸು ರುದಾಯುಧಂ ॥ ೨೩ ॥ ರಾಮಂ ದಾಶರಥಿಂ
ರಾಮೋ (೧)ಜಾಮದಗ್ನ್ಯಃ ಪ್ರಶಸ್ಯಚ ॥ ತತಃ ಪ್ರದಕ್ಷಿಣಂ ಕೃತ್ವಾ ಜಗಾಮಾತ್ಮ
ಗತಿಂ ಪ್ರಭುಃ ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಸಪ್ತತಿತಮಸ್ಸರ್ಗಃ

ಜಮದಗ್ನಿ ಪುತ್ರನಾದ, ಸಃ - ಆ ಪರಶುರಾಮನು, ತಪಸಾ - ತಪದಿಂದ, ಆರ್ಜಿತಾನ್ - ಸಂಪಾದಿಸಲ್ಪಟ್ಟ, ಸ್ವಾನ್ - ಸ್ವಕೀಯವಾದ, ಲೋಕಾನ್ - ಲೋಕಗಳನ್ನು, ರಾಮೇಣ - ಶ್ರೀ ರಾಮನಿಂದ, ಹತಾನ್ - ಹೊಡೆಯಲ್ಪಟ್ಟವುಗಳನ್ನಾಗಿ, ದೃಷ್ಟ್ವಾ - ಕಂಡು, ಪರ್ವತೋತ್ತಮಂ-ಗಿರಿಶ್ರೇಷ್ಠವಾದು ಮಹೇಂದ್ರಂ – ಮಹೇಂದ್ರ ಪರ್ವತವನ್ನು ಕುರಿತು, ಆಶು - ಜಾಗ್ರತೆಯಾಗಿ, ಜಗಾಮ-ತೆರಳಿದನು. ॥ ೨೨ ॥ ತತಃ - ಬಳಿಕ, ಸರ್ವಾಃ - ಸಮಸ್ತವಾದ, ದಿಶಃ – ದಿಕ್ಕುಗಳೂ, ತಥಾ - ಹಾಗೆಯೇ, ಉಪದಿಶಶ್ಚ - ಉಪದಿಕ್ಕುಗಳೂ, ವಿತಿಮಿರಾಃ - ಅಂಧಕಾರಶೂನ್ಯವಾದವುಗಳು, ಅಭವನ್ ಆದವು, ಸರ್ಷಿಗಣಾಃ - ಋಷಿತಂಡಗಳಿಂದೊಡಗೂಡಿದ, ಸುರಾಃ – ದೇವತೆಗಳು, ಉದಾಯುಧಂ - ಎತ್ತಲ್ಪಟ್ಟ ಧನುರ್ದಂಡವುಳ್ಳ, ರಾಮಂ - ಶ್ರೀರಾಮನನ್ನು, ಪ್ರಶಶಂಸುಃ – ಹೊಗಳಿದರು. ॥ ೨೩ ॥ ಜಾಮದಗ್ನ್ಯಃ - ಜಮದಗ್ನಿ ಪುತ್ರನಾದ, ಪ್ರಭುಃ - ತತ್ವಾವಧಾರಣಸಮರ್ಥನಾದ, ರಾಮಃ - ಪರಶುರಾಮನು, ದಾಶರಥಿಂ - ದಶರಥಪುತ್ರನಾದ, ರಾಮಂ - ಶ್ರೀರಾಮನನ್ನು, ಪ್ರಶಸ್ಯಚ - ಸ್ತುತಿಮಾಡಿ, ತತಃ - ಬಳಿಕ, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಆತ್ಮಗತಿಂ - (ಗೋ) ತತ್ವಜ್ಞಾನವನ್ನು, (ಮ) ಆತ್ಮಗತಿಂ-ತನ್ನ ಸ್ಥಾನವನ್ನು, ಜಗಾಮ - ಹೊಂದಿದನು.॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಸಪ್ತತಿತಮಸ್ಸರ್ಗಃ

ಮಹಾಪ್ರತಾಪಶಾಲಿಯಾದ ಭಾರ್ಗವರಾಮನು ಈ ರೀತಿ ಹೇಳಲು. ದಶರಥರಾಜನಂದನನಾದ ಶ್ರೀರಾಮಚಂದ್ರನು ಶ್ರೇಷ್ಠವಾದ ಬಾಣವನ್ನು ಪ್ರಯೋಗಿಸಿದವನಾದನು. ಆ ಬಳಿಕ ಭಾರ್ಗವನು ತನ್ನ ತಪೋಬಲದಿಂದಲೇ ಸಂಪಾದಿಸಲ್ಪಟ್ಟ ಪುಣ್ಯಲೋಕಗಳು ಶ್ರೀರಘುವೀರನಾದ ರಾಮಮೂರ್ತಿಯಿಂದ ಜಯಿಸಲ್ಪಟ್ಟುದನ್ನು ನೋಡಿ ಪರ್ವತಶ್ರೇಷ್ಠವಾದ ಮಹೇಂದ್ರವನ್ನು ಕುರಿತು ಜಾಗ್ರತೆಯಾಗಿ ತೆರಳಿದವನಾದನು. ಆಗ ದಿಶೆಗಳೂ, ಉಪದಿಶೆಗಳೂ ತಮೋರಹಿತವಾದುವು. ದೇವತೆಗಳೂ, ದೇವರ್ಷಿಗಳೂ ಎತ್ತಿ ಹಿಡಿಯಲ್ಪಟ್ಟ ಆಯುಧವುಳ್ಳ ಶ್ರೀರಾಮನನ್ನು ಹೊಗಳಿದರು. ಹೀಗೆ ಪರಶುರಾಮನು ಶ್ರೀರಾಮಚಂದ್ರನನ್ನು ಶ್ರೀಮನ್ನಾರಾಯಣನೆಂಬ ಅಂತರ್ಯಾಮಿತ್ವ ಜ್ಞಾನದಿಂದಾತನನ್ನು ಪ್ರದಕ್ಷಿಣ ಪೂರ್ವಕವಾಗಿ ನಮಸ್ಕರಿಸಿ ತತ್ವಜ್ಞಾನವನ್ನು ಹೊಂದಿ, ಸ್ವಸ್ಥಾನವಾದ ಮಹೇಂದ್ರಪರ್ವತವನ್ನು ಕುರಿತು ತೆರಳಿದವನಾದನು.

ಇಂತಿದು ಪರಶುರಾಮ ಗರ್ವಭಂಜನ ಕಥಾಕಥನವೆಂಬ
ಎಪ್ಪತ್ತಾರನೆಯ ಸರ್ಗವು ಸಮಾಪ್ತವಾದುದು.

ಟಿ (೧) ಜಾಮದಗ್ನ್ಯಃಪ್ರಪೂಜಿತಃ- ಎಂಬ ಪಾಠದಲ್ಲಿ, ಜಾಮದಗ್ನ್ಯಃ – ಪರಶುರಾಮನು ಬ್ರಾಹ್ಮಣನಾದ ಕಾರಣ, ದಾಶರಥಿನಾ – ಶ್ರೀರಾಮನಿಂದ, ಪ್ರಪೂಜಿತಃ – ಪೂಜಿಸಲ್ಪಟ್ಟನು, ನಮಸ್ಕೃತಶ್ಚ – ನಮಸ್ಕಾರವೂ ಮಾಡಲ್ಪಟ್ಟನು, ಅಂಪರೆ – ಪರಶುರಾಮನು ಬ್ರಾಹ್ಮಣನೆಂದು ಶ್ರೀರಾಮನಿಂದ ಪೂಜಿಸಲ್ಪಟ್ಟನೆಂಬುದಾಗಿಯೂ, ಅಂತರ್ಯಾಮಿಯೆಂಬ ಜ್ಞಾನದಿಂದ ರಘುನಂದನನು ಪರಶುರಾಮನಿಂದ ಪೂಜಿಸಲ್ಪಟ್ಟನೆಂಬದಾಗಿಯೂ ತಿಳಿಯತಕ್ಕುದು.

# ಬಾಲಕಾಂಡೇ ಸಪ್ತಸಪ್ತತಿತಮಸ್ಸರ್ಗಃ.

---

ಗತೇ ರಾಮೇ ಪ್ರಶಾಂತಾತ್ಮಾ ರಾಮೋ ದಾಶರಥಿ ರ್ಧನುಃ || ವರುಣಾ
ಯ್ಯಾಪ್ರಮೇಯಾಯ ದದೌ ಹಸ್ತೇ ಸ ಸಾಯಕಂ || ೧ || ಅಭಿವಾದ್ಯ ತತೋ
ರಾಮೋ ವಸಿಷ್ಠಪ್ರಮುಖಾನೃಷೀನ್ || ಪಿತರಂ ವಿಹ್ವಲಂ ದೃಷ್ಟ್ವಾ ಪ್ರೋವಾಚ
ರಘುನಂದನಃ || ೨ || ಜಾಮದಗ್ನ್ಯೇ ಗತೋ ರಾಮಃ ಪ್ರಯಾತು ಚತು
ರಂಗಿಣೀ || ಅಯೋಧ್ಯಾಭಿಮುಖೀ ಸೇನಾ ತ್ವಯಾ ನಾಥೇನ ಪಾಲಿತಾ || ೩ ||

---

ರಾಮೇ – ಪರಶುರಾಮನು, ಗತೇಸತಿ – ಹೊರಟುಹೋಗಲು, ಪ್ರಶಾಂತಾತ್ಮಾ-ನಿರ್ಮಲ ಚಿತ್ತನಾದ, ದಾಶರಥಿಃ - ದಶರಥಕುವರನಾದ, ರಾಮಃ - ಶ್ರೀರಾಮನು, ಹಸ್ತೇ - ತನ್ನ ಹಸ್ತದಲ್ಲಿರುವ, ಸಸಾಯಕಂ - ಬಾಣಸಹಿತವಾದ, ಧನುಃ – ಶರಾಸನವನ್ನು, ಅಪ್ರಮೇಯಾಯ - (ಮ) ಅಸದೃಶನಾದ, [ಗೋ] ಭೃಗುಮಹರ್ಷಿಗೆ ಬ್ರಹ್ಮವಿದ್ಯಾಪ್ರದಾನ ಮಾಡಿದವನಾದುದರಿಂದ ಅಸದೃಶನಾದ, ವರುಣಾಯ - ವರುಣನಿಗೆ, ದದೌ - ನ್ಯಾಸವಾಗಿ ಕೊಟ್ಟನು. || ೧ || ತತಃ-ಬಳಿಕ, ರಘುನಂದನಃ - ರಘುವಂಶಸ್ಥರಿಗೆ ಆನಂದವನ್ನುಂಟುಮಾಡುತಿರುವ, ರಾಮಃ - ಶ್ರೀರಾಮನು, ವಸಿಷ್ಠಪ್ರಮುಖಾನ್ – ವಸಿಷ್ಠರೇ ಮೊದಲಾದ, ಋಷೀನ್ - ಮುನಿಗಳನ್ನು ಕುರಿತು, ಅಭಿವಾದ್ಯ- ನಮಸ್ಕರಿಸಿ, ವಿಹ್ವಲಂ - ಪಶ್ಚಾತ್ತಪ್ತನಾಗಿರುವ, ಪಿತರಂ- ತಂದೆಯಾದ ದಶರರಥನನ್ನು, ದೃಷ್ಟ್ವಾ- ಕಂಡು, ಪ್ರೋವಾಚ - ಹೇಳಿದನು. || ೨ || ಜಾಮದಗ್ನ್ಯಃ - ಜಮದಗ್ನಿಪುತ್ರನಾದ, ರಾಮಃ- ಪರಶುರಾಮನು, ಗತಃ - ಹೊರಟುಹೋದನು, ನಾಥೇನ - ಒಡೆಯನಾದ, ತ್ವಯಾ - ನಿನ್ನಿಂದ, ಪಾಲಿತಾ - ಪರಿಪಾಲಿಸಲ್ಪಡುತಿರುವ, ಚತುರಂಗಿಣೀ - ನಾಲ್ಕು ಅಂಗಗಳುಳ್ಳ, ಸೇನಾ-ಸೈನ್ಯವು, ಅಯೋಧ್ಯಾಭಿಮುಖೀ - ಅಯೋಧ್ಯಾಪಟ್ಟಣವನ್ನು ಕುರಿತು, ಪ್ರಯಾತು - ಹೊರಡಲಿ. || ೩ ||

---

ಈ ಪ್ರಕಾರವಾಗಿ ಪರಶುರಾಮನು ಗತಕ್ರೋಧನಾಗಿ ತನ್ನ ಸ್ಥಾನವಾದ ಮಹೇಂದ್ರಗಿರಿಯನ್ನು ಕುರಿತು ಹೊರಟುಹೋಗಲು ದಶರಥ ಕುವರನಾದ ಶ್ರೀರಾಮನು ತನ್ನ ಕೈಯಲ್ಲಿರುವ ವೈಷ್ಣವ ಧನುಸ್ಸನ್ನು ಅಸದೃಶನಾದ ವರುಣನಿಗೆ ನ್ಯಾಸವಾಗಿ ಕೊಟ್ಟು ವಸಿಷ್ಠರೇ ಮೊದಲಾದ ಋಷಿಪುಂಗವರನ್ನು ನಮಸ್ಕರಿಸಿದ ಬಳಿಕ ಭಾರ್ಗವರಾಮನ ಭಯದಿಂದ ಮನಗುಂದಿ ನಿಂತಿದ್ದ ತಂದೆಯಾದ ದಶರಥರಾಯನನ್ನು ನೋಡಿ, "ಎಲೈ ಜನಕನೇ! ಪರಶುರಾಮನು ಮಹೇಂದ್ರಪರ್ವತಕ್ಕೆ ಹೊರಟು ಹೋದನು; ಸ್ವಾಮಿಯಾದ ನಿನ್ನಿಂದ ಪಾಲಿತವಾದ ಚತುರಂಗಬಲವು ಮಳೆಹನಿಯನ್ನು ಬಯಸುವ ಚಾತಕ ಪಕ್ಷಿಗಳಂತೆ ನಿನ್ನನುಜ್ಞೆಯನ್ನು ನಿರೀಕ್ಷಿಸುತ್ತಿರುವದು. ಆದುದರಿಂದ ಚತುರಂಗ ಬಲದವರಿಗೆ ಅಣತಿಯನ್ನಿತ್ತು ಅಯೋಧ್ಯಾಪುರಿಯನ್ನು ಕುರಿತು ಮುಂಬರಿವವನಾಗು." ಎಂದು ಹೇಳಿದನು. || ೧-೩ ||

(ಸಂದಿಶಸ್ವ ಮಹಾರಾಜ ಸೇನಾಂ ತ್ವಚ್ಛಾಸನೇ ಸ್ಥಿತಾಂ || ಶಾಸನಂ ಕಾಂಕ್ಷತೇ ಸೇನಾ ಚಾತಕಾಳಿರ್ಜಲಂ ಯಥಾ) || ರಾಮಸ್ಯ ವಚನಂ ಶ್ರುತ್ವಾ ರಾಜಾ ದಶರಥ ಸ್ಸುತಂ || ಬಾಹುಭ್ಯಾಂ ಸಂಪರಿಷ್ವಜ್ಯ ಮೂರ್ಧ್ನಿ ಚಾಘ್ರಾಯ ರಾಘವಂ || ೪ || ಗತೋ ರಾಮ ಇತಿ ಶ್ರುತ್ವಾ ಹೃಷ್ಟಃ ಪ್ರಮುದಿತೋ ನೃಪಃ || ಪುನರ್ಜಾತಂ ತದಾ ಮೇನೇ ಪುತ್ರಮಾತ್ಮಾನಮೇವಚ || ೫ || ಚೋದಯಾಮಾಸ ತಾಂ ಸೇನಾಂ ಜಗಾಮಾಶು ತತಃ ಪುರೀಂ || ಪತಾಕಾ ಧ್ವಜಿನೀಂ ರಮ್ಯಾಂ ತೂರ್ಯೋದ್ಘುಷ್ಟ ನಿನಾದಿತಾಂ || ೬ || ಸಿಕ್ತ ರಾಜಪಥಾಂ ರಮ್ಯಾಂ ಪ್ರಕೀರ್ಣ

---

ರಾಜಾ - ಅರಸನಾದ, ದಶರಥಃ - ದಶರಥ ಮಹಾರಾಯನು, ರಾಮಸ್ಯ – ಶ್ರೀರಾಮನ, ವಚನಂ- ವಾಕ್ಯವನ್ನು, ಶ್ರುತ್ವಾ - ಕೇಳಿ, ಸುತಂ-ಕುವರನಾದ, ರಾಘವಂ-ಶ್ರೀರಾಮನನ್ನು, ಬಾಹುಭ್ಯಾಂ- ಕೈಗಳಿಂದ, ಸಂಪರಿಷ್ವಜ್ಯ - ಅಪ್ಪಿಕೊಂಡು, ಮೂರ್ಧ್ನಿಚ - ಶಿರಸ್ಸಿನಲ್ಲಿಯೂ, ಆಘ್ರಾಯ - ಆಘ್ರಾಣಿಸಿ, ರಾಮಃ - ಪರಶುರಾಮನು, ಗತಃ-ಹೊರಟುಹೋದನು, ಇತಿ-ಹೀಗೆಂಬ ಮಾತನ್ನು, ಶ್ರುತ್ವಾ ಕೇಳಿ, ನೃಪಃ – ದಶರಥನು, ಹೃಷ್ಟಃ - ವಿಸ್ಮಿತನಾಗಿ, ಪ್ರಮುದಿತಃ – ಸಂತೋಷಚಿತ್ತನಾಗಿ, ತದಾ ಆಗ, ಪುತ್ರಂ – ಕುವರನನ್ನೂ, ಆತ್ಮಾನಮೇವಚ - ತನ್ನನ್ನೂ, ಪುನರ್ಜಾತಂ – ಮರಳಿ ಹುಟ್ಟಿದವರನ್ನಾಗಿ, ಮೇನೇ – ತಿಳಿದನು || ೪-೫ || ತಾಂಸೇನಾಂ - ಆ ಸೈನ್ಯವನ್ನು, ಚೋದಯಾಮಾಸ- ಪ್ರೇರಿಸಿ, ತತಃ - ಬಳಿಕ, ಆಶು - ಜಾಗ್ರತೆಯಾಗಿ, ಪುರೀಂ – ಅಯೋಧ್ಯಾ ಪಟ್ಟಣವನ್ನು ಕುರಿತು, ಜಗಾಮ - ತೆರಳಿದನು. ರಾಜಾ - ದಶರಥರಾಜನು, ಪತಾಕಾಧ್ವಜಿನೀಂ - ಸಾಲಾಗಿರುವ ಚಿಕ್ಕ ನಿಶಾನಿಗಳೂ ದೊಡ್ಡ ಧ್ವಜಗಳೂ ಉಳ್ಳ, ರಮ್ಯಾಂ - ಮನೋಹರಗಳಾದ, ತೂರ್ಯೋದ್ಘುಷ್ಟನಿನಾದಿತಾಂ – ತುತ್ತೂರೀಶಬ್ದಗಳಿಂದ ಶಬ್ದಾಯಮಾನವಾದ, ಸಿಕ್ತರಾಜಪಥಾಂ - ತೋಯಿಸಲ್ಪಟ್ಟ ರಾಜಮಾರ್ಗವುಳ್ಳ, ರಮ್ಯಾಂ - ಸುಂದರವಾದ, ಪ್ರಕೀರ್ಣ ಕುಸುಮೋತ್ಕರಾಂ - ಎರಚಲ್ಪಟ್ಟ ಪುಷ್ಪಗಳಿಂದ ಸಮೃದ್ಧಿಯುಳ್ಳ, ರಾಜಪ್ರವೇಶಸುಮುಖೈಃ - ಒಡೆಯನ ಪ್ರವೇಶದಿಂದ ಸಮಿಾಚೀನವಾದ ಮುಖಗಳುಳ್ಳ, ಮಂಗಳವಾದಿಭಿಃ – ಮಂಗಳ

---

ಇಂತು ನುಡಿದ ಶ್ರೀರಾಮನ ವಚನವನ್ನು ಕೇಳಿ, ದಶರಥರಾಯನು ತನ್ನ ಕುವರನಾದ ರಘುರಾಮನನ್ನು ಬಾಹುಗಳಿಂದ ಬಿಗಿದಪ್ಪಿ, ಶಿರಸ್ಸನ್ನಾಘ್ರಾಣಿಸಿ ಪರಶುರಾಮನು ಹೊರಟು ಹೋದ ವೃತ್ತಾಂತವನ್ನು ಪುನಃ ಕೇಳಿದ ಬಳಿಕ ತನ್ನನ್ನೂ ತನ್ನ ಮಗನಾದ ಶ್ರೀರಾಮನನ್ನೂ ಮರಳಿ ಹುಟ್ಟಿದವರನ್ನಾಗಿ ತಿಳಿದು ತನ್ನ ಸೇನೆಯವರಿಗೆ ಆಜ್ಞಾಪಿಸಿ ಅಯೋಧ್ಯಾಪುರಿಯನ್ನು ಕುರಿತು ಜಾಗ್ರತೆಯಾಗಿ ತೆರಳಿದವನಾದನು. || ೪-೫ || ತದನಂತರದಲ್ಲಿ ರಾಮ ಲಕ್ಷ್ಮಣಾದಿಗಳಿಂದೊಡಗೂಡಿದ ದಶರಥರಾಯನು ಧ್ವಜಪಟಗಳಿಂದಲಂಕೃತವಾಗಿಯೂ, ಮನೋಹರವಾದುದಾಗಿಯೂ, ಭೇರಿ, ತುತ್ತೂರೀ ಮೊದಲಾದ ವಾದ್ಯಗಳಿಂದ ಕಂಗೊಳಿಸುತ್ತಿರುವುದಾಗಿಯೂ, ಶೀತಳೋದಕದಿಂದ ಚಿಮುಕಿಸಲ್ಪಟ್ಟ ರಾಜವೀಥಿಗಳುಳ್ಳದಾಗಿಯೂ, ಅಲ್ಲಲ್ಲಿ ಕಟ್ಟಲ್ಪಟ್ಟ ಹಸುರೆಲೆಯ ತೋರಣಗಳುಳ್ಳದಾಗಿಯೂ, ರಾಜಾಗಮನದಿಂದ ಸಂತುಷ್ಟರಾಗಿ

ಗೈಸುಮೋತ್ಕರಾಂ || ರಾಜಪ್ರವೇಶ ಸುಮುಖೈಃ ಪೌರೈರ್ಮಂಗಳ ವಾದಿಭಿಃ || ೭ || ಸಂಪೂರ್ಣಾಂ ಪ್ರಾವಿಶದ್ರಾಜಾ ಜನೌಘೈಸ್ಸಮಲಂಕೃತಾಂ || ಪೌರೈಃ ಪ್ರತ್ಯುದ್ಗತೋ ದೂರಂ ದ್ವಿಜೈಶ್ಚ ಪುರವಾಸಿಭಿಃ || ೮ || ಪುತ್ರೈರನುಗತ ಶ್ರೀಮಾನ್ ಶ್ರೀಮದ್ಭಿಶ್ಚ ಮಹಾಯಶಾಃ || ಪ್ರವಿವೇಶ ಗೃಹಂ ರಾಜಾ ಹಿಮವತ್ಸದೃಶಂ ಪುನಃ || ೯ || ನನಂದ ಸಜನೋ ರಾಜಾ ಗೃಹೇ ಕಾಮೈಸ್ಸುಪೂಜಿತಃ || ಕೌಸಲ್ಯಾ ಚ ಸುಮಿತ್ರಾಚ ಕೈಕೇಯೀಚ ಸುಮಧ್ಯಮಾ ||೧೦|| ವಧೂ ಪ್ರತಿಗ್ರಹೇ ಯುಕ್ತಾ ಯಾಶ್ಚಾನ್ಯಾ ರಾಜಯೋಷಿತಃ || ತತಸ್ಸೀತಾಂ ಮಹಾಭಾಗಾಮೂರ್ಮಿಳಾಂಚ ಯಶಸ್ವಿನೀಂ || ೧೧ || ಕುಶಧ್ವಜ ಸುತೇ

---

ವಾದ್ಯಗಳುಳ್ಳ, ಪೌರೈಃ - ಪಟ್ಟಣಸ್ಥರಾದ, ಜನೌಘೈಃ - ಜನಸಂಘಗಳಿಂದ, ಸಂಪೂರ್ಣಾಂ-ತುಂಬಿರುವ, ಸಮಲಂಕೃತಾಂ - ಚನ್ನಾಗಿ ಅಲಂಕರಿಸಲ್ಪಟ್ಟ, (ಪುರೀಂ - ಅಯೋಧ್ಯಾಪಟ್ಟಣವನ್ನು,) ಪ್ರಾವಿಶತ್ - ಪ್ರವೇಶಮಾಡಿದನು. || ೭ || ಶ್ರೀಮಾನ್ - ಸಂಪದ್ಯುಕ್ತನಾದ, ಮಹಾಯಶಾಃ ಮಹಾಕೀರ್ತಿವಂತನಾದ, ರಾಜಾ-ದಶರಥರಾಜನು, ಪುನಃ-ಮರಳಿ,ಪೌರೈಃ-ಪಟ್ಟಣಸ್ಥರಿಂದಲೂ, ಪುರವಾಸಿಭಿಃ - ಪುರದಲ್ಲಿ ನೆಲಗೊಂಡಿರುವ, ದ್ವಿಜೈಶ್ಚ - ಬ್ರಾಹ್ಮಣರಿಂದಲೂ, ದೂರಂ-ದೂರವಾಗಿ, ಪ್ರತ್ಯುದ್ಗತಃ - ಎದುರುಗೊಳ್ಳಲ್ಪಟ್ಟವನಾಗಿ, ಶ್ರೀಮದ್ಭಿಃ - ದಾರಪರಿಗ್ರಹದಿಂದಧಿಕವಾದ ಕಾಂತಿಯುಳ್ಳ, ಪುತ್ರೈಃ - ಮಕ್ಕಳಿಂದ, ಅನುಗತಃ - ಅನುಸರಿಸಲ್ಪಟ್ಟ, ಹಿಮವತ್ಸದೃಶಂ - ಹಿಮವತ್ಪರ್ವತಕ್ಕೆ ಸಮಾನವಾದ, ಗೃಹಂ - ಅರಮನೆಯನ್ನು, ಪ್ರವಿವೇಶ - ಹೊಕ್ಕನು. || ೯ || ಸಜನಃ - ಜನಸಹಿತನಾದ, ರಾಜಾ - ದಶರಥರಾಜನು, ಗೃಹೇ - ಮನೆಯಲ್ಲಿ, ಕಾಮೈಃ-ವಿಷಯಭೋಗಸಾಮಗ್ರಿಗಳಾದ ಸ್ರಕ್ಚಂದನಾದಿಗಳಿಂದ, ಸುಪೂಜಿತಃ - ಚನ್ನಾಗಿ ಪೂಜಿಸಲ್ಪಟ್ಟು, ನನಂದ - ಸಂತೋಷಿಸಿದನು, ಕೌಸಲ್ಯಾಚ - ಕೌಸಲ್ಯಾದೇವಿಯೂ, ಸುಮಿತ್ರಾಚ - ಸುಮಿತ್ರಾದೇವಿಯೂ, ಸುಮಧ್ಯಮಾ - ಒಳ್ಳೆಯ ಮಧ್ಯಪ್ರದೇಶವುಳ್ಳ, ಕೈಕೇಯೀಚ- ಕೈಕೇಯೀದೇವಿಯೂ, ||೧೦|| ಅನ್ಯಾಃ - ಇತರರಾದ, ರಾಜಯೋಷಿತಃ ರಾಜಸ್ತ್ರೀಯರೂ, ಯಾಃ-ಯಾರೋ, ತಾಶ್ಚ - ಅವರೂ, ವಧೂಪರಿಗ್ರಹೇ - ಸೊಸೆಯರ ಪ್ರತಿಗ್ರಹಣದಲ್ಲಿ, ಯುಕ್ತಾಃ - ಆಸಕ್ತಿಯುಳ್ಳವರು, (ಆಸನ್ - ಆದರು,) ತತಃ - ಬಳಿಕ, ನೃಪಪತ್ನ್ಯಃ ರಾಜಾಂಗನೆಯರು,

---

ಮಂಗಳ ವಾದ್ಯಗಳಿಂದೊಡಗೂಡಿರುವ ಪಟ್ಟಣಿಗರಿಂದಲೂ, ತುಂಬಿ ತುಳುಕಾಡುತ್ತಿದ್ದ ಅಯೋಧ್ಯಾಪಟ್ಟಣವು ಆ ನಡಿದೂರದಲ್ಲಿಯೇ ದ್ವಿಜೋತ್ತಮರಿಂದಲೂ, ಶ್ರೀಮಂತರಿಂದಲೂ ಇದಿರ್ಗೊಳ್ಳಲ್ಪಟ್ಟ ದಶರಥರಾಯನು ಹಿಮವತ್ಸದೃಶವಾದ ತನ್ನ ಅರಮನೆಯನ್ನು ಮರಳಿಯೂ ಪ್ರವೇಶಿಸಿ ಭೋಗಪರಿಕರಾದಿಗಳಿಂದ ಇಷ್ಟಾರ್ಥಗಳೆಲ್ಲವನ್ನೂ ಹೊಂದಿ ಸಂತೋಷಿಸಿದನು. || ೭-೯ || ಕೌಸಲ್ಯಾ, ಸುಮಿತ್ರಾ, ಕೈಕೇಯಿಯೇ ಮೊದಲಾದ ಅಂತಃಪುರ ಸ್ತ್ರೀಯರೂ ಸೀತೆಯೇ ಮೊದಲಾದ ಸೊಸೆಯರನ್ನು ಇದಿರ್ಗೊಂಡು ಅವರ ವಂದನೆಗಳನ್ನೂ ಕೈಗೊಂಡು ಆಶೀರ್ವಾದಗಳನ್ನು ಮಾಡಿ ಮಂಗಳವಾದ್ಯಗಳಿಂದ ದೇವತಾಯತನಗಳನ್ನು ಹೊಕ್ಕು ಇಷ್ಟದೇವತೆಗಳಿಗೂ, ಗುರುಹಿರಿಯರಿಗೂ ನಮಸ್ಕಾರಗಳನ್ನು ಮಾಡಿಸಿ ಬ್ರಾಹ್ಮಣರಿಗೆ ಗೋದಾನ

ಚೋಭೇ ಜಗೃಹು ರ್ನೃಪವತ್ನಯಃ || ಮಂಗಳಾಲಾಪನೈಶ್ಚೈವ ಶೋಭಿತಾಃ ಕ್ಷೌಮ ವಾಸಸಃ || ೧೨ || ದೇವತಾಯತನಾನ್ಯಾಶು ಸರ್ವಾಸ್ತಾಃ ಪ್ರತ್ಯ ಪೂಜಯರ್ನ್ || ಅಭಿವಾದ್ಯಾಭಿವಾದ್ಯಾಂಶ್ಚ ಸರ್ವಾ ರಾಜಸುತಾಸ್ತದಾ || ೧೩ || (ಸ್ವಂ ಸ್ವಂ ಗೃಹಮಥಾಸಾದ್ಯ ಕುಬೇರ ಭವನೋಪಮಂ || ಗೋಭಿರ್ಧನೈಶ್ಚ ರತ್ನೈಶ್ಚ ತರ್ಪಯಿತ್ವಾ ದ್ವಿಜೋತ್ತಮಾನ್) || ರೇಮಿರೇ ಮುದಿತಾಃ ಕಾಲೇ ಭರ್ತೃಭಿಸ್ಸಹಿತಾ ರಹಃ || ಕುಮಾರಾಶ್ಚ ಮಹಾತ್ಮಾನೋ ವೀರ್ಯೇಣಾಪ್ರತಿ ಮಾ ಭುವಿ || ೧೪ || ಕೃತದಾರಾಃ ಕೃತಾಸ್ತ್ರಾಶ್ಚ ಸಧನಾಸ್ಸಸುಹೃಜ್ಜನಾಃ || ಶುಶ್ರೂಷ ಮಾಣಾಃ ಪಿತರಂ ವರ್ತಯಂತಿ ನರರ್ಷಭಾಃ || ೧೫ || (ಕಾಲೇ

---

ಮಹಾಭಾಗಾಂ - ಮಹಾಪುಣ್ಯವತಿಯಾದ, ಸೀತಾಂ - ಸೀತಾದೇವಿಯನ್ನೂ, ಯಶಸ್ವಿನೀಂ- ಕೀರ್ತಿವಂತಳಾದ, ಊರ್ಮಿಳಾಂಚ - ಊರ್ಮಿಳಾದೇವಿಯನ್ನೂ, |೧೧| ಉಭೇ - ಈರ್ವರಾದ, ಕುಶಧ್ವಜ ಸುತೇ - ಕುಶಧ್ವಜನ ಕುವರಿಯರಾದ ಮಾಂಡವೀ ಶೃತಕೀರ್ತಿಗಳನ್ನು ಸಹಾ, ಜಗೃಹುಃ - ಗ್ರಹಿ ದವರಾದರು ಮಂಗಳಾಲಾಪನೈಃ - (೧) ಸ್ವಸ್ತಿವಾಚನಗಳಿಂದ, ಶೋಭಿತಾಃ - ಕಂಗೊಳಿ ಸುತ್ತಿರುವ, ಕ್ಷೌಮವಾಸಸಃ - ದುಕೂಲವಸ್ತ್ರಗಳುಳ್ಳ, ತಾಸ್ಸರ್ವಾಃ - ಅವರೆಲ್ಲರು, ದೇವತಾಯ ತನಾನಿ - ದೇವರ ಮನೆಗಳನ್ನು, ಆಶು - ತ್ವರೆಯಾಗಿ ಸೇರಿ, ಪ್ರತ್ಯಪೂಜಯನ್ - ಪೂಜಿಸಿದರು, ಸರ್ವಾಃ - ಸಮಸ್ತರಾದ, ರಾಜಸುತಾಃ - ರಾಜಪುತ್ರಿಯರು, ಅಭಿವಾದ್ಯಾನ್ - ವಂದಿಸತಕ್ಕವ ರನ್ನು, ಅಭಿವಾದ್ಯ - ನಮಸ್ಕರಿಸಿ, ||೧೨-೧೩| ಸರ್ವಾಃ- ಎಲ್ಲರು, ಭರ್ತೃಭಿಃ ಪತಿಗಳ ಸಂಗಡ, ರಹಃ- ಏಕಾಂತದಲ್ಲಿ, ಸಹಿತಾಃ - ಕೂಡಿ, ತದಾ - ಆಗ, ಮುದಿತಾಃ - ಸಂತೋಷಚಿತ್ತರಾಗಿ, ರೇಮಿರೇ- ರಮಿಸುತ್ತಿದ್ದರು ವೀರ್ಯೇಣ - ಪರಾಕ್ರಮದಿಂದ, ಭುವಿ - ನೆಲದಲ್ಲಿ, ಅಪ್ರತಿಮಾಃ - ಸರಿಯಿಲ್ಲದಿರುವ, ಮಹಾತ್ಮಾನಃ-ಮಹಾ ಧೈರ್ಯವಂತರಾದ, ||೧೪|| ಕೃತದಾರಾಃ- ವಿವಾಹಿತರಾದ, ಕೃತಾಸ್ತ್ರಾಶ್ಚ - ಶಿಕ್ಷಿತವಾದ ಅಸ್ತ್ರಗಳುಳ್ಳ, ಸಧನಾಃ - ದ್ರವ್ಯವಂತರಾದ, ಸಸುಹೃಜ್ಜನಾಃ - ಸ್ನೇಹಿತರಿಂದೊಡಗೂಡಿದ, ನರರ್ಷಭಾಃ - ಪುರುಷಶ್ರೇಷ್ಠರಾದ, ಕುಮಾರಾಶ್ಚ - ರಾಮಾದಿ ಪುತ್ರ ರೂಸಹಾ, ಪಿತರಂ - ತಂದೆಯನ್ನು, ಶುಶ್ರೂಷಮಾಣಾಃ - ಉಪಚರಿಸುತ್ತಿರುವರಾಗಿ, ವರ್ತ ಯಂತಿ - ಅನುಸರಿಸುತ್ತಿದ್ದರು || ೧೫ || ಕಸ್ಯಚಿತ್ಕಾಲಸ್ಯಅಥ - ಕೆಲವುಕಾಲವಾದಬಳಿಕ, ರಘು

---

ಗಳಿಂದಲೂ, ದಕ್ಷಿಣಗಳಿಂದಲೂ, ಸಂತರ್ಪಣೆಗಳನ್ನು ಮಾಡಿಸಿದವರಾದರು. ಆ ಬಳಿಕ ಸೀತಾದೇವಿಯೇ ಮೊದಲಾದವರು ತಮ್ಮ ತಮ್ಮ ಪತಿಗಳಿಂದೊಡಗೂಡಿದವರಾಗಿ ಕಾಲೋ ಚಿತ ವಿನಯೋಕ್ತಿಗಳಿಂದ ಅವರ ಇಷ್ಟಾರ್ಥವನ್ನು ಸಲ್ಲಿಸುತ್ತ ಸಂತೋಷದಿಂದ್ದರು ||೧೦- ೧೩ || ಪತ್ನಿಯರಿಂದೊಡಗೂಡಿದವರೂ, ಶಸ್ತ್ರಾಸ್ತ್ರ ಸಮೇತರೂ ಆದ ರಾಮ ಲಕ್ಷ್ಮಣಾ ದಿಗಳು ಸುಹೃಜ್ಜನರಿಂದೊಡಗೂಡಿದವರಾಗಿ ವಿನಯಾದಿ ಸದ್ಗುಣಗಳಿಂದ ತಮ್ಮ ಜನನೀ ಜನಕರ ಸೇವೆಯನ್ನು ಮಾಡುತ್ತ ಸಂತೋಷದಿಂದನುವರ್ತಿಸುತ್ತಿದ್ದರು || ೧೪-೧೫ ||

---

ಟಿ. (೧) ಪಾಠಾಂತರ- ಮಂಗಳಾಲಂಭನೈಃ - ಮಂಗಳಕರವಾದ ಗಂಧಾದಿಗಳನ್ನು ಹಚ್ಚಿಕೊಂಡಿರುವುದರಿಂದ

ಕೆಲೇತು ನೀತಿಜ್ಞಾ ಸ್ತೋಷಯಂತೋಗುರುಂಗುಣೈಃ ||ಕಸ್ಯಚಿತ್ತ್ವಥ ಕಾಲಸ್ಯ
ರಾಜಾ ದಶರಥ ಸ್ಸುತಂ || ಭರತಂ ಕೈಕಯೀಪುತ್ರಮಬ್ರವೀದ್ರಘುನಂದನಃ ||
೧೬ || ಅಯಂ ಕೇಕಯರಾಜಸ್ಯ ಪುತ್ರೋ ವಸತಿ ಪುತ್ರಕ || ತ್ವಾಂ ನೇತು
ಮಾಗತೋ ವೀರ ಯುಧಾಜಿನ್ಮಾತುಲಸ್ತವ || ೧೭ || (ಪ್ರಾರ್ಥಿತ ಸ್ತೇನ
ಧರ್ಮಜ್ಞ ಮಿಥಿಲಾಯಾಮಹಂ ತಥಾ || ಋಷಿಮಧ್ಯೇತು ತಸ್ಯ ತ್ವಂ ಪ್ರೀತಿಂ
ಕರ್ತುಮಿಹಾರ್ಹಸಿ) || ಶ್ರುತ್ವಾ ದಶರಥಸ್ಯೈತದ್ಭರತಃ ಕೈಕಯೀ ಸುತಃ ||
(ಅಭಿವಾದ್ಯ ಗುರುಂ ರಾಮಂ ಪರಿಷ್ವಜ್ಯ ಚ ಲಕ್ಷ್ಮಣಂ) || ಗಮನಾಯಾಭಿಚ
ಕ್ರಾಮ ಶತ್ರುಘ್ನ ಸಹಿತಸ್ತದಾ || ೧೮ || ಆಪೃಚ್ಛ್ಯ ಪಿತರಂ ಶೂರೋ ರಾಮಂ
ಚಾಕ್ಲಿಷ್ಟಕಾರಿಣಂ|| ಮಾತೄಶ್ಚಾಪಿ ನರಶ್ರೇಷ್ಠಶ್ಶತ್ರುಘ್ನಸಹಿತೋಯಯೌ ||೧೯||

ನಂದನಃ - ರಘುವಂಶದಲ್ಲಿ ಹುಟ್ಟಿರುವ, ರಾಜಾ - ಒಡೆಯನಾದ, ದಶರಥಃ - ದಶರಥರಾಯನು, ಕೈಕೇಯೀಪುತ್ರಂ - ಕೈಕೆಯೀದೇವಿಯ ಮಗನಾದ, ಭರತಂ - ಭರತನೆಂಬ, ಪುತ್ರಂ - ಮಗನನ್ನು ಕುರಿತು, ಅಬ್ರವೀತ್ - ನುಡಿದನು || ೧೬ || ಹೇಪುತ್ರಕ - ಎಲೈ ಮಗನೇ, ಹೇವೀರ - ಎಲೈ ಶೂರನೇ, ಕೇಕಯರಾಜಸ್ಯ - ಕೇಕಯದೇಶಾಧೀಶ್ವರನ, ಪುತ್ರಃ ಕುಮಾರನಾದ, ತವ ನಿನಗೆ, ಮಾತುಲಃ - ಸೋದರಮಾವನಾದ, ಅಯಂಯುಧಾಜಿತ್ - ಈ ಯುಧಾಜಿತುವು, ತ್ವಾಂ - ನಿನ್ನನ್ನು, ನೇತುಂ - ಕರೆದುಕೊಂಡು ಹೋಗಲು, ಆಗತಃ - ಬಂದು, ವಸತಿ - ಇರುವನು || ೧೭ || ಕೈಕಯೀಸುತಃ - ಕೈಕೇಯೀಪುತ್ರನಾದ, ಭರತಃ - ಭರತನು, ದಶರಥಸ್ಯ - ದಶರಥನ, ಏತತ್ - ಈ ಮಾತನ್ನು, ಶ್ರುತ್ವಾ - ಕೇಳಿ, ತದಾ - ಆ ಸಮಯದಲ್ಲಿ, ಶತ್ರುಘ್ನಸಹಿತಃ - ಶತ್ರುಘ್ನನಿಂದೊಡಗೂಡಿದವನಾಗಿ, ಗಮನಾಯ - ಪ್ರಯಾಣಾರ್ಥವಾಗಿ, ಅಭಿಚಕ್ರಾಮ - ಹೊರಡಲು ಸಿದ್ಧನಾದ || ೧೮ || ನರಶ್ರೇಷ್ಠಃ - ಪುರುಷಶ್ರೇಷ್ಠನಾದ, ಶೂರಃ - ಶೂರನಾದ ಭರತನು, ಪಿತರಂ - ತಂದೆಯನ್ನು, ಅಕ್ಲಿಷ್ಟಕಾರಿಣಂ - ಕ್ಲೇಶವಿಲ್ಲದೆ ಕಾರ್ಯಗಳನ್ನು ಮಾಡುತಿರುವ, ರಾಮಂಚ - ಶ್ರೀರಾಮನನ್ನೂ, ಮಾತೄಶ್ಚಾಪಿ - ತಾಯಿಯರನ್ನೂ ಸಹ, ಆಪೃಚ್ಛ್ಯ - ಕೇಳಿ, ಶತ್ರುಘ್ನಸಹಿತಃ - ಶತ್ರುಘ್ನನಿಂದೊಡಗೂಡಿ, ಯಯೌ - ತೆರಳಿದನು || ೧೯ || ಭರತೇತು- ಭರತನಾದರೆ, ಗತೇಸತಿ- ಹೊರಟು

ಹೀಗಿರಲು ಒಂದಾನೊಂದು ದಿವಸ ರಘುಶ್ರೇಷ್ಠನಾದ ದಶರಥರಾಯನು ತನ್ನ ಕುವರನಾದ ಭರತನನ್ನು ಕುರಿತು, "ಕುಮಾರಾ! ನಿನ್ನ ಮಾವನಾದ ಮತ್ತು ವೀರನಾದ ಯುಧಾಜಿತುವು ನಿನ್ನನ್ನು ಕರೆದುಕೊಂಡು ಹೋಗಲು ಇಲ್ಲಿಯೇ ಇರುವನು. ನಾವು ಜನಕರಾಯನ ಪಟ್ಟಣದಲ್ಲಿರುವಾಗಲೇ ನಿನ್ನನ್ನು ಕಳುಹಿಸಲೋಸುಗ ಪ್ರಾರ್ಥಿಸಲ್ಪಟ್ಟನು. ಆದುದರಿಂದ ನೀನಾತನ ಅಭಿಮತವನ್ನು ಸಲಿಸುವನಾಗು" ಎಂದನು. || ೧೬-೧೭ || ಇಂತು ನುಡಿದ ದಶರಥನ ಮಾತುಗಳನ್ನು ಕೈಕೇಯೀದೇವಿಯ ಮಗನಾದ ಭರತನು ಕೇಳಿ ರಾಮನನ್ನು ವಂದಿಸಿ, ಲಕ್ಷ್ಮಣನನ್ನು ಆಲಿಂಗಿಸಿಕೊಂಡು, ಶತ್ರುಘ್ನನೊಡಗೂಡಿ ಯುಧಾಜಿತುವಿನೊಡನೆ ಹೊರಡಲು ಸಿದ್ಧನಾಗಿ ತಂದೆಯನ್ನೂ, ಶೂರನಾದ ರಾಮಚಂದ್ರನನ್ನೂ, ಕೌಸಲ್ಯೆಯೇ ಮೊದಲಾದ

ಗತೇತು ಭರತೇ ರಾಮೋ ಲಕ್ಷ್ಮಣಶ್ಚ ಮಹಾಬಲಃ || ಪಿತರಂ ದೇವಸಂಕಾಶಂ ಪೂಜಯಾಮಾಸತು ಸ್ತದಾ || ೨೦ || ಪಿತುರಾಜ್ಞಾಂ ಪುರಸ್ಕೃತ್ಯ ಪೌರಕಾರ್ಯಾಣಿ ಸರ್ವಶಃ || ಚಕಾರ ರಾಮೋ ಧರ್ಮಾತ್ಮಾ ಪ್ರಿಯಾಣಿಚ ಹಿತಾನಿಚ || ೨೧ || ಮಾತೃಭ್ಯೋ ಮಾತೃಕಾರ್ಯಾಣಿ ಕೃತ್ವಾ ಪರಮ ಯಂತ್ರಿತಃ || ಗುರೂಣಾಂ ಗುರುಕಾರ್ಯಾಣಿ ಕಾಲೇ ಕಾಲೇನ್ವವೈಕ್ಷತ || ೨೨ || ಏವಂ ದಶರಥಃ ಪ್ರೀತೋ ಬ್ರಾಹ್ಮಣಾ ನೈಗಮಾ ಸ್ತದಾ|| ರಾಮಸ್ಯ ಶೀಲವೃತ್ತೇನ ಸರ್ವೇ ವಿಷಯವಾಸಿನಃ ||೨೩|| ತೇಷಾಮತಿಯಶಾ ಲೋಕೇ ರಾಮ ಸ್ಸತ್ಯ

---

ಹೋಗಲು, ರಾಮಃ - ಶ್ರೀರಾಮನು, ಮಹಾಬಲಃ - ಮಹಾಬಲವಂತನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ ಸಹಾ, ತದಾ - ಆ ಕಾಲದಲ್ಲಿ, ದೇವಸಂಕಾಶಂ - ದೇವತ್ವಾಸದೃಶನಾದ, ಪಿತರು - ತಂದೆಯನ್ನು, ಪೂಜಯಾಮಾಸತುಃ - ಪೂಜಿಸುತ್ತಿದ್ದರು || ೨೦ || ಧರ್ಮಾತ್ಮಾ - ಧರ್ಮಬುದ್ಧಿಯುಳ್ಳ, ರಾಮಃ - ಶ್ರೀರಾಮನು, ಪಿತುಃ - ಜನಕನ, ಆಜ್ಞಾಂ - ಅಪ್ಪಣೆಯನ್ನು, ಪುರಸ್ಕೃತ್ಯ - ಗೌರವಿಸಿ, ಸರ್ವಶಃ - ಸರ್ವಪ್ರಕಾರದಲ್ಲಿಯೂ, ಪ್ರಿಯಾಣಿಚ - ಇಷ್ಟಪ್ರಾಪ್ತಿರೂಪವಾಗಿಯೂ ಇರುವ, ಹಿತಾನಿಚ - ಅನಿಷ್ಟನಿವಾರಕಗಳಾಗಿಯೂ ಇರುವ, ಪೌರಕಾರ್ಯಾಣಿ - ಪಟ್ಟಣಸ್ಥರ ಕೃತ್ಯಗಳನ್ನು, ಚಕಾರ - ಮಾಡಿದನು. || ೨೧ || ಮಾತೃಭ್ಯಃ - ತಾಯಿಯರಿಗೆ, ಮಾತೃಕಾರ್ಯಾಣಿ - ಜನನಿಯರ ಕಾರ್ಯಗಳನ್ನು, ಕೃತ್ವಾ - ಮಾಡಿ, ಪರಮಯಂತ್ರಿತಃ - ಶ್ರುತಿಸ್ಮೃತಿಗಳ ಮರ್ಯಾದೆಗಳನ್ನತಿಕ್ರಮಿಸದವನಾಗಿ, ಗುರೂಣಾಂ - ಗುರುಗಳ ವಿಷಯದಲ್ಲಿ, ಗುರುಕಾರ್ಯಾಣಿ - ದೊಡ್ಡವರ ಕಾರ್ಯಗಳನ್ನು, ಕಾಲೇಕಾಲೇ - ಕಾಲಕಾಲಗಳಲ್ಲಿ, ಅನ್ವವೈಕ್ಷತ - [ಮ] ಅನುಸಂಧಾನ ಮಾಡುತ್ತಿದ್ದನು, [ಗೋ] ಪರಿಪಾಲಿಸುತ್ತಿದ್ದನು. || ೨೨ || ಅದಾ - ಆಗ, ಏವಂ - ಈ ಪರಿಯಾಗಿರುವ, ರಾಮಸ್ಯ - ಶ್ರೀರಾಮನ, ಶೀಲವೃತ್ತೇನ-ಸತ್ಸ್ವಭಾವದಿಂದಲೂ ನಡೆವಳಿಕೆಯಿಂದಲೂ, ದಶರಥಃ - ದಶರಥನು, ಪ್ರೀತಃ - ಸಂತುಷ್ಟನಾದನು, ವಿಷಯವಾಸಿನಃ - ದೇಶದಲ್ಲಿರುವ, ಸರ್ವೇ - ಸಮಸ್ತರಾದ, ಬ್ರಾಹ್ಮಣಾಃ - ಬ್ರಾಹ್ಮಣರು, ನೈಗಮಾಃ - ವರ್ತಕರು, ಪ್ರೀತಾಃ - ಸಂತುಷ್ಟರಾದರು || ೨೩ || ಲೋಕೇ - ಲೋಕದಲ್ಲಿ, ಅತಿಯಶಾಃ-

---

ಜನನಿಯರನ್ನೂ ಕೇಳಿದವನಾಗಿ ಹೊರಟನು || ೧೮-೧೯ || ಭರತನೀಪ್ರಕಾರವಾಗಿ ಯುಧಾಜಿತುವಿನೊಡನೆ ಹೊರಡಲು ವೀರಾಗ್ರಣಿಗಳಾದ ರಾಮಲಕ್ಷ್ಮಣರು ದೇವೋಪಮನಾದ ದಶರಥರಾಯನನ್ನು ವಿನಯಾದಿಗುಣಗಳಿಂದ ಸಂತೋಷಗೊಳಿಸುತ್ತಲೂ ಇದ್ದುದಲ್ಲದೆ ಮಹಾಧರ್ಮಿಷ್ಠನೂ, ವೀರನೂ, ಆದ ಶ್ರೀರಾಮನು ತಂದೆಯಾಣತಿಯನ್ನು ಕೈಕೊಂಡು ಆತನಿಗೆ ಹಿತವಾಗಿಯೂ, ಪಟ್ಟಣಿಗರಿಗೆ ಪ್ರಿಯವಾಗಿಯೂ, ಪೌರಕಾರ್ಯಗಳೆಲ್ಲವನ್ನೂ ನಿರ್ವಹಿಸುತ್ತ ತಾಯಂದಿರ ಅಪ್ಪಣೆಯಂತೆ ಅವರಿಗೆ ಬೇಕಾದ ಸಲಕರಣೆಗಳನ್ನೊದಗಿಸುತ್ತ, ವಸಿಷ್ಠರೇ ಮೊದಲಾದ ಗುರುವರ್ಗದವರನ್ನು ಸತ್ಕಾರಗಳಿಂದ ಸಂತೋಷಗೊಳಿಸುತ್ತಲೂ ಇದ್ದನು ||೨೦-೨೨|| ದಶರಥನು ಶ್ರೀರಾಮನ ಗುಣಗಳಿಂದಲೂ, ನಡತೆಗಳಿಂದಲೂ ಸಂತೋ

ಪರಾಕ್ರಮಃ || ಸ್ವಯಂಭೂರಿವ ಭೂತಾನಾಂ ಬಭೂವ ಗುಣವತ್ತರಃ ||೨೪||
ರಾಮಸ್ತು ಸೀತಯಾ ಸಾರ್ಧಂ ವಿಜಹಾರ ಬಹೂನೃತೂನ್ || ಮನಸ್ವೀ ತದ್ಗ
ತಸ್ತಸ್ಯಾ ನಿತ್ಯಂ ಹೃದಿ ಸಮರ್ಪಿತಃ ||೨೫|| ಪ್ರಿಯಾತು ಸೀತಾ ರಾಮಸ್ಯದಾರಾಃ
ಪಿತೃಕೃತಾ ಇತಿ || ಗುಣಾದ್ರೂಪಗುಣಾಚ್ಚಾಪಿ ಪ್ರೀತಿರ್ಭೂಯೋ ಭ್ಯವರ್ಧತ ||

ಹ ಕೀರ್ತಿವಂತನಾದ, ಸತ್ಯಪರಾಕ್ರಮಃ - ಸತ್ಯಪರಾಕ್ರಮವುಳ್ಳ, ರಾಮಃ - ಶ್ರೀರಾಮನ ಭೂತಾನಾಂ - ಭೂತಗಳಿಗೆ, ಸ್ವಯಂಭೂರಿವ - ಬ್ರಹ್ಮನಂತೆ, ತೇಷಾಂ - ಆ ಬ್ರಾಹ್ಮಣಾದಿಗಳಿಗೆ, ಗುಣವತ್ತರಃ - ಪ್ರಿಯಕರನು, ಬಭೂವ - ಆದನು || ೨೪ || ರಾಮಸ್ತು - ಶ್ರೀರಾಮನಾದರೆ, ಮನಸ್ವೀ - ಅನುಕೂಲಮನಸ್ಸುಳ್ಳವನಾದಕಾರಣ, ನಿತ್ಯಂ - ನಿರಂತರವು, ತದ್ಗತಃ - ಆ ಸ್ತ್ರೀಯನ್ನು ಹೊಂದಿದ ಮನಸ್ಸುಳ್ಳವನಾಗಿ, (ಅಥವ ಆಕೆಯಲ್ಲಿ ನೆಟ್ಟ ಮನವುಳ್ಳವನಾಗಿ,) ತಸ್ಯಾಃ - ಸೀತಾದೇವಿಯ, ಹೃದಿ - ಮನದಲ್ಲಿ, ಸಮರ್ಪಿತಃ - ಸಮರ್ಪಿಸಲ್ಪಟ್ಟವನಾಗಿ, ಬಹೂನ್ ಋತೂನ್ - (ಗೋ) ಅನೇಕಋತುಗಳಲ್ಲಿ, (ತಿ) [೧] ಹನ್ನೆರಡುಸಂವತ್ಸರಗಳಲ್ಲಿ, ತಯಾ ಸಾರ್ಧಂ - ಆಕೆಯೊಡನೆ - ವಿಜಹಾರ - ವಿಹರಿಸಿದನು, ಸೀತಾತು - ಸೀತಾದೇವಿಯಾದರೆ, ರಾಮಸ್ಯ - ಶ್ರೀರಾಮನಿಗೆ, ಪಿತೃಕೃತಾಃ - ಜನಕನಿಂದ ಮಾಡಲ್ಪಟ್ಟ, ದಾರಾಇತಿಹೇತೋಃ - ಭಾರ್ಯೆಯೆಂಬ ಹೇತುವಿಂದ, ಪ್ರಿಯಾ - ಇಷ್ಟಳಾದವಳು, [ಬಭೂವ - ಆದಳು,] ಗುಣಾತ್ - [ಗೋ] ಭರ್ತೃಶುಶ್ರೂಷಾದಿಗುಣಗಳಿಂದಲೂ, [ ಮ ] ಪಾತಿವ್ರತ್ಯಾದಿಗುಣಗಳಿಂದಲೂ, [ತಿ] ಪ್ರತ್ಯಭಿಪ್ರಾಯಾನುಸಾರ ನಡೆವುದರಿಂದಲೂ, ರೂಪಗುಣಾಚ್ಚಾಪಿ - [ಗೋ] ಸೌಂದರ್ಯಾತಿಶಯದಿಂದಲೂ, ರೂಪ - ಎಂಬಹದ, ಗುಣಾಚ್ಚಾಪಿ - ಸೌಂದರ್ಯದಿಂದಲೂ, ಅಭಿಜಾತ್ಯಾದಿಗಳಿಂದಲೂ, [ ಮ ] ಸೌಂದರ್ಯರೂಪವಾಗಿರುವ ಗುಣಗಳಿಂದಲೂ, ಪ್ರೀತಿಃ - ವಿಶ್ವಾಸವು, ಭೂಯಃ - ಮತ್ತು, ಅಭ್ಯವರ್ಧತ - ವೃದ್ಧಿಹೊಂದಿತು || ೨೬ || ತಸ್ಯಾಃ - ಆ ಸೀತಾದೇವಿಯ, ಭರ್ತಾಚ - ಪತಿಯಾದ ಶ್ರೀರಾಮನುಕೂಡ, ಹೃದಯೇ - ಸೀತಾದೇವಿಯ ಮನದಲ್ಲಿ, (೨)ದ್ವಿಗುಣಂ - ಎರಡರಷ್ಟು, ಪರಿವರ್ತತೇ -

ಸುತ್ತಿದ್ದನು. ಆಗ ದಶರಥರಾಯನ ರಾಜ್ಯದಲ್ಲಿದ್ದ ಸಮಸ್ತರೂ "ಸಕಲಭೂತಗಳಿಗೂ ಡೆಯನಾದ ಬ್ರಹ್ಮದೇವನಂತೆ ಈ ರಾಮಚಂದ್ರನು ಗುಣಗಳಲ್ಲಿಯೂ, ಕೀರ್ತಿಯಲ್ಲಿಯೂ ಅತಿಶಯನಾದವನೆಂದು ತಿಳಿದು" ಹರ್ಷಿಸುತ್ತಿದ್ದರು ||೨೩-೨೪|| ಈರೀತಿ ಶ್ರೀರಾಮನೂ ರ್ತಿಯು ಸಮಸ್ತ ಪ್ರಜೆಗಳನ್ನೂ ಸಂರಕ್ಷಿಸಿಕೊಂಡು ಸೀತೆಯೊಡಗೂಡಿ ಅನೇಕ ಸತ್ಕಥಾಲಾ

ಟಿ: (೧) "ಹನ್ನೆರಡು ವರ್ಷಗಳಕಾಲ ಅಯೋಧ್ಯಾಪಟ್ಟಣದಲ್ಲಿ ರಘುರಾಮನು ಸೀತೆಯೊಡನೆ ವಿಹರಿಸುತ್ತಿದ್ದನು" ಎಂದು ಋಷಿಮುಂದೆ ಹೇಳುತ್ತಾರೆಂದು ತಿಲಕವ್ಯಾಖ್ಯಾನಕಾರರು ಹೇಳುತ್ತಾರೆ

ಟಿ. (೨) ಅಂದರೆ ಶ್ರೀರಾಮನಿಗೆ ಸೀತಾದೇವಿಯಲ್ಲಿರುವ ಪ್ರೀತಿಗಿಂತಲೂ ದ್ವಿಗುಣವಾಗಿ ಆಕೆಗೆ ರಾಮನಲ್ಲಿದ್ದಂಥಾ ಯಿತೆಂದು ಭಾವವು.

ತಸ್ಯಾಶ್ಚ ಭರ್ತಾ ದ್ವಿಗುಣಂ ಹೃದಯೇ ಪರಿವರ್ತತೇ ||
ಅಂತರ್ಜಾತಮಪಿ ವ್ಯಕ್ತಮಾಖ್ಯಾತಿ ಹೃದಯಂ ಹೃದಾ || ೨೭ ||
ತಸ್ಯಭೂಯೋ ವಿಶೇಷೇಣ ಮೈಥಿಲೀ ಜನಕಾತ್ಮಜಾ ||
ದೇವತಾಭಿಸ್ಸಮಾರೂಪೇ ಸೀತಾ ಶ್ರೀರಿವ ರೂಪಿಣೀ || ೨೮ ||
ತಯಾ ಸರಾಜರ್ಷಿ ಸುತೋಭಿರಾಮಯಾ ಸಮೇಯಿವಾನುತ್ತಮ ರಾಜಕನ್ಯಯಾ||

---

[ತಿ] ಇರುವವನಾದನು, ಅಂತರ್ಜಾತಮಪಿ - ಆಕೆಯ ಮನೋಗತವಾಗಿರುವ, ಹೃದಯಂ ಕೂಡ ಭಾವವನ್ನು, (ಅಂದರೆ ಅನುರಾಗವನ್ನು,) ಹೃದಾ - ಊಹೆಯಿಂದ, ಆಖ್ಯಾತಿ - ತಿಳಿಯುತ್ತಿದ್ದನು, ರೂಪೇ - ರೂಪವಿಷಯದಲ್ಲಿ, ದೇವತಾಭಿಃ - ದೇವತಾಸ್ತ್ರೀಯರೊಡನೆ, ಸಮಾ ಸದೃಶಳಾದ, ರೂಪಿಣೀ - ದೇಹಧಾರಿಣಿಯಾದ, ಶ್ರೀರಿವಸ್ಥಿತಾ - [ಮ] ಲಕ್ಷ್ಮೀದೇವಿಯಂತಿರುವ [ಗೋ] ರೂಪೇ - ರೂಪವಿಷಯದಲ್ಲಿ, ರೂಪಿಣೀ - ಸರ್ವರಿಗೂ ಕಾಣುತ್ತಿರುವ ರೂಪವುಳ್ಳ, ಶ್ರೀರಿವಸ್ಥಿತಾ - ಲಕ್ಷ್ಮೀದೇವಿಯೋಪಾದಿಯಲ್ಲಿರುವ, ಮೈಥಿಲೀ - ಮಿಥಿಲದೇಶದಲ್ಲಿ ಹುಟ್ಟಿದ, ಜನಕಾತ್ಮಜಾ ಜನಕರಾಯನ ಮಗಳಾದ, ಸೀತಾ - ಸೀತಾದೇವಿಯು, ತಸ್ಯ - ಆ ಶ್ರೀರಾಮನ, ಹೃದಯಂ ಹೃದಯಾಭಿಪ್ರಾಯವನ್ನು, ಭೂಯಃ - ಮತ್ತೂ, ವಿಶೇಷೇಣ - ಅಧಿಕವಾಗಿ, ಆಖ್ಯಾತಿ - ತಿಳಿಯುತ್ತಿದ್ದಳು ||೨೭-೨೮|| ರಾಜರ್ಷಿಸುತಃ - ರಾಜರ್ಷಿಪುತ್ರನಾದ, ರಾಮಃ - ಮನೋಹರವಾದ, ಸಃ - ಆ ಶ್ರೀರಾಮನು, ಅಭಿರಾಮಯಾ - [ಮ] ಸೌಂದರ್ಯದಿಂದ ಮನೋಹರಳಾದ, [ಗೋ] ಶ್ರೀರಾಮನಿಗಿಂತಲೂ ಅತಿಶಯವಾಗಿ ರಮಿಸುತ್ತಿರುವ, ಅತಿಕಾಮಯಾ - ಆತನಿಗಿಂತಲೂ ಅತಿಶಯವಾದ ಕಾಮವುಳ್ಳ, (ಮ) ಅನುರಕ್ತಳಾದ, ಯದ್ವಾ - ಅತಿಯಾಗಿ ಪತಿಸ್ನೇಹವುಳ್ಳ, (ಅ ಮಿತಿಮೀರಿದ ಮನ್ಮಥನುಳ್ಳ, ಉತ್ತಮರಾಜಕನ್ಯಯಾ, ಉತ್ತಮ - ಉತ್ಕೃಷ್ಟನಾದ, ರಾಜ ಜನಕರಾಜನ, ಕನ್ಯಯಾ - ಕನ್ನಿಕೆಯಾದ, ತಯಾ - ಆ ಸೀತಾದೇವಿಯಿಂದ, ಸಮೇಯಿವಾ ಕೂಡಿದವನಾಗಿ, ಶ್ರಿಯಾ - ಲಕ್ಷ್ಮೀದೇವಿಯಿಂದ, ಸಮೇಯಿವಾನ್ - ಯುಕ್ತನಾದ, ವಿಭುಃ

---

ವಗಳಿಂದ ಆಕೆಯನ್ನು ಸಂತೋಷಗೊಳಿಸುತ್ತ ಆಕೆಯ ಮನವರಿತು ಪ್ರಿಯವಸ್ತುಗಳನ್ನೊದಗಿಸಿಕೊಡುತ್ತ ಸುಖದಿಂದಿದ್ದನು. ಸೀತಾದೇವಿಯಾದರೋ ರೂಪು, ಲಾವಣ್ಯ, ಸೊಬಗು, ಸೌಂದರ್ಯಾದಿಗಳಿಂದೊಡಗೂಡಿ ಕಣ್ಗೊಪ್ಪಿ ರಂಜಿಸುತ್ತಿದ್ದ ಸದ್ಗುಣಸಾಂದ್ರನಾದ ರಾಮಚಂದ್ರನಿಗೆ ತನ್ನನ್ನು ಜನಕನು ವಿವಾಹಮಾಡಿಕೊಟ್ಟುದಕ್ಕಾಗಿ ಸಂತೋಷನ್ನಾಂತಳಾಗಿ ಸ್ವ ಪತಿಗೆ ಸಕಲೋಪಚಾರಗಳನ್ನೂ ಮಾಡಿ ಹರ್ಷಪಡಿಸುತಿದ್ದುದಲ್ಲದೆ ಆತನ ಅಂತರಂಗವನ್ನೂ ಅರಿತು ಸತ್ಕಾರಗಳನ್ನೆಸಗುತ್ತ ಪರಮಪುರುಷನಾದ ಶ್ರೀಮನ್ನಾರಾಯಣನಿಗೆ ದೇವಿಯು ಸೇವೆಮಾಡುವರೀತಿಯಲ್ಲಿ ಶುಶ್ರೂಷೆಮಾಡಿಕೊಂಡಿರುತ್ತಿದ್ದಳು. ಹೀಗೆ ಶ್ರೀರಾಮಚಂದ್ರನು ರಾಜರ್ಷಿಯಾದ ಜನಕರಾಜನ ಕುವರಿಯಾಗಿಯೂ, ಮನೋಹರಿಯಾಗಿಯೂ, ಉತ್ತಮ ರಾಜಕನ್ಯೆಯಾಗಿಯೂ, ಬಹು ಪ್ರೀತಿಪಾತ್ರಳಾದವಳಾಗಿಯೂ ಇರು

ಅತೀವರಾಮಃ ಶುಶುಭೇತಿ ಕಾಮಯಾ ವಿಭುಶ್ಶ್ರಿಯಾ ವಿಷ್ಣುರಿವಾಮರೇಶ್ವರಃ॥೨೯॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಆದಿಕಾವ್ಯೇ ಶ್ರೀಮದ್ವಾಲ್ಮೀಕೀಯೇ
ಚತುರ್ವಿಂಶತ್ಸಹಸ್ರಿಕಾಯಾಂ ಸಂಹಿತಾಯಾಂ
ಶ್ರೀಮದ್ಬಾಲಕಾಂಡೇ ಸಪ್ತಸಪ್ತತಿತಮಸ್ಸರ್ಗಃ

---

ಸ್ಸನುರ್ಧನಾದ, ಅಮರೇಶ್ವರಃ - ಸುರೇಶ್ವರನಾದ, ವಿಷ್ಣುರಿವ - ಶ್ರೀಮನ್ನಾರಾಯಣನಂತೆ, ಅತೀವ-ಬಹಳವಾಗಿ. ಶುಶುಭೇ - ಹೊಳೆಯುತ್ತಿದ್ದನು ॥ ೨೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಆದಿಕಾವ್ಯೇ ಶ್ರೀಮದ್ವಾಲ್ಮೀಕೀಯೇ.
ಬಾಲಕಾಂಡೇ ಸಪ್ತಸಪ್ತತಿ ತಮಸ್ಸರ್ಗಃ

---

ೀತಾದೇವಿಯೊಡಗೂಡಿ ಲಕ್ಷ್ಮೀಸಮೇತನೂ, ಅಮರಪ್ರಭುವೂ ಆದ ಶ್ರೀ ಮಹಾವಿಷ್ಣು ವಿನಂತೆ ರಾರಾಜಿಸುತ್ತಿದ್ದನು ॥ ೨೫-೨೯ ॥

ಇಂತಿದು ದಶರಥರಾಜ ಕೃತಸ್ವಪುರೀ ಪ್ರಯಾಣವರ್ಣನ ಕಥನವೆಂಬ
ಎಪ್ಪತ್ತೇಳನೆಯ ಸರ್ಗವು ಸಮಾಪ್ತವಾದುದು.

**ಬಾಲಕಾಂಡಂ ಸಂಪೂರ್ಣಂ.**

ಬಾಲಕಾಂಡ ಧ್ಯಾನಶ್ಲೋಕ:—

ಕಾಕಪಕ್ಷಧರಂ ದೇವಂ ವನಮಾಲಾ ವಿಭೂಷಿತಂ ॥ ಶ್ರೀರಾಮಂ ಬಾಲಕಂ ಧ್ಯಾಯೇದ್ಬಾಲಕಾಂಡೇ ಮುನೀಶ್ವರ ॥

ಇತಃಪರಂ ಅಯೋಧ್ಯಾಕಾಂಡಃ ಪ್ರಾರಭ್ಯತೇ:- ತತ್ರಾದ್ಯಮಾದ್ಯ ಶ್ಲೋಕಃ.

ಗಚ್ಛತಾ ಮಾತುಲಕುಲಂ ಭರತೇನ ತದಾನಘಃ ॥ಶತ್ರುಘ್ನೋ ನಿತ್ಯಶತ್ರುಘ್ನೋ ನೀತಃಪ್ರೀತಿ ಪುರಸ್ಕೃತಃ ॥

**ಮಂಗಳಮಸ್ತು**

